# ಪದ್ಮ ಮಹಾಪುರಾಣ

ಭಾಗ-೧ ಸೃಷ್ಟಿಖಂಡ

ಪಂ. ಪಂಢರೀನಾಥಾಚಾರ್ಯ ಗಲಗಲಿ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಪದ್ಮ ಮಹಾಪುರಾಣ ಭಾಗ-1

## ಸೃಷ್ಟಿಖಂಡ


ಅನುವಾದ-ಲೇಖಕರು

ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



—: ಪ್ರಕಾಶಕರು :—

**ಭೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014 ಫ್ಯಾಕ್ಸ್ : 0091-80-26321416

PADMA MAHAPURANA Part - 1 Shrushtikhanda of Bhagavan Sri Vedavyasa Maharshi, edited and translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 1967

Second Edition : 2005

No. of Pages : xx + 619

No. of Copies : 1,000



Price : Rs. 190 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಪುರಾಣಗಳು ಭಾರತೀಯ ಸಂಸ್ಕೃತಿಯ ಅಮೂಲ್ಯ ನಿಧಿ. ಸನಾತನ ಧರ್ಮದ ಆಚಾರ ವಿಚಾರಗಳ ಆಗರ. ಹಿಂದೂದೇಶದ ಅಂದಿನ ಜನಜೀವನಕ್ಕೆ ಹಿಡಿದ ಕನ್ನಡಿ. ನಮ್ಮ ನಾಡಿನ ಹಿರಿಯರು ಬಾಳಿ ಬದುಕಿದ ಬಗೆಯನ್ನು ತಿಳಿಸಿ ಮುಂದಾದರೂ ಮಾನವರ ಜೀವನ ರಥವು ನ್ಯಾಯ ನೀತಿಗಳ ಆದರ್ಶ ಪಥದಲ್ಲಿ ಹೇಗೆ ಮುಂದುವರಿಯ ಬೇಕೆಂಬುದನ್ನು ಈ ಪುರಾಣಗಳು ತಿಳಿಸಿಕೊಡುತ್ತವೆ.

ಒಟ್ಟು ಪುರಾಣಗಳು ಹದಿನೆಂಟು. ಈ ಪುರಾಣಗಳು ಭಗವಂತನ ಮುಖದಿಂದ ವೇದಗಳಿಗಿಂತ ಮೊದಲು ಹೊರಬಂದವು.

**''ಪುರಾಣಂ ಸರ್ವಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ ।**
**ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ''**

ಎಲ್ಲ ಶಾಸ್ತ್ರಗಳಿಗಿಂತ ಮೊದಲು ಪುರಾಣಗಳು ಪರಬ್ರಹ್ಮನ ಮುಖದಿಂದ ಹೊರಟವು. ಅನಂತರ ವೇದಗಳು ಹೊರಬಂದವು ಎಂದು ಮತ್ಸ್ಯ ಹಾಗೂ ಬ್ರಹ್ಮಾಂಡ ಪುರಾಣಗಳಲ್ಲಿ ಹೇಳಿದ್ದಾರೆ.

ಧರ್ಮ, ಅರ್ಥ, ಕಾಮ, ಮೋಕ್ಷ ಮುಂತಾದ ಚತುರ್ವಿಧ ಪುರುಷಾರ್ಥ ಸಾಧನೆಯ ಉಪಾಯಗಳನ್ನು ಬೋಧಿಸುವ ಈ ಪುರಾಣಗಳು ಮೊದಲು ನೂರಾರು ಕೋಟಿ ಗ್ರಂಥಗಳಷ್ಟು ವಿಸ್ತಾರವಾಗಿದ್ದವು ಹಿಂದಿನ ಕಾಲದಲ್ಲಿ. ಅದೆಲ್ಲ ಅತಿ ವಿಸ್ತೃತವಾದ ಗ್ರಂಥರಾಶಿಯು. **''ಕಾಲೇನಾಗ್ರಹಣಂ ದೃಷ್ಟ್ವಾ''** ಕಾಲಕ್ರಮದಿಂದ ಜನಸಾಮಾನ್ಯರಿಗೆ ಎಟುಕಲಾರದೆಂದು ಬಗೆದು ಭಗವಂತನೇ ದ್ವಾಪರಯುಗದಲ್ಲಿ ಶ್ರೀ ವೇದವ್ಯಾಸ ರೂಪದಿಂದ ಅವತರಿಸಿ ನಾಲ್ಕು ಲಕ್ಷ ಗ್ರಂಥರೂಪವಾಗಿ ಹದಿನೆಂಟು ಪುರಾಣಗಳನ್ನಾಗಿ ವಿಂಗಡಿಸಿದನು ಎಂದು ಪದ್ಮಪುರಾಣ, ಸ್ಕಂದ ಪುರಾಣಗಳಲ್ಲಿ ತಿಳಿಸಲಾಗಿದೆ.

## ಕಾಲವಿಚಾರಃ

## ವೈದಿಕ ಗ್ರಂಥಗಳು ಹಾಗೂ ಪುರಾಣ

ವೈದಿಕ ಗ್ರಂಥಗಳಲ್ಲಿಯೂ ಈ ಪುರಾಣಗಳ ಬಗೆಗೆ ಉಲ್ಲೇಖವು ದೊರೆಕುತ್ತದೆ. ಅಥರ್ವಣವೇದದಲ್ಲಿ-

**ಋಚಃ ಸಾಮಾನಿ ಛಂದಾನಿ ಪುರಾಣಂ ಯಜುಷಾ ಸಹ**
**ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿ ದೇವಾ ದಿವಿಶ್ರಿತಾಃ ॥**

ಋಗ್ವೇದ, ಯಜುರ್ವೇದ ಸಾಮವೇದ ಹಾಗೂ ಪುರಾಣಗಳು ಉಚ್ಛಿಷ್ಟನಾಮಕನಾದ ಪರಮಾತ್ಮನಿಂದಲೇ ಪ್ರಾದುರ್ಭೂತವಾದವು ಎಂದು ಹೇಳಿದೆ.

## ಗೋಪಥ ಬ್ರಾಹ್ಮಣದಲ್ಲಿ

**''ಏವಮಿಮೇ ಸರ್ವೇವೇದಾ ನಿರ್ಮಿತಾಃ ಸಕಲ್ಪಾಃ ಸರಹಸ್ಯಾಃ ಸಬ್ರಾಹ್ಮಣಾಃ ಸೋಪನಿಷತ್ಕಾಃ ಸೇತಿಹಾಸಾಃ ಸಾನ್ವಯಾಃ ಖ್ಯಾತಾಃ ಸಪುರಾಣಾಃ ಸಸ್ವರಾಃ''** ಎಂದು ಎಲ್ಲ ವೇದ, ಉಪನಿಷತ್, ಬ್ರಾಹ್ಮಣ, ಕಲ್ಪ, ಇತಿಹಾಸ, ಆಖ್ಯಾನ, ಪುರಾಣ ಮುಂತಾದವುಗಳೆಲ್ಲವೂ ಆ ಪರಮಾತ್ಮನಿಂದಲೇ ನಿರ್ಮಿತವಾದವು.

## ಶತಪಥದಲ್ಲಿ

**ಅಧ್ವರ್ಯುಸ್ತಾರ್ಕ್ಷ್ಯೋ ವೈ ಪಶ್ಯತೋ ರಾಜೇತ್ಯಾಹ ತಾನು ಪದಿಶತಿ ಪುರಾಣಂ । ವೇದಃ ಸೋಽಯಮತಿ । ಕಿಂಚಿತ್ ಪುರಾಣಮಾಚಕ್ಷೀತ ॥** ಹತ್ತನೆಯ ದಿನ ಯಜ್ಞದಲ್ಲಿ ಅಧ್ವರ್ಯು ಆದವನು ರಾಜನಿಗೆ ಈ ಪುರಾಣವು ವೇದಕ್ಕೆ ಸಮಾನವಾದುದು ಎಂದು ಹೇಳಿ ಪುರಾಣವನ್ನು ಪ್ರವಚನ ಮಾಡಬೇಕು ಎಂದು ಮುಂತಾಗಿ ವೇದ ತುಲ್ಯತ್ವವನ್ನು ಪುರಾಣಗಳಿಗೆ ಸಾರಲಾಗಿದೆ.

## ಬೃಹದಾರಣ್ಯಕ ಉಪನಿಷತ್ತಿನಲ್ಲಿ

**"ಏವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಶ್ವಸಿತಂ ಏತದ್ ಯದ್ ಋಗ್ವೇದೋ ಯಜುರ್ವೇದಃ ಸಾಮವೇದೋಽ ಥರ್ವಾಂಗಿರಸ ಇತಿಹಾಸ ಪುರಾಣಂ ವಿದ್ಯಾ ಉಪನಿಷದಃ"**

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಇತಿಹಾಸ, ಪುರಾಣ ಉಪನಿಷತ್ತು ಎಲ್ಲ ವಿದ್ಯೆಗಳು ಮಹಾಭೂತನಾದ ಪರಮಾತ್ಮನ ಉಸಿರಿನಿಂದ ಹೊರಬಂದಿವೆ ಎಂದು ವೇದಗಳ ಜೊತೆಗೇ ಪುರಾಣಗಳಿಗೂ ಆವಿರ್ಭಾವವನ್ನು ಹೇಳಿದ್ದಾರೆ.

## ಛಾಂದೋಗ್ಯೋಪನಿಷತ್ತಿನಲ್ಲಿ

**"ಸಹೋವಾಚ ಋಗ್ವೇದಂ ಭಗವೋಽಧ್ಯೇಽಮಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ವೇದಾನಾಂ ವೇದಂ"** ವೆಂದು ಪುರಾಣಗಳು ಐದನೆಯ ವೇದವೆಂದು ತಿಳಿಸಲಾಗಿದೆ.

ಇದರಂತೆ ಶತಪಥ ಬ್ರಾಹ್ಮಣದಲ್ಲೆ **'ಏವಂ ವಿದ್ವಾನ್ ವಾಕೋವಾಕ್ಯಮಿತಿ ಹಾಸಃ ಪುರಾಣಾಮಿತ್ಯ ಹರಹಃ ಸ್ವಾಧ್ಯಾಯಮಧೀತೇ । ತಏನಂ ತೃಪ್ತಾಸ್ತರ್ಪಯಂತಿ ಸರ್ವೈರ್ಭೋಗೈಃ'** ಎಂಬ ವಾಕ್ಯದಿಂದ ವೇದಗಳ ಜೊತೆಗೆ ಇತಿಹಾಸ ಪುರಾಣಗಳನ್ನೂ ಸ್ವಾಧ್ಯಾಯ ರೂಪದಿಂದ ಪ್ರತಿದಿನ ಪಠಿಸುವವರಿಗೆ ದೇವತೆಗಳು ಸರ್ವಭೋಗ ಭಾಗ್ಯಗಳನ್ನೂ ದಯಪಾಲಿಸುತ್ತಾರೆ ಎಂದು ನಿರೂಪಿಸಲಾಗಿದೆ. ಇದರಂತೆ ಅನೇಕ ಸ್ಮೃತಿಗ್ರಂಥಗಳಲ್ಲಿಯೂ ಪುರಾಣಗಳ ಉಲ್ಲೇಖ ಕಂಡುಬರುವದು.

## ಸ್ಮೃತಿಶಾಸ್ತ್ರದಲ್ಲಿ ಪುರಾಣ

ಮಾಂಸಕ್ಷೀರೌದನ ಮಧುಕುಲ್ಯಾಭಿಸ್ತರ್ಪಯೇತ್ಪಿತನ್
ವಾಕೋ ವಾಕ್ಯಂ ಪುರಾಣಾನಿ ಇತಿಹಾಸಾನಿ ಚಾನ್ವಹಮ್ ॥

## ವಿಷ್ಣು ಸ್ಮೃತಿಯಲ್ಲಿ

ಪುರಾಣಂ ಮಾನವೋ ಧರ್ಮೋ ಸಾಂಗೋ ವೇದಶ್ಚಿಕಿತ್ಸಿತಂ

## ಅತ್ರಿ ಸ್ಮೃತಿಯಲ್ಲಿ

ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್

## ಮನುಸ್ಮೃತಿಯಲ್ಲಿ

ಸ್ವಾಧ್ಯಾಯಂ ಶ್ರಾವಯೇದ್ವಿಪ್ರೇ ಧರ್ಮಶಾಸ್ತ್ರಾಣಿ ಚೈವ ಹಿ ।
ಆಖ್ಯಾನಮಿತಿಹಾಸಾಂಶ್ಚ ಪುರಾಣಾನಿ ಖಿಲಾನಿ ಚ ।

## ಮೇಧಾತಿಥಿ

ಪುರಾಣಾನಿ ವ್ಯಾಸಪ್ರಣೀತಾನಿ ಸೃಷ್ಟ್ಯಾದಿ ವರ್ಣನರೂಪಾಣಿ ।
ಖಿಲಾನಿ ಶ್ರೀಸೂಕ್ತಮಹಾನಾಮ್ನೀಕಾದೀನಿ ॥

ಎಂದು ಪುರಾಣಗಳೆಲ್ಲವೂ ವೇದವಾಸ್ಯರಿಂದ ರಚಿತವಾಗಿವೆ ಎಂದು ಮನು ಸ್ಮೃತಿಯ ಮೇಲಿನ ಪ್ರಾಚೀನ ಟೀಕಾಕಾರನಾದ ಮೇಧಾತಿಥಿ ತಿಳಿಸಿದ್ದಾನೆ ಹೀಗೆ ಕ್ರಿಸ್ತಶತಕ ಪೂರ್ವದಲ್ಲಿ ಸಾವಿರಾರು ವರ್ಷ ಮುಂಚಿತವಾಗಿಯೇ ರೂಪಗೊಂಡ ಈ ಎಲ್ಲ ಶ್ರುತಿ ಸ್ಮೃತಿ ಗ್ರಂಥಗಳಲ್ಲಿ ವೇದವ್ಯಾಸ ರಚಿತವಾದ ಪುರಾಣಗಳ ಉಲ್ಲೇಖವು ಬರುತ್ತದೆ. ಕ್ರಿಸ್ತಶತಕದ ಮುನ್ನೂರು ಐವತ್ತು ವರ್ಷ ಮೊದಲು ರಚಿತವಾದ ಬೌದ್ಧರ ಸುತ್ತನಿಪಾತ ಎಂಬ ಗ್ರಂಥದಲ್ಲಿ ಹದಿನೆಂಟು ಪುರಾಣಗಳ ಉಲ್ಲೇಖವು ಬಂದಿರುತ್ತದೆ.

## ಯಾಜ್ಞವಲ್ಕ್ಯ ಸ್ಮೃತಿ

ಯತೋ ವೇದಾಃ ಪುರಾಣಾನಿ ವಿದ್ಯೋಪನಿಷದಸ್ತಥಾ ।
ಶ್ಲೋಕಾಃ ಸೂತ್ರಾಣಿ ಭಾಷ್ಯಾಣಿ ಯತ್ಕಿಂಚನ ವಾಙ್ಮಯಮ್ ॥

## ಶೌನಕ ಋಗ್ವಿಧಾನ-

ಜಪೇಯುರಭ್ರಸೂಕ್ತಂ ತು ಸರ್ವಶಾಖಾಃ ಪಠಂತಿ ವೈ
ಇತಿಹಾಸ ಪುರಾಣಾನಿ ಸಷಡಂಗಾನ್ನಿ ಸದರ್ಥಕಮ್
ವ್ಹಯಾಮಸಿ ಜಪೇನ್ಮಂತ್ರಂ ಶತವಾರಂ ದಿನೇ ದಿನೇ
ವ್ಯಾಸೋಕ್ತೇತು ಪುರಾಣಾರ್ಥೇ ಯಾಥಾರ್ಥ್ಯಂ ದೃಶ್ಯತೇ ಸದಾ ॥

ಬೃಹಜ್ಜಾಬಾಲೋಪನಿಷತ್ -

ಯ ಏತದ್ ಬೃಹಜ್ಜಾಬಾಲಂ ನಿತ್ಯಮಧೀತೇ ಸ ಋಚೋಽಧೀ ತೇ
ಸ ಯಜೂಂಷ್ಯಧೀತೇ ಸಸಾಮಾನ್ಯಧೀತೆ ಸೋ ಅಥರ್ವಣ -
ಮದೀತೇ ಸೋಽಂಗಿರಸಮಧೀತೆ ಸ ಶಾಖಾ ಅಧೀತೆ ಸ ಕಲ್ಪಾ-
ನಧೀತೇ ಸ ನಾರಾಶಂಸೀರಧೀತೆ ಸ ಪುರಾಣಾನ್ಯಧೀತೇ
ಸ ಬ್ರಹ್ಮಪ್ರವಣಮಧೀತೇ

## ಅಶ್ವಲಾಯನಗೃಹ್ಯಸೂತ್ರ-

ಆಯುಷ್ಮತಾಂ ಕಥಾಃಕೀರ್ತಯಂತೋ ಮಾಂಗಲ್ಯಾನೀತಿಹಾ
ಸ ಪುರಾಣಾನೀತ್ಯಾಖ್ಯಾಯಮಾನಾಃ

ಆಪಸ್ತಂಬಧರ್ಮಸೂತ್ರ -

ಯೋ ಹಿಂಸಾರ್ಥಮಭಿಕ್ರಾಂತಂ ಹಂತಿ ಮನ್ಯುರೇವ ಮನ್ಯುಂಸ್ಪೃಶತಿ
ನ ತಸ್ಮಿನ್ ದೋಷಾ ಇತಿ ಪುರಾಣೇ ೧-೧೯-೧

ಅಥಪುರಾಣೇ ಶ್ಲೋಕಾವುದಾಹರಂತಿ-ಅಷ್ಟಾಶೀತಿಸಹಸ್ರಾಣಿ...೨-೨೩-೩

ಆಭೂತಸಂಪ್ಲವಾತ್ತೇಸ್ವರ್ಗಜಿತಃ
ಪುನಃಸ್ಸರ್ಗೇ ಬೀಜಾರ್ಥಾ ಭವಂತಿ ಭವಿಷ್ಯತ್ಪುರಾಣೇ ।
ಅಥಾಪಿಪ್ರಜಾಪತೇರ್ವಚನಂ

ಆಪಸ್ತಂಬ ಧರ್ಮಸೂತ್ರ ೨-೨೪-೫

ವ್ಯಾಡಿಯ ವಿಕೃತವಲ್ಲೀ

ಕ್ರಮಾಧ್ಯಯನ ಸಂಪನ್ನೋ ಮಂತ್ರಬ್ರಾಹ್ಮಣಪಾರಗಃ
ಜಟಾಪಾರಾಯಣಪರೋ ರುದ್ರಲೋಕ ಮಹೀಯತೇ ॥

ಶುಕ್ರನೀತಿ -

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ
ವಂಶಾನುಚರಿತಂ ಯಸ್ಮಿನ್ ಪುರಾಣಂ ತತ್ಪ್ರಕೀರ್ತಿತಮ್ ॥

ಹೀಗೆ ಅತ್ಯಂತ ಪ್ರಾಚೀನವಾದ ಗ್ರಂಥಗಳಲ್ಲಿ ಪುರಾಣಗಳ ಉಲ್ಲೇಖಗಳನ್ನು ನಾವು ಕಾಣುತ್ತೇವೆ. ಇದರ ಮೇಲಿಂದ ವೇದಸ್ಮೃತಿಕಾಲದಷ್ಟು ಪುರಾಣಗಳು ಪ್ರಾಚೀನ ಎಂದು ಸಿದ್ಧವಾಗುವದು. ಈ ಎಲ್ಲ ಪುರಾಣಗಳನ್ನು ರಚಿಸಿದವರು ಶ್ರೀ ವೇದವ್ಯಾಸದೇವರೇ ಎಂಬುದು ಎಲ್ಲ ಪುರಾಣಗಳಲ್ಲಿಯೂ ಸುಸ್ಪಷ್ಟವಾಗಿದೆ. ಶ್ರೀ ಮಧ್ವಾಚಾರ್ಯರು ಸ್ಕಂದ ಪುರಾಣದ ವಚನವನ್ನು ಉದಾಹರಿಸಿ ಸಾಕ್ಷಾದ್ವಿಷ್ಣುವೇ ವೇದವ್ಯಾಸ ರೂಪದಿಂದ ಅವತರಿಸಿ ವೇದವಿಭಾಗ ಹಾಗೂ ಮಹಾಭಾರತ ಮತ್ತು ಪುರಾಣಗಳನ್ನು ನಿರ್ಮಿಸಿದ್ದಾರೆ.

ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್
ಉತ್ಸನ್ನಾನ್ ಭಗವಾನ್ ವೇದಾನ್ ಉಜ್ಜಹಾರ ಹರಿಃಸ್ವಯಮ್॥
ಎಂದು ಸ್ಕಂದ ಪುರಾಣ ವಚನಗಳನ್ನು ಉದಾಹರಿಸಿದ್ದಾರೆ.

ಭವಿಷ್ಯ ಪುರಾಣದಲ್ಲಿ -

ಸೋಽಯಂ ನಾರಾಯಣಃಸಾಕ್ಷಾದ್ವ್ಯಾಸರೂಪೀ ಮಹಾಮುನಿಃ ॥

ಪದ್ಮ ಪುರಾಣ -

ಕಾಲೇನಾಗ್ರಹಣಂ ದೃಷ್ಟ್ವಾ ಪುರಾಣಸ್ಯ ತಥಾ ವಿಭುಃ
ವ್ಯಾಸರೂಪೀ ತದಾ ಬ್ರಹ್ಮಾ ಸಂಗ್ರಹಾರ್ಥಂ ಯುಗೇ ಯುಗೇ
ಚತುರ್ಲಕ್ಷಪ್ರಮಾಣೇನ ದ್ವಾಪರೇ ದ್ವಾಪರೇ ಪ್ರಭುಃ
ತದಷ್ಟಾದಶಧಾ ಕೃತ್ವಾ ಭೂಲೋಕೇಽಸ್ಮಿನ್ ಪ್ರಕಾಶ್ಯತೇ ॥

ವ್ಯಾಸರೂಪಿಯಾದ ಪರಬ್ರಹ್ಮ ವಿಷ್ಣುವೇ ಶತಕೋಟಿ ವಿಸ್ತಾರವಾದ ಪುರಾಣ ರಾಶಿಯು ಮಂದಮತಿಗಳಾದ ಮಾನವರ ಅರಿವು ತಿಳಿವುಗಳಿಗೆ ನಿಲುಕಲಾರದೆಂದೆಣಿಸಿ ನಾಲ್ಕು ಲಕ್ಷ ಗ್ರಂಥಗಳಿಗೆ ಇಳಿಸಿದರು. ಅವೇ ಹದಿನೆಂಟು ಪುರಾಣ ರೂಪದಿಂದ ಹೊಮ್ಮಿವೆ ಎಂದು ಬಿತ್ತರಿಸಿದ್ದಾರೆ.

ಆದಿ ಶಂಕರಾಚಾರ್ಯರು "**ಅಸ್ಮಾನಿ ಪುರಾಣಾನಿ ವ್ಯಸ್ತಾನಿ ಅನೇನ ಇತಿವ್ಯಾಸಃ** ಎಂದು ಪುರಾಣಗಳನ್ನುಹದಿನೆಂಟು ವಿಧವಾಗಿ ವಿಂಗಡಿಸಿ ಇಟ್ಟದ್ದರಿಂದ ವ್ಯಾಸ ಎಂದು ಹೆಸರು ಬಂದಿಯೆಂದು ವ್ಯಾಸ ಶಬ್ದದ ವ್ಯುತ್ಪತ್ತಿಯನ್ನು ಪ್ರದರ್ಶಿಸಿದ್ದಾರೆ. ಶಂಕರ ಮಧ್ವಾರಾಮಾನುಜರು ತಮ್ಮ ಅನೇಕ ಗ್ರಂಥಗಳಲ್ಲಿ ಪರಮ ಪ್ರಮಾಣತ್ವೇನ ವೇದವ್ಯಾಸ ರಚಿತವಾದ ವಿಷ್ಣುಪುರಾಣ, ವಿಷ್ಣುಧರ್ಮ, ವಿಷ್ಣುಧರ್ಮೋತ್ತರ, ಭವಿಷ್ಯ, ಬ್ರಹ್ಮ, ಬ್ರಹ್ಮವೈವರ್ತ, ಪದ್ಮ, ಲಿಂಗ, ನೃಸಿಂಹ, ಕೂರ್ಮ, ಬ್ರಹ್ಮಾಂಡ ಮುಂತಾದ ಪುರಾಣಗಳನ್ನು ಉದಾಹರಿಸಿದ್ದಾರೆ. ಹೀಗೆ ಅನೇಕಾನೇಕ ಬಹಿರಂಗ ಪ್ರಮಾಣಗಳನ್ನು ಪರೀಕ್ಷಿಸಿದಾಗ ಪುರಾಣಗಳ ಕಾಲವು ಕ್ರಿಸ್ತಪೂರ್ವ ಸಹಸ್ರಾರುವರ್ಷ ಹಿಂದೆ ಹೋಗುವುದು. ಪುರಾಣಗಳ ಅಂತರಂಗ ಪರಿಶೀಲನೆಯಿಂದಲೂ ಈ ವಿಷಯ ಮನದಟ್ಟಾಗುವದು.

### ಭವಿಷ್ಯ ಪುರಾಣದಲ್ಲಿ

**ಅಷ್ಟಾದಶ ಪುರಾಣಾನಿ ಅಷ್ಟೌ ವ್ಯಾಕರಣಾನಿ ಚ ।**
**ಕೃತ್ವಾ ಸತ್ಯವತೀಸೂನುಃ ಚಕ್ರೇ ಭಾರತಸಂಹಿತಾಮ್ ॥**

### ಮತ್ಸ್ಯ ಪುರಾಣ

**ಚತುರ್ಲಕ್ಷಮಿದಂ ಪ್ರೋಕ್ತಂ ವ್ಯಾಸೇನಾದ್ಭುತಕರ್ಮಣಾ ।**
**ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ ॥**
**ಭಾರತಾಖ್ಯಾನಮುಖಿಲಂ ಚಕ್ರೇ ತದುಪಬೃಂಹಿತಮ್ ॥**

ಹೀಗೆ ನಾಲ್ಕು ಲಕ್ಷಗ್ರಂಥಾತ್ಮಕವಾದ ಹದಿನೆಂಟೂ ಪುರಾಣಗಳನ್ನೂ ಭಗವಾನ್ ವೇದ ವ್ಯಾಸರೇ ರಚಿಸಿದರೆಂದು ಪ್ರಾಯಃ ಎಲ್ಲ ಪುರಾಣಗಳಲ್ಲಿಯೂ ಉಲ್ಲಿಖಿತವಾಗಿದೆ. ಆದರೆ ಭವಿಷ್ಯ ಪುರಾಣದಲ್ಲಿ ಪ್ರತಿಸರ್ಗ ಪರ್ವ ಖಂಡದಲ್ಲಿ -

**'ಶತವರ್ಷಂ ಪಂಚಲಕ್ಷಶ್ಲೋಕಮಧ್ಯಾಪಯನ್ಮದಾ' ।**
**ತೇ ಶ್ರುತ್ವಾ ಮುನಯಃ ಸರ್ವೇ ಜಗ್ಮುರ್ಹೃಷ್ಟಾಃಸ್ವಮಾಲಯಂ ॥**

ಎಂದು ಪುರಾಣ (ಗ್ರಂಥ) ಶ್ಲೋಕ ಸಂಖ್ಯೆಯನ್ನು ಕೊಟ್ಟಿದ್ದಾರೆ. ಹೀಗೆ ಕೆಲವು ಕಡೆ ನಾಲ್ಕು ಕೆಲವು ಕಡೆ ಐದು ಕೆಲವು ಕಡೆ ಐದೂಕಾಲ ಲಕ್ಷ ಎಂದು ಪುರಾಣಗಳಲ್ಲಿಯೇ ಭೇದ ಕಂಡು ಬರುತ್ತದೆ. ಅದಕ್ಕೆ ಕಾರಣ ಅಲ್ಲಿಯೇ ಸ್ಪಷ್ಟವಿದೆ. ಬರೀ ಪುರಾಣ ಶ್ಲೋಕಗಳ ಸಂಖ್ಯೆ ಸಾಮಾನ್ಯವಾಗಿ ಈಗ ಇದ್ದದ್ದು ನಾಲ್ಕುಲಕ್ಷ. ಅದಕ್ಕೆ ಮಹಾಭಾರತದ ಒಂದು ಲಕ್ಷ ಗ್ರಂಥ ಅಥವಾ ಶ್ಲೋಕಗಳನ್ನು ಸೇರಿಸಿದರೆ ಐದುಲಕ್ಷವಾಗುವದು. ಮತ್ತು ರಾಮಾಯಣದ ಇಪ್ಪತ್ತೈದುಸಾವಿರ ಪದ್ಯ ಹಿಡಿದರೆ ಐದುಕಾಲ ಲಕ್ಷವಾಗುವದು ಮತ್ಸ್ಯಪುರಾಣದಲ್ಲಿ.

''ಏವಂ ಸಪಾದಾಃ ಪಂಚೈತೇ ಲಕ್ಷಾ ಮರ್ತ್ಯೇ ಪ್ರಕೀರ್ತಿತಾಃ'' ॥

ಎಂದು ಮತ್ಸ್ಯಲೋಕದಲ್ಲಿ ಈಗ ಪ್ರಚಲಿತವಿದ್ದ ಒಟ್ಟು ಪುರಾಣಗ್ರಂಥ ಸಂಖ್ಯೆ ಐದು ಲಕ್ಷ ಎಂದು ಕೊಟ್ಟಿದ್ದಾರೆ.

ಈ ಎಲ್ಲ ಪುರಾಣಕರ್ತೃರಾದ ವ್ಯಾಸರು ಸುಮಂತು ಜೈಮಿನಿ ಪೈಲ ವೈಶಂಪಾಯನ ಮೊದಲಾದ ಶಿಷ್ಯರಿಗೆ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಗಳನ್ನು ಉಪದೇಶಿಸಿದಂತೆ ತಮ್ಮ ಮತ್ತೊಬ್ಬ ಶಿಷ್ಯನಾದ ಸೂತ ಜಾತಿಯ ರೋಮಹರ್ಷಣನಿಗೆ ಪುರಾಣಸಂಹಿತೆಯನ್ನು ಉಪದೇಶಿಸಿದರು. ಎಲ್ಲ ಜಾತಿ ಧರ್ಮದ ಜನರೂ ಸದ್ಗತಿಯನ್ನು ಕಾಣಬೇಕೆಂದು ಭಗವಂತನ ಹೆಬ್ಬಯಕೆ. ವೇದ ಓದಲು ಬಾರದವರು ಉದ್ಧಾರ ಹೊಂದಲೆಂದೇ ಈ ಪುರಾಣ ಸಂಹಿತೆಯನ್ನು ಬಾದರಾಯಣರೂಪೀ ಭಗವಾನ್ ನಿರ್ಮಿಸಿದ. ಮತ್ತು ಅದನ್ನು ಬ್ರಾಹ್ಮಣೇತರನಾದ ಸೂತ ಜಾತಿಯ ರೋಮಹರ್ಷನಿಗೆ ಉಪದೇಶಿಸಿ ದೇಶದಲ್ಲಿ ಪ್ರಚುರಪಡಿಸಲಿಕ್ಕೆ ಆಜ್ಞಾಪಿಸಿದ. ಆ ರೋಮಹರ್ಷಣ ಮುಂದೆ ಈ ಪುರಾಣಸಂಹಿತೆಯನ್ನು ತನ್ನ ಆರು ಜನ ಶಿಷ್ಯರಿಗೆ ಬೋಧಿಸಿದ. ಸುಮತಿ, ಅಗ್ನಿವರ್ಚ, ಮಿತ್ರಯ ಶಾಂಶಪಾಯನ, ಅಕೃತವ್ರಣ, ಸಾವರ್ಣಿ ಈ ಆರು ಪಂಡಿತರಿಗೆ ಈ ಪುರಾಣಪಾಠ ಹೇಳಿ ಪೌರಾಣಿಕ ಮಹಾಪಂಡಿತರನ್ನಾಗಿ ಮಾಡಿದ. ಅವರೂ ಮುಂದೆ ಬಹು ಪಾಠ ಹೇಳಿ ಪೌರಾಣಿಕ ಮಹಾಪಂಡಿತರನ್ನಾಗಿ ಮಾಡಿದ. ಅವರೂ ಮುಂದೆ ಬಹು ವಿಧವಾಗಿ ಪೌರಾಣಿಕ ವಾಙ್ಮಯವನ್ನು ಬಿತ್ತರಿಸಿದರು ಎಂದು ವಿಷ್ಣು ಪುರಾಣ ಭಾಗವತಾದಿ ಗ್ರಂಥಗಳಲ್ಲಿ ಹೇಳಲಾಗಿದೆ.

**ವಿಷ್ಣು ಪುರಾಣ :**

**ಆಖ್ಯಾನೈಶ್ಚಾಪ್ಯು ಪಾಖ್ಯಾನೈರ್ಗಾಥಾಭಿ ಕಲ್ಪಶುದ್ಧಿಭಿಃ**
**ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ॥**

**ಪ್ರಖ್ಯಾತೋ ವ್ಯಾಸಶಿಷ್ಯೋಭೂತ್ ಸೂತೋ ವೈ ರೋಮಹರ್ಷಣಃ**
**ಸುಮತಿಶ್ಚಾಗ್ನಿವರ್ಚಾಶ್ಚ ಮಿತ್ರಯುಃ ಶಾಂಶಪಾಯನಃ**
**ಅಕೃತವ್ರಣೋಽಥ ಸಾವರ್ಣಿಃ ಷಟ್ ಶಿಷ್ಯಾಸ್ತಸ್ಯ ಚಾಭವನ್ ॥**

ಈ ರೋಮಹರ್ಷಣನ ಮಗ ಉಗಶ್ರವನು ತಂದೆಯಿಂದಲೂ ಇತರ ವ್ಯಾಸ ಶಿಷ್ಯರಿಂದಲೂ ಕಲಿತು ಶೌನಕಾದಿಗಳಿಗೆ ಭಾಗವತಾದಿ ಪುರಾಣಗಳನ್ನು ಉಪದೇಶಿಸಿದ ಎಂದು ತಿಳಿಸಿದ್ದಾರೆ.

ಇದೇ ಕ್ರಮವನ್ನು ಪುರಾಣ ಸಮುಚ್ಚಯ ಗ್ರಂಥದಲ್ಲಿಯೂ ಕಾಣಿಸಿದ್ದಾರೆಂದು ಭಾಗವತದನ ರಸರಂಜಿನೀ ಟೀಕೆಯಲ್ಲಿ ಉದ್ಧರಿಸಿದ್ದಾರೆ.

''ತ್ರಯ್ಯಾರುಣಿ, ಕಶ್ಯಪ, ಸಾವರ್ಣ್ಯಕೃತವ್ರಣ, ವೈಶಂಪಾಯನ, ಹಾರೀತೇ ಭ್ಯಃಷಡ್ಭ್ಯಃ ಷಟ್ ಪುರಾಣಾನಿ ರೋಮಹರ್ಷಣಾಚ್ಚತ್ವಾರಿ ವ್ಯಾಸತ್ಸಪ್ತ ಏವಂ ಸಪ್ತದಶ ಪುರಾಣಾನಿ ವ್ಯಾಸಾಶ್ರಮೇ ಅಧೀತ್ಯ ಭಾಗವತಂ ಶುಕೋಧ್ಯಾಪಯತೀತಿ ವ್ಯಾಸಾಜ್ಞಪ್ತ ಉಗ್ರಶ್ರವಾ ಲಿಪಿಶುಕಮುಖಾತ್ ಶುಶ್ರಾವಃ ತತಃಸ ನೈಮಿಷಾರಣ್ಯಂ ಜಗಾಮ ತತ್ರ ಮುನಿಭಿರ್ಬಹುಮಾನ ಪೂರ್ವಕಂ ವ್ಯಾಸಶಿಷ್ಯಂ ರೋಮಹರ್ಷಣ ಪುತ್ರಂಜ್ಞಾತ್ವಾಪೈತ್ರ್ಯೇ ಆಸನೇ ಸ್ಥಾಪಿತಃ।'' ಹೀಗೆ

ವ್ಯಾಸಶಿಷ್ಯರಾದ ಆರು ಪೌರಾಣಿಕ ಪಂಡಿತರಿಂದ ಆರು ಪುರಾಣಗಳನ್ನೂ ರೋಮಹರ್ಷಣ (ತಂದೆ) ನಿಂದ ನಾಲ್ಕು, ಸಾಕ್ಷಾತ್ ವೇದವ್ಯಾಸರಿಂದ ಏಳು ಹೀಗೆ ಹದಿನೇಳು ಪುರಾಣಗಳನ್ನು ಓದಿ ಕೊನೆಗೆ ಶುಕ್ರಾಚಾರ್ಯರಿಂದ ಭಾಗವತವನ್ನು ಕಲಿತು ಒಟ್ಟು ಹದಿನೆಂಟೂ ಪುರಾಣಗಳಲ್ಲಿ ಮಹಾ ಪಂಡಿತನಾದ ಉಗ್ರಶ್ರವಸೂತ ಎಂದೂ ನಿರೂಪಿಸಿದ್ದಾರೆ.

ಈ ಎಲ್ಲ ಪ್ರಮಾಣವಚನ ಪರಿಶೀಲನೆಯಿಂದಲೂ ಹಾಗೂ ಸ್ವಯಂ ವ್ಯಾಸರೇ -

**''ಇತಿಹಾಸ ಪುರಾಣಾನಿ ಮಯಾ ಸೃಷ್ಟಾನಿ ಸುವ್ರತ** (ಭವಿಷ್ಯ ಪುರಾಣ) ಇತಿಹಾಸ ಪುರಾಣಗಳನ್ನೆಲ್ಲ ನಾನೇ ರಚಿಸಿದ್ದೇನೆಂದು ಹೇಳಿದ್ದರಿಂದಲೂ ವ್ಯಾಸರು ಪುರಾಣ ಗ್ರಂಥಗಳ ಕರ್ತಾರರೆಂಬುದು ನಿರ್ವಿವಾದ. ಈ ಕೃಷ್ಣದ್ವೈಪಾಯನ ಎಂಬ ಹೆಸರುಳ್ಳ ವೇದವ್ಯಾಸರು ದ್ವಾಪರಯುಗದ ಅಂತ್ಯ ಭಾಗದಲ್ಲಿ ಸತ್ಯವತಿ ಎಂಬ ಅಂಬಿಗರ ಹೆಣ್ಣಿನ ಹೊಟ್ಟೆಯಿಂದ ಪರಾಶರ ಕುಮಾರರಾಗಿ ಹುಟ್ಟಿ ಕೌರವ ಪಾಂಡವರ ಗುರುಗಳೂ ಮಾರ್ಗದರ್ಶಕರೂ ಆಗಿದ್ದುದು ಮಹಾಭಾರತದಲ್ಲಿ ಸ್ಪಷ್ಟವಾಗಿದೆ. ಈ ಹದಿನೆಂಟು ಪುರಾಣ, ಬ್ರಹ್ಮಸೂತ್ರ ಮೊದಲಾದವುಗಳನ್ನೆಲ್ಲ ರಚಿಸಿದ ನಂತರ ವ್ಯಾಸರು ಮಹಾಭಾರತವನ್ನು ರಚಿಸಿದ್ದಾರೆಂದು ಹಿಂದೆ ಉದಾಹರಿಸಿದ ಭವಿಷ್ಯ ಪುರಾಣದ **''ಅಷ್ಟಾದಶ ಪುರಾಣಾನಿ''** ಎಂಬ ಪದ್ಯವು ತಿಳಿಸುತ್ತದೆ.

ಇದರ ಮೇಲಿಂದ ಈ ಎಲ್ಲ ಹದಿನೆಂಟು ಪುರಾಣಗಳ ನಿರ್ಮಾಣ ಕಾಲವು ಕಲಿಯುಗದ ಪ್ರಾರಂಭ ಕಾಲವೆಂಬುದು ಅವಿಪ್ರತಿಪನ್ನವೇ ಆಗಿದೆ. ಕಲಿಯುಗವು ಪ್ರಾರಂಭವಾಗಿ ಐದುಸಾವಿರ ವರ್ಷವಾಯಿತೆಂದು ಭಾರತೀಯರ ತಿಳುವಳಿಕೆ ಇದೆ. ಆದುದರಿಂದ ಬೇರೆಬೇರೆ ಪುರಾಣಗಳ ಕಾಲನಿರ್ಣಯದ ಮಹಾಪ್ರಯಾಸವನ್ನು ಮಾಡುವ ಪ್ರಮೇಯವೇ ಇಲ್ಲ ಎಂಬುದು ಸನಾತನ ವೈದಿಕ ಪಂಡಿತರ ಒಟ್ಟಾಭಿಪ್ರಾಯವಾಗಿದೆ.

ಆದರೆ ಹಜರಾ, ವಿಲ್ಸನ್, ಪಾರ್ಗಿಟರ, ಮ್ಯಾಕ್ಸಮುಲ್ಲರ ಮುಂತಾದ ಅನೇಕ ಪಾಶ್ಚಾತ್ಯ ಪಂಡಿತರು ಈ ಎಲ್ಲ ಹದಿನೆಂಟೂ ಪುರಾಣಗಳೂ ಆರ್ವಾಚೀನ ಎಂದರೆ ಕ್ರಿಸ್ತಶಕದ ನಂತರ ಕಾಲದವು ಎಂದು ನಿರ್ಣಯಮಾಡಿದ್ದಾರೆ. ಐತಿಹಾಸಿಕ ದೃಷ್ಟಿಯಿಂದ ಪೌರಾಣಿಕ ಗ್ರಂಥಗಳ ಕಾಲನಿರ್ಣಯವನ್ನು ಬಹು ಪರಿಶ್ರಮಪಟ್ಟು ಮಾಡಹೊರಟ ಈ ಪಾಶ್ಚಾತ್ಯ ವಿಮರ್ಶಕರ ವಿವೇಚನ ರೀತಿಯು ಅವರ ದೃಷ್ಟಿಯಂದ ಸರಿಯಿದ್ದರೂ ಭಾರತೀಯ ಪೌರಾಣಿಕ ಗ್ರಂಥಗಳ ಕಾಲನಿರ್ಣಯಕ್ಕೆ ಉಪಯೋಗ ಬೀಳುವುದಿಲ್ಲ. ಗ್ರಂಥದ ಕಾಲವನ್ನು ನಿರ್ಣಯಿಸಲು ಅವರು ಒಂದು ವಿಶಿಷ್ಟ ಪದ್ಧತಿಯನ್ನು ಅನುಸರಿಸುತ್ತಾರೆ.

ಬೇರೆ ಗ್ರಂಥಗಳಲ್ಲಿ ಅದರ ಉಲ್ಲೇಖವಿದ್ದರೆ ಮಾತ್ರ ಅದು ಅಸ್ತಿತ್ವದಲ್ಲಿ ಇದ್ದಂತೆ. ಗ್ರಂಥಾಂತರಗಳಲ್ಲಿ ಉಲ್ಲೇಖವಿಲ್ಲದಿದ್ದರೆ ಆ ಗ್ರಂಥ ಇಲ್ಲವೇ ಇಲ್ಲ ಎಂದು ಅವರು ನಿರ್ಧರಿಸಿಬಿಡುವರು. ಈ ಮಾನದಂಡವು ಬರವಣಿಗೆಯ ಪ್ರಚಾರವೇ ಇಲ್ಲದೇ ಇರುವ, ಅಥವಾ ಅತ್ಯಲ್ಪ ಪ್ರಮಾಣದಲ್ಲಿರುವ ಎರಡು ಸಾವಿರ ವರ್ಷಗಳ ಹಿಂದಿನ ಗ್ರಂಥಗಳ ಕಾಲನಿರ್ಣಯಕ್ಕೆ ಉಪಯುಕ್ತವೆನಿಸಲಾರದು. ಆದುದರಿಂದ ಇಂಥ ಪ್ರಾಚೀನ ಗ್ರಂಥಗಳ ಆಚೀಚೆಯ ಗಡುವುಗಳನ್ನು ಆ ಗ್ರಂಥವನ್ನಾಗಲಿ ಅದರಲ್ಲಿಯ ವಚನಗಳನ್ನಾಗಲಿ ಉದಾಹರಿಸುವ ಗ್ರಂಥಾಂತರಗಳಿಂದ ನಿರ್ಣಯಿಸುವದಕ್ಕಿಂತ ಅದೇ ಗ್ರಂಥದ ಉಕ್ತಿ ಸಂದರ್ಭ ಮುಂತಾದ ಅಂತರಂಗಿಕ ಪ್ರಮಾಣಗಳಿಂದ ನಿರ್ಧರಿಸುವದೇ ಸೂಕ್ತ ಎನಿಸುವದು.

ಮಹಾಭಾರತ ಪುರಾಣಾದಿಗಳ ಕರ್ತರಾದ ಸ್ವತಃ ವ್ಯಾಸರೂ ಅವರಲ್ಲಿ ಓದಿ ಕೇಳಿ ಅಧ್ಯಯನ ಮಾಡಿ ಪ್ರಚಾರ ಮಾಡಿದ ಶಿಷ್ಯರೂ ತಾವಾಗಿ ಒಪ್ಪಿಕೊಂಡ ಮಹಾಭಾರತದ ಯುದ್ಧಕಾಲದ ಹತ್ತಿರದ ಕಾಲವೇ ಈ ಪುರಾಣಗಳ ರಚನಾ ಕಾಲ ಎಂದು ಒಪ್ಪುವದು ಸೂಕ್ತ ಎನಿಸುವದು.

ಆದರೆ ಇಂದಿನ ವಿಮರ್ಶಕರು ಈ ವ್ಯಾಸರ ವಚನ ರೂಪವಾದ ಸ್ವಂತ ಹೇಳಿಕೆಗಳನ್ನೂ ಅವರಲ್ಲಿ ಓದಿದೆನೆಂದು ಹೇಳಿದ ಉಗ್ರಶ್ರವ ಸೂತನ ಆತ್ಮ ನಿರೂಪಣೆಯನ್ನು ಕಡೆಗಣಿಸಿ ಎಲ್ಲ ಪುರಾಣಗಳಿಗೂ ಆ ಪುರಾಣಗಳಲ್ಲಿಯ ಬೇರೆ ಬೇರೆ ಅಧ್ಯಾಯಗಳಿಗೂ ಬೇರೆ ಬೇರೆ ಹುಟ್ಟಿದ ದಿನಗಳನ್ನೇ ನಿರ್ಧರಿಸಿ ಹೊಸ ಪುರಾಣ ಪಂಚಾಂಗವನ್ನೇ ನಿರ್ಮಿಸಿದ್ದಾರೆ. ಅವರಾದರೂ ಆಳವಾಗಿ ಎಲ್ಲ ಪುರಾಣ ಹಾಗೂ ಪ್ರಾಚೀನ ಭಾರತೀಯ ಶ್ರುತಿ, ಸ್ಮೃತಿ ವೇದಾಂಗಾದಿ ವಿವಿಧ ವಾಙ್ಮಯರಾಶಿಯನ್ನೆಲ್ಲ ತಲಕಾಡಿ ಸಂಶೋಧಿಸಿ ಒಂದು ನಿರ್ಣಯಕ್ಕೆ ಬಂದಿದ್ದರಿಂದ ಅದೂ ಕೂಡ ಉಪೇಕ್ಷಾರ್ಹವಲ್ಲ. ಆದುದರಿಂದ ಇಲ್ಲಿ ಆ ಪಾಶ್ಚಾತ್ಯ ಪುರಾಣ ಪಂಡಿತರ ಅಭಿಪ್ರಾಯವನ್ನು ಸಂಕ್ಷಿಪ್ತವಾಗಿ ವಿವೇಚಿಸಿ ಅದಕ್ಕೆ ಭಾರತೀಯ ಪೌರಾಣಿಕ ಪ್ರಾಜ್ಞರ ಸಮಂಜಸವಾದ ಸಮಾಧಾನಕರ ನಿರ್ಣಯವನ್ನು ದಿಗ್ದರ್ಶಿಸಲು ಪ್ರಯತ್ನಿಸಲಾಗುವದು.

ಹಿಂದೆ ಕಲ್ಕತ್ತಾ ಹಾಯಕೋರ್ಟಿನಲ್ಲಿ ನ್ಯಾಯಮೂರ್ತಿಯಾಗಿದ್ದ ಎಫ್.ಈ. ಪರ್ಗಿಟರರು ತಮ್ಮ **"ಏನ್ಸಂಟ ಇಂಡಿಯನ್ ಹಿಸ್ಟಾರಿಕಲ್ ಟ್ರ್ಯಾಡಿಶನಲ್"** ಎಂಬ ವಿಮರ್ಶಾತ್ಮಕ ಪ್ರಬಂಧದಲ್ಲಿ ಮೌಲಿಕ ಪುರಾಣಗಳ ಕಾಲ ಎಂಬ ನಾಲ್ಕನೆಯ ಪ್ರಕರಣದಲ್ಲಿ ವಾಯುಪುರಾಣವು ಇಸ್ವಿಸನ್ ೬೨೦ ಕ್ಕಿಂತ ಮೊದಲಿನದಾಗಿದೆ. ಅದಕ್ಕೆ ಕಾರಣ ಏಳನೆಯ ಶತಕದ ಮಧ್ಯದಲ್ಲಿ ಜೀವಿಸಿದ ಸಂಸ್ಕೃತ ಕಾದಂಬರೀಕಾರ ಬಾಣಂಭಟ್ಟನು ತನ್ನ ಹರ್ಷ ಚರಿತದಲ್ಲಿ ವಾಯುಪುರಾಣವನ್ನು ಉಲ್ಲೇಖಿಸಿದ್ದಾನೆಂಬುದು. ಇದರಂತೆ ಕೆಲವು ಭೂದಾನಗಳನ್ನು ಕೊರೆದಿಟ್ಟ ಶಿಲಾಶಾಸನಗಳಲ್ಲಿ ಪದ್ಮ ಭವಿಷ್ಯ ಹಾಗೂ ಬ್ರಹ್ಮ ಪುರಾಣದ ಪದ್ಯಗಳು ದೊರೆತಿರುವುದರಿಂದ ಆ ಶಿಲಾಶಾಸನಗಳ ಕಾಲವಾದ ನಾಲ್ಕನೆ ಶತಕಕ್ಕಿಂತ ಈ ಪುರಾಣಗಳು ಪ್ರಾಚೀನ ಅಂದರೆ ಐದನೆಯ ಶತಮಾನಕ್ಕಿಂತ ಪೂರ್ವದವು ಎಂದು ಹೇಳಿ ಈ ಪುರಾಣಗಳ ಹಿಂದಿನ ಗಡುವನ್ನು ಅಂತಃಸಾಕ್ಷಿ ಹಾಗೂ ಬಹಿಸ್ಸಾಕ್ಷಿಗಳಿಂದ ಕ್ರಿ.ಪೂ. ಐದುನೂರು ವರ್ಷಗಳವರೆಗೆ ಎಳೆದಿದ್ದಾರೆ.

ಆದರೆ ಡಾಕಾ ಯುನಿವರ್ಸಿಟಿಯ ಸಂಸ್ಕೃತ ಪ್ರೊಫೆಸರರಾಗಿದ್ದ ಆರ್.ಸಿ. ಹಜರಾ ಎಂ.ಎ. ಪಿಚ್.ಡಿ.ಯವರು ಪುರಾಣಗಳ ಅದರಲ್ಲಿಯೂ ಪದ್ಮ ಪುರಾಣದ ಕಾಲವನ್ನು ತೀರ ಇತ್ತೀಚಿನ ಕಾಲದವರೆಗೆ ಅಂದರೆ ಕ್ರಿ.ಶ. ೪-ಶಿನೇ ಶತಕದಿಂದ ೧೫ನೇ ಶತಮಾನದವರೆಗೆ ಎಳೆದುತಂದಿದ್ದಾರೆ. ಇದಕ್ಕೆ ಅವರು ಕೊಡುವ ಕಾರಣ ವಿಚಿತ್ರವಾಗಿದೆ. ಇತ್ತೀಚಿನ ಧರ್ಮಶಾಸ್ತ್ರದ ನಿಬಂಧಕಾರರಾದ ಹೇಮಾದ್ರಿ, ಬಲ್ಲಾಳಸೇನ, ರಘುನಂದನ, ಅನಿರುದ್ಧಭಟ್ಟ, ದೇವಣಭಟ್ಟ, ಶ್ರೀದತ್ತ, ಉಪಾಧ್ಯಾಯ ಮುಂತಾದವರ ನಿಬಂಧಗ್ರಂಥಗಳಲ್ಲಿ ಈ ಪುರಾಣದ ಶ್ಲೋಕಗಳ ಉದಾಹರಣೆ ಕಂಡುಬರುವದು. ಯಾವ ನಿಬಂಧಗ್ರಂಥದಲ್ಲಿ ಯಾವ ಪುರಾಣದ ಪದ್ಯ ಕಂಡುಬರುವುದೋ ಆ ಪುರಾಣ ಗ್ರಂಥ ಆ ನಿಬಂಧ ಗ್ರಂಥಕ್ಕಿಂತ ಪ್ರಾಚೀನ ಎಂಬ ಕಾಲಮಾಪನದಂಡ ಹಿಡಿದು ಎಲ್ಲ ಪುರಾಣಗಳನ್ನು

ಅತ್ಯಂತ ಅರ್ವಾಚೀನ ಎಂದು ನಿರ್ಧರಿಸಿದ್ದಾರೆ. ಮತ್ತು ಎಲ್ಲ ಹದಿನೆಂಟೂ ಪುರಾಣಗಳಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿ ಅರ್ವಾಚೀನ ಗ್ರಂಥಗಳಲ್ಲಿ ಅವುಗಳ ಉಲ್ಲೇಖ ಅನುಲ್ಲೇಖದ ಮೇಲೆ ಪುರಾಣಗ್ರಂಥಗಳ ಪ್ರಾಚೀನತ್ವ ಹಾಗೂ ಅರ್ವಾಚೀನತೆಗಳನ್ನು ಸಾಮಾನ್ಯವಾಗಿ ನಿರ್ಧರಿಸಿದ್ದಾರೆ. ಮೂಲತಃ ಅತ್ಯಂತ ಪ್ರಾಚೀನವಾದ ಪೌರಾಣಿಕ ಸಾಹಿತ್ಯದ ಕಾಲನಿರ್ಣಯ ವಿಷಯದಲ್ಲಿ ಈ ಕಾಲ ನಿರ್ಧಾರಣಕ್ರಮವೇ ಸರಿಯಲ್ಲ ಎನಿಸುವದು.

ಆಧುನಿಕ ಪಾಶ್ಚಾತ್ಯ ಹಾಗೂ ಅವರಿಂದ ಪ್ರಭಾವಿತರಾದ ಪೌರ್ವಾತ್ಯ ವಿಮರ್ಶಕರು ಮಾಡುವ ಇನ್ನೊಂದು ಪ್ರಮಾದವೆಂದರೆ ಪುರಾಣಗ್ರಂಥದಲ್ಲಿ ಯವನ ತುರುಷ್ಕ ಮುಂತಾದ ಶಬ್ದಗಳು ಬಂದರೆ ಆ ಪುರಾಣವು ಭಾರತಕ್ಕೆ ಮುಸಲಮಾನರು ಭಾರತಕ್ಕೆ ದಾಳಿಮಾಡಿದ ಬಳಿಕ ೧೧-೧೨ನೇ ಕ್ರಿಸ್ತಶಕದ ನಂತರವೇ ರಚಿತವಾಗಿದೆ ಎಂದು ಪ್ರತಿಪಾದನೆ. ಯವನವರ ದಾಳಿಯಾಗುವುದಕ್ಕಿಂತ ಮೊದಲು ಯವನ ಎಂಬ ಹೆಸರೇ ಭಾರತೀಯರಿಗೆ ಗೊತ್ತಿದ್ದಿಲ್ಲ ಎಂದು ಗ್ರಹಿಸಿ ಕಾಲನಿರ್ಣಯದಲ್ಲಿ ಅಧ್ವಾನ ಮಾಡಿಬಿಡುವ ಸಂದರ್ಭವಿದೆ. ಇದೇ ವಿಚಾರ ಪದ್ಧತಿಯನ್ನು ಅನುಸರಿಸಿದರೆ ಮ್ಲೇಂಛ, ಹೂಣ ಮುಂತಾದ ಶಬ್ದಗಳು ಪುರಾಣಗಳಲ್ಲಿ ಬಂದಲ್ಲೆಲ್ಲ ಬ್ರಿಟಿಶರೂ ಪೋರ್ಚುಗೀಸರೂ ಭಾರತಕ್ಕೆ ಬಂದ ಬಳಿಕ ೧೮-೧೯ ಶತಮಾನಗಳಲ್ಲಿಯೇ ಆ ಪುರಾಣ ರಚನೆಯಾಗಿದೆ ಯೆಂದು ಹೇಳಬೇಕಾದೀತು. ಇದರಂತೆ ವಿಷ್ಣುವಿನ ದಸಾವತಾರಗಳಲ್ಲಿ ಬುದ್ಧ ಕಲ್ಕಿಯ ಉಲ್ಲೇಖ ಬಂದ ಪುರಾಣಗಳೆಲ್ಲವೂ ಬುದ್ಧೋತ್ತರ ಕಾಲದಲ್ಲಿ ರಚಿತವಾಗಿವೆ ಎಂದು ಹೇಳುವದೂ ಭಾರತೀಯ ಪುರಾಣ ಸಂಪ್ರದಾಯದ ಅನಭಿಜ್ಞತೆಯ ದ್ಯೋತಕವೇ ಆಗಿದೆ.

ವಿಷ್ಣುವಿನ ರಾಮ, ಕೃಷ್ಣ, ಬುದ್ಧ, ಕಲ್ಕ್ಯಾದಿ ಅವತಾರಗಳು ಇದೊಂದೇ ಕಲ್ಪ ಮನ್ವಂತರಗಳಲ್ಲ. ಪ್ರತಿಕಲ್ಪ ಹಾಗೂ ಮನ್ವಂತರಗಳಲ್ಲಿಯೂ ವಿಷ್ಣುವಿನ ಈ ಎಲ್ಲ ಅವತಾರಗಳು ಸಂಭವಿಸುವವು. ಕಲ್ಕಿ ಅವತಾರವು ಇನ್ನೂ ಆಗದಿದ್ದರೂ ಈ ಮೊದಲೇ ಅದರ ಉಲ್ಲೇಖವು ಪುರಾಣ ಗ್ರಂಥಗಳಲ್ಲಿ ಇದ್ದಂತೆ ಬುದ್ಧಾವತಾರಕ್ಕಿಂತ ಪೂರ್ವದಲ್ಲಿ ದ್ವಾಪರಯುಗದಲ್ಲಿ ರಚಿತವಾದ ಪುರಾಣಗಳಲ್ಲಿ ಬುದ್ಧ, ಕಲ್ಕಿ ಮುಂತಾದ ಅವತಾರಗಳ ವಿಷಯಗಳ ಉಲ್ಲೇಖ ಬರುವದು ಅಸಂಭಾವಿತವೇನಲ್ಲ. ಮತ್ತು ಅಂಥ ಉಲ್ಲೇಖ ಆ ಪುರಾಣಗಳಿಗೆ ಬುದ್ಧೋತ್ತರ ಕಾಲಿಕತ್ವಕ್ಕೆ ಸಾಧಕವು ಸರ್ವಥಾ ಆಗಲಾರದು.

ಪರ್ಗಿಟರರೇ ಹೇಳುವಂತೆ ಕ್ರಿಸ್ತಪೂರ್ವ ನಾಲ್ಕನೇ ಶತಕದಲ್ಲಿ ರೂಪುಗೊಂಡ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಅಥರ್ವಣವೇದ, ಛಾಂದೋಗ್ಯೋಪನಿಷತ್, ಶತಪಥ ಬ್ರಾಹ್ಮಣ, ಸಾಂಖ್ಯಾಯನಶ್ರೌತಸೂತ್ರ, ಅಶ್ವಲಾಯನಸೂತ್ರ, ಆಪಸ್ತಂಬ ಧರ್ಮಸೂತ್ರ ಮುಂತಾದ ಅತ್ಯಂತ ಪ್ರಾಚೀನವಾದ ಗ್ರಂಥಗಳಲ್ಲಿಯೂ ಪುರಾಣಗಳ ಉಲ್ಲೇಖವು ಬಂದಿರುವುದರಿಂದ ಈ ಎಲ್ಲ ಹದಿನೆಂಟೂ ಪುರಾಣಗಳು ತಮ್ಮ ಮೂಲ ರೂಪದಲ್ಲಿ ಕ್ರಿಸ್ತಪೂರ್ವ ಮೂರು ಸಾವಿರ ವರ್ಷಗಳ ಹಿಂದೆಯೇ ಭಗವಾನ್ ಬಾದರಾಯಣರಿಂದ ರಚಿಸಲ್ಪಟ್ಟಿವೆ ಎಂದು ಒಪ್ಪುವದು ಯುಕ್ತಿಯುಕ್ತವೂ ಪ್ರಮಾಣ ಸಮ್ಮತವೂ ಸಂಪ್ರದಾಯಾನುಗುಣವೂ ಆಗಿದೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಪ್ರಮಾಣ ಹಾಗೂ ಯುಕ್ತಿಉಕ್ತಿಗಳಿಂದ ಖಚಿತವಾದ ವಿಮರ್ಶಾಪೂರ್ವಕ ಸಿದ್ಧಾಂತ ನಿರ್ಣಯವನ್ನು ತಿಳಿಯ ಬಯಸುವವರು ನಾವು ಕನ್ನಡಿಸಿದ ವಿಷ್ಣು, ವರಾಹ, ವಾಮನ, ಮತ್ಸ್ಯಾದಿ ಪುರಾಣಗಳ

ಮುನ್ನುಡಿಯನ್ನು ನೋಡಬೇಕು.

ಪ್ರಕೃತ ಪದ್ಮಪುರಾಣವು ಗಾತ್ರದಿಂದ ಬೃಹತ್ತರವೂ ವಿಷಯ ವೈಶಾಲ್ಯದಿಂದ ಮಹತ್ತರವೂ ಆದ ಶ್ರೇಷ್ಠ ಪುರಾಣವಾಗಿದೆ. ಇದರ ಗ್ರಂಥ ಸಂಖ್ಯೆ ಐವತ್ತೈದು ಸಾವಿರದಷ್ಟು ಐದು ಖಂಡಗಳು ಇದರಲ್ಲಿ ಇರುತ್ತವೆ. ಇದರಲ್ಲಿ ಮೊದಲನೆಯದಾದ ಸೃಷ್ಟಿಖಂಡದಲ್ಲಿ ಐದು ಪರ್ವಗಳಿರುತ್ತವೆ.

**ಪಾದ್ಮಂ ತತ್ ಪಂಚಪಂಚಾಶತ್‌ಸಹಸ್ರಾಣೀಹ ಪಠ್ಯತೇ**
**ಪಂಚಭಿಃಪರ್ವಭಿಃಪ್ರೋಕ್ತಂ ಸಂಕ್ಷೇಪಾದ್ವ್ಯಾಸಕಾರಣಾತ್ ॥**

**ಪೌಷ್ಕರಂ ಪ್ರಥಮಂ ಪರ್ವಂ ಯತ್ರೋತ್ಪನ್ನಃ ಸ್ವಯಂ ವಿರಾಟ್**
**ದ್ವಿತೀಯಂ ತೀರ್ಥ ಪರ್ವಂತು ಸರ್ವಗ್ರಹಗಣಾಶ್ರಯಂ ॥**

**ತೃತೀಯ ಪರ್ವಗ್ರಹಣೇ ರಾಜಾಂತಾ ಭೂರಿದಕ್ಷಿಣಾಃ**
**ವಂಶಾನು ಚರಿತಂ ಚೈವ ಚತುರ್ಥೇ ಪರಿಕೀರ್ತಿತಂ**
**ಪಂಚಮೇ ಮೋಕ್ಷ ತತ್ವಂ ಚ ಸರ್ವಜ್ಞತ್ವಂ ನಿಗದ್ಯತೇ ॥**

ಪೌಷ್ಕರಪರ್ವ, ತೀರ್ಥಪರ್ವ, ತೃತೀಯಪರ್ವ, ರಾಜವಂಶಪರ್ವ, ಮೋಕ್ಷಪರ್ವ ಎಂದು ಐದು ಪರ್ವಾತ್ಮಕವಾದ ವಿಭಾಗವನ್ನು ಸೃಷ್ಟಿಖಂಡದಲ್ಲಿ ಹೇಳಲಾಗಿದೆ. ಇಡೀ ಪದ್ಮಪುರಾಣವು ಐದು ಖಂಡಗಳಲ್ಲಿ ವಿಭಕ್ತವಾಗಿದೆ.

**"ಪ್ರಥಮಂ ಸೃಷ್ಟಿಖಂಡಂಚ ದ್ವಿತೀಯಂ ಭೂಮಿ ಖಂಡಕಂ**
**ಪಾತಾಲಂ ಚ ತೃತೀಯಂ ಸ್ಯಾತ್ ಚತುರ್ಥಂ ಪುಷ್ಕರಂ ತಥಾ**
**ಉತ್ತರಂ ಪಂಚಮಂ ಪ್ರೋಕ್ತಂ ಖಂಡಾನ್ಯನುಕ್ರಮೇಣವೈ"**

**ಆ. ೧೬೭-೬೮**

ಸೃಷ್ಟಿಖಂಡ, ಭೂಮಿಖಂಡ, ಪಾತಾಳಖಂಡ, ಪುಷ್ಕರಖಂಡ, ಉತ್ತರಖಂಡ ಎಂದು ಐದು ವಿಧವಾಗಿಯೂ ವಿಭಾಗಿಸಿದ್ದಾರೆ.

ಮೊದಲನೆಯದಾದ ಸೃಷ್ಟಿಖಂಡದಲ್ಲಿ ಈ ಮೊದಲೇ ತಿಳಿಸಿದಂತೆ ಐದು ಪರ್ವಗಳಿವೆ. ಪುಷ್ಕರಪ್ರಾದುರ್ಭಾವ, ತೀರ್ಥಕ್ಷೇತ್ರಗಳ ವಿವರಣೆ, ರಾಜವಂಶ ವರ್ಣನೆ, ಸಮುದ್ರ ಮಥನ, ವಾಮನಾವತಾರ ಕಥೆ, ಮಾರ್ಕಂಡೇಯ ವೃತ್ತಾಂತ, ಸ್ಕಂದನ ಉತ್ಪತ್ತಿ, ಕ್ಷೇಮಂಕರೀ ಆಖ್ಯಾನ, ಪಾರ್ವತೀಪರಮೇಶ್ವರ ಆಖ್ಯಾನ, ರಾಮಚರಿತ್ರ, ತಾರಕಾಸುರನ ಸಂಹಾರ, ವ್ರತೋಪವಾಸ ಪ್ರಾಯಶ್ಚಿತ್ತಾದಿ ನಿರೂಪಣೆ ಮುಂತಾದ ಅನೇಕ ವಿಷಯಗಳು ಬಂದಿವೆ.

## ಭೂಮಿಖಂಡದಲ್ಲಿ

ಪಿತೃಭಕ್ತಿಯ ಮಹಿಮೆ, ಅದರಿಂದ ಶಿವಶರ್ಮಗೆ ಆದ ಸದ್ಗತಿ, ಪೃಥುರಾಜನ ಪಾವನ ಚರಿತ, ಸಾಧ್ವೀಶಿಖಾಮಣಿಯಾದ ಸುಕಲೆಯ ರೋಮಹರ್ಷಣ ವೃತ್ತಾಂತ, ಯಯಾತಿ ನಹುಷ ಮಹಾರಾಜರ ವೃತ್ತಾಂತ, ಮಾತಲಿಯ ಚರಿತ್ರ, ಆಧ್ಯಾತ್ಮ ವಿಚಾರ, ಸುಕನ್ಯಾಚ್ಯವನರ ಚರಿತ್ರ, ಅಶೋಕ ಸುಂದರಿಯ ಕಥೆ, ಹುಂಡವಧ ಚ್ಯವನ ಕುಂಡಲ ಸಂವಾದ, ಕಾಮೋದಾಖ್ಯಾನ, ವಿಹುಂಡವಧ, ಸಿದ್ಧಖ್ಯಾನ ಮುಂತಾದ ವಿಷಯಗಳನ್ನು ಬಿತ್ತರಿಸಲಾಗಿದೆ.

## ಸ್ವರ್ಗಖಂಡದಲ್ಲಿ

ಬ್ರಹ್ಮಾಂಡದ ಉತ್ಪತ್ತಿ, ಭೂಮಿ, ಪಾತಾಲ, ಸ್ವರ್ಗಾದಿ ಸಪ್ತಲೋಕಗಳ ನಿಲುವು, ತೀರ್ಥಕ್ಷೇತ್ರಗಳ ವರ್ಣನೆ, ನರ್ಮದಾ ನದಿಯ ಉತ್ಪತ್ತಿ, ಕುರುಕ್ಷೇತ್ರಾದಿ ತೀರ್ಥ ವರ್ಣನೆ, ಯಮುನೆಯ ವೃತ್ತಾಂತ, ಕಾಶೀಮಹಾತ್ಮ್ಯ, ಗಯಾಪ್ರಯಾಗಾದಿ ಮಹಿಮೆ, ವರ್ಣಾಶ್ರಮ ಧರ್ಮ, ವ್ಯಾಸಜೈಮಿನಿ ಸಂವಾದ, ವ್ರತ ಪುಣ್ಯಕರ್ಮಾದಿ ನಿರೂಪಣ, ಶಾಕುಂತಲೋಪಾಖ್ಯಾನ ಮುಂತಾಗಿ ಅನೇಕ ವಿಷಯಗಳನ್ನು ನಿರೂಪಿಸಲಾಗಿದೆ.

## ಪಾತಾಲಖಂಡದಲ್ಲಿ

ಶ್ರೀರಾಮಚಂದ್ರನ ಪಟ್ಟಾಭಿಷೇಕ, ರಾಮನು ಗೈದ ಅಶ್ವಮೇಧ ವಿಧಾನೋಪದೇಶ, ರಾಜರ ಚರಿತ್ರ, ಜಗನ್ನಾಥಪುರಿಯ ಮಹಿಮೆ, ವೃಂದಾವನಾದಿ ಕ್ಷೇತ್ರ ಮಹಿಮೆ, ವೈಶಾಖಸ್ನಾನ, ದಾನ ಪೂಜೆಗಳ ಫಲ, ಭೂದೇವಿ ವರಾಹ ಸಂವಾದ, ಯಮ ಬ್ರಾಹ್ಮಣರ ಕಥೆ, ದಧೀಚಿಯ ಕಥೆ, ಮಹಾದೇವರ ಮಹಿಮೆ, ನಾಗಲೋಕ ವರ್ಣನೆ, ಗೌತಮಾಖ್ಯಾನ, ಶಿವಗೀತಾ ಮುಂತಾದ ಅನೇಕ ವಿಷಯಗಳು ಬಂದಿವೆ.

## ಉತ್ತರ ಖಂಡದಲ್ಲಿ

ಪರ್ವತಾಖ್ಯಾನ, ಜಾಲಂಧರನ ಕಥೆ, ಶ್ರೀ ಶೈಲಾದಿಕ್ಷೇತ್ರ, ಸಮುದ್ರ, ಗಂಗಾ ಪ್ರಯಾಗ, ಕಾಶಿ, ಗಯಾ ಮುಂತಾದ ತೀರ್ಥಕ್ಷೇತ್ರಗಳ ಬಣ್ಣನೆ, ಇಪ್ಪತ್ತುನಾಲ್ಕು ಏಕಾದಶೀ ವ್ರತಗಳ ಮಹಿಮಾನು ವರ್ಣನೆ, ವಿಷ್ಣುಧರ್ಮ, ವಿಷ್ಣು ಸಹಸ್ರನಾಮ ಕಾರ್ತಿಕ ವ್ರತ, ಮಾಘಸ್ನಾನ, ನರಸಿಂಹ ವೃತ್ತಾಂತ, ದೇವಶರ್ಮಾಖ್ಯಾನ, ಗೀತಾ ಮಹಾತ್ಮ್ಯ, ಭಾಗವತ ಮಹಾತ್ಮ್ಯ, ಮಂತ್ರರತ್ನಾಭಿಧಾನ, ಮತ್ಸ್ಯಾದಿ ದಶಾವತಾರ ಕಥಾ, ರಾಮನಾಮ ಮಹಾತ್ಮ್ಯ, ಭೃಗುಕೃತ ವಿಷ್ಣು ವೈಭವ ಪರೀಕ್ಷಾ ಮುಂತಾಗಿ ಅನೇಕ ವಿಷಯ ವಿಶೇಷಗಳು ಪ್ರತಿಪಾದಿತವಾಗಿವೆ.

ಮುಖ್ಯವಾಗಿ ಈ ಪದ್ಮ ಪುರಾಣವು ವೈಷ್ಣವ ಪುರಾಣವಾಗಿದೆ. ಇದರ ಬಹು ಭಾಗವು ಶ್ರೀ ವಿಷ್ಣುವಿನ ಪರಮೋತ್ಕರ್ಷವನ್ನು ಅನೇಕ ಆಖ್ಯಾನ ಉಪಾಖ್ಯಾನ ಸಂವಾದ ಉಪದೇಶ ಮುಂತಾದವುಗಳಿಂದ ಪ್ರತಿಪಾದಿಸಲಿಕ್ಕಾಗಿಯೇ ಹೊರಟಿದೆ. ಆದರೆ ಇದರಲ್ಲಿ ಇತರ ದೇವತಾ ನಿಂದೆ, ತಿರಸ್ಕಾರ. ಧ್ವನಿ ಕೇಳಬರುವುದಿಲ್ಲ ಅನೇಕ ಸಂದರ್ಭದಲ್ಲಿ ಮಹಾದೇವರ ಹಾಗು ಬ್ರಹ್ಮದೇವರ ಮಹಾ ಮಹಿಮೆಗಳೂ ಚೆನ್ನಾಗಿಯೇ ಪ್ರತಿಪಾದಿಸಲ್ಪಟ್ಟಿವೆ. ಅನೇಕ ಸಂದರ್ಭಗಳಲ್ಲಿ ಸ್ಪಷ್ಟ ವಚನಗಳಿಂದ ಒಬ್ಬನೇ ಪರಮಾತ್ಮನು ಬ್ರಹ್ಮ, ಶಿವ, ಹರಿ ರೂಪಿಯಾಗಿ ಅವರವರಲ್ಲಿ ನಿಂತು ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನು ಮಾಡುವನೆಂದು ಹೇಳಲಾಗಿದೆ. ಶೈವ ವೈಷ್ಣವರಿಬ್ಬರಿಂದಲೂ ಅಲ್ಲಲ್ಲಿ ಪ್ರಕ್ಷೇಪ ವಿಕ್ಷೇಪಗಳು ಮಾಡಲ್ಪಟ್ಟಿವೆಯೆಂದೇ ಪಾಶ್ಚಾತ್ಯ ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.

ತ್ರಿಮೂರ್ತಿಗಳಲ್ಲಿ ಹರಿಹರರಿಗೆ ಮಾತ್ರ ಎಲ್ಲೆಲೆಗೂ ಪ್ರಾಶಸ್ತ್ಯ ಬಂದದ್ದನ್ನು ನೋಡಿ ಬ್ರಹ್ಮದೇವರ ಉಪಾಸಕರು ಗೋಪ ಕಥನೆಯೊಡನೆ ಬ್ರಹ್ಮನ ವಿವಾಹದ ಕಥೆಯನ್ನು ಹುಟ್ಟಿಸಿ ಸಾವಿತ್ರಿ ಎಂಬ ಹೆಸರಿನ ಆ ಹೊಸ ಬ್ರಹ್ಮಪತ್ನಿಯ ಮುಖಾಂತರ ಮತ್ತೆ ಬ್ರಹ್ಮ ಪೂಜೆಯ ಪದ್ಧತಿ ಪುನಃ ಪ್ರತಿಷ್ಠಾಪನೆಯ ಪ್ರಯತ್ನ ಮಾಡಿದ್ದಾರೆಂದು ಪ್ರೊ. ಹಜರಾ ಸಿದ್ಧ ಮಾಡಿ ತೋರಿಸಿದ್ದಾರೆ.

ಇದರಂತೆ ವೇದ ಬಾಹಿರವಾದ ಬೌದ್ಧ ಹಾಗೂ ಜೈನ ಮತಗಳ ಖಂಡನೆಗಾಗಿ ಮಹಾಮಾಯನ ಉತ್ಪತ್ತಿ ಕಥೆಯನ್ನೂ ಅವನಿಂದ ದಾನವ ಧುರೀಣರನ್ನೆಲ್ಲ ವೇದಮಾರ್ಗದಿದ ದೂರ ಸರಿಸಿದ ವೃತ್ತಾಂತವನ್ನೂ ಕೆಲವು ವೈದಿಕ ಧರ್ಮಾಭಿಮಾನಿಗಳು ಸೃಷ್ಟಿಸಿ ತಮ್ಮ ಕಲ್ಪನೆಯ ಕೂಸಾದ ಈ ಅಸಂಗತ ಕಥೆಯನ್ನು ಈ ಮಹಾಪುರಾಣದಲ್ಲಿಯೂ ಬೇರೆ ಮತ್ಸ್ಯ ಪುರಾಣ, ವಿಷ್ಣು ಪುರಾಣಾದಿಗಳಲ್ಲಿಯೂ ಬುದ್ಧಿಪೂರ್ವಕವಾಗಿ ಸೇರಿಸಿದ್ದಾರೆ. ಇದು ಮೂಲ ಪದ್ಮಪುರಾಣದಲ್ಲಿ ಇರಲಿಲ್ಲಎಂದು ಅನೇಕ ವಿಮರ್ಶಕರು ಅನೇಕ ಯುಕ್ತಿ ಉಪನ್ಯಾಸಪೂರ್ವಕವಾಗಿ ನಿರೂಪಿಸಿದ್ದಾರೆ. ಶಕ, ಹೂಣ, ಬರ್ಬರ, ಯವನ ಮುಂತಾದ ಅನೇಕ ಧರ್ಮಾಂಧ ಪ್ರಬಲ ರಾಜ ಮಹಾರಾಜರ ಭೀಕರ ಅತ್ಯುಗ್ರ ದಾಳಿಗೀಡಾಗಿ ವೈದಿಕ ಧರ್ಮದ ಬೇರುಗಳೇ ಅಲುಗಾಡ ತೊಡಗಿದಾಗ ಧರ್ಮರಕ್ಷಣೆಗಾಗಿ ಬದ್ಧಕಂಕಣರಾದ ಕೆಲ ಧಾರ್ಮಿಕ ಧುರೀಣರು ಸ್ವಧರ್ಮ ರಕ್ಷಣೆಯ ಪ್ರತ್ಯಾಶೆಯಿಂದ ಇಂಥ ಅವಾಪೋದ್ವಾಪಗಳನ್ನು ಮಾಡಿರುವದು ಅಸಂಭವವೇನಲ್ಲ.

ಇಂಥ ಮತಾಂಧತೆಯ ಅತಿರೇಕದ ಅಂಶಗಳನ್ನು ಪ್ರಕ್ಷಿಪ್ತ ಎಂದು ಬಿಟ್ಟರೂ ಈ ಪುರಾಣದ ಮುಖ್ಯ ಗುರಿಯಾದ ವೈದಿಕ ಧರ್ಮ, ವಿಷ್ಣುಭಕ್ತಿ, ಭಾರತೀಯ ಸಂಸ್ಕೃತಿ, ಪೂರ್ವಕಾಲದ ಜನಜೀವನದ ನೈಜ ಇತಿಹಾಸ, ಮೋಕ್ಷಮಾರ್ಗ ಪ್ರದರ್ಶನ ಮುಂತಾದ ಯಾವ ಮುಖ್ಯ ವಿಷಯ ವಿನ್ಯಾಸಕ್ಕೂ ಚ್ಯುತಿ ಉಂಟಾಗುವದಿಲ್ಲ.

ಈ ಪದ್ಮ ಪುರಾಣದ ಶೈಲಿ, ರಚನೆ, ಪಾತ್ರಸೃಷ್ಟಿ, ಧರ್ಮದೃಷ್ಟಿ, ರಸಪುಷ್ಟಿಗಳ ಬಗೆಗೆ ಬಹಳಷ್ಟು ಹೇಳಲಿಕ್ಕಿದ್ದರೂ ಈಗಾಗಲೇ ಈ ಪೂರ್ವಪೀಠಿಕೆಯು ಪರ್ಯಾಪ್ತ ಮಾತ್ರೆಯಲ್ಲಿ ಅತಿಲಂಬಿಸಿರುವದರಿಂದ ಅದೆಲ್ಲವನ್ನು ಈ ಪದ್ಮಪುರಾಣದ ಮುಂದಿನ ಭಾಗದಲ್ಲಿ ನಿರೂಪಿಸಲಾಗುವದು.

ಮಹಾಮಹೋಪಾಧ್ಯಾಯ

ಹುಬ್ಬಳ್ಳಿ — ಪಂ. ಪಂಢರೀನಾಥಾಚಾರ್ಯಗಲಗಲಿ

ದಿನಾಂಕ 27 – 1 – 2005 — ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಕವಿ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಇವರು ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತ ಪೂರ್ವವಾದ '**ನ ಭೂತೋ ನ ಭವಿಷ್ಯತಿ**' ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚ ಹಸಿರಾಗಿಯೇ ಇದೆ.

ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನ ಮೇಲೆ ಮಂದರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜಿನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ಭೇಟಿಮಾಡಿ, ಆ ಎಲ್ಲಾ ಭವನಗಳ ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ,

ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಉತ್ತರೋತ್ತರ ಉತ್ಕರ್ಷವನ್ನೂ ಶ್ರೆಯಸ್ಸನ್ನೂ ಪ್ರೇಯಸ್ಸನ್ನೂ ಕೊಟ್ಟು ಕರುಣೆಯಿಂದ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಮತ್ಸ್ಯಪುರಾಣದ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್) ಬೆಂಗಳೂರು-560 004 ಇದರ ಮಾಲೀಕರಾದ **ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮುವತ್ತು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಆಶಂಸಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯಗಲಗಲಿ**
ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

ಹುಬ್ಬಳ್ಳಿ
ದಿನಾಂಕ 27 – 1 – 2005

# ಪದ್ಮಪುರಾಣ ಭಾಗ - ೧ ಸೃಷ್ಟಿಖಂಡ

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

—o—

''ಶ್ರೀ ರುಕ್ಮಿಣೀ ಸತ್ಯಭಾಮಾ ಸಮೇತಃ
ಶ್ರೀಪಾಂಡುರಂಗ ವಿಠ್ಠಲಃ ಪ್ರಸೀದಂತು

# ಪದ್ಮ ಮಹಾಪುರಾಣ ಭಾಗ - ೧

# ಸೃಷ್ಟಿಖಂಡ

## ಉಗ್ರಶ್ರವಸನ ಉಪಾಖ್ಯಾನ

ಅಧ್ಯಾಯ - ೧

**''ಸ್ವಚ್ಛಂ ಚಂದ್ರಾವದಾತಂ ಕರಿಕರ ಮಕರ ಕ್ಷೋಭ ಸಂಜಾತಫೇನಂ**
**ಬ್ರಹ್ಮೋದ್ಭೂತಿ ಪ್ರಸಕ್ತೈರ್ವ್ರತ ನಿಯಮ ಪರೈಃ ಸೇವಿತಂ ವಿಪ್ರಮುಖ್ಯೈಃ**
**ಓಂಕಾರಾಲಂಕೃತೇನ ತ್ರಿಭುವನ ಗುರುಣಾ ಬ್ರಹ್ಮಣಾ ದೃಷ್ಟಿ ಪೂತಂ**
**ಸಂಭೋಗಾಭೋಗ ರಮ್ಯಂ ಜಲಮಶುಭ ಹರಂ ಪೌಷ್ಕರಂ ನಃಪುನಾತು''॥**

ಸ್ವಚ್ಛವೂ ಚಂದ್ರನಂತೆ ಪರಿಶುಭ್ರವೂ ಆದ ಪುಷ್ಕರಕ್ಷೇತ್ರದ ಪವಿತ್ರವಾದ ನೀರು ನಮ್ಮನ್ನು ಪಾವನಗೊಳಿಸಲಿ. ಮೈದೊಳೆವ ಆನೆಗಳ ಸೊಂಡೆ ಹಾಗೂ ಮೊಸಳೆಗಳ ಕಲಕಾಟ ತುಳಕಾಟಗಳಿಂದ ಅಲ್ಲಿಯ ನೀರು ಬುರುಗುಬುರುಗಾಗಿರುತ್ತದೆ. ಬ್ರಹ್ಮಾಪರೋಕ್ಷವನ್ನು ಬಯಸುವ ಬ್ರಹ್ಮಜ್ಞಾನಿ ವಿಪ್ರೋತ್ತಮರು ಈ ಪುಷ್ಕರ ತೀರ್ಥದ ತಡಿಯಲ್ಲಿ ನೆಲೆಸಿ ವ್ರತನಿಯಮ ತಪಸ್ಸಾದಿಗಳನ್ನು ಆಚರಿಸುತ್ತಲಿರುತ್ತಾರೆ. ಓಂಕಾರ ವಾಚ್ಯನಾದ ಶ್ರೀ ಪರಮಾತ್ಮನ ಗುಣಪರಿಪೂರ್ಣವಾದ ಪರಬ್ರಹ್ಮ ಸ್ವರೂಪವನ್ನು ಸದಾಧ್ಯಾನಗೈದು, ಅವನಿಂದ ದತ್ತವಾದ ಬ್ರಹ್ಮ ಶಬ್ದದಿಂದ ಅಲಂಕೃತನಾಗಿ ಮೂರುಲೋಕದ ನಿಜವಾದ ಗುರುವಾದ ಚತುರ್ಮುಖ ಬ್ರಹ್ಮದೇವನ ಪವಿತ್ರ ದೃಷ್ಟಿಕ್ಷೇಪದಿಂದ ಇದು ಪರಮ ಪವಿತ್ರತಮವಾಗಿದೆ. ಭೋಗ ಯೋಗ, ಸೌಭಾಗ್ಯ, ವೈರಾಗ್ಯ ಎರಡನ್ನೂ ಸಾಧಿಸಿಕೊಡುವದರಿಂದ ಪರಮ ರಮಣೀಯವಾಗಿದೆ. ಈ ಪುಷ್ಕರಕ್ಷೇತ್ರದ ನೀರು. ಗಣಪತಿಯು ತನ್ನ ಶುಂಡಾ ದಂಡದಲ್ಲಿ ಅಶುಭಗಳನ್ನೆಲ್ಲ ಕಳೆಯುವ ಈ ಪುಷ್ಕರ ಜಲವನ್ನು ತನ್ನ ಪುಷ್ಕರ ಎಂದರೆ ಸೊಂಡೆಯಲ್ಲಿ ಭಕ್ತಿಯಿಂದ ಯಾವಾಗಲೂ ಧರಿಸಿಯೇ ಇರುವದರಿಂದಲೂ ಇದಕ್ಕೆ ಪೌಷ್ಕರ ಜಲ ಎಂಬ ಹೆಸರು ಅನ್ವರ್ಥವಾಗಿದೆ.

ಲೋಮಹರ್ಷನು ವೇದವ್ಯಾಸರ ಶಿಷ್ಯ. ಬಹಳ ಬುದ್ಧಿವಂತ. ಅವನು ಏಕಾಂತದಲ್ಲಿ ಕುಳಿತು ಉಗ್ರಶ್ರವಸ ಎಂಬ ತನ್ನ ಮಗನ ಬಳಿಗೆ ಹೋಗಿ ಹೇಳಿದ. ''ಉಗ್ರಶ್ರವ, ನನ್ನಿಂದ ಎಲ್ಲ ಧರ್ಮಗಳನ್ನು ಕೇಳಿ ತಿಳಿದುಕೊಂಡಿರುವೆ. ಇನ್ನು ಮೇಲೆ ನೀನು ಋಷಿಗಳ ಪುಣ್ಯಾಶ್ರಮಗಳಿಗೆ ಹೋಗು. ಅಲ್ಲಿ ಧರ್ಮದ ಮರ್ಮವನ್ನು ಅರಿತುಕೊಳ್ಳಬೇಕೆಂದು ಪ್ರಶ್ನೆಮಾಡಿದವರಿಗೆ ನಾನು ನಿನಗೆ ನಿರೂಪಿಸಿದ ಧರ್ಮ ರಹಸ್ಯಗಳನ್ನು ವಿವರವಾಗಿ ತಿಳಿಸಿಹೇಳು. ಶ್ರೀವೇದವ್ಯಾಸರಿಂದ ನಾನು ಕೇಳಿ ತಿಳಿದುಕೊಂಡ ಎಲ್ಲ ಪುರಾಣಗಳನ್ನು ನಿನಗೆ ಕಲಿಸಿದ್ದೇನೆ. ಅವೆಲ್ಲವುಗಳನ್ನು ನೀನು ಮುನಿಗಳಿಗೆ ಬಿತ್ತರಿಸು.''

ಪ್ರಯಾಗ ಕ್ಷೇತ್ರದಲ್ಲಿ ಆರು ಕುಲಗಳಲ್ಲಿ ಜನಿಸಿದ ಧರ್ಮಜಿಜ್ಞಾಸುಗಳಾದ ಮುನಿಗಳು ಸುರಗುರು ಬೃಹಸ್ಪತ್ಯಾಚಾರ್ಯರಿಗೆ ಧರ್ಮ ರಹಸ್ಯವನ್ನು ಕೇಳಿದರು. ಮತ್ತು "ಈ ಭೂಮಂಡಲದಲ್ಲಿ ಅತ್ಯಂತ ಪುಣ್ಯಕರವಾದ ದೇಶವಾವುದು?" ಎಂದು ಪ್ರಶ್ನೆ ಮಾಡಿದರು.

ಎಲ್ಲರ ಹಿತ ಬಯಸುವ ಆ ದೇವಗುರು ಅವರಿಗೆ ಹೀಗೆ ನುಡಿದರು. "ದಿವ್ಯವಾದ ಗಟ್ಟಿಯಾದ ಅಚ್ಚುಳ್ಳ, ಸತ್ಯದಿಂದ ಚಲಿಸುವ ಈ ಬಲಿಷ್ಠವಾದ ಧರ್ಮಚಕ್ರವನ್ನು ನೀವು ಜಾಗರೂಕತೆಯಿಂದ ಅನುಸರಿಸಿಕೊಂಡು ಹೋಗಿರಿ. ನಿಯಮಾನುಸಾರವಾಗಿ ಧರ್ಮಚಕ್ರವನ್ನು ಅನುಸರಿಸಿಕೊಂಡು ನೀವು ಹೋಗುವಾಗ ಈ ಧರ್ಮಚಕ್ರದ ಅಚ್ಚು ಎಲ್ಲಿ ಮುರಿಯುವದೋ ಅದು ಪುಣ್ಯದೇಶ ಎಂದು ತಿಳಿಯಿರಿ" ಹೀಗೆ ಅಮರರ ಆಚಾರ್ಯನಾದ ಬೃಹಸ್ಪತಿಯು ಅಲ್ಲಿದ್ದ ಎಲ್ಲ ಋಷಿಗಳಿಗೆ ತಿಳಿಸಿ ಹೇಳಿ ಅದೃಶ್ಯನಾದ.

ಅವನ ಆದೇಶದಂತೆ ಮುನಿಗಳು ಆ ಧರ್ಮಚಕ್ರವನ್ನು ಅನುಸರಿಸಿ ನಡೆದರು. ಗಂಗೆಯ ದಂಡೆಗುಂಟ ಬರುತ್ತಲಿರುವ ಆ ಧರ್ಮಚಕ್ರದ ಅಚ್ಚು ಒಂದು ಕಡೆ ಮುರಿದುಕೊಂಡಿತು. ಧರ್ಮಚಕ್ರದ ನೇಮಿ ಅರ್ಥಾತ್ ಹಲ್ಲು ಮುರಿದ ಸ್ಥಳವೆ ನೈಮಿಷವೆಂದು ಪ್ರಸಿದ್ಧವಾಯಿತು. ಆ ನೈಮಿಷಾರಣ್ಯದಲ್ಲಿ ಮಹಾನುಭಾವರಾದ ಆ ಋಷಿಗಳೆಲ್ಲರೂ ಕೂಡಿ ದೀರ್ಘವಾದ ಜ್ಞಾನಸತ್ರವನ್ನು ಮಾಡುತ್ತಲಿದ್ದಾರೆ. ನೀನು ಅಲ್ಲಿಗೆ ಹೋಗಿ ಧರ್ಮದ ವಿಷಯದಲ್ಲಿ ಅವರಿಗೆ ಬಂದ ಸಂಶಯ ಪರಿಹರಿಸು, ಅವರ ಪ್ರಶ್ನೆಗಳಿಗೆಲ್ಲ ಉತ್ತರಿಸು" ಎಂದು ಲೋಮಹರ್ಷನು ಉಗ್ರಶ್ರವನಿಗೆ ಅಪ್ಪಣೆಯಿತ್ತನು.

ಉಗ್ರಶ್ರವನು ಒಳ್ಳೆ ಜ್ಞಾನಿ; ಅರಿತುಬಲ್ಲವ. ತಿಳಿಯಬೇಕಾದುದ್ದನ್ನು ತಿಳಿದವ. ಅಲ್ಲದೆ ತಿಳಿಸಿ ಹೇಳುವ ಜಾಣ್ಮೆಯೂ ಅವನಲ್ಲಿತ್ತು. ಲೋಮಹರ್ಷನ ಆದೇಶದ ಮೇರೆಗೆ ಅವನು ನೈಮಿಷಾರಣ್ಯಕ್ಕೆ ಆಗಮಿಸಿ, ಮುನಿಗಳ ಬಳಿಗೆ ಬಂದು ಭಕ್ತಿಯಿಂದ ಕೈಜೋಡಿಸಿದ. ಮಣಿದು ಬಂದ ಆ ಮೇಧಾವಿ ಉಗ್ರಶ್ರವನ ವಿನಯ ಅನುನಯ ಪ್ರಣಾಮಗಳಿಂದ ಅಲ್ಲಿ ನೆರೆದ ಋಷಿಗಳು ಸಂತುಷ್ಟರಾದರು. ಅವರೆಲ್ಲರೂ ಅಲ್ಲಿ ನಡೆದಿರುವ ಮತ್ತು ಮುಂದೆ ಬಹುಕಾಲ ನಡೆಯಲಿರುವ ಜ್ಞಾನಸತ್ರದ ಸದಸ್ಯರಾಗಿದ್ದರು. ಅವರೆಲ್ಲರೂ ಜ್ಞಾನಿಯಾದ ಉಗ್ರಶ್ರವನನ್ನು ಆದರಿಸಿ, ಸತ್ಕರಿಸಿದರು. ಸಂಪ್ರದಾಯದಂತೆ ಅವನಿಗೆ ಪೂಜೆಯನ್ನು ಸಲ್ಲಿಸಿದರು. ಮತ್ತು ಅವನಿಗೆ ಪ್ರಶ್ನೆ ಮಾಡಿದರು. "ಸೂತನೆ ನೀನು ಎಲ್ಲಿಂದ ಬಂದೆ ? ನಿನ್ನ ದೇಶವು ಯಾವುದು ? ದೇವತೆಗಳಿಗೆ ಸಮಾನವಾಗಿದೆ ನಿನ್ನ ದೇಹದೀಪ್ತಿ. ನೀನು ಇಲ್ಲಿಗೆ ಬರಲು ಕಾರಣವೇನು ತಿಳಿಸು."

ಉಗ್ರಶ್ರವ-ನನ್ನ ತಂದೆ ಲೋಮಹರ್ಷಣ. ಅವರು ಸಾಕ್ಷಾತ್ ವೇದವ್ಯಾಸರ ಶಿಷ್ಯರು ಅಂದ ಬಳಿಕ ಮಹಾಜ್ಞಾನಿಯೆಂದು ಬೇರೆ ಹೇಳಬೇಕಿಲ್ಲವಷ್ಟೇ ? ವ್ಯಾಸ ಶಿಷ್ಯರಾದ ಆ ನನ್ನ ತಂದೆ ನನಗೆ ಇಲ್ಲಿಗೆ ಬರಲು ಬೇರೆ ಹೇಳಬೇಕಿಲ್ಲವಷ್ಟೇ ? ವ್ಯಾಸ ಶಿಷ್ಯರಾದ ಆ ನನ್ನ ತಂದೆ ನನಗೆ ಇಲ್ಲಿಗೆ ಬರಲು ಅಪ್ಪಣೆಗೈದರು. ನಿಮ್ಮ ಪ್ರಶ್ನೆಗಳಿಗೆಲ್ಲ ಸರಿಯಾದ ಉತ್ತರ ರೂಪವಾಗಿ ವ್ಯಾಸರ ಸಂದೇಶವನ್ನು ಬಿತ್ತರಿಸಬೇಕೆಂದು ನನಗೆ ತಂದೆಯ ಆದೇಶ. ಆದುದರಿಂದ ಪೂಜ್ಯರಾದ ತಾವು ನಾನು ಯಾವ ಕಥೆಯನ್ನು ಹೇಳಬೇಕು ? ಯಾವ ಪುರಾಣವನ್ನು ಹೇಳಲಿ ? ಯಾವ ಇತಿಹಾಸ ಕಲಿಸಲಿ ? ಯಾವ ಬಗೆಯ ಧರ್ಮ ಬೋಧಿಸಲಿ ಎಂಬುದನ್ನು ಹೇಳಿರಿ. ಭಗವಾನ್ ವೇದ ವ್ಯಾಸರು ತಿಳಿಸಿದ ಈ ಪುರಾಣ ಕಥಾರಹಸ್ಯ, ಧರ್ಮ ಸೂಕ್ಷ್ಮವನ್ನು ನನ್ನ ಯೋಗ್ಯತೆಗೆ ತಕ್ಕಂತೆ ನಿಮಗೆ ತಿಳಿಸಬೇಕೆಂದಿದ್ದೇನೆ.

ನೈಮಿಷ ಋಷಿಗಳಿಗೆ ಸೂತನ ಮಾತು ಮಧುರವೆನಿಸಿತು. ಭಗವಾನ್ ಬಾದರಾಯಣನು ಬೋಧಿಸಿದ ಪುರಾಣಕಥೆಯನ್ನು ಕೇಳಬೇಕೆಂದು ಕುತೂಹಲವು ಅವರ ಹೃದಯದಲ್ಲಿ ಹೆಡೆ ಎತ್ತಿತ್ತು. ಜ್ಞಾನ ಸತ್ರದಂತಹ ಪುಣ್ಯ ಕಾರ್ಯದಲ್ಲಿ ಇಂಥ ಪಂಡಿತರು ಮತ್ತು ಅತ್ಯಂತ ವಿಶ್ವಾಸಾರ್ಹರು ಸಿಕ್ಕುವದೇ ವಿರಳ. ವ್ಯಾಸವಾಣಿಯನ್ನು ಸರಿಯಾಗಿ ಅಭ್ಯಾಸಮಾಡಿ ಪೌರಾಣಿಕ ಸಾಹಿತ್ಯದಲ್ಲಿ ಪರಿಣಿತನಾದ ಸೂತಾಚಾರ್ಯನು ಅನಾಯಾಸವಾಗಿ ಅಲ್ಲಿಗೆ ಆಗಮಿಸಿದ್ದು ಅವರೆಲ್ಲರಿಗೂ ಸಂತಸ ತಂದಿತು. ನೈಮಿಷದ ಮಹಾಋಷಿಗಳೆಲ್ಲರೂ ಕೈಕೊಂಡ ಆ ಯಜ್ಞಕ್ಕೆ ಶೌನಕ ಎಂಬ ಮುನಿಯೇ ಯಜಮಾನ. ಸರ್ವಶಾಸ್ತ್ರಗಳಲ್ಲಿಯೂ ಪರಿಣತಿ, ಪ್ರಾವೀಣ್ಯ ಹಾಗೂ ಜ್ಞಾನ-ವಿಜ್ಞಾನಗಳಲ್ಲಿ ಒಳ್ಳೆ ಪಾಂಡಿತ್ಯ ಅವನಿಗೆ.

ತನ್ನ ಜ್ಞಾನದ ಗರಿಮೆಯಿಂದಲೇ ಅವನು ಎಲ್ಲರಿಗೂ ''ಗುರು'' ಎನಿಸಿದ್ದ. ಇಂಥ ಶೌನಕ ಮುನಿಗೆ ಉಗ್ರಶ್ರವನ ಬಾಯಿಂದ ಧರ್ಮದ ತಿರುಳನ್ನು ತಿಳಿಯಬೇಕೆಂಬ ಬಲವತ್ತರ ಬಯಕೆ. ಅಲ್ಲಿ ಮಿಲಿತರಾದ ಮುನಿಮಂಡಲದ ಮನೋಮನೀಷೆಗಳ ಪ್ರತಿನಿಧಿಗಳಾಗಿ ಶೌನಕ ಋಷಿಗಳು ಇಂತು ನುಡಿದರು.

**ಶೌನಕ** :- ಸೂತನೆ, ನೀನು ಮಹಾ ಬುದ್ಧಿವಂತ. ನೀನು ಉಪಾಸನೆ ಮಾಡಿದ ಭಗವಾನ್ ವೇದವ್ಯಾಸರು ಸಾಕ್ಷಾತ್ ಪರಬ್ರಹ್ಮರೆ ಸರಿ. ಇತಿಹಾಸ ಪುರಾಣಾರ್ಥಗಳ ಪರಿಜ್ಞಾನಕ್ಕಾಗಿ ಆವ್ಯಾಸ ಸಮುದ್ರವನ್ನು ಕಡೆದು, ದಿವ್ಯಜ್ಞಾನಮೃತವನ್ನು ಪಡೆದು ಪಾನಮಾಡಿದ ಪುಣ್ಯಾತ್ಮನು ನೀನು. ಆ ವ್ಯಾಸ ಗುರುಗಳನ್ನು ಚೆನ್ನಾಗಿ ಉಪಾಸನೆಮಾಡಿ ಆರಾಧನೆಗೈಯ್ದು ಪುರಾಣ ವಿಷಯದಲ್ಲಿ ದಿವ್ಯಜ್ಞಾನಪಡೆದಿರುವೆ. ಇಲ್ಲಿ ನೆರೆದ ಈ ಬ್ರಾಹ್ಮಣ ಪುಂಗವರಿಗೆಲ್ಲ ನಿನ್ನ ಮುಖದಿಂದ ಪುರಾಣ ವಿಷಯ ಕೇಳಬೇಕೆಂದು ಹಿರಿಯ ಬಯಕೆ. ಇವರೆಲ್ಲರೂ ಮಹಾತ್ಮರು. ಬೇರೆ ಬೇರೆ ವಂಶ ದೇಶಗಳಿಂದ ಜ್ಞಾನಾರ್ಜನೆಗಾಗಿ ಇಲ್ಲಿಗೆ ಆಗಮಿಸಿದ್ದಾರೆ. ಇವರೆಲ್ಲರಿಗೂ ನಿನ್ನ ಮುಖದಿಂದ ವ್ಯಾಸವಾಣಿಯನ್ನು ಕೇಳಬೇಕೆಂದು ಆಶೆಯಿದೆ. ನೀನು ಅದೆಲ್ಲವನ್ನು ಇವರಿಗೆ ವಿವರಿಸು, ಈ ದೀರ್ಘಕಾಲಿಕವಾದ ಜ್ಞಾನದಾನಮಾಡಿ ಯಜ್ಞ ಮುಗಿಯುವವರೆಗೆ ಎಲ್ಲ ವಂಶಾವಳಿಗಳ ಕಥೆಗಳನ್ನು ಬಿತ್ತರಿಸು. ಇವರೆಲ್ಲರೂ ತಮ್ಮತಮ್ಮ ವಂಶಗಳ ಇತಿಹಾಸ ತಿಳಿದುಕೊಳ್ಳಲಿ. ಬುದ್ಧಿಶಾಲಿಯಾದ ಮಹಾತ್ಮನೆ, ಇವರೆಲ್ಲರಿಗೂ ಪದ್ಮಪುರಾಣವನ್ನು ನಿರೂಪಿಸು. ಪದ್ಮವು ಹೇಗೆ ಹುಟ್ಟಿತು ! ಅದರಲ್ಲಿ ಬ್ರಹ್ಮದೇವರು ಹೇಗೆ ಜನಿಸಿದರು ! ಆ ಬ್ರಹ್ಮದೇವರಿಂದ ಸೃಷ್ಟಿ ಹೇಗೆ ಮಾಡಲ್ಪಟ್ಟಿತು ? ಇದೆಲ್ಲವನ್ನು ವಿಸ್ತಾರವಾಗಿ ವಿವರಿಸಿ ಹೇಳು. ಶೌನಕಮುನಿಯು ಹಾಗೆ ಪ್ರಶ್ನೆಮಾಡಲು ಅದಕ್ಕೆ ಉತ್ತರವಾಗಿ ಉಗ್ರಶ್ರವನು ಹೀಗೆ ನುಡಿದ.

**ಸೂತ** :- ಧರ್ಮ ನಿಷ್ಠರಾಗಿ ಪುರಾಣದ ರಹಸ್ಯವನ್ನು ಅರಿತ ನೀವು ನನಗೆ ಮತ್ತೆ ಪುರಾಣವನ್ನೇ ಹೇಳಲು ಪ್ರಚೋದನೆ ನೀಡಿದದುಕ್ಕಾಗಿ ನಾನು ನಿಮಗೆ ಋಣಿ ಆಗಿದ್ದೇನೆ. ನಿಮ್ಮ ಇಂಥ ಪುರಾಣ ಪ್ರಶ್ನೆಯಿಂದ ನನಗೆ ನಿಜವಾಗಿಯೂ ಹರ್ಷವು ಆಗಿದೆ. ನಾನು ಶ್ರೀವ್ಯಾಸರಿಂದ ಕೇಳಿದ ಪುರಾಣವು ಅತ್ಯಂತ ಪ್ರಸಿದ್ಧವಾದುದು. ನಾನು ಅದೆಲ್ಲವನ್ನೂ ನಿಮಗೆ ಹೇಳುತ್ತೇನೆ. ಸಜ್ಜನರು ಕೇಳಿದಾಗ ದೇವತೆಗಳ ಹಾಗೂ ಋಷಿಗಳ ಮತ್ತು ತೇಜೋನಿಧಿಗಳಾದ ರಾಜ-ಮಹಾರಾಜರ ಚರಿತ್ರೆಗಳನ್ನು ಹೇಳುವದು ಸೂತ ಜಾತಿಯವರ ಮುಖ್ಯ ಧರ್ಮ. ಬ್ರಹ್ಮಜ್ಞಾನಿಗಳ, ಮಹಾನುಭಾವರ, ಮಹಾತ್ಮರಾದ ರಾಜಋಷಿಗಳ, ಇತಿಹಾಸ ಪುರಾಣಗಳಲ್ಲಿ ಬರುವ ವಂಶ. ಅವುಗಳ ಕಾರ್ಯ ಕಾರಣಗಳನ್ನು

ಹಾಡಿಹೊಗಳುವದು ಸೂತಧರ್ಮ ಎಂದು ದೊಡ್ಡವರ ಅಭಿಮತ. ಸೂತಕುಲದವರಿಗೆ ವೇದಗಳಲ್ಲಿ ಅಧಿಕಾರವಿಲ್ಲ. ಪುರಾಣಗಳಲ್ಲಿ ಮಾತ್ರ ಅವರಿಗೆ ಅಧಿಕಾರವಿರುತ್ತದೆ. ವೇನರಾಜನ ಮಗನಾದ ಪೃಥುಮಹಾರಾಜನ ಯಜ್ಞವು ನಡೆದಾಗ ಸೂತರು ಮಾಗಧರು ಆ ಪೃಥುರಾಜನನ್ನು ಬಣ್ಣಿಸಿದರು. ಅವರ ಸ್ತೋತ್ರದಿಂದ ಸಂತುಷ್ಟನಾದ ಪೃಥು ಎಂಬ ಆ ಪೃಥವೀಪತಿಯು ಅವರಿಗೆ ವರಕೊಟ್ಟನು. ಸೂತನಿಗೆ ಸೂತ ಎಂಬ ದೇಶವನ್ನು ಮಗಧನಿಗೆ ಮಾಗಧ ಎಂಬ ದೇಶವನ್ನು ಕೊಡಮಾಡಿದನು. ಆ ಸೂತನಿಂದ ಸೂತಿಯಲ್ಲಿ ಹುಟ್ಟಿ ಬೆಳೆದ ಸಂತತಿಯು ಸೂತಸಂತತಿ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಯಿತು.

ಈ ಸೂತಜಾತಿಯ ಇನ್ನೊಂದು ಬಗೆಯ ಉತ್ಪತ್ತಿ ಕ್ರಮವನ್ನು ಹೀಗೆ ಹೇಳುತ್ತಾರೆ. ಹಿಂದೆ ಇಂದ್ರಯಜ್ಞವು ನಡೆದಾಗ ಎಲ್ಲ ಋತ್ವಿಜರು ಗ್ರಹಗಳಿಂದ ಕೂಡಿ ಬೃಹಸ್ಪತ್ಯಾಚಾರ್ಯರನ್ನೂ ದೇವೇಂದ್ರನನ್ನು ಹೊಗಳುತ್ತಿದ್ದರು. ಆ ಯಜ್ಞದಲ್ಲಿ ಗುರುಗಳು ತಿರಸ್ಕರಿಸಿದ ಹವಿಸ್ಸನ್ನು ಶಿಷ್ಯನು ಪ್ರೇಕ್ಷಣೆಮಾಡಿ ಪವಿತ್ರಗೊಳಿಸಿ ಯಜ್ಞದಲ್ಲಿ ಉಪಯೋಗಿಸಿದನು. ಗುರುವಿನ ಕಾರ್ಯವನ್ನು ಶಿಷ್ಯನು ತಿದ್ದಿ ಸರಿಪಡಿಸಿದ್ದರಿಂದ ಅಲ್ಲಿ ಒಂದು ತರಹದ ವರ್ಣ ಸಾಂಕರ್ಯ ಉಂಟಾಯಿತು. ಮೊದಲು ಹೀಗೆ ಪ್ರಾರಂಭವಾದ ವರ್ಣ ಸಾಂಕರ್ಯವು ಮುಂದುವರೆದು ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಒಂದು ಹೊಸಜಾತಿಯು ಉತ್ಪನ್ನವಾಯಿತು. ಇಲ್ಲಿ ಗರ್ಭಾದಾನವು ಕ್ಷತ್ರಿಯನಿಂದಾದರೂ ಕ್ಷೇತ್ರವು ಬ್ರಾಹ್ಮಣ ಕ್ಷೇತ್ರ ಇದ್ದುದರಿಂದ ಆ ಹೊಸ ಜಾತಿಗೆ ಕ್ಷತ್ರಿಯ ಗುಣಗಳ ಜೊತೆಗೆ ಬ್ರಾಹ್ಮಣ ಜಾತಿಯ ಗುಣಗಳೂ ಪ್ರಾಪ್ತವಾದವು. ಬ್ರಹ್ಮ ಕ್ಷತ್ರಗಳ ಸಾಂಕರ್ಯದಿಂದ ಸಂಸ್ಪೃಷ್ಟವಾದ ಈ ಹೊಸಜಾತಿಯು ಮಧ್ಯಮ ಧರ್ಮದ್ದಾಯಿತು. ಈ ಸಂಕರ ಜಾತಿಗೆ ವೇದಗಳಲ್ಲಿ ಅಧಿಕಾರವಿಲ್ಲದಿದ್ದರೂ ಪುರಾಣಗಳಲ್ಲಿ ಮಾತ್ರ ಅಧಿಕಾರವಿದೆ ಎಂದು ಆ ಕಾಲದ ಋಷಿಗಳು ಗೊತ್ತುಮಾಡಿದರು.

ಹೀಗೆ ಬ್ರಹ್ಮಾಪರೋಕ್ಷಿಗಳಾದ ಹಿಂದಿನ ದ್ವಿಜಪುಂಗವರೇ ಸೂತಜಾತಿಯವರಾದ ನಮಗೆ ಪುರಾಣ ಶ್ರವಣ ಪ್ರವಚನಗಳಿಗೆ ಅಧಿಕಾರವನ್ನಿತ್ತಿದ್ದಾರೆ. ಇಲ್ಲಿ ನೀವು ಕೂಡ ಬ್ರಹ್ಮಜ್ಞಾನಿಗಳು ತಾನೆ ! ಇದನ್ನೆಲ್ಲ ತಿಳಿದ ನೀವು ಪುರಾಣ ರಹಸ್ಯವನ್ನೂ ಹಾಗೂ ಧರ್ಮದ ಮರ್ಮವನ್ನೂ ಹೇಳಬೇಕೆಂದು ಕೇಳಿದ್ದೀರಿ. ನಿಮ್ಮ ಬಿನ್ನಹವನ್ನು ಮನ್ನಿಸಿ ನಾನು ಈಗ ಋಷಿಮುನಿಗಳಿಂದ ಪೂಜಿತವಾದ ದಿವ್ಯಪುರಾಣವನ್ನು ಹೇಳುತ್ತೇನೆ ಕೇಳಿ.

ಪಿತೃಗಣದವರ ಮಾನಸ ಕನ್ಯೆಯಾದ ಅಚ್ಛೋದನೆಯನ್ನು ಹಿಂದೆ ಒಂದು ಸಲ ನೋಡಬೇಕೆಂದು ಪಿತೃಗಳು ನೆನೆಸಿದರು. ಆದರೆ ಅವಳು ಪಿತೃಗಳ ಹತ್ತಿರ ಬಾರದೆ ದೇವೇಂದ್ರನ ಬಳಿಗೆ ಹೋದಳು. ಪಿತೃಗಣದ ಈ ಅನಾದರಣೆಯ ಅಪರಾಧದಿಂದಾಗಿ ಅವಳು ಮೀನಿನ ಹೊಟ್ಟೆಯಿಂದ ಹುಟ್ಟಿ ಬರುವಂತಾಯಿತು. ಮೀನಿನ ಉದರದಲ್ಲಿ ಮೂಡಿಬಂದ ಆ ಮೀನಾಕ್ಷಿಗೆ ಮೊದಲು ''ಮತ್ಸ್ಯಗಂಧಾ'' ಎಂದು ಹೆಸರು ಇದ್ದಿತು. ಮುಂದೆ ಅದೇ ಮೀನಾಕುಮಾರಿಯೇ ಪರಾಶರರ ದಯೆಯಿಂದ ಭಗವದವತಾರಿಯಾದ ಶ್ರೀ ವೇದವ್ಯಾಸರ ಪ್ರಾದುರ್ಭಾವಕ್ಕೆ ಕಾರಣಳಾದಳು. ಬನ್ನಿಯಗಿಡದ ಕೊರಡಿನಿಂದ ಅಗ್ನಿಯು ಜನಿಸುವಂತೆ ಆ ಮೀನಿನ ಮಗಳನ್ನು ನಿಮಿತ್ತಮಾಡಿಕೊಂಡು ಭಗವಾನ್ ವೇದವ್ಯಾಸರು ಅವತರಿಸಿ ಬಂದರು.

ಬ್ರಹ್ಮದೇವರ ಪ್ರಾರ್ಥನೆಯನ್ನು ಅನುಸರಿಸಿ ಜ್ಞಾನನಂದಸ್ವರೂಪಿಯೂ ಜಗತ್ಕಾರಣನೂ ಪುರಾಣಪುರುಷನೂ ಪರಬ್ರಹ್ಮಸ್ವರೂಪಿಯೂ ಆದ ಸಾಕ್ಷಾತ್ ಮಹಾವಿಷ್ಣುವೇ ವ್ಯಾಸರೂಪದಿಂದ ಭೂಮಿಗೆ ಇಳಿದು ಬಂದನು. ಇಂಥ ಬ್ರಹ್ಮ ಸ್ವರೂಪಿಯಾದ ಬಾದರಾಯಣರಿಗೆ ನನ್ನ ನಮಸ್ಕಾರವಿರಲಿ. ಅವರು ಹುಟ್ಟಿದ ಕೂಡಲೆ ಎಲ್ಲ ವೇದಗಳು ಸ್ವಯಂ ಪ್ರತಿಭಾತವಾದವು. ಈ ವೇದವ್ಯಾಸರು ವೇದ ಎಂಬ ಸಮುದ್ರವನ್ನು ತಮ್ಮ ಬುದ್ಧಿಯ ಕಡೆಗೋಲಿನಿಂದ ಕಡೆದು ಮಹಾಭಾರತವೆಂಬ ಚಂದ್ರನನ್ನು ಪಡೆದು ಜಗತ್ತಿಗೆಲ್ಲ ಜ್ಞಾನದ ಬೆಳಕನ್ನು ಬೀರಿದರು.

**ಭಾರತಂ ಭಾನಮಾನಿಂದುರ್ಯದಿ ನ ಸ್ಯುರಮೀತ್ರಯಃ ।**
**ತತೋಽಜ್ಞಾನತಮೋಂಧಸ್ಯ ಕಾವಸ್ಥಾ ಜಗತೋ ಭವೇತ್ ॥**

ಮಹಾಭಾರತ, ಸೂರ್ಯ, ಚಂದ್ರ, ಇವು ಮೂರು ಇರದಿದ್ದರೆ ಜಗತ್ತಿಗೆ ಗತಿ ಏನಾಗುತ್ತಿತ್ತು? ಅಜ್ಞಾನದಿಂದ ತೊಳಲುವ, ಕತ್ತಲೆಯಿಂದ ಬಳಲುವ ಪ್ರಪಂಚದ ಪ್ರಾಣಿಗಳಿಗೆ ತಿಳುವಳಿಕೆಯನ್ನು ನೀಡುವವರಾರು? ಹೀಗೆ ಭಾರತವೆಂಬ ಬೆಳಕಿನ ನಿಧಿಯನ್ನು ಪ್ರಪಂಚಕ್ಕೆ ಕೊಟ್ಟ ಕೃಷ್ಣದ್ವೈಪಾಯನರು ಅರ್ಥಾತ್ ವೇದವ್ಯಾಸರು ಸೂರ್ಯಚಂದ್ರರನ್ನು ಜಗತ್ತಿಗೆ ಕರುಣಿಸಿದ ನಾರಾಯಣನೇ ಎಂಬುವದರಲ್ಲಿ ಸಂದೇಹವಿಲ್ಲ.

**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ ।**
**ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್ ॥**

ಕೃಷ್ಣದ್ವೈಪಾಯನ ಎಂದು ಪ್ರಸಿದ್ಧರಾದ ವ್ಯಾಸರು ಸಾಕ್ಷಾತ್ ಶ್ರೀ ಮನ್ನಾರಾಯಣನೆಂದೇ ತಿಳಿ. ಮಹಾಭಾರತದಂಥ ಹೊಬ್ಬೊತ್ತಿಗೆಯನ್ನು ಆ ತಾವರೆಗಣ್ಣಿನ ಮಹಾವಿಷ್ಣುವಿನ ಹೊರತು ಬೇರೆ ಯಾರು ರಚಿಸಬಲ್ಲರು ? ಇಂಥ ಪರಮಾತ್ಮಾವತಾರಿಗಳಾದ ಸಾಕ್ಷಾತ್ ಆ ವೇದವ್ಯಾಸರ ಮುಖದಿಂದಲೇ ನಾನು ಪುರಾಣಗಳನ್ನು ಕೇಳಿದ್ದೇನೆ. ವ್ಯಾಸ ರಚಿತವಾದ ಪುರಾಣಗಳು ಸಾಮಾನ್ಯವಾದುದಲ್ಲ. ಪರಬ್ರಹ್ಮತತ್ವವನ್ನು ಮುಖ್ಯವಾಗಿ ಪ್ರತಿಪಾದಿಸುವದೇ ವ್ಯಾಸರ ಪುರಾಣಗಳ ಮುಖ್ಯ ಗುರಿಯಾಗಿದೆ. ಈ ಪುರಾಣಗಳಲ್ಲಿ ಬಾರದ ವಿಷಯಗಳೇ ಇಲ್ಲ. ಆದುದರಿಂದ ಎಲ್ಲ ಲೋಕಗಳಲ್ಲಿ ದಿವ್ಯಜ್ಞಾನ ತೇಜಸ್ಸಿನಿಂದ ಬೆಳಗುವ ವ್ಯಾಸರ ಈ ಪುರಾಣರಾಶಿಯು ಪರಿಪೂಜಿತವಾಗಿದೆ.

ಎಲ್ಲಶಾಸ್ತ್ರಗಳಿಗಿಂತ ಮೊದಲು ಬ್ರಹ್ಮದೇವರು ಪುರಾಣಗಳನ್ನೇ ನೆನೆದುಕೊಂಡರಂತೆ. ಆದ್ದರಿಂದ ಪುರಾಣಗಳ ರಚನೆಯು ಶಾಸ್ತ್ರಗಳಿಗಿಂತ ಮುಂಚಿನದು. ಧರ್ಮಾರ್ಥ ಕಾಮಗಳಿಗೆ ಸಾಧನವಾದ ಈ ಪುಣ್ಯ ವಾಙ್ಮಯವು ಹಿಂದೆ ನೂರು ಕೋಟಿ ಗ್ರಂಥಗಳಷ್ಟು ವಿಸ್ತಾರವಾಗಿದ್ದಿತು. ಮೊದಲಿನ ಪ್ರಳಯಕಾಲದಲ್ಲಿ ಲೋಕವೆಲ್ಲವೂ ನಾಶವಾದಾಗ ಬ್ರಹ್ಮದೇವರ ಬಿನ್ನಹದ ಮೇರೆಗೆ ಶ್ರೀಹರಿಯು ಕುದುರೆಯ ರೂಪದಿಂದ ವೇದಗಳನ್ನೆಲ್ಲ ಹೊರತಂದನು. ಮುಂದೆ ಪ್ರಳಯಕಾಲವು ಮುಗಿದು ಹೊಸ ಸೃಷ್ಟಿಯು ಆರಂಭವಾದ ಬಳಿಕ ಅದೇ ಶ್ರೀ ಹರಿಯು ನಾಲ್ಕು ವೇದಗಳನ್ನೂ ಎಲ್ಲ ಪುರಾಣಗಳನ್ನು ಸುರಕ್ಷಿತವಾಗಿ ಸಮುದ್ರಜಲದಿಂದ ಉದ್ಧಾರಮಾಡಿದನು. ಅದೇ ತನ್ನ ಮೀನಿನ ರೂಪದಿಂದಲೇ ಸಮುದ್ರದದ ಜಲದಲ್ಲಿದ್ದಾಗಲೇ ಬ್ರಹ್ಮದೇವರಿಗೆ ಆ ವೇದಗಳನ್ನೆಲ್ಲ ಉಪದೇಶ ಮಾಡಿದ್ದನು. ಮುಂದೆ ಅದನ್ನು ಬ್ರಹ್ಮದೇವರು ಋಷಿಗಳಿಗೆ ಹೇಳಿದರು. ಆ ವೇದದ

ರಹಸ್ಯವು ಕಾಲಕ್ರಮದಿಂದ ಜನರಿಗೆ ತಿಳಿಯದಂತಾಗಲು ಸ್ವಯಂ ಪರಮಾತ್ಮನೇ ಶಾಸ್ತ್ರಗಳನ್ನೂ ಪುರಾಣಗಳನ್ನೂ ನಿರ್ಮಾಣಮಾಡಿದನು. ಅದೇ ಪರಮಾತ್ಮನೆ ವೇದವ್ಯಾಸ ರೂಪದಿಂದ ಅವತರಿಸಿ ಪ್ರತಿಯುಗದಲ್ಲಿಯೂ ಈ ಪುರಾಣಗ್ರಂಥಗಳನ್ನು ಸಂಗ್ರಹಿಸಿ ಹೇಳುತ್ತಾರೆ. ದ್ವಾಪರಯುಗವು ಬಂದಾಗ ಆ ಪುರಾಣರಾಶಿಯು ನಾಲ್ಕು ಲಕ್ಷ ಗ್ರಂಥಗಳುಳ್ಳದ್ದಾಗಿದೆ. ಈ ನಾಲ್ಕು ಲಕ್ಷ ಗ್ರಂಥ ರೂಪವಾದ ಪುರಾಣರಾಶಿಯನ್ನೆಲ್ಲ ಒಟ್ಟು ಹದಿನೆಂಟು ಭಾಗಗಳಾಗಿ ಪ್ರಕಾಶಪಡಿಸಿದ್ದಾರೆ. ಈ ಪುರಾಣರಾಶಿಯು ದೇವಲೋಕದಲ್ಲಿ ಇಂದಿಗೂ ಮೊದಲಿದ್ದಂತೆ ನೂರುಕೋಟಿ ಗ್ರಂಥಗಳಷ್ಟು ವಿಸ್ತಾರವಾಗಿಯೇ ಇರುತ್ತದೆ. ಆದರೆ ಭೂಲೋಕದ ಜನರ ಬುದ್ಧಿಯ ಪ್ರಮಾಣಕ್ಕೆ ಅನುಸರಿಸಿ, ಅದನ್ನು ಸಂಕ್ಷೇಪಿಸಿ ನಾಲ್ಕು ಲಕ್ಷಕ್ಕೆ ಇಳಿಸಿದ್ದಾರೆ. ಈ ಎಲ್ಲ ಗ್ರಂಥವನ್ನು ಮೊದಲು ಭಗವಂತನು ಬ್ರಹ್ಮದೇವರು ಮರೀಚಿಗೂ ಉಪದೇಶಿಸಿದರು.

ಇಲ್ಲಿ ಪ್ರಸ್ತುತವಾದ ಶ್ರೀ ಪದ್ಮ ಪುರಾಣವನ್ನು ಕೂಡ ಭಗವಂತನಿಂದ ಕೇಳಿ ಕೊಂಡು ಬ್ರಹ್ಮದೇವರು ಹೇಳಿದರು, ಈ ಪದ್ಮಪುರಾಣವು ಐವತ್ತೈದು ಸಾವಿರ ಶ್ಲೋಕಗಳ ಗ್ರಂಥ ಉಳ್ಳದ್ದಾಗಿದೆ. ಇವನ್ನು ಸಂಕ್ಷೇಪಿಸಿ ಐದು ಭಾಗಗಳನ್ನಾಗಿ ಮಾಡಿದ್ದಾರೆ. ಇದರಲ್ಲಿ ಮೊದಲನೆಯದಾದ ಪುಷ್ಕರಪರ್ವದಲ್ಲಿ ವಿರಾಟ್‌ರೂಪಿಯಾದ ಭಗವಂತನ ಉತ್ಪತ್ತಿಯನ್ನು ಹೇಳಿದ್ದಾರೆ. ಎರಡನೆಯದಾದ ತೀರ್ಥಪರ್ವದಲ್ಲಿ ಗ್ರಹಗಳ ವರ್ಣನೆ ಬಂದಿದೆ. ಮೂರನೆಯ ಪರ್ವದಲ್ಲಿ ಮಹಾನುಭಾವ ರಾಜರ ಹಿರಿಮೆ, ಗರಿಮೆಗಳು ಬಿತ್ತರಿಸಲ್ಪಟ್ಟಿವೆ. ನಾಲ್ಕನೆಯ ಪರ್ವದಲ್ಲಿ ವಂಶಗಳ ಚರಿತ್ರೆ, ಐದನೆಯ ಪರ್ವದಲ್ಲಿ ಮೋಕ್ಷಕ್ಕೆ ಉಪಯುಕ್ತವಾದ ತತ್ವಜ್ಞಾನದ ವಿಷಯಗಳು ಇರುತ್ತವೆ.

ಪ್ರಥಮ ಪರ್ವದಲ್ಲಿ ಬ್ರಹ್ಮದೇವರು ಮಾಡಿದ ದೇವತಾ, ಮುನಿ, ಪಿತೃ, ಮಾನವ, ಪಶು-ಪಕ್ಷಿ ಮುಂತಾದ ಬಗೆ ಬಗೆಯ ಸೃಷ್ಟಿಯ ವರ್ಣನೆಯಿದೆ. ದ್ವಿತೀಯ ಪರ್ವದಲ್ಲಿ ಬೆಟ್ಟ, ನಡುಗಡ್ಡೆ, ಏಳು ಕಡಲುಗಳ ಬಣ್ಣನೆಯ ಬಿತ್ತರಣೆ ಇದೆ. ಮೂರನೆಯ ಪರ್ವದಲ್ಲಿ ರುದ್ರಸೃಷ್ಟಿ, ಹಾಗೂ ವಂಶದ ಬಳ್ಳಿಗಳು ಬಿತ್ತರಣೆಗೊಂಡ ಬಗೆಯನ್ನು ನಿರೂಪಿಸಲಾಗಿದೆ. ಐದನೆಯ ಪರ್ವದಲ್ಲಿ ಮೋಕ್ಷ ಶಾಸ್ತ್ರದ ನಿರೂಪಣೆಯಿದೆ. ಈ ಪದ್ಮ ಪುರಾಣದ ಕಟ್ಟು, ಕಟ್ಟಳೆ ಈ ಬಗೆಯದಾಗಿದ್ದು ಅದನ್ನೇ ಈಗ ನಾನು ನಿಮಗೆ ಹೇಳುತ್ತೇನೆ. ಈ ಪದ್ಮಪುರಾಣವು ಪರಮಪವಿತ್ರ. ಇದರ ಶ್ರವಣ, ಪಠಣ, ಪಾರಾಯಣಗಳು ಕೀರ್ತಿಗೆ ಕಾರಣ. ಪಿತೃಗಣಗಳಿಗೆ ಅತ್ಯಂತ ಪ್ರೀತ್ಯಾಸ್ಪದ. ಇದನ್ನು ಓದಿ, ಕೇಳಿದ ಜನರ ಪಾಪಗಳು ಎಷ್ಟೇ ಭೀಕರವಾಗಿದ್ದರೂ ತಕ್ಷಣವೇ ನಾಶವಾಗುವವು. ಶ್ರೀ ವಿಷ್ಣುವಿಗೆ ಅತ್ಯಂತ ಸಂತೋಷ ಉಂಟುಮಾಡುವ ಪುರಾಣವೆಂದರೆ ಈ ಪದ್ಮಪುರಾಣವೇ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ಉಗ್ರಶ್ರವಸನ ಉಪಾಖ್ಯಾನ ಎಂಬ ಒಂದನೇ ಅಧ್ಯಾಯ ಮುಗಿದುದು*

—o—

## ಸೃಷ್ಟಿಯ ವಿಷಯ ನಿರೂಪಣೆ

## ಅಧ್ಯಾಯ - ೨

ಈ ಪದ್ಮಪುರಾಣದಲ್ಲಿ ಸೃಷ್ಟಿ, ಪ್ರತಿಸೃಷ್ಟಿ, ಭಗವದವತಾರ, ವಿವಿಧ ಮನ್ವಂತರ, ಭೂಗೋಲ, ಖಗೋಲ, ದೇವ, ದಾನವ, ಮಾನವ, ಪಶು, ಪಕ್ಷಿ, ಕ್ರಿಮಿ-ಕೀಟ, ದ್ವೀಪ, ಸಮುದ್ರ, ಪರ್ವತ, ಭೂಲೋಕ, ಅಧೋಲೋಕ, ಊರ್ಧ್ವಲೋಕಗಳ ಸ್ಥಿತಿ, ಉತ್ಪತ್ತಿ ವಿನಾಶ, ಕಲ್ಪ, ಕಲ್ಪಾಂತರ, ದೇವ, ಋಷಿಗಳ ಗೈಮೆ, ಮಹಿಮೆ, ಪ್ರವೃತ್ತಿ-ನಿವೃತ್ತಿ ಮುಂತಾದ ಅನೇಕಾನೇಕ ವಿಷಯಗಳು ಅಧಿಕೃತವಾಗಿ ಸಮಂಜಸವಾಗಿ ಬಿತ್ತರಿಸಲ್ಪಟ್ಟಿವೆ. ಮೊದಲು ಬ್ರಹ್ಮದೇವರು ಪುಲಸ್ತ್ಯಮುನಿಗೆ ನಿರೂಪಿಸಿದರು.

ಆಗ ಪುಲಸ್ತ್ಯಮುನಿಯು ಭೀಷ್ಮಾಚಾರ್ಯರಿಗೆ ಗಂಗಾದ್ವಾರದಲ್ಲಿ ಈ ಪುರಾಣವನ್ನು ಹೇಳಿದರು. ಸೂತರು ಇದನ್ನು ಎಲ್ಲ ಕಡೆಗೂ ಪ್ರಚಾರಮಾಡಿದರು. ಈ ಪುರಾಣದ ಒಂದು ಭಾಗವನ್ನಾದರೂ ನಿಮಯದಿಂದ ಓದಿದರೆ ಪೂರ್ಣ ಪುರಾಣ ಓದಿದ ಪುಣ್ಯಫಲ ಬರುತ್ತದೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ನಾಲ್ಕು ವೇದಗಳನ್ನು ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ ಎಂಬ ಆರು ವೇದಾಂಗಗಳೊಂದಿಗೆ ಉಪನಿಷತ್ ಸಹಿತವಾಗಿ ಯಾವನು ಅಧ್ಯಯನಮಾಡುವನೊ ಅವನು ನಿಜವಾದ ಪಂಡಿತ. ಆದರೆ ಇದೆಲ್ಲವುಗಳನ್ನು ಕಲಿತು, ಮೇಲೆ ಪುರಾಣಗಳನ್ನೂ ಅಧ್ಯಯನ ಮಾಡಿದರೆ, ಆ ಪುರಾಣಜ್ಞನು ಮಹಾಪಂಡಿತನೆಂದೆನಿಸುವನು. ಇತಿಹಾಸ ಪುರಾಣಗಳಿಂದಲೇ ವೇದಾರ್ಥವನ್ನು ಚೆನ್ನಾಗಿ ಪರಿಷ್ಕರಿಸಬೇಕು. ಸ್ವಲ್ಪ ಓದಿದ ಅಜ್ಞ ಮನುಷ್ಯನನ್ನು ನೋಡಿ- ''ಇವನು ನನ್ನನ್ನು ಅಪಾರ್ಥಮಾಡಿ ಹಾಳುಮಾಡುತ್ತಾನೆ'' ಎಂದು ವೇದಗಳು ಹೆದರುತ್ತವೆ. ಆದುದರಿಂದ ಇತಿಹಾಸ ಪುರಾಣ ಓದಿಕೊಂಡೇ ವೇದಗಳ ಅರ್ಥ ತಿಳಿದುಕೊಳ್ಳಬೇಕು. ಈ ಪುರಾಣ ಪಠಣದಿಂದ ಮಾನವರ ಕಷ್ಟ-ನಷ್ಟಗಳ ಪರಿಹಾರವಾಗಿ ಮುಂದೆ ಸದ್ಗತಿಯು ಪ್ರಾಪ್ತವಾಗುವದು.

ಪೂರ್ವಕಾಲದಿಂದ ನಡೆದು ಬಂದ ರಾಜ, ಋಷಿ, ದೇವ ಮಾನವ, ಪಶು, ಪಕ್ಷಿ ಮುಂತಾದ ಸರ್ವ ಪ್ರಾಣಿಗಳ ವಂಶಾವಳಿಯನ್ನೂ ಮತ್ತು ಪ್ರಾಚೀನ ಪರಂಪರಾ ಪ್ರಾಪ್ತವಾದ ಸಂಪ್ರದಾಯ ರೀತಿ-ನೀತಿ, ಆಖ್ಯಾನ ಉಪಾಖ್ಯಾನಗಳನ್ನು ಬಿತ್ತರಿಸುವದರಿಂದ ಪುರಾಣವೆಂದು ಹೆಸರು ಬಂದಿದೆ. ಈ ಪುರಾಣ ಶಬ್ದದ ಅರ್ಥ ಹಾಗೂ ನಿರ್ವಚನವನ್ನು ಕೇಳಿದವರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ.

ಸೂತಾಚಾರ್ಯರ ಈ ಮಾತುಗಳನ್ನು ಕೇಳಿ ಋಷಿಗಳು ಪ್ರಶ್ನೆಮಾಡಿದರು :-

**ಋಷಿಗಳು :-** ಸೂತನೆ, ಬ್ರಹ್ಮದೇವರ ಮಾನಸ ಪುತ್ರರಾದ ಪುಲಸ್ತ್ಯ ಮೊದಲಾದ ಋಷಿಗಳ ದರ್ಶನವು ಪಾಪಿಗಳಾದ ಮಾನವರಿಗೆ ದುರ್ಲಭವಷ್ಟೆ ! ಬುದ್ಧಿವಂತನಾದ ಭೀಷ್ಮನು ಬ್ರಹ್ಮನ ಮಾನಸಪುತ್ರನಾದ ಆ ಪುಲಸ್ತ್ಯ ದರ್ಶನಪಡೆದುದು ಎಂತು ? ನಮಗಂತೂ ಆಶ್ಚರ್ಯವೆನಿಸುವದು. ಕ್ಷತ್ರಿಯನಾದ ಭೀಷ್ಮನೊಡನೆ ಆ ಬ್ರಹ್ಮನ ಮಾನಸಪುತ್ರನು ಸಂತೋಷದಿಂದ ಮಾತನಾಡುವಷ್ಟು ಯಾವ ತಪಸ್ಸನ್ನು ಭೀಷ್ಮನು ಮಾಡಿದನು ? ಭೀಷ್ಮನಿಗೂ ಪುಲಸ್ತ್ಯನಿಗೂ ಮಿಲನವಾದುದೆಲ್ಲಿ ? ಇವೆಲ್ಲವನ್ನು ತಿಳಿಯಲು ಕುತೂಹಲ, ಇದನ್ನು ನಮಗೆ ತಿಳಿಸು.

**ಸೂತ :-** ಸಜ್ಜನರಿಗೆ ಹಿತಗೈಯುವ ಗಂಗೆಯು ಬೆಟ್ಟವನ್ನು ಕೊರೆದು, ವೇಗದಿಂದ ಹೊರಬಿದ್ದು ಹರಿದಸ್ಥಳವೇ ಮಹಾದ್ವಾರ ಎಂಬ ತೀರ್ಥವಾಗಿದೆ. ಲೋಕವನ್ನೆಲ್ಲ ಪಾವನಗೊಳಿಸುವ ಆ ಗಂಗೆಯ ತಡಿಯಲ್ಲಿ ಭೀಷ್ಮನು ನಿಯಮ ನಿಷ್ಠನಾಗಿ ಗಂಗೆಯ ಸೇವೆಯನ್ನೂ, ಮಾತಾ-ಪಿತರ ಸೇವೆಯನ್ನೂ ಮಾಡುತ್ತ ನೆಲೆಸಿದ್ದನು. ಮೂರು ಕಾಲಗಳಲ್ಲಿ ಸ್ನಾನಮಾಡಿ, ಮಹಾಸಮಾಧಿಯಲ್ಲಿ ನೆಲೆನಿಂತು, ಪರಬ್ರಹ್ಮನ ಧ್ಯಾನಗೈಯುತ್ತ ನೂರು ವರ್ಷ ತಪಸ್ಸನ್ನು ಆಚರಿಸಿದನು. ಅವನ ದೇವತಾರಾಧನೆ, ಪಿತೃತರ್ಪಣ, ಸ್ವಾಧ್ಯಾಯ ಪ್ರವಚನ, ದೇಹದಂಡನ, ಭಗವಧ್ಯಾನ ಮುಂತಾದ ಜಪತಪೋನುಷ್ಠಾನಗಳಿಂದ ಬ್ರಹ್ಮದೇವನು ಸಂತುಷ್ಟನಾಗಿ ತನ್ನ ಮಾನಸಪುತ್ರನಾದ ಪುಲಸ್ತ್ಯ ಮುನಿಗೆ ಹೀಗೆ ಹೇಳಿದನು.

**ಬ್ರಹ್ಮ :-** ''ಪುತ್ರ ಪುಲಸ್ತ್ಯನೆ, ಕುರುಕುಲದ ಕೌಸ್ತುಭದಂತಿರುವ, ವೀರಭೀಷ್ಮನು ಘೋರತಪವನ್ನು ಗೈಯುತ್ತಿದ್ದಾನೆ. ಅದಕ್ಕೆ ಕಾರಣವನ್ನು ಕೇಳು, ಬಯಸಿದ್ದನ್ನು ನೀಡು. ಅವನು ತಪಸ್ಸಿನಿಂದ ಹಿಂದಿರುಗುವಂತೆ ಮಾಡು. ಮಹಾನುಭಾವನಾದ ಆ ಭೀಷ್ಮನು ಅತ್ಯಂತ ಪಿತೃಭಕ್ತ. ಪಿತೃಭಕ್ತಿಗಾಗಿಯೇ ನಡೆದಿದೆ ಅವನ ಈ ಉಗ್ರ ತಪಸ್ಸು. ನೀನು ಈಗಲೇ ಹೋಗಿ ಅವನ ಮನೋಭಿಷ್ಟವನ್ನು ಪೂರೈಸಿ ಬಾ'' ಪಿತಾಮಹನ ಅಪ್ಪಣೆ ಆಗುವದೊಂದೇ ತಡ, ಹೊರಟೇ ಬಿಟ್ಟರು ಪುಲಸ್ತ್ಯರು. ಗಂಗಾದ್ವಾರಕ್ಕೆ ಐತಂದರು. ಭೀಷ್ಮನಿಗೆ ಇಂತೆಂದರು.

**ಪುಲಸ್ತ್ಯ :-** ಭೀಷ್ಮನೇ ನಿನಗೆ ಕಲ್ಯಾಣವಾಗಲಿ, ಯಾವ ಇಚ್ಛೆಯಿಂದ ಇಂಥ ಉಗ್ರತಪಸ್ಸನ್ನು ಕೈಕೊಂಡೆ ಹೇಳು. ನಿನಗೆ ಬೇಕಾದ ವರವನ್ನು ಕೇಳು, ನಿನ್ನ ತಪಸ್ಸಿನಿಂದ ಸಾಕ್ಷಾತ್ ಬ್ರಹ್ಮದೇವರು ಸಂತುಷ್ಟರಾಗಿದ್ದಾರೆ. ನನ್ನನ್ನು ನಿನ್ನ ಕಡೆಗೆ ಕಳಿಸಿದ್ದಾರೆ. ನಿನಗೆ ಬೇಕಾದ ವರ ನೀಡುತ್ತೇನೆ. ನಿನ್ನ ಮನೋರಥ ಪೂರೈಸುತ್ತೇನೆ.

ಪುಲಸ್ತ್ಯರ ಈ ಮಾತು ಭೀಷ್ಮನ ಕಿವಿಗೆ ಬಹಳ ಇಂಪು ಎನಿಸಿತು. ಮನಸ್ಸಿಗೆ ಸಂತೋಷ ವಾಯಿತು. ಅವನು ಮೆಲ್ಲನೆ ತನ್ನ ಕಣ್ಣಾಲಿಗಳನ್ನು ತೆರೆದು ಎದುರು ನಿಂತ ಪುಲಸ್ತ್ಯ ಮುನಿಯನ್ನು ನೋಡಿದ. ತಕ್ಷಣವೇ ಮೇಲೆದ್ದು ಸಾಷ್ಟಾಂಗ ನಮಸ್ಕಾರಮಾಡಿ, ಕೈ ಮುಗಿದು, ನಮ್ರನಾಗಿ, ವಿನಯದಿಂದ ಮಾತನಾಡಿದ.

**ಭೀಷ್ಮ :-** ಪೂಜ್ಯರೆ, ಲೋಕವಂದ್ಯವಾದ ನಿಮ್ಮ ಅಡಿದಾವರೆಗಳನ್ನು ಕಂಡು ನನ್ನ ಜನ್ಮ ಇಂದು ಸಫಲವಾಯಿತು. ಇಂದಿನ ದಿನವೇ ಶುಭದಿನ. ಪೂಜ್ಯರಾದ ತಾವು ನನಗೆ ಸಂತುಷ್ಟರಾಗಿ ಈ ನದೀ ತೀರಕ್ಕೆ ಬಂದದ್ದರಿಂದ ಇಂದು ನನಗೆ ತಪಸ್ಸಿನ ಪೂರ್ಣ ಫಲವು ದೊರೆತಂತಾಯಿತು. ನಿಮ್ಮಂಥ ಮಹಾನುಭಾವರ ದರ್ಶನವೇ ತಪಸ್ಸಿನ ಸಿದ್ಧಿಯಷ್ಟೇ! ಇಲ್ಲಿ ನಿಮಗಾಗಿ ಆಸನವನ್ನು ಬಿಡಿಸಿದ್ದೇನೆ ಕುಳಿತುಕೊಳ್ಳಿ. ಈ ಮುತ್ತುಗದ ದೊನ್ನೆಯಲ್ಲಿ ನಿಮ್ಮ ಪಾದಪ್ರಕ್ಷಾಲನೆಗಾಗಿ ನೀರನ್ನು ಇರಿಸಿದ್ದೇನೆ. ಇಲ್ಲಿಯೇ ಅಕ್ಷತೆ, ಹೂ, ದರ್ಭೆಗಳನ್ನು ಇಟ್ಟಿದ್ದೇನೆ. ಅರ್ಘ್ಯದ ನೀರಿನಲ್ಲಿ ಹೂ, ದರ್ಭೆ, ಬಿಳಿಸಾಸಿವೆ, ಮೊಸರು, ಜೇನು, ಅಕ್ಕಿಕಾಳು, ಹಾಲು, ಗರಿಕೆ ಈ ಎಂಟನ್ನು ಮಿಶ್ರ ಮಾಡಿದರೆ ಅರ್ಘ್ಯ ಎನಿಸುವುದು.

''ಸರ್ಷಪೈಶ್ಚ ದಧಿಕ್ಷೌದ್ರೈರ್ಯವೈಶ್ಚ ಪಯಸಾ ಸಹ
ಅಷ್ಟಾಂಗೋऽರ್ಘೋಹಿ ನಿರ್ದಿಷ್ಟಃದೂರ್ವಾಕ್ಷತಸುಮೈಃ ಕುಶೈಃ''

ಮಹಾತೇಜಸ್ವಿಯಾದ ಭೀಷ್ಮನ ಈ ನುಡಿಯನ್ನು ಕೇಳಿ ಪೂಜ್ಯ ಋಷಿಯಾದ ಬ್ರಹ್ಮಪುತ್ರ ಪುಲಸ್ತ್ಯರು ಆಸನದಲ್ಲಿ ಆಸೀನನಾಗಿ, ಅವನು ಆದರದಿಂದ ನೀಡಿದ ಅರ್ಘ್ಯೋದಕದಿಂದ ಕಾಲು ತೊಳೆದುಕೊಂಡರು. ಭೀಷ್ಮನು ನೀಡಿದ ಸ್ವಾಗತ ಸತ್ಕಾರ ಆದರೋಪಚಾರಗಳಿಂದ ಪುಲಸ್ತ್ಯರಿಗೆ ಸಂತೋಷ ಎನಿಸಿತು. ಪುಲಸ್ತ್ಯರು ಆನಂದದಿಂದ ಹೀಗೆ ನುಡಿದರು.

**ಪುಲಸ್ತ್ಯ** :- ವತ್ಸ ಭೀಷ್ಮನೇ, ನೀನು ಸತ್ಯವಂತ. ಬಡವರಿಗೆ ದಾನನೀಡುವದು ನಿನ್ನ ಸ್ವಭಾವ. ಹುಸಿ ನುಡಿಯುವದಿಲ್ಲವೆಂಬುದೇ ನಿನ್ನ ಪ್ರತಿಜ್ಞೆ. ಕ್ಷಮೆಯು ನಿನ್ನ ಸ್ವರೂಪ. ಎಲ್ಲರಲ್ಲಿಯೂ ಮಧುರ ಮೈತ್ರಿಯು ನಿನ್ನ ಸದ್ಗುಣ. ಶತ್ರುಗಳನ್ನು ಮಣಿಸುವಲ್ಲಿ ನಿನ್ನ ಪರಾಕ್ರಮವು ಒಂದು ವಿಕ್ರಮ. ಧರ್ಮದ ರಹಸ್ಯವನ್ನೆಲ್ಲ ನೀನು ಚೆನ್ನಾಗಿ ಬಲ್ಲೆ. ಮಾಡಿದ ಉಪಕಾರ ನೆನೆಯುವುದು ನಿನ್ನ ಸಹಜಧರ್ಮ, ನಿನ್ನ ಹೃದಯದಲ್ಲಿ ಕರುಣೆ, ಮಾತಿನಲ್ಲಿ ಮಾಧುರ್ಯ ಸಜ್ಜನರಲ್ಲಿ ವಿಶ್ವಾಸ, ದೊಡ್ಡವರಲ್ಲಿ ಭಕ್ತಿ ಇವೆಲ್ಲ ನಿನ್ನ ಗುಣಗಳಾಗಿವೆ. ನನಗೆ ನಮಿಸಿ'ನಿಂತ ನಿನ್ನ ಮೇಲೆ ನಾನು ಪರಿತುಷ್ಟನಾಗಿದ್ದೇನೆ. ನಿನಗೆ ಏನು ಹೇಳಲಿ ತಿಳಿಸು. ನೀನು ಕೇಳಿದ್ದನ್ನು ನಿನಗೆ ನಿರೂಪಿಸುತ್ತೇನೆ.

**ಭೀಷ್ಮ** :- ಪೂಜ್ಯರೆ, ಪ್ರಭು, ಬ್ರಹ್ಮದೇವರನು ಯಾವ ಸ್ಥಾನದಲ್ಲಿ ನಿಂತು, ದೇವತೆ ಮೊದಲಾದ ಪೂರ್ವ ಸೃಷ್ಟಿಯನ್ನು ಮಾಡಿದರು ? ಅದರಂತೆ ಮಹಾವಿಷ್ಣುವು ಹಾಗೂ ಉಳಿದ ದೇವರು ಹೇಗೆ ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಮಾಡಿದರು ? ಬೆಟ್ಟ, ಪಟ್ಟಣ, ಮುನಿಗಳು, ಸಪ್ತಋಷಿಗಳು, ಪ್ರಜಾಪತಿಗಳು, ಗಂಧರ್ವ, ಯಕ್ಷ, ರಾಕ್ಷಸ, ಘೋರ ಅರಣ್ಯ, ತೀರ್ಥ, ನದಿ, ಸೂರ್ಯನೇ ಮೊದಲಾದ ಗ್ರಹ, ನಕ್ಷತ್ರ ಮುಂತಾದ ಸಮಸ್ತ ಚರಾಚರ ಪ್ರಪಂಚದ ಸೃಷ್ಟಿಯು ಆದುದು ಎಂತು ?

**ಪುಲಸ್ತ್ಯ** :- ಬ್ರಹ್ಮರೂಪದಿಂದ ಈ ಪ್ರಪಂಚವನ್ನೆಲ್ಲ ನಿರ್ಮಿಸತಕ್ಕ ಆ ಪರಾತ್ಪರ ವಸ್ತುವನ್ನು ಜ್ಞಾನಿಗಳು **'ಪರಮಾತ್ಮ'** ಎಂದು ಕರೆಯುತ್ತಾರೆ. ಅವನಿಗೆ ನಮ್ಮಂತೆ ಪ್ರಾಕೃತವಾದ ರೂಪ. ವರ್ಣಾದಿಗಳು, ವೃದ್ಧಿ, ಕ್ಷಯಾದಿಗಳು, ಜನನ-ಮರಣಗಳು ಇರುವುದಿಲ್ಲ. ಸತ್ವಾದಿಪ್ರಾಕೃತ ಗುಣಗಳಿಂದ ರಹಿತನಾದ ಆ ಭಗವಂತನು ಕೇವಲ ಜ್ಞಾನಸ್ವರೂಪಿ, ಚಿನ್ಮಯ. ಅವನು ಎಲ್ಲ ಕಡೆಗೂ ವಾಸ್ತವ್ಯನಾಗಿದ್ದಾನೆ. ನಿತ್ಯ ಸತ್ಯಸ್ವರೂಪಿಯಾದ ನಾಶರಹಿತನಾದ ಆ ಪರಮಾತ್ಮನು ಎಲ್ಲ ಪ್ರಾಣಿಗಳ ಒಳಗೆ ಪುರುಷ ರೂಪದಿಂದಲೂ ಹೊರಗೆ ಕಾಲರೂಪದಿಂದಲೂ ನಿಂತುಕೊಂಡು ಸುಖ-ದುಃಖ, ಸಾವು-ಸೌಭಾಗ್ಯ, ನೋವು-ನಲಿವು, ಬಂಧ-ಮೋಕ್ಷ ಮುಂತಾದವನ್ನು ಕೊಡುತ್ತಾನೆ. ಇಂಥ ''ಪರಮ ರಹಸ್ಯತತ್ವ'' ಎನಿಸಿದ ಪ್ರಾಕೃತಗುಣ ರಹಿತನಾದರೂ ಗುಣ ಪರಿಪೂರ್ಣವಾದ ಆ ಪರಮಾತ್ಮನಿಗೆ ನಾನು ನಮಸ್ಕಾರಮಾಡಿ ಪೂರ್ವಕಾಲದಲ್ಲಿ ಜಗದೊಡೆಯನಾದ ಬ್ರಹ್ಮನು ತನ್ನ ತಾವರೆಯ ಹಾಸಿಗೆಯಿಂದೆದ್ದು ಸೃಷ್ಟಿಯನ್ನು ಹೇಗೆ ಮಾಡಿದನೆಂಬುದನ್ನು ನಿರೂಪಿಸುತ್ತೇನೆ. ಭೂಮಿಪತಿಯಾದ ಭೀಷ್ಮನೆ, ಸೃಷ್ಟಿಯ ಆರಂಭದಲ್ಲಿ ಮೂಲ ಪ್ರಕೃತಿಯಿಂದ ಗುಣವೈಷಮ್ಯದ ಮೂಲಕವಾಗಿ ಮಹತ್ ತತ್ವವು ಉತ್ಪನ್ನವಾಯಿತು. ಅದು ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿ ಇದ್ದಿತು.

ಕಾಲ ಕರ್ಮ ಸ್ವಭಾವಗಳಿಂದ ವಿಕಾರಗೊಂಡು, ಸತ್ವಗುಣದಿಂದ ಕೂಡಿ, ರಜೋಗುಣದಿಂದ ಅಭಿವೃದ್ಧಿಹೊಂದಿದ ಮಹತ್ತತ್ವದಿಂದ ಅದಕ್ಕಿಂತ ಹೆಚ್ಚು

ತಮೋಗುಣದಿಂದ ಕೂಡಿದ ಅಹಂಕಾರ ತತ್ವವು ಉತ್ಪನ್ನವಾಯಿತು. ಪೃಥವೀ, ಜಲ, ತೇಜಸ್ಸು, ವಾಯು. ಆಕಾಶವೆಂಬ ಪಂಚಮಹಾಭೂತಗಳು ಮತ್ತು ಪಂಚ ಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು ಈ ಅಹಂಕಾರ ತತ್ವದಿಂದಲೇ ಉತ್ಪನ್ನವಾದವು. ಈ ಅಹಂಕಾರ ತತ್ವವು ವಿಕಾರಹೊಂದಿ, ವೈಕಾರಿಕ, ತೈಜಸ, ತಾಮಸವೆಂದು ಮೂರು ಬಗೆಯಾಯಿತು.

**ತಾಮಸ** ಅಹಂಕಾರದಿಂದ ಶಬ್ದರೂಪ ಗುಣವುಳ್ಳ ಆಕಾಶವು ಮೊಟ್ಟ ಮೊದಲು ಉತ್ಪತ್ತಿಯಾಯಿತು. ಅದು ಎಲ್ಲವನ್ನು ಆವರಿಸಿತು. ಆಕಾಶದಿಂದ ಬಲಿಷ್ಠವಾದ ವಾಯುವಿನ ಉತ್ಪತ್ತಿ. ಅದರ ಗುಣ ಸ್ಪರ್ಶ. ಈ ವಾಯುವಿಗೆ ಆಕಾಶ ಸಂಬಂಧ ಇರುವದರಿಂದ ಶಬ್ದಗುಣವೂ ಅದರಲ್ಲಿ ಉಂಟು. ಈ ವಾಯುವಿನಿಂದ ರೂಪವು ಉತ್ಪನ್ನವಾಯಿತು. ಆ ರೂಪವು ವಾಯುವಿನ ರೂಪಗುಣವೆಂದು ಕರೆಯಲ್ಪಡುತ್ತದೆ. ಮುಂದೆ ಈ ವಾಯುವಿನಿಂದ ತನ್ನ ರೂಪ ಹಾಗೂ ವಾಯು, ಆಕಾಶಗಳ ಗುಣವುಳ್ಳ ತೇಜಸ್ಸಿನಿಂದ ಸೃಷ್ಟಿ ಆಯಿತು. ಈ ತೇಜಸ್ಸಿನಿಂದ ರಸ ಮತ್ತು ಶಬ್ದ ಸ್ಪರ್ಶ ರೂಪಗಳನ್ನು ಹೊಂದಿರುವ ಜಲದ ಸೃಷ್ಟಿ ಆಯಿತು. ಆ ಜಲದಿಂದ ಗಂಧ, ರಸ, ರೂಪ, ಸ್ಪರ್ಶ ಶಬ್ದಗಳನ್ನು ಹೊಂದಿರುವ ಪೃಥ್ವೀ ತತ್ವವು ಉತ್ಪನ್ನವಾಯಿತು. ವೈಕಾರಿಕ ಅಹಂಕಾರದ ಸಾತ್ವಿಕ ಭಾಗದಿಂದ ಅಂತಃಕರಣ ರೂಪವಾದ ಮನಸ್ಸಿನ ಸೃಷ್ಟಿ ಆಯಿತು. ಮತ್ತು ಇದೇ ವೈಕಾರಿಕ ಅಹಂಕಾರದಿಂದ ಶ್ರವಣೇಂದ್ರಿಯದ ಅಭಿಮಾನಿ ದಿಗ್ದೇವತೆ, ಸ್ಪರ್ಶೇಂದ್ರಿಯದ ಅಭಿಮಾನಿ ದೇವತೆಯಾದ ವಾಯು, ಚಕ್ಷುರಿಂದ್ರಿಯದ ದೇವತೆ, ಸೂರ್ಯ, ನಾಲಿಗೆಯ ಅಭಿಮಾನಿ, ವರುಣ, ಘ್ರಾಣೇಂದ್ರಿಯದ ದೇವತೆ ಅಶ್ವಿನೀದೇವತೆ, ವಾಕ್ (ನುಡಿ) ಎಂಬ ಇಂದ್ರಿಯದ ಅಭಿಮಾನಿ ಅಗ್ನಿ, ಹಸ್ತ (ಕೈ) ಎಂಬ ಇಂದ್ರಿಯದ ಅಭಿಮಾನಿದೇವತೆ ಇಂದ್ರ, ಪಾದ(ಕಾಲ)ಗಳ ಅಭಿಮಾನಿ ವಿಷ್ಣು, ವಾಯು, (ಗುದ) ಇಂದ್ರಿಯದ ಅಭಿಮಾನಿ ಮಿತ್ರ, ಉಪಸ್ಥದ (ಗುಹ್ಯೇಂದ್ರಿಯ) ಅಭಿಮಾನಿ ದಕ್ಷಪ್ರಜಾಪತಿ ಮುಂತಾದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಅಭಿಮಾನಿ ದೇವತೆಗಳ ಉತ್ಪತ್ತಿ ಆಯಿತು.

**ತೈಜಸ :-** ಅಹಕಾರದಿಂದ ಕಣ್ಣು, ಕಿವಿ, ನಾಲಿಗೆ, ಮೂಗು, ತೊಗಲು, ಎಂಬ ಐದು ಜ್ಞಾನೇಂದ್ರಿಯಗಳು. ಮಾತು, ಕೈ, ಕಾಲು, ಪೃಷ್ಠ, ಗುಹ್ಯೇಂದ್ರಿಯ ಎಂಬ ಐದು ಕರ್ಮೇಂದ್ರಿಯಗಳೂ ಉತ್ಪನ್ನವಾದವು. ಈ ಎಲ್ಲ ವಸ್ತುಗಳು ಬೇರೆಬೇರೆಯಾಗಿದ್ದರೆ ಸೃಷ್ಟಿಯನ್ನುಮಾಡಲಾರವು. ಎಲ್ಲವೂ ಒಟ್ಟಿಗೆ ಸೇರಿದರೂ ಸೃಷ್ಟಿಮಾಡಲು ಸಮರ್ಥವಾಗಲಿಲ್ಲ. ಆಗ ತತ್ವಾಭಿಮಾನಿ ದೇವತೆಗಳು ಶ್ರೀಹರಿಯ ಪ್ರಾರ್ಥನೆ ಮಾಡಿದರು. ಆಗ ಪರಮಾತ್ಮನು ಪುರುಷ ರೂಪದಿಂದ ಅವುಗಳಲ್ಲಿ ಪ್ರವೇಶಮಾಡಿ ತನ್ನ ಅನುಗ್ರಹದಿಂದ ಮಹತ್ ತತ್ವವೇ ಮೊದಲಾದ ಎಲ್ಲ ತತ್ವಗಳು ಬ್ರಹ್ಮಾಂಡದ ಉತ್ಪತ್ತಿ ಮಾಡಲು ಸಮರ್ಥವಾಗುವಂತೆ ಮಾಡಿದನು. ನೀರಿನ ಗುಳ್ಳೆಯಂತೆ ಪ್ರಳಯ ಸಾಗರದಲ್ಲಿ ತೇಲುತ್ತಿದ್ದ ಆ ಜಗದಂಡವು ಕ್ರಮವಾಗಿ ಅಭಿವೃದ್ಧಿಯಾಗುತ್ತದೆ. ಅವ್ಯಕ್ತ ಸ್ವರೂಪವಾದ ಈ ಬ್ರಹ್ಮಾಂಡದಲ್ಲಿ ಪರಮಾತ್ಮ ರೂಪಿಯಾದ ನಾರಾಯಣನು ಪುರುಷರೂಪದಿಂದ ಒಳಗೆ ಪ್ರವೇಶಿಸಿ ಅದು ಚೆನ್ನಾಗಿ ಅಭಿವೃದ್ಧಿ ಹೊಂದುವಂತೆ ಮಾಡುತ್ತಾನೆ. ಒಂದು ಸಾವಿರ ವರ್ಷ ಕಾಲ ಶ್ರೀ ಹರಿಯು ನೀರಿನ ಮಧ್ಯದಲ್ಲಿ ಇದ್ದು ಬ್ರಹ್ಮಾಂಡದ ಒಳಗೆ ಪ್ರವೇಶಿಸಿ, ಹಿಂದೆ

ಹೇಳಿದ ಎಲ್ಲ ತತ್ತ್ವಗಳಿಂದ ಕೂಡಿ ಅಲ್ಲಿ ವ್ಯಕ್ತನಾಗುತ್ತಾನೆ. ಅದೇ ಪರಮಾತ್ಮನು ತನ್ನ ಅವ್ಯಕ್ತವಾದ ರೂಪದಿಂದ ಈ ಚರಾಚರಾತ್ಮಕವಾದ ಸೃಷ್ಟಿಯನ್ನು ಮಾಡಬಲ್ಲ ಬ್ರಹ್ಮನನ್ನು ಸೃಷ್ಟಿಸುತ್ತಾನೆ. ಪರಮಾತ್ಮನಿಂದ ಸೃಷ್ಟನಾದ ಬ್ರಹ್ಮದೇವನು ಅವನ ಆದೇಶದಂತೆ ಕಲ್ಪಾಂತಕಾಲದವರೆಗೆ ಸೃಷ್ಟಿ ಕಾರ್ಯವನ್ನು ಮಾಡುತ್ತಲೇ ಇರುತ್ತಾನೆ. ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮರೂಪದಿಂದ ಪ್ರಪಂಚ ಸೃಷ್ಟಿಮಾಡಿದ ಆ ನಾರಾಯಣನೇ ಕಲ್ಪದ ಕೊನೆಗೆ ತಮೋಗುಣ ಗ್ರಹಿಸಿ ರುದ್ರ ರೂಪದಿಂದ ಭಯಂಕರನಾಗಿ ಎಲ್ಲ ಪ್ರಾಣಿಗಳನ್ನು ಸಂಹಾರ ಮಾಡುತ್ತಾನೆ. ಸ್ಥಿತಿ ಕಾಲದಲ್ಲಿ ಸತ್ತ್ವಗುಣದಿಂದ ಒಡಗೂಡಿ ಎಲ್ಲ ಪ್ರಾಣಿಗಳನ್ನು ಆ ಹರಿಯೇ ಸಂರಕ್ಷಣೆ ಮಾಡುತ್ತಾನೆ.

ಹೀಗೆ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಾದಿ ಕಾರ್ಯಗಳನ್ನೆಲ್ಲ ಮಾಡುವವನೆಂದರೆ ಸಾಕ್ಷಾತ್ ಶ್ರೀ ಮಹಾವಿಷ್ಣು ಒಬ್ಬನೇ ಸರಿ. ಸೃಷ್ಟಿ-ಸಂಹಾರ ಕಾರ್ಯಗಳನ್ನು ಈ ವಿಷ್ಣುವೇ ಬ್ರಹ್ಮ ರುದ್ರ ರೂಪಗಳಿಂದ ತಾನೇ ಮಾಡುತ್ತಾನೆ. ಸೃಷ್ಟಿ, ಸ್ಥಿತಿ, ಸಂಹಾರಾದಿ ಕಾರ್ಯಮಾಡುವ ಆ ಒಬ್ಬನೇ ನಾರಾಯಣನು. ಬ್ರಹ್ಮ, ವಿಷ್ಣು, ಶಿವ ಎಂದು ಬೇರೆ ಬೇರೆ ಹೆಸರು ಹೊಂದುತ್ತಾನೆ.

**ಸ ಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ।**
**ಸತ್ತ್ವ ಭುಗ್ಗುಣವಾನ್ದೇವೋ ಹ್ಯಪ್ರವೇಯ ಪರಾಕ್ರಮಃ ॥**
**ತಮೋದ್ರೇಕಂ ಚ ಕಲ್ಪಾಂತೇ ರೂಪಂ ರೌದ್ರಂ ಕರೋತಿ ಚ ।**
**ರಾಜೇಂದ್ರಾಖಿಲ ಭೂತಾನಿ ಭಕ್ಷಯತ್ಯತಿ ಭೀಷಣಃ ॥**
**ಭಕ್ಷಯಿತ್ವಾ ಚ ಭೂತಾನಿ ಜಗತ್ಯೇಕಾರ್ಣವೀಕೃತೇ ।**
**ನಾಗಪರ್ಯಂಕಶಯನೇ ಶೇತೇ ಸರ್ವಸ್ವರೂಪಧೃಕ್ ॥**
**ಪ್ರಬುದ್ಧಶ್ಚ ಪುನಸ್ಸೃಷ್ಟಿಂ ಪ್ರಕರೋತಿ ಚ ರೂಪಧೃಕ್ ।**
**ಸೃಷ್ಟಾ ಸ್ಥಿತ್ಯಂತಕರಣಾದ್ಬ್ರಹ್ಮ ವಿಷ್ಣು ಶಿವಾತ್ಮಕಃ ॥**
**ಸೃಷ್ಟಾ ಸೃಜತಿ ಚಾತ್ಮಾನಂ ವಿಷ್ಣುಃ ಪಾಲ್ಯಂ ಚ ಪಾತಿ ಚ ।**
**ಉಪಸಂಹ್ರಿಯತೇ ಚಾಪಿ ಸಂಹರ್ತಾ ಚ ಸ್ವಯಂ ಪ್ರಭುಃ ॥**

ಹೀಗೆ ಸೃಷ್ಟಿಯ ಆದಿಕಾಲದಲ್ಲಿ ಬ್ರಹ್ಮರೂಪದಿಂದ ಎಲ್ಲ ಪ್ರಾಣಿಗಳನ್ನು ಉತ್ಪನ್ನ ಮಾಡಿ ಸ್ಥಿತಿಕಾಲದಲ್ಲಿ ವಿಷ್ಣುರೂಪದಿಂದ ರಕ್ಷಿಸಿ, ಪ್ರಳಯಕಾಲದಲ್ಲಿ ರುದ್ರರೂಪದಿಂದ ಸಂಹಾರಮಾಡಿ ತಾನೇ ಭಕ್ಷಿಸಿ, ತನ್ನ ಉದರದಲ್ಲಿಟ್ಟುಕೊಂಡು ಏಕಾರ್ಣವವಾದ ಏಕಾಕಾರವಾದ ಘೋರ ಜಲರಾಶಿಯಲ್ಲಿ ಆದಿಶೇಷನ ಮಿದು ಮೈ ಮಂಚದ ಮೇಲೆ ಶರ್ವರೂಪಿಯಾದ ಆ ಶ್ರೀಹರಿಯು ಶಯನಮಾಡುತ್ತಾನೆ. ಪ್ರಳಯಕಾಲವು ಮುಗಿದ ಬಳಿಕ ತನ್ನ ಶೇಷಪರ್ಯಂಕದಿಂದ ಮತ್ತೆ ಎದ್ದು ಮತ್ತೆ ಬ್ರಹ್ಮಾದಿ ರೂಪದಿಂದ ಸೃಷ್ಟಿ, ಸಂರಕ್ಷಣ, ಸಂಹಾರ ಮುಂತಾಗಿ ಜಗತ್ ಚಕ್ರವನ್ನು ಉರುಳಿಸುತ್ತಾನೆ. ಸೃಷ್ಟಿ, ಸ್ಥಿತಿ, ಸಂಹಾರಾದಿಗಳನ್ನು ಪ್ರಪಂಚಕ್ಕೆಲ್ಲ ಮಾಡುವುದರಿಂದ ಆ ಒಬ್ಬನೇ ನಾರಾಯಣನು ಬ್ರಹ್ಮ, ವಿಷ್ಣು, ಶಿವ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಾನೆ. ಬ್ರಹ್ಮ, ಶಿವ, ಮುಂತಾದ ದೇವತೆಗಳಲ್ಲಿ ತಾನೇ ಇದ್ದು ಕೊಂಡು ಅವರಿಂದ ಆಯಾ ಕಾರ್ಯಗಳನ್ನು ಮಾಡಿ ಆಯಾ ಹೆಸರುಗಳಿಂದ ಮುಖ್ಯ ವಾಚ್ಯನಾಗಿದ್ದಾನೆ.

ಅವನ ಕೈಯಲ್ಲಿ ಕಾರ್ಯಮಾಡಿ ಮುಕ್ತರಾದವರೂ ಮತ್ತು ಮುಕ್ತರಾಗಲಿರುವ ಬ್ರಹ್ಮರೂ ಅನೇಕಾನೇಕರು ಇರುವರು. ಆದರೆ ಈ ಎಲ್ಲ ಇಂಥ ಶಿವ, ಬ್ರಹ್ಮಾದಿಗಳ ನಿಯಾಮಕ ಪರಬ್ರಹ್ಮ ಅಥವಾ ಮುಖ್ಯ ಬ್ರಹ್ಮನೆಂದರೆ ಶ್ರೀಮನ್ನಾರಾಯಣನೇ ಸರಿ.

**ಬ್ರಹ್ಮಾದ್ಯವಸ್ಥಾಭಿರಶೇಷಮೂರ್ತಿರ್**
**ಬ್ರಹ್ಮಾವರಿಷ್ಠೋ ವರದೋ ವರೇಣ್ಯಃ ॥**

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸೃಷ್ಟಿಯ ವಿಷಯ ನಿರೂಪಣೆ ಎಂಬ ೨ನೇ ಅಧ್ಯಾಯ ಮುಗಿದುದು*



## ಪ್ರಳಯಕಾಲ ವರ್ಣನೆ, ಪ್ರಜಾಪತಿಗಳ ಉತ್ಪತ್ತಿ | ಅಧ್ಯಾಯ - ೩

**॥ ಭೀಷ್ಮ ಉವಾಚ ॥**

**ನಿರ್ಗುಣಸ್ಯಾ ಪ್ರಮೇಯಸ್ಯ ಶುದ್ಧಸ್ಯಾಪಿ ಮಹಾತ್ಮನಃ ।**
**ಕಥಂ ಸರ್ಗಾದಿಕರ್ತೃತ್ವಂ ಬ್ರಹ್ಮಣೋ ಹ್ಯುಪಪದ್ಯತೇ ॥**

**ಭೀಷ್ಮ** :- ನಿರ್ಗುಣನೂ, ಅಪ್ರಮೇಯನೂ, ವಿಶ್ವವ್ಯಾಪಿಯೂ, ಶುದ್ಧ ಚಿದಾನಂದಾತ್ಮಕನೂ ಆದ ಆ ಬ್ರಹ್ಮನಿಗೆ ಸೃಷ್ಟಿ, ಸ್ಥಿತ್ಯಾದಿ ಕರ್ತೃತ್ವವು ಹೇಗೆ ಕೂಡುತ್ತದೆ ?

**ಪುಲಸ್ತ್ಯ** :- ಪರಮಾತ್ಮನ ಶಕ್ತಿಗಳೆಲ್ಲವೂ ಅನಂತ ಹಾಗೂ ಅಚಿಂತ್ಯವಾಗಿವೆ. ಸಾಮಾನ್ಯರ ಜ್ಞಾನಕ್ಕೆ ಅವು ಗೋಚರವಾಗುವದಿಲ್ಲ. ನಿರ್ಗುಣವೆಂದರೆ ಸತ್ವಾದಿ ಪ್ರಾಕೃತ ಗುಣಗಳಿಂದ ರಹಿತನಾದ ಆ ಪರಮಾತ್ಮನು ಬ್ರಹ್ಮನಾಗಿದ್ದಾನೆ. ಅಂದರೆ ಅನಂತಗುಣ ಪರಿಪೂರ್ಣ ನಾಗಿದ್ದಾನೆ. ಸೃಷ್ಟ್ಯಾದಿ ಅಷ್ಟ ಕರ್ತೃತ್ವವು ಅವನ ಗುಣಗಳಲ್ಲಿ ಒಂದು. ಇಂಥ ಅನಂತ ಭಾವ ಶಕ್ತಿಗಳಿಂದ ಅನಂತ ಗುಣಗಳಿಂದ ಅವನು ಒಡಗೂಡಿದ್ದರಿಂದಲೇ ಅವನು ಪರಬ್ರಹ್ಮ ಎನಿಸುವನು. ಅವನು ಜಗತ್ತಿನ ಕ್ಷೇಮಕ್ಕಾಗಿ ಆಗಾಗ ಅವತಾರಮಾಡಿ, ಉತ್ಪನ್ನನಾದಂತೆ ತೋರಿದರೂ ಅವನಿಗೆ ನಿಜವಾದ ಉತ್ಪತ್ತಿಯಿಲ್ಲ. ಅವನು ಅಜ ನಿತ್ಯ ಸತ್ಯಸ್ವರೂಪಿಯು. ಆ ಪರಬ್ರಹ್ಮನಿಂದ ಉತ್ಪನ್ನನಾದ ಚತುರ್ಮುಖ ಬ್ರಹ್ಮನಿಗೆ ನಿಜವಾದ ಉತ್ಪತ್ತಿ ಉಂಟು. ಔಪಚಾರಿಕವಾಗಿ ಅವನಿಗೂ ನಿತ್ಯ ಎಂದು ಹೇಳುವದುಂಟು. ಮಾನವ ಮಾನದಿಂದ ಆ ಚತುರ್ಮುಖಬ್ರಹ್ಮದೇವರ ಆಯುರ್ಮಾನ ಅತಿ ದೀರ್ಘವಾದುದರಿಂದ ಅವನಿಗೆ ''ನಿತ್ಯ'' ಎಂದು ಹೇಳುವರು. ಚತುರ್ಮುಖ ಆ ಬ್ರಹ್ಮದೇವರಿಗೆ ತಮ್ಮ ಬ್ರಹ್ಮ ಮಾನದಿಂದ ನೂರು ವರ್ಷ ಆಯುಷ್ಯವು. ಆದರೆ ಅವರ ನೂರು ವರ್ಷ ಎಂದರೆ ನಮ್ಮ ಮಾನದಿಂದ ಒಂದು ''ಪರಾರ್ಧ'' ಎನಿಸುತ್ತದೆ. ಈ ಕಾಲಮಾನದ ಪದ್ಧತಿಯನ್ನು ಹೇಳುತ್ತೇನೆ ಕೇಳಿರಿ.

ಹದಿನೈದು ನಿಮಿಷ = ಒಂದು ಕಾಷ್ಠ
ಮೂವತ್ತು ಕಾಷ್ಠ = ಒಂದು ಕಲೆ
ಮೂವತ್ತು ಕಲೆ = ಒಂದು ಮುಹೂರ್ತ
ಮೂವತ್ತು ಮುಹೂರ್ತ = ಒಂದು ದಿನ
ಮೂವತ್ತು ದಿನ = ಒಂದು ತಿಂಗಳು

ಈ ಒಂದು ತಿಂಗಳಲ್ಲಿ ಎರಡು ಪಕ್ಷಗಳಿವೆ. ಇಂಥ ಹನ್ನೆರಡು ತಿಂಗಳು ಕೂಡಿದರೆ ಒಂದು ವರ್ಷ. ಇಂಥ ಕೆಲವು ವಿಶಿಷ್ಟ ವರ್ಷ ಕೂಡಿದರೆ ಒಂದು ಪರಸಂಧ್ಯೆ. ಇದರಷ್ಟೇ ಅಪರಸಂಧ್ಯೆಯು ಇರುತ್ತದೆ. ಈ ಮೊದಲನೆಯ ಸಂಧ್ಯೆಯ ಕೊನೆ, ಎರಡನೆಯ ಸಂಧ್ಯೆಯ ಆದಿಭಾಗ ಇವುಗಳ ನಡುವಿನ ಅವಧಿಗೆ ''ಯುಗ'' ಎನ್ನುತ್ತಾರೆ. ಆ ಯುಗಗಳು ಕೃತ, ತ್ರೇತ, ದ್ವಾಪರ, ಕಲಿ ಎಂದು ನಾಲ್ಕು ವಿಧವಾಗಿವೆ. ಈ ನಾಲ್ಕು ಯುಗಗಳು ಕೂಡಿದರೆ ಮಹಾಯುಗ ಅಥವಾ ಚತುರ್ಯುಗ ಇಂಥ ಸಾವಿರ ಚತುರ್ಯುಗಗಳು ಕೂಡಿದರೆ ಬ್ರಹ್ಮನಿಗೆ ಒಂದು ದಿವಸ. ಬ್ರಹ್ಮದೇವರ ಈ ಒಂದು ಯುಗದಲ್ಲಿ ಹದಿನಾಲ್ಕು ಮನುಗಳು ತಿರುಗಿ ಹೋಗುತ್ತಾರೆ. ಈ ಒಬ್ಬೊಬ್ಬ ಮನುವಿನ ಅವಧಿಯಲ್ಲಿ ಸಪ್ತರ್ಷಿಗಳು, ದೇವತೆಗಳು, ಇಂದ್ರನು, ಮನು, ಮನುವಿನ ಮಕ್ಕಳು ಇರುತ್ತಾರೆ. ಇಂಥ ಇಪ್ಪತ್ತೊಂದು ಯುಗಗಳು ತಿರುಗದರೆ ಅದಕ್ಕೆ ಮನ್ವಂತರ ಎಂದು ಕರೆಯುತ್ತಾರೆ.

ನೂರು ಸಾವಿರದ ಎಂಟು ಮನ್ವಂತರಗಳಿಗೆ ಒಂದು ದೇವ ಸಂವತ್ಸರವಾಗುವುದು ಎಂದರೆ ಒಟ್ಟಿನಲ್ಲಿ ಅರವತ್ತೇಳು ನಿಯುತ, ಮೂವತ್ತು ಕೋಟಿ ಇಪ್ಪತ್ತೊಂದು ಸಾವಿರದ ಐವತ್ತೆರಡು ಮಾನವ ಮಾನದ ವರ್ಷಗಳಾದರೆ ಬ್ರಹ್ಮದೇವರಿಗೆ ಒಂದು ಹಗಲು. ಆಗ ಭೂ, ಭುವ, ಸ್ವಃ ಮುಂತಾದ ಲೋಕಗಳು ನಾಶವಾಗುತ್ತವೆ. ಮಹಾಲೋಕ ನಿವಾಸಿಗಳಿಗೆ ತಾಪವನ್ನು ತಾಳಲಾಗದೆ ಅವರೆಲ್ಲರೂ ಜನೋಲೋಕಕ್ಕೆ ಓಡಿಹೋಗುತ್ತಾರೆ. ಉಳಿದೆಲ್ಲ ಕಡೆಗೆ ಬರಿ ನೀರೇ ನೀರಾಗುತ್ತದೆ. ಆಗ ಮೂರು ಲೋಕಗಳನ್ನೆಲ್ಲ ಭಕ್ಷಿಸಿ, ಸಂಹರಿಸಿ, ಎಲ್ಲ ಜೀವರಾಶಿಗಳನ್ನು ತನ್ನ ಉದರದಲ್ಲಿಟ್ಟುಕೊಂಡು ಆದಿಶೇಷನ ಮೇಲೆ ಶ್ರೀಹರಿಯು ಶಯನ ಮಾಡುತ್ತಾನೆ. ಆ ಕಾಲದಲ್ಲಿ ಜನೋಲೋಕದಲ್ಲಿ ಋಷಿಗಳೆಲ್ಲರೂ ಅವನನ್ನು ಪ್ರಾರ್ಥನೆ ಮಾಡುತ್ತಾರೆ. ಹೀಗೆ ಹಗಲಿನಷ್ಟೆ ರಾತ್ರಿಯು ಕಳೆದ ಬಳಿಕ ಆ ಪರಮಾತ್ಮನು ಮತ್ತೆ ಸೃಷ್ಟಿಮಾಡುತ್ತಾನೆ. ಹೀಗೆ ಬ್ರಹ್ಮದೇವರಿಗೆ ಒಂದೊಂದು ದಿನವೂ ಅದರಂತೆ ಒಂದೊಂದು ವರ್ಷವೂ ಕಳೆದು ಒಂದು ನೂರು ವರ್ಷಗಳಾದ ಬಳಿಕ ಒಂದು ಬ್ರಹ್ಮ ಕಲ್ಪವೂ ಪೂರ್ಣವಾದಂತಾಗುವುದು. ಕಳೆದ ಕಲ್ಪದ ಕೊನೆಯ ರಾತ್ರಿ ಶೇಷ ಶಯನದಿಂದ ಮಲಗಿ ಎದ್ದ ಶ್ರೀಹರಿಯು ಪ್ರಪಂಚವೆಲ್ಲವೂ ಶೂನ್ಯವಾಗಿರುವದನ್ನು ನೋಡುದನು. ಭೂಮಿಯೆಲ್ಲವೂ ನೀರಿನಲ್ಲಿ ಮುಳುಗಿ ಹೋಗಿತ್ತು. ಆ ಭೂಮಿಯನ್ನು ಮೇಲಕ್ಕೆ ಎತ್ತಿ ಜಗದೋದ್ಧಾರಮಾಡಲು ಆ ಪರಮಾತ್ಮನು ಮತ್ಸ್ಯ, ಕೂರ್ಮ, ವರಾಹ ಮುಂತಾದ ಅವತಾರಗಳನ್ನು ಮಾಡಿದನು. ಸರ್ವವೇದ ಪ್ರತಿಪಾದ್ಯನೂ, ಸರ್ವಶಕ್ತನೂ, ಆದ ಭಗವಂತನು ಭೂಮಿಯನ್ನು ಮೇಲಕ್ಕೆ ತರಬೇಕೆಂದು ನೀರಿನ ಆಳಕ್ಕೆ ಇಳಿದನು. ಪಾತಾಳದ ತಳದವರೆಗೂ ಬಂದನು. ಸಾಗರದಗರ್ಭದಲ್ಲಿ, ಪಾತಾಳದ ಆಳದಲ್ಲಿ ಮುಳುಗಿದ ಭೂದೇವಿಗೆ ತನ್ನನ್ನು ಉದ್ಧರಿಸಲು ಬಂದ ಭಗವಂತನನ್ನು ನೋಡಿ ಭಕ್ತಿಉದ್ರೇಕವಾಯ್ತು. ಆನಂದದಿಂದ ಅವಳು ಉತ್ಕಂಠಿತಳಾಗಿ, ವಿನಯದಿಂದ ತಲೆಬಾಗಿಸಿ, ಕೈಜೋಡಿಸಿ ನಮಿಸಿ, ಹೊಗಳಿ, ಹಾಡಿ, ಪಾಡಿ, ಕೊಂಡಾಡಿ ಹೇಳಿದಳು.

## ॥ ಪೃಥ್ವಿಉವಾಚ ॥

ಸರ್ವಾಂತರ್ಯಾಮಿಯಾದ ಪರಮಾತ್ಮನೇ, ನಿನಗೆ ನಮಸ್ಕಾರ. ಸರ್ವಜ್ಯೇಷ್ಠನಾದ ನಿನಗೆ ವಂದನೆ. ಈ ಜಲಬಂಧನದಿಂದ ನೀನು ನನ್ನನ್ನು ಉದ್ಧರಿಸು. ಹಿಂದಾದರೂ ನನ್ನನ್ನು

ಉದ್ಧರಿಸಿದವ ನೀನೇ, ಪುರುಷರೂಪಿಯಾದ ಪರಮಚೇತನನಾದ ಭಗವಂತನೇ, ಪ್ರಾಣಿಗಳ ಒಳಗೂ ಹೊರಗೂ ಪುರುಷ ಹಾಗೂ ಕಾಲರೂಪದಿಂದ ಪ್ರಪಂಚವನ್ನೆಲ್ಲ ನಿಯಮಿಸುವ ವರಾಹರೂಪಿಯಾದ ನಿನಗೆ ನನ್ನ ನಮಸ್ಕಾರ. ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿರೂಪದಿಂದ ಜಗತ್ತಿನ ಸೃಷ್ಟಿ ಸ್ಥಿತಿ, ವಿನಾಶಗಳನ್ನು ಮಾಡುವ ನಿನಗೆ ನಮೋನಮಃ.

**ತ್ವಾಮಾರಾಧ್ಯಪರಂಬ್ರಹ್ಮಯಾತಾ ಮುಕ್ತಿಂಮುಮುಕ್ಷವಃ ।**
**ವಾಸುದೇವಮನಾರಾಧ್ಯಕೋಮೋಕ್ಷಂ ಸಮವಾಪ್ನುಯಯತ್ ॥**

ಮೋಕ್ಷ ಬಯಸುವ ಮಹಾನುಭಾವರು ಪರಬ್ರಹ್ಮ ಸ್ವರೂಪಿಯಾದ ನಿನ್ನನ್ನು ಆರಾಧಿಸಿ ಮುಕ್ತಿಯನ್ನು ಹೊಂದಿದ್ದಾರೆ. ವಾಸುದೇವನ ಆರಾಧನೆಯನ್ನು ಮಾಡದೆ ಯಾರು ಮೋಕ್ಷವನ್ನು ಪಡೆಯಬಲ್ಲರು ? ಆದುದರಿಂದ ನಾನು ನಿನ್ನನ್ನೇ ಆಶ್ರಯಿಸಿದ್ದೇನೆ. ನಿನಗೆ ಮೊರೆಹೊಕ್ಕಿದ್ದೇನೆ. ನೀನೇ ನನಗೆ ಆಧಾರ. ನನ್ನನ್ನು ಹುಟ್ಟಿಸಿದವನು ನೀನು. ಪೊರೆಯುವವನು ನೀನು. ನಾನು ತ್ವನ್ಮಯಳು. ನೀನು ಚಿನ್ಮಯನು, ನೀನು ಮಾಧವ. ನಿನ್ನ ಸಂಬಂಧದಿಂದ ನನಗೆ ಜನರು ಮಾಧವಿ ಎಂದು ಕರೆಯುತ್ತಾರೆ.

ಹೀಗೆ ಭೂದೇವಿಯು ಸ್ತುತಿಗೈಯಲು ಭೀಕರವಾದ ವರಾಹ ರೂಪವನ್ನು ತಳೆದ ಮಹಾವಿಷ್ಣುವು ತನ್ನ ಸಾಮಧ್ವನಿಯ ಸ್ವರದಿಂದ ಗುಡುಗುಹಾಕಿದಂತೆ ಗರ್ಜನೆಗೈದನು. ಅನಂತರ ತನ್ನ ಕೋರೆದಾಡೆಯ ಮೇಲೆ ಆ ಭೂಮಂಡಲವನ್ನು ಎತ್ತಿ ಇಟ್ಟುಕೊಂಡು ಬಿರಿದ ಕೆಂದಾವರೆಯಂತೆ ಕೆಂಗಣ್ಣಿನಿಂದ ಕಂಗೊಳಿಸುವ ಆ ವಿರಾಟ ವರಾಹನು ರಸಾತಳದ ಆಳದಿಂದ ಮೇಲಕ್ಕೆ ಕಪ್ಪು ಪರ್ವತದಂತೆ ಎದ್ದು ನಿಂತನು. ಅವನು ಸಾಗರ ಗರ್ಭದಿಂದ ಮೇಲಕ್ಕೆ ಏಳುವಾಗ ಅವನ ಮುಖದಿಂದ ಹೊಮ್ಮಿದ ಶ್ವಾಸದ ಅಲೆಗಳಿಂದ ಸಮುದ್ರದ ನೀರು ಅಲ್ಲೋಲಕಲ್ಲೋಲವಾಗಿ ಅದರ ತುಂತುರು ಹನಿಗಳು ಜನೋಲೋಕದಲ್ಲಿ ಭಗವಂತನನ್ನು ಸ್ತುತಿಸುತ್ತ ಕುಳಿತ ಸನಕ, ಸನಂದನಾದಿ ಪವಿತ್ರ ಮುನಿಗಳನ್ನು ಮತ್ತಿಷ್ಟು ಪರಮ ಪವಿತ್ರರನ್ನಾಗಿ ಮಾಡಿದವು. ಸಾಗರದ ಸಲಿಲೋದರದಿಂದ ಕೊಡವಿಕೊಂಡು, ಮೇಲಕ್ಕೆ ಎದ್ದ, ವೇದಮಯವಾದ ಅವನ ಶರೀರವು ಆಚೀಚೆ ಅಲುಗಾಡಲು, ಅಂತರಾಳದಲ್ಲಿದ್ದ ಎಲ್ಲ ಮುನಿಗಳು ಆ ಭಗವಂತನನ್ನು ಸ್ತೋತ್ರಮಾಡಿದರು.

ಸ್ತೋತ್ರಮಾಡಿದ ಬಳಿಕ, ವರಾಹರೂಪಿಯಾದ ಆ ಭಗವಂತನು ಭೂಮಂಡಲವನ್ನು ಮೇಲಕ್ಕೆ ಎತ್ತಿ ತಂದು ಸಮುದ್ರದ ಮೇಲುಭಾಗದಲ್ಲಿ ಇರಿಸಿದನು. ಸಾಗರದ ನೀರಿನ ರಾಶಿಯ ನಡುವೆ ಆ ಅಖಂಡ ಭೂಮಂಡಲವು ನೌಕೆಯಂತೆ ನಿಂತುಕೊಂಡಿತು. ಆಗ ಆ ಪುರುಷೋತ್ತಮನು ಭೂಮಿಯನ್ನು ಬಹು ಭಾಗದಲ್ಲಿ ಸುಮತಟ್ಟಾದ ನೆಲ, ಹೊಲ, ಬಯಲು ಭೂಮಿ, ಉಳಿಯುವಂತೆ ಮಾಡಿ ಕೆಲವು ಭಾಗದಲ್ಲಿ ಎತ್ತರವಾದ ಬೆಟ್ಟಗಳು ಬೆಳೆಯುವಂತೆ ಮಾಡಿದನು. ಯಾವ ಯಾವ ಭಾಗದಲ್ಲಿ ಏನೇನು ಇರಬೇಕು ಅದರಂತೆ ಭೂಮಂಡಲದಲ್ಲಿ ಎಲ್ಲ ಕಡೆಗೂ ಇರಿಸಿ, ಸರಿಯಾದ ಭಾರದಿಂದ ಭೂಮಿಯ ತೂಕವು ತಪ್ಪದಂತೆ ಏರ್ಪಡಿಸಿದನು. ಮೊದಲಿನಂತೆಯೇ ಎಲ್ಲ ಲೋಕ ಸೃಷ್ಟಿಯನ್ನುಮಾಡಿ, ಮೊದಲು ಅದನ್ನು ಬ್ರಹ್ಮದೇವನಿಗೆ ತೋರಿಸಿದನು. ಅದರಿಂದ ಸಂತುಷ್ಟನಾದ ಬ್ರಹ್ಮದೇವರು ಆ ಪರಮಾತ್ಮನನ್ನು ಪ್ರಾರ್ಥಿಸಿಕೊಂಡನು.

**ಬ್ರಹ್ಮ** :- ದೇವೋತ್ತಮನಾದ ಪರಮಾತ್ಮನೇ, ಪುರುಷೋತ್ತಮನಾದ ನೀನು ಈ ಜಗತ್ತನ್ನೆಲ್ಲ ನನ್ನನ್ನು ನಿಮಿತ್ತಮಾಡಿ ಸಂಯುಕ್ತವಾಗಿ ಧಾರಣಮಾಡುತ್ತಿರುವೆ ಮತ್ತು ಪಾಲಿಸುತ್ತಲಿರುವೆ. ನಾನು ಕೆಲವು ಅಸುರ ಮುಖ್ಯರಿಗೆ ವರವನ್ನು ಕೊಟ್ಟಿದ್ದೇನೆ. ದೇವತೆಗಳ ಹಿತಕ್ಕಾಗಿ ನೀನು ಅವರನ್ನೆಲ್ಲ ಸಂಹರಿಸಬೇಕು. ನಿನ್ನ ಆದೇಶದಂತೆ ನಾನು ಮುಂದೆ ಪ್ರಾಣಿಗಳ ಸೃಷ್ಟಿಯನ್ನೇನೊ ಮಾಡುತ್ತೇನೆ. ಆದರೆ ಅವುಗಳನ್ನೆಲ್ಲ ರಕ್ಷಿಸುವ ಹೊಣೆ ಮಾತ್ರ ನಿನ್ನದು.

ಹೀಗೆ ಬ್ರಹ್ಮದೇವರು ಕೊಂಡಾಡಿದ ಬಳಿಕ ವಿಷ್ಣುವು ಅಲ್ಲಿಂದ ಹೊರಟುಹೋದನು. ಅನಂತರ ಬ್ರಹ್ಮದೇವರು ತಮ್ಮ ಸೃಷ್ಟಿಕಾರ್ಯ ಪ್ರಾರಂಭಿಸಿದರು. ಸೃಷ್ಟಿಮಾಡಬೇಕೆಂದು ಕಾರ್ಯ ಪ್ರವೃತ್ತರಾದ ಬ್ರಹ್ಮದೇವರಿಂದ ಮೊದಲು ಉದಿಸಿ ಬಂದದ್ದು ಬುದ್ಧಿ ಶೂನ್ಯವಾದ ಅವಿದ್ಯಾ ಪ್ರಪಂಚ, ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ ಮತ್ತು ಅಂಧ ತಾಮಿಸ್ರ ಎಂದು ಬ್ರಹ್ಮದೇವರ ಚೊಚ್ಚಲ ಮಗಳಾದ ಅವಿದ್ಯೆಯು ಐದು ತೆರನಾಗಿದೆ. ಅನಂತರ ಅವರ ಇಚ್ಛೆಯಂತೆ ಗಿಡ, ಬಳ್ಳಿ, ಕಂಟಿ, ಪೊದೆ, ಹುಲ್ಲು ಎಂದು ಐದು ವಿಧವಾದ ಸ್ಥಾವರ ವಸ್ತುಗಳ ಸೃಷ್ಟಿಯಾಯಿತು. ಈ ಸ್ಥಾವರಗಳಲ್ಲಿ ಸುಪ್ತವಾಗಿ ಚೇತನಶಕ್ತಿ ಇದ್ದರೂ ಜ್ಞಾನಶಕ್ತಿ ಇಲ್ಲ. ಎಲ್ಲಕ್ಕಿಂತ ಮೊದಲು ಸೃಷ್ಟಿಯಾದ್ದರಿಂದ ಈ ಸ್ಥಾವರ ಸೃಷ್ಟಿಯು ಮೊದಲ ಸೃಷ್ಟಿ ಎಂದು ಅನಿಸಿಕೊಳ್ಳಲ್ಪಡುತ್ತದೆ.

ಜ್ಞಾನಶೂನ್ಯವಾದ ಈ ಜಡಸೃಷ್ಟಿಯಿಂದ ಯಾವ ಪುರುಷಾರ್ಥವನ್ನೂ ಸಾಧಿಸಲಿಕ್ಕಾಗದು ಎಂದು ತಿಳಿದ ಬೊಮ್ಮನು ಮತ್ತೆ ಒಡಾಡುವ ಪ್ರಾಣಿಗಳನ್ನು ನಿರ್ಮಿಸಿದನು. ಆಹಾರಕ್ಕಾಗಿ ಅಲೆದಾಡುವ ಈ ಪ್ರಾಣಿಗಳ ಸೃಷ್ಟಿಗೆ ತಿರ್ಯಕ್ ಸೃಷ್ಟಿ ಎಂದು ಹೆಸರು. ಇಪ್ಪತ್ತೆಂಟು ಜಾತಿಯ ಈ ತಿರ್ಯಕ್ ಸೃಷ್ಟಿಯಲ್ಲಿ ಯಾವದಕ್ಕೂ ಬುದ್ಧಿಯ ಬೆಳಕು ಇಲ್ಲ. ಇವುಗಳಿಗೆ ಸುಖ, ಜ್ಞಾನ, ಅಹಂಕಾರದಿಂದ ಕಾರ್ಯ ಪ್ರವೃತ್ತಿ, ದೇಹ ಯಾತ್ರೆಗೆ ಮಾತ್ರ ಸಾಕಾಗುವಷ್ಟು ಪರಿಮಿತ ಜ್ಞಾನವು ಇದ್ದುದರಿಂದ ಪರಮಾತ್ಮನು ಈ ತಮೋಮಯ ಸೃಷ್ಟಿಯು ಸಾರ್ಥಕವಾಗದೆಂದು ಬಗೆದು ಮತ್ತೊಂದು ಒಳ್ಳೇ ಸೃಷ್ಟಿಯನ್ನು ಮಾಡಬೇಕೆಂದು ಬಯಸಿದನು. ಆಗ ದಿವ್ಯ ಜ್ಞಾನೋಪೇತರೂ ಸಾತ್ವಿಕ ಸ್ವಭಾವವುಳ್ಳವರೂ ಆದ ದೇವತೆಗಳ ಸೃಷ್ಟಿಯಾಯಿತು. ನಿತ್ಯ ಸಂತುಷ್ಟರಾದ ದೇವತೆಗಳ ಈ ಮೂರನೆಯ ಸೃಷ್ಟಿಯಿಂದ ಬ್ರಹ್ಮ ದೇವರಿಗೆ ತೃಪ್ತಿಯಾಯಿತು. ಆ ಮೇಲೆ ಪರಮಾತ್ಮನು ಸಾಧಕರ ಒಂದು ಮಾರ್ಗವನ್ನು ಸೃಷ್ಟಿಸಬೇಕೆಂದು ಬಯಸಿದನು. ಅದೇ ಮನುಷ್ಯ ಸೃಷ್ಟಿ. ಮನುಷ್ಯರು ಜ್ಞಾನ ಪ್ರಧಾನರು. ಅವರಲ್ಲಿ ತಮೋಗುಣ ಪ್ರಭಾವದಿಂದ ದುಃಖ ಪ್ರಾಚುರ್ಯವಿದ್ದು ಅವರು ರಜೋಗುಣದ ಪರಿಣಾಮವಾಗಿ ಕಾರ್ಯೋನ್ಮುಖರೂ ಆಗಿರುತ್ತಾರೆ.

ಒಟ್ಟು ಈ ಬ್ರಹ್ಮಸೃಷ್ಟಿಯು ಒಂಭತ್ತು ವಿಧವಾಗಿದೆ. ಬ್ರಹ್ಮದೇವರ ಶರೀರ ಭೂತವಾದ ಮಹತ್ತತ್ವದ ಸೃಷ್ಟಿಯು ಮೊದಲ ಸೃಷ್ಟಿ. ಅನಂತರ ಭೂತಸರ್ಗವೆಂದು ಹೆಸರಾದ ಭೂತ ಮತ್ತು ತನ್ಮಾತ್ರಗಳ ಸೃಷ್ಟಿ ಎರಡನೆಯದು. ಇಂದ್ರಿಯ ಮತ್ತು ಇಂದ್ರಿಯಾಭಿಮಾನಿಗಳ ಸೃಷ್ಟಿ ಮೂರನೆಯದು. ಜಡವಾದ ವೃಕ್ಷಲತಾದಿಗಳ ಸೃಷ್ಟಿ ನಾಲ್ಕನೆಯದು. ಪಕ್ಷ್ಯಾದಿಗಳ ಸೃಷ್ಟಿ ಐದನೆಯ ತಿರ್ಯಕ್ ಸೃಷ್ಟಿ. ಊರ್ಧ್ವಮುಖವಾದ ದೇವತೆಗಳ ಸೃಷ್ಟಿ ಆರನೆಯದು. ಸೃಷ್ಟಿಯ ಮುಖವು ಕೆಳಮುಖವಾದಾಗ ಜನಿಸಿ ಬಂದ ಮನುಷ್ಯರ ಸೃಷ್ಟಿ ಏಳನೆಯ ಸೃಷ್ಟಿ.

ಈ ಪ್ರಾಣಿಗಳಿಗೆಲ್ಲ ಬಲ ಮತ್ತು ಮಾನವರಿಗೆ ಜ್ಞಾನ ಮತ್ತು ದೇವತೆಗಳಿಗೆ ತೃಪ್ತಿಗಳನ್ನು ಕೊಟ್ಟ. ಎಂಟನೆಯ ಸೃಷ್ಟಿ ಅನುಗ್ರಹ ಸೃಷ್ಟಿ ಎಂದು ಕರೆಯಲ್ಪಡುತ್ತದೆ. ಇದು ಪ್ರಾಣಿಗಳಲ್ಲಿ ತಾಮಸ ರೂಪವಾದರೆ ದೇವ ಮಾನವರದು ಸಾತ್ವಿಕವಾಗಿದೆ.

ಹೀಗೆ ಪ್ರಾಕೃತಿಕ ಸೃಷ್ಟಿ ಐದು, ವೈಕೃತಿಕ ಸೃಷ್ಟಿ ಮೂರು ಹೀಗೆ ಒಟ್ಟು ಎಂಟು ಸೃಷ್ಟಿಗಳಾದ ಬಳಿಕ ಬ್ರಹ್ಮದೇವರು ಸನಕಾದಿ ಮಾನಸ ಪುತ್ರರನ್ನು ನಿರ್ಮಿಸಿದ. ಈ ದಿವ್ಯ ಜ್ಞಾನಿಗಳ ಸೃಷ್ಟಿಯು ಒಂಭತ್ತನೆಯ ಸೃಷ್ಟಿಯಾಯಿತು.

ಹೀಗೆ ಸದುದ್ದೇಶದಿಂದ ಚರಾಚರ ಪ್ರಾಣಿಗಳನ್ನು ಸೃಷ್ಟಿಮಾಡಿದ ಬ್ರಹ್ಮದೇವನು ತಾನು ಸೃಷ್ಟಿಸಿದ ಪ್ರಜೆಗಳು ಮುಂದೆ ಭರದಿಂದ ಬೆಳೆಯದಿದ್ದುದನ್ನು ಗಮನಿಸಿ, ಕೆಲವು ವಿಷಯಗಳಲ್ಲಿ ತನಗೆ ಸಮಾನರಾದ ಹಲವು ಮಹಾತ್ಮರಾದ ಮಕ್ಕಳನ್ನು ಮಾನಸ ಪುತ್ರರೂಪವಾಗಿ ಪಡೆದನು. ಸನಕ, ಸನಂದನ, ಸನಾತನ, ಸನತ್ಕುಮಾರ ಎಂಬ ಮಹಾನುಭಾವರಾದ ನಾಲ್ಕು ಮಕ್ಕಳನ್ನು ಮೊದಲು ನಿರ್ಮಿಸಿದನು. ಅನಂತರ ಭೃಗು, ಪುಲಹ, ಕೃತು, ಅಂಗಿರಸ, ಮರೀಚಿ, ಅತ್ರಿ, ದಕ್ಷ ವಶಿಷ್ಠ ಎಂದು ನವರತ್ನಗಳಂತಿದ್ದ ಸತ್ಪುತ್ರರನ್ನು ಪಡೆದನು. ಅವರು ನಾಲ್ಕು ಇವರು ಒಂಭತ್ತು ಹದಿಮೂರುಜನ ಮಾನಸ ಪುತ್ರರನ್ನು ನಿರ್ಮಿಸಿದರೂ ಅವರಾರೂ ಸಂಸಾರದಲ್ಲಿ ಆಸಕ್ತರಾಗಲಿಲ್ಲ. ವಿಷಯ ಸುಖವನ್ನು ಬಯಸಲಿಲ್ಲ. ಹುಟ್ಟಿನೊಂದಿಗೆ ಜ್ಞಾನ ವೈರಾಗ್ಯಗಳನ್ನು ಕಟ್ಟಿಕೊಂಡು ಬಂದ ಈ ಮಹಾನುಭಾವರು ರಾಗಮೋಹಾದಿಗಳಿಂದ ರಹಿತರಾಗಿ ಭಗವಧ್ಯಾನದಲ್ಲಿಯೇ ಆಸಕ್ತರಾದರು. ಇಂತು ಸಂಸಾರದಿಂದ ಪರಾಙ್ಮುಖರಾಗಿ ಸೃಷ್ಟಿಕಾರ್ಯ ವಿಮುಖರಾಗಿ ಭಗವತ್ ಚಿಂತನದಲ್ಲಿಯೇ ಆಸಕ್ತರಾದ ಈ ಮಕ್ಕಳು ಅದರಲ್ಲಿಯೂ ಅತ್ಯಂತ ನಿರಪೇಕ್ಷರೂ ವೀತರಾಗರೂ ಭಗವನ್ನಿಷ್ಠರೂ ಆದ ಸನಕಸನಂದನಾದಿಗಳ ಸೃಷ್ಟಿಕಾರ್ಯದ ಬಗೆಗಿನ ಔದಾಸೀನ್ಯ ಕಂಡು ಬ್ರಹ್ಮದೇವರಿಗೆ ಕೋಪ ಬಂದಿತು.

ಆ ಸಿಟ್ಟು ಎಷ್ಟು ಉಗ್ರವಾಗಿತ್ತೆಂದರೆ ಮೂರು ಲೋಕಗಳನ್ನು ಅರೆ ನಿಮಿಷದಲ್ಲಿ ಸುಟ್ಟು ಬೂದಿಮಾಡಬಹುದಿತ್ತು. ಇಂತಹ ಅತ್ಯುಗ್ರ ಕೋಪದಿಂದ ಬ್ರಹ್ಮದೇವರ ಹಣೆಯು ಗಂಟಿಕ್ಕಿತು. ನಿರಿಗೆಗಟ್ಟಿದ ಕ್ರುದ್ಧಮುಖಮುದ್ರೆಯ ಬ್ರಹ್ಮದೇವರ ಹಣೆಯಿಂದ ನಡುಹಗಲಿನ ಸೂರ್ಯನಂತೆ ಪ್ರಜ್ವಲಿಸುವ ರುದ್ರದೇವನು ಹುಟ್ಟಿದನು. ಅವನ ದೇಹ ಅರ್ಧ ಹೆಣ್ಣು, ಅರ್ಧ ಗಂಡು. ಅರ್ಧನಾರಿ-ನರರೂಪಿಯಾದ ತನ್ನ ಹೊಸ ಸಂತತಿಯನ್ನು ಕಂಡು ಬ್ರಹ್ಮದೇವನು ಅವನಲ್ಲಿ ಒಂದುಗೂಡಿದ ಗಂಡು ಹೆಣ್ಣು ಭಾಗಗಳನ್ನು ಪ್ರತ್ಯೇಕ ಗಂಡು ಹೆಣ್ಣಾಗಿ ಮಾಡಲು ಹೇಳಿದನು. ಅದರಂತೆ ರುದ್ರನು ಗಂಡು-ಹೆಣ್ಣು ಎಂದು ಎರಡು ಭಾಗ ಮಾಡಿ ಒಂದು ಪೂರ್ಣ ಹೆಣ್ಣು ಒಂದು ಪೂರ್ಣ ಗಂಡು ಆಗುವಂತೆ ಮಾಡಿದನು. ಪೂರ್ಣ ಪುರುಷ ರೂಪವನ್ನು ತಳೆದು ನಿಂತ ತನ್ನ ಗಂಡು ರುದ್ರದೇಹವನ್ನು ಹನ್ನೊಂದು ವಿಭಾಗಗಳಾಗಿ ವಿಭಜಿಸಿದನು. ಅದೇ ಏಕಾದಶ ರುದ್ರಗಣ ಎಂದು ಪ್ರಸಿದ್ಧವಾಯಿತು. ರುದ್ರದೇವರ ಸ್ತ್ರೀ ರೂಪಗಳು ಹನ್ನೊಂದು ಅವುಗಳಲ್ಲಿ ಕೆಲವು ಶುಭ್ರವರ್ಣದಿಂದ ಶೋಭಿಸಿದರೆ ಹಲವು ಕಪ್ಪುಕಾಂತಿಯಿಂದ ಕಂಗೊಳಿಸಿದವು.

ಅನಂತರ ಬ್ರಹ್ಮದೇವರು ತನ್ನಿಂದ ಉತ್ಪನ್ನವಾದ ಸ್ವಾಯಂಭುವ ಎಂಬ ಮಗನನ್ನು ಮನ್ವಂತರದ ಅಧಿಪತಿಯನ್ನಾಗಿ ಮಾಡಿ ಪ್ರಜಾಪತಿ ಪಟ್ಟದಲ್ಲಿ ಕೂಡಿಸಿದನು.

ಆ ಸ್ವಾಯಂಭುವ ಮನುವು ತನ್ನ ದೇಹವನ್ನೇ ವಿಭಾಗ ಮಾಡಿ, ಶತರೂಪಾ ಎಂಬ ದಿವ್ಯವಾದ ನಾರೀಮಣಿಯನ್ನು ನಿರ್ಮಿಸಿದನು. ತಪಃ ಪ್ರಭಾವದಿಂದ, ಕೊಲೆ, ಕಲ್ಮಷಗಳನ್ನೆಲ್ಲ ಕಳೆದು ದಿವ್ಯಕಾಂತಿಯಿಂದ ಕಂಗೊಳಿಸುವ ಕಾಂತೆಯನ್ನು ತನ್ನ ಮಡದಿಯನ್ನಾಗಿ ಸ್ವೀಕರಿಸಿದನು. ಪ್ರಪಂಚದ ಆದಿ ದಂಪತಿಗಳಾದ ಈ ಸ್ವಾಯಂಭುವ ಮನು ಹಾಗೂ ಶತರೂಪಾ ದಂಪತಿಗಳಿಂದ ನಾಲ್ಕು ಜನ ಮಕ್ಕಳಾದರು. ಇಬ್ಬರು ಗಂಡು ಮಕ್ಕಳಲ್ಲಿ ಒಬ್ಬನದು ಪ್ರಿಯವ್ರತ ಮತ್ತೊಬ್ಬನದು ಉತ್ತಾನಪಾದ ಎಂದು ಹೆಸರು. ಮನುಕುಲದ ಪ್ರಪ್ರಥಮ ವಧೂ-ವರರ ಹೊಟ್ಟೆಯಿಂದ ಹುಟ್ಟಿದ ಮೊಟ್ಟ ಮೊದಲ ಹೆಣ್ಣು ಪ್ರಸೂತಿ. ಇನ್ನೊಬ್ಬ ಕನ್ಯೆ ಆಕೂತಿ. ಹಿರಿಯಳಾದ ಪ್ರಸೂತಿಯನ್ನು ಸ್ವಾಯಂಭುವನ ಮಹಾರಾಜನು ದಕ್ಷಪ್ರಜಾಪತಿಗೆ ಧಾರೆಯೆರೆದು ಕೊಟ್ಟನು. ದ್ವಿತೀಯ ಚಿರಂಜೀವಿನಿ ಆಕೂತಿಯನ್ನು ರುಚಿ ಎಂಬ ಪ್ರಜಾಪತಿಗೆ ಕನ್ಯಾದಾನ ಮಾಡಿಕೊಟ್ಟನು. ರುಚಿ ಮತ್ತು ಆಕೂತಿ ದಂಪತಿಗಳಿಗೆ ಯಜ್ಞ ಎಂಬ ಗಂಡು, ದಕ್ಷಿಣಾ ಎಂಬ ಹೆಣ್ಣು ಮಕ್ಕಳು ಹುಟ್ಟಿದರು. ಯಜ್ಞನು ದಕ್ಷಿಣೆಯನ್ನು ಪತ್ನಿಯೆಂದು ಪರಿಗ್ರಹಿಸಿದನು. ಅವರಿಂದ ಹನ್ನೆರಡು ಜನ ಮಕ್ಕಳು ಜನಿಸಿದರು. ಈ ದ್ವಾದಶಪುತ್ರರ ಗುಂಪಿಗೆ 'ಯಾಮ' ಎಂಬ ಹೆಸರು. ಸ್ವಾಯಂಭುವ ಮನ್ವಂತರದಲ್ಲಿ ಈ ಯಜ್ಞ-ದಕ್ಷಿಣಾಪುತ್ರರು ದೇವತಾ ಪದವಿಗೆ ಏರಿ 'ಯಾಮ' ದೇವರೆಂದು ಪ್ರಸಿದ್ಧರಾದರು. ಸ್ವಾಯಂಭುವ ಮನುವಿನ ಮತ್ತೊಬ್ಬ ಮಗಳಾದ ಪ್ರಸೂತಿಯನ್ನು ದಕ್ಷಪ್ರಜಾಪತಿಗೆ ಮದುವೆ ಮಾಡಿ ಕೊಟ್ಟಿತ್ತಷ್ಟೆ ! ಆ ದಕ್ಷಪತ್ನಿ ಪ್ರಸೂತಿಯು ಇಪ್ಪತ್ತು ನಾಲ್ಕು ಜನ ಹೆಣ್ಣು ಮಕ್ಕಳನ್ನು ಪ್ರಸೂತಳಾದಳು. ಅವರ ಹೆಸರು ಹೇಳುತ್ತೇನೆ ಕೇಳು :-

ಶ್ರದ್ಧೆ, ಲಕ್ಷ್ಮಿ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ, ಕೀರ್ತಿ ಇವರು ಹದಿಮೂರು ಜನರು. ಈ ಹದಿಮೂರು ಜನ ಕನ್ಯೆಯರನ್ನು ದಕ್ಷಪ್ರಜಾಪತಿಯು ಧರ್ಮಾತ್ಮನಾದ ಧರ್ಮ ಎಂಬ ಮುನಿಗೆ ಮದುವೆ ಮಾಡಿಕೊಟ್ಟನು. ಈ ಹದಿಮೂರು ಜನ ಹೆಣ್ಣು ಮಕ್ಕಳಲ್ಲದೆ, ದಕ್ಷಪ್ರಜಾಪತಿಗೆ ಖ್ಯಾತಿ, ಶಾಂತಿ, ಸಂಭೂತಿ, ಸ್ಮೃತಿ, ಕ್ಷಮಾ, ಪ್ರೀತಿ, ಸನ್ನತಿ, ಅನಸೂಯಾ, ಸ್ವಾಹಾ, ಸ್ವಧಾ, ಊರ್ಜಾ ಎಂದು ಹನ್ನೊಂದು ಜನ ಹೆಣ್ಣು ಮಕ್ಕಳೂ ಇದ್ದರು ಇವರಲ್ಲಿ ದಕ್ಷಪ್ರಜಾಪತಿಯು ಖ್ಯಾತಿ ಎಂಬ ತನ್ನ ಕನ್ಯೆಯನ್ನು ಭೃಗುಋಷಿಗೆ ಮದುವೆ ಮಾಡಿಕೊಟ್ಟನು. ಶಾಂತಿಯನ್ನು ಭಗನಿಗೂ ಸಂಭೂತಿಯನ್ನು ಮರೀಚಿಗೂ ಸ್ಮೃತಿಯನ್ನು ಅಂಗಿರಸಋಷಿಗೂ ಪ್ರೀತಿಯನ್ನು ನನಗೂ (ಪುಲಸ್ತ್ಯ) ಕ್ಷಮೆಯನ್ನು ಪುಲಹ ಮುನಿಗೂ, ಸನ್ನತಿಯನ್ನು ಕ್ರತುಮಹರ್ಷಿಗೂ, ಅನುಸೂಯೆಯನ್ನು ಅತ್ರಿಋಷಿಗಳಿಗೂ, ಊರ್ಜೆಯನ್ನು ವಶಿಷ್ಠರಿಗೂ, ಸ್ವಾಹಾಳನು ಅಗ್ನಿದೇವನಿಗೂ ಸ್ವಧೆಯನ್ನು ಪಿತೃದೇವತೆಗಳಿಗೂ ಮದುವೆ ಮಾಡಿಕೊಟ್ಟನು. ಹೀಗೆ ದಕ್ಷ ಪ್ರಜಾಪತಿಯು ತನ್ನ ಇಪ್ಪತ್ನಾಲ್ಕು ಕನ್ಯಾಮಣಿಗಳಿಗೂ ಯೋಗ್ಯರಾದ ವರಗಳನ್ನು ನೋಡಿ, ವಿಧಿಪೂರ್ವಕವಾಗಿ ವಿವಾಹ ಮಾಡಿಕೊಟ್ಟನು. ಧರ್ಮ ಮುನಿಗೆ ಕೊಟ್ಟ ದಕ್ಷ ಪ್ರಜಾಪತಿಯ ಹದಿಮೂರು ಜನ ಹೆಣ್ಣು ಮಕ್ಕಳು ಹೆತ್ತು ಬೆಳೆಸಿದ ಸಂತತಿಯನ್ನು ಹೇಳುತ್ತೇನೆ ಕೇಳು :-

ಧರ್ಮನ ಕೈಹಿಡಿದ ಹದಿಮೂರು ಜನ ದಾಕ್ಷಾಯಣಿಯರಲ್ಲಿ ಹಿರಿಯಳಾದ ಶ್ರದ್ಧೆಗೆ ಕಾಮ ಎಂಬ ಮಗನು ಹುಟ್ಟಿದನು. ಧರ್ಮನ ಎರಡನೆಯ ಧರ್ಮಪತ್ನಿ ಲಕ್ಷ್ಮಿಯು ದರ್ಪ ಎಂಬ ಮಗನಿಗೆ ಜನ್ಮವಿತ್ತಳು. ಮೂರನೆಯ ಧರ್ಮಪತ್ನಿ ಧೃತಿಯು ನಿಯಮವನ್ನು

ಹೆತ್ತಳು. ನಾಲ್ಕನೆಯವಳಾದ ತುಷ್ಟಿಯು ಸಂತೋಷನನ್ನು, ಐದನೆಯವಳಾದ ಪುಷ್ಟಿಯು ಲೋಭನನ್ನೂ ಮೇಧಾ ಎಂಬ ಮಡದಿಯು ಶ್ರೀ ಎಂಬ ಕನ್ಯೆಯನ್ನು, ಕ್ರಿಯಾ ಎಂಬ ಕಾಂತೆಯು ದಂಡ ಎಂಬ ವಿನಯಶಾಲಿತನಯನನ್ನು, ಧರ್ಮನ ಬುದ್ಧಿ ಎಂಬ ಭಾರ್ಯೆಯು ಬೋಧ ಎಂಬ ಮಗನನ್ನು, ಲಜ್ಜೆ ಎಂಬ ಲಲನೆಯು ವಿನಯ ಎಂಬ ಪುತ್ರನನ್ನು, ವಪು ಎಂಬ ಮಡದಿಯು ವ್ಯವಸಾಯ ಎಂಬ ಮಗನನ್ನು ಮತ್ತು ಕ್ರಿಯಾ ಎಂಬ ಮಗಳನ್ನು, ಶಾಂತಿ ಎಂಬ ಧರ್ಮಪತ್ನಿಯು ಕ್ಷೇಮ ಎಂಬ ಮಗನನ್ನು, ಸಿದ್ಧಿ ಎಂಬ ಧರ್ಮಪತ್ನಿಯು ಸಖ ಎಂಬ ಸತ್ಪುತ್ರನನ್ನು ಕೀರ್ತಿ ಎಂಬ ಕಾಮಿನಿಯು ಯಶಸ್ಸು ಎಂಬ ಗಂಡು ಮಗುವನ್ನು ಹಡೆದರು. ಹೀಗೆ ಹದಿಮೂರು ಜನ ದಾಕ್ಷಾಯಣಿಯರಿಂದ ಧರ್ಮನಿಗೆ ಒಳ್ಳೆ ಸಂತಾನ ಪ್ರಾಪ್ತಿಯಾಯಿತು. ಶುದ್ಧಾದೇವಿಯಿಂದ ಹುಟ್ಟಿದ ಕಾಮ ಎಂಬ ಧರ್ಮಪುತ್ರನಿಗೆ ನಂದಿನಿ ಎಂಬ ಸುಂದರಿಯಲ್ಲಿ ಹರ್ಷ ಎಂಬ ಮಗನು ಹುಟ್ಟಿದನು. ಆ ಧರ್ಮನಿಗೆ ಹಿಂಸೆ ಎಂಬ ಹೆಂಡತಿಯಿದ್ದಳು.

ಅವಳಲ್ಲಿ ಆ ಧರ್ಮನಿಗೆ ಅನೃತ ಎಂಬ ಮಗನೂ ನಿಕೃತಿ ಎಂಬ ಹೆಣ್ಣು ಮಗಳೂ ಹುಟ್ಟಿದರು. ಅಣ್ಣ ಅನೃತನು ತನ್ನ ತಂಗಿ ನಿಕೃತಿಯನ್ನೇ ಮಡದಿಯನ್ನಾಗಿ ಮಾಡಿಕೊಂಡನು. ಅನೃತ-ನಿಕೃತಿ ಸೋದರ ದಂಪತಿಗಳಿಂದ ಭಯ, ನರಕ ಎಂಬ ಗಂಡು ಮಕ್ಕಳು, ಮಾಯಾ, ವೇದನಾ ಎಂಬ ಹೆಣ್ಣು ಮಕ್ಕಳು ಜನಿಸಿದರು. ತಮ್ಮ ಮನೆತನದ ಸಂಪ್ರದಾಯದಂತೆ ಮಾಯೆಯು ತನ್ನ ಅಣ್ಣನಾದ ಭಯನನ್ನೇ ಕೈ ಹಿಡಿದು ಗಂಡನನ್ನಾಗಿ ಮಾಡಿಕೊಂಡಳು. ವೇದನೆಯು ಮತ್ತೊಬ್ಬ ಅಣ್ಣ ನರಕನನ್ನು ಮೋಹಿಸಿ ಅವನ ಮಡದಿಯಾದಳು. ಮಾಯಾವಿನಿಯಾದ ಮಾಯೆಯ ಭಯನಿಂದ ಮೃತ್ಯುವನ್ನೇ ಪುತ್ರನನ್ನಾಗಿ ಹೆತ್ತಳು. ವೇದನೆಯು ನರಕನಿಂದ ದುಃಖವನ್ನು ಹಡೆದಳು. ಭಯ ಪುತ್ರನಾದ ಮೃತ್ಯುವಿಗೆ ಮುಪ್ಪು, ದುಃಖ, ಆಶೆ, ಚಿಂತೆ, ಕೋಪ ಎಂದು ಐದು ಜನ ಮಕ್ಕಳು ಹುಟ್ಟಿದರು. ಜನಕೋಟಿಯಲ್ಲಿ ದುಃಖದ ದಳ್ಳುರಿಯನ್ನು ಹಬ್ಬಿಸುವ ಇವರೆಲ್ಲರೂ ಅಧರ್ಮದ ಹೆಗ್ಗುರುತು ಆಗಿದ್ದಾರೆ. ಇವರಿಗೆ ಮಡದಿ ಮಕ್ಕಳಿಲ್ಲ. ಇವರೆಲ್ಲರೂ ನೈಷ್ಠಿಕ ಬ್ರಹ್ಮಚಾರಿಗಳು. ಇವರೆಲ್ಲರೂ ಜೀವರಾಶಿಗಳ ಸಕಾಲಿಕ ಸಂಹಾರ ಕಾರ್ಯದಲ್ಲಿ ಪ್ರವೃತ್ತವಾದ ಭಗವಂತನ ರುದ್ರರೂಪ ಪ್ರತಿನಿಧಿಗಳು ಎಂದು ತಿಳಿಯತಕ್ಕದ್ದು.

ಇನ್ನು ಮುಂದೆ ಬ್ರಹ್ಮದೇವರು ರುದ್ರ ಸೃಷ್ಟಿಯನ್ನುಮಾಡಿದ ಕ್ರಮವನ್ನು ಹೇಳುತ್ತೇನೆ ಕೇಳು :- ಕಲ್ಪದ ಆದಿಕಾಲದಲ್ಲಿ ಬ್ರಹ್ಮದೇವರು ತನ್ನಂತೆಯೇ ಇರುವ ಒಬ್ಬ ಮಗನನ್ನು ಹಡೆಯಬೇಕೆಂದು ಧ್ಯಾನಾಸಕ್ತನಾಗಿದ್ದನು. ಆಗ ಅವನ ತೊಡೆಯಿಂದ ನಿಲೀಮ ಕಾಂತಿ ಮಿಶ್ರವಾದ ಹೊಂಬಣ್ಣದಿಂದ ಹೊಳೆಯುವ ಕುಮಾರನು ಉದಿಸಿ ಬಂದನು. ಹುಟ್ಟಿದ ಕೂಡಲೇ ಆ ಬ್ರಹ್ಮಕುಮಾರನು ಅಳತೊಡಗಿದನು. ಆದರೆ ಆಶ್ಚರ್ಯದ ಮಾತೆಂದರೆ ಆ ಎಳೆ ಮಗುವಿನ ರೋದನವೂ ಕೂಡ ಒಳ್ಳೆ ಮಧುರವಾಗಿದ್ದಿತು. ಅಳುತ್ತ ಅತ್ತಿತ್ತ ಹರಿದಾಡುತ್ತಿರುವ ಆ ಮಗುವನ್ನು ಕಂಡು ಆ ಬ್ರಹ್ಮದೇವರು ಕೇಳಿದರು - ''ನೀನು ಏಕೆ ಅಳುವೆ ?'' ಅದಕ್ಕೆ ಆ ಮಗುವು -

''ನನಗೆ ಏನಾದರೂ ಹೆಸರು ಕೊಡು''-ಎಂದು ಕೇಳಿತು. ಆಗ ಬ್ರಹ್ಮದೇವರು ಆ ಕೂಸಿಗೆ ''ನೀನು ರೋದನ ಮಾಡುತ್ತ ಆಚೀಚೆ ಹರಿದಾಡುತ್ತಲಿರುವೆ. ಆದ್ದರಿಂದ ನಿನಗೆ ''ರುದ್ರ'' ಎಂಬ ದೇವತಾ ನಾಮವಿರಲಿ. ನೀನು ಅಳಬೇಡ, ಧೈರ್ಯ ತಾಳು'' ಎಂದು ಹೇಳಿದರು.

ಬ್ರಹ್ಮದೇವರು ಹೀಗೆ ತಿಳಿ ಹೇಳಿದರೂ ಆ ಮಗುವು ಮತ್ತೆ ಅಳತೊಡಗಿತು. ಒಂದು ಸಲ ಅಲ್ಲ, ಏಳು ಬಾರಿ ಮಧುರವಾಗಿ ರೋದನಮಾಡಿದ ಆ ಮಗುವಿಗೆ ಬ್ರಹ್ಮದೇವರು ಮತ್ತೆ ಬೇರೆ ಬೇರೆ ಏಳು ಹೆಸರುಗಳನ್ನು ಕೊಟ್ಟರು. ಹೀಗೆ ಮೊದಲಿನ ರುದ್ರನನ್ನು ಹಿಡಿದು ಒಟ್ಟು ಎಂಟು ಜನ ರುದ್ರರು ಆದರು. ಅವರಿಗೆ ಬ್ರಹ್ಮದೇವರು ಕೊಟ್ಟ ಹೆಸರುಗಳು :- ಭವ, ಶರ್ವ, ಈಶಾನ, ಶಿವ, ಪಶುಪತಿ, ಭೀಮ, ಉಗ್ರ, ಮಹಾದೇವ. ನಂತರ ಇವರಿಗೆ ಸೂರ್ಯ, ಜಲ, ಭೂಮಿ, ಅಗ್ನಿ; ವಾಯು, ಆಕಾಶ, ದೀಕ್ಷಿತಬ್ರಾಹ್ಮಣ, ಚಂದ್ರ ಈ ಎಂಟು ಸ್ಥಾನಗಳನ್ನು ಕೊಟ್ಟು ಅವುಗಳನ್ನೇ ಅವನಿಗೆ ದೇಹವನ್ನಾಗಿ ಮಾಡಿದನು. ಸುವರ್ಚಲಾ, ಉಷಾ, ಸುಕೇಶಿ, ಶಿವಾ, ಸ್ವಾಹಾ, ಆದೇಶಾ, ದೀಕ್ಷಾ, ರೋಹಿಣಿ ಎಂಬ ಎಂಟು ಜನ ಸ್ತ್ರೀಯರನ್ನು ರುದ್ರದೇವರ ದೇಹಭೂತರಾದ ಸೂರ್ಯಾದಿಗಳಿಗೆ ಪತ್ನಿಯರನ್ನಾಗಿ ಮಾಡಿದನು. ಇವರಿಗೆ ಶನಿ, ಶುಕ್ರ, ಅಂಗಾರಕ, ಮನೋಜವ, ಸ್ವರ್ಗ, ಸ್ಕಂದ, ಸಂತಾನ, ಬುಧ ಎಂಟು ಎಂಟು ಜನ ಮಕ್ಕಳು ಜನಿಸಿದರು.

ಇವರಲ್ಲದೆ ಮಹಾದೇವರು, ಸತೀ ಎಂಬ ದಕ್ಷಪ್ರಜಾಪತಿಯ ಮಗಳನ್ನು ಪತ್ನಿ ಎಂದು ಪರಿಗ್ರಹಿಸಿದ್ದರು. ತಂದೆಯ ಮೇಲಿನ ಕೋಪದಿಂದ ಅವಳು ದಕ್ಷನು ಜನ್ಮವಿತ್ತ ತನ್ನ ದೇಹವನ್ನು ತ್ಯಾಗಮಾಡಿದಳು. ಅನಂತರ ಅವಳು ಹಿಮಗಿರಿಯ ಮೀನಾ ಎಂಬ ಮಾನಿನಿಯಲ್ಲಿ ಪಾರ್ವತಿಯಾಗಿ ಮರಳಿ ಹುಟ್ಟಿಬಂದಳು. ಅವಳನ್ನು ಮಹಾದೇವರು ತಾನಾಗಿ ಹೋಗಿ ತನಗೆ ಮದುವೆಮಾಡಿ ಕೊಡಬೇಕೆಂದು ಕೇಳಿ ಅವಳನ್ನು ವಿವಾಹವಾದರು. ಭೃಗು ಮುನಿಯಿಂದ ಖ್ಯಾತಿ ದೇವಿಯಲ್ಲಿ ಧಾತಾ, ವಿಧಾತಾ ಎಂಬ ಗಂಡು ಮಕ್ಕಳು ಹುಟ್ಟಿದರು. ಮತ್ತು ದೇವೋತ್ತಮನಾದ ಭಗವಾನ್ ವಾಸುದೇವನ ಧರ್ಮಪತ್ನಿ ಶ್ರೀದೇವಿಯು ಇದೇ ಖ್ಯಾತಿ ಭೃಗು ದಂಪತಿಗಳಿಗೆ ಕನ್ಯಾಮಣಿಯಾಗಿ ಹುಟ್ಟಿ ಬಂದಳು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪ್ರಳಯಕಾಲ ವರ್ಣನೆ, ಪ್ರಜಾಪತಿಗಳ ಉತ್ಪತ್ತಿ ಮೂರನೇ ಅಧ್ಯಾಯ ಮುಗಿದುದು*



**॥ ಭೀಷ್ಮ ಉವಾಚ ॥**

**"ಕ್ಷೀರಾಬ್ಧೌತು ತು ತದಾಜಾತಾಕೀರ್ತಿತಾಕಮಲಾಪ್ರಭೋ ।**
**ಖ್ಯಾತ್ಯಾಂ ಭೃಗೋಸ್ಸಮುತ್ಪನ್ನಾ ಏತದಾಹಕಥಂಭವಾನ್ ॥"**

ಪುಲಸ್ತ್ಯ ಪ್ರಭುಗಳೇ, ಲಕ್ಷ್ಮಿಯು ಹಾಲ್ಗಡಲಿನಿಂದ ಹುಟ್ಟಿ ಬಂದಳೆಂದು ಜ್ಞಾನಿಗಳು ಅವಳನ್ನು ಹೊಗಳುತ್ತಾರೆ. ಈಗ ನೀವು ದಕ್ಷ ಕುಮಾರಿಯಾದ ಖ್ಯಾತಿ ದೇವಿಯಲ್ಲಿ ಭೃಗು ಮುನಿಯಿಂದ ಜನಿಸಿ ಬಂದಳು ಎಂದು ಹೇಳುತ್ತಲಿದ್ದೀರಿ. ಇದು ಹೇಗೆ ? ಇದರಂತೆ ದಕ್ಷನ ಮಗಳಾದ ಸತಿದೇವಿಯು ತನ್ನ ದೇಹವನ್ನು ಹೇಗೆ ತೊರೆದಳು. ಮತ್ತು ಹಿಮವಂತನ ಮಡದಿಯಾದ ಮೇನಾದೇವಿಯಲ್ಲಿ ಉಮೆಯಾಗಿ ಏಕೆ ಹುಟ್ಟಿದಳು ? ಈ ಮಮಹೈತಿಯನ್ನು ಮಹಾದೇವನು ಏಕೆ ಮದುವೆಯಾದನು ? ರುದ್ರನಿಗೂ ದಕ್ಷನಿಗೂ ವಿರೋಧ ಬೆಳೆಯಲು ಕಾರಣವೇನು ? ಇದೆಲ್ಲವನ್ನು ನಿರೂಪಿಸಿರಿ.

**ಪುಲಸ್ತ್ಯ :-** ಭೂಮಿಯೊಡೆಯನಾದ ಭೀಷ್ಮ, ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತೇನೆ ಕೇಳು. ಈ ಶ್ರೀದೇವಿಯ ವಿಷಯದಲ್ಲಿ ನಾನು ಬ್ರಹ್ಮದೇವರಿಂದ ಕೇಳಿ ತಿಳಿದು ಕೊಂಡಿದ್ದೇನೆ, ತಾವರೆಯೇ ತವರುಮನೆಯಾದ ತಾಯಿ ಶ್ರೀದೇವಿಯ ಆ ಕೌತುಕದ ಕಥೆಯನ್ನು ನಿನಗೆ ಬಿತ್ತರಿಸುತ್ತೇನೆ ಕೇಳು.

ಅತ್ರಿ ಮಹರ್ಷಿಯ ಪುತ್ರನಾದ ದೂರ್ವಾಸರು ದೊಡ್ಡ ತಪಸ್ವಿ, ಹಿಂದೊಮ್ಮೆ ಅವರು ಭೂಮಂಡಲದಲ್ಲಿ ಸಂಚಾರ ಕೈಗೊಂಡಿದ್ದರು. ದಾರಿಯಲ್ಲಿ ಓರ್ವ ವಿದ್ಯಾಧರ ಸುಂದರಿಯು ಎದುರಾದಳು. ಅವಳ ಕೈಯಲ್ಲಿ ನಂದನವನದಲ್ಲಿ ಬೆಳೆದ ಮಂದಾರ ಪುಷ್ಪಗಳ ಒಂದು ಸುಂದರವಾದ ಹಾರವು ಇದ್ದಿತು. ಅದರ ಅಂದ-ಚೆಂದ ಹಾಗೂ ಮಧುರ ಸುಗಂಧಗಳನ್ನು ಮೂಸಿನೋಡಿ, ದೂರ್ವಾಸರಿಗೆ ಪರಮಾನಂದವಾಯಿತು. ಬಾಯಿ ತೆರೆದು ಆ ಸುರಭಿ ಕುಸುಮಗಳ ಮಾಲೆಯನ್ನು ತಮಗೆ ಕೊಡಬೇಕೆಂದು ಆ ವಿದ್ಯಾಧರವನಿತೆಗೆ ಕೈಯೊಡ್ಡಿ ಕೇಳಿದರು. ಚೆಲುವಿನ ಚಿಟ್ಟೆಯಂತಿದ್ದ ಆ ಚಪಲೆಯು, ಕೇಳಿದ ತಕ್ಷಣ ಆ ಸುಗಂಧಹಾರವನ್ನು ಕೊಟ್ಟು ಮುನಿಗೆ ವೈಯ್ಯಾರದಿಂದ ತಲೆಬಾಗಿ ನಮಸ್ಕರಿಸಿದಳು. ತಮ್ಮ ಅಡಿದಾವರೆಗೆ ಮುಡಿ ಹಚ್ಚಿ ನಮಿಸುವ ಆ ಚಿಗರುಗಳ ಚೆಲುವೆಯ ಕಣ್ಣು, ಬಣ್ಣ, ಥಳಕು ನೋಡಿ ಮುನಿಯ ಮನ ಕದಡಿತು. ಹಾರವನ್ನು ಕೊಡಲು ಬಾಗಿದ ಆ ಹೆಣ್ಣಿನ ಅಲಂಕಾರ, ಶೃಂಗಾರ, ನಿಲುವು, ಚೆಲುವು, ಉಬ್ಬಿದ ಎದೆ ಬಾಗಿದ ಬೆನ್ನು ಹಾರಾಡುವ ಮುಂಗುರುಳುಗಳು ಇವುಗಳನ್ನು ಕಂಡು ಮಹರ್ಷಿಗಳ ಚಿತ್ತದಲ್ಲಿ ಏನೋ ಒಂದು ತರಹದ ವಿಕಾರದ ಪ್ರಕಾರವು ಹೊಳವು ದೋರಿತು. ತಮ್ಮ ಈ ಚಿತ್ತ ಚಾಂಚಲ್ಯವನ್ನು ತುಳಿದು ತಡೆದ ಆ ಮಹಾತಪಸ್ವಿಗಳಾದ ಮುನಿಪುಂಗವರ ವಿವೇಕವು ತಕ್ಷಣ ಜಾಗ್ರತವಾಯಿತು. ಆಗಲೇ ಅವರು ಜಾರುತ್ತಿರುವ ಹೃದಯವನ್ನು ಸಾವರಿಸಿಕೊಂಡು "ಈಗ ಮಂಗ ಮನಸ್ಸು ಈ ಅಂಗನೆಯ ಆಕರ್ಷಕ ಭಂಗಿಗೆ ಮರುಳಾದರೂ ನಾನು ಅದನ್ನು ಸ್ವಚ್ಛಂದವಾಗಿ ಹರಿಬಿಡಲಾರೆ. ಕಾಮನಿಗೆ ನನ್ನ ಹೃದಯದಲ್ಲಿ ಎಂದೂ ಪ್ರವೇಶ ಕೊಡಲಾರೆ" ಎಂದು ತಮ್ಮ ಜೀತೇಂದ್ರಿಯತೆಯನ್ನೂ ವೈರಾಗ್ಯಭಾಗ್ಯವನ್ನೂ ಪ್ರದರ್ಶಿಸುತ್ತ ಅಲ್ಲಿಂದ ಬೇರೆ ಕಡೆಗೆ

ತೆರಳಿದರು. ಮನಸ್ಸಿನಿಂದ ಆ ಹೆಣ್ಣಿನ ಚಿತ್ತಾರವನ್ನು ತೆಗೆದುಹಾಕಿ ನಿಷ್ಕಾಮರಾಗಿ, ನಿಷ್ಕಲ್ಮಷರಾಗಿ ಮತ್ತೆ ಸಂಚಾರ ಕೈಕೊಂಡರು.

ಹೀಗೆ ಇಂದ್ರಿಯಗಳನ್ನು ಮನಸ್ಸು ಗೆದ್ದುಸಿದ್ಧಿ ಶಿಖರದಲ್ಲಿ ನಲಿದಾಡುವ ಆ ತಪೋಧನರು ದೇಶಸಂಚಾರವನ್ನು ಮುಂದುವರಿಸಿದಾಗ ದಾರಿಯಲ್ಲಿ ದೇವೇಂದ್ರ ಅವರಿಗೆ ಎದುರಾದನು. ಆ ಸುರ ಸಾಮ್ರಾಟನು ತನ್ನ ಪ್ರೀತಿಯ ಪಟ್ಟದಾನೆಯನ್ನು (ಐರಾವತ) ಆರೋಹಣಮಾಡಿಕೊಂಡು ಶಚಿದೇವಿಯೊಂದಿಗೆ ಬರುತ್ತಲಿದ್ದನು. ಅವನನ್ನು ಕಂಡ ದೂರ್ವಾಸ ಋಷಿಗಳು ತಮ್ಮ ಜಟಾಕಲಾಪದಲ್ಲಿ ಮುಡಿದ ಮಂದಾರ ಮಾಲೆಯನ್ನು ತೆಗೆದು ದೇವರಾಜನಾದ ಇಂದ್ರನ ಮೇಲೆ ಹುಚ್ಚನಂತೆ ಎಸೆದುಬಿಟ್ಟರು. ಅದರಲ್ಲಿಯ ಹೂಗಳ ಹೆಜ್ಜೇನು ಹೀರಿ ಮದತುಂಬಿದ ದುಂಬಿಗಳ ಝೇಂಕಾರದಿಂದ ಮಾತನಾಡುವಂತಿರುವ ಆ ಮಂದಾರಮಾಲೆಯನ್ನು ಆ ಅಮರಲೋಕದ ಅರಸನು ತನ್ನ ಕೈಯಲ್ಲಿ ತೆಗೆದುಕೊಂಡು, ತಾನು ಆರೋಹಣಮಾಡಿದ ಐರಾವತ ಆನೆಯ ತಲೆಯ ಮೇಲೆ ಮುಡಿಸಿದನು. ಕೈಲಾಸ ಗಿರಿಶಿಖರದಲ್ಲಿ ಗಂಗೆಯು ಶೋಭಿಸುವಂತೆ ಆ ಅಚ್ಚ ಬಿಳಿಬಣ್ಣದ ಆನೆಯ ತಲೆಯ ಮೇಲೆ ಆ ಧವಲಹಾರವು ಶೋಭಿಸಿತು. ಮದಾಂಧವಾದ ಆ ಐರಾವತಕ್ಕೂ ಆ ಮಂದಾರ ಕುಸುಮಗಳ ಮರವಾಸನೆಯು ತಡೆಯದಂತಾಯಿತು. ಅದರ ಸೌಗಂಧವನ್ನು ತಾಳಲಾರದೆ, ಆ ಮದ್ದಾನೆಯು ತನ್ನ ಸೊಂಡಲನ್ನು ಕುಂಡಲಾಕಾರವಾಗಿ ಮಣಿಸಿ ತನ್ನ ಮೌಳಿಯಲ್ಲಿ ಮುಡಿಸಿದ ಆ ಮಂದಾರಮಾಲೆಯನ್ನು ಸೆಳೆದು ನೆಲದ ಮೇಲೆ ಬಿಸಾಕಿತು. ಇದರಿಂದ ಗುರುಶ್ರೇಷ್ಠರಾದ ಪೂಜ್ಯ ದೂರ್ವಾಸರಿಗೆ ಕೋಪ ಬಂದಿತು. ಕೆಂಪಡರಿದ ಕಣ್ಣುಗಳಿಂದ ದೇವತೆಗಳ ದೊರೆಯನ್ನು ಕೆಕ್ಕರಿಸಿ ನೋಡಿ ಅಂದರು :-

**ದೂರ್ವಾಸ** :- ಸುರರಾಜ, ಐಶ್ವರ್ಯದ ಮದ ನಿನ್ನ ತಲೆಗೇರಿದೆ. ಸಂಪತ್ತಿನ ಹೆಚ್ಚಳದಿಂದ ನಿನಗೆ ಹುಚ್ಚು ಹಿಡಿದಂತಾಗಿದೆ. ಅಧಿಕಾರವು ದೇವತಾ ಸಾರ್ವಭೌಮನಾದ ನಿನ್ನನ್ನು ದುಷ್ಟನನ್ನಾಗಿ ಮಾಡಿದೆ. ನಾನು ನಿನಗೆ ಕೊಟ್ಟ ಮಾಲೆಯು ಸಾಮಾನ್ಯವಾದುದಲ್ಲ. ಇದು ಸಿರಿಯ ನೆಲೆ, ಸೌಭಾಗ್ಯದ ಸೆಲೆ, ನಾನು ಅನುಗ್ರಹಿಸಿ ಕೊಟ್ಟ ಈ ಭಾಗ್ಯ ಶ್ರೀ ಹಾರವನ್ನು ನೀನು ತಿರಸ್ಕಾರಮಾಡಿದೆ. ಮೂಢನಾದ ಮಹೇಂದ್ರನೆ, ಇನ್ನು ನಿನ್ನಲ್ಲಿ ಸಿರಿ ನಿಲ್ಲಲಾರಳು. ಮೂರು ಲೋಕದ ಆಧಿಪತ್ಯ ನಿನಗಿನ್ನು ಉಳಿಯಲಾರದು. ಇನ್ನು ನಿನಗೆ ಅಳಿಗಾಲವು ಬಂದಿದೆ. ನಾನು ಕೊಟ್ಟ ಮಾಲೆಯನ್ನು ನೀನು ಮಣ್ಣಿಗೆ ಎಸೆದಿದ್ದರಿಂದ ನಿನ್ನ ಸೌಭಾಗ್ಯವೇ ಮಣ್ಣುಪಾಲಾಯಿತೆಂದು ತಿಳಿ. ಯಾರು ಕೋಪಗೊಂಡರೆ, ಚರಾಚರ ಪ್ರಪಂಚವೇ ಭಯದಿಂದ ಗಡಗುಟ್ಟಿ ನಡುಗುವದೋ ಅಂಥ ಚಂಡಪ್ರಕೋಪನಾದ ದೂರ್ವಾಸಮುನಿಗೆ ಧಿಕ್ಕರಿಸಿ ನಡೆದಿರುವೆ. ಇದರ ಫಲ ಅಧಿಕಾರ ಭ್ರಂಶ, ಐಶ್ವರ್ಯ ಧ್ವಂಸ, ಸೌಭಾಗ್ಯ ನಾಶ.

ಕೋಪಾಟೋಪದಿಂದ ಜಡೆ ಅಪ್ಪಳಿಸಿ, ಮಾತನಾಡುವ ಆ ಮುನಿವರ್ಯರ ಬಿರುನುಡಿಗಳನ್ನು ಕೇಳಿ ಸುರರಾಜನು ಹೆದರಿ ಹೌಹಾರಿದನು. ಕೂಡಲೇ ಐರಾವತದ ಹೆಗಲ ಮೇಲಿಂದ ಕೆಳಗೆ ಹಾರಿ, ಆ ಮುನಿಪುಂಗವರ ಚರಣ ಕಮಲಗಳಿಗೆ ತನ್ನ ಹಣೆಯನ್ನು ಹಚ್ಚಿ ಚಾಚಿದನು. "ಕ್ಷಮಿಸಿರಿ" ಎಂದು ಪ್ರಾರ್ಥಿಸಿದನು. ಅವರ ಪಾದಮುಟ್ಟಿ "ಪ್ರಸನ್ನರಾಗಿರಿ" ಎಂದು ಅಂಗಲಾಚಿದನು. ಕೋಪೋದ್ರೇಕದಿಂದ ಕಂಪಿಸುವ ಆ ಮಹರ್ಷಿಗಳು ಸುರರಾಜನಿಗೆ ನುಡಿದರು :-

''ಇಂದ್ರ, ನೀನು ಸಾವಿರ ಮಾತು ಹೇಳು. ನನ್ನ ಸಿಟ್ಟು ಶಾಂತವಾಗುವುದಿಲ್ಲ. ನಿನ್ನ ಅಪರಾಧವನ್ನು ಕ್ಷಮಿಸಲಾರೆ. ಸುಮ್ಮನೆ ದೀನನಾಗಿ ಏಕೆ ಅಂಗಲಾಚುವೆ'' ಎಂದು ನುಡಿದು ಶಚೀಪತಿಯನ್ನು ಕ್ಷಮಿಸದೆ ಬಿರುಗಾಳಿಯಂತೆ ಬಿಮ್ಮನೆ ಹೊರಟುಹೋದರು. ನಿರಾಶನಾದ ಆ ಅಮರಾವತಿಯ ಅರಸನು ಐರಾವತವನ್ನು ಏರಿಕೊಂಡು ತನ್ನ ರಾಜಧಾನಿಗೆ ತೆರಳಿದನು.

ಅಂದಿನಿಂದಲೇ ಶುರುವಾಯಿತು ಮಹೇಂದ್ರನ ಅಳಿಗಾಲ. ಅವನ ಮುಖದ ಮೇಲಿನ ಕಲೆ ಕುಂದಿತು. ಐಶ್ವರ್ಯವೆಲ್ಲ ಹೋಯಿತು. ಮೂರು ಲೋಕಗಳೇ ನಿಸ್ತೇಜವಾದವು. ದೇವೇಂದ್ರನ ಅಧಿಕಾರದಲ್ಲಿದ್ದ ದೇಶಗಳಿಗೆಲ್ಲ ಅರಿಷ್ಟವು ಬಡಿದುಕೊಂಡಂತಾಯಿತು. ಯಜ್ಞಗಳು ನಿಂತುಹೋದವು. ತಪಸ್ವಿಗಳ ತಪೋನುಷ್ಠಾನವು ಸಾಗರದಂತಾಯಿತು. ದಾನ-ಧರ್ಮಗಳು ಇಲ್ಲದಂತಾದವು. ಸಮಗ್ರ ಪ್ರಪಂಚವೇ ಅವಲಕ್ಷಣಕಳೆಯಿಂದ ಆತ್ಮಶ್ರೀಯನ್ನು ಕಳೆದುಕೊಂಡು ಪ್ರೇತಪ್ರಾತವಾಯಿತು.

ಇದನ್ನು ತಿಳಿದು ದೈತ್ಯ-ದಾನವರು ದೇವಲೋಕದ ಮೇಲೆ ಏರಿ ಬಂದರು. ಆಗ ನಡೆದ ಸುರಾಸುರ ಸಂಗ್ರಾಮದಲ್ಲಿ ವಿಜಯಲಕ್ಷ್ಮಿ ದೈತ್ಯರಿಗೆ ಒಲಿದಳು. ಅಪಜಯದ ಅಪಮಾನವನ್ನು ತಲೆಯಮೇಲೆಹೊತ್ತು ಅಮರರೆಲ್ಲರೂ ಅಗ್ನಿಯನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರಿಗೆ ಶರಣು ಹೋದರು. ತಮ್ಮ ಎದೆಯ ಅಳಲನ್ನೆಲ್ಲ ಅವನೆದುರು ತೋಡಿಕೊಂಡರು. ಸೋಲಿನಿಂದ ಸೋತು ಹೋದ ಆ ಸುರೇಶ್ವರರನ್ನು ನೋಡಿ ಬ್ರಹ್ಮದೇವರ ಮನಮಿಡಿಯಿತು. ಅವರು ಆ ಎಲ್ಲ ದೇವತೆಗಳನ್ನು ಕರೆದುಕೊಂಡು ಪರಮಾತ್ಮನು ಪವಡಿಸಿದ ಹಾಲ್ಗಡಲಿನ ಉತ್ತರ ತೀರಕ್ಕೆ ನಡೆದರು. ಅಲ್ಲಿ ನಿಂತು ಭಗವಾನ್ ಪೂಜ್ಯನಾದ ವಾಸುದೇವನನ್ನು ಕುರಿತು ಪ್ರಾರ್ಥನೆ ಮಾಡಿದರು.

**''ಉತ್ತಿಷ್ಠ ವಿಷ್ಣೋತ್ವಂ ಶೀಘ್ರಂ ದೇವಾನಾಂತು ಹಿತಂ ಕುರು**
**ತ್ವಯಾ ವಿನಾ ದಾನವೈಸ್ತು ಜಿತಾಃ ಸರ್ವೇ ಪುನಃ ಪುನಃ''**

''ವಿಷ್ಣುವೇ, ಬೇಗ ಏಳು, ದೇವತೆಗಳಿಗೆ ಕಲ್ಯಾಣವನ್ನುಂಟು ಮಾಡು. ನೀನು ಇಲ್ಲದ್ದರಿಂದ ದೈತ್ಯರು ಈ ದೇವತೆಗಳನ್ನು ಮತ್ತೆ ಮತ್ತೆ ಸೋಲಿಸಿದ್ದಾರೆ'' ಬ್ರಹ್ಮದೇವರ ಈ ಪ್ರಾರ್ಥನೆ ಕೇಳಿ, ಪೂಜ್ಯನಾದ ಕಮಲದಂತೆ ನೇತ್ರವುಳ್ಳ ಆ ಪುರುಷೋತ್ತಮನು ನುಡಿದನು :-

ದೇವತೆಗಳೆ, ಹೆದರಬೇಡಿರಿ. ನಿಮ್ಮ ತೇಜಸ್ಸು ಮೊದಲಿನಂತೆ ಅಭಿವೃದ್ಧಿಯಾಗುವಂತೆ ಮಾಡುತ್ತೇನೆ. ಇದಕ್ಕೆ ನಾನು ಉಪಾಯ ಹೇಳುತ್ತೇನೆ ಕೇಳಿರಿ - ನೀವು ಮೊದಲು ದೈತ್ಯರೊಡನೆ ಸ್ನೇಹ-ಸಂಬಂಧ ಬೆಳೆಸಿರಿ. ಸೌಹಾರ್ದ ಭಾವದಿಂದ ಅವರೊಡನೆ ಕೂಡಿಕೊಂಡು, ಈ ಹಾಲಿನ ಸಮುದ್ರದಲ್ಲಿ ಎಲ್ಲಾ ಔಷಧ ವನಸ್ಪತಿಗಳನ್ನೂ ತಂದುಹಾಕಿರಿ. ಮಂದಾರ ಪರ್ವತವನ್ನು ಕಡಗೋಲನ್ನಾಗಿ ಮಾಡಿ, ವಾಸುಕಿ ಸರ್ಪವನ್ನು ಹಗ್ಗದಂತೆ ಬಿಗಿದು ಸಮುದ್ರವನ್ನು ಕಡೆಯಿರಿ. ನನ್ನ ಸಹಾಯದಿಂದ ಅಮೃತವನ್ನು ಪಡೆಯಿರಿ. ಇದಕ್ಕಾಗಿ ದೈತ್ಯ ಧುರೀಣರೊಂದಿಗೆ ಸಂಭಾಷಣೆ ಗೈದು ಸಾಮೋಪಾಯದಿಂದ ಅವರ ಮನಒಲಿಸಿ, ಅವರೊಂದಿಗೆ ಒಂದುಗೂಡಿ ಸಂಯುಕ್ತ ಪ್ರಯತ್ನಮಾಡಿರಿ. ಸಮುದ್ರ ಮಂಥನದ ಈ ಮಹಾಕಾರ್ಯದಲ್ಲಿ ದೈತ್ಯರೆಲ್ಲರೂ ಉತ್ಸಾಹದಿಂದ ಭಾಗವಹಿಸುವಂತೆ ಅವರನ್ನು ಯುಕ್ತಿಯಿಂದ ಒಪ್ಪಿಸಿರಿ. ಈ ಹಾಲ್ಗಡಲನ್ನು ಕಡೆದು ಪಡೆದ ಅಮೃತದಿಂದ

ನೀವೆಲ್ಲರೂ ಅಮರರಾಗಿರಿ. ನಿಮ್ಮನ್ನು ದ್ವೇಷ ಮಾಡಿದ ದೈತ್ಯರಿಗೆ ಸಮುದ್ರ ಮಂಥನದಲ್ಲಿ ಬಂದ ಅಮೃತದಲ್ಲಿ ಒಂದು ಹನಿಯೂ ದೊರಕದಂತೆ ಮಾಡುವ ಕೆಲಸ ನನ್ನದು. ಮಂದಾರ ಮಂಥನದ ಕಷ್ಟ-ನಷ್ಟಗಳಿಗೆಲ್ಲ ಅವರು ಭಾಗಿಗಳಾಗಲಿ. ಆದರಿಂದ ಬಂದ ಅಮೃತಪಾನಕ್ಕೆ ನೀವು ಮಾತ್ರ ಭಾಗಿಗಳು. ಅಮೃತದ ಒಂದು ಹನಿಯೂ ದೈತ್ಯರಿಗೆ ದೊರಕದಂತೆ ಅಮೃತವೆಲ್ಲವೂ ಸಂಪೂರ್ಣವಾಗಿ ನಿಮಗೆ ಸಿಗುವಂತೆ ನಾನು ಮಾಡುತ್ತೇನೆ''.

ಜಗದೀಶ್ವರನ ಈ ಜಾಣ್ಮೆಯ ನುಡಿಕೇಳಿ ಸುರರಿಗೆಲ್ಲರಿಗೂ ಅತ್ಯಂತ ಸಂತಸ ವಾಯಿತು. ಅಮಿತ ಉತ್ಸಾಹ. ಪರಮಾತ್ಮನ ಆದೇಶದಂತೆ ಅವರೆಲ್ಲರೂ ಅಲ್ಲಿಂದ ಹೊರಟುಹೋದರು. ಅಸುರಕುಲದ ಮುಂದಾಳುಗಳೊಡನೆ ಸ್ನೇಹದಿಂದ ಸಂಧಿ ಮಾಡಿಕೊಂಡರು. ಅವರ ಗೆಳೆತನ ಬೆಳೆಸಿ ಅಮೃತವನ್ನು ಪಡೆಯಲು ಹಾಲ್ಗಡಲನ್ನು ಕಡೆಯಲು ಸಂಯುಕ್ತ ಪ್ರಯತ್ನ ಪ್ರಾರಂಭಿಸಿದರು. ದೇವ ದೈತ್ಯರೆಲ್ಲರೂ ಕೂಡಿದರು. ಜಗತ್ತಿನಲ್ಲಿರುವ ಔಷಧಿ ವನಸ್ಪತಿಗಳನ್ನು ಕಿತ್ತು ತಂದು ಹಾಲ್ಗಡಲಿನ ಒಡಲಿನಲ್ಲಿ ತುಂಬಿದರು. ಶರದೃತುವಿನ ಬಿಳಿಮುಗಿಲಿನಂತೆ ಧವಲದೀಧಿತಿಯಿಂದ ಘೂರ್ಮಿಸುವ ಕ್ಷೀರಸಾಗರದಲ್ಲಿ ಮಂದರಪರ್ವತವನ್ನು ಕಷ್ಟಪಟ್ಟು ತಂದಿರಿಸಿದರು. ಸರ್ಪಗಳ ಹಿರಿಯನಾದ ವಾಸುಕಿಯನ್ನು ಹಗ್ಗವಾಗಿ ಆ ಪರ್ವತದ ಬರಿಮೈಗೆ ಸುತ್ತಿ ಭರದಿಂದ ಕಡೆಯಲು ಪ್ರಾರಂಭಿಸಿದರು. ವಿಷ್ಣುವಿನ ಆದೇಶದಂತೆ ಬಾಲದ ಕಡೆಗೆ ದೇವತೆಗಳು ಸರ್ಪವನ್ನು ಹಿಡಿದರು. ಮುಖದ ಕಡೆ ದೈತ್ಯರು ನಿಂತುಕೊಂಡರು. ಹೀಗೆ ಇಬ್ಬದಿಯಲ್ಲಿ ದೇವ-ದಾನವರು ನಿಂತುಕೊಂಡರು. ಅಬ್ಬರದಿಂದ ಕಡೆಯ ತೊಡಗಿದಾಗ ಆ ವಾಸಕಿ ಸರ್ಪದ ಮುಖದಿಂದ ವಿಷಮಯವಾದ ನಿಟ್ಟುಸಿರು ಸೂಸತೊಡಗಿತು. ಬೆಂಕಿಯಂತಿರುವ ವಾಸುಕಿಯ ಆ ಶ್ವಾಸವಾಯುವಿನಿಂದ ದೈತ್ಯರೆಲ್ಲರೂ ಒಮ್ಮೆಲೆ ನಿಸ್ತೇಜರಾದರು. ವಾಸುಕಿಯ ನಿಟ್ಟುಸಿರಿನ ಅಲೆಗಳ ಹೊಡೆತಕ್ಕೆ ಹೊಡೆದು ಹಿಂದೂಡಲ್ಪಟ್ಟ ಮುಗಿಲಿನಲ್ಲಿಯ ಮೋಡ ಪಡೆಗಳು ಸರ್ಪದ ಬಾಲದ ಬದಿಯಲ್ಲಿ ಇರುವ ದೇವತೆಗಳ ಮೇಲೆ ತುಂತುರು ಹನಿಗಳ ಮಳೆಗರೆದು ತಂಪನ್ನುಂಟು ಮಾಡುತ್ತಲಿದ್ದವು. ಆದರಿಂದ ಅವರ ಉತ್ಸಾಹವು ಇಮ್ಮಡಿಸುತ್ತಿತ್ತು.

ಆ ಕ್ಷೀರ ಸಾಗರದ ಮಧ್ಯದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಬ್ರಹ್ಮದೇವರು, ಮಹಾದೇವರು ಇಬ್ಬರೂ ವಿಷ್ಣುವಿನ ಹಿಂದೆ ನಿಂತುಕೊಂಡರು. ಶ್ರೀವಿಷ್ಣುವು ತನ್ನ ಎರಡೂ ತೋಳುಗಳಿಂದ ಮಂದರಪರ್ವತವನ್ನು ನೀರಿನಲ್ಲಿ ಮುಳುಗದಂತೆ, ಕಡೆಯುವಾಗ ಹೊಯ್ದಾಡದಂತೆ ಗಟ್ಟಿಯಾಗಿ ಅಮುಕಿಹಿಡಿದನು. ಮತ್ತು ದೇವ-ದಾನವರ ಕೈಗಳಲ್ಲಿ ಬಲರೂಪದಿಂದ ತಾನೇ ಸನ್ನಿಹಿತನಾಗಿ, ತಾನೇ ಕಡೆಯತೊಡಗಿದನು. ಕೂರ್ಮರೂಪದಿಂದ ಕ್ಷೀರಸಾಗರದ ತಳದಲ್ಲಿ ನಿಂತು ಆ ಮಂದಾರಚಲವನ್ನು ಎತ್ತಿ ಹಿಡಿದನು. ತನ್ನ ದಿವ್ಯವಾದ ತೇಜಸ್ಸಿನಿಂದ ದೇವತೆಗಳಲ್ಲಿ ಬಲ, ಉತ್ಸಾಹ ತುಂಬಿದನು. ಒಟ್ಟಾರೆ ಶ್ರೀಹರಿಯು ವಿವಿಧ ರೂಪಗಳನ್ನು ಧರಿಸಿ, ಮಂದಾರಪರ್ವತ, ಸರ್ಪ, ಹಾಲ್ಗಡಲು, ದೇವಾಸುರರು ಎಲ್ಲರಲ್ಲಿ ಪ್ರವೇಶಿಸಿ ಮಂಥನ ಕಾರ್ಯ ಮುಂದುವರಿಯುವಂತೆ ಮಾಡಿದನು.

ಸಮುದ್ರ ಮಂಥನವು ನಡೆದಾಗ ಮೊಟ್ಟಮೊದಲು ಕಾಮಧೇನು ಎಂಬ ಉತ್ತಮವಾದ ಹಸುವು ಹೊರಬಂದಿತು. ಆ ಗೋಮಾತೆಯನ್ನು ದೇವತೆಗಳು ಭಕ್ತಿಯಿಂದ ಪೂಜಿಸಿದರು. ಅದನ್ನು ನೋಡಿ, ದೈತ್ಯರಿಗೆ ನಿರಾಶೆಯಾಯಿತು. ಅಮೃತವನ್ನು ಅಪೇಕ್ಷಿಸಿ, ಸಮುದ್ರ ಕಡೆಯುವ ಅವರಿಗೆ ಕೇವಲ ಒಂದು ಹಸು ಹೊರ ಬಂದದ್ದು ಸಮಾಧಾನ ಅನಿಸಲಿಲ್ಲ. ಅದರ ಬಗ್ಗೆ ಉದಾಸೀನರಾದರು, ದೇವತೆಗಳು ಆನಂದದಿಂದ ಆ ಕಾಮಧೇನುವನ್ನು ಸ್ವೀಕರಿಸಿದರು. ಮತ್ತೆ ಮಂಥನಕಾರ್ಯ ಮುಂದುವರಿಯಿತು. ಒಮ್ಮಿಂದೊಮ್ಮೆಲೆ, ದೈತ್ಯರ ಕಣ್ಣುಗಳೆಲ್ಲ ಮುಚ್ಚುಬಡಿದವು. ತೇಜಸ್ಸೆಲ್ಲವೂ ಕಂದಿ ಕುಂದಿತು. ''ಇದು ಏನು''? ಎಂದು ಸಿದ್ಧಪುರುಷರು ಮುಗಿಲ ಮಂದಿರದಲ್ಲಿ ಯೋಚಿಸುತ್ತಿರುವಾಗಲೇ ವಾರುಣಿದೇವಿಯು ಪ್ರತ್ಯಕ್ಷಳಾದಳು. ಆ ಸುರಾದೇವಿಯು ಉಟ್ಟಿದ್ದು ಒಂದೇಬಟ್ಟೆ. ಕೂದಲು ಕೆದರಿವೆ. ಕಣ್ಣಲ್ಲಿ ಮದ ತುಂಬಿದೆ. ಶೆರೆಯ ಮದವು ಪೂರ್ಣ ತಲೆಗೇರಿದೆ. ಕಣ್ಣು ಕೆಂಪಾಗಾಗಿವೆ. ನಡೆಯುವಾಗ ನಿಶೆಯ ಧುಂದಿಯಲ್ಲಿ ಜೋಲಿ ಹೊಡೆಯುತ್ತ ಬರುತ್ತಲಿರುತ್ತಾಳೆ. ''ದೈತ್ಯರೇ ನೀವು ನನ್ನನ್ನು ಸ್ವೀಕರಿಸಿರಿ. ನಾನು ನಿಮಗೆ ಬಲವನ್ನು ಕೊಡುತ್ತೇನೆ'' ಎಂದು ಬಾಯಿಂದ ನುಡಿಯುತ್ತಿದ್ದಳು. ಸುರಾದೇವತೆಯ ಈ ಅಮಂಗಳ ಅವತಾರ ಕಂಡು ದೇವತೆಗಳು ಅವಳನ್ನು ಬಿಟ್ಟು ಬಿಟ್ಟರು. ಆಗ ದೈತ್ಯರು ಮುಂದೆ ಬಂದು ಉತ್ಸಾಹದಿಂದ ಅಂದು ಆ ವಾರುಣೀದೇವಿಯನ್ನು ಸ್ವೀಕರಿಸಿದರು. ಅಂದಿನಿಂದ ದೈತ್ಯರೆಲ್ಲರೂ ಸುರಾದೇವಿಯ ಭಕ್ತರಾದರು.

ಮುಂದೆ ದೇವಾಸುರರೆಲ್ಲರೂ ಕೂಡಿ ಮಂದಾರಪರ್ವತದಿಂದ ಮಂಥನ ಮಾಡುತ್ತಿರುವಾಗ ದೇವತೆಗಳ ನೆಚ್ಚಿನ ನಂದನವನದಲ್ಲಿ ಇರಲು ಯೋಗ್ಯವಾದ ಸುಗಂಧಿ ಪಾರಿಜಾತವೃಕ್ಷವು ಉತ್ಪನ್ನವಾಯಿತು. ಅನಂತರ ಅರವತ್ತು ಕೋಟಿ ಅಪ್ಸರೆಯರು ಹುಟ್ಟಿಬಂದರು. ಅವರು ಒಬ್ಬರಿಗಿಂತ ಒಬ್ಬರು ಚೆಲುವೆಯರು. ಸೌಂದರ್ಯ, ಚಾತುರ್ಯ, ಮಾಧುರ್ಯ ಅವರ ಹುಟ್ಟುಗುಣ. ಅವರಲ್ಲಿ ಕೆಲವರು ದೇವತೆಗಳ ಭೋಗವಸ್ತುಗಳಾದರು. ಹಲವರು ದಾನವರ ಭೋಗ ಪಾತ್ರರಾದರು. ಇವರಲ್ಲದೆ ಪುಣ್ಯಕರ್ಮಮಾಡಿ, ಸ್ವರ್ಗಕ್ಕೆ ಹೋದ ಅದೃಷ್ಟ ಶಾಲಿಗಳಿಗೆಲ್ಲ ಈ ಅಪ್ಸರೆಯರ ಯೋಗದ ಆನಂದವು ದೊರಕಿತು.

ಅನಂತರ ಚಂದ್ರನ ಉದಯ. ಅದರಿಂದ ದೇವತೆಗಳಿಗೆ ಒಳ್ಳೇ ಪ್ರೀತಿ. ಆ ಚಾರು ಚಂದ್ರಮನ ಚೆಲುವು ಹಾಗೂ ಶಾಂತಿ-ಕಾಂತಿಗಳನ್ನು ಕಂಡು ಶಂಕರನಿಗೆ ಅವನನ್ನು ತನ್ನ ಜಟಾಮಂಡಲದಲ್ಲಿ ಮಂಡನವನ್ನಾಗಿಮಾಡಿಕೊಳ್ಳುವ ಆಸೆಯಾಯಿತು. ಅವನು ಆ ಚಂದ್ರನನ್ನು ತನಗೆ ಕೊಡಬೇಕೆಂದು ಕೇಳಿದನು. ಅದಕ್ಕೆ ಬ್ರಹ್ಮದೇವರು ಅನುಮತಿಯಿತ್ತರು. ಅಂದಿನಿಂದ ಆ ಶೀತಕಿರಣನು ಶಿವನ ಶಿರೋಭೂಷಣನಾದನು. ಅನಂತರ ಆ ಕ್ಷೀರಸಾಗರದಿಂದ ಕಾಲಕೂಟವು ಹುಟ್ಟಿಬಂದಿತು. ಅದರಿಂದ ಎಲ್ಲರಿಗೂ ಭೀತಿ. ದೇವತೆಗಳು ಬೆಂದುಹೋದರು. ದಾನವರು ಸಂತಪ್ತರಾದರು. ಎಲ್ಲ ಲೋಕವು ಆ ಉಲ್ಬಣವಾದ ವಿಷದಜ್ವಾಲೆಯಿಂದ ಕಮರಿಹೋಯಿತು. ಬ್ರಹ್ಮಾದಿ ದೇವತೆಗಳು ಭಯಭ್ರಾಂತರಾದರು. ಆಗ ಮಹಾದೇವರು ಸ್ವೇಚ್ಛೆಯಿಂದ ಆ ಕಾಲಕೂಟ ವಿಷವನ್ನು ತೆಗೆದುಕೊಂಡು ಕುಡಿದುಬಿಟ್ಟರು. ನಂಜನ್ನು ನುಂಗಿದ್ದರಿಂದ ಶಿವನ ಕೊರಳೆಲ್ಲ ಕಪ್ಪುಕಪ್ಪಾಯಿತು. ಅದರಿಂದ ಅವನು ನೀಲಕಂಠನೆಂದು ಹೆಸರಾದನು. ಅವನು ಕುಡಿದುಳಿದ

ಕಿಂಚಿತ್ತು ವಿಷವನ್ನು ಹಾವುಗಳು ನೆಕ್ಕಿದವು. ವಿಷಪಾನಮಾಡಿದ ಮಹದೇವರಿಗೆ ಬ್ರಹ್ಮನು ಅಭಯದಾನಮಾಡಿದನು. ಆಗ ಶಿವನು ತಲೆ ತಗ್ಗಿಸಿ, ಬ್ರಹ್ಮದೇವರಿಗೆ - ''ನನಗೆ ಅಭಯದಾನಮಾಡಿ ಪರಮಾನುಗ್ರಹಮಾಡಿದಿರಿ !'' ಎಂದು ಹೇಳಿದನು. ಹಾಲಹಲವನ್ನು ಪ್ರಾಶನಮಾಡಿ ಜಗತ್ತಿಗೆಲ್ಲ ''ಶಂ'' ಎಂದರೆ ಕ್ಷೇಮ ಮಾಡಿದ್ದರಿಂದ ಅಂದಿನಿಂದ ಶಿವನು 'ಶಂಕರ' ಎಂದು ಹೆಸರಾದನು.

ಅನಂತರ ಧನ್ವಂತರಿಯ ಉತ್ಪತ್ತಿ. ಉಟ್ಟಿದ್ದು ಬಿಳಿಬಟ್ಟೆ, ಕೈಯಲ್ಲಿ ಕಮಂಡಲ ಅದರಲ್ಲಿ ಅಮೃತತುಂಬಿದೆ. ವೈದ್ಯರಾಜನಾದ ಧನ್ವವಂತರಿಯ ದರ್ಶನದಿಂದಲೇ ದೇವ ದಾನವರಿಗೆಲ್ಲ ತೃಪ್ತಿ, ಗೆಲವು. ಅನಂತರ ಸಾಗರದಿಂದ ಉದಿಸಿದ್ದು ಅಚ್ಚಬಿಳಿಬಣ್ಣದ ಕುದುರೆ ಉಚ್ಚೈಶ್ರವ. ಅನಂತರ ಐರಾವತವೆಂಬ ಶ್ರೇಷ್ಠ ಆನೆ. ಇವೆರಡರ ನಂತರ ಪಕಳೆದೆರೆದ ತಾವರೆಯ ನಡುವೆ ಕುಳಿತ ಎರಡೂ ಕೈಗಳಲ್ಲಿ ಸುಂದರವಾದ ಹೊಂದಾವರೆಗಳನ್ನು ಹಿಡಿದುಕೊಂಡು ಹಾಲ್ಗಡಲಿನ ಒಡಲಿನಿಂದ ಕಣ್ಣುಕುಕ್ಕುವಕಾಂತಿ ಕಿರಣಗಳಿಂದ ಕಂಗೊಳಿಸುವ ಶ್ರೀದೇವಿಯು ಉದಿಸಿ ಬಂದಳು. ಆ ಮಹಾತಾಯಿಯನ್ನು ಮಹರ್ಷಿಗಳು ಲಕ್ಷ್ಮೀಸೂಕ್ತದಿಂದ ಸ್ತೋತ್ರಮಾಡಿ ತೃಪ್ತಿಪಡಿಸಿದರು. ಗಂಧರ್ವರು ಹಾಡಿದರು. ಘೃತಾಚಿ ಮೊದಲಾದ ಅಪ್ಸರೆಯರು ಅವಳೆದುರು ಆನಂದದಿಂದ ಕುಣಿದರು. ಗಂಗೆ ಮೊದಲಾದ ಪುಣ್ಯ ನದಿಗಳು ಆ ಮಹಾದೇವಿಗೆ ಸ್ನಾನಮಾಡಿಸಲು ಸಿದ್ಧವಾಗಿ ಬಂದವು. ದಿಗ್ಗಜಗಳು ಮೋಡದ ಪಾತ್ರೆಯಲ್ಲಿ ತುಂಬಿಟ್ಟ ತಿಳಿನೀರನ್ನು ತೆಗೆದುಕೊಂಡು ತಮ್ಮ ಶುಂಡಾದಂಡದಿಂದ ಅವಳಿಗೆ ಸ್ನಾನಮಾಡಿಸಿದವು. ಎಲ್ಲ ಲೋಕಗಳ ಏಕಮಾತ್ರ ಒಡತಿಯಾದ ಲಕ್ಷ್ಮೀದೇವಿಗೆ ಸ್ವಯಂ ಕ್ಷೀರಸಾಗರನು ಬಂದು ಒಂದು ಕಮಲ ಕುಸುಮಗಳ ಮಾಲೆಯನ್ನು ಸಮರ್ಪಿಸಿದನು. ಅದರೊಳಗೆ ಪೋಣಿಸಿದ ಆ ಹೊಂದಾವರೆಯ ಹೂವುಗಳು ಎಂದೂ ಬಾಡುವುದಿಲ್ಲ. ವಿಶ್ವಕರ್ಮನು ಆ ಮಂಗಳಾಂಗಿಯ ಅಂಗಾಂಗಗಳಿಗೆಲ್ಲ ಒಪ್ಪುವ ಆಭರಣಗಳನ್ನು ತಂದು ಒಪ್ಪಿಸಿದನು. ಆದೀಗ ಸ್ನಾನಮಾಡಿದ ಅವಳ ಮೈತುಂಬ ಆಭರಣಗಳು ಶೋಭಿಸಿದವು. ಆಭರಣಗಳಿಗೆ ಅವಳ ದೇಹ ಸ್ಪರ್ಶದಿಂದ ಒಂದು ವಿಚಿತ್ರ ಕಾಂತಿ ಬಂದಿತು. ದಿವ್ಯಮಾಲೆಯನ್ನು ಉತ್ತಮ ವಸ್ತ್ರವನ್ನು ಅನರ್ಘ್ಯ ಆಭರಣಗಳನ್ನು ಧರಿಸಿ ನಿಂತ ಆ ಸಿರಿದೇವಿಯನ್ನು ಬ್ರಹ್ಮ, ವಾಯು, ಶಿವ ಮೊದಲಾದ ದೇವತೆಗಳೆಲ್ಲ ಪ್ರಾರ್ಥನೆಮಾಡಿದರು. ಇಂದ್ರಾದಿ ಸುರಸಂಘದವರು, ವಿದ್ಯಾಧರರು, ನರರು, ದೈತ್ಯರು, ದಾನವರು, ಯಕ್ಷರಾಕ್ಷಸರೆಲ್ಲರು ಲಾವಣ್ಯನಿಧಿಯಂತಿದ್ದ ಆ ಲಲಾಮಣಿಯನ್ನು ಅಪೇಕ್ಷಿಸಿದರು. ಆಗ ಬ್ರಹ್ಮದೇವರು ಅವರೆಲ್ಲರನ್ನು ನಿಷೇಧಮಾಡಿ ಶ್ರೀಹರಿಯನ್ನು ಪ್ರಾರ್ಥಿಸಿದರು.

''ವಾಸುದೇವನೇ, ನೀನೇ ಇವಳನ್ನು ಸ್ವೀಕರಿಸು. ನಾನು ಇವಳನ್ನು ನಿನಗೆ ಕೊಡುತ್ತೇನೆ. ಅದಕ್ಕಾಗಿಯೇ ದೇವ-ದಾನವರಾರೂ ಅವಳನ್ನು ಬಯಸಕೂಡದೆಂದು ಕಟ್ಟಪ್ಪಣೆಮಾಡಿದ್ದೇನೆ. ಈ ಸಮುದ್ರಮಂಥನ ಕಾರ್ಯದಲ್ಲಿ ನೀನು ಮಾಡಿದ ಸಹಾಯ ಸಾಮಾನ್ಯವಾದುದಲ್ಲ. ನಿನ್ನ ಉಪಕಾರವನ್ನು ನಾವು ಏನು ಮಾಡಿದರೂ ತೀರಿಸಲಾರೆವು. ಈ ಲಕ್ಷ್ಮೀದೇವಿಗೆ ನೀನೇ ಯೋಗ್ಯ ವರ. ಹೀಗೆ ಶ್ರೀ ಹರಿಯನ್ನು ಬಿನ್ನವಿಸಿ ಬ್ರಹ್ಮದೇವರು ಶ್ರೀದೇವಿಗೆ ಹೇಳಿದರು :- ''ದೇವಿ, ನೀನು ಕೇಶವನ ಕೈ ಹಿಡಿದು ಧನ್ಯಳಾಗು. ನಾನು

ನಿನ್ನನ್ನು ವಿಷ್ಣುವಿಗೆ ಕೊಟ್ಟಿದ್ದೇನೆ. ಅಂಥ ಪರಬ್ರಹ್ಮರೂಪಿ ಪತಿಯನ್ನು ಪಡೆದು ಕೊನೆಯವರೆಗೂ ಶಾಶ್ವತವಾದ ಆನಂದವನ್ನು ಹೊಂದು''.

ಎಲ್ಲ ಪ್ರಾಣಿಗಳು ನೋಡುನೋಡುತ್ತಿರುವಂತೆಯೇ ಲಕ್ಷ್ಮೀದೇವಿಯು ವಿಷ್ಣುವಿನ ವಕ್ಷಸ್ಥಳವನ್ನು ಆಶ್ರಯಿಸಿದಳು. ಮತ್ತು ಆ ದೇವೋತ್ತಮನಿಗೆ ವಿಜ್ಞಾಪಿಸಿ ಕೊಂಡಳು. **ಶ್ರೀಲಕ್ಷ್ಮೀ-**''ಪರಮಾತ್ಮನೇ ನಾನು ಸರ್ವಜಗದಂತರ್ಯಾಮಿ ಆದ ನಿನ್ನ ಎದೆಯಲ್ಲಿ ವಾಸಮಾಡುತ್ತೇನೆ. ಸ್ವಾಮಿ ದಯಮಾಡಿ ನೀನು ನನ್ನನ್ನು ಕೈ ಬಿಡಬೇಡ, ಕಾಪಾಡು. ನಾನು ನಿನ್ನ ಅಪ್ಪಣೆಯಂತೆ ನಡೆಯುತ್ತೇನೆ. ನಿನ್ನ ಪ್ರೇಯಸಿಯಾಗಿ ಬಾಳುತ್ತೇನೆ''.

ಹೀಗೆ ಹೇಳಿ ಲಕ್ಷ್ಮೀದೇವಿಯು ವಿಷ್ಣುವಿನ ವಕ್ಷಸ್ಥಳದಲ್ಲಿ ಆಸೀನಳಾದಳು. ಅಲ್ಲಿ ಇದ್ದುಕೊಂಡು ಎಲ್ಲ ದೇವತೆಗಳನ್ನು ವಾತ್ಸಲ್ಯದೃಷ್ಟಿಯಿಂದ ಸಂತೋಷದಿಂದ ನೋಡಿದಳು. ಲಕ್ಷ್ಮೀದೇವಿಯ ಕೃಪಾಕಟಾಕ್ಷಮಾತ್ರದಿಂದಲೇ ಎಲ್ಲ ದೇವತೆಗಳಿಗೂ ಪರಮಾನಂದವಾಯಿತು. ಆದರೆ ವಿಷ್ಣುದ್ವೇಷಿಗಳಾದ ದೈತ್ಯರಿಗೆ ಬಹಳ ದುಃಖವಾಯಿತು. ವಿಪ್ರಚಿತ್ತಿ ಮೊದಲಾದ ದಾನವರನ್ನು ಲಕ್ಷ್ಮಿಯು ತೊರೆದುಬಿಟ್ಟಳು.

ಅನಂತರ ಮಹಾವೀರರಾದ ದೈತ್ಯರು ಧನ್ವಂತರಿಯ ಕೈಯಲ್ಲಿದ್ದ ಅಮೃತವನ್ನು ಬಲಾತ್ಕಾರದಿಂದ ಕಸಿದುಕೊಂಡರು. ದೈತ್ಯರೆಂದರೆ ಪಾಪದ ಮೊಟ್ಟೆಗಳೇ ಅಲ್ಲವೆ ? ಪ್ರಚಂಡ ಶಕ್ತಿ ಅವರಲ್ಲಿ, ಆದುದರಿಂದ ಅವರು ತಮ್ಮ ಮುಂಗೈ ಜೋರಿನಿಂದ ಅಮೃತ ಕಲಶವನ್ನು ಕಿತ್ತುಕೊಂಡು ತಮ್ಮ ಸ್ವಾಧೀನ ಪಡಿಸಿಕೊಂಡರು. ಆಗ ವಿಷ್ಣುವು ಒಂದು ಹೆಣ್ಣಿನ ರೂಪವನ್ನು ಸ್ವೀಕರಿಸಿದನು. ತ್ರಿಲೋಕಸುಂದರಿ ಎಂದು ಪದವಿ ಕೊಡುವಷ್ಟು ಚೆಲುವಿಕೆಯು ಅವಳ ಅಂಗಾಂಗಗಳಲ್ಲಿ ಸೂಸುತ್ತಿತ್ತು. ಇಂತಹ ಲಲಿತ ಲಾವಣ್ಯಕ್ಕೆ ತುಂಬು ತಾರುಣ್ಯವೂ ಜೋಡಿಯಾದದ್ದರಿಂದ ಅವಳ ರೂಪಶ್ರೀ ಎಲ್ಲರನ್ನೂ ಮರುಳುಮಾಡಿತು. ಅವಳ ಕಾಂತಿಚಿಮ್ಮುವ ದೇಹವನ್ನು ಕಂಡು ದೈತ್ಯರೆಲ್ಲರೂ ಮಾರುಹೋದರು. ಮರುಳಾದರು. ಇಂತಹ ಚೆಲುವಿನ ಚಿತ್ತಾರದಂತಿರುವ ಆ ಮಾಯಾಂಗನೆಯು ಬಿಂಕದಿಂದ ದಾನವರ ಬಳಿಗೆ ಬಂದು, ನಸುನಗುತ್ತ ಅವರಿಗೆ ಹೇಳಿದಳು. ''ಆ ಅಮೃತ ಕಲಶವನ್ನು ನನಗೆ ಕೊಡಿರಿ. ನೀವು ಆ ಅಮೃತದ ಗಿಂಡಿಯನ್ನು ನನ್ನ ಸ್ವಾಧೀನಮಾಡಿದರೆ ನಾನು ನನ್ನನ್ನೇ ನಿಮ್ಮ ಸ್ವಾಧೀನ ಮಾಡುತ್ತೇನೆ. ನಾನು ನಿಮ್ಮ ಮನೆಯಲ್ಲೇ ಇರುತ್ತೇನೆ. ಸೌಂದರ್ಯದ ರಾಶಿಯಾದ ನನ್ನ ದೇಹವನ್ನು ನೀವು ಬಯಸುತ್ತಿದ್ದರೆ, ಆ ಅಮೃತಪಾತ್ರೆಯನ್ನು ಇತ್ತ ತನ್ನಿರಿ ನಾನೇ ನಿಮ್ಮೆಲ್ಲರಿಗೂ ಆ ಅಮೃತ ಹಂಚುತ್ತೇನೆ. ನೀವೆಲ್ಲ ಸಾಲಾಗಿ ಕಣ್ಣು ಕಟ್ಟಿಕೊಂಡು ಕುಳಿತು ಕೊಳ್ಳಿರಿ'' ಎಂದು ಹೇಳಿದಳು. ಕಣ್ಣು ಕೋರೈಸುವ ಕಾಂತಿ ಚಿಮ್ಮುವ ಆ ಹೆಣ್ಣಿನ ಈ ಬಣ್ಣದ ಮಾತುಗಳನ್ನು ಕೇಳಿ ದೈತ್ಯರು ಬಾಯಿಬಿಟ್ಟರು. ಅವಳ ರೂಪಕ್ಕೆ ಆಶೆಪಟ್ಟರು. ತಮ್ಮ ವಶದಲ್ಲಿರುವ ಅಮೃತ ಕಲಶವನ್ನು ಅವಳ ಕೈಯಲ್ಲಿ ಇಟ್ಟರು. ತಾವೆಲ್ಲರೂ ಕಣ್ಣುಕಟ್ಟಿಕೊಂಡು ಕುಳಿತರು. ಮರುಕ್ಷಣವೇ ಹೀಗೆ ಮಧುರ ಮಾತಾಡಿದ ಆ ಮಾಯಾಂಗನೆಯು ಆ ದೈತ್ಯರಿಂದ ಕಣ್ಮರೆಯಾದಳು. ಧಾವಿಸಿಬಂದು ದೇವತೆಗಳಿಗೆಲ್ಲ ನಾರಿರೂಪಿಯಾದ ನಾರಾಯಣನು ಅಮೃತವನ್ನು ಹಂಚಿಬಿಟ್ಟನು. ಇಂದ್ರಾದಿ ದೇವತೆಗಳು ಆನಂದದಿಂದ ಆ ಅಮೃತವನ್ನು ಪಾನ ಮಾಡಿದರು. ಇದನ್ನು ಕಂಡು ದೈತ್ಯರಿಗೆ ಕೋಪ ಬಂದಿತು. ದೇವತೆಗಳಿಗೆ ಉತ್ಸಾಹ ತುಂಬಿತು. ಅಮೃತ ಪ್ರಾಶನಮಾಡಿ ಬಲಿಷ್ಠರಾದ

ದೇವತೆಗಳು ಆಯುಧಗಳನ್ನು ಎತ್ತಿಕೊಂಡು ಯುದ್ಧಕ್ಕೆ ಹೊರಟರು. ಅಮೃತಪಾನದಿಂದ ಅಮರರಾದ ಭಲೋದ್ರಿಕ್ತ ಸುರಸೈನಿಕರ ಆವೇಶಯುಕ್ತವಾದ ರಣರಭಸವನ್ನೂ ತೀಕ್ಷ್ಣ ಶಸ್ತ್ರಾಸ್ತ್ರಗಳ ಹೊಡೆತವನ್ನು ತಾಳಲಾರದೆ ದೈತ್ಯರು ನೆಲಹಿಡಿದರು. ನಾಶವಾದರು. ಅಳಿದುಳಿದವರು ಪಾತಾಳವನ್ನು ಹೊಕ್ಕರು. ಆಗ ವಿಜಯಶಾಲಿಗಳಾದ ಎಲ್ಲ ದೇವತೆಗಳು ಆನಂದದಿಂದ ತಮ್ಮ ಗೆಲುವು ಹಾಗೂ ಸುಧಾ ಪಾನಗಳಿಗೆ ಮುಖ್ಯ ಕಾರಣನಾದ ಶ್ರೀಹರಿಗೆ ನಮಸ್ಕರಿಸಿದರು. ಶಂಖ ಚಕ್ರ ಗಧಾ ಪದ್ಮ ಧರಿಸಿದ ಆ ಭಗವಂತನ ಅನುಗ್ರಹಪಡೆದು, ತಮ್ಮ ದೇವಲೋಕಕ್ಕೆ ತೆರಳಿದರು. ಭೀಷ್ಮನೆ ಅಂದಿನಿಂದ ದಾನವರಿಗೆ ಸ್ತ್ರೀ ಜಾತಿಯಲ್ಲಿ ಮೋಹ ಹುಟ್ಟಿತು. ಅವರೆಲ್ಲರೂ ಸ್ತ್ರೀಲಂಪಟರಾದರು. ಹೀಗೆ ಕೃಷ್ಣನ ನಿಗ್ರಹಕ್ಕೆ ಪಾತ್ರರಾದರು. ದೈತ್ಯರೆಲ್ಲರೂ ಅಧೋಲೋಕಗಳಲ್ಲಿ ಇಳಿದರು. ದೇವತೆಗಳು ಸ್ವಸ್ಥಾನದಲ್ಲಿ ಸುಸ್ಥಿತರಾದರು. ಎಲ್ಲ ಲೋಕಗಳಲ್ಲಿ ಶಾಂತಿ ಸಂತಸಗಳು ನೆಲೆಸಿದವು. ಸೂರ್ಯನು ಬೆಳಗಿದನು. ಚಂದ್ರನು ತೊಳಗಿದನು. ನಕ್ಷತ್ರಗಳು ಕಂಗೊಳಿಸಿದವು. ಅಗ್ನಿಯುಷಃ ಕಾಲದಲ್ಲಿ ಪ್ರಜ್ವಲಿಸಿದನು. ಎಲ್ಲಪ್ರಾಣಿಗಳಲ್ಲಿ ಧರ್ಮಬುದ್ಧಿ ಉದಯಿಸಿತು. ಮೂರುಲೋಕಗಳೂ ಸೌಭಾಗ್ಯ ಸಂಪದಗಳಿಂದ ಒಡಗೂಡಿದವು. ದೇವೇಂದ್ರನು ಮೂರುಲೋಕಗಳನ್ನು ಪರಿಪಾಲಿಸುತ್ತ ಸೌಖ್ಯದಿಂದ ವಾಸಮಾಡಿದನು. ಮಹಾನುಭಾವನಾದ ಭೀಷ್ಮನೇ ಮಹಾಲಕ್ಷ್ಮೀದೇವಿಯು ಹಾಲ್ಗಡಲಿನಿಂದ ಹಿಂದೊಮ್ಮೆ ಹುಟ್ಟಿ ಬಂದದ್ದು ಹೀಗೆ. ಇದೇ ಲಕ್ಷ್ಮೀದೇವಿಯೇ ಮತ್ತೆ ಖ್ಯಾತಿ ದೇವಿಯಲ್ಲಿ ಭೃಗುಋಷಿಯಿಂದ ಅದೇ ತನ್ನ ಸಿರಿ, ಸೊಬಗು, ಸೊಗಸುಗಳಿಂದ ಕೂಡಿಕೊಂಡೇ ಮತ್ತೆ ಹುಟ್ಟಿ ಬಂದಳು. ಮುಂದೆ ಭೃಗುಮುನಿಯು ನಮ್ಮದಾನದಿಯ ಪೂರ್ವ ತೀರದಲ್ಲಿ ಲಕ್ಷ್ಮೀದೇವಿಯ ಹೆಸರಿನಿಂದ ಒಂದು ನಗರವನ್ನು ನಿರ್ಮಿಸಿದನು. ಲಕ್ಷ್ಮೀಪುರವೆಂದು ಅದಕ್ಕೆ ಹೆಸರಾಯಿತು. ಬ್ರಹ್ಮದೇವರೂ ಕೂಡ ಮಹಾಲಕ್ಷ್ಮಿಯ ಹೆಸರಿನಿಂದ ಆ ನವನಗರ ನಿರ್ಮಾಣವನ್ನು ಅನುಮೋದಿಸಿದರು. ಮಗಳಿಗೆಂದು ಕಟ್ಟಿಸಿದ ಆ ಪಟ್ಟಣವನ್ನು ವಾಗ್ದಾನದಿಂದ ಅವಳಿಗೆ ಕೊಟ್ಟದ್ದೂ ಆಯಿತು. ಮುಂದೆ ಲಕ್ಷ್ಮೀದೇವಿಯು ತನ್ನ ಪತಿಯಾದ ಜಗನ್ನಾಥನನ ಬಳಿಗೆ ಹೋದಳು. ಕೊಡುತ್ತೇನೆ ಎಂದು ವಾಗ್ದಾನ ಮಾಡಿದ್ದರೂ ಭೃಗುಮುನಿಯು ಲೋಭದಿಂದ ಕೊಡಲಿಲ್ಲ. ಅವಳು ತನ್ನ ಗಂಡನ ಮನೆಯಿಂದ ಅನೇಕ ಬಾರಿ ಬಂದು ಕೇಳಿದರೂ ಆ ಸುಂದರ ನಗರ ಕೊಡಲು ಭೃಗುಮುನಿಯು ಸಮ್ಮತಿಸಲಿಲ್ಲ. ಆಗ ಲಕ್ಷ್ಮೀದೇವಿಯು ತನ್ನ ಪತಿಯ ಬಳಿಗೆ ಬಂದು ದೂರಿತ್ತಳು.

ಲಕ್ಷ್ಮೀ :- ಪ್ರಾಣನಾಥಾ, ನನ್ನ ತಂದೆಯು ನನಗೆ ಲಕ್ಷ್ಮೀಪುರವನ್ನು ಕಟ್ಟಿಸಿ ಕೊಟ್ಟು ತಿರುಗಿ ತಾನೇ ತೆಗೆದುಕೊಂಡಿದ್ದಾನೆ. ನಾನು ಕೇಳಿದರೂ ಅದನ್ನು ಅವನು ಕೊಡುತ್ತಿಲ್ಲ. ನಾನು ಅವನಿಗೆ ಈ ವಿಷಯದಲ್ಲಿ ಅನೇಕ ಬಾರಿ ಹೇಳಿ ಕೇಳಿ ಸೋತುಹೋಗಿದ್ದೇನೆ. ಆದುದರಿಂದ ನೀವು, ನನ್ನ ತಂದೆ ವಾಗ್ದಾನದಂತೆ ನನ್ನ ನಗರವನ್ನು ನನಗೆ ಕೊಡಿಸಿರಿ. ನನ್ನ ಊರು ನನಗೆ ಬೇಕು. ಮಡದಿಯ ಮಾತು ಕೇಳಿ, ಚಕ್ರ, ಗಧೆಗಳನ್ನು ಧರಿಸಿದ ಕಮಲಗಣ್ಣಿನ ದೇವನು ಭೃಗುಮುನಿಯ ಬಳಿಗೆ ಬಂದನು. ಸೌಮ್ಯವಾಗಿಯೇ ಮಾವನಿಗೆ ಹೇಳಿದನು -

**ವಿಷ್ಣು :-** ಮಹಾಮುನಿಯೇ, ಲಕ್ಷ್ಮಿಯು ನಿನ್ನ ಮಗಳೇ ಅಲ್ಲವೆ ? ಅವಳಿಗಾಗಿ ಕಟ್ಟಿಸಿದ ಆ ಲಕ್ಷ್ಮೀಪುರವನ್ನು ಅವಳಿಗೆ ಕೊಟ್ಟುಬಿಡು. ಆ ಲಕ್ಷ್ಮೀಪುರವು ಈಗ

ದೊಡ್ಡದಾಗಿ ಕುಂಚುಕ, ನಾಳಕ ನಗರಗಳೆಂದು ಎರಡು ಭಾಗಗಳಾಗಿ ಬಿತ್ತರಗೊಂಡಿದೆ. ಹೀಗೆ ಎರಡು ಬದಿಗಳಲ್ಲಿ ಬಡಾವಣೆ ಹೊಂದಿದ ಆ ನಗರಗಳನ್ನು ಸಂತೋಷದಿಂದ ನೀನಾಗಿ ಅವಳಿಗೆ ಕೊಡು. ವಿಷ್ಣುವಿನ ಈ ಮಾತು ಕೇಳಿ ಭೃಗುಋಷಿಗೆ ಕೋಪ ಬಂದಿತು. ಅವನು ಸ್ಪಷ್ಟವಾಗಿ ಹೇಳಿದನು. ''ಜಗನ್ನಾಥನೆ, ನಾನು ಆ ಊರನ್ನು ಕೊಡುವುದಿಲ್ಲ. ಆ ಲಕ್ಷ್ಮೀಪುರವನ್ನು ಕಟ್ಟಿಸಿದವನು ನಾನು ಲಕ್ಷ್ಮಿಯಲ್ಲ. ಈ ಮಾತು ನಿನ್ನ ಲಕ್ಷ್ಯದಲ್ಲಿರಲಿ. ನಾನು ಕಟ್ಟಿಸಿದ ಆ ನಗರವನ್ನು ನಾನು ಯಾರಿಗೂ ಕೊಡುವುದೂ ಇಲ್ಲ. ಬಿಟ್ಟುಕೊಡುವುದಿಲ್ಲ. ಈ ವಿಷಯದಲ್ಲಿ ನೀನು ಆಗ್ರಹವನ್ನು ಹಿಡಿಯಬೇಡ.

**ವಿಷ್ಣು** :- ಮುನಿ ಮಹಾತ್ಮರೆ, ನಾನು ನಿಮಗೆ ಮತ್ತೆ ಕೇಳಿಕೊಳ್ಳುತ್ತೇನೆ. ಲಕ್ಷ್ಮಿಯ ಊರನ್ನು ಅವಳಿಗೇ ಕೊಟ್ಟುಬಿಡಿರಿ. ನನ್ನ ಇದೊಂದು ಮಾತನ್ನು ನಡಿಸಿರಿ. ಏನೇ ಆದರೂ ನೀವು ಈಗ ಆ ಊರನ್ನು ಬಿಟ್ಟು ಕೊಡಲೇಬೇಕು. ಈ ಆಗ್ರಹದ ನುಡಿಯನ್ನು ಕೇಳಿ ಭೃಗುಋಷಿಗೂ ಕೋಪ ಬಂದಿತು. ಅವನು ಶಾಪವನ್ನು ಕೊಡುತ್ತ -

**ಭೃಗು** :- ''ಜಗನ್ನಾಥನೆ, ನೀನು ಸ್ವಾರ್ಥ ಪೂರಿತನಾಗಿ, ಹೆಂಡತಿ ಮೇಲಿನ ಪಕ್ಷಪಾತದಿಂದ ನನ್ನನ್ನು ಬಲಾತ್ಕರಿಸುತ್ತಲಿರುವಿ. ಇದರಿಂದ ನೀನು ಭೂಲೋಕದಲ್ಲಿ ಹತ್ತು ಸಲ ಹುಟ್ಟಿ ಬರುವಂತಾಗಲಿ. ನಿನಗೆ ನಿನ್ನ ಮೆಚ್ಚಿನ ಮಡದಿಯಿಂದ ವಿರಹ ಉಂಟಾಗಲಿ. ದುಃಖವನ್ನು ನೀನು ಅನುಭವಿಸು.''

**ವಿಷ್ಣು** :- ಮುನಿವರ್ಯನೆ, ನೀನು ನನಗೆ ಶಾಪ ಕೊಟ್ಟದ್ದರಿಂದ ನಾನು ನಿನಗೆ ಮರಳಿ ಶಾಪ ಕೊಡುತ್ತೇನೆ. ''ನಿನಗೆ ಮಕ್ಕಳ ಪ್ರೀತಿಯು ಎಂದೂ ದೊರಕದಂತಾಗಲಿ ಯಾವ ಮಗನೂ ನಿನ್ನ ಮೇಲೆ ಪ್ರೀತಿ ಮಾಡದಿರಲಿ.'' ಹೀಗೆ ಭೃಗುಋಷಿಗೆ ಶಾಪವಿತ್ತು ಶ್ರೀಹರಿಯು ಬ್ರಹ್ಮಲೋಕಕ್ಕೆ ನಡೆದನು. ಸತ್ಯಲೋಕದಲ್ಲಿ ಪದ್ಮ ಸಂಭವನಾದ ಬ್ರಹ್ಮದೇವನು ಪದ್ಮಾಸನದಲ್ಲಿಯೇ ಕುಳಿತಿದ್ದನು. ಪದ್ಮಲೋಚನನಾದ ಶ್ರೀ ಹರಿಯು ಅಲ್ಲಿಗೆ ಹೋಗಿ ಬ್ರಹ್ಮದೇವನಿಗೆ ಹೇಳಿದನು.

**ವಿಷ್ಣು** :- ಪೂಜ್ಯನಾದ ಬ್ರಹ್ಮನೆ, ''ಈ ಭೃಗು ನಿನ್ನ ಮಗನಷ್ಟೇ ! ಆದರೆ ಇವನು ಮುಂಗೋಪಿ. ಶಾಪ-ಕೋಪ ಎರಡನ್ನೂ ಕೈಯಲ್ಲಿ ಹಿಡಿದುಕೊಂಡೆ ಕುಳಿತಿರುತ್ತಾನೆ. ಯಾವ ಕಾರಣವೂ ಇಲ್ಲದೆ ನನಗೆ ಶಾಪಕೊಟ್ಟಿದ್ದಾನೆ. ಮನುಷ್ಯ ಕುಲದಲ್ಲಿ ಹತ್ತುಬಾರಿ ನಾನು ಹುಟ್ಟಬೇಕಂತೆ, ಮಡದಿಯೊಂದಿಗೆ ಅಗಲಬೇಕಂತೆ, ನನ್ನ ಶಕ್ತಿ ಪೌರುಷ ಎಲ್ಲವೂ ಅಳಿದು ಬಗೆ ಬಗೆಯ ದುಃಖಗಳು ನನ್ನನ್ನು ಮುತ್ತಬೇಕಂತೆ. ಹೀಗೆ ನನಗೆ ಶಾಪವನ್ನು ಕೊಟ್ಟಿದ್ದಾನೆ. ಆದುದರಿಂದ ನನಗೆ ಸಾಕಾಗಿ ಹೋಗಿದೆ. ನಾನು ಇನ್ನು ಮೇಲೆ ಈ ನೆಲದಲ್ಲಿ ಇರಲಾರೆ ನೀರಿನಲ್ಲಿಯೇ ನೆಲೆಸುತ್ತೇನೆ. ಸಮುದ್ರದಲ್ಲಿ ಮಲಗುತ್ತೇನೆ. ದೇವತಾಕಾರ್ಯ ಬಂದಾಗ ನನ್ನನ್ನು ಕರೆಯಿರಿ''. ಮಹಾವಿಷ್ಣುವಿನ ಈ ನುಡಿಯನ್ನು ಕೇಳಿ ಬ್ರಹ್ಮದೇವರು ಬಹಳ ನೊಂದುಕೊಂಡರು. ಜಗತ್ತಿಗೆಲ್ಲಾ ಗುರುವಲ್ಲವೆ ಆ ಬ್ರಹ್ಮ? ಶ್ರೀ ಹರಿಯನ್ನು ಪ್ರಸನ್ನಗೊಳಿಸಬೇಕೆಂದು ಅವರು ಅವನನ್ನು ಹೊಗಳಿ ಮಾತನಾಡಿದರು. ''ಸ್ವಾಮಿ ಕೇಶವ ಪ್ರಭುವೆ ಸಾಮಾನ್ಯ ಮಾನವರಂತೆ ನೀನು ಏಕೆ ಮಾತನಾಡುವೆ ? ಈ ಪ್ರಪಂಚವನ್ನೆಲ್ಲ ಸೃಷ್ಟಿಮಾಡಿದವರಾರು ? ನೀನೇ ಅಲ್ಲವೆ ? ನಿನ್ನ ಹೊಕ್ಕಳದಲ್ಲಿಯೇ ಈ ಜಗತ್ ಪದ್ಮವು ಈ ಹಿಂದೆ ಅರಳಲಿಲ್ಲವೆ? ನಾನು ಅದರಿಂದಲೇ ನಿನ್ನ ಧ್ಯಾನಮಾಡಿ, ನಿನ್ನ ಅನುಗ್ರಹದಿಂದಲೇ

ಹುಟ್ಟಿರುತ್ತೇನೆ. ನಾನು ಹೆಸರಿಗೆ ಮಾತ್ರ ಈ ಜಗತ್ತಿನ ಸೃಷ್ಟಿಕರ್ತ. ವಾಸ್ತವಿಕವಾಗಿ ಈ ಚರಾಚರ ಪ್ರಪಂಚವನ್ನೆಲ್ಲ ಸೃಷ್ಟಿಮಾಡಿದವ, ಸಂರಕ್ಷಣೆಮಾಡುವವ ನೀನೇ. ನನಗೆ ಏನಾದರೂ ವರಕೊಡಬೇಕೆಂದು ನಿನಗೆ ಇಚ್ಛೆಯಿದ್ದರೆ ''ನೀನು ಈ ಲೋಕ ಬಿಟ್ಟು ಹೋಗಬೇಡ. ಇದೇ ನಿನ್ನ ವರವು ಆಗಿರಲಿ''. ನಿನಗೆ ಶಾಪ ಕೊಡಲು ಆ ಭೃಗುಮುನಿಗೆ ಎಲ್ಲಿಯ ಶಕ್ತಿ ? ಜಗತ್ತಿನ ಕ್ಷೇಮಕ್ಕಾಗಿ ಮನುಷ್ಯ ಕುಲದಲ್ಲಿ ನೀನೇ ಹತ್ತು ಅವತಾರಗಳನ್ನು ಮಾಡಲಿರುವೆ. ನಿನ್ನ ಪ್ರೇರಣೆಯಂತೆಯೇ ಆ ಭೃಗುವು ನುಡಿದಿದ್ದಾನೆ. ನಿನಗೆ ಶಾಪಕೊಡಲು ಈ ಭೃಗುವು ಎಷ್ಟರವನು ? ನಿನ್ನನ್ನು ಶಪಿಸುವುದು ಎಂದಾದರೂ ಈ ನನ್ನ ಭೃಗು ಮಗುವಿಗೆ ಸಾಧ್ಯ ಉಂಟೆ ? ನೀನು ಯಾವಾಗಲೂ ಜ್ಞಾನಿಗಳನ್ನು ಮನ್ನಿಸುವೆ. ಅದರಂತೆ ನಿನ್ನ ಸಂಕಲ್ಪದಂತೆ ನಿನ್ನ ಕರುಣೆಯ ಕೈಗೂಸಾಗಿ ನುಡಿದ ಈ ಭೃಗುಬ್ರಾಹ್ಮಣನ ಮಾತನ್ನು ಸತ್ಯವಾಗಿಮಾಡು. ಈಗಂತೂ ನೀನು ಕ್ಷೀರಸಾಗರದಲ್ಲಿ ಯೋಗ ನಿದ್ರೆಯಿಂದ ಶಯನ ಮಾಡು. ಅವಶ್ಯಕತೆ ಬಿದ್ದಾಗ ನಿನ್ನ ಶಕ್ತಿಯಿಂದ ಒಡಗೂಡಿ ಬಂದು ಈ ಜಗತ್ತನ್ನು ಉದ್ಧರಿಸು. ನಿನ್ನ ಒಂದು ಅಂಶದಿಂದ ನಿನ್ನ ಅಪ್ಪಣೆಯಂತೆ ಎಲ್ಲ ಕಾರ್ಯಗಳನ್ನುಮಾಡುವ ದೇವೇಂದ್ರನು ಮೂರುಲೋಕಗಳನ್ನು ಪಾಲನಮಾಡುತ್ತ ನನ್ನ ನಿರ್ದೇಶನವನ್ನು ಅನುಷ್ಠಾನಕ್ಕೆ ತರುವನು

ಬ್ರಹ್ಮದೇವರ ಈ ನುಡಿಯನ್ನು ಕೇಳಿ ನಾರಾಯಣನು ನಸುನಕ್ಕು ''ಬ್ರಹ್ಮನೆ, ನೀನು ಹೇಳಿದ್ದು ನಿಜ. ನನ್ನ ಸಂಕಲ್ಪದಂತೆಯೇ ಭೃಗುಮುನಿ ಶಪಿಸಿದ್ದಾನೆ. ಅವನು ನುಡಿದಂತೆ, ನೀನು ಸೂಚಿಸಿದಂತೆ, ನಾನು ಕಾಲಕಾಲಕ್ಕೆ ಲೋಕಕ್ಷೇಮಕ್ಕಾಗಿ ಹತ್ತು ಅವತಾರಗಳನ್ನು ಎತ್ತಿ ಬ್ರಹ್ಮವಾಕ್ಯವನ್ನು ಸತ್ಯವನ್ನಾಗಿ ಮಾಡುತ್ತೇನೆ.'' ಹೀಗೆ ಹೇಳಿ, ಶ್ರೀ ಹರಿಯು ಅದೃಶ್ಯನಾದನು. ಅನಂತರ ಲೋಕ ಕಾರಣನಾದ ಬ್ರಹ್ಮದೇವರು ಮತ್ತೆ ಲೋಕ ಸೃಷ್ಟಿಯನ್ನು ಮಾಡತೊಡಗಿದರು. ಅದನ್ನು ನೋಡಿ ನಾರದ ಮುನಿಯು ಹೀಗೆ ನುಡಿದರು.

**ನಾರದ :-** ತಂದೆಯೆ, ನಿನ್ನಲ್ಲಿ ಬ್ರಹ್ಮರೂಪದಿಂದ ನಿಂತ ಆ ಭಗವಂತನು ಪುರುಷ ಸೂಕ್ತದಲ್ಲಿ ಹೇಳಿದಂತೆ ಅನಂತ ತಲೆ, ಅಸಂಖ್ಯ ಕಣ್ಣು, ಅಪರಿಮಿತ ಪಾದವುಳ್ಳ ವಿರಾಡ್ರೂಪಿಯಾಗಿದ್ದಾನೆ. ಪ್ರಪಂಚವನ್ನೇ ವ್ಯಾಪಿಸಿದ ಆ ಪರಬ್ರಹ್ಮನಿಂದಲೇ ಈ ಜಗತ್ತೆಲ್ಲವೂ ಸೃಷ್ಟವಾಗಿರುತ್ತದೆ. ಈವರೆಗೆ ಸೃಷ್ಟವಾಗಿರುವ ಮುಂದೆ ಸೃಷ್ಟಿಸಲ್ಪಡುವ ಎಲ್ಲ ಪ್ರಾಣಿಗಳಲ್ಲಿಯೂ ಅವನೇ ಇದ್ದುಕೊಂಡು **''ವಿಶ್ವ''** ಎನಿಸುತ್ತಾನೆ. ಯಜ್ಞರೂಪಿಯಾದ ಅವನಿಂದಲೇ ಎಲ್ಲ ಯಜ್ಞ ದ್ರವ್ಯಗಳು ಮತ್ತು ಋಕ್, ಯಜು, ಸಾಮ ಮುಂತಾದ ವೇದಗಳು ಹುಟ್ಟಿರುತ್ತವೆ. ಆನೆ, ಕುದುರೆ, ಹಸು ಮುಂತಾದ ಎಲ್ಲ ಖಗ, ಮೃಗಗಳು ಅವನಿಂದಲೇ ನಿರ್ಮಿತವಾಗಿವೆ. ಅವನ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು, ಪಾದಗಳಿಂದ ಶೂದ್ರರು, ಕಣ್ಣುಗಳಿಂದ ಸೂರ್ಯನೂ, ಕಿವಿಗಳಿಂದ ವಾಯುವೂ, ಮನಸ್ಸಿನಿಂದ ಚಂದ್ರನೂ, ಮುಖದಿಂದ ಅಗ್ನಿಯೂ, ಹೊಕ್ಕಳದಿಂದ ಆಕಾಶವೂ, ತಲೆಯಿಂದ ಅಂತರಿಕ್ಷ ಲೋಕವೂ, ಕಿವಿಯಿಂದ ದಿಕ್ಕುಗಳೂ, ಪಾದಗಳಿಂದ ಭೂಮಿಯು ಉತ್ಪನ್ನವಾಗಿರುತ್ತವೆ. ಅಂಥ ಪುರುಷೋತ್ತಮನ ಮುಖ್ಯ ಅಧಿಷ್ಠಾನ ಭೂತನಾಗಿ, ಅವನ ಆಜ್ಞೆಯಿಂದ ವಿಶ್ವಸೃಷ್ಟಿಯನ್ನು ಮಾಡುವ ನಿನಗೆ ನನ್ನ ನಮಸ್ಕಾರ. ಸರ್ವಾಂತರ್ಯಾಮಿ ಹಾಗೂ ಸರ್ವತ್ರವ್ಯಾಪಿಯಾದ ನಿನಗೆ ನಾನು ಏನೂ ಬೇಡುವದಿಲ್ಲ. ಯಾಕೆಂದರೆ ನನ್ನ ಅಂತರ್ಯಾಮಿಯಾದ ನಿನಗೆ ಏನು

ಬೇಕು ಎಂಬುದು ತಿಳಿದೇ ಇದೆ. ನನ್ನ ಇಷ್ಟಾರ್ಥಗಳನ್ನೆಲ್ಲ ಪೂರೈಸಿರುವೆ. ನಿನ್ನ ದರ್ಶನವಾದುದರಿಂದ ನನ್ನ ತಪಸ್ಸು ಇಂದು ಸಾರ್ಥಕವಾಯಿತು.

**ಬ್ರಹ್ಮ :-** ನಾರದನೆ ನಿನ್ನ ದರ್ಶನವು ಎಂದೂ ವಿಫಲವಾಗಲಾರದು. ನಿನಗೆ ಬೇಕಾದ ವರವನ್ನು ಕೇಳಿಕೊ. ನೀನು ನನ್ನನ್ನು ಕಂಡಿರುವೆ. ಆದ್ದರಿಂದ ನಿನಗೆ ಎಲ್ಲವೂ ಸಿದ್ಧಿಸುತ್ತದೆ.

**ನಾರದ :-** ಪೂಜ್ಯನಾದ ಭೂತನಾಥನೆ, ನೀನು ಎಲ್ಲರ ಹೃದಯದಲ್ಲಿಯೂ ಇರುವೆ. ನನ್ನ ಮನದ ಅಪೇಕ್ಷೆ ಏನು ಎಂಬುದು ನಿನಗೆ ತಿಳಿಯದೇ? ನಾರದನ ಈ ನುಡಿಯನ್ನು ಕೇಳಿ ಪಿತಾಮಹನು ಪ್ರಸನ್ನನಾಗಿ ವರವನ್ನು ಕೊಟ್ಟನು. ''ನಾರದ, ನನ್ನ ಅನುಗ್ರಹದಿಂದ ನೀನು ಋಷಿಗಳಲ್ಲಿ ಉತ್ತಮಋಷಿ ಎನಿಸುವೆ. ಸ್ವರ್ಗ-ಭೂ-ಪಾತಾಳಗಳಲ್ಲಿ ಎಲ್ಲಿ ಹೋಗಬೇಕೆಂದರೂ ನಿನಗೆ ಪ್ರತಿಬಂಧವಿಲ್ಲ. ಕಲಹ ಕುತೂಹಲವು ನಿನ್ನ ಸ್ವಭಾವ. ತಂಬೂರಿಯು ನಿನಗೆ ಅಲಂಕಾರ. ಜನಿವಾರ ಹಾಗೂ ಈ ಕೊಡೆ ನಿನ್ನ ಗುರುತು. ಹರಿ-ಹರ-ಬ್ರಹ್ಮ-ಇಂದ್ರ ಮುಂತಾದ ಬೇಕಾದ ದೇವತೆಗಳ ಕಡೆಗೆ ಹೋಗಲು ಬರಲು ನಿನಗೆ ಆತಂಕವಿಲ್ಲ. ಸಕಲ ರಾಜರಲ್ಲಿ ಪ್ರಪಂಚದ ಎಲ್ಲ ರಹಸ್ಯ ಸ್ಥಾನಗಳಲ್ಲಿ ನಿನಗೆ ಅಪ್ರತಿಹತಗತಿ ಎಲ್ಲಿಯೂ ಯಾರೂ ಎಂದೂ ತಡೆಯುವುದಿಲ್ಲ. ನಿನ್ನನ್ನು ಕಂಡರೆ ಧರೆಯಲ್ಲಿಯ ದೊರೆಗಳಿಗೆಲ್ಲ ಪ್ರೀತಿ. ಎಲ್ಲ ವರ್ಣದವರಿಗೂ ನೀನು ಗುರು. ದೇವತೆಗಳು ಕೂಡ ನಿನ್ನ ಸೇವೆಗೈಯುವರು. ಇನ್ನೇನು ಬೇಕು! ಸಾಕಲ್ಲವೆ ಇಷ್ಟು ವರ! ಸಂತೋಷವಷ್ಟೇ!

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸಮುದ್ರ ಮಂಥನ, ಲಕ್ಷ್ಮಿಯ ಪ್ರಾದುರ್ಭವ ನಾಲ್ಕನೇ ಅಧ್ಯಾಯ ಮುಗಿದುದು*



## ದಕ್ಷನ ಯಜ್ಞನ — ಅಧ್ಯಾಯ - ೫

**॥ ಭೀಷ್ಮ ಉವಾಚ ॥**

**''ಕಥಂ ಸತೀ ದಕ್ಷಸುತಾ ದೇಹಂ ತ್ಯಕ್ತವತೀ ಶುಭಾ ।**
**ದಕ್ಷಯಜ್ಞಸ್ತು ರುದ್ರೇಣ ವಿಧ್ವಸ್ತಃ ಕೇನ ಹೇತುನಾ ॥''**

**ಭೀಷ್ಮ :-** ದಕ್ಷನ ಮಗಳು ಸತೀದೇವಿ. ಅವಳು ಮಂಗಳದ ಅಧಿದೇವತೆ, ತನ್ನ ದೇಹವನ್ನೇ ಅವಳು ದಹಿಸಿ ತೊರೆದುಬಿಟ್ಟಳಂತೆ. ಅದು ಹೇಗೆ? ದಕ್ಷನ ಯಜ್ಞವನ್ನು ರುದ್ರನು ಧ್ವಂಸಗೈದನಂತೆ, ಅದಕ್ಕೆ ಕಾರಣವೇನು ? ಶಿವನು ಮಹಾದೇವನಲ್ಲವೆ ? ದೇವತೆಗಳಲ್ಲಿ ಮಹಾನ್ ಎನಿಸಿದ ಅವನಿಗೆ ಇಷ್ಟು ಕೋಪವೆ ? ಕೀರ್ತಿವಂತನಾದ ಆ ತ್ರಿಪುರಾಂತಕನ ಈ ದಕ್ಷಾಂತಕ ಕೃತ್ಯಕ್ಕೆ ಕಾರಣವೇನು? ಇದನ್ನೆಲ್ಲ ನಾನು ತಿಳಿಯಬೇಕಾಗಿದೆ.

**ಪುಲಸ್ತ್ಯ :-** ಇದು ಬಹು ಪೂರ್ವ ಕಾಲದ ಘಟನೆ. ಗಂಗಾದ್ವಾರದಲ್ಲಿ ದಕ್ಷನು ಯಜ್ಞಮಾಡಿದ, ಅದಕ್ಕೆ ಬರದವರು ಯಾರು? ಗುಂಪುಗುಂಪಾಗಿ ದೇವತೆಗಳು ಹಿಂಡುಹಿಂಡಾಗಿ ಋಷಿಗಳು ಆಗಮಿಸಿದರು. ಪಿತೃಗಳು ಒಬ್ಬರೂ ಬಿಡದೇ ಅಲ್ಲಿ ಉಪಸ್ಥಿತರಾದರು. ಇಂದ್ರನಂತೂ ಮುಂದಾಗಿಯೇ ಬಂದಿದ್ದ. ನಾಗರು ಯಕ್ಷರು ಔಷಧಿ ವನಸ್ಪತಿಗಳ ಅಭಿಮಾನಿ ದೇವತೆಗಳೂ ಎಲ್ಲರೂ ಸಕಾಲಕ್ಕೆ ಅಲ್ಲಿ ಇದ್ದರು. ಕಶ್ಯಪ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಾಲ್ಮೀಕಿ, ಅಂಗೀರಸ, ವಶಿಷ್ಠ ಮುಂತಾದ ಮಹಾನ್ ಮಹಾನ್

ತಪಸ್ವಿಗಳು ಪೌರೋಹಿತ್ಯ ಪೀಠದಲ್ಲಿ, ಯಜ್ಞವೇದಿಕೆಯನ್ನು ಸಿದ್ಧಗೊಳಿಸಿ ಇವರೆಲ್ಲರೂ ಕೂಡಿ ಅಗ್ನಿಪ್ರತಿಷ್ಠೆ ಮಾಡಿದರು. ಸ್ವಯಂ ವಶಿಷ್ಠರು **''ಹೋತಾ''**ಆಗಿ ಕುಳಿತರು. ಬೃಹಸ್ಪತಿಯು **ಉದ್ಗಾತಾ**, ಅಂಗೀರಸ ಮುನಿಯು **ಅಧ್ವರ್ಯು**. ನಾರದನು. ''ಬ್ರಹ್ಮ'' ಆಗಿ ಯಜ್ಞಕಾರ್ಯವನ್ನು ಪ್ರಾರಂಭಿಸಿದರು. ಹೋಮ ಪ್ರಾರಂಭವಾಯಿತು. ದೇವತೆಗಳು ಆನಂದದಿಂದ ಬರತೊಡಗಿದರು. ಬ್ರಹ್ಮದೇವರು ತಮ್ಮ ಮಾನಸಪುತ್ರರಾದ ಬ್ರಹ್ಮಋಷಿಗಳೊಂದಿಗೆ ಯಜ್ಞಕಾರ್ಯದಲ್ಲಿ ಸದಸ್ಯರಾಗಿ ನಿಂತುಕೊಂಡರು. ಈ ಯಜ್ಞದ ರಕ್ಷಣೆಗಾಗಿ ಸಾಕ್ಷಾತ್ ವಿಷ್ಣುವೇ ನಿಂತುಕೊಂಡನು.

ಎಂಟು ವಸುಗಳು, ಹನ್ನೆರಡು ಆದಿತ್ಯರು, ಇಬ್ಬರು ಅಶ್ವಿನಿಗಳು, ನಲವತ್ತೊಂಭತ್ತು ಮರುದ್ ಗಣಗಳು, ಹದಿನಾಲ್ಕು ಮನುಗಳು, ಎಲ್ಲರೂ ಯಜ್ಞಕಾರ್ಯದ ಸುಸಂಪನ್ನತೆಗಾಗಿ ಸನ್ನದ್ಧರಾಗಿ ನಿಂತುಕೊಂಡಿದ್ದರು. ಹೀಗೆ ಬಹು ಸಂಭ್ರಮದಿಂದ ಆ ಯಜ್ಞವು ನಡೆಯಿತು. ಅಗ್ನಿಯಲ್ಲಿ ಆಹುತಿಗಳನ್ನು ಎಡಬಿಡದೆ ಹಾಕುತ್ತಲಿದ್ದರೆ ದೇವಋಷಿ ಮುನಿಗಳು ದೂರದೂರ ದೇಶಗಳಿಂದಲೂ ಲೋಕಗಳಿಂದಲೂ ಬರುತ್ತಲೆಯಿದ್ದರು ಅದಕ್ಕಾಗಿ ವೇದಿಕೆಯನ್ನು ಮತ್ತೆ ಹತ್ತು ಯೋಜನ ವಿಸ್ತಾರಮಾಡಿದರು. ಬಂದ ಜನರಿಗೆಲ್ಲ ಸಂಭ್ರಮದ ಸ್ವಾಗತ, ಬಗೆಬಗೆಯ ಭಕ್ಷ್ಯ ಭೋಜ್ಯಗಳ ಭೋಜನ, ಆತ್ಮಾದರದ ಆತಿಥ್ಯ.

ಯಜ್ಞದ ಈ ಸಂಭ್ರಮ ಸನ್ನಾಹಗಳನ್ನು ದಕ್ಷನ ಮಗಳಾದ ಸತೀದೇವಿಯು ನೋಡಿಕೊಂದಳು. ತಂದೆಯ ಬಳಿಗೆ ಬಂದು ಮಾತನಾಡಿದಳು. ವಿನಯ, ಅನುನಯಗಳು ಅವಳ ಮಾತಿನಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿದ್ದವು.

**ಸತಿ :-** ಪ್ರಜಾಪತಿ ಪದವಿಯಲ್ಲಿ ಮೆರೆಯುವ ತಂದೆಯೇ, ನಿನ್ನ ಈ ಯಜ್ಞಕ್ಕೆ ಬ್ರಹ್ಮದೇವರು ಬಂದಿದ್ದಾರೆ. ದೇವತಾಗಣಗಳೆಲ್ಲವೂ ಆಗಮಿಸಿವೆ. ಎಲ್ಲ ಋಷಿಗಳೂ ಐತಂದಿದ್ದಾರೆ. ಕಮಲವನ್ನೇ ಮನೆಯಾಗಿ ಮಾಡಿಕೊಂಡ ಬ್ರಹ್ಮನು ತನ್ನ ಕಾಂತೆ ಸಾವಿತ್ರಿಯೊಂದಿಗೆ ವಿಮಾನದಲ್ಲಿ ಕುಳಿತು ನಿನ್ನ ಈ ಯಜ್ಞಕ್ಕೆ ಆಗಮಿಸಿದ್ದಾನೆ. ವಿಷ್ಣುವು ತನ್ನ ಒಲವಿನ ಲಲನೆಯಾದ ಲಕ್ಷ್ಮೀಯೊಂದಿಗೆ ಗರುಡಾರೂಢನಾಗಿ ನಿನ್ನ ಯಜ್ಞಮಂಟಪಕ್ಕೆ ಪ್ರಾಪ್ತನಾಗಿದ್ದಾನೆ. ಅಕೋ, ಅವನ ಕೊರಳಲ್ಲಿ ಕೌಸ್ತುಭ, ಎದೆಯಲ್ಲಿ ಶ್ರೀವತ್ಸ, ನಡುವಿನಲ್ಲಿ ಪೀತಾಂಬರ, ಕೈಯಲ್ಲಿ ಶಾರ್ಙ್ಗ ಎಂಬ ಧನಸ್ಸು ಶೋಭಿಸುತ್ತಲಿದೆ. ಇದರಂತೆ ದೇವತೆಗಳ ದೊರೆಯಾದ ಇಂದ್ರನು ಪ್ರೇಯಸಿ ಶಚೀದೇವಿಯೊಂದಿಗೆ ಐರಾವತವನ್ನು ಆರೋಹಣ ಮಾಡಿಕೊಂಡು ಇಲ್ಲಿ ಮೊದಲೇ ಬಂದು ವಾಸಮಾಡಿದ್ದಾನೆ. ನೂರು ಯಜ್ಞಮಾಡಿದ ಅವನು ತನ್ನ ಅನುಭವದ ಲಾಭವನ್ನು ನಿನಗೆ ಈ ಯಜ್ಞಕಾರ್ಯದಲ್ಲಿ ಮಾಡಿಕೊಡಲು ಮುಂಚಿತವಾಗಿಯೇ ಕುಟುಂಬ ಸಹಿತ ಇಲ್ಲಿಗೆ ಆಗಮಿಸಿದ್ದಾನೆ.

ಆದರೆ ಇಷ್ಟೆಲ್ಲ ಜನರನ್ನು ನೀನು ಆದರದ ಕರೆಯಿತ್ತು ಕರೆಸಿಕೊಂಡು, ಗೌರವಿಸಿದ್ದು ಈ ಸಮಾರಂಭಕ್ಕೆ ಉಚಿತವೇ ಆಗಿದೆ. ಈ ಶುಭ ಕಾರ್ಯಕ್ಕೆ ಬಾರದಿದ್ದವರೆಂದರೆ ನನ್ನ ಪತಿಯಾದ ಪರಮೇಶ್ವರನೊಬ್ಬನೆ. ನೀನು ಎಲ್ಲರನ್ನು ಆಮಂತ್ರಿಸಿದರೂ ನನ್ನ ಪೂಜ್ಯ ಪತಿ ಭಗವಾನ್ ಶಂಕರನನ್ನು ಮಾತ್ರ ಆಮಂತ್ರಿಸಲಿಲ್ಲ ಅವನಿಲ್ಲದ ಈ ನಿನ್ನ ಯಜ್ಞಮಂಟಪವು ನನಗೆ ಶೂನ್ಯವೆನಿಸುತ್ತದೆ. ನೀನು ಆ ಚಂದ್ರಶೇಖರನನ್ನು ಆಮಂತ್ರಿಸದೆ ಇರಲು

ಕಾರಣವೇನು ? ಬಹುಶಃ ನಿನಗೆ ಕರೆಯಲು ಮರೆತು ಹೋಗಿರಬೇಕು. ಆದರೆ ಇದಾದರೂ ಹೇಗೆ? ಸರ್ವ- ಜಗತ್ತಿಗೆ ಒಡೆಯನಾದ ಆ ಪರಮೇಶ್ವರನನ್ನು ಮರೆಯುವುದೆಂದರೆ ಏನು?'' ಸತೀದೇವಿಯ ಈ ಅಧಿಕ್ಷೇಪದ ವಚನವನ್ನು ಕೇಳಿ, ದಕ್ಷಪ್ರಜಾಪತಿಯು ಅವಳನ್ನು ತನ್ನ ಹತ್ತಿರ ಕರೆದನು. ದಕ್ಷನಿಗೆ ಸತಿಯೆಂದರೆ ತನ್ನ ಪ್ರಾಣಕ್ಕಿಂತ ಹೆಚ್ಚು ಪ್ರೀತಿ. ಅವಳ ಮಾತುಗಳನ್ನು ಕೇಳಿ ಅವನಿಗೆ ಮಗಳ ಮೇಲೆ ಮಮತೆಯು ಉಕ್ಕಿ ಬಂದಿತು. ಪ್ರೀತಿಯಿಂದ ಆ ಬಾಲೆಯನ್ನು ಕರೆದು ತನ್ನ ತೊಡೆಯ ಮೇಲೆ ಕೂಡಿಸಿಕೊಂಡನು. ಎಳೆ ವಯಸ್ಸಿನ ತರಳೆಯಾದರೂ ಆ ಸತಿಯು ಮಹಾಪತಿವ್ರತೆ. ಪತಿಯ ಹಿತವೇ ಅವಳ ಹಿತ. ಯಾವಾಗಲೂ ಪತಿ ಪರಾಯಣೆ. ಇಂಥ ಸಾಧ್ವೀಮಣಿಯಾದ ಮಗಳನ್ನು ಕುರಿತು ದಕ್ಷನು ಗಂಭೀರವಾಗಿ ನುಡಿದನು.

**ದಕ್ಷ :-** ಮಗಳೆ, ನಿನಗೆ ಯಥಾರ್ಥ ಸಂಗತಿಯನ್ನು ತಿಳಿಸುತ್ತೇನೆ ಕೇಳು. ಎಲ್ಲರನ್ನು ಈ ಯಜ್ಞ ಸಮಾರಂಭಕ್ಕೆ ಕರೆಕೊಟ್ಟು, ಕರೆಸಿ, ಬರಮಾಡಿಕೊಂಡ ನಾನು ನಿನ್ನ ಪತಿಗೆ ಮಾತ್ರ ಆಮಂತ್ರಣ ಕೊಡದಿರುವದಕ್ಕೆ ಒಂದು ಕಾರಣವಿದೆ. ಸುಂದರಿಯೇ ಅದನ್ನು ತುಸು ಸೈರಣೆಯಿಂದ ಕೇಳು.

ನಿನ್ನ ಗಂಡನು ಉಟ್ಟು ಕೊಂಡದ್ದು ತೊಗಲು, ಮೈಗೆ ಬಳಿದುಕೊಂಡದ್ದು ಬೂದಿ, ಕೈಯಲ್ಲಿ ಹಿಡಿದದ್ದು ತಲೆ ಬುರುಡೆ. ಮತ್ತೊಂದು ಕೈಯಲ್ಲಿ ತ್ರಿಶೂಲ. ಅವನಿರುವುದು ಸುಡುಗಾಡು. ಆ ಸ್ಮಶಾನದಲ್ಲಿ ಬತ್ತಲೆ ಕುಣಿದಾಡುವುದರಲ್ಲೇ ಅವನಿಗೆ ಆನಂದ ಯಾವಾಗಲಾದರೂ ಮೈಮೇಲೆ ಆಚ್ಛಾದನಬೇಕು ಎನಿಸಿದರೆ ಹುಲಿ ತೊಗಲನ್ನೋ, ಆನೆಯ ತೊಗಲನ್ನೋ ಹೊದ್ದುಕೊಳ್ಳುವನು. ಕೊರಳೊಳಗಂತೂ ಅಸಹ್ಯವಾದ ರುಂಡಮಾಲೆ. ಕೈಯಲ್ಲಿ ಒಂದು ಹೊರಸಿನ ಕಾಲು. ಸೊಂಟದಲ್ಲಿ ಹಾವು. ಕೈಗಳಲ್ಲಿ ಮುಡಿಯಲ್ಲಿ ಅಲಂಕಾರವಾಗಿ ಹಾವುಗಳೇ, ಕೊರಳಲ್ಲಿ ಹಾಕಿದ ಬ್ರಹ್ಮಸೂತ್ರವು ಹಾವೇ ಇದು ನಿನ್ನ ಪತಿಯ ಅವತಾರ. ಹೊರಗೆ ಹೊರಟರೆ ಬೆನ್ನ ಹಿಂದೆ ಭೂತ-ಪ್ರೇತ ಪರಿವಾರ. ಇಂಥ ಗುಂಪುಗುಂಪಾಗಿ ಬೆಂಬಲಿಸುವ ಭೂತ ಪರಿವಾರದೊಂದಿಗೆ ಎಲ್ಲಿಯೋ ಏಕಾಂತದಲ್ಲಿರದೆ ಭೂಮಂಡಲದ ತುಂಬ ಬತ್ತಲೆ ಮೈಯಿಂದ ತಿರುಗಾಡುತ್ತಾನೆ. ಮೇಲೆ ಅವನ ರೂಪವಾದರೂ ಸರಿಯಿದೆಯೇ ? ಅದು ಇಲ್ಲ. ಕಣ್ಣುಗಳು ಸಮನಿಲ್ಲ. ಎಲ್ಲರಿಗೂ ಎರಡು ಕಣ್ಣುಗಳಿದ್ದರೆ ನಿನ್ನ ಗಂಡನಿಗೆ ಮೂರು ನೇತ್ರಗಳು. ಯಾವಾಗಲೂ ಹುಚ್ಚುಚ್ಚು ಮಾತು, ಹಾಡು, ಕುಣಿತಗಳು.

ಇಂಥವನನ್ನು ನನ್ನ ಅಳಿಯನೆಂದು ಇಲ್ಲಿ ನೆರೆದ ದೇವತೆಗಳ ಎದುರು ಹೇಗೆ ಹೇಳಲಿ ? ನಿನ್ನ ಗಂಡನನ್ನು ನೋಡಿದರೆ ಎಲ್ಲರೂ ಅಸಹ್ಯಪಡುವರು. ಅವನನ್ನು ನನ್ನ ಮಗಳ ಗಂಡ ಎನ್ನಲೂ ನನಗೂ ನಾಚಿಕೆ ಅನಿಸುವದು. ಬತ್ತಲೆ ಮೈಯಿಂದ ಅಥವಾ ಅರ್ಧಮರ್ಧ ಚರ್ಮಸುತ್ತಿಕೊಂಡ ಮನುಷ್ಯನು ಹೆಣ್ಣುಮಕ್ಕಳು, ಹುಡುಗರು ಇರುವ ಮರ್ಯಾದಸ್ಥರ ಮನೆಯಲ್ಲಿ ಪ್ರವೇಶಮಾಡಲು ಅಯೋಗ್ಯನಾಗಿದ್ದಾನೆ. ಹೀಗೆಲ್ಲ ನಿನ್ನ ಗಂಡನಲ್ಲಿರುವ ದೋಷಗಳಿಂದಾಗಿ, ಮಗಳೆ, ನಾನು ನಿನ್ನ ಗಂಡನನ್ನು ಈ ಯಜ್ಞ ಸಮಾರಂಭಕ್ಕೆ ಆಮಂತ್ರಿಸಲಿಲ್ಲ. ಅವನ ಆಗಮನದಿಂದ ಜನರು ಅಸಹ್ಯಪಟ್ಟುಕೊಂಡರೆ ನನಗೂ ಅವಮಾನ, ನಿನಗೂ ಅವಮಾನ ಆಗಮಿಸಿದ ಅತಿಥಿಗಳ ಎದುರು ಅವನನ್ನು ಬರಮಾಡಿಕೊಳ್ಳಲು ನನಗೆ ನಾಚಿಕೆ ಎನಿಸಿ, ಆಮಂತ್ರಿಸಲಿಲ್ಲ.

ಈ ಯಜ್ಞವು ಮುಗಿದು ಹೋಗಲಿ. ಅನಂತರ ಕೈಲಾಸ ಪರ್ವತಕ್ಕೆ ಹೋಗಿ ಪರಮೇಶ್ವರನಿಗೆ ಪೂಜೆಮಾಡಿ ಆದರದಿಂದ ನಿನ್ನೊಂದಿಗೆ ಅವನನ್ನು ನಾನೇ ಆಮಂತ್ರಣಕೊಟ್ಟು ಕರೆದುಕೊಂಡು ಬರುತ್ತೇನೆ. ನಾನು ಮೂರು ಲೋಕದಲ್ಲಿ ಯಾರಿಗೂ ಮಾಡಲಾರದಷ್ಟು ಗೌರವ, ಮರ್ಯದೆ, ಪೂಜೆಯನ್ನು ನಿನ್ನ ಪತಿಗೆ ಯಜ್ಞ ಸಮಾಪ್ತಿಯ ನಂತರ ಮಾಡುತ್ತೇನೆ. ಈ ವಿಷಯದಲ್ಲಿ ನೀನು ಕೋಪ ಮಾಡಿಕೊಳ್ಳಬೇಡ. ನನ್ನ ಸರ್ವಸ್ವವನ್ನೇ ಆ ಕಾಲದಲ್ಲಿ ಬೇಡಿದರೆ ನಿನಗೆ ಕೊಟ್ಟು ಬಿಡುತ್ತೇನೆ. ಇಂಥ ಅಸಹ್ಯ ರೂಪದ ಅವ್ಯವಹಾರಿಯ ಪ್ರಭಾವದ ವ್ಯಕ್ತಿಗೆ ನಿನ್ನನ್ನು ಮದುವೆ ಮಾಡಿಕೊಟ್ಟದ್ದಕ್ಕೆ ಬೇಸರಿಸಬೇಡ. ಜನ್ಮಾಂತರದಲ್ಲಿ ನಾವು ಮಾಡಿದ ಕರ್ಮಕ್ಕೆ ಅನುಸಾರವಾಗಿ ಈ ಜನ್ಮದಲ್ಲಿ ಫಲವನ್ನು ಅನುಭವಿಸಬೇಕಾಗುವುದು. ನಿನ್ನ ಪೂರ್ವ ಜನ್ಮದ ಕರ್ಮಕ್ಕೆ ಅನುಸರಿಸಿ ಈ ಜನ್ಮದಲ್ಲಿ ನಿನಗೆ ಇಂಥ ಗಂಡ ದೊರಕಿದ್ದಾನೆ. ಇದನ್ನು ನೀನು ಅನುಭವಿಸಲೇಬೇಕು.

''ಮಗಳೇ, ಸುಂದರವಾದ ರೂಪ, ಯಥೇಚ್ಛ ಐಶ್ವರ್ಯ, ಶಾಶ್ವತ ಕೀರ್ತಿ, ಚಿರಸೌಭಾಗ್ಯ, ಅಮೂಲ್ಯ ಆಭರಣ, ಸತ್ಕುಲದಲ್ಲಿ ಜನ್ಮ, ಸುಂದರವಾದ ಶರೀರ ಇವೆಲ್ಲವೂ ಜನ್ಮಾಂತರದ ಪುಣ್ಯ ಕರ್ಮದಿಂದಲೇ ದೊರಕುತ್ತವೆ. ಆದುದರಿಂದ ಇಂಥ ವಿಕ್ಷಿಪ್ತ ಮನುಷ್ಯನಿಗೆ ನಿನ್ನನ್ನು ಮದುವೆ ಮಾಡಿಕೊಟ್ಟಿದ್ದಕೆ ನನ್ನನ್ನು ನಿಂದಿಸಬೇಡ. ಅದೃಷ್ಟವನ್ನು ಹಳಿಯಬೇಡ. ಕನ್ಯಾದಾನ ಮಾಡಿಕೊಡಲು ಬಿಡಲು ನಾವು ಎಷ್ಟರವರು ? ಅವರವರ ಕರ್ಮದ ಫಲವನ್ನು ಅವರವರು ಅನುಭವಿಸುತ್ತಾರೆ.'' ತಂದೆಯ ಮಾತುಗಳನ್ನು ಕೇಳಿ ಸತೀದೇವಿಗೆ ಬಹಳ ದುಃಖವಾಯಿತು. ಕೋಪವೂ ಬಂದಿತು. ಕಣ್ಣು ಕೆಂಪಾದವು. ಅವಳು ತಂದೆಯನ್ನು ನಿಂದಿಸಿ ನುಡಿದಳು.

**ಸತಿ :-** ''ತಂದೆಯೇ, ನೀನು ಇದೀಗ ಹೇಳಿದ ಮಾತುಗಳೆಲ್ಲವೂ ನಿಜ. ಪುಣ್ಯವಂತರು ತಮ್ಮ ಪೂರ್ವಾಜಿತ ಪುಣ್ಯದಿಂದಲೇ ಐಶ್ವರ್ಯವನ್ನು ಒಳ್ಳೇ ಕುಲದಲ್ಲಿ ಜನನವನ್ನು, ಭೋಗಗಳನ್ನು ಹೊಂದುತ್ತಾರೆ. ನನ್ನ ಪತಿ ಪರಮೇಶ್ವರನು ಎಲ್ಲ ಪುಣ್ಯ ಪಾಪಗಳಿಗೆ ನಿಯಾಮಕನಾಗಿದ್ದಾನೆ. ಇಂದ್ರಾದಿ ದೇವತೆಗಳಿಗೆ ಈ ಎಲ್ಲ ಸ್ಥಾನ- ಮಾನಗಳನ್ನು ಕರುಣಿಸಿದ ಮಹಾಪ್ರಭು ಮಹಾದೇವನೇ. ಆ ಶಂಭುವಿನ ಗುಣಗಳನ್ನು ಬಣ್ಣಿಸಲಿಕ್ಕೆ ಯಾವ ದೇವರಿಗೂ ಶಕ್ಯವಿಲ್ಲ. ಜಗತ್ತಿನ ಕಾರಕ, ತಾರಕ, ಮಾರಕನು ಅವನೇ. ರುದ್ರನ ಪ್ರಸಾದದಿಂದಲೇ ಇಂದ್ರನಿಗೆ ಸ್ವರ್ಗಾಧಿಪತ್ಯವು ದೊರೆತದ್ದು. ಪ್ರಪಂಚವನ್ನು ಬ್ರಹ್ಮನು ಸೃಷ್ಟಿಸಿದ್ದು ಶಿವನ ಆಜ್ಞೆಯಿಂದಲೇ. ಸದ್ಗುಣಗಳಲ್ಲಿ, ಪ್ರಭುತ್ವದಲ್ಲಿ ಅವನಿಗಿಂತ ಮಿಗಿಲ್ಯಾರು ? ಈ ಜಗತ್ತು ನಡೆದದ್ದು ಶಿವನಿಂದ. ಭೂಮಿ ನಿಂತದ್ದು, ಎಲ್ಲರೂ ಬದುಕಿದ್ದು ಶಿವನಿಂದ. ನಾನು ಹೇಳಿದಂತೆ ನನ್ನ ಪತಿ ರುದ್ರನಲ್ಲಿ ದೇವತ್ವವು ಇದ್ದರೆ, ಅವನು ಸರ್ವಾಂತರ್ಯಾಮಿಯಾದ, ಸರ್ವತ್ರ ವ್ಯಾಪ್ತನಾದ ಮಹಾದೇವನಾಗಿ ಇದ್ದುದ್ದು ನಿಜವಾದರೆ ನಾನು ಒಬ್ಬಳೇ ಈ ನಿನ್ನ ಯಜ್ಞಮಂಟಪದಲ್ಲಿ ನುಡಿದ ಮಾತು, ಮಾಡಿದ ಪ್ರತಿಜ್ಞೆ ತಿಳಿದು ಅವನು ಈಗಲೇ ಬಂದು ನಿನ್ನ ಯಜ್ಞವನ್ನು ಧ್ವಂಸಮಾಡಲಿ. ನಾನು ಏನಾದರೂ ಪುಣ್ಯ ತಪಸ್ಸುಮಾಡಿದ್ದರೆ ಅದರಿಂದ ನಿನ್ನ ಯಾಗವು ಧ್ವಂಸವಾಗಿ ಹೋಗಲಿ. ನಾನು ಪರಮೇಶ್ವರನಿಗೆ ಪ್ರಿಯಳಾದದ್ದು ನಿಜವಾದರೆ ಅವನು ನನ್ನನ್ನು ಉದ್ಧಾರಮಾಡುವುದು ಸತ್ಯವಾದರೆ ನಾನು ನಿನ್ನಿಂದ ಪಡೆದ ಈ ನನ್ನ ದೇಹವು ಇಲ್ಲಿಯೇ ನಾಶ ಹೊಂದಲಿ.''

ಹೀಗೆ ನುಡಿದು ಸತಿಯು ಯೋಗಾರೂಢಳಾದಳು. ಅವಳ ದೇಹದಿಂದ ಒಮ್ಮೆಲೆ ವಿಲಕ್ಷಣವಾದ ತೇಜಸ್ಸು ಹೊರಬಿದ್ದಿತು. ತನ್ನ ದೇಹದಿಂದ ಜನಿಸಿದ ಆ ಯೋಗಾಗ್ನಿಯಿಂದ ಅವಳು ತನ್ನ ದೇಹವನ್ನೇ ಸುಡತೊಡಗಿದಳು. ಅಲ್ಲಿ ನೆರೆದ ದೇವ, ದೈತ್ಯ, ಸರ್ಪ, ಗಂಧರ್ವ, ಯಕ್ಷ, ಮಾನವರೆಲ್ಲರೂ ''ಏನು ? ಏಕೆ ? ಹೀಗೇಕೆ ? ಈ ಆತ್ಮ ದಹನಕ್ಕೆ ಕಾರಣವೇನು ?'' ಎಂದು ಕೂಗುತ್ತಿರುವಂತೆಯೇ ಅತ್ಯಂತ ಕ್ರುದ್ಧಳಾದ ಆ ಸತಿದೇವಿಯು ಆ ಗಂಗಾ ನದಿಯ ತೀರದಲ್ಲಿ ತನ್ನ ದೇಹವನ್ನು ಪರಿತ್ಯಾಗ ಮಾಡಿದಳು. ಗಂಗೆಯ ಪಡುವಲ ತಡಿಯಲ್ಲಿ ಸತಿದೇವಿಯು ದೇಹತ್ಯಾಗ ಮಾಡಿದ ಸ್ಥಾನವು **''ಮಲ್ಲಕತೀರ್ಥ''**ವೆಂದು ಪ್ರಸಿದ್ಧವಾಗಿದೆ.

ಪತ್ನಿಯ ದೇಹೋತ್ಸರ್ಗ ಸಮಾಚಾರವನ್ನು ಕೇಳಿ ರುದ್ರನಿಗೆ ಬಹಳ ದುಃಖವು ಆಯಿತು. ದಕ್ಷನ ಯಜ್ಞವನ್ನು ವಿಧ್ವಂಸಗೈಯಲು ವೀರಭದ್ರನಿಗೆ ಅಪ್ಪಣೆಮಾಡಿದನು. ಅದರಂತೆ ಕೋಟಿ ಕೋಟಿ ಗಣಾಧೀಶರು ವೈನಾಯಕ ಮುಂತಾದ ಗ್ರಹಗಳು, ಭೂತ, ಪ್ರೇತ, ಪಿಶಾಚ, ಪರಿವಾರದವರು ದಕ್ಷಯಜ್ಞ ವಿನಾಶಕ್ಕಾಗಿ ಪರಮೇಶ್ವರನ ಅಪ್ಪಣೆಯಿಂದ ದೇವತೆಗಳು ಪಾರ್ವತಿಯ ದೇಹದಹನವನ್ನು ನೋಡ ನೋಡುತ್ತಿರುವಾಗಲೆ ಅಲ್ಲಿಗೆ ಬಂದರು. ಬಂದವರೇ ದೇವತೆಗಳ ಮೇಲೆ ಏರಿ ಬಂದರು. ಕೈಗೆ ಸಿಕ್ಕವರನ್ನೆಲ್ಲ ಕೊಂದರು. ಹೊಟ್ಟೆ ಹಿಡಿಯುವವರೆಗೆ ತಿಂದರು. ಯಜ್ಞವನ್ನು ಧ್ವಂಸ ಮಾಡಿದರು. ದೇವತೆಗಳನ್ನೆಲ್ಲ ಸೋಲಿಸಿಬಿಟ್ಟರು.

ಹೀಗೆ ಯಜ್ಞವೆಲ್ಲವೂ ಶಿವಸೇನೆಯಿಂದ ಉಧ್ವಸ್ತವಾಗಲು ದಕ್ಷಪ್ರಜಾಪತಿಯ ಉತ್ಸಾಹವೆಲ್ಲ ಉಡುಗಿ ಹೋಯಿತು. ಏನು ಮಾಡುವುದೆಂಬುದು ತಿಳಿಯದಾಯಿತು. ಅವನು ದೇವತೆಗಳಿಗೆಲ್ಲ ದೇವನೆನಿಸಿದ ಶಿವನ ಬಳಿಗೆ ಬಂದನು. ದೈನ್ಯದಿಂದ ಬೇಡಿಕೊಂಡನು. ''ಮಹೇಶ್ವರ, ನನಗೆ ನಿನ್ನ ಸ್ವರೂಪವು ತಿಳಿಯಲಿಲ್ಲ. ದೇವತೆಗಳಿಗೆಲ್ಲ ನೀನೇ ಪ್ರಭು, ಪ್ರಪಂಚಕ್ಕೆಲ್ಲ ನೀನೇ ಒಡೆಯ. ಎಲ್ಲ ದೇವತೆಗಳನ್ನು ಈಗ ನೀನು ಗೆದ್ದು ಬಿಟ್ಟಿರುವೆ. ಇನ್ನು ಮೇಲಾದರೂ ನನ್ನ ಮೇಲೆ ಕರುಣೆತೋರು. ಯಜ್ಞಮಂಟಪದಲ್ಲಿ ತಾಂಡವ ನಡೆಸಿದ ಈ ನಿನ್ನ ಗಣಗಳನ್ನು ಹಿಂದಕ್ಕೆ ಕರೆದುಕೊ. ಈ ನಿನ್ನ ಗಣಾಧಿಪರ ಸ್ವರೂಪವನ್ನು ಕಂಡೆಯಾ ! ಇವರ ಭೀಕರ ಆಕಾರವನ್ನು ನೋಡಿದರೆ ಹೆದರಿಕೆ ಆಗುವುದು. ಇವರಿಗೆ ಒಬ್ಬೊಬ್ಬರಿಗೂ ಅನೇಕ ಮುಖಗಳು. ಪ್ರತಿಯೊಬ್ಬರ ಕೈಯಲ್ಲಿಯೂ ಬಗೆ ಬಗೆಯ ಘೋರ ಆಯುಧಗಳು. ಪ್ರತಿಯೊಬ್ಬರಿಗೂ ಅಕರಾಳ-ವಿಕರಾಳ ರೂಪ. ಕೋಪದಿಂದ ಕೂದಲು ಜಾಡಿಸಿದರೆ ಮುಗಿಲಿನಲ್ಲಿಯ ಮೋಡಗಳು ಪುಡಿಪುಡಿ ಆಗುವವು. ಎಲ್ಲರೂ ಸಿಂಹದಂತೆ ಸತ್ವಶಾಲಿಗಳು. ಆನೆಯಂತೆ ಬಲಿಷ್ಠರು. ಎಲ್ಲರ ಕೈ, ಕೊರಳು, ಹೆಗಲುಗಳಲ್ಲಿ ಹರಿದಾಡುವ ಹಾವುಗಳು. ಇವರ ಕೈಯಲ್ಲಿರುವ ಬಿಲ್ಲು, ಬಾಣ, ಖಡ್ಗ, ಕೊಡಲಿ, ಕರಗಸ, ಸರಳು, ಗದೆ, ಒನಕೆ, ಬೆಂಕಿಯ ಬಳ್ಳಿ, ಅಗಳಿ, ವಜ್ರ, ಶಕ್ತಿ ಭಲ್ಲೆ, ಹಾರೆ, ತ್ರಿಶೂಲ, ಪಾಶ ಮುಂತಾದ ಆಯುಧಗಳು ಒಂದೊಂದು ಯಮದಂಡದಷ್ಟು ಪ್ರಚಂಡವಾಗಿವೆ. ಇವರೆಲ್ಲರೂ ಏರಿ ಬಂದು ನನ್ನ ಯಜ್ಞವನ್ನು ಸಂಪೂರ್ಣವಾಗಿ ಹಾಳುಗೈದಿದ್ದಾರೆ. ಇನ್ನೇನು ಇಲ್ಲಿ ಇವರ ಕೆಲಸ ? ಮರಳಿ ಇವರನ್ನೆಲ್ಲ ಹಿಂದಕ್ಕೆ ಕರೆಸಿಕೊಂಡು, ಈ ವಿಧ್ವಂಸನ ಕಾರ್ಯವನ್ನು ಮುಗಿಸಲಿಕ್ಕೆ ಹೇಳು. ವಿಧ್ವಸ್ತವಾದ

ಯಜ್ಞವು ಹೆದರಿ, ಹೌಹಾರಿ ಒಂದು ಚಿಗರೆಯ ರೂಪದಿಂದ ಮುಗಿಲ ಮೇಲೆ ಹಾರಿ ಹೋಯಿತು. ಆದುದರಿಂದ ನಿನ್ನ ಪರಿವಾರದವರನ್ನು ವಿನಾಶದ ವ್ಯಾಪಾರದಿಂದ ತಡೆಗಟ್ಟು. ಬ್ರಹ್ಮರೂಪಿಯಾದ ನಿನಗೆ ನನ್ನ ನಮಸ್ಕಾರವಿರಲಿ. ನಾನು ನಿನಗೆ ಭಕ್ತಿಯಿಂದ ವಂದಿಸುವೆ. ಪಶ್ಚಾತಾಪದಿಂದ ಕ್ಷಮೆಕೇಳಿ, ದೀನನಾಗಿ ಕ್ಷಮಿಸಬೇಕೆಂದು ಪ್ರಾರ್ಥಿಸುವೆ.

### ದಕ್ಷ ಪ್ರಜಾಪತಿ ಮಾಡಿದ ಶಿವಸ್ತೋತ್ರ

''ನಮಶ್ಶಂಖಾಭದೇವಾಯ ಸಗಣಾಯ ಸನಂದಿನೇ ।
ವೃಷಾಸನಾಯ ಸೋಮಾಯ ಶೂಲಶಕ್ತ್ಯರ್ಷ್ಟಿ ಧಾರಿಣೇ ॥

ನಮೋ ದಿಕ್ಚರ್ಮ ವಸ್ತ್ರಾಯ ಯಶಸೇ ತೀವ್ರ ಚೇತಸೇ ।
ಬ್ರಹ್ಮಣೇ ಬ್ರಹ್ಮದೇವಾಯ ಬ್ರಹ್ಮಣಾ ಯಾಜಿತಾಯ ಚ ॥

ನಮೋಂಧಕ ವಿನಾಶಾಯ ಕ್ರತುವಲ್ಕಲಧಾರಿಣೇ ।
ರುದ್ರಾಯ ಪ್ರಜಾವಜ್ರಾಯ ಶಿವಾಯ ಕ್ರಥನಾಯ ಚ ॥

ಗಿರೀಶಾಯ ಸುರೇಶಾಯ ಈಶಾನಾಯ ನಮೋ ನಮಃ ।
ಧೂಮ್ರೋಗ್ರಾಯ ವಿರೂಪಾಯ ಗದಿನೇ ದಿವ್ಯರೂಪಿಣೇ ॥

ಸುರಾಸುರಾಧಿಪತಯೇ ಯತೀನಾಂ ಪತಯೇ ನಮಃ ।
ದೇವದೇವಾಧಿ ದೇವಾಯ ವ್ಯಾಘ್ರ ಚರ್ಮಾಸಿ ಧಾರಿಣೇ ॥

ವಿರೂಪಾಕ್ಷ ಶುಭಾಕ್ಷಾಯ ಸಹಸ್ರಾಕ್ಷಾಯ ತೇ ನಮಃ ।
ಈಶಾನಾಯ ವಿಶಾಲಾಯ ತ್ರಿನೇತ್ರಾಯ ಚ ಧನ್ವಿನೇ ॥

ದರ್ಪಾಹತಾಯ ದೇವಾಯ ಸರ್ವಸಂಹಾರಿಣೇ ನಮಃ ।
ಭಕ್ತಾನುಕಂಪಿನೇ ತುಭ್ಯಂ ರುದ್ರಜಾಪ್ಯಸ್ತುತಾಯ ಚ ॥

ವಿರೂಪಾಯ ಸ್ವರೂಪಾಯ ರೂಪಾಣಾಂ ಶತಧಾರಿಣೇ ।
ಪಂಚಾಸ್ಯಾಯ ಶುಭಸ್ಯಾಯ ಚಂದ್ರಾಸ್ಯಾಯ ನಮೋನಮಃ ।
ವರದಾಯ ವರಾರ್ಹಾಯ ಮೃಗಾಯ ಕೂರ್ಮ ಧಾರಿಣೇ ॥

ನೀಲಾಲಕ ಶಿಖಂಡಾಯ ಕಮಂಡಲು ಧರಾಯ ಚ ।
ವಿಶ್ವನಾಮ್ನೇಚ ವಿಶ್ವಾಯ ವಿಶ್ವೇಶಾಯ ನಮೋ ನಮಃ ।
ತ್ರಿನೇತ್ರ ತ್ರಾಣಮಸ್ಮಾಕಂ ತ್ರಿಪುರಘ್ನ ವಿಧೀಯತಾಂ ॥

ವಾಙ್ಮನಃ ಕಾಯಭಾವೈಸ್ತ್ವಾಂ ಪ್ರಪನ್ನೋಽಸ್ಮಿ ಮಹೇಶ್ವರ ।
ಏವಂ ಸ್ತುತಸ್ತದಾ ದೇವೋ ದಕ್ಷೇಣಾಪನ್ನ ದೇಹಿನಾ ॥

ಶಂಖದಂತೆ, ಧವಲದೇಹದ, ನಂದಿಯೆಂಬ ಎತ್ತನ್ನು ಆರೋಹಣ ಮಾಡಿದ ಶೂಲ, ಶಕ್ತಿ ಮುಂತಾದ ಆಯುಧಗಳನ್ನು ಧರಿಸಿದ, ಗುಣಗಳಿಂದ ಪರಿವೃತನಾದ ಮಹಾದೇವನಿಗೆ ನಮಸ್ಕಾರ. ದಿಗಂಬರನೂ, ಚರ್ಮರೂಪವಾದ ವಸ್ತ್ರ ಧರಿಸಿದವನೂ, ಜ್ಞಾನರೂಪಿಯೂ, ಬ್ರಹ್ಮಾಧಿಷ್ಠಿತನೂ, ಯಾರಿಂದಲೂ ಗೆಲ್ಲಲು ಅಶಕ್ಯನೂ, ಅಂಧಕ ಶತ್ರುವೂ,

ಹೀಗೆ ನುಡಿದು ಸತಿಯು ಯೋಗಾರೂಢಳಾದಳು. ಅವಳ ದೇಹದಿಂದ ಒಮ್ಮೆಲೆ ವಿಲಕ್ಷಣವಾದ ತೇಜಸ್ಸು ಹೊರಬಿದ್ದಿತು. ತನ್ನ ದೇಹದಿಂದ ಜನಿಸಿದ ಆ ಯೋಗಾಗ್ನಿಯಿಂದ ಅವಳು ತನ್ನ ದೇಹವನ್ನೇ ಸುಡತೊಡಗಿದಳು. ಅಲ್ಲಿ ನೆರೆದ ದೇವ, ದೈತ್ಯ, ಸರ್ಪ, ಗಂಧರ್ವ, ಯಕ್ಷ, ಮಾನವರೆಲ್ಲರೂ ''ಏನು ? ಏಕೆ ? ಹೀಗೇಕೆ ? ಈ ಆತ್ಮ ದಹನಕ್ಕೆ ಕಾರಣವೇನು ?'' ಎಂದು ಕೂಗುತ್ತಿರುವಂತೆಯೇ ಅತ್ಯಂತ ಕ್ಷುದ್ರಳಾದ ಆ ಸತಿದೇವಿಯು ಆ ಗಂಗಾ ನದಿಯ ತೀರದಲ್ಲಿ ತನ್ನ ದೇಹವನ್ನು ಪರಿತ್ಯಾಗ ಮಾಡಿದಳು. ಗಂಗೆಯ ಪಡುವಲ ತಡಿಯಲ್ಲಿ ಸತಿದೇವಿಯು ದೇಹತ್ಯಾಗ ಮಾಡಿದ ಸ್ಥಾನವು **''ಮಲ್ಲಕತೀರ್ಥ''**ವೆಂದು ಪ್ರಸಿದ್ಧವಾಗಿದೆ.

ಪತ್ನಿಯ ದೇಹೋತ್ಸರ್ಗ ಸಮಾಚಾರವನ್ನು ಕೇಳಿ ರುದ್ರನಿಗೆ ಬಹಳ ದುಃಖವು ಆಯಿತು. ದಕ್ಷನ ಯಜ್ಞವನ್ನು ವಿಧ್ವಂಸಗೈಯಲು ವೀರಭದ್ರನಿಗೆ ಅಪ್ಪಣೆಮಾಡಿದನು. ಆದರಂತೆ ಕೋಟಿ ಕೋಟಿ ಗಣಾಧೀಶರು ವೈನಾಯಕ ಮುಂತಾದ ಗ್ರಹಗಳು, ಭೂತ, ಪ್ರೇತ, ಪಿಶಾಚ, ಪರಿವಾರದವರು ದಕ್ಷಯಜ್ಞ ವಿನಾಶಕ್ಕಾಗಿ ಪರಮೇಶ್ವರನ ಅಪ್ಪಣೆಯಿಂದ ದೇವತೆಗಳು ಪಾರ್ವತಿಯ ದೇಹದಹನವನ್ನು ನೋಡ ನೋಡುತ್ತಿರುವಾಗಲೆ ಅಲ್ಲಿಗೆ ಬಂದರು. ಬಂದವರೇ ದೇವತೆಗಳ ಮೇಲೆ ಏರಿ ಬಂದರು. ಕೈಗೆ ಸಿಕ್ಕವರನ್ನೆಲ್ಲ ಕೊಂದರು. ಹೊಟ್ಟೆ ಹಿಡಿಯುವವರೆಗೆ ತಿಂದರು. ಯಜ್ಞವನ್ನು ಧ್ವಂಸ ಮಾಡಿದರು. ದೇವತೆಗಳನ್ನೆಲ್ಲ ಸೋಲಿಸಿಬಿಟ್ಟರು.

ಹೀಗೆ ಯಜ್ಞವೆಲ್ಲವೂ ಶಿವಸೇನೆಯಿಂದ ಉಧ್ವಸ್ತವಾಗಲು ದಕ್ಷಪ್ರಜಾಪತಿಯ ಉತ್ಸಾಹವೆಲ್ಲ ಉಡುಗಿ ಹೋಯಿತು. ಏನು ಮಾಡುವುದೆಂಬುದು ತಿಳಿಯದಾಯಿತು. ಅವನು ದೇವತೆಗಳಿಗೆಲ್ಲ ದೇವನೆನಿಸಿದ ಶಿವನ ಬಳಿಗೆ ಬಂದನು. ದೈನ್ಯದಿಂದ ಬೇಡಿಕೊಂಡನು. ''ಮಹೇಶ್ವರ, ನನಗೆ ನಿನ್ನ ಸ್ವರೂಪವು ತಿಳಿಯಲಿಲ್ಲ. ದೇವತೆಗಳಿಗೆಲ್ಲ ನೀನೇ ಪ್ರಭು, ಪ್ರಪಂಚಕ್ಕೆಲ್ಲ ನೀನೇ ಒಡೆಯ. ಎಲ್ಲ ದೇವತೆಗಳನ್ನು ಈಗ ನೀನು ಗೆದ್ದು ಬಿಟ್ಟಿರುವೆ. ಇನ್ನು ಮೇಲಾದರೂ ನನ್ನ ಮೇಲೆ ಕರುಣೆತೋರು. ಯಜ್ಞಮಂಟಪದಲ್ಲಿ ತಾಂಡವ ನಡೆಸಿದ ಈ ನಿನ್ನ ಗಣಗಳನ್ನು ಹಿಂದಕ್ಕೆ ಕರೆದುಕೊ. ಈ ನಿನ್ನ ಗಣಾಧಿಪರ ಸ್ವರೂಪವನ್ನು ಕಂಡೆಯಾ ! ಇವರ ಭೀಕರ ಆಕಾರವನ್ನು ನೋಡಿದರೆ ಹೆದರಿಕೆ ಆಗುವುದು. ಇವರಿಗೆ ಒಬ್ಬೊಬ್ಬರಿಗೂ ಅನೇಕ ಮುಖಗಳು. ಪ್ರತಿಯೊಬ್ಬರ ಕೈಯಲ್ಲಿಯೂ ಬಗೆ ಬಗೆಯ ಘೋರ ಆಯುಧಗಳು. ಪ್ರತಿಯೊಬ್ಬರಿಗೂ ಅಕರಾಳ-ವಿಕರಾಳ ರೂಪ. ಕೋಪದಿಂದ ಕೂದಲು ಜಾಡಿಸಿದರೆ ಮುಗಿಲಿನಲ್ಲಿಯ ಮೋಡಗಳು ಪುಡಿಪುಡಿ ಆಗುವವು. ಎಲ್ಲರೂ ಸಿಂಹದಂತೆ ಸತ್ವಶಾಲಿಗಳು. ಆನೆಯಂತೆ ಬಲಿಷ್ಠರು. ಎಲ್ಲರ ಕೈ, ಕೊರಳು, ಹೆಗಲುಗಳಲ್ಲಿ ಹರಿದಾಡುವ ಹಾವುಗಳು. ಇವರ ಕೈಯಲ್ಲಿರುವ ಬಿಲ್ಲು, ಬಾಣ, ಖಡ್ಗ, ಕೊಡಲಿ, ಕರಗಸ, ಸರಳು, ಗದೆ, ಒನಕೆ, ಬೆಂಕಿಯ ಬಳ್ಳಿ, ಅಗಳಿ, ವಜ್ರ, ಶಕ್ತಿ ಭಲ್ಲೆ, ಹಾರೆ, ತ್ರಿಶೂಲ, ಪಾಶ ಮುಂತಾದ ಆಯುಧಗಳು ಒಂದೊಂದು ಯಮದಂಡದಷ್ಟು ಪ್ರಚಂಡವಾಗಿವೆ. ಇವರೆಲ್ಲರೂ ಏರಿ ಬಂದು ನನ್ನ ಯಜ್ಞವನ್ನು ಸಂಪೂರ್ಣವಾಗಿ ಹಾಳುಗೈದಿದ್ದಾರೆ. ಇನ್ನೇನು ಇಲ್ಲಿ ಇವರ ಕೆಲಸ ? ಮರಳಿ ಇವರನ್ನೆಲ್ಲ ಹಿಂದಕ್ಕೆ ಕರೆಸಿಕೊಂಡು, ಈ ವಿಧ್ವಂಸನ ಕಾರ್ಯವನ್ನು ಮುಗಿಸಲಿಕ್ಕೆ ಹೇಳು. ವಿಧ್ವಸ್ತವಾದ

ಯಜ್ಞವು ಹೆದರಿ, ಹೌಹಾರಿ ಒಂದು ಜಿಗರೆಯ ರೂಪದಿಂದ ಮುಗಿಲ ಮೇಲೆ ಹಾರಿ ಹೋಯಿತು. ಆದುದರಿಂದ ನಿನ್ನ ಪರಿವಾರದವರನ್ನು ವಿನಾಶದ ವ್ಯಾಪಾರದಿಂದ ತಡೆಗಟ್ಟು. ಬ್ರಹ್ಮರೂಪಿಯಾದ ನಿನಗೆ ನನ್ನ ನಮಸ್ಕಾರವಿರಲಿ. ನಾನು ನಿನಗೆ ಭಕ್ತಿಯಿಂದ ವಂದಿಸುವೆ. ಪಶ್ಚಾತಾಪದಿಂದ ಕ್ಷಮೆಕೇಳಿ, ದೀನನಾಗಿ ಕ್ಷಮಿಸಬೇಕೆಂದು ಪ್ರಾರ್ಥಿಸುವೆ.

## ದಕ್ಷ ಪ್ರಜಾಪತಿ ಮಾಡಿದ ಶಿವಸ್ತೋತ್ರ

''ನಮಶ್ಶಂಖಾಭದೇವಾಯ ಸಗಣಾಯ ಸನಂದಿನೇ ।
ವೃಷಾಸನಾಯ ಸೋಮಾಯ ಶೂಲಶಕ್ತ್ಯರ್ಷ್ಟಿ ಧಾರಿಣೇ ॥
ನಮೋ ದಿಕ್ಚರ್ಮ ವಸ್ತ್ರಾಯ ಯಶಸೇ ತೀವ್ರ ಚೇತಸೇ ।
ಬ್ರಹ್ಮಣೇ ಬ್ರಹ್ಮದೇವಾಯ ಬ್ರಹ್ಮಣಾ ಯಾಜಿತಾಯ ಚ ॥
ನಮೋಂಧಕ ವಿನಾಶಾಯ ಕ್ರತುವಲ್ಕಲಧಾರಿಣೇ ।
ರುದ್ರಾಯ ಪ್ರಜಾವಜ್ರಾಯ ಶಿವಾಯ ಕ್ರಥನಾಯ ಚ ॥
ಗಿರೀಶಾಯ ಸುರೇಶಾಯ ಈಶಾನಾಯ ನಮೋ ನಮಃ ।
ಧೂಮ್ರೋಗ್ರಾಯ ವಿರೂಪಾಯ ಗದಿನೇ ದಿವ್ಯರೂಪಿಣೇ ॥
ಸುರಾಸುರಾಧಿಪತಯೇ ಯತೀನಾಂ ಪತಯೇ ನಮಃ ।
ದೇವದೇವಾಧಿ ದೇವಾಯ ವ್ಯಾಘ್ರ ಚರ್ಮಾಸಿ ಧಾರಿಣೇ ॥
ವಿರೂಪಾಕ್ಷ ಶುಭಾಕ್ಷಾಯ ಸಹಸ್ರಾಕ್ಷಾಯ ತೇ ನಮಃ ।
ಈಶಾನಾಯ ವಿಶಾಲಾಯ ತ್ರಿನೇತ್ರಾಯ ಚ ಧನ್ವಿನೇ ॥
ದರ್ಪಾಹತಾಯ ದೇವಾಯ ಸರ್ವಸಂಹಾರಿಣೇ ನಮಃ ।
ಭಕ್ತಾನುಕಂಪಿನೇ ತುಭ್ಯಂ ರುದ್ರಜಾಪ್ಯಸ್ತುತಾಯ ಚ ॥
ವಿರೂಪಾಯ ಸ್ವರೂಪಾಯ ರೂಪಾಣಾಂ ಶತಧಾರಿಣೇ ।
ಪಂಚಾಸ್ಯಾಯ ಶುಭಸ್ಯಾಯ ಚಂದ್ರಾಸ್ಯಾಯ ನಮೋನಮಃ ।
ವರದಾಯ ವರಾರ್ಹಾಯ ಮೃಗಾಯ ಕೂರ್ಮ ಧಾರಿಣೇ ॥
ನೀಲಾಲಕ ಶಿಖಂಡಾಯ ಕಮಂಡಲು ಧರಾಯ ಚ ।
ವಿಶ್ವನಾಮ್ನೇಚ ವಿಶ್ವಾಯ ವಿಶ್ವೇಶಾಯ ನಮೋ ನಮಃ ।
ತ್ರಿನೇತ್ರ, ತ್ರಾಣಮಸ್ಮಾಕಂ ತ್ರಿಪುರಘ್ನ ವಿಧೀಯತಾಂ ॥
ವಾಙ್ಮನಃ ಕಾಯಭಾವೈಸ್ತ್ವಾಂ ಪ್ರಪನ್ನೋಽಸ್ಮಿ ಮಹೇಶ್ವರ ।
ಏವಂ ಸ್ತುತಸ್ತದಾ ದೇವೋ ದಕ್ಷೇಣಾಪನ್ನ ದೇಹಿನಾ ॥

ಶಂಖದಂತೆ, ಧವಲದೇಹದ, ನಂದಿಯೆಂಬ ಎತ್ತನ್ನು ಆರೋಹಣ ಮಾಡಿದ ಶೂಲ, ಶಕ್ತಿ ಮುಂತಾದ ಆಯುಧಗಳನ್ನು ಧರಿಸಿದ, ಗುಣಗಳಿಂದ ಪರಿವೃತನಾದ ಮಹಾದೇವನಿಗೆ ನಮಸ್ಕಾರ. ದಿಗಂಬರನೂ, ಚರ್ಮರೂಪವಾದ ವಸ್ತ್ರ ಧರಿಸಿದವನೂ, ಜ್ಞಾನರೂಪಿಯೂ, ಬ್ರಹ್ಮಾಧಿಷ್ಠಿತನೂ, ಯಾರಿಂದಲೂ ಗೆಲ್ಲಲು ಅಶಕ್ಯನೂ, ಅಂಧಕ ಶತ್ರುವೂ,

ಸರ್ವಸಂಹಾರಕನೂ, ವಜ್ರಾಯುಧವನ್ನು ನಿಷ್ಕ್ರಿಯಗೊಳಿಸುವವನೂ, ಕೈಲಾಸಪತಿಯೂ, ಸುರರಿಗೆ ಅಧಿಪತಿಯೂ ವಿರೂಪಾಕ್ಷನೂ, ಧೂಮವರ್ಣದಿಂದ ಅತ್ಯುಗ್ರನೂ, ದಿವ್ಯರೂಪಿಯೂ, ಸುರಾಸುರ ಪತಿಯೂ, ಯತಿಪತಿಯೂ ದೇವದೇವನೂ, ವಿಷಮಾಕ್ಷನಾದರೂ ಮಂಗಲಾಕ್ಷಕನೂ, ಸರ್ವದ್ರಷ್ಟಾರನೂ, ಭಕ್ತಾನುಕಂಪಿಯೂ, ರುದ್ರಸೂಕ್ತದಿಂದ ಪ್ರತಿಪಾದ್ಯನೂ, ಪಂಚಮುಖಿಯೂ, ಶತರೂಪಿಯೂ, ಚಂದ್ರಮುಖನೂ, ವರಪ್ರದನೂ, ನೀಲಕಂಠನೂ ವಿಶ್ವಕ್ಕೆಲ್ಲ ಈಶ್ವರನೂ, ವಿಶ್ವನಾಮಕನೂ, ತ್ರಿಪುರಾಂತಕನೂ, ಆದ ಮಹೇಶ್ವರನೇ ನಿನಗೆ ನಮೋನಮಃ ಪರಮೇಶ್ವರನೆ ನಾನು ಮನೋವಾಕ್‌ಕಾಯ ಹಾಗೂ ಭಕ್ತಿಗಳಿಂದ ಶರಣು ಬಂದಿದ್ದೇನೆ. ನನ್ನನ್ನು ರಕ್ಷಿಸು.

ಹೀಗೆ ದೇಹವನ್ನು ಪಡೆದು ದಕ್ಷಪ್ರಜಾಪತಿಯು ಸ್ತೋತ್ರಮಾಡಲು ಮಹಾದೇವನು ಸಂತುಷ್ಟನಾದನು. ಮತ್ತು ದಕ್ಷನಿಗೆ ಹೇಳಿದನು. "ಪ್ರಜಾಪತಿಯೇ ! ಈ ನಿನ್ನ ದಿವ್ಯ ಸ್ತೋತ್ರದಿಂದ ನನಗೆ ಬಹಳ ಸಂತೋಷವಾಗಿದೆ. ಸಂಪೂರ್ಣ ಯಜ್ಞ ಮಾಡಿದ ಫಲವನ್ನು ನಿನಗೆ ನಾನು ಕೊಟ್ಟಿರುತ್ತೇನೆ. ನೀನು ಇನ್ನೂ ಉತ್ತಮ ಯಜ್ಞವನ್ನು ಮಾಡಿ, ನಿನ್ನ ಸಕಲ ಇಷ್ಟಾರ್ಥಗಳನ್ನು ಪಡೆಯುವೆ." ಪಶುಪತಿಯ ಈ ಅಭಯ ವಚನವನ್ನು ಕೇಳಿ ದಕ್ಷನಿಗೆ ಸಮಾಧಾನವಾಯಿತು. ಅವನು ತನ್ನ ಅಳಿಯ ಮಹಾದೇವನಿಗೆ ನಮಿಸಿ, ಶಿವ ಗಣಗಳು ನೋಡುತ್ತಿರುವಂತೆಯೇ ತನ್ನ ಮನೆಗೆ ತೆರಳಿದನು. ಇತ್ತ ಶಂಕರನಿಗೂ ವಿಪರೀತ ದುಃಖ. ಅಗ್ನಿ ದಗ್ಧಳಾದ ಸತಿಯ ನೆನಪು ಅವನ ಎದೆಯನ್ನು ಸುಡುತ್ತಲಿತ್ತು. ಸತಿಯು ದೇಹತ್ಯಾಗ ಮಾಡಿದ ಆ ಗಂಗಾ ದ್ವಾರ ಬಿಟ್ಟು ಅವನಿಂದ ಕದಲುವುದೇ ಆಗಲಿಲ್ಲ. "ಅಯ್ಯೋ ಎಲ್ಲಿ ನನ್ನ ಪ್ರಿಯತಮೆ ! ಅವಳು ಹೋದದ್ದಾರೂ ಎಲ್ಲಿಗೆ ?" ಎಂದು ಹಗಲಿರುಳು ಚಿಂತೆ ಮಾಡತೊಡಗಿದನು. ಹೀಗೆ ಶಿವನು ಕಾಂತೆಯ ಚಿಂತೆಯಿಂದ ಸಂತಪ್ತನಾಗಿ ತೊಳಲುತ್ತಿರುವಾಗ ಅಲ್ಲಿಗೆ ನಾರದನು ಬಂದನು. ಮಹಾದೇವರನ್ನು ಕುರಿತು ಇಂತೆಂದನು.

**ನಾರದ :-** "ದೇವತೆಗಳ ದೊರೆಯೆ, ನಿನ್ನ ಪ್ರಾಣ ಸಮಾನಳಾದ ಪತ್ನಿಯು ಹಿಂದೆ ಮೃತಳಾಗಿದ್ದಳಷ್ಟೆ ! ಅದೇ ಸತೀದೇವಿಯು ಹಿಮಗಿರಿಯ ಮಗಳಾಗಿ ಮೇನಾದೇವಿಯ ಗರ್ಭದಿಂದ ಹುಟ್ಟಿ ಬಂದಿದ್ದಾಳೆ. ತತ್ವಜ್ಞಾನಿಯಾದ ಆ ಸತೀಮಣಿಯು ಬೇರೆ ದೇಹವನ್ನು ಸ್ವೀಕರಿಸಿದ್ದಾಳೆ."

ಆಗ ಮಹಾದೇವರು ಧ್ಯಾನದೃಷ್ಟಿಯಿಂದ ನೋಡಿದರು. ತನ್ನ ಪ್ರಾಣ ಪ್ರಿಯೆ ಪ್ರೇಯಸಿಯ ಮರಳಿ ಹುಟ್ಟಿ ಬಂದದ್ದು ನಿಜವೆಂದು ತಿಳಿಯಿತು. "ನನ್ನ ಕೆಲಸವಾಯಿತು" ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡನು. ಪರ್ವತ ಪುತ್ರಿಯಾಗಿ ಜನಿಸಿದ ಆ ದೇವಿಗೆ ಯೌವನವು ಬರುವ ದಾರಿಯನ್ನೇ ಕಾಯುತ್ತಲಿದ್ದ. ಅವಳ ಆ ದಿವ್ಯ ದೇಹದಲ್ಲಿ ತಾರುಣ್ಯ ಬಂದು ಲಾವಣ್ಯವು ಸೂಸ ತೊಡಗಿದಾಗ ಮತ್ತೆ ಅವಳನ್ನು ಮಹಾದೇವನು ಮದುವೆಯಾದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದಕ್ಷನ ಯಜ್ಞನ ಎಂಬ ಐದನೇ ಅಧ್ಯಾಯ ಮುಗಿದುದು*

—o—

**ಭೀಷ್ಮ :-** ಗುರುಗಳೆ, ದೇವತೆಗಳ ಉತ್ಪತ್ತಿ ಹೇಗಾಯಿತು ? ದಾನವರು ಹೇಗೆ ಹುಟ್ಟಿದರು. ಗಂಧರ್ವ, ಸರ್ಪ, ರಾಕ್ಷಸರ ಉತ್ಪತ್ತಿಯ ಕ್ರಮವೆಲ್ಲವನ್ನು ವಿಸ್ತಾರವಾಗಿ ನನಗೆ ನೀವು ನಿರೂಪಿಸಿರಿ.

**ಪುಲಸ್ತ್ಯ :-** ದಕ್ಷಪ್ರಜಾಪತಿಗಿಂತ ಮೊದಲು ಸೃಷ್ಟಿಯೆಲ್ಲವೂ ಕೇವಲ ಸಂಕಲ್ಪ ದಿಂದಲೋ ಅಥವಾ ದರ್ಶನ ಮಾತ್ರದಿಂದಲೋ ಸ್ಪರ್ಶದಿಂದಲೋ ಆಗುತ್ತಿತ್ತು. ಯಾಕೆಂದರೆ ಆ ಕಾಲದ ಸೃಷ್ಟಿ ಕರ್ತರಾದ ಬ್ರಹ್ಮ ಹಾಗೂ ಬ್ರಹ್ಮರ್ಷಿಗಳು ಮಹಾ ಮಹಿಮೋನ್ನತರು. ಅವರು ಮನಸ್ಸು ಮಾಡಿದರೂ ಸರಿ, ಕಣ್ಣಿನಿಂದ ನೋಡಿದರೂ ಸರಿ, ತನ್ನಷ್ಟಕ್ಕೆ ತಾನೇ ಸೃಷ್ಟಿಯಾಗುತ್ತಿತ್ತು. ದಕ್ಷನ ಅನಂತರದಲ್ಲಿ ಮಾತ್ರ ಗಂಡ-ಹೆಂಡತಿ ಸೇರಿ ದಾಂಪತ್ಯ ಧರ್ಮದಿಂದಲೇ ಪ್ರಜಾಸೃಷ್ಟಿ ಪ್ರಾರಂಭವಾಯಿತು. ಪೂರ್ವದಲ್ಲಿ ಈ ಪ್ರಪಂಚದ ಸೃಷ್ಟಿ ಹೇಗಾಯಿತೆಂಬುದನ್ನು ಕೇಳು :-

ಪ್ರಜಾಪತಿ ಪಟ್ಟಣದಲ್ಲಿದ್ದ ದಕ್ಷನು ಮೊದಮೊದಲು ಹಲವು ದೇವತೆಗಳನ್ನು ಕೆಲವು ಋಷಿಗಳನ್ನು ಎಷ್ಟೋ ಸರ್ಪಗಳನ್ನು ಸೃಷ್ಟಿಮಾಡಿದನು. ಇದರಿಂದ ಎಲ್ಲ ಕಡೆಗೆ ಬರಿದಾಗಿದ್ದ ಭೂಮಂಡಲವು ತುಂಬಲಿಲ್ಲ. ಆ ಸೃಷ್ಟಿಯು ಭರದಿಂದ ಮುಂದೆ ಬೆಳೆಯಲಿಲ್ಲ. ನೋಡಿದಲ್ಲೆಲ್ಲ ಭೂಮಿಯು ಬರಿದೋ ಬರಿದು. ತಿರೆ ಎಲ್ಲವೂ ತೆರವೋ ತೆರವು. ಇದನ್ನು ನೋಡಿ ಆ ದಕ್ಷಪ್ರಜಾಪತಿಯು ಹೊಸ ಹಾದಿ ಹುಡುಕಿದನು. **''ಅಸಿಕ್ನಿ''** ಎಂಬ ತನ್ನ ಮಡದಿಯೊಂದಿಗೆ ನಲುಮೆಯಿಂದ ವಿಹಾರಗೈದ. ಆದರಿಂದ ಅವನಿಗೆ ಸಾವಿರಜನ ಮಕ್ಕಳು ಹುಟ್ಟಿದರು. ಅವರೆಲ್ಲರಿಗೂ ತಮ್ಮ ತಂದೆಯಂತೆ ತಾವೂ ಹೊಸ ಸೃಷ್ಟಿಮಾಡುವ ಹಂಬಲ. ಮೈಥುನದಿಂದ ಹುಟ್ಟಿದ ದಕ್ಷನ ಸಾವಿರಜನಮಕ್ಕಳ ಗುಂಪಿಗೆ **ಹರ್ಯಶ್ವರು** ಎಂದು ಹೆಸರು. ಒಂದು ದಿನ ಈ ಹರ್ಯಶ್ವರ ಬಳಿಗೆ ನಾರದರು ಬಂದು ಹೀಗೆಂದರು :-

**ನಾರದ :-** ರಾಜಶ್ರೇಷ್ಠರೇ, ನೀವು ಹೊಸ ಸೃಷ್ಟಿಯನ್ನು ಮಾಡಲು ಹೊರಟಿರುವಿರಿ. ಸಂತೋಷ, ಆದರೆ ಮೊದಲು ಈ ಭೂಮಿಯ ಪ್ರಮಾಣ ತಿಳಿದುಕೊಂಡು ಬನ್ನಿರಿ. ಇದರ ಅಗಲವೆಷ್ಟು ಉದ್ದವೆಷ್ಟು ? ಇದರ ತಳ ಎಲ್ಲಿ ? ಇದರಲ್ಲಿ ಬಾಳಿ ಬದುಕಬಹುದಾದ ಪ್ರಾಣಿಗಳನ್ನು ಸೃಷ್ಟಿ ಮಾಡಿರಿ.

ಆ ದಕ್ಷಕುಮಾರರಾದ ಹರ್ಯಶ್ಚರರಿಗೆ ನಾರದ ಮುನಿಯ ಈ ನುಡಿಯು ನಿಜವೆನಿಸಿತು. ಭೂಮಿಯ ಪ್ರಮಾಣವನ್ನು ಮೊದಲು ತಿಳಿದುಕೊಂಡು ಬರುವದು ಅವಶ್ಯವೆನಿಸಿತು. ಅದನ್ನು ಕಂಡುಕೊಳ್ಳಲು ಅವರು ದಿಕ್ಕು ದಿಕ್ಕಿಗೆ ಹೋದರು. ಅವರಿನ್ನೂ ಮರಳಿ ಬಂದಿಲ್ಲ. ಸಾಗರದಲ್ಲಿ ಬಂದು ಕೂಡಿದ ನದಿಗಳು ಎಂದಾದರೂ ಹಿಂದಿರುಗುವವೇ ? ಹೀಗೆ ಹರ್ಯಶ್ವರೂ ತಿರುಗಿ ಬಾರದ್ದನ್ನು ಕಂಡು, ದಕ್ಷಪ್ರಜಾಪತಿಯು ತನ್ನ ಮಡದಿ ವೀರಿಣಿಯಲ್ಲಿ ಮೈಥುನ ಧರ್ಮದಿಂದ ಮತ್ತೆ ಸಾವಿರ ಪುತ್ರರನ್ನು ಪಡೆದನು. ಅವರಿಗೆ **ಶಬಲರು** ಎಂದು ಹೆಸರು. ಅವರೂ ಹೊಸ ಹುಮ್ಮಸ್ಸಿನಿಂದ ಸೃಷ್ಟಿ ಕಾರ್ಯದಲ್ಲಿ ತೊಡಗಿಸಿದರು. ಮತ್ತೆ ನಾರದರ ಆಗಮನ. ಶಬಲರ ಸ್ವಾಗತ ನಾರದರ ಉಪದೇಶ.

**ನಾರದ :-** ಮೊದಲು ಭೂಮಿಯ ಪ್ರಮಾಣವನ್ನು ತಿಳಿಯಿರಿ. ನಿಮ್ಮ ಹಿರಿಯ ಅಣ್ಣಂದಿರ ಗತಿ ಏನಾಯಿತು ಅರಿಯಿರಿ. ಅನಂತರ ಸೃಷ್ಟಿಯ ಕಾರ್ಯ ಕೈಕೊಳ್ಳಿರಿ.

ನಾರದರ ಮಾತು ಕೇಳಿ, ಶಬಲರು ಅಣ್ಣಂದಿರ ದಾರಿ ಹಿಡಿದರು. ಅವರನ್ನು ಹುಡುಕಿಕೊಂಡು ಬರಲು ನಡೆದರು. ಪುನಃ ಅವರು ಹಿಂದಿರುಗಲಿಲ್ಲ. ಅಂದಿನಿಂದ ಕಿರಿಯರು ಹಿರಿಯ ಅಣ್ಣನ ಹಾದಿ ಹಿಡಿಯುವುದಿಲ್ಲ. ಶಬಲರೂ ಕೂಡ ಮರಳಿ ಬಾರದ್ದನ್ನು ನೋಡಿ ದಕ್ಷನಿಗೆ ದುಃಖವಾಯಿತು. ಗಂಡು ಮಕ್ಕಳನ್ನು ಪಡೆಯುವುದೇ ಬೇಡವೆಂದು ನಿರ್ಧರಿಸಿದನು. ತನ್ನ ಧರ್ಮಪತ್ನಿ ವೀರಿಣಿಯಲ್ಲಿ ಅರವತ್ತು ಜನ ಹೆಣ್ಣು ಮಕ್ಕಳನ್ನು ಪಡೆದನು ಅವರಲ್ಲಿ ಹತ್ತು ಜನ ಕನ್ಯಾಮಣಿಗಳನ್ನು ಧರ್ಮನಿಗೆ ಕೊಟ್ಟನು. ಹದಿಮೂರು ಕುಮಾರಿಯನ್ನು ಕಶ್ಯಪನಿಗೆ ಧಾರೆಯೆರೆದನು. ಇಪ್ಪತ್ತೇಳು ಹೆಣ್ಣುಮಕ್ಕಳನ್ನು ಚಂದ್ರನಿಗೆ ಮದುವೆ ಮಾಡಿದನು. ನಾಲ್ಕು ಜನ ಕನ್ಯೆಯರನ್ನು ಅರಿಷ್ಟನೇಮಿಗೆ ಮದುವೆ ಮಾಡಿಕೊಟ್ಟನು. ಇಬ್ಬರು ಪುತ್ರಿಯರನ್ನು ಶುಕ್ರನಿಗೂ ಇನ್ನಿಬ್ಬರನ್ನು ಕೃಶಾಶ್ವನಿಗೂ ಮತ್ತಿಬ್ಬರನ್ನು ಅಂಗಿರಸ ಋಷಿಗೂ ಕೊಟ್ಟು ವಿವಾಹ ಮಾಡಿದನು. ದಕ್ಷಪ್ರಜಾಪತಿಯ ಈ ಅರವತ್ತು ಜನ ಹೆಣ್ಣು ಮಕ್ಕಳ ಹೆಸರು ಹೇಳುತ್ತೇನೆ ಕೇಳು -

ಅರುಂಧತಿ, ವಸು, ಜಾನಿ, ಲಂಬಾ, ಭಾನು, ಮರುತ್ವತಿ, ಸಂಕಲ್ಪಾ ಮುಹೂರ್ತಾ, ಸಾಧ್ಯಾ ಎಂಬವಳಿಂದ ಸಾಧ್ಯಾ ಎಂಬ ದೇವತೆಗಳು ಜನಿಸಿದರು. ಮರುತ್ವತಿಯಲ್ಲಿ ಮರುತ್ವಂತರು, ವಸು ಎಂಬ ವನಿತೆಯಿಂದ ಅಷ್ಟ ವಸುಗಳು, ಭಾನು ಎಂಬ ಭಾರ್ಯೆಯಿಂದ ಭಾನುಗಳು, ಮುಹೂರ್ತಾ ಎಂಬವಳಿಂದ ಮುಹೂರ್ತ ಎಂಬ ಕಲಾಭಿಮಾನಿಗಳು. ಲಂಬಾ ಎಂಬ ಲಲನೆಯಲ್ಲಿ ಘೋಷರು, ಜಾನಿಯಲ್ಲಿ ನಾಗವೀಥಿಯು, ಸಂಕಲ್ಪೆಯಲ್ಲಿ ಸಂಕಲ್ಪರು, ಅರುಂಧತಿಯಲ್ಲಿ ಭೂತಳದ ಅಸಂಖ್ಯ ಜೀವಿಗಳು ಜನಿಸಿದರು.

ಇನ್ನು ವಸು ಸಂತಾನ ಹೇಳುತ್ತೇನೆ ಕೇಳಿರಿ. ಎಲ್ಲ ದಿಕ್ಕುಗಳಲ್ಲಿ ವ್ಯಾಪಿಸಿರುವ ಜ್ಯೋತಿಷ್ಮಂತ ಎಂಬ ದೇವತೆಗಳೇ ವಸುಗಳು. ಅವರ ಸಂಖ್ಯೆ ಎಂಟು ಆಪಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಎಂದು ಈ ಎಂಟು ಜ್ಯೋತಿಷ್ಮಂತರು ಅಷ್ಟವಸುಗಳೆಂದು ಹೆಸರಾಗಿದ್ದಾರೆ. ಆಷ್ಟವಸುವಿಗೆ ಶಾಂತ, ವೈತಂಡ, ಶಾಂಖ, ಋಬ್ರು ಎಂದು ನಾಲ್ಕು ಜನ ಮಕ್ಕಳಾದರು. ಇದರಂತೆ ಧ್ರುವ ವಸುವಿಗೆ ಕಾಲ. ಸೋಮನಿಗೆ ವರ್ಚ, ಧರನಿಗೆ ದ್ರವಿಣ, ಹವ್ಯವಾಹ ಎಂಬ ಮಕ್ಕಳಾದರು. ಅನಿಲವೆಂಬ ವಸುವಿಗೆ ಕಲ್ಪದ ಕೊನೆಯಲ್ಲಿ ಬೀಸುವ ಪ್ರಾಣನೆಂಬ ವಾಯು ಹಾಗೂ ರಮಣ, ಶಿಶಿರ, ಮನೋಹರ, ಧವ, ಶಿವ ಮುಂತಾದ ಮಕ್ಕಳು ಹುಟ್ಟಿದರು. ಆ ಶಿವನಿಗೆ ಮನೋಜವ ಅವಜ್ಞಾತಗತಿ ಎಂಬ ಮಕ್ಕಳಾದವು.

ಅನಲ ವಸುವಿಗೆ ಅಗ್ನಿಯಂತಿರುವ ಮಕ್ಕಳು ಹುಟ್ಟಿದರು. ಅಗ್ನಿಯ ಪುತ್ರನಾದ ಕುಮಾರನು ಜೊಂಡಿನಲ್ಲಿ ಹುಟ್ಟಿದನು. ಹುಲ್ಲಿನ ಜೊಂಡಿನಲ್ಲಿ ಹುಟ್ಟಿರುವ ಕುಮಾರನನ್ನು ಕೃತ್ತಿಕಾ ನಕ್ಷತ್ರ ದೇವಿಯರು ಪೋಷಣೆ ಮಾಡಿದ್ದರಿಂದ ಕಾರ್ತಿಕೇಯನೆಂದು ಹೆಸರು ಬಂದಿತು. ಪ್ರತ್ಯೂಷ ಎಂಬ ವಸುವಿಗೆ ವಿಭು ಎಂಬ ಸತ್ಪುತ್ರಮ ಜನಿಸಿದರು. ಅವನೇ ಮುಂದೆ ದೇವರ್ಷಿ ಎಂದು ಪ್ರಸಿದ್ಧನಾದನು. ಪ್ರಭಾಸನೆಂಬ ಎಂಟನೆಯ ವಸುವಿನ ಮಗನೇ ವಿಶ್ವಕರ್ಮ. ಅವನು ಶಿಲ್ಪಿ ಹಾಗೂ ಸೃಷ್ಟಿಕರ್ತ. ದೇವತೆಗಳಿಗೆ ಇರಲು ದೊಡ್ಡ ದೊಡ್ಡ ಮನೆ. ವಿಹಾರಕ್ಕೆ ಉದ್ಯಾನ, ಮೀಯಲು ಸರೋವರ, ಪೂಜಿಸಲು ಪ್ರತಿಮೆ,

ಧರಿಸಲು ವಸ್ತು ಒಡವೆ, ಫಲೋಪಭೋಗಕ್ಕಾಗಿ ತೋಳಪಟ್ಟಿ ಮುಂತಾದವುಗಳನ್ನು ದೇವತೋದ್ದೇಶದಿಂದ ನಿರ್ಮಿಸಿ, ಅಮರಕುಲದ ಬಡಿಗ ಎಂದು ಈ ವಿಶ್ವಕರ್ಮನು ಪ್ರಸಿದ್ಧನಾದನು. ಬ್ರಹ್ಮದೇವರ ಮಾನಸಪುತ್ರರಾದ ರುದ್ರರದು ಹನ್ನೊಂದು ಗಣಗಳಿರುತ್ತವೆ. ಅಜೈಕಪಾತ್, ಅಹಿರ್ಬುದ್ಧ್ಯ, ವಿರೂಪಾಕ್ಷ, ರೈವತ, ಹರ, ತ್ರ್ಯಂಬಕ, ಸಾವಿತ್ರ, ಜಯಂತ, ಪಿನಾಕಿ, ಅಪರಾಜಿತ, ಸುರೇಶ್ವರ ಎಂದು ಹನ್ನೊಂದು ರುದ್ರರು ಅದೇ ಹೆಸರಿನ ಒಂದೊಂದು ರುದ್ರ ಗಣಗಳಿಗೆ ಅಧಿಪತಿಗಳಾಗಿದ್ದಾರೆ. ಈ ಹನ್ನೊಂದು ಗಣಗಳಲ್ಲಿ ಎಂಬತ್ತುನಾಲ್ಕು ಕೋಟಿ ರುದ್ರ ಗಣದವರು ಇರುತ್ತಾರೆ. ಇವರಲ್ಲಿ ನನ್ನ ಮನೆತನದ ನಾಶರಹಿತರಾದ ಹಲವು ರುದ್ರ ಭಕ್ತರು ಇರುವರು. ಇವರಲ್ಲಿ ಸುರಭಿಯ ಗರ್ಭದಿಂದ ಉತ್ಪನ್ನರಾದ ಅನೇಕ ಮಕ್ಕಳು ಮೊಮ್ಮಕ್ಕಳು ಸೇರಿರುವರು. ಈ ಎಲ್ಲ ಗಣಾಧೀಶರು ದಿಕ್ಕು, ಉಪದಿಕ್ಕುಗಳಲ್ಲಿ ಇದ್ದುಕೊಂಡು ರಕ್ಷಣಾಕಾರ್ಯ ಮಾಡುತ್ತಲಿರುವರು. ಗಣಾಧೀಶರೆಲ್ಲರೂ ಬ್ರಹ್ಮದೇವರ ಮಾನಸ ಪುತ್ರರು. ಇನ್ನು ಕಶ್ಯಪ ಋಷಿಗೆ ದಕ್ಷಪ್ರಜಾಪತಿಯು ಕೊಟ್ಟ ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧಮಾ, ಇರಾ, ಕದ್ರು, ಶುಕಿ, ಶುನಿ ಎಂಬ ಹೆಸರಿನ ಹದಿಮೂರು ಜನ ಹೆಂಡಂದಿರಿಂದ ಅಸಂಖ್ಯ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಹುಟ್ಟಿದರು. ಈ ಎಲ್ಲ ದಕ್ಷನ ದೌಹಿತ್ರ ಸಂತತಿಯು ಬೆಳೆದ ಬಗೆಯನ್ನು ಬಿತ್ತರಿಸುವೆ ಕೇಳು -

ಚಾಕ್ಷುಷ ಮನ್ವಂತರದಲ್ಲಿ ತುಷಿತರು ಎಂದು ಪ್ರಸಿದ್ಧರಾದ ದೇವತೆಗಳೇ ವೈವಸ್ವತ ಮನ್ವಂತರದಲ್ಲಿ ಆದಿತ್ಯರೆಂದು ಪ್ರಸಿದ್ಧರಾದರು. ಇವರು ಇಂದ್ರ, ಧಾತ್ರಾ ಭಗ, ತ್ವಷ್ಟಾ, ಮಿತ್ರ, ವರುಣ, ಅರ್ಯಮ, ವಿವಸ್ವಾನ್, ಸವಿತಾ, ಪೂಷಾ, ಅಂಶುಮಾನ್, ವಿಷ್ಣು ಎಂದು ಹನ್ನೆರಡು ಜನರು ಇದ್ದು, ದ್ವಾದಶಾದಿತ್ಯರೆಂದು ಪ್ರಸಿದ್ಧರಾಗಿದ್ದಾರೆ. ಕೃಶಾಶ್ವನಿಂದ ದೇವ, ಪ್ರಹಣ ಎಂಬ ಪುತ್ರರು ಜನಿಸಿದರು. ಇವರು ಕೂಡಾ ದೇವತಾ ಗಣದಲ್ಲಿ ಪರಿಗಣಿತರಾಗಿದ್ದಾರೆ. ಪ್ರತಿ ಮನ್ವಂತರದಲ್ಲಿಯೂ ಇಂಥ ದೇವತೆಗಳ ಗಣಗಳು ಉತ್ಪನ್ನವಾಗಿ ಮನ್ವಂತರದ ಸಂರಕ್ಷಣೆಯ ಕಾರ್ಯವನ್ನು ಮಾಡುತ್ತಲಿರುತ್ತವೆ.

ಕಶ್ಯಪರಿಗೆ ಮದುವೆ ಮಾಡಿಕೊಟ್ಟ ದಿತಿ ಎಂಬ ದಾಕ್ಷಾಯಣಿಗೆ ಹಿರಣ್ಯಕಶಿಪು, ಹಿರಣ್ಯಾಕ್ಷರೆಂಬ ಮಕ್ಕಳು ಹುಟ್ಟಿದರು. ಹಿರಣ್ಯಕಶಿಪುವಿಗೆ ಪ್ರಲ್ಹಾದ, ಸಲ್ಹಾದ, ಅನುಲ್ಹಾದ, ಲ್ಹಾದ ಎಂಬ ನಾಲ್ಕು ಮಕ್ಕಳು. ಪ್ರಲ್ಹಾದನಿಗೂ ನಾಕುಶಿಬಿ, ಬಾಷ್ಕಲ ಆಯುಷ್ಮಾನ್, ವಿರೋಚನ, ವಿರೋಚನನ ಮಗನೇ ಬಲಿಚಕ್ರವರ್ತಿ, ಅವನಿಗೆ ನೂರುಜನ ಮಕ್ಕಳು. ಅವರಲ್ಲಿ ಹಿರಿಯನು ಬಾಣ. ಧೃತರಾಷ್ಟ್ರ, ಸೂರ್ಕ, ವಿವಸ್ವಾನ ಅಂಶು, ತಾಪನ, ನಿಕುಂಭ, ಗುರುವೃಕ್ಷ, ಕಲಿ, ಭೀಮ, ಭೀಷಣ ಮುಂತಾದವರು ಬಾಣಾಸುರನ ತಮ್ಮಂದಿರು. ಇವರೆಲ್ಲರ ಹಿರಿಯ ಅಣ್ಣನಾದ ಬಾಣಾಸುರನು ಸದ್ಗುಣಿ. ಶಿವಭಕ್ತ, ಶಸ್ತ್ರಾಸ್ತ್ರ ಪಂಡಿತ ಅವನಿಗೆ ಸಾವಿರ ತೋಳುಗಳು ಈ ಬಾಣನ ಭಕ್ತಿ ತಪಸ್ಸುಗಳಿಗೆ ಸಂತೋಷಪಟ್ಟು ಈಶ್ವರನು ಅವನ ಪಟ್ಟಣದಲ್ಲಿಯೇ ವಾಸಮಾಡಿದನು. ಬಾಣಾಸುರನಿಗೆ ಆರಾಧ್ಯವಾದ ಶಿವಮೂರ್ತಿಗೆ ಮಹಾಕಾಲನೆಂದು ಹೆಸರು. ಭಕ್ತಿಯಿಂದ ಬಾಣಾಸುರನು ಕೊನೆಗೆ ಶಿವನ ಸಾರೂಪ್ಯ ಹೊಂದಿದ. ಹಿರಣ್ಯಾಕ್ಷನಿಗೆ ಉಲೂಕ, ಶಕುನಿ, ಭೂತಸಂತಾಪನ, ಮಹಾಭೀಮ ಎಂದು ಮಕ್ಕಳಾದರು. ಇವರಿಂದ ಮುಂದೆ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು

ಮುಂತಾಗಿ ವಂಶ ಬಳ್ಳಿದಾಗುಂಡಿ ಇಟ್ಟು ಬೆಳೆದು ಇಪ್ಪತ್ತೇಳು ಕೋಟಿ ರಾಕ್ಷಸರ ಕುಲವು ಬಲಿಷ್ಠವಾಗಿ ಭೂಮಿಯಲ್ಲಿ ಬೆಳೆಯಿತು. ಈ ದೈತ್ಯ ಸಂತಾನವೆಲ್ಲವೂ ಮಹಾಬಲಿಷ್ಠ. ಇವರ ಆಕಾರವು ಅದ್ಭುತ ಅಕರಾಳ ವಿಕರಾಳ ಇವರೆಲ್ಲರೂ ಮಾಯಾವಿಗಳು.

ದನು ಎಂಬ ಕಶ್ಯಪ ಕುಟುಂಬಿನಿಯು ವಿಪ್ರಚಿತ್ತಿ ಮೊದಲಾದ ನೂರು ಜನ ಮಕ್ಕಳನ್ನು ಪಡೆದಳು ವರದಿಂದ ಅವರಿಗೆ ಬಲ. ಬಲದಿಂದ ಗರ್ವ, ಗರ್ವದಿಂದ ಹಿಂಸೆ, ಹಿಂಸೆಯಿಂದ ಪರೋಪದ್ರವ ಜನತೆಗೆ, ಇದು ದಾನವ್ ಧರ್ಮ. ಶಕುನಿ ಶಂಕು, ಶಿರೋಧರ, ಅಯೋಮುಖ, ಶಂಬರ, ಕಪಿಲ, ವಾಮನ, ಷೋಡಶ, ಶೀರ್ಷ, ಮರೀಚ, ಮಾಗಧ, ಹರ, ಗಜಶಿರ, ನಿದ್ರಾಧರ, ಕೇತು, ಕೇತುವೀರ್ಯ ಶತಕ್ರತು, ಇಂದ್ರಮಿತ್ರ, ವಜ್ರನಾಭ, ಏಕವಸ್ತ್ರ, ಮಹಾಬಾಹು, ವಜ್ರಾಕ್ಷತಾರಕ, ಅಸಿಲೋಮ, ಪುಲೋಮ, ಬಿಂದು ಬಾಣ, ಸ್ವರ್ಭಾನು, ವೃಷಪರ್ವ ಇವರೆಲ್ಲರೂ ದನು ದೇವಿಗೆ ಮಕ್ಕಳಾದ ದಾನವರು. ಇವರಲ್ಲಿ ಸ್ವರ್ಭಾನುವಿಗೆ ಸುಪ್ರಭಾ, ಪುಲೋಮನಿಗೆ ಶಚೀಮಯನಿಗೆ ಉಪದಾನವಿ, ಮಂಡೋದರಿ, ಮುಂತಾದ ಕನ್ಯೆಯರು ಜನಿಸಿದರು. ವೃಷಪರ್ವನಿಗೆ ಶರ್ಮಿಷ್ಠಾ, ಸುಂದರಿ, ಚಂದ್ರಾ, ವೈಶ್ವಾನರನಿಗೆ ಪುಲೋಮಾ, ಕಾಲಿಕಾ ಎಂದು ಹೆಣ್ಣುಮಕ್ಕಳೂ ಹುಟ್ಟಿದರು. ಹೀಗೆ ಮರೀಚಿ ಮಹರ್ಷಿಯ ಮಗನಾದ ಕಶ್ಯಪಮುನಿಗೆ ದನು ಎಂಬ ಹೆಸರಿನ ದಕ್ಷಕುಮಾರಿಯಿಂದ ಹುಟ್ಟಿಬೆಳೆದ ದಾನವ ಕುಲವು ಕೆಲವೇ ದಿನಗಳಲ್ಲಿ ಅರವತ್ತು ಸಾವಿರಕ್ಕೆ ಮಿರಿತು. ಪುಲೋಮೆಯಿಂದ ಪೌಲೋಮ, ಕಾಲಿಕೆಯಿಂದ ಕಾಲಿಕೆಯರು ಎಂಬ ದೈತ್ಯಗಣವು ಬ್ರಹ್ಮದೇವರ ವರದಿಂದ ಅವಧ್ಯರಾಗಿ ಮಲೆತು ನಿಂತಿದ್ದರು. ಮುಂದೆ ದ್ವಾಪರಯುಗದಲ್ಲಿ ಸ್ವರ್ಗಲೋಕಕ್ಕೆ ಹೋದಾಗ ದೇವತೆಗಳ ಬಿನ್ನಹದಂತೆ ಅರ್ಜುನನು ಸಂಹರಿಸಿದನು. ಈ ಎಲ್ಲ ಪೌಲೋಮೆ ಹಾಗೂ ಕಾಲಿಕೆಯರೆಂಬ ದಾನವ ಗಣವನ್ನು.

ವಿಪ್ರಚಿತ್ತಿಗೆ ಸೈಂಹಿಕೇಯ ಎಂಬ ಕ್ರೂರ ಮಗನು ಹುಟ್ಟಿದನು. ಹಿರಣ್ಯಕಶಪುವಿನ ಸೋದರಿಗೆ ಕಂಸ, ಶಂಖ, ನಳಿ, ವಾತಾಪಿ, ಇಲ್ವಲ, ನಮುಚಿ, ಖಸೃಮ, ಅಂಜನ, ನರಕ, ಕಾಲನಾಭ, ಪರಮಾಧು, ಕಲ್ಪವೀರ್ಯ ಎಂಬ ಹೆಸರಿನ ಹದಿಮೂರು ಜನ ಮಕ್ಕಳು ಜನಿಸಿದರು. ಹಿರಣ್ಯಕಶಿಪುವಿನ ಪುತ್ರನಾದ ಪ್ರಲ್ಹಾದನ ವಂಶದಲ್ಲಿ ನಿವಾತ ಕವಚರು ಎಂಬ ದುಷ್ಟದರ್ಪೋದ್ಧತ ದೈತ್ಯರು ಜನಿಸಿದರು. ಅವರನ್ನು ಅರ್ಜುನನು ತನ್ನ ಪರಾಕ್ರಮದಿಂದ ಯುದ್ಧದಲ್ಲಿ ಸಂಹರಿಸಿದನು. ಕಶ್ಯಪರ ಮತ್ತೊಬ್ಬ ಮಡದಿಯಾದ ತಾಮ್ರಾಳಿಂದ ಶುಕೀ, ಶ್ಯೇನೀ, ಭಾಸೀ, ಸುಗ್ರಧ್ರೀ, ಉಲೂಕಿ, ಶುಚಿ ಎಂಬ ಆರು ಜನ ಹೆಣ್ಣು ಮಕ್ಕಳು ಹುಟ್ಟಿದರು ಅವರಲ್ಲಿ ಶುಚಿಯಿಂದ ಗಿಳಿಗಳು, ಉಲೂಕಿಯಿಂದ ಗೂಬೆಗಳು, ಶ್ಯೇನಿಯಿಂದ ಗಿಡಗಳು, ಭಾಸಿಯಿಂದ ಕುದುರೆಗಳು, ಗೈಧ್ರಿಯಿಂದ ಹದ್ದುಗಳು, ಶುಚಿಯಿಂದ ಹಂಸಕಾರಂಡವ ಸಾರಸ ಪ್ಲವ, ಬಕ ಮುಂತಾದ ನೀರಿನ ಮೇಲಿನ ಪಕ್ಷಿಗಳು ಹುಟ್ಟಿದವು. ಕಶ್ಯಪರ ಮಗದೊಬ್ಬ ಮಡದಿ ವಿನತೆಗೆ ಗರುಡ, ಅರುಣ ಎಂಬ ಇಬ್ಬರು ಮಕ್ಕಳು. ಇಬ್ಬರೂ ಹಕ್ಕಿಕುಲದಲ್ಲಿ ಶ್ರೇಷ್ಠರು. ಮುಗಿಲಲ್ಲಿ ಮಿಂಚುವ ಸೌದಾಮಿನೀ ಎಂಬ ವಿದ್ಯುತ್ ಕೂಡ ವಿನತೆಯ ಮಗಳೇ, (ರಾಮಾಯಣದಲ್ಲಿ ಬರುವ) ಸಂಪಾತಿ, ಜಟಾಯು, ಸೂರ್ಯ ಸಾರಥಿಯಾದ ಅರುಣನ ಮಕ್ಕಳು. ಸಂಪಾತಿಗೆ ಬಭ್ರುವೆಂಬ ಮಗ. ಪ್ರಪಂಚದಲ್ಲಿ ಬಭ್ರು ಅತಿ ವೇಗಗಾಮಿ. ಜಟಾಯುವಿಗೆ ಇಬ್ಬರು ಮಕ್ಕಳು ಕರ್ಣಿಕಾರ, ಶತಗಾಮಿ. ಇವರಿಂದ ಮಕ್ಕಳು ಮೊಮ್ಮಕ್ಕಳಾದಿಯಾಗಿ ಪಕ್ಷಿ ಪ್ರಪಂಚವು ಬೆಳೆಯಿತು.

ಇನ್ನೊಬ್ಬ ಕಶ್ಯಪ ಕಾಮಿನಿ ಸುರಸಾ ದೇವಿಯಲ್ಲಿ ಸಾವಿರ ಹಾವುಗಳು ಹುಟ್ಟಿದವು. ಕದ್ರು ಎಂಬ ಕಶ್ಯಪ ಪತ್ನಿಯಲ್ಲಿ ಸಾವಿರಾರು ನಾಗ ಧುರೀಣರು ಹುಟ್ಟಿದರು. ಅವರಲ್ಲಿ ಇಪ್ಪತ್ತಾರು ಸರ್ಪಗಳು ಸರ್ಪಕುಲದ ಶ್ರೇಷ್ಠರೆಂದು ಪ್ರಸಿದ್ಧರಾಗಿದ್ದಾರೆ. ಶೇಷ, ವಾಸುಕಿ, ತಕ್ಷಕ, ಶಂಖ, ಐರಾವತ, ಕಂಬಳ. ಧನಂಜಯ, ಮಹಾನೀಲ, ಪದ್ಮ, ಅಶ್ವತರ, ವೇಲಾಪತ್ರ, ಮಹಾಪದ್ಮ, ಧೃತರಾಷ್ಟ್ರ ಬಲಾಹಕ, ಶಂಖಪಾದ, ಮಹಾಶಂಖ, ಪುಷ್ಪದಂತ, ಸುಧಾಮ, ಶಂಖರೋಮ, ಹರ್ಯಕ್ಷರಮಣ, ಕಪಿಲ, ದುರ್ಮುಖ, ಪಾತಂಜಲಿ. ಹೀಗೆ ಇಪ್ಪತ್ತಾರು ನಾಗನಾಯಕರು. ಇವರ ಪುತ್ರ, ಪೌತ್ರ, ಪ್ರಪೌತ್ರ, ಸಂತತಿಯು ಅಸಂಖ್ಯ ಬೆಳೆದು ಭೂಮಂಡಲವನ್ನೆಲ್ಲ ಸರ್ಪ ಕುಲವೇ ವ್ಯಾಪಿಸಿತ್ತು. ಬಹುಶಃ ಈ ಎಲ್ಲ ಹೆಬ್ಬಾವುಗಳ ಬಹುಭಾಗ ನಾಗಕುಲವು ಸಾಮೂಹಿಕವಾಗಿ ದ್ವಾಪಾರಯುಗದ ಕೊನೆಗೆ ಜನಮೇಜಯ ಮಾಡಿದ ಸರ್ಪಯಾಗದಲ್ಲಿ ಸುಟ್ಟು ಬೂದಿಯಾಗಿ ಹೋದವು. ಈಗಿರುವ ಹಾವುಗಳು ಆ ಸರ್ಪ ಕುಲದ ಅಳಿದುಳಿದ ಅವಶೇಷ ಮಾತ್ರ.

ಕ್ರೋಧವಶ ಎಂಬ ಮತ್ತೊಬ್ಬ ಕಶ್ಯಪ ಕಾಮಿನಿಯು ದೊಡ್ಡದಾದ ಒಂದು ರಾಕ್ಷಸರ ಪಡೆಯನ್ನು ಹಡೆದಳು. ಈ ರಾಕ್ಷಸರ ತಂಡವನ್ನು ದ್ವಾಪರಯುಗದಲ್ಲಿ ಭೀಮಸೇನನು ಸಂಹರಿಸಿದನು. ಸುರಭಿ ಎಂಬ ಕಶ್ಯಪ ಸುಂದರಿಯು ಹಿಂದೆ ಹೇಳಿದಂತೆ ರುದ್ರಗಣ, ಎಮ್ಮೆ, ಕೆಲವು ದಿವ್ಯ ಸ್ತ್ರೀಯರನ್ನು ಹಡೆದಳು. ಮುನಿಯೆಂಬ ಕಶ್ಯಪಮುನಿಯ ಮತ್ತೊಬ್ಬ ಮಾನಿನಿಯು ಋಷಿಗಳ ಬಳಗವನ್ನು ಅಪ್ಸರೆಯರ ಒಂದು ಸುಂದರ ಪಡೆಯನ್ನು ಹಾಗೂ ಅನೇಕ ಗಂಧರ್ವರನ್ನು ಮತ್ತು ಕಿನ್ನರ ಮುಂತಾದವರನ್ನು ಹೆತ್ತಳು.

ಇರಾ ಎಂಬ ಕಶ್ಯಪ ಪತ್ನಿಯು ಹುಲ್ಲು, ಮರ, ಬಳ್ಳಿ, ಪೊದೆ, ಹೊದರು ಮುಂತಾದವುಗಳಿಗೆ ಜನ್ಮಕೊಟ್ಟಳು. ಖಶಾ ಎಂಬ ಕಶ್ಯಪ ಭಾರ್ಯೆಯಿಂದ ಅಸಂಖ್ಯ ಯಕ್ಷರು. ರಾಕ್ಷಸರು ಹುಟ್ಟಿದರು. ಹೀಗೆ ಈ ಮನ್ವಂತರದಲ್ಲಿ ಕಶ್ಯಪರ ಮಕ್ಕಳು ಸಾವಿರಾರು ಸಂಖ್ಯೆಯಲ್ಲಿ ಹುಟ್ಟಿ ಲಕ್ಷೋಪಲಕ್ಷ ಬೆಳೆದು ಕೋಟಿಕೋಟಿ ಸಂಖ್ಯೆಯಲ್ಲಿ ಹೆಚ್ಚಿ ಬ್ರಹ್ಮಾಂಡವನ್ನೆಲ್ಲ ತುಂಬಿತು. ಅನಂತರ ದಿತಿ ದೇವಿಯು ನಲವತ್ತೊಂಬತ್ತು ಜನ ಮರುತ್‌ಗಳನ್ನು ಪ್ರಸವಿಸಿದಳು. ಇವರೆಲ್ಲರೂ ಧರ್ಮಾತ್ಮರಾಗಿ, ದೇವತೆಗಳ ಪ್ರೀತಿಪಾತ್ರರಾಗಿ ದೇವತಾ ಗಣದಲ್ಲಿ ಪ್ರತಿಷ್ಠಿತರಾದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದೇವ, ದಾನವರ ಮತ್ತು ಜೀವಿಗಳ ಉತ್ಪತ್ತಿ ಎಂಹ ಆರನೇಯ ಅಧ್ಯಾಯ ಮುಗಿದುದು*



## ಮರುದ್ಗಣದ ಉತ್ಪತ್ತಿ

ಅಧ್ಯಾಯ - ೭

**ಭೀಷ್ಮ** :- ದಿತಿಯ ಮಕ್ಕಳಾದ ಮರುತರು ದೇವತೆಗಳಿಗೆ ಪ್ರಿಯರಾದರೆ ? ಇದು ಹೇಗೆ ? ದೇವತೆಗಳಿಗೂ ದೈತ್ಯರಿಗೂ ಎಂದಿನಿಂದಲೂ ಜನ್ಮ ವೈರ. ಈ ಅಪೂರ್ವವಾದ ಸಖ್ಯ-ಸ್ನೇಹವು ಅವರಲ್ಲಿ ಉಂಟಾದುದು ಹೇಗೆ ?

**ಪುಲಸ್ತ್ಯ** :- ಹಿಂದೆ ದೇವಾಸುರರು ಹೋರಾಡಿದಷ್ಟೇ ! ಆಗ ಹರಿಯು ಅಸುರರನ್ನೆಲ್ಲ ಸಂಹರಿಸಿದನು. ದಿತಿ ದೇವಿಯ ಮಕ್ಕಳು ಸತ್ತರು. ಮೊಮ್ಮಕ್ಕಳು ಮಣ್ಣು ಮುಕ್ಕಿದರು. ಮರಿಮಕ್ಕಳು ನಷ್ಟರಾದರು. ಇದರಿಂದ ಆ ತಾಯ್ಗರುಗಳಿಗೆ ಕಿಚ್ಚು ಇಟ್ಟಂತಾಯಿತು. ಅವಳು ಭೂಲೋಕಕ್ಕೆ ಬಂದಳು. ಅಲ್ಲಿ ಸರಸ್ವತಿಯ ತೀರದಲ್ಲಿ ಪುಷ್ಕರವು ಮಹಾಕ್ಷೇತ್ರ. ಅಲ್ಲಿ ನಿಂತು ಸೂರ್ಯನನ್ನು ಆರಾಧಿಸುತ್ತ ಉಗ್ರ ತಪಗೈದಳು. ಮೊದಲೇ ಋಷಿಪತ್ನಿ. ಋಷಿಗಳು ಮಾಡುವ ತಪಸ್ಸನ್ನು ಕೈಕೊಂಡಳು. ಊಟ, ನಿದ್ರೆಬಿಟ್ಟಳು. ತಿನ್ನಲು ಹಣ್ಣು, ಗಡ್ಡೆ, ಗೆಣಸು ಇಂತಹ ಮಿತ ಆಹಾರದಿಂದ ಕೃಚ್ಛ, ಚಾಂದ್ರಾಯಣ ಕಠಿಣ ವ್ರತಗಳಲ್ಲಿ ತೊಡಗಿದಳು ಹೀಗೆ ಅವಳ ತಪಸ್ಸು ನೂರು ವರ್ಷ ಸಾಗಿತ್ತು. ಈ ದೀರ್ಘ ತಪದಲ್ಲಿಯೇ ಅವಳು ಮುಪ್ಪಾದಳು. ವ್ರತೋಪವಾಸಗಳು ಅವಳ ಮೈಯನ್ನು ಹಿಂಡಿದವು. ವಶಿಷ್ಠ ಮೊದಲಾದವರನ್ನು ಅವಳು ಪ್ರಶ್ನಿಸಿದಳು. ''ಪೂಜ್ಯರೆ, ನನ್ನ ಪುತ್ರ ಶೋಕವು ಅಳಿಯಬೇಕು. ಸೌಭಾಗ್ಯಫಲವು ದೊರೆಯಬೇಕು. ಹೀಗೆ ಇಹಪರಗಳಲ್ಲಿ ಕಲ್ಯಾಣಗೈಯುವ ವ್ರತವನ್ನು ತಿಳಿಸಿರಿ.'' ಆಗ ವಶಿಷ್ಠ ಮೊದಲಾದ ಮಹರ್ಷಿಗಳು ಜ್ಯೇಷ್ಠ ಪೂರ್ಣಿಮಾ ವ್ರತವನ್ನು ಅವಳಿಗೆ ಉಪದೇಶಿಸಿದರು. ಅವಳ ಎಲ್ಲ ಇಷ್ಟಾರ್ಥಗಳು ಈಡೇರಿದವು. ಈ ವ್ರತದ ಪ್ರಭಾವದಿಂದ ಅವಳ ಪುತ್ರ ಶೋಕವು ದೂರಾಯಿತು. ಇಹಪರಗಳಲ್ಲಿ ಸೌಭಾಗ್ಯವು ಅವಳ ಸೊತ್ತಾಯಿತು.

**ಭೀಷ್ಮ** :- ಓಹ್ ! ಹಾಗಿದ್ದರೆ ಆ ಪುಣ್ಯಮಯ ವ್ರತವನ್ನು ಕೇಳಬೇಕೆಂಬ ತವಕ. ಜ್ಞಾನಿಗಳೆ, ಆ ವ್ರತದಿಂದಲೇ ಅಲ್ಲವೆ ಅವಳು ನಲವತ್ತೊಂಬತ್ತು ಮಕ್ಕಳನ್ನು ಪಡೆದದ್ದು

**ಪುಲಸ್ತ್ಯ** :- ಅಹುದು, ವಶಿಷ್ಠಾದಿ ಮಹರ್ಷಿಗಳು ದಿತಿದೇವಿಗೆ ಇದೇ ಜ್ಯೇಷ್ಠ ಪೂರ್ಣಿಮಾ ವ್ರತವನ್ನು ಹೇಳಿದ್ದರು. ಅದನ್ನೇ ನಾನೀಗ ಬಿತ್ತರಿಸುತ್ತೇನೆ. ಜ್ಯೇಷ್ಠ ಶುಕ್ಲಪಕ್ಷ ಹುಣ್ಣಿಮೆಯ ದಿನ ಈ ವ್ರತಕ್ಕಾಗಿ ಕಲಶ ಸ್ಥಾಪನೆಮಾಡಬೇಕು. ಆ ಕಲಶಕ್ಕೆ ತೂತು ಬಿರುಕು ಇರಬಾರದು. ಅದರಲ್ಲಿ ಬಿಳಿ ಅಕ್ಕಿ ತುಂಬಬೇಕು. ಬಗೆ ಬಗೆಯ ಹಣ್ಣುಹಂಪಲು, ಕಬ್ಬು ಮೊದಲಾದವುಗಳನ್ನು, ಮೇಲೆ ಎರಡು ಬಿಳಿಯ ಬಟ್ಟೆಗಳನ್ನು ಹೊದಿಸಬೇಕು. ಶ್ವೇತ ಚಂದನವನ್ನು ಬಳಿಯಬೇಕು. ಬಗೆ ಬಗೆಯ ಭಕ್ಷಗಳಿಂದ ಕೂಡಿದ ತಾಮ್ರದ ಪಾತ್ರವನ್ನಿಟ್ಟು ಅದರಲ್ಲಿ ಬೆಲ್ಲ ಬಂಗಾರವನ್ನು ಯಥಾಶಕ್ತಿ ಇಡಬೇಕು. ಸ್ಥಾಪನೆ ಮಾಡಿದ ಕಲಶದ ಮೇಲೆ ಕಮಲ ಕೋಶದಲ್ಲಿ ಚಿನ್ನದ ಬ್ರಹ್ಮದೇವರ ಮೂರ್ತಿಯನ್ನು ಸ್ಥಾಪಿಸಿ ಅದರ ಎಡಬದಿ ಸಕ್ಕರೆಯ ಸಾವಿತ್ರಿ ಮೂರ್ತಿಯನ್ನು ಕೂಡಿಸಬೇಕು. ಬಂಗಾರದ ಮೂರ್ತಿಯನ್ನು ಮಾಡಿಸುವ ಯೋಗ್ಯತೆ ಇಲ್ಲದಿದ್ದರೆ ಬ್ರಹ್ಮದೇವರ ಮೂರ್ತಿಯನ್ನು ಬೆಲ್ಲದಲ್ಲಿಯೇ ಮಾಡಬಹುದು. ಬಿಳಿಎಳ್ಳು, ಬಿಳಿಅಕ್ಷತೆ, ಬಿಳಿಗಂಧ, ಧೂಪ, ದೀಪ, ನೈವೇದ್ಯ, ಮಂಗಳಾರತಿ ಮುಂತಾದವುಗಳಿಂದ ಪೂಜೆಮಾಡಬೇಕು. ಅನಂತರ ಗೀತೆಗಳನ್ನು ಹಾಡಬೇಕು. ವಾದ್ಯಗಳನ್ನು ನುಡಿಸಬೇಕು.

ಅನಂತರ ''ಬ್ರಹ್ಮಣೇ ನಮಃ'' ಎಂದು ಹೇಳಿ ಪಾದಗಳನ್ನು ಪೂಜಿಸಬೇಕು. ''ಸೌಭಾಗ್ಯದಾಯ ನಮಃ'' ಎಂದು ಆ ಪ್ರತಿಮೆಯ ಮಂಡಿಗಳನ್ನು 'ವಿರಿಂಚಾಯ ನಮಃ' ಎಂದು ತೊಡೆಗಳನ್ನು ''ವೃಕೋದರಾಯ ನಮಃ'' ಎಂದು ಹೊಟ್ಟೆಯನ್ನು ''ಅನಂತಾಯ ನಮಃ'' ಎಂದು ಎದೆಯನ್ನು ''ಪದ್ಮನಾಭಾಯ ನಮಃ'' ಎಂದು ಮುಖವನ್ನು 'ಪದ್ಮ ಬಾಹುವೇ ನಮಃ'' ಎಂದು ತೋಳುಗಳನ್ನು 'ಸರ್ವಾತ್ಮನೆ ನಮಃ' ಎಂದು ತಲೆಯನ್ನು ಪೂಜಿಸಬೇಕು. ಹೀಗೆ ರಾತ್ರಿ ಬ್ರಹ್ಮದೇವರ ಪೂಜೆಯನ್ನುಮಾಡಿ ಬೆಳಗಾದ ಬಳಿಕ ಆ ಪ್ರತಿಮೆಯನ್ನು ಶ್ರೋತ್ರಿಯರಿಗೆ ದಾನಕೊಡಬೇಕು.

ಅನಂತರ ಭಕ್ತಿಯಿಂದ ಯಥಾಶಕ್ತಿ ಜ್ಞಾನಿಗಳ ಭೋಜನ ಮಾಡಿಸಬೇಕು. ತಾನು ಮಾತ್ರ ಉಪ್ಪು ಬೆರಸದಿರುವ ಅಡಿಗೆಯನ್ನೇ ಊಟ ಮಾಡಬೇಕು. ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರಮಾಡಿ, ''ಪ್ರೀಯತಾಮ್ರ ಭಗವಾನ್ ಸರ್ವಲೋಕ ಪಿತಾಮಹಃ'' ಎಲ್ಲ ಲೋಕಗಳ ಮುತ್ತಜ್ಜ, 'ಆದಿ ಜನಕನಾದ ಬ್ರಹ್ಮದೇವನು ಸಂತುಷ್ಟನಾಗಲಿ' ಎಂಬ ಮಂತ್ರ ಹೇಳಿ, ಕೃತಕಾರ್ಯವನ್ನು ಕೃಷ್ಣಾರ್ಪಣವೆಂದು ಶ್ರೀ ಹರಿಯಲ್ಲಿ ಸಮರ್ಪಿಸಬೇಕು.

ಈ ವಿಧಿಯನ್ನು ಅನುಸರಿಸಿ ಪ್ರತಿ ತಿಂಗಳ ಹುಣ್ಣಿಮೆಯ ದಿನ ತಾನು ಉಪವಾಸವಿದ್ದು ಬ್ರಹ್ಮದೇವರ ಪೂಜೆಮಾಡಬೇಕು. ಒಂದೇ ಹಣ್ಣನ್ನು ತಿಂದು ನೆಲದ ಮೇಲೆ ಮಲಗಿ ನಿಯಮ ನಿಷ್ಠನಾಗಿ ಈ ವ್ರತವನ್ನು ಆಚರಿಸಬೇಕು. ಹೀಗೆ ಒಂದು ವರ್ಷ ಮುಗಿದ ಬಳಿಕ, ಹದಿಮೂರನೆಯ ತಿಂಗಳಲ್ಲಿ ತುಪ್ಪದ ಹಸುವನ್ನು ಮಾಡಿಸಿ ಹಾಸುಗೆಯೊಂದಿಗೆ ಬ್ರಹ್ಮದೇವನಿಗೆ ಸಮರ್ಪಿಸಬೇಕು. ಬಂಗಾರ ಬ್ರಹ್ಮಮೂರ್ತಿ, ಬೆಳ್ಳಿಯ ಸಾವಿತ್ರಿ ಪ್ರತಿಮೆಗಳನ್ನು, ತುಪ್ಪದ ಹಸು, ಶಯ್ಯೆಗಳೊಂದಿಗೆ ಜ್ಞಾನಿಗಳಿಗೆ ದಾನಕೊಡಬೇಕು. ಜ್ಞಾನಿ ದಂಪತಿಗಳಿಗೆ ವಸ್ತ್ರಾಭರಣಗಳನ್ನು ಕೊಟ್ಟು ಪೂಜಿಸಿ, ಯಥಾಶಕ್ತಿ ಭೂದಾನ ಮಾಡಿ ''ಬ್ರಹ್ಮಾ ಪ್ರೀಯತಾಂ'' ಎಂದು ಹೇಳಬೇಕು. ಬಿಳಿಯಳ್ಳುಗಳಿಂದ, ಆಕಳತುಪ್ಪ, ಪಾಯಸಗಳಿಂದ ಬ್ರಹ್ಮದೇವರ ನಾಮವನ್ನು ಉಚ್ಚರಿಸುತ್ತ ಹೋಮಮಾಡಬೇಕು. ಮತ್ತು ಶ್ರೋತ್ರಿಯರಿಗೆ ಹಸುವಿನ ಹಾಲು, ತುಪ್ಪ, ಮೊಸರುಗಳನ್ನು ಯಥೇಚ್ಛ ಹಾಕಿಸಿ, ಭೋಜನ ಮಾಡಿಸಬೇಕು ಹೂವಿನ ಮಾಲೆಗಳನ್ನು ದ್ವಿಜ ಸುವಾಸಿನಿಯರಿಗೆ ದಾನನೀಡಬೇಕು. ಈ ರೀತಿಯಾಗಿ ವಿಧಿಗೆ ಅನುಸಾರವಾಗಿ ಈ ವ್ರತ ಮಾಡಿದವರು ಯಾರೇ ಇದ್ದರೂ ಅವರ ಎಲ್ಲ ಪಾಪಗಳು ಕಳೆದು ಹೋಗಿ, ಬ್ರಹ್ಮಸ್ವರೂಪವು ತಿಳಿಯುತ್ತದೆ. ಈ ಲೋಕದಲ್ಲಿ ಐಶ್ವರ್ಯ, ಧರ್ಮ, ಸೌಭಾಗ್ಯ, ಸಂತತಿ, ಸಂತೋಷ ಎಲ್ಲವನ್ನೂ ಪಡೆಯುತ್ತಾರೆ.

**ಸರ್ವಪಾಪ ವಿನಿರ್ಮುಕ್ತಃ ಪ್ರಾಪ್ನೋತಿ ಬ್ರಹ್ಮಸಾಂಪ್ರತಂ ।**
**ಇಹಲೋಕೇ ಶ್ರಿಯಂ ಪುತ್ರಾನ್ ಧರ್ಮಂ ಸೌಭಾಗ್ಯಮಶ್ನುತೇ ॥**

ಇಲ್ಲಿ ಬ್ರಹ್ಮ ಎಂದು ಉಲ್ಲೇಖಿಸಿದಲ್ಲೆಲ್ಲ ಆ ಬ್ರಹ್ಮ ಶಬ್ದಕ್ಕೆ ನಾಲ್ಕು ಮೋರೆಯ ಬ್ರಹ್ಮನ ಒಳಗೆ ನಿಂತುಕೊಂಡು ಅವನಿಂದ ಸೃಷ್ಟ್ಯಾದಿ ಕಾರ್ಯಮಾಡಿಸುವ ಪರಬ್ರಹ್ಮ ಅಥವಾ ವಿಷ್ಣು ಎಂದು ತಿಳಿಯಬೇಕು. ಯಾಕೆಂದರೆ ಅನಂತ ರೂಪಿಯಾದ ಆ ಮಹಾವಿಷ್ಣುವೇ ಬ್ರಹ್ಮನಲ್ಲಿದ್ದು ಬ್ರಹ್ಮನೆನಿಸುತ್ತಾನೆ. ಶಿವನಲ್ಲಿ ಇದ್ದು ಮಹೇಶ್ವರ ಎನಿಸುತ್ತಾನೆ. ಆದುದರಿಂದ ಸುಖ ಬೇಕಾದವರು. ಬೇಕಾದ ನಾಮರೂಪದಿಂದ ಆ ಭಗವಂತನನ್ನು ಸ್ಮರಿಸಿ ಪೂಜಿಸಬೇಕು.

**''ಯೋ ಬ್ರಹ್ಮಾ ಸಂಸ್ಮೃತೋ ವಿಷ್ಣುः ಸೋನಂತ್ಮಾ ಮಹೇಶ್ವರः**
**ಸುಖಾರ್ಥೀ ಕಾಮರೂಪೇಣ ಸ್ಮರೇದೇವಂ ಪಿತಾಮಹಮ್ ॥**

(ಆದುದರಿಂದ ಈ ಪುರಾಣದಲ್ಲಿ ಬರುವ ಬ್ರಹ್ಮಾದಿ ದೇವತೆಗಳ ಬಣ್ಣನೆಯನ್ನು ಅಂತರ್ಗತವಾದ ವಿಷ್ಣು ಸ್ತುತಿರೂಪ ಎಂದು ವಿಶಿಷ್ಟ ಸಂದರ್ಭಗಳಲ್ಲಿ ತಿಳಿಯಬೇಕು)

ವಶಿಷ್ಠರು ಹೇಳಿದ ಈ ಎಲ್ಲ ಕಠಿಣ ವ್ರತವನ್ನು ತಪ್ಪದೇ ದಿತಿ ದೇವಿಯು ಯಥಾ ಸಾಂಗವಾಗಿ ಆಚರಿಸಿದಳು. ಆ ವ್ರತದ ಅನುಷ್ಠಾನವು ವ್ಯರ್ಥವಾಗಲಿಲ್ಲ. ಅವಳ ಪತಿ ಕಶ್ಯಪರು ಆನಂದದಿಂದ ಅಲ್ಲಿಗೆ ಆಗಮಿಸಿದರು. ಒಳ್ಳೇ ಲಾವಣ್ಯವತಿಯಾದ ದಿತಿಯ ದೇಹವು ವ್ರತ, ಉಪವಾಸಗಳಿಂದ, ಕೊರಗಿ, ಸೊರಗಿ ಕಟ್ಟಿಗೆಯಂತಾಗಿತ್ತು. ಆ ಕಾಮಿನಿಯ ಕೋಮಲ ಅಂಗಾಂಗಗಳಲ್ಲಿ ಕರ್ಕಶತೆ ಎದ್ದು ತೋರುತ್ತಿತ್ತು. ಅವಳ ಈ ಒಣಗಿದ ಮೈ ಕಂಡು ಕಶ್ಯಪರ ಕರುಳು ಹಿಂಡಿತು. ತಮ್ಮ ಆ ಪ್ರಿಯ ಕಾಂತೆಯನ್ನು ಸಂತೈಸುತ್ತ ಅವರು ಅವಳಿಗೆ ಬಯಸಿದ ವರವನ್ನು ಕೇಳಿಕೊಳ್ಳಲು ಹೇಳಿದರು. ''ಬೇಕಾದ ವರ ಬೇಡು'' ಎಂದು ಕಶ್ಯಪನು ನುಡಿಯುವದೊಂದೇ ತಡ, ಧೂರ್ತಳಾದ ದಿತಿದೇವಿಯು ''ಇಂದ್ರನನ್ನು ಕೊಲ್ಲುವಂಥ ಶಕ್ತಿ, ಪರಾಕ್ರಮ ಉಳ್ಳ ಒಬ್ಬ ಶೂರ ಮಗನನ್ನು ನನಗೆ ವರವಾಗಿ ಕೊಡಿರಿ. ಅವನು ಎಲ್ಲ ದೇವತೆಗಳನ್ನು ಸಂಹರಿಸುವಂಥವನಿರಬೇಕು.'' ಎಂದು ಕೇಳಿಕೊಂಡಳು.

**ಕಶ್ಯಪ** :- ಶುಭಾಂಗಿ ನೀನು ಹೇಳಿದಂತೆ ಇಂದ್ರನನ್ನು ಕೊಲ್ಲುವ ವೀರ ಪುತ್ರನನ್ನೇ ನಿನಗೆ ನಾನು ಕೊಡುವೆನು. ಅದಕ್ಕಾಗಿ ನೀನು ಇಷ್ಟು ಕೆಲಸಮಾಡು. ಆಪಸ್ತಂಭ ಮಹರ್ಷಿಯು ನಿನಗಾಗಿ ಒಂದು ಪುತ್ರಕಾಮೇಷ್ಠಿಯಜ್ಞಮಾಡಲಿ. ಅನಂತರ ನಾನು ನಿನ್ನ ಮೈ ಮುಟ್ಟಿ ಗರ್ಭಾದಾನವನ್ನು ಮಾಡುತ್ತೇನೆ. ಇಂದ್ರನನ್ನು ನಾಶಪಡಿಸುವ ಗರ್ಭವು ಗರ್ಭದಲ್ಲಿ ಮೂಡುವುದು. ಅನಂತರ ಆಪಸ್ತಂಭ ಮಹರ್ಷಿಗಳು ಪುತ್ರಕಾಮೇಷ್ಠಿಯನ್ನು ಜರುಗಿಸಿದರು. ಅದಕ್ಕೆ ವೆಚ್ಚ ಹೆಚ್ಚು. ಶ್ರಮ ಬಹಳ, ಆದರೂ ಆಪಸ್ತಂಭ ಮುನಿಗಳು ಬಹುದ್ರವ್ಯ ಸಾಧ್ಯವಾದ ಆ ಯಜ್ಞವನ್ನು ನೆರವೇರಿಸಿದರು. ''ಇಂದ್ರ ಶತ್ರುವು ನೀನು ಆಗು'' ಎಂದು ಹೇಳಿ ಆಪಸ್ತಂಭರು ಹೋಮಮಾಡಿದರು. ಇದರಿಂದ ದೇವತೆಗಳು ಹೌಹಾರಿದರು. ದಾನವರು ಪರಾಙ್ಮುಖರಾದರು. ಯಜ್ಞವು ಸಮಾಪ್ತವಾದ ಬಳಿಕ, ಕಶ್ಯಪರು ದಿತಿದೇವಿಯಲ್ಲಿ ದಾಂಪತ್ಯಧರ್ಮದಿಂದ ಗರ್ಭವನ್ನು ಇರಿಸಿದರು. ಮತ್ತು ಅವಳಿಗೆ ಹೇಳಿದರು.

**ಕಶ್ಯಪ** :- ಅಗಲಗಣ್ಣಿನ ದಿತಿಯೆ, ನಿನ್ನ ಮುಖವು ಪ್ರತಿ ಚಂದ್ರನಂತೆ, ಚೆಲುವನಾಂತು ಬೆಳಗುತ್ತಿದೆ. ನಿನ್ನ ಬಣ್ಣ ಕಣ್ಣು ಕೊರೈಸುತ್ತದೆ. ಎದೆಗಳು ಬಳುವಲು ಹಣ್ಣಿನಂತೆ ಬಿಗಿದು ನಿಂತಿವೆ. ತುಟಿಗಳು ಹವಳದ ಹೊಳವನ್ನು ಹೊತ್ತಿವೆ. ನಿನ್ನನ್ನು ನೋಡಿದರೆ, ನನ್ನನ್ನು ನಾನೇ ಮರೆತು ಬಿಡುತ್ತೇನೆ. ನಿನ್ನ ದೇಹದಲ್ಲಿ ಆಕಸ್ಮಿಕವಾಗಿ ಸೂಸುವ ಈ ಕಾಂತಿ ವಿಶೇಷವೆಲ್ಲ ನಿನ್ನ ಬಸುರಿನಲ್ಲಿ ಮೂಡಿದ ಮಗುವಿನ ಪ್ರಭಾ-ಪ್ರಭಾವವೆಂದು ತಿಳಿ. ಆದರೆ ಪ್ರಿಯೆ ಒಂದು ಎಚ್ಚರ ನಿನ್ನ ಒಡಲಿನಲ್ಲಿ ಮೂಡಿದ ಈ ಅಪೂರ್ವವಾದ ಗರ್ಭವನ್ನು ನೀನು ಬಹು ಪ್ರಯತ್ನದಿಂದ ರಕ್ಷಿಸಬೇಕು. ನೀನು ಎಲ್ಲಿಯೂ ಓಡಾಡದೆ ನೂರು ವರ್ಷಗಳವರೆಗೆ ಈ ತಪೋವನದಲ್ಲಿಯೇ ವಾಸಿಸಬೇಕು. ಬಸಿರು ಹೆಣ್ಣು ಮಕ್ಕಳ ನೀತಿ ನಿಯಮಗಳನ್ನು ಆಚರಿಸಬೇಕು.

ಮುಸಂಜೆಯ ಸಮಯದಲ್ಲಿ ಊಟಮಾಡಬಾರದು. ಗಿಡದ ಕೆಳಗೆ ನಿಲ್ಲಬಾರದು. ಒನಿಕೆ, ಒರಳು, ಹಾರೆ ಮುಂತಾದ ಮನೆ ಕೆಲಸದ ಸಾಮಾನುಗಳ ಮೇಲೆ ಕೂಡಬಾರದು. ನೀರಿನಲ್ಲಿ ಮುಳುಗುಹಾಕಿ ಸ್ನಾನಮಾಡಬಾರದು. ಶೂನ್ಯವಾದ ಅಂದರೆ ಯಾರೂ ಇಲ್ಲದ ಮನೆಯಲ್ಲಿ ಪ್ರವೇಶಿಸಬಾರದು. ಹಾವಿನ ಹುತ್ತುಗಳ ಮೇಲೆ ನಿಲ್ಲಬಾರದು. ಯಾವುದೇ ಚಿಂತೆಮಾಡಬಾರದು. ಮನಸ್ಸಿನಲ್ಲಿ ಯಾವಾಗಲೂ ಸಂತಸ, ಸಮಾಧಾನ ಇಟ್ಟುಕೊಂಡಿರಬೇಕು. ಉಗುರಿನಿಂದ ನೆಲವನ್ನು ಕೊರೆಯಬಾರದು. ಬೂದಿಯಿಂದ ಮನೆಯಲ್ಲಿ ಬರೆಯಬಾರದು. ಯಾವಾಗಲೂ ಸೋಮಾರಿಯಾಗಿ ಕೂಡಬಾರದು. ಅತಿಶ್ರಮದಕೆಲಸ ಮಾಡಬಾರದು ಹೊಟ್ಟು, ಇದ್ದಲು ಬೂದಿ, ಮೂಳೆ ಒಡಕಲ ಮಡಿಕೆ ಚೂರುಗಳ ಮೇಲೆ ನಿಲ್ಲಬಾರದು. ಯಾರೊಡನೆಯೂ ಬಡಿದಾಡಬಾರದು. ಮೇಲೆ ಮೇಲೆ ಮೈಮುರಿಯಬಾರದು. ಕೂದಲ ಕೆದರಿಕೊಂಡು ಕೂಡಬಾರದು. ಮೈಲಿಗೆಯಲ್ಲಿ ಬಹಳ ಹೊತ್ತು ಉಳಿಯಬಾರದು. ಉತ್ತರಕ್ಕೆ ತಲೆಯಿಟ್ಟು ಮಲಗಬಾರದು ಯಾವಾಗಲೂ ಬೆತ್ತಲೆ ಇರಬಾರದು. ನಿಸರ್ಗ ಕ್ರಿಯೆಯನ್ನು ನೆರವೇರಿಸಿದ ಬಳಿಕ ಕೈ ಕಾಲು ತೊಳೆದುಕೊಳ್ಳದೇ ಇರಬಾರದು ಅಮಂಗಳಮಾತು, ಅತಿಹಾಸ್ಯ ಮಾಡಬಾರದು. ಗುರುಪೂಜೆ ದೇವಿಪೂಜೆಗಳನ್ನು ಪ್ರತಿದಿನ ಮಾಡಬೇಕು. ಗಿಡಮೂಲಿಕೆ ಬೆರಸಿದ ನೀರಿನಿಂದ ಸ್ನಾನ ಮಾಡಬೇಕು. ಎಲ್ಲರೊಡನೆ ಒಳ್ಳೇಮಾತು ಆಡಬೇಕು. ಯಾವಾಗಲೂ ನಗೆಮುಖದಿಂದ ಇರಬೇಕು. ಗಂಡನಿಗೆ ಹಿತ, ಪ್ರಿಯವಾದುದ್ದನ್ನು ಮಾಡಬೇಕು. ಎಂದೆಂದಿಗೂ ಎಂಥ ಅವಸ್ಥೆಯಲ್ಲೂ ಗಂಡನನ್ನು ಹೀಗೆಳೆಯಬಾರದು. ಪತಿಯನ್ನು ಕುರಿತು ''ನೀನು ನನ್ನನ್ನು ಭೋಗಮಾಡಿ, ಮುದುಕಿಯನ್ನಾಗಿ ಮಾಡಿದೆ. ನಾನು ಸೊರಗಿ ಹೋಗಿದ್ದೇನೆ, ನನ್ನ ಎದೆ ಬಿದ್ದು ಹೋಗಿದೆ. ಮೈ ಸುಕ್ಕುಗಟ್ಟಿದೆ. ನನ್ನನ್ನು ಈ ಅವಸ್ಥೆಗೆ ತಂದವನು ನೀನೇ'' ಎಂದು ಯಾವ ಕಾಲದಲ್ಲೂ ತಿರಸ್ಕರಿಸಿ ಅಧಿಕ್ಷೇಪಿಸಿ ಮಾತನಾಡಬಾರದು. ತಿಳಿಯಿತೆ ? ಇದು ಬಸಿರು ಹೆಣ್ಣು ಮಕ್ಕಳ ಧರ್ಮವೂ ಅಹುದು. ಸಾಮಾನ್ಯವಾಗಿ ಎಲ್ಲ ನಾರಿಯರು ಅನುಸರಿಸಬೇಕಾದ ಧರ್ಮವೂ ಅಹುದು.

ಹೀಗೆ ಹೇಳಿ ಕಶ್ಯಪರು ನಿನಗೆ ಒಳ್ಳೆಯದಾಗಲಿ ಎಂದು ಹೇಳಿ ಹೊರಟು ಹೋದರು. ಪತಿಯ ನಿಷ್ಠುರ ನಿಯಮ ನಿಬಂಧಗಳ ನುಡಿಕೇಳಿ ದಿತಿ ದೇವಿಯು ಪತಿಯ ಉಪದೇಶವನ್ನು ಅಕ್ಷರಶಃ ಪಾಲಿಸುವ ಸಂಕಲ್ಪಮಾಡಿದಳು. ಅದರಂತೆ ನಿಯಮದಿಂದ ನಡೆದುಕೊಂಡಳು. ಅವಳು ಗರ್ಭಿಣಿ ಧರ್ಮವನ್ನು ಕಶ್ಯಪರು ಹೇಳಿದಂತೆ ಕಟ್ಟುನಿಟ್ಟಾಗಿ ಆಚರಿಸುತ್ತಿರುವದನ್ನು ಕಂಡು ಇಂದ್ರನಿಗೆ ಗಾಬರಿಯಾಯಿತು. ಅವನು ತನ್ನ ಸ್ವರ್ಗದ ದಿವ್ಯಮಂದಿರ ತೊರೆದು ದಿತಿದೇವಿಯ ಬಳಿಗೆ ಬಂದನು. ''ತಾಯಿ, ನಿನ್ನ ಸೇವೆಗಾಗಿ ಬಂದಿದ್ದೇನೆ'' ಎಂದು ಹೇಳಿ ಸೇವೆಯ ನೆಪದಿಂದ ಆಶ್ರಮದಲ್ಲೇ ನೆಲೆಸಿದನು. ಹಗಲಿರುಳು ಆ ಶಚೀಪತಿಯು ತನ್ನ ಸಾವಿರ ಕಣ್ಣುಗಳಲ್ಲಿ ಎಣ್ಣೆ ಹಾಕಿಕೊಂಡು ದಿತಿದೇವಿಯ ಛಿದ್ರವನ್ನು ಹುಡುಕುತ್ತಿದ್ದನು. ಆದರೆ ಎಷ್ಟು ಸೂಕ್ಷ್ಮವಾಗಿ ಪರೀಕ್ಷಿಸುತ್ತ ಕುಳಿತಿದ್ದರೂ ಇಂದ್ರನಿಗೆ ಅವಳ ಆಚರಣೆಯಲ್ಲಿ ಒಂದೂ ನಿಯಮ ಲೋಪ ಕಂಡುಬರಲಿಲ್ಲ ಇದರಿಂದ ಇಂದ್ರನಿಗೆ ಒಳಗೊಳಗೆ ಸಂಕಟವಾಗುತ್ತಿತ್ತು. ಆದರೆ ಮೇಲೆ ಮಾತ್ರ ಪ್ರಸನ್ನವದನ ನೋಡಲಿಕ್ಕೆ. ಹೀಗೆ ನೂರು ವರ್ಷ ಪೂರ್ತಿಯಾಗ ಬಂದಿತು. ಇನ್ನು ಮೂರೇ ದಿನ ಉಳಿದಿದ್ದವು. ''ಅಂತೂ ಈ ವ್ರತವನ್ನು ಪೂರ್ತಿಗೊಳಿಸಿ ನಾನು ಪಾರದೆ'' ಎಂದಳು ತನಗೆ ತಾನೇ ದಿತಿ. ಇಂಥ ಕಠಿಣ ವ್ರತವು ಯಾವ

ಲೋಪ-ದೋಷವೂ ಇಲ್ಲದೆ ಸಮಾಪ್ತಿಯಾದುದ್ದನ್ನು ಕಂಡು ಅವಳಿಗೆ ತನ್ನದೆ ತನಗೆ ಆಶ್ಚರ್ಯವೆನಿಸಿತು. ಕೃತಕೃತ್ಯತೆಯ ಭಾವವು ಅಂದು ಅವಳು ಮೈಮರೆಯುವಂತೆ ಮಾಡಿತು ವ್ರತ ಸಮಾಪ್ತಿಯಾದದ್ದರ ಸಂತೋಷದ ಭರದಲ್ಲಿ ಅವಳು ಕಾಲು ತೊಳೆದುಕೊಳ್ಳದೆ. ತಲೆಹರವಿಕೊಂಡು ನಿದ್ರೆಯ ಸೆಳೆತದಿಂದ ಕುಳಿತಲ್ಲಿಯೇ ಮಂಡಿಗಳ ಮಧ್ಯದಲ್ಲಿ ತಲೆಯನ್ನು ತೂರಿ ಕೆಳಗೆ ಮುಖಮಾಡಿ ಮಲಗಿ ಕಣ್ಣು ಮುಚ್ಚಿದಳು ಮಲಗುವದೊಂದೇ ತಡ, ಗಾಢ ನಿದ್ರೆಯು ಅವಳನ್ನು ಆವರಿಸಿತು. ಅದಿನ್ನೂ ಹಗಲು ಹೊತ್ತು. ಇದನ್ನು ಕಂಡು. ಶಚಿಯ ಗಂಡನಿಗೆ ಹಿಗ್ಗಾಯಿತು. ಅವಳ ಲೋಪ ದೋಷಗಳು ಅವನ ಕಣ್ಣಿಗೆ ಬಿದ್ದವು. ಕೂಡಲೇ ಅವನಿಗೆ ಅವಕಾಶ ದೊರೆತು. ಅವಳ ಗರ್ಭದಲ್ಲಿ ಒಳಹೊಕ್ಕನು. ತನ್ನ ವಜ್ರಾಯುಧದಿಂದ ಅವಳ ಬಸಿರನ್ನು ಏಳು ವಿಭಾಗ ಮಾಡಿದನು. ಆ ಏಳು ಗರ್ಭದಿಂದ ಅಲ್ಲಿಯೇ ಏಳು ಕುಮಾರರು ಕಣ್ದೆರೆದರು. ಒಬ್ಬೊಬ್ಬರಿಗೂ ಸೂರ್ಯ ಸಮಾನಕಾಂತಿ, ವಜ್ರಾಘಾತದಿಂದ ಆ ಹಸುಳೆಗಳು ಅಳತೊಡಗಿದವು. ಅವಳು ಆ ಮಕ್ಕಳನ್ನು ನಿಷೇಧಿಸಿ ಇಂದ್ರನು ಮತ್ತೆ ಹೊಡೆತಹಾಕಿದನು. ಅದರಿಂದ ಆ ಏಳು ಗರ್ಭಗಳು ಒಡೆದು ಸಿಡಿದು ಒಂದೊಂದರಲ್ಲಿ ಏಳು ಏಳು ಭಾಗಗಳಾದವು. ಹೀಗೆ ದಿತಿಯ ಒಡಲಿನಲ್ಲಿಯೇ ಆ ಕುಡಿಗಳನ್ನೆಲ್ಲ ಒಡೆದು ಮಹೇಂದ್ರನು ನಲವತ್ತೊಂಬತ್ತು ಕೂಸುಗಳನ್ನು ಮಾಡಿದನು. ಅವೆಲ್ಲವೂ ಕೂಡಿ ಮತ್ತೆ ಅಳತೊಡಗಿದವು. ಇಂದ್ರನು ಅಳಬೇಡಿ. ''ಮಾ ರುದಧ್ವಂ'' ಎಂದು ಮತ್ತೆ ಮತ್ತೆ ಹೇಳಿ ಆ ಮಗುಗಳನ್ನು ಸಂತೈಸಿದನು. ವಜ್ರಾಘಾತದಿಂದ ಪುನಃ ಪುನಃ ಪ್ರಹರಿಸಲ್ಪಟ್ಟರೂ ಸಾಯದಿರುವ ಆ ಚಿರಂಜೀವಿ ಚೂರುಗಳನ್ನು ಕಂಡು ಸ್ವಯಂ ಇಂದ್ರನಿಗೆ ಆಶ್ಚರ್ಯವೆನಿಸಿತು. ''ಯಾರ ಮಹಿಮೆಯಿಂದ ಈ ಮಕ್ಕಳು ಸಾಯದೆ, ಅಮರರಾಗಿ ಉಳಿದವು ?'' ಎಂದು ಅವನು ತಾನಾಗಿ ಯೋಚಿಸಿದನು. ಆಗ ಅವನಿಗೆ ತಿಳಿದು ಬಂದಿತು. ವಜ್ರಾಹತವಾದ ಈ ಗರ್ಭದ ತುಂಡು ತುಣುಕಗಳು ಪುನಃ ಸಂಜೀವಿತವಾಗಿ ಅಮರ ಶಿಶುಗಳಾಗಿ ಉಳಿದದ್ದು ಕಶ್ಯಪರು ಉಪದೇಶಿಸಿದ ಜ್ಯೇಷ್ಠ ಹುಣ್ಣಿಮೆ ವ್ರತದ ಫಲವೆಂದು. ಇದನ್ನು ತಿಳಿದು ಆಗ ಇಂದ್ರನು ಅಲ್ಲಿಯೇ ನುಡಿದನು- ''ವಜ್ರದಿಂದ ಹೊಡೆತ ತಿಂದು ಹೋಳಾಗಿ ಹೋದರೂ ಈ ಗರ್ಭವು ನಾಶವಾಗಲಿಲ್ಲ. ಭಿನ್ನಭಿನ್ನವಾದದೂ, ವಜ್ರ ಹತವಾದರೂ, ಈ ಎಲ್ಲ ಗರ್ಭದ ತುಣುಕುಗಳು ಸಾಯದೆ, ಅಜರಾಮರವಾಗಿ ಆಯುಷ್ಮಂತವಾಗಿ ಉಳಿದುಕೊಂಡಿವೆ. ಒಂದಿದ್ದದ್ದು ನಲವತ್ತೊಂಬತ್ತು ಆಗಿ ಮೃತ್ಯುಂಜಯವಾಗಿ ಮೆರೆಯುತ್ತಲಿವೆ. ಇವೆಲ್ಲವೂ ಬ್ರಹ್ಮಪೂಜೆಯ ಪರಿಣಾಮವೇ ಸರಿ. ಇವರು ಮೃತ್ಯುವನ್ನು ಮೀರಿ ಅಮರರಾದದ್ದರಿಂದ ಇನ್ನು ನಮ್ಮ ದೇವತಾ ಗಣದಲ್ಲಿ ಸೇರಿಕೊಳ್ಳಲಿ. ಈ ಮಕ್ಕಳು ''ಮಾರುದ'' ಎಂದು ನಾನು ಹೇಳಿದರೂ ಅಳುತ್ತಲೇ ತಾಯಿಯ ಬಸಿರಿನಿಂದ ಜನಿಸಿದ್ದರಿಂದ 'ಮರುತರು' ಎಂದೇ ಇವರಿಗೆ ಹೆಸರಾಗಲಿ. ಇವರು ನಮ್ಮ ಜೊತೆಗೆ ಶುಭಭಾಗಿಗಳೂ ಆಗಲಿ. ಹೀಗೆ ದಿತಿಯ ಗರ್ಭಗೃಹದಲ್ಲಿ ಆ ಹಸುಗೂಸುಗಳನ್ನು ಆಶೀರ್ವದಿಸಿ ಇಂದ್ರನ ಹೊರಬಂದನು.

ತಾಯಿಗೆ ಬೇಡಿಕೊಂಡು ಕೈಮುಗಿದು ಹೇಳಿಕೊಂಡನು. ''ಅಮ್ಮಾ, ನನ್ನ ಅಪರಾಧವನ್ನು ಕ್ಷಮಿಸಿ. ನೀತಿಶಾಸ್ತ್ರವನ್ನು ಅನುಸರಿಸಿ ನಾನು ಈ ದುಷ್ಕಾರ್ಯವನ್ನು ಮಾಡಿದೆ. ನಿನ್ನ ಮಕ್ಕಳಾದ ಈ ಮರುತರ ಗುಂಪನ್ನು ದೇವತೆಗಳಿಗೆ ಸಮಾನರನ್ನಾಗಿ ಮಾಡಿದ್ದೇನೆ. ಇವರೆಲ್ಲರೂ ನನ್ನ ತಮ್ಮಂದಿರೆಂದು ತಿಳಿದು ಸ್ವರ್ಗಕ್ಕೆ ಕರೆದೊಯ್ಯುವೆ.

ಇವರೆಲ್ಲರಿಗೆ ಯಜ್ಞದಲ್ಲಿ ''ಆಹುತಿ'' ದೊರಕುವಂತೆಮಾಡುವೆ. ನಿನ್ನ ಯಾವ ಮಕ್ಕಳಿಗೂ ಇಲ್ಲದ ಭಾಗ್ಯ ಮುಂದೆ ಇವರಿಗೆ ದೊರೆಯುವದು. ಸ್ವರ್ಗ ಸೌಖ್ಯ, ದೇವತಾ ಗಣದಲ್ಲಿ ಅಂತರ್ಭಾವ ಯಜ್ಞದಲ್ಲಿ ಆಹುತಿ ಲಾಭ ಇವೆಲ್ಲವೂ ನಿನ್ನ ಉಳಿದ ಮಕ್ಕಳಿಗೆ ದೊರೆಯದಿದ್ದರೂ ಇವರಿಗೆ ಲಭಿಸುವವು. ನೀನು ಸಂತುಷ್ಟಳಾಗು. ಇಂದ್ರನ ಮಾತಿನಿಂದ ದಿತಿದೇವಿಗೆ ಸಮಾಧಾನವಾಯಿತು. ಮಕ್ಕಳ ಭಾವಿ ಭಾಗ್ಯೋದಯ ನೆನೆದು ಅವಳು ತನ್ನ ಸವತಿಯ ಮಗನಾದ ಸುರರಾಜನ ಅಪರಾಧವನ್ನು ಮನ್ನಿಸಿದಳು. ಅನಂತರ ದೇವೇಂದ್ರನು ದಿತಿ ದೇವಿಯನ್ನು ವಿಮಾನದಲ್ಲಿ ಕೂಡಿಸಿಕೊಂಡು ಅವಳ ಮಕ್ಕಳಾದ ಮರುದ್ಗಣ ದೊಂದಿಗೆ ಅಮರಾವತಿಗೆ ಕರೆದೊಯ್ದನು. ಅಲ್ಲಿ ಅವರು ದೇವತೆಗಳ ಗುಂಪಿನಲ್ಲಿ ಒಂದಾದರು. ಅವರೆಲ್ಲರಿಗೂ ಈ ದಿತಿ ಪುತ್ರರಿಗೆ ಈ ಸುರಸಂಘದ ಈ ಸಮೀಕರಣದಿಂದ ಸಂತೋಷವಾಯಿತು. ಅವರು ಮುಂದೆ ಎಂದೂ ತಮ್ಮ ಖಾಸ ಸಹೋದರರಾದ ದೈತ್ಯರೊಂದಿಗೆ ಒಂದುಗೂಡಲಿಲ್ಲ. ಹೊಂದಿಕೊಳ್ಳಲಿಲ್ಲ.

**ಭೀಷ್ಮ** :- ಪೂಜ್ಯರೆ, ತಾವು ನನಗೆ ಈ ವರೆಗೆ ಆದಿ ಸರ್ಗವನ್ನು ವಿವರವಾಗಿ ತಿಳಿಸಿದಿರಿ. ಇನ್ನು ಮೇಲೆ ಪ್ರತಿಸರ್ಗದ ಬಗೆಗೆ ತಿಳಿಸಿರಿ ? ಈ ಪ್ರತಿ ಸರ್ಗದಲ್ಲಿ ಇದ್ದವರು ಯಾರು ಯಾರು ಎಂಬುದನ್ನು ಹೇಳಿರಿ ?

**ಪುಲಸ್ತ್ಯ** :- ಹಿಂದೆ ವೇನ ರಾಜನು ಧರ್ಮದ್ರೋಹಿಯಾಗಿ, ವೇದವಿರೋಧಿಯಾಗಿ ಪ್ರಜಾಪೀಡಕನಾದನು. ಇದನ್ನು ಕೇಳಿ ಲೋಕ ಕ್ಷೇಮಾಕಾಂಕ್ಷಿಗಳಾದ ಮಹಾ ಮುನಿಗಳು ಅರಣ್ಯದಿಂದ ಬಂದು ದೇಶದಲ್ಲಿ ಧರ್ಮವಿರುದ್ಧವಾದ ದುಃಶಾಸನ ನಡೆಸಿದ ವೇನನನ್ನು ಸಂಹರಿಸಿದರು. ಅನಂತರ ವೇನನ ದೇಹವನ್ನು ಕಡೆದು ಪಡೆದ ಪೃಥು ರಾಜನಿಗೆ ಭೂಮಂಡಲದ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು ಆ ವೇಳೆಯಲ್ಲಿ ಬ್ರಹ್ಮದೇವರು ಔಷಧಿಗಳಿಗೂ, ಬ್ರಾಹ್ಮಣರಿಗೂ, ವ್ರತಗಳಿಗೂ, ತಪಸ್ಸುಗಳಿಗೂ ಚಂದ್ರನನ್ನು ಅಧಿಪತಿಯನ್ನಾಗಿ ಮಾಡಿದರು. ಇದರಂತೆ ನಕ್ಷತ್ರ, ಗ್ರಹ, ಪ್ರಾಣಿ, ಮರ, ಬಳ್ಳಿ ಇವುಗಳಿಗೆಲ್ಲ ಬ್ರಹ್ಮನನ್ನು ನೀರಿಗೆ ವರುಣನನ್ನು ಹಣಕ್ಕೆ ಕುಬೇರನನ್ನು, ವಸುಗಳಿಗೆ ಅಗ್ನಿಯನ್ನು, ಪ್ರಜಾಪತಿಗಳಿಗೆ ದಕ್ಷನನ್ನು, ದೈತ್ಯ ದಾನವರಿಗೆ ಪ್ರಲ್ಹಾದನನ್ನು, ಪಿತೃಗಳಿಗೆ ಯಮನನ್ನು ಪಿಶಾಚ, ರಾಕ್ಷಸ, ಪಶು, ಭೂತ, ವೇತಾಳ ಮುಂತಾದವರಿಗೆಲ್ಲ ಮಹಾದೇವನನ್ನು ಅಧಿಪತಿಯನ್ನಾಗಿ ಮಾಡಿದರು. ಇದರಂತೆ ಗಿರಿಗಳಿಗೆಲ್ಲ ಹಿಮಾಲಯ, ನದಿಗಳಿಗೆ ಸಮುದ್ರ, ಗಂಧರ್ವರಿಗೆ ಚಿತ್ರರಥ, ನಾಗಗಳಿಗೆ ವಾಸುಕಿ, ಸರ್ಪಗಳಿಗೆ ತಕ್ಷಕ, ದಿಗ್ಗಜಗಳಿಗೆ ಐರಾವತ ಪಕ್ಷಿಗಳಿಗೆ ಗರುಡ, ಕುದುರೆಗಳಿಗೆ ಉಚ್ಚೈಶ್ರವ, ಮೃಗಗಳಿಗೆ ಸಿಂಹ, ಮರಗಳಿಗೆ ಬಸರಿಗಿಡ, ವಿದ್ಯಾಧರ ಕಿನ್ನರರಿಗೂ ಚಿತ್ರರಥ ಮುಂತಾದವರನ್ನು ಅಧಿಪತಿಗಳನ್ನಾಗಿ ಮಾಡಿದರು. ಇದೇ ಪ್ರಕಾರ ಒಂದೊಂದು ದಿಕ್ಕಿಗೆ ಒಬ್ಬೊಬ್ಬ ದಿಕ್ಪಾಲರನ್ನು ಅಧಿಪತಿಗಳನ್ನಾಗಿ ನಿಯಮಿಸಿದರು. ದಕ್ಷಿಣಕ್ಕೆ ಶಂಖಪದ, ಪಶ್ಚಿಮಕ್ಕೆ ಸುಕೇತುಮಾನ್, ಉತ್ತರಕ್ಕೆ ಹಿರಣ್ಯರೋಮ, ಪೂರ್ವಕ್ಕೆ ಮೇಘಾತ್ಮಜನನ್ನು ಪ್ರಜಾಪತಿಗಳೆಂದು ನಿಯಮಿಸಿದರು. ಈ ದಿಕ್ಪಾಲಕರೂ ಸೇರಿಕೊಂಡು ಪೃಥುರಾಜನನ್ನು ಭೂಲೋಕದ ಭಾಗ್ಯ ಸಿಂಹಾಸನದ ಮೇಲೆ ಪಟ್ಟಾಭಿಷೇಕಗೈದರು. ಇದೇ ದಿಕ್ಪಾಲಕರು ಚಾಕ್ಷುಷ ಮನ್ವಂತರ ಕಳೆದು ವೈವಸ್ವತ ಮನ್ವಂತರ ಬಂದ ಬಳಿಕ ವೈವಸ್ವತ ಮನುವಿಗೆ ಪಟ್ಟಾಭಿಷೇಕ ಗೈದರು.

**ಪುಲಸ್ತ್ಯ** :- ಮನು ಹಾಗೂ ಇತರ ಮನ್ವಂತರಗಳ ವೃತ್ತಾಂತ, ಕಾಲ ಹಾಗೂ ಋತುಗಳನ್ನು ವಿವರಿಸುತ್ತೇನೆ. ಪ್ರಸನ್ನ ಚಿತ್ತದಿಂದ ಕೇಳು.

ಪೂರ್ವಕಾಲದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ **''ಯಾಮ್ಯರು''** ಎಂದು ಹೆಸರಾದ ಯಜ್ಞ ದಕ್ಷಿಣಾ ದಂಪತಿಗಳ ಪುತ್ರರು ದೇವತಾಪಟ್ಟದಲ್ಲಿ ಅಭಿಷಿಕ್ತರಾಗಿದ್ದರು. ಮರೀಚಿ ಮುಂತಾದವರೇ ಹಿಂದಿನಂತೆ ಈಗಲೂ ಸಪ್ತರ್ಷಿ ಪದವಿಯಲ್ಲಿ ಶೋಭಿಸಿದ್ದರು. ಅಗ್ನಿಧ್ರ, ಅಗ್ನಿಬಾಹು, ವಿಭು, ಸವನ, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಮೇಧಾತಿಥಿ, ಸುಮೇಧ, ವಸು ಎಂದು ಹತ್ತು ಜನ ಮನು ಪುತ್ರರು ಆದರು. ಇವರೆಲ್ಲರೂ ತಾವು ಪ್ರತಿ ಸೃಷ್ಟಿಯನ್ನುಮಾಡಿ ಸಾಧನ ಪೂರ್ತಿ ಮಾಡಿಕೊಂಡು ಸ್ವರ್ಗಕ್ಕೆ ನಡೆದರು. ಇದೇ ಸ್ವಾಯಂಭುವ ಮನ್ವಂತರ.

ಇನ್ನು ಸ್ವಾರೋಚಿಷ ಮನ್ವಂತರದ ಬಗ್ಗೆ ಕೇಳು. ಆ ಸ್ವರೋಚಿಷ ಮನುವಿಗೆ ನಭ, ನಭಸ್ಯ, ಪ್ರಸೃತಿ, ಭಾವನ ಎಂದು ನಾಲ್ವರು ಮಕ್ಕಳು. ಇವರೆಲ್ಲರು ಕೀರ್ತಿವಂತರೇ, ಇವರೆಲ್ಲರೂ ಯೋಗ್ಯತೆಯಲ್ಲಿ ದೇವತೆಗಳಿಗೆ ಹೆಗಲೆಣೆಯಾಗಿದ್ದರು. ಈ ಸ್ವಾರೋಚಿಷ ಮನ್ವಂತರದಲ್ಲಿ ದತ್ತ, ಅತ್ರಿ, ಚ್ಯವನ, ಪ್ರಾಣ, ಕಶ್ಯಪ, ಅರ್ವನ್ ಬೃಹಸ್ಪತಿ ಎಂಬ ಏಳು ಜನ ಬ್ರಹರ್ಷಿಗಳು ಸಪ್ತರ್ಷಿ ಪೀಠದಲ್ಲಿ ಮುಡಿಸಿದರು. ಈ ಮನ್ವಂತರದ ದೇವತಾ ಗಣಕ್ಕೆ ತುಷಿತರು ಎಂದು ಹೆಸರು. ಹವೀಂದ್ರ, ಸುಕೃತ, ಆಪ, ಮೂರ್ತಿ, ಜ್ಯೋತಿರಥ ಎಂಬ ಐದು ವಶಿಷ್ಠ ಕುಮಾರರು ಪ್ರಜಾಪತಿ ಪಟ್ಟದಲ್ಲಿ ಅಭಿಷಿಕ್ತರಾಗಿದ್ದರು. ಇದು ಎರಡನೆಯದಾದ ಸ್ವಾರೋಚಿಷ ಮನ್ವಂತರದ ವೃತ್ತಾಂತವಾಯಿತು.

ಮೂರನೆಯದಾದ ಔತ್ತಮಿ ಮನ್ವಂತರಕ್ಕೆ ಔತಮಿ ಎಂಬ ಮನುವು ಅಧಿಪತಿ ಯಾಗಿದ್ದನು. ಇವನಿಗೆ ಈಷ, ಊರ್ಜ, ತನುಜ, ಶುಚಿ, ಶುಕ್ರ, ಮಧು, ಮಾಧವ, ನಭಸ್ಯ, ನಭ, ಸಹ ಎಂದು ಹತ್ತು ಜನ ಕೀರ್ತಿಶಾಲಿಗಳಾದ ದೊಡ್ಡ ಮನಸ್ಸಿನ ಮಕ್ಕಳು ಆಗಿದ್ದರು. ಈ ಮನ್ವಂತರಲ್ಲಿ ಭಾನುಗಳು ಎಂಬ ದೇವತಾಗಣವು ಅಧಿಕಾರದಲ್ಲಿ ಇರುವದು. ಈ ತೃತೀಯ ಮನ್ವಂತರದಲ್ಲಿ ಕೌಕಿ, ಭಿಂಡಿಕ್, ತುಂಡ, ದಾಲ್ಭ್ಯ, ಶಂಖ, ಪ್ರವಾಹಿ, ಮಿತ, ಸಂಮಿತ ಎಂಬ ಏಳುಜನ ಮಹಾತ್ಮರು ಸಪ್ತರ್ಷಿಗಳಾಗಿದ್ದರು.

ನಾಲ್ಕನೆಯದು ತಾಮಸ ಮನ್ವಂತರ ಈ ಚತುರ್ಥ ಮನ್ವಂತರದಲ್ಲಿ ಕವಿ, ಪೃಥು, ಅಗ್ನಿ, ಕಪಿ, ಅಕಪಿ, ಜನ್ಯ, ಧಾಮ ಎಂಬುವರು ಸಪ್ತರ್ಷಿಗಳು. ಸಾಧ್ಯರು ಎಂಬುದು ದೇವತಾ ಗಣವು. ಅಕಲ್ಮಷ, ಪೋತಧನ್ವ, ತಪೋಮೂಲ, ತಪೋಘನ, ತಪೋರಾಶಿ, ತಪಸ್ಯ, ಸುತಪಸ್ಯ, ಪರಂತಪ, ತಪೋಭಾಗಿ, ತಪೋಯೋಗಿ ಎಂಬ ಹತ್ತು ತಾಮಸ ಮನುವಿನ ಮಕ್ಕಳು ಮನ್ವಂತರ ಸಂರಕ್ಷಕರು.

ಐದನೆಯದಾದ ರೈವತ ಮನ್ವಂತರದಲ್ಲಿ ವದವಾದ ಸುಬಾಹು, ಪರ್ಜನ್ಯ, ಸೋಮಪ, ಮುನಿ, ಹಿರಣ, ರೋಮ, ಸಪ್ತಾಶ್ವ, ಎಂಬುವರು ಸಪ್ತರ್ಷಿಗಳು ಭೂತರಾಜ ಎಂದು ಹೆಸರು ದೇವತೆಗಳದು, ವರುಣ, ತತ್ವದರ್ಶಿ, ಚ್ಯುತಿಮಾನ್, ಹವ್ಯಪ, ಕವಿ, ಮುಕ್ತ, ನಿರುತ್ಸುಕ, ಸತ್ವ, ವಿಮೋಹ, ಪ್ರಕಾಶಕ, ಎಂಬುವ ಹತ್ತು ಧರ್ಮಿಷ್ಠ ವೀರರು ಮನು ಕುಮಾರರು.

ಆರನೆಯದಾದ ಚಾಕ್ಷುಷ ಮನ್ವಂತರದಲ್ಲಿ ಭೃಗು ಸುಧಾಮ, ವಿರಜ, ವಿಷ್ಣು, ನಾರದ, ವಿವಸ್ವಾನ್ ಅಭಿಮಾನಿ ಎಂಬ ಏಳು ಮಹರ್ಷಿಗಳು ಸಪ್ತರ್ಷಿ ಪದದಲ್ಲಿ

ನೀರಿನಲ್ಲಿ ಉತ್ಪನ್ನರಾದ ರುಭುಗಳು ದೇವತಾಸ್ಥಾನದಲ್ಲಿ ಲೇಖ ಎಂಬ ಇನ್ನೂ ಒಂದು ದೇವತಾ ಗಣವು ಈ ಮನ್ವಂತರದಲ್ಲಿ ಇರುತ್ತದೆ. ರುರು ಮೊದಲಾದ ಹತ್ತುಜನ ಚಾಕ್ಷುಷನ ಪುತ್ರರು ಈಗ ಮನು ಕುಮಾರರು.

ಏಳನೆಯದಾದ ಪ್ರಕೃತ ಮನ್ವಂತರಕ್ಕೆ ವೈವಸ್ವತ ಎಂದು ಹೆಸರು. ಅತ್ರಿ, ವಶಿಷ್ಠ, ಕಶ್ಯಪ, ಗೌತಮ, ಭರದ್ವಾಜ, ವಿಶ್ವಾಮಿತ್ರ, ಜಮದಗ್ನಿ ಎಂಬ ಏಳು ಜನ ಬ್ರಹ್ಮ ಜ್ಞಾನಿಗಳು. ಸಪ್ತರ್ಷಿಪೀಠದಲ್ಲಿ ಈಗ ಮಂಡಿಸಿದ್ದಾರೆ. ಈ ಸಪ್ತರ್ಷಿಗಳು ತಮ್ಮ ತಮ್ಮ ಮನ್ವಂತರದ ಅವಧಿಯಲ್ಲಿ ಧರ್ಮದ ವ್ಯವಸ್ಥೆಮಾಡಿ ಮುಂದೆ ಮೋಕ್ಷ ಹೊಂದುತ್ತಾರೆ. ಇನ್ನು ಮೇಲೆ ಮುಂದೆ ಬರಲಿರುವ ಮನ್ವಂತರಗಳ ವಿಷಯ ತಿಳಿಸುತ್ತೇನೆ.

ವೈವಸ್ವತ ಮನ್ವಂತರ ಅನಂತರ ಬರುವವರೆಂದರೆ ಸಾವರ್ಣಿ ಮನ್ವಂತರ, ಎಂಟನೆಯ ಮನ್ವಂತರ. ಆಗ ಅಶ್ವತ್ಥಾಮ, ಋಷ್ಯಶೃಂಗ, ಕೌಶಿಕ್ಯ, ಶತಾನಂದ, ಕಾಶ್ಯಪ, ಗಾಲವ, ಪರಶುರಾಮ ಈ ಏಳು ಪುಣ್ಯ ಪುರುಷರು, ಸಪ್ತರ್ಷಿಗಳಾಗುವರು ಧೃತಿ- ವರೀಯಾನ್, ಯವಸ್ಸು, ಸುವರ್ಣ, ಆಧೃತಿ, ಚರಿಷ್ಣು, ಸುಮತಿ, ಆದ್ಯ, ವಸು, ಶುಕ್ರ ಎಂದು ಮುಂದೆ ಬರುವ ಮನ್ವಂತರದಲ್ಲಿ ಮನುಕುಮಾರರು ಶಾಸಕರಾಗಲಿರುವರು. ಇದರಂತೆ ರುಚಿ ಎಂಬ ಪ್ರಜಾಪತಿಯ ಮಗನಾದ ರೌಚ್ಯನೂ, ಭೂತಿಯ ಮಗನಾದ ಭೌತ್ಯನೂ ಹಾಗೂ ಬ್ರಹ್ಮಕುಮಾರ ಮೇರು ಸಾವರ್ಣಿಯೂ, ಹಾಗೂ ರುಭು, ಪೀತಧಾಮ, ವಿಷ್ವಕ್‌ಸೇನ ಮುಂತಾದವರೂ ಮನ್ವಂತರಗಳ ಅಧಿಪತಿಗಳಾಗಿ ಬರುವರು. ಹೀಗೆ ವೈವಸ್ವತ ಮನ್ವಂತರದ ನಂತರ ಅರ್ಕಸಾವರ್ಣಿ, ಮೇರುಸಾರ್ವರ್ಣಿ, ರೌಚ್ಯ, ಭೌತ್ಯ, ರುಭು, ವೀತಧಾಮ, ವಿಷ್ವಕ್‌ಸೇನ ಎಂದು ಏಳು ಮನುಗಳು ಮನ್ವಂತರಗಳು ಬರಲಿವೆ. ಆ ಭಾವಿ ಸಪ್ತಮನ್ವಂತರಗಳಲ್ಲಿಯೂ ಬೇರೆ ಬೇರೆ ದೇವತಾಗಣ, ಸಪ್ತರ್ಷಿಗಣ, ಮನು ಕುಮಾರರೂ ಶಾಸಕರಾಗಿ ಇರುತ್ತಾರೆ. ಹೀಗೆ ನಿಮಗೆ ಹಿಂದಾದ, ಈಗಿರುವ, ಮುಂದಾಗಲಿರುವ ಮನು, ಮನ್ವಂತರಗಳ ಸಮಾಚಾರ ತಿಳಿಸಿದೆನು. ಇವರೆಲ್ಲರೂ ತಮ್ಮ ತಮ್ಮ ಮನ್ವಂತರಗಳಲ್ಲಿ ಚರಾಚರ ಸೃಷ್ಟಿಮಾಡಿ, ಧರ್ಮ ವ್ಯವಸ್ಥೆಗೈದು ಕಲ್ಪಾವಸಾನ ಕಾಲದಲ್ಲಿ ಶ್ರೀಹರಿಯ ಆರಾಧನೆ ನಡೆಸಿ ಬ್ರಹ್ಮದೇವರೊಡನೆ ಮುಕ್ತಿಯನ್ನು ಹೊಂದುವರು. ಹೀಗೆ ಬ್ರಹ್ಮಾದಿ ದೇವತೆಗಳು ಕೂಡ ಸಹಸ್ರ ಯುಗಗಳ ಅನಂತರ ಶ್ರೀಹರಿಯ ಸಾಯುಜ್ಯ ರೂಪವಾದ ಮೋಕ್ಷವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಮರುದ್ಗಣದ ಉತ್ಪತ್ತಿ ಎಂಬ ಏಳನೇಯ ಅಧ್ಯಾಯ ಮುಗಿದುದು*

—o—

**ಭೀಷ್ಮ :-** ಈ ಭೂಮಿಯು ಹೀಗೆ ಅನೇಕ ಜನರ ರಾಜರಿಂದ ಆಳಲ್ಪಟ್ಟಿದೆ. ಮತ್ತು ಅನುಭವಿಸಲ್ಪಟ್ಟದೆ. ಈ ಪೃಥ್ವಿಯನ್ನು ಆಳಿದ ಅರಸರಿಗೆಲ್ಲ ಪಾರ್ಥಿವ ಎಂಬ ಹೆಸರು ಬಂದಿತು. ಆದರೆ ಈ ಪೃಥ್ವಿಗೆ "ಪೃಥ್ವೀ" ಎಂದು ಹೆಸರು ಯಾರಿಂದ ಬಂದಿತು. ಪೃಥ್ವಿ ಎಂಬುದು ಈ ಭೂಮಿಗೆ ಅಂಕಿತನಾಮವೊ ? ರೂಢನಾಮವೊ ? ಲೌಕಿಕ ನಾಮವೊ ? ಏನು ಎಂಬುದನ್ನು ತಿಳಿಸಿರಿ. ಮತ್ತು ಈ ಭೂಮಿಗೆ ಭೂ ಎಂದು ಕರೆದಂತೆ ಗೋ ಎಂತಲೂ ಕರೆಯುತ್ತಾರೆ. ಗೋಮಾತೆಯ ಹೆಸರು ಭೂಮಾತೆಗೆ ಬರಲು ಕಾರಣವೇನು ? ದಯ ಮಾಡಿ ಇದೆಲ್ಲವನ್ನು ವಿವರಿಸಬೇಕು.

**ಪುಲಸ್ತ್ಯ :-** ಸ್ವಾಯಂಭುವ ಮನುವಿನ ವಂಶದಲ್ಲಿ ಅಂಶ ಎಂಬ ಹೆಸರಿನ ಒಬ್ಬ ರಾಜನು ಇದ್ದನು. ಅವನು ಮೃತ್ಯುವಿನ ಮಗಳನ್ನು ಮದುವೆಯಾದನು. ಅಮಂಗಳ ಮುಖವುಳ್ಳದ್ದಾಗಿತ್ತು. (ದುರ್ಮುಖೀ) ಆ ಹೆಣ್ಣು. ಆಕೆಯ ಹೆಸರು ಸುನೀಥಾ, ಅವಳ ಮಗನೇ ವೇನ. ವೇನನಿಗೆ ಯಾವಾಗಲೂ ಅಧರ್ಮದಲ್ಲಿ ಆಸಕ್ತಿ. ಅನ್ಯಾಯದಲ್ಲಿ ಅಭಿರುಚಿ. ಮಹಾಕಾಮಿ. ಕಂಡ ಹೆಣ್ಣುಮಕ್ಕಳನ್ನು ಕದ್ದು ಭೋಗಮಾಡುವ ಪ್ರವೃತ್ತಿ. ಅಸಾಧಾರಣವಾದ ಬಲ ಅವನ ಬಾಹುಗಳಲ್ಲಿ, ಜನರಿಗೆಲ್ಲ ಕೇಡನ್ನು ಬಗೆಯುವದೇ ಅವನ ದುಸ್ವಭಾವ. ಒಂದು ದಿನ ಕಾಡಿಗೆ ಹೋಗಿದ್ದ. ಅಲ್ಲಿ ಒಂದು ಆಶ್ರಮ. ತಪೋನಿರತರಾದ ಋಷಿಗಳು. ಅಲ್ಲಿಯ ಋಷಿರಮಣಿ ರೂಪರಾಶಿ ಚೆಲುವಿನ ಚಿತ್ತಾರ. ಅವಳ ಅನಿಂದ್ಯ ಸೌಂದರ್ಯ ದುಷ್ಟ ದೊರೆಯಮನ ಸೆಳೆಯಿತು.

ಬಲಾತ್ಕಾರದಿಂದ ಆ ಮುನಿ ಮಾನಿನಿಯನ್ನು ಆಶ್ರಮದಿಂದ ಎತ್ತಿಕೊಂಡು ಬಂದ. ತನ್ನ ಅರಮನೆಗೆ ತಂದ ಅಂತಃಪುರದಲ್ಲಿ ಇರಿಸಿದ. ಋಷಿಗಳ ಗುಂಪೇ ಬೆಂಬತ್ತಿ ಅರಸನ ಆಸ್ಥಾನಕ್ಕೆ ಬಂದರು. ತಮ್ಮ ಆಶ್ರಮದ ಸೊತ್ತಾದ ಋಷಿ ಪತ್ನಿಯನ್ನು ಮರಳಿ ಕಳಿಸಲು ಕೇಳಿಕೊಂಡರು. ಕಾಮಾಂಧನಾದ ವೇನನು ಕೇಳಲಿಲ್ಲ. ಮಹರ್ಷಿಗಳ ಮಡದಿಯನ್ನು ಅವರೆಲ್ಲರೂ ಲೌಕಿಕ, ವೈದಿಕ, ಹಿರಿಯರು ಹೇಳಿದರೂ ಒಪ್ಪಿಸಲಿಲ್ಲ. ವೇನನ ರಾಜ್ಯದಲ್ಲಿ ಇದು ಒಂದೇ ನಡೆದ ಅನ್ಯಾಯವಲ್ಲ. ಇಂಥ ನೂರಾರು ಬಲಾತ್ಕಾರದ ಪ್ರಕರಣಗಳು. ಕೊಲೆ, ಸುಲಿಗೆ, ದೇವದ್ವೇಷ, ಧರ್ಮದ್ರೋಹ, ಯಜ್ಞನಾಶ, ದರೋಡೆ ಪ್ರಜಾಪೀಡೆ ಮುಂತಾದ ಅತ್ಯಾಚಾರಗಳಿಗಂತೂ ಲೆಕ್ಕವೇ ಇಲ್ಲ. ಆಗ ಕುಪಿತರಾದ ಆ ಮಹರ್ಷಿಗಳು ಶಾಪಕೊಟ್ಟು ತಕ್ಷಣದಲ್ಲಿಯೇ ಕೊಂದುಹಾಕಿದರು. ಆ ದುಷ್ಟ ದೊರೆಯನ್ನು ದೇಶವೆಲ್ಲವೂ ಅರಾಜಕವಾಯಿತು. ಪರಚಕ್ರದ ಭೀತಿ, ಕಳ್ಳ-ಕಾಕರ ಉಪದ್ರವ, ಪರಸ್ಪರ ಕಚ್ಚಾಟ, ದುರ್ಬಲರ ವಿನಾಶ ಮುಂತಾದ ಅರಾಜಕತೆಯ ಮೂಲಕವಾದ ಅನಿಷ್ಟಗಳು ತಲೆ ದೋರಿದವು. ಇದೆಲ್ಲ ಅನರ್ಥವನ್ನು ಮನಗಂಡು ಆ ಮಹರ್ಷಿಗಳು ಆ ವೇನರಾಜನ ಮೃತ ಶರೀರವನ್ನೇ ಕಡೆದರು. ಆಗ ಅನೇಕ ಮ್ಲೇಂಛರು ಆ ವೇನದೇಹದಿಂದ ಹುಟ್ಟಿ ಬಂದರು. ನಂತರ ಋಷಿಗಳು ಅದೇ ವೇನ ದೊರೆಯ ಬಲಗೈಯನ್ನು ಬಲವಾಗಿ ಕಡೆದರು. ಆಬಲ ದೋಳಿನಿಂದ ವೇನನ ಧರ್ಮಾತ್ಮನಾದ ತಂದೆಯ ಅಂಶದಿಂದ ಕೂಡಿದ ಧರ್ಮಿಷ್ಠನಾದ ಕುಮಾರನು ತಾಯಿಯ ಬಣ್ಣ ಕೃಷ್ಣನನ್ನು ಹೊತ್ತ ಕಪ್ಪಾಗಿ ಉದಿಸಿ ಬಂದ.

ಅವನ ಕೈಯಲ್ಲಿ ಬಿಲ್ಲು, ಬಾಣ, ಗದೆ, ಮೈಮೇಲೆ ರತ್ನದ ಕವಚ ಕಿರೀಟ, ಮೈತುಂಬ ದಿವ್ಯ ಕಾಂತಿ ಹೊಳೆಯುವ ಮೈ ಬಣ್ಣ. ಗುಣಪೂರ್ಣನಾದ ಶ್ರೀವಿಷ್ಣುವಿನ ಒಂದು ವಿಭೂತಿರೂಪವು ಅವನಲ್ಲಿ ಇದ್ದುದರಿಂದ ಪೃಥು ಎಂದು ಅವನ ಹೆಸರಾಯಿತು. ವಿಷ್ಣುವಿನ ಅಂಶದಿಂದ ಪ್ರಾಪ್ತವಾದ ದಿವ್ಯ ದೀಧಿತಿಯಿಂದ ಸುಂದರ ಶರೀರದಿಂದ ಕಂಗೊಳಿಸುವ ಆ ಪೃಥುರಾಜನಿಗೆ ಬ್ರಾಹ್ಮಣರು ಸಾಮ್ರಾಜ್ಯ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕಮಾಡಿದರು. ಯಾರಿಗೂ ಮಾಡಲು ಸಾಧ್ಯವಿಲ್ಲದ ಕಠಿಣ ತಪಸ್ಸನ್ನು ಆ ಪೃಥು ರಾಜನು ಕೈ ಕೊಂಡನು. ವಿಷ್ಣುವು ಅವನಿಗೆ ವರನೀಡಿದನು. ಅದರಿಂದ ಸರ್ವಲೋಕದ ಪ್ರಭುತ್ವವು ಅವನಿಗೆ ಪ್ರಾಪ್ತವಾಯಿತು.

ಹೀಗೆ ಭಗವಂತನ ದಯೆಯಿಂದ ಅಧಿಕಾರ, ಆಧಿಪತ್ಯಗಳನ್ನು ಪಡೆದ ಪೃಥುರಾಜನು ಭೂಮಂಡಲದ ಕಡೆಗೆ ತನ್ನ ದೃಷ್ಟಿಯನ್ನು ಹರಿಸಿದನು. ಎಲ್ಲಿಯೂ ಅವನಿಗೆ ಅಧ್ಯಯನ, ಅಧ್ಯಾಪನ, ಪ್ರವಚನ, ಪಾಠ ಮುಂತಾದ ಜ್ಞಾನ ಕಾರ್ಯಗಳು ಕಾಣಲಿಲ್ಲ. ಯಜ್ಞ, ಯಾಗ, ವ್ರತ ಮುಂತಾದ ಕರ್ಮಾನುಷ್ಠಾನವು ಗೋಚರಿಸಲಿಲ್ಲ. ಒಟ್ಟಾರೆ ಭೂಮಿಯಲ್ಲಿ ಎಲ್ಲಿಯೂ ಧರ್ಮಕಾರ್ಯಗಳೇ ಇರಲಿಲ್ಲ. ಹೀಗೆ ಪ್ರಪಂಚವು ಧರ್ಮ ಶೂನ್ಯವಾದದ್ದು ಕಂಡು ಅವನಿಗೆ ಕೋಪಬಂದಿತು. ಧರ್ಮಶೂನ್ಯವಾದ ಈ ಭೂಮಿಯನ್ನು ಹೊಡೆದು ಹಾಕಬೇಕು ಎಂದು ಅವನು ತನ್ನ ಬಿಲ್ಲನ್ನು ಎತ್ತಿ ಬಾಣಹೂಡಿದನು. ಅದನ್ನು ತಿಳಿದು ಭೂದೇವಿಯು ಒಂದು ಹಸುವಿನ ರೂಪ ಸ್ವೀಕರಿಸಿ ಓಡತೊಡಗಿದಳು. ಕೈಯಲ್ಲಿ ಬಿಲ್ಲು ಬಾಣಹಿಡಿದು ಪೃಥುರಾಜನು ಆ ಭೂದೇವಿಯನ್ನು ಬೆನ್ನಟ್ಟಿದನು. ಆಗ ಹಸುರೂಪ ಧರಿಸಿದ ಆ ಭೂದೇವಿಯು ಒಂದೆಡೆ ನಿಂತು ಕೇಳಿದಳು. ''ನನ್ನನ್ನು ಏಕೆ ಹೊಡೆಯ ಬಂದಿರುವೆ ? ನಾನೇನು ಮಾಡಬೇಕು ?'' ''ತಾಯಿ, ಈ ಚರಾಚರಾತ್ಮಕವಾದ ಪ್ರಪಂಚಕ್ಕೆ ಏನು ಬೇಕು ಅದೆಲ್ಲವನ್ನೂ ನೀನು ನೀಡಬೇಕು.'' ಎಂದು ಪೃಥುರಾಜನು ಅವಳಿಗೆ ಹೇಳಿದಾಗ ''ಹಾಗೇ ಆಗಲಿ'' ಎಂದು ಧರಣೀದೇವಿಯು ಸಮ್ಮತಿ ಸೂಚಿಸಿದಳು.

ಆಗ ಪೃಥು ಮಹಾರಾಜನು ಆ ಧಾರಿಣಿಯನ್ನು ಹಿಂಡಿಕೊಂಡನು. ಪೃಥುರಾಜನು ಮಾಡಿದ ಮೊಟ್ಟಮೊದಲಿನ ಈ ಧರಿಣೀ ಎಂಬ ಧೇನುವಿನ ದೋಹನ ಹಿಂಡುವ ಕಾರ್ಯದಲ್ಲಿ ಸ್ವಾಯಂಭುವ ಮನುವೇ ಕರುವಾಗಿದ್ದನು. ಪ್ರಜಾಜನರೆಲ್ಲರ ಬದುಕಿನ ಆಹಾರವಾದ ಅನ್ನವನ್ನೇ ಹಾಲಿನ ರೂಪದಿಂದ ಹಿಂಡಿಕೊಂಡನು ಪೃಥುರಾಜನ ಕೈಯಲ್ಲಿಯೇ ಕರೆದುಕೊಂಡ ಈ ಅನ್ನದಿಂದ ಎಲ್ಲ ಪ್ರಜೆಗಳೂ ಬದುಕುವಂತಾಯಿತು.

ಅನಂತರ ಋಷಿಗಳೆಲ್ಲರೂ ಕೂಡಿ, ಸೋಮನನ್ನು ಕರುವನ್ನಾಗಿ ಮಾಡಿಕೊಂಡು, ವೇದಪಾತ್ರೆಯಲ್ಲಿ ತಪೋರೂಪವಾದ ಹಾಲನ್ನು ಹಿಂಡಿಕೊಂಡರು. ದೇವತೆಗಳು ಎಲ್ಲರೂ ಕೂಡಿ ಇಂದ್ರನನ್ನು ಕರುವನ್ನಾಗಿ ಮಾಡಿಕೊಂಡು, ಕಾಂಚನಪಾತ್ರೆಯಲ್ಲಿ ಶಕ್ತಿ ಎಂಬ ಹಾಲನ್ನು ಕರೆದರು. ಮಿತ್ರನು ದೋಗ್ಧಾ ಎಂದರೆ ಹಾಲು ಹಿಂಡುವವನು ಆಗಿದ್ದನು. ಇದರಂತೆ ಪಿತೃಗಳು ಬೆಳ್ಳಿಯಪಾತ್ರೆಯಲ್ಲಿ ಯಮನನ್ನೇ ಕರುವನ್ನಾಗಿ ಮಾಡಿಕೊಂಡು ಸ್ವಧಾ ಎಂಬ ರಸವನ್ನು ಕರೆದರು. ನಾಗಗಳು ತಕ್ಷನನ್ನು ಕರುವಾಗಿಸಿ ಸೋರೆ ಬುರುಡೆಯ ಪಾತ್ರೆಯಲ್ಲಿ ವಿಷರೂಪವಾದ ಹಾಲನ್ನು ಕರೆದರು. ಅಸುರರು ಕಬ್ಬಿಣದ ಪಾತ್ರೆ, ಶತ್ರು ಪೀಡೆ ಎಂಬ ಮಾಯೆಯೇ ಹಾಲು, ಪ್ರಲ್ಹಾದ ಪುತ್ರ ವಿರೋಚನನೇ ಕರು.

ಯಕ್ಷರು ಕುಬೇರನನ್ನು ಕರುವನ್ನಾಗಿ ಮಾಡಿಕೊಂಡು ಮಣ್ಣಿನ ಪಾತ್ರೆಯಲ್ಲಿ ಅಂತರ್ಧಾನ ರೂಪವಾದ ಅದೃಶ್ಯವಾಗುವ ಶಕ್ತಿ ಪಡೆದುಕೊಂಡರು. ಪ್ರೇತ ಹಾಗೂ ರಾಕ್ಷಸರು ಸುಮಾಲಿಯನ್ನು ಕರುವನ್ನಾಗಿ ಮಾಡಿಕೊಂಡು ರಕ್ತವನ್ನು ಕರೆದುಕೊಂಡರು. ಗಂಧರ್ವ, ಅಪ್ಸರೆಯರು, ಚಿತ್ರರಥನನ್ನು ಕರುವನ್ನಾಗಿಸಿ ಪದ್ಮಪಾತ್ರೆಯಲ್ಲಿ ಸುಗಂಧವನ್ನು ಈ ಭೂಗೋವಿನಿಂದ ಪಡೆದರು. ಪರ್ವತಗಳು ಹಿಮಗಿರಿಯನ್ನು ಕರುವನ್ನಾಗಿ ಕಲ್ಪಿಸಿ ಮೇರು ಗಿರಿಯನ್ನು ಕರುವನ್ನಾಗಿ ಮಾಡಿ, ಪಾಷಾಣ ಪಾತ್ರೆಯಲ್ಲಿ ಬಗೆ ಬಗೆಯ ರತ್ನ ಔಷಧಿ ಕರೆದುಕೊಂಡರು. ಮರಗಳು ಬಸರೀ ಗಿಡವನ್ನು ಕರುವನ್ನಾಗಿಸಿ ಮುತ್ತುಗದ ಎಲೆಯ ಪಾತ್ರೆಯಲ್ಲಿ ಕರೆದು ಮತ್ತೆ ಚಿಗಿಯುವ ಶಕ್ತಿರೂಪವಾದ ಹಾಲವನ್ನು ಕರೆದುಕೊಂಡರು. ಇದರಂತೆ ಬೇರೆ ಬೇರೆ ಜನರು ಆಕಳು ರೂಪ ಧರಿಸಿದ ಆ ಭೂದೇವಿಯಿಂದ ತಮಗೆ ಬೇಕಾದ ಇಷ್ಟಾರ್ಥಗಳನ್ನು ಕರೆದು ಪಡೆದುಕೊಂಡರು.

ಆ ಪೃಥುರಾಜನು ಪೃಥ್ವೀಮಂಡಲ ಪಾಲಿಸುವಾಗ ಈ ಭೂತಳದಲ್ಲಿ ಬಡವ ಎನ್ನುವವರೂ ಯಾರೂ ಇರಲಿಲ್ಲ. ಬೇನೆಯವರು ಒಬ್ಬರೂ ದೊರಕುತ್ತಿದ್ದಿಲ್ಲ. ಅತಿವೃಷ್ಟಿ, ಅನಾವೃಷ್ಟಿ, ಅನ್ಯಾಯ, ಮೋಸ, ವಂಚನೆ, ಅಧರ್ಮ ಒಂದೂ ಅಂದಿನ ಸಮಾಜದಲ್ಲಿ ತಲೆ ಎತ್ತುತ್ತಿದ್ದಿಲ್ಲ. ಎಲ್ಲ ಜನರೂ ಯಾವಾಗಲೂ ಯಾವುದೋ ತರಹದ ದುಃಖ, ದುರವಸ್ಥೆ, ದಾರಿದ್ರ್ಯ, ದುರ್ಗುಣ, ದೈನ್ಯ, ದುರ್ಭಾವನೆಗಳು ಇಲ್ಲದೆ ಶಾಂತಿ, ಸಂತೋಷ, ತೃಪ್ತಿ, ಗೆಲುವುಗಳಿಂದ ನಲಿದಾಡುತ್ತಿದ್ದರು. ಮಹಾಬಲಿಷ್ಠನಾದ ಆ ಮಹಾರಾಜನು ತನ್ನ ಬಿಲ್ಲಿನ ತುದಿ ಬದಿಗಳಿಂದ ಭೂಮಿಯ ನಡುವೆ ದಿಟ್ಟವಾಗಿ ಬೆಳೆದ ಕಾಡುಗಳನ್ನು ಒತ್ತಿ ಸರಿಸಿ ಸಮತಟ್ಟಾದ ದೊಡ್ಡ ದೊಡ್ಡ ಬಯಲುಗಳನ್ನು ನಿರ್ಮಿಸಿದನು. ಹೊಲ, ನೆಲಗಳನ್ನು ಉತ್ತಿ, ಬಿತ್ತಿ, ಬೆಳೆ ತೆಗೆಯಲು ಅನುಕೂಲವಾಗುವಂತೆ ಹರವಿ ಹದಗೊಳಿಸಿ ಸಿದ್ಧಮಾಡಿದನು. ಜನರು ಅಲ್ಲಲ್ಲಿ ವಾಸಮಾಡಿಕೊಂಡು ಇರಲು ಅನುಕೂಲವಾಗಲಿ ಎಂದು ನಗರ, ಗ್ರಾಮಗಳನ್ನು ನಿರ್ಮಿಸಿದನು. ಆದರೆ ಕೋಟೆ, ಕೊತ್ತಲ, ದುರ್ಗ ಮುಂತಾದವುಗಳನ್ನು ಮಾತ್ರ ಅವನು ರಚಿಸಲಿಲ್ಲ. ಯಾಕೆಂದರೆ ಆಗಿನ ಕಾಲದ ಜನರಿಗೆ ಆಶೆಯೇ ಇರಲಿಲ್ಲ. ಆಕ್ರಮಣ ಪ್ರವೃತ್ತಿ ಇರಲಿಲ್ಲ. ಆದ್ದರಿಂದ ಯಾರೂ ಆಯುಧವನ್ನೇ ಹಿಡಿಯುತ್ತಿರಲಿಲ್ಲ. ಏರಿ ಬರುವದಂತೂ ದೂರದ ಮಾತೇ. ಆದ್ದರಿಂದ ದುರ್ಗಗಳ ಅವಶ್ಯಕತೆಯಿರಲಿಲ್ಲ. ಎಲ್ಲರೂ ತುಷ್ಟರು, ಪುಷ್ಟರು, ಧರ್ಮಿಷ್ಟರು. ಇಂಥ ಪೃಥುರಾಜನಿಗೆ ಧರ್ಮದಿಂದ ಈ ಪೃಥ್ವಿ (ಭೂಮಿ)ಯು ಮಗಳಾದುದರಿಂದ ಅವನಿಗೆ ಅತ್ಯಂತ ಪ್ರೀತಿ ಪಾತ್ರಳಾಗಿದ್ದರಿಂದ ಭೂಮಿಗೆ ಈಗಿರುವ ಈ ರೂಪವನ್ನು ತಂದುಕೊಡಲು ಪೃಥುವೇ ಮುಖ್ಯ ಕಾರಣನಾದದರಿಂದ ಈ ಭೂಮಿಗೆ '**ಪೃಥ್ವಿ**' ಎಂದು ಹೆಸರು ಬಂದಿತು.

**ಭೀಷ್ಮ**:- ತತ್ವಾರ್ಥಗಳನ್ನು ತಿಳಿದ ಪುಲಸ್ತ್ಯರೆ ಸೂರ್ಯವಂಶ ಹಾಗೂ ಚಂದ್ರವಂಶಗಳು ಭೂಮಿಯಲ್ಲಿ ಬಿತ್ತರಗೊಂಡ ಬಗೆಯನ್ನು ನನಗೆ ತಾವು ತಿಳಿಸಬೇಕು.

**ಪುಲಸ್ತ್ಯ** :- ಪೂರ್ವಕಾಲದಲ್ಲಿ ಕಶ್ಯಪ ಮುನಿಗೆ ಅದಿತಿ ದೇವಿಯಲ್ಲಿ ವಿವಸ್ವಾನ್ ಅಥವಾ ಸೂರ್ಯ ಎಂಬ ಮಗನು ಹುಟ್ಟಿದನು. ಸೂರ್ಯನಿಗೆ ಸಂಜ್ಞಾ, ರಾಜ್ಞೀ, ಮತ್ತು ಪ್ರಭಾ ಎಂದು ಮೂವರು ಮಡದಿಯರು, ರೈವತನ ಮಗಳಾದ ರಾಜ್ಞೆಯು ರೈವತ ಎಂಬ ಗಂಡು ಮಗುವನ್ನು, ಪ್ರಭಾ ಸುಂದರಿಯ ಪ್ರಭಾತ ಎಂಬ ಮಗನನ್ನೂ ಹಡೆದರು. ದೇವ ಬಡಿಗ

ವಿಶ್ವಕರ್ಮನ ಮಗಳಾದ ಸಂಜ್ಞೆಯು ಸೂರ್ಯನಿಂದ ಮನು, ಯಮ, ಯಮುನೆ ಎಂಬ ಮೂವರು ಮಕ್ಕಳನ್ನು ಪಡೆದಳು. ಸೂರ್ಯನ ತೇಜಸ್ಸು ದಿನದಿನಕ್ಕೆ ಬೆಳೆಯುತ್ತಲಿತ್ತು. ಸಂಜ್ಞಾದೇವಿಗೆ ಗಂಡನ ಪ್ರಚಂಡಕಾಂತಿಯಿಂದ ಹೊಳೆಯುವ ದೇಹವನ್ನು ಮುಟ್ಟಿದಾಗಲ್ಲೆಲ್ಲ ಕೆಂಡವನ್ನು ಮುಟ್ಟಿದ ಅನುವಭವಾಗುತಿತ್ತು. ಸೂರ್ಯನೊಡನೆ ಸಂಸಾರವೆಂದರೆ ಬೆಂಕಿಯೊಡನೆ ಚೆನ್ನಾಟವಾಡಿದ ಅನುಭವ ಅವಳಿಗೆ. ದಿವಸಗಳಾದಂತೆ ಆದಿತ್ಯನ ದೇಹದ ದೀಪ್ತಿ ಬಿಸಿ, ಬೇಗ ಬೇಗನೆ ಬೆಳೆಯುತ್ತಲೇ ನಡೆಯಿತು. ಅದು ಎಂದೂ ಶಾಂತವಾಗುವ ಅಥವಾ ಸೌಮ್ಯವಾಗುವ ಲಕ್ಷಣವೇ ಕಾಣಲಿಲ್ಲ. ಇನ್ನು ಈ ಬೆಂಕಿಯ ಬೆಟ್ಟದೊಡನೆ ಅಗ್ನಿಕ್ರೀಡೆಯನ್ನು ಆಡುವದು ತನ್ನಿಂದ ಅಶಕ್ಯ. ಎಂದೆನಿಸಿತು. ಆ ಸಂಜ್ಞೆಗೆ ಮನೆಯಲ್ಲಿಯೇ ಇದ್ದು, ಆ ತೇಜೋನಿಧಿಯ ಬಿಸಿ ಬೇಗೆಯ ಬಿಗಿದಪ್ಪುವಿಕೆ, ಅಗ್ನಿ ಚುಂಬನಗಳಿಂದ ಬೇಯುವದೂ ಶಕ್ಯವಿಲ್ಲ, ಸಹಿಸುವದೂ ಸಾಧ್ಯವಿಲ್ಲ ಎನಿಸಿತು. ಹಾಗೆಂದು ದೂರವಿರುವುದು ಮಡದಿಯಾದ ತನಗೆ ಅಶಕ್ಯ. ಅದನ್ನು ತನ್ನ ಪತಿ ಎಂದೂ ಕ್ಷಮಿಸಲಾರ. ಇದನ್ನೆಲ್ಲ ತಿಳಿದು ಕೊನೆಗೆ ಅವಳು ತನ್ನ ಪತಿಯಾದ ಸೂರ್ಯನಿಗೆ ಹೇಳದೆ ಅಲ್ಲಿಂದ ಹೊರಟುಹೋಗಲು ನಿರ್ಧರಿಸಿದಳು. ಅದಕ್ಕಾಗಿ ಅವಳು ತನ್ನ ದೇಹದಿಂದ ತನ್ನಂತೆಯೇ ಇರುವ ಓರ್ವ ಸುಂದರ ಮಹಿಳೆಯನ್ನು ಸೃಷ್ಟಿಸಿದಳು. ತನ್ನ ಪಡಿನೆಳಲಿನಂತಿರುವ ಅಸ್ವ ನಿರ್ಮಿತ ಹೊಸ ಹುಡುಗಿಗೆ **''ಛಾಯಾ''** ಎಂದು ಹೆಸರಿಟ್ಟಳು. ಆ ಛಾಯೆಯು ಕೈ ಮುಗಿದು ಸಂಜ್ಞೆಗೆ ''ನಾನು ಏನು ಮಾಡಲಿ ?'' ಎಂದು ಕೇಳಿದಳು. ಅದಕ್ಕೆ ಸಂಜ್ಞೆಯು ಛಾಯೆಗೆ ಅಪ್ಪಣೆ ಮಾಡಿದಳು. ''ನೀನು ಚಂಡಭಾನು ಎನಿಸಿದ ನನ್ನ ಗಂಡ ಮಾರ್ತಾಂಡನ ಮಡದಿಯಾಗಿ ಬಾಳು. ಪ್ರೇಯಸಿಯಾಗಿ ಅವನೊಡನೆ ವಿಹರಿಸು. ನನ್ನ ಮಕ್ಕಳಾದ ಈ ಯಮ, ಯಮುನೆಯರನ್ನೂ ಹಾಗೂ ವೈವಸ್ವತಮನುವನ್ನೂ ಚೆನ್ನಾಗಿ ರಕ್ಷಣೆಮಾಡು. ಈ ನನ್ನ ಮಕ್ಕಳನ್ನು ಮಾತ್ರ ತಾಯಿ ಇಲ್ಲದ ತಬ್ಬಲಿ ಎಂದೆನಿಸಬೇಡ ನನ್ನ ಮಾತೃ ಹೃದಯದ ಮಮತೆಯಿಂದ ನೀನು ಈ ಮಕ್ಕಳಿಗೆ ಮಾತೆಯಾಗಿ ನನ್ನ ಪತಿಗೆ ಮಡದಿಯಾಗಿ, ರಸಿಕ ರಮಣಿಯಾಗಿ ನನ್ನ ಸ್ಥಾನದಲ್ಲಿದ್ದು ಸಂಸಾರಮಾಡು.''

ಛಾಯೆಯು ''ಹಾಗೇ ಆಗಲಿ'' ಎಂದು ಸಂಜ್ಞೆಯ ಅಪ್ಪಣೆಯನ್ನು ಪಾಲಿಸುವುದಾಗಿ ವಚನಕೊಟ್ಟಳು. ಅದರಿಂದ ಸಮಾಧಾನವಾದ ಸಂಜ್ಞೆಯು ಹೊರಟು ಹೋದಳು. ಸಂಜ್ಞೆಯು ಹೋದ ಬಳಿಕ ಛಾಯೆಯು ಸೂರ್ಯನ ಬಳಿಗೆ ಹೋದಳು. ಅವಳದೇ ರೂಪ, ಅದೇ ಚೆಲುವು. ಅದೇ ನಿಲುವು, ಅದೇ ನಡೆ, ಅದೇ ನುಡಿ, ಅದೇ ಮಾಟ, ಅದೇ ನಡಿಗೆ ಎಲ್ಲಿಯೂ ವ್ಯತ್ಯಾಸವಿಲ್ಲ. ಇನಿತೂ ಅಂತರವಿಲ್ಲ. ಅವಳದೇ ಬಿಂಬ. ಅವಳದೇ ಪ್ರತಿಬಿಂಬ- ಇವಳು ಆದದ್ದರಿಂದ ಸೂರ್ಯನಿಗೂ ಇವಳು ಸಂಜ್ಞೆ ಅಲ್ಲವೆಂದು ಸಂದೇಹವೇ ಬರಲಿಲ್ಲ. ಅವನು ಉತ್ಸಾಹದಿಂದ ಛಾಯೆಯೊಡನೆ ರಮಿಸಿದನು. ಛಾಯಾದೇವಿಗೆ ಸೂರ್ಯನಿಂದ ಸಾವರ್ಣಿ, ಶನೀಶ್ವರ, ತಪತೀ, ವಿಷ್ಟೀ ಎಂಬ ನಾಲ್ವರು ಮಕ್ಕಳು ಜನಿಸಿದರು. ಛಾಯೆಯು ಮೊದಮೊದಲು ಸಂಜ್ಞೆಯ ಮಕ್ಕಳಾದ ಯಮ, ಯಮುನೆ ಹಾಗೂ ಮನುವಿನ ಮೇಲೆ ಅವರ ಮಾತೆಯಂತೆಯೇ ಪ್ರೀತಿ ಮಾಡುತ್ತಿದ್ದಳು. ತನಗೂ ನಾಲ್ಕು ಮಕ್ಕಳಾದ ಮೇಲೆ ಅವರ ಮೇಲಿನ ಮಾತೃಪ್ರೇಮ ಕಡಿಮೆಯಾಗಿ, ಸವತಿ ಮತ್ಸರವು ಹಣುಕಿ ಹಾಕಿತು. ತನ್ನ ಹೊಟ್ಟೆಯ ಮಕ್ಕಳಲ್ಲಿ ಹೆಚ್ಚು ಪ್ರೇಮ, ಸಂಜ್ಞೆಯ ಮಕ್ಕಳಲ್ಲಿ ಅನಾದರ, ದ್ವೇಷ. ತಿರಸ್ಕಾರ ಮಾಡತೊಡಗಿದಳು. ತಾಯಿಯ ಈ ತಿರಸ್ಕಾರ ತಾಳಲಾರದೆ ಒಂದು ದಿನ ಯಮನು

ಛಾಯೆಗೆ ಕೋಪದಿಂದ ಒದೆಯಲು ತನ್ನ ಕಾಲನ್ನು ಎತ್ತಿದನು. ''ನನ್ನನ್ನು ಒದೆಯಲು ಎತ್ತಿದ ನಿನ್ನ ಆ ಬಲಗಾಲಲ್ಲಿ ಹುಳು ಬಿದ್ದು ರಕ್ತ, ಕೀವು, ಸೋರಲಿ'' ಎಂದು ಛಾಯೆಯು ಯಮನಿಗೆ ಶಾಪವಿತ್ತಳು. ಯಮನು ತಂದೆಯ ಬಳಿಗೆ ಬಂದು, ''ಅಪ್ಪಾ, ಇದೋ ತಾಯಿಯು ಶಾಪ ಕೊಟ್ಟು ನನ್ನ ಕಾಲು ಎತ್ತಿದ್ದೇ ತಪ್ಪಾಯಿತು. ಅಷ್ಟಕ್ಕೆ ಅಣ್ಣ ನಿಷೇಧ ಮಾಡಿದರೂ, ''ಹುಳುಬಿದ್ದು ಹಾಳಾಗಿ ಹೋಗಲಿ ಈ ನನ್ನ ಕಾಲು, ರಕ್ತ, ಕೀವು ಸೋರಲಿ'' ಎಂದು ಶಾಪ ಕೊಟ್ಟಿದ್ದಾಳೆ. ಇವಳು ಮಕ್ಕಳಲ್ಲಿಯೇ ಪಕ್ಷಪಾತ ಮಾಡುತ್ತಿರುವಳು. ನಾನು ನನ್ನ ತಂಗಿ ಯಮುನೆ ಹಾಗೂ ಅಣ್ಣ ವೈವಸ್ವತ ಮನು ಇವರನ್ನು ಕಂಡರೆ ಈ ತಾಯಿಗೆ ದ್ವೇಷ ಭಾವನೆ. ನನ್ನ ಉಳಿದ ಸೋದರ-ಸೋದರಿಯರ ಬಗ್ಗೆ ವಿಲಕ್ಷಣ ಪ್ರೀತಿ ತೋರಿಸುತ್ತಾಳೆ. ಮಕ್ಕಳಲ್ಲಿಯೇ ಇವಳ ಈ ಸ್ನೇಹ-ದ್ರೋಹ-ದ್ವೇಷ, ಪಕ್ಷಪಾತಗಳನ್ನು ಕಂಡರೆ ಇವಳು ನಮ್ಮ ತಾಯಿಯೇ ಅಲ್ಲವೇನೋ ಎಂಬ ಸಂದೇಹ ಬರುತ್ತದೆ. ಹೆತ್ತ ತಾಯಿಯು ಹುಟ್ಟಿದ ಮಕ್ಕಳ ಮೇಲೆ ಅವರು ಎಷ್ಟೇ ತಪ್ಪುಮಾಡಿದರೂ ಹೀಗೆ ಕೆಟ್ಟದ್ದನ್ನು ಬಯಸುವಳೆ ? ಕೈಕಾಲು ಮುರಿದು ಅಂಗಹೀನರಾಗಲು ಶಪಿಸುವಳೆ ?'' ಎಂದು ತನ್ನ ದುಃಖವನ್ನು ತೋಡಿಕೊಂಡನು. ಅದನ್ನು ಕೇಳಿ ಸೂರ್ಯನು ತನ್ನ ಮಗನನ್ನು ಹತ್ತಿರ ಕರೆದು ಸಂತೈಸುತ್ತ ನುಡಿದನು. ''ಪುತ್ರನೆ ಏನು ಮಾಡಲಿ ? ನೀನು ಮಗ, ಅವಳು ಹೆಂಡತಿ. ಇವರಲ್ಲಿ ಯಾರನ್ನು ದಂಡಿಸಲು ಬರುವುದು ? ಮಕ್ಕಳಿಗೆ ಹೀಗಾದದ್ದನ್ನು ನೋಡಿ ಯಾವ ತಂದೆಗಾದರೂ ದುಃಖ ವಾಗದಿದ್ದೀತೆ ! ಇದೆಲ್ಲವೂ ಪ್ರಾಚೀನ ಕರ್ಮಫಲ. ಸಾಕ್ಷಾತ್ ಮಹಾದೇವರಿಗೂ ಹಿಂದಿನ ಜನ್ಮದ ಕರ್ಮಫಲ ಬಿಟ್ಟಿಲ್ಲ. ಉಳಿದವರ ಪಾಡೇನು ? ನಿನ್ನ ಹುಳಬಿದ್ದ ಕಾಲು ಹಾಳಾಗದಂತೆ ನಾನು ಮಾಡುತ್ತೇನೆ. ಅದಕ್ಕಾಗಿ ಒಂದು ಕೋಳಿಯನ್ನು ನಿಯಮಿಸುತ್ತೇನೆ. ಅದು ನಿನ್ನ ಕಾಲಲ್ಲಿ ಹುಳುಗಳನ್ನು ತಿಂದು ಹೋಗುವದು. ಮತ್ತು ಅಲ್ಲಿರುವ ಹೊಲಸನ್ನೆಲ್ಲ ಶೋಧಿಸಿ ನಿನ್ನ ಪಾದವನ್ನು ಶುದ್ಧ ಮಾಡುವದು. ಮುಂದೆ ಅದು ತಾನಾಗಿ ಗುಣವಾಗುವುದು. ಕೀವು, ರಕ್ತ ಎಲ್ಲವನ್ನೂ ಆ ಕೋಳಿಯು ತಿಂದು ನಿನ್ನ ಕಾಲು ಮೊದಲಿನಂತಾಗುವದು.''

ತಂದೆಯ ಈ ನುಡಿಗಳನ್ನುಕೇಳಿ ಯಮನಿಗೆ ಬಾಳಿನಲ್ಲಿಯೇ ವೈರಾಗ್ಯ ಬಂದಂತಾಯಿತು. ಅವನು ಮನೆ ಬಿಟ್ಟು ಪುಷ್ಕರ ತೀರ್ಥಕ್ಕೆ ಪ್ರಯಾಣಮಾಡಿದನು. ಅಲ್ಲಿ ತೀವ್ರವಾದ ತಪಸ್ಸು ಕೈಕೊಂಡನು. ಮೊದಲು ಕೆಲವು ದಿನ ಬರಿ ಹಣ್ಣು ಕಾಯಿ ತಿಂದು, ಮತ್ತೆ ಕೆಲವು ದಿನ ನೀರಿನ ತೆರೆಯ ಮೇಲಿನ ನೊರೆ ಸೇವಿಸಿ, ಕೊನೆಗೆ ಬರಿ ಗಾಳಿ ಕುಡಿದು ಉಗ್ರ ತಪಸ್ಸು ನಡೆಸಿದನು. ಹೀಗೆ ನೂರು ವರ್ಷ ಅವನ ತಪಸ್ಸು ನೆರವೇರಿತು. ಬ್ರಹ್ಮದೇವನು ಆ ಉಗ್ರತಪಸ್ಸಿಗೆ ಮೆಚ್ಚಿ ಬಂದನು. ''ಬೇಕಾದ ವರ ಬೇಡು'' ಅಂದನು. ಆಗ ಯಮನು ಲೋಕಪಾಲತ್ವವನ್ನೂ ಅಕ್ಷಯವಾದ ಪಿತೃಲೋಕವನ್ನೂ ಬೇಡಿಕೊಂಡನು. ಸಂತುಷ್ಟನಾದ ಬ್ರಹ್ಮದೇವನು ಜಗತ್ತಿನಲ್ಲಿಯ ಎಲ್ಲ ಜೀವಿಗಳ ಧರ್ಮಾಧರ್ಮ ನಿರ್ಣಾಯಕನನ್ನಾಗಿ ಆ ಯಮನನ್ನು ನಿಯಮಿಸಿದನು. ಪಿತೃಲೋಕಗಳಿಗೆ ಅವನನ್ನೇ ಒಡೆಯನನ್ನಾಗಿ ಮಾಡಿ, ದಕ್ಷಿಣ ದಿಕ್ಕಿನ ಒಡೆತನವನ್ನೂ ಯಮನಿಗೆ ಕರುಣಿಸಿದನು.

ಈ ಸಮಾಚಾರ ಸೂರ್ಯನಿಗೆ ತಿಳಿಯಿತು. ಮಗನನ್ನು ಶಪಿಸಿ ಮನೆ ಬಿಟ್ಟು ಹೊರಗೆ ಹಾಕಿದ ಹೆಂಡತಿಯ ಬಗ್ಗೆ ಅವನಿಗೆ ಬೇಸರವಾಯಿತು. ಅವಳ ದುರ್ಗುಣಗಳ ಬಗ್ಗೆ ದೂರು ಕೊಡಲು ಅವನು ತನ್ನ ಮಾವನ ಬಳಿಗೆ ಬಂದನು. ದೇವಶಿಲ್ಪಿ ವಿಶ್ವಕರ್ಮನ ಮುಂದೆ

''ನಿನ್ನ ಮಗಳಾದ ಸಂಜ್ಞೆಯು ಮಕ್ಕಳ ಮೇಲೆ ಹೀಗೆ ಪಕ್ಷಪಾತಮಾಡಿ ಮಗನಿಗೆ ಶಾಪಕೊಟ್ಟು, ಹೊರಗೆ ಹಾಕಿದ್ದಾಳೆ'' ಎಂದು ದೂರಿಕೊಂಡನು. ಆಗ ವಿಶ್ವಕರ್ಮನು ಅಳಿಯನನ್ನು ಸಂತೈಸುತ್ತ ಹೀಗೆ ಹೇಳಿದನು.

**ವಿಶ್ವಕರ್ಮ :-** ಪೂಜ್ಯನಾದ ಸೂರ್ಯನೆ, ನೀನು ಗಂಡಸು. ನಿನ್ನ ಮನೆಯಲ್ಲಿ ನಿನ್ನ ಹೆಂಡತಿ ಮಾಡಿದ ಅವಾಂತರ ಇಷ್ಟು ದಿನವಾದರೂ ನಿನಗೆ ತಿಳಿದೇ ಇಲ್ಲ. ನೀನು ಜಗತ್ತಿಗೆಲ್ಲ ಬೆಳಕು ಬೀರುತ್ತಿದ್ದರೂ ನಿನಗೆ ಮನೆಯ ಸಮಾಚಾರವೇ ಗೊತ್ತಾಗಲಿಲ್ಲ. ನಿನ್ನ ಮಗನನ್ನು ಶಾಪವಿತ್ತು ಹೊರಗೆ ಹಾಕಿದವಳು ನನ್ನ ಮಗಳಾದ ಸಂಜ್ಞೆಯಲ್ಲ, ಹಾಗೂ ನೀನು ಈಗ ಮಡದಿಯೆಂದು ಲಲ್ಲೆಯಾಡುವವಳೂ ನನ್ನ ಮಗಳಾದ ಸಂಜ್ಞೆಯಲ್ಲ. ಸಂಜ್ಞೆಯು ನಿನ್ನ ಅತ್ಯಂತ ಉಗ್ರವಾದ ತೇಜಸ್ಸನ್ನು ಸಹನೆ ಮಾಡದೆ, ನಿನ್ನ ಮನೆಬಿಟ್ಟು ಹೋಗಿದ್ದಾಳೆ. ಅವಳು ಹೋಗುವಾಗ ತಾನೇ ತನ್ನಂತೆಯೇ ಇರುವ ತನ್ನ ನೆರಳಿನದೇ ಹೆಣ್ಣನ್ನು ನಿರ್ಮಾಣಮಾಡಿ ಜೀವತುಂಬಿ ತನ್ನ ಸ್ಥಾನದಲ್ಲಿಟ್ಟು, ಅವಳಿಗೆ ತನ್ನ ಗಂಡ, ಮಕ್ಕಳನ್ನು ಒಪ್ಪಿಸಿ ಇತ್ತ ಬಂದಳು. ಅವಳು ನಿನಗೆ ಹೇಳಿ ನಿನ್ನ ಅನುಮತಿ ಪಡೆದು ಬಾರದಿದ್ದುದರಿಂದ, ನಾನು ನನ್ನ ಮನೆಯಲ್ಲಿ ಅವಳಿಗೆ ಪ್ರವೇಶವನ್ನೇ ಕೊಡಲಿಲ್ಲ. ''ಗಂಡನ ಅಪ್ಪಣೆಯಿಲ್ಲದೆ ಬಂದ ನಿನಗೆ ಅಪ್ಪನ ಮನೆಯಲ್ಲೂ ಸ್ಥಾನವಿಲ್ಲ'' ಎಂದು ನಾನು ಅವಳನ್ನು ತಿರುಗಿ ಕಳಿಸಿದೆ. ಆಗ ನನ್ನ ಪುತ್ರಿಯು ಮರುದೇಶಕ್ಕೆ ಹೊರಟು ಹೋದಳು. ಸೂರ್ಯ, ಏನಾದರೂ ಆ ನಿನ್ನ ಹೆಂಡತಿ ಪರಮ ಪತಿವ್ರತೆ. ತನ್ನ ರೂಪ ನೋಡಿ ದೈತ್ಯ ದಾನವರಲ್ಲಿ ಯಾರಾದರೂ ತನ್ನ ಬಳಿ ಸುಳಿಯಬಾರದು ಎಂದು ಹೆಣ್ಣು ಕುದುರೆಯಾಗಿ ಮನದಲ್ಲಿ ನಿನ್ನನ್ನೇ ಧ್ಯಾನಗೈಯುತ್ತ ಬಾಯಿಯಿಂದ ನಿನ್ನ ನಾಮವನ್ನು ಜಪಿಸುತ್ತ ಅಲ್ಲಲ್ಲಿ ಅಲೆಯುತ್ತಿದ್ದಾಳೆ. ಬೆಂಕಿಯ ಮೊಟ್ಟೆಯಂತಿರುವ ನಿನ್ನೊಡನೆ, ನಿನ್ನ ಅಗ್ನಿ ಸ್ಪರ್ಶದಂತಿರುವ ಜ್ವಾಲಾಲಿಂಗನ, ವಿದ್ಯುತ್ ಚುಂಬನಗಳಿಗೆ ಹೆದರಿ ಹೋದದ್ದು ಆ ಕೋಮಲಾಂಗಿಯ ಮಹಾಪರಾಧವೇನಲ್ಲ. ಜೀವಂತ ದೇಹ ದಾಹವನ್ನು ತಾಳಲಾರದೆ ನಿನ್ನಿಂದ ದೂರಾದ ಅವಳ ಅಪರಾಧವನ್ನು ಕ್ಷಮಿಸು. ಅವಳ ಮೇಲೆ ಪ್ರಸನ್ನನಾಗು. ನನ್ನ ಮೇಲೆ ಅನುಗ್ರಹ ಮಾಡು. ನಿಮ್ಮ ಈ ವಿರಸ ದಾಂಪತ್ಯದಲ್ಲಿ ಮತ್ತೆ ಮೊದಲಿನ ಸರಸ, ಸ್ನೇಹ, ಪ್ರೇಮಗಳನ್ನು ಅರಳಿಸಲು ನಾನು ಯುಕ್ತಿಯನ್ನು ಮಾಡುತ್ತೇನೆ. ಅದಕ್ಕೆ ದಯವಿಟ್ಟು ನೀನು ಸಮ್ಮತಿಸಬೇಕು. ನಿನ್ನ ಮೈಯಲ್ಲಿ ಉಕ್ಕುವ ಉರಿ, ಮಿಕ್ಕಿದ ತೇಜಸ್ಸೇ ನಿನ್ನ ಹೆಂಡತಿ ನಿನ್ನಿಂದ ದೂರವಾಗಲು ಕಾರಣವಷ್ಟೇ ? ಆದುದರಿಂದ ನಿನ್ನನ್ನು ಸಾಣೆ ಹಿಡಿಯುವ ಗಾಡಕ್ಕೆ ಏರಿಸಿ, ನಿನ್ನ ಆ ಹೆಚ್ಚಿನ ತೇಜಸ್ಸನ್ನೆಲ್ಲ ಕತ್ತರಿಸಿ ತೆಗೆದುಬಿಡುತ್ತೇನೆ. ಯಂತ್ರದ ಬಾಯಿಗೆ ಸಿಕ್ಕ ನಿನ್ನ ದೇಹದಲ್ಲಿಯ ಅತಿ ಪ್ರಸಕ್ತವಾದ ತೇಜೋ ಭಾಗಗಳೆಲ್ಲ ಕತ್ತರಿಸಿ, ನಿನ್ನ ಆಕಾರವನ್ನೇ ಸಣ್ಣದನ್ನಾಗಿ ಮಾಡುತ್ತೇನೆ. ಇದರಿಂದ ನಿನ್ನ ರೂಪ ಶಾಂತ, ಸುಂದರ, ಸೌಮ್ಯವಾದ ಸಹ್ಯ ರೂಪವಾಗುವದು. ನಿನ್ನ ಹೆಂಡತಿಗೂ ಆಲಿಂಗನಕ್ಕೆ ಹಿತಕರ, ವಿಹಾರಕ್ಕೆ ಸುಖಕರ.''

ಮಾವನ ಈ ಮಾತನ್ನು ಕೇಳಿ ಮೆಚ್ಚಿನ ಮಡದಿಗಾಗಿ ಸೂರ್ಯನು ತನ್ನ ದೇಹವನ್ನು ಕೊರೆಯಿಸಿಕೊಳ್ಳಲು ಸಿದ್ಧನಾದನು. ಆಗ ವಿಶ್ವಕರ್ಮನು ತನ್ನ ಯಂತ್ರದ ಚಕ್ರದಲ್ಲಿಟ್ಟು ಸೂರ್ಯನನ್ನು ಸಾಣೆಹಿಡಿದನು. ಪ್ರಚಂಡಾಕಾರವಾಗಿ ಬೆಳೆದ ಮಾರ್ತಂಡನ ವಿರಾಟ ದೇಹದ ಕೆಲವೊಂದು ಕೆಂಡದ ಉಂಡೆಗಳಂತಿರುವ ಭಾಗಗಳನ್ನು ಕಡಿದು ತೆಗೆದನು.

ಆದ್ದರಿಂದ ಸೂರ್ಯನ ಆಕಾರವು ಸಂಕ್ಷಿಪ್ತವಾಗಿ ಸೌಮ್ಯ ಸುಂದರ ರೂಪದಿಂದ ಹಿತಮಿತವಾದ ತೇಜೋದೀಪ್ತಿಯಿಂದ ಕಂಗೊಳಿಸಿತು. ಸೂರ್ಯನಾರಾಯಣನಿಂದ ಕತ್ತರಿಸಿ ತೆಗೆದ ತೇಜೋಭಾಗದ ತುಂಡು ತಣುಕುಗಳಿಂದ ವಿಷ್ಣುವಿನ ಸುದರ್ಶನ ಚಕ್ರ, ದೇವೇಂದ್ರನ ವಜ್ರಾಯುಧ, ಶಿವನ ತ್ರಿಶೂಲ ನಿರ್ಮಿಸಿದನು ಆ ವಿಶ್ವಕರ್ಮ. ಹೀಗೆ ಪ್ರಸನ್ನ ಕಿರಣ ಕುಂಜದಂತಿರುವ ಸೂರ್ಯರೂಪವು ಅಂದಿನಿಂದ ಅಪ್ರತಿಮವಾಗಿ ಕಂಗೊಳಿಸಿತು. ಹೀಗೆ ಸೂರ್ಯನ ಮೈಮೇಲಿನ ಎಲ್ಲ ಭಾಗದ ತೇಜಸ್ತರಗಳನ್ನು ಸಾಣೆ ಹಿಡಿದು ಕೊರೆದು ತೆಗೆದರೂ ವಿಶ್ವಕರ್ಮನು ಅವನ ಪಾದದ ಮೇಲೆ ತನ್ನ ಯಂತ್ರ ಆಡಿಸಲಿಲ್ಲ. ಆದ್ದರಿಂದ ಸೂರ್ಯನ ಪಾದಗಳು ಮಾತ್ರ ಇಂದಿಗೂ ಯಾರಿಗೂ ನೋಡಲು ಸಾಧ್ಯವಾಗಲಿಲ್ಲ. ಅವುಗಳಲ್ಲಿಯ ಮೊದಲಿನ ಅತ್ಯುಜ್ವಲವಾದ ತೇಜೋರಾಶಿಯು ಹಾಗೆಯೇ ಇದೆ. ಬೆಂಕಿಯ ಭಂಡಾರದಂತಿರುವ ಆ ಆದಿತ್ಯದೇವನ ಪಾದಗಳನ್ನು ಯಾರಾದರೂ ನೋಡಲು ಹವಣಿಸಿದರೆ ಅವರ ಕಣ್ಣು ಕುಕ್ಕಿ, ಚಕ್ಷುರಿಂದ್ರಿಯದ ಶಕ್ತಿಯೇ ಉಡುಗಿ ಹೋಗುವುದು. ಆದುದರಿಂದ ಸೂರ್ಯದೇವನ ಪ್ರತಿಮೆ, ಚಿತ್ರಮಾಡುವವರು ಯಾರೂ ಅವನಿಗೆ ಪಾದಗಳನ್ನು ಬರೆಯುವುದಿಲ್ಲ. ಸೂರ್ಯನ ಪ್ರತಿಮೆಗೆ ಪಾದಗಳನ್ನು ಜೋಡಿಸಿದರೆ ಮಹಾಪಾಪ. ಆಗ ಕುಷ್ಠರೋಗ ಪ್ರಾಪ್ತವಾಗುವದು. ಆದುದರಿಂದ ಕ್ಷೇಮ ಆರೋಗ್ಯಗಳನ್ನು ಬಯಸುವವರು ಮನೆ ಅಥವಾ ದೇವಸ್ಥಾನಗಳಲ್ಲಿಯ ಸೂರ್ಯನ ಪಾದಗಳನ್ನು ಸರ್ವಥಾ ಚಿತ್ರಿಸಕೂಡದು.

ಅನಂತರ ಸೂರ್ಯನು ತನ್ನ ಹೆಂಡತಿಗಾಗಿ ಭೂಲೋಕಕ್ಕೆ ಬಂದನು. ಅಲ್ಲಿ ಹೆಣ್ಣು ಕುದುರೆಯ ರೂಪದಿಂದ ಮರುದೇಶದಲ್ಲಿ ಸಂಚರಿಸುವ ತನ್ನ ಮಡದಿಯನ್ನು ಕಂಡು ಅವನಲ್ಲಿ ಪ್ರೇಮ, ಕಾಮ, ಉದ್ರೇಕಗೊಂಡವು. ಕೂಡಲೇ ಅವನು ಗಂಡು ಕುದುರೆಯಾಗಿ ಅವಳನ್ನು ಕೂಡಿದನು. ''ಇದೊಂದು ಯಾವುದೋ ಬೇರೆ ಕುದುರೆ'' ಎಂದು ತಿಳಿದು ಅವಳು ದೂರ ಸರಿದಳು. ಆದರೂ ಅಶ್ವರೂಪಿ ಸೂರ್ಯನು ಬಿಡದೆ ಅವಳನ್ನು ಬಲಾತ್ಕಾರದಿಂದ ಕೂಡಿದನು. ಪರಪುರುಷ ಎಂಬ ಹೆದರಿಕೆಯಿಂದ ಆ ಅಶ್ವಿನಿ-ಅಂದರೆ ಹೆಣ್ಣು ಕುದುರೆ ರೂಪದ ಸಂಜ್ಞೆಯು ಸೂರ್ಯ ಶಕ್ತಿಯನ್ನು ಸ್ವೀಕರಿಸದೇ ತನ್ನ ಮೂಗಿನ ಹೊರಳೆಯಿಂದ ಹೊರಬಿಟ್ಟಳು. ಕೂಡಲೇ ಎರಡು ಗಂಡು ಮಕ್ಕಳು ಹುಟ್ಟಿದವು. ಅಶ್ವಿನಿ-ಹೆಣ್ಣು ಕುದುರೆಯ ರೂಪದಲ್ಲಿರುವ ಸಂಜ್ಞೆಯಿಂದ ಹುಟ್ಟಿರುವದರಿಂದ ಅವರಿಗೆ ಅಶ್ವಿನಿಕುಮಾರರೆಂದೂ ನಾಶಿಕ-ಮೂಗಿನ ಹೊರಳೆಯಿಂದ ಹುಟ್ಟಿದ್ದರಿಂದ ಅವರಿಗೆ ನಾಶಿಕ್ಯರೆಂದೂ ಹೆಸರು ಬಂದವು ತುಸು ಹೊತ್ತಿನಲ್ಲಿ ತನ್ನೊಡನೆ ರಮಿಸ ಬಂದವನು ತನ್ನ ಪತಿಯಾದ ರವಿಯೇ ಎಂದು ತಿಳಿದು ಅವಳಿಗೆ ಆನಂದವಾಯಿತು. ಆಗ ಸೂರ್ಯನು ತನ್ನ ಪ್ರೀತಿಯ ಪತ್ನಿಯನ್ನು ವಿಮಾನದಲ್ಲಿ ಕೂಡಿಸಿ ಕೊಂಡು ತನ್ನ ಲೋಕಕ್ಕೆ ಕರೆದೊಯ್ದನು.

ಸೂರ್ಯನ ಮತ್ತೊಬ್ಬ ಮಗನಾದ ಸಾವರ್ಣಿಮನುವು ಈಗಲೂ ಕೂಡ ಮೇರು ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾನೆ. ಛಾಯೆಯ ಮಗನಾದ ಶನಿಯು ತನ್ನ ತಪೋಬಲದಿಂದ ಗ್ರಹಮಂಡಲದಲ್ಲಿ ಸೇರ್ಪಡೆಯಾದನು. ಸಂಜ್ಞೆಯ ಮಗಳಾದ ಯಮುನೆಯೂ, ಛಾಯೆಯ ಮಗಳಾದ ತಪತಿಯೂ ನದಿಗಳಾಗಿ ಹರಿದರು. ಸೂರ್ಯನ ಮತ್ತೊಬ್ಬ ಮಗಳು ಘೋರವಾದ ಕಾಲರೂಪದಿಂದ ನಿಂತುಕೊಂಡಳು. ಸಂಜ್ಞೆಯ ಹಿರಿಯ

ಮಗ ವೈವಸ್ವತ ಮನುವಿಗೆ ಇಲ್ಲ, ಇಕ್ವಾಕು, ಕುಶನಾಭ, ಅರಿಷ್ಟ ವಿಸೃಷ್ಟ, ನರಿಷ್ಯಂತ, ಕರೂಷ, ಶರ್ಯಾತಿ, ಪ್ರಷದ್ಧ್ರ, ನಾಭಾಗ ಎಂಬ ಹತ್ತು ಜನ ಮಕ್ಕಳು. ಇವರೆಲ್ಲರೂ ಮಾನವರಾದರೂ ತಮ್ಮ ಪುಣ್ಯ ಪ್ರಭಾವದಿಂದ ದೇವತಾ ಸ್ವರೂಪ ಹೊಂದಿದರು.

ವೈವಸ್ವತ ಮನುವು ತನ್ನ ಜ್ಯೇಷ್ಠಪುತ್ರ ಇಲನನ್ನು ಸಾಮ್ರಾಜ್ಯ ಸಿಂಹಾಸನದ ಮೇಲೆ ಪಟ್ಟಾಭಿಷೇಕಮಾಡಿ ತಪಸ್ಸುಮಾಡಲು ತಾನು ತಪೋವನಕ್ಕೆ ತೆರಳಿದನು. ಆಗ ಬ್ರಹ್ಮದೇವರು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷರಾಗಿ ''ನಿನಗೆ ಇಷ್ಟವಾದ ವರವನ್ನು ಕೇಳಿಕೊ'' ಎಂದು ಹೇಳಿದರು. ಅದಕ್ಕೆ ಮನುವು ''ಪೂಜ್ಯ ಬ್ರಹ್ಮದೇವ, ಭೂಲೋಕದಲ್ಲಿ ಆಳುವ ಈ ನನ್ನ ಹತ್ತು ಮಕ್ಕಳು ನಿನ್ನ ಅನುಗ್ರಹದಿಂದ ಧರ್ಮಿಷ್ಠರಾಗಲಿ, ಭಗವದ್ಭಕ್ತರಾಗಲಿ, ದೇವತಾ ಸ್ವರೂಪಿಗಳಾಗಲಿ'' ಎಂದು ಬೇಡಿಕೊಂಡನು ವೈವಸ್ವತ ಮನುವಿನ ಈ ಅಭೀಷ್ಟ ಸಲ್ಲಿಸಿ ಬ್ರಹ್ಮನು ಅಲ್ಲೇ ಅದೃಶ್ಯನಾದನು. ಅನಂತರ ಮನು ಮಹಾರಾಜನು ತಪೋವನದಿಂದ ತನ್ನ ಊರಿಗೆ ಬಂದು ಮೊದಲಿನಂತೆ ಧರ್ಮ ತತ್ಪರನಾಗಿ ವಾಸ ಮಾಡಿದನು. ಮುಂದೆ ಒಂದು ದಿನ ಮನುವಿನ ಹಿರಿಯ ಮಗನಾದ ಇಲರಾಜನು ದಿಗ್ವಿಜಯಕ್ಕಾಗಿ ಹೊರಟನು. ಅವನು ದೇಶ ದೇಶಾಂತರಗಳನ್ನು ಸುತ್ತಿ ಎಲ್ಲ ರಾಜರನ್ನು ಗೆದ್ದು, ವಶಪಡಿಸಿ ಕೊಂಡು, ಅವರನ್ನು ಸಂತೈಸಿ, ಮುಂದೆ ಪ್ರಯಾಣಮಾಡಿದನು. ಹೀಗೆ ಸಂಚರಿಸುತ್ತ ಅವನ ರಥವು ಒಮ್ಮೆ ಕಲ್ಪವೃಕ್ಷದ ಬಳ್ಳಿಗಳಿಂದ ಒಡಗೂಡಿದ ಶರವಣ ಎಂಬ ಹೆಸರಿನ ಮಹಾದೇವರ ಉಪವನದಲ್ಲಿ ಪ್ರವೇಶ ಮಾಡಿತು. ಅದು ಪರಶಿವನ ಆಡುಂಬೆಲ, ಮರಿಚಂದ್ರನನ್ನು ತನ್ನ ಜಡೆ ಎದೆಯಲ್ಲಿ ಮುಡಿದುಕೊಂಡು ಕೈಲಾಸ ಪತಿಯು ತನ್ನ ಮೋಹದ ಮಡದಿಯಾದ ಉಮೆಯೊಂದಿಗೆ ಅಲ್ಲಿ ಸ್ವಚ್ಛಂದ ವಿಹಾರ ಗೈಯುತ್ತಿರುತ್ತಾನೆ. ಹಿಂದೊಮ್ಮೆ ಈ ಪಾರ್ವತಿ-ಪರಮೇಶ್ವರರ ವಿಹಾರ ಸಂದರ್ಭದಲ್ಲಿ ಯಾರೋ ಗಂಡಸರು ನುಗ್ಗಿ ಬಂದದ್ದರಿಂದ ಮಹಾದೇವಿಯು ಲಜ್ಜಿತಳಾಗಿ ಅಲ್ಲಿಂದ ಹೊರಟು ಹೋದಳು. ಆದ್ದರಿಂದ ಅವರ ರತಿಕ್ರೀಡೆಗೆ ಆತಂಕವಾಯಿತು. ಅಂದಿನಿಂದ ಆ ಮಹಾದೇವಿಯು ಅಲ್ಲಿ ನಿರ್ಬಂಧ ಮಾಡಿದಳು.

''ಇಲ್ಲಿ ಯಾವದೇ ಗಂಡಸು ಅಥವಾ ಗಂಡುಪ್ರಾಣಿ ಪ್ರವೇಶಮಾಡಿದರೆ ತಕ್ಷಣದಲ್ಲಿಯೇ ಅದು ಹೆಣ್ಣಾಗಿ ಹೋಗಲಿ ಈ ಉಪವನದ ಸುತ್ತಮುತ್ತಲು ಹತ್ತು ಯೋಜನದಲ್ಲಿ ಒಂದು ಗಂಡು ಪಿಳ್ಳೆ ಅಕಸ್ಮಾತ್ ಹೊಕ್ಕರೂ ಅದು ಅದೇ ಜಾತಿಯ ಹೆಣ್ಣು ಭಾಗವನ್ನು ಹೊಂದುವುದು'' ಎಂದು ನಿಯಮವನ್ನುಮಾಡಿದಳು. ಇದು ಗಂಡುಜೀವಿಗಳಿಗೆ ಒಂದು ಘೋರ ಶಾಪ ರೂಪವಾಗಿ ಪರಿಣಮಿಸಿತು.

ವೈವಸ್ವತ ಮನುವಿನ ಮಗ ಇಲರಾಜನಿಗೆ ಪಾರ್ವತಿ-ಪರಮೇಶ್ವರರ ಈ ನಿಯಮದ ಗುರುತಿಲ್ಲ. ಆದುದರಿಂದ ತಿಳಿಯದೆ ಆ ಇಲರಾಜನು ಶಿವನ ''ಶರವಣ''ವೆಂಬ ಆ ವಿಹಾರ ಭೂಮಿಯಲ್ಲಿ ಅಕಸ್ಮಾತ್ ಪ್ರವೇಶಮಾಡಿಬಿಟ್ಟನು. ಅದರಿಂದ ಅವನಿಗೆ ಅದೇ ಕ್ಷಣದಲ್ಲಿ ಹೆಣ್ಣುತನ ಬಂದುಬಿಟ್ಟಿತು. ಅಪ್ಪಟ ಗಂಡಸಾದ ಆ ಇಲನು ಅಡಿಯಿಂದ ಮುಡಿಯವರೆಗೆ ಪೂರ್ತಿ ನಾರೀ ಭಾವವಾಗಿ ನಿಂತುಬಿಟ್ಟನು. ಅವನು ಹತ್ತಿಬಂದ ಗಂಡು ಕುದುರೆ ಹೆಣ್ಣುಕುದುರೆಯಾಗಿ ಮಾರ್ಪಟ್ಟಿತು ಇಲನು ತನ್ನನ್ನು ತಾನೇ ಮತ್ತೊಮ್ಮೆ ನೋಡಿಕೊಂಡನು. ಹದಿನಾರಾಣೆ ಹೆಣ್ಣು. ತಾನು ಗಂಡಸಾಗಿ ಇದ್ದದ್ದೇ ಮರೆತು

ಹೋಯಿತು ಅವನಿಗೆ. ಒಂದು ಕ್ಷಣಾರ್ಧದಲ್ಲಿ "ಇಲ"ನು "ಇಲಾ" ಆದಳು. ಒಂದಾನೊಂದು ಕಾಲದಲ್ಲಿ ಅವನು ಗಂಡು ಪ್ರಾಣಿಯಾಗಿದ್ದನು ಎನ್ನುವದು ಯಾರಿಗೂ ಗುರುತಾಗದಷ್ಟು ಸ್ತ್ರೀ ಭಾವವು ಬಂದುಬಿಟ್ಟಿತು. ಪೂರ್ಣಚಂದ್ರನಂಥ ಸುಂದರವಾದ ಮುಖ, ತುಂಬು ತಾವರೆಯಂತೆ ಅಗಲವಾದ ಬೊಗಸೆಗಣ್ಣು, ಸಣ್ಣನಡು, ಉಬ್ಬಿದ ಎದೆ, ಕಪ್ಪು ಕಪ್ಪಾದ ಉಂಗುರುಗೂದಲು, ಮಧುರ ಕಂಠ, ಮಂಜಭಾಷೆ, ಬಿಳಿಯ ಬಣ್ಣ, ಆನೆ ಅರಸಂಚೆಗಳ ನಡೆ, ಕಾಮನ ಬಿಲ್ಲಿನಂಥ ಹುಬ್ಬು, ಹವಳದುಟಿ, ಕೆಂಪು ಉಗುರು, ಚಿಗರೆ ನೋಟ, ಮಿಂಚುಗಣ್ಣು ಒಟ್ಟಾರೆ ಇವಳೊಬ್ಬ ಹುಟ್ಟು ಹೆಣ್ಣು ಎಂದು ಯಾರಿಗೂ ಎನಿಸುವಂಥ ಸಂಪೂರ್ಣ ನಾರಿತ್ವದ ನಿಲುವು-ಚೆಲುವು, ಚಾಪಲ್ಯಗಳು ಅವಳಲ್ಲಿ ಇಡಿಯಾಗಿ ಇಳಿದು ಬಂದಿದ್ದವು. ಹೀಗೆ ಹೊಸ ಹೆಣ್ಣುತನ ಹೊಂದಿದ ಆ ಹರೆಯದ ಹುಡುಗೆಯು ಆ ಗೌರೀ ವನದಲ್ಲಿ ಅತ್ತಿತ್ತ ಅಲೆದಾಡುತ್ತ ಚಿಂತಿಸತೊಡಗಿದಳು. "ನಾನು ಯಾರು ? ನನ್ನ ತಂದೆ, ತಾಯಿ ಯಾರು ? ಅಣ್ಣ ತಮ್ಮಂದಿರು ಯಾರು ? ನನ್ನನ್ನು ಯಾರಿಗೆ ಕೊಟ್ಟು ಮದುವೆ ಮಾಡಿದ್ದಾರೆ ? ನನ್ನ ಗಂಡನು ಯಾರು ? ನನ್ನ ಜಾತಿ ಯಾವುದೋ ಏನೋ ! ನನ್ನ ಅಂಗಾಂಗಳಲ್ಲಿ ಚಿಮ್ಮುವ ಈ ಚೆಲುವಿಕೆಗೆ ಅನುರೂಪನೆ ಆಗಿರಬಹುದಲ್ಲವೆ ನನ್ನ ಪತಿ !" ಎಂದು ಮುಂತಾಗಿ ತರುಣ ವಯಸ್ಸಿನ ತರಳೆಯರಿಗೆ ತಕ್ಕಂತೆ ಅವಳ ವಿಚಾರಧಾರೆ ನಡೆದಿತ್ತು.

ಇಷ್ಟರಲ್ಲಿ ಚಂದ್ರನ ಮಗನಾದ ಬುಧನು ದೂರದಿಂದಲೇ ಈ ರೂಪರಾಣಿಯನ್ನು ನೋಡಿದನು. ಅವಳ ಲಲಿತ ಲಾವಣ್ಯವು ಆ ಚಂದ್ರಕುಮಾರನ ಮನಸ್ಸನ್ನು ಸೆರೆಹಿಡಿಯಿತು. ಕೂಡಲೇ ಅವನು ಕಾಮಪೀಡಿತನಾದನು. ಈ ಸೌಂದರ್ಯದ ಖಣಿಯನ್ನು ತನ್ನದನ್ನಾಗಿ ಮಾಡಿಕೊಳ್ಳಲು ಪ್ರಯತ್ನ ಪ್ರಾರಂಭಿಸಿದನು. ಅಷ್ಟರಲ್ಲಿ ಇಲೆಯು ಶರವಣದ ಸೀಮೆದಾಟಿ ಈಚೆಗೆ ಬಂದಿದ್ದಳು. ಅದನ್ನು ಕಂಡು ವಟುಗಳೊಂದಿಗೆ ಒಡಗೂಡಿ ಸಮಿಧೆ, ದರ್ಭೆಗಳನ್ನು ಆಯುವುದಕ್ಕಾಗಿ ಬ್ರಹ್ಮಚಾರಿಯ ವೇಷದಿಂದ ಬುಧನು ಅಲ್ಲಿಗೆ ಬಂದನು. ಅವನ ಕೈಯಲ್ಲಿ ಕಮಂಡಲ, ಇನ್ನೊಂದರಲ್ಲಿ ಪುಸ್ತಕ, ಬೆರಳಲ್ಲಿ ಪವಿತ್ರ, ತೋಳುಗಳಲ್ಲಿ ಬಂಗಾರ ಬಾಹು ಭೂಷಣ, ಮಿಂಚುವ ತಲೆ, ಇಂಥ ಸುಂದರಾಕಾರದ ನವತರುಣನಾದ ಬುಧನು ಯಾರನ್ನೋ ಹುಡುಕುತ್ತ ಬಂದವನಂತೆ ಅಲ್ಲಿಗೆ ಬಂದು ಅಲ್ಲಿರುವ ಗಿಡಗಳ ಗುಂಪಿನ ಹಿಂದೆ ನಿಂತು, ಇಲೆಯನ್ನು ನೋಡಿದನು. ಅವಳನ್ನು ಕಂಡಕೂಡಲೆ, ತಾನು ಹುಡುಕುವ ಹೆಂಗಸು ದೊರಕಿದಳು ಎನ್ನುವ ಸಂತಸ, ಸಂಭ್ರಮದಿಂದ ಅವಳನ್ನು ಬೆದರಿಸುವಂತೆ ಆಕ್ಷೇಪದ ಧ್ವನಿಯಲ್ಲಿ ಕೇಳಿದನು. "ಸುಂದರಿ, ಮನೆಯಲ್ಲಿ ಅಗ್ನಿ ಹೋತ್ರದ ಕಾರ್ಯಮಾಡದೆ ನನ್ನ ಮನೆ ಬಿಟ್ಟು ಎಲ್ಲಿಗೆ ಹೋಗಿದ್ದಿ ? ಇದು ನಿನ್ನ ವಿಹಾರದ ವೇಳೆಯೇ ? ಇಷ್ಟೇಕೆ ಹೆದರಿದಂತಿರುವೆ ? ಈ ಮನೆಗೆ ನೀನೇನು ಹೊಸಬಳೆ ? ವನದಲ್ಲಿ ಅಲೆಯುವ ಹೊತ್ತು ಮುಗಿಯಿತು. ಈಗ ಹೊತ್ತಾಗಿದೆ. ಸಂಧ್ಯಾಕಾಲವಾಗಿದೆ. ಪ್ರತಿನಿತ್ಯ ಮಾಡುವಂತೆ ಮನೆಯನ್ನು ಸಂಜೆ ಮುಂದೆ ಅಲಂಕರಿಸುವದಿಲ್ಲವೆ ? ಅಂಗಳವನ್ನು ಗುಡಿಸಿ, ಸಾರಿಸಿ, ಸ್ವಚ್ಛಮಾಡುವದಿಲ್ಲವೆ ! ಬಾ, ಬೇಗ ಬಾ, ಹೊತ್ತಾಗುತ್ತದೆ. ಇದೋ ಹೂವುಗಳು, ಇವುಗಳಿಂದ ನನ್ನ ಮನೆಯನ್ನು ಅಲಂಕರಿಸು.

ಬುಧನ ಈ ಮಾತು ಕೇಳಿ ''ತಪೋಧನರೆ, ನನಗೇಕೋ ಎಲ್ಲವೂ ಮರೆತು ಹೋಗಿದೆ. ನಾನಾರು ಎಂಬುದೇ ನೆನಪಿಲ್ಲ. ನನ್ನ ಪತಿಯಾದ ನಿಮ್ಮನ್ನು ಕೂಡಾ ನಾನು ಮರೆತು ಬಿಟ್ಟಿದ್ದೇನೆ. ನನ್ನ ಕುಲ ಯಾವುದು ? ನನ್ನ ಮನೆ ಯಾವುದು ? ಎಲ್ಲವನ್ನು ಹೇಳಿರಿ.''

ಆಗ ಬುಧನು ಅವಳಿಗೆ ಹೇಳಿದನು. ''ನಾನು ಅತ್ಯಂತ ತೇಜಸ್ವಿಯ ಕುಲದಲ್ಲಿ ಹುಟ್ಟಿದ್ದೇನೆ. ನನ್ನ ತಂದೆ ಬ್ರಾಹ್ಮಣರೆಲ್ಲರಿಗೂ ಅಧಿಪತಿ. ನಾನು ಕೂಡ ಬಹುವಿಧ ವಿದ್ಯೆ ಕಲಿತು ಪಂಡಿತನಾಗಿದ್ದೇನೆ. ಎಲ್ಲರೂ ನನ್ನನ್ನು **ಬುಧ** ಎಂದು ಕರೆಯುತ್ತಾರೆ. ಎಲ್ಲರನ್ನು ಸೆಳೆಯುವ ನಿನ್ನ ಈ ಸೌಂದರ್ಯವನ್ನು ನೋಡಿ ನಾನು ಇಂದು ಕಾಮುಕನಾಗಿ ನಿನ್ನನ್ನು ಕರೆಯಬಂದಿದ್ದೇನೆ. ಬಾ ಮನೆಗೆ ಹೋಗೋಣ'' ಎಂದು ಹೇಳಿ ಅವಳನ್ನು ತನ್ನ ಮಾಯೆ ಯಿಂದ ನಿರ್ಮಿತವಾದ ದಿವ್ಯ ಮಂದಿರಕ್ಕೆ ಕರೆದೊಯ್ದನು. ಇಲೆಗೆ ಆ ಸುಂದರ ಮಂದಿರ ಕಂಡು, ಅತ್ಯಂತ ಆನಂದವಾಯಿತು. ರತ್ನದ ಕಂಬ, ಬಂಗಾರದ ಗೋಡೆ, ಮಣಿಯ ಮಾಳಿಗೆ, ಸುತ್ತಲೂ ನಂದನವನದಂಥ ಉಪವನ, ಬೇಕುಬೇಕಾದ ಭೋಗೈಶ್ವರ್ಯ ಸಾಮಗ್ರಿಗಳು. ಇಷ್ಟೆಲ್ಲವನ್ನು ಕಂಡು ಇಲೆಗೆ ಇಂಥ ದೊಡ್ಡ ಮನೆತನದ ದೊಡ್ಡ ಮನೆಗೆ ಒಡತಿಯಾಗಿ ಬಂದದ್ದು ತನ್ನ **''ಅಹೋ ಭಾಗ್ಯ''** ಎನಿಸಿತು. ತಾನು ಕೃತಕೃತ್ಯಳು ಎಂಬ ಭಾವ ಮೂಡಿತು.

ಇದು ಎಂಥ ಕುಲ ! ಎಂಥ ದಿವ್ಯಮನೆ ! ನನ್ನ ಗಂಡನ ನಡತೆ ಎಷ್ಟು ಚೆನ್ನಾಗಿದೆಯಲ್ಲ! ಅವರ ರೂಪವೋ ನಿಜವಾಗಿಯೂ ಅಪರೂಪ. ಪುರುಷರಲ್ಲಿ ಇಂಥ ಚೆಲುವಿಕೆ ನಾನು ಕಂಡಿಲ್ಲ. ನನ್ನ ಸೌಂದರ್ಯಕ್ಕೆ ಒಳ್ಳೇ ಹೊಂದಿಕೆಯಾಗುವಂತಹದಿದೆ ಅವರ ಸೌಂದರ್ಯ ! ಎಂಥ ಉತ್ತಮವಾದ ಜೋಡಿ ನಮ್ಮದು ! ಇಂಥ ರೂಪಗುಣ ಸಂಪನ್ನನಾದ ಪತಿ. ಹಾಗೂ ಪತಿಗೃಹಗಳು ನನಗೆ ಎಂತು ದೊರೆತವು ! ಎಂದು ಮುಂತಾಗಿ ಅವಳು ತನ್ನಲ್ಲಿಯೇ ತಾನು ಆಲೋಚಿಸಿ ಹೃದಯದಲ್ಲಿ ಹಿಗ್ಗಿ ಹೂವಾಗಿದ್ದಳು. ಇಂದ್ರಭವನದಂತಿರುವ ಆ ಮನೆಯಲ್ಲಿ ಚಂದ್ರ ಸಮಾನನಾದ ತನ್ನ ಪತಿಯೊಡನೆ ಆ ಇಲಾರಾಣಿಯು ಬಹುಕಾಲದವರೆಗೆ ಭೋಗಾನುರಾಗಲಾಲಸಳಾಗಿ ವಿಹಾರಗೈದು ಕಾಲಕಳೆಯುತ್ತಿದ್ದಳು. ರಸಿಕ ಪ್ರಿಯಕರನೊಂದಿಗೆ ಸರ್ವಭೋಗ ಭಾಗ್ಯಗಳು ತುಂಬಿ ತುಳುಕುತ್ತಿರುವ ಆ ವಿಲಾಸ ಮಂದಿರದಲ್ಲಿ ವಿವಿಧ ವಿಹಾರ ಕೇಳೀ ವಿನೋದಗಳನ್ನು ಗೈಯುತ್ತ ಲಲ್ಲೆಯಾಡುತ್ತ ಇರುವ ಆ ಇಲೆಗೆ ಕಾಲವು ಕಳೆದದ್ದೇ ತಿಳಿಯಲಿಲ್ಲ. ವರುಷಗಳು ಉರುಳಿದ್ದೇ ಗೊತ್ತಾಗಲಿಲ್ಲ.

ಇತ್ತ ಇಲರಾಜನು ದಂಡಯಾತ್ರೆಯಿಂದ ತಿರುಗಿ ಬಾರದಿದ್ದಾಗ ಅವನ ಇಕ್ಷ್ವಾಕು ಮೊದಲಾದ ಒಂಭತ್ತು ಜನ ತಮ್ಮಂದಿರು ಇಲನನ್ನು ಹುಡುಕುತ್ತ ಶಿವ-ಪಾರ್ವತಿಯರ ಶರವಣದ ಬಳಿಗೆ ಬಂದರು. ಆ ದೇಶದ ಸಮೀಪದಲ್ಲಿ ಬಂದು ನೋಡಿದಾಗ, ಅಲ್ಲಿ ಇಲರಾಜನು ಏರಿಕೊಂಡು ಬಂದ ಕುದುರೆಯು ಹೆಣ್ಣು ಕುದುರೆಯಾಗಿ ನಿಂತುಕೊಂಡಿತ್ತು. ಅದರ ಮೇಲಿನ ರತ್ನಖಚಿತವಾದ ಜೇನು ಹಾಗೂ ಬಂಗಾರದ ಹಿಡಿಕೆಯುಳ್ಳ ಕಡಿವಾಣ ಇವೆಲ್ಲವುಗಳ ಗುರುತು ಹತ್ತಿತ್ತು. ಇದು ಇಲರಾಜನದೇ **ಚಂದ್ರಪ್ರಭ** ಎಂಬ ಕುದುರೆ. ಅದು ಹೀಗೆ ಒಮ್ಮೆಲೆ ಹೆಣ್ಣು ಕುದುರೆಯಾದದ್ದನ್ನು ಕಂಡು ಅವರಿಗೆ ಅಚ್ಚರಿಯಾಯಿತು.

ಅರಮನೆಯ ಆಭರಣಗಳನ್ನೆಲ್ಲ ಹಾಕಿಕೊಂಡು ನಿಂತಿರುವ ಆ ನಮ್ಮ ಚಂದ್ರಪ್ರಭ ಗಂಡು ಕುದುರೆಯು ಇಲ್ಲಿ ಬಂದು ಹೆಣ್ಣು ಹೇಗಾಯಿತು ಎಂಬ ಕುತೂಹಲದಿಂದ ಅತ್ತಿತ್ತ

ನೋಡಿದರು. ಅಲ್ಲಿಯೇ ಸಮೀಪದಲ್ಲಿ ತಪಸ್ಸು ಮಾಡುತ್ತ ವಾಸಿಸಿದ ವಶಿಷ್ಠ ಮಹರ್ಷಿಗಳ ಬಳಿಗೆ ಬಂದು "ಗುರುಗಳೇ, ಇದೇನು ಅಚ್ಚರಿ! ಇಲ್ಲಿ ಬಂದ ತಮ್ಮ ಗಂಡು ಕುದುರೆಯು ಹೆಣ್ಣಾಗಲು ಏನು ಕಾರಣ? ಹಾಗೂ ಈ ಚಂದ್ರಪ್ರಭ ತುರಂಗದ ಮೇಲೆ ಸವಾರಿಯಾಗಿ ಬಂದ ನಮ್ಮ ಅಣ್ಣ ಎಲ್ಲಿಗೆ ಹೋದನು? ಈಗ ಎಲ್ಲಿ ಇರುವನು? ಎಂಬುದನ್ನು ತಿಳಿಸಬೇಕು" ಎಂದು ಕೇಳಿದರು. ಆಗ ವಶಿಷ್ಠರು ತಮ್ಮ ಯೋಗದೃಷ್ಟಿಯಿಂದ ಭೂತಸಂಗತಿಯನ್ನೆಲ್ಲ ತಿಳಿದು ನೋಡಿದರು. ಅದನ್ನೆಲ್ಲ ರಾಜಕುಮಾರರಿಗೆ ಶ್ರುತಪಡಿಸಿದರು.

**ವಶಿಷ್ಠ :-** ಮುಂದೆ ಕಾಣುವ ವಿಶಾಲವಾದ ಶರವಣ ಎಂಬ ಉಪವನವು ಶಿವ-ಶಕ್ತಿಯರ ಕ್ರೀಡಾಭೂಮಿ. "ಇಲ್ಲಿ ಯಾವ ಗಂಡುಪ್ರಾಣಿಯೂ ಪ್ರವೇಶಿಸಕೂಡದು. ಅಪ್ಪಿ ತಪ್ಪಿ ಇಲ್ಲಿ ಕಾಲಿರಿಸಿದ ಪ್ರಾಣಿ ಅದೇ ಕ್ಷಣದಲ್ಲಿಯೇ ಹೆಣ್ಣಾಗಿ ಮಾರ್ಪಡಲಿ" ಎಂದು ಶಂಕರಿಯ ಶಾಪ. ನಿಮ್ಮ ಅಣ್ಣನಾದ ಇಲನು ಇತ್ತ ದೇಶ ದಿಗ್ವಿಜಯಕ್ಕಾಗಿ ಬಂದಾಗ ಈ ಕುದುರೆಯೊಡನೆ ಶಂಭು ಅಂಬಿಕೆಯರ ಈ ಆಡುಂಬೊಲದಲ್ಲಿ ಆಕಸ್ಮಾತ್ತಾಗಿ ಪ್ರವೇಶಿಸಿದನು. ಅದ್ದರಿಂದ ಅವರಿಗೆ ಶಿವೆಯ ಶಾಪವು ಅನ್ವಯವಾಯಿತು. ಇಲನು ಇಲೆಯಾಗಿ ಮಾರ್ಪಟ್ಟನು. ಈ ಚಂದ್ರಪ್ರಭವೆಂಬವನ ಮೆಚ್ಚಿನ ಅಶ್ವವು ಕೂಡಲೆ ಹೆಣ್ಣುಕುದುರೆಯಾಗಿ ನಿಂತಿತು. ಈ ನಿಮ್ಮ ಅಣ್ಣನಾದ ಇಲರಾಜನು ನಾರೀಭಾವದಲ್ಲಿ ಇರುತ್ತಾನೆ. ನಿಮಗೆ ಮತ್ತೆ ಅವನು ಪುರುಷರೂಪದಲ್ಲಿ ಪರಿವರ್ತಿತನಾಗಬೇಕೆಂದು ಅಪೇಕ್ಷೆಯಿದ್ದರೆ ನೀವು ಚಂದ್ರಶೇಖರನನ್ನೇ ಆರಾಧಿಸಬೇಕು. ಹಾಗಾದರೆ ಮಾತ್ರ ನಿಮ್ಮ ಅಣ್ಣ ಇಲರಾಜನಿಗೆ ಮತ್ತೆ ಪೌರುಷ ಪ್ರಾಪ್ತಿ, ಕುಬೇರಕಾಂತಿ, ಭೀಮಶಕ್ತಿ, ಎಲ್ಲವೂ ಆ ಪರಮೇಶ್ವರನ ಪ್ರಸಾದದಿಂದ ಮರಳಿ ದೊರೆಯುವವು. ಅದಕ್ಕಾಗಿ ನೀವೆಲ್ಲರೂ ಆ ಪಿನಾಕಪಾಣಿಯನ್ನೇ ಪ್ರಯತ್ನಪೂರ್ವವಾಗಿ ಪೂಜಿಸಿರಿ.

ಅಪರೋಕ್ಷ ಜ್ಞಾನಿಗಳಾದ ವಶಿಷ್ಠ ಮಹಾಮುನಿಗಳ ಈ ವಚನವನ್ನು ಕೇಳಿ ಆ ಎಲ್ಲ ರಾಜಕುಮಾರರು ಮಹಾದೇವರ ಬಳಿಗೆ ಹೋದರು. ಭಕ್ತಿಭಾವದಿಂದ ಬಗೆಬಗೆಯ ಸ್ತೋತ್ರಗಳನ್ನು ಹಾಡಿ, ಪ್ರಾರ್ಥನೆ ಸಲ್ಲಿಸಿದರು. ಅವರ ಬಿನ್ನಹ ಹಾಗೂ ಸ್ತುತಿಗಳಿಂದ ಪಾರ್ವತಿ ಪರಮೇಶ್ವರರು ಸಂತುಷ್ಟರಾಗಿ ಹೇಳಿದರು. "ಇಲರಾಜನ ತಮ್ಮನಾದ ಇಕ್ಷ್ವಾಕು ದೊರೆಯು ಈ ಅಶ್ವಮೇಧಯಜ್ಞವನ್ನು ಮಾಡುತ್ತಲಿದ್ದಾನೆ. ಆ ಮಹಾಯಜ್ಞದ ಪುಣ್ಯ ಫಲವನ್ನೆಲ್ಲ ನಮ್ಮಿಬ್ಬರೂ ದಂಪತಿಗಳಿಗೆ ಕೊಡುತ್ತೇನೆ ಎಂದು ಈಗ ನಮ್ಮೆದುರು ಸಂಕಲ್ಪ ಮಾಡಬೇಕು. ಅದರಂತೆ ಯಜ್ಞ ಸಮಾಪ್ತಿ ಕಾಲದಲ್ಲಿ ಅದರ ಪುಣ್ಯಫಲವನ್ನೆಲ್ಲ ನಮಗೆ ಸಮರ್ಪಿಸಬೇಕು. ಇದಕ್ಕೆ ಸಮ್ಮತಿಸಿದರೆ ನಿಮ್ಮ ಅಣ್ಣನಾದ ಇಲರಾಜನು ಕಿಂಪುರುಷ ಜಾತಿಯ ವೀರಪುರುಷನಾಗುವಂತೆ ನಾವು ಮಾಡುತ್ತೇವೆ."

ಶಿವಶಕ್ತಿಯರ ಈ ನುಡಿಯನ್ನು ಕೇಳಿ ಆ ಮನುಕುಮಾರರಿಗೆ ಸಮಾಧಾನ ಎನಿಸಿತು. ಅವರು ತಮ್ಮ ರಾಜಧಾನಿಗೆ ಹೋಗಿ ಅಶ್ವಮೇಧಯಾಗಮಾಡಿದರು. ತಮ್ಮ ವಚನದಂತೆ ಯಜ್ಞಫಲವನ್ನು "ಶಿವಾರ್ಪಣಮಸ್ತು" ಎಂದು ಅರ್ಪಿಸಿದರು. ಅವರ ಯಜ್ಞಫಲದ ದಾನದಿಂದಾಗಿ ಬುಧನ ಮನೆಯಲ್ಲಿ ಬುಧ-ಭಾಮಿನಿಯಾಗಿ ಸಂಸಾರ ಮಾಡಿಕೊಂಡಿರುವ ಇಲಾದೇವಿಯು ಒಂದು ಸುಂದರ ಸುಪ್ರಭಾತದಲ್ಲಿ ಒಮ್ಮೆಲೆ ಪುರುಷನಾಗಿ ಪರಿವರ್ತಿತನಾದನು. ಬುಧನ ಮನೆಯಲ್ಲಿ ಇರುವಾಗಲೇ ಆ ಇಲಾ ಮಹಿಳೆಗೆ ಒಬ್ಬ ಗಂಡು

ಮಗನು ಜನಿಸಿದನು. ಅವನೊಬ್ಬ ಸದ್ಗುಣದ ಖಣಿಯೇ ಆಗಿದ್ದನು. ಗಂಡು ಮಗನು ಹುಟ್ಟಿದ ಬಳಿಕ ಮುಂದೆ ಒಂದು ದಿನ ಇಲೆಯು ಇಲನಾಗಿ ಪರಿವರ್ತಿತನಾದದ್ದು ಕಂಡು ಬುಧನು ಸ್ವರ್ಗಲೋಕಕ್ಕೆ ಹೊರಟುಹೋದನು. ಮುಂದೆ ಆ ಇಲರಾಜನು ಒಂದು ತಿಂಗಳು ಗಂಡಾಗಿ ಮತ್ತೊಂದು ತಿಂಗಳು ಹೆಣ್ಣಾಗಿ ಇರುತ್ತಿದ್ದನು. ಅವನು ಹೆಣ್ಣಾದಾಗ ಹುಟ್ಟಿದ ಮಗನ ಹೆಸರಿನಿಂದ ಈ ದೇಶಕ್ಕೆ ಇಲಾವೃತ ಎಂದು ಹೆಸರು ಬಂದಿತು. ಚಂದ್ರ ವಂಶದಲ್ಲಿಹುಟ್ಟಿದ ಈ ಇಲೆಯ ಮಗನು ಐಲ ಅಥವಾ ಪುರೂರವ ಎಂಬ ಹೆಸರಿನಿಂದ ಚಂದ್ರವಂಶದ ಪ್ರವರ್ತಕನಾದನು. ಅತ್ತ ಇಕ್ಷ್ವಾಕು ಸೂರ್ಯವಂಶದ ಪ್ರವರ್ತಕನಾದನು. ಇಲಾದೇವಿಯು ಮಹಾದೇವರ ವರಕ್ಕೆ ಅನುಸರಿಸಿ ಕಿಂಪುರುಷನಾದಾಗ ಸುದುಮ್ನ ಎಂದು ಹೆಸರನ್ನು ಧರಿಸಿದ್ದನು. ಸುದುಮ್ನನಿಗೆ ಉತ್ಕಲ, ಗಯ, ಹರಿತಾಶ್ವ ಎಂದು ಮೂವರು ಮಕ್ಕಳು ಹುಟ್ಟಿದರು. ಉತ್ಕಲನು ಉತ್ಕಲ ದೇಶಕ್ಕೂ, ಗಯನು ಗಯಾ ದೇಶಕ್ಕೂ, ಹರಿತಾಶ್ವನು ಕುರುದೇಶ ಹಾಗೂ ಪೂರ್ವ ದಿಕ್ಕಿಗೂ ಅಧಿಪತಿಗಳಾದರು. ಇಲರಾಜನು ತನ್ನ ಕೊನೆಗಾಲದಲ್ಲಿ ತಾನು ನಾರೀ ರೂಪದಲ್ಲಿ ಇದ್ದಾಗ ಹಡೆದ ನೆಚ್ಚಿನ ಮಗ ಪುರೂರವನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಮಾಡಿದನು. ಇಲಾವೃತ ಖಂಡದ ಸಮ್ರಾಟ ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕಗೈದು, ಸ್ವರ್ಗಕ್ಕೆ ತೆರಳಿದನು.

ಇತ್ತ ಅವನ ತಮ್ಮನಾದ ಇಕ್ಷ್ವಾಕು ಮಧ್ಯದೇಶಕ್ಕೆ ಅಧಿಪತಿಯಾದನು. ವೈವಸ್ವತ ಮನುವಿನ ಮೂರನೆಯ ಮಗನೇ ನರಿಷ್ಯಂತ, ನರಿಷ್ಯಂತನ ಮಗನೇ ಶುಕನು. ಅವನು ಅತ್ಯಂತ ಬಲಿಷ್ಠ. ಮನುವಿನ ನಾಲ್ಕನೆಯ ಮಗ ನಾಭಾಗನಿಗೆ ಅಂಬರೀಷ ಎಂಬ ತನಯನು ಜನಿಸಿದನು. ಮನುವಿನ ಮಗದೊಬ್ಬ ಮಗ ಧೃಷ್ಟನಿಗೆ ಧೃಷ್ಟವೀರ, ವ್ರತನಾಥ, ಧೃಷ್ಟಕೇತು ಎಂದು ಮೂವರು ಮಕ್ಕಳು. ಶರ್ಯಾತಿ ಎಂಬ ಮನು ಪುತ್ರನಿಗೆ ಆನರ್ತ ಎಂಬ ಗಂಡು ಮಗನೂ, ಸುಕನ್ಯಾ ಎಂಬ ಹೆಣ್ಣು ಮಗಳೂ ಜನಿಸಿದರು. ಆನರ್ತನು ಆಳುವ ರಾಜ್ಯವು ಆನರ್ತದೇಶವೆಂದು ಹೆಸರಾಯಿತು. ಈ ಅನರ್ತದೇಶದ ರಾಜಧಾನಿಯು ಕುಶಸ್ಥಲಿ. ಮಹಾರಾಜ ಅನರ್ತನಿಗೆ ರೋಚಮಾನ ಎಂಬ ಮಗನಿದ್ದನು. ರೋಚಮಾನನ ಪುತ್ರನೇ ರೇವ. ರೇವನಪುತ್ರ ರೇವತ. ಈ ರೇವತಾ ರಾಜನಿಗೆ ತೊಂಬತ್ತೊಂಬತು ಜನ ತಮ್ಮಂದಿರು ಇದ್ದರು. ಅವರೆಲ್ಲರಿಗೂ ರೇವತನೆ ಜ್ಯೇಷ್ಠ ಈ ರೇವತನಿಗೆ ರೇವತಿ ಎಂಬ ಕನ್ಯೆ ಇದ್ದಳು. ಅವಳನ್ನು ಮುಂದೆ ಬಲರಾಮನಿಗೆ ಮದುವೆಮಾಡಿ ಕೊಡಲಾಯಿತು ವೈವಸ್ವತ ಮನುವಿನ ಮಗ ಕುರೂಷಗೆ ಸಂತಾನ ಬಹಳ. ಅವರೆಲ್ಲರೂ ಕಾರೂಷ ಎಂಬ ಹೆಸರಿನಿಂದ ಪ್ರಸಿದ್ಧರಾದರು. ವೈವಸ್ವತ ಮನುವಿನ ಹತ್ತು ಜನ ಮಕ್ಕಳಲ್ಲಿ ಕೊನೆಯ ಪ್ರಷಧ್ರನು ತಿಳಿಯದೇ ಒಂದು ಗೋವಧೆಮಾಡಿದನು. ಅದರಿಂದ ಕುಪಿತನಾದ ಗುರುವು ಶಾಪಕೊಟ್ಟನು. ಆ ಶಾಪದಿಂದ ಪ್ರಷಧ್ರನು ಶೂದ್ರನಾದನು.

ಇಕ್ಷ್ವಾಕು ಮಹಾರಾಜನಿಗೆ ನೂರು ಜನ ಮಕ್ಕಳು. ಅವರಲ್ಲಿ ವಿಕುಕ್ಷಿ. ನಿಮಿ, ದಂಡಕರು ಪ್ರಸಿದ್ಧರು. ಈ ಇಕ್ಷ್ವಾಕು ರಾಜನ ಹದಿನೈದು ಜನ ಮಕ್ಕಳು ಮೇರು ಪರ್ವತದ ತೆಂಕಣ ನಿಟ್ಟಿನಲ್ಲಿ ರಾಜರಾಗಿ ಮೆರೆದರು. ಇನ್ನು ಹದಿನಾಲ್ಕು ಜನ ಇಕ್ಷ್ವಾಕುರಾಜನ ಜ್ಯೇಷ್ಠ ಪುತ್ರ ವಿಕುಕ್ಷಿಗೆ ಕಕುಸ್ಥ ಎಂಬ ಮಗನು ಹುಟ್ಟಿದನು. ಆ ಕಕುಸ್ಥನಿಂದ ಮುಂದೆ ಇಕ್ಷ್ವಾಕು ವಂಶದಲ್ಲಿ ಕ್ರಮಶಃ ಸುಯೋಧನ, ಪೃಥು, ವಿಶ್ವಾವಸು, ಆರ್ದ್ರ, ಯೌವನಾಶ್ವ, ಶಾವಸ್ತ,

ವತ್ಸುಕ ಮುಂತಾಗಿ ಒಬ್ಬರಾದ ಮೇಲೆ ಒಬ್ಬರು ರಾಜರು ಜನಿಸಿ ರಾಜ್ಯವಾಳಿದರು. ಈ ಶಾವಸ್ತನೇ ಗೌಡ ದೇಶದಲ್ಲಿ ಪ್ರಸಿದ್ಧವಾದ ಶಾವಸ್ತಿ ಎಂಬ ನಗರವನ್ನು ನಿರ್ಮಿಸಿದನು. ಶಾವಸ್ತನಿಗೆ ವತ್ಸುಕನಲ್ಲದೆ, ಬೃಹದಶ್ವ ಎಂಬ ಪುತ್ರನಿದ್ದನು. ಬೃಹದಶ್ವನ ಮಗನೇ ಕುವಲಾಶ್ವ. ಈ ಕುವಲಾಶ್ವನು **ಧುಂಧು** ಎಂಬ ರಾಕ್ಷಸನನ್ನು ಕೊಂದದ್ದರಿಂದ **ಧುಂಧುಮಾರ** ಎಂಬ ಹೆಸರು ಬಂದಿತು. ಧೃಢಾಶ್ವ, ದಂಡ, ಕಪಿಲಾಶ್ವ ಈ ಮೂವರು ಧುಂಧುಮಾರನ ಮಕ್ಕಳು. ದೃಢಾಶ್ವನಿಂದ ಮುಂದೆ ಪ್ರಮೋದ, ಹರ್ಯಶ್ವ, ನಿಕುಂಭ, ಸಂಹತಾಶ್ವ, ಅಕೃತಾಶ್ವ, ರಣಾಶ್ವ, ಯುವನಾಶ್ವ, ಮಾಂಧಾತ, ಪುರುಕುತ್ಸ ಮುಂತಾಗಿ ಕ್ರಮದಿಂದ ಒಬ್ಬೊಬ್ಬ ಮಕ್ಕಳಾಗಿ ಈ ವಂಶವು ಮುಂದುವರಿಯಿತು. ಮಾಂಧಾತನ ಮಗನಾದ ಪುರುತ್ಸಕನೇ ಮುಚಕುಂದ ಮಹಾರಾಜನೆಂದು ಪುರಾಣ ಪ್ರಸಿದ್ಧನಾದನು. ಇವನು ಅತ್ಯಂತ ಧರ್ಮಿಷ್ಠ ಇವನು ಅನೂಚಾನವಾಗಿ ಧರ್ಮಮಾರ್ಗವನ್ನು ಅನುಸರಿಸಿ, ರಾಜ್ಯವಾಳಿ, ಪ್ರಜೆಗಳೆಲ್ಲರಿಗೂ ಧಾರ್ಮಿಕವಾಗಿ ವರ್ತಿಸುವಂತೆ ಮಾಡಿದ್ದರಿಂದ ಇವನಿಗೆ **"ಧರ್ಮಸೇತು"** ಎಂಬ ಬಿರುದು ಬಂದಿತು. ಇವನ ನಿತ್ಯ ಜಾಗರೂಕವಾದ ಧರ್ಮ ಪ್ರಜ್ಞೆ ಕಂಡು ಸಾಕ್ಷಾತ್ ದೇವೇಂದ್ರನು ಇವನ ಸ್ನೇಹ ಬಯಸಿ ಬಂದನು. ಇಂದ್ರ ಹಾಗೂ ಮುಚಕುಂದ ಮಹಾರಾಜರ ನಡುವೆ ಮಧುರ ಮೈತ್ರಿಯು ಬೆಳೆದು ಬಂದಿತು. ಮುಚಕುಂದ ಮಗ ಸಂಭೂತನು ನರ್ಮದಾ ನದಿಗೆ ಪತಿ ಎನಿಸಿದನು.

ಈ ಸಂಭೂತನಿಂದ ಸಂಭೂತಿ, ಅವನ ಮಗ ತ್ರಿಧನ್ವ, ತ್ರಿಧನ್ವ ಪುತ್ರ ತ್ರೈಯಾರುಣ, ಅವನ ಮಗ ಸತ್ಯವ್ರತ, ತತ್ಪುತ್ರ, ಸತ್ಯರಥ ಅವನ ಮಗ ಹರಿಶ್ಚಂದ್ರ ಹರಿಶ್ಚಂದ್ರನ ಮಗ ರೋಹಿತ. ಈ ರೋಹಿತ ರಾಜನ ಮಗನಾದ ವೃಕನಿಗೆ ಬಾಹು ಬಾಹುವಿಗೆ ಸಗರನು ಪುತ್ರರಾದರು. ಈ ಸಗರ ರಾಜನು ಧರ್ಮನಿಷ್ಠನಾಗಿದ್ದನು. ಇವನಿಗೆ ಪ್ರಭಾ, ಭಾನುಮತಿ ಎಂದು ಇಬ್ಬರು ಹೆಂಡಂದಿರು. ಇಬ್ಬರಿಗೂ ಮಕ್ಕಳ ಬಯಕೆ. ಅದಕ್ಕಾಗಿ ಇಬ್ಬರೂ ಔರ್ವ ಎಂಬ ಅಗ್ನಿಯನ್ನು ಆರಾಧಿಸಿದರು. ಆ ಸಗರ ಸುಂದರಿಯರಿಬ್ಬರ ಪರಿಪರಿಯ ಪೂಜೆ, ಆರಾಧನೆಗಳಿಂದ ಅಗ್ನಿಗೆ ಸಂತೋಷವಾಯಿತು. ಅವನು ಇವರಿಗೆ ಇಷ್ಟವಾದ ವರವನ್ನು ಕೊಟ್ಟನು. ಹಿರಿಯ ಮಡದಿ ಪ್ರಭಾದೇವಿಯು ಯದು ಮಹಾರಾಜನ ಮಗಳು. ಅವಳು ಪ್ರಸನ್ನನಾದ ಅಗ್ನಿಗೆ ಅರವತ್ತು ಸಾವಿರ ಮಕ್ಕಳು ತನಗೆ ಜನಿಸಬೇಕೆಂದು ಕೇಳಿಕೊಂಡಳು. ಸಗರ ಸಾರ್ವಭೌಮನ ದ್ವಿತೀಯ ಭಾರ್ಯೆ ಭಾನುಮತಿಯು ವಂಶದ ಬಳ್ಳಿ ಬೆಳೆಸಬಲ್ಲ ಒಬ್ಬನೇ ಮಗನು ಹುಟ್ಟಿದರೂ ಸಾಕೆಂದು ಕೇಳಿಕೊಂಡಳು. ಅಗ್ನಿದೇವನ ವರಕ್ಕೆ ಅನುಸಾರವಾಗಿ ಇಬ್ಬರಿಗೂ ಅವರ ಇಷ್ಟದಂತೆ ಮಕ್ಕಳು ಉತ್ಪನ್ನರಾದರು. ಪ್ರಭಾದೇವಿಯ ಅರವತ್ತು ಸಾವಿರ ಮಕ್ಕಳು ದೊಡ್ಡವರಾದ ಬಳಿಕ ಸಗರ ರಾಜನ ಅಶ್ವಮೇಧ ಯಜ್ಞದ ಕುದುರೆಯ ಶೋಧಕ್ಕಾಗಿ ಭೂಮಿ ಅಗೆದರು. ಪಾತಾಳಕ್ಕೆ ಇಳಿದು ಕಪಿಲ ರೂಪಿ ವಿಷ್ಣುವಿನ ಕೋಪಾಗ್ನಿಯಿಂದ ಉರಿದು ಬೂದಿಯಾದರೂ. ಭಾನುಮತಿಯ ಏಕಮಾತ್ರ ಪುತ್ರನಾದ ಅಸಮಂಜಸನು ಮುಂದೆ ರಾಜ್ಯಾರೋಹಣ ಮಾಡಿದನು. ಆ ಅಸಮಂಜಸನ ಮಗನೇ ಅಂಶುಮಂತ. ಅವನಿಗೆ ದಿಲೀಪ, ದಿಲೀಪನಿಗೆ ಭಗೀರಥ ಎಂಬ ಮಗನು ಹುಟ್ಟಿದನು. ಈ ಭಗೀರಥನು ಉಗ್ರ ತಪಸ್ಸುಮಾಡಿ ದೇವಗಂಗೆಯನ್ನು ಭೂಲೋಕಕ್ಕೆ ಇಳಿಸಿದನು. ಪಾತಾಳದವರೆಗೂ ಹರಿಸಿದನು. ತನ್ನ ಪಿತೃಗಳಾದ ಸಗರ ರಾಜನ ಅರವತ್ತು ಸಾವಿರ ಪುತ್ರರನ್ನೆಲ್ಲ ಉದ್ಧರಿಸಿದನು.

ಮನು ಪುತ್ರನಾದ ನಾಭಾಗನಿಗೆ ಅಂಬರೀಷ ಎಂಬ ಮಗನು ಇದ್ದನು ಎಂದು ಹಿಂದೆ ಹೇಳಿದ್ದೆಯಷ್ಟೇ ! ಆ ಅಂಬರೀಷ ಮಹಾರಾಜನೇ ಸಿಂಧುದ್ವೀಪ ಎಂಬ ಭೂಖಂಡವನ್ನು ನಿರ್ಮಿಸಿ ಅದೇ ಹೆಸರಿನ ತನ್ನ ಮಗನನ್ನು ಆ ನಾಡಿಗೆ ಅಧಿರಾಜನನ್ನಾಗಿ ಮಾಡಿದನು. ಆ ಸಿಂಧು ದ್ವೀಪದ ಮಹಾರಾಜನಿಗೆ **ಅಯುತಾಯಂ** ಎಂಬ ಮಗನು ಹುಟ್ಟಿದನು. ಅಯುತಾಯುವಿನ ಮಗ ಋತುಪರ್ಣ, ಆ ಋತುಪರ್ಣ ರಾಜನ ನಂತರ ಆ ವಂಶದಲ್ಲಿ ಕಲ್ಮಾಷಪಾದ, ಸರ್ವಕರ್ಮ, ಅರಣ್ಯ, ನಿಘ್ನ ಮುಂತಾಗಿ ಸಂತಾನ ಪರಂಪರೆಯು ಮುಂದೆವರಿಯಿತು. ನಿಘ್ನನಿಗೆ ಅನಮಿತ್ರ, ರಘೋತ್ತಮ ಎಂಬ ಇಬ್ಬರು ತನಯರು.

ಅನಮಿತ್ರನು ವೈರಿ ವಿನಾಶದ ಉದ್ದೇದಿಂದ ಕಾಡಿಗೆ ಹೋದನು. ದೇಶದ ತುಂಬ ನಿಬಿಡವಾಗಿ ಬೆಳೆದ ಕಗ್ಗಾಡುಗಳ ದರಿ, ಕೊರಿ, ಗುಹೆಗಳಲ್ಲಿ ಅವಿತುಕೊಂಡು ಸಮಯ ಸಿಕ್ಕಾಗ ದೇಶ ಗ್ರಾಮಗಳ ಮೇಲೆ ಎರಗಿ ಪ್ರಜೆಗಳ ಕೊಲೆ ಸುಲಿಗೆಗಳನ್ನು ಮಾಡುವ ಕಾಡು ಜನಾಂಗವನ್ನು ಕಳ್ಳರ ತಂಡಗಳನ್ನು ನಿರ್ಮೂಲಮಾಡಬೇಕೆಂದು ಸಂಕಲ್ಪಿಸಿ ಅವನು ಅಡವಿ ಅಡವಿ ಅಲೆದನು. ಪ್ರಜಾಪೀಡಕರಾದ ಚೋರರ ತಂಡಗಳನ್ನು ಪತ್ತೆ ಹಚ್ಚಿ ತುಂಡರಿಸಿ ಚೆಲ್ಲಿದನು. ಹೀಗೆ ವೈರಿಗಳಾದ ವನೇಚರರ ಹಿಂಡುಗಳನ್ನು ಪತ್ತೆ ಮಾಡಿ ದಂಡಿಸುವದರಲ್ಲಿಯೇ ಅನಮಿತ್ರನ ಜನ್ಮ ಕಳೆಯಿತು. ಅವನ ಬದಲಾಗಿ ನಿಘ್ನರಾಜನು ತನ್ನ ಕಿರಿಯ ಮಗ ರಘೋತ್ತನಿಗೆ ಪಟ್ಟಾಭಿಷೇಕಗೈದನು. ಈ ರಘುವಿನಿಂದ ಮುಂದೆ ದಿಲೀಪ, ಅಜರಾಜ, ದೀರ್ಘಬಾಹು, ದಶರಥ ಎಂದು ಮುಂತಾಗಿ ಈ ರಘುವಂಶವು ಬೆಳೆಯಿತು. ಈ ದಶರಥ ರಾಜನಿಗೆ ನಾರಾಯಣನ ಅಂಶ ಸಂಭೂತರಾದ ನಾಲ್ಕು ಜನ ಮಕ್ಕಳು. ರಾಮ, ಲಕ್ಷ್ಮಣ, ಭರತ, ಶತೃಘ್ನ ಎಂದು. ಅವರಲ್ಲಿ ಹಿರಿಯವನಾದ ರಾಮನು ಸಾಕ್ಷಾತ್ ಶ್ರೀ ವಿಷ್ಣುವಿನ ಪೂರ್ಣಾವತಾರ ಈ ಶ್ರೀರಾಮಚಂದ್ರ ಪ್ರಭುವು ರಾವಣಾಸುರನನ್ನು ಸಂಹರಿಸಿ, ರಘುವಂಶದ ಕೀರ್ತಿಯನ್ನು ದಿಗಂತ ವ್ಯಾಪಿಯನ್ನಾಗಿ ಮಾಡಿದನು. ಈ ರಾಮನ ಚರಿತ್ರವನ್ನು ಭೃಗು ವಂಶದ ವಾಲ್ಮೀಕಿ ಋಷಿಯು ಬರೆದು ಕಾವ್ಯ ರೂಪವಾಗಿ ಹಾಡಿದನು. ಅದಕ್ಕೆ **''ರಾಮಾಯಣ''** ಎಂದು ಹೆಸರು ಬಂದಿತು.

ಈ ರಾಮನಿಗೆ ಇಬ್ಬರು ಮಕ್ಕಳು ಲವ-ಕುಶ ಇವರಿಬ್ಬರೂ ತಂದೆಯಂತೆ ವಂಶದ ಕೀರ್ತಿಯನ್ನೂ ಕುಲದ ಗೌರವವನ್ನೂ ಘನತೆಗೆ ಏರಿಸಿದರು. ಕುಶನ ಮಗನೇ ಅತಿಥಿ. ಈ ಅತಿಥಿಯಿಂದ ಮುಂದೆ ನಿದ, ನಳ, ನಭ, ಪುಂಡರೀಕ್ಷ, ಕ್ಷೇಮಧನ್ವ, ದೇವಾನೀಕ, ಸಹಸ್ರಾಶ್ವ, ಚಂದ್ರಾಲೋಕ, ತಾರಾಪೀಡ, ಚಂದ್ರಗಿರಿ, ಚಂದ್ರ, ಶ್ರುತಾಯು ಮುಂತಾಗಿ ಈ ರಾಮನ ವಂಶದ ಬಳ್ಳಿಯು ಚಲ್ಲುವರಿಯಿತು. ಇಕ್ಷ್ವಾಕುವಂಶದ ಈ ಶ್ರುತಾಯು ಎಂಬ ರಾಜನು ಮಹಾಭಾರತ ಯುದ್ಧದಲ್ಲಿ ಹೋರಾಡಿ ಕುರುಕ್ಷೇತ್ರದಲ್ಲಿ ದೇಹಬಿಟ್ಟನು. ಇಕ್ಷ್ವಾಕುವಂಶದ ಈ ಎಲ್ಲ ರಾಜರು ಶೂರರು, ಉದಾರರು, ಸದ್ಗುಣಿಗಳು, ಕೀರ್ತಿವಂತರು ಆಗಿದ್ದರು. ಈ ವಂಶದಲ್ಲಿಯ ಪ್ರಸಿದ್ಧಿಪಡೆದ ಕೆಲವರನ್ನು ಮಾತ್ರ ಇಲ್ಲಿ ಹೇಳಿದ್ದೇವೆ. ಇಲ್ಲಿಯವರೆಗೆ ಆಗಿ ಹೋದ ಈ ರಾಮಕುಲದ ರಾಜಮಹಾರಾಜರೆಲ್ಲರೂ ಧಾರ್ಮಿಕರು. ದೊಡ್ಡ ದೊಡ್ಡ ಯಜ್ಞ ಯಾಗ ಮಾಡಿ ಕೈ ತುಂಬ ದಕ್ಷಿಣೆಯಿತ್ತು ಕೊಡುಗೈ ದೊರೆಗಳೆಂದು ಬಿರುದು ಹೊಂದಿ ಮೆರೆದು ಬಾಳಿ ಹೋದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ಎಂಟನೇಯ ಅಧ್ಯಾಯ ಮುಗಿದುದು*

## ಪಿತೃವಂಶ ವರ್ಧನೆ

ಅಧ್ಯಾಯ - ೯

**ಭೀಷ್ಮ :-** ಪೂಜ್ಯರೆ, ಪಿತೃವಂಶವನ್ನು ಕೇಳಬೇಕೆಂದು ನನಗೆ ಇಚ್ಛೆಯಾಗಿದೆ. ವಿಶೇಷವಾಗಿ ಸೂರ್ಯ, ಯಮ, ಚಂದ್ರರ ವಂಶ ವಿಸ್ತಾರವನ್ನು ತಮ್ಮ ಮುಖದಿಂದ ಕೇಳಬೇಕೆಂದು ನನಗೆ ಲವಲವಿಕೆ.

**ಪುಲಸ್ತ್ಯ :-** ಆಗಲಿ! ಸಂತೋಷ. ನಿನಗೆ ಮೊದಲಿನಿಂದ ಪಿತೃವಂಶವು ಬಿತ್ತರಗೊಂಡ ಬಗೆಯನ್ನು ತಿಳಿಸುತ್ತೇನೆ. ಸ್ವರ್ಗದಲ್ಲಿ ಏಳು ಪಿತೃಗಣಗಳು ಇರುತ್ತವೆ. ಅವುಗಳ ಮೂರು ಅಮೂರ್ತಗಣಗಳು, ಉಳಿದ ನಾಲ್ಕು ಪಿತೃಗಣಗಳು ಮೂರ್ತಿವಂತವಾಗಿರುತ್ತವೆ. ಅಮೂರ್ತ ಅಥವಾ ಆಕಾರ ರಹಿತವಾದ ಮೂರು ಪಿತೃಗಣಗಳನ್ನು ದೇವತೆಗಳು ಭಕ್ತಿಯಿಂದ ಆರಾಧಿಸುತ್ತಾರೆ. ಆ ಮೂರು ಗುಂಪಿನ ಪಿತೃಗಳು ವೈರಾಜರು ಎಂದು ಪ್ರಸಿದ್ಧರು. ಅವರೆಲ್ಲರು ಯೋಗದಿಂದ ಹಿಂದೆ ಭ್ರಷ್ಟರಾಗಿ ಮತ್ತೆ ಭಗವಂತನನ್ನು ಭಕ್ತಿಯಿಂದ ಆರಾಧನೆಮಾಡಿ ದಿವ್ಯ ಲೋಕಗಳನ್ನು ಈಗ ಪಡೆದಿದ್ದಾರೆ. ಬ್ರಹ್ಮದೇವರ ಹಗಲು ಕೊನೆಗೊಂಡ ಬಳಿಕ ಅವಾಂತರ ಪ್ರಳಯದ ನಂತರ ಮತ್ತೆ ಬ್ರಹ್ಮಜ್ಞಾನಿಗಳಾಗಿ ಭೂಲೋಕದಲ್ಲಿ ಜನಿಸುವರು. ಅವರಿಗೆ ಹಿಂದಿನ ಸ್ಮೃತಿಯು ಭಗವದನುಗ್ರಹದಿಂದ ಅಚ್ಚಳಿಯದೆ ಉಳಿದಿರುವದು. ಅವರ ಬಲದಿಂದ ಅವರು ಜ್ಞಾನ, ಭಕ್ತಿ ಯೋಗಗಳಿಂದ ಭಗವದಾರಾಧನೆ ಮಾಡಿ ಪರಮಾತ್ಮನ ಅಪರೋಕ್ಷಜ್ಞಾನದಿಂದ ಮೋಕ್ಷ ಪಡೆಯುವರು. ಅವರು ಮುಂದೆ ಮರಳಿ ಈ ಸಂಸಾರಕ್ಕೆ ಬರುವುದಿಲ್ಲ. ಇಂಥ ಮಹಾಯೋಗಿಗಳಾದ ಪಿತೃಗಳನ್ನು ಉದ್ದೇಶಿಸಿಯೇ ಶ್ರಾದ್ಧವನ್ನು ಮಾಡಬೇಕು.

ಈ ಪಿತೃಗಳ ಮಾನಸ ಕನ್ಯೆಯೇ ಮೇನಾದೇವಿ. ಅವಳನ್ನು ಪರ್ವತರಾಜನಾದ ಹಿಮಗಿರಿಗೆ ಮದುವೆ ಮಾಡಿಕೊಡಲಾಯಿತು. ಈ ಮೇನಾದೇವಿಯ ಮಗನೇ ಮೈನಾಕ ಪರ್ವತ. ಆ ಮೈನಾಕ ಬೆಟ್ಟದ ಮಗ ಕ್ರೌಂಚ ಪರ್ವತ. ಇವನೇ ಕ್ರೌಂಚ ದ್ವೀಪಕ್ಕೆ ಅಧಿಕಾರಿ. ಮೇನಾದೇವಿಗೆ ಮೈನಾಕ ಪರ್ವತವಲ್ಲದೆ ಮೂವರು ಯೋಗಿನಿಯರಾದ ಕನ್ಯಾಮಣಿಗಳಿದ್ದರು. ಉಮಾ, ಏಕಪರ್ಣಾ, ಅಪರ್ಣಾ ಎಂದು ಅವರು ಹೆಸರು. ಇವರು ಮೂವರೂ ಮಹಾತಪಸ್ವಿನಿಯರು. ಹಿರಿಯಳಾದ ಉಮೆಯನ್ನು ಮಹಾದೇವರಿಗೂ, ಏಕಪರ್ಣೆಯನ್ನು ಭೃಗುವಿಗೂ ಅಪರ್ಣೆಯನ್ನು ಜೈಗೀಷವ್ಯನಿಗೂ ಮದುವೆ ಮಾಡಿಕೊಟ್ಟನು.

ಇನ್ನು ಅಗ್ನಿಷ್ವಾತ್ತ ಎಂಬ ಪಿತೃಗಣದವರ ವಿಚಾರ ತಿಳಿಸುತ್ತೇನೆ, ಕೇಳು. ಇವರೆಲ್ಲರೂ ಮಾರೀಚ ಪ್ರಜಾಪತಿಯ ಮಕ್ಕಳಾಗಿದ್ದು ಸೋಮಪಥ ಎಂಬ ದಿವ್ಯ ಲೋಕದಲ್ಲಿ ವಾಸಿಸುತ್ತಾರೆ. ಯಜ್ಞಯಾಗಗಳನ್ನು ನಿರಂತರವೂ ಮಾಡುವ ಈ ಪಿತೃಗಣದವರನ್ನು ದೇವತೆಗಳು ಗೌರವದಿಂದ ಕಾಣುತ್ತಾರೆ. ಈ ಪಿತೃಗಣದವರ ಮಾನಸ ಕನ್ಯೆಯು ಅಚ್ಛೋದಾ. ಮುಂದೆ ಅವಳು ನದೀರೂಪದಿಂದ ಹರಿದಳು. ಆ ನದಿಯ ಮೂಲದಲ್ಲಿ ಅಚ್ಛೋದ ಎಂಬ ದಿವ್ಯ ಸರೋವರವನ್ನು ನಿರ್ಮಿಸಿದ್ದಾರೆ ಅಗ್ನಿಷ್ವಾತರ ಮಾನಸ ಪುತ್ರಿಯಾದ ಅಚ್ಛೋದೆಯು ಸಾವಿರವರುಷ ಉಗ್ರ ತಪಸ್ಸುಮಾಡಿದಳು. ಆ ಕೋಮಲಾಂಗಿಯ ಈ ತಪಸ್ಸನ್ನು ನೋಡಿ ಪ್ರೀತಿಗೊಂಡ ಪಿತೃಗಳೆಲ್ಲರೂ ಅಲ್ಲಿಗೆ ಬಂದರು. ಅವರೆಲ್ಲರಿಗೂ ಅಚ್ಛೋದೆ ಬಯಸಿದ ವರವನ್ನು ಕೊಡುವ ಅಪೇಕ್ಷೆ, ಮಗಳ

ಮೇಲಿನ ಮಮತೆಯಿಂದ ಅಲ್ಲಿಗೆ ಬಂದ ಆ ಪಿತೃಗಳೆಲ್ಲರೂ ಕಾಮನಂತೆ ಸುಂದರರಾಗಿ ಕಾಂತಿವಂತರಾಗಿ ಕಂಗೊಳಿಸುತ್ತಿದ್ದರು. ಎಲ್ಲರ ಕೊರಳಲ್ಲಿ ದಿವ್ಯ ಹಾರಗಳು, ಮೈತುಂಬ ಚಂದನ ಗಂಧದ ಲೇಪನ, ಪ್ರತಿಯೊಬ್ಬರಿಗೂ ದಿವ್ಯರೂಪ. ಇಂಥ ಪಿತೃಗಳ ಮಧ್ಯದಲ್ಲಿ ಅಮಾವಸು ಎಂಬ ಹೆಸರಿನ ಒಬ್ಬ ತರುಣನನ್ನು ಕಂಡು ಅಚ್ಛೋದೆಗೆ ಮನಸ್ಸು ಮುಗ್ಧವಾಯಿತು. ಅವನ ಅಸಾಧಾರಣ ಸೌಂದರ್ಯದಿಂದ ಅವಳ ಚಿತ್ತವು ಚಂಚಲವಾಗಿ ಅವನೆಡೆ ಎಳೆಯಲ್ಪಟ್ಟಿತು. ಕಾಮಬಾಣದಿಂದ ಪೀಡಿತಳಾಗಿ ಆ ಅಮಾವಸುವಿನ ಸಂಗವಾಗಲು ತಾನು ವರ ಬೇಡಿಕೊಂಡಳು. ಅವಳ ಈ ಮಾನಸಿಕ ವ್ಯಭಿಚಾರದಿಂದ ಅವಳ ಯೋಗಶಕ್ತಿಯೆಲ್ಲವೂ ಹಾಳಾಯಿತು. ಮೊದಲು ನೆಲ ಮುಟ್ಟದೆ ಮುಗಿಲಿನಲ್ಲಿ ಸ್ವರ್ಗಾದಿ ದಿವ್ಯಲೋಕಗಳಲ್ಲಿ ಮನಬಂದಂತೆ ಸ್ವಚ್ಛಂದ ಸಂಚಾರ ಗೈಯಬಲ್ಲ ಆ ಪಿತೃಕನ್ಯೆಯು ಒಮ್ಮೆಲೆ ಭೂಮಿಯ ಮೇಲೆ ಉರುಳಿದಳು. ಆದರೆ ಆ ಅಮಾವಸು ಎಂಬ ತರುಣನು ಮಾತ್ರ ಆ ಅಚ್ಛೋದೆಯನ್ನು ತನ್ನ ಮನಸ್ಸಿನಿಂದ ಕಾಮಿಸಲಿಲ್ಲ. ಆದರೂ ಅವಳು ಧೈರ್ಯದಿಂದ ಅಂದು ಅವನ ಬಳಿ ಹೋದದ್ದರಿಂದ ಆ ತಿಥಿಯು ಅಮಾವಾಸ್ಯೆ ಎಂದು ಪ್ರಸಿದ್ಧವಾಯಿತು. ಅದು ಪಿತೃಗಳಿಗೆ ಪ್ರಿತ್ಯಾಸ್ಪದವಾಗಿ ಆ ದಿನ ಏನೇ ಕೊಟ್ಟರೂ ಅದು ಅಕ್ಷಯವಾಗುವುದು. ಆಕಸ್ಮಿಕವಾದ ಈ ಚಿತ್ತ ಚಾಂಚಲ್ಯ ಹಾಗೂ ತಪೋವಿನಾಶದಿಂದ ಆ ಅಚ್ಛೋದೆಗೆ ನಾಚಿಕೆ ಎನಿಸಿ, ಪಶ್ಚಾತ್ತಾಪವಾಯಿತು. ಅವಳು ತಲೆತಗ್ಗಿಸಿ, ಪಿತೃಗಳಿಗೆ ಕೈ ಮುಗಿದು, ತನ್ನನ್ನು ಉದ್ಧರಿಸಬೇಕೆಂದು ಬೇಡಿಕೊಂಡಳು. ಆಗ ಪಿತೃಗಳು ಕರುಣೆದುಂಬಿ ಮುಂದಿನ ಭವಿಷ್ಯವನ್ನು ಧ್ಯಾನದೃಷ್ಟಿಯಿಂದ ನೋಡಿದರು. ಅಚ್ಛೋದೆಯ ಈ ಗೈಮೆಯಲ್ಲಿ ಹಾಗೂ ಚ್ಯುತಿಯಲ್ಲಿ ಅಡಕವಾದ ದೈವೀಸಂಕಲ್ಪದ ಹಿನ್ನೆಲೆಯು ಗೋಚರವಾಯಿತು. ಮುಂದಾಗಲಿರುವ ದೇವತಾ ಕಾರ್ಯ ತಿಳಿದು, ಅವರು ಪ್ರಸನ್ನರಾಗಿ ಹೀಗೆ ಹೇಳಿದರು -

''ಶುಭಾಂಗಿಯೇ, ದೇವತೆಗಳು ತಮ್ಮ ದಿವ್ಯ ಶರೀರದಿಂದ ಯಾವುದೇ ಕಾರ್ಯ ಮಾಡಿದರೆ ಆಗಲೇ ಅವಕ್ಕೆ ತಕ್ಕ ಫಲವು ದೊರೆಯುವುದು. ಆದರೆ ಮಾನವರಿಗೆ ಮಾತ್ರ ತಮ್ಮ ಪಾಪ-ಪುಣ್ಯದ ಫಲವು ಮರಣಾನಂತರ ದೊರಕುವುದು. ಆದುದರಿಂದ ಈಗ ನೀನು ಮಾಡಿದ ಈ ಕರ್ಮದ ಫಲವನ್ನು ನೀನು ಮುಂದೆ ಜನ್ಮಾಂತರದಲ್ಲಿ ಹೊಂದುವಿ. ಇಪ್ಪತ್ತೆಂಟನೆಯ ದ್ವಾಪರಯುಗ ಬಂದಾಗ ನೀನು ಒಂದು ಮೀನಿನ ಹೊಟ್ಟೆಯಿಂದ ಹುಟ್ಟಿಬರುವಿ. ಪಿತೃಗಳ ವಿಷಯದಲ್ಲಿ ನೀನು ಕಾಮುಕ ಭಾವನೆಯನ್ನು ತಳೆದು ಮಾನಸಿಕ ವ್ಯಭಿಚಾರಮಾಡಿದ್ದರಿಂದ ಅಂತಹ ಕೀಳು ಜನ್ಮವು ಬರುವದು. ನೀನು ಬಯಸಿದ ಆ ಅಮಾವಸು ರಾಜನಿಗೆ ನೀನು ಮಗಳಾಗಿ ಜನಿಸುವಿ. ಕನ್ಯೆಯಾಗಿ ಇರುವಾಗಲೇ ನಿನಗೆ ದೇವಲೋಕದ ಚಿರಯೌವನ, ಅಕ್ಷತ, ಯೋನಿತ್ವ ಮುಂತಾದ ಮಾನವಲೋಕ ದುರ್ಲಭ ಗುಣಗಳು ಪ್ರಾಪ್ತವಾಗುವವು. ಪರಾಶರ ಮಹರ್ಷಿಗಳ ಸಂಪರ್ಕದಿಂದ ಒಬ್ಬ ಮಗನನ್ನು ಪಡೆಯುವಿ. ಆ ನಿನ್ನ ಪುತ್ರ, ಜನನೋತ್ಸವವು ನದಿಯ ಒಂದು ನಡುಗಡ್ಡೆಯಲ್ಲಿ ಆಗುವುದು. ಆ ದ್ವೀಪವ ತುಂಬ ಬರಿ ಬೋರೆ ಗಿಡಗಳೇ ತುಂಬಿರುವುವು. ಆದ್ದರಿಂದ ಆ ನಿನ್ನ ಮಗನಿಗೆ **ಬಾದರಾಯಣ** ಎಂದು ಹೆಸರು ಬರುವುದು. ದ್ವೀಪದಲ್ಲಿ ಹುಟ್ಟಿದ್ದರಿಂದ **ದ್ವೈಪಾಯನ** ಎಂದು ಹೆಸರಾಗುವುದು. ಒಂದಾಗಿದ್ದ ವೇದರಾಶಿಯನ್ನು ಅವನು ವಿಂಗಡಿಸುವನು. ಅವನಿಗೆ **ವೇದವ್ಯಾಸ**ನೆಂದು ನಾಮಪ್ರಾಪ್ತಿ. ಅನಂತರ ನೀನು

ಕುರುವಂಶದ ಶಂತನು ಎಂಬ ರಾಜನನ್ನು ಮದುವೆಯಾಗಲಿರುವೆ. ಅವನು ಸಾಧಾರಣನಲ್ಲ ಸಾಕ್ಷಾತ್ ಸಮುದ್ರ ರಾಜನಾದ ವರುಣನೇ ಮಾನವ ರೂಪದಿಂದ ಮೈದಾಳಿ ಬರುವ ಆ ಶಂತನು ರಾಜನಿಂದ ನಿನಗೆ ವಿಚಿತ್ರವೀರ್ಯ. ಚಿತ್ರಾಂಗದ ಎಂಬ ಹೆಸರಿನ ಇಬ್ಬರು ಮಕ್ಕಳಾಗುವರು. ಅನಂತರ ನೀನು ಭೂಲೋಕದಲ್ಲಿ ನಿನಗೆ ಸತ್ಯವತಿ ಎಂಬ ಹೆಸರು ಬಂದರೆ ಪಿತೃಲೋಕದಲ್ಲಿ ಅಷ್ಟಕಾ ಎಂಬ ಶುಭನಾಮವು ಪ್ರಾಪ್ತವಾಗುವದು. ಜನರಿಗೆ ಆಯುಷ್ಯ, ಆರೋಗ್ಯವನ್ನು ನೀನು ನೀಡುವಿ. ಇಷ್ಟಾರ್ಥಗಳನ್ನು ಸಲ್ಲಿಸುವಿ. ಹಾಗೂ ಭೂಲೋಕದಲ್ಲಿ ನದಿಗಳಲ್ಲಿ ಶ್ರೇಷ್ಠವಾದ ಅಚ್ಛೋದಾ ಎಂಬ ನದಿಯಾಗಿ ಹರಿಯುವಿ. ನಿನ್ನ ಪಾವನ ಜಲದಿಂದ ಜನರನ್ನೆಲ್ಲ ಉದ್ಧಾರಮಾಡುವಿ.'' ಹೀಗೆ ಅಗ್ನಿಷ್ವಾತ್ತ ಪಿತೃಗಳು ತಮ್ಮ ಮಾನಸ ಕುಮರಿಯಾದ ಅಚ್ಛೋದೆಗೆ ಇಂತು ವರಕೊಟ್ಟು ಅವಳ ಭಾವಿ ಜೀವನದ ಭವ್ಯ ವೃತ್ತಾಂತ ಹೇಳಿ, ಅನುಗ್ರಹಿಸಿ ಅಲ್ಲಿಯೇ ಅದೃಶ್ಯರಾದರು. ಅವರ ಮಾತಿನಂತೆ ಅಚ್ಛೋದೆಯ ಜೀವನವು ಮಾರ್ಪಾಡು ಹೊಂದಿ, ದೇವತಾ ಕಾರ್ಯವನ್ನು ಪೂರೈಸಿತು.

ವಿಭ್ರಾಜ ಎಂಬ ಪಿತೃಗಳು ಬರ್ಹಿಷದ ಎಂಬ ಲೋಕದಲ್ಲಿ ವಾಸಮಾಡುತ್ತಾರೆ. ಅಲ್ಲಿ ನವಿಲುಗರಿಯ ಚಿನ್ಹಗುಳುಳ್ಳ ಸಹಸ್ರಾರು ವಿಮಾನಗಳು ಅವರ ಸಂಚಾರಕ್ಕಾಗಿ ಸಿದ್ಧವಾಗಿರುತ್ತವೆ. ಬೇಡಿದ ಫಲ ಕೊಡುವ ಕಲ್ಪವೃಕ್ಷಗಳು ಆ ಲೋಕದಲ್ಲಿ ಕಂಗೊಳಿಸುತ್ತವೆ. ಭಕ್ತಿಯಿಂದ ಶ್ರಾದ್ಧಮಾಡಿದ ಜನರು ಈ ಪಿತೃಲೋಕಗಳಲ್ಲಿ ಸುರಾಸರ ಗಂಧರ್ವರಿಂದ ಪೂಜಿತರಾಗಿ ವಾಸಿಸುತ್ತಾರೆ. ಪುಲಸ್ತ್ಯ ಮಹರ್ಷಿಯ ಮಕ್ಕಳದು ಒಂದು ಪಿತೃಗಣ ಉಂಟು. ಇವರೆಲ್ಲರೂ ಮಹಾತ್ಮರು. ಭಕ್ತರಿಗೆ ಅಭಯ-ಪ್ರದರು. ಇವರಿಗೆ ಪೀವರಿ ಎಂಬ ಮಾನಸ ಪುತ್ರಿಯು ಇದ್ದಳು. ಅವಳು ಮಹಾಯೋಗಿನಿ. ಯೋಗಸಿದ್ಧಳಾದ ಪಿತೃ-ಪುತ್ರಿ ಈ ಪೀವರಿಯು ಉಗ್ರವಾದ ತಪಸ್ಸನ್ನು ಕೈಕೊಂಡಳು. ಇವಳ ತೀಕ್ಷ್ಣ ತಪಕ್ಕೆ ಮೆಚ್ಚಿ ಪರಮಾತ್ಮನು ಅವಳಿಗೆ ಪ್ರತ್ಯಕ್ಷನಾಗಿ ''ಬೇಕಾದ ವರ ಕೇಳು'' ಎಂದು ಹೇಳಿದನು.

**ಪೀವರಿ :-** ದೇವನೆ, ನೀನು ನಿಜವಾಗಿಯೂ ನನ್ನ ಮೇಲೆ ಪ್ರಸನ್ನನಾಗಿದ್ದಿಯಷ್ಟೇ ? ಹಾಗಿದ್ದರೆ ನನಗೆ ಒಳ್ಳೇ ಸ್ಫುರದ್ರೂಪಿಯಾದ ಒಬ್ಬ ಪತಿಯನ್ನು ಕರುಣಿಸು. ಅವನು ಕೇವಲ ಸುಂದರನಾಗಿದ್ದರೆ ಸಾಲದು. ಒಳ್ಳೇ ಯೋಗಿಯಾಗಿಯೂ, ವೈರಾಗಿಯೂ ಆಗಿರಬೇಕು. ಇಂತಹ ತ್ಯಾಗಿ, ಯೋಗಿ, ವಿರಾಗಿ, ಜಿತೇಂದ್ರಿಯ ಪತಿಯನ್ನು ನನಗೆ ದಯಪಾಲಿಸಬೇಕು.

**ಶ್ರೀ ವಿಷ್ಣು :-** ಕಲ್ಯಾಣಿ ನೀನು ಘೋರ ತಪಸ್ಸುಮಾಡಿರುವೆ. ಅದರ ಫಲವಾಗಿ ನಾನು ನಿನಗೆ ಅಭೀಷ್ಟವಾದ ವರವನ್ನು ಕೊಡುತ್ತೇನೆ. ವೇದವ್ಯಾಸರ ವರಪುತ್ರನಾದ ಸಾಕ್ಷಾತ್ ಶುಕ್ರಾಚಾರ್ಯರು ಭೂಮಿಯಲ್ಲಿ ಅವತರಿಸಿದಾಗ ನೀನು ಅವನ ಮಡದಿಯಾಗಿ ಭೂಲೋಕದಲ್ಲಿ ಜನಿಸುವಿ. ಯೋಗಾಚಾರ್ಯನಾದ ಶುಕ ಮುನಿಯಿಂದ ನಿನಗೆ ಕೃತ್ವೀ ಎಂಬ ಕನ್ಯಾಮಣಿ ಜನಿಸುವಳು. ತಾಯಿಯಂತೆ ಅವಳೂ ತಪಸ್ವಿಯಾಗುವಳು. ನೀನು ಆ ನಿನ್ನ ಮಗಳನ್ನು ಪಾಂಚಾಲ ದೇಶದ ರಾಜನಾದ ಸಾತ್ವತನಿಗೆ ಮದುವೆಮಾಡಿಕೊಡು. ಅವಳು ಮುಂದೆ ಬ್ರಹ್ಮದತ್ತ ಎಂಬ ಮಹಾರಾಜನಿಗೆ ತಾಯಿಯಾಗಲಿರುವಳು. ಯೋಗಸಿದ್ಧಿ ಪಡೆದ ನಿನಗೆ ಕೃತ್ವೀ ಅಲ್ಲದೆ ಕೃಷ್ಣ, ಗೌರಪ್ರಭ, ಶಂಭು ಎಂಬ ಮೂವರು ಮಕ್ಕಳು ಜನಿಸುವರು. ಹೀಗೆ ಹೇಳಿ ಪರಮಾತ್ಮನು ಪೀವರಿಗೆ ವರಗಳನ್ನು ಕೊಟ್ಟು ಅಲ್ಲಿಯೇ ಅದೃಶ್ಯನಾದನು.

ಈ ಪುಲಸ್ತ್ಯ ಪುತ್ರರಾದ ಪಿತೃಗಣವನ್ನು ಆರಾಧಿಸಿದವರೂ, ಶ್ರಾದ್ಧದಲ್ಲಿ ಭಕ್ತಿಯಿಂದ ಪೂಜಿಸಿದವರೂ ಸರ್ವಾರ್ಥ. ಸಮೃದ್ಧವಾದ ವಿಮಾನಗಳಲ್ಲಿ ಸಂಚರಿಸುವರು. ಮರೀಚಿಗರ್ಭ ಎಂಬ ಪಿತೃಗಳು ಮಾರ್ತಂಡ ಮಂದಲದಲ್ಲಿ ನೆಲೆಸಿರುವರು. ಅವರಿಗೆ **ಗೌ** ಎಂಬ ಮಾನಸ ಪುತ್ರಿ ಇರುವಳು. ಈ ಗೌ ಕನ್ಯೆಯನ್ನು 'ಸಾಧ್ಯ' ಎಂಬ ದೇವಗಣದವರು ಪಾಣಿಗ್ರಹಣಮಾಡಿರುವದರಿಂದ ಸ್ವರ್ಗಲೋಕದ ತುಂಬ ಅವಳ ಕೀರ್ತಿ ವ್ಯಾಪಿಸಿದೆ. ಪ್ರೀತರಾದ ಆ ಪಿತೃಗಳು ತಮ್ಮನ್ನು ಶ್ರಾದ್ಧದ ಮುಖಾಂತರ ಆರಾಧಿಸಿದವರಿಗೆ ಸ್ವರ್ಗಾದಿ ಫಲಗಳನ್ನು ಕರುಣಿಸುವರು.

ಅಂಗಿರಸ ಪ್ರಜಾಪತಿಯ ಮಕ್ಕಳಾದ ಹವಿಷ್ಮಂತ ಎಂಬ ಪಿತೃಗಳು ಕ್ಷತ್ರಿಯ ಶ್ರೇಷ್ಠರಿಗೆ ತೀರ್ಥಶ್ರಾದ್ಧಗಳ ಫಲಪ್ರದಾನ ಮಾಡುವರು. ಯೋಗ್ಯರಾದವರಿಗೆ ಮೋಕ್ಷ ಫಲವನ್ನು ದಯಪಾಲಿಸುವರು. ಈ ಹವಿಷ್ಮಂತ ಪಿತೃಗಳ ಲೋಕ ಪ್ರಸಿದ್ಧಳಾದ ಯಶೋದಾ ಎಂಬ ಮಾನಸಪುತ್ರಿ ಇರುವಳು. ಇವಳನ್ನು ಸಗರರಾಜನ ಮೊಮ್ಮಗನಾದ ಅಂಶುಮಂತನಿಗೆ ಮದುವೆ ಮಾಡಿಕೊಡಲಾಯಿತು. ಇವಳ ಮಗನೇ ದಿಲೀಪ. ಮೊಮ್ಮಗ ಭಗೀರಥ. ಕಾಮಧುಗ್ ಎಂಬ ಲೋಕದಲ್ಲಿ ಸುಸ್ವದ ಎಂಬ ಪಿತೃಗಳಿರುವರು. ಅವರ ಶ್ರಾದ್ಧಮಾಡಿದ ಭಕ್ತರಿಗೆ ಅಭೀಷ್ಟ ವರಗಳನ್ನು ನೀಡುವರು. ಕರ್ಮದ ಪ್ರಜಾಪತಿ ಲೋಕಗಳಲ್ಲಿ ಆಜ್ಯಪ ಎಂಬ ಪಿತೃಗಳು ವಾಸಿಸುವರು. ವೈಶ್ಯರು, ಪುಲಹ ಮುನಿಯ ಅಣ್ಣನ ಮಕ್ಕಳಾದ ಈ ಪಿತೃಗಳನ್ನು ಶ್ರಾದ್ಧಗಳಲ್ಲಿ ಆರಾಧಿಸುವರು. ಈ ಪಿತೃಗಳ ಮಾನಸ ಕನ್ಯೆಯು ವಿರಜಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಇವಳು ನಹುಷ ಮಹಾರಾಜನ ಮಡದಿ. ಯಯಾತಿ ರಾಜನ ತಾಯಿ. ಇವಳು ಮುಂದೆ ''ಅಷ್ಟಕಾ'' ಎಂಬ ಹೆಸರಿನಿಂದ ಪಿತೃಲೋಕದಲ್ಲಿ ಪ್ರಸಿದ್ಧಳಾದಳು. ಬ್ರಹ್ಮಲೋಕದ ಮೇಲೆ ಸುಮಾನಸ ಎಂಬ ಲೋಕದಲ್ಲಿ ''ಸೋಮಪ'' ಎಂಬ ಪಿತೃಗಳು ನೆಲೆಸಿದ್ದಾರೆ. ಮೂರ್ತಿವಂತ ಧರ್ಮದಂತಿರುವ ಸ್ವಧಾ ಪುತ್ರರಾದ ಇವರೆಲ್ಲರೂ ಬ್ರಹ್ಮದೇವರ ನಂತರ ಪೂಜ್ಯರಾಗಿದ್ದಾರೆ. ಇವರ ಮಾನಸ ಕನ್ಯೆ ನರ್ಮದೆ. ಪ್ರಾಣಿಗಳನ್ನು ತನ್ನ ಜಲಸ್ಪರ್ಶದಿಂದ ಪಾವನಗೈಯುವ ಈ ನರ್ಮದೆಯು ಪಡವಲ ಕಡಲಿಗೆ ಕೊಡುತ್ತದೆ. ಇದೆಲ್ಲ ಪಿತೃಗಳ ಮಹಿಮೆ ತಿಳಿದುಕೊಂಡು ಧರ್ಮಬುದ್ಧಿಯಿಂದ ಶ್ರಾದ್ಧಕರ್ಮ ಆಚರಿಸಬೇಕು. ಇದರಿಂದ ಮನುಗಳು ತೃಪ್ತಿ ಹೊಂದುತ್ತಾರೆ. ಅವರ ಅನುಗ್ರಹದಿಂದ ಯೋಗ ಸಿದ್ಧಿಯಾಗುತ್ತದೆ.

ಈ ಪಿತೃಗಳ ಪ್ರೀತ್ಯರ್ಥರಾಗಿ ಶ್ರಾದ್ಧವು ನಿರ್ಮಿತವಾಯಿತು. ಪಿತೃಗಳಿಗೆ ಬೆಳ್ಳಿಯ ಪಾತ್ರೆ ಇಲ್ಲದಿದ್ದರೆ ಬೆಳ್ಳಿ ಮಿಶ್ರಿತ ಪಾತ್ರೆಯು ವಿಹಿತವಾಗಿದೆ. ಪಿತೃಗಳಿಗೆ ನೀಡಲಾಗುವ ಹವಿಸ್ಸು 'ಸ್ವಧಾ' ಎನಿಸಿಕೊಳ್ಳುತ್ತದೆ. ಅಗ್ನಿ ಇಲ್ಲದಿದ್ದರೆ ಬ್ರಾಹ್ಮಣರ ಕೈಯಲ್ಲಿ ಅಥವಾ ನೀರಿನಲ್ಲಿ ಅಥವಾ ಗೋವುಗಳು ನಿಲ್ಲುವ ಸ್ಥಳಗಳಲ್ಲಿ ಅಥವಾ ಶಂಕರನ ಮೂರ್ತಿಯ ಸಮೀಪದಲ್ಲಿ ಅಥವಾ ಅಶ್ವಕರ್ಣ, ಅಜಾಕರ್ಣಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ಹೋಮವನ್ನು ಮಾಡಬೇಕು. ಪಿತೃಗಳ ಕಾರ್ಯಗಳಿಗಾಗಿ ದಕ್ಷಿಣ ದಿಕ್ಕು ಪ್ರಶಸ್ತವಾಗಿದೆ. ಯಜ್ಞೋಪವೀತವನ್ನು ಎಡಗೈಗೆ ತರ್ಪಣ ಕೊಡಬೇಕು ಪಿತೃ ಕಾರ್ಯಕ್ಕೆ ದರ್ಭೆ, ಉದ್ದು, ಹಸುವಿನ ಹಾಲು, ಅನ್ನ, ತುಪ್ಪ, ಜೇನು, ನವಣೆ, ಯವ, ಹೆಸರು, ಕಬ್ಬು, ಬಿಳಿಹೂ, ತುಪ್ಪ ಮುಂತಾದ ಪದಾರ್ಥಗಳು ವಿಹಿತವಾಗಿರುತ್ತವೆ. ಇದರಂತೆ ಕಾಡುಕಡಲೆ, ಪುಂಡಿಯಕಾಳು,

ಅವರೆ, ಅಲಸಂದಿ, ಹುರುಳಿ ಬಿಲ್ವಪತ್ರೆ, ಎಕ್ಕೆ, ದತ್ತೂರ, ಅಡುಸೋಗೆ, ಹಾರಕ, ಜಡೆಧಾನ್ಯ, ಬೇಲ, ಹಿಪ್ಪೆ, ಅಗಸೆ, ಆಡುಕುರಿಗಳ ಹಾಲು ಮುಂತಾದವುಗಳು ಶ್ರಾದ್ಧ ಕಾರ್ಯದಲ್ಲಿ ನಿಷಿದ್ಧವಾಗಿರುತ್ತವೆ. ಹೀಗೆ ಕಾಲೋಚಿತವಾಗಿ ಧರ್ಮಾನುಸಾರವಾಗಿ ಗೈದು ಶ್ರಾದ್ಧಾದಿ ಪಿತೃಕಾರ್ಯಗಳಿಂದ ಪಿತೃಗಳು ತೃಪ್ತರಾಗುತ್ತಾರೆ. ಇದಕ್ಕೆ ಪ್ರತಿಯಾಗಿ ತಮ್ಮ ಶ್ರಾದ್ಧ ಮಾಡಿದ ಪಿತೃ ಭಕ್ತನನ್ನು ಪಿತೃಗಳು ಇಷ್ಟಾರ್ಥಕೊಟ್ಟು ಸಂತೋಷ ಪಡಿಸುತ್ತಾರೆ. ಪುಷ್ಟಿ, ತುಷ್ಟಿ, ಸ್ವರ್ಗ, ಆರೋಗ್ಯಗಳನ್ನು ಕೊಟ್ಟು ಪಿತೃಗಳು ಕಾಪಾಡುತ್ತಾರೆ - ಶ್ರಾದ್ಧಕರ್ತರನ್ನು, ದೇವತಾ ಕಾರ್ಯಕ್ಕಿಂತ ಪಿತೃ ಕಾರ್ಯವು ಮಹತ್ವಪೂರ್ಣವಾದುದು. ದೇವತೆಗಳಿಗಿಂತ ಮೊದಲು ಶೀಘ್ರ ಪ್ರಸನ್ನರಾಗಿ ಅಭೀಷ್ಟಗಳನ್ನು ಕೊಡುವ ಪಿತೃಗಳನ್ನು ಪೂಜಿಸಿ ಆರಾಧಿಸಬೇಕು. ಈ ಪಿತೃಗಳಿಗೆ ಕೋಪವಿಲ್ಲ. ಮೋಹ, ಮಮತಾದಿ ಮೂಲಕ ಬಂಧನವೂ ಇಲ್ಲ. ಈ ಪಿತೃಗಳ ಪ್ರೀತಿಯು ಶಾಶ್ವತ. ಇವರು ಸದಾ ಶಾಂತರು, ಶುಚಿರ್ಭೂತರು, ಭಕ್ತಾನುಕಂಪಿಗಳು, ನಂಬಿದವರಿಗೆ ಸುಖ ನೀಡುವರು. ಪರ್ವಕಾಲದ ದೇವತೆಗಳೆಂದರೆ ಪಿತೃಗಳು. ಈ ಪಿತೃವಂಶ ವೃತ್ತಾಂತ ಪರಮ ಪವಿತ್ರ ಇದು ಮಾನವರಿಗೆ ಆಯುಷ್ಯ. ಆರೋಗ್ಯಗಳನ್ನು ಕೊಡುವುದು. ಇದನ್ನು ಯಾವಾಗಲೂ ಪಠಿಸಬೇಕು.

ಇನ್ನು ಮೂರನೆಯದಾದ ಅಭ್ಯುದಯ ಶ್ರಾದ್ಧಕ್ಕೆ ವೃದ್ಧಿಶ್ರಾದ್ಧ ಎಂದು ಕರೆಯುತ್ತಾರೆ. ಇದನ್ನು ಉತ್ಸವ, ಯಜ್ಞ, ಮದುವೆ, ಸತ್ಕಾರ, ಮಂಗಳಕಾರ್ಯ ಮುಂತಾದವುಗಳಲ್ಲಿ ಮಾಡತಕ್ಕದ್ದು. ಇದರಲ್ಲಿ ಮೊದಲು ಮಾತೃದೇವತೆಗಳನ್ನೂ ಬಳಿಕ ಪಿತೃದೇವತೆಗಳನ್ನೂ ನಂತರ ವಿಶ್ವದೇವತೆಗಳನ್ನೂ ಪೂಜಿಸಬೇಕು. ಪ್ರದಕ್ಷಿಣೆ, ಮೊಸರು, ಅಕ್ಷತೆ, ಹಣ್ಣು, ನೀರು ಮುಂತಾದವುಗಳಿಂದ ಪಿತೃಗಳನ್ನು ಪೂಜಿಸಿ ತೃಪ್ತಿಪಡಿಸಬೇಕು. ಪೂರ್ವಾಭಿಮುಖಮಾಡಿ ಪಿಂಡಪ್ರಧಾನಮಾಡಿ **'ಸಂಪನ್ನಂ'** ಎಂದು ಹೇಳುತ್ತ ಇಬ್ಬಿಬ್ಬರಿಗೆ ಕೂಡಿಸಿ ಅರ್ಘ್ಯ ಕೊಡಬೇಕು. ಜೋಡಿ ದ್ವಿಜರಿಗೆ ದಕ್ಷಿಣೆ, ವಸ್ತ್ರ, ಬಂಗಾರ ಮುಂತಾದವುಗಳಿಂದ ಪೂಜೆಮಾಡಬೇಕು. ಈ ವೃದ್ಧಿ ಶ್ರಾದ್ಧದಲ್ಲಿ ಎಳ್ಳಿನ ಬದಲು ಅಕ್ಕಿ ಉಪಯೋಗಿಸಬೇಕು. ದ್ವಿಜರೆಲ್ಲರೂ ಕೂಡಿ ಆಶೀರ್ವಚನ ಮಂಗಳ ವಚನವನ್ನು ಹೇಳಬೇಕು. ಈ ವೃದ್ಧಿಶ್ರಾದ್ಧವನ್ನು ಅನ್ಯಜಾತಿಯವರೂ ಕೂಡಾ ಮಂತ್ರವಿಲ್ಲದೆ ಮಾಡಬೇಕು. ನಮಸ್ಕಾರವೇ ಅವರಿಗೆ ಮಂತ್ರ, ದಾನವೇ ಪ್ರದಾನ. ಈ ದಾನ ನಮಸ್ಕಾರಗಳಿಂದಲೇ ಅವರ ಎಲ್ಲ ಇಷ್ಟಾರ್ಥಗಳು ಸಿದ್ಧಿಸುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೧೭ ಸೃಷ್ಟಿಖಂಡದಲ್ಲಿನ*
*ಪಿತೃವಂಶ ವರ್ಧನೆ ಎಂಬ ಒಂಭತ್ತನೇಯ ಅಧ್ಯಾಯ ಮುಗಿದುದು*

—o—

ತಂದೆಯ ಮರಣವಾದಾಗ ಮಕ್ಕಳಿಗೆ ಅಶೌಚವು ಹೇಗೆ ಎಂಬ ವಿಷಯವನ್ನು ತಿಳಿಸುತ್ತೇನೆ. ತಂದೆಯು ಮೃತನಾದರೆ ಬ್ರಾಹ್ಮಣಕುಲದ ಮಕ್ಕಳಿಗ ಹತ್ತು ದಿನ ಸೂತಕವು. ಕ್ಷತ್ರಿಯನಿಗೆ ಹನ್ನೆರಡುದಿನ, ವೈಶ್ಯನಿಗೆ ಹದಿನೈದು ದಿನ, ಶೂದ್ರನಿಗೆ ಒಂದು ತಿಂಗಳು ಹೀಗೆ ಮರಣ ಶೌಚವಿರುತ್ತದೆ. ಈ ಅಶೌಚವು ಮಕ್ಕಳಿಗೆ ಮಾತ್ರವಲ್ಲದೆ, ಸಪಿಂಡರಿಗೆ ಎಲ್ಲರಿಗೂ ಉಂಟು. ರಾಜರಿಗೆ ಮಾತ್ರ ಮೂರು ರಾತ್ರಿಯಾದ ಬಳಿಕ ಒಂದ ದಿನ ಅಶೌಚವು ಇರುತ್ತದೆ. ಇದರಂತೆ-ಜನನ ನಿಮಿತ್ಯಕವಾದ ಅಶೌಚವು ಎಲ್ಲ ವರ್ಣದವರಿಗೆ ಮೇಲೆ ಹೇಳಿದಂತೆ ಇರುತ್ತದೆ. ಮೃತನ ಅಸ್ಥಿಸಂಚಯನಕ್ಕಿಂತ ಮೊದಲು **'ಸ್ಪರ್ಶ'** ಎಂಬುದೆ ಇಲ್ಲ. ಅಸ್ಥಿಸಂಚಯನಾ ನಂತರವೇ ಅವರಿಗೆ ಸ್ಪರ್ಶಯೋಗ್ಯತೆ ಬರುತ್ತದೆ. ಪ್ರೇತಕ್ಕೆ ಹನ್ನೆರಡು ದಿನ ಪಿಂಡ ಕೊಡುತ್ತಿರಬೇಕು. ಆ ಪಿಂಡವೇ ಅದಕ್ಕೆ ಪ್ರೀತಿಯನ್ನುಂಟು ಮಾಡುವ ಬುತ್ತಿಯಾಗಿರುತ್ತದೆ. ಹನ್ನೆರಡು ದಿನಗಳಾದ ಮೇಲೆ ಆ ಪ್ರೇತವನ್ನು ಪ್ರೇತಪುರಕ್ಕೆ ಕರೆದುಕೊಂಡು ಹೋಗುತ್ತಾರೆ. ಮರಣ ಹೊಂದಿದ ದಿನದಿಂದ ಹನ್ನೆರಡು ದಿನಗಳವರೆಗೆ ಆ ಪ್ರೇತವು ಮನೆಯಲ್ಲಿ ಮಡದಿ, ಮಕ್ಕಳನ್ನು ನೋಡುತ್ತ ಇರುತ್ತದೆ. ಆದ್ದರಿಂದ ನೆಲಕ್ಕೆ ತಗಲದಂತೆ ಅಂತರಾಳದಲ್ಲಿಯೇ ಎತ್ತರದ ಮೇಲೆ ಎಲ್ಲಿಯಾದರೂ ಪ್ರೇತನಿಗಾಗಿ ಹಾಲನ್ನು ಹತ್ತು ದಿನವೂ ಇಟ್ಟಿರಬೇಕು. ಅದು ಆ ಪ್ರೇತದ ದಾಹ, ದಣಿವು, ದಾರಿಯ ಆಯಾಸವನ್ನು ಪರಿಹರಿಸುತ್ತದೆ. ಅನಂತರ ಹನ್ನೊಂದನೆಯ ದಿನ, ಹನ್ನೊಂದು ಜನ ದಾಯಾದಿಗಳಿಗೆ, ಗೋತ್ರದ ಬ್ರಾಹ್ಮಣರಿಗೆ ಹೇಳಿ ಸೂತಕ ಕಳೆದ ಮೇಲೆ ಊಟಮಾಡಬೇಕು. ಹನ್ನೆರಡನೆಯ ದಿನವೂ ಅದೇ ರೀತಿ ದ್ವಿಜರಿಗೆ ಭೋಜನ ಮಾಡಿಸಬೇಕು. ಮತ್ತು ಏಕೋದ್ದಿಷ್ಟ ಶ್ರಾದ್ಧವನ್ನೂ ಮಾಡಬೇಕು. ಈ ಏಕೋದ್ದಿಷ್ಟ ಶ್ರಾದ್ಧದಲ್ಲಿ ವಿಶ್ವದೇವತೆಗಳು ಬಿಟ್ಟು ಆವಾಹನ ಅಗ್ನಿಹೋಮ ಮುಂತಾದವುಗಳನ್ನು ಮಾಡಬೇಕು. ಒಂದೇ ದರ್ಭೆಯಿಂದ ಪವಿತ್ರಮಾಡಿ, ಒಂದೇ ಅರ್ಘ್ಯ, ಒಂದೇ ಪಿಂಡ ಇಡಬೇಕು. 'ಉಪತಿಷ್ಠತಾಂ' ಎಂದು ಹೇಳಿ ಎಳ್ಳುನೀರುಕೊಡಬೇಕು. 'ಸ್ವದಿತಂ' ಎಂದು ದ್ವಿಜರ ಕೈಯಲ್ಲಿ ನೀರನ್ನು ಬಿಡಬೇಕು. ನೀರುಬಿಡುವಾಗ **'ಅಭಿರಮ್ಯತಾಂ'** ಎಂದು ಹೇಳಬೇಕು. ಉಳಿದ ಕಾರ್ಯಗಳನ್ನೆಲ್ಲ ಹಿಂದೆ ಮಾಸಿಕ ಶ್ರಾದ್ಧಗಳಲ್ಲಿ ಹೇಳಿದಂತೆ ಮಾಡಬೇಕು. ಈ ರೀತಿ ಪ್ರತಿ ತಿಂಗಳೂ ಶ್ರಾದ್ಧಮಾಡಬೇಕು. ಸೂತಕ ಕಳೆದ ಮರುದಿನ ವಿಧಿಪೂರ್ವಕವಾಗಿ ಹಾಸಿಗೆಯನ್ನು ದಾನ ಕೊಡಬೇಕು. ಬಂಗಾರದ ಪ್ರತಿಮೆ ಮಾಡಿಸಿ ಅದನ್ನು ಹೂ, ಬಟ್ಟೆಗಳಿಂದ ಸಿಂಗರಿಸಿ, ಹಣ್ಣು ಹಂಪಲುಗಳನ್ನು ಮಂದಿಟ್ಟು, ಹಾಸಿಗೆ ಮೇಲೆ ಕೂಡಿಸಿ ದ್ವಿಜದಂಪತಿಗಳನ್ನು ಅಲಂಕರಿಸಿ, ಪೂಜಿಸಬೇಕು. ಶಯ್ಯೆಯ ಮೇಲೆ ಕುಳಿತಾಗ ದ್ವಿಜದಂಪತಿಗಳಿಗೆ ಮಧುಪರ್ಕಕೊಟ್ಟು ಹಾಲು, ಮೊಸರು ಪಾತ್ರೆ ಸಹಿತವಾಗಿ ಅರ್ಪಿಸಿ ಅರ್ಘ್ಯನೀಡಬೇಕು. ಹಿಮಾಚಲ ಹಾಗೂ ಮೇರು ಪರ್ವತದ ಸೀಮೆಯ ಜನರು ಪಿತೃಭಕ್ತಿಯಿಂದ ಮೃತಮನುಷ್ಯನ ಹಣೆಯ ಮೇಲಿನ ಅತಿ ಚಿಕ್ಕದಾದ ಒಂದು ಮೂಳೆ ತೆಗೆದುಕೊಂಡು ಅದನ್ನು ಕುಟ್ಟಿ ಪುಡಿಮಾಡಿ, ಅದನ್ನು ಹಾಲಿನಲ್ಲಿ ಸೇರಿಸಿ ಶಯ್ಯಾದಾನ ತೆಗೆದುಕೊಳ್ಳುವ ಬ್ರಾಹ್ಮಣರಿಗೆ ಕುಡಿಸುತ್ತಾರೆ. ಆದುದರಿಂದ ಇಂಥ ಶಯ್ಯಾದಾನವು ನಿಷಿದ್ಧವಾಗಿದೆ ತೆಗೆದುಕೊಳ್ಳುವವರಿಗೆ, ಅದನ್ನು ದ್ವಿಜರು ತೆಗೆದುಕೊಳ್ಳಬಾರದು. ಅವರಿಗೆ ಮತ್ತೆ ದ್ವಿಜ ಸಂಸ್ಕಾರ ಮಾಡಬೇಕಾಗುವುದು.

ಆದುದರಿಂದ ವೇದಶಾಸ್ತ್ರಗಳಲ್ಲಿ ಈ ತರಹದ ಶಯ್ಯಾದಾನ ಗ್ರಹಣವನ್ನು ನಿಂದಿಸಿದ್ದಾರೆ. ಇಂಥ ಹಾಸಿಗೆ ದಾನ ತೆಗೆದುಕೊಂಡವನು ನರಕಕ್ಕೆ ಹೋಗುತ್ತಾನೆ. ದಾನ ತೆಗೆದುಕೊಂಡ ಬಳಿಕ ದಂಪತಿಗಳು ಮಲಗಿಕೊಂಡ ಆ ಶಯ್ಯೆಯನ್ನು ಮುಟ್ಟಿದವನೂ ನರಕಕ್ಕೆ ಹೋಗುತ್ತಾರೆ ಎಂದು ಹೇಳಲಾಗಿದೆ.

ಸತ್ಪುತ್ರನಾದವನು ಮೃತನನ್ನು ಉದ್ದೇಶಿಸಿ, ಕಪಿಲಾ ಗೋದಾನ ಮಾಡಬೇಕು. ಮೃತನ ಹೆಸರಿನಿಂದ ಎತ್ತನ್ನು ಬಿಡಬೇಕು. ವಿಧಿಪೂರ್ವಕವಾಗಿ ಶ್ರಾದ್ಧಮಾಡಿ ಎಲ್ಲ ವಿಧದ ದಾನಧರ್ಮಗಳನ್ನು ನೀಡಬೇಕು. ಉದಕುಂಭವನ್ನು ಯೋಗ್ಯ ದ್ವಿಜನಿಗೆ ಭಕ್ಷ್ಯಭೋಜ್ಯಗಳಿಂದ ಊಟಮಾಡಿಸಿ ತಿಲೋದಕ ಸಹಿತ ದಾನಕೊಡಬೇಕು. ಮರಣ ಹೊಂದಿದ ಒಂದು ವರ್ಷವಾದ ಕೂಡಲೇ ಸಪಿಂಡೀಕರಣ ಮಾಡಬೇಕು. ಸಪಿಂಡೀಕರಣವಾದ ಮೇಲೆ ಮೃತ ಮನುಷ್ಯನು ಪಾರ್ವಣ ಶ್ರಾದ್ಧಕ್ಕೆ ಯೋಗ್ಯನಾಗಿರುತ್ತಾನೆ. ಈ ಸಪಿಂಡೀಕರಣದಲ್ಲಿ ವಿಶ್ವದೇವತೆಗಳನ್ನು, ಪಿತೃಗಳನ್ನೂ, ಪ್ರೇತವನ್ನೂ ಬೇರೆ ಬೇರೆಯಾಗಿ ಆಹ್ವಾನಿಸಬೇಕು. ನಾಲ್ಕು ಅರ್ಘ್ಯಪಾತ್ರೆ ಇಟ್ಟು ಅವುಗಳಲ್ಲಿ ಗಂಧ, ನೀರು, ಎಳ್ಳುಗಳನ್ನು ಹಾಕಬೇಕು. ಅರ್ಘ್ಯ ಕೊಡುವಾಗ ಪಿತೃಪಾತ್ರೆಯಲ್ಲಿ ಪ್ರೇತ ಪಾತ್ರದ ನೀರನ್ನು ಹಾಕಬೇಕು. ಅದರಂತೆ ಸಂಕಲ್ಪಮಾಡಿ ನಾಲ್ಕು ಪಿಂಡಗಳನ್ನು ಇಡಬೇಕು. 'ಏಸಮಾನಾ' ಎಂಬ ಎರಡು ಮಂತ್ರಗಳಿಂದ ಪ್ರೇತ ಪಿಂಡದ ಅನ್ನವನ್ನು ಉಳಿದ ಮೂರು ಪಿಂಡಗಳಿಗೆ ಹಂಚಿ ಹಾಕಬೇಕು. ಇದೇ ರೀತಿ ಅರ್ಘ್ಯವನ್ನು ಹಂಚಬೇಕು. ಹೀಗೆ ನಾಲ್ಕನೆಯವನಾದ ಪ್ರೇತವನ್ನು ಪಿತೃತ್ವವನ್ನು ಹೊಂದುತ್ತಾನೆ. ಈ ವಿಧಿಯಿಂದ ಅಗ್ನಿಷ್ವಾತ್ತಾದಿ ಪಿತೃಗಣದಲ್ಲಿ ಅವನಿಗೆ ಉತ್ತಮಸ್ಥಾನ ದೊರಕುತ್ತದೆ. ಸಪಿಂಡೀಕರಣವಾದ ಮೇಲೆ ಪ್ರೇತನಾದ ಮೃತ ಮನುಷ್ಯನಿಗೆ ಬೇರೆ ಅರ್ಘ್ಯದಾನವಿಲ್ಲ. ಏಕೆಂದರೆ ಅವನು ಪಿತೃಗಣದಲ್ಲಿಯೇ ಸೇರಿ ಹೋಗಿರುತ್ತಾನೆ. ಅನಂತರ ಪಿತೃಗಳ ಸಾಲಿನಲ್ಲಿ ಸೇರಿದ ಅವನಿಗೆ ಪಿತ್ರೋದ್ದೇಶವಾಗಿಯೇ ತಿಲೋದಕ ಪಿಂಡ ಮುಂತಾದವುಗಳಲ್ಲಿ ತ್ರಿಪಿಂಡ ಶ್ರಾದ್ಧವನ್ನು ಮಾಡಬೇಕು. ಮರಣ ಹೊಂದಿದ ದಿನದಲ್ಲಿ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು.

**ಭೀಷ್ಮ** :- ಹವ್ಯ ಎಂದರೆ ದೇವತೆಗಳಿಗೆ ಅಗ್ನಿಯಲ್ಲಿ ನೀಡುವ ಅನ್ನ, ಕವ್ಯ ಎಂದರೆ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧದಲ್ಲಿ ನೀಡುವ ಅನ್ನ. ಈ ಹವ್ಯ ಕವ್ಯಗಳನ್ನು ದೇವ ಪಿತೃಗಳಿಗೆ ಜನರು ಕೊಡುವ ಬಗೆ ಹೇಗೆ? ಶ್ರಾದ್ಧದಲ್ಲಿ ಅವರ ಸಂತತಿಯವರು ಕವ್ಯವನ್ನು ನೀಡಿದರೂ ಪಿತೃಲೋಕದಲ್ಲಿ ಅದನ್ನು ತೆಗೆದುಕೊಳ್ಳುವವರು ಯಾರು? ಭೂಲೋಕದಲ್ಲಿ ಅಗ್ನಿಯಲ್ಲಿ ಹೋಮಮಾಡಿದರೆ ಅಥವಾ ಬ್ರಾಹ್ಮಣರಿಗೆ ಭೋಜನಮಾಡಿಸಿದರೆ ಮೃತನಾದವನಿಗೆ ಮುಟ್ಟುವದೆಂತು? ಇದೆಲ್ಲವನ್ನು ನನಗೆ ವಿವರಿಸಿ ಹೇಳಬೇಕು.

**ಪುಲಸ್ತ್ಯ** :- ಪಿತೃಗಳೆಲ್ಲರೂ ವಸು ರೂಪರು, ಪಿತಾಮಹರು ರುದ್ರರೂಪರೂ, ಪ್ರಪಿತಾಮಹರು ಆದಿತ್ಯಸ್ವರೂಪರು ಎಂದು ವೇದದಲ್ಲಿ ಹೇಳಿದೆ. ಹವ್ಯ ಕವ್ಯಗಳು ಪಿತೃಗಳಿಗೆ ಮುಟ್ಟಬೇಕಾದರೆ ಅವರ ನಾಮ, ಗೋತ್ರಗಳೇ ಪ್ರಾಪಕವಾಗಿರುತ್ತವೆ. ಶ್ರಾದ್ಧದಲ್ಲಿ ಶ್ರದ್ಧೆಯಿಂದ ಉಚ್ಚರಿಸಿದ ಮಂತ್ರಗಳ ಪ್ರಭಾವದಿಂದ ಆ ಹವ್ಯಕವ್ಯಗಳು ಆ ಶ್ರಾದ್ಧದಲ್ಲಿ ಉಚ್ಚರಿಸಿದ ನಾಮ, ಗೋತ್ರದ ಪಿತೃಗಣದ ಒಡೆತನವನ್ನು ಸರಿಯಾಗಿ

ನಿರ್ವಹಿಸುವರು. ನಾಮಗೋತ್ರಗಳನ್ನು ಆಯಾ ಪಿತೃಗಳಿಗೆ ಸರಿಯಾಗಿ ಮುಟ್ಟಿಸುವ ಏರ್ಪಾಡನ್ನು ಅವರು ಮಾಡಿರುತ್ತಾರೆ. ಆ ಹೆಸರಿನ ಪಿತೃಗಳು ಯಾವ ಯಾವ ದೇಶದಲ್ಲಿ ಯಾವ ಯಾವ ಯೋನಿಯಲ್ಲಿ ಇರುವರೆಂಬುದು ಆ ಪಿತೃಗಣಾಧೀಶರಿಗೆ ತಿಳಿದಿರುವುದರಿಂದ ಅವರಿದ್ದಲ್ಲಿಯೇ ಆ ಶ್ರಾದ್ಧನ್ನವು ಮೃತರಾದ ಪಿತೃಗಳು ಯಾವುದೇ ಯೋನಿಯಲ್ಲಿದ್ದರೂ ಆಯಾ ಯೋನಿಗೆ ಉಚಿತವಾದ ರುಚಿಯಾದ ಆಹಾರವಾಗಿ ಬಂದು ಒದಗಿ ಅವರನ್ನು ಸಂತೋಷಪಡಿಸುತ್ತದೆ. ಶ್ರಾದ್ಧಮಾಡುವವನ ತಾಯಿ ತಂದೆಗಳು ಪುಣ್ಯಜೀವಿಗಳಾಗಿದ್ದು ಒಂದು ವೇಳೆ ಸ್ವರ್ಗದಲ್ಲಿಯೇ ಇದ್ದರೆ ಮಗನು ಕೊಟ್ಟ ಶ್ರಾದ್ಧವು ಅಮೃತವಾಗಿ ಮಾರ್ಪಟ್ಟು ಸ್ವರ್ಗದಲ್ಲಿ ಇರುವ ಪಿತೃಗಳನ್ನು ಸಂತೋಷಪಡಿಸುತ್ತದೆ. ದುರ್ದೈವದಿಂದ ದೈತ್ಯರಾಗಿ ಹುಟ್ಟಿದರೆ ಅಲ್ಲಿ ಅವರಿಗೆ ಇಷ್ಟವಾದ ಭೋಗಾನುರಾಗಗಳನ್ನು ಪೂರೈಸಿ ಆನಂದವನ್ನುಂಟುಮಾಡುತ್ತದೆ. ಮೃತ ತಾಯಿ ತಂದೆಗಳು ಪಶುವಾಗಿ ಹುಟ್ಟಿದರೆ ಮಗನು ನೀಡಿದ ಶ್ರಾದ್ಧಾನ್ನವು ಹಸಿರು ಹುಲ್ಲಾಗಿ ಆ ಪಶುವಿನ ಹಸಿವನ್ನು ಹಿಂಗಿಸುತ್ತದೆ. ಯಕ್ಷರಿಗೆ ಪಾನವಾಗಿ, ರಾಕ್ಷಸರಿಗೆ ಮಾಂಸವಾಗಿ, ದಾನವರಿಗೆ ಮದ್ಯವಾಗಿ, ಪ್ರೇತರಿಗೆ ರಕ್ತವಾಗಿ, ಮಾನವರಿಗೆ ಅನ್ನಪಾನಗಳಾಗಿ, ಮಗನು ಕೊಟ್ಟ ಶ್ರಾದ್ಧಾನ್ನವು ಸಂತೋಷ ಪಡಿಸುತ್ತದೆ. ಸ್ತ್ರೀಯಾಗಿದ್ದರೆ ರತಿ ಶಕ್ತಿ ಕೊಡುತ್ತದೆ. ರೂಪ, ಆರೋಗ್ಯ, ಭೋಗ ಭಾಗ್ಯಗಳನ್ನು ತನ್ನ ತಾಯಿ ಇದ್ದಲ್ಲಿ ಮಗನ ಶ್ರಾದ್ಧವು ಒದಗಿಸುತ್ತದೆ. ಈ ಶ್ರಾದ್ಧ ವಿಧಿಯಿಂದ ಶ್ರಾದ್ಧಮಾಡಿದವನಿಗೆ ಆಯುಷ್ಯ, ಸಂತಾನ, ಸಂಪತ್ತು, ಸ್ವರ್ಗ, ಮೋಕ್ಷ ಕೊನೆಗೆ ಬ್ರಹ್ಮಪದ ಪ್ರಾಪ್ತಿ ಮುಂತಾಗಿ ವಿವಿಧ ಫಲಗಳು ಆಗುತ್ತವೆ. ಈ ಶ್ರಾದ್ಧದಿಂದ ಪೂರ್ವಕಾಲದಲ್ಲಿ ಕೌಶಿಕನ ಮಕ್ಕಳು ಐದು ಜನ್ಮಗಳಿಂದ ಬ್ರಹ್ಮಪ್ರಾಪ್ತಿಯನ್ನು ಮಾಡಿಕೊಂಡರು ಎಂದು ಕೇಳಿದ್ದೇನೆ.

**ಭೀಷ್ಮ** :- ಕೌಶಿಕನ ಮಕ್ಕಳು ಪಂಚ ಜನ್ಮಗಳಿಂದ ದಿವ್ಯವಾದ ಯೋಗ ಸಾಧನವನ್ನು ಹೇಗೆ ಮಾಡಿಕೊಂಡರು ? ಅವರ ಕರ್ಮಕ್ಷಯ ಆದುದು ಎಂತು ?

**ಪುಲಸ್ತ್ಯ** :- ಕುರುಕ್ಷೇತ್ರದಲ್ಲಿ ಧರ್ಮಾತ್ಮನಾದ ಕೌಶಿಕನೆಂಬ ಮಹರ್ಷಿ ಇದ್ದನು. ಆವನಿಗೆ ಸ್ವಸೃಪ, ಕ್ರೋಧನ, ಹಿಂಸ್ರ, ಪಿಶುನ, ಕವಿ, ವಾಗ್ದುಷ್ಟ, ಪಿತೃವರ್ತಿ ಎಂದು ಏಳು ಜನ ಮಕ್ಕಳಿದ್ದರು. ಇವರೆಲ್ಲರ ಸ್ವಭಾವವು ಅವರವರ ಹೆಸರಿಗೆ ತಕ್ಕಂತೆಯೇ ಇದ್ದಿತು. ಇವರು ಏಳು ಜನರೂ ಗರ್ಗಮುನಿಯ ಶಿಷ್ಯರು. ಕೆಲ ದಿನಗಳ ಬಳಿಕ ಗರ್ಗಮುನಿಯು ಮರಣ ಹೊಂದಿದನು. ಅನಂತರ ಆ ದೇಶದಲ್ಲಿ ಭೀಕರಕ್ಷಾಮ ತಲೆದೋರಿತು. ಮಳೆಯಿಲ್ಲದೆ ದೇಶದಲ್ಲೆಲ್ಲ ಭೀಕರ ಬರಗಾಲ ಉಂಟಾಗಿ ಜನರೆಲ್ಲರೂ ಹೆದರಿ ಹೌಹಾರಿದರು. ಕೌಶಿಕನ ಮಕ್ಕಳು ಗುರು ಗರ್ಗಾಚಾರ್ಯನ ಅಪ್ಪಣೆಯಂತೆ ಹಸುವನ್ನು ಕಾಯಲು ಕಾಡಿಗೆ ಹೋಗಿದ್ದರು. ಅಡವಿಯಲ್ಲಿ ಅಲೆಯುವಾಗ ಅವರಿಗೆ ಭಯಂಕರ ಹಸಿವೆ ಆಯಿತು. ಹಸಿವೆಯನ್ನು ತಾಳದೆ ಅವರು ಬುದ್ಧಿಗೆಟ್ಟರು. ತಾವು ಕಾಯುವ ಹಸುವನ್ನೇ ಕೊಂದು ತಿನ್ನಬೇಕೆಂಬ ನಿರ್ಣಯಯಕ್ಕೆ ಬಂದರು. ಆ ಸಹೋದರರ ಈ ಘೋರ ವಿಚಾರವನ್ನು ಕೇಳಿ ಕೊನೆಯವನಾದ ಪಿತೃವರ್ತಿ ಎಂಬ ಕನಿಷ್ಠ ಬಂದು ತನ್ನ ಸಹೋದರರಿಗೆ ಸಲಹೆ ನೀಡಿದನು. ''ನಾವೆಲ್ಲರೂ ಹಸಿವೆಯಿಂದ ಕಂಗಾಲಾಗಿ ಈ ಗೋವನ್ನು ಕೊಲ್ಲುವದು ಅನಿವಾರ್ಯವಾಗಿದೆ. ಆದರೆ ಇದನ್ನು ಶ್ರಾದ್ಧ ರೂಪವಾಗಿ

ಉಪಯೋಗಿಸೋಣ. ಈ ಹಸುವನ್ನು ಕೊಂದು ಇದರ ಮಾಂಸದಿಂದ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡಿ ಪಿತೃಶೇಷವೆಂದು ಆ ಮಾಂಸವನ್ನು ತಿಂದರೆ ನಮಗೆ ಪಾಪ ಬರುವುದಿಲ್ಲ. ಈ ಶ್ರಾದ್ಧ ಕಾರ್ಯವು ಘೋರ ಪಾಪದಿಂದ ನಮ್ಮನ್ನು ಉಳಿಸುತ್ತದೆ.'' ಕಿರಿಯ ತಮ್ಮನ ಸೂಚನೆಯನ್ನು ಹಿರಿಯ ಅಣ್ಣಂದಿರೆಲ್ಲರೂ ಅನುಮೋದಿಸಿದರು. ಆಗ ಪಿತೃವರ್ತಿಗೆ ಸಮಾಧಾನವಾಯಿತು. ಅವರು ಕೊಂದ ಆ ಹಸುವನ್ನು ಅವನು ಶ್ರಾದ್ಧಕ್ಕಾಗಿ ಉಪಯೋಗಿಸಿದನು. ಸ್ವಯಂ ತಾನೆ ತನ್ನ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡಿದನು. ಇಬ್ಬರು ಅಣ್ಣಂದಿರನ್ನು ದೇವಸ್ಥಾನ ದಲ್ಲಿಯೂ, ಮೂವರನ್ನು ಪಿತೃಸ್ಥಾನದಲ್ಲಿಯೂ ನಿಲ್ಲಿಸಿ ಉಳಿದ ಒಬ್ಬನನ್ನು ಅತಿಥಿಯನ್ನಾಗಿ ಮಾಡಿ ವಿಧಿಪೂರ್ವಕವಾಗಿ ತಾನೇ ನಿಂತು ಎಲ್ಲ ಶ್ರಾದ್ಧ ಮಂತ್ರಗಳನ್ನು ಉಚ್ಚರಿಸಿ, ಭಕ್ತಿಯಿಂದ ಪಿತೃಗಳನ್ನು ನೆನೆಯುತ್ತ ಶ್ರಾದ್ಧ ಕಾರ್ಯವನ್ನು ಮಾಡಿದನು.

ಅನಂತರ ಆ ಏಳೂ ಜನ ಕೌಶಿಕ ಕುಮಾರರು ಗರ್ಗಾಚಾರ್ಯರ ಬಳಿಗೆ ಹೋಗಿ ಕರುವನ್ನು ಗುರುಗಳಿಗೆ ಒಪ್ಪಿಸಿ, ''ಗುರುಗಳೆ, ಹುಲಿಯು ಬಂದು ನಿಮ್ಮ ಹಸುವನ್ನು ಕೊಂದುಬಿಟ್ಟಿತು. ಕರುವನ್ನು ಮಾತ್ರ ನಾವು ತಂದಿದ್ದೇವೆ. ತೆಗೆದುಕೊಳ್ಳಿ'' ಎಂದು ಹೇಳಿ ಕರುವನ್ನು ಒಪ್ಪಿಸಿದರು. ಯಾವ ಶಂಕೆ ಆಲೋಚನೆ ಇಲ್ಲದೆ ನಿರ್ಭಯವಾಗಿ ನುಡಿದ ಈ ವಚನ ಕೇಳಿ ಗುರುಗಳಿಗೂ ಅವರ ಬಗೆಗೆ ಸಂದೇಹ ಬರಲಿಲ್ಲ. ಅಂತೂ ತಪಸ್ವಿಗಳಾದ ಏಳುಜನ ಬ್ರಾಹ್ಮಣ ಕುಮಾರರು ಹಸಿವೆಯ ಉಪದ್ರವವನ್ನು ತಾಳದೆ, ಇಂಥ ಕ್ರೂರಕರ್ಮ ಮಾಡಿದ್ದೇನೊ ನಿಜ. ಆದರೆ ಒಂದು ಮಹತ್ವದ ವೇದ ವಚನವನ್ನು ಹಿಡಿದುಕೊಂಡು, ವೇದೋಕ್ತ ರೀತಿಯಲ್ಲಿಯೇ ವಿಹಿತವಾದ ಶ್ರಾದ್ಧವನ್ನು ಮಾಡಿ, ಪಿತೃಗಳ ಉದ್ದೇಶದಿಂದ ಆ ಹಸುವನ್ನು ಕೊಂದು ತಮ್ಮ ಹಸಿವನ್ನು ಹಿಂಗಿಸಿಕೊಂಡರು. ಇದರಿಂದ ಅವರಿಗೆ ಪುಣ್ಯ ಪಾಪ ಎರಡೂ ಪ್ರಾಪ್ತವಾದವು. ಗೋಹತ್ಯೆ ಹಾಗೂ ಗುರುಗಳ ಎದುರು ಸುಳ್ಳು ಹೇಳಿದ ಪಾಪದಿಂದ ಅವರು ಆ ತಪಸ್ವಿ ಬ್ರಾಹ್ಮಣ ಜನ್ಮದಿಂದ ಪತಿತರಾಗಿ ಮರಣ ಹೊಂದಿದರು.

ಆ ಪಾಪದ ಫಲವಾಗಿ ಅವರಿಗೆ ಬೇಡರ ಜನ್ಮವು ಬಂದಿತು. ದಶಪುರದಲ್ಲಿ ಆ ಏಳು ಜನರು ವ್ಯಾಧರಾಗಿ ಹುಟ್ಟಿದರು. ಪಿತೃಗಳ ಮೇಲಿನ ಭಕ್ತಿಯಿಂದ ಹಾಗೂ ವೈದಿಕ ಕರ್ಮ ಕಾಂಡದಲ್ಲಿ ಅವರು ಜನ್ಮಾಂತರದಲ್ಲಿ ಇರಿಸಿದ ಸಕ್ರಿಯ ಶ್ರದ್ಧೆಯಿಂದ ಹಾಗೂ ಶ್ರಾದ್ಧದಿಂದ ಈ ವ್ಯಾಧ ಜನ್ಮದಲ್ಲಿಯೂ ಅವರಿಗೆ ಜಾತಿಗ್ಮರತ್ವ ಉಂಟಾಯಿತು. ಜನ್ಮಾಂತರದ ನೆನಪು ಅಚ್ಚಳಿಯದೆ ಉಳಿದಿತ್ತು. ಕಳೆದ ಜನ್ಮದಲ್ಲಿ ತಾವು ಮಾಡಿದ ಘೋರವಾದ ಗುರುವಿನ ಗೋಹತ್ಯಾ ಪಾತಕವು ಅವರ ಹೃದಯದಲ್ಲಿ ಹಸಿಯಾಗಿಯೇ ಉಳಿದಿತ್ತು. ಆದರಿಂದ ಅವರಿಗೆ ಈ ಜನ್ಮದಲ್ಲಿ ವಿವೋಕೋದಯವಾಗಿ ವೈರಾಗ್ಯ ಹುಟ್ಟಿತು. ಈ ದೇಹವು ಅಶಾಶ್ವತ ಎಂಬ ಜ್ಞಾನವೂ, ಗೋಹತ್ಯೆ ಹಾಗೂ ಗುರುಗಳ ಎದುರು ಮಿಥ್ಯಾ ಭಾಷಣದಿಂದ ನಾವು ಈ ಅಧಃಪಾತವನ್ನು ಹೊಂದಿದ್ದೇವೆ ಎಂಬ ಅರಿವೂ ನಿಚ್ಚಳವಾಗಿ ಉದಿಸಿತ್ತು. ಆದುದರಿಂದ ಆ ಏಳೂ ಜನ ಬೇಡರ ಮಕ್ಕಳು ತಮ್ಮ ಜಾತಿಗೆ ಉಚಿತವಾದ ವ್ಯಾಧವೃತ್ತಿ- ಅರ್ಥಾತ್-ಹಿಂಸೆ, ಕಳವು, ಸುಲಿಗೆ ಮೊದಲಾದವುಗಳನ್ನೆಲ್ಲ ಬಿಟ್ಟುಬಿಟ್ಟರು. ವಿರಕ್ತರಾಗಿ ಧರ್ಮಾನುಷ್ಠಾನವನ್ನು ಕೈಕೊಂಡರು. ಪವಿತ್ರವಾದ ಒಂದು ದಿವ್ಯ ತೀರ್ಥದಲ್ಲಿ ಬಂದು ನಿಂತರು. ಆಹಾರ-ವಿಹಾರ ತೊರೆದರು. ಉಪವಾಸ ನಿಂತು ದೇವರ ಧ್ಯಾನಮಾಡ-

ತೊಡಗಿದರು. ಜನರೆಲ್ಲರೂ ಈ ವ್ಯಾಧ ತರುಣರ ತೀಕ್ಷ್ಣ ಜಪ-ತಪೋನುಷ್ಠಾನ, ಧರ್ಮ ಕರ್ಮಗಳನ್ನು ಕಂಡು ನಿಬ್ಬೆರಗಾಗಿ ನೋಡತೊಡಗಿದರು. ಹೀಗೆ ಬಹು ದಿನಗಳವರೆಗೆ ನಿರಾಹಾರದಿಂದ ದೇಹವನ್ನು ಸವೆಸಿ, ಆ ಪುಣ್ಯತೀರ್ಥದ ದಂಡೆಯ ಮೇಲೆಯೇ ಪ್ರಾಣ ಪರಿತ್ಯಾಗ ಮಾಡಿದರು ಆ ಏಳೂ ಜನ ಬೇಡ ಜಾತಿಯ ಯುವಕರು.

ಅನಂತರ ಅವರಿಗೆ ಜಿಗರೆಯ ಜನ್ಮವು ಬಂದಿತು. ಕಾಲಂಜರ ಬೆಟ್ಟದಲ್ಲಿ ಏಳು ಹರಿಣಗಳಾಗಿ ಹುಟ್ಟಿದರು. ಆ ಬ್ರಾಹ್ಮಣ ಕುಮಾರರಿಗೆ ಈಗಲೂ ಹಿಂದಿನ ಜಾತಿ-ಜನ್ಮಗಳ ಸ್ಮರಣೆಗಳಿದ್ದವು. ಆದರಿಂದ ಈ ಮೃಗ ಜನ್ಮದಲ್ಲಿಯೂ ಅವರು (ಆ ಜಿಗರೆಗಳು) ಆಟ ಊಟಗಳನ್ನು ತೊರೆದವು. ಜನ್ಮಾಂತರದಲ್ಲಿ ಮಾಡಿದ ಶ್ರಾದ್ಧಕರ್ಮದ ಪುಣ್ಯ ಪ್ರಭಾವದಿಂದ ಅವುಗಳಿಗೆ ದಿವ್ಯ ಜ್ಞಾನೋದಯವಾಗಿದ್ದಿತು. ಯೋಗ ಸಮಾಧಿಯಿಂದಲೇ ಆ ಏಳು ಮೃಗ ಯೋಗಿಗಳು ತಮ್ಮ ದೇಹ ತ್ಯಾಗ ಮಾಡಿದವು.

ಅನಂತರ ಅವರು ಮಾನಸ ಸರೋವರದಲ್ಲಿ ಚಕ್ರವಾಕ ಪಕ್ಷಿಗಳಾಗಿ ಜನಿಸಿದರು. ವೈರಾಗ್ಯ ಮಾನಸರಾದ ಆ ಏಳೂ ಚಕ್ರವಾಕ ಹಕ್ಕಿಗಳು ಮಾನಸ ಸರೋವರದ ತೀರದಲ್ಲಿ ಸಪ್ತ ಯೋಗಿಗಳಂತೆ ತಪೋನುಷ್ಠಾನ ಕೈಕೊಂಡವು. ಯೋಗ ಸಾಧನೆಯಿಂದ ಸಪ್ತರ್ಷಿಗಳಂತೆ ಕಂಗೊಳಿಸುವ ಆ ಮಾನಸ ಯೋಗಿಗಳಿಗೆ ಅವುಗಳ ಕೈಕೊಂಡ ಘೋರ ಸತ್ಕರ್ಮಾನುಷ್ಠಾನದಿಂದ ಅವು ಮಾಡುವ ಧರ್ಮ ಕಾರ್ಯಕ್ಕನುಸಾರವಾಗಿ ಬೇರೆ ಏಳು ಹೆಸರುಗಳು ಪ್ರಾಪ್ತವಾದವು. ಸುಮನ, ಕುಸುಮ, ವಸು, ಛಿದ್ರದರ್ಶಿ, ಸುದರ್ಶಿ, ಜ್ಞಾತಾ, ಜ್ಞಾನ, ಪಾರಗ-ಎಂದು ಅನ್ವರ್ಥಕವಾದ ಹೆಸರುಗಳನ್ನು ಹೊಂದಿದವು. ಈ ಏಳು ಚಕ್ರವಾಕ ಯೋಗಿಗಳು ತಮ್ಮ ತಮ್ಮ ಹಿರಿಯಲ್ಲಿ ಪ್ರೀತಿ ವಿಶ್ವಾಸ ತೋರುತ್ತ ಮಾನಸ ಸರೋವರದ ದಂಡೆಯಲ್ಲಿ ಭಗವನ್ ಮಾನಸರಾಗಿ ಧ್ಯಾನ ಯೋಗದಲ್ಲಿ ಲೀನವಾಗಿ ತಪಸ್ಸಮಾಧಿಯಲ್ಲಿ ಕುಳಿತಿದ್ದವು. ಕೈಲಾಸ ಪರ್ವತದ ಪರಿಸರ ಪ್ರಾಂತದಲ್ಲಿರುವ ಆ ಮಾನಸ ಸರೋವರ ಒಂದು ಅತ್ಯಂತ ಸುಂದರ ಸ್ಥಳ. ಅದನ್ನು ನೋಡಲಿಕ್ಕಾಗಿ ಒಂದು ದಿನ **ಅಣುಹ** ಎಂಬ ಪಾಂಚಾಲ ದೇಶದ ರಾಜಕುಮಾರ ಆಗಮಿಸಿದ. ನಿಸರ್ಗ ರಮಣೀಯವಾದ ಆ ಶೈಲ ಶೃಂಗಾಂಗಣದಲ್ಲಿದ್ದ ಈ ಸುಂದರ ಸರೋವರದ ಭೋಗ ಭೂಮಿಗೆ ಮಧುಚಂದ್ರ ವಿಹಾರಕ್ಕೆಂದು ಆಗಮಿಸಿದ. ಆ ಮಹಾರಾಜನ ಸುತ್ತಲೂ ಚೆಲುವೆಯರ ಒಂದು ತಂಡವೇ ನಕ್ಕು ನಲಿದಾಡುತ್ತಿತ್ತು. ಆ ಚಪಲೆಯರೊಂದಿಗೆ ಮಹಾರಾಜನು ವಿವಿಧ ವಿಹಾರ ವಿನೋದಗಳಿಂದ ಕ್ರೀಡೆಗೈದ. ಮಹಾರಾಜನ ಅಭೂತ ಪೂರ್ವವಾದ ಆ ಐಶ್ವರ್ಯ, ಭೋಗ, ಅನುರಾಗ, ವಿಹಾರ, ವಿಲಾಸ ಮೊದಲಾದವುಗಳನ್ನು ಕಂಡು ಸರಸ್ತೀರದ ಪುಲಿನಪೀಠದಲ್ಲಿ ತಪೋನುಷ್ಠಾನಗೈಯುತ್ತಲಿರುವ ಚಕ್ರವಾಕ ಯೋಗಿಗಳಲ್ಲಿ ಮೂವರು ಮನಸ್ಸು ಚಂಚಲವಾಯಿತು. ಅವರಲ್ಲಿ ಒಬ್ಬನಿಗೆ ಈ ಅಣುಹ ಮಹಾರಾಜನಂತೆ ತಾನೂ ಅರಸನಾಗಿ ಅಂಗನೆಯರೊಂದಿಗೆ ಲೀಲಾವಿಲಾಸ ಅನುಭವಿಸಬೇಕು ಎಂಬ ಆಶೆ ಉಂಟಾಯಿತು. ಹೀಗೆ ಇನ್ನಿಬ್ಬರಿಗೆ ಆ ರಾಜನ ಮಂತ್ರಿಗಳಂತೆ ತಾವೂ ಅಧಿಕಾರ, ದರ್ಪ, ಸುಖ, ವಿಲಾಸಗಳನ್ನು ಭೋಗಿಸಬೇಕೆಂದು ಬಯಕೆಯಾಯಿತು. ರಾಜ್ಯ, ರಾಜ, ಭೋಗ, ರಮಣೀಯ ಸ್ಥಳಗಳಲ್ಲಿ ರಮಣೀಮಣಿಯರೊಂದಿಗೆ ರತೀಕೇಳೀವಿಲಾಸ, ರಾಗಾನುರಾಗ,

ಭೋಗಾನುಭೋಗಗಳನ್ನು ಒಮ್ಮೆಯಾದರೂ ಅನುಭವಿಸುವ ಚಪಲವು ಹುಟ್ಟಿ, ಚಿತ್ತವು ಒಮ್ಮೆಲೇ ಯೋಗ ಭ್ರಷ್ಟವಾದವು. ಆ ಸಪ್ತ ಚಕ್ರವಾಕಗಳಲ್ಲಿ ಹಿಂದೆ ಬ್ರಾಹ್ಮಣ ಜನ್ಮದಲ್ಲಿ ಶ್ರಾದ್ಧಮಾಡಿದ ಪಿತೃವರ್ತಿಯು ಮತ್ತು ಅವನ ಒಬ್ಬ ಅಣ್ಣನು ಈ ರಾಜನ ಜೊತೆಗೆ ಬಂದ ಮಂತ್ರಿಗಳ ವೈಭವ, ಅಧಿಕಾರ, ಸ್ಥಾನಮಾನಗಳನ್ನು ಕಂಡು ಅದಕ್ಕಾಗಿ ಹಾತೊರೆದು ಹಂಬಲಿಸಿದ್ದರು. ಇವರಿಬ್ಬರೂ ಮತ್ತು ರಾಜನಾಗಬೇಕೆಂದು ಬಯಸಿದ ಒಬ್ಬನೂ ಹೀಗೆ ಮೂರು ಸೋದರರು ಯೋಗಾರೂಢರಾದರೂ, ಭೋಗಾಕಾಂಕ್ಷೆಯಿಂದ ಭ್ರಷ್ಟರಾಗಿ ಸಾಧನಮಾರ್ಗದಿಂದ ಚ್ಯುತರಾಗಿ ಭೂಮಿಯಲ್ಲಿ ಮರಳಿ ಹುಟ್ಟಿದರು. ರಾಜನಾಗಲು ಬಯಸಿದ ಚಕ್ರವಾಕವು ಕಾಂಪಿಲ್ಯನಗರದಲ್ಲಿ ಅದೇ ಅಣುಹ ಮಹಾರಾಜನ ಮಗನಾಗಿ ಹುಟ್ಟಿದನು. ಅವನಿಗೆ ಬ್ರಹ್ಮದತ್ತ ಎಂದು ಹೆಸರನ್ನು ಇಟ್ಟಿದ್ದರು. ತಂದೆಯ ನಂತರ ಪಾಂಚಾಲ ದೇಶಕ್ಕೆ ಅಧಿಪತಿಯಾಗಿ ಅವನು ಪಟ್ಟಾಭಿಷಿಕ್ತನಾದನು. ಮಂತ್ರಿಯಾಗಲು ಬಯಸಿದ ಇನ್ನಿಬ್ಬರು ಚಕ್ರವಾಕ ಹಕ್ಕಿಗಳು ಮಂತ್ರಿಯ ಮಕ್ಕಳಾಗಿ ಹುಟ್ಟಿದರು. ತಂದೆಯ ನಂತರ ಪುಂಡರೀಕ, ಸುಬಾಲಕ ಎಂಬ ಹೆಸರಿನ ಅವರಿಬ್ಬರೂ ಬ್ರಹ್ಮದತ್ತನ ಮಂತ್ರಿಗಳಾಗಿ ಕಾರ್ಯನಿರ್ವಹಿಸಿದರು.

ಪಾಂಚಾಲ ದೇಶದ ದೊರೆಯಾದ ಈ ಬ್ರಹ್ಮದತ್ತನು ಜನ್ಮಾಂತರದಲ್ಲಿ ಮಾಡಿದ ಶ್ರಾದ್ಧದ ಪುಣ್ಯದಿಂದಲೂ, ಪಿತೃಗಳ ಮೇಲಿನ ಭಕ್ತಿಯಿಂದಲೂ, ಯೋಗಶಾಸ್ತ್ರದಲ್ಲಿ ಮಹಾಪಂಡಿತನಾಗಿದ್ದನು. ಅವನಿಗೆ ಎಲ್ಲ ಪ್ರಾಣಿಗಳ ಮನಸ್ಸಿನಲ್ಲಿ ಇರುವದೆಲ್ಲವೂ ತಿಳಿಯುತ್ತಿತ್ತು. ಕ್ರಿಮಿ ಕೀಟ, ಪಶು ಪಕ್ಷಿ ಮುಂತಾದ ಎಲ್ಲ ಜಂತುಗಳ ಭಾವ ಭಾಷೆಗಳನ್ನು ಚೆನ್ನಾಗಿ ಅವನು ಅರಿತಿದ್ದನು. ಸುದೇವನ ಮಗಳಾದ ಸನ್ನತಿ ಎಂಬ ಸುಂದರಿಯನ್ನು ಬ್ರಹ್ಮದತ್ತ ಮಹಾರಾಜನು ಕೈ ಹಿಡಿದು ಧರ್ಮಪತ್ನಿಯನ್ನಾಗಿ ಮಾಡಿಕೊಂಡಿದ್ದನು. ಹಿಂದೆ ಬ್ರಾಹ್ಮಣ ಜನ್ಮದಲ್ಲಿ ಆ ಏಳು ಜನರೂ ಕೂಡಿ ಕೊಂದು ತಿಂದ ಹಸು ಕಪಿಲೆಯೇ ಸನ್ನತಿಯಾಗಿ ಹುಟ್ಟಿ ಬಂದಿದ್ದಳು. ಪಿತೃಕಾರ್ಯಕ್ಕಾಗಿ ಅವರು ಆ ಹಸುವನ್ನು ಉಪಯೋಗಿಸಿದ್ದರಿಂದ ಈ ಮಾನವ ಜನ್ಮದಲ್ಲಿ ಅದು ಮಹಾರಾಣಿಯಾಗಿ ಜನಿಸಿ ಬಂದಿದ್ದಿತು. ಆ ಪುಣ್ಯದಿಂದಲೇ ಆ ಸನ್ನತಿ ದೇವಿಯು ಬ್ರಹ್ಮವಾದಿನಿಯಾಗಿದ್ದಳು. ಇಂಥ ಪರಮಜ್ಞಾನಿಯಾದ ಮಡದಿಯೊಡನೆ ಬ್ರಹ್ಮದತ್ತನು ರಾಜ್ಯವನ್ನು ಆಳುತ್ತಿದ್ದನು. ಒಂದು ದಿನ ಮಹಾರಾಜನು ತನ್ನ ನೆಚ್ಚಿನ ಮಡದಿ ಸನ್ನತಿಯೊಡನೆ ಉಪವನಕ್ಕೆ ವಿಹಾರಕ್ಕೆ ತೆರಳಿದ್ದನು. ಅಲ್ಲಿ ಒಂದು ಜೋಡಿ ಇರುವೆ ದಂಪತಿಗಳ ಪ್ರೇಮ ಕಲಹವನ್ನು ನಡೆಸಿದ್ದವು. ಹೆಣ್ಣು ಇರುವೆಯು ಸಿಟ್ಟಿನಿಂದ ಬೀಗಿ ಕುಳಿತಿದ್ದಿತು. ಕಾಮಮೋಹಿತನಾದ ಗಂಡು ಇರುವೆಯು ಅದನ್ನು ಒಲಿಸಲು ಹಂಬಲಿಸುತ್ತಿತ್ತು. ಪ್ರೇಮಾತುರವಾದ ಗಂಡು ಇರುವೆಯು ಗದ್ಗದ ಕಂಠದಿಂದ ತನ್ನ ಪತ್ನಿಗೆ ಹೇಳಿತು.

''ಸುಂದರಿ, ನೀನು ನನ್ನ ಮೇಲೆ ಏಕೆ ಕುಪಿತಳಾಗಿರುವೆ ? ಮಾತನಾಡದೆ ಕೆಳಗೆ ಮುಖಹಾಕಿಕೊಂಡು ಕೂಡಲು ಕಾರಣವೇನು ? ನಾನು ಈ ಜಗತ್ತಿನಲ್ಲಿ ನಿನ್ನಂತಹ ಚೆಲುವೆಯಾದ ಇರುವೆಯನ್ನೇ ಕಾಣಲಿಲ್ಲ. ದೊಡ್ಡಬಾಯಿ, ಸಣ್ಣನಡು, ವೇಗಗತಿ, ಬಂಗಾರದಬಣ್ಣ, ಸುಂದರಮುಖ, ಮೋಹಕನಗೆ, ಮುಂತಾದ ಸ್ತ್ರೀಯರ ಲಕ್ಷಣಗಳೆಲ್ಲವೂ ನಿನ್ನಲ್ಲಿಯೇ ಇರುತ್ತವೆ. ಬೆಲ್ಲ ಸಕ್ಕರೆಗಳು ಯಾವಾಗಲೂ ನಿನ್ನ ಮುಖಕ್ಕೆ ಮೆತ್ತಿದಂತೆಯೇ

ಇರುತ್ತವೆ. ನಾನು ಉಣ್ಣದೇ ನೀನು ಉಣ್ಣುವುದಿಲ್ಲ. ನಾನು ಸ್ನಾನಮಾಡದೇ ನೀನು ಮೀಯುವುದಿಲ್ಲ. ನಾನು ಹೊರಗೆ ಹೋದರೆ ನೀನು ಕಂಗಾಲಾಗಿ ಕುಳಿತುಕೊಳ್ಳುವಿ, ನಾನು ಕುಪಿತನಾದರೆ ನೀನು ಭಯಭ್ರಾಂತಳಾಗಿ ನಿಲ್ಲುವಿ. ನಿನ್ನಂಥ ಪತಿವ್ರತೆಯರನ್ನೇ ನಾನು ಕಾಣಲಿಲ್ಲ. ಇಂಥ ಸೌಂದರ್ಯ, ಇಂಥ ಪಾತಿವ್ರತ್ಯವುಳ್ಳ ನಿನ್ನಂತಹ ಮಡದಿಯು ದೊರೆತದ್ದು ನನ್ನ ಪುಣ್ಯ. ಆದರೆ ಇಂದು ನೀನೇಕೆ ಕ್ರುದ್ಧಳಾಗಿರುವಿ ? ನನ್ನೊಡನೆ ಮಾತನಾಡುವುದಿಲ್ಲ ಏಕೆ ?'' ಇರುವೆ ಗಂಡನ ಈ ಅನುನಯದ ಮಾತು ಕೇಳಿ, ಕ್ರೋಧ ಉಕ್ಕುವ ಆ ಹೆಣ್ಣು ಇರುವೆಯು ಸಿಡಿದು ನುಡಿಯಿತು. ''ಅಡೆ-ತಡೆಯಿಲ್ಲದೇ ವೇಗದಿಂದ ಬರೀ ಮಾತನಾಡಿದರೆ ಆಯಿತೇ ? ನಿನ್ನ ಅಂತರಂಗವೆಲ್ಲವೂ ನನಗೆ ತಿಳಿದಿದೆ. ಕಡುಬಿನ ತುಣುಕನ್ನು ನೀನು ನನಗೆ ಕೊಡದೇ ಒಬ್ಬನೇ ತಿಂದುಬಿಟ್ಟೆ. ಇಷ್ಟೇ ಅಲ್ಲ ನನ್ನನ್ನು ಬಿಟ್ಟು ಮೋದಕದ ಕೆಲವು ತುಂಡುಗಳನ್ನು ಬೇರೆಯವಳಿಗೆ ಕೊಟ್ಟು ತಿನ್ನಿಸಿ ಬಂದಿರುವೆ. ಅಧಮನೇ ಈಗ ನನ್ನ ಮುಂದೆ ಬಂದು ದನಿ ಎತ್ತರಿಸಿ ಮಾತನಾಡಿ, ನಿನ್ನ ತಪ್ಪನ್ನು ಮುಚ್ಚಿಕೊಳ್ಳಲು ಶಬ್ದದ ಅಬ್ಬರದಿಂದ ಪ್ರಯತ್ನ ಮಾಡುತ್ತಲಿರುವಿ.''

**ಗಂಡು ಇರುವೆ :-** ನನ್ನಿಂದ ತಪ್ಪಾದುದು ನಿಜ. ನಾನು ಮತ್ತೊಬ್ಬ ಹೆಣ್ಣಿರುವೆಗೆ ಪ್ರೀತಿಯಿಂದ ಕಡುಬಿನ ತುಂಡನ್ನು ಒಯ್ದು ಕೊಟ್ಟದ್ದೂ ನಿಜ. ಅದಕ್ಕೆ ಕಾರಣ ಅವಳ ಮೇಲಿನ ಪ್ರೇಮದಿಂದಲ್ಲ. ಕಪ್ಪು ನೆರಳಿನಲ್ಲಿ ನನಗೆ ಚೆನ್ನಾಗಿ ಕಣ್ಣುಕಾಣದೆ ನೀನೇ ಎಂದು ಬಗೆದು ಅವಳಿಗೆ ಕಡುಬಿನ ತುತ್ತನ್ನೂ ಮೇಲೊಂದು ಮುತ್ತನ್ನೂ ಕೊಟ್ಟೆನು. ಇದರಲ್ಲಿ ನನ್ನದೇನು ತಪ್ಪು ? ತಿಳಿಯದೇ ಆದ ಈ ತಪ್ಪನ್ನು ಒಪ್ಪಿಕೊಳ್ಳುತ್ತೇನೆ. ಈ ಒಂದು ಅಪರಾಧವನ್ನು ಕ್ಷಮಿಸು. ಇನ್ನು ಮುಂದೆ ನಾನು ಹಾಗೆ ಮಾಡುವುದಿಲ್ಲ ಈಗಾದರೂ ಇದನ್ನಾದರೂ ನಿನ್ನ ಮೇಲಿನ ಪ್ರೇಮದಿಂದಲೇ ನಾನು ಹಾಗೆ ಮಾಡಿದ್ದು. ನೀನೆಂದು ತಿಳಿದೇ ಅವಳ ಹತ್ತಿರ ಹೋದದ್ದು. ನಾನು ಕ್ಷಮೆ ಕೇಳಿಕೊಂಡ ಬಳಿಕಾದರೂ ನೀನು ಕೋಪವನ್ನು ಬಿಡು. ನನ್ನ ಅಂತರಂಗ ತಿಳಿದು ಪ್ರಸನ್ನಳಾಗು. ನಿನ್ನ ಕಾಲಿಗೆ ಬೀಳುತ್ತೇನೆ. ನಿನ್ನ ಪಾದಕ್ಕೆ ಬಿದ್ದ ನನ್ನ ಮೇಲೆ ದಯೆದೋರು ನೀನು ಸಿಟ್ಟಾದರೆ ನನಗೆ ಮೃತ್ಯುವೇ ಹತ್ತಿರ ಬಂದಂತಾಗುವದು. ನೀನು ಪ್ರಸನ್ನಳಾದರೆ ನನ್ನ ಮನೋರಥಗಳೆಲ್ಲ ಸಂಪನ್ನವಾಗುವವು. ನಿನ್ನ ಮುಖವು ಪೂರ್ಣಚಂದ್ರನಿಗೆ ಸಮನಾಗಿದೆ. ಅದರ ರಸ, ರುಚಿ, ರಂಗ ಅಮೃತಕ್ಕೆ ಕಡಿಮೆಯಲ್ಲ. ಸುಂದರಿಯೇ ಕಾಮಾತುರನಾದ ನನಗೆ ಆ ಅಮೃತ ರಸವನ್ನುಪಾನಮಾಡಿಸು.'' ಪತಿ ಇರುವೆಯ ಈ ಮಾತನ್ನು ಕೇಳಿ ಹೆಣ್ಣು ಇರುವೆಯು ಪ್ರಸನ್ನವಾಯಿತು. ತನ್ನ ಗಂಡನಿಗೆ ಒಲುಮೆಯಿಂದ ಬಳಕುವ ತನ್ನ ದೇಹವನ್ನು ಅರ್ಪಿಸಿತು. ಮಹಾರಾಜ ಬ್ರಹ್ಮದತ್ತನಿಗೆ ಈ ಇರುವೆ ದಂಪತಿಗಳ ಪ್ರೇಮಕಲಹ, ಮಡದಿಯ ಸಿಟ್ಟು, ಗಂಡು ಇರುವೆಯ ಮೋಹ- ಮಮತೆ, ಅನುನಯ, ಅಂಗಲಾಚಿ ಬೇಡುವದು ಹಾಗೂ ಹೆಣ್ಣು ಇರುವೆಯು ಬಿಗುವು, ಬಿನ್ನಾಣ, ಗಾಂಭಿರ್ಯ, ವಕ್ರತೆ, ಬಿರುಸುನುಡಿ ಮುಂತಾದವುಗಳನ್ನೆಲ್ಲ ಕೇಳಿ, ಆಶ್ಚರ್ಯವೆನಿಸಿ ನಗೆಬಂದಿತು. ಅವನಿಗೆ ಎಲ್ಲ ಪ್ರಾಣಿಗಳ ಭಾಷಾ ಜ್ಞಾನವು ಪೂರ್ವ ಜನ್ಮದ ಕರ್ಮದ ಫಲವಾಗಿ ಚೆನ್ನಾಗಿ ಇದ್ದುದರಿಂದ ನಗೆ ಬಂದು ಬಿಗಿ ಹಿಡಿಯಲಾರದೆ ನಕ್ಕು ಬಿಟ್ಟನು.

**ಭೀಷ್ಮ :-** ಮುನಿಗಳೇ, ಬ್ರಹ್ಮದತ್ತ ಮಹಾರಾಜನಿಗೆ ಎಲ್ಲ ಜಂತುಗಳ ಧ್ವನಿಯ ಪರಿಚಯ, ಭಾಷೆಯ ಜ್ಞಾನ ಹೇಗೆ ಬಂದಿತು ? ಮತ್ತು ಚಕ್ರವಾಕ ಹಕ್ಕಿಗಳಾಗಿ ಹುಟ್ಟಿದ

ಆ ಏಳು ಕೌಶಿಕ ಕುಮಾರರಲ್ಲಿ ಒಂದು ಅರಸನಾಗಬೇಕೆಂದು ಆಶೆಪಟ್ಟು ಬ್ರಹ್ಮದತ್ತ ರಾಜನಾಯಿತು. ಉಳಿದೆರಡು ಹಕ್ಕಿಗಳು ಮಂತ್ರಿಪದದ ಆಶೆಯಿಂದ ಪುಂಡರೀಕ ಸುಬಾಲಕರಾಗಿ ಜನಿಸಿದರು. ಹೀಗೆ ಮೂವರು ಮರಳಿ ಮಾನವರಾಗಿ ಹುಟ್ಟಿದ ಬಳಿಕ ಉಳಿದ ನಾಲ್ಕು ಚಕ್ರವಾಕ ಯೋಗಿಗಳು ಎಲ್ಲಿ ಹುಟ್ಟಿದವು ? ಅದೆಲ್ಲವನ್ನು ಹೇಳಿರಿ.

**ಪುಲಸ್ತ್ಯ** :- ಉಳಿದ ಆ ನಾಲ್ಕು ಚಕ್ರವಾಕ ಪಕ್ಷಿಗಳು ಕೂಡ ಅದೇ ಕಾಂಪಿಲ್ಯ ನಗರದಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಅಣ್ಣ-ತಮ್ಮಂದಿರಾಗಿ ಹುಟ್ಟಿದರು. ಜನ್ಮಾಂತರದ ಸ್ಮರಣೆ ಎಂದಿನಿಂದಲೂ ಇದ್ದದ್ದೆ. ಧೃತಿಮಾನ್, ಸರ್ವದರ್ಶಿ, ವಿದ್ಯಾಚಂದ್ರ,ತಪೋಧಿಕ ಎಂಬ ಹೆಸರಿನಿಂದ ಆ ನಾಲ್ಕು ಯೋಗ ಭ್ರಷ್ಟರಾದ ಚಕ್ರವಾಕ ಯೋಗಿಗಳು ಬಡಬ್ರಾಹ್ಮಣನ ಹೊಟ್ಟೆಯಿಂದ ಹುಟ್ಟಿ ಬಂದರು ಧೃತಿಮಾನನು ಹೆಸರಿಗೆ ತಕ್ಕಂತೆ ಧೈರ್ಯಶಾಲಿ, ಸರ್ವದರ್ಶಿಯು ಎಲ್ಲವನ್ನು ಬಲ್ಲವನಾಗಿದ್ದನು. ವಿದ್ಯಾಚಂದ್ರನು ತನ್ನ ಜ್ಞಾನ ಬಲದಿಂದ ಶೋಭಿಸುತ್ತಿದ್ದನು. ತಪೋಧಿಕನು ಮಹಾತಪಸ್ವಿಯಾಗಿದ್ದನು. ಈ ನಾಲ್ವರ ತಂದೆಯು ಮಾತ್ರ ಹುಟ್ಟು ದರಿದ್ರ, ಇಂಥ ಬಡ ಕುಟುಂಬದಲ್ಲಿ ಜನಿಸಿದ ಈ ನಾಲ್ವರಿಗೂ ತಪಸ್ಸುಮಾಡುವ ಬುದ್ಧಿಉಂಟಾಯಿತು. ಅವರು ನಾಲ್ವರೂ ಕೂಡಿ ತಂದೆಯ ಬಳಿಗೆ ಬಂದು ಕೇಳಿದರು. 'ಪರಮಸಿದ್ಧಿಯನ್ನು ಪಡೆಯಲು ನಾವು ನಾಲ್ವರೂ ತಪಸ್ಸುಮಾಡಲು ನಿರ್ಧರಿಸಿದ್ದೇವೆ, ತಾವು ಅನುಮತಿ ನೀಡಬೇಕು. ಅವರ ಮಾತನ್ನು ಕೇಳಿ ಆ ಬ್ರಾಹ್ಮಣನು ನುಡಿದನು - ''ಮಕ್ಕಳೆ, ಇದೇನನ್ನು ನಡೆಸಿರುವಿರಿ ? ಅದು ಅತ್ಯಂತ ಅಧರ್ಮ, ಮುಪ್ಪಿನ ತಾಯಿ-ತಂದೆಗಳನ್ನು ಬಿಟ್ಟು ಮಕ್ಕಳು ತಪಸ್ಸಿಗೆ ಹೋಗುವುದೇ ? ಛೆ ? ಇದೆಂತಹ ಅನ್ಯಾಯ ! ಬಡತನದಲ್ಲಿ ಬೆಂದು, ದುಃಖದಿಂದ ನೊಂದು, ಸವೆದು, ಮುಪ್ಪಿನಿಂದ ಸಾಯಲಿರುವ ತಂದೆಯನ್ನು ಬಿಟ್ಟು ತಪಸ್ಸುಮಾಡಿದರೆ ನಿಮಗೇನು ಪುಣ್ಯ ಬರುವುದು ? ಇದೆಂತಹ ಧರ್ಮ ? ನೀವು ನಮ್ಮನ್ನು ಬಿಟ್ಟು ಹೋದರೆ ನಮಗೆ ಯಾರ ದಿಕ್ಕು ? ಈ ಮುಪ್ಪಿನ ಕಾಲದಲ್ಲಿ ನಿಮ್ಮ ತಾಯಿ-ತಂದೆಗಳಿಬ್ಬರೂ ಬದುಕುವದೆಂತು ?''

ತಂದೆಯ ನುಡಿಯನ್ನು ಕೇಳಿ, ಮಕ್ಕಳು ಅವರಿಗೆ ಸಮಾಧಾನ ಹೇಳಿದರು. 'ತಂದೆಯೇ, ನೀನು ಗಾಬರಿಯಾಗಬೇಡ. ನಾವು ಇಲ್ಲಿಂದ ಹೊರಡುವದಕ್ಕಿಂತ ಮೊದಲು ನಿನ್ನ ಮುಂದಿನ ಜೀವನ ಹಾಗೂ ಉಪಜೀವನದ ಸರಿಯಾದ ವ್ಯವಸ್ಥೆಮಾಡಿದ್ದೇವೆ. ನಾವು ನಿನಗೆ ಒಂದು ಶ್ಲೋಕವನ್ನು ಹೇಳಿಕೊಡುತ್ತೇವೆ. ಅದನ್ನು ನೀನು ಪ್ರಾತಃಕಾಲದಲ್ಲಿ ಪಠಿಸುತ್ತಲಿರು. ಇದನ್ನು ಕೇಳಿ ನಮ್ಮ ಈ ದೇಶದ ದೊರೆಯಾದ ಬ್ರಹ್ಮದತ್ತನು ನಿನಗೆ ವಿಪುಲವಾಗಿ ಧನವನ್ನು ಕೊಡುತ್ತಾನೆ. ಸಾವಿರ ಹಳ್ಳಿಗಳ ಒಡೆತನವನ್ನು ನಿನಗೆ ದತ್ತಿ ಕೊಡುತ್ತಾನೆ. ಅದರಿಂದ ನಿನಗೆ ಎಂದೂ ಯಾವದಕ್ಕೂ ಕೊರತೆ ಆಗುವುದಿಲ್ಲ. ಮುಪ್ಪಿನ ಕಾಲದಲ್ಲಿ ನೀನು ರಾಜವೈಭವದಿಂದ ಜೀವಿಸಿ, ಬಯಸಿದ ದಾನಧರ್ಮಗಳನ್ನು ಕೊಟ್ಟು, ಬೇಕಾದ ಯಜ್ಞಯಾಗಾದಿಗಳನ್ನುಮಾಡಿ, ಪುಣ್ಯ ಸಂಪಾದಿಸಬಹುದು. ಆಧ್ಯಾತ್ಮ ಸಾಧನ ಮಾಡಿಕೊಳ್ಳಬಹುದು ಹೀಗೆ ಹೇಳಿ ತಂದೆಯನ್ನು ಆ ನಾಲ್ವರೂ ವಿರಕ್ತರಾದ ಪುತ್ರರು ಸಮಾಧಾನಪಡಿಸಿ ಈ ಕೆಳಗಿನ ಪದ್ಯವನ್ನು ಕಲಿಸಿಕೊಟ್ಟರು.

''ಕುರುಕ್ಷೇತ್ರೇ ತುಯೋವಿಪ್ರಾ ವ್ಯಾಧಾ ದಶಪುರೇತುಯೇ
ಕಾಲಂಜರೇ ಮೃಗೀಭೂತಾಶ್ಚಕ್ರವಾಕಾಸ್ತು ಮಾನಸೇ''

ಕುರುಕ್ಷೇತ್ರದಲ್ಲಿ ಹಿಂದೆ ಬ್ರಾಹ್ಮಣರಾಗಿದ್ದ ಕೌಶಿಕ ಕುಮಾರರು ತಮ್ಮ ದುಷ್ಕೃತ್ಯದಿಂದ ಪತಿತರಾಗಿ ದಶಪುರದಲ್ಲಿ ಬೇಡರಾಗಿ ಹುಟ್ಟಿದರು. ಅನಂತರ ಕಾಲಂಜರ ಬೆಟ್ಟದಲ್ಲಿ ಅವರೇ ಚಿಗರೆಗಳಾಗಿ ಜನಿಸಿದರು. ಅನಂತರ ಮಾನಸ ಸರೋವರದಲ್ಲಿ ಚಕ್ರವಾಕ ಪಕ್ಷಿಗಳಾಗಿ ಹುಟ್ಟಿಬಂದರು. ಈ ಪದ್ಯವನ್ನು ತಂದೆಗೆ ಹೇಳಿ ಕೊಟ್ಟು ತಪಸ್ಸಿಗಾಗಿ ವನಕ್ಕೆ ನಡೆದರು. ವೃದ್ಧನಾದ ಆ ಬ್ರಾಹ್ಮಣನು ಕೂಡ ಜ್ಞಾನಿಗಳೂ ವಿರಕ್ತರೂ ಆದ ತನ್ನ ಮಕ್ಕಳ ಮಾತನ್ನು ನಂಬಿ ಈ ಪದ್ಯ ಹೇಳಿ ಹಣಗಳಿಸಲು ಹೊರಟು ನಿಂತನು. ಹಿಂದೆ ಪಾಂಚಾಲ ದೇಶದ ಅರಸನಾದ ಅಣುಹನೆಂಬ ಮಹಾರಾಜನು ಸಂತತಿಗಾಗಿ ಬ್ರಹ್ಮದೇವರನ್ನು ಆರಾಧಿಸಿದನು. ಅವನ ತೀವ್ರತರವಾದ ವ್ರತ ತಪಸ್ಸುಗಳಿಂದ ಬಹುಕಾಲದ ಮೇಲೆ ಬ್ರಹ್ಮದೇವನು ಪ್ರಸನ್ನನಾದನು. ಪ್ರತ್ಯಕ್ಷವಾಗಿ ಆ ಪಾಂಚಾಲ ಮಹಾರಾಜನು ಎದುರು ಬಂದು ನಿಂತು ಮಾತನಾಡಿದನು.

**ಬ್ರಹ್ಮ :-** ಅರಸನೆ, ನಿನಗೆ ಮಂಗಳವಾಗಲಿ, ನಿನ್ನ ಮನಸ್ಸಿನಲ್ಲಿ ಏನಿದೆ ? ವರವನ್ನು ಕೇಳಿಕೋ.

**ರಾಜ :-** ದೇವತೆಗಳ ಒಡೆಯ !. ನನಗೊಬ್ಬ ಮಹಾಪರಾಕ್ರಮಶಾಲಿಯಾದ ಮಗನನ್ನು ಕುರಣಿಸು. ಸರ್ವವಿದ್ಯೆಗಳು ಅವನಿಗೆ ಕರತಲಾಮಲಕವಾಗಿರಲಿ. ಧರ್ಮದಲ್ಲಿ ನಿಷ್ಠೆಯಿರಲಿ. ಯೋಗಿಗಳಲ್ಲಿ ಅವನು ಶ್ರೇಷ್ಠನಾಗಿರಲಿ. ಎಲ್ಲ ಪ್ರಾಣಿಗಳ ಭಾಷೆಯು ಅವನಿಗೆ ಚೆನ್ನಾಗಿ ತಿಳಿದಿರಲಿ. ಇಂಥ ಒಬ್ಬ ಯೋಗಿ-ಕುಮಾರನನ್ನು ಕರುಣಿಸು. ಪಾಂಚಾಲ ಭೂಪಾಲನ ಈ ಅಪೇಕ್ಷೆಯನ್ನು ಕೇಳಿ ಬ್ರಹ್ಮದೇವರು 'ತಥಾಸ್ತು' ಎಂದು ನುಡಿದನು. ಅವನಿಗೆ ವರವನ್ನು ಕೊಟ್ಟನು. ಎಲ್ಲ ಪ್ರಾಣಿಗಳ ಕಣ್ಣೆದುರೇ ಅದೃಶ್ಯರಾದರು. ಬ್ರಹ್ಮದೇವರ ವರದ ಪ್ರಭಾವದಿಂದ ಆ ಅಣುಹ ಮಹಾರಾಜನಿಗೆ ಬ್ರಹ್ಮದತ್ತನೆಂಬ ಶೂರ ಮಗನು ಹುಟ್ಟಿದನು. ಎಲ್ಲ ಪ್ರಾಣಿಗಳ ಮೇಲೆಯೂ ಅವನಿಗೆ ಮರುಕ ಎಲ್ಲರಿಗಿಂತ ಹೆಚ್ಚಿನ ಬಲ. ಸಕಲ ಪ್ರಾಣಿಗಳ ಭಾವ-ಭಾಷೆಗಳ ಅರಿವು ಆ ಮಹಾರಾಜನಿಗೆ ಬಾಲ್ಯದಿಂದಲೇ ಬಂದಿತ್ತು. ಒಂದುದಿನ ಇರುವೆ ಗಂಡಹೆಂಡಂದಿರ ಪ್ರಣಯ ಕಲಹ ಕಂಡು, ಅವುಗಳ ಕೋಪಾಟೋಪದ ಬಿರುನುಡಿ, ಮರುನುಡಿಗಳನ್ನು ಆಲಿಸಿ ಅವನಿಗೆ ನಗೆ ಬಂದಿತು. ಒಮ್ಮೆಲೆ ನಗೆ ಉಕ್ಕಿ ನಕ್ಕು ನಲಿಯುವ ಮಹಾರಾಜನನ್ನು ಕಂಡು ಪಕ್ಕದಲ್ಲಿ ಕುಳಿತ ಮಹಾರಾಣಿಗೆ ಸಂಶಯ ಬಂದಿತು. ಅವಳು ರಾಜನನ್ನು ಕೇಳಿಯೇ ಬಿಟ್ಟಳು.

**ಸನ್ನತಿ :-** ಪ್ರಭುಗಳಿಗೆ ಇದೇನು ಆಕಸ್ಮಿಕ ಹಾಸ್ಯ ? ನಗಲು ಈಗೇನಾಗಿದೆ ? ನಗೆಯ ಕಾರಣವಂತೂ ಇಲ್ಲಿ ಯಾವದೂ ಇಲ್ಲ. ಈ ಅಕಾಲ ಹಾಸ್ಯದ ಹೇತುವು ಏನು ?

**ಮಹಾರಾಜ :-** ಮತ್ತೇನೂ ಇಲ್ಲ. ಈ ಇರುವೆ ದಂಪತಿಗಳ ಸಂಭಾಷಣೆಯನ್ನು ಕೇಳಿದೆ. ಇಲ್ಲಿ ಇರುವೆ ಜಾತಿಯಲ್ಲೂ ಕೂಡ ಹೆಣ್ಣಿನ ದರ್ಪ, ಗಂಡಿನ ಅನುರಾಗ, ಹೆಣ್ಣಿನ ಗೆಲುವು, ಗಂಡಿನ ಸೋಲು ಇವುಗಳನ್ನು ಕೇಳಿ ನೋಡಿ ನನಗೆ ನಗೆ ಬಂದಿತು. ಮಹಾರಾಣಿಗೆ ಇದು ನಿಜವೆನಿಸಲಿಲ್ಲ. ಅವಳು ಸೆಟೆದು ನಿಂತು ನುಡಿದಳು.

**ಸನ್ನತಿ :-** ಇದು ಹಸಿ ಸುಳ್ಳು. ನೀವು ನನ್ನನ್ನು ನೋಡಿಯೇ ಅಪಹಾಸಗೈದಿರುವಿರಿ. ಇಷ್ಟು ನಗೆಗೀಡಾಗಿ ನಾನೇಕೆ ಬದುಕಬೇಕು ? ನಾನೆಂದರೆ ನಿಮಗೆ ಯಾವಾಗಲೂ ಹಾಸ್ಯ, ನಾನೇ ಉಪಹಾಸ್ಯ, ನಾನೇ ನಿಮಗೆ ಅಪಹಾಸ್ಯ. ಇಷ್ಟು ನಿಮ್ಮ ಹಾಸ್ಯಾಪಹಾಸ್ಯಗಳಿಗೆ ಈಡಾಗಿ ನಗೆಗೀಡಾಗಿ ಬದುಕುವುದರಲ್ಲಿ ಅರ್ಥವಿಲ್ಲ. ಇರುವೆಗಳ ಭಾಷೆ ದೇವತೆಗಳ ಹೊರತು

ಮಾನವರಿಗೆ ತಿಳಿಯುವುದುಂಟೆ ? ನನ್ನನ್ನು ನೋಡಿ ನಕ್ಕು, ಈಗ ಇರುವೆಗಳ ನೆಪ ಹೇಳುತ್ತಿರುವಿರಿ. ಅವಳ ಈ ಕಿಡಿ ನುಡಿಯು ಮಹಾರಾಜನ ಬಾಯಿಯನ್ನೇ ಕಟ್ಟಿತು. ಅವನು ಎಷ್ಟು ಹೇಳಿಕೊಂಡರೂ, ರಮಿಸಿದರೂ ಮಹಾರಾಣಿಯ ಕೋಪವು ಶಾಂತವಾಗಲಿಲ್ಲ. ಅನುನಯ, ಸಾಂತ್ವನದ ಮಾರ್ಗಗಳು ಕಟ್ಟಾದ ಬಳಿಕ ಮಹಾರಾಜನು ತನ್ನ ಮಹಿಷಿಯನ್ನು ಸಂತಯಿಸುವದನ್ನೇ ಬಿಟ್ಟು ಶ್ರೀ ಹರಿಗೆ ಶರಣುಹೋದ. ಏಳುದಿನ ನಿಯಮ ನಿಷ್ಠನಾಗಿ ಶ್ರೀ ಹರಿಯ ಧ್ಯಾನಮಾಡಿದ. ಏಳನೆಯದಿನ, ಮಹಾರಾಜನಿಗೆ ಒಂದು ಕನಸು ಬಿತ್ತು. ಅದರಲ್ಲಿ ಬ್ರಹ್ಮದೇವರು ಬಂದು ಹೇಳಿದರು :-

''ರಾಜನೆ, ಪ್ರಾತಃಕಾಲದಲ್ಲಿ ಒಬ್ಬ ಮುದುಕ ಬ್ರಾಹ್ಮಣನು ನಿನ್ನ ರಾಜಧಾನಿಯಲ್ಲಿ ಸಂಚರಿಸುತ್ತ ಬರುವನು. ಅವನ ಮುಖದಿಂದ ಬಂದ ವಾಕ್ಯವನ್ನು ಕೇಳಿ ನಿನ್ನ ಹೆಂಡತಿಗೆ ಎಲ್ಲವೂ ತಿಳಿದು ಬರುವುದು'' ಹೀಗೆ ಹೇಳಿ ಸ್ವಪ್ನದಲ್ಲಿ ಅದೃಶ್ಯನಾದನು.

ಬೆಳಗಾದ ಬಳಿಕ ಮಹಾರಾಜನು ಎದ್ದು, ಬ್ರಹ್ಮದೇವರ ಸ್ವಪ್ನವಾಕ್ಯವನ್ನು ನೆನೆದು, ಮನೆ ಬಿಟ್ಟು ಹೊರಗೆ ಹೊರಟನು. ಅವನ ಹಿಂದೆ ಇಬ್ಬರು ಮಂತ್ರಿಗಳು ಹಾಗೂ ಪಟ್ಟಮಹಿಷಿಯೂ ನಡೆದರು. ಅಷ್ಟರಲ್ಲಿ ಏನೋ ಒಂದು ಪದ್ಯ ಪಠಿಸುತ್ತ ಓರ್ವ ವೃದ್ಧ ಬ್ರಾಹ್ಮಣ ಎದುರು ಬಂದ. ಅವನ ಕಂಚಿನ ಕಂಠದಿಂದ ಈ ಕೆಳಗಿನ ಪದ್ಯವು ಹೊಮ್ಮಿ ಬರುತ್ತಲಿತ್ತು.

**॥ ಬ್ರಾಹ್ಮಣ ಉವಾಚ ॥**

**ಯೇವಿಪ್ರಮುಖ್ಯಾಃ ಕುರು ಜಾಂಗಲೇಷು ದಾಸಾಸ್ತಥಾ ದಾಸಪುರೇ ಮೃಗಾಶ್ಚ**
**ಕಾಲಂಜರೇ ಸಪ್ತ ಚ ಚಕ್ರವಾಕಾ ಯೇ ಮಾನಸೇ ತೇವಯಮತ್ರ ಸಿದ್ಧಾಃ**

''ಕುರುಕ್ಷೇತ್ರದಲ್ಲಿ ಶ್ರೇಷ್ಠ ಬ್ರಾಹ್ಮಣರಾದವರು ದುಷ್ಕರ್ಮದಿಂದ ದಾಸಪುರದಲ್ಲಿ ಬೇಡರಾಗಿ, ಕಾಲಂಜರ ಗಿರಿಯಲ್ಲಿ ಮೃಗಗಳಾಗಿ, ಮಾನಸ ಸರೋವರದಲ್ಲಿ ಚಕ್ರವಾಕ ಪಕ್ಷಿಗಳಾಗಿ ಹುಟ್ಟಿದರು. ಆ ಏಳು ಜನ ಬ್ರಾಹ್ಮಣ ಕುಮಾರರಾದ ನಾವು ಆ ಚಕ್ರವಾಕ ಜನ್ಮದಿಂದ ಮತ್ತೆ ಈಗ ಮರಳಿ ಮಾನವರಾಗಿ ಹುಟ್ಟಿ ಪುನಃ ಈಗ ತಪಸ್ಸಿಗಾಗಿ ಸಿದ್ಧರಾಗಿ ಹೊರಟಿದ್ದೇವೆ.''

ಬ್ರಾಹ್ಮಣರು ಉಚ್ಚರಿಸಿದ ಈ ಶ್ಲೋಕವನ್ನು ಕೇಳಿದ ಕೂಡಲೇ ಬ್ರಹ್ಮದತ್ತನಿಗೆ ತನ್ನ ಹಿಂದಿನ ಜನ್ಮದ ನೆನಪು ಮರುಕಳಿಸಿತು. ತಮ್ಮ ಅಧಃಪಾತದ ಕಥೆ ನೆನಪಾಗಿ ದುಃಖದಿಂದ ಮಹಾರಾಜನು ಒಮ್ಮೆಲೆ ನೆಲಕ್ಕೆ ಬಿದ್ದನು. ಅವನ ಬೆನ್ನ ಹಿಂದೆ ಬರುತ್ತಲಿರುವ ಇಬ್ಬರೂ ಮಂತ್ರಿಗಳದೂ ಇದೇ ಪಾಡು. ಸರ್ವ ಶಾಸ್ತ್ರಗಳನ್ನು ಅರಿತು ಯೋಗಶಾಸ್ತ್ರವನ್ನು ರಚಿಸಿದ ಸುಬಾಲಕನು ಮತ್ತು ವೈದ್ಯ ಶಾಸ್ತ್ರ ಪ್ರವರ್ತಕ ಪುಂಡರೀಕನು ಆ ಪದ್ಯ ಕೇಳಿ ಹಿಂದಿನ ಜನ್ಮ ಸ್ಮರಣೆ ಉಂಟಾಗಿ ಮಹಾರಾಜನಂತೆ ದುಃಖಾತಿರೇಕದಿಂದ ನೆಲಕ್ಕೆ ಉರುಳಿದರು. ಅನಂತರ ಆ ಮೂವರು ತಮ್ಮ ಅಧಃಪಾತವನ್ನು ನೆನೆದು ''ಅಯ್ಯೋ! ನಾವು ವಿಷಯ ಸುಖವನು ಬಯಸಿ ಯೋಗಭ್ರಷ್ಟರಾದೆವಲ್ಲ ! ಆಶೆಯಿಂದ ಕರ್ಮಬಂಧನಕ್ಕೆ ಒಳಗಾಗಿ ನಮ್ಮ ಆಧ್ಯಾತ್ಮ ಸಾಧನೆಯನ್ನೇ ಮರೆತು ಬಿಟ್ಟೆವು. ನಮಗೆ ಧಿಕ್ಕಾರವಿರಲಿ. ಸಾಕಿನ್ನು ಈ ಸಂಸಾರದ ಜಂಜಡ ಈ ಕ್ಷುದ್ರವಾದ ಭೌತಿಕ ಸುಖಕ್ಕೆ ಎಳೆಸಿ ನಾವು ಶಾಶ್ವತ ಸುಖಕ್ಕೆ ಎರವಾದೆವು ಇಷ್ಟಾದರೂ ನಮಗೆ ಜನ್ಮಾಂತರದ ಸ್ಮರಣ ಬಂದು ವಿವೇಕೋದಯವಾದದ್ದು ಐದು ಜನ್ಮಗಳ ಹಿಂದೆ ನಾವು ಮಾಡಿದ ಶ್ರಾದ್ಧ ಪುಣ್ಯವೇ ಸರಿ. ವಿಧಿ ಪೂರ್ವಕವಾಗಿಮಾಡಿದ ಶ್ರಾದ್ಧದ ಮಹಾತ್ಮೆಯು

ನಿಜವಾಗಿಯೂ ಅಭಿನಂದನೀಯವಾಗಿದೆ. ಈಗಾಗಲೇ ನಾವು ನಮ್ಮ ಬಂಧನಕ್ಕೆ ಕಾರಣವಾದ ಈ ರಾಜ್ಯ, ಕೋಶ, ಮನೆ, ಮಾರು ತೊರೆದು ಅರಣ್ಯಕ್ಕೆ ಹೋಗಿ ನಮ್ಮ ಸಹೋದರರನ್ನು ಕೂಡಿಕೊಳ್ಳೋಣ, ಅಧ್ಯಾತ್ಮ ಸಾಧನ ಮಾಡಿಕೊಳ್ಳೋಣ' ಎಂದು ನಿರ್ಧರಿಸಿದರು. ಆ ಪದ್ಯ ಹೇಳಿದ ವೃದ್ಧ ಬ್ರಾಹ್ಮಣನಿಗೆ ಅನೇಕ ಗ್ರಾಮಗಳನ್ನು ದಾನವಾಗಿ ಕೊಟ್ಟು ಮೇಲೆ ವಿಪುಲವಾಗಿ ಧನವನ್ನು ನೀಡಿದರು. ಆ ಅಪಾರವಾದ ಐಶ್ವರ್ಯ ಕಂಡು, ಅಧಿಕಾರವನ್ನು ಪಡೆದು ಆ ಕಡುಬಡವ ಮುದುಕ ಬ್ರಾಹ್ಮಣನಿಗೆ ಸಂಪತ್ತಿನ ಸುಮದವು ತಲೆಗೇರಿ ಆನಂದದಿಂದ ಮನೆಯ ಕಡೆಗೆ ನಡೆದನು. ಇತ್ತ ಬ್ರಹ್ಮದತ್ತ ಮಹಾರಾಜನು ಎಲ್ಲ ರಾಜಲಕ್ಷಣಗಳಿಂದ ಸಂಪನ್ನನಾದ ವಿಷ್ವಕ್ಸೇನ ಎಂಬ ಹೆಸರಿನ ಮಗನಿಗೆ ರಾಜ್ಯಾಭಿಷೇಕ ಗೈದನು. ಅನಂತರ ರಾಜ ಹಾಗೂ ಆ ಇಬ್ಬರೂ ಮಂತ್ರಿಗಳು ಕೂಡಿ ಮಾನಸ ಸರೋವರಕ್ಕೆ ಹೊರಟು ಹೋದರು. ಅಲ್ಲಿ ಇವರ ಉಳಿದ ನಾಲ್ಕು ಸಹೋದರರು ಆ ಸರಸ್ತೀರದಲ್ಲಿ ಇವರ ದಾರಿಯನ್ನೇ ಕಾಯುತ್ತಲಿದ್ದರು. ಅವರು ಏಳೂ ಜನರು ಕೂಡಿ ರಾಗ, ದ್ವೇಷ ಮಾತ್ಸರ್ಯ, ತ್ಯಜಿಸಿ ಪಿತೃನಿಷ್ಠರಾಗಿ ತಪೋನುಷ್ಠಾನಕ್ಕೆ ಅಣಿಯಾದರು. ಆಗ ಅಲ್ಲಿಗೆ ಬ್ರಹ್ಮದತ್ತನ ಮಡದಿಯಾದ ಸನ್ನತಿಯೂ ಆಗಮಿಸಿದಳು. ತನ್ನ ಪತಿ ವಿಷಯ ಸುಖದ ಆಶೆಯನ್ನು ಬಿಟ್ಟು ವಿರಕ್ತನಾಗಿ ತಪಸ್ಸಿಗೆ ಸಿದ್ಧನಾಗಿದ್ದನ್ನು ನೋಡಿ ಅವಳಿಗೆ ಸಂತೋಷವಾಯಿತು. ಹರ್ಷದುಂಬಿ ಅವಳು ಮಹಾರಾಜನಿಗೆ ಹೇಳಿದಳು :-

''ರಾಜನೆ, ನೀನು ಈಗ ದಿವ್ಯಯೋಗಫಲವನ್ನು ಹೊಂದುತ್ತಲಿರುವುದು ನನ್ನ ಆ ಕೃತ್ರಿಮ ಕೋಪ ಹಾಗೂ ಬಿಗುಮಾನಗಳ ಫಲವೆಂದು ತಿಳಿ. ನಿನಗೆ ಸಂಸಾರದಲ್ಲಿ ಹಾಗೂ ಮಡದಿ ಮಕ್ಕಳಲ್ಲಿ ಜಿಗುಪ್ಸೆ ಹುಟ್ಟಿ, ವೈರಾಗ್ಯ ಉದಿಸಲಿ, ಎಂದೇ ನಾನು ನಿನ್ನಲ್ಲಿ ತಪ್ಪಿಲ್ಲವೆಂದು ತಿಳಿದಿದ್ದರೂ ಸುಮ್ಮನೆ ಸಿಟ್ಟಾದೆ ಬಿಗುವು ಬಹುಮಾನದಿಂದ ಬೀಗಿ ಮನೆಯ ವಾತಾವರಣವನ್ನೆಲ್ಲ ನೀರಸಗೊಳಿಸಿ, ನಿನಗೆ ವೈರಾಗ್ಯದತ್ತ ಒಲವು ಮೂಡುವಂತೆ ಮಾಡಿದೆ. ಮಹಾರಾಣಿಯ ಈ ಮಾತನ್ನು ಕೇಳಿ ರಾಜನು 'ಇದು ನಿಜ, ನಮ್ಮ ಈ ಯೋಗಸಿದ್ಧಿಗೆ ನೀನೇ ಕಾರಣಳು. ನಿನ್ನ ಅನುಗ್ರಹದಿಂದಲೇ ನಾವು ವೈರಾಗ್ಯ ಭಾಗ್ಯವನ್ನು ಪಡೆದಿದ್ದೇವೆ ಮತ್ತು ಹಿಂದಾದರೂ ನೀನು ನಮ್ಮ ಪಿತೃ ಕಾರ್ಯಕ್ಕೆ ಉಪಯುಕ್ತಳಾಗಿ ಉದ್ಧಾರಕ್ಕೆ ಕಾರಣಳಾದಿ' ಎಂದು ಹೇಳಿ ಅಭಿನಂದಿಸಿದನು. ಅನಂತರ ಆ ಏಳು ಕೌಶಿಕ ಕುಮಾರರು ಆ ಅರಣ್ಯದಲ್ಲಿ ಸರೋವರದ ದಂಡೆಯ ಮೇಲೆ ಕುಳಿತು ಯೋಗ ಸಮಾಧಿಯಿಂದ ಭಗವಂತನ ಧ್ಯಾನರೂಪ ತಪಸ್ಸನ್ನು ಅಖಂಡವಾಗಿ ನಡೆಸಿದರು. ತಪೋಬಲದಿಂದ ಕೊನೆಗೆ ಬ್ರಹ್ಮರಂಧ್ರ ಸ್ಫೋಟಗೊಂಡು ಪ್ರಾಣೋತ್ಕ್ರಮಣವಾಗಿ ಮೋಕ್ಷವನ್ನು ಅವರೆಲ್ಲರೂ ಹೊಂದಿದರು ಸನ್ನತಿಯೊಂದಿಗೆ.

ಮಹಾರಾಜನೆ, ಹೀಗೆ ಶ್ರಾದ್ಧ ವಿಧಿಯಿಂದ ಸಂತುಷ್ಟರಾದ ಪಿತೃಪಿತಾಮಹರು ಆಯುಷ್ಯ, ಜ್ಞಾನ, ಐಶ್ವರ್ಯ, ಸ್ವರ್ಗ, ಮೋಕ್ಷಗಳನ್ನು ಕರುಣಿಸುವರು. ಭಕ್ತಿಯಿಂದ ಶ್ರಾದ್ಧಮಾಡಿದವರೂ, ಈ ಬ್ರಹ್ಮದತ್ತನ ಚರಿತ್ರೆ, ಪಿತೃಗಳ ಮಹಿಮೆಯನ್ನು ಶ್ರವಣ ಪಠಣಮಾಡಿದವರೂ ಮತ್ತೊಬ್ಬರಿಗೆ ಈ ಕಥೆಯನ್ನು ಹೇಳಿದವರೂ ಕೋಟಿ ಕಲ್ಪಗಳ ವರೆಗೆ ಬ್ರಹ್ಮಲೋಕದಲ್ಲಿ ಆನಂದದಿಂದ ಗೌರವ ಪಡೆದು ವಾಸವಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ಹತ್ತನೆಯ ಅಧ್ಯಾಯ ಮುಗಿದುದು.*

**ಭೀಷ್ಮ** :- ಶ್ರಾದ್ಧಮಾಡುವವರು ದಿವಸದ ಯಾವ ಭಾಗದಲ್ಲಿ ಶ್ರಾದ್ಧವನ್ನು ಪ್ರಾರಂಭಿಸಬೇಕು ? ಯಾವ ತೀರ್ಥಗಳಲ್ಲಿ ಮಾಡಿದ ಶ್ರಾದ್ಧಕ್ಕೆ ವಿಶೇಷ ಫಲ ಬರುವದು ?

**ಪುಲಸ್ತ್ಯ** :- ಪುಷ್ಕರ ಎಂಬ ತೀರ್ಥವು ಶ್ರೇಷ್ಠತಮವಾಗಿದೆ. ಎಲ್ಲ ಭಕ್ತೋತ್ತಮರ ಇಷ್ಟಾರ್ಥ ಪೂರ್ತಿ ಕ್ಷೇತ್ರವೇ ಪುಷ್ಕರ ತೀರ್ಥ ಎಂದು ಹೇಳಬಹುದು. ಇಲ್ಲಿ ಮಾಡಿದ ಹೋಮ, ಪಠಿಸಿದ ಮಂತ್ರ. ಗೈದ ಜಪ ಮುಂತಾದವುಗಳಿಗೆ ಅನಂತ ಫಲಗಳು ಇದು ನಿಶ್ಚಿತ. ಇದು ಪಿತೃಗಳಿಗೆ ಪ್ರೀತಿಕರ, ಋಷಿಗಳಿಗೂ ಪರಮಪ್ರಿಯ, ಇದರಂತೆ ನಂದಾ, ಲಲಿತಾ, ಮಾಯಾಪುರಿ, ಮಿತ್ರಪದ, ಕೇದಾರ ಮುಂತಾದವುಗಳು ಉತ್ತಮ ತೀರ್ಥಗಳು. ಗಂಗಾಸಾಗರ ಸಂಗಮತೀರ್ಥವು ಸರ್ವ ತೀರ್ಥಗಳ ಮಿಲನದಂತೆ ಶುಭಕರವಾಗಿದೆ. ಬ್ರಹ್ಮ ಸರೋವರ ಹಾಗೂ ಶತದ್ರು ನದಿಯ ನೀರು ತೀರ್ಥ ಎನಿಸುತ್ತದೆ. ನೈಮಿಷ ತೀರ್ಥ ಮತ್ತು ಗಂಗೋದ್ಭೇದ ಎಂಬ ತೀರ್ಥಗಳು ಪರಮ ಪವಿತ್ರವಾಗಿವೆ. ಇಲ್ಲಿಯೇ ಯಜ್ಞ ವರಾಹನು ಪ್ರಾದುರ್ಭೂತನಾದನು. ಧರ್ಮಚಕ್ರದ "ಹಲ್ಲು" ಮುರಿದು ನಿಮಿಷಾರಣ್ಯವು ಉತ್ತಮ ತೀರ್ಥ ಎನಿಸುತ್ತದೆ. ಇಲ್ಲಿರುವ ವರಾಹ ದೇವರ ದರ್ಶನದಿಂದ ಹಾಗೂ ವರಾಹ ದೇವರ ಪೂಜೆಯಿಂದ ವೈಕುಂಠ ಪ್ರಾಪ್ತಿಯಾಗುತ್ತದೆ. ಬ್ರಹ್ಮದೇವರ ಪಿತೃತೀರ್ಥ ಎನಿಸಿದ ಕೋಕಾ ಮುಖವು ಉತ್ತಮ ತೀರ್ಥವಾಗಿದೆ. ಪುಷ್ಕರಾರಣ್ಯದಲ್ಲಿರುವ ಈ ಕೋಕಾಮುಖತೀರ್ಥದಲ್ಲಿ ಬ್ರಹ್ಮದೇವರು ನೆಲೆಸಿದ್ದಾರೆ. ಇಲ್ಲಿ ಸ್ನಾನ, ದೇವ ಪೂಜಾದಿಗಳನ್ನು ಮಾಡಿದವರಿಗೆ ಭಗವದ್ದರ್ಶನವಾಗಿ ಮೋಕ್ಷ ಪ್ರಾಪ್ತಿಯಾಗುವದು. ಅಲ್ಲಿಯೇ ಸರ್ವಪಾಪ ಪರಿಹಾರಕ ಕೃತವೆಂಬ ಪುಣ್ಯ ತೀರ್ಥವಿದೆ. ಅದೇ ಸ್ಥಳದಲ್ಲಿ ಆದಿನರಸಿಂಹನು ಪ್ರಾದುರ್ಭಾತನಾದನು. ಗಂಗಾ ಯಮುನಾ ಸಂಗಮದಲ್ಲಿರುವ ಇಕ್ಷುಮತೀ ತೀರ್ಥವು ಪಿತೃಗಳಿಗೆ ಅತ್ಯಂತ ಪ್ರಿಯ. ಇದರಂತೆ ಸರ್ವ ಕಾಮನೆಗಳನ್ನು ಪೂರ್ತಿಗೊಳಿಸುವ ಕುರುಕ್ಷೇತ್ರ. ನೀಲಕಂಠಕ್ಷೇತ್ರವು ಮತ್ತು ಭದ್ರಸರ, ಮಾನಸಸರ ಎಂಬ ಎರಡು ಸರೋವರಗಳು ಅತ್ಯಂತ ಪುಣ್ಯಕರ ಪಿತೃ ತೀರ್ಥಗಳು. ಇದರಂತೆ ಮಂದಾಕಿನೀ, ವಿಪಾಶಾ, ಸರಸ್ವತೀ ಮುಂತಾದ ನದಿ ತೀರಗಳಲ್ಲಿಯೂ ಮತ್ತು ಸರ್ವಮಿತ್ರ, ಪದ, ವೈದ್ಯನಾಥ, ಮಹಾಬಲ, ಕ್ಷಿಪ್ರಾ, ಕಾಲಂಜರ, ವಂಶೋದ್ಭೇದ, ಹರೋದ್ಭೇದ, ಗರ್ಭೋದ್ಭೇದ, ಮಹಾಲಯ, ಭದ್ರೇಶ್ವರ, ವಿಷ್ಣುಪದ, ನರ್ಮದಾದ್ವಾರ ಮುಂತಾದ ಪುಣ್ಯಕ್ಷೇತ್ರಗಳು ಪಿತೃಕಾರ್ಯಕ್ಕೆ ಪಾವನ ಸ್ಥಳಗಳು ಎನಿಸುತ್ತವೆ. ಇವುಗಳಲ್ಲಿ ಪಿತೃಗಳನ್ನು ಉದ್ದೇಶಿಸಿ, ಪಿಂಡ ಪ್ರದಾನ ಮಾಡಿದರೆ, ಗಯಾ ಕ್ಷೇತ್ರದಲ್ಲಿ ಪಿಂಡಹಾಕಿದ ಪುಣ್ಯ ಬರುತ್ತದೆ. ಎಂದು ಹೇಳುತ್ತಾರೆ. ಈ ಪಿತೃತೀರ್ಥಗಳ ಸ್ಮರಣೆಯಿಂದಲೇ ಸರ್ವ ಪಾಪ ಪರಿಹಾರ, ಶ್ರಾದ್ಧ ಮಾಡಿದವರಿಗೆ ವಿಶೇಷ ಪುಣ್ಯ ಬರುವದೆಂದು ನಂಬಿಕೆ.

ಕೀಕಟೆ ಪ್ರಾಂತದಲ್ಲಿ ಗಯಾ ಕ್ಷೇತ್ರವು ಅತ್ಯಂತ ಪುಣ್ಯಕರ ಮತ್ತು ರಾಜಗ್ರಹಚ್ಯವನಾಶ್ರಮ ಅಲ್ಲಿರುವ ಫಲ್ಗುನದಿ ಇವು ಮೂರು ಗಯಾ ಪರಿಸರದಲ್ಲಿರುವರಿಂದ ಅತ್ಯಂತ ಪುಣ್ಯಕರವಾಗಿದೆ.

**ಏಷ್ಟವ್ಯಾ ಬಹವಃ ಪುತ್ರಾಯದ್ಯೇಕೋಽಪಿ ಗಯಾಂ ವ್ರಜೇತ್ ।**
**ಯಜೇತ ವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥**

''ಬಹಳ ಮಂದಿ ಮಕ್ಕಳನ್ನು ಹಡೆಯಬೇಕು. ಯಾಕೆಂದರೆ ಅನೇಕ ಪುತ್ರರಿದ್ದರೆ ಅವರಲ್ಲಿ ಒಬ್ಬನಾದರೂ ಗಯಾಕ್ಷೇತ್ರಕ್ಕೆ ಹೋಗಿ ವಿಷ್ಣುಪಾದದ ಮೇಲೆ ಪಿಂಡವನ್ನು ಹಾಕಬೇಕು. ಅಶ್ವಮೇಧಯಾಗವನ್ನುಮಾಡಬೇಕು. ಇಲ್ಲವೆ ಕಪ್ಪು ಎತ್ತನ್ನು ಬಿಡಬೇಕು.''- ಎಂಬ ನಾಣ್ಣುಡಿಯು ಎಲ್ಲ ಪುಣ್ಯ ಸ್ಥಳಗಳಲ್ಲಿಯೂ ಪ್ರಚಾರದಲ್ಲಿ ಇರುತ್ತದೆ. ಗಯಾ ಕ್ಷೇತ್ರವು ಇಷ್ಟು ಅತ್ಯಂತ ಪುಣ್ಯಕರವಾದ ಕ್ಷೇತ್ರವಾಗಿದೆ.

ಎಲ್ಲ ಪಿತೃಗಳು ಹೀಗೆ ಅಪೇಕ್ಷೆ ಪಡುತ್ತಲಿರುತ್ತಾರೆ. ''ನಮ್ಮ ವಂಶದಲ್ಲಿ ಯಾವನಾದರೂ ಒಬ್ಬನು ಗಯಾ ಕ್ಷೇತ್ರಕ್ಕೆ ಹೋಗಿ ಶ್ರಾದ್ಧಮಾಡಿ ತನ್ನ ಹಿಂದು ಮುಂದಿನ ತಾಯಿತಂದೆಗಳ ಕುಲಗಳನ್ನು ಉದ್ಧರಿಸುವನೆ ? ಯಾವನಾದರೂ ಒಬ್ಬ ನಮ್ಮ ವಂಶಜನ ನಮ್ಮ ಮೂಳೆಗಳನ್ನು ಗಂಗಾನದಿಯಲ್ಲಿ ಹಾಕುವನೆ ? ಹತ್ತೆಂಟು ಎಳ್ಳುಗಳನ್ನು ಹಾಕಿ, ತಿಲಾಂಜಲಿಯಿಂದ ತರ್ಪಣವನ್ನು ಯಾವನಾದರೂ ನಮ್ಮ ಮನೆತನದಲ್ಲಿ ಕೊಡುವನೆ ? ಪುಷ್ಕರಾರಣ್ಯ ನೈಮಿಷ ಹಾಗೂ ಧರ್ಮಾರಣ್ಯಗಳಲ್ಲಿ ಯಾವನಾದರೂ ಹೋಗಿ ಭಕ್ತಿಯಿಂದ ನಮ್ಮನ್ನು ಉದ್ದೇಶಿಸಿ ಪಿಂಡಪ್ರದಾನಮಾಡುವನೆ ? ಗಯಾ, ಧರ್ಮವೃಷ್ಟಿ, ಧರ್ಮಸರ, ಗಯಾಶಿರ, ವಟವೃಕ್ಷ ಈ ಐದು ಸ್ಥಳಗಳಲ್ಲಿ ಪಿಂಡಪ್ರದಾನ ಮಾಡಿದರೆ ಪಿತೃಗಳಿಗೆ ಪ್ರೀತಿ. ಈ ಪಂಚಪುಣ್ಯಕ್ಷೇತ್ರಗಳಿಗೆ ಹೊರಟು ನಿಂತರೂ ಸಾಕು. ಅಷ್ಟರಿಂದಲೇ ನರಕದಿಂದ ಪಿತೃಗಳ ಉದ್ಧಾರ. ಈ ಪುಣ್ಯಕ್ಷೇತ್ರದಲ್ಲಿ ಶ್ರಾದ್ಧಮಾಡಿದ ಮನುಷ್ಯನ ಕುಲದಲ್ಲಿ ಯಾವದೂ ಮುಂದೆ ಪ್ರೇತ ಜನ್ಮ ಹೊಂದುವದೇ ಇಲ್ಲ. ಈ ಗಯಾ ಕ್ಷೇತ್ರದಲ್ಲಿ ಇರುವ ಒಬ್ಬ ಮುನಿಯು ತನ್ನ ತಾಮ್ರದ ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು, ಮನೆಯ ಮುಂದಿರುವ ಮಾವಿನ ಗಿಡಗಳ ಮಡಿಗಳಲ್ಲಿ ಪಿತೃಗಳನ್ನು ಉದ್ದೇಶಿಸಿ ತರ್ಪಣಬಿಟ್ಟನು. ಹೀಗೆ ಮಾವಿನ ಗಿಡಕ್ಕೆ ನೀರುಣಿಸುವ ಉದ್ದೇಶದಿಂದ ಪಿತೃತರ್ಪಣಮಾಡಿದರೂ ಅದು ಪಿತೃಗಳಿಗೆ ಸಂದಿತು. ಮಾಮರಗಳಿಗೂ ನೀರು ಹಾಕಿದಂತಾಯಿತು. ಪಿತೃಗಳೂ ತೃಪ್ತರಾದರು. ಒಂದು ಕ್ರಿಯೆಯಿಂದ ಎರಡು ಕಾರ್ಯಗಳು ಆದುವು ಎಂಬ ಕೆಳಗಿನ ಶ್ಲೋಕವು ಎಲ್ಲೆಡೆಗೂ ಪ್ರಸಿದ್ಧವಾಗಿದೆ.

**ಏಕೋ ಮುನಿಸ್ತಾಮ್ರಕರಾಗ್ರಹಸ್ತೋ ಹ್ಯಾಮ್ರೆ ಮಧ್ಯೇ ಸಲಿಲಂ ದದಾತಿ**
**ಅಮ್ರಾಶ್ಚ ಸಿಕ್ತಾಃ ಪಿತರಶ್ಚ ತೃಪ್ತಾ ಏಕಾ ಕ್ರಿಯಾ ಧ್ವ್ಯರ್ಥಕರೀ ಪ್ರಸಿದ್ಧಾ ॥**

ಗಯಾದಲ್ಲಿ ಪಿಂಡದಾನಕ್ಕಿಂತ ಹೆಚ್ಚಿನ ದಾನವೇ ಇಲ್ಲ. ಬರಿ ಗಯಾ ಕ್ಷೇತ್ರದಲ್ಲಿ ಪಿಂಡದಾನ ಮಾತ್ರದಿಂದಲೇ ಪಿತೃಗಳು ತೃಪ್ತರಾಗಿ ಮೋಕ್ಷ ಹೊಂದುತ್ತಾರೆ. ಶ್ರಾದ್ಧದಲ್ಲಿ ವಿಶೇಷ ಧಾನ್ಯ ದಾನಮಾಡುವದರಿಂದ ಶ್ರೇಷ್ಠ ಶ್ರಾದ್ಧವಾಗುವದೆಂದು ಕೆಲವರು ಹೇಳುತ್ತಾರೆ. ವಸ್ತ್ರದಾನ ಮಾಡುವುದೇ ಉತ್ತಮಶ್ರಾದ್ಧವೆಂದು ಕೆಲವು ಋಷಿಗಳು ಹೇಳುತ್ತಾರೆ. ಆದರೆ ವಾಸ್ತವಿಕವಾಗಿ, ಗಯಾ ಕ್ಷೇತ್ರದಲ್ಲಿ ಪಿಂಡಪ್ರದಾನಮಾಡುವುದೇ ಅತ್ಯುತ್ತಮ ಶ್ರಾದ್ಧ ಕಲ್ಪ, ಅದರಿಂದಲೇ ಸರ್ವ ಪುಣ್ಯ, ಸರ್ವ ಫಲ ಎಂಬುದು ಸಿದ್ಧಾಂತ.

ಮಾನಸ ಸರೋವರಕ್ಕೆ ಹೋದರೆ ಅದರ ದಕ್ಷಿಣದಲ್ಲಿ ಗಂಗಾ, ಉತ್ತರಕ್ಕೆ ಕೈಲಾಸ ಪರ್ವತಗಳು ಗೋಚರಿಸುತ್ತವೆ. ಇವೆರಡರ ದರ್ಶನಮಾಡಿಕೊಂಡು, ಬಂದು ಹರಿಗುರುಗಳಿಗೆ ನಮಸ್ಕಾರಮಾಡಿದರೆ ಮಾನವನಾಗಿ ಹುಟ್ಟಿದ್ದು ಸಾರ್ಥಕ ಇದರಂತೆ ನರರ ವಾಂಛಿತಾರ್ಥಗಳೆಲ್ಲವೂ ಸಿದ್ಧಿಸುವವು. ನಾನು ಈವರೆಗೆ ದೇಶಕ್ರಮದಿಂದ ಸಂಕ್ಷಿಪ್ತವಾಗಿ

ಹೇಳಿದ್ದೇನೆ. ಈ ತೀರ್ಥ ವರ್ಣನೆಯನ್ನು ವಿಸ್ತಾರವಾಗಿ ಹೇಳುವದು ಬೃಹಸ್ಪತಿಗೂ ಶಕ್ಯವಿಲ್ಲ. ಮಾನವರ ಪಾಡೇನು ! ನಿಜವಾದ ತೀರ್ಥವೆಂದರೆ -

**"ಸತ್ಯಂತೀರ್ಥಂ ದಯಾತೀರ್ಥಂ ತೀರ್ಥಮಿಂದ್ರಿಯ ನಿಗ್ರಹಃ**
**ವರ್ಣಾಶ್ರಮಾಣಾಂಗೇಹೇऽಪಿತೀರ್ಥಂ ಶಮಉಉದಾಹೃತಃ"**

ಸತ್ಯವು ನಿಜವಾದ ತೀರ್ಥ, ದಯಾಗುಣವು ಒಂದು ತೀರ್ಥಕ್ಕೇ ಸರಿ. ಇಂದ್ರಿಯ ನಿಗ್ರಹವು ಒಂದು ಶ್ರೇಷ್ಠ ತೀರ್ಥ. ಸ್ವೋಚಿತ ವರ್ಣಾಶ್ರಮ ಆಚಾರವು ಕೂಡ ತೀರ್ಥವೇ ಸರಿ. ಮನೆಯಲ್ಲಿ ಶಾಂತಿ ಹಾಗೂ ಭಗವದ್ಭಕ್ತಿಗಳು ತೀರ್ಥ ಎನಿಸುತ್ತವೆ. ಮೇಲೆ ಹೇಳಿದ ತೀರ್ಥಗಳಲ್ಲಿ ಶ್ರಾದ್ಧಮಾಡಿದರೆ ಮನೆಯಲ್ಲಿ ಮಾಡಿದ್ದಕ್ಕಿಂತ ಕೋಟಿಪಟ್ಟು ಪುಣ್ಯಲಭಿಸುತ್ತದೆ. ಗಯಾ ಕ್ಷೇತ್ರದಲ್ಲಿ ಶ್ರಾದ್ಧಮಾಡಿದರಂತೂ ಮೋಕ್ಷವೇ ದೊರಕುತ್ತದೆ. ಆದುದರಿಂದ ಪ್ರಯತ್ನಮಾಡಿ ತೀರ್ಥಕ್ಷೇತ್ರಗಳಲ್ಲಿ ಶ್ರಾದ್ಧವನ್ನುಮಾಡಬೇಕು.

ಹಗಲು ಹೊತ್ತು ಹದಿನೈದು ಮುಹೂರ್ತಗಳು ಇರುತ್ತವೆ ಮೊದಲಿನ ಮೂರು ಮುಹೂರ್ತಗಳಿಗೆ ಪ್ರಾತಃಕಾಲ, ಅನಂತರ ಮೂರಕ್ಕೆ ಸಂಗಮ ಎಂದು, ಅದರ ಮುಂದಿನ ಮೂರು ಮುಹೂರ್ತಗಳ ಕಾಲಕ್ಕೆ ಮಧ್ಯಾಹ್ನ ಎಂದು, ಅನಂತರದ ಮೂರಕ್ಕೆ ಅಪರಾಹ್ನ ಎಂದು, ಕೊನೆಯ ಮೂರು ಮುಹೂರ್ತಗಳ ಅವಕಾಶಕ್ಕೆ ಸಾಯಾಹ್ನ ಎಂದೂ ಹೆಸರು ಇರುತ್ತವೆ. ಈ ಸಾಯಾಹ್ನ ವೇಳೆ ರಾಕ್ಷಸೀ ಸಮಯವಾದದ್ದರಿಂದ ಈ ಕೊನೆಯ ಮುಹೂರ್ತದಲ್ಲಿ ಎಂಟನೆಯ ಮುಹೂರ್ತಕ್ಕೆ ಕುತುಪಕಾಲವೆಂದು ಹೆಸರು. ಮಧ್ಯಾಹ್ನ ನಂತರ ಸೂರ್ಯನು ಮಂದ ಹಾಗೂ ಸೌಮ್ಯ ಕಿರಣ ಉಳ್ಳವನಾಗುವನು. ಆಗ ಮಾಡಿದ ಶ್ರಾದ್ಧವು ಅತ್ಯಂತ ಫಲಪ್ರದವಾಗಿದೆ. ಶ್ರಾದ್ಧಕ್ಕೆ ಖಡ್ಗ ಪಾತ್ರ, ಕುತುಪಕಾಲ, ನೇಪಾಳ ದೇಶದ ಕಂಬಳಿ, ಹಸು, ಚಿನ್ನ, ದರ್ಭೆ, ಸೋದರ ಅಳಿಯ ಇವು ಎಂಟು ಪ್ರಶಸ್ತವಾಗಿರುತ್ತವೆ. ಇವುಗಳಿಂದ ಪಾಪವು ಕಡಿಮೆಯಾಗುವದು. ಆದುದರಿಂದ ಇವು ಎಂಟೂ ಕುತುಪ ಎಂದು ಕರೆಯಲ್ಪಡುತ್ತವೆ. ಕುತುಪಕಾಲದ ನಂತರ ನಾಲ್ಕು ಮುಹೂರ್ತ ಮತ್ತು ಕುತುಪಕಾಲದಲ್ಲಿ ಪಿತೃಕಾರ್ಯಮಾಡುವದು ಶ್ರೇಯಸ್ಕರ. ದರ್ಭೆ ಮತ್ತು ಎಳ್ಳು ಇವೆರಡು ವಿಷ್ಣುವಿನ ದೇಹದಿಂದ ಹುಟ್ಟಿದ್ದರಿಂದ ಇವೆರಡೂ ಶ್ರಾದ್ಧಕ್ಕೆ ಅತ್ಯವಶ್ಯ. ಶ್ರಾದ್ಧಕ್ಕೆ ಮುಖ್ಯವು ಕಾಲವೆಂದು ದೇವತೆಗಳು ಹೇಳುತ್ತಾರೆ. ತೀರ್ಥಗಳಿಗೆ ಹೋದಾಗ ಬೊಗಸೆ ತುಂಬಿ ತಿಲೋದಕದ ತರ್ಪಣ ಕೊಡಬೇಕು. ಕೈಯಲ್ಲಿ ಪವಿತ್ರವನ್ನಿಟ್ಟುಕೊಂಡು ಒಂದೇ ಕೈಯಿಂದ ತರ್ಪಣ ಕೊಡಬೇಕು. ಈ ಶ್ರಾದ್ಧ ವಿಧಿಯು ಅತ್ಯಂತ ಪುಣ್ಯಕರ. ಇದು ಆಯುಷ್ಯ ನೀಡುವದು. ಪಾಪನಾಶ ಮಾಡುವದು. ಬ್ರಹ್ಮದೇವರು ಈ ಶ್ರಾದ್ಧವಿಧಿಯನ್ನು ಶಾಸ್ತ್ರೋಕ್ತವಾಗಿ ಹೇಳಿದ್ದಾರೆ. ಇದನ್ನು ಹೇಳಿದವರಿಗೂ ಕೇಳಿದವರಿಗೂ ಬಡತನ ಹಿಂಗಿ, ಐಶ್ವರ್ಯ ಪ್ರಾಪ್ತಿಯಾಗುವದು. ಶ್ರಾದ್ಧಕಾಲದಲ್ಲಿಯೂ ಇಲ್ಲಿ ಹೇಳಿದ ಶ್ರಾದ್ಧ ಮಹಿಮೆಯನ್ನು ಪಠಿಸಬೇಕು. ತೀರ್ಥವಾಸಿಗಳು ಪಾಪನಾಶಕ್ಕಾಗಿ ಪಾರಾಯಣ ಮಾಡಬೇಕು. ಇದರಿಂದ ದಾರಿದ್ರ್ಯ ನಾಶವಾಗುವದು. ಈ ಶ್ರಾದ್ಧದ ಮಹಾತ್ಮೆಯು ಪರಮ ಪವಿತ್ರವಾಗಿದೆ. ಇದು ಯಶಸ್ಸಿಗೆ ಮೂಲ, ಮಹಾಪಾಪನಾಶಕ, ಬ್ರಹ್ಮ, ರುದ್ರ, ಸೂರ್ಯ ಮುಂತಾದ ದೇವತೆಗಳು ಇದನ್ನು ಗೌರವಿಸಿದ್ದಾರೆ ಎಂದು ಜ್ಞಾನಿಗಳು ಶ್ರಾದ್ಧದ ಮಹಾ ಮಹಿಮೆಯನ್ನು ಕೊಂಡಾಡಿದ್ದಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ಹನ್ನೊಂದನೇಯ ಅಧ್ಯಾಯ ಮುಗಿದುದು*

## ಚಂದ್ರವಂಶದ ಉತ್ಪತ್ತಿ

## ಅಧ್ಯಾಯ - ೧೨

**ಭೀಷ್ಮ** :- ಸರ್ವಶಾಸ್ತ್ರಗಳಲ್ಲಿ ಪಂಡಿತರಾದ ಪುಲಸ್ತ್ಯರೆ, ಚಂದ್ರವಂಶವು ಹೇಗೆ ಉತ್ಪನ್ನವಾಯಿತು ? ಆ ವಂಶದಲ್ಲಿ ಕೀರ್ತಿಶಾಲಿಗಳಾದ ಯಾವ ಯಾವ ರಾಜರು ಆಗಿ ಹೋದರು ?

**ಪುಲಸ್ತ್ಯ** :- ಪೂರ್ವಕಾಲದಲ್ಲಿ ಬ್ರಹ್ಮದೇವನು ಸರ್ವವಿಧವಾದ ಸೃಷ್ಟಿಯನ್ನು ಮಾಡಲು ಆದೇಶವಿತ್ತನು. ಆ ಸೃಷ್ಟಿಯನ್ನು ಮಾಡುವುದಕ್ಕಾಗಿ ಅತ್ರಿಋಷಿಗಳು ಅತ್ಯುಗ್ರತಪಸ್ಸನ್ನು ಆಚರಿಸಿದರು. ಬ್ರಹ್ಮ, ಇಂದ್ರ, ಸೂರ್ಯ, ರುದ್ರ ಮುಂತಾದ ದೇವಾನುದೇವತೆಗಳ ಅಂತರಂಗದಲ್ಲಿ ಇದ್ದು ಅವರಿಂದ ಎಲ್ಲ ಕಾರ್ಯಗಳನ್ನು ಮಾಡಿಸುವ, ದುಃಖಗಳನ್ನು ಪರಿಹರಿಸುವ, ಅತೀಂದ್ರಿಯವಾದ ಆನಂದವನ್ನು ಉಂಟುಮಾಡುವ ಪರಬ್ರಹ್ಮವನ್ನು ಭಕ್ತಿಯಿಂದ ಧ್ಯಾನಿಸಿದನು. ಪ್ರಶಾಂತವಾದ ಮನಸ್ಸಿನಿಂದ ಇಂದ್ರಿಯಗಳನ್ನು ಜಯಿಸಿ, ತಪೋನುಷ್ಠಾನಗೈದನು. ತಪಸ್ಸಿನ ಮಹಿಮೆ ಆನಂದಕಾರಕವಾಗಿತ್ತು. ಆ ತಪಸ್ಸಿನ ಪ್ರಭಾವದಿಂದ ಅತ್ರಿಮುನಿಗೆ ಭಗವಂತನ ಸಾಕ್ಷಾತ್ಕಾರವಾಯಿತು. ಭಗವಂತನ ದರ್ಶನದಿಂದ ಹರ್ಷಪುಲಕಿತನಾದ ಮಹರ್ಷಿಯ ಎರಡೂ ಕಣ್ಣುಗಳಿಂದ ನೀರು ಸುರಿಯಿತು. ಆ ನೀರನ್ನು ಎಲ್ಲ ದಿಕ್ಕುಗಳು ಸ್ತ್ರೀ ರೂಪದಿಂದ ಸಂತಾನುಪೇಕ್ಷೆಯಿಂದ ಸ್ವೀಕರಿಸಿದವು.

ಆದ್ದರಿಂದ ಆ ಎಲ್ಲ ದಿಂಗಂಗನೆಯರಿಗೂ ಗರ್ಭಧಾರಣೆ ಆಯಿತು. ಆದರೆ ಅತ್ರಿಮುನಿಯ ಕಣ್ಣೀರಿನಿಂದ ಉಂಟಾದ ಆ ತೇಜಸ್ವೀ ಗರ್ಭವನ್ನು ಆ ದೆಶೆವೆಣ್ಣುಗಳು ಉದರದಲ್ಲಿ ಧರಿಸಲಿಕ್ಕಾಗದೆ ಆ ಗರ್ಭವನ್ನು ಬಿಟ್ಟುಬಿಟ್ಟವು. ಆಗ ಬ್ರಹ್ಮದೇವರು ಎಲ್ಲ ದಿಗ್ದೇವತೆಯರ ಗರ್ಭದಿಂದ ಉತ್ಪನ್ನವಾದ ತೇಜೋಂಶಗಳನ್ನೆಲ್ಲ ಒಂದಾಗಿ ಪಿಂಡೀಕರಿಸಿ ಒಬ್ಬ ತರುಣನನ್ನು ನಿರ್ಮಿಸಿದನು. ಅವನ ಕೈಯಲ್ಲಿ ಎಲ್ಲ ಆಯುಧಗಳನ್ನು ಕೊಟ್ಟನು. ಅವನೇ ಚಂದ್ರ. ದೇವತೆಗಳ ಶಕ್ತಿಯು ಅವನಲ್ಲಿ ತುಂಬಿ ತುಳುಕುತ್ತಿತ್ತು. ಆ ತೇಜಸ್ವೀ ಕುಮಾರನನ್ನು ಸಹಸ್ರಾಖ್ಯ ಎಂಬ ರಥದಲ್ಲಿ ಕೂಡಿಸಿಕೊಂಡು ಬ್ರಹ್ಮದೇವನು ತನ್ನ ಸತ್ಯಲೋಕಕ್ಕೆ ಕರೆದೊಯ್ದನು. ಆ ತೋಜೋಮೂರ್ತಿಯನ್ನು ಕಂಡು, ಬ್ರಹ್ಮರ್ಷಿಗಳೆಲ್ಲರೂ 'ಇವನು ನಮಗೆ ಒಡೆಯನಾಗಲಿ' ಎಂದು ಬ್ರಹ್ಮದೇವರಿಗೆ ಕೇಳಿಕೊಂಡರು. ಋಷಿಗಳು, ದೇವತೆಗಳ ಸ್ತೋತ್ರದಿಂದ ಅವನ ತೇಜಸ್ಸು ಇನ್ನೂ ಅಧಿಕವಾಯಿತು. ಅವನ ತೇಜಸಿನಿಂದ ಭೂಲೋಕದಲ್ಲಿ ದಿವ್ಯವಾದ ಔಷಧಿ ವನಸ್ಪತಿಗಳ ಸಮೂಹವೇ ಉತ್ಪನ್ನವಾಯಿತು. ರಾತ್ರಿ ಕಾಲದಲ್ಲಿ ಚಂದ್ರನಿಗೂ, ಔಷಧಿ ವನಸ್ಪತಿಗಳಿಗೂ ಕಾಂತಿಯು ಅಧಿಕವಾಗುತ್ತದೆ. ಅಂದಿನಿಂದ ಅವನು ಅವಕ್ಕೆ ಚಂದ್ರಮಂಡಲವೆಂದರೆ ವೇದಗಳ ತವರುಮನೆ, ರಸವಿಧಿ, ಈ ಚಂದ್ರಮಂಡಲವು ಶುಕ್ಲಪಕ್ಷದಲ್ಲಿ ವೃದ್ಧಿಯಾಗಿ ಕೃಷ್ಣಪಕ್ಷದಲ್ಲಿ ಕ್ಷೀಣವಾಗುವದು. ಅನಂತರ ದಕ್ಷ ಪ್ರಜಾಪತಿಯು ಆ ಚಲುವಿನ ಚಂದ್ರಾಮನಿಗೆ ತನ್ನ ಇಪ್ಪತ್ತೇಳು ಹೆಣ್ಣು ಮಕ್ಕಳನ್ನು ಕೊಟ್ಟು ಮದುವೆ ಮಾಡಿದನು. ಅವರೆಲ್ಲರೂ ರೂಪದಿಂದ ಅಪರೂಪರಾಗಿದ್ದರು. ಅನಂತರ ಆ ಚಂದ್ರನು ಕೊಂಚಕಾಲ ವಿಷ್ಣುವಿನ ಧ್ಯಾನತತ್ಪರನಾಗಿ ತಪಸ್ಸನ್ನು ಮಾಡಿದನು. ಅವನ ಈ ಘೋರ ತಪಸ್ಸಿನಿಂದ

ಭಗವಾನ್ ಶ್ರೀ ಮನ್ನಾರಾಯಣನು ಪ್ರಸನ್ನನಾಗಿ ನಿನಗೆ ಬಯಸಿದ ವರವನ್ನು ಕೊಡುತ್ತೇನೆ, ಕೇಳು ಎಂದನು. ಆಗ ಚಂದ್ರನು ಕೇಳಿಕೊಂಡನು.

**ಚಂದ್ರ** :- ಭಗವನ್, ''ನಾನು ಶಚೀಪತಿಯ ರಾಜಧಾನಿಯಾದ ಆ ಇಂದ್ರಪುರಿಯಲ್ಲಿಯೇ ರಾಜಸೂಯ ಯಾಗವನ್ನು ಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಬೇರೆ ಕಡೆ ಯಜ್ಞ ಮಾಡಿ ದೂರದಿಂದ ದೇವತೆಗಳನ್ನು ಆಹ್ವಾನಿಸುವದಕ್ಕಿಂತ ಅವರ ಮನೆಯಲ್ಲಿಯೇ ಅರ್ಥಾತ್ ದೇವಲೋಕದ ದೇವೇಂದ್ರನ ದಿವ್ಯಧಾಮದಲ್ಲಿಯೇ ರಾಜಸೂಯ ಯಜ್ಞವನ್ನು ನೆರವೇರಿಸಿಬಿಡುತ್ತೇನೆ. ದೇವತೆಗಳೆಲ್ಲರೂ ಪ್ರತ್ಯಕ್ಷವಾಗಿಯೇ ನನ್ನ ಆಹುತಿಗಳನ್ನು ಸ್ವೀಕರಿಸಲಿ. ಬ್ರಹ್ಮಾದಿ ದೇವತೆಗಳು ಅಲ್ಲಿ ಉಪಸ್ಥಿತರಾಗಲಿ. ಮಹಾದೇವನು ಕೈಯಲ್ಲಿ ತನ್ನ ಶೂಲಾಯುಧ ಹಿಡಿದುಕೊಂಡು ನನ್ನ ಯಜ್ಞ ರಕ್ಷಣೆಗೆ ನಿಂತುಕೊಳ್ಳಲಿ.'' ಸೋಮನ ವರಪ್ರಾರ್ಥನೆಗೆ ನಾರಾಯಣನು ''ಹಾಗೇ ಆಗಲಿ'' ಎಂದೆಂದು ಅಪೇಕ್ಷಿತ ವರವನ್ನಿತ್ತನು. ಆಗ ಚಂದ್ರನು ಶ್ರೀ ಹರಿಯ ಸಹಾಯದಿಂದ ಸ್ವರ್ಗಲೋಕದಲ್ಲಿಯೇ ರಾಜಸೂಯ ಯಾಗವನ್ನು ನೆರವೇರಿಸಿದನು. ಅತ್ರಿ ಋಷಿಯು ಹೋಮ ಮಾಡಲು 'ಹೋತ್ಮಾ' ಆಗಿ ಕುಳಿತುಕೊಂಡನು. ಭೃಗು ಋಷಿಯು 'ಅಧ್ವರ್ಯ' ಆಗಿ, 'ಉದ್ಗಾತನೂ' ಆದನು ಬ್ರಹ್ಮದೇವನು ಸ್ವಯಂ 'ಬ್ರಹ್ಮಾ' ಆಗಿ ಕುಳಿತುಕೊಂಡನು. ಶ್ರೀ ಹರಿಯು ಮೇಲ್ವಿಚಾರಕನಾಗಿ ಎಲ್ಲರಿಂದ ಯಜ್ಞಕಾರ್ಯವನ್ನು ಮಾಡಿಸುತ್ತಿದ್ದನು. ಸನಕ, ಸನಂದನಾದಿ ಋಷಿಗಳು ಸದಸ್ಯರಾದರು. ವಸುಗಳು, ವಿಶ್ವದೇವತೆಗಳು ಅಧ್ವರ್ಯುಗಳಾದರು. ಈ ಯಜ್ಞ ಪರಿಸಮಾಪ್ತಿಯ ನಂತರ ಚಂದ್ರನು ಋತ್ವಿಜರಿಗೆ ಮೂರು ಲೋಕಗಳನ್ನೇ ದಕ್ಷಿಣೆಗಾಗಿ ಕೊಟ್ಟುಬಿಟ್ಟನು.

ಯಜ್ಞವು ಯಥಾಸಾಂಗವಾಗಿ ಮುಗಿಯಿತು. 'ಅವಭೃತ' ಸ್ನಾನ ಮಾಡಿ ನಿಂತುಕೊಂಡ ಚಾರುಚಂದ್ರಮನ ಚೆಲುವಿಕೆಯನ್ನು ಕಂಡು ಅನೇಕ ದೇವತಾ ಸ್ತ್ರೀಯರು ಮುಗ್ಧರಾದರು. ಕಾಮನಿಗಿಂತ ಸುಂದರನಾದ ಆ ಸೋಮನ ಶರೀರ ಕಾಂತಿಯು ಅನೇಕ ಸುರಕಾಮಿನಿಯರ ಚಿತ್ತವನ್ನು ಕದಡಿತು. ಅವರು ತಮ್ಮ ಗಂಡಂದಿರನ್ನು ಬಿಟ್ಟು ಚಂದ್ರನ ಸಂಗಸುಖಕ್ಕಾಗಿ ಕಾತರಿಸಿ ಬಂದರು. ಕಾಂತಿಯು ಕಾಂತನನ್ನು, ದ್ಯುತಿಯು ವಿಭಾವಸುವನ್ನು, ತುಷ್ಟಿಯು ಧಾತಾರವನ್ನು, ಪ್ರತಿಯು ಪ್ರಭಾಕರನನ್ನು, ಕುರುಹು ಹವಿಷ್ಮಂತನನ್ನು, ಅಂಶುಮಾಲಿಯು ಕಶ್ಯಪನನ್ನು, ಧೃತಿಯು ನಂದನನ್ನು ತೊರೆದು ಚಂದ್ರನನ್ನು ಹೊಂದಿದರು. ಚಂದ್ರನು ಕೂಡಾ ತನ್ನ ರೂಪ ಸಿರಿಗೆ ಒಲಿದು ಬಂದ ಆ ನೆಚ್ಚಿನ ನಲ್ಲೆಯರೊಡನೆ ಸರಸಕೇಳಿಗಳನ್ನು ಆಡಿ ನಲಿದನು. ಯಜ್ಞಕರ್ಮ ಮುಗಿದ ಬಳಿಕ ಮುನಿಪತ್ನಿಯರಲ್ಲಿ ಆಸಕ್ತನಾದ ಆ ಚಂದ್ರನನ್ನು ಈ ದುರ್ವ್ಯಾಪಾರದಿಂದ ಹಿಂದಿರುಗಿಸಲು ಇಂದ್ರಾದಿ ದೇವತೆಗಳಿಗೂ ಸಾಧ್ಯವಾಗಲಿಲ್ಲ. ಭುಕ್ತ ಭೋಗರೂ, ತ್ಯಕ್ತರಾಗರೂ, ಜಟಾಧಾರಿಗಳೂ ಆದ ಮಹರ್ಷಿಗಳು ಪ್ರಾಯದಲ್ಲಿ ವಿಷಯ ಸುಖಾನುಭವಮಾಡಿ ಈಗ ವಿರಕ್ತರಾಗಿದ್ದರೂ ಚಂದ್ರನೊಂದಿಗೆ ಸಂಗಮೋತ್ಸುಕರಾದ ತಮ್ಮ ಪ್ರಮದೆಯರನ್ನು ಕಂಡು ಪುನಃ ಕಾಮವಶರಾದರು. ಪ್ರೇಮಾತುರರಾಗಿ ತಮ್ಮ ಮಡದಿಯರ ಬಳಿ ಹೋದಾಗ ಚಂದ್ರಾಸಕ್ತರಾದ ಆ ಋಷಿ ರಮಣಿಯರು ಇವರನ್ನು ತಿರಸ್ಕರಿಸಿದರು. ಹೀಗೆ ಅಪಚಾರ, ವ್ಯಭಿಚಾರಮಾಡಿದ ತಮ್ಮ ಮಡದಿಯರನ್ನು ಶಪಿಸಲಿಕ್ಕೂ ಅವರಿಗೆ ಸಾಧ್ಯವಾಗಲಿಲ್ಲ ಚಂದ್ರನ ದಿವ್ಯ ತೇಜಸ್ಸು

ಪ್ರಭಾವಗಳನ್ನು ಕಂಡು ಅವರು ಹೆದರಿ ಹೋದರು. ಆದುದರಿಂದ ಅವನ ಸಂಗದಿಂದ ದುಷ್ಟರಾದ ತಮ್ಮ ಅಂಗನೆಯರನ್ನು ಶಪಿಸಲು ಧೈರ್ಯವಾಗಲಿಲ್ಲ.

ಚಂದ್ರನು ಹತ್ತು ದಿಕ್ಕುಗಳನ್ನು ತನ್ನ ಕಿರಣ ಕಾಂತಿಯಿಂದ ಬೆಳಗುತ್ತ ಏಳು ಲೋಕಗಳಿಗೂ ನಾಥನಾಗಿ ಮೆರೆದನು. ಅಸಂಖ್ಯ ವರ್ಷಗಳವರೆಗೆ ಹಿಂದೆ ಗೈದ ತಪಸ್ಸಿನ ಪ್ರಭಾವದಿಂದ ಅವನಿಗೆ ಅಪರಿಮಿತ ಐಶ್ವರ್ಯ, ಅಪರೂಪ ರೂಪ, ನಿರಂಕುಶ ಅಧಿಕಾರ, ಸರ್ವಲೋಕ ಸ್ವಾಮಿತ್ವ, ಅತ್ಯದ್ಭುತ ಕಾಂತಿ, ಲೋಕೋತ್ತರ ಶಕ್ತಿಗಳು ಪ್ರಾಪ್ತವಾಗಿದ್ದವು.

ಒಂದು ದಿನ ಚಂದ್ರ ದೇವಲೋಕದ ಸುಂದರವಾದ ನಂದನವನದಲ್ಲಿ ಒಬ್ಬ ದಿವ್ಯಸುಂದರಿಯನ್ನು ಕಂಡ. ಅವಳ ಮೈ ತುಂಬ ಹೊರೆ ಹೊರೆಯಾಗಿ ಹೂವಿನ ಆಭರಣ. ಹಿಂಬದಿಯ ಭಾರದಿಂದ ಅವಳು ಮೆಲ್ಲನೆ ಅಡಿ ಇರಿಸುತ್ತಿದ್ದಳು. ಎದೆಯ ಭಾರದಿಂದ ಬಾಗಿದ ಆ ಬಳ್ಳಿ, ಮೈಯ ಬಾಲೆಯ ಮುಖಕ್ಕೆ ದುಂಬಿಗಳು ಇದೊಂದು ಸುಂದರ ಹೊಂದಾವರೆ ಎಂದು ಎರಗುತ್ತಿದ್ದವು. ಆ ಭೃಂಗಗಳನ್ನು ಜಾಡಿಸಲು ಕೈ ಅಲುಗಿಸಿದಾಗ ಆ ಕೋಮಲಾಂಗಿಗೆ ದಣಿವಾಗುತ್ತಿತ್ತು. ಚಂದ್ರನು ದೂರದಿಂದಲೇ ಅವಳನ್ನು ಕಂಡು ಅವಳು 'ಸುರಗುರು ಬೃಹಸ್ಪತ್ಯಾಚಾರ್ಯರ ಮಡದಿ ತಾರೆ ಎಂದು ತಿಳಿದುಕೊಂಡನು. ಕಾಮನ ಬಿಲ್ಲನ್ನೇ ಮುರಿದು ಹುಬ್ಬಾಗಿ ಹಚ್ಚಿದಂತೆ ಇತ್ತು. ಆ ಬೊಗಸೆಕಂಗಳ ಬಾಲೆಯನ್ನು ಕಂಡು ಚಾರುಚಂದ್ರನ ಚಿತ್ತ ಚಂಚಲವಾಯಿತು. ವನಾಂತರದ ಏಕಾಂತ ಹಾಗೂ ರೂಪ ರಾಣಿಯಾದ ತಾರೆಯ ದೇಹಕಾಂತಿಗಳು ಚಂದ್ರನ ಕಾಮವನ್ನು ಕೆರಳಿಸಿದವು. ಅವನು ಬಳ್ಳಿ ಮೈಬಾಲೆಯ ಬಳಕುವ ದೇಹವನ್ನು ತನ್ನ ಕೈಯಿಂದ ಬಳಿಸಿ ಅವಳ ನೀಳ್ಗೂದಲನ್ನು ಹಿಡಿದು ಎಳೆದನು. ತರುಣ ಚಂದ್ರನ ರೂಪವನ್ನು ಕಂಡು ಮುಗ್ಧರಾದ ಮಾನಿನಿಯರಲ್ಲಿ ತಾರೆಯೂ ಒಬ್ಬಳು. ಅವಳು ಮನಸಾ ಬಯಸಿದ ಚಂದ್ರನು ತಾನಾಗಿ ತನ್ನ ರೂಪರಾಶಿಯಿಂದ ಮೋಹಿತನಾಗಿ ಬಂದುದನ್ನು ಕಂಡು ಅವಳಿಗೂ ಆನಂದವಾಯಿತು. ಸಂತೋಷದಿಂದಲೇ ಅವಳು ಚಂದ್ರನೊಂದಿಗೆ ವಿಹರಿಸಿದಳು. ಆ ಉಪವನದಲ್ಲಿ ತಾರೆಯೊಂದಿಗೆ ಒಂದು ದಿನದ ಒಡನಾಟದಿಂದ ತೃಪ್ತಿಯಾಗಲಿಲ್ಲ ಚಂದ್ರನಿಗೆ. ಆ ತಾರಾ ತರುಣಿಯನ್ನು ಚಂದ್ರನು ತನ್ನ ಮನೆಗೇ ಕರೆದೊಯ್ದನು. ತನ್ನ ಕ್ರೀಡಾಮಂದಿರದಲ್ಲಿ ಆ ಗುರುಪತ್ನಿಯೊಡನೆ ಆನಂದದಿಂದ ಸ್ವಚ್ಛಂದ ಕೇಳಿವಿಲಾಸ ಅನುಭವಿಸಿದನು.

ಇತ್ತ ತಾರಾ ದೇವಿಯ ಪತಿಯಾದ ಬೃಹಸ್ಪತಿಗೆ ಮಡದಿಯ ವಿರಹದಿಂದ ಭಯಂಕರ ದುಃಖವಾಯಿತು. ಅದರಲ್ಲಿಯೂ ಚಂದ್ರನು ತನ್ನ ಕಾಮಿನಿಯನ್ನು ಕಾಮಾತುರನಾಗಿ ಸೆಳೆದೊಯ್ದಿರುವದನ್ನು ತಿಳಿದು ಆಘಾತವಾಯಿತು. ಅವನಿಗೆ ಹಗಲಿರುಳು ತಾರೆಯದೇ ಚಿಂತೆ. ಚಂದ್ರನ ಮೇಲೆ ಕೋಪ ಬಂದರೂ ಅವನಿಗೆ ಶಾಪ ಕೊಡುವುದಾಗಲಿಲ್ಲ. ತಪಶಕ್ತಿಯಿಂದ ಬಲಿಷ್ಠನಾದ ಚಂದ್ರನ ಮೇಲೆ ಬೃಹಸ್ಪತ್ಯಾಚಾರ್ಯರ ಯಾವ ಮಂತ್ರ-ತಂತ್ರಗಳು ನಡೆಯಲಿಲ್ಲ. ಶಸ್ತ್ರಾಸ್ತ್ರಗಳು ವ್ಯರ್ಥವಾದವು. ಬೆಂಕಿಯಿಂದ ಚಂದ್ರನನ್ನು ಸುಟ್ಟುಹಾಕಬೇಕು. ಶಸ್ತ್ರದಿಂದ ಕಡಿದು ಚೆಲ್ಲಬೇಕು. ಕಾಲಕೂಟ ವಿಷಕೊಟ್ಟು ಸಾಯಿಸಬೇಕು ಎಂದು ಆಲೋಚಿಸಿ ಬೃಹಸ್ಪತಿಯು ಬಗೆಬಗೆಯ ಉಪಾಯಗಳಿಂದ ಚಂದ್ರನನ್ನು ಕೊಲ್ಲಬೇಕೆಂದು ಹಂಚಿಕೆಹಾಕುತ್ತಿದ್ದರು. ಆದರೆ ತಪಸ್ಸಿನಿಂದ ದುರಾಧರ್ಷನಾದ ಆ ಸೋಮನ ಮೇಲೆ ಸುರುಚಾರ್ಯನ ಯಾವ ಹಂಚಿಕೆಗಳೂ ಸಾಗದೆ

ಎಲ್ಲವೂ ವ್ಯರ್ಥವಾದುವು. ಕೊನೆಗೆ ನಿರಾಶನಾಗಿ ಆ ದೇವಗುರುವು ತಾನೇ ಚಂದ್ರನ ಬಳಿಗೆ ಬಂದು ಕಾಮಾತುರನಾಗಿ "ಇನ್ನು ಮೇಲಾದರೂ, ಚಂದ್ರನೇ, ನನ್ನ ಮಡದಿಯನ್ನು ಬಿಟ್ಟುಕೊಡು" ಎಂದು ಕೇಳಿಕೊಂಡನು. ಆದರೆ ತಾರೆಯ ಸಂಗ ಸುಖದಲ್ಲಿ ಲಂಪಟನಾದ ಚಂದ್ರನು ಅವಳನ್ನು ತಿರುಗಿ ಬಿಡಲು ಒಪ್ಪಲಿಲ್ಲ. ಆಗ ಬ್ರಹ್ಮದೇವರು, ಮಹಾದೇವರು, ಉಳಿದೆಲ್ಲ ದೇವತೆಗಳಿಂದಲೂ ಹಾಗೂ ಅಷ್ಟದಿಕ್ಪಾಲಕರಿಂದಲೂ ಕೂಡಿ ಚಂದ್ರನ ಮನೆಗೆ ಬಂದು ಗುರುಪತ್ನಿಯನ್ನು ಬಿಟ್ಟುಕೊಡಲು ಹೇಳಿದರು. ಏನಾದರೂ ಕಾಮುಕನಾದ ಚಂದ್ರನು ತಾರಾ ತರುಣಿಯನ್ನು ಬಿಡಲು ಒಪ್ಪಲಿಲ್ಲ. ಯಾರ ಮಾತಿಗೂ ಜಗ್ಗಲಿಲ್ಲ. ಶಿವ, ಬ್ರಹ್ಮಾದಿಗಳ ಉಪದೇಶಕ್ಕೂ ಬಗ್ಗಲಿಲ್ಲ. ಇದನ್ನು ಕಂಡು ರುದ್ರದೇವರಿಗೆ ಕೋಪ ಬಂತು. ಅವರು ಬೃಹಸ್ಪತ್ಯಾಚಾರ್ಯರ ಜೊತೆಗೆ ವಿಚಾರಮಾಡಿ ಅವರ ಮಾತಿನಂತೆ ಚಂದ್ರನನ್ನು ಹೊಡೆದಾದರೂ ತಾರೆಯನ್ನು ತಿರುಗಿ ತರಬೇಕೆಂದು ನಿರ್ಧರಿಸಿದರು. ಚಂದ್ರನ ಮೇಲೆ ಯುದ್ಧ ಸಾರಿದರು. ಅನೇಕ ರುದ್ರ ಗಣಗಳು ಅವರನ್ನು ಹಿಂಬಾಲಿಸಿದವು. ಭೂತಗಣಗಳು ಶಿವನೊಡನೆ ಯುದ್ಧೋತ್ಸಾಹದಿಂದ ಹೊರಟವು. ಶಿವನು ಕೈಯಲ್ಲಿ ತನ್ನ ಪಿನಾಕ ಧನುಸ್ಸನ್ನು ಹಿಡಿದುಕೊಂಡು, ಯುದ್ಧಕ್ಕೆ ಹೊರಟಾಗ ಅವನ ಹಣೆಯ ಮೇಲಿನ ಮೂರನೆಯ ಕಣ್ಣು ಧಗಧಗಿಸುವ ಕೆಂಡದ ಹೊಂಡದಂತೆ ಭಯಂಕರವಾಗಿ ಉರಿಯುತ್ತಿತ್ತು. ಎಂಬತ್ತು ಗಣಾಧೀಶರು, ಹದಿನೈದುಲಕ್ಷರಥಾರೂಢರಾದ ಗಣಾಧ್ಯಕ್ಷರು, ಕೋಟಿಕೋಟಿ ಭೂತ, ಬೇತಾಳ, ಯಕ್ಷ, ನಾಗ, ಕಿನ್ನರರು, ಚಂದ್ರನ ಮೇಲೆ ಯುದ್ಧಕ್ಕಾಗಿ ಹರನನ್ನು ಹಿಂಬಾಲಿಸಿ ಯುದ್ಧಕ್ಕೆ ಹೊರಟರು. ಅದನ್ನು ಕಂಡು ಚಂದ್ರನು ಕೂಡ ಹುರುಪುಗೊಂಡು ನಕ್ಷತ್ರ ಸೈನ್ಯದೊಂದಿಗೆ ಯುದ್ಧಕ್ಕೆ ಅಣಿಯಾದನು. ದೈತ್ಯರು, ದಾನವರು ಚಂದ್ರನ ಬೆನ್ನುಕಟ್ಟಿ ರಣರಂಗಕ್ಕೆ ಬಂದಿಳಿದರು. ಶನಿ, ಅಂಗಾರಕ ಮೊದಲಾದ ಗ್ರಹ ಗಣಗಳು ಚಂದ್ರನ ಬೆನ್ನು ತಟ್ಟಿ ಹೋರಟಕ್ಕಾಗಿ ಹುರುದುಂಬಿಸಿ ತಾವೂ ಯುದ್ಧಕ್ಕೆ ಸನ್ನದ್ಧರಾಗಿ ರಣಭೂಮಿಯಲ್ಲಿ ಗರ್ಜನೆಮಾಡಿದರು. ಹೀಗೆ ಚಂದ್ರ ಹಾಗೂ ಮಹಾದೇವರ ನಡುವೆ ಘನಘೋರ ಸಂಗ್ರಾಮವು ಮಸಗಿತು. ಎರಡೂ ಪಕ್ಷಗಳಲ್ಲಿ ಅಸಂಖ್ಯಜನ ಮಡಿದರು. ಘೋರ ಆಯುಧಗಳ ಎಸೆದಾಟ, ಕ್ರೂರ ಶಸ್ತ್ರಾಸ್ತ್ರಗಳ ಮಸೆದಾಟದಿಂದ ಕಿಡಿಹಾರಿ ಕಿಚ್ಚಾಗಿ ಕೋಟ್ಯಾವಧಿ ಪ್ರಾಣಿಗಳು ಸತ್ತುಬಿದ್ದವು. ಈ ರೀತಿಯಾಗಿ ದಾರುಣವಾದ 'ಆಯುಧಾಸ್ತ್ರಗಳ ಆಘಾತಪ್ರತ್ಯಾಘಾತಗಳಿಂದ ಸ್ವರ್ಗ-ಭೂಮಿ-ಪಾತಾಳಲೋಕಗಳು ಸುಡತೊಡಗಿದವು. ಆಗ ಕ್ರುದ್ಧರಾದ ರುದ್ರದೇವರು ಬ್ರಹ್ಮಾಸ್ತ್ರವನ್ನೂ ಚಂದ್ರನು ರುದ್ರಾಸ್ತ್ರವನ್ನೂ ಹೂಡಿದರು. ಈ ಎರಡು ಅಮೋಘ ಅಸ್ತ್ರಗಳ ಪ್ರಯೋಗದಿಂದ ಸಮುದ್ರ, ಭೂಮಿ, ಅಂತರಿಕ್ಷಗಳೆಲ್ಲವೂ ಸಂತ್ರಸ್ತವಾದವು. ಇದರಿಂದ ಎಲ್ಲ ಲೋಕಗಳು ನಾಶ ಹೊಂದಿ ಪ್ರಳಯವೇ ಆಗುವುದು ಎಂದು ತಿಳಿದ ಬ್ರಹ್ಮದೇವರು ಯುದ್ಧದ ಮಧ್ಯದಲ್ಲಿ ಪ್ರವೇಶಿಸಿದರು. ಎರಡೂ ಕಡೆಯ ಸೇನಾಪತಿಗಳಿಗೆ ಈಗಲೇ ಯುದ್ಧ ನಿಲ್ಲಿಸಬೇಕೆಂದು ಆಜ್ಞೆಮಾಡಿದರು. ಮತ್ತು ಚಂದ್ರನಿಗೆ ಛೀ ಮಾಡಿ ಬುದ್ಧಿಹೇಳಿದರು. "ಚಂದ್ರನೆ, ವ್ಯರ್ಥವಾಗಿ ಈ ಜನ ಸಂಹಾರ ಕಾರ್ಯವನ್ನು ಕೈಕೊಂಡಿರುವಿ. ಏಕೆ ? ಇದು ಅಕಾರ್ಯವಲ್ಲವೆ ? ಪರಸ್ತ್ರೀ ಮತ್ತು ಗುರುಸ್ತ್ರೀಯರನ್ನು ಅಪಹರಿಸುವದಕ್ಕಾಗಿ ಇಂಥ ಭಯಂಕರ ಯುದ್ಧವನ್ನು ಹೂಡಲು ನಿನಗೆ ನಾಚಿಕೆ ಬರುವುದಿಲ್ಲವೆ ? ಶಸ್ತ್ರವನ್ನು ಹಿರಿಯಲು ನಿನಗೆ ಯಾವ ನಿಯಮ ನಿಬಂಧನೆಗಳು ಇಲ್ಲವೆ? ನೀನು ಗುರು

ಬೃಹಸ್ಪತ್ಯಾಚಾರ್ಯರ ಮಡದಿಯನ್ನು ಕೂಡಲೇ ಅವಳ ಗಂಡನ ಬಳಿಗೆ ಕಳಿಸಿಕೊಡು, ಪರಸ್ತ್ರೀಯರನ್ನು ಕದ್ದಿಯುವ ಕಳ್ಳನು ಎಂದಿಗೂ ಮಾನ್ಯನಾಗಲಾರನು. ಆದುದರಿಂದ ನೀನು ಈಗಲೇ ಆ ತಾರೆಯನ್ನು ಬೃಹಸ್ಪತಿಗೆ ಕೊಟ್ಟುಬಿಡು.''

ಬ್ರಹ್ಮದೇವರ ಮಾತನ್ನು ಕೇಳಿ, ಚಂದ್ರನು 'ಹಾಗೇ ಆಗಲಿ' ಎಂದು ಹೇಳಿ ಯುದ್ಧದಿಂದ ಹಿಂದೆ ಸರಿದನು. ಮತ್ತು ಬ್ರಹ್ಮನ ಆಜ್ಞೆಯಂತೆ ಗುರುಪತ್ನಿ ತಾರೆಯನ್ನು ಅವಳ ಪತಿ ಬೃಹಸ್ಪತಿಯ ಬಳಿಗೆ ಕಳಿಸಿಕೊಟ್ಟನು. ಇದರಿಂದ ಬೃಹಸ್ಪತಿಗೆ ಅತ್ಯಂತ ಸಂತೋಷವಾಯಿತು. ಅವನು ಆನಂದದಿಂದ ತನ್ನ ಮಡದಿಯನ್ನು ಕರೆದುಕೊಂಡು ರುದ್ರ ದೇವರೊಂದಿಗೆ ತನ್ನ ಮನೆಗೆ ತೆರಳಿದನು. ಮುಂದೆ ಒಂದು ವರ್ಷದ ಬಳಿಕ ತಾರೆಯಿಂದ ಒಂದು ಗಂಡು ಮಗು ಹುಟ್ಟಿತು. ಆ ಕುಮಾರನು ಪ್ರತಿ ಸೂರ್ಯನಂತೆ ತೇಜಃಪುಂಜನಾಗಿದ್ದನು. ದಿವ್ಯವಾದ ಪೀತಾಂಬರವನ್ನು ಧರಿಸಿದ ಆ ತಾರಾಪುತ್ರನು ಸರ್ವಶಾಸ್ತ್ರಗಳಲ್ಲಿ ಮಹಾಪಂಡಿತನು. ಆನೆಯ ಶಾಸ್ತ್ರಕ್ಕೆ ಪ್ರವರ್ತಕ ಮೂಲ ಪುರಷನೂ ಆಗಿದ್ದನು. ಚಂದ್ರನಿಗೆ ರಾಜ ಎಂಬ ಹೆಸರಿದೆ. ಅವನ ಮಗನಾದ ಈ ತಾರಾತನಯನು ಯಥಾರ್ಥನಾದ ರಾಜಪುತ್ರನೆನಿಸಿದನು. ವೈದ್ಯಶಾಸ್ತ್ರದಲ್ಲಿ ವಿಶಾರದನು. ಇತರ ಸರ್ವ ಶಾಸ್ತ್ರಗಳಲ್ಲಿ ಪರಿಣಿತನು. ಹನ್ನೆರಡು ಸೂರ್ಯರಿಗೆ ಸಮಾನ ಕಾಂತಿಯುಳ್ಳವನು. ಈ ತಾರೆಯ ಚಿರಂಜೀವನಿಗೆ ಅವನ ಪಾಂಡಿತ್ಯದ ಕಾರಣ **ಬುಧ** ಎಂದು ಹೆಸರು ಬಂದಿತು. ಅವನ ದಿವ್ಯ ಕಾಂತಿ ಕಂಡು ಎಲ್ಲ ಜನರ ತೇಜಸ್ಸು ಕ್ಷೀಣವಾಗಿ ಎಲ್ಲರದೂ ತೇಜೋವಧೆ ಆಯಿತು. ತಾರೆಗೆ ಗಂಡುಮಗ ಹುಟ್ಟಿದ್ದನ್ನು ಕೇಳಿ ಬ್ರಹ್ಮಾದಿಗಳು ಅಲ್ಲಿಗೆ ಬಂದರು. ಬುಧಕುಮಾರನ ಜಾತಕರ್ಮ ಸಂಸ್ಕಾರಕ್ಕಾಗಿ ಸುರಾಚಾರ್ಯನ ಮನೆಯಲ್ಲಿ ನೆರೆದ ಆ ದೇವತೆಗಳೆಲ್ಲರೂ ಕೂಡಿ, ತಾರೆಯನ್ನೇ ನೇರವಾಗಿ ಕೇಳಿದರು. ''ಈ ಕುಮಾರನು ನಿನ್ನಲ್ಲಿ ಯಾರಿಂದ ಹುಟ್ಟಿದನು ? ಅವನ ತಂದೆ ಯಾರು ?'' ಉತ್ತರ ಹೇಳಲು ತಾರೆಗೆ ನಾಚಿಕೆ ಎನಿಸಿ ಅವಳ ಮೌನದಿಂದ ದೇವತೆಗಳಿಗೆ ಮತ್ತಷ್ಟು ಕುತೂಹಲ. ಅವರು ಮತ್ತೆ ತಾರೆಯನ್ನು ಕೇಳಿದರು. ''ಇದು ಯಾರ ಮಗು ?'' ಕೊನೆಗೆ ಆ ತಾರಾರಮಣಿಯು ಮೆಲ್ಲನೆ ''ಇದು ಸೋಮನ ಪಿಂಡ'' ಎಂದು ಬಾಯ್ಬಿಟ್ಟು ಹೇಳಿದಳು. ಅವಳ ಈ ನುಡಿಯನ್ನು ಆಲಿಸಿ ಚಂದ್ರನು ಆಗಲೇ ಬಂದು ಆ ತನ್ನ ಮಗನನ್ನು ಕರೆದುಕೊಂಡು ಹೋದನು. ಅವನಿಗೆ ಬುಧನೆಂದು ಹೆಸರು ಇಟ್ಟನು. ಆ ಬುಧನಿಗೆ ಭೂಲೋಕದ ಸಾಮ್ರಾಜ್ಯವನ್ನು ಕೊಟ್ಟು, ಸಾರ್ವಭೌಮ ಸಿಂಹಾಸನದಲ್ಲಿ ಪಟ್ಟಾಭಿಷೇಕಗೈದನು. ಬ್ರಹ್ಮದೇವರು, ಬ್ರಹ್ಮರ್ಷಿಗಳೊಂದಿಗೆ ಕೂಡಿ ಆ ಬುಧನಿಗೆ ಗ್ರಹಗಣದ ಸ್ವಾಮ್ಯವನ್ನು ಕರುಣಿಸಿದರು. ಅನಂತರ ಬ್ರಹ್ಮದೇವರು ಅಲ್ಲಿಯೇ ಅಂತರ್ಧಾನ ಹೊಂದಿದರು. ಚಂದ್ರನ ಮಗನಾದ ಬುಧನು ಇಲಾದೇವಿಯಲ್ಲಿ ಅತ್ಯಂತ ಧಾರ್ಮಿಕವಾದ ಗಂಡು ಮಗನನ್ನು ಹಡೆದನು. ಆ ಬುಧ ಪುತ್ರನು ಪುರೂರವ ಎಂಬ ಹೆಸರಿನಿಂದ ಪ್ರಖ್ಯಾತನಾದನು. ಅವನು ಧರ್ಮದಿಂದ ಭೂಮಿಯನ್ನು ಪರಿಪಾಲನೆಮಾಡಿದನು. ತನ್ನ ತೇಜೋಬಲದಿಂದ ನೂರು ಅಶ್ವಮೇಧ ಯಜ್ಞಗಳನ್ನು ಸಾಂಗವಾಗಿ ನೆರವೇರಿಸಿದನು. ಎಲ್ಲ ಜನರೂ ಅವನನ್ನು ನಮಸ್ಕರಿಸುತ್ತಿದ್ದರು. ಹಿಮಗಿರಿಯ ಶಿಖರದಲ್ಲಿ ಆ ಪುರೂರವ ರಾಜನು ಬ್ರಹ್ಮದೇವರನ್ನು ಆರಾಧಿಸಿ ಏಳು ದ್ವೀಪಗಳ ಅಧಿಪತ್ಯವನ್ನೂ, ಅಪಾರ ಐಶ್ವರ್ಯವನ್ನೂ ಪಡೆದನು. ಕೇಶಿ ಮೊದಲಾದ ದೈತ್ಯರು ಅವನ ಪ್ರಬಲ ಪ್ರತಾಪವನ್ನು ತಾಳಲಾರದೆ ಅವನ ಸೇವಕರಾದರು. ಇವನ ಸೌಂದರ್ಯಕ್ಕೆ

ಮುಗ್ಧಳಾಗಿ ದೇವಲೋಕದ ಊರ್ವಶಿಯು ಭೂಮಿಗೆ ಬಂದು ಅವನ ಮಡದಿಯಾಗಿ ಇಲ್ಲಿಯೇ ಉಳಿದುಕೊಂಡಳು. ಏಳು ದ್ವೀಪಗಳು ಮತ್ತು ಅಸಂಖ್ಯ ವನ, ಉಪವನಗಳಿಂದ ಕೂಡಿದ ಪೃಥ್ವಿಯೆಲ್ಲವೂ ಜಗತ್ತಿಗೆಲ್ಲ ಕ್ಷೇಮವನ್ನು ಬಯಸುವ ಆ ಪುರೂರವ ರಾಜನಿಂದ ಸರಿಯಾಗಿ ಪಾಲಿಸಲ್ಪಟ್ಟಿತು.

ಕೀರ್ತಿ ಕಾಮಿನಿಯು ಸ್ವಯಂ ಆ ಪುರೂರವ ರಾಜನಿಗೆ ಚಾಮರ ಬೀಸಿ ಸೇವೆಗೈದಳು. ಬ್ರಹ್ಮದೇವರ ಅನುಗ್ರಹದಿಂದ ಅವನಿಗೆ ದೇವೇಂದ್ರ ಕೂಡ ತನ್ನ ಸಿಂಹಾಸನದಲ್ಲಿ ಅರ್ಧ ಸ್ಥಳ ಕೊಟ್ಟು ಗೌರವಿಸಿದನು. ಧರ್ಮ, ಅರ್ಥ, ಕಾಮ ಮುಂತಾದ ಪುರುಷಾರ್ಥಗಳನ್ನೆಲ್ಲ ಧರ್ಮದೊಂದಿಗೆ ಸಮನ್ವಯಮಾಡಿಕೊಂಡು ರಾಜ್ಯವಾಳಿದನು. ಒಮ್ಮೆ ಧರ್ಮಾರ್ಥ ಕಾಮಗಳು ಸಾಕ್ಷಾತ್ ಮೂರ್ತಿವಂತವಾದ ಆ ಪುರೂರವ ರಾಜನನ್ನು ನೋಡಲು ಬಂದವು. ಧರ್ಮ, ಅರ್ಥ, ಕಾಮ ಮೂವರನ್ನು ಈ ರಾಜನು ಸಮನಾಗಿ ನೋಡುತ್ತಾನೆ. ಇದು ಹೇಗೆ? ಎಂಬುದನ್ನು ತಿಳಿದುಕೊಳ್ಳಬೇಕಾಗಿತ್ತು. ಆ ಪುರುಷಾರ್ಥಗಳಿಗೆ ಅದಕ್ಕಾಗಿ ಕುತೂಹಲ ಪೂರ್ಣರಾದ ಆ ತ್ರಿವರ್ಗದ ದೇವತೆಗಳು ಈ ರಾಜರ್ಷಿಯ ಬಳಿಗೆ ಬಂದರು. ಆಗ ಮಹಾರಾಜನು ಭಕ್ತಿಯಿಂದ ಆ ಮೂವರನ್ನು ಸ್ವಾಗತ ಸತ್ಕಾರಮಾಡಿ, ಅರ್ಘ್ಯ, ಪಾದ್ಯಾದಿಗಳನ್ನು ನೀಡಿದನು. ಬಂಗಾರದ ಮೂರು ಆಸನಗಳನ್ನು ಹಾಕಿ ಅದರ ಮೇಲೆ ಮೂವರನ್ನು ಕೂಡಿಸಿ ಪೂಜೆಮಾಡಿದನು. ಅದರಿಂದ ಕಾಮ ಅರ್ಥಗಳಿಗೆ ಕೋಪ ಬಂದಿತು. ಅರ್ಥಾಭಿಮಾನಿ ದೇವತೆಯು ''ನೀನು ಲೋಭದಿಂದ ನಾಶ ಹೊಂದುವಿ'' ಎಂದು ಶಾಪವಿತ್ತನು. ಅದರಂತೆ ಕಾಮವು ಕೂಡ ''ಗಂಧಮಾದನಗಿರಿಯಲ್ಲಿ ಕುಮಾರ ವನಕ್ಕೆ ಬಂದಾಗ ನಿನಗೆ ಊರ್ವಶಿಯಿಂದ ವಿಯೋಗವಾಗುವದು. ಅದರಿಂದ ನಿನ್ನ ತಲೆಕೆಟ್ಟು ಹೋಗುವದು'' ಎಂದು ಶಾಪವಿತ್ತನು. ಹೀಗೆ ಅರ್ಥ ಕಾಮಗಳು ಶಾಪವಿತ್ತ ಬಳಿಕ ಧರ್ಮವು ವರವನ್ನು ಕೊಟ್ಟಿತು. ''ರಾಜಶ್ರೇಷ್ಠನೇ, ನೀನು ಚಿರಂಜೀವಿಯಾಗು ಮತ್ತು ಧರ್ಮಾತ್ಮನೂ ಆಗು. ನಿನ್ನ ಸಂತತಿಯು ಭೂಮಿಯಲ್ಲಿ ಅಭಿವೃದ್ಧಿಯನ್ನು ಹೊಂದಲಿ. ಚಂದ್ರಸೂರ್ಯರು ಇರುವವರೆಗೆ ನಿನ್ನ ವಂಶವು ಬೆಳೆಯುತ್ತಲಿದ್ದು ಎಂದೂ ಭೂಲೋಕದಲ್ಲಿ ನಾಶವನ್ನು ಹೊಂದದಿರಲಿ. ನೀನು ಊರ್ವಶಿಯ ವಿರಹದಿಂದ ಅರವತ್ತು ವರುಷ ಭ್ರಾಂತಿಷ್ಟನಾಗಿ ಅಲೆದಾಡಿದರೂ, ಅವಳ ಸಂಗ ಸುಖವೇ ನಿನಗೆ ಬಹುಕಾಲ ಲಭಿಸುವುದು. ಬೇಗನೆ, ದೇವಲೋಕದ ರಮಣೀರತ್ನವಾದ ಊರ್ವಶಿ ಎಂಬ ಆ ಅಪ್ಸರೆಯು ನಿನ್ನ ಅನುಪಮ ಸೌಂದರ್ಯದಿಂದ ಮುಗ್ಧಳಾಗಿ ತಾನಾಗಿಯೇ ನಿನ್ನ ವಶವಾಗುವಳು. ಒಂದು ಮನ್ವಂತರದವರೆಗೆ ನೀನು ಅವಳೊಂದಿಗೆ ಆನಂದದಿಂದ ಸ್ವಚ್ಛಂದವಾಗಿ ವಿಹಾರ ಸುಖ ಅನುಭವಿಸು'' ಹೀಗೆ ಹೇಳಿ ಧರ್ಮ, ಅರ್ಥ, ಕಾಮ ಎಂಬ ಪುರುಷಾರ್ಥಗಳ- ಅಧಿಷ್ಠಾತೃ ದೇವತೆಗಳು ಅದೃಶ್ಯರಾದರು.

ಪುರೂರವ ರಾಜನು ಭೂಲೋಕದ ರಾಜ್ಯವನ್ನು ಧರ್ಮದಿಂದ ಆಳುತ್ತಲಿದ್ದನು. ಅವನು ಪ್ರತಿದಿನ ದೇವೇಂದ್ರನ ದರ್ಶನಕ್ಕೆ ಸ್ವರ್ಗಕ್ಕೆ ಹೋಗಿ ಬರುತ್ತಿದ್ದನು. ಒಂದುದಿನ ಆ ಪುರೂರವ ದೊರೆಯು ದೇವೇಂದ್ರನೊಡನೆ ಒಂದು ರಥದಲ್ಲಿ ಕುಳಿತು ಅಂತರಿಕ್ಷದಲ್ಲಿ ಪಯಣಿಸುತ್ತಿದ್ದನು. ಆಗ ಕೇಶಿ ಎಂಬ ದೈತ್ಯನು ಚಿತ್ರಲೇಖಾ, ಊರ್ವಶಿ ಎಂಬ ಸ್ವರ್ಗಲೋಕದ ಇಬ್ಬರು ಅಪ್ಸರೆಯನ್ನು ಬಲಾತ್ಕಾರದಿಂದ ಸೆಳೆಯುತ್ತಿದ್ದನು. ಅದನ್ನು

ಕಂಡು ಪುರೂರವನು ಆ ದೈತ್ಯನನ್ನು ಬೆನ್ನಟ್ಟಿ ಆಯುಧಗಳಿಂದ ಹೋರಾಡಿದನು. ಹಿಂದೆ ಇಂದ್ರನನ್ನು ಗೆದ್ದ ತನ್ನ ವಾಯುವ್ಯಾಸದಿಂದಲೇ ಕೇಶಿಯನ್ನು ಪುರೂರವನು ಗೆದ್ದು, ಊರ್ವಶಿಯನ್ನು ಬಿಡುಗಡೆಮಾಡಿದನು. ಬಂಧಮುಕ್ತಳಾದ ಆ ದೇವಸುಂದರಿಯನ್ನು ತಂದು ದೇವೇಂದ್ರನಿಗೆ ಒಪ್ಪಿಸಿದನು. ಅಂದಿನಿಂದ ಪುರೂರವ ಹಾಗೂ ಮಹೇಂದ್ರರ ಮಧುರ ಮೈತ್ರಿಯು ಮತ್ತಷ್ಟು ಗಾಢವಾಯಿತು. ಸುರನಾಥನಿಗೆ ಎಲ್ಲರಿಗಿಂತಲೂ ಪುರೂರವನಲ್ಲಿ ಅತಿಶಯ ಪ್ರೀತಿ ಉಂಟಾಯಿತು. ಅವನು ಪುರೂರವನಿಗೆ ''ನನ್ನ ಕೆಲವು ನಿಯಮಗಳಿಗೆ ನೀನು ಒಪ್ಪುವದಾದರೆ ಈ ಲಲನಾಮಣಿಯನ್ನು ನಿನಗೆ ಕೊಟ್ಟು ಬಿಡುತ್ತೇನೆ'' ಎಂದು ಹೇಳಿದನು. ಮತ್ತು ಕೇಶಿ ಎಂಬ ದೈತ್ಯನನ್ನು ನಿಗ್ರಹಮಾಡಿ ಊರ್ವಶಿಯನ್ನು ಗೆದ್ದು ತಂದದ್ದಕ್ಕಾಗಿ ಸ್ವರ್ಗಲೋಕದಲ್ಲಿ ಪುರೂರವನ ಗೌರವಕ್ಕಾಗಿ ಉತ್ಸವ ಏರ್ಪಡಿಸಲ್ಪಟ್ಟಿತು. ಆ ಸಮಾರಂಭದಲ್ಲಿ ಊರ್ವಶಿಯು ಪುರೂರವನನ್ನು ಸಂತೋಷಪಡಿಸಲು ಹಾಡಿದಳು, ನರ್ತಿಸಿದಳು, ಉಲ್ಲಾಸದಿಂದ ಕುಣಿದು, ಮೈಮಣಿಸಿ ಆ ರಾಜಋಷಿಯನ್ನು ಸಂತೋಷಪಡಿಸಿದಳು. ಆ ಸಮಾರಂಭದ ಎರಡನೆಯ ಕಾರ್ಯಕ್ರಮವೆಂದರೆ ''ಲಕ್ಷ್ಮೀಸ್ವಯಂವರ'' ಎಂಬ ನಾಟಕಾಭಿನಯ. ಭರತ ಮುನಿಯು ಆ ನಾಟಕದ ದಿಗ್ದರ್ಶಕ. ಅದರಲ್ಲಿ ಮೇನಕಾ, ರಂಭಾ, ಊರ್ವಶೀ ಮುಂತಾದ ಎಲ್ಲ ಅಪ್ಸರೆಯರ ನರ್ತನದಿಂದ ಕಾರ್ಯಕ್ರಮವಿದ್ದಿತು. ಊರ್ವಶಿಯು ಅಂದು ಆ ನಾಟಕದಲ್ಲಿ ಲಕ್ಷ್ಮಿಯ ಪಾತ್ರವನ್ನು ಹಾಕಿದ್ದಳು. ರಂಗಭೂಮಿಯ ಮುಂದಿನ ಸಾಲಿನಲ್ಲಿ ಪ್ರೇಕ್ಷಕರ ಪಂಕ್ತಿಯಲ್ಲಿ ಪುರೂರವನು ಕುಳಿತಿದ್ದನು. ಲಕ್ಷ್ಮೀದೇವಿಯ ಪಾತ್ರದಲ್ಲಿ ಹಾವ-ಭಾವ ಸಹಿತವಾಗಿ ನರ್ತನಮಾಡುತ್ತಿರುವ ಊರ್ವಶಿಯು ಎದುರು ಕುಳಿತ ಪುರೂರವನನ್ನು ನೋಡಿ ಕಾಮಪೀಡಿತಳಾದಳು. ಅವಳ ಕಣ್ಣು ಆ ರಾಜಋಷಿಯ ಮುಖದಲ್ಲಿಯೇ ನೆಟ್ಟು ಬಿಟ್ಟವು.

ಅವಳು ಪುರೂವನನ್ನೇ ನಿಟ್ಟಿಸಿ ನೋಡುತ್ತಿರುವಲ್ಲಿ ತನಗೆ ಭರತಮುನಿಯು ಕಲಿಸಿದ ನಾಟಕದ ಮಾತುಗಳನ್ನು ಮರೆತುಬಿಟ್ಟಳು. ಅವಳ ಈ ಕಾಮಪರವಶತೆ ಕಂಡು ಭರತ ಮುನಿಗೆ ಕೋಪ ಬಂದಿತು. ಆ ಕೋಪದಿಂದ ಅವನು ಊರ್ವಶಿಗೆ ಶಾಪವಿತ್ತನು : ''ನೀನು ಭೂಲೋಕದಲ್ಲಿ ಪುರೂರವನಿಂದ ಆಗಲಿ ಅರವತ್ತು ವರ್ಷ ಬಳ್ಳಿಯಾಗಿ ನಿಂತುಕೊಳ್ಳುವಿ. ಈ ಪುರೂರವನಾದರೂ ತಲೆಕೆಟ್ಟು ಹುಚ್ಚನಾಗಿ ಪಿಶಾಚಿಯಂತೆ ಅಲ್ಲಿಯೇ ಇರುವನು.''

ಭರತ ಮುನಿಯ ಶಾಪವು ಊರ್ವಶಿಗೆ ಒಂದು ವರವೇ ಎನಿಸಿತು. ಅವಳು ಭೂಲೋಕಕ್ಕೆ ಹೋಗಿ ಪುರೂರವನೊಡನೆ ಮದುವೆ ಮಾಡಿಕೊಂಡು, ಅವನ ಮಡದಿಯಾಗಿ, ಭೂಲೋಕದಲ್ಲಿ ಮುತ್ತೈದೆಯಾಗಿ ಬಾಳುವೆಮಾಡಿದಳು ಬಹುಕಾಲ. ಭರತ ಮುನಿಯ ಶಾಪವನ್ನು ಕೂಡ ಅನುಭವಿಸಿದಳು. ಅನಂತರ ಮತ್ತೆ ಅವರಿಬ್ಬರ ಪುರ್ನಮಿಲನವಾಯಿತು. ಮತ್ತೆ ಎಷ್ಟೋ ವರ್ಷಗಳವರೆಗೆ ಆ ಊರ್ವಶಿ ಪುರೂರವರು ಸಾಂಸಾರಿಕ ಸುಖ ಅನುಭವಿಸಿದರು. ಆ ಪುರೂರವನಿಂದ ಊರ್ವಶಿಗೆ ಎಂಟು ಜನ ಮಕ್ಕಳು ಹುಟ್ಟಿದರು. ಆಯುಃ, ದೃಢಾಯು, ವಶ್ಯಾಯು, ಧನಾಯು, ವೃತ್ತಿವಾನ್, ವಸು, ದಿವಿಜಾತ, ಸುಬಾಹು, ಎಂದು ಎಂಟು ಊರ್ವಶೀ ಪುತ್ರರ ಹೆಸರು. ಇವರೆಲ್ಲರಿಗೂ ದಿವ್ಯಕಾಂತಿ, ಅಮಿತ ಬಲ, ಅಪೂರ್ವ ತೇಜಸ್ಸು ತಾಯಿ ತಂದೆಗಳಿಂದ ಬಳುವಳಿಯಾಗಿ ಬಂದಿದ್ದವು. ಈ ಊರ್ವಶಿ ಪುರೂರವರ ಹಿರಿಯ ಮಗನಾದ ಆಯುಃ ಕುಮಾರನಿಗೆ ನಹುಷ, ವೃದ್ಧಶರ್ಮ, ರಜಿ, ರಂಭ, ವಿಪಾಪ್ಮ ಎಂಬ ಹೆಸರಿನ ಮಹಾವೀರರಾದ ಐವರು ಮಕ್ಕಳು ಜನಿಸಿದರು.

ಇದರಲ್ಲಿ ನಡುವಿನವನಾದ ರಜಿ ರಾಜನಿಗೆ ರಾಜೇಯ ಎಂಬ ಹೆಸರಿನ ನೂರು ಜನ ಮಕ್ಕಳು ಉತ್ಪನ್ನರಾದರು. ಈ ರಜಿಯು ಅತ್ಯಂತ ಭಕ್ತಿಯಿಂದ ಶ್ರೀ ನಾರಾಯಣ ದೇವರನ್ನು ಆರಾಧನೆಮಾಡಿದನು. ಅದರಿಂದ ಪರಿತುಷ್ಟನಾದ ವಿಷ್ಣುವು ಈ ರಜಿರಾಜನಿಗೆ "ದೇವ, ದಾನವ, ಮಾನವರಲ್ಲಿ ನೀನು ಸರ್ವದಾ ವಿಜಯಶಾಲಿಯಾಗು" ಎಂದು ವರವನ್ನು ಕೊಟ್ಟನು. ವಿಷ್ಣುವಿನ ಈ ವರದ ಬಲದಿಂದ ರಜಿಯು ಇದ್ದ ಪಕ್ಷದಲ್ಲಿ ಗೆಲುವು ಕಟ್ಟಿಟ್ಟ ಮಾತಾಗಿತ್ತು. ಮುಂದೆ ಕೆಲವು ದಿನಗಳ ನಂತರ ದೇವ ದೈತ್ಯರಲ್ಲಿ ಹೋರಾಟವು ಪ್ರಾರಂಭವಾಯಿತು. ಆ ಸಂಗ್ರಾಮವು ಮುನ್ನೂರು ವರ್ಷಗಳವರೆಗೆ ನಡೆಯಿತು. ದೇವತೆಗಳ ಸೇನಾಪತಿ ಇಂದ್ರ. ದೈತ್ಯರ ಸೇನಾಪತಿ ಪ್ರಲ್ಹಾದ. ಇಬ್ಬರೂ ವೀರರು. ಇಬ್ಬರೂ ಭಗವದ್ಭಕ್ತರು. ಮಹಾಬಲಿಷ್ಠರು. ತಪಃಪ್ರಭಾವ ಸಂಪನ್ನರು. ಇವರಲ್ಲಿ ಯಾರು ಕಡಿಮೆ ಯಾರು ಹೆಚ್ಚು ? ಇಬ್ಬರೂ ಸೋಲಲಿಲ್ಲ. ಯುದ್ಧವು ನಡೆದೇ ನಡೆಯಿತು. ಕೊನೆಗೆ ದೇವದಾನವರಿಬ್ಬರೂ ಬೇಸತ್ತು ಹೋದರು. ಕಡೆಗೆ ಅವರಿಬ್ಬರೂ ಬ್ರಹ್ಮದೇವರ ಬಳಿಗೆ ಹೋಗಿ ಕೇಳಿದರು. "ಈ ಯುದ್ಧದಲ್ಲಿ ಗೆಲುವು ಯಾರಿಗೆ ?" ಎಂದು. ಅದಕ್ಕೆ ಬ್ರಹ್ಮದೇವರು "ರಜಿ ರಾಜನು ಯಾವ ಪಕ್ಷದಲ್ಲಿ ಇರುವನೋ ಆ ಪಕ್ಷಕ್ಕೆ ಜಯ ನಿಶ್ಚಿತ" ಎಂದು ಹೇಳಿದರು. ಆಗ ದೈತ್ಯರು ಮಹಾರಾಜ ರಜಿಯ ಬಳಿಗೆ ಸಹಾಯ ಯಾಚನೆಗೆ ಧಾವಿಸಿದರು. ಕೈಮುಗಿದು "ನಮಗೆ ನೀನು ಸಹಾಯಕನಾಗಿ ನಮ್ಮ ಪಕ್ಷದಲ್ಲಿ ನಿಂತು ಯುದ್ಧಮಾಡಿ ವಿಜಯವನ್ನು ತಂದುಕೊಡು" ಎಂದು ಕೇಳಿಕೊಂಡರು. ಅದಕ್ಕೆ ರಜಿ ರಾಜನು "ನೀವು ನನ್ನನ್ನು ನಿಮ್ಮ ರಾಜನನ್ನಾಗಿ ಮಾಡುವದಾದರೆ ನಾನು ನಿಮ್ಮ ಪಕ್ಷದಲ್ಲಿ ನಿಂತು ಯುದ್ಧ ಮಾಡಿ ನಿಮಗೆ ಗೆಲುವು ತಂದುಕೊಡುವೆನು. ನೀವು ವಿಜಯಶಾಲಿಗಳಾದ ಬಳಿಕ, ನಾನು ಗೆದ್ದುಕೊಟ್ಟ ಸಾಮ್ರಾಜ್ಯವನ್ನೆಲ್ಲ ನನಗೆ ಒಪ್ಪಿಸಬೇಕು. ನಿಮ್ಮ ಸಾಮ್ರಾಜ್ಯ ಸಿಂಹಾಸನದ ಮೇಲೆ ನನಗೆ ಪಟ್ಟಾಭಿಷೇಕಮಾಡಿ, ನೀವೆಲ್ಲರೂ ನನಗೆ ಅಧೀನರಾಗಬೇಕು" ಎಂದನು. ದೈತ್ಯರು ರಜಿರಾಜನ ಈ ಕರಾರನ್ನು ಒಪ್ಪಲಿಲ್ಲ. ಆದುದರಿಂದ ರಜಿಯೂ ಅವರಿಗೆ ಸಹಾಯ ಮಾಡಲಿಲ್ಲ. ಅನಂತರ ದೇವತೆಗಳು ರಜಿ ರಾಜನ ಸಹಾಯ ಕೇಳಲು ಬಂದರು. ಅವರಿಗೂ ಆ ಮಹಾರಾಜನು ತನ್ನ ನಿರ್ಬಂಧವನ್ನು ಹಾಕಿದನು. ಅದಕ್ಕೆ ದೇವತೆಗಳು ರಜಿಗೆ ಹೇಳಿದರು. "ರಜಿ ರಾಜನೆ, ನೀನು ನಮ್ಮ ರಾಜನು. ನೀನೇ ಎಲ್ಲ ವೈರಿಗಳನ್ನು ಯುದ್ಧದಲ್ಲಿ ನಾಶಮಾಡಿ ಗೆದ್ದ ಬಳಿಕ ನಮಗೆ ವಿಜಯವನ್ನು ತಂದುಕೊಟ್ಟ ನಿನಗೇ ನಮ್ಮ ಸ್ವರ್ಗ ಸಾಮ್ರಾಜ್ಯ ಒಪ್ಪಿಸಿ ಬಿಡುತ್ತೇವೆ." ದೇವತೆಗಳ ಈ ಮಾತಿನಿಂದ ಸಂತುಷ್ಟನಾದ ರಜಿಯು ಅವರ ಪಕ್ಷದಲ್ಲಿ ನಿಂತುಕೊಂಡು ಯುದ್ಧಮಾಡಿದನು. ದೇವೇಂದ್ರನ ವಜ್ರಾಯುಧದಿಂದ ಕೊಲ್ಲಲು, ಅಶಕ್ಯರಾದ ದೈತ್ಯರನ್ನು ಹೊಡೆದು ಕೊಂದನು. ದಾನವರೆಲ್ಲರೂ ಸೋತು ಹೋದರು. ದೇವತೆಗಳಿಗೆ ಗೆಲುವು ಒಲಿದು ಬಂದಿತು. ತಮ್ಮ ಮಾತಿನಂತೆ ದೇವೇಂದ್ರನು ಹಾಗೂ ದೇವತೆಗಳು ರಜಿ ರಾಜನಿಗೆ ಸ್ವರ್ಗ-ಸಾಮ್ರಾಜ್ಯವನ್ನು ಒಪ್ಪಿಸಿದರು. ಸ್ವಯಂ ಸುರರಾಜನೇ ರಜಿ ಮಹಾರಾಜನನ್ನು 'ತಂದೆ' ಎಂದು ಗೌರವಿಸಿದನು. "ನಾನು ನಿನ್ನ ಮಗ" ಎಂದು ಹೇಳಿ ಅವನಿಗೆ ಸರ್ವಾಧಿಕಾರವನ್ನಿತ್ತು ಸತ್ಕರಿಸಿದನು. ಆದರೆ ರಜಿ ರಾಜನಿಗೆ ಯಾವ ರಾಜ್ಯದ ಆಶೆಯೂ ಇರಲಿಲ್ಲ. ಅವನು ತನಗೆ ಕೊಟ್ಟ ಸಾಮ್ರಾಜ್ಯವನ್ನೆಲ್ಲ ಮರಳಿ ಇಂದ್ರನಿಗೆ ಒಪ್ಪಿಸಿ, ಶ್ರೀ ಹರಿಯನ್ನು ಆರಾಧಿಸಲು ತಪಸ್ಸಿಗಾಗಿ ತೆರಳಿದನು.

ಅನಂತರ ರಜಿಯ ಮಕ್ಕಳು ದೇವೇಂದ್ರನಿಂದ ಸ್ವರ್ಗ ಸಾಮ್ರಾಜ್ಯವನ್ನು ಕಸಿದುಕೊಂಡರು. ''ಯುದ್ಧ ಪೂರ್ವದ ಒಡಂಬಡಿಕೆಯಂತೆ ಈ ಸ್ವರ್ಗ ರಾಜ್ಯವೆಲ್ಲವೂ ನಮ್ಮ ತಂದೆಗೆ ಸೇರಿದ್ದು. ತಂದೆಯ ನಂತರ ಅವನ ಮಕ್ಕಳಾದ ನಾವೇ ಈ ಸ್ವರ್ಗದ ಅಧಿಕಾರಿಗಳು. ಮತ್ತು ಯಜ್ಞಗಳಲ್ಲಿಯ ಆಹುತಿಗಳು ನಮಗೆ ಬರಬೇಕು'' ಎಂದು ವಾದಿಸಿ ಬಲಾತ್ಕಾರದಿಂದ ಇಂದ್ರನನ್ನು ಕೆಳಗಿಳಿಸಿ ಸ್ವರ್ಗದ ಸಾಮ್ರಾಜ್ಯವನ್ನೆಲ್ಲ ಆಕ್ರಮಿಸಿದರು. ತಮ್ಮ ತಪೋಬಲ, ಪರಾಕ್ರಮಗಳಿಂದ ಯಜ್ಞಗಳಲ್ಲಿಯ ಹವಿರ್ಭಾಗಗಳನ್ನು ಸ್ವೀಕರಿಸಿದರು. ಸ್ವರ್ಗ-ಅಮರಾವತಿಯನ್ನು ಸ್ವಾಧೀನ ಪಡಿಸಿಕೊಂಡರು. ಮತ್ತು ಇಂದ್ರಾದಿ ದೇವತೆಗಳನ್ನು ಕಾಡಿಸಿ ಪೀಡಿಸಿದರು. ರಾಜ್ಯಭ್ರಷ್ಟನಾದ ದೇವೇಂದ್ರನು ರಜಿಕುಮಾರರ ತಾಪವನ್ನು ತಾಳಲಾರದೆ ದೀನನಾಗಿ ಗುರು ಬೃಹಸ್ಪತ್ಯಾಚಾರ್ಯರ ಕಡೆಗೆ ಬಂದು ಅಂಗಲಾಚಿ ಬೇಡಿಕೊಂಡನು. ''ಗುರುಗಳೇ, ಉನ್ಮತ್ತರಾದ ಈ ರಜಿಯ ಮಕ್ಕಳ ಕಾಟವನ್ನು ನಾನು ಇನ್ನು ಮೇಲೆ ಸೈರಿಸಲಾರೆ. ತಪೋಬಲದಿಂದಲೂ, ದೇಹಬಲದಿಂದಲೂ ಅವರು ನನ್ನನ್ನು ಸೋಲಿಸಿ ಅಧಿಕಾರ ಕಿತ್ತುಕೊಂಡಿದ್ದಾರೆ. ಯಜ್ಞಭಾಗವನ್ನೂ ಅವರು ನನಗೆ ಬಿಡುವುದಿಲ್ಲ. ಹೀಗಾಗಿ ನಮ್ಮೆಲ್ಲ ದೇವತೆಗಳಿಗೆ ಈಗ ಕಂಗಾಲು ಪರಿಸ್ಥಿತಿ ಬಂದಿದೆ. ಹೇಗಾದರೂ ಮಾಡಿ ನಮ್ಮ ಸುರರಾಜ್ಯವು ಮರಳಿ ದೊರೆಯುವಂತೆ ಮಾಡಿರಿ. ಏನಾದರೂ ಹಂಚಿಕೆ ಹೂಡಿರಿ. ಬುದ್ಧಿಗೆ ನೀವೇ ಅಧಿಪತಿಗಳಲ್ಲವೆ ?''

ದೇವರಾಜನ ಈ ದೀನ ನುಡಿಯನ್ನು ಕೇಳಿ ಬೃಹಸ್ಪತ್ಯಾಚಾರ್ಯರು ದೇವೇಂದ್ರನಿಂದ ಅನೇಕ ಶಾಂತಿ ಕರ್ಮ ಮಾಡಿಸಿದರು. ವೇದೋಕ್ತವಾದ ಅನೇಕ ಶಾಂತಿ ವಿಧಾನಗಳಿಂದ ದೇವೇಂದ್ರನಿಗೆ ದೊಡ್ಡ ಬಲ ಬಂದಂತಾಯಿತು. ಅನಂತರ ಆ ಆಚಾರ್ಯನು ತನ್ನ ವಿಮಾನದಲ್ಲಿ ಕುಳಿತು ರಜಿ ಪುತ್ರರ ಬಳಿಗೆ ಬಂದನು. ವೇದದ ರಹಸ್ಯವನ್ನು ಸ್ವಯಂ ಬಲ್ಲವರಾಗಿದ್ದ ಬೃಹಸ್ಪತ್ಯಾಚಾರ್ಯರು ದೇವತೆಗಳಿಗೆ ಅವರ ರಾಜ್ಯ ದೊರಕಿಸಿ ಕೊಡುವದಕ್ಕಾಗಿ ನಾಸ್ತಿಕ ಧರ್ಮವನ್ನು ಅನುಸರಿಸಿ ರಜಿಪುತ್ರರನ್ನೆಲ್ಲ ಮೋಹಗೊಳಿಸಿದನು ವೇದ ಬಾಹ್ಯವಾದ ಆ ನಾಸ್ತಿಕ ಧರ್ಮವನ್ನು ಸುಖಲೋಲುಪರಾದ ರಜಿಯ ಮಕ್ಕಳಿಗೆ ಪರಿಣಾಮಕಾರಿಯಾಗುವಂತೆ ತಿಳಿಸಿ ಬಿಂಬಿಸುವಂತೆ ಮಾಡಿದರು. ಅವರೆಲ್ಲರಿಗೂ ಈ ಹೊಸ ಧರ್ಮವು ಮನಸ್ಸಿಗೆ ಹಿಡಿಯಿತು. ಅವರೆಲ್ಲರೂ ವೇದ ಧರ್ಮವನ್ನು ಬಹಿಷ್ಕರಿಸಿದರು. ಹೇತುವಾದವನ್ನು ನಂಬಿ, ವೇದ ಭ್ರಷ್ಟರಾದ ಆ ರಜಿ ಪುತ್ರರು ತಮ್ಮ ತಪಸ್ಸನ್ನು, ತೇಜಸ್ಸನ್ನು ಕಳೆದುಕೊಂಡು ನಾಸ್ತಿಕಮತ ಅವಲಂಬಿಸಿ ನಿರ್ವೀರ್ಯರಾದರು. ಇದನ್ನು ತಿಳಿದ ಬಳಿಕ ದೇವೇಂದ್ರನು ಹೋಗಿ ವಜ್ರಾಯುಧದಿಂದ ಎಲ್ಲರನ್ನು ಹೊಡೆದು ಕೊಂದನು. ಸನಾತನ ವೈದಿಕ ಧರ್ಮವನ್ನು ಬಹಿಷ್ಕರಿಸಿದವರಿಗೆ ಸರ್ವ ನಾಶವೇ ಗತಿಯಷ್ಟೇ?

ರಜಿಯ ಅಣ್ಣನಾದ ನಹುಷ ರಾಜನಿಗೆ ಯತಿ, ಯಯಾತಿ, ಸಂಯಾತಿ, ಉದ್ಭವಪದ, ವಿಯತಿ, ವಿದ್ಯಸಾತಿ ಎಂದು ಏಳು ಜನ ಪುತ್ರರು ಜನಿಸಿದರು. ಇವರಲ್ಲಿ ಹಿರಿಯನಾದ ಯತಿಯು ಬಾಲ್ಯದಲ್ಲಿ ವೈಖಾನಸ ವ್ರತಹಿಡಿದು ಮಹಾಯೋಗಿಯಾದನು ಹಿರಿಯ ಅಣ್ಣನು ಯೋಗಿಯಾಗಿ ತಪಸ್ಸಿಗೆ ಹೋದ ಬಳಿಕ ನಹುಷನ ಎರಡನೆಯ ಮಗ ಯಯಾತಿಯು ರಾಜ್ಯ ಸಿಂಹಾಸನವನ್ನು ಆರೋಹಣಮಾಡಿದನು. ಈ ಯಯಾತಿಯು ಧರ್ಮ ನಿಷ್ಠನಾದವನು. ಈ ಯಯಾತಿಗೆ ಇಬ್ಬರು ಮಡದಿಯರು. ಶುಕ್ರಾಚಾರ್ಯರ

ಮಗಳು ದೇವಯಾನಿ ಮತ್ತು ವೃಷಪರ್ವ ಎಂಬ ಹೆಸರಿನ ದೈತ್ಯನ ಪುತ್ರಿ ಶರ್ಮಿಷ್ಠೆ. ಯಯಾತಿಗೆ ದೇವಯಾನಿಯಿಂದ ಯದು, ತುರ್ವಸು ಎಂಬ ಇಬ್ಬರು ಗಂಡು ಮಕ್ಕಳು, ಶರ್ಮಿಷ್ಠೆಯಿಂದ ದ್ರುಹು, ಅನು, ಕುರು, ಎಂದು ಮೂವರು ಮಕ್ಕಳು ಹುಟ್ಟಿದರು. ಯಯಾತಿ ದೊರೆಯ ಈ ಐದು ಮಕ್ಕಳಲ್ಲಿ ಯದುವು ಹಾಗೂ ಶರ್ಮಿಷ್ಠೆಯ ಕಿರಿಯ ಮಗ ಕುರುವಂಶ ವರ್ಧಕರಾದರು. ಈ ಎರಡೂ ವಂಶಗಳು ಮುಂದೆ ಮಕ್ಕಳು ಮೊಮ್ಮಕ್ಕಳು, ಮರಿಮೊಮಕ್ಕಳಾದಿಯಾಗಿ ಕುಡಿಬಿಟ್ಟು ದಾಗುಂಡಿಯಿಟ್ಟು ಬೆಳೆದು ಬೃಹದಾಕಾರವಾಗಿ ಭೂಮಂಡಲದ ತುಂಬ ಹಬ್ಬಿದವು. ಅದರಲ್ಲಿ ಭೀಷ್ಮನೆ, ನೀನು ಹುಟ್ಟಿದ ಕುರುಕುಲದ ಮೂಲ ಪುರುಷನಾದ ಕುರುರಾಜನ ವಂಶವನ್ನು ಹೇಳುತ್ತೇನೇ ಕೇಳು.

ಯದುವಿನಿಂದಲೇ ಯಾದವವಂಶದ ಪ್ರಾರಂಭವಾಯಿತು. ಈ ಯಾದವ ವಂಶದಲ್ಲಿಯೇ ಭೂಭಾರ ಹರಣಕ್ಕಾಗಿ ಮತ್ತು ಪಾಂಡವರ ಹಿತಕ್ಕಾಗಿ ಅವತಾರ ಮಾಡಿದ ವಿಷ್ಣುವು ಬಲರಾಮ-ಕೃಷ್ಣ ಎಂಬ ಹೆಸರಿನಿಂದ ಹುಟ್ಟಿ ದುಷ್ಟನಿಗ್ರಹ ಶಿಷ್ಟಪರಿಪಾಲನ ಮಾಡಿದನು. ಆ ವಂಶದ ಬೆಳವಣಿಗೆ ಹೇಳುತ್ತೇನೆ ಕೇಳು. ದೇವಯಾನಿ ಹಾಗೂ ಯಯಾತಿ ಮಹಾರಾಜರ ಜ್ಯೇಷ್ಠ ಪುತ್ರ ಯದು ಮಹಾರಾಜನಿಗೆ ಸಹಸ್ರಜಿತ್, ಕ್ರೋಷ್ಟು, ನೀಲ, ಅಂಜಿಕ, ರಘು ಎಂದು ಐದು ಉತ್ತಮ ಪುತ್ರರು ಹುಟ್ಟಿದರು. ಇವರಲ್ಲಿ ಹಿರಿಯನಾದ ಸಹಸ್ರಜಿತನಿಗೆ ಶತಜಿತ್ ಎಂಬ ಸತ್ಪುತ್ರನು ಉತ್ಪನ್ನನಾದನು. ಆ ಶತಜಿತನಿಗೆ ಹಯ್ಯ, ಹಯ, ಉತ್ತಾಲಹಯ ಎಂದು ಮೂವರು ಮಕ್ಕಳಾದರು. ಆ ಹಯ್ಯನಿಂದ ಮುಂದೆ ಆ ವಂಶದಲ್ಲಿ ಧರ್ಮನೇತ್ರದ 'ಕುಂಭಿ' ಸಂಹತ, ಮಹಿಮಾ, ಭದ್ರಸೇನ, ದುರ್ದರ್ಶ, ಕನಕ ಮುಂತಾಗಿ ವಂಶದ ಅಭಿವೃದ್ಧಿಗೊಂಡಿತು. ಕನಕನಿಗೆ ಕೃತಾಗ್ನಿ, ಕೃತವೀರ್ಯ, ಕೃತಧರ್ಮ, ಕೃತಜಾತ ಎಂದು ನಾಲ್ವರು ಮಕ್ಕಳು. ಅವರಲ್ಲಿ ಕೃತವೀರ್ಯನಿಗೆ ಅರ್ಜುನ ಎಂಬ ಪುತ್ರನು ಉದಿಸಿದನು ಅವನೇ ಕಾರ್ತವೀರಾರ್ಯಜುರ್ನ. ಇವರು ಸಾವಿರ ವರ್ಷ ತಪಸ್ಸುಮಾಡಿ ಅತ್ರಿ ಪುತ್ರ ದತ್ತಾತ್ರೇಯನನ್ನು ಪೂಜಿಸಿ ಪ್ರಸನ್ನಗೊಳಿಸಿ, ಅವನಿಂದ ವರವನ್ನು ಪಡೆದು ಕೊಂಡನು. ಮತ್ತು ಬ್ರಹ್ಮದೇವರನ್ನು ಆರಾಧಿಸಿ ಅವರನ್ನು ತನ್ನ ತಪಸ್ಸಿನಿಂದ ಸಂತೋಷ ಪಡಿಸಿದನು. ಬ್ರಹ್ಮದೇವರು ಅವನಿಗೆ 'ಅಪೇಕ್ಷಿತವಾದ ವರವನ್ನು ಕೇಳು' ಎಂದು ಹೇಳಿದನು. ಆಗ ಕಾರ್ತವೀರಾರ್ಯಜುರ್ನನು ನಾಲ್ಕು ವರಗಳನ್ನು ಕೇಳಿಕೊಂಡನು.

''ನನಗೆ ಸಾವಿರ ತೋಳುಗಳು ಇರಬೇಕು. ಯುದ್ಧದಲ್ಲಿ ಎಲ್ಲರನ್ನು ಗೆದ್ದು ಭೂಮಂಡಲದ ಏಕಮಾತ್ರ ಸಾರ್ವಭೌಮ ನಾನಾಗಬೇಕು. ನಾನು ಎಂದಾದರೂ ಅಧರ್ಮವನ್ನು ಆಚರಿಸಿದರೆ ಹಿರಿಯರು ನನಗೆ ಬುದ್ಧಿಹೇಳಬೇಕು ಮತ್ತು ಯುದ್ಧದಲ್ಲಿಯೇ ನನಗಿಂತ ಬಲಿಷ್ಠರಾದವರಿಂದಲೇ ವಧೆಯಾಗಬೇಕು.'' ಬ್ರಹ್ಮದೇವರಿಂದ ಹೀಗೆ ವರಗಳನ್ನು ಹೊಂದಿದ ಬಳಿಕ ಕಾರ್ತವೀರಾರ್ಯಜುರ್ನನಿಗೆ ಸಾವಿರ ತೋಳುಗಳು ಒಮ್ಮೆಲೆ ಚಿಗಿತವು. ತನ್ನ ಬಾಹುಬಲದಿಂದ ಸಪ್ತದ್ವೀಪವತಿಯಾದ ಭೂಮಂಡಲವನ್ನೆಲ್ಲ ಪುರ ಗ್ರಾಮ ಸಹಿತವಾಗಿ ಗೆದ್ದನು. ಸಪ್ತಸಾಗರ ಪರಿಯಂತ ಅವನ ಸಾಮ್ರಾಜ್ಯವು ವಿಸ್ತರಿಸಿತು. ಮಹಾ ಪರಾಕ್ರಮಶಾಲಿಯಾದ ಆ ಕಾರ್ತವೀರಾರ್ಯಜುರ್ನನು ಯಜ್ಞ ಎಂಬ ಹೆಸರುಳ್ಳ ಎಲ್ಲ ವೈದಿಕ ವಿಧಿಗಳನ್ನುಮಾಡಿ ಮುಗಿಸಿದನು. ಪ್ರತಿಯೊಂದು ಅವನ ಯಜ್ಞದಲ್ಲಿ ಯಜ್ಞ ಸ್ತಂಭಗಳೆಲ್ಲವೂ ಬಂಗಾರದ್ದೆ. ಯಜ್ಞ ವೇದಿಕೆಗಳು

ಸುವರ್ಣಮಯ. ಕಾರ್ತವೀರರ್ಯನ ಯಜ್ಞಕ್ಕಾಗಿ ದೇವತೆಗಳು ಅಲಂಕೃತವಾಗಿ ತಮ್ಮ ತಮ್ಮ ವಿಮಾನಗಳನ್ನು ಏರಿಕೊಂಡು ಬರುತ್ತಿದ್ದರು. ಗಂಧರ್ವರು ಅಲ್ಲಿ ಹಾಡುತ್ತಿದ್ದರು. ಅಪ್ಸರೆಯರು ಕುಣಿಯುತ್ತಿದ್ದರು. ಅವನ ಯಜ್ಞಮಂಟಪದಲ್ಲಿ ನಾರದರು, ಗಂಧರ್ವರು, ಆ ರಾಜರ್ಷಿಯ ಮಹಾಮಹಿಮೆಯನ್ನು ಹೊಗಳಿ ಹಾಡುತ್ತಿದ್ದರು. ಮುಂದೆ ಅದೊಂದು ಗಾದೆಯ ಮಾತಿನಂತೆ ನಾಣ್ಣುಡಿಯಾಗಿ ಪರಿಣಮಿಸಿತು.

ನನೂನುಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ।
ಯಜ್ಞೈರ್ದಾನೈಸ್ತಪೋಭಿರ್ವಾ ವಿಕ್ರಮೇಣಶ್ರುತೇನಚ ॥

ಕಾರ್ತವೀರ್ಯಾರ್ಜುನನಷ್ಟು ಯಜ್ಞ ಮಾಡಿದವರೇ ಇಲ್ಲ. ಅವನಷ್ಟು ದಾನ ನೀಡಿದವರನ್ನು ನಾವು ಎಲ್ಲಿಯೂ ಕಾಣೆವು. ಅವನಷ್ಟು ಉಗ್ರ ತಪಸ್ಸನ್ನು ಯಾರೂ ಆಚರಿಸಿಲ್ಲ. ಪರಾಕ್ರಮದಲ್ಲಂತೂ ಅವನಿಗೆ ಸಮರಿಲ್ಲ. ಕಾರ್ತವೀರ್ಯಾರ್ಜುನನಷ್ಟು ಕೀರ್ತಿಶಾಲಿಗಳು ಆ ಲೋಕದಲ್ಲಿಯೇ ಇಲ್ಲ. ಈ ಲೋಕದಲ್ಲಿ ಯಾವ ರಾಜರೂ ಕಾರ್ತವೀರ್ಯಾರ್ಜುನನನ್ನು ಹೊಂದಿದ ಸ್ಥಿತಿಗತಿಗಳನ್ನು ಹೊಂದಲಾರರು, ಇದು ನಿಜ. ಅವನು ಬಿರುಗಾಳಿಯಂತೆ ಭೂತಲದ ಏಳು ದ್ವೀಪಗಳಲ್ಲಿಯೂ ಸಂಚರಿಸುವನು. ಅಖಂಡ ಭೂಮಂಡಲಕ್ಕೆಲ್ಲ ಎಂಬತ್ತೈದುಸಾವಿರ ವರ್ಷ ಚಕ್ರವರ್ತಿಯಾಗಿ ರಾಜ್ಯವಾಳಿದನು. ಅವನು ತನ್ನ ದಿವ್ಯ ಶಕ್ತಿಯಿಂದ ತಾನೇ ಎಲ್ಲ ರಾಜ್ಯವಾಳಿದನು, ಎಲ್ಲ ರಾಜ್ಯದಲ್ಲಿಯ ಪಶುಧನ ರಕ್ಷಿಸುತ್ತಿದ್ದನು. ತನ್ನ ಸಾಮ್ರಾಜ್ಯದದಲ್ಲಿಯ ಎಲ್ಲ ಹೊಲಗಳನ್ನು ಸ್ವಯಂ ಕ್ಷೇತ್ರಪಾಲನಾಗಿ ಅವನೇ ಕಾಯುತ್ತಿದ್ದನು. ಸರಿಯಾಗಿ ಮಳೆ ಆಗದಿದ್ದಾಗ ತನ್ನ ಯೋಗ ಶಕ್ತಿಯಿಂದ ತಾನೇ ಮೇಘ ಪಡೆಯ ರೂಪ ಧರಿಸಿ ಹರಗಿ ಹದ ಮಾಡಿಟ್ಟ ಹೊಲಗಳ ಮೇಲೆ ಸಮೃದ್ಧವಾಗಿ ಮಳೆ ಸುರಿಸುತ್ತಿದ್ದನು. ಸಾವಿರ ಬಾಹುಗಳಿಂದ ಶೋಭಿಸುವ ಆ ಕಾರ್ತವೀರ್ಯನು ಸಾವಿರಕಿರಣಗಳ ಸೂರ್ಯನು ಶರತ್ ಕಾಲದಲ್ಲಿ ಬೆಳಗುವಂತೆ ಹಗಲಿರುಳೂ ಬೆಳಗುತ್ತಿದ್ದನು. ತನ್ನ ಲಲನೆಯರೊಂದಿಗೆ ಅವನು ಜಲಕ್ರೀಡೆ ಆಡುವಾಗ ನರ್ಮದೆಯ ನೀರೆಲ್ಲವೂ ಅವರುದ್ಧವಾಗುತ್ತಿತ್ತು. ರಮಣಿಯರೊಡನೆ ಜಲಕ್ರೀಡೆಯಾಡಲು ಅವನು ಸಮುದ್ರಕ್ಕೆ ಇಳಿದಾಗ ಸಾವಿರ ತೋಳುಗಳಿಂದ ತಡೆದು ಹಿಡಿಯಲು ಘೂರ್ಮಿಸುವ ಸಮುದ್ರದ ವೇಗವೆಲ್ಲ ಸ್ತಬ್ಧವಾಗುತ್ತಿತ್ತು. ಒಮ್ಮೊಮ್ಮೆ ಅವನು ತನ್ನ ನೀಳ್ದೋಳುಗಳಿಂದ ಸಾಗರದ ತೆರೆಗಳನ್ನೆಲ್ಲ ಅಪ್ಪಳಿಸಿದಾಗ ಪಾತಾಳಲೋಕದ ದೈತ್ಯರೆಲ್ಲರೂ ಹೆದರಿ ಎಲ್ಲಿಯೋ ಅಡಗಿಕೊಳ್ಳುತ್ತಿದ್ದರು. ಪಾತಾಳದ ಆಳದಲ್ಲಿರುವ ಸರ್ಪಗಳಿಗೆಲ್ಲ ಗಾಬರಿ 'ಮತ್ತೇ ಮಂದರ ಪರ್ವತ ತಂದಿಟ್ಟು ಸಮುದ್ರಮಂಥನ ಆರಂಭವಾಯಿತೆ ?' ಎಂದು ತಮ್ಮ ಹೆಡಮುಡಿಗಳಲ್ಲಿ ಪೊಡವಿಯನ್ನೆಲ್ಲ ಹೊತ್ತು ನಿಂತ ಹಿರಿಯ ಹಾವುಗಳು ಹೆದರಿ ಕಾರ್ತವೀರ್ಯನ ಉದ್ದಾಮ ಜಲಕ್ರೀಡೆಯಿಂದ ದಿಗ್ಭ್ರಾಂತವಾಗಿ ನಿಂತುಬಿಡುತ್ತಿದ್ದವು. ಮದಾಂಧನಾದ ಕೊಬ್ಬಿದ ರಾವಣನ ಮೇಲೆ ಅವನು ಐದು ಬಾಣ ಬಿಟ್ಟು ಲಂಕೆಯಲ್ಲಿಯೇ ಹೊಡೆದು ಮರವುಗೆಡಿಸಿ ನೆಲಕ್ಕೆ ಉರುಳಿಸಿದನು. ಅವನ ಸೈನ್ಯವನ್ನು ಗೆದ್ದು, ತನ್ನ ಕೈದಿಯನ್ನಾಗಿ ಮಾಡಿಕೊಂಡು, ಅವನನ್ನು ರಾಜಧಾನಿಯಾದ ತನ್ನ ಮಾಹಿಷ್ಮತಿ ನಗರದಲ್ಲಿ ಬಂಧಿಯನ್ನಾಗಿ ಇರಿಸಿದನು. ನಂತರ ನಾನು ಸ್ವಯಂ ಅಲ್ಲಿಗೆ ಹೋಗಿ ಕಾರ್ತವೀರ್ಯಾರ್ಜುನನನ್ನು ಹೊಗಳಿ ಪ್ರಸನ್ನನಾಗಿ ಮಾಡಿದೆನು.

ನಂತರ ನಾನು ಅವನಿಗೆ ಹೇಳಿ ನನ್ನ ಮೊಮ್ಮಗನಾದ ರಾವಣನನ್ನು ಬಿಡಿಸಿದೆನು. ನಂತರ ಅವರಿಬ್ಬರ ನಡುವೆ ಮಧುರ ಮೈತ್ರಿ ಮೂಡುವಂತೆ ನಾನು ಮಾಡಿದೆನು. ನನ್ನ ಮಾತಿನಿಂದ ಕಾರ್ತವೀರ್ಯಾರ್ಜುನನು ನನ್ನ ಮೊಮ್ಮಗನಾದ ರಾವಣನನ್ನು ಕಾರಾಗೃಹದಿಂದ ಬಿಡುಗಡೆ ಮಾಡಿದನು. ಅವನು ತನ್ನ ಸಹಸ್ರ ಬಾಹುಗಳಿಂದ ಧನುಷ್ಟಂಕಾರಮಾಡಿದರೆ ಪ್ರಳಯ ಕಾಲದ ಅಗ್ನಿಯೆ ತನ್ನ ಬಿಲ್ಲುಗಳನ್ನು ಠೇಂಕರಿಸಿದಂತೆ ತೋರುತ್ತಿತ್ತು.

ದೈವದ ಚೇಷ್ಟೆಯು ವಿಚಿತ್ರವಾದುದು. ವಿಧಿಯ ಪ್ರಭಾವವು ಬಲವತ್ತರವಾದುದು ಎನ್ನಲು ಆ ಕಾರ್ತವೀರ್ಯಾರ್ಜುನನೇ ಜೀವಂತ ದೃಷ್ಟಾಂತ. ಇಂತಹ ಮಹಾಬಲಿಷ್ಠನಾದ ಕಾರ್ತವೀರ್ಯಾರ್ಜುನನ ಸಾವಿರ ತೋಳುಗಳನ್ನು ಭೃಗುಕುಲದ ವ್ಯಕ್ತಿಯೊಬ್ಬನು ಹೊಂಬಾಳೆಯ ಕಾಂಡವನ್ನು ಕಡಿಯುವಂತೆ ಕಡಿದನು. ಇದಕ್ಕೆ ಬ್ರಹ್ಮರ್ಷಿಗಳ ಶಾಪವೂ ಕಾರಣವಾಗಿರಬಹುದು. ಒಂದು ವಿಷ ವೇಳೆಯಲ್ಲಿ ಧರ್ಮಾತ್ಮನಾದ ಕಾರ್ತವೀರ್ಯಾರ್ಜುನನು ಒಂದು ವನಕ್ಕೆ ಕಿಚ್ಚು ಇಟ್ಟಿದ್ದ. ಧರ್ಮಕರ್ಮಸಂಯೋಗದಿಂದ ವಶಿಷ್ಠರ ಆಶ್ರಮವು ಆ ಅರಣ್ಯದಲ್ಲಿಯೇ ಇದ್ದಿತು. ಕಾರ್ತವೀರ್ಯನು ಕೊಟ್ಟ ಕೊಳ್ಳಿಯಿಂದ ಕಾಡ್ಗಿಚ್ಚು "ಭುಗಿಲೆದ್ದು" ಆ ಬ್ರಹ್ಮರ್ಷಿಗಳ ಆಶ್ರಮ ಸುಟ್ಟು ಬೂದಿಯಾಯಿತು. ಅದರಿಂದ ಕುಪಿತರಾದ ವಶಿಷ್ಠರು ಕೋಪಗೊಂಡು ಅವನಿಗೆ ಶಾಪ ಕೊಟ್ಟರು.

"ಹೈಹಯ ಕುಲದಲ್ಲಿ ಜನಿಸಿದ ಅರ್ಜುನನೆ, ಇದೆಲ್ಲವೂ ನನ್ನ ಆಶ್ರಮದ ಬಿಡಾರ. ಜಗತ್ತಿಗೆಲ್ಲ ಗೊತ್ತು. ಈ ವನವನ್ನೆಲ್ಲ ನೀನು ಸುಟ್ಟುಹಾಕಿದೆ. ಈ ದುಷ್ಕೃತ್ಯಕ್ಕಾಗಿ ನಿನ್ನನ್ನು ಬೇರೊಬ್ಬ ದ್ವಿಜನು ಸಂಹರಿಸುವನು. ನಿನ್ನ ಈ ತೋಳುಗಳನ್ನೆಲ್ಲ ತರಿದು ಒಗೆಯುವನು. ನಿನ್ನನ್ನು ನಿಗ್ರಹಿಸಿ, ತಪಸ್ವಿ ವೀರ ದ್ವಿಜನು ಕೊಂದು ಹಾಕುವನು."

ಮಹರ್ಷಿಗಳು ಎಸೆದ ಈ ಶಾಪಾಸ್ತ್ರವು ಹೇಗೆ ಹುಸಿ ಹೋದೀತು ? ಭೃಗು ಕುಲದಲ್ಲಿ ಜನಿಸಿದ ಪರಶುರಾಮನು ಪ್ರಚಂಡ ಪರಾಕ್ರಮಿಯಾದ ಕಾರ್ತವೀರ್ಯಾರ್ಜುನನನ್ನು ಸಂಹರಿಸಿದನು. ಆ ಕಾರ್ತವೀರ್ಯಾರ್ಜುನನಿಗೆ ನೂರು ಜನ ಮಕ್ಕಳು. ಅವರಲ್ಲಿ ಐವರು ಮಹಾರಸಿಕರು. ಶಸ್ತ್ರ ವಿದ್ಯೆಯಲ್ಲಿ ಪಳಗಿದವರು. ಮಹಾಬಲಿಷ್ಠರು. ಇಷ್ಟು ಶೂರರಾದರೂ ಧರ್ಮನಿಷ್ಠರು. ವ್ರತಚಾರಣೆಯಲ್ಲಿ ದೀಕ್ಷಿತರು. ಶೂರಸೇನ, ಶೂರ, ಧೃಷ್ಟ, ಕೃಷ್ಣ, ಜಯಧ್ವಜ ಎಂದು ಆ ಪಂಚಪುತ್ರರ ಹೆಸರು. ಅವರಲ್ಲದೆ, ಅವಂತಿ, ನಿಶಾಪತಿ ಎಂಬ ಅವನ ಇಬ್ಬರು ಮಕ್ಕಳೂ ಸುಪ್ರಸಿದ್ಧರಾದರು. ಈ ಅವಂತಿ ರಾಜನೇ ಅವಂತಿ ನಗರವನ್ನು ನಿರ್ಮಿಸಿದನು. ಈ ಕಾರ್ತವೀರ್ಯನ ಕುಮಾರ ಜಯಧ್ವಜನಿಗೆ ಜಲಜಂಘ ಎಂಬ ಬಲಿಷ್ಠನಾದ ಒಬ್ಬ ಮಗನಿದ್ದನು. ಅವನಿಗೆ ನೂರು ಜನ ಮಕ್ಕಳು. ಅವರಿಂದ ಆ ಹೈಹಯ ಕುಮಾರರ ಗುಂಪಿಗೆಲ್ಲ ತಾಲಜಂಘರು ಎಂದು ಹೆಸರು ಬಂದಿತು. ಈ ತಾಲಜಂಘ ಕುಲದಲ್ಲಿಯೂ ವೀತಿಹೋತ್ರ, ಭೋಜ, ಆವಂತಿಕ, ತುಂಬಿಕೇರ, ಸುಜಾತ ಎಂಬ ಹೆಸರಿನ ಐದು ಕುಲಗಳು ಕೀರ್ತಿಯ ಕಳಸವನ್ನೇ ಎತ್ತಿದವು. ಹೈಹಯ ಮನೆತನದಲ್ಲಿ ತಾಲಜಂಘರ ಈ ಪಂಚವಂಶಗಳು ಹೆಸರುವಾಸಿಯಾದವು. ಈ ಪಂಚಕುಲಗಳಿಗೆಲ್ಲ ಆಯಾ ಹೆಸರಿನ ವೀರ ವ್ಯಕ್ತಿಗಳೇ ಮೂಲ ಪುರುಷರು. ಇವರಲ್ಲಿಯ ವೀತಿಹೋತ್ರ ವಂಶದ ಪ್ರವರ್ತಕನಾದ ವೀತಿಹೋತ್ರ ಮಹಾರಾಜನಿಗೆ ಅನಂತ ಎಂಬ ಬಲಿಷ್ಠ ಮಗನು ಜನಿಸಿದನು. ಅನಂತನಿಂದ ದುರ್ಜಯ ಎಂಬ ಮಗನು ಹುಟ್ಟಿದನು. ಪ್ರಜೆಗಳನ್ನೆಲ್ಲ ಸದ್ಭಾವನೆಯಿಂದ ಪಾಲಿಸಿ

ಧರ್ಮರಾಜ್ಯವನ್ನು ಆಳುವ ಆ ದುರ್ಜಯ ರಾಜನಿಗೆ **"ಅಮಿತ್ರ ಕರ್ಷಣ"** ಎಂಬ ಬಿರುದು. ವೈರಿಗಳನ್ನೆಲ್ಲ ಸದೆಬಡೆದು ರಾಷ್ಟ್ರರಕ್ಷಣೆಯ ದಕ್ಷತೆಯೇ ಇದಕ್ಕೆ ಕಾರಣ. ಇಂಥ ವೀರವಂಶದ ಮೂಲ ಪುರುಷನಾದ ಕಾರ್ತವೀರ್ಯಾರ್ಜುನನು ಪುರಾಣ ಪ್ರಪಂಚದಲ್ಲಿ ಪುಣ್ಯಪುರುಷನೆಂದು ಪ್ರಖ್ಯಾತಿ ಪಡೆದನು. ಸಾವಿರ ತೋಳಿನ ಆ ಪುಣ್ಯ ಪುರುಷನನ್ನು ಬೆಳಿಗ್ಗೆ ಎದ್ದು, ಮಾನವರು ಸ್ಮರಣೆಮಾಡಿದರೆ, ಅವರ ಸಂಪತ್ತು ಎಂದೂ ನಶಿಸುವುದಿಲ್ಲ. ಎಂದಾದರೂ ಮನೆಯಲ್ಲಿಯ ಹಣವು ಕಳುವಾಗಿ ಕಳೆದು ಹೋದಾಗ ಕಾರ್ತವೀರ್ಯಾರ್ಜುನನನ್ನು ನೆನೆಯಬೇಕು. ಅದರಿಂದ ನಷ್ಟದ್ರವ್ಯ ಮರಳಿ ದೊರಕುವುದು. ತನ್ನ ಬಿಲ್ಲು ಬಾಣಗಳಿಂದ ಕಡಲ ಕಿನಾರೆಯವರೆಗಿನ ಪೊಡವಿಯನ್ನೆಲ್ಲ ಗೆದ್ದು ಅಸಂಖ್ಯ ಯಜ್ಞಯಾಗಗೈದು, ಧರ್ಮದಿಂದ ಪ್ರಜೆಗಳನ್ನು ಕಾಪಾಡಿದ ಈ ಕಾರ್ತವೀರ್ಯಾರ್ಜುನನ ಜನ್ಮದ ಹಾಗೂ ಜೀವನದ ಕಥೆಯನ್ನು ಹೇಳಿದವರು ಹಾಗೂ ಕೇಳಿದವರು ಸ್ವರ್ಗಲೋಕದಲ್ಲಿ ಪೂಜಿತರಾಗುತ್ತಾರೆ. ಅನೇಕ ಯಜ್ಞಗಳನ್ನುಮಾಡಿ ಯಥೇಚ್ಛ ದಾನದಕ್ಷಿಣೆಗಳನ್ನಿತ್ತ ಯಾಜಕನಿಗೆ ದೊರೆಯುವ ಸ್ವರ್ಗಸುಖವು ಕಾರ್ತವೀರ್ಯಾರ್ಜುನನ ಕಥೆಯ ಶ್ರವಣ ಪಠಣಮಾಡಿದವರಿಗೆಲ್ಲ ದೊರಕುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಚಂದ್ರವಂಶದ ಉತ್ಪತ್ತಿ ಎಂಬ ಹನ್ನೆರಡನೇಯ ಅಧ್ಯಾಯ ಮುಗಿದುದು*



## ಶುಕ್ರಮಾತೆಯಿಂದ ದೇವತೆಗಳ ಪರಾಜಯ — ಅಧ್ಯಾಯ - ೧೩

**ಪುಲಸ್ತ್ಯ** :- ರಾಜೇಂದ್ರನೆ, ಕ್ರೋಷ್ಟುವಿನ ವಂಶವಿಸ್ತಾರವನ್ನು ಕೇಳು. ಅದರಲ್ಲಿ ಅನೇಕ ಮಹಾಪುರುಷರು ಜನಿಸಿದರು. ವೃಷ್ಣಿಕುಲಕ್ಕೆ ಭೂಷಣದಂತಿದ್ದ ಶ್ರೀ ವಿಷ್ಣುವು ಜನಿಸಿದ್ದು ಇದೇ ವಂಶದಲ್ಲಿಯೇ. ಕ್ರೋಷ್ಟುವಿಗೆ ವೈಜನೀವಾನ ಎಂಬ ಮಗನಿದ್ದು. ಅವನೊಬ್ಬ ಮಹಾಪುರುಷ. ಅವನ ಮಗನೇ ಸ್ವಾತಿ. ಸ್ವಾತಿಯ ಪುತ್ರ ಕುಶಂಕು. ಕುಶಂಕುವಿನ ಮಗ ಚಿತ್ರರಥ. ಶತಬಿಂದು ಎಂದು ಖ್ಯಾತಿ ಪಡೆದ ಚಕ್ರವರ್ತಿಯು ಈ ಚಿತ್ರರಥನ ಪುತ್ರನೇ. ಈ ಶತಬಿಂದು ಮಹಾರಾಜನ ವಂಶವು ಹಿಂದಿನ ಕಾಲದಲ್ಲಿ ಎಲ್ಲರಿಂದಲೂ ಹೊಗಳಿ ಹಾಡಲ್ಪಡುತ್ತಿತ್ತು. ಈ ಶತಬಿಂದು ಮಹಾರಾಜನ ಮಕ್ಕಳು ಮೂರು. ಎಲ್ಲರೂ ಚೆಲುವರು, ಬುದ್ಧಿವಂತರು, ಭಾಗ್ಯಶಾಲಿಗಳು, ತೇಜೋವಂತರು. ಆ ಮೂವರು ಶತಬಿಂದು ಪುತ್ರರಲ್ಲಿ ಪೃಥುಶ್ರವ, ಪೃಥುತೇಜ, ಪೃಥುದ್ಭವ, ಪೃಥುಕೀರ್ತಿ, ಪೃಥುಮತಿ ಎಂಬ ಶತಬಿಂದು ಕುಮಾರರು ಅತ್ಯಂತ ಬಲಿಷ್ಠರು. ಇವರ ಶೌರ್ಯ, ಸಾಹಸದ ಸಂಕೇತವಾಗಿ ಪ್ರತಿಯೊಬ್ಬರ ಹೆಸರಿನ ಹಿಂದೆ **ಪೃಥು** ಎಂಬ ಉಪಪದವು ಸಾರ್ಥಕವಾಗಿ ಹೊಂದಿಕೊಂಡಿತು. ಪೃಥು ಪೂರ್ವರಾದ ಈ ಶತಬಿಂದು ಕುಮಾರರನ್ನು ಪುರಾಣಗಳನ್ನು ಬಲ್ಲ ವಿಮರ್ಶಕರು ಪ್ರಶಂಸಿಸಿದ್ದಾರೆ. ಇವರಲ್ಲಿ ಹಿರಿಯನಾದ ಪೃಥುಶ್ರವನು ಎಲ್ಲ ದೃಷ್ಟಿಯಿಂದಲೂ ಉತ್ತಮ ಎಂದು ಪುರಾಣವ್ಯತ್ತವೇತ್ತರ ಅಭಿಪ್ರಾಯ.

ಈ ಪೃಥುಶ್ರವ ಮಹಾರಾಜನಿಗೆ ಕುಶನಸ್ ಎಂಬ ಕುಮಾರನು ಉದಿಸಿದನು. ಇವನೂ ತಂದೆಯಂತೆ ಅರಿ ಭಯಂಕರ. ಕುಶನಸನ ಮಗನಾದ ಶಿನೆಯು ಸಜ್ಜನ ಶಿಖಾಮಣಿ. ಆ ಶಿನೆಯುವಿನ ಮಗನಿಗೆ ರುಕ್ಮಕವಚ ಎಂದು ಕರೆಯುತ್ತಿದ್ದರು. ಆ ರುಕ್ಮಕವಚನು ಭೂಮಂಡದಲ್ಲಿಯೇ ಹೆಸರಾಂತ ಬಿಲ್ಲಾಳು. ಬಿಲ್ಲಿಗೆ ಹೂಡಿದ ಬಾಣಗಳಿಂದ ಅಖಂಡಭೂಮಂಡಲವನ್ನೇ ಗೆದ್ದು ತನ್ನ ಕೈವಶಮಾಡಿಕೊಂಡನು. ಅಶ್ವಮೇಧಯಾಗವನ್ನು ವಿಧಿಪೂರ್ವಕಮಾಡಿ, ಬ್ರಾಹ್ಮಣರಿಗೆಲ್ಲ ವಿಪುಲ ದಕ್ಷಿಣೆ ನೀಡಿದನು. ಬಯಸಿದ್ದನ್ನೆಲ್ಲ ದಾನವಿತ್ತನು. ಈ ರುಕ್ಮಕವಚನಿಗೆ ರುಕ್ಮೇಷು, ಪೃಥುರುಕ್ಮ, ಜಾನಭ, ಪರಿಘ, ಹರಿ ಎಂಬ ಹೆಸರಿನ ಪಂಚಪುತ್ರರು ಉತ್ಪನ್ನರಾದರು. ಇವರೆಲ್ಲರೂ ಒಬ್ಬರಿಗಿಂತ ಒಬ್ಬರು ಶೂರರು. ಇವರಲ್ಲಿ ಪರಿಘ, ಹರಿ-ಇಬ್ಬರು ಮಕ್ಕಳನ್ನು ರಾಜನು ವಿದೇಹ ರಾಜ್ಯಕ್ಕೆ ಅಧಿಕಾರಿಗಳನ್ನಾಗಿ ಇರಿಸಿದನು. ರುಕ್ಮೇಷು ತಂದೆಯ ರಾಜ್ಯಕ್ಕೆ ಅಧಿಪತಿ ಆದನು. ಪೃಥು ರುಕ್ಮನು ಅವನ ಬೆಂಬಲಕ್ಕೆ ನಿಂತುಕೊಂಡನು. ಈ ರುಕ್ಮೇಷು ಹಾಗೂ ಪೃಥು ರುಕ್ಮರು ಕೂಡಿಕೊಂಡು ತಮ್ಮ ರಾಜ್ಯಾಧಿಕಾರದಲ್ಲಿ ಸಮಭಾಗಿಯಾದ ಜಾನಭನನ್ನು ಬಲವಂತದಿಂದ ಹೊಡೆದೋಡಿಸಿದರು. ಸೋದರರಿಂದ ರಾಜ್ಯದಿಂದ ಹೊರದೂಡಲ್ಪಟ್ಟ ಜಾನಭನು ಸನ್ಯಾಸಿಯಂತೆ ಮನೆಮಾರು ತೊರೆದು ಕಾಡಿಗೆ ಹೋಗಿ ಮುನಿಯಂತೆ ಆಶ್ರಮ ಕಟ್ಟಿಕೊಂಡು, ಸೌಮ್ಯ ಜೀವನವನ್ನು ನಡೆಸಿದನು. ಆಗ ಒಂದು ದಿನ, ಈ ರಾಜಕುಮಾರನ ಆಶ್ರಮಕ್ಕೆ ಓರ್ವ ತಪಸ್ವಿ ಬ್ರಾಹ್ಮಣನು ಬಂದನು. ಆಶ್ರಮವಾಸಿಯಾದ ಕ್ಷತ್ರಿಯ ರಾಜಕುಮಾರನು ನೀಡಿದ ಸ್ವಾಗತ ಸತ್ಕಾರ, ಉದಾರ ಉಪಚಾರಗಳಿಂದ ಆ ಅತಿಥಿಗೆ ಸಮಾಧಾನವಾಗಲಿಲ್ಲ. ಕ್ಷತ್ರಿಯರು ಋಷಿ ಮುನಿಗಳಂತೆ ಹೀಗೆ ಕಾಡಿನಲ್ಲಿ ಇದ್ದು, ಎಲೆಮನೆಯಲ್ಲಿ ಅಡಗಿಕೊಂಡು ಬ್ರಾಹ್ಮಣರಂತೆ ತಪವನ್ನು ಆಚರಿಸುವದು ಸ್ವಧರ್ಮವಲ್ಲ. ಧನುಷ್ಪಾಣಿಯಾಗಿ, ತನ್ನ ಶೌರ್ಯದಿಂದ ರಾಜ್ಯ, ಐಶ್ವರ್ಯಗಳನ್ನು ಗೆದ್ದು, ಪ್ರಜೆಗಳನ್ನು ಪೊರೆಯುವದು, ಬ್ರಾಹ್ಮಣರನ್ನು ರಕ್ಷಿಸುವದು, ಕ್ಷತ್ರಿಯರ ಕರ್ತವ್ಯ ಎಂದು ಬೋಧಿಸಿದನು. ಆ ಅತಿಥಿ ಬ್ರಾಹ್ಮಣನ ಉಪದೇಶವು ರಾಜಕುಮಾರ ಜಾನಭವ ಮನಸ್ಸಿನ ಮೇಲೆ ಪರಿಣಾಮ ಬೀರಿತು. ಕೂಡಲೇ ಅವನು ಉತ್ಸಾಹಗೊಂಡು, ವೀರವೃತ್ತಿಯನ್ನು ಅಂಗೀಕರಿಸಿದನು. ದಂಡ ಕಮಂಡಲು ತೊರೆದು ಘೋರಶಸ್ತ್ರಗಳನ್ನು ಕೈಯಲ್ಲಿ ಹಿಡಿದನು. ಆಶ್ರಮ ತೊರೆದು, ರಥಾರೋಹಣಮಾಡಿ, ಅಲ್ಲಿಂದ ಹೊರಟನು. ಜಾತ್ಯಾ ಶೂರನಾದ ಆ ಜಾನಭನು ಘೋರ ಶಸ್ತ್ರಾಸ್ತ್ರಗಳನ್ನು ಹಿಡಿದು ನಿಂತಾಗ ವೈರಿಗಳೆಲ್ಲರೂ ಓಡಿಹೋದರು. ತನ್ನ ದಾಯಾದಿಗಳು ಇದ್ದ ದೇಶವೇ ಬೇಡವೆಂದು ಅವನು ದೂರದ ನರ್ಮದಾ ತೀರಕ್ಕೆ ಹೋಗಿ ತನ್ನ ಬಾಹುಬಲದಿಂದ ರಾಜ್ಯಸ್ಥಾಪಿಸಿದನು. ಗಿರಿಯ ಒಂದು ತಪ್ಪಲಿನಲ್ಲಿ ತನ್ನ ರಾಜಧಾನಿಯನ್ನು ನಿರ್ಮಿಸಿದನು. ಅವನು ಭೂಮಿಯನ್ನು ಉತ್ತಿ ಬಿತ್ತಿ ಬೆಳೆ ಬರುವಂತೆ ಮಾಡಿದನು. ಜಾನಭನ ರಾಜ್ಯದ ನರ್ಮದಾ ನದಿಯ ತಡಿಯ ಅಡಿಯಲ್ಲಿ ಹಬ್ಬಿದ ಕಾಡೆಲ್ಲವೂ ಸುಂದರ ನಾಡಾಗಿ ಪರಿವರ್ತನೆಗೊಂಡಿತು. ಅಲ್ಲಿ ಇದ್ದುಕೊಂಡು ಅವನು ಆಗಾಗ ಶತ್ರುರಾಜ್ಯಗಳಿಗೆ ಹೋಗಿ ವೈರಿಗಳನ್ನು ಗೆದ್ದು, ಐಶ್ವರ್ಯ ಸಂಪಾದಿಸುತ್ತಿದ್ದನು.

ಆ ಜಾನಭ ಮಹಾರಾಜನಿಗೆ ಶೈಬಾ ಎಂಬ ಚತುರಳೂ, ಚೆಲುವೆಯೂ ಆದ ಮಡದಿ ಇದ್ದಳು. ಆದರೆ ಮಹಾರಾಜನಿಗೆ ವಯಸ್ಸಾದರೂ ತನ್ನ ಆ ಮೆಚ್ಚಿನ ಮಡದಿಯಲ್ಲಿ

ಮಕ್ಕಳಾಗಲಿಲ್ಲ. ಮಹಾರಾಜನು ಮೃದು ಸ್ವಭಾವ. ಅವನ ಈ ಸ್ವಭಾವದ ಮಾರ್ದವವನ್ನು ಗುರುತಿಸಿದ ಶೈಬ್ಯೆಯು ಆ ದೊರೆಯನ್ನು ಬೆರಳ ಮೇಲೆ ಕುಣಿಸುತ್ತಿದ್ದಳು. ಅರಮನೆಯಲ್ಲಿ ಅರಸಿಯದೇ ಪ್ರಾಧಾನ್ಯ. ಆ ಪಟ್ಟದರಸಿಗೆ ವಯಸ್ಸಾದರೂ ಮಕ್ಕಳಾಗಲಿಲ್ಲ. ಆ ಜಾನಭನಿಗೆ ಮತ್ತೊಂದು ಮದುವೆಯಾಗಿ ರಾಜ್ಯಕ್ಕೆ ಉತ್ತರಾಧಿಕಾರಿಯಾದ ಮಗನನ್ನು ಪಡೆಯುವ ಬಯಕೆ ಇದ್ದಿತು. ಆದರೆ ಈ ವಿಚಾರವನ್ನು ಶೈಬ್ಯೆಯ ಎದುರು ಎತ್ತುವ ಎದೆಗಾರಿಕೆ ಅವನಿಗೆಲ್ಲಿ ? ಅವಳಿಗೆ ಹೆದರಿ ಮರುಮದುವೆಯ ಮಾತನ್ನೇ ಮರೆತುಬಿಟ್ಟಿದ್ದ ಮಹಾರಾಜ. ಮುಂದೆ ಒಂದು ದಿನ ಮಹಾರಾಜನು ದಿಗ್ವಿಜಯಕ್ಕೆ ತೆರಳಿ. ಯುದ್ಧದಲ್ಲಿ ಗೆದ್ದು, ಶತ್ರುರಾಜರ ಒಂದು ಕನ್ಯೆಯನ್ನು ಗೆದ್ದುಕೊಂಡು ಸಾಕಷ್ಟು ಐಶ್ವರ್ಯ ಪಡೆದುಕೊಂಡು ಮರಳಿದನು. ಎರಳೆಯಂತೆ ಬೆದರಿದ ವೈರಿ ರಾಜಕುಮಾರಿಯನ್ನು ತನ್ನ ರಥದಲ್ಲಿಯೇ ಕುಳ್ಳಿರಿಸಿಕೊಂಡು, ಅರಮನೆಯ ಮುಂದೆ ಬಂದಿಳಿದನು. ರಾಜನೊಡನೆ, ಸುಂದರಿಯಾದ ರಾಜಕುಮಾರಿಯನ್ನು ಕಂಡು ಶೈಬ್ಯೆಯ ಪಿತ್ತ ಕೆರಳಿತು. ''ಇವಳಾರು ನಿನ್ನ ರಥದಲ್ಲಿರುವ ರಮಣಿ ?'' ಎಂದು ಗುಡುಗಿದಳು. ಮಹಾರಾಜನಿಗೆ ನಾಲಿಗೆ ತೊದಲತೊಡಗಿತು. ಮೈತುಂಬ ಬೆವರಿಟ್ಟಿತು. ಹೆದರಿಕೆಯಿಂದ ಹೌಹಾರಿಹೋದ. ಮಹಾರಾಜನು ನಾಲಿಗೆ ಸವರುತ್ತ ''ಇವಳು ನಿನ್ನ ಸೊಸೆ'' ಎಂದು ಗಡಿಬಿಡಿಸಿ ಹೇಳಿದನು.

ಮಹಾರಾಜನ ಈ ಅವಸ್ಥೆಗೆಟ್ಟ ಉತ್ತರದಿಂದ ಮಹಾರಾಣಿಗೆ ಸಮಾಧಾನವಾಗಲಿಲ್ಲ. ''ಯಾರ ಸೊಸೆ ? ಮಕ್ಕಳೇ ಆಗದಿರುವ ನನಗಾಗಲಿ, ನಿನಗಾಗಲಿ ಇವಳು ಸೊಸೆ ಹೇಗಾಗುವಳು ?'' ಎಂದು ಪ್ರಶ್ನಿಸಿದಳು. ಒಂದು ತಪ್ಪನ್ನು ಮುಚ್ಚಿಕೊಳ್ಳಹೋದ ಮಹಾರಾಜನು ಅವಳ ಪ್ರಶ್ನೆಗೆ ಮತ್ತೊಂದು ಅಸಂಬದ್ಧ ಉತ್ತರ ನೀಡಬೇಕಾಯಿತು.

''ನಿನಗೆ ಮುಂದೆ ಮಗನು ಹುಟ್ಟುವನಲ್ಲವೆ ? ಜನಿಸಲಿರುವ ಆ ಮಗನಿಗಾಗಿ ಈಗಲೇ ಸೊಸೆಯನ್ನು ಸಿದ್ಧಗೊಳಿಸಿದ್ದೇನೆ. ಇವಳು ನಿನ್ನ ಭಾವಿಪುತ್ರನ ಭವಿಷ್ಯಭಾಮಿನಿ.'' ಎಂದು ಏನೇನೋ ಉತ್ತರ ಕೊಟ್ಟು ಪಾರಾದನು. ಆದರೆ ಈ ಮಾತು ಕೈದಿಯಾಗಿ ಬಂದ ಆ ರಾಜಕುಮಾರಿಯ ಮನಸ್ಸಿನ ಮೇಲೆ ಒಳ್ಳೇ ಪರಿಣಾಮ ಉಂಟುಮಾಡಿತು. ಅವಳು ಅಂದಿನಿಂದಲೇ ಮನೆಯಲ್ಲಿ ತನ್ನ ಕೋಣೆಯಲ್ಲಿಯೇ ದೇವರನ್ನು ಕುರಿತು ತಪಸ್ಸನ್ನು ಕೈಕೊಂಡಳು. ಮಹಾರಾಜನ ಭವಿಷ್ಯವಾಣಿಯು ನಿಜವಾಗಿ, ಅವನಿಗೊಬ್ಬ ಮಗನು ಜನಿಸಿ, ತನಗೆ ಪತಿಯಾಗಿ ದೊರಕಲಿ ಎಂದು ಉದ್ದೇಶದಿಂದ ಅವ್ಯಾಹತವಾಗಿ ನಡೆಯಿತು ತಪಸ್ಸು.

ದೇವನು ಮೆಚ್ಚಿದ. ಅವಳು ಬಯಸಿದ ವರವನ್ನು ನೀಡಿದ. ಅವಳ ಪುಣ್ಯ ಪ್ರಭಾವದಿಂದ ಮುದುಕಿಯಾದ ಅತ್ತೆ ಶೈಬ್ಯೆರಾಣಿ ಗಂಡುಮಗುವನ್ನು ಹೆತ್ತಳು. ಅವನಿಗೆ ವಿದರ್ಭ ಎಂದು ಹೆಸರಿಟ್ಟರು. ವಿದರ್ಭ ರಾಜಕುಮಾರನು ವಯಸ್ಸಿಗೆ ಬಂದ ಬಳಿಕ ಜ್ಯಾಮಘ ಮತ್ತು ಶೈಬ್ಯಾರಾಣಿ ಇಬ್ಬರು ಕೂಡಿ, ಆ ತಪಸ್ವಿನಿ ವೈರಿ ರಾಜಕುಮಾರಿಯನ್ನು ತಮ್ಮ ವಿದರ್ಭ ರಾಜಕುಮಾರನಿಗೆ ಮಡದಿಯನ್ನಾಗಿ ಸ್ವೀಕರಿಸಿದರು. ವಿದರ್ಭ ರಾಜನಿಗೆ ಆ ರಾಜಕುಮಾರಿಯಲ್ಲಿ ಕೃತ, ಕೈಶಿಕ, ಲೋಮಪಾದ ಎಂಬ ಮಕ್ಕಳು ಜನಿಸಿದರು. ಅವರಲ್ಲಿ ಹಿರಿಯರಾದ ಕೃತ, ಕೈಶಿಕರು, ಪಂಡಿತರು, ರಣರಂಗರಸಿಕರು, ಮೂರನೆಯವನಾದ ಲೋಮಪಾದ ಪರಮ ಧಾರ್ಮಿಕ. ಲೋಮಪಾದನಿಗೆ ಬಭ್ರು, ಹೇತಿ ಎಂದು ಇಬ್ಬರು ಮಕ್ಕಳು ಜನಿಸಿದರು. ಕೈಶಿಕನಿಗೆ ಚಿದಿ ಎಂಬ ಮಗನು ಹುಟ್ಟಿದನು. ಈ ಚಿದಿಯಿಂದ ಬೆಳೆದ

ಸಂತತಿಯವರು **ಚೈದ್ಯರು** ಎಂದು ಪ್ರಸಿದ್ಧರಾದರು. ವಿದರ್ಭ ಕುಮಾರನಾದ ಕೃತರಾಜನಿಗೆ ಕುಂತಿ ಎಂಬ ಮಗನು. ಕುಂತಿಗೆ ಧೃಷ್ಟ, ಧೃಷ್ಟನಿಗೆ ಪುಷ್ಟ, ಪುಷ್ಟನಿಗೆ ನಿವೃತಿ, ಅವನಿಗೆ ದಾಶಾರ್ಹ ಎಂಬ ಮಕ್ಕಳಾದರು. ಈ ದಾಶಾರ್ಹನಿಗೆ ವಿದೂರಥ ಎಂಬ ಹೆಸರು ಬೇರೆ ಇದ್ದಿತು. ಈ ದಾಶಾರ್ಹನಿಂದ ಮುಂದೆ ಈ ವಂಶವು ವ್ಯೋಮ, ಜೀಮೂತ, ವಿಕಲ, ನವರಥ, ಭೀಮರಥ, ದೃಢರಥ, ಶಕುನಿ, ಕರಂಭ, ದೇವರಾತ, ದೇವಕ್ಷತ್ರ, ಮಧು ಕುರುವಶ ಎಂದು ಮುಂತಾದವರಿಂದ ಬೆಳೆದು ದಾಂಗುಡಿ ಇಟ್ಟಿತು. ಪುರುಷಶ್ರೇಷ್ಠನಾದ ಕುರುವಶ ಮಹಾರಾಜನಿಗೆ ವೈದರ್ಭಿ, ಭದ್ರವತಿ ಎಂದು ಇಬ್ಬರು ಪತ್ನಿಯರಿದ್ದರು. ವೈದರ್ಭಿಯಲ್ಲಿ ಜಂತುವು ಭದ್ರವತಿಯಲ್ಲಿ ಪುರದ್ವಸುವು ಹುಟ್ಟಿದರು. ಜಂತುವಿಗೆ ವೇತ್ರಕಿ ಎಂಬ ಭಾರ್ಯೆಯಿಂದ ಸಾತ್ವತ ಎಂಬ ಹೆಸರಿನ ಸತ್ವಗುಣ ಸಂಪನ್ನನಾದ ಮಗನು ಉದ್ಭವಿಸಿದನು. ಇವನಿಂದ ಸಾತ್ವತವಂಶದ ಕೀರ್ತಿಯು ಜಗತ್ತಿನ ತುಂಬ ಬೆಳಗಿತು. ಜ್ಯಾಮಘ ಮಹಾರಾಜನಿಂದ ಮೊದಲಾದ ಈ ವಂಶಾಭಿವೃದ್ಧಿಯನ್ನು ತಿಳಿದವರು ಪ್ರಜಾವಂತರಾಗಿ ಬಾಳಿ ಕೊನೆಗೆ ಸೋಮನ ಸಾಯುಜ್ಯ ಪಡೆಯುವರು.

ಸಾತ್ವತ ಮಹಾರಾಜನು ಸತ್ವಗುಣ ಸಂಪನ್ನನಾಗಿದ್ದನೆಂದು ಹಿಂದೆ ಹೇಳಿದೆಯಷ್ಟೆ. ಆ ಸಾತ್ವತ ರಾಜನಿಗೆ ಕೌಶಲ್ಯಾ ಎಂಬ ಧರ್ಮಪತ್ನಿ ಇದ್ದಳು. ಇವನಿಗೆ ಅವಳಲ್ಲಿ ಭಜ, ಭಜವಾನ, ದೇವಾವೃಥ, ಅಂಧಕ, ಮಹಾಭೋಜ, ವೃಷ್ಣಿ ಎಂಬ ಹೆಸರಿನ ಪುತ್ರರು ಹುಟ್ಟಿದರು. ಇವರಿಂದ ಮುಂದೆ ನಾಲ್ಕು ಕುಲಗಳು ಕವಲೊಡೆದು ಬೆಳೆದವು. ಈ ವಂಶದ ಬಳ್ಳಿಗಳು ಬಿತ್ತರಗೊಂಡ ಬಗೆಯನ್ನು ಕೇಳು -

ಭಜಮಾನನಿಗೆ ಸೃಂಜಯನ ಮಗಳಾದ ಸೃಂಜಯಿ ಎಂಬ ಕನ್ಯೆಯನ್ನು ಮದುವೆಮಾಡಿ ಕೊಡಲಾಗಿತ್ತು. ಆ ಸೃಂಜಯಿಯಲ್ಲಿ ಭಾಜ ಎಂಬ ಮಗನು ಹುಟ್ಟಿದನು. ಭಾಜರಾಜನಿಗೆ ಇಬ್ಬರು ಪತ್ನಿಯರಿಂದ ವಿನಯ, ಕರುಣ, ವೃಷ್ಣಿ, ಪರಪುರಜಯ ಮುಂತಾದ ಮಕ್ಕಳು ಜನಿಸಿದರು. ಇವರೆಲ್ಲರೂ **ಭಾಜಕರು** ಎಂದು ಪ್ರಸಿದ್ಧರಾದರು. ಸ್ವಾತತನ ದೇವಾವೃಧ ಎಂಬ ಮತ್ತೊಬ್ಬ ಮಗನಿಗೆ ಪೃಥು ಎಂದು ಬೇರೆ ಹೆಸರಿದ್ದಿತು. ಈ ದೇವಾವೃಧನಿಗೆ ಸಂತಾನವು ಇರಲಿಲ್ಲ. ಆದಕ್ಕಾಗಿ ಅವನು ತಪಸ್ಸನ್ನು ಕೈಕೊಂಡನು. ಸರ್ವಗುಣಗಳಿಂದ ಒಡಗೂಡಿದ ಒಳ್ಳೇ ಮಗನು ಹುಟ್ಟಬೇಕೆಂದು ಹೆಬ್ಬಯಕೆಯಿಂದ ಅವನು ಕೃಷ್ಣನನ್ನು ಕುರಿತು ಧ್ಯಾನಮಾಡತೊಡಗಿದನು. ಒಣಗಿದ ತರಗೆಲೆಗಳೇ ಆಹಾರ, ಜಲಮಾತ್ರಪಾನ, ತ್ರಿಕಾಲಜ್ಞಾನ, ಸದಾತಪಸ್ಸು. ಇದರಿಂದ ಮಹಾರಾಜನ ದೇಹವು ಸೊರಗಿತು. ಪರ್ಣಾಶಾ ಎಂಬ ನದಿಯ ತೀರದಲ್ಲಿ ನಡೆದಿತ್ತು ರಾಜರ್ಷಿಯ ಈ ಘೋರ ತಪಸ್ಸು.

ಈ ಉಗ್ರವಾದ ರಾಜನ ತಪಶ್ಚರ್ಯವನ್ನು ಕಂಡು, ಆ ಪರ್ಣಾಶಾ ನದಿಗೆ ಕರುಣೆ ಬಂದು, ಕರುಳು ಕರಗಿತು. ಆ ರಾಜಪುರುಷನ ತಪೋನುಷ್ಠಾನದ ಕಡುಕಷ್ಟವನ್ನು ನೋಡಲಾರದೆ ಆ ನದಿಯು ತಾನೇ ನಾರಿಯಾಗಿ ಅವನಿಗೆ ಅಪೇಕ್ಷಿತವಾದ ಪುತ್ರ ಸಂತಾನವನ್ನು ಕರುಣಿಸಬೇಕೆಂದು ನಿರ್ಧರಿಸಿದಳು. ಹೀಗೆ ವಿಚಾರಿಸಿ, ಆ ನದಿಯು ದಿವ್ಯವಾದ ಒಂದು ಕನ್ಯೆಯ ವೇಷವನ್ನು ತಳೆದು ಮಹಾರಾಜನ ಬಳಿಗೆ ಬಂದಳು. ''ನೀನು ನನ್ನನ್ನು ಮದುವೆಯಾದರೆ, ನಿನಗೆ ಅಭೀಷ್ಟವಾದ ಗುಣಗಳಿಂದ ಕೂಡಿದ ಸತ್ಪುತ್ರನನ್ನು ನಾನು ಹಡೆಯುತ್ತೇನೆ.'' ಎಂದು ಭರವಸೆ ನೀಡಿದಳು. ಅವಳ ಅನುಪಮ ಸೌಂದರ್ಯ, ಇಷ್ಟಸಂತಾನದ ಆಶ್ವಾಸನೆ ಕೇಳಿ, ನೋಡಿ, ಮಹಾರಾಜನು ಸಂತೋಷದಿಂದ ಅವಳನ್ನು

ಮದುವೆಯಾದನು. ವಚನದಂತೆ, ವಿವಾಹನಂತರ ಅವಳು ಗರ್ಭಧಾರಣೆಮಾಡಿದಳು. ಒಂಬತ್ತು ತಿಂಗಳು ತುಂಬಿದಾಗ ಪತಿ ದೇವಾವೃಧನ ಮನೋರಥಕ್ಕೆ ಅನುಸರಿಸಿ, ಸರ್ವ ಗುಣಸಂಪನ್ನನಾದ ಬಭ್ರು ಎಂಬ ಗಂಡುಮಗನನ್ನುಹೆತ್ತಳು. ಸದ್ಗುಣಿಯಾದ ಈ ಬಭ್ರುವು ತಂದೆಯ ಅಪೇಕ್ಷೆಯಂತೆ, ಸರ್ವಗುಣಸಂಪನ್ನನಾಗಿದ್ದನು. ಪುರಾಣ ತಂತ್ರದಲ್ಲಿ ಪ್ರವೀಣರಾದ ಪ್ರಾಚೀನರು ಮಹಾತ್ಮನಾದ ದೇವಾವೃಧನ ಕೀರ್ತಿಯನ್ನು ಹೊಗಳಿದಂತೆ, ಮನುಷ್ಯೋತ್ತಮನಾದ ಬಭ್ರು ಮಹಾರಾಜನನ್ನು ಹೊಗಳಿ ಹಾಡಿದ್ದಾರೆ.

''ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ'' ಮನುಷ್ಯ ಕುಲದಲ್ಲಿ ಬಭ್ರುರಾಜನು ಸರ್ವಶ್ರೇಷ್ಠನು. ದೇವಾವೃಧನಂತೂ ದೇವತೆಗಳಿಗೆ ಸರಿ ಸಮಾನನಾದಂತಹವನು ಎಂಬ ಮಾತು ಪುರಾಣ ಕಾಲದ ನಾಣ್ಣುಡಿಯಾಗಿ ಪರಿಣಮಿಸಿತ್ತು. ಈ ತಂದೆ ಮಕ್ಕಳಿಂದ ಸಹಸ್ರಾರು ಜನರು ಉದ್ಧರಿಸಲ್ಪಟ್ಟು ಮೋಕ್ಷಮಾರ್ಗದಲ್ಲಿ ಮುನ್ನಡೆದರು. ಸಾತ್ವತನ ಮತ್ತೊಬ್ಬ ಮಗನಾದ ಭೋಜರಾಜ ಶರಕಾಂತ ಎಂಬ ದೊರೆಯ ಮಗಳಾದ ಮೃತಕಾವತಿ ಎಂಬ ಕನ್ಯೆಯನ್ನು ವಿವಾಹವಾದನು. ಮಹಾತೇಜಸ್ವಿಯೂ, ರೂಪವಂತನೂ ಆದ ಭೋಜರಾಜನಿಂದ ಮೃತಕಾವತಿಯು ಕುಕುರ, ಭಜಮಾನ, ಸಮೀಕ, ಬಲಬರ್ಹಿಷ ಎಂದು ನಾಲ್ಕು ಮಕ್ಕಳನ್ನು ಪಡೆದಳು. ಕುಕುರನಿಂದ ಧೃಷ್ಣು, ಧೃತಿ, ಕಪೋತರೋಮ, ನೈಮಿತ್ತಿ, ಸುಸೂತ, ಹರಿ ಅಥವಾ ಚಂದನೋದಕ ದುಂದುಭಿ ಅಭಿಜಿತ್ ಎಂದು ಮುಂತಾಗಿ ಮಕ್ಕಳು, ಮೊಮ್ಮಕ್ಕಳು ಜನಿಸಿ ವಂಶವು ವೃದ್ಧಿಗೊಂಡಿತು.

ಈ ಅಭಿಜಿತ್ ಮಹಾರಾಜನಿಗೆ ಸಂತತಿ ಆಗಲಿಲ್ಲ. ಋಷಿಗಳಿಗೆ ಶರಣುಹೋದನು. ಅಶ್ವಮೇಧಯಜ್ಞಮಾಡಲು ಋಷಿಗಳು ಆಜ್ಞೆ ಇತ್ತರು. ಗುರುಗಳ ಆಜ್ಞೆಯಂತೆ ಅಭಿಜಿತ್ ಮಹಾರಾಜನು ಯಾಗವನ್ನು ವೈಭವದಿಂದ ಜರುಗಿಸಿದನು. ಯಜ್ಞಶಾಲೆಯ ಸಭಾಮಂಟಪದಿಂದ ಯಜ್ಞದಲ್ಲಿಮಾಡಿದ ದಾನಧರ್ಮಗಳ ಪ್ರಭಾವದಿಂದ ಪುನರ್ವಸು ಎಂಬ ಕುಮಾರನು ಉದ್ಭೂತನಾಗಿ ಎದ್ದು ನಿಂತನು. ಅವನೇನೋ ಹುಟ್ಟು ಕುರುಡನಾಗಿದ್ದರೂ ಮಹಾಪಂಡಿತನಾಗಿದ್ದನು. ಧರ್ಮಶಾಸ್ತ್ರಗಳ ಮರ್ಮವನ್ನೆಲ್ಲ ಅವನು ಪೂರ್ಣವಾಗಿ ತಿಳಿದಿದ್ದನು. ಅಷ್ಟೇ ವೀರನೂ ಆಗಿದ್ದನು. ಶಾಸ್ತ್ರ ಪಾಂಡಿತ್ಯದಂತೆ, ಶಸ್ತ್ರ ಪಾಂಡಿತ್ಯವೂ ಅವನ ಸೊತ್ತಾಗಿದ್ದಿತು. ಇಂಥ ಪುನರ್ವಸು ದೊರೆಗೆ ಆಹುಕ ಆಹುಕಿ ಎಂಬ ಇಬ್ಬರು ಮಕ್ಕಳು ಜನಿಸಿದರು. ಸಾತ್ವತ ವಂಶದ ಭೋಜರಾಜನಿಂದ ಆಹುಕನವರೆಗೆ ಬೆಳಗಿ ಬಂದ ಈ ವಂಶದಲ್ಲಿ ಎಲ್ಲ ರಾಜರು ಧರ್ಮಿಷ್ಠರೂ, ಸತ್ಯವಂತರೂ ಆಗಿದ್ದರು. ಆಹುಕನ ವರೆಗಿನ ಈ ರಾಜವಂಶದ ರಾಜರ್ಷಿಗಳ ಕೀರ್ತಿಯು ದೇಶದ ಎಲ್ಲ ಕಡೆಗಳಲ್ಲಿ ಗೀತ, ಗಾಥಾ ರೂಪದಿಂದ ಹಾಡಿ ಹೊಗಳಲ್ಪಡುತ್ತಿತ್ತು.

**''ನಾಸತ್ಯವಾದೀನಾತೇಜಾನಾಯಜ್ವೋನಾಸಹಸ್ರದಃ ।**
**ನಾಶುಚಿರ್ನಾಪ್ಯವಿದ್ವಾಂಸೋ ನಭೋಜಾದಧಿಕೋ ಭವತ್ ॥''**

ಈ ವಂಶದಲ್ಲಿ ಹುಟ್ಟಿದ ಯಾವ ರಾಜನೂ ಹುಸಿ ನುಡಿಯಲಿಲ್ಲ. ಯಜ್ಞಮಾಡದೇ ಇರಲಿಲ್ಲ. ತೇಜಸ್ವಿಯಾಗದೇ ಇರಲಿಲ್ಲ. ಸಹಸ್ರನಾಣ್ಯಗಳ ಕೆಳಗೆ ದಕ್ಷಿಣೆ ಕೊಡಲಿಲ್ಲ. ಇವರಲ್ಲಿ ಮೈಲಿಗೆ, ಅಪಾವಿತ್ರ್ಯ ಎಂಬುದೇ ಇರಲಿಲ್ಲ. ಪಾಂಡಿತ್ಯವಿಲ್ಲದವರು ಒಬ್ಬರೂ ಇಲ್ಲ. ಈ ದೃಷ್ಟಿಯಿಂದ ಭೋಜರಾಜನಿಗಿಂತ ಮಿಗಿಲಾದವರು ಯಾರೂ ಇಲ್ಲ.

ಆ ಮಹಾರಾಜನವರೆಗೆ ಈ ಮನೆತನದ ಪುಣ್ಯವು ಹಾಗೆಯೇ ಸಾಗಿಬಂದಿತು. ಆಹುಕನು ತನ್ನ ತಂಗಿ ಆಹುಕಿಯನ್ನು ಅವಂತಿ ದೇಶದ ದೊರೆಗೆ ಧಾರೆಯೆರೆದು ಕೊಟ್ಟನು. ಅಹುಕನಿಗೆ ದೇವಕ, ಉಗ್ರಸೇನ ಎಂಬ ಇಬ್ಬರು ದೇವತೆಗಳಂತಿದ್ದ ಮಕ್ಕಳು ಹುಟ್ಟಿದರು. ದೇವಕನಿಗೆ ದೇವವಾನ್, ಉಪದೇವ, ಸುದೇವ, ದೇವರಕ್ಷಿತ ಎಂಬ ಹೆಸರಿನ ನಾಲ್ಕು ಜನ ದಿವ್ಯಪುತ್ರರು ಉತ್ಪನ್ನರಾದರು. ದೇವಕನಿಗೆ ಈ ನಾಲ್ಕು ಜನ ಗಂಡುಮಕ್ಕಳಲ್ಲದೆ, ದೇವಕಿ, ಶ್ರುತದೇವಾ, ಯಶೋದಾ, ಶ್ರುತಶ್ರವಾ ಶ್ರೀದೇವಾ, ಉಪದೇವಾ, ಸುದೇವಾ ಎಂದು ಏಳು ಜನ ಹೆಣ್ಣು ಮಕ್ಕಳಿದ್ದರು. ಈ ಏಳು ಜನ ಹೆಣ್ಣು ಮಕ್ಕಳನ್ನು ದೇವಕ ದೊರೆಯು ವಸುದೇವನಿಗೆ ಮದುವೆ ಮಾಡಿಕೊಟ್ಟನು. ದೇವಕನ ತಮ್ಮನಾದ ಉಗ್ರಸೇನನಿಗೆ ಕಂಸ, ನ್ಯಗ್ರೋಧ, ಸುನಾಮ, ಕಂಕ, ಶಂಕು, ಸುಭೂ, ರಾಷ್ಟ್ರಪಾಲ, ಬದ್ಧಮುಷ್ಟಿ, ಸುಮುಷ್ಟಿ ಎಂದು ಒಂಬತ್ತು ಜನ ಗಂಡು ಮಕ್ಕಳಿದ್ದರು. ಮತ್ತು ಕಂಸಾ, ಕಂಸಾವತಿ, ಸುರಭಿ, ರಾಷ್ಟ್ರಪಾಲಿ, ಕಂಕಾ ಎಂಬ ಹೆಸರಿನ ಐವರು ಹೆಣ್ಣು ಮಕ್ಕಳಿದ್ದರು. ಸಾತ್ವತ ವಂಶದ ಭೋಜರಾಜನ ನಾಲ್ಕು ಜನ ಮಕ್ಕಳಲ್ಲಿ ಎರಡನೆಯವನಾದ ಭಜಮಾನನಿಗೆ ವಿದೂರಥನೆಂಬ ಶೂರ ಮಗ ಹುಟ್ಟಿದನು. ಆ ವಿದೂರಥನಿಗೆ ರಾಜಾಧಿವ, ಶೂರ ಎಂದು ಇಬ್ಬರು ಮಕ್ಕಳು, ರಾಜದೇವನಿಗೂ ಶೋಣಾಶ್ವ, ಶ್ವೇತವಾಹನನೆಂದು ಇಬ್ಬರು ಮಕ್ಕಳು. ಶೋಣಾಶ್ವನಿಗೆ ಕದನಕಲಿಗಳಾದ ಶಮಿ, ಗದಚರ್ಮ, ನಿಮೂರ, ಶಕ್ರಜಿತ, ಶುಚಿ ಎಂಬ ಪಂಚಪುತ್ರರು. ಶಮಿಗೆ ಪ್ರತಿಕ್ಷತನ ಪುತ್ರನಾಗಿ ಹುಟ್ಟಿದನು. ಪ್ರತಿಕ್ಷತ್ರನ ಮಗನೇ ಭೋಜ. ಅವನಿಗೆ ಹೃದಿಕನು ಮಗನಾಗಿ ಹುಟ್ಟಿದನು.

ಆ ಹೃದಿಕನಿಗೆ ವೀರವರೇಣ್ಯರಾದ ಹತ್ತು ಜನ ಮಕ್ಕಳು. ಕೃತವರ್ಮನೆ ಅವನ ಜೇಷ್ಠ ಪುತ್ರ. ಶತಧ್ವನ, ದೇವಾರ್ಹ, ಸುಭಾನು, ಭೀಷಣ, ಅಜಾತ, ವಿಜಾತ, ಕಾರಕ, ಕರಂಭಕ ಎಂದು ಮಿಕ್ಕ ಹೃದಿಕ ಕುಮಾರರ ಹೆಸರುಗಳು. ಇವರಲ್ಲಿ ದೇವಾರ್ಹನ ಮಗನೇ ಕಂಬಳ ಬರ್ಹಿಷ. ಅಸಮೌಜ, ಸಮೌಜರು, ಕಂಬಳ, ಬರ್ಹಿಷನ ಪುತ್ರರು. ಸಮೌಜನಿಗೆ ಸುದೃಶ, ಸುಧಾಂಶು, ಕೃಷ್ಣ ಎಂಬ ಮೂವರು ಮಕ್ಕಳಾದರು. ಇವರೆಲ್ಲರೂ ಶೂರರಿದ್ದಷ್ಟೇ ಧಾರ್ಮಿಕರೂ ಆಗಿದ್ದರು. ಅಂಧಕರ ಈ ವಂಶ ವಿಸ್ತಾರವನ್ನು ನಿತ್ಯ ಪಠಿಸುವವರು ಒಳ್ಳೇ ಸಂತತಿಯನ್ನು ಪಡೆಯುತ್ತಾರೆ. ಯಯಾತಿ ಮಹಾರಾಜನಿಗೆ ದೇವಯಾನಿಯಿಂದ ಹುಟ್ಟಿದ ಯದುಮಹಾರಾಜನಿಗೆ ಐದು ಜನ ಮಕ್ಕಳು ಎಂದು ಹಿಂದೆ ಹೇಳಿದೆಯಷ್ಟೆ. ಅವರಲ್ಲಿ ಹಿರಿಯನಾದ ಸಹಸ್ರಜಿತನ ವಂಶದಲ್ಲಿ ಕಾರ್ತವೀರ್ಯಾರ್ಜುನ. ಹೈಹಯ, ತಾಲಜಂಘ ಮುಂತಾದವರ ಕುಲಗಳು ಬೆಳೆದಿದ್ದನ್ನು ಹಿಂದೆ ನಿರೂಪಿಸಲಾಗಿದೆ. ಯಮಮಹಾರಾಜನ ಎರಡನೆಯ ಮಗನಾದ ಕ್ರೋಷ್ಟುವಿನ ವಂಶವಿಸ್ತಾರವನ್ನು ಈವರೆಗೆ ನಾನು ನಿರೂಪಿಸಿದೆನು. ಆ ಕ್ರೋಷ್ಟು ಮಹಾರಾಜನಿಗೆ ಗಾಂಧಾರಿ, ಮಾದ್ರಿ ಎಂಬ ಮಡದಿಯರಿಂದ ವಂಶವು ಬೆಳೆದ ಬಗೆಯನ್ನು ಹೇಳುತ್ತೇನೆ.

ಗಾಂಧಾರಿಗೆ ಸುಮಿತ್ರ, ಎಂಬ ಹೆಸರಿನ ಮಿತ್ರಮಂಡಳಿಯನ್ನು ಆನಂದಪಡಿಸುವ ಮಗ ಹುಟ್ಟಿದನು. ಮಾದ್ರಿದೇವಿಗೆ ವಿಧಾಜಿತ್, ದೇವಮೀಢಷ, ಅನಮಿತ್ರ, ಶಿನಿ ಎಂದು ನಾಲ್ಕು ಮಕ್ಕಳು ಹುಟ್ಟಿದರು. ಕ್ರೋಷ್ಟುವಿನ ಈ ಪಂಚಪುತ್ರರು ಒಳ್ಳೇ ಲಕ್ಷಣವಂತರಾಗಿದ್ದರು. ಮಾದ್ರಿಯ ಮಗನಾದ ಅನಮಿತ್ರನು, ನಿಘ್ನ ಎಂಬ ಗಂಡು ಮಗನನ್ನು ಪಡೆದನು.

ನಿಘ್ನನಿಗೂ ಇಬ್ಬರು ಮಕ್ಕಳು. ಪ್ರಸೇನ-ಶಕ್ತಿಸೇನ ಎಂದು. ಇವರಿಬ್ಬರೂ ಪ್ರಚಂಡ ಪರಾಕ್ರಮಿಗಳು. ಪೃಥ್ವೀ ಮಂಡಲದಲ್ಲಿ ರತ್ನಗಳಿಗೆಲ್ಲ ರಾಜ ಎನಿಸಿದ ಸ್ಯಮಂತಕಮಣಿಯು ಇದ್ದುದು ಈ ಪ್ರಸೇನನ ಬಳಿಯಲ್ಲಿ. ಆ ರಾಜರತ್ನವನ್ನು ಕೊರಳಲ್ಲಿ ಕಟ್ಟಿಕೊಂಡೇ ತಿರುಗಾಡುವುದು ಪ್ರಸೇನನ ಸ್ವಭಾವವಾಗಿದ್ದಿತು. ಆ ಅಪೂರ್ವ ಮಣಿಯನ್ನು ತನಗೆ ಕೊಡಬೇಕೆಂದು ಶ್ರೀಕೃಷ್ಣನು ಬಹಳ ಸಲ ಪ್ರಸೇನನಿಗೆ ಕೇಳಿದನು. ಆದರೆ ಪ್ರಸೇನನು ಅದನ್ನು ಒಪ್ಪಲಿಲ್ಲ. ಹೀಗಾಗಿ ಗೋವಿಂದನಿಗೆ ಆ ರಾಜರತ್ನವು ದೊರಕಲಿಲ್ಲ. ಕೃಷ್ಣನು ಮನಸ್ಸುಮಾಡಿದ್ದರೆ ಪ್ರಸೇನನನ್ನು ನಿಗ್ರಹಿಸಿ, ಆ ಮಣಿಯನ್ನು ಕಿತ್ತುಕೊಳ್ಳಬಹುದಿತ್ತು. ಆದರೆ ಕೃಷ್ಣನ ಮನಸ್ಸು ಅಷ್ಟು ಕೀಳಾಗಿರಲಿಲ್ಲ. ದೊಡ್ಡ ಮನಸ್ಸಿನ ಆ ದೇವತಾ ಪುರುಷನು ಅದನ್ನು ಪ್ರಸೇನನಿಂದ ಕಸಿದುಕೊಳ್ಳಲಿಲ್ಲ, ತಿರುಗಿ ಕೇಳಲೂ ಇಲ್ಲ.

ಒಂದು ದಿನ ಪ್ರಸೇನನು ಬೇಟೆಗೆ ಹೊರಟ. ಅವನಿಗೆ ಯಾವಾಗಲೂ ಸ್ಯಮಂತಕರತ್ನದ ವ್ಯಾಮೋಹ. ಅರಗಳಿಗೆಯೂ ಅದನ್ನು ಬಿಟ್ಟಿರಲಾರ. ಕೊರಳಲ್ಲಿ ಕಟ್ಟಿಕೊಂಡೇ ಬೇಟೆಯಾಡಲು ಕಾಡಿಗೆ ನಡೆದ. ದಾರಿಯಲ್ಲಿ ಒಂದು ಘೋರ ಗುಹೆ, ಆ ಗುಹೆಯಲ್ಲಿ ಯಾವದೋ ಪ್ರಾಣಿಯು ಕಾಲಾಡಿದ ಸದ್ದು, ಅದನ್ನು ಗುರುತಿಸಿದ ಪ್ರಸೇನನು ತನ್ನ ಬಿಲ್ಲು ಬಾಣಗಳನ್ನು ಸಜ್ಜುಗೊಳಿಸಿ ಗುಹೆಯ ಒಳಹೊಕ್ಕನು. ಒಳಗೆ ಒಂದು ಭಯಂಕರವಾದ ಕರಡಿ ಕುಳಿತಿದ್ದಿತು. ತನ್ನ ಮನೆಯಲ್ಲಿ ಮನುಷ್ಯ ಪ್ರಾಣಿಯನ್ನು ಕಂಡು ಕುಪಿತನಾದ ಕರಡಿಯು ಪ್ರಸೇನನ ಮೇಲೆರಗಿತು.

ಕರಡಿಯ ಮನೆಯಲ್ಲಿಯೇ ಅದನ್ನು ಕೆಣಕಿ ಕೊಲ್ಲಬೇಕೆಂದು ಹುಮ್ಮಸ್ಸಿನಿಂದ ಬಂದ ಪ್ರಸೇನನು ಧೈರ್ಯದಿಂದ ಅದನ್ನು ಎದುರಿಸಿದ. ಅವರಿಬ್ಬರ ನಡುವೆ ನಿಖರದ ಹೋರಾಟ ನಡೆಯಿತು. ಕೊನೆಗೆ ಕರಡಿಯು ಪ್ರಸೇನನನ್ನು ಕೊಂದುಹಾಕಿತು ಮತ್ತು ಆ ಅಮೂಲ್ಯವಾದ ಸ್ಯಮಂತಕಮಣಿಯನ್ನು ಆ ಕರಡಿಯು ತೆಗೆದುಕೊಂಡು ತನ್ನ ಗುಹೆಯಲ್ಲಿ ಬಿದ್ದ ಆ ವೈರಿಯ ಶವವನ್ನು ಹೊರಗೆ ಎಳೆದು ಹಾಕಿ ತಾನು ಮತ್ತೆ ತನ್ನ ಗುಹೆ ಸೇರಿತು.

ಇತ್ತ ಪ್ರಸೇನನು ಬಹುದಿನಗಳಾದರೂ ಮರಳಿ ಬಾರದ್ದನ್ನು ನೋಡಿ ಜನರಿಗೆಲ್ಲ ಸಂಶಯ ಬಂದಿತು. ಹಿಂದೊಮ್ಮೆ ಕೃಷ್ಣನು ಸ್ಯಮಂತಕಮಣಿ ಕೊಡು ಎಂದು ಪ್ರಸೇನನಿಗೆ ಕೇಳಿದ್ದನಷ್ಟೇ ! ಪ್ರಸೇನನು ಆ ಮಣಿಯನ್ನು ಕೊಡದಿದ್ದುದರಿಂದ ಬೇಟೆಗೆ ಹೋದಾಗ ಕೃಷ್ಣನೇ ಅವನನ್ನು ಕೊಂದು ಮಣಿಯನ್ನು ಅಪಹರಿಸಿರಬಹುದು ಎಂದು ಯಾದವರೆಲ್ಲರೂ ತಮ್ಮತಮ್ಮಲ್ಲಿ ಮಾತನಾಡತೊಡಗಿದರು. ಸ್ಯಮಂತಕದ ಆಶೆಯಿಂದ ಗೋವಿಂದನೇ ಕಾಡಿನಲ್ಲಿ ಪ್ರಸೇನನನ್ನು ಕೊಂದಿರಬಹುದು ಎಂದು ತನಗೆ ಅಪವಾದ ಬಂದದ್ದು ಕೃಷ್ಣನಿಗೂ ತಿಳಿಯಿತು. ಈ ವಿಷಯವನ್ನು ಇತ್ಯರ್ಥ ಮಾಡಬೇಕೆಂದು ಕೃಷ್ಣನು ಪ್ರಸೇನನು ಬೇಟೆಗೆ ಹೋದ ಕಾಡಿಗೆ ತಾನೂ ಹೋದನು.

ಆ ಕರಡಿಯ ಗುಹೆಯ ಬಳಿ ಬಂದಾಗ ಮೊದಲಿನಂತೆ ಒಳಗಿನಿಂದ ಸದ್ದು, ಗದ್ದಲ ಕೇಳಿ ಬಂದಿತು. ಆಗ ಗೋವಿಂದನು ಧೈರ್ಯದಿಂದ ಖಡ್ಗ ಹಿಡಿದುಕೊಂಡು, ಗುಹೆಯನ್ನು ಪ್ರವೇಶಿಸಿದನು. ಒಳಗೆ ಜಾಂಬುವಂತ ಎಂಬ ಹೆಸರಿನ ಮಹಾ ಬಲಿಷ್ಠವಾದ ಕರಡಿ ಕುಲದ ಮಹಾರಾಜನು ಕುಳಿತುಕೊಂಡಿದ್ದನು. ಕೃಷ್ಣನಿಗೂ ಜಾಂಬವಂತನಿಗೂ ಭಯಂಕರ ಯುದ್ಧವು ನಡೆಯಿತು. ಕೃಷ್ಣನ ಅದ್ಭುತವಾದ ಪರಾಕ್ರಮ ಕಂಡು ಮತ್ತು ವಿಷ್ಣುವಿನ

ದಿವ್ಯದೇಹವನ್ನು ನೋಡಿ ಇವರು ಸಾಕ್ಷಾತ್ ಶ್ರೀಹರಿಯೇ ಎಂದು ಜಾಂಬವಂತನು ನಿರ್ಧರಿಸಿದನು. ತಕ್ಷಣವೇ ಯುದ್ಧಬಿಟ್ಟು ಕೈಮುಗಿದು ವಿಷ್ಣುಸೂಕ್ತದಿಂದ ಕೃಷ್ಣನನ್ನು ಸ್ತೋತ್ರಮಾಡಿದನು. ಅವನ ಆ ದಿವ್ಯ ಸ್ತೋತ್ರದಿಂದ ಶ್ರೀ ಕೃಷ್ಣನು ಪ್ರಸನ್ನನಾಗಿ ''ನಿನಗೆ ಬೇಕಾದ ವರ ಕೇಳಿಕೊ'' ಎಂದು ಹೇಳಿದನು. ಆಗ ಆ ಮುದಿ ಕರಡಿಯು ಮೂರು ವರಗಳನ್ನು ಕೇಳಿಕೊಂಡಿತು. ''ನಿನ್ನ ಸುದರ್ಶನ ಚಕ್ರದಿಂದ ನನಗೆ ಮರಣವನ್ನು ಕರುಣಿಸು. ನನ್ನ ಕನ್ಯೆಯಾದ ಈ ಜಾಂಬವತಿಯನ್ನು ನೀನು ಪತ್ನಿಯಾಗಿ ಸ್ವೀಕರಿಸು. ಮತ್ತು ಪ್ರಸೇನನನ್ನು ಕೊಂದು ನಾನು ಪಡೆದ ಈ ಸ್ಯಮಂತಕವನ್ನು ನಾನು ನಿಮಗೆ ಕೊಟ್ಟಿದ್ದೇನೆ. ನನ್ನ ಮೇಲೆ ದಯದೋರಿ ಈ ರತ್ನವನ್ನು ನೀನು ಅಂಗೀಕರಿಸು''. ಜಾಂಬವಂತನ ಪ್ರಾರ್ಥನೆಯಂತೆ ಶ್ರೀ ಕೃಷ್ಣನು ತನ್ನ ಸುದರ್ಶನ ಚಕ್ರದಿಂದ ಆ ಮುದಿ ಕರಡಿಯ ಮೈಗೆ ಸ್ಪರ್ಶಮಾಡಿ ಸದ್ಗತಿಯನ್ನಿತ್ತು ಅವನ ಮಗಳಾದ ಜಾಂಬವತಿ ಎಂಬ ಕನ್ಯಾಮಣಿ ಹಾಗೂ ಸ್ಯಮಂತಕ ಮಣಿಗಳನ್ನು ತೆಗೆದುಕೊಂಡು ದ್ವಾರಕೆಗೆ ಬಂದನು.

ದ್ವಾರಕೆಯಲ್ಲಿ ಎಲ್ಲ ಯಾದವರ ಸಭೆ ಕರೆದನು. ಪ್ರಸೇನನ ಸೋದರನಾದ ಶಕ್ತಿಸೇನನನ್ನು ಆಹ್ವಾನಿಸಿದನು. ಅವನಿಗೆ ಸ್ಯಮಂತಕ ಮಣಿಯನ್ನು ಎಲ್ಲ ಜನರ ಸಮಕ್ಷಮ ಕೊಟ್ಟು ಅದರ ಕತೆಯನ್ನೆಲ್ಲ ಹೇಳಿದನು. ಬೇಟೆಗೆ ಹೋದ ಪ್ರಸೇನನನ್ನು ಕರಡಿಯು ಕೊಂದಿತೆಂದೂ ಆ ಕರಡಿಯನ್ನು ಕೊಂದು ಗೋವಿಂದ ಮಣಿಯನ್ನು ಮರಳಿ ತಂದ ಸಮಾಚಾರವನ್ನು ಕೇಳಿ ಯಾದವರೆಲ್ಲರಿಗೂ ಅಚ್ಚರಿ ಆಯಿತು. ಕೃಷ್ಣನ ಮೇಲೆ ಸಂಶಯಪಟ್ಟು ವ್ಯರ್ಥ ಅಪವಾದ ಹೊರಿಸಿದ ಅವರೇ ಆ ಸಭೆಯಲ್ಲಿ ಹೇಳಿದರು.

''ವಾಸುದೇವ, ಈ ರತ್ನದ ಆಶೆಯಿಂದ ನೀನೇ ಪ್ರಸೇನನ್ನು ಕೊಂದು ಈ ಮಣಿಯನ್ನು ಅಪಹರಿಸಿರುವಿ ಎಂದು ಸಂದೇಹಪಟ್ಟಿದ್ದೆವು. ಈಗ ನಮ್ಮೆಲ್ಲರ ಸಂಶಯವು ನಿವಾರಣೆ ಆಯಿತು. ನಿನ್ನ ಮನಸ್ಸಿಗೆ ನೋವು ಉಂಟುಮಾಡಿದೆವು'' ಎಂದು ನುಡಿದರು. ಕೃಷ್ಣನು ಆ ಸ್ಯಮಂತಕ ರತ್ನವನ್ನು ಮರಳಿ ಪ್ರಸೇನನ ತಮ್ಮನಿಗೆ ಕೊಟ್ಟಿದ್ದರಿಂದ ಎಲ್ಲರಿಗೂ ಕೃಷ್ಣನ ಬಗ್ಗೆ ಪ್ರೀತಿ ಉಂಟಾಯಿತು.

ಸತ್ರಾಜಿತನಿಗೆ ಹತ್ತು ಜನ ಹೆಂಡಂದಿರು. ಒಬ್ಬೊಬ್ಬರಲ್ಲಿಯೂ ಹತ್ತು ಹತ್ತು ಗಂಡು ಮಕ್ಕಳು ಹುಟ್ಟಿದರು. ಹೀಗಾಗಿ ಅವನಿಗೆ ನೂರುಜನ ವೀರಪುತ್ರರು ಜನಿಸಿದರು. ಅವರಲ್ಲಿ ಭಂಗಕಾರನೆ ಮೊದಲನೆಯ ಗಂಡುಮಗ, ವ್ರತವತೀ ಎಂಬ ಹೆಸರಿನ ಸತ್ರಾಜಿತನ ಜ್ಯೇಷ್ಠ ಪುತ್ರಿಯು ಅನೇಕ ಬಲಿಷ್ಠರಾದ ಕುಮಾರರನ್ನು ಹೆತ್ತಳು. ಸತ್ರಾಜಿತನ ಉಳಿದ ಮಕ್ಕಳು ಅಸಂಗ, ಯುಯುಧಾನ, ಶಿನಿ ಮುಂತಾದ ವರು ಪ್ರಸಿದ್ಧರಾಗಿದ್ದಾರೆ. ಶಿನಿಯ ಮಗನಾದ ಯುಗಂಧರನಿಗೂ ನೂರು ಜನ ಮಕ್ಕಳು.

ವೃಷ್ಣಿವಂಶದಲ್ಲಿ ಕ್ರೋಷ್ಟುವಿನ ಮಡದಿಯಾದ ಮಾದ್ರಿದೇವಿಯ ನಾಲ್ಕು ಮಕ್ಕಳಲ್ಲಿ ಅನಮಿತ್ರನು ಒಬ್ಬ ಮಗನೆಂದು ಹಿಂದೆ ಹೇಳಿದೆಯಷ್ಟೇ. ಆ ಅನಮಿತ್ರನಿಗೆ ನಿಘ್ನನಲ್ಲದೆ, ಶಿನಿ ಎಂಬ ಮತ್ತೊಬ್ಬ ಮಗನಿದ್ದನು. ಇದೇ ವೃಷ್ಣಿವಂಶದ ಮತ್ತೊಬ್ಬ ಅನಮಿತ್ರನಿಂದ ವೃಷಭ, ವಿಭಾಜ, ಕ್ಷತ್ರ ಎಂಬ ಮೂವರು ಮಕ್ಕಳಾದರು.

ವೃಷಭನು ಕಾಶಿರಾಜನ ಮಗಳನ್ನು ಮದುವೆಯಾದನು. ಕ್ಷತ್ರನಿಗೆ ಜಯಂತ ಎಂಬ ಬೇರೆ ಒಂದು ಹೆಸರು ಉಂಟು. ಅವನ ಮಡದಿಯ ಹೆಸರು ಜಯಂತಿ. ಆ ಜಯಂತ

ದಂಪತಿಗಳಿಗೆ ಶುಭ ಎಂಬ ಹೆಸರಿನ ಒಬ್ಬ ಗಂಡುಮಗನು ಹುಟ್ಟಿದನು. ಅವನಿಗೆ ಯಜ್ಞಯಾಗಗಳಲ್ಲಿ ಸದಾ ದೀಕ್ಷೆ. ಶಾಸ್ತ್ರಗಳಲ್ಲಿ ಪಾಂಡಿತ್ಯ, ಅತಿಥಿ ಸೇವೆಯಲ್ಲಿ ತತ್ಪರ, ಆ ಶುಭನ ಪುತ್ರನೇ ಅಕ್ರೂರ. ಯಜ್ಞ, ದೀಕ್ಷೆ, ದಾನ ದಕ್ಷಿಣೆಗಳಲ್ಲಿ ಆಸಕ್ತಿ, ಧರ್ಮನಿಷ್ಠೆಗಳು ತಂದೆಯಿಂದಲೇ ಅಕ್ರೂರನಿಗೆ ಬಳುವಳಿಯಾಗಿ ಬಂದಿದ್ದವು. ಶಿಬಿದೇಶದ ರಾಜನ ಮಗಳನ್ನು ಅಕ್ರೂರನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಅಕ್ರೂರನಿಗೆ ಆ ಶೈಬ್ಯ ರಾಜಕುಮಾರಿಯಲ್ಲಿ ಉಪಲಂಭ, ಸವಾಲಂಭ, ಉತ್ಕಲ, ಆರ್ಯಶೈಸವ, ಸದಾಪಕ್ಷ, ಶತ್ರುಘ್ನ, ವಾರಿಮೇಜಯ, ಧರ್ಮವೃಷ್ಟಿ, ಧರ್ಮಸೃಷ್ಟಿ ಮೌಳಿ, ಸಥೀರ ಎಂದು ಹನ್ನೊಂದು ಜನ ಮಕ್ಕಳು ಹುಟ್ಟಿದರು. ಅಕ್ರೂರನಿಗೆ ಶೂರಸೇನಾ ಎಂಬ ಮಡದಿಯಿಂದ ದೇವವಾನ್, ಉಪದೇವ ಎಂಬ ದೇವತಾ ಸಮಾನರಾದ ಇಬ್ಬರು ಮಕ್ಕಳೂ, ಅಶ್ವಿನೀ ಎಂಬ ಭಾರ್ಯೆಯಿಂದ ಪೃಥು, ವಿಪ್ರಥು, ಅಶ್ವತ್ಥಾಮ, ಸುಪಾರ್ಶ್ವ, ಸುಬಾಹು, ಗವೇಷಣ, ರಿಷ್ಟನೇಮಿ, ಸುವರ್ಚ, ಮೃದು, ಸುಧರ್ಮ, ಅಭೂಮಿ, ಬಹುಭೂಮಿ, ಸ್ಥಲಿಷ್ಠ, ಅನುಮಿತ ಮುಂತಾದ ಹದಿನಾಲ್ಕು ಮಕ್ಕಳು ಜನಿಸಿದರು. ಶ್ರೀ ಕೃಷ್ಣನ ಮೇಲೆ ಬಂದ ಈ ಸುಳ್ಳು ಅಪವಾದ ಕತೆಯನ್ನು ಕೇಳಿದವರು ಅಂಥ ಮಿಥ್ಯಾಪವಾದಕ್ಕೆ ಈಡಾಗುವದಿಲ್ಲ.

ವೃಷ್ಣಿವಂಶದ ಶೂರನಿಗೆ ಭೋಜಾ ಎಂಬ ಮಡದಿಯಿಂದ ಹತ್ತು ಜನ ಮಕ್ಕಳು ಹುಟ್ಟಿದರು. ಇವರಲ್ಲಿ ಹಿರಿಯನಾದ ವಸುದೇವನು ಮೊದಲು ಆನಕ, ದುಂದುಭಿ ಆಗಿದ್ದನು. ದೇವಭಾಗ, ದೇವಶ್ರವ, ಅನಾದೃಷ್ಟಿ, ಕುನಿ, ನಂದಿ, ಸಕೃದ್ಯಶಸ್, ಶ್ಯಾಮ, ಸಮೀಢು, ಶಂಸಸ್ಕು ಎಂದು ಒಂಭತ್ತು ಜನ ಸಹೋದರರು ಇದ್ದರು. ಹಾಗೂ ಶ್ರುತಕೀರ್ತಿ, ಪೃಥಾ, ಶ್ರುತದೇವಿ, ಶ್ರುತಿಶ್ರವಾ, ರಾಜಾಧಿದೇವಿ ಎಂದು ಐದು ಸಹೋದರಿಯರು ವಸುದೇವನಿಗೆ ಇದ್ದರು. ಇವರಲ್ಲಿ ಶ್ರುತದೇವಿಯನ್ನು ಕರೂಷರಾಜನಿಗೆ ಮದುವೆ ಮಾಡಿಕೊಡಲಾಗಿತ್ತು. ಅವಳಿಂದ ಕಾರೂಷನು ಮಗನಾಗಿ ಜನಿಸಿದನು. ಕೈಕಯ ರಾಜನಿಗೆ ಮದುವೆ ಮಾಡಿಕೊಟ್ಟ ಶ್ರುತಕೀರ್ತಿ ಎಂಬ ವಸುದೇವ ಸೋದರಿಯಿಂದ ಸೈಂಧವರಾಜನು ಹುಟ್ಟಿದನು. ಚೈದ್ಯರಾಜನ ಕೈ ಹಿಡಿದವಳು ಸುನೀಥನನ್ನು ಹೆತ್ತಳು. ಕುಂತಿಭೋಜನಿಗೆ ಶೂರನ ಮಗಳಾದ ಪೃಥಾದೇವಿಯನ್ನು ಕೊಟ್ಟು ಮದುವೆಮಾಡಿದರು. ಆ ಕುಂತಿಭೋಜನ ಮಗಳಾದ ಕುಂತೀದೇವಿಯನ್ನು ಪಾಂಡುರಾಜನಿಗೆ ಮದುವೆ ಮಾಡಿಕೊಡಲಾಯಿತು.

ಆ ಕುಂತಿದೇವಿಯು ಪಾಂಡುರಾಜನಿಗಾಗಿ ಮಹಾಬಲಿಷ್ಠರಾದ ಮೂವರು ದೇವಪುತ್ರರನ್ನು ಹೆತ್ತಳು. ಧರ್ಮದೇವತೆಯ ದಯೆಯಿಂದ ಯುಧಿಷ್ಠಿರ, ವಾಯುದೇವರ ಅನುಗ್ರಹದಿಂದ ಭೀಮ, ದೇವೇಂದ್ರನ ಕೃಪೆಯಿಂದ ಅರ್ಜುನನನ್ನು ಪಡೆದಳು. ಅರ್ಜುನನು ದೇವಕಾರ್ಯಗಳ ಸಾಧಕನೂ, ದೈತ್ಯ ಸಂಹಾರಕನೂ ಆಗಿದ್ದನು. ಅವನನ್ನು ಗೆಲ್ಲುವದಾಗಲಿ, ಕೊಲ್ಲುವದಾಗಲಿ ಸಾಧ್ಯವಿರಲಿಲ್ಲ. ಇಂದ್ರನಿಗೂ ಮಣಿಯಾದ ಪೌಲೋಮ, ಕಾಲಕೇಯ, ನಿವಾತ, ಕವಚ ಮುಂತಾದ ದುರುಳ ದೈತ್ಯರನ್ನೆಲ್ಲ ಈ ಅರ್ಜುನನು ತನ್ನ ಪರಾಕ್ರಮದಿಂದ ಕೊಂದುಹಾಕಿದನು. ಸ್ವರ್ಗಲೋಕದಲ್ಲಿ ದೇವೇಂದ್ರನು ಇವನನ್ನು ಗೌರವಿಸಿ, ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡನು.

ಹಿಂದೆ ದೇವತೆಗಳ ಬಡಿಗನಾದ ವಿಶ್ವಕರ್ಮನು ಪಾರಿಜಾತ ಮರದಿಂದ ನರನಾರಾಯಣರ ಎರಡು ಸುಂದರ ಪ್ರತಿಮೆ ನಿರ್ಮಿಸಿದ್ದನು. ಸ್ವರ್ಗದಲ್ಲಿ ಎಲ್ಲರೂ

ಅವುಗಳನ್ನು ಪೂಜಿಸುತ್ತಿದ್ದರು. ದೇವಪೂಜಿತವಾದ ಆ ಎರಡೂ ಪ್ರತಿಮೆಗಳನ್ನು ಅನಂತರ ಕುಶಸ್ಥಲಿಗೆ ತರಲಾಯಿತು. ಅನಂತರ ಅವೇ ಪ್ರತಿಮೆಗಳ ಮೂಲರೂಪಗಳನ್ನು ಭೂಲೋಕಕ್ಕೆ ಬರಮಾಡಿ ಕೊಳ್ಳಲಾಯಿತು.

ಹೀಗೆ ದೇವ, ಮಾನವ ಪೂಜಿತರಾದ ಆ ನರನಾರಾಯಣರು ಭೂಲೋಕದ ಭಾರವನ್ನು ಇಳಿಸುವದಕ್ಕಾಗಿ ಕೃಷ್ಣಾರ್ಜುನ ರೂಪದಿಂದ ಹುಟ್ಟಿಬಂದರು. ಅರ್ಜುನನಲ್ಲಿ ಇಂದ್ರ, ಶೇಷರ ಅಂಶಗಳಿದ್ದು ಕೇಶವನ ಆವೇಶವೂ ಇರುತ್ತದೆ. ಹೀಗೆ ಮೂವರು ಮಹಾಪುರುಷರ ಒಂದೊಂದು ಅಂಶದಿಂದ ಮೂರು ಲೋಕದಲ್ಲಿ ಪೂಜಿತನಾದ ಶ್ರೀ ವಿಷ್ಣುವಿನ ಕಾರ್ಯಸಾಧನೆಗೆ ಅರ್ಜುನನು ಜನಿಸಿ ಬಂದನು. ದೇವಪೂಜಿತನಾದ ಸಾಕ್ಷಾತ್ ಶ್ರೀಮನ್ನಾರಾಯಣನೇ ವಾಸುದೇವ ಕೃಷ್ಣನಾಗಿ ಅವತರಿಸಿ ಬಂದನು.

ಪಾಂಡುರಾಜನಿಗೆ ಕುಂತಿಯಲ್ಲದೆ ಮಾದ್ರಿ ಎಂಬ ಇನ್ನೊಬ್ಬ ಮಡದಿ ಇದ್ದಳು. ಮಾದ್ರಿಯಲ್ಲಿ ಅಶ್ವಿನೀಕುಮಾರರ ಅನುಗ್ರಹದಿಂದ ನಕುಲ, ಸಹದೇವ ಎಂಬ ಇಬ್ಬರು ಮಕ್ಕಳು ಜನಿಸಿದರು. ಅಸದೃಶ ಸೌಂದರ್ಯ, ಸಾತ್ವಿಕತೆ, ಸದ್ಗುಣಗಳ ಸಾಕಾರ ಮೂರ್ತಿಗಳಾಗಿದ್ದರು ಆ ಮಾದ್ರಿಯ ಅವಳಿ ಜವಳಿ ಮಕ್ಕಳು.

ವಸುದೇವನಿಗೆ ಕುರುವಂಶದಲ್ಲಿ ಜನಿಸಿದ ರೋಹಿಣಿ ಎಂಬ ಭಾರ್ಯೆಯಿಂದ ಪರಶುರಾಮ, ಸಾರಣ, ದಮನ, ಪಿಂಡಾಕರ, ಮಹಾಹನು ಎಂಬ ಮಕ್ಕಳು ಜನಿಸಿದರು. ರೋಹಿಣಿಯಲ್ಲಿ ಬಲರಾಮನು ಹುಟ್ಟಿದ ಬಳಿಕ ದೇವಕೀದೇವಿಯಲ್ಲಿ ವಸುದೇವನಿಂದ ಶ್ರೀ ಕೃಷ್ಣನು ಅವತರಿಸಿದನು. ಅನಂತರ ಮಧುರಭಾಷಿಣಿಯಾದ ಸುಭದ್ರೆಯು ಕೃಷ್ಣನ ತಂಗಿಯಾಗಿ ಉದಿಸಿ ಬಂದಳು. ಉಪದೇವಾ ಎಂಬ ವಸುದೇವನ ಮತ್ತೊಬ್ಬ ಮಡದಿಯಿಂದ ವಿಜಯ, ರೋಮಾಂಚನ, ವರ್ಧಮಾನ ದೇವಲ ಎಂಬ ಮಕ್ಕಳು ಜನಿಸಿದರು.

ಶ್ರೀ ಕೃಷ್ಣ ಪರಮಾತ್ಮನವರೆಗೆ ಬೆಳೆದು ಬಂದ ಈ ಯದುವಂಶದ ವೃತ್ತಾಂತ ನಿನಗೆ ತಿಳಿಸಿದೆನು. ಇನ್ನು ಕೃಷ್ಣ ಜನ್ಮದ ಕತೆ ಹೇಳುತ್ತೇನೆ ಕೇಳು. ಶ್ರೀ ಕೃಷ್ಣನ ಹುಟ್ಟು ಹಾಗೂ ಬೆಳವಣಿಗೆಗಳ ವೃತ್ತಾಂತವನ್ನು ಅನುದಿನವೂ ಪಠಿಸಿದರೆ ಮಾನವರ ಎಲ್ಲ ಪಾಪಗಳೂ ತೊಳೆದು ಹೋಗುತ್ತವೆ. ಕೇಳಿದರೆ ಸರ್ವಾರಿಷ್ಟಗಳು ಕಳೆದು ಹೋಗುತ್ತವೆ. ಜಗತ್ತಿನ ಸೃಷ್ಟಿಸ್ಥಿತಿ ಲಯಾದಿಗಳನ್ನು ಮಾಡುವ ಶ್ರೀಕೃಷ್ಣನು ಬರೀ ದೇವನಲ್ಲ-ಮಹಾದೇವ, ದೇವಾಧಿದೇವತೆಗಳೆಲ್ಲರಿಗೂ ಅಧಿಪತಿ, ಈ ದೇವಾಧಿದೇವರ ಒಡೆಯನು ಲೀಲೆಗಾಗಿ ಮನುಷ್ಯ ಕುಲದಲ್ಲಿ ಅವತಾರ ಮಾಡಿದನು.

ವಸುದೇವ ದೇವಕಿಯರು ಬಹುಕಾಲ ಆ ಶ್ರೀಹರಿಯು ತಮಗೆ ಮಗನಾಗಿ ಹುಟ್ಟಬೇಕೆಂದು ತಪಸ್ಸುಮಾಡಿದ್ದರು. ಅವರ ಭಕ್ತಿಭಾವ ಹಾಗೂ ತಪೋನುಷ್ಠಾನಗಳಿಗೆ ಮೆಚ್ಚಿ ಭಗವಂತನು ಆ ದಂಪತಿಗಳ ಮೂಲಕ ಭೂಮಂಡಲದಲ್ಲಿ ಪ್ರಾದುರ್ಭವಿಸಿದನು.

ಅವನ ಉತ್ಪತ್ತಿಯು ಒಂದು ಪವಾಡದಂತೆಯೇ ನಡೆಯಿತು. ತಾಯಿಯ ಹೊಟ್ಟೆಯಿಂದ ಹುಟ್ಟುವಾಗಲೇ ಅವನಿಗೆ ನಾಲ್ಕು ಕೈಗಳು, ದಿವ್ಯರೂಪ, ಎದೆಯಲ್ಲಿ ಶ್ರೀವತ್ಸ ಚಿನ್ಹ, ವಿಷ್ಣುವಿನ ಲಕ್ಷಣಗಳಾದ ಶಂಖ, ಚಕ್ರ, ಗಧೆ, ಪದ್ಮ ಮುಂತಾದವುಗಳು ಚತುರ್ಭಾಹುಗಳಲ್ಲಿ ಕಂಗೊಳಿಸುತ್ತಿದ್ದವು. ಭಗವಂತನ ದಿವ್ಯ ಲಕ್ಷಣಗಳಿಂದಕೂಡಿದ

ಆ ದೈವಿಕಸ್ವರೂಪ ಕಂಡು ವಸುದೇವನು ಬೆರಗು ಪಡೆದು ಭಯಭ್ರಾಂತನಾಗಿ ನಿಂತುಕೊಂಡನು. ಮರುಕ್ಷಣದಲ್ಲಿ ಚೇತರಿಸಿಕೊಂಡು ಕೇಳಿಕೊಂಡನು.

''ಭಗವನ್, ನಿನ್ನ ಈ ದಿವ್ಯರೂಪವನ್ನು ಉಪಸಂಹರಿಸು. ನನಗೆ ಕಂಸನಿಂದ ಹೆದರಿಕೆ ಆಗಿದೆ. ಆ ದುಷ್ಟನು ಈಗಾಗಲೇ ನಿನ್ನ ಅಣ್ಣಂದಿರಾದ ನನ್ನ ಆರು ಜನ ಮಕ್ಕಳನ್ನು ಕೊಂದು ಹಾಕಿದ್ದಾನೆ. ಆದುದರಿಂದ ನನಗೆ ಅವನಿಂದ ಗಾಬರಿ ಆಗಿದೆ. ಅದಕ್ಕಾಗಿ ಈ ಮಾತನ್ನು ನಿನ್ನಲ್ಲಿ ಬಿನ್ನವಿಸಿಕೊಳ್ಳುತ್ತಿದ್ದೇನೆ.'' ವಸುದೇವನ ಈ ನುಡಿ ಕೇಳಿ ಭಗವಂತನು ತನ್ನ ಆ ಅದ್ಭುತ ರೂಪವನ್ನು ಮಾರ್ಪಡಿಸಿ ಎಳೆಯ ಕೂಸಾಗಿ ದೇವಕಿಯ ಮಡಲಿನಲ್ಲಿ ಪವಡಿಸಿದನು. ಆ ಬಾಲಕೃಷ್ಣನ ಅಪ್ಪಣೆಯಂತೆ ವಸುದೇವನು ತನ್ನ ಆ ಕೃಷ್ಣಕುಮಾರನನ್ನು ಅದೇ ರಾತ್ರಿಯಲ್ಲಿ ನಂದಗೋಪನ ಮನೆಗೆ ಕರೆದೊಯ್ದನು. ನಂದಗೋಪನಿಗೆ ಆ ಮಗುವನ್ನು ಕೊಟ್ಟು ಹೇಳಿದನು.

''ನಂದಗೋಪಾ, ಈ ಮಗುವನ್ನು ನೀನು ಜಾಗರೂಕತೆಯಿಂದ ಕಾಯಬೇಕು. ಇವನಿಂದ ಎಲ್ಲ ಯಾದವರಿಗೂ ಮುಂದೆ ಕೋಟಿಕಲ್ಯಾಣಉಂಟು. ದೇವಕಿಯ ಗರ್ಭದಿಂದ ಹುಟ್ಟಿ ಬಂದ ಈ ಮಗುವು ಕಂಸನನ್ನು ಕೊಲ್ಲುವವರೆಗೆ ಈ ಜಗತ್ತಿಗೆ ಕ್ಷೇಮ ಉಂಟಾಗಲಾರದು. ಈ ದೇವಕೀ ಕುಮಾರನು ಕೆಲವೇ ದಿನಗಳಲ್ಲಿ ಕಂಸನನ್ನು ಕೊಂದು ಅನಂತರ ಭೂಮಂಡಲದಲ್ಲಿರುವ ಉಳಿದ ಎಲ್ಲ ದುಷ್ಟರಾಜರನ್ನು ಸಂಹರಿಸುವನು.

ಕುರುಪಾಂಡವರ ಯುದ್ಧದಲ್ಲಿ ಎಲ್ಲ ಕ್ಷತ್ರಿಯರೂ ನೆರೆಯುವರು. ಆಗ ಈ ಕೃಷ್ಣನೇ ಅರ್ಜುನನ ರಥದ ಸಾರಥಿಯಾಗಿ ದುಷ್ಟಕ್ಷತ್ರಿಯರ ವಿನಾಶಕ್ಕೆ ಕಾರಣನಾಗುವನು. ಹೀಗೆ ದುಷ್ಟಭ್ರಮರಾದ ಕ್ಷತ್ರಿಯರ ಬಳಗ ಅಳಿದಬಳಿಕ ಮಹೀತಲದಲ್ಲಿ ಧರ್ಮರಾಜ್ಯ ನಡೆಸಿ ಅನಂತರ ಇದೇ ಭಗವಂತನು ನಮ್ಮ ಈ ಯದುಕುಲವನ್ನು ದೇವಲೋಕಕ್ಕೆ ಕರೆದೊಯ್ಯುವನು. ನಂದಗೋಪಾ, ನಮ್ಮ ಈ ಎಳೆಯ ಕಂದನಿಂದ ನಮ್ಮೆಲ್ಲ ಯಾದವರಿಗೂ ಇಷ್ಟೆಲ್ಲ ಕಲ್ಯಾಣ ಪರಂಪರೆಗಳು ಕಾದಿವೆ. ಆದುದರಿಂದ ನಮ್ಮ ಕಂದನನ್ನು ಕಾಯುವುದು ನಿನ್ನ ಭಾರ.

**ಭೀಷ್ಮ** :- ಮಹರ್ಷಿಗಳಾದ ಪುಲಸ್ತ್ಯರೆ, ಈ ವಸುದೇವನು ಯಾರು? ಯಶಸ್ವಿನಿಯಾದ ಆ ದೇವಕಿಯಾರು? ಈ ನಂದಗೋಪಯಾರಿವನು? ಅವನ ಮಹಾಪತಿವ್ರತೆ ಮಡದಿಯಾದ ಯಶೋದೆಯು ಯಾರು? ಸಾಕ್ಷಾತ್ ವಿಷ್ಣುವು ಅವಳನ್ನು 'ಅಮ್ಮಾ' 'ಅವ್ವಾ' 'ಅಂಬಾ' ಎಂದು ಮುಂತಾಗಿ ಸಂಬೋಧಿಸಬೇಕಾದರೆ ಆ ಮಹಾತಾಯಿಯು ಎಷ್ಟು ಪುಣ್ಯಮಾಡಿರಬೇಡ ! ಮಗುವಾಗಿ ಬಂದ ಭಗವಂತನನ್ನು ಪೋಷಿಸುವದೂ, ತಾಯ್ಗರಳಿನಿಂದ ಕಾಪಾಡುವುದೂ ಸಾಮಾನ್ಯವೆ ? ಆದುದರಿಂದ ಈ ನಾಲ್ಕೂ ಮಹಾಪುರಷರ ಪೂರ್ವಾಪರಗಳನ್ನು ನನಗೆ ತಿಳಿಸಿ.

**ಪುಲಸ್ತ್ಯ** :- ಬ್ರಹ್ಮದೇವರ ಮಾನಸಪುತ್ರನಾದ ಕಶ್ಯಪ ಋಷಿಯೇ ವಸುದೇವನಾಗಿ ಹುಟ್ಟಿಬಂದಿದ್ದಾನೆ. ಆ ಕಶ್ಯಪರ ಪತ್ನಿ ಅದಿತಿದೇವಿಯೇ ಯಶೋದೆ. ಆ ಕಶ್ಯಪರಂತೂ ಬ್ರಹ್ಮದೇವರ ಅಂಶ. ಈ ಅದಿತಿ ದೇವಿಯು ಪೃಥ್ವಿಯ ಅಂಶ. ಈ ನಂದಗೋಪನು ಹಾಗೂ ಅವನ ಪತ್ನಿ ಯಶೋದೆ ಹಿಂದೆ ದ್ರೋಣ ಮತ್ತು ಧರಾದೇವಿ ಎಂಬ ದಂಪತಿಗಳಾಗಿದ್ದರು. ಪೂರ್ವಕಾಲದಲ್ಲಿ ಅದಿತಿ ಕಶ್ಯಪರು ಮಹಾತಪಸ್ಸನ್ನು ಮಾಡಿದರು. ಅದಿತಿದೇವಿಯು

ಭಗವಂತನಲ್ಲಿ ವರ ಕೇಳಿಕೊಂಡದ್ದರಿಂದ ಅವಳ ಕಾಮನೆಯನ್ನು ಪೂರ್ತಿ ಮಾಡಲಿಕ್ಕಾಗಿ ಜಗದೀಶ್ವರನಾದ ವಿಷ್ಣುವು ಮನುಷ್ಯ ದೇಹ ತಳೆದು ಇವಳಲ್ಲಿ ಅವತರಿಸಿ ಬಂದಿದ್ದಾನೆ. ಜಗತ್ತಿನಲ್ಲಿ ಧರ್ಮವು ನಷ್ಟವಾಗಿ ಯಜ್ಞಯಾಗಾದಿ ಸತ್ಕರ್ಮಗಳು ಲುಪ್ತವಾದುದನ್ನು ಕಂಡು ಧರ್ಮಸಂಸ್ಥಾಪನೆಗಾಗಿ ಆ ದೇವದೇವನು ಅವತರಿಸಿ ಬಂದಿದ್ದಾನೆ. ಅಸುರ ಕುಲ ವಿನಾಶವನ್ನು ಅವರ ಹೊರತು ಬೇರೆ ಯಾರುಮಾಡಬಲ್ಲರು ? ಹೀಗೆ ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ, ಧರ್ಮಸ್ಥಾಪನೆಗಾಗಿ ಅವತರಿಸಿ ಬಂದ ಕೃಷ್ಣನಿಗೆ ಹದಿನಾರುಸಾವಿರ ಮಡದಿಯರು. ಅವರಲ್ಲಿ ರುಕ್ಮಿಣಿ, ಸತ್ಯಭಾಮಾ, ನಾಗ್ನಜಿತಿ, ಸುಮಿತ್ರಾ, ಶೈಬ್ಯಾ, ಗಾಂಧಾರಿ, ಲಕ್ಷಣಾ, ಮಾದ್ರಿ, ಸತ್ಯಾ, ಕೌಸಲ್ಯಾ, ವಿರಜಾ ಮುಂತಾದವರು ಪ್ರಮುಖರಾಗಿದ್ದರು.

ಅವರಲ್ಲಿ ಪಟ್ಟದರಸಿಯಾದ ರುಕ್ಮಿಣಿದೇವಿಯು ಶ್ರೀ ಕೃಷ್ಣನಿಂದ ಚಾರುದೇಷ್ಣ, ಪ್ರದ್ಯುಮ್ನ, ಸಂಚಾರು, ಚಾರುಭದ್ರ, ಸದಸ್ವ, ಹ್ರಸ್ವ, ಚಾರುಗುಪ್ತ, ಚಾರುಕ, ಚಾರುರಂದ್ರ, ಚಾರುಬಾಸ ಎಂದು ಹತ್ತು ಜನ ಗಂಡುಮಕ್ಕಳನ್ನು ಹೆತ್ತಳು. ಹೆಣ್ಣುಮಗಳು ಮಾತ್ರ ಒಬ್ಬಳೇ ಚಾರುಮತಿ. ಇದರಂತೆ ಸತ್ಯಭಾಮೆಗೆ ರೋಹಿತ, ದೀಪ್ತಿಮಾನ್, ತಾಮ್ರಬಂಧ, ಜಲಂಧಮ, ಭೀಮ, ಭೀಮರಥ, ರಥಕ್ಷಮ ಎಂದು ಏಳು ಗಂಡುಮಕ್ಕಳು, ಒಬ್ಬ ಹೆಣ್ಣುಮಗಳು ಹುಟ್ಟಿದಳು.

ಜಾಂಬವತಿಗೆ ಸಾಂಬ ಎಂಬ ಸುಂದರನಾದ ಮಗನು ಜನಿಸಿದನು. ಇವನು ಜೋತಿಶ್ಯಶಾಸ್ತ್ರಕ್ಕೂ, ಸೌರಸಂಪ್ರದಾಯಕ್ಕೂ ಮೂಲಪ್ರವರ್ತಕನಾಗಿದ್ದನು. ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರ, ಪ್ರತಿಮಾ ಲಕ್ಷಣ ಮುಂತಾದವುಗಳಿಗೆಲ್ಲ ಈ ಸಾಂಬನೇ ಮೊಟ್ಟ ಮೊದಲಿನ ಪ್ರವರ್ತಕ ಆಚಾರ್ಯನಾಗಿದ್ದಾನೆ. ಇವನಿಗೆ ಒಮ್ಮೆ ದುರ್ದೈವದಿಂದ ಕುಷ್ಠರೋಗವು ತಗುಲಿದಾಗ ಅವನ ಆರಾಧನೆಯಿಂದ ಸಂತುಷ್ಟನಾದ ಸೂರ್ಯ ನಾರಾಯಣನು ಅವನ ರೋಗವನ್ನೆಲ್ಲಾ ವಾಸಿಮಾಡಿದನು. ನಾಗ್ನಜಿತಿಗಿ ಸುಮಿತ್ರ, ಚಾರುಮಿತ್ರ, ಮಿತ್ರವದ, ವರಾಶನ, ಮಿತ್ರಬಾಹು, ಸುನೀಥ ಮುಂತಾಗಿ ಮಕ್ಕಳು ಉತ್ಪನ್ನರಾದರು. ಹೀಗೆ ಶ್ರೀಕೃಷ್ಣನಿಗೆ ಎಂಬತ್ತು ಸಾವಿರಜನ ಮಕ್ಕಳು ಆದರು.

ಪ್ರದ್ಯುಮ್ನನಿಗೆ ವಿದರ್ಭರಾಜಕುಮಾರಿಯಲ್ಲಿ ಅನಿರುದ್ಧ ಎಂಬ ಮಗನು ಹುಟ್ಟಿದನು. ಅನಿರುದ್ಧನಿಗೆ ಮೃಗಕೇತನಿ ಎಂಬ ಚಿಗರೆಗಣ್ಣಿನ ಚೆಲುವೆಯು ಪತ್ನಿಯಾಗಿದ್ದಳು. ಸುಪಾರ್ಶನ ಮಗಳಾದ ಕನ್ಯಾಕುಮಾರಿಯೊಂದಿಗೆ ಸಾಂಬನ ವಿವಾಹವಾಗಿದ್ದಿತು. ಕೃಷ್ಣನ ಮಕ್ಕಳಲ್ಲಿ ಹನ್ನೆರಡು ಜನ ಮಕ್ಕಳು, ದೇವತೆಗಳೇ ಭಗವಂತನ ಮಕ್ಕಳಾಗಬೇಕೆಂದು ಅವತರಿಸಿ ಬಂದಿದ್ದರು.

ಮಹಾತ್ಮರಾದ ಮೂರುಕೋಟಿ ಯಾದವರಲ್ಲಿ ಬಹುಜನರು ದೇವಾಂಶ ಸಂಭೂತರೇ ಆಗಿದ್ದರು. ಹಿಂದೆ ದೇವಾಸುರ ಸಂಗ್ರಾಮದಲ್ಲಿ ವಿಷ್ಣುವಿನಿಂದ ಹತರಾದ ದೈತ್ಯರು ಮತ್ತೆ ಹುಟ್ಟಿ ಬಂದಿದ್ದಾರೆ. ಅಂದಿನ ಸೇಡನ್ನು ತೀರಿಸಿಕೊಳ್ಳಬೇಕೆಂದು ಈಗ ದುರ್ಬಲರಾದ ಮಾನವರನ್ನು ಪೀಡಿಸುತ್ತಲಿದ್ದಾರೆ. ಆ ಎಲ್ಲ ದುಷ್ಟ ದೈತ್ಯರನ್ನು ದಮನಮಾಡಲು ವಿಷ್ಣುವೇ ಯದುಕುಲದಲ್ಲಿ ಕೃಷ್ಣನಾಗಿ ಅವತರಿಸಿದನು. ಕೃಷ್ಣನು ಉದಿಸಿದ ಆ ಯಾದವರ ಕುಲಗಳು ಒಂದನೂರಾ ಒಂದು ಸಂಖ್ಯೆಯಲ್ಲಿ ಕವಲೊಡೆದು ಬೆಳೆದಿದ್ದವು. ಇವರೆಲ್ಲರಿಗೂ ನಿಯಾಮಕನಾಗಿ, ಮಾರ್ಗದರ್ಶಕನಾಗಿ, ಸಂರಕ್ಷಕನಾಗಿ, ವಿಷ್ಣುವು ನಿಂತುಕೊಂಡಿದ್ದನು.

ಅವನ ಅಪ್ಪಣೆಯಲ್ಲಿರುವವರೆಗೆ ಯಾದವರಿಗೆ ಸರ್ವಸಿದ್ಧಿ, ಸರ್ವಸಮೃದ್ಧಿ, ಸದಾತುಷ್ಟಿ, ಪೂರ್ಣಾಶಾಂತಿ, ಸರ್ವವಿಧ ಸಂತೋಷ, ಸಕಲ ಸೌಭಾಗ್ಯಗಳು ಕಟ್ಟಿಟ್ಟಂತೆ.

**ಭೀಷ್ಮ** :- ಸಪ್ತರ್ಷಿಗಳು, ಕುಬೇರನು, ಮಣಿಧರ ಎಂಬ ಯಕ್ಷನು ಸಾತ್ಯಕಿ, ನಾರದ, ಸಿದ್ಧರು, ಧನ್ವಂತರಿ ಇವರೆಲ್ಲರೂ ಶ್ರೀ ಹರಿಯ ಜೊತೆಗೆ ಈ ಭೂಲೋಕಕ್ಕೆ ಏಕೆ ಇಳಿದು ಬಂದರು ? ಈ ವಿಷ್ಣುವಿನ ಮುಂದಿನ ಅವತಾರಗಳು ಎಷ್ಟು ? ಮತ್ತು ಯಾವವು ? ಬ್ರಾಹ್ಮಣರಲ್ಲಿಯೂ ಕ್ಷತ್ರಿಯರಲ್ಲಿಯೂ ಹೀಗೆ ಬೇರೆ ಬೇರೆ ಅವತಾರ ಎತ್ತಿ ಪರಮೇಶ್ವರನು ಮರ್ತ್ಯರೂಪದಿಂದ ಮೈದಾಳಿಬರಲು ಕಾರಣವೇನು ? ಈಗ ವಿಷ್ಣುವು ವೃಷ್ಣಿ ಹಾಗೂ ಅಂಧಕರ ಕುಲದಲ್ಲಿ ಯಾವ ಕಾರ್ಯ ಸಾಧಿಸಲು ಜನಿಸಿ ಬಂದಿದ್ದಾನೆ ?

**ಪುಲಸ್ತ್ಯ** :- ರಾಜನೆ, ಇದು ಅತ್ಯಂತ ರಹಸ್ಯವಾದ ವಿಷಯ. ದಿವ್ಯರೂಪಿಯಾದ ಭಗವಾನ್ ಶ್ರೀ ವಿಷ್ಣುವು ಮಾನವನಾಗಿ ಹುಟ್ಟಿಬಂದ ಗುಟ್ಟನ್ನು ನಿನಗೆ ಹೇಳುತ್ತೇನೆ ಕೇಳು. ಪೂರ್ವಯುಗವು ಕಳೆದು ಹೊಸಯುಗವು ಪ್ರಾರಂಭವಾದ ಬಳಿಕ ದೇವಾಸುರರಲ್ಲಿ ಧರ್ಮಬುದ್ಧಿಯು ಹ್ರಾಸವಾಗಿ ಅಧರ್ಮವು ತಲೆ ಎತ್ತಿದಾಗ ಹರಿಯ ಅವತಾರವು ಅನಿವಾರ್ಯವಾಗುತ್ತದೆ.

ಹಿಂದೆ ಆದಿಕಾಲದಲ್ಲಿ ಹಿರಣ್ಯಕಶಿಪು ಮೂರು ಲೋಕಗಳನ್ನು ಆಳುತ್ತಿದ್ದನು. ಬಲಿಷ್ಠನಾದ ಆ ದೈತ್ಯ ದೊರೆಯ ಆಳಿಕೆಯಲ್ಲಿ ದೇವ, ದೈತ್ಯರಿಗೆ ಸ್ನೇಹ ಸೌಹಾರ್ದ ಭಾವ ಇದ್ದಿತು. ಅದರಿಂದ ಜಗತ್ತಿನಲ್ಲಿ ಸುಖಸಮಾಧಾನಗಳು ನೆಲೆಸಿದ್ದವು. ಅನಂತರ ಬಲಿಚಕ್ರವರ್ತಿಯ ಕಾಲದಲ್ಲಿಯೂ ಇದೇ ತರಹದ ಮಧುರ ಮೈತ್ರೀ ಭಾವವು ನೆಲೆಗೊಂಡಿತು. ದೇವ, ದೈತ್ಯರು, ಮಾನವರು ದಾನವರೆಲ್ಲರೂ ಆ ಹಿರಣ್ಯಕಶಿಪು ಬಲಿಚಕ್ರವರ್ತಿಯವರ ಅಪ್ಪಣೆ ಪಾಲಿಸುತ್ತಿದ್ದರು. ಮುಂದೆ ವಾಮನರೂಪಿ ವಿಷ್ಣುವು ಬಲಿಚಕ್ರವರ್ತಿಯನ್ನು ಬಂಧನ ಮಾಡಿದಾಗ ದೇವ ದೈತ್ಯರಲ್ಲಿ ದ್ವೇಷ ಬೆಳೆಯಿತು. ಸುರಾಸುರರಲ್ಲಿ ಭೀಕರ ಸಂಗ್ರಾಮ ಮಸಗಿತು. ಅನಂತರ ದೈತ್ಯರು ದೇವತೆಗಳನ್ನೂ ಧರ್ಮವನ್ನೂ ದ್ವೇಷಿಸಲು ಮೊದಲುಮಾಡಿದರು. ಆ ದುಷ್ಟ ದೈತ್ಯರು ಮತ್ತೆ ಮರಳಿ ಭೂಮಿಯಲ್ಲಿ ಹುಟ್ಟಿ, ಧರ್ಮಭೀರುಗಳಾದ ಮಾನವರನ್ನು ಮತ್ತು ಮುನಿ ಮಹರ್ಷಿಗಳನ್ನು ಹಿಂಸಿಸತೊಡಗಿದರು. ಅವರಿಂದ ಧರ್ಮಗ್ಲಾನಿಯಾಗುವುದನ್ನು ಕಂಡು, ಆ ದೈತ್ಯರ ಸಂಹಾರಕ್ಕಾಗಿ ಮತ್ತು ದೇವತೆಗಳ, ಸಜ್ಜನರ ಸಂರಕ್ಷಣೆಗಾಗಿ ಭೃಗುಮುನಿಯ ಶಾಪವನ್ನು ನೆಪಮಾಡಿಕೊಂಡು, ವಿಷ್ಣುವು ಆಗ ಅವತರಿಸಿ ಬರುತ್ತಾನೆ.

**ಭೀಷ್ಮ** :- ದೇವಾಸುರರ ಸಲುವಾಗಿ ಸಚ್ಚಿದಾನಂದ ವಿಗ್ರಹನಾದ ಶ್ರೀ ಹರಿಯು ಮನುಷ್ಯದೇಹ ಪಡೆದುದೆಂತು ? ಆ ದೇವದಾನವರಲ್ಲಿ ಸಂಗ್ರಾಮವು ಹೇಗಾಯಿತು ? ಎಂತಾಯಿತು ? ಎಂದಾಯಿತು ? ಇದೆಲ್ಲವನ್ನು ನನಗೆ ಹೇಳಿರಿ.

**ಪುಲಸ್ತ್ಯ** :- ದೇವ ದೈತ್ಯರ ಯುದ್ಧಗಳು ಎಷ್ಟೇ ಆದರೂ ಕೊನೆಗೆ ಸತ್ಯಕ್ಕೆ ಜಯವು ನಿಶ್ಚಿತ. ಅದಕ್ಕಾಗಿ ಪ್ರತಿ ಮನ್ವಂತರದಲ್ಲಿಯೂ ಪರಮಾತ್ಮನು ಹನ್ನೆರಡು ಅವತಾರಗಳನ್ನು ತಾಳುತ್ತಾನೆ. ಸಂಕ್ಷಿಪ್ತವಾಗಿ ಹನ್ನೆರಡು ಅವತಾರಗಳ ಹೆಸರುಗಳು ಇಂತಿವೆ - ನರಸಿಂಹ ಅನಂತರ ವಾಮನ, ವರಾಹ ಅವತಾರ ಮೂರನೆಯದು. ಅಮೃತಮಂಥನ ಕಾಲದಲ್ಲಿ ಭಗವಂತನು ತಾಳಿದ ಮೋಹಿನಿ ಅವತಾರವು ನಾಲ್ಕನೆಯದು. ದೇವಾಸುರರ ನಡುವೆ ನಡೆದ

ತಾರಕಾಮಯ ಸಂಗ್ರಾಮದಲ್ಲಿ ದೈತ್ಯ ಸಂಹಾರಕ್ಕಾಗಿ ತಾಳಿದ ಭಗವದ್ರೂಪವು ಐದನೇಯದು. ಆ ಜೀವಕ ಎಂಬುದು ಆರನೆಯದು. ತ್ರಿಪುರ ಸಂಹಾರಕ್ಕಾಗಿ ತಾಳಿದ ರುದ್ರಪ್ರೇರಕ ಅವತಾರ ಏಳನೆಯದು. ಅಂಧಕವಧೆಗೈದದ್ದು ಎಂಟನೆಯದು. ಇಂದ್ರನಿಗೆ ಬಲ ನೀಡಿದ್ದು ಒಂಭತ್ತನೆಯದು. ಪರಮಾತಮನ ಹತ್ತನೆಯ ಅವತಾರ 'ಪಾತಾ' ರಕ್ಷಕ ಎಂಬುದು. ಇವಲ್ಲದೆ **'ಹಾಲಾಹಲ', ಕೋಲಾಹಲ'** ಎಂಬ ಬೇರೆ ಎರಡು ಅವತಾರಗಳೂ ಉಂಟು.

ಹಿರಣ್ಯಕಶಿಪು ಎಂಬ ದೈತ್ಯನನ್ನು ಶ್ರೀ ಹರಿಯು ನರಸಿಂಹಾವತಾರದಿಂದ ವಧಿಸಿದನು. ವಾಮನವತಾರದಿಂದ ಮೂರುಲೋಕಗಳನ್ನು ತನ್ನ ಪುಟ್ಟ ಹೆಜ್ಜೆಗಳಿಂದ ಅಳೆದು ಆಕ್ರಮಿಸಿ ಬಲಿಯನ್ನು ಬಂಧಿಸಿದನು. ದೇವತೆಗಳಿಗೆ ಎದುರಾಗಿ ನಿಂತು ಸಜ್ಜನರನ್ನೆಲ್ಲ ಹಿಂಸಿಸುತ್ತಿದ್ದ ದುಷ್ಟ ಹಿರಿಣ್ಯಾಕ್ಷ ಎಂಬ ದೈತ್ಯನನ್ನು ಹರಿಯು ವರಾಹರೂಪದಿಂದ ಆ ಹಿರಣ್ಯಾಕ್ಷನೊಡನೆ ಹೋರಾಡಿದನು. ಸಾಗರ ಗರ್ಭದಲ್ಲಿ ತನ್ನ ಕೋರೆದಾಡೆಯಿಂದ ಹೊಡೆದು ಆ ದೈತ್ಯನನ್ನು ಎರಡು ಹೋಳುಮಾಡಿ ಸೀಳಿಹಾಕಿದನು. ಅಮೃತಮಂಥನ ಕಾಲದಲ್ಲಿ ದೇವದಾನವರಲ್ಲಿ ಯುದ್ಧವಾಯಿತು. ಅದರಲ್ಲಿ ಇಂದ್ರ ಗೆದ್ದ. ದೈತ್ಯರಾಜ ಪ್ರಲ್ಹಾದನು ಪರಾಜಿತನಾದ. ಇದರ ಸೇಡನ್ನು ತೀರಿಸಿಕೊಳ್ಳಬೇಕೆಂದು ಪ್ರಲ್ಹಾದನ ಮಗ ವಿರೋಚನನು ಹಗಲಿರುಳು ಹವಣಿಸತೊಡಗಿದ. ಆದರೆ ಆದದ್ದು ಇದಕ್ಕೆ ವಿರುದ್ಧ. ತಾರಕಾಮಯ ಎಂಬ ಹೆಸರಿನ ದೇವಾಸುರಯುದ್ಧದಲ್ಲಿ ಇಂದ್ರನೇ ವಿರೋಚನನನ್ನು ಸೆಳೆದು ನಾಶಗೈದನು. ದೈತ್ಯರೆಲ್ಲರೂ ಸೋತು ಓಡಿ ಹೋದರು. ಮುಂದೆ ಕೆಲಕಾಲದ ಮೇಲೆ ಅವರೆಲ್ಲರೂ ತ್ರಿಪುರ ಎಂಬ ದುರ್ಗದಲ್ಲಿ ಒಂದು ಗೂಡಿದರು. ಅದು ದೇವತೆಗಳಿಗೂ ಅಭೇದ್ಯವಾಗಿತ್ತು. ಆಗ ಮುಕ್ಕಣನಾದ ಶಿವನು ಆ ತ್ರಿಪುರದಲ್ಲಿರುವ ದಾನವರನ್ನು ಮತ್ತು ಮೂಲೋಕದ ಉಳಿದೆಲ್ಲ ದುಷ್ಟ ದೈತ್ಯರನ್ನು ಹೊಡೆದುಹಾಕಿದ. ಇದರಂತೆ ಅಂಧಕಾಸುರನ ವಧೆಯ ಸಮಯದಲ್ಲಿ ದೇವತೆಗಳಿಂದಲೂ, ಮಾನವ ಹಾಗೂ ಪಿತೃಗಳಿಂದಲೂ ಅಸಂಖ್ಯ ದೈತ್ಯ-ದಾನವ- ಪಿಶಾಚಕರು ಸಂಹರಿಸಲ್ಪಟ್ಟರು. ಇದರಂತೆ ದೇವದಾನವರ ಭೀಕರ ಸಂಗ್ರಾಮದಲ್ಲಿ ವಿಷ್ಣುವಿನ ಸಹಾಯದಿಂದ ಮಹೇಂದ್ರನು ವೃತಾಸುರನನ್ನು ಸಂಹಾರಗೈದನು. ಮುಂದೆ ಮತ್ತೊಂದು ಯುದ್ಧ ಪ್ರಸಂಗದಲ್ಲಿ ವಿಪ್ರಚಿತ್ತಿ ಎಂಬ ದಾನವ ದೊರೆಯು ತನ್ನ ಯೋಗಶಕ್ತಿಯ ಪ್ರಭಾವದಿಂದ ಧ್ವಜದಲ್ಲಿ ಸೇರಿಕೊಂಡಿದ್ದನು. ಆಗ ದೇವೇಂದ್ರನು ಆ ಧ್ವಜವನ್ನು ಹೊಡೆದು ಉರುಳಿಸಿದನು. ಅಲ್ಲಿ ಮಾಯೆಯಿಂದ ಅಡಗಿಕೊಂಡ ಆ ದೈತ್ಯನನ್ನು, ಅವನ ಇತರ ಅನುಯಾಯಿಗಳನ್ನು ವಿನಾಶಗೈದನು. ಮುಂದೆ ಮತ್ತೊಂದು ಯುದ್ಧದಲ್ಲಿ ದೇವ ದಾನವರಲ್ಲಿ ವಿಜಯಕ್ಕಾಗಿ ಕೋಲಾಹಲ ನಡೆದಾಗ ದೇವೇಂದ್ರನು ಎಲ್ಲ ದೇವತೆಗಳಿಂದ ಒಡಗೂಡಿ, ಯಜ್ಞದ **'ಅವಭೃಥ'** ಕಾಲದಲ್ಲಿ ಶಂಡಾಮರ್ಕರನ್ನು ಗೆದ್ದು ದೈತ್ಯರನ್ನೆಲ್ಲ ಸೋಲಿಸಿದನು. ಹೀಗೆ ದೇವ ದಾನವರಲ್ಲಿ ಹನ್ನೆರಡು ಯುದ್ಧಗಳು ನಡೆದಿವೆ. ಇವೆಲ್ಲವೂ ದೇವಾಸುರರಿಗೆ ಭಯಕಾರಕವಾದರೂ ಧರ್ಮ ಭೇದದಲ್ಲಿ ಪರ್ಯವಸಾನವಾಗುವುದರಿಂದ ಪ್ರಜೆಗಳಿಗೆಲ್ಲ ಹಿತಕರ. ಹಿರಣ್ಯಕಶಿಪುವು ಎರಡು ಅಬ್ದ ಎಪ್ಪತ್ತೆರಡು ಲಕ್ಷ ಎಂಬತ್ತು ಸಾವಿರ ವರ್ಷ ಮೂರು ಲೋಕಗಳ ಆಧಿಪತ್ಯವನ್ನು ಹೊಂದಿದ್ದನು. ಮುಂದೆ ಬಲಿ ಚಕ್ರವರ್ತಿಯು ಒಂದು ಅಬ್ದ ಇಪ್ಪತ್ತು ಲಕ್ಷ. ಅರವತ್ತು ಸಾವಿರ ವರ್ಷ ತ್ರೈಲೋಕ್ಯ ಸಾಮ್ರಾಜ್ಯಾಧಿಪತಿಯನ್ನು ನಿರ್ವಹಿಸಿದನು. ಅಲ್ಲಿಯವರೆಗೆ ಪ್ರಲ್ಹಾದನು ದೈತ್ಯರೊಂದಿಗೆ

ಸುಖ ಸಂತೃಪ್ತಿಯಿಂದ ಉಲ್ಲಸಿತನಾಗಿ ಇದ್ದನು. ಅಷ್ಟು ದಿನಗಳವರೆಗೆ ಮಹಾತ್ಮ ಪ್ರಲ್ಹಾದನ ಸಲುವಾಗಿ ಮೂರು ಲೋಕಗಳ ಮೇಲೆ ಇಂದ್ರನ ಅಧಿಕಾರ ತಪ್ಪಿಹೋಗಿತ್ತು. ಅನಂತರ ಕಾಲವು ಬದಲಿಸಿತು. ದೈತ್ಯರಿಗೆ ಅವನತಿಯ ಕಾಲ, ದೇವತೆಗಳ ಉತ್ಕರ್ಷ ಪ್ರಾರಂಭವಾಯಿತು. ಮೂರು ಲೋಕದ ಅಧಿಕಾರ ಸೂತ್ರಗಳೆಲ್ಲವೂ ದೇವೇಂದ್ರನ ಕೈಯಲ್ಲಿ ಬಂದವು. ಆಗ ಯಜ್ಞವು ಅಸುರರನ್ನು ತೊರೆದು ದೇವತೆಗಳ ಬಳಿಗೆ ಹೋಯಿತು. ಅದನ್ನು ನೋಡಿ ದೈತ್ಯರಿಗೆ ಗಾಬರಿಯಾಗಿ ಅವರೆಲ್ಲರೂ ಶುಕ್ರಾಚಾರ್ಯರ ಬಳಿಗೆ ಬಂದರು. ದೈನ್ಯದಿಂದ ಕೇಳಿಕೊಂಡರು.

**ದೈತ್ಯ :-** ''ಪೂಜ್ಯರೆ, ದೇವೇಂದ್ರನು ನಮ್ಮ ಅಸುರರ ರಾಜ್ಯಾಧಿಕಾರವನ್ನೆಲ್ಲ ಕಸಿದು ಕೊಂಡಿದ್ದಾನೆ. ಇಷ್ಟು ದಿನ ನಮ್ಮಲ್ಲಿಯೇ ಇದ್ದ ಆ ಯಜ್ಞವೂ ಕೂಡ ನಮ್ಮನ್ನು ಬಿಟ್ಟು ದೇವತೆಗಳ ಗುಂಪಿಗೆ ಸೇರಿಕೊಂಡಿದೆ. ನಮಗೆ ಇನ್ನು ಇಲ್ಲಿ ನಿಲ್ಲಲು ಸಾಧ್ಯವಿಲ್ಲ. ನಾವು ಇನ್ನು ಮೇಲೆ ಕೆಳಕ್ಕೆ ರಸಾತಲಕ್ಕೆ ಇಳಿಯೋಣ''. ಅವರ ಮಾತು ಕೇಳಿ ದೈತ್ಯ ಗುರು ಶುಕ್ರಾಚಾರ್ಯರು ಧೈರ್ಯಕೊಡುತ್ತ ನುಡಿದರು.

''ದೈತ್ಯರೆ, ಹೆದರಬೇಡಿರಿ. ನನ್ನ ತೇಜಸ್ಸಿನಿಂದ ನಿಮ್ಮೆಲ್ಲರನ್ನು ನಾನು ಸಂರಕ್ಷಿಸುತ್ತೇನೆ. ಒಟ್ಟು ಪ್ರಪಂಚದಲ್ಲಿರುವ ಯಜ್ಞ ಹಾಗೂ ಔಷಧಿಗಳಲ್ಲಿ ಮುಕ್ಕಾಲುಭಾಗ ನನ್ನಲ್ಲಿದೆ. ಒಂದು ಕಾಲುಭಾಗ ದೇವತೆಗಳ ಬಳಿಯಲ್ಲಿರುತ್ತದೆ. ನನ್ನಲ್ಲಿ ಇದ್ದುದನ್ನೆಲ್ಲ ನಾನು ದೈತ್ಯರಾದ ನಿಮಗೆ ಕೊಟ್ಟುಬಿಡುತ್ತೇನೆ. ಅದೆಲ್ಲವನ್ನು ನನ್ನ ಬಳಿಯಲ್ಲಿ ನಿಮಗಾಗಿಯೇ ನಾನು ಇರಿಸಿಕೊಂಡಿದ್ದೇನೆ. ನೀವು ಯಾವುದಕ್ಕೂ ಚಿಂತಿಸಬೇಡಿ'' ಎಂದು ಅಭಯವಿತ್ತು ತಮ್ಮ ಶಿಷ್ಯರಾದ ದಾನವರನ್ನೆಲ್ಲ ಸಂತೈಸಿದರು.

ಈ ವಿಚಾರವು ದೇವತೆಗಳಿಗೆ ತಿಳಿದುಬಂದಿತು. ಅವರೆಲ್ಲರೂ ಒಂದೆಡೆಗೆ ಕುಳಿತು ಗುಪ್ತಾಲೋಚನೆ ನಡೆಸಿದರು. ''ಈ ಶುಕ್ರಾಚಾರ್ಯನು ನಮ್ಮಲ್ಲಿ ಇದ್ದುದನ್ನೆಲ್ಲ ಕಸಿದು ದೈತ್ಯರಿಗೆ ಕೊಡುತ್ತಾನೆ. ಅಷ್ಟರೊಳಗಾಗಿ ನಾವು ಅಲ್ಲಿಗೆ ಹೋಗಿ ಆ ದೈತ್ಯರನ್ನೆಲ್ಲ ಹೊಡೆದು ಪಾತಾಳಕ್ಕೆ ಓಡಿಸಿಬಿಡೋಣ.'' ಎಂದು ಆಲೋಚಿಸಿ ದೈತ್ಯರಲ್ಲಿಗೆ ಧಾವಿಸಿ ಬಂದರು. ಅತರ್ಕಿತವಾಗಿ ಅವರ ಮೇಲೆ ಎರಗಿ ಕಂಡಲ್ಲೆಲ್ಲ ದಾನವರ ತಂಡವನ್ನು ತುಂಡರಿಸತೊಡಗಿದರು. ದಿಗಿಲುಗೊಂಡ ದೈತ್ಯ ನಾಯಕರು ಶುಕ್ರರ ಬಳಿಗೆ ಓಡಿದರು. ಹೀಗೆ ದೇವತೆಗಳು ಅಟ್ಟಿಸಿಕೊಂಡು ಬಂದ ಅಸುರರನ್ನು ಶುಕ್ರರು ತಮ್ಮ ಬೆನ್ನಿಗೆ ಹಾಕಿಕೊಂಡು ಕಾಪಾಡಿದರು. ಬೆನ್ನಟ್ಟಿಬಂದ ದೇವತೆಗಳು ದೈತ್ಯದಳವೆಲ್ಲವೂ ಶುಕ್ರಾಚಾರ್ಯರ ಹಿಂದೆ ಅಡಗಿದ್ದನ್ನು ನೋಡಿದರು. ಮುಂಭಾಗದಲ್ಲಿರುವ ಆ ಅಸುರಾಚಾರ್ಯನನ್ನು ಕಂಡು ದೇವತೆಗಳೇ ಹಿಂದಿರುಗಿದರು. ದೈತ್ಯ ಸಂಹಾರ ಕಾರ್ಯದಿಂದ ಪರಾವೃತರಾಗಿ ಸ್ವರ್ಗಸೇರಿದರು. ಆಗ ಗುರು ಶುಕ್ರರಿಗೆ ಬ್ರಹ್ಮದೇವರು ಹೇಳಿದ ಮಾತು ನೆನಪಿಗೆ ಬಂದಿತು. ಆಗ ಅವರು ದೇವತೆಗಳಿಗೆ ಹೆದರಿ ತಮ್ಮ ಹಿಂಬದಿಯಲ್ಲಿ ಅಡಗಿಕೊಂಡ ದಾನವರನ್ನುಕುರಿತು ನುಡಿದರು.

''ದೈತ್ಯರೆ, ವಾಮನರೂಪಿಯಾದ ಮಹಾವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟು ನಿಮ್ಮ ಅಧೀನದಲ್ಲಿರುವ ಮೂರು ಲೋಕಗಳನ್ನೇ ಅಪಹರಿಸಿದನು. ಬಲಿ ಚಕ್ರವರ್ತಿಯನ್ನು ಬಂಧಿಸಿದನು. ಜಂಭನು ಹತನಾದನು. ವಿರೋಚನನು ವಿನಾಶಹೊಂದಿದನು.

ದೇವಾಸುರರಲ್ಲಿ ನಡೆದ ಹನ್ನೆರಡು ಹೋರಾಟಗಳಲ್ಲಿಯೂ ಅಸುರಕುಲದ ಅಗ್ರಗಣಿಗಳೆಲ್ಲರೂ ವಧಿಸಲ್ಪಟ್ಟರು. ದೈತ್ಯಕುಲದಲ್ಲಿ ಮುಖ್ಯರಾದವರೆಲ್ಲರೂ ಒಂದಿಲ್ಲ ಒಂದು ಉಪಾಯದಿಂದ ಮರಣ ಹೊಂದುವಂತೆ ಬಗೆ-ಬಗೆಯ ಹೂಟ-ಹಂಚಿಕೆಗಳನ್ನು ಹೂಡಲಾಯಿತು. ಈ ಹಾವಳಿಗಳಿಂದ ಅಳಿದುಳಿದ ಅಲ್ಪಸಾರರೂ ಅಲ್ಪ ಸಂಖ್ಯಾಕರರೂ ಆದ ನೀವು ಇನ್ನು ಮೇಲೆ ದೇವತೆಗಳೊಂದಿಗೆ ಹಗೆತನಕ್ಕೆ ಇಳಿಯುವುದು ಸರ್ವನಾಶಕ್ಕೆ ಕಾರಣವಾಗಬಹುದು. ಆದುದರಿಂದ ಈಗ ನೀವು ನಿಮ್ಮ ವೈರಿಗಳೊಂದಿಗೆ ಯುದ್ಧಮಾಡಬಾರದೆಂದು ನನ್ನ ವೈಯ್ಯಕ್ತಿಕ ಅಭಿಪ್ರಾಯ ನಿಮಗೆ ಮತ್ತೆ ಗೆಲುವು ಬರುವಂತೆ ನಾನು ಒಂದು ಹಂಚಿಕೆ ಮಾಡುತ್ತಿದ್ದೇನೆ. ಅದಕ್ಕಾಗಿ ಒಂದು ಸಮಯವನ್ನು ಕಾಯುತ್ತಲಿದ್ದೇನೆ. ನಿಮಗೆ ವಿಜಯವನ್ನು ತಂದುಕೊಡುವ ಒಂದು ಮಂತ್ರವನ್ನು ಮಹಾದೇವರಿಂದ ಪಡೆದುಕೊಂಡು ಬರಲಿಕ್ಕಾಗಿ ನಾನು ಹೋಗಲಿರುವೆನು. ನಾನು ಆ ಗೌರೀಪತಿಯಿಂದ ಗುಟ್ಟಾಗಿ ಮಂತ್ರಗಳನ್ನು ಪಡೆದುಕೊಂಡು ಬಂದು ಅದರ ಸಿದ್ಧಿಯನ್ನು ಮಾಡಿಕೊಂಡು ಅದರ ದಿವ್ಯಶಕ್ತಿಯನ್ನು ನಿಮಗೆ ಧಾರೆಯರೆದು ಕೊಡುತ್ತೇನೆ. ಅನಂತರ ನೀವು ದೇವತೆಗಳೊಂದಿಗೆ ಯುದ್ಧಮಾಡಿರಿ. ಆಗ ನಿಮಗೆ ಸಮರದಲ್ಲಿ ನಿಶ್ಚಿತವಾಗಿಯೂ ಗೆಲುವು ಲಭಿಸುವುದು''. ಗುರು ಶುಕ್ರರ ಈ ಸಲಹೆ ಸೂಚನೆಗಳು ದೈತ್ಯರೆಲ್ಲರಿಗೂ ಸೂಕ್ತ ಎನಿಸಿದುವು. ಕೂಡಲೇ ಅವರ ಮಾತಿಗೆ ಒಪ್ಪಿ ದೇವತೆಗಳನ್ನು ಕುರಿತು ಅಸುರರು ನುಡಿದರು.

''ದೇವತೆಗಳೆ, ನಾವು ನಮ್ಮ ಕೈಯಲ್ಲಿಯ ಶಸ್ತ್ರಾಸ್ತ್ರಗಳನ್ನೆಲ್ಲ ಕೆಳಗೆ ಇಟ್ಟಿದ್ದೇವೆ. ಯುದ್ಧದ ಸನ್ನಾಹವನ್ನೆಲ್ಲ ಬಿಟ್ಟಿದ್ದೇವೆ. ರಥ ಒಂದನ್ನು ಬಿಟ್ಟು ನಾವು ಯಾವ ಯುದ್ಧೋಪಕರಣ ಬಳಸುವುದಿಲ್ಲ. ನಾವೆಲ್ಲರೂ ಇನ್ನು ಮೇಲೆ ನಾರುಬಟ್ಟೆ ಉಟ್ಟು, ತಪಸ್ಸನ್ನು ಆಚರಿಸುತ್ತೇವೆ.'' ದೈತ್ಯಧುರೀಣನಾದ ಪ್ರಲ್ಹಾದನ ಈ ಮಾತಿನಿಂದ ದೇವತೆಗಳಿಗೆ ನಂಬಿಗೆ ಆಯಿತು. ದೇವತೆಗಳು ಅಂದಿನಿಂದ ಯುದ್ಧದ ಉದ್ಯಮವನ್ನೇ ತ್ಯಜಿಸಿಬಿಟ್ಟರು. ಇದರಿಂದ ಸುರರೆಲ್ಲರಿಗೂ ಒಂದು ತರಹದ ಸಂತಸವೇ ಆಯಿತು.

ರಣ ಸಂಭ್ರಮದ ರಣರಣಿಕೆ, ಹೋರಾಟದ ಹವಣಿಕೆಗಳೆಲ್ಲವೂ ದೂರವಾಗಿ ನಿಶ್ಚಿಂತೆಯಿಂದ ವಿಹರಿಸಲು ಅವರಿಗೆ ಅನುಕೂಲವಾಯಿತು. ಅನಂತರ ಶುಕ್ರಾಚಾರ್ಯರು ತಮ್ಮ ಶಿಷ್ಯರಿಗೆ-''ದೈತ್ಯರೆ, ಇನ್ನು ಮೇಲೆ ನೀವು ನಿಮ್ಮ ಕಾರ್ಯಸಾಧಿಸುವ ಸಲುವಾಗಿ ಕೆಲವು ಕಾಲದ ಮಟ್ಟಿಗ ತಪಸ್ಸನ್ನು ಮಾಡಿರಿ. ಅಹಂಕಾರ ಬಿಡಿರಿ. ನಿಮ್ಮ ಇಷ್ಟದೇವತೆಯನ್ನು ಸೇವಿಸಿರಿ. ನನ್ನ ತಂದೆಯಾದ ಭೃಗುಮುನಿಯ ಆಶ್ರಮದಲ್ಲಿದ್ದು ನನ್ನ ಮಾರ್ಗ ಪ್ರತೀಕ್ಷೆ ಮಾಡಿರಿ.'' - ಎಂದು ಹೇಳಿ ಮಹಾದೇವರ ಬಳಿಗೆ ಬಂದರು. ಮತ್ತು ಆ ಗಿರೀಶನನ್ನು ಸ್ತೋತ್ರಗೈದು ಹೀಗೆ ಬೇಡಿಕೊಂಡನು.

''ದೇವಾ ನನ್ನ ಶಿಷ್ಯರು, ನಿನ್ನ ಭಕ್ತರು ಆದ ದೈತ್ಯರಿಗೆ ವಿಜಯವನ್ನು ತಂದು ಕೊಡುವಂತಹ ಮಂತ್ರಗಳು ನನಗೆ ಬೇಕಾಗಿವೆ. ಅವುಗಳಿಂದ ದೇವತೆಗಳಿಗೆ ಸೋಲು ಉಂಟಾಗಬೇಕು. ದೈತ್ಯರಿಗೆ ಗೆಲವು ಒಲಿದು ಬರಬೇಕು. ಆ ಮಂತ್ರಗಳು ಬೃಹಸ್ಪತಿಗೆ ಗೊತ್ತಿರಬಾರದು. ಇಂಥ ರಹಸ್ಯಮಂತ್ರಗಳನ್ನು ನನಗೆ ದಯವಿಟ್ಟು ಉಪದೇಶಿಸು.''

ಶುಕ್ರಾಚಾರ್ಯರ ಈ ಬೇಡಿಕೆಯನ್ನು ಕೇಳಿ ಪಾರ್ವತಿಪತಿಯು ಹೀಗೆ ಹೇಳಿದನು. ''ಭಾರ್ಗವನೆ, ನಿನಗೆ ಅಂತಹ ಮಂತ್ರಗಳು ಬೇಕಾಗಿದ್ದರೆ, ಒಂದು ಸಾವಿರ ವರ್ಷಗಳವರೆಗೆ,

**'ಕಣಧೂಮ'** ಎಂಬ ವ್ರತವನ್ನು ಆಚರಿಸಬೇಕು. ತಲೆಕೆಳಗೆ, ಕಾಲು ಮೇಲೆ ಮಾಡಿ, ಘೋರ ತಪಸ್ಸನ್ನು ದೀರ್ಘಕಾಲಮಾಡಬೇಕು. ಈ ಕಠಿಣ ವ್ರತಾನುಷ್ಠಾನವನ್ನು ನೀನು ನಿರ್ವಿಘ್ನವಾಗಿ ಪೂರೈಸಿದರೆ ನಾನು ಆ ಮಂತ್ರಗಳನ್ನು ನಿನಗೆ ಹೇಳಿಕೊಡುತ್ತೇನೆ.''

ಮಹಾದೇವರು ನಿರ್ದೇಶಿಸಿದ ವ್ರತಾನುಷ್ಠಾನದ ನಿಯಮ ನಿಬಂಧನೆಗಳನ್ನು ಒಪ್ಪಿಕೊಂಡರು ಮತ್ತು ಆ ದೇವದೇವನ ಅಡಿದಾವರೆಗಳನ್ನು ಮುಟ್ಟಿ ನಮಸ್ಕರಿಸಿ, ''ಪ್ರಭೊ, ನಿನ್ನ ಅನುಗ್ರಹದಿಂದ ನಿನ್ನ ಅಪ್ಪಣೆಯಂತೆ ಈ ಕಠಿಣ ವ್ರತವನ್ನು ಆಚರಿಸುತ್ತೇನೆ.'' - ಎಂದ ಬಿನ್ನವಿಸಿ ಶಿವನ ಅಪ್ಪಣೆ ಪಡೆದುಕೊಂಡರು.

ಅನಂತರ ಶುಕ್ರರು ಅಸುರರ ಹಿತಕ್ಕಾಗಿ ಮಂತ್ರಶಕ್ತಿಯನ್ನು ಪಡೆದುಕೊಳ್ಳುವ ಉದ್ದೇಶದಿಂದ ಆ ಘೋರ ವ್ರತಾನುಷ್ಠಾನವನ್ನು ಬ್ರಹ್ಮಚರ್ಯದಿಂದ ಕೈಗೊಂಡರು. ಇತ್ತ ದೇವತೆಗಳಿಗೆ ಈ ಸಮಾಚಾರ ತಿಳಿದು ಬಂದಿತು. ಶುಕ್ರರು ಇಲ್ಲದಿರುವ ಈ ಸಂದರ್ಭವನ್ನು ಸಾಧಿಸಿಕೊಂಡು ಎಲ್ಲ ದೇವತೆಗಳು ತಮ್ಮ ಗುರು ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿಕೊಂಡು ದೈತ್ಯಸೇನೆಯ ಮೇಲೆ ಏರಿ ಬಂದರು. ಹೀಗೆ ಒಮ್ಮೆಲೆ ದೇವತೆಗಳು ಮತ್ತೆ ಅಸ್ತ್ರಗಳನ್ನು ಎತ್ತಿಕೊಂಡು ತಮ್ಮ ಮೇಲೆ ಹೋರಾಟಕ್ಕೆ ಬಂದದ್ದನ್ನು ಕಂಡು ದಾನವರೆಲ್ಲರೂ ಹಾರಿಬಿದ್ದರು. ಹೆದರಿ ಹೋದರು. ಸಂಭ್ರಮದಿಂದ ದೀನರಾಗಿ ನುಡಿದರು.

''ದೇವತೆಗಳೆ, ನಾವೆಲ್ಲರೂ ಶಸ್ತ್ರಸನ್ಯಾಸ ಮಾಡಿದ್ದೇವೆ. ಅದರಂತೆ ನಿಮಗೂ ಮೊದಲೇ ಬಿನ್ನವಿಸಿದ್ದೇವೆ. ನಮ್ಮ ಗುರುಗಳೂ ಈಗ ತಪಸ್ಸಮಾಧಿಯಲ್ಲಿ ಕುಳಿತಿರುತ್ತಾರೆ. ನೀವಾದರೂ ನಮಗೆ ಈ ಮೊದಲು ಅಭಯವಿತ್ತು ಯುದ್ಧಮಾಡುವುದಿಲ್ಲವೆಂದು ಆಶ್ವಾಸನೆ ಕೊಟ್ಟದ್ದೀರಿ. ಈಗ ಮತ್ತೇಕೆ ನಮ್ಮನ್ನು ಹಿಂಸಿಸಲು ಹೊರಟಿದ್ದೀರಿ ? ನಮಗಂತೂ ನಿಮ್ಮ ಮೇಲೆ ಕೋಪವಿಲ್ಲ. ಶಸ್ತ್ರಾಸ್ತ್ರಗಳನ್ನೆಲ್ಲ ತೊರೆದು ಮನೆ-ಮಾರುಗಳನ್ನು ಮರೆತು ನಾವೆಲ್ಲರೂ ವಿರಕ್ತರಾಗಿದ್ದೇವೆ. ಇದೋ ನಿಮಗೆ ಕಾಣುವುದಿಲ್ಲವೆ ! ನಾವು ಉಟ್ಟದ್ದು ಗಿಡಗಳ ತೊಗಟೆ, ಚಿಗುರೆಗಳ ತೊಗಲು ಸರ್ವಸಂಗ ಪರಿತ್ಯಾಗಮಾಡಿ, ಮುನಿಗಳಂತಿರುವ ನಾವು, ನಿಮ್ಮೊಡನೆ ಹೇಗೆ ಹೋರಾಡಬಲ್ಲೆವು ? ಆದರೂ ದೇವತೆಗಳು ಯಾವ ಉತ್ತರವನ್ನು ಕೊಡದೆ ಯುದ್ಧ ಸನ್ನಾಹದಲ್ಲಿ ತೊಡಗಲು ದೈತ್ಯರು ಅಲ್ಲಿಂದ ಕಾಲ್ತೆಗೆದು ಶುಕ್ರರ ಮಾತೆಯಲ್ಲಿಗೆ ಬಂದರು. ಅವರೆಲ್ಲ ಕೂಡ ಕಾವ್ಯಮಾತೆ ಎದುರು ತಮ್ಮ ದೀನ ದುರವಸ್ಥೆಯನ್ನು ಹೇಳಿಕೊಂಡರು. ''ನಿಶಸ್ತ್ರರಾದ ನಮ್ಮನ್ನು ದೇವತೆಗಳು ಬೆನ್ನಟ್ಟಿ ಬಂದಿದ್ದಾರೆ. ಹೇಗಾದರೂ ಮಾಡಿ ನಮ್ಮನ್ನು ರಕ್ಷಿಸಬೇಕು'' ಎಂದು ಅವಳಿಗೆ ಶರಣು ಬಂದರು. ದೈತ್ಯ ನಾಯಕರ ಈ ದಯನೀಯ ಪರಿಸ್ಥಿತಿ ಕಂಡು ಶುಕ್ರಾಚಾರ್ಯರ ತಾಯಿಗೆ ಕೆಡುಕೆನಿಸಿ, ಕೂಡಲೇ ಅವಳು ಧಾವಿಸಿ ಬಂದು ನುಡಿದಳು:

**॥ ಕಾವ್ಯಮಾತಾ ಉವಾಚ ॥**

**''ನ ಭೇತವ್ಯಂ ನ ಭೇತವ್ಯಂ ಭಯಂ ತ್ಯಜಥ ದಾನವಾಃ ।**
**ಮತ್ಸನ್ನಿಧೌ ವರ್ತತಾಂ ವೋ ನ ಭೀರ್ಭವಿತುಮರ್ಹತಿ ॥''**

ದಾನವರೆ, ಹೆದರಬೇಡಿರಿ ದೈತ್ಯರೆ ಬೆದರಬೇಡಿರಿ. ಅಂಜಿಕೆ ಬಿಡಿರಿ, ನನ್ನ ಬಳಿಯಲ್ಲಿ ಇದ್ದ ಬಳಿಕ ನಿಮಗೇಕೆ ಹೆದರಿಕೆ ? ನಾನಿದ್ದಲ್ಲಿಗೆ ನಿಮಗೆ ಯಾವ ಭಯವೂ ಇಲ್ಲ. ನಿಮಗೆ

ದೇವಾಸುರರಲ್ಲಿ ನಡೆದ ಹನ್ನೆರಡು ಹೋರಾಟಗಳಲ್ಲಿಯೂ ಅಸುರಕುಲದ ಅಗ್ರಗಣಿಗಳೆಲ್ಲರೂ ವಧಿಸಲ್ಪಟ್ಟರು. ದೈತ್ಯಕುಲದಲ್ಲಿ ಮುಖ್ಯರಾದವರೆಲ್ಲರೂ ಒಂದಿಲ್ಲ ಒಂದು ಉಪಾಯದಿಂದ ಮರಣ ಹೊಂದುವಂತೆ ಬಗೆ-ಬಗೆಯ ಹೂಟ-ಹಂಚಿಕೆಗಳನ್ನು ಹೂಡಲಾಯಿತು. ಈ ಹಾವಳಿಗಳಿಂದ ಅಳಿದುಳಿದ ಅಲ್ಪಸಾರರೂ ಅಲ್ಪ ಸಂಖ್ಯಾಕರರೂ ಆದ ನೀವು ಇನ್ನು ಮೇಲೆ ದೇವತೆಗಳೊಂದಿಗೆ ಹಗೆತನಕ್ಕೆ ಇಳಿಯುವುದು ಸರ್ವನಾಶಕ್ಕೆ ಕಾರಣವಾಗಬಹುದು. ಆದುದರಿಂದ ಈಗ ನೀವು ನಿಮ್ಮ ವೈರಿಗಳೊಂದಿಗೆ ಯುದ್ಧಮಾಡಬಾರದೆಂದು ನನ್ನ ವೈಯ್ಯಕ್ತಿಕ ಅಭಿಪ್ರಾಯ ನಿಮಗೆ ಮತ್ತೆ ಗೆಲುವು ಬರುವಂತೆ ನಾನು ಒಂದು ಹಂಚಿಕೆ ಮಾಡುತ್ತಿದ್ದೇನೆ. ಅದಕ್ಕಾಗಿ ಒಂದು ಸಮಯವನ್ನು ಕಾಯುತ್ತಲಿದ್ದೇನೆ. ನಿಮಗೆ ವಿಜಯವನ್ನು ತಂದುಕೊಡುವ ಒಂದು ಮಂತ್ರವನ್ನು ಮಹಾದೇವರಿಂದ ಪಡೆದುಕೊಂಡು ಬರಲಿಕ್ಕಾಗಿ ನಾನು ಹೋಗಲಿರುವೆನು. ನಾನು ಆ ಗೌರೀಪತಿಯಿಂದ ಗುಟ್ಟಾಗಿ ಮಂತ್ರಗಳನ್ನು ಪಡೆದುಕೊಂಡು ಬಂದು ಅದರ ಸಿದ್ಧಿಯನ್ನು ಮಾಡಿಕೊಂಡು ಅದರ ದಿವ್ಯಶಕ್ತಿಯನ್ನು ನಿಮಗೆ ಧಾರೆಯರೆದು ಕೊಡುತ್ತೇನೆ. ಅನಂತರ ನೀವು ದೇವತೆಗಳೊಂದಿಗೆ ಯುದ್ಧಮಾಡಿರಿ. ಆಗ ನಿಮಗೆ ಸಮರದಲ್ಲಿ ನಿಶ್ಚಿತವಾಗಿಯೂ ಗೆಲುವು ಲಭಿಸುವುದು''. ಗುರು ಶುಕ್ರರ ಈ ಸಲಹೆ ಸೂಚನೆಗಳು ದೈತ್ಯರೆಲ್ಲರಿಗೂ ಸೂಕ್ತ ಎನಿಸಿದುವು. ಕೂಡಲೇ ಅವರ ಮಾತಿಗೆ ಒಪ್ಪಿ ದೇವತೆಗಳನ್ನು ಕುರಿತು ಅಸುರರು ನುಡಿದರು.

''ದೇವತೆಗಳೆ, ನಾವು ನಮ್ಮ ಕೈಯಲ್ಲಿಯ ಶಸ್ತ್ರಾಸ್ತ್ರಗಳನ್ನೆಲ್ಲ ಕೆಳಗೆ ಇಟ್ಟಿದ್ದೇವೆ. ಯುದ್ಧದ ಸನ್ನಾಹವನ್ನೆಲ್ಲ ಬಿಟ್ಟಿದ್ದೇವೆ. ರಥ ಒಂದನ್ನು ಬಿಟ್ಟು ನಾವು ಯಾವ ಯುದ್ಧೋಪಕರಣ ಬಳಸುವುದಿಲ್ಲ. ನಾವೆಲ್ಲರೂ ಇನ್ನು ಮೇಲೆ ನಾರುಬಟ್ಟೆ ಉಟ್ಟು, ತಪಸ್ಸನ್ನು ಆಚರಿಸುತ್ತೇವೆ.'' ದೈತ್ಯಧುರೀಣನಾದ ಪ್ರಲ್ಹಾದನ ಈ ಮಾತಿನಿಂದ ದೇವತೆಗಳಿಗೆ ನಂಬಿಗೆ ಆಯಿತು. ದೇವತೆಗಳು ಅಂದಿನಿಂದ ಯುದ್ಧದ ಉದ್ಯಮವನ್ನೇ ತ್ಯಜಿಸಿಬಿಟ್ಟರು. ಇದರಿಂದ ಸುರರೆಲ್ಲರಿಗೂ ಒಂದು ತರಹದ ಸಂತಸವೇ ಆಯಿತು.

ರಣ ಸಂಭ್ರಮದ ರಣರಣಿಕೆ, ಹೋರಾಟದ ಹವಣಿಕೆಗಳೆಲ್ಲವೂ ದೂರವಾಗಿ ನಿಶ್ಚಿಂತೆಯಿಂದ ವಿಹರಿಸಲು ಅವರಿಗೆ ಅನುಕೂಲವಾಯಿತು. ಅನಂತರ ಶುಕ್ರಾಚಾರ್ಯರು ತಮ್ಮ ಶಿಷ್ಯರಿಗೆ-''ದೈತ್ಯರೆ, ಇನ್ನು ಮೇಲೆ ನೀವು ನಿಮ್ಮ ಕಾರ್ಯಸಾಧಿಸುವ ಸಲುವಾಗಿ ಕೆಲವು ಕಾಲದ ಮಟ್ಟಿಗ ತಪಸ್ಸನ್ನು ಮಾಡಿರಿ. ಅಹಂಕಾರ ಬಿಡಿರಿ. ನಿಮ್ಮ ಇಷ್ಟದೇವತೆಯನ್ನು ಸೇವಿಸಿರಿ. ನನ್ನ ತಂದೆಯಾದ ಭೃಗುಮುನಿಯ ಆಶ್ರಮದಲ್ಲಿದ್ದು ನನ್ನ ಮಾರ್ಗ ಪ್ರತೀಕ್ಷೆ ಮಾಡಿರಿ.'' - ಎಂದು ಹೇಳಿ ಮಹಾದೇವರ ಬಳಿಗೆ ಬಂದರು. ಮತ್ತು ಆ ಗಿರೀಶನನ್ನು ಸ್ತೋತ್ರಗೈದು ಹೀಗೆ ಬೇಡಿಕೊಂಡನು.

''ದೇವಾ ನನ್ನ ಶಿಷ್ಯರು, ನಿನ್ನ ಭಕ್ತರು ಆದ ದೈತ್ಯರಿಗೆ ವಿಜಯವನ್ನು ತಂದು ಕೊಡುವಂತಹ ಮಂತ್ರಗಳು ನನಗೆ ಬೇಕಾಗಿವೆ. ಅವುಗಳಿಂದ ದೇವತೆಗಳಿಗೆ ಸೋಲು ಉಂಟಾಗಬೇಕು. ದೈತ್ಯರಿಗೆ ಗೆಲವು ಒಲಿದು ಬರಬೇಕು. ಆ ಮಂತ್ರಗಳು ಬೃಹಸ್ಪತಿಗೆ ಗೊತ್ತಿರಬಾರದು. ಇಂಥ ರಹಸ್ಯಮಂತ್ರಗಳನ್ನು ನನಗೆ ದಯವಿಟ್ಟು ಉಪದೇಶಿಸು.''

ಶುಕ್ರಾಚಾರ್ಯರ ಈ ಬೇಡಿಕೆಯನ್ನು ಕೇಳಿ ಪಾರ್ವತಿಪತಿಯು ಹೀಗೆ ಹೇಳಿದನು. ''ಭಾರ್ಗವನೆ, ನಿನಗೆ ಅಂತಹ ಮಂತ್ರಗಳು ಬೇಕಾಗಿದ್ದರೆ, ಒಂದು ಸಾವಿರ ವರ್ಷಗಳವರೆಗೆ,

**'ಕಣಧೂಮ'** ಎಂಬ ವ್ರತವನ್ನು ಆಚರಿಸಬೇಕು. ತಲೆಕೆಳಗೆ, ಕಾಲು ಮೇಲೆ ಮಾಡಿ, ಘೋರ ತಪಸ್ಸನ್ನು ದೀರ್ಘಕಾಲಮಾಡಬೇಕು. ಈ ಕಠಿಣ ವ್ರತಾನುಷ್ಠಾನವನ್ನು ನೀನು ನಿರ್ವಿಘ್ನವಾಗಿ ಪೂರೈಸಿದರೆ ನಾನು ಆ ಮಂತ್ರಗಳನ್ನು ನಿನಗೆ ಹೇಳಿಕೊಡುತ್ತೇನೆ.''

ಮಹಾದೇವರು ನಿರ್ದೇಶಿಸಿದ ವ್ರತಾನುಷ್ಠಾನದ ನಿಯಮ ನಿಬಂಧನೆಗಳನ್ನು ಒಪ್ಪಿಕೊಂಡರು ಮತ್ತು ಆ ದೇವದೇವನ ಅಡಿದಾವರೆಗಳನ್ನು ಮುಟ್ಟಿ ನಮಸ್ಕರಿಸಿ, ''ಪ್ರಭೊ, ನಿನ್ನ ಅನುಗ್ರಹದಿಂದ ನಿನ್ನ ಅಪ್ಪಣೆಯಂತೆ ಈ ಕಠಿಣ ವ್ರತವನ್ನು ಆಚರಿಸುತ್ತೇನೆ.'' - ಎಂದ ಬಿನ್ನವಿಸಿ ಶಿವನ ಅಪ್ಪಣೆ ಪಡೆದುಕೊಂಡರು.

ಅನಂತರ ಶುಕ್ರರು ಅಸುರರ ಹಿತಕ್ಕಾಗಿ ಮಂತ್ರಶಕ್ತಿಯನ್ನು ಪಡೆದುಕೊಳ್ಳುವ ಉದ್ದೇಶದಿಂದ ಆ ಘೋರ ವ್ರತಾನುಷ್ಠಾನವನ್ನು ಬ್ರಹ್ಮಚರ್ಯದಿಂದ ಕೈಗೊಂಡರು. ಇತ್ತ ದೇವತೆಗಳಿಗೆ ಈ ಸಮಾಚಾರ ತಿಳಿದು ಬಂದಿತು. ಶುಕ್ರರು ಇಲ್ಲದಿರುವ ಈ ಸಂದರ್ಭವನ್ನು ಸಾಧಿಸಿಕೊಂಡು ಎಲ್ಲ ದೇವತೆಗಳು ತಮ್ಮ ಗುರು ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿಕೊಂಡು ದೈತ್ಯಸೇನೆಯ ಮೇಲೆ ಏರಿ ಬಂದರು. ಹೀಗೆ ಒಮ್ಮೆಲೆ ದೇವತೆಗಳು ಮತ್ತೆ ಅಸ್ತ್ರಗಳನ್ನು ಎತ್ತಿಕೊಂಡು ತಮ್ಮ ಮೇಲೆ ಹೋರಾಟಕ್ಕೆ ಬಂದದ್ದನ್ನು ಕಂಡು ದಾನವರೆಲ್ಲರೂ ಹಾರಿಬಿದ್ದರು. ಹೆದರಿ ಹೋದರು. ಸಂಭ್ರಮದಿಂದ ದೀನರಾಗಿ ನುಡಿದರು.

''ದೇವತೆಗಳೆ, ನಾವೆಲ್ಲರೂ ಶಸ್ತ್ರಸನ್ಯಾಸ ಮಾಡಿದ್ದೇವೆ. ಅದರಂತೆ ನಿಮಗೂ ಮೊದಲೇ ಬಿನ್ನವಿಸಿದ್ದೇವೆ. ನಮ್ಮ ಗುರುಗಳೂ ಈಗ ತಪಸ್ಸಮಾಧಿಯಲ್ಲಿ ಕುಳಿತಿರುತ್ತಾರೆ. ನೀವಾದರೂ ನಮಗೆ ಈ ಮೊದಲು ಅಭಯವಿತ್ತು ಯುದ್ಧಮಾಡುವುದಿಲ್ಲವೆಂದು ಆಶ್ವಾಸನೆ ಕೊಟ್ಟಿದ್ದೀರಿ. ಈಗ ಮತ್ತೇಕೆ ನಮ್ಮನ್ನು ಹಿಂಸಿಸಲು ಹೊರಟಿದ್ದೀರಿ ? ನಮಗಂತೂ ನಿಮ್ಮ ಮೇಲೆ ಕೋಪವಿಲ್ಲ. ಶಸ್ತ್ರಾಸ್ತ್ರಗಳನ್ನೆಲ್ಲ ತೊರೆದು ಮನೆ-ಮಾರುಗಳನ್ನು ಮರೆತು ನಾವೆಲ್ಲರೂ ವಿರಕ್ತರಾಗಿದ್ದೇವೆ. ಇದೋ ನಿಮಗೆ ಕಾಣುವುದಿಲ್ಲವೆ ! ನಾವು ಉಟ್ಟದ್ದು ಗಿಡಗಳ ತೊಗಟೆ, ಚಿಗರೆಗಳ ತೊಗಲು ಸರ್ವಸಂಗ ಪರಿತ್ಯಾಗಮಾಡಿ, ಮುನಿಗಳಂತಿರುವ ನಾವು, ನಿಮ್ಮೊಡನೆ ಹೇಗೆ ಹೋರಾಡಬಲ್ಲೆವು ? ಆದರೂ ದೇವತೆಗಳು ಯಾವ ಉತ್ತರವನ್ನು ಕೊಡದೆ ಯುದ್ಧ ಸನ್ನಾಹದಲ್ಲಿ ತೊಡಗಲು ದೈತ್ಯರು ಅಲ್ಲಿಂದ ಕಾಲ್ತೆಗೆದು ಶುಕ್ರರ ಮಾತೆಯಲ್ಲಿಗೆ ಬಂದರು. ಅವರೆಲ್ಲ ಕೂಡ ಕಾವ್ಯಮಾತೆ ಎದುರು ತಮ್ಮ ದೀನ ದುರವಸ್ಥೆಯನ್ನು ಹೇಳಿಕೊಂಡರು. ''ನಿಶಸ್ತ್ರರಾದ ನಮ್ಮನ್ನು ದೇವತೆಗಳು ಬೆನ್ನಟ್ಟಿ ಬಂದಿದ್ದಾರೆ. ಹೇಗಾದರೂ ಮಾಡಿ ನಮ್ಮನ್ನು ರಕ್ಷಿಸಬೇಕು'' ಎಂದು ಅವಳಿಗೆ ಶರಣು ಬಂದರು. ದೈತ್ಯ ನಾಯಕರ ಈ ದಯನೀಯ ಪರಿಸ್ಥಿತಿ ಕಂಡು ಶುಕ್ರಾಚಾರ್ಯರ ತಾಯಿಗೆ ಕೆಡುಕೆನಿಸಿ, ಕೂಡಲೇ ಅವಳು ಧಾವಿಸಿ ಬಂದು ನುಡಿದಳು:

**॥ ಕಾವ್ಯಮಾತಾ ಉವಾಚ ॥**

**''ನ ಭೇತವ್ಯಂ ನ ಭೇತವ್ಯಂ ಭಯಂ ತ್ಯಜಥ ದಾನವಾಃ ।**
**ಮತ್ಸನ್ನಿಧೌ ವರ್ತತಾಂ ವೋ ನ ಭೀರ್ಭವಿತುಮರ್ಹತಿ ॥''**

ದಾನವರೆ, ಹೆದರಬೇಡಿರಿ ದೈತ್ಯರೆ ಬೆದರಬೇಡಿರಿ. ಅಂಜಿಕೆ ಬಿಡಿರಿ, ನನ್ನ ಬಳಿಯಲ್ಲಿ ಇದ್ದ ಬಳಿಕ ನಿಮಗೇಕೆ ಹೆದರಿಕೆ ? ನಾನಿದ್ದಲ್ಲಿಗೆ ನಿಮಗೆ ಯಾವ ಭಯವೂ ಇಲ್ಲ. ನಿಮಗೆ

ಯಾವ ಅಪಾಯ ಆಗದಂತೆ ನಾನು ನೋಡಿಕೊಳ್ಳುತ್ತೇನೆ. ಹೀಗೆ ಆಶ್ವಾಸನವಿತ್ತು ಅವಳು ಆ ಅಸುರರನ್ನೆಲ್ಲ ತನ್ನ ಬಳಿಯಲ್ಲಿಯೇ ನಿಲ್ಲಿಸಿಕೊಂಡಳು. ದೇವತೆಗಳು ಶುಕ್ರಮಾತೆಯು ದೈತ್ಯರನ್ನೆಲ್ಲ ಅಭಯ ವಚನವನ್ನಿತ್ತು. ಆಶ್ವಾಸನವನ್ನಿತ್ತು. ತನ್ನ ಬಳಿ ನಿಲ್ಲಿಸಿಕೊಂಡದ್ದನ್ನು ನೋಡಿದರು. ''ಇವಳದೇನು ನಮಗೆ ಭಯ'' ಎಂದು ಮತ್ತೂ ದೈತ್ಯರ ಮೇಲೆ ಏರಿಹೋದರು. ಆಶ್ರಮದ ಆವರಣವನ್ನು ಪ್ರವೇಶಿಸಿ ದೈತ್ಯರನ್ನು ಹೊಡೆಯತೊಡಗಿದರು. ಭೃಗುಮುನಿಯ ಆಶ್ರಮದ ಅಂಗಳದಲ್ಲಿಯೇ ದೈತ್ಯರ ಹೆಣಗಳು ಬೀಳತೊಡಗಿದವು. ಅದನ್ನು ಕಂಡು ಶುಕ್ರಮಾತೆಗೆ ಕೋಪ ಬಂದಿತು. ಅವಳು ದೇವತೆಗಳಿಗೆ ನುಡಿದಳು :

''ಸುರರೆ, ತುಸು ನಿಲ್ಲಿರಿ, ನಿಶಸ್ತ್ರರಾದವರ ಮೇಲೆ ಎರಗಿ ಸಂಹಾರಕಾರ್ಯ ಮಾಡುತ್ತಿರುವ ನಿಮ್ಮನ್ನೆಲ್ಲ ಮುಗಿಸಿ ಬಿಡುತ್ತೇನೆ'' - ಎಂದು ಹೇಳಿ ದೇವತೆಗಳ ಧುರೀಣನಾದ ಇಂದ್ರನ ಮೇಲೆ ಸಮ್ಮೋಹಿನಿ ಶಕ್ತಿಯನ್ನು ಉಪಯೋಗಿಸಿದಳು. ಆ ತಪಸ್ವಿನಿಯ ಯೋಗಶಕ್ತಿಯ ಪ್ರಭಾವದಿಂದ ಒಮ್ಮೆಲೆ ದೇವೇಂದ್ರನು ಸ್ತಂಭಿತನಾದನು. ಅವನ ಕೈಕಾಲುಗಳು ಜಡವಾಗಿ ನಿಶ್ಚೇಷ್ಟಿತನಾಗಿ ಕುಳಿತು ಬಿಟ್ಟನು. ಹೀಗೆ ಇಂದ್ರನು ಆ ದೇವಿಯ ನಿದ್ರಾಪ್ರಯೋಗದಿಂದ ವಶೀಕೃತನಾಗಿ ಕೈಕಾಲು ಅಲುಗಾಡಿಸಲು ಬಾರದೆ, ಮೂಢನಂತೆ ಸುಮ್ಮನೆ ಇರುವುದನ್ನು ನೋಡಿ ದೇವತೆಗಳಿಗೆಲ್ಲ ಭಯವಾಯಿತು. ಶುಕ್ರಮಾತೆಯು ತಮ್ಮ ಅರಸನನ್ನು ಸಂಪೂರ್ಣವಾಗಿ ತನ್ನ ನಿದ್ರಾಮಾಯೆಯಿಂದ ಪರವಶನನ್ನಾಗಿಸಿ ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿದ್ದಾಳೆ ಎಂದು ತಿಳಿದು ಹೆದರಿ ಅಲ್ಲಿಂದ ಓಡಿ ಹೋದರು. ದೇವತೆಗಳು ಅಲ್ಲಿಂದ ಕದಲಿದ ಬಳಿಕ ವಿಷ್ಣುವು ದೇವೇಂದ್ರನಿಗೆ ಹೇಳಿದನು.

**ವಿಷ್ಣು** :- ಇಂದ್ರ, ಗಾಬರಿಯಾಗಬೇಡ. ಈಗ ನೀನು ನನ್ನಲ್ಲಿ ಸೇರಿಕೊಂಡು ಬಿಡು. ನನ್ನ ಅಂತಃಪ್ರನಷ್ಟನಾದ ನಿನ್ನನ್ನು ನಾನು ನನ್ನ ಸಾಮರ್ಥ್ಯದಿಂದ ಸುರಕ್ಷಿತವಾಗಿ ನಿನ್ನ ಸ್ಥಾನಕ್ಕೆ ಒಯ್ದು ಮುಟ್ಟಿಸುತ್ತೇನೆ.

ಶ್ರೀಹರಿಯ ಈ ಸಲಹೆಯು ಇಂದ್ರನಿಗೆ ಒಳ್ಳೇ ತಾರಣ ಉಪಾಯ ಅನಿಸಿತು. ಅವನ ಆದೇಶದಂತೆ ಇಂದ್ರನು ವಿಷ್ಣುವಿನ ದೇಹದಲ್ಲಿ ಪ್ರವೇಶಿಸಿಬಿಟ್ಟನು. ಅದನ್ನು ನೊಡಿ ಶುಕ್ರಾಚಾರ್ಯರ ಜನನಿಯು ಮತ್ತಷ್ಟೂ ಕ್ರುದ್ಧಳಾದಳು. ದೇವತೆಗಳ ಪಕ್ಷವಹಿಸಿ ಇಂದ್ರನನ್ನು ತನ್ನ ಶರೀರದಲ್ಲಿಯೇ ಸೆಳೆದುಕೊಂಡು ಕಾಪಾಡಿದ್ದನ್ನು ನೋಡಿದಾಗ ಕ್ರುದ್ಧಳಾದ ಅವಳು ಕಣ್ಣು ಕೆಂಪಗೆಮಾಡಿ ಇಂತು ನುಡಿದಳು -

''ಇಂದ್ರನೆ, ವಿಷ್ಣುವಿಗೆ ಮೊರೆ ಹೊಕ್ಕ ಮಾತ್ರಕ್ಕೆ ಪಾರಾದೆನೆಂದು ತಿಳಿದುಕೊಳ್ಳಬೇಡ. ನಿನ್ನನ್ನೂ ನಿನಗೆ ಆಶ್ರಯ ಕೊಟ್ಟ ಆ ವಿಷ್ಣುವನ್ನೂ ಕೂಡಿಯೇ ನಾನು ಸುಟ್ಟುಬಿಡುತ್ತೇನೆ. ನನ್ನ ತಪೋಬಲವನ್ನಾದರೂ ನೋಡು. ಈ ಪ್ರಾಣಿಗಳೆಲ್ಲವೂ ನೋಡುತ್ತಿರುವಂತೆಯೇ, ನಿಮ್ಮಿಬ್ಬರನ್ನು ನಾನು ದಹಿಸಿಬಿಡುತ್ತೇನೆ.''

ಶುಕ್ರಮಾತೆಯ ಈ ಕಿಡಿನುಡಿಗಳನ್ನು ಆಲಿಸಿ, ಇಂದ್ರನು ಭಯಭ್ರಾಂತನಾದನು. ವಿಷ್ಣುವು ಚಕಿತನಾಗಿ ನಿಂತುಕೊಂಡನು. ಇವಳ ಕೈಯಿಂದ ಪಾರಾಗುವ ಬಗೆ ಎಂತು ಎಂದು ಅವರಿಬ್ಬರೂ ಯೋಚಿಸತೊಡಗಿದರು. ಅವಳ ಘೋರ ಪ್ರತಿಜ್ಞೆ ಕೇಳಿ ತಲ್ಲಣಿಸಿ ಹೋದ ಸುರನಾಥನು ಮಹಾವಿಷ್ಣುವಿಗೆ ಕೇಳಿಕೊಂಡನು :-

''ಪ್ರಭು, ಈ ತಾಪಸಿ ಹೆಣ್ಣುಮಗಳು ನಮ್ಮಿಬ್ಬರನ್ನು ದಹಿಸುವ ಮುನ್ನ ಇವಳನ್ನು ಕೊಂದುಬಿಡು. ಇಲ್ಲದಿದ್ದರೆ ನಮಗೆ ಇವಳಿಂದ ಅಪಾಯ ತಪ್ಪಿದ್ದಲ್ಲ. ಇವಳ ಮಾತಿನಿಂದಲೇ ನಾನು ಸೋತು ಹೋಗಿದ್ದೇನೆ. ಅವಳ ಸಮ್ಮೋಹಿನಿ ಪ್ರಯೋಗದಿಂದಂತೂ ನಾನು ಜೀವನ್ಮೃತನಾಗಿದ್ದೆನು. ಇವಳು ನನ್ನನ್ನು ಸುಟ್ಟು ಬೂದಿಮಾಡುವೆನೆಂದು ಪಣ ತೊಟ್ಟಿದ್ದಾಳೆ. ಆದುದರಿಂದ ಹಿಂದು ಮುಂದು ವಿಚಾರ ಮಾಡದೇ ಮೊದಲು ಇವಳನ್ನು ಸೀಳಿ ಹಾಕು.''

ದೇವೇಂದ್ರನು ಭಯ, ಸಂಭ್ರಮಗಳಿಂದ ಶುಕ್ರ ಜನನಿಯ ವಧೆಗಾಗಿ, ಅವಸರಪಡಿಸುತ್ತಿದ್ದನು. ಅವಳನ್ನು ವಧಿಸಲು ವಿಷ್ಣುವಿಗೆ ಅನುಮಾನ. ಎಷ್ಟಾದರೂ ಹೆಂಗಸರಲ್ಲವೆ ? ಹೆಣ್ಣನ್ನು ಕೊಲ್ಲುವುದು ಹೇಗೆ ? ಬಿಟ್ಟರೆ ಇಂದ್ರನು ಬದುಕುವಂತಿಲ್ಲ. ತನಗೂ ಗಂಡಾಂತರ. ಆದಕ್ಕೆ ಉಪಾಯಗಾಣದೆ, ದೇವೇಂದ್ರನ ಬಲವತ್ತರವಾದ ಬಿನ್ನಹ ಕಡೆಗಣಿಸಲಾರದೆ ವಿಷ್ಣುವು ತನ್ನ ಸುದರ್ಶನ ಚಕ್ರವನ್ನು ನೆನೆದನು. ಸ್ಮರಿಸಿದ ಕ್ಷಣದಲ್ಲಿಯೇ ಚಕ್ರವು ಬಂದು ಅವನ ಕರಕಮಲವನ್ನು ಅಲಂಕರಿಸಿತು.

ವಿಷ್ಣುವು ಮತ್ತೊಮ್ಮೆ ವಿಚಾರಿಸಿ ಅವಳ ಕಡೆಗೆ ನೋಡಿದ, ಅವಳು ತನ್ನ ಘೋರಪ್ರತಿಜ್ಞೆ ಪೂರೈಸಲು ಮುಂದೆ ಹೆಜ್ಜೆಯಿಟ್ಟಿದಳು. ಇಂದ್ರ ಉಪೇಂದ್ರ ಇಬ್ಬರನ್ನೂ ಬೇಯಿಸಿ, ಸಾಯಿಸಿ ಬಿಡಬೇಕೆಂದು ತನ್ನ ಕ್ರೂರ ನಿರ್ಧಾರನವನ್ನು ಕೃತಿಯಲ್ಲಿಳಿಸುವ ಹವಣಿಕೆಯಲ್ಲಿದ್ದಳು. ಇನ್ನು ತಡಮಾಡಿದರೆ, ನಾನು ಬದುಕಲಾರೆ ಎಂದು ಶಚಿಪತಿ ಬಾಯಿ ಬಿಡತೊಡಗಿದ.

ಆಗ ಆ ಜನಾರ್ದನನು ತನ್ನ ಕೈಯಲ್ಲಿರುವ ಸುದರ್ಶನ ಚಕ್ರವನ್ನು ಪ್ರಯೋಗಿಸಿ ಆ ಶುಕ್ರಮಾತೆಯ ತಲೆಯನ್ನು ಕತ್ತರಿಸಿ ಹಾಕಿದ. ಭೃಗುಮುನಿಯು ಇದ್ದಲ್ಲಿಯೇ ಈ ಸುದ್ದಿ ತಿಳಿದು ಬಂದಿತು. ವಿಷ್ಣುವು ಸ್ವಯಂ ತಾನೇ ನಿಂತು ಸ್ತ್ರೀವಧದಂಥ ಘೋರಕೃತ್ಯಮಾಡಿದ್ದು ಕಂಡು, ಭೃಗುಮುನಿಗೆ ಬ್ರಹ್ಮಾಂಡ ಕೋಪ ಬಂದಿತು. ಆಗ ಆ ಬ್ರಹ್ಮರ್ಷಿಯು ತನ್ನ ಹೆಂಡತಿಯನ್ನು ತನ್ನ ಆಶ್ರಮದಲ್ಲಿಯೇ ಬಂದು ಕೊಂದು ಹಾಕಿದ ವಿಷ್ಣುವಿಗೆ ಶಾಪವನ್ನು ಕೊಟ್ಟನು.

**ಭೃಗು :-** ವಿಷ್ಣುವೆ, ಸ್ತ್ರೀವಧವು ಮಹಾಪಾಪ ಎಂಬುದನ್ನು ಬಲ್ಲೆ. ಆದರೂ ನನ್ನ ಹೆಂಡತಿಯ ಹತ್ಯೆಯನ್ನುಮಾಡಿದೆ. ಈ ಸ್ತ್ರೀಹಿಂಸೆಯ ಕಾರಣದಿಂದ ನೀನು ಭೂಮಂಡಲದಲ್ಲಿ ಏಳು ಸಲ ಮನುಷ್ಯನಾಗಿ ಹುಟ್ಟು.''

ಹೀಗೆ ಭೃಗುಋಷಿಯ ಶಾಪವು ಭಗವದವತಾರಕ್ಕೆ ನೆಪ ಮಾತ್ರ. ಮುಖ್ಯವಾಗಿ ಧರ್ಮೋದ್ಧಾರಕ್ಕಾಗಿಯೇ ಪರಮಾತ್ಮನು ಅವತರಿಸುವನು. ಮತ್ತೆ ಮತ್ತೆ ಈ ಮಹೀತಳದಲ್ಲಿ ಧರ್ಮವು ನಷ್ಟವಾದಾಗ ಜನತೆಯ ನೀತಿ ಭ್ರಷ್ಟವಾದಾಗ ಲೋಕ ಕಲ್ಯಾಣಕ್ಕಾಗಿ ಮತ್ತೆ ಮತ್ತೆ ಮಾನವರಲ್ಲಿ ಅವತರಿಸುತ್ತಾನೆ ಆ ಪರಮಾತ್ಮ. ಹೀಗೆ ನಾರಾಯಣನಿಗೆ ಶಾಪಕೊಟ್ಟು ಭೃಗುಋಷಿಯು ಕಡಿದು ಒಗೆದ ಹೆಂಡತಿಯ ತಲೆಯನ್ನು ತೆಗೆದುಕೊಂಡು ಬಂದನು. ಪತ್ನಿಯ ತಲೆಬುರುಡೆ ಹಿಡಿದುಕೊಂಡು ಹೀಗೆ ನುಡಿದನು -

**ಭೃಗು :-** ಪ್ರಿಯೆ, ನಿನ್ನನ್ನು ವಿಷ್ಣುವು ಸುದರ್ಶನ ಚಕ್ರದಿಂದ ಕೊಂದಿದ್ದಾನೆ. ನಾನೀಗ ನಿನ್ನನ್ನು ಮರಳಿ ಬದುಕಿಸುತ್ತೇನೆ. ನಾನು ಈವರೆಗೆ ಏನಾದರೂ ಧರ್ಮ ಕಾರ್ಯಗಳನ್ನು ಮಾಡಿದ್ದರೆ, ತಪೋನುಷ್ಠಾನಗೈದಿದ್ದರೆ, ಪುಣ್ಯಸಂಪಾದಿಸಿದ್ದರೆ, ಆಪುಣ್ಯ ಪ್ರಭಾವದಿಂದ ನನ್ನ ಹೆಂಡತಿಯು ಬದುಕಲಿ. ನನ್ನಲ್ಲಿ ತಪಃಪ್ರಭಾವವಿದ್ದರೆ ನನ್ನ ಈ ಭಾರ್ಯೆಯು ಮರಳಿ ಬದುಕಲಿ. ನನ್ನ ಧರ್ಮನಿಷ್ಠೆಯು ಸತ್ಯವಾಗಿದ್ದರೆ ಮರಣ ಹೊಂದಿದ ಈ ರಮಣಿಯು

ಪುನಃ ಜೀವಿತವಾಗಲಿ. ಹೀಗೆ ಹೇಳಿ, ತನ್ನ ಹೆಂಡತಿಯ ತಲೆಯನ್ನು ಅವಳ ಕಬಂಧ ದಡದ ಮೇಲೆ ಹೊದಿಸಿ, ತಣ್ಣೀರಿನಿಂದ ಪ್ರೋಕ್ಷಣೆ ಮಾಡಿ ''ಬದುಕು ಬದುಕು'' ''ಪುನರ್ಜೀವಿತಳಾಗು'' ಎಂದು ಮತ್ತೆ ಮತ್ತೆ ಅಭಿಮಂತ್ರಿತ ಸೀತೋದಕವನ್ನು ಪ್ರೋಕ್ಷಣೆಮಾಡಿದಾಗ, ಸಲಿಲ ಸಂಪ್ರೋಕ್ಷಣದಿಂದ ಮೃತಳಾದ ಶುಕ್ರಾಚಾರ್ಯರ ತಾಯಿಯು ಬದುಕಿದಳು. ಮೆಲ್ಲನೆ ಮುಚ್ಚಿದ ಕಣ್ಣಾಲೆಗಳನ್ನು ತೆರೆದು ಪತಿಯನ್ನು ನೋಡಿದಳು. ಅಲ್ಲಿಯೇ ನಿಂತು ಎವೆ ಪಿಳುಕಿಸದೆ ಈ ಅದ್ಭುತವನ್ನು ನೋಡುತ್ತಲಿರುವ ದೇವತೆಗಳು ಬೆರಗುಬೆಪ್ಪಾಗಿ ನಿಂತುಕೊಂಡರು. ಅಲ್ಲಿದ್ದವರೆಲ್ಲರೂ ಈ ಲೋಕೋತ್ತರ ದೃಶ್ಯವನ್ನು ''ಭಲಾ, ಭಾಪು'' ಎಂದು ಸಂತಸದ ಉದ್ಗಾರವೆತ್ತಿ ಪ್ರಶಂಸನೆಮಾಡಿದರು. ಆದರೆ ಇದನ್ನು ಕಂಡು ಇಂದ್ರನಿಗೆ ಮಾತ್ರ ಮನಸ್ಸಿನಲ್ಲಿ ಕಳವಳ ಆಯಿತು. ಎದೆಯ ಬಡಿತ ಜೋರಾಯಿತು. ಶುಕ್ರಾಚಾರ್ಯ ರಿಂದ ತಮಗೆಲ್ಲ ಮುಂದೆ ಏನು ಅಪಾಯ ಒದಗುವುದೋ ಎಂದು ಅವನು ಹೆದರಿ ಹೋದನು. ರಾತ್ರಿ ಚಿಂತಾಭ್ರಾಂತನಾದ ಶಚಿಪತಿಗೆ ನಿದ್ದೆಯೇ ಇಲ್ಲದಂತಾಯಿತು. ಸರ್ವದಾ ಜಾಗರಣೆ, ಕೊನೆಗೆ ಶುಕ್ರಾಚಾರ್ಯರ ಜೊತೆಗೆ ಸಂಧಿಮಾಡಿಕೊಳ್ಳಬಯಸಿದನು. ಅದಕ್ಕಾಗಿ ಇಂದ್ರನು ತನ್ನ ಮಗಳಾದ ಜಯಂತಿ ಕುಮಾರಿಯನ್ನು ಕರೆದು ನುಡಿದನು.

''ವತ್ಸೆ, ಈ ಶುಕ್ರಾಚಾರ್ಯನು ಜಗತ್ತಿನಲ್ಲಿ ನನ್ನನು ಇಲ್ಲದಂತೆ ಮಾಡಬೇಕೆಂದು ತಪಕ್ಕೆಕೊಂಡಿದ್ದಾನೆ. ಅವನ ಈ ಸಂಕಲ್ಪದಿಂದಾಗಿ ನಾನು ಗಾಬರಿಗೊಂಡಿದ್ದಾನೆ. ಅವನು ಎಷ್ಟಾದರೂ ಬುದ್ಧಿವಂತ ಬ್ರಾಹ್ಮಣ. ಹೇಗಾದರೂ ಮಾಡಿ ತನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿಕೊಳ್ಳುವಲ್ಲಿ ಚತುರಮತಿ. ಅದಕ್ಕಾಗಿ ನನಗೆ ಮತ್ತಿಷ್ಟೂ ಭಯವಾಗಿದೆ. ಆದುದರಿಂದ ಮಗಳೆ, ನೀನು ಆ ಶುಕ್ರಾಚಾರ್ಯನ ಬಳಿಗೆ ಹೋಗು. ಅವನಿಗೆ ಅನುಕೂಲಳಾಗಿ ಉಪಚರಿಸು. ಸಂತೋಷಪಡಿಸು. ಜಾಗರೂಕತೆಯಿಂದ ಅವನ ಮನಸ್ಸನ್ನು ಮರುಳು ಗೊಳಿಸು. ನಾನು ನಿನ್ನನ್ನು ಅವನಿಗೇ ಕೊಟ್ಟು ಬಿಟ್ಟಿದ್ದೇನೆ. ಹೇಗಾದರೂ ಪ್ರಯತ್ನಮಾಡಿ ಆ ಆಚಾರ್ಯನ ಮನತಣಿಸು. ಮೋಹಮಾಡಿ ನಿನ್ನ ವಶವಾಗುವಂತೆ ಮಾಡಿಕೊ.''

ತಂದೆಯ ಮಾತನ್ನು ಮನ್ನಿಸಿ, ಇಂದ್ರಪುತ್ರಿ ಜಯಂತಿಯ ಶುಕ್ರಾಚಾರ್ಯರು ತಪಃಗೈಯುತ್ತಿದ್ದ ತಾಣಕ್ಕೆ ಬಂದಳು. ಅಲ್ಲಿ ಶುಕ್ರಾಚಾರ್ಯರ ಘೋರ ತಪಸ್ಸು ನಡೆದಿತ್ತು. ನೆಲದ ಆಳದಲ್ಲಿ ಅಗ್ನಿಕುಂಡ. ಅದರಲ್ಲಿ ಹೋಮಮಾಡಿದ ಚರು ದ್ರವ್ಯಗಳಿಂದ ಹೊಗೆ ಏಳುತ್ತಿತ್ತು. ಅದರ ಮೇಲೆ ಹೋಮ ಧೂಮವನ್ನು ಕುಡಿಯುತ್ತ ತಲೆ ಕೆಳಗೆಮಾಡಿ ಶುಕ್ರಾಚಾರ್ಯರು ತಪಸ್ಸನ್ನಾಚರಿಸುತ್ತಿದ್ದರು. ಕಠಿಣ ತಪಸ್ಸಿಯಆಚರಣೆಯು ಅವರ ದೇಹವನ್ನೆಲ್ಲ ಒಣಗಿಸಿತ್ತು. ತುಂಬ ನಿಶ್ಶಕ್ತಿಯಿಂದ ಬಳಲುತ್ತಿದ್ದರು. ಯಾತನಾಮಯವಾದ ಇಂತಹ ಉಗ್ರ ತಪಸ್ಸಿನಿಂದ ನಶಿಸಿಹೋದ ಶುಕ್ರರ ಬಳಿಗೆ ಜಯಂತಿಯು ಬಂದು ತನ್ನ ಮೆಲು ನುಡಿಯಿಂದ ಸ್ತೋತ್ರ ಮಾಡಿದಳು.

ಮಧುರಾಲಾಪಗಳಿಂದ ಮನಸ್ಸಿಗೆ ಸಂತಸವಾಗುವಂತೆ ಸೇವೆ ಕೈ ಕೊಂಡಳು. ನೋವಿನಿಂದ ನವೆದ ಶರೀರದ ಭಾಗವನ್ನು ತನ್ನ ಕೋಮಲ ಕೈಯಿಂದ ಮಿದುವಾಗಿ ನೀವಿದಳು. ಅವಳ ಪೇಲವ ಶರೀರದ ಕೋಮಲ ಅವಯವಗಳ ಸ್ಪರ್ಶದಿಂದ ಶುಕ್ರಾಚಾರ್ಯರಿಗೆ ಹಿತವೆನಿಸಿತು. ಅವರ ವ್ರತಾನುಷ್ಠಾನ, ತಪಶ್ಚರ್ಯ ವಿಧಿಗಳಿಗೆ ಅನುಕೂಲವಾಗುವಂತೆ ಬಹುವಿಧ ಸೇವೆಮಾಡಿದಳು.

ಹೀಗೆ ಸಾವಿರ ವರ್ಷ ನಡೆದ ಅವರ ತಪಶ್ಚರ್ಯೆಯ ಉದ್ದಕ್ಕೂ ಜಯಂತಿಯ ಸೇವಾವ್ರತವೂ ನಿರಾತಂಕವಾಗಿ ನಡೆಯಿತು. ಅವಳ ಹಿತಕರ ಪ್ರೇಮಾರಾಧನೆ ಹಾಗೂ ಅನುಕೂಲ ಉಪಚಾರಾದಿಗಳಿಂದ ಶುಕ್ರರ ಘೋರ ತಪಸ್ಸು ನಿರ್ವಿಘ್ನವಾಗಿ ಕೊನೆಗೊಳ್ಳು-ವಂತಾಯಿತು. ಅಂತಹ ಅತಿ ಕಠಿಣ ತಪಃಕಾರ್ಯದ ಕಷ್ಟ ಕಾಠಿಣ್ಯಗಳನ್ನೆಲ್ಲ ತಾಳಿಕೊಂಡು ಅವರ ದೇಹವು ನಶಿಸದೆ ಉಳಿಯುವಂತೆ ಮಾಡಿದ ಶ್ರೇಯಸ್ಸು ಜಯಂತಿಯದಾಯಿತು.

ಅಂತೂ ಮಹಾದೇವರು ಹೇಳಿದ ವಿಧಿ ವಿಧಾನಗಳಲ್ಲಿ ಯಾವದಕ್ಕೂ ಕುಂದು ಬಾರದಂತೆ ಶುಕ್ರಾಚಾರ್ಯರು ಸಹಸ್ರ ವರ್ಷದ ಪ್ರದೀರ್ಘ ಧೂಮ್ರವ್ರತವನ್ನು ಯಥಾಸಾಂಗವಾಗಿಮಾಡಿ ಪೂರೈಸಿ, ಮಹಾದೇವರನ್ನು ಮೆಚ್ಚಿಸಿದರು. ಸಂತುಷ್ಟನಾದ ಪರಶಿವನು ಕಣ್ಣೆದುರು ಬಂದು ನಿಂತು ನುಡಿದನು.

''ಭೃಗು ಪುತ್ರನೆ ಇಂತಹ ಈ ಘೋರವ್ರತವನ್ನು ಈ ಪ್ರಪಂಚದಲ್ಲಿ ನೀನು ಒಬ್ಬನೇ ಮಾಡಿದೆ. ಇಂದಿನವರೆಗೆ ಬೇರೆ ಯಾರು ಮಾಡಲಿಲ್ಲ. ಆದುದರಿಂದ ನೀನು ತಪಸ್ಸಿನಿಂದ, ಬುದ್ಧಿಯಿಂದ, ತೇಜಸ್ಸಿನಿಂದ ಇಂದ್ರಿಯನಿಗ್ರಹ, ಪಾಂಡಿತ್ಯದಿಂದ ಎಲ್ಲರನ್ನು ಮೀರಿಸಿರುವೆ. ಸರ್ವದೇವತೆಗಳಿಗಿಂತಲೂ ನೀನು ಈ ಎಲ್ಲ ಗುಣಗಳಿಂದ ಮಿಗಿಲು ಎನಿಸಿರುವೆ. ಅವರೆಲ್ಲರೂ ನಿನ್ನ ಈ ಗುಣಗಳಿಂದ ಪರಾಜಿತರಾಗಿದ್ದಾರೆ. ನನ್ನಲ್ಲಿ ಇದ್ದುದನ್ನೆಲ್ಲ ನಿನಗೆ ಕೊಟ್ಟಿದ್ದೇನೆ. ನೀನೇನೂ ಕೇಳುವ ಕಾರಣವಿಲ್ಲ. ಇದನ್ನು ನೀನು ಯಾರ ಮುಂದೂ ಹೇಳಬೇಡ. ಇಂದಿನಿಂದ ನೀನು ಅವಧ್ಯ. ಯಾರೂ ನಿನ್ನನ್ನು ಗೆಲ್ಲಲಾರರು, ಕೊಲ್ಲಲಾರರು'' ಹೀಗೆ ಹೇಳಿ, ಮಹಾದೇವರು ಭೃಗುಕುಲದ ಬ್ರಾಹ್ಮಣನಿಗೆ ಪ್ರಜಾಪತಿತ್ವವನ್ನು ಕೊಟ್ಟನು. ಧನಾಧ್ಯಕ್ಷತೆಯನ್ನು ಕರುಣಿಸಿದನು. ಮೇಲೆ ಅವಧ್ಯತ್ವವನ್ನು ದಯಪಾಲಿಸಿದನು.

ಮಹಾದೇವರ ಈ ಮಾತು ಕೇಳಿಯೇ ಶುಕ್ರಾಚಾರ್ಯರಿಗೆ ಮೈಯೆಲ್ಲ ರೋಮಾಂಚ ವಾಯಿತು. ಇಂತಹ ದಿವ್ಯವರ ಕೇಳದೆ ಕರುಣಿಸಿ ಕೊಟ್ಟ ಶಿವನಿಗೆ ಮಣಿದು, ಪಾದಮುಟ್ಟಿ ನಮಸ್ಕರಿಸಿದರು. ಕೈಮುಗಿದು ಸ್ತೋತ್ರಮಾಡಿದರು. ಮೊದಲೇ ಕವಿಯಾದ ಶುಕ್ರಾಚಾರ್ಯರ ಶಿವಸ್ತುತಿಯೆಲ್ಲವೂ ಕಾವ್ಯಮಯವಾಗಿದ್ದದ್ದು ಎಂದು ಬೇರೆ ಹೇಳಬೇಕೆ? ಅವರ ಕವಿವಾಣಿಯ ಸ್ತೋತ್ರವನ್ನು ಕೇಳಿ ಸಂತುಷ್ಟನಾದ ಮಹಾದೇವರು ಅಲ್ಲಿಂದ ಅದೃಶ್ಯರಾದರು.

ಮಹಾದೇವರು ಅಲ್ಲಿಂದ ಹೋದ ಬಳಿಕ ಶುಕ್ರಾಚಾರ್ಯರು ತಮ್ಮ ನೆರಳಿನಂತೆ ಇದ್ದು ಇಷ್ಟು ದಿನ ಸೇವೆ ಮಾಡಿದ ಜಯಂತಿಯ ಕಡೆಗೆ ತಿರುಗಿದರು. ಅವರಿಗೆ ತಮ್ಮ ದೀರ್ಘಕಾಲದ ದುಃಖದಲ್ಲಿ ಭಾಗಿಯಾದ ಆ ಹೆಣ್ಣಿನ ಕಠಿಣ ಸೇವಾಶುಶ್ರೂಷೆ ಕಂಡು, ಕರುಣೆ ತುಂಬಿ ಬಂದಿತು. ಅವಳನ್ನು ಕೇಳಿದರು.

''ಕಲ್ಯಾಣಿ, ನೀನು ಯಾರು ? ಯಾರ ಮಗಳು ? ನನ್ನ ದುಃಖದಲ್ಲಿ ಭಾಗಿನಿಯಾಗಿ ನೀನು ಎಷ್ಟು ದುಃಖ ಪಡೆಯುತ್ತಿರುವೆಯಲ್ಲ ? ನನ್ನಷ್ಟೇ ಕಠಿಣವಾಗಿದ್ದಿತು ನಿನ್ನ ಸೇವಾ ರೂಪವಾದ ತಪಸ್ಸು. ಇಷ್ಟು ಕಷ್ಟಪಟ್ಟು ನನ್ನನ್ನೇ ನೀನೇಕೆ ಕಾಪಾಡುತ್ತಲಿರುವೆ ಈ ನಿನ್ನ ಭಕ್ತಿ, ವಿಶ್ವಾಸ, ದೇಹದಂಡನೆಗಳನ್ನು ಕಂಡು, ನನಗೆ ನಿನ್ನಲ್ಲಿ ಅನುರಾಗಉಂಟಾಗಿದೆ. ನೀನು ಇಷ್ಟು ದಿನ ನನ್ನಲ್ಲಿ ತೋರಿದ ಪ್ರೇಮಕ್ಕಾಗಿ ನಾನು ಪ್ರೀತನಾಗಿದ್ದೇನೆ. ಈ ನಿನ್ನ ಒಲವು ನನಗೆ ಬಲವನ್ನು ತಂದುಕೊಟ್ಟಿದೆ. ನಿನ್ನ ಸೇವೆ ನನ್ನ ಶರೀರವನ್ನು ಬದುಕಿಸಿದೆ. ನಿನ್ನ ಆರಾಧನೆ ನನ್ನ ಆತ್ಮಕ್ಕೆ ಸಂಜೀವಿನಿ ಆಗಿದೆ. ಸುಂದರಿ, ನಿನಗೆ ಏನು ಬೇಕಾಗಿದೆ ?

ಯಾವ ಅಪೇಕ್ಷೆಯಿಂದ ಇಷ್ಟು ಪರಿಯಿಂದ ನನ್ನನ್ನು ಉಪಚರಿಸುತ್ತಲಿರುವೆ ಹೇಳು ? ಎಷ್ಟು ಕಷ್ಟವಾದರೂ ಚಿಂತೆಯಿಲ್ಲ ನಿನ್ನ ಅಪೇಕ್ಷೆ ಪೂರೈಸುತ್ತೇನೆ.'' ಜಯಂತಿ ಕುಮಾರಿಯು ಶುಕ್ರಾಚಾರ್ಯರ ಈ ನುಡಿ ಕೇಳಿ ಮರು ನುಡಿದಳು.

''ಬ್ರಹ್ಮಜ್ಞಾನಿಗಳೆ, ತಪಸ್ಸಿನ ಮಹಿಮೆಯಿಂದ ತಮಗೆ ತಿಳಿಯದಿರುವುದು ಯಾವುದಿದೆ! ನನ್ನ ಮನಸ್ಸಿನಲ್ಲಿ ಇರುವುದು ತಮಗೆ ವಿದಿತವೇ ಆಗಿದೆ.'' ಅನಂತರ ಶುಕ್ರಾಚಾರ್ಯರು ದಿವ್ಯದೃಷ್ಟಿಯಿಂದ ಆ ಬೊಗಸೆಗಣ್ಣಿನ ಬಾಲೆಯ ಬಯಕೆ ಏನೆಂಬುದನ್ನು ತಿಳಿದುಕೊಂಡರು. ನಗುತ್ತ ಪ್ರೀತಿಯಿಂದ ಅವಳನ್ನು ನೋಡಿ ಹೇಳಿದರು.

''ಭಾಮಿನಿ, ತಿಳಿಯಿತು ನನಗೆ ನಿನ್ನ ಮನೋರಥ ಸ್ತ್ರೀ ಸಹಜವಾದ ಆಶೆಯನ್ನು ಹೊತ್ತು ನೀನು ಇಲ್ಲಿಗೆ ಬಂದಿರುವೆ. ಒಂದುನೂರು ವರ್ಷಕಾಲ ಯಾರಿಗೂ ಕಾಣದಂತೆ ನನ್ನೊಡನೆ ವಿಹರಿಸಲು ಬಯಸುವೆ. ಕನ್ನೈದಿಲೆಯಂತಿರುವ ಕಪ್ಪುಗಣ್ಣಿನ ಹೆಣ್ಣೆ, ನಿನ್ನ ಎದೆಯ ಬಯಕೆಯು ನಿನ್ನ ಆ ಕುಡಿ ನೋಟದಿಂದಲೇ ವ್ಯಕ್ತವಾಗುತ್ತದೆ. ಮಧುರಮಾತಿನ ಮಾಟಗಾತಿಯೇ, ನಿನ್ನ ಅಪೇಕ್ಷೆಯಂತಾಗಲಿ. ಆದರೆ ಅದು ಈ ತಪೋವನದಲ್ಲಿ ಬೇಡ. ನಮ್ಮ ಮನೆಗೆ ಹೋಗೋಣ.'' ಎಂದು ನುಡಿದು ಶುಕ್ರಾಚಾರ್ಯರು ಜಯಂತಿಯೊಡನೆ ಮನೆಗೆ ಬಂದರು. ತಮ್ಮ ಮನೆಯಲ್ಲಿ ನೂರು ವರ್ಷ ಆ ಇಂದ್ರ ನಂದಿನಿಯ ಅಪೇಕ್ಷೆಯಂತೆ ಆನಂದದಿಂದ ಕಾಮಕೇಳಿಗೈಯುತ್ತ ನೂರು ವರ್ಷ ವಾಸ ಮಾಡಿದರು.

ದೈತ್ಯರಿಗೆ ಶುಕ್ರಾಚಾರ್ಯರು ತಪಸ್ಸಿದ್ಧಿಪಡೆದು ಬಂದ ಸಮಾಚಾರ ತಿಳಿದು ಅವರೆಲ್ಲರೂ ತಮ್ಮ ಗುರುವಿನ ದರ್ಶನಕ್ಕಾಗಿ ಧಾವಿಸಿಬಂದರು. ಆದರೆ ಮನೆಯಲ್ಲಿ ಯಾರಿಗೂ ಅವರ ದರ್ಶವಾಗಲಿಲ್ಲ. ಜಯಂತಿಯ ಅಪೇಕ್ಷೆಯಂತೆ ಅವರು ಅದೃಶ್ಯರೂಪದಿಂದಲೇ ತಮ್ಮ ಮನೆಯಲ್ಲಿಯೇ ವಿಹಾರಗೈಯುತ್ತಿದ್ದರು. ಅಂತಹ ''ಮಯಾಜವನಿಕೆ'' ನಿರ್ಮಿಸಿ ಯಾರಿಗೂ ಕಾಣದಂತೆ ತಮ್ಮ ಲಲನೆಯೊಂದಿಗೆ ಲೀಲಾವಿಲಾಸಗಳನ್ನು ಅನುಭವಿಸುತ್ತಿದ್ದರು.

ತಮ್ಮ ಗುರುಗಳ ದರ್ಶನಕ್ಕಾಗಿ ಸಂಭ್ರಮದಿಂದ ಮನೆಗೆ ಬಂದ ದೈತ್ಯರೆಲ್ಲರೂ ಅಲ್ಲಿಗೆ ಬಂದು ನಿರಾಶರಾಗಬೇಕಾಯಿತು. ಅಲ್ಲಿ ಅವರನ್ನು ಕಾಣದೆ ಇನ್ನೂವರೆಗೂ ತಮ್ಮ ಮನೆಗೆ ಬಂದಿಲ್ಲ ಎಂದುಕೊಂಡು ತಿರುಗಿ ಹೋದರು. ದೇವತೆಗಳಿಗೆ ಬೇಹುಗಾರರ ಮುಖಾಂತರ ಈ ಸಮಾಚಾರ ತಿಳಿದುಬಂದಿತು. ಕೂಡಲೇ ಅವರು ತಮ್ಮ ಗುರು ಬೃಹಸ್ಪತ್ಯಾಚಾರ್ಯರ ಮನೆಗೆ ಹೋಗಿ ಮಾತಾಡಿದರು.

**ದೇವತೆಗಳು :-** ಗುರುಗಳೇ, ''ಪೂಜ್ಯರಾದ ತಾವು ಈಗಲೇ ದಾನವರ ಮನೆಗೆ ಹೋಗಿರಿ. ಆ ದೈತ್ಯರ ಸಮೂಹವನ್ನೆಲ್ಲ ಮೋಹದಿಂದ ನಿಮ್ಮ ಸ್ವಾಧೀನಪಡಿಸಿಕೊಳ್ಳಿರಿ. ಈ ಕಾರ್ಯದಲ್ಲಿ ವಿಳಂಬವಾಗಬಾರದು. ಆದಷ್ಟು ಬೇಗ ಶುಕ್ರಾಚಾರ್ಯರು ತಮ್ಮ ವಿಹಾರದಲ್ಲಿ ಇದ್ದಾಗಲೇ ಈ ಕಾರ್ಯ ಸಾಧಿಸಬೇಕು.''

ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಬೃಹಸ್ಪತಿಯು ಆಗಲೇ ಅಲ್ಲಿಂದ ಹೊರಟರು. ಪ್ರಲ್ಹಾದನ ಬಳಿಗೆ ಶುಕ್ರಾಚಾರ್ಯರ ವೇಷದಿಂದಲೇ ಇಳಿದುಬಂದರು. ತಪಸ್ಸಿದ್ಧಿಪಡೆದು ಗುರು ಶುಕ್ರರೇ ಮಹಾದೇವರಿಂದ ವರಗಳನ್ನು ಗಳಿಸಿಕೊಂಡು ಬಂದಿದ್ದಾರೆಂದು ಪ್ರಲ್ಹಾದನು ನಮಸ್ಕಾರಮಾಡಿದ. ಶುಕ್ರರ ವೇಷ ತಳೆದ ಬೃಹಸ್ಪತಿಯು

ದೈತ್ಯರ ಪೌರೋಹಿತ್ಯ ವಹಿಸಿದ. ತಮ್ಮ ಸ್ನೇಹ ಪೂರ್ವಕ ವರ್ತನೆ, ಮಧುರ ಮಾತುಗಳಿಂದ ಅನೇಕ ಉಪಕಾರಕ ಸಲಹೆ ಸೂಚನೆಗಳಿಂದ ದೈತ್ಯರ ಮನಸ್ಸು ಗೆದ್ದರು.

ಹೀಗೆ ನೂರು ವರ್ಷಗಳವರೆಗೆ ಬೃಹಸ್ಪತ್ಯಾಚಾರ್ಯರು ಶುಕ್ರಾಚಾರ್ಯರ ವೇಷದಿಂದಲೇ ಪುರೋಹಿತರಾಗಿ, ಇಷ್ಟ ಗುರುಗಳಾಗಿ ಮಾರ್ಗದರ್ಶನಮಾಡಿಸುತ್ತ ಗುರುಪೂಜೆ ಸ್ವೀಕರಿಸುತ್ತ ಅಲ್ಲಿಯೇ ಇದ್ದರು. ಹೀಗೆ ನೂರು ವರ್ಷ ಪೂರೈಸಿದ ಬಳಿಕ ಜಯಂತಿಯನ್ನು ಅವಳ ಇಚ್ಛೆಯಂತೆ ರಹಸ್ಯವಾಗಿ ರಮಿಸಿ; ಸಂತೈಸಿ ಅವಳ ಕಾಮನೆಯನ್ನು ತೃಪ್ತಿಪಡಿಸಿ ಸಂತೋಷದಿಂದ ಬೀಳ್ಕೊಂಡು ಹೊರಗೆ ಬಂದರು. ಅಲ್ಲಿಂದ ಅವರು ದೈತ್ಯರ ಆಸ್ಥಾನಕ್ಕೆ ಬಂದರು. ದೈತ್ಯ ಸಾರ್ವಭೌಮನ ಸಭೆಯಲ್ಲಿ ಕುಲಗುರುವಿನ ಗದ್ದುಗೆಯ ಮೇಲೆ ಬೃಹಸ್ಪತ್ಯಾಚಾರ್ಯರು ಮಂಡಿಸಿದ್ದರು. ಆದರೆ ಅವರ ರೂಪವು ಮಾತ್ರ ಶುದ್ಧ ಶುಕ್ರ ರೂಪವೇ. ಹೀಗೆ ಸಭೆಯಲ್ಲಿ ಒಬ್ಬ ಶುಕ್ರಾಚಾರ್ಯರು ಇರುವಾಗಲೇ, ಹೊರಗಿನಿಂದ ಮತ್ತೊಬ್ಬ ಶುಕ್ರಾಚಾರ್ಯರು ಬಂದರು. ಇದನ್ನು ಕಂಡು ದೈತ್ಯರಿಗೆ ಅಚ್ಚರಿ.

''ಇದು ಎಂತಹ ವಿರೋಧದ ವಾತಾವರಣ ! ಒಳಗೊಬ್ಬ ಶುಕ್ರಾಚಾರ್ಯ, ಹೊರಗೊಬ್ಬ ಶುಕ್ರಾಚಾರ್ಯ ! ಹೊರಗಿನಿಂದ ಬಂದ ಈ ಶುಕ್ರರು ಯಾರು ? ಅವನನ್ನು ಕಂಡು ಒಳಗೆ ಪೀಠದ ಮೇಲಿದ್ದ ನಮ್ಮ ಗುರುಗಳಾದ ಶುಕ್ರಾಚಾರ್ಯರು ಕೋಪಿಸಿಕೊಳ್ಳಲಿಕ್ಕಿಲ್ಲವೆ ? ವೇಷಧಾರಿಯಾದ ಈ ಹೊಸ ಶುಕ್ರನನ್ನು ಒಳ ಬಿಟ್ಟಿದ್ದಕ್ಕಾಗಿ ನಮಗೆ ಏನನ್ನುವರೋ ?''

ಹೀಗೆ ತಮ್ಮತಮ್ಮಲ್ಲಿ ದೈತ್ಯರು ಪಿಸುಗುಟ್ಟುತ್ತಿರುವಾಗಲೆ, ಹೊರಗಿನಿಂದ ನಿಜ ಶುಕ್ರಾಚಾರ್ಯರು ಒಳಗೆ ಬಂದರು. ತಮ್ಮ ವೇಷದಿಂದ ತಮ್ಮ ಆಚಾರ್ಯ ಪೀಠದಲ್ಲಿ ಮಂಡಿಸಿದ ಬೃಹಸ್ಪತಿಯನ್ನು ಕಂಡು ಕೋಪದಿಂದ ಗದರಿಸಿದರು. ''ನೀನು ಇಲ್ಲಿಗೇಕೆ ಬಂದೆ ? ನನ್ನ ಶಿಷ್ಯರನ್ನು ವಂಚನೆಗೈಯುತ್ತಲಿರುವೆ. ದೇವತೆಗಳಿಗೆ ಗುರುವಾದ ನಿನಗೆ ಇಂತಹ ಮೋಸಕಾರ್ಯವನ್ನು ಮಾಡಲು ನಿನಗೆ ಮನಸ್ಸು ಮುದುಡುವುದಿಲ್ಲ ! ಛೀ ! ಇದು ಅತ್ಯಂತ ಅನುಚಿತ. ಮೂರ್ಖರಾದ ಈ ಶಿಷ್ಯರು ಏನು ಬಲ್ಲರು ? ನಿನ್ನ ಮೋಸಗಳನ್ನು, ನಿಜವಾಗಿಯೂ ಇವರೆಲ್ಲರು ನೀನೇ ನಿಜವಾದ ಶುಕ್ರಾಚಾರ್ಯ ಎಂದು ನಂಬಿದ್ದಾರೆ. ಬ್ರಾಹ್ಮಣೋತ್ತಮನಾದ ನಿನಗೆ ಮತ್ತೊಬ್ಬರ ಶಿಷ್ಯರನ್ನು ಸೆಳೆದುಕೊಳ್ಳುವುದು ಸರ್ವಥಾ ಯೋಗ್ಯವಲ್ಲ. ನೀನು ನಿನ್ನ ದೇವಲೋಕಕ್ಕೆ ಹೋಗು ಅಲ್ಲಿದ್ದರೆ ನಿನಗೆ ಪುಣ್ಯವು ಬರುವುದು. ದೇವತೆಗಳಿಗೆ ಗುರುವಾಗಿ ಮಾರ್ಗದರ್ಶನ ನೀಡುವುದು ನಿನ್ನ ಧರ್ಮ. ಸುರ ಗುರುವೆ. ಹಿಂದೆ ನಿನ್ನ ಮಗನಾದ ಕಚನು ನನ್ನಲ್ಲಿ ಶಿಷ್ಯನಾಗಿ ವಿದ್ಯೆ ಕಲಿಯಲು ಬಂದಿದ್ದನು. ಆಗ, ಇಲ್ಲಿಯ ದೈತ್ಯರು ಅವನನ್ನು ಕೊಂದುಹಾಕಿದರು. ಅವರ ತಂದೆಯಾದ ನೀನು ಮತ್ತೇಕೆ ಬಂದು ಸಿಕ್ಕಿರುವೆ ? ನಿನ್ನ ಮಗನ ಗತಿಯೇ ನಿನಗೂ ಬರಬಾರದೆಂದಿದ್ದರೆ ನೀನು ಇಲ್ಲಿಂದ ಈಗಲೇ ಹೊರಟು ಹೋಗು. ಇಲ್ಲದಿದ್ದರೆ, ನಿನ್ನ ಗತಿ ಯೋಗ್ಯವಾಗಲಿಕ್ಕಿಲ್ಲ.''

ನಿಜ ಶುಕ್ರರ ಈ ನುಡಿಯನ್ನು ಕೇಳಿ ವೇಷಧಾರಿ ಶುಕ್ರನು ಗಹಗಹಿಸಿ ನಕ್ಕನು. ಮತ್ತು ಶುಕ್ರಾಚಾರ್ಯರನ್ನು ಆಕ್ಷೇಪಿಸಿ ನುಡಿದನು. ''ಈ ಜಗತ್ತಿನಲ್ಲಿ ಪರರ ಸೊತ್ತು ಅಪಹರಿಸುವ ಕಳ್ಳರು ಬೇಕಾದಷ್ಟು ಜನ ಇರುವರು. ಆದರೆ ಹೀಗೆ ನನ್ನಂತೆ ದೇಹದ

ರೂಪವನ್ನು ಕಳವುಮಾಡುವ ಕಳ್ಳರನ್ನು ಮಾತ್ರ ನಾನು ನಿನ್ನ ಹೊರತು ಈವರೆಗೂ ಕಂಡಿಲ್ಲ. ಹಿಂದೆ ಇಂದ್ರನಿಗೆ ವೃತ್ರಾಸುರನನ್ನು ವಧೆಗೈದದ್ದಕ್ಕೆ ಬ್ರಹ್ಮಹತ್ಯಾ ಪಾಪವು ಬಂದಿತು. ಈ ಪಾಪವನನು ನಾಸ್ತಿಕಮತವನ್ನು ಮುಂದೆ ಮಾಡಿ ನೀನು ತಿರಸ್ಕರಿಸಿದೆ. ನೀನು ನಿಜವಾಗಿಯೂ ಶುಕ್ರಾಚಾರ್ಯನಲ್ಲ. ನಿಜವಾದ ಶುಕ್ರರು ನಾನೇ. ಈಗ ಸಾವಿರಾರು ವರ್ಷಗಳಿಂದ ಈ ಗುರುಪೀಠದಲ್ಲಿ ನಿಂತುಕೊಂಡು ಈ ನನ್ನ ಶಿಷ್ಯರೆಲ್ಲರಿಗೂ ನಾನು ಮಾರ್ಗದರ್ಶನ ಮಾಡುತ್ತಿದ್ದೇನೆ. ಬೇಕಾದರೆ ಇವರನ್ನು ಕೇಳಿ ನೋಡು.

ದೈತ್ಯರೆ, ನಾನು ಹೇಳಿದ ಮಾತು ಸರಿಯಷ್ಟೇ ! ನಾನು ಇಲ್ಲಿಯೇ ಇದ್ದು ಕೊಂಡು ಎಷ್ಟೋ ವರ್ಷಗಳಿಂದ ನಿಮಗೆ ಗುರೂಪದೇಶವನ್ನು ನಾನು ಮಾಡುತ್ತಲಿಲ್ಲವೆ ? ಈಗ ಇತ್ತ ನೋಡಿರಿ. ನನ್ನ ವೇಷವನ್ನು ಧರಿಸಿಕೊಂಡು, ತಾನೇ ಶುಕ್ರಾಚಾರ್ಯ ಎಂದು ಹೇಳಿಕೊಳ್ಳುವ ಮಾಯಾವಿ ಒಬ್ಬನು ಬಂದಿದ್ದಾನೆ. ಇದೆಲ್ಲವೂ ನಿಮ್ಮನ್ನೆಲ ವಂಚಿಸಲು ಸಾಕ್ಷಾತ್ ವಿಷ್ಣುವು ಹೂಡಿದ ಗತ್ತು. ಹಿಂದೆ ವಟು ವಾಮನನಾಗಿ ನಿಮ್ಮನ್ನೆಲ್ಲ ಮೋಸಗೊಳಿಸಿದಂತೆ, ಶುಕ್ರಾಚಾರ್ಯರ ನಕಲಿವೇಷದಿಂದ ಅದೇ ವಿಷ್ಣುವು ನಿಮ್ಮನ್ನು ಮೋಸಗೊಳಿಲು ಈ ರೂಪದಿಂದ ಬಂದಿದ್ದಾನೆ. ಆದುದರಿಂದ ಈಗಲೇ ಇವನನ್ನು ಹಿಡಿಯಿರಿ. ಇವನ ಕೈಕಾಲುಗಳಿಗೆ ಬೇಡಿಯನ್ನು ಜಡಿಯಿರಿ. ಕೈಕಾಲುಗಳಿಗೆ ಕೋಳಗಳನ್ನು ತೊಡಿಸಿ ಇವನನ್ನು ಸಮುದ್ರದಲ್ಲಿ ಎಸೆದು ಬಿಡಿರಿ.''

ಬೃಹಸ್ಪತಿಯ ಈ ವಂಚನಾವೈಖರಿ ಕಂಡು ಗಾಬರಿಯಾದ ನಿಜ ಶುಕ್ರರು ಕಿರುಚಿಕೊಂಡರು. ''ದಾನವರ ದೊರೆಯೆ, ನೀನು ನಿಜವಾಗಿಯೂ ಮೋಸಗೊಂಡಿರುವೆ. ನಿಜವಾದ ಶುಕ್ರಾಚಾರ್ಯನು ನಾನಯ್ಯಾ ನಾನು. ಕಣ್ತೆರೆದು ಚೆನ್ನಾಗಿ ನನ್ನೊಮ್ಮೆ ನೋಡಿರಿ. ಈದುರಾತ್ಮನು ನಿಮ್ಮನ್ನೆಲ್ಲ ವಂಚಿಸಿದ್ದಾನೆ. ವಂಶಪರಂಪರೆಯಿಂದ ನಿಮ್ಮ ಪುರೋಹಿತನಾದ ನನ್ನನ್ನು ಏಕೆ ತೊರೆದಿರಿ ? ಬೇರೊಬ್ಬ ಪುರೋಹಿತನನ್ನು ಏಕೆ ವರಿಸಿದಿರಿ ?

ರಾಜನೆ, ನನ್ನ ಮಾತನ್ನು ನಂಬು. ಇವನು ಅಂಗೀರಸಮುನಿಯ ಮಗನಾದ ಬೃಹಸ್ಪತಿ. ದೇವತೆಗಳ ಗುರು, ಇದರಲ್ಲಿ ಸಂದೇಹವೇ ಇಲ್ಲ. ದೇವತೆಗಳ ಹಿತಕ್ಕಾಗಿ ಈ ವೇಷದಿಂದ ಬಂದಿದ್ದಾನೆ. ಸಾಧುಸ್ವಭಾವದ ನೀನು ಇವನು ಧರಿಸಿದ ವೇಷದಿಂದಲೇ ಮೋಸ ಹೋಗಿರುವೆ. ಇನ್ನಾದರೂ ಇವನನ್ನು ಬಿಟ್ಟುಬಿಡು. ನಿನ್ನ ಶಿಷ್ಯರಾದ ನಿಮ್ಮೆಲ್ಲರಿಗೂ ದೇವತೆಗಳಿಂದ ಗಂಡಾಂತರ ಒದಗಿದ್ದಿತು. ಅದನ್ನು ಪರಿಹರಿಸಲಿಕ್ಕಾಗಿ ನಾನು ತಪಸ್ಸಿಗೆ ಹೋದೆನು. ನೀರಿನಲ್ಲಿ ನಿಂತು ತಪಸ್ಸನ್ನುಮಾಡಿದೆನು. ಆಗ ಮಹಾದೇವರು ಆ ನೀರನ್ನೆಲ್ಲ ಪಾನಮಾಡಿದನು. ಆ ನೀರಿನೊಂದಿಗೆ ಮಹಾದೇವರ ಹೊಟ್ಟೆಯಲ್ಲಿ ನಾನು ಹೋದೆನು. ಅನಂತರ ಆ ಶಿವನ ಕುಕ್ಷಿಯಲ್ಲಿ ಕುಳಿತೇ ಒಂದು ನೂರು ವರ್ಷ ತಪಸ್ಸು ಮಾಡಿದನು. ಆ ಬಳಿಕ 'ಶುಕ್ರನೇ ಹೊರಗೆ ಬಾ' ಎಂದು ಶಂಕರನು ನನ್ನನ್ನು ಹೊರಗೆ ಕರೆತಂದು, ತನ್ನ ಶಿಷ್ಯ ಗಣದಲ್ಲಿ ಸೇರ್ಪಡಿಸಿಕೊಂಡನು ಮತ್ತು ಅಪೇಕ್ಷಿತ ವರಕೇಳು ಎಂದು ಹೇಳಿದನು. ಆಗ ನಾನು ಮನಸ್ಸಿನಲ್ಲಿ ಮಾಡಿದ್ದೆಲ್ಲವೂ ಕೈಗೂಡಬೇಕು ಬಯಸಿದ್ದೆಲ್ಲವೂ ಈಡೇರಬೇಕು. ಶಂಕರನೆ ನಿನ್ನ ಅನುಗ್ರಹದಿಂದ ನನ್ನ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗಬೇಕು ಎಂದು ಕೇಳಿಕೊಂಡೆ. ಅದಕ್ಕೆ ''ತಥಾಸ್ತು'' ಎಂದು ಹೇಳಿದ ಆ ಶಿವ.

ಹೀಗೆ ಮೊದಲು ಒಂದು ಸಾವಿರ ವರ್ಷ ಧೂಮ್ರವ್ರತ ಮತ್ತೆ ನೂರು ವರ್ಷ

ಜಲಸಮಾಧಿ ವ್ರತವನ್ನು, ಶಿವನ ಉದರದಲ್ಲಿ ಉಗ್ರ ಉಪಸ್ಸನ್ನು ಆಚರಿಸಿ ಮಹಾದೇವರಿಂದ ದಿವ್ಯ ವರಗಳನ್ನು ಪಡೆದುಕೊಂಡು ಆ ವರಗಳ ಮಹಿಮೆಯಿಂದ ನಿಮ್ಮ ಎಲ್ಲ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡಬೇಕೆಂದು ನಾನು ಇಲ್ಲಿಗೆ ಬಂದೆ. ನಾನೇನು ಬರುವದು ಸಾಕ್ಷಾತ್ ಆ ಪರಶಿವನೇ ನಿಮ್ಮ ಬಳಿಗೆ ಕಳಿಸಿದ್ದಾನೆ.

ಆದರೆ ನಾನು ಇಲ್ಲಿಗೆ ಬರುವಷ್ಟರಲ್ಲಿ ನೀವು ನಿಮ್ಮ ವೈರಿಕುಲಕ್ಕೆ ಗುರುವಾದ ಬೃಹಸ್ಪತಿಯನ್ನೇ ಗುರುವನ್ನಾಗಿ ಮಾಡಿಕೊಂಡಿದ್ದೀರಿ. ನಾನೇನು ಮಾಡಲಿ, ದೈತ್ಯ ರಾಜನೇ ನಾನು ನುಡಿದದ್ದೆಲ್ಲ ನಿಜವೆಂದು ನಂಬು. ನನ್ನ ಈ ನಿಶ್ಚಯದ ನುಡಿಯನ್ನು ಕೇಳು. ಈ ವೇಷಧಾರಿ ಶುಕ್ರನನ್ನು ಇಲ್ಲಿಂದ ಹೊರಗೆ ಅಟ್ಟು.''

ನಿಜ ಶುಕ್ರನ ಈ ಕಳವಳಿಯ ಮಾತುಗಳನ್ನು ಕೇಳಿ, ದೈತ್ಯಕುಲ ಗುರು ಸ್ಥಾನದಲ್ಲಿ ಕುಳಿತ ವೇಷಧಾರಿ ಬೃಹಸ್ಪತಿಯು ಗಂಭೀರನಾಗಿ ನುಡಿದನು. ''ರಾಜನೆ, ನನ್ನ ವೇಷದಿಂದ ನಿಮ್ಮನ್ನೆಲ್ಲ ವಂಚಿಸಲು ಬಂದ ಇವನಾವನೆಂಬುದು ನನಗಂತೂ ಗುರುತಿಲ್ಲ. ಇವನು ದೇವನೋ ಅಥವಾ ದಾನವನೋ ಎಂಬುದು ಯಾರಿಗೆ ಗೊತ್ತು ! ಆದರೆ ನಿಮ್ಮನ್ನೆಲ್ಲ ಮೋಸಮಾಡಲು ಬಂದಿರುವದು ನಿಶ್ಚಿತ.'' ನಕಲಿಗುರುವಿನ ಈ ಮಾತನ್ನು ಕೇಳಿ, ದೈತ್ಯರೆಲ್ಲರೂ ''ಸರಿ, ಸರಿ ಗುರುಗಳೆ, ನೀವು ಹೇಳಿದ್ದೆ ನಿಜ. ಇಷ್ಟು ದಿನ ನಮ್ಮ ಗುರು ಸ್ಥಾನದಲ್ಲಿದ್ದ ಈ ಹಿಂದಿನ ಗುರುಗಳೇ ನಮಗೆ ಇರಲಿ. ಇದೀಗ ಹೊಸದಾಗಿ ಬಂದವನು ಯಾರೇ ಆಗಲಿ ನಮಗೆ ಬೇಕಾಗಿಲ್ಲ. ನಮ್ಮ ಹಳೆಯ ಶುಕ್ರಾಚಾರ್ಯ ನಮ್ಮ ಗುರುಗಳಾಗಿರಲಿ. ಇವರು ಬಂದ ದಾರಿಯಿಂದ ತಿರುಗಿ ಹೋಗಲಿ.''

ದೈತ್ಯರ ಈ ನಿರ್ಣಯದ ನುಡಿಯನ್ನು ಕೇಳಿ, ನಿಜವಾದ ಶುಕ್ರಾಚಾರ್ಯರಿಗೆ ಕೋಪ ಬಂದು, ಅಲ್ಲಿ ನೆರೆದ ದೈತ್ಯರಿಗೆ ಶಾಪವಿತ್ತರು. ''ನೀವೆಲ್ಲರೂ ನಿಜವಾದ ನಿಮ್ಮ ಗುರುವಾದ ನನ್ನನ್ನು ಬಿಟ್ಟುಬಿಟ್ಟಿದ್ದೀರಿ. ಆದುದರಿಂದ ನಿಮ್ಮ ಐಶ್ವರ್ಯವೆಲ್ಲವೂ ಹಾಳಾಗಿ ಹೋಗಲಿ, ನೀವು ಹಾಳಾಗಿರಿ. ಕೆಲವೇ ದಿನಗಳಲ್ಲಿ ನಿಮಗೆ ಭಾರೀ ವಿಪತ್ತು ಬರುವದು. ಆದುದರಿಂದ ನೀವು ದುಃಖವನ್ನು ಅನುಭವಿಸುವಿರಿ. ನಿಮಗೆ ಮುಂದೆ ಬರಬಹುದಾದ ಭಯಂಕರ ದುಃಖ ಜೀವನವು ನನ್ನ ಕಣ್ಣಿಗೆ ಕಟ್ಟಿದಂತಿದೆ.'' ಹೀಗೆ ಶಾಪಕೊಟ್ಟು ಶುಕ್ರಾಚಾರ್ಯರು ಅಲ್ಲಿಂದ ಹೊರಟು ತಪೋವನಕ್ಕೆ ಹೋಗಿಬಿಟ್ಟರು.

ಶುಕ್ರರು ಅವಮಾನಿತರಾಗಿ ಅಲ್ಲಿಂದ ಹೊರಟು ಹೋದ ಬಳಿಕ ಬೃಹಸ್ಪತ್ಯಾ ಚಾರ್ಯರೇ ಶುಕ್ರವೇಶದಿಂದ ದಾನವರನ್ನು ಕಾಪಾಡುತ್ತ ಕೆಲವುಕಾಲ ಆ ದೈತ್ಯರ ರಾಜಧಾನಿಯಲ್ಲೇ ನೆಲೆಸಿದರು. ಹೀಗೆ ಬಹುಕಾಲ ಕಳೆದ ಬಳಿಕ ಒಂದು ದಿನ ಎಲ್ಲ ದಾನವರೂ ತಮ್ಮ ಗುರುಗಳ ಬಳಿಗೆ ಬಂದು ಕೇಳಿದರು. ''ಪೂಜ್ಯರೆ, ಈ ಸಂಸಾರವು ಅಸಾರ. ಇದರಲ್ಲಿ ಸ್ವಾರಸ್ಯವಿಲ್ಲ. ಇಲ್ಲಿಯ ಸುಖ ಕ್ಷಣಿಕ. ಶಾಶ್ವತ ಸುಖ ದೊರೆಯುವದು ಮೋಕ್ಷದಲ್ಲಿ ಮಾತ್ರ. ಆ ಮೋಕ್ಷವು ಜ್ಞಾನದಿಂದಲೇ ಆಗುವದು. ಅಂತಹ ದಿವ್ಯ ಜ್ಞಾನವಾಗಬೇಕಾದರೆ ಗುರುಗಳ ಪ್ರಸಾದದಿಂದಲೇ ಆಗುವದು. ಆದುದರಿಂದ ತಾವು ನಮಗೆ ಒಳ್ಳೇ ಜ್ಞಾನೋಪದೇಶಮಾಡಿರಿ.''

ಶಿಷ್ಯರ ಈ ಪ್ರಶ್ನೆಯನ್ನು ಕೇಳಿ, ಶುಕ್ರರೂಪಿಯಾದ ಬೃಹಸ್ಪತ್ಯಾಚಾರ್ಯರು ನುಡಿದರು. ''ಶಿಷ್ಯರೆ, ನನಗೂ ಮೊದಲು ನಿಮ್ಮಂತೆಯೇ ವಿಚಾರವಿದ್ದಿತು. ನೀವು

ತಿಳಿದಂತೆಯೇ ನಾನೂ ತಿಳಿದಿದ್ದೆ. ಆದರೆ ಈಗ ನಿಜವಾದ ತಿಳುವಳಿಕೆ ಬಂದಿದೆ. ನೀವು ಈಗ ಶುಚಿರ್ಭೂತರಾಗಿ ಕೇಳಿರಿ.

ನಾನು ಈಗ ಉಪದೇಶ ಕೊಡುತ್ತೇನೆ. ವೈದಿಕಧರ್ಮ ಎಂದು ಹೇಳುವರಲ್ಲವೆ ? ಋಗ್ವೇದ, ಯಜುರ್ವೇದ ಸಾಮವೇದಗಳೆಂಬ ಮೂರು ವೇದಗಳಲ್ಲಿ ಅಗ್ನಿಯ ಪ್ರಸಾದದಿಂದ ಮೋಕ್ಷ ದೊರೆಯುವದು ಎಂದು ಹೇಳಿ ಯಜ್ಞದ ಹೆಸರಿನಿಂದ ಪ್ರಾಣಿಗಳ ಹಿಂಸೆಮಾಡುವರು. ಇದರಿಂದ ಆ ಪ್ರಾಣಿಗಳಿಗೆ ದುಃಖವಾಗುವುದಲ್ಲವೆ ? ನಮಗೆ ಮುಂದೆ ಸುಖವಾಗುವುದೆಂಬ ಭ್ರಾಂತಿಯಿಂದ ಈಗ ಬದುಕಿದ್ದ ಪ್ರಾಣಿಗಳನ್ನು ಬಲಿಕೊಡುವುದು ಸ್ವಾರ್ಥವಲ್ಲವೆ ? ಯಜ್ಞ, ಶ್ರಾದ್ಧ, ಮುಂತಾದವುಗಳೆಲ್ಲ ಸ್ವಾರ್ಥಿಗಳಾದ ಕ್ಷುಲ್ಲಕ ಧರ್ಮಗಳಾಗಿರುತ್ತವೆ. ವಿಷ್ಣುಧರ್ಮ, ಶಿವಧರ್ಮ ಎಂಬ ಹೆಸರಿನಿಂದ ಮಡದಿಯರೊಂದಿಗೆ ಒಡಗೂಡಿ ಆಚರಿಸುವ ಧರ್ಮಗಳ ಅಧರ್ಮ ಅಥವಾ ಕುಧರ್ಮ, ಕಾಮವಾಸನೆಯ ಸಂಕೇತರಾದ ಹೆಂಗಸರೊಡನೆ ಕೂಡಿ ಮಾಡಿದ ಕಾರ್ಯಧರ್ಮ ಹೇಗಾಗುವದು?

ಮೇಲಾಗಿ ಈ ವೈದಿಕರು ಮಡದಿಯರೊಡನೆ ಕೂಡಿಮಾಡುವ ಕಾರ್ಯಗಳು ಹಿಂಸಾರೂಪವಾಗಿರುತ್ತವೆ. ಕುರಿಯನ್ನೋ, ಕುದುರೆಯನ್ನೋ ಬಲಿನೀಡಿ ನೆರವೇರಿಸಿದ ಹಿಂಸಾತ್ಮಕವಾದ ಯಜ್ಞಾದಿ ಕರ್ಮಗಳು ಪುಣ್ಯವನ್ನು ಹೇಗೆ ಕೊಡಬಲ್ಲವು ? ಪ್ರೇಮ ಪರವಶನಾಗಿ ತನ್ನ ಪ್ರೇಯಸಿಯ ಅರ್ಧಶರೀರವನ್ನೇ ತನ್ನದನ್ನಾಗಿರಿಸಿ, ಅರ್ಧನಾರೀಶ್ವನಾದ ರುದ್ರನು ಮೋಕ್ಷವನ್ನು ಕೊಡುವ ಬಗೆಯೆಂತು ?

ಅವನ ಶುಚಿತ್ವವಂತೂ ಕೇಳಲೇಬಾರದು. ಅವನ ಮೈತುಂಬ ಬೂದಿ, ಕೊರಳಲ್ಲಿ ರುಂಡಗಳ ಸರ, ಕೈಯಲ್ಲಿ ತಲೆ ಬುರುಡೆ, ನೆಲೆಸಿದ್ದು ಸುಡಗಾಡು, ಪರಿವಾರ ಭೂತ ಪ್ರೇತಗಳು. ಇಂತಹ ರುದ್ರನು ಹೊಂದುವ ಮೋಕ್ಷವು ಅದೆಂತಹ ಮೋಕ್ಷ ?

ದೈತ್ಯರೆ, ವಾಸ್ತವಿಕವಾಗಿ ವಿಚಾರಮಾಡಿದರೆ ಸ್ವರ್ಗ ಮೋಕ್ಷ ಎನ್ನುದೆಲ್ಲವೂ ಸುಳ್ಳು. ಸುಮ್ಮನೆ ಜನರು ಅವುಗಳ ಆಸೆಯಿಂದ ಬಳಲಿ ತೊಳಲುತ್ತಾರೆ. ಇದರಂತೆ ದುಷ್ಟ ಶಿಕ್ಷಣ ನೆಪದಿಂದ ಯಾವಾಗಲೂ ದೈತ್ಯರ ಹಿಂಸೆಯನ್ನು ಮಾಡುತ್ತಲಿರುವ ವಿಷ್ಣುವು ಮೋಕ್ಷವನ್ನು ಸ್ವಯಂ ತಾನಾದರೂ ಹೇಗೆ ಪಡೆಯುತ್ತಾನೆ. ಅದುದರಿಂದ ಇದೆಲ್ಲವೂ ವೇದೋಪಜೀವಿಗಳು ಸೃಷ್ಟಿಸುವ ಒಂದು ಸುಳ್ಳಿನ ಕಂತೆ. ದೇವರ್ಷಿಗಳು, ಮಹರ್ಷಿಗಳು ಮತ್ತು ಉಳಿದ ವೇದ ಮತಾವಲಂಬಿಗಳಾದ ವೈದಿಕರು ನಿಜವಾಗಿ ಬಹಳೇ ಕ್ರೂರರು, ಹಿಂಸಕರು, ಮಹಾಪಾಪಿಗಳು. ಯಜ್ಞದ ನೆಪಮಾಡಿ ಪಶುಗಳನ್ನು ಕೊಂದು ಯಜ್ಞಶೇಷವೆಂದು ತಾವೂ ಆ ಮಾಂಸತಿನ್ನುತ್ತಾರೆ. ಈ ಬ್ರಾಹ್ಮಣರಿಗೆ ಪೂಜ್ಯರಾದ ದೇವತೆಗಳು ಕೂಡಾ ಶೆರೆ ಕುಡಿಯುತ್ತಾರೆ. ಮಾಂಸತಿನ್ನುತ್ತಾರೆ. ಈ ಬ್ರಾಹ್ಮಣರದೂ ಅದೇ ಹಣೆಯಬರಹ. ಇಂತಹ ಹಿಂಸೆ, ಮಾಂಸಾಹಾರ, ಮದ್ಯಪಾನಗಳು ಧರ್ಮವಾಗಬಲ್ಲವೆ ? ಇಂಥ ಧರ್ಮದಿಂದ ಮೋಕ್ಷವು ಎಂತು ಲಭ್ಯವಾದೀತು ? ವೇದಗಳಲ್ಲಿ ಹೇಳಿದ ಯಜ್ಞಗಳಿಂದಾಗಲಿ, ಸ್ಮೃತಿಗಳಲ್ಲಿ ಹೇಳಿದ ಶ್ರಾದ್ಧಾದಿಗಳಿಂದಾಗಲಿ ಯಾವ ಪುಣ್ಯವೂ ಇಲ್ಲ ? ಯಜ್ಞಸ್ತಂಭ ಕಡಿದು ನಿಲ್ಲಿಸಿ ಅದಕ್ಕೆ ಪಶುಗಳನ್ನು ಕಡಿದು, ಕೊಂದು, ಅವುಗಳ ರಕ್ತದಿಂದ ಯಜ್ಞಮಂಟಪವನ್ನೆಲ್ಲ ಕೆಸರಿನಿಂದ ಕಲುಷಗೊಳಿಸಿ, ಸ್ವರ್ಗಕ್ಕೆ ಹೋಗುವದಾದರೆ ನರಕಕ್ಕೆ ಹೋಗುವುದು ಯಾವುದರಿಂದ ?

ಪ್ರಾಣಿಗಳ ರಕ್ತದ ಓಕುಳಿಯಾಡುವುದರಿಂದ ಲಭಿಸುವ ಸ್ವರ್ಗವು ನರಕಕ್ಕಿಂತ ಒಳ್ಳೆಯದು ಹೇಗಾಗುವುದು? ಇದರಂತೆ ಶ್ರಾದ್ಧದ ನೆಪಮಾಡಿ, ಸತ್ತವರ ಹೆಸರಿನಿಂದ ಇದ್ದವರಿಗೆ ಊಟಕ್ಕೆಹಾಕುವುದು ಎಂತಹ ಧರ್ಮ ? ಇಲ್ಲಿ ಇವರು ಊಟ ಮಾಡಿದರೆ ಅಲ್ಲಿ ಬೇರೊಬ್ಬನಿಗೆ ಹೊಟ್ಟೆ ತುಂಬವದೆಂತು? ಹಾಗೆ ತೃಪ್ತಿಯಾಗುವುದಾದರೆ ಪರ ಊರಿಗೆ ಪ್ರಯಾಣ ಮಾಡಿದವನ ಉದ್ದೇಶವಾಗಿ ಮನೆಯಲ್ಲಿ ಶ್ರಾದ್ಧಮಾಡಿ ಉಣಬಡಿಸಿದರೆ ಸಾಕು. ಅದರಿಂದಲೇ ದೂರ ಪ್ರಯಾಣಿಕರಿಗೆ ಹೊಟ್ಟೆ ತುಂಬ ಬೇಕಾಯಿತು. 'ಮಡಿಮಡಿ' ಎಂದು ಮುಗಿಲಿಗೆ ಹಾರುವ ಬ್ರಾಹ್ಮಣರು ಮಾಂಸಭಕ್ಷಣದಿಂದ ಪತಿತರಾಗಿ ಹೋಗಿದ್ದಾರೆ. ಮಾಂಸಭಕ್ಷಣ ಮಾಡಿದವರಿಗೆ ಎಂದೂ ಇಲ್ಲಿ ಪುಣ್ಯವಿಲ್ಲ. ಮುಂದೆ ಸ್ವರ್ಗ ಮೋಕ್ಷಾದಿಗಳಿಲ್ಲ. ಹುಟ್ಟಿದ ಎಲ್ಲ ಪ್ರಾಣಿಗಳಿಗೂ ತಮ್ಮ ದೇಹವು ಅತ್ಯಂತ ಇಷ್ಟವು. ಪ್ರೀತ್ಯಾಸ್ಪದವೂ ಆಗಿರುತ್ತದೆ. ತನ್ನ ಮಾಂಸದಂತೆ ಇರುವ ಬೇರೊಂದು ಪ್ರಾಣಿಯ ಮಾಂಸವನ್ನು ಯಜ್ಞದ ನೆಪಮಾಡಿ ತಿನ್ನುವ ಮನುಷ್ಯನು ಹುಟ್ಟುವನೋ ಮುಂದೆ ಅದನ್ನೇ ತನ್ನ ಭೋಗ ಸಾಧನವಾಗಿ ಉಪಯೋಗಿಸುವದು ಎಂತಹ ಪಶುತ್ವ! ದಾಂಪತ್ಯಧರ್ಮದಿಂದ ಪುಣ್ಯ ಬರುವದೆಂದು ವೇದ ಶಾಸ್ತ್ರಗಳು ತಿಳಿಸುತ್ತವೆ. ಸ್ತ್ರೀ ಪುರುಷರು ಸುಖದ ವಿಹಾರದಿಂದ ಪುಣ್ಯ ಬರುವುದೆ ! ಸ್ವರ್ಗ ಮೋಕ್ಷಗಳಿಗೆ ಕಾರಣವೇನು ? ಬೂದಿ ಬಳಿದು ಅಥವಾ ಮಣ್ಣಿನಿಂದ ಸವರಿ ಶುದ್ಧಿ ಆಯಿತೆಂದು ಹೇಳುತ್ತಾರೆ. ಸ್ವಯಂ ಅಶುದ್ಧವಾದ ಮಣ್ಣು ಬೂದಿಗಳಿಂದ ಶುದ್ಧಿ ಬರುವುದೆಂತು ? ಮಲಮೂತ್ರಗಳ ವಿಸರ್ಜನೆಮಾಡಿದ ಬಳಿಕ ಆಯಾಸ್ಥಾನಕ್ಕೆ ಮೃತ್ತಿಕಾಲೇಪನ ಮಾಡುವದರಿಂದ ಶುದ್ಧಿಯಾಗುವದೆಂತು ? ಹಾಗಿದ್ದರೆ ಊಟವಾದ ಬಳಿಕ ಬಾಯಲ್ಲಿ ಮಣ್ಣನ್ನೇಕೆ ಹಾಕಿಕೊಳ್ಳಬಾರದು ? ಹುಲ್ಲು ನಾಲಿಗೆಗಳನ್ನು ಏಕೆ ಶುದ್ಧೀಕರಿಸಬಾರದು ? ಸ್ವಚ್ಛತೆಯ ಸಲುವಾಗಿ ಯಾವ ವಸ್ತುವಿನಿಂದ ಯಾವ ಇಂದ್ರಿಯವು ನಿರ್ಮಲವಾಗುವದೋ ಅದನ್ನು ಮಾನವರು ತಾವೇ ಮಾಡಿಕೊಳ್ಳುತ್ತಾರೆ. ಅದಕ್ಕಾಗಿ ವೇದ ಪುರಾಣಗಳ ಶಾಸನವೇಕೆ ?

ಪ್ರಾಚೀನ ಗ್ರಂಥಗಳಲ್ಲಿ ಬರುವ ದೇವತೆಗಳ ಹಾಗೂ ಋಷಿಗಳ ಚರಿತ್ರೆಗಳು ಅತ್ಯಂತ ಅನ್ಯಾಯ ಹಾಗೂ ಅವಮಾನಿತ ಕೃತ್ಯಗಳಿಂದ ಒಡಗೂಡಿದೆ. ಅದನ್ನು ಕೇಳಿದರೆ ಸಜ್ಜನರಿಗೆ ಜಿಗುಪ್ಸೆಉಂಟಾಗುತ್ತದೆ. ಬೃಹಸ್ಪತಿಯ ಮಡದಿಯಾದ ತಾರಾ ಎಂಬ ತರಳೆಯನ್ನು ಕಾಮಾಂಧನಾದ ಚಂದ್ರನು ಪ್ರೇಮಿಸಿ ಅಪಹರಿಸಿದನು. ಆ ಗುರುಭಾಮಿನಿಯು ಈ ಪರಪುರುಷನೊಂದಿಗೆ ಸಂತೋಷದಿಂದಲೆ ಕಾಮಕ್ರೀಡೆ ಆಡಿದಳು. ಆ ಚಂದ್ರನಿಂದ ಆ ಚೆಲುವೆಗೆ ಒಬ್ಬ ಮಗನೂ ಹುಟ್ಟಿದನು. ಅವನೇ ಬುಧ. ಹೀಗೆ ಪರಪುರುಷನನ್ನು ಪ್ರೇಮಿಸಿ ಅವನಿಂದ ಮಗುವನ್ನು ಹೆತ್ತುಬಂದ ವ್ಯಭಿಚಾರಿಣಿಯಾದ ಮಡದಿಯನ್ನು ಬೃಹಸ್ಪತಿಯು ಮತ್ತೆ ಸ್ವೀಕರಿಸಿದನು. ದೇವತೆಗಳಿಗೆಲ್ಲ ದೇವೇಂದ್ರನೇ ಅಧಿರಾಜನಲ್ಲವೆ ? ಅವನ ಕಥೆ ಕೇಳಿರಿ. ಗೌತಮ ಮುನಿಯ ಲಾವಣ್ಯವತಿ ಲಲನೆಯಾದ ಅಹಲ್ಯೆಯನ್ನು ಕಂಡಕೂಡಲೇ ಇಂದ್ರನ ಮನಸ್ಸು ಮಾರುಹೋಯಿತು. ಕಳ್ಳತನದಿಂದ ಆ ಮುನಿಯ ಎಲೆಮನೆಗೆ ನುಗ್ಗಿ ರಹಸ್ಯವಾಗಿ ಆ ಬ್ರಾಹ್ಮಣ ಭಾಮಿನಿಯೊಂದಿಗೆ ಕಾಮಕ್ರೀಡೆಯಾಡಿ ಬಂದನು. ಅಸುರನಾಥ ಹೀಗೆ ಸುಂದರ ಪುರುಷನೊಡನೆ ಸರಸಾಟಕ್ಕೆ ಇಳಿದ ತನ್ನ ಧರ್ಮಪತ್ನಿ ಅಹಲ್ಯೆಯನ್ನು ಗೌತಮ ಮುನಿಯು ಪುನಃ ಸ್ವೀಕರಿಸಿದನು. ಇವರೆಲ್ಲರೂ

ವೈದಿಕ ಪ್ರಪಂಚದಲ್ಲಿ ಇಷ್ಟೆಲ್ಲ ಅನ್ಯಾಯ ಅಧರ್ಮ ಅನಾಚಾರಗಳನ್ನು ಮಾಡಿಯೂ ಪೂಜ್ಯತೆ ಗೌರವಗಳನ್ನು ಪಡೆಯುತ್ತಲಿದ್ದಾರೆ. ಇದು ಎಂತಹ ಧರ್ಮವೋ ನೀವೇ ವಿಚಾರಿಸಿರಿ. ಹೀಗೆ ಹೇಳುತ್ತ ಹೋದರೆ ಪೌರಾಣಿಕ ಪ್ರಪಂಚದಲ್ಲಿ ವ್ಯಭಿಚಾರ, ಅನಾಚಾರ ಮುಂತಾದ ಅನೇಕ ದುರಾಚಾರಗಳು ಹೇರಳವಾಗಿ ನಮಗೆ ಕಂಡುಬರುತ್ತವೆ. ಇವರೆಲ್ಲರೂ ಧಾರ್ಮಿಕರೆಂದು ಮಾನ್ಯರಾಗಿದ್ದಾರೆ. ಇಂಥ ನೀತಿರಹಿತ, ನಿಯಮಶೂನ್ಯ, ವೃತ್ತಿಪ್ರವೃತ್ತಿಗಳು ವಾಸ್ತವಿಕ ಧರ್ಮವಾಗಬಲ್ಲವೇ ? ದಾನವ ಶ್ರೇಷ್ಠನೇ, ನೀನೇ ವಿಚಾರಿಸಿ ಹೇಳು ಅನಂತರ ನಾನು ಮತ್ತೆ ಹೇಳುತ್ತೇನೆ. ಶುಕ್ರಾಚಾರ್ಯರ ವೇಷದಲ್ಲಿ ಅವಿತುಕೊಂಡ - ಬೃಹಸ್ಪತಿ ಆಚಾರ್ಯನ ಈ ವಿಚಾರಧಾರೆ ದೈತ್ಯರಿಗೆ ಸರಿಯಾಗಿ ಹಿಡಿಸಿತು. ಯೋಗ್ಯವೆನಿಸಿತು. ಸಂಸಾರದಲ್ಲಿ ಅವರಿಗೆ ಜಿಗುಪ್ಸೆಯೂ ಮೂಡಿದ್ದಿತು. ಅದರಿಂದ ಪಾರಮಾರ್ಥಿಕವಾದ ಧರ್ಮದ ರಹಸ್ಯ ಅರಿತುಕೊಳ್ಳಬೇಕೆಂದು ಅವರ ಕುತೂಹಲ ಇಮ್ಮಡಿಸಿತು. ಅವರೆಲ್ಲರೂ ತವಕಗೊಂಡು ತಮ್ಮ ಗುರುವಿಗೆ ನುಡಿದರು.

**ದಾನವರು** - ಗುರುಗಳೆ, ನಮಗಂತೂ ಏನೂ ತಿಳಿಯದು. ನಾವು ಭಕ್ತಿಯಿಂದ ನಿಮ್ಮನ್ನೇ ಮೊರೆಹೊಕ್ಕಿದ್ದೇವೆ. ನೀವೇ ನಮಗೆ ದೀಕ್ಷೆಕೊಡಿರಿ. ನಿಮ್ಮ ಆಜ್ಞೆಯನ್ನು ನಾವು ಮೀರುವುದಿಲ್ಲ. ನಾವು ಇನ್ನು ಮುಂದೆ ಎಂದೂ ಮೋಹಗೊಳ್ಳದಂತೆ ಉಪದೇಶನೀಡಿರಿ. ಈ ಸಂಸಾರವು ದುಃಖಮಯ, ಇದರಲ್ಲಿ ಸಹಸ್ರ ಸಂತಾಪ ಚಿಂತೆಗಳು. ಈ ಬಾಳಿನ ಗೋಳನ್ನು ಕಂಡು, ಸಾಕಷ್ಟು ಉಂಡು, ನಮಗೆ ವೈರಾಗ್ಯ ಉಂಟಾಗಿದೆ. ನೀರಿನಲ್ಲಿ ಮುಳುಗಿದವರನ್ನು ಕೂದಲು ಹಿಡಿದು ಎತ್ತುವಂತೆ ಈ ಅಜ್ಞಾನಜಲದಲ್ಲಿ ಮುಳುಗಿ ಹೋದ ನಮ್ಮನ್ನು ನೀವೇ ಎತ್ತಬೇಕು. ನಾವು ಯಾವ ದೇವರಿಗೆ ಶರಣು ಹೋಗೋಣ ! ನಮ್ಮನ್ನು ರಕ್ಷಿಸುವ ದೈವವಾದರೂ ಯಾವುದು ? ಅದನ್ನು ತಿಳಿಸಿ ಕೊಡಿರಿ. ಹಾಗೂ ಯಾರ ಸ್ಮರಣೆ, ಧ್ಯಾನ, ಚಿಂತನ, ಉಪವಾಸ, ಪೂಜೆ, ಸೇವೆ ಮುಂತಾದವುಗಳನ್ನು ಮಾಡಿದರೆ ನಮಗೆ ಮೋಕ್ಷ ದೊರಕಬಹುದು. ಅದನ್ನು ದಯವಿಟ್ಟು ನಮಗೆ ಅರುಹಿರಿ. ನಮಗೆ ಸಂಸಾರ ಸಾಕಾಗಿದೆ. ಇನ್ನು ಮೇಲೆ ಸಾಂಸಾರಿಕ ಸುಖಕ್ಕಾಗಿ ನಾವು ಹೆಣಗಲಾರೆವು.''

ಶಿಷ್ಯರ ಈ ಪ್ರಾರ್ಥನೆ ಕೇಳಿ ಗುರು ಶುಕ್ರರು ಕಣ್ಣು ಮುಚ್ಚಿಕೊಂಡು ಕುಳಿತರು. ಅವರಿಗೆ ಏನು ಹೇಳಬೇಕು ತಿಳಿಯದಾಯಿತು. ದೇವಗುರುವಿನ ಈ ಮಾನಸಿಕ ಚಿಂತೆಯನ್ನು ತಿಳಿದು ಶ್ರೀಹರಿಯು ಮಹಾಮೋಹವನ್ನು ನಿರ್ಮಿಸಿ ದೈತ್ಯರ ಬಳಿಗೆ ಕಳಿಸಿಕೊಟ್ಟು, ಬಳಿಕ ಬೃಹಸ್ಪತಿಗೆ ತಿಳಿಸಿದನು. ''ಇದೀಗ ನಾನು ಕಳಿಸಿಕೊಟ್ಟ ಮಹಾಮೋಹನನು ಎಲ್ಲ ದೈತ್ಯರನ್ನು ಮೋಹಗೊಳಿಸುವನು. ನೀನು ಸಹಾಯಕನಾಗು, ವೇದಮಾರ್ಗದಿಂದ ಅವರೆಲ್ಲರೂ ದೂರ ಸರಿಯುವಂತೆ ಮಾಡುತ್ತಾನೆ ಈ ಮಹಾಮೋಹ.'' ಹೀಗೆ ಹೇಳಿ, ಶ್ರೀವಿಷ್ಣುವು ಬೃಹಸ್ಪತಿಯ ಚಿತ್ತಪಟಲದಿಂದ ದೂರನಾದನು. ಇತ್ತ ದೈತ್ಯರು ಬೃಹಸ್ಪತ್ಯಾಚಾರ್ಯರು ಯಾವ ಉತ್ತರವನ್ನೂ ಕೊಡದೆ ಕುಳಿತು ಕೊಂಡದ್ದನ್ನು ನೋಡಿ ಅವರೆಲ್ಲರೂ ತಪಸ್ಸಿಗೆ ತೊಡಗಿದರು. ಸಂಸಾರದ ಮಾಯಾಪಾಶಗಳನ್ನು ಹರಿದೊಗೆದು, ವಿರಕ್ತರಾಗಿ ಎಲ್ಲ ದೈತ್ಯರು ತಪಃಸ್ಸಮಾಧಿಯಲ್ಲಿ ಲೀನರಾದರು. ಈ ಸಂದರ್ಭದಲ್ಲಿ ಮಹಾಮೋಹನು ಅಲ್ಲಿಗೆ ಆಗಮಿಸಿದನು. ಅಲ್ಲಿಯೇ ಕುಳಿತ ಶುಕ್ರ ವೇಷಧಾರಿ ಬೃಹಸ್ಪತ್ಯಾಚಾರ್ಯರಿಗೆ ಹೇಳಿದನು. ''ಶುಕ್ರನೆ, ಇತ್ತ ಬಾ ನಾನು ನಿನ್ನ ಮೇಲೆ ಅನುಗ್ರಹ

ಮಾಡಬೇಕೆಂದು ಬಂದಿದ್ದೇನೆ. ನಿನ್ನ ಭಕ್ತಿಯಿಂದ ನಾನು ಸೆಳೆಯಲ್ಪಟ್ಟಿದ್ದೇನೆ ನೀನು, ನನ್ನ ಬಳಿಗೆ ಬಂದು ನಿಲ್ಲು'' ಹೀಗೆ ಗಂಭೀರವಾಗಿ ನುಡಿಯುತ್ತಿರುವ ಮಹಾಮೋಹವನ್ನು ಎಲ್ಲ ದೈತ್ಯರೂ ನೋಡಿದರು. ಅವನ ಮೈ ಮೇಲೆ ಗೇಣುಬಟ್ಟೆ ಇರಲಿಲ್ಲ ಬೋಳು ತಲೆ, ಬೆತ್ತಲೆ ಮೈ, ಕೈಯಲ್ಲಿ ನವಿಲುಗರಿಯ ಸೂಡು, ಮೋಹಕ ಮುಖಚರ್ಯೆ, ಇಂತಹ ಮಾಯಾಮೋಹನು ಆ ದೈತ್ಯರನ್ನು ಕುರಿತು ನುಡಿದನು : ''ದೈತ್ಯ ವೀರರೆ, ನೀವು ತಪಸ್ಸನ್ನು ಆಚರಿಸುತ್ತಿರುವಿರಲ್ಲವೆ ? ಇದರ ಉದ್ದೇಶವೇನು ? ನಿಮ್ಮ ಈ ತಪಸ್ಸಿಗೆ ಉದ್ದೇಶವು ಯಾವುದು ? ಐಹಿಕಫಲ ಸಿದ್ಧಿಯೋ...? ಪಾರಮಾರ್ಥಿಕ ಫಲಸಿದ್ಧಿಯೋ ?''

**ದೈತ್ಯರು :-** ಪರಲೋಕದಲ್ಲಿ ಸತ್ತ ಬಳಿಕ ಪುಣ್ಯ ಲಭಿಸಬೇಕು ಸುಖವಾಗಬೇಕು ಎಂಬ ಉದ್ದೇಶದಿಂದ ನಾವು ಈ ತಪಸ್ಸನ್ನು ಕೈಕೊಂಡಿದ್ದೇವೆ.

**ದಿಗಂಬರ :-** ನಿಮಗೆ ಪರಲೋಕದ ಸುಖ ಅಥವಾ ಮೋಕ್ಷವು, ಬೇಕಾಗಿದ್ದರೆ ನನ್ನ ಮಾತನ್ನು ಕೇಳಿರಿ ಮತ್ತು ಪಾಲಿಸಿರಿ. ಮುಖ್ಯವಾಗಿ ನೀವು ಮೋಕ್ಷಕ್ಕೆ ಅರ್ಹರಾಗಿದ್ದೀರಿ. ಮೋಕ್ಷದ ಬಾಗಿಲನ್ನಂತೂ ತೆರೆದೇ ಇಟ್ಟಿದೆ. ಆ ಮುಕ್ತಿಯು ಆಗುವುದು ಧರ್ಮದಿಂದಲೇ, ಮೋಕ್ಷ ಪಡೆಯಲು ಧರ್ಮದ ಹೊರತು ಬೇರೆ ಉಪಾಯವೇ ಇಲ್ಲ. ನೀವು ಇಲ್ಲೇ ಇದ್ದುಕೊಂಡು ಸ್ವರ್ಗವಾಗಲಿ, ಮೋಕ್ಷವನ್ನಾಗಲಿ ಹೊಂದಬಹುದು. ''ನೀವು ನನ್ನ ಮಾತನ್ನು ಸರಿಯಾಗಿ ಅರಿತುಕೊಂಡು ನಡೆಯಿರಿ. ಅದರಿಂದ ಈಗಲೂ ಮುಂದೂ ಶ್ರೇಯಸ್ಸು ನಿಶ್ಚಿತ.'' ಮಾಯಾಮೋಹನ ಈ ಮೋಹಕ ವಚನಗಳಿಗೆ ದೈತ್ಯರೆಲ್ಲರೂ ಮರುಳಾದರು. ಅವನ ಮಾತನ್ನೇ ನಿಜವೆಂದು ನಂಬಿ, ಅವರೆಲ್ಲರೂ ವೇದ ಧರ್ಮವನ್ನು ತ್ಯಜಿಸಿದರು. ಎಲ್ಲರೂ ವೇದಗಳನ್ನು ನಿಂದಿಸತೊಡಗಿದರು. ದೇವತೆಗಳ ನಿಂದೆಯಂತೂ ಸತತ ನಡೆಯಿತು. ಯಜ್ಞಯಾಗ, ಶ್ರಾದ್ಧಾದಿಗಳನ್ನು ಶಾಸ್ತ್ರೋಕ್ತ ಪೂಜೆ ಪುನಸ್ಕಾರಗಳನ್ನು ತ್ಯಾಗ ಮಾಡಿದರು. ಆಗ ಅವರಿಗೆಲ್ಲ ಆ ದಿಗಂಬರ ಸಾಧುವು ''ನೀವು ಈಗ ನಿಜವಾಗಿ ನನ್ನ ಧರ್ಮವನ್ನು ಹೊಂದಲು ಅರ್ಹರಾಗಿರುವಿರಿ'' ಎಂದು ಅನುಗ್ರಹಿಸಿದನು. ಅಂದಿನಿಂದ ಆ ದೈತ್ಯರೆಲ್ಲರೂ **ಅರ್ಹ** ಎಂಬ ಹೆಸರಿನಿಂದ ಪ್ರಸಿದ್ಧರಾದರು. ಅವರೆಲ್ಲರೂ ವೇದಮಾರ್ಗ ಬಿಟ್ಟು ಮಾಯಾಮೋಹನಿಂದ ಅರ್ಹತ ಧರ್ಮಕ್ಕೆ ಪರಿವರ್ತಿಸಲ್ಪಟ್ಟರು. ಆ ಧರ್ಮವನ್ನು ಅವರು ಒಬ್ಬರಿಗೊಬ್ಬರು ಉಪದೇಶಿಸುತ್ತ ಜಗತ್ತಿನ ತುಂಬೆಲ್ಲ ಪ್ರಸಾರಮಾಡದರು. ''ಇದೂ ಸರಿ ; ಅದೂ ಸರಿ'' ಹೀಗೂ ಆಗಬಹುದು; ಹಾಗೂ ಆಗಬಹುದು. ಧರ್ಮವೂ ಸರಿ; ಅಧರ್ಮವೂ ಸರಿ ಜಗತ್ತು ಸತ್ಯವೂ ಆಗಲಿ : ಅಸತ್ಯವೂ ಆಗಲಿ'' ಎಂದು ಮುಂತಾಗಿ ಸ್ಯಾದ್ವಾದವನ್ನು ತಮ್ಮ ಗುರುವಿನ ಉಪದೇಶದಂತೆ ಪರಸ್ಪರರು ಉಪದೇಶಿಸಿದರು. ''ನಮೋ ಅರ್ಹಂತಾಯ'' ಎಂದು ಪರಸ್ಪರರು ಭೇಟಿಯಾದಾಗ ನುಡಿದು ಪ್ರಪಂಚ ಅಸ್ಥಿರವೆಂದು ಸಂಪೂರ್ಣವಾಗಿ ವೇದಧರ್ಮವನ್ನು ಪರಿತ್ಯಾಗಮಾಡಿದರು. ಹೀಗೆ ಮತ್ತೆ ಮಾಯಾಮೋಹನನು ದಿಗಂಬರರೂಪದಿಂದ ಅಸಂಖ್ಯ ದೈತ್ಯರನ್ನು ವೇದಬಾಹಿರರನ್ನಾಗಿ ಬೇರೆ ಬೇರೆ ದೈತ್ಯ ಕುಲದವರಿರುವ ಕಡೆಗೆ ಹೋಗಿ ರಕ್ತಾಂಬರಧಾರಿಯಾಗಿ ಇನ್ನೊಂದು ಮೋಡಿರೀತಿಯಿಂದ ವೇದವಿರೋಧಿ ಧರ್ಮವನ್ನು ಉಪದೇಶಿಸಿದನು. ''ದೈತ್ಯ ದಾನವರೇ, ನಿಜವಾಗಿಯೂ ನಿಮಗೆ ಸ್ವರ್ಗ ಮೋಕ್ಷಗಳ ಅಪೇಕ್ಷೆ ಇದ್ದರೆ ಧರ್ಮದ ಹೆಸರಿನಿಂದ ಪ್ರಾಣಿ ಹಿಂಸೆಮಾತ್ರ ಮಾಡಬೇಡಿರಿ. ಹಿಂಸೆಯನ್ನು

ಭೋಗ ಮಾಡದ ಧರ್ಮವು ಯಾವದೇ ಇದ್ದರೂ ಅದು ತ್ಯಾಜವೇ ಸರಿ. ಬೆಂಕಿಯಲ್ಲಿ ಹಾಕಿದ ಹವಿಸ್ಸು ಸತ್ತ ಬಳಿಕ ಕೊಡುತ್ತದೆ ಎನ್ನುವದು ಪಂಡಿತರು ಒಪ್ಪುವ ಮಾತಲ್ಲ. ಯಜ್ಞದಲ್ಲಿ ಬಲಿಕೊಟ್ಟ ಪಶುವಿಗೆ ಸ್ವರ್ಗ ಪ್ರಾಪ್ತಿಯಾಗುವುದಾದರೆ ಯಜಮಾನನು ತನ್ನ ತಂದೆಯನ್ನೇ ಯಜ್ಞದಲ್ಲಿ ಏಕೆ ಬಲಿ ಕೊಡುವುದಿಲ್ಲ ? ಮಾಂಸತಿನ್ನುವ ಋತ್ವಿಜರಿಗಿಂತ ಹುಲ್ಲು ಹಸಿರು ದವಸಧಾನ್ಯ ಎಲೆ, ದಂಟು ಮುಂತಾದವುಗಳನ್ನು ತಿನ್ನುವ ಪಶುಗಳೇ ಶ್ರೇಷ್ಠವಲ್ಲವೇ ? ಶ್ರಾದ್ಧದಲ್ಲಿ ಒಬ್ಬರು ಉಂಡ ಊಟವು ಬೇರೊಬ್ಬರಿಗೆ ತೃಪ್ತಿ ನೀಡುವುದಾದರೆ ಪ್ರವಾಸಿಕರು ಬುತ್ತಿಯನ್ನು ಹೊತ್ತು ಒಯ್ಯುವ ಶ್ರಮಪಡಬೇಕಾಗಿಲ್ಲ. ಅನೇಕ ಯಜ್ಞಗಳನ್ನು ಮಾಡುವುದರಿಂದ ಇಂದ್ರ ಪದವಿ ಬರುವುದಾದರೆ ಅನೇಕ ಯಜ್ಞಸ್ತಂಭಗಳಿಗಾಗಿ ಬಳಸಲ್ಪಟ್ಟ ಬನ್ನಿ ಗಿಡಕ್ಕೆ ಏಕೆ ಇಂದ್ರ ಪದವಿ ಲಭಿಸಬಾರದು ? ವೇದಗಳು ಯಾವ ಆಪ್ತನಿಂದಲೂ ಉಚ್ಚರಿಸಲ್ಪಡದೆ ಅಪೌರುಷೇಯವಾದರೆ ಮುಗಿಲಿನಿಂದೇ ಉದುರಿಬಿದ್ದವೇ ? ಅಸುರರೆ, ನೀವೆಲ್ಲ ಇದನ್ನು ವಿಚಾರಿಸಿರಿ.

ನಾನೇನು ಹೇಳಲಿ, ಬೇರೆಯವರೇ ಹೇಳಲಿ. ಒಬ್ಬರು ಹೇಳಿದ್ದನ್ನು ನಂಬಕೂಡದು. ಯುಕ್ತಿಯುಕ್ತವಾಗದ ವಚನವನ್ನು ನಾವು ತಿರಸ್ಕರಿಸಬೇಕು. ಈ ಪ್ರಪಂಚ ಕ್ಷಣಿಕ, ವಿಜ್ಞಾನಮಯ ಎಂದು ತಿಳಿದುಕೊಳ್ಳಿರಿ. ಇದೆಲ್ಲವೂ ಭ್ರಾಂತಿ ಕಲ್ಪಿತ. ಈ ಜಗತ್ತಿಗೆ ಯಾವ ಆಧಾರವಿಲ್ಲ. ಶೂನ್ಯವಾದುದು. ರಾಗಾದಿದೋಷಗಳಿಂದ ಪೀಡಿತವಾಗಿ ಜೀವರಾಶಿಗಳು ಸಂಸಾರ ಸಂಕಟದಲ್ಲಿ ಸುತ್ತುತ್ತಲಿರುತ್ತವೆ'' ಎಂದು ಮುಂತಾಗಿ ಹೇಳಿ ವಿಷ್ಣುವಿನಿಂದ ಸ್ಪಷ್ಟನಾದ ಆದೇ ಮಾಯಾಮೋಹನನು ತನ್ನ ಮಧುರ ಮಾತುಗಳಿಂದ ಆ ಮಂದಮತಿಗಳನ್ನೆಲ್ಲ ವಂಚಿಸಿದನು. ದೈತ್ಯರನ್ನು ಮರುಳಗೊಳಿಸಿದನು. ಈ ದಿಗಂಬರು ಹಾಗೂ ರಕ್ತಾಂಬರ ಸಾಧುಗಳಿಬ್ಬರ ಮಾತುಗಳಿಂದ ಬಹುಶಃ ಎಲ್ಲ ದೈತ್ಯರೂ ಮುಕ್ತರಾಗಿ ಶಿಷ್ಯತ್ವವನ್ನು ಅಂಗೀಕರಿಸಿದರು.

ರಕ್ತಾಂಬರನ ಶಿಷ್ಯತ್ವ ಅಂಗೀಕರಿಸಿದ ದೈತ್ಯರು ತಮಗೆ ಈ ಹೊಸ ಧರ್ಮದ ದೀಕ್ಷೆಯನ್ನು ಕೊಡಲು ಕೇಳಿಕೊಂಡರು. ಆಗ ಕೆಂಪುಕಾವಿಯ ಶಾಲೆಯನ್ನು ತೊಟ್ಟ ಮಾಯಾಮೋಹನನು ಆ ಸುರರಿಗೆ ಹೇಳಿದನು. ''ಶಿಷ್ಯರೆ, ನಿಮ್ಮ ಕುಲಗುರುವಾಗಿ ಇಲ್ಲಿ ಕುಳಿತುಕೊಂಡ ಈ ಶುಕ್ರಾಚಾರ್ಯರು ನನಗೆ ಅತ್ಯಂತ ಆತ್ಮೀಯರು. ಇವರು ನನ್ನ ಅಪ್ಪಣೆಯಂತೆ ನಿಮಗೆ ಹೊಸಧರ್ಮ ದೀಕ್ಷೆಯನ್ನು ಕೊಡುವರು.'' ಎಂದು ಹೇಳಿ ಅಲ್ಲಿಯೇ ಕುಳಿತ ಶುಕ್ರವೇಷದ ಬೃಹಸ್ಪತ್ಯಾಚಾರ್ಯರಿಗೆ ''ಬ್ರಾಹ್ಮಣೋತ್ತಮನೆ ನನ್ನ ಮಕ್ಕಳಂತಿರುವ ಈ ದೈತ್ಯರಿಗೆಲ್ಲ ನೀನೇ ದೀಕ್ಷೆಕೊಡು'' ಎಂದು ಹೇಳಿದನು. ಹೀಗೆ ದೈತ್ಯರಿಗೂ ಬೃಹಸ್ಪತ್ಯಾಚಾರ್ಯರಿಗೂ ಆಜ್ಞೆಯನ್ನಿತ್ತು ಮಾಯಾಮೋಹನನು ಅಲ್ಲಿಂದ ತನ್ನ ಮನಸ್ಸಿಗೆ ಬಂದ ಕಡೆಗೆ ಹೊರಟು ಹೋದನು. ಅನಂತರ ಆ ದೈತ್ಯರೆಲ್ಲರೂ ಶುಕ್ರರೂಪಿ ಬೃಹಸ್ಪತಿಗೆ ನಮಸ್ಕರಿಸಿ ''ಗುರುಗಳೇ, ಸಂಸಾರ ಬಂಧನದಿಂದ ಬಿಡುಗಡೆಮಾಡುವ ದೀಕ್ಷೆಕೊಡರಿ'' ಎಂದು ಕೇಳಿಕೊಂಡರು. ಅವರ ಪ್ರಾರ್ಥನೆ ಕೇಳಿ ಬೃಹಸ್ಪತ್ಯಾ ಚಾರ್ಯರು ಹೇಳಿದರು -

''ದೈತ್ಯರೆ, ನಿಮಗೆಲ್ಲ ನನ್ನನಿಂದ ದೀಕ್ಷೆಬೇಕಾಗಿದ್ದರೆ ನರ್ಮದಾನದಿಯ ತೀರಕ್ಕೆ ನಡೆಯಿರಿ. ಮೈಮೇಲಿನ ಬಟ್ಟೆತೆಗೆಯಿರಿ. ಬೆತ್ತಲೆಮೈಯಿಂದ ನನ್ನ ಹಿಂದೆ ಬನ್ನಿರಿ.

ನಿಮ್ಮೆಲ್ಲರಿಗೂ ನಾನು ದೀಕ್ಷೆ ಕೊಡುತ್ತೇನೆ.'' ಹೀಗೆ ಬೃಹಸ್ಪತ್ಯಾಚಾರ್ಯರು ಆ ಎಲ್ಲ ದೈತ್ಯರನ್ನು ದಿಗಂಬರರನ್ನಾಗಿಮಾಡಿ ಅವರ ಕೈಯಲ್ಲಿ ನವಿಲುಗರಿಯ ಧ್ವಜವನ್ನು ಕೊಟ್ಟರು. ಗುಲಗಂಜಿಯ ಸರಮಾಡಿ ಕೊರಳಲ್ಲಿ ಹಾಕಿಕೊಳ್ಳಲು ಹೇಳಿದರು. ಅವರೆಲ್ಲರ ಕೂದಲುಕೀಳಿಸಿ. ಲುಂಚನವಿಧಿಯಿಂದ ಮುಂಡನಮಾಡಿ ''ಇದು ಮಹಾ ಧರ್ಮಸಾಧನ. ಕುಬೇರನು ಹೀಗೆ ತಲೆಯ ಕೂದಲು ಕೀಳಿಸಿ ಕೊಂಡದ್ದರಿಂದಲೇ ಐಶ್ವರ್ಯದ ಅಧಿಪತಿಯಾಗಿ ಪರಮಸಿದ್ಧಿ ಪಡೆದುಕೊಂಡನು. ಹೀಗೆ ಕೇಶಲುಂಭನದಿಂದ ಮುನಿತ್ವವು ಪ್ರಾಪ್ತವಾಗುವದು ಎಂದು ಸ್ವಯಂ ಭಗವಂತನೇ ಹೇಳಿದ್ದಾನೆ'' ಎಂದು ಭೋದಿಸಿದರು. ಇದೇ ರೀತಿಯಾಗಿ ಮುಂದುವರಿಯಿತು ಆ ಬೃಹಸ್ಪತ್ಯಾಚಾರ್ಯರ ಉಪದೇಶ. ''ಕೇವಲ ತಲೆಬೋಳಿಸುವುದರಿಂದಲೇ ಮಹಾಪುಣ್ಯ, ದೇವತಾ ಪದವಿ ಬರುವುದಾದರೆ ಮಾನವರು ಏಕೆ ಅದನ್ನು ಮಾಡಬಾರದು ?'' ಆದುದರಿಂದ ವಿವೇಕಿಗಳಾದವರು ಇಲ್ಲಿಯೇ ಶಿರೋಮುಂಡನಮಾಡಿಕೊಂಡು ಮರ್ತ್ಯಲೋಕದಲ್ಲಿಯೇ ದೇವತ್ವವನ್ನು ಪಡೆಯಬೇಕು. ದೇವತೆಗಳು ಸ್ವರ್ಗದಲ್ಲಿ ಇದ್ದರೂ ಅವರು ಮಾನವಲೋಕಕ್ಕೆ ಬರಲು ಹಾತೊರೆಯುತ್ತಿರುವರು.

''ನಾವು ಮಾನವರಾಗಿ ಭರತಖಂಡದಲ್ಲಿ ಶ್ರಾವಕರಕುಲದಲ್ಲಿ ಎಂದು ಹುಟ್ಟಿ ಬರುವೆವು ? ಭರತಭೂಮಿಯ ಪರಮಪವಿತ್ರವಾದ ಶ್ರಾವಕರವಂಶದಲ್ಲಿ ಜನಿಸಿ ಕೇಶ ಲುಂಭನಮಾಡಿಕೊಂಡು ತಪಸ್ಸುಮಾಡುವ ಭಾಗ್ಯವು ಎಂದು ಲಭಿಸುವದು'' ಎಂದು ಆಶೆಯಿಂದ ನಿರೀಕ್ಷಿಸುತ್ತಿರುತ್ತಾರೆ. ಇಪ್ಪತ್ತುನಾಲ್ಕು ಮಹಾನುಭಾವರಾದ ತೀರ್ಥಂಕರರು ಈ ಧರ್ಮವನ್ನು ಪುರಸ್ಕರಿಸಿ ಪೂಜ್ಯರಾಗಿದ್ದಾರೆ. ಅವರು ಧ್ಯಾನಮಾಡುವ ಸ್ಥಾನದಲ್ಲಿ ಆದಿಶೇಷನು ತನ್ನ ಹೆಡೆಬಿಡಿಸಿ ನೆರಳುಬೀಳುವಂತೆಮಾಡುತ್ತಾನೆ. ಇಂಥ ಯೋಗಾರೂಢಾವಸ್ಥೆಯಲ್ಲಿ ಮಂತ್ರಜಪಗಳಿಂದ ಸ್ತೋತ್ರ ಮಾಡುತ್ತಲಿದ್ದರೆ ಸ್ವರ್ಗವಾಗಲಿ ಮೋಕ್ಷವಾಗಲಿ ಕೂಡಲೇ ಕರಗತವಾಗುವುದರಲ್ಲಿ ಸಂಶಯವೇ ಇಲ್ಲ.

ಹೀಗೆ ದೇವತೆಗಳೂ ಅಪೇಕ್ಷಿಸುವ **ಶ್ರಾವಕಧರ್ಮವನ್ನು** ನೀವೆಲ್ಲರೂ ಅನುಸರಿಸಿರಿ. ನೀವು ಋಷಿಗಳಾಗಿರಿ. ಋಷಿಗಳಾಗುವ ಹಂಬಲವು ನಿಮ್ಮಲ್ಲಿ ತುಂಬಿರಲಿ. 'ನಾವಾದರೂ ಋಷಿಗಳಾಗಿ ಸೂರ್ಯನೇ ಮೊದಲಾದ ಪಂಚಾಗ್ನಿ ಸಾಧನದಿಂದ ತಪಸ್ಸನ್ನುಮಾಡಿ, ವೈರಾಗ್ಯದಿಂದ ಜಪಮಾಡುತ್ತ ಮಹಾತಪಸ್ವಿಗಳು ಹೇಗಾಗುವೆವು ? ಎಂದಾಗುವೆವು ?'' ಎಂಬ ಆತುರ ಎಲ್ಲರಲ್ಲಿಯೂ ಮೂಡಲಿ. ಹೀಗೆ ಘೋರ ತಪಸ್ಸನ್ನು ಮಾಡುತ್ತ ಮರಣ ಹೊಂದಿದವರ ತಲೆಯು ಪಾಷಾಣದಿಂದಲೇ ಭಗ್ನವಾಗುವುದು. ಹೀಗೆ ಉಗ್ರತಪಸ್ಸು ಆಚರಿಸುವಾಗ, ಋಷಿ ಭಾವದಲ್ಲಿರುವ ನಿಮ್ಮನ್ನು ಆ ತಪಃಸಮಾಧಿಯಿಂದ ವಿಮುಖರನ್ನಾಗಿಮಾಡಲು ದೇವತೆಗಳು ಅನೇಕ ವಿಘ್ನಗಳನ್ನು ಒಡ್ಡುತ್ತಾರೆ. ಹಾಲು ಮೊಸರು, ಬಗೆ ಬಗೆಯ ಮೃಷ್ಟಾನ್ನ, ಪಕ್ವಾನ್ನಗಳ್ನ ತೋರಿಸಿ ನಿಮ್ಮ ಮನಸ್ಸು ಸೆಳೆಯಲು ಪ್ರಯತ್ನಿಸುತ್ತಾರೆ. ಆದರೆ ನಿಜವಾದ ಶ್ರಾವಕರು ನಿಮ್ಮ ಕಿವಿಯಲ್ಲಿ ''ದೇವತೆಗಳ ಆಮಿಷಕ್ಕೆ ಬಲಿಯಾಗದೆ ನಿಮ್ಮ ತಪಸ್ಸನ್ನು ಮುಂದುವರಿಸಿರಿ'' ಎಂದೂ ಕಿವಿಮಾತನ್ನು ಹೇಳುತ್ತಾರೆ.

''ಅವರ ಮಾತನ್ನು ಅನುಸರಿಸಿ ನೀವು ಎಲ್ಲ ದೇವತೆಗಳು, ರುದ್ರಗಣದವರು ತೋರಿಸುವ ಕ್ಷಣಿಕ ಆಶೆ, ಆಮಿಷಗಳನ್ನೆಲ್ಲ ತೊರೆದು ನಿಮ್ಮ ತಪಸ್ಸನ್ನು

ಮುಂದುವರಿಸಬೇಕು. ಅಗ್ನಿ, ವರುಣ, ಶಿವ, ವಿಷ್ಣು, ಬ್ರಹ್ಮ ಯಾರೇ ಕರೆದರೂ ನೀವು ತಪಸ್ಸನ್ನು ಬಿಟ್ಟು ಕದಲಬಾರದು. ಸ್ವರ್ಗಲೋಕದ ಹೊರಗಿನ ಅರ್ಧಸ್ಥಾನವು ಅರ್ಹತರಿಗಾಗಿ ಕ್ಲುಪ್ತವಾಗಿದೆ. ನೀವು ಅಲ್ಲಿಗೆ ಹೋಗಬೇಕು. ಅಲ್ಲಿಂದ ಮುಂದೆ ಮೋಕ್ಷವನ್ನು ಪಡೆಯುವಿರಿ. ಮೋಕ್ಷ ಒಂದನ್ನು ಬಿಟ್ಟರೆ ಉಳಿದೆಲ್ಲ ಸ್ಥಾನಗಳು ಕ್ಷುಲ್ಲಕ ಮತ್ತು ಅಶಾಶ್ವತ. ಉಳಿದ ಕಡೆ ಇದ್ದವರಿಗೆ ಮತ್ತೆ ಹುಟ್ಟುಸಾವಿನ ವಿಷ ಚಕ್ರವು ಬಿಟ್ಟಿದ್ದಲ್ಲ''.

ಆದುದರಿಂದ ಆ ಕ್ಷುದ್ರಸ್ಥಾನಗಳ ಹಾಗೂ ಕ್ಷುದ್ರಭೋಗಗಳ ಅಪೇಕ್ಷೆಯನ್ನು ಬಿಟ್ಟು ಮೋಕ್ಷವನ್ನೇ ಪಡೆಯಿರಿ. ಆ ಮೋಕ್ಷವನ್ನು ಪಡೆಯಲು ತಪಸ್ಸೇ ಆಗಬೇಕು. ತಪಸ್ಸು ಕೂಡಾ ನಮ್ಮ ಅರ್ಹತಮತದಲ್ಲಿ ಹೇಳಿದಂತೆ ಆಗಬೇಕು. ಆದರಿಂದಲೇ ಮುಕ್ತಿ. ಬೇರೆ ವಿಧ ತಪಸ್ಸಿನಿಂದ ಮೋಕ್ಷವಿಲ್ಲ. ಈ ಮಾತು ಸತ್ಯ, ನಾವು ಬೋಧಿಸಿದ ಬಗೆಬಗೆಯ ನಿಯಮಗಳೆಲ್ಲ ಮೋಕ್ಷ ಸಾಧಕವಾಗಿವೆ. ನಮ್ಮ ಈ ಅರ್ಹತಮತದ ಮುಖ್ಯ ಸಾರ ಸಂದೇಶವೆಂದರೆ -

ಇಂದ್ರಿಯಗಳನ್ನು ಬಿಗಿ ಹಿಡಿಯಿರಿ. ಪ್ರಾಣಿದಯೆ ತೋರಿರಿ. ಭಕ್ತಿಯಿಂದ ತಪಸ್ಸನ್ನು ಮಾಡಿರಿ. ಅಹಿಂಸೆ ಮುಖ್ಯಧರ್ಮ. ಇಂದ್ರಿಯನಿಗ್ರಹ, ಪ್ರಾಣಿದಯೆಗಳೇ ಮುಖ್ಯ ತಪಸ್ಸು. ಉಳಿದವುಗಳು ವಿಡಂಬನೆ ಈ ಮರ್ಮವನ್ನು ಅರಿತವರಿಗೆ ಪರಮಪದವು ನಿಶ್ಚಿತ. ಹಿಂದಿನ ಹಿರಿಯ ತೀರ್ಥಂಕರರೆಲ್ಲರೂ ಇದೇ ದಾರಿಯಿಂದ ಸದ್ಗತಿ ಹೊಂದಿದ್ದಾರೆ.

ದೇವತೆಗಳು, ವಿದ್ಯಾಧರರು, ನಾಗರು, ಅನೇಕ ಯೋಗಿಗಳು ಈ ತರಹದ ಉಪಾಸನೆಯಿಂದಲೆ, ತಮ್ಮ ಸಿದ್ಧಿ, ಸ್ಥಾನವನ್ನು ಪಡೆದಿದ್ದಾರೆ. ನಿಮಗೂ ಇಂತಹ ದಿವ್ಯ ಸ್ಥಾನವನ್ನು ಪರಮಪದವನ್ನು ಪಡೆಯುವ ಹಂಬಲವಿದ್ದರೆ ವಿರಕ್ತರಾಗಿರಿ, ಸಂಸಾರ ಬಿಡಿರಿ, ಹೆಂಡಂದಿರನ್ನು ದೂರಮಾಡಿರಿ. ಹೆಣ್ಣು ಸ್ವರ್ಗದ ಬಾಗಿಲಕ್ಕೆ ಅಡ್ಡಯಿಟ್ಟ ಅಗಳಿ ಇದ್ದಂತೆ. ನೀವು ನಿಮ್ಮ ತಂದೆ ತಾತಂದಿರು ಹುಟ್ಟಿದ ಆ ಸ್ತ್ರೀಯೋನಿಯನ್ನು ನಿಮ್ಮ ಭೋಗ ಪಿಪಾಸೆಗೆ ಗುರಿಪಡಿಸುವಿರಾ ? ಛೆ ! ಇದು ಅತ್ಯಂತ ಅಧರ್ಮ ! ನಿನ್ನ ಮೈಮಾಂಸದಂತಿರುವ ಬೇರೊಂದು ಪ್ರಾಣಿಯ ಮಾಂಸತಿನ್ನುವುದೆ ? ಛೆ ! ಘೋರ ಅನ್ಯಾಯ ! ಇದನ್ನೆಲ್ಲ ಬಿಡಿ. ನಾನು ತೋರಿದ ಮಾರ್ಗಹಿಡಿವುದೆ. ಇದರಿಂದ ಸ್ವರ್ಗ ಅದರಿಂದ ಮೋಕ್ಷ, ಇದೇ ನಿಜವಾದ ಧರ್ಮ, ಮೋಕ್ಷದಮರ್ಮ, ಹೀಗೆ ದೈತ್ಯ ಗುರು ಶುಕ್ರಾಚಾರ್ಯರ ವೇಷದಿಂದ ದೇವಗುರು, ನರ್ಮದಾನದಿಯ ದಂಡೆಯ ಮೇಲೆ ದಾನವರಿಗೆ ಅರ್ಹತಧರ್ಮವನ್ನು ಬೋಧಿಸಿದರು. ಬೃಹಸ್ಪತ್ಯಾಚಾರ್ಯರ ಮೋಹಕ ಶೈಲಿ, ಮಧುರಮಾತುಗಳು, ಅಹಿಂಸಾ, ಪ್ರಾಣಿದಯೆ, ದೇಹದಂಡನ ಹಾಗೂ ಸತ್ಯವಚನ ಪ್ರಧಾನವಾದ ಈ ಉಪದೇಶ ಸರಣಿಯು ದೈತ್ಯರ ಮನಸ್ಸನ್ನು ಮೋಹಗೊಳಿಸಿತು. ಆಗ ಅವರೆಲ್ಲರೂ ಭಕ್ತಿಯಿಂದ ಕೈಮುಗಿದು ಬೇಡಿಕೊಂಡರು.

**ದಾನವರು :-** ಮಹಾನುಭಾವರೆ, ನಿಮ್ಮ ಮುಂದೆ ನಿಂತುಕೊಂಡ ನಮಗೆಲ್ಲರಿಗೂ ತಾವು ಶ್ರಾವಕಧರ್ಮದ ದೀಕ್ಷೆಯನ್ನುಕೊಡಿರಿ. ದಾನವರ ಈ ಪ್ರಾರ್ಥನೆಯನ್ನು ಮನ್ನಿಸಿ, ಬೃಹಸ್ಪತ್ಯಾಚಾರ್ಯರು ಅವರೆಲ್ಲರಿಗೂ ಶ್ರಾವಕಧರ್ಮದ ದೀಕ್ಷೆಯನ್ನುಕೊಟ್ಟು ಗುರೂಪದೇಶ ನೀಡಿದರು.

**ಬೃಹಸ್ಪತ್ಯಾಚಾರ್ಯರು :-** ''ನೀವು ಇನ್ನು ಮುಂದೆ ಬೇರೆ ಯಾವ ದೇವರಿಗೂ ನಮಸ್ಕಾರ ಮಾಡಕೂಡದು. ಒಂದು ದಿನ ಒಬ್ಬರು ನೀಡಿದ ಅನ್ನ ಮಾತ್ರ ಉಣ್ಣಬೇಕು.

ಹಾಗೂ ಊಟವನ್ನು ಅಂಗೈ ಅಥವಾ ಬೊಗಸೆಯಲ್ಲಿಯೇ ಮಾಡಬೇಕು. ಇರುವ ಸ್ಥಳದಲ್ಲಿಯೇ ಹೋಗಿ ಕೂದಲು, ಹುಳಗಳಿಲ್ಲದ ನೀರನ್ನು ಕುಡಿಯಬೇಕು. ಇನ್ನೊಬ್ಬರ ಕಣ್ಣಿಗೆ ಕಾಣುವಂತೆ ಊಟಮಾಡಬೇಕು. ಊಟದಲ್ಲಿ ರುಚಿಗೆ ರಸಕ್ಕೆ ಪ್ರಾಧಾನ್ಯ ಕೊಡಬಾರದು. ಇದ್ದದ್ದನ್ನು ಆಚಾರಪೂತವಾಗಿ ಉಣ್ಣಬೇಕು. ಎಲ್ಲ ಕಡೆಗೂ ಸಮದೃಷ್ಟಿಯಿರಬೇಕು. ಪ್ರಿಯ, ಅಪ್ರಿಯ ಎಲ್ಲವನ್ನು ಸಮನಾಗಿನೋಡಬೇಕು. ಎಲ್ಲರೂ ಒಗ್ಗಟ್ಟಿನಿಂದ ಬಾಳಬೇಕು. ಇದರಿಂದ ನೀವೆಲ್ಲರೂ ಮೋಕ್ಷ ಭಾಗಿಗಳಾಗುವಿರಿ.'' ಹೀಗೆ ಉಪದೇಶವನ್ನು ನೀಡಿ, ಬಗೆಬಗೆಯ ಆಚಾರ, ನಿಯಮಗಳನ್ನು ಹಾಕಿಕೊಟ್ಟು ಬೃಹಸ್ಪತ್ಯಾಚಾರ್ಯರು ಸ್ವರ್ಗಲೋಕ ಕುರಿತು ಪ್ರಯಾಣ ಮಾಡಿದರು. ಅಲ್ಲಿ ದೇವತೆಗಳ ಎದುರು ತಾವು ದಾನವರಿಗೆ ಉಪದೇಶಮಾಡಿ ಅವರೆಲ್ಲರನ್ನು ಅರ್ಹತಧರ್ಮಕ್ಕೆ ಪರಿವರ್ತನ ಮಾಡಿದ್ದನ್ನು ಎಲ್ಲ ಸುರರು ತಿಳಿಸಿದರು. ಅದನ್ನು ಕೇಳಿ ದೇವತೆಗಳೆಲ್ಲರಿಗೆ ಕುತೂಹಲವಾಯಿತು. ಆಗ ಬೃಹಸ್ಪತಿಯ ಮಾತಿನ ಸತ್ಯಾಂಶ ತಿಳಿಯಲು ನರ್ಮದಾನದಿ ತೀರಕ್ಕೆ ಬಂದರು. ಅಲ್ಲಿರುವ ದೈತ್ಯರಲ್ಲಿ ಭಗವದ್ಭಕ್ತನಾದ ಪ್ರಲ್ಹಾದ ಮಾತ್ರ ಇರಲಿಲ್ಲ. ಉಳಿದ ಹಿರಣ್ಯಾಕ್ಷ ಮತ್ತು ಯಜ್ಞವಿಧ್ವಂಸಕ ಪ್ರಹಸ, ವಿಘ್ನುಸ, ಬಾಣ, ಮಹಿಷ, ಚಂಡ, ಪ್ರಚಂಡ, ರೋಚಮಾನ ಮೊದಲಾದ ದೈತ್ಯ ಧುರೀಣರೆಲ್ಲರೂ ಅಲ್ಲಿ ಇದ್ದರು. ಧರ್ಮಾಂತರ ಹೊಂದಿದ ಆ ದಾನವ ನಾಯಕರನ್ನು ಕಂಡು ದೇವೇಂದ್ರನಿಗೆ ಬಹಳ ಸಂತೋಷವಾಯಿತು. ಅವನು ಅವರನ್ನು ಕೇಳಿದನು.

**ಇಂದ್ರ :-** ದಾನವಕುಲದ ದೊರೆಗಳೆ, ಮೊದಲು ನೀವೆಲ್ಲರೂ ಸ್ವರ್ಗಲೋಕವನ್ನು ಸ್ವಾಧೀನಪಡಿಸಿಕೊಂಡು ರಾಜ್ಯವಾಳಿದಿರಿ. ದೈತ್ಯಕುಲ ಧುರೀಣರಾಗಿ ಮೆರೆದಿರಿ. ಈಗ ವೇದ ಬಾಹಿರವಾದ ಇಂಥ ಅರ್ಹತಮತವನ್ನು ಹೇಗೆ ಅಂಗೀಕರಿಸಿದಿರಿ ! ಇದೇನು ನಿಮ್ಮ ವೇಷ ! ಬೋಳುತಲೆ, ಬತ್ತಲೆಮೈ, ನವಿಲುಗರಿಯ ಲಾಂಛನ, ಕೇಶಲಾಂಛನ, ಕೈಯಲ್ಲಿ ಕಮಂಡಲ. ಇದನ್ನೇನು ಮಾಡಲು ಹೊರಟಿರುವಿರಿ ?

**ದಾನವರು :-** ನಾವೆಲ್ಲರೂ ಈಗ ಋಷಿಗಳಾಗಿದ್ದೇವೆ. ನಮ್ಮ ದೈತ್ಯಭಾವವನ್ನೆಲ್ಲ ಬಿಟ್ಟುಬಿಟ್ಟಿದ್ದೇವೆ. ನಿಮ್ಮ ಹಿಂದಿನ ಹಿಂಸಾಪ್ರವೃತ್ತಿ ಪೂರ್ಣವಾಗಿ ತೊರೆದಿದ್ದೇವೆ. ನಾವು ಹಿಂದೆಮಾಡಿದ ಕ್ರೂರಹಿಂಸಾಕೃತಗಳ ಪ್ರಾಯಶ್ಚಿತ್ತವಾಗಿ ಅಹಿಂಸಾಧರ್ಮವನ್ನು ಪುರಸ್ಕರಿಸಿದ್ದೇವೆ. ಈಗ ನಾವು ಸರ್ವಪ್ರಾಣಿಗಳಿಗೂ ಹಿತಕರವಾದ ಧರ್ಮವನ್ನು ಅನುಸರಿಸುತ್ತೇವೆ. ಎಲ್ಲರಿಗೂ ಕಲ್ಯಾಣ ಬಯಸುತ್ತೇವೆ. ಎಲ್ಲರಲ್ಲಿಯೂ ಧರ್ಮಬುದ್ಧಿ ಬೆಳೆಯಲಿ ಎಂದು ಉಪದೇಶಿಸುತ್ತೇವೆ. ಇಂದ್ರನೆ, ನಮಗೆ ಈಗ ಸ್ವರ್ಗದ ಆಸೆಯಿಲ್ಲ. ಅಧಿಕಾರದ ವ್ಯಾಮೋಹವಿಲ್ಲ. ಯಾವುದೇ ಐಹಿಕಸುಖದ ಅಪೇಕ್ಷೆಯೂ ನಮಗೆ ಉಳಿದಿಲ್ಲ. ನಾವು ಸರ್ವಸಂಗ ಪರಿತ್ಯಾಗಮಾಡಿ ಮೋಕ್ಷದ ಮಾರ್ಗದಲ್ಲಿ ಮುಂದುವರಿದಿದ್ದೇವೆ. ಕ್ಷುಲ್ಲಕವಾದ ಈ ಮೂರು ಲೋಕಗಳ ಸಾಮ್ರಾಜ್ಯವನ್ನು ನೀನೇ ಆಳು. ಆ ಅಲ್ಪ ಸುಖವನ್ನು ಯಥೇಚ್ಛ ಅನುಭವಿಸು. ಈಗ ಇಲ್ಲಿಂದ ಹೊರಟುಹೋಗು. ದೇವೇಂದ್ರನು ಅರ್ಹತಯೋಗಿಗಳಾದ ದಾನವರ ನುಡಿ ಕೇಳಿ 'ಹಾಗೆ ಆಗಲಿ' ಎಂದು ಸ್ವರ್ಗಕ್ಕೆ ಹೊರಟುಹೋದನು. ಭೀಷ್ಮನೆ, ಸುರಪುರೋಹಿತರಾದ ಬೃಹಸ್ಪತ್ಯಾಚಾರ್ಯರಿಂದ ಮೋಹಿತರಾದ ಎಲ್ಲ ದಾನವರು ನರ್ಮದಾನದಿಯ

ದಡದಗಡಿಯ ಗುಂಟ ಇರುವ ನಾಡಿನಲ್ಲಿ ನೆಲೆಸಿದರು. ಅನಂತರ ಶುಕ್ರಾಚಾರ್ಯರಿಗೆ ತಮ್ಮ ಶಿಷ್ಯರ ಈ ಅವಸ್ಥೆಯು ತಿಳಿದು ಬಂತು ಆಗ ಅವರು ನರ್ಮದಾ ನದಿಯ ತೀರಕ್ಕೆ ಬಂದು ನೋಡಿದರು. ಅಷ್ಟರೊಳಗಾಗಿ ಬೃಹಸ್ಪತಿಯು ಬೋಧಿಸಿದ ಅರ್ಹತಮತವು ಅನುಸರಿಸಿ ಮತ್ತೆ ತಾವೇ ಬೋಧಕರಾಗಿ ಅದನ್ನು ಭೂಮಂಡಲದಲ್ಲಿ ಪ್ರಸಾರಮಾಡತೊಡಗಿದ್ದರು. ಅದನ್ನು ಕಂಡು ಶಿಷ್ಯ ವಾತ್ಸಲ್ಯ ಉಕ್ಕೇರಿದ ಆಚಾರ್ಯ ಶುಕ್ರರು ತಮ್ಮ ಪಟ್ಟಶಿಷ್ಯರಾದ ದೈತ್ಯಕುಲದ ಮುಂದಾಳುಗಳನ್ನು ಒಂದೆಡೆ ಕರೆದು ಕೂಡಿಸಿದರು.

ಅವರಿಗೆ ನಡೆದ ವೃತ್ತಾಂತವನ್ನೆಲ್ಲ ಸಾದ್ಯಂತವಾಗಿ ತಿಳಿಸಿ ಹೇಳಿದರು. ದೇವಗುರು ಗೈದ ಮೋಸದ ಒಳಗುಟ್ಟನ್ನೆಲ್ಲ ದೃಷ್ಟಾಂತದೊಂದಿಗೆ ವಿವರಿಸಿದರು. ''ದೇವತೆಗಳ ಪ್ರಬಲ ವಿರೋಧಿಗಳಾದ ನಿಮ್ಮ ಕೈಯಲ್ಲಿ ನಿಮ್ಮ ತಲೆ ಬೋಳಿಸಿ, ಕೈಯಲ್ಲಿ ನವಿಲುಗರಿಕೊಟ್ಟು ಕೂಡಿಸಿ, ತನ್ನ ಶಿಷ್ಯರಾದ ದೇವತೆಗಳ ಸ್ವರ್ಗ ಸಾಮ್ರಾಜ್ಯಕ್ಕೆ ಭಯವನ್ನೇ ತಪ್ಪಿಸಿ ಬಿಟ್ಟಿದ್ದಾನೆ. ಆ ಧೂರ್ತನಾದ ಸುರಗುರು. ಇನ್ನಾದರೂ ನೀವು ಈ ಮೋಸವನ್ನು ತಿಳಿಯಿರಿ. ನಿಮ್ಮನ್ನು ನಡುನೀರಿನಲ್ಲಿ ನನ್ನ ವೇಷದಿಂದ ಬಂದ ಆ ಬೃಹಸ್ಪತಿಯು ಕೈ ಬಿಟ್ಟು ಹೋಗಿದ್ದಾನೆ. ಈಗ ನಾನೇ ಗತಿ, ನಾನೇ ಗುರು, ಇನ್ನಾದರೂ ನನ್ನ ಮಾತು ಕೇಳಿರಿ. ನಿಮ್ಮ ವೈರಿಗಳ ಮೇಲೆ ಸೇಡು ತೀರಿಸಿಕೊಳ್ಳಿರಿ ಎಂದು ಹೇಳಿದರು.'' ಶುಕ್ರಾಚಾರ್ಯರ ಈ ಮಾತನ್ನು ಕೇಳಿ ಆ ದಾನವರಲ್ಲಿ ಮತ್ತೆ ಆ ರಾಕ್ಷಸ ಭಾವವು ತಲೆ ಎತ್ತಲೇ ಇಲ್ಲ. ಅವರಲ್ಲಿ ಬಹು ಜನರಿಗೆ ಐಹಿಕ ವಿಷಯಗಳಲ್ಲಿ ನಿಜವಾದ ವೈರಾಗ್ಯಹುಟ್ಟಿತ್ತು. ಸಾಕ್ಷಾತ್ ಭಗವಂತನೇ ಮಾಯಾರೂಪದಿಂದ ಅವತರಿಸಿ ಭೋದಿಸಿದ ಅರ್ಹತಮತವನ್ನು ಅನುಸರಿಸಿ ಅದನ್ನೇ ಪ್ರಚಾರಮಾಡುತ್ತ ಅವರು ಅಹಿಂಸಾಧರ್ಮವನ್ನು ಭೋದಿಸುತ್ತ ಸಾಧುಸನ್ಯಾಸಿಗಳಾಗಿ ಸ್ಯಾಹ್ವಾದ ಮತಾನುಯಾಯಿಗಳೇ ಆಗಿ ಉಳಿದರು. ಅವರಿಗೆ ನಶ್ವರವಾದ ಯಾವದೇ ಭೋಗ ಭಾಗ್ಯ ಬೇಕಿರಲಿಲ್ಲ. ರಾಜ್ಯದ ಅಧಿಕಾರ ಇಂದ್ರಿಯ ಸುಖಗಳಲ್ಲಿಯೂ ಜಿಗುಪ್ಸೆ ಉಂಟಾಗಿತ್ತು. ಇಂಥ ಕ್ಷುದ್ರ ಇಂದ್ರಿಯ ಸುಖಕ್ಕಾಗಿ ಪಶು ಹಿಂಸೆ ಮಾಡುವ ಕರ್ಮಕಾಂಡದ ಬಗೆಗೂ ಜಿಗುಪ್ಸೆ ಹುಟ್ಟಿತು. ಆದುದರಿಂದ ಅವರು ದೇವರಾಗಿ ಬಂದ ಮಾಯಾಮೋಹನ ಉಪದೇಶವನ್ನೇ ನಂಬಿ ಆಚರಿಸುತ್ತ ಇದ್ದುಬಿಟ್ಟರು. ಹೀಗೆ ಸ್ವಯಂ ಭಗವಂತನು ಮಾಯಾಮೋಹನ ಮುಖಾಂತರ ದೈತ್ಯರ ತಾಮಸೀ ಸ್ವಭಾವವನ್ನು ಕಳೆದು ಅವರು ಹಿಂಸಾ, ಕ್ರೌರ್ಯ, ಮಾಂಸ, ಮಧ್ಯ, ವ್ಯಭಿಚಾರಾದಿ, ದುರ್ಮಾರ್ಗ ಬಿಟ್ಟು ದಾನವರೆಲ್ಲರೂ ಮಾನವರಾಗಿ ಉಳಿಯುವಂತೆ ಮಾಡಿದನು. ಸ್ವಭಾವತಃ ದುಷ್ಟರಾದ ಕೆಲವು ದೈತ್ಯರು ಮಾತ್ರ ಶುಕ್ರಾಚಾರ್ಯರ ಉಪದೇಶದಿಂದ ತಮ್ಮ ಮೊದಲಿನ ಕಾರ್ಯಹಿಂಸೆ ಕಾಪಟ್ಯಗಳಿಂದ ರಾಕ್ಷಸೀ ಭಾವವನ್ನೇ ಹೊಂದಿ ದೇವತಾ ಸಾಮ್ರಾಜ್ಯಧಿಕಾರಿಗಳನ್ನು ಪಡೆದುಕೊಳ್ಳಬೇಕೆಂದು ಹವಣಿಸಿದರು. ಅವರಿಗೆ ವೇದಮತ, ಅರ್ಹತಮತ ಎರಡರ ಮೇಲೆಯೂ ದ್ವೇಷ ಹುಟ್ಟಿ ನಿಜವಾದ ರಾಕ್ಷಸರಾಗಿಯೇ ಉಳಿದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಶುಕ್ರಮಾತೆಯಿಂದ ದೇವತೆಗಳ ಪರಾಜಯ ಎಂಬ ಹದಿಮೂರನೇಯ ಅಧ್ಯಾಯ ಮುಗಿದುದು*

—o—

**ಭೀಷ್ಮ :-** ವೈರಿ ವೀರರನ್ನು ವಿನಾಶಗೈಯುವ ಅರ್ಜುನನು ತ್ರಿಪುರುಷನಿಂದ ಜನಿಸಿದ್ದು ಹೇಗೆ ? ಸೂತಕುಲದಲ್ಲಿ ಉದ್ಭವಿಸಿದ ಕರ್ಣನು ಕಾನೀನ-ಕನ್ಯಾಪುತ್ರನೆಂದು ಏಕೆ ಕರೆಯಲ್ಪಡುತ್ತಾನೆ ? ಈ ಕರ್ಣಾರ್ಜುನರಲ್ಲಿ ಜನ್ಮಜಾತವೈರವು ಬೆಳೆಯಲು ಕಾರಣವೇನು ? ಇದೆಲ್ಲವನ್ನು ಕೇಳಬೇಕೆಂದು ನನಗೆ ಬಹಳ ಕುತೂಹಲ ಉಂಟಾಗಿದೆ. ಅದನ್ನು ನೀವು ನನಗೆ ದಯಮಾಡಿ ತಿಳಿಸಬೇಕು.

**ಪುಲಸ್ತ್ಯ :-** ಪೂರ್ವಕಾಲದಲ್ಲಿ ಶಿವನಿಗೆ ಬ್ರಹ್ಮದೇವರ ಮೇಲೆ ಬ್ರಹ್ಮಾಂಡ ಕೋಪ ಬಂದಿತು. ಆ ಸಿಟ್ಟಿನ ಭರದಲ್ಲಿ ಸದಾಶಿವನು ಬ್ರಹ್ಮದೇವನ ಐದು ಮುಖಗಳಲ್ಲಿ ಒಂದು ಮುಖವನ್ನು ಕತ್ತರಿಸಿಹಾಕಿದನು. ಅದರಿಂದ ಆ ವಾಣೀಪತಿಗೆ ಭಯಂಕರ ಕ್ರೋಧವು ಬಂದಿತು. ಮುಖವೆಲ್ಲವೂ ಬೆವರಿತು. ಹಣೆಯಮೇಲೆ ಸುರಿಯುವ ಬೆವರನ್ನು ಕೈಯಿಂದ ತೆಗೆದು ನೆಲಕ್ಕೆ ಬಡಿದನು. ಬ್ರಹ್ಮದೇವರ ಆ ಬೆವರಿನಿಂದ ಒಬ್ಬ ಧೀರ ಪುರುಷನು ಆಗಲೇ ಅಲ್ಲಿಯೇ ಉದಿಸಿದನು. ಅವನ ಕೈಯಲ್ಲಿ ಬಿಲ್ಲು, ಬಾಣ, ಬೆನ್ನಹಿಂದೆ ಬತ್ತಳಿಕೆ, ಅದರ ತುಂಬ ಹದವಾದ ಬಾಣಗಳು ಮೈಗೆಲ್ಲ ವಜ್ರಕಠೋರವಾದ ಕವಚ. ಇಂತಹ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತನಾದ ಆ ಬೆವರಿನ ಕುವರನು ಬ್ರಹ್ಮ ದೇವರಿಗೆ ಕೈಮುಗಿದು, ''ನಾನು ಏನು ಮಾಡಲಿ'' ಎಂದು ಕೇಳಿದನು. ಕೂಡಲೇ ಬ್ರಹ್ಮದೇವರ ಆದೇಶ ''ಈ ರುದ್ರನನ್ನು ನಿನ್ನ ತೇಜೋಬಲದಿಂದ ಕೊಂದುಹಾಕು. ಈ ಬುದ್ಧಿಗೇಡಿಯು ಮತ್ತೊಮ್ಮೆ ಇಂತಹ ದುಷ್ಟ ವಿಚಾರ ಮಾಡದಂತೆ ಇವನನ್ನು ನಿಗ್ರಹಿಸು.''

ಬ್ರಹ್ಮದೇವರ ಮಾತನ್ನು ಕೇಳಿ ಆ ಸ್ವೇದಕುಮಾರನು ತನ್ನ ಧನುರ್ಬಾಣಗಳನ್ನು ಎತ್ತಿಕೊಂಡು ಮಹಾದೇವರನ್ನು ಬೆನ್ನಟ್ಟಿದನು. ಬಿಲ್ಲಿನ ಹೆದೆಗೆ ಬಾಣಹೂಡಿ ಭವಾನಿಪತಿಯನ್ನು ಬೆನ್ನಟ್ಟಿದ ಆ ಬೆವರಿನ ಮಗುವು ತನ್ನ ರೌದ್ರ ಆಕಾರದಿಂದ ಅತಿ ಭೀಕರನಾಗಿ ಕಾಣುತ್ತಿದ್ದನು. ಭೀಕರ ಆಕಾರದ ಆ ಬ್ರಹ್ಮಕುಮಾರನನ್ನು ಕಂಡ ಮುಕ್ಕಣ್ಣನು ಹೆದರಿ ಅಲ್ಲಿಂದ ಓಡಿದನು. ವೇಗದಿಂದ ಓಡುತ್ತ ವಿಷ್ಣುವಿನ ಆಶ್ರಯಕ್ಕೆ ಬಂದನು.

''ರಕ್ಷಿಸರಿ, ರಕ್ಷಿಸಿರಿ, ವೈರಿಗಳನ್ನು ನಾಶಪಡಿಸುವ ವಿಷ್ಣುವೆ, ಈ ಮಾನವನಿಂದ ನನ್ನನ್ನು ಕಾಪಾಡಿರಿ. ಈ ಪಾಪಿಯನ್ನು ಬ್ರಹ್ಮದೇವನು ನಿರ್ಮಿಸಿದ್ದಾನೆ. ಇವನ ಆ ಮ್ಲೇಂಛ ರೂಪವು ಭಯಾನಕವಾಗಿದೆ. ಜಗದೊಡೆಯ, ಸಿಟ್ಟಿಗೆದ್ದ ಈ ಬ್ರಹ್ಮದೇವರ ಮಗನು ನನ್ನನ್ನು ಸಂಹರಿಸದಂತೆಮಾಡು. ಮಹಾದೇವನ ಈ ದೀನ ಪ್ರಾರ್ಥನೆಯನ್ನು ಕೇಳಿ, ಹರಿಯ ಮನಕರಗಿತು. ಅವನು ಹೂಂಕಾರ ಧ್ವನಿಗೈದನು. ಆದರೆ ಆ ವಿಷ್ಣುವಿನ ಆಕಾರವು ಮಾತ್ರ ಯಾರಿಗೂ ಗೋಚರವಾಗುತ್ತಿದ್ದಿಲ್ಲ. ಬರಿ ಹೂಂಕಾರ ಧ್ವನಿಕೇಳುತ್ತಿತ್ತು. ಹರಿಯ ಹೂಂಕಾರ ಮಾತ್ರದಿಂದಲೇ, ಶಿವನನ್ನು ಬೆನ್ನಟ್ಟಿದ ಆ ಬ್ರಹ್ಮದೇವರ ಬೆವರಿನ ಕುಮಾರನು ಮೂರ್ಛಿತನಾಗಿ ಬಿದ್ದನು. ಅನಂತರ ಅಲ್ಲಿಗೆ ಬಂದ ಶಂಕರನನ್ನು ಶ್ರೀಹರಿಯು ಸಂತೈಯಿಸಿದನು. ಪ್ರಣತನಾದ ಪರಮೇಶ್ವರನನ್ನು ನೋಡಿ ವಿಷ್ಣುವು ಮಾತನಾಡಿದನು. ''ಪೂಜ್ಯನಾದ ಮಹಾರುದ್ರನೆ, ನಿನಗೆ ಏನು ಬೇಕಾಗಿದೆ'' ನಿನ್ನ ಯಾವ ಕಾಮನೆಯನ್ನು ಪೂರ್ಣಗೊಳಿಸಲಿ ? ನಿನಗಾಗಿ ಏನು ಮಾಡಲಿ ಹೇಳು ?''

ನಾರಾಯಣನನ್ನು ನೋಡಿ, ಶಿವನು ''ಭಿಕ್ಷೆಯನ್ನು ನೀಡು-ಭಿಕ್ಷಾಂದೇಹಿ'' ಎಂದು ನುಡಿದನು ಮತ್ತು ತನ್ನ ಕೈಯಲ್ಲಿ ಉಗ್ರ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಕಪಾಲವನ್ನು ವಿಷ್ಣುವಿನ ಎದುರು ಚಾಚಿದನು. ಅದನ್ನು ಕಂಡು ಶ್ರೀ ಹರಿಯು ತನ್ನ ಮನಸ್ಸಿನಲ್ಲಿ ''ಭಿಕ್ಷೆಯನ್ನು ನೀಡಲು ರುದ್ರನ ಹೊರತು, ಬೇರೆ ಸತ್ಪಾತ್ರವು ಯಾವುದಿದೆ! ಇದೇ ಅತ್ಯಂತ ಯೋಗ್ಯವಾದ ಪಾತ್ರ,'' ಎಂದು ವಿಚಾರಿಸಿದನು. ತನ್ನ ಬಲಗೈಯನ್ನೇ ರುದ್ರನಿಗೆ ನೀಡಿದನು. ತಲೆಯಲ್ಲಿ ಚಂದಿರನನ್ನು ಧರಿಸಿದ ಆ ಗಂಗಾಧರನು ಕೂಡಲೆ, ತನ್ನ ತ್ರಿಶೂಲದಿಂದ ಆ ವಿಷ್ಣುವಿನ ಕೈಯನ್ನು ತಿವಿದು ಸೀಳಿದನು. ಅತಿ ತೀಕ್ಷ್ಣವಲ್ಲವೆ ಶಿವಶೂಲ!

ಹರಿಯ ತೋಳಿನಿಂದ ಧಾರಾಕಾರವಾಗಿ ನೆತ್ತರ ಪುಟಿಯಹತ್ತಿತ್ತು. ಬಂಗಾರವೆ ರಸದ ಆಕಾರವಾದಂತೆ. ನಿರ್ಮಲವಾದ ವಹ್ನಿಜ್ವಾಲೆಯ ಕರಗಿ ಹರಿದಂತೆ, ಹರಿಯ ರಕ್ತವು ಮಹಾದೇವರ ಕೈಯಲ್ಲಿಯ ಕಪಾಲದಲ್ಲಿ ಬಿದ್ದಿತು. ಇದನ್ನು ಶಂಕರನು ನೋಡುತ್ತ ನಿಂತುಕೊಂಡನು. ಹರಿಯ ತೋಳಿನಿಂದ ಚಿಮ್ಮುತ್ತಲೇ ಇತ್ತು ಅತಿ ವೇಗದಿಂದ ರಕ್ತಧಾರೆ. ರವಿಯ ಕಾಂತಿ ಪತಾಕೆಯಂತಿದ್ದ ಆ ರಕ್ತರಸದ ಪ್ರವಾಹವು ಐವತ್ತುಯೋಜನ ಉದ್ದವೂ, ಹತ್ತುಯೋಜನ ಅಗಲವೂ ಆಗಿ ಹೊಮ್ಮಿ ಹರಿಯ ತೊಡಗಿತು. ಹೀಗೆ ಮಧುಸೂಧನನ ತೋಳಿನಿಂದ ಹರಿದುಬಂದ ನೆತ್ತರಿನ ಪ್ರವಾಹವು ಒಂದು ಸಾವಿರ ವರ್ಷಗಳವರೆಗೆ ನಿರಂತರ ಪ್ರವಹಿಸಿತು. ಪರಮೇಶ್ವರನು ಸ್ವಯಂ ಭಿಕ್ಷುಕನಾಗಿ ಭಗವಂತನ ಬಾಹುವಿನಿಂದ ಹರಿದು ಬಂದ ಆ ರಕ್ತ ಭಿಕ್ಷೆಯನ್ನು ತನ್ನ ಕಪಾಲಪಾತ್ರದಲ್ಲಿ ಸ್ವೀಕರಿಸಿದನು. ಅನಂತರ ಹರಿಯು ಹರನನ್ನು ಕುರಿತು ಈ ರೀತಿಯಾಗಿ ನುಡಿದನು.

''ನಿನ್ನ ಪಾತ್ರವು ಪೂರ್ಣ ಆಯಿತೂ ಇಲ್ಲವೊ ?'' ಶ್ರೀ ಹರಿಯ ಈ ಪ್ರಶ್ನೆ ವಾಕ್ಯವು ನೀರು ತುಂಬಿದ ಮೋಡದ ಗುಡುಗಿನಂತೆ ಗಂಭೀರವಾಗಿದ್ದಿತು. ಶ್ರೀ ಹರಿಯ ಈ ಪ್ರಶ್ನಾರ್ಥಕ ವಚನವನ್ನು ಶಂಕರನು ಕೇಳಿದನು. ರವಿ, ಚಂದ್ರ, ಅಗ್ನಿ ಎಂಬ ಮೂರು ಕಣ್ಣುಗಳುಳ್ಳ, ಜಡೆಯಲ್ಲಿ ಚಂದ್ರನನ್ನು ಮುಡಿದುಕೊಂಡ ಶಿವನು ತನ್ನ ಮೂರು ಕಣ್ಣುಗಳನ್ನು ಕಪಾಲದೆಡೆಗೆ ಹೊರಳಿಸಿ ನೋಡಿ ಬೆರಳಿನಿಂದ ಅದನ್ನು ಮುಟ್ಟಿ ಜನಾರ್ದನನ್ನು ಉದ್ದೇಶಿಸಿ, ''ಈ ಕಪಾಲವು ತುಂಬಿರುತ್ತದೆ'' ಎಂದು ಹೇಳಿದನು. ಅದನ್ನು ಕೇಳಿ ಆ ಜನಾರ್ದನನ ರಕ್ತಧಾರೆಯನ್ನು ನಿಲ್ಲಿಸಿದನು. ಆಗ ಪರಶಿವನು ತನ್ನ ಬೆರಳಿನಿಂದ ಹರಿಯು ನೋಡುತ್ತಿರುವಂತೆಯೇ ಒಂದು ಸಾವಿರ ವರ್ಷಗಳವರೆಗೆ ಆ ಕಪಾಲದಲ್ಲಿರುವ ರಕ್ತವನ್ನು ಮಂಥನ ಮಾಡಿದನು. ಹರನು ತನ್ನ ಬೆರಳಿನಿಂದ ರಕ್ತವನ್ನು ಕಡೆಯ ತೊಡಗಲು ಅದರಲ್ಲಿ ನೊರೆ, ಹಾಗೂ ಗುಳ್ಳೆಗಳು ಉಂಟಾದವು. ಅನಂತರ ಧನುರ್ಬಾಣಗಳನ್ನು ಧರಿಸಿ ತಲೆಯ ಮೇಲೆ ಕಿರೀಟ ಇಟ್ಟುಕೊಂಡು ಬೆನ್ನ ಮೇಲೆ ಎರಡೂ ಬದಿ ಬತ್ತಳಿಕೆಯನ್ನು ಬಿಗಿದು ಕೊಂಡು ಬೆಂಕಿಯಂತೆ ಪ್ರಕಾಶಿಸುವ ಒಬ್ಬ ಪುರುಷನು ಕಪಾಲದಲ್ಲಿ ಕಾಣಿಸಿಕೊಂಡನು. ಅವನನ್ನು ನೋಡಿ ಪೂಜ್ಯ ವಿಷ್ಣುವು ಶಿವನಿಗೆ ಇಂತು ನುಡಿದನು.

**ವಿಷ್ಣು :-** 'ಶಂಕರ ಈ ನಿನ್ನ ಕೈಯಲ್ಲಿಯ ಕಪಾಲದಲ್ಲಿ ಉದಿಸಿದ ಈ ನರನು ಯಾರು ?' ಅದನ್ನು ಕೇಳಿ ಹರನು ಹರಿಗೆ ನುಡಿದನು.

**ಹರ :-** ಪ್ರಭುವೆ, ನೀನು ಈ ನರನು ಯಾರು ಎಂದು ಕೇಳಿದ್ದರಿಂದ ಇವನ ಹೆಸರು ನರ ಎಂದೇ ಆಗಲಿ. ಈ ನರನು ಶಸ್ತ್ರಾಸ್ತ್ರವಿದ್ಯೆ ಬಲ್ಲವರಲ್ಲಿ ಶ್ರೇಷ್ಠನಾಗಿದ್ದಾನೆ. ಈ ನರ ಹಾಗೂ

ಆ ನಾರಾಯಣರಿಬ್ಬರೂ ಯುಗಗಳಲ್ಲಿ ಪ್ರಸಿದ್ಧರಾಗುತ್ತಾರೆ. ದೇವತಾ ಕಾರ್ಯವನ್ನು ಸಾಧಿಸುತ್ತಾರೆ. ಲೋಕಗಳನ್ನೆಲ್ಲ ರಕ್ಷಿಸುತ್ತಾರೆ. ನಾರಾಯಣನೆ, ಈ ನರನು ನಿನ್ನ ಮಿತ್ರನಾಗುವನು. ಈ ಮೇಧಾವಿಯಾದ ನರನು ಅಸುರವಧ ರೂಪವಾದ ನಿನ್ನ ಕಾರ್ಯದಲ್ಲಿ ನಿನಗೆ ಸಹಾಯವನ್ನು ಸಲ್ಲಿಸುತ್ತಾನೆ. ಜ್ಞಾನಪರೀಕ್ಷೆಯಲ್ಲಿ ಮಹಾಮುನಿಯಾಗಿ ಎಲ್ಲರನ್ನು ಜಯಿಸಿ ವಿಜಯಶಾಲಿಯಾಗುತ್ತಾನೆ. ಬ್ರಹ್ಮದೇವರ ಈ ಐದನೆಯ ಶಿರಸ್ಸಿನ ಮಿಗಿಲಾದ ತೇಜಸ್ಸಿನಿಂದ ದೇದೀಪ್ಯಮಾನವಾಗಿ ಕಾಣುತ್ತಾನೆ. ಮೂರು ಮಹಾತೇಜಸ್ಸುಗಳ ಮಿಲನದಿಂದ ಈ ನರನು ನಿರ್ಮಿತನಾಗಿದ್ದಾನೆ. ಇವುಗಳಲ್ಲಿ ಒಂದೊಂದೂ ಅಮೋಘ, ಅಸಾಮಾನ್ಯ, ಬ್ರಹ್ಮಕಪಾಲದ ತೇಜಸ್ಸು, ನಿನ್ನ ಭುಜದಿಂದ ಬಂದ ನೆತ್ತರಿನ ತೇಜಸ್ಸು, ನನ್ನ ಮೂರು ದೃಷ್ಟಿಗಳು ಬಿದ್ದ ತೇಜಸ್ಸು ಈ ತೇಜಸ್ಸುಗಳ ತ್ರಿಪುಟಿಯ ವಿಲಕ್ಷಣ ಸಂಯೋಗದಿಂದ ಈ ನರನು ಅತ್ಯಂತ ತೇಜಃಪುಂಜನಾಗಿ ಬೆಳಗುತ್ತಲಿದ್ದಾನೆ. ನಿನಗೆ ಗೆಲ್ಲಲಿಕ್ಕೆ ಆಗದ, ದೇವತೆಗಳಿಗೆ ಕೊಲ್ಲಲಿಕ್ಕೂ ಆಗದ ಮಹಾವೀರರು ಇವನನ್ನು ಕಂಡು ಭಯಭ್ರಾಂತರಾಗುತ್ತಾರೆ.''

ಹರಿಹರರ ಈ ಸಂಭಾಷಣೆಯಿಂದ ಆ ಕಪಾಲದಲ್ಲಿ ಜನಿಸಿದ ನರನು ವಿಸ್ಮಯ ಸ್ತಿಮಿತನಾದನು. ಅಲ್ಲಿಯೇ ಕಪಾಲತಲದಲ್ಲಿ ಕುಳಿತುಕೊಂಡ ಆ ರಮೇಶ-ಪರಮೇಶರನ್ನು ಸ್ತೋತ್ರಮಾಡಿದನು. ತನ್ನ ತಲೆಯ ಮೇಲೆ ಕೈಜೋಡಿಸಿ, ಹಣೆ ಮಣಿದು 'ನಾನು ಏನು ಮಾಡಲಿ ?' ಎಂದು ಕೇಳಿದನು. ವಿನೀತನಾದ ಆ ಕಪಾಲಕುಮಾರರನ್ನು ಕಂಡು ಮತ್ತು ಅವನ ಪ್ರಶ್ನೆ ಕೇಳಿ ಕೈಲಾಸಪತಿಯು ಆದೇಶವಿತ್ತನು. ''ಬ್ರಹ್ಮನು ತನ್ನ ತೇಜೋಬಲದಿಂದ ಒಬ್ಬ ದೈತ್ಯನನ್ನು ನಿರ್ಮಿಸಿದ್ದಾನೆ. ಅವನು ಧನುರ್ಧಾರಿಗಳಲ್ಲಿ ಧುರಂಧನು, ಧೀರ, ಧೌರೇಯನೂ ಆಗಿದ್ದಾನೆ. ವೀರವರೇಣ್ಯನಾದ ಅವನನ್ನು ನೀನು ಸಂಹರಿಸು.'' ಹೀಗೆ ಹೇಳಿ ಬದ್ಧಾಂಜಲಿಯಾಗಿ, ಸುತ್ತಿಸುತ್ತಿರುವ ನರನನ್ನು ಅವನು ಮುಗಿದ ಕೈಯನ್ನೇ ಹಿಡಿದು ಎತ್ತಿ ಆ ಕಪಾಲದಿಂದ ಹೊರಗಿಟ್ಟು ಬ್ರಹ್ಮಕುಮಾರನನ್ನು ತೋರಿಸಿ ಆದೇಶವಿತ್ತನು.

''ನಾನು ವಧಿಸಬೇಕೆಂದು ಹೇಳಿದ ವಿಧಿಪುತ್ರನು ಇವನೇ, ಇವನು ಶೂರನಷ್ಟೇ ಕ್ರೂರನೂ ಇರುತ್ತಾನೆ. ಹರಿಯ ಹೂಂಕಾರದಿಂದ ಈಗ ಇವನು ಮೂರ್ಛಾರೂಪವಾದ ಮೋಹನಿದ್ರೆಯಲ್ಲಿ ಮುಳುಗಿದ್ದಾನೆ. ಇವನನ್ನು ಈಗ ನೀನು ಎಚ್ಚರಿಸು. ಅನಂತರ ಸಂಹರಿಸು. ಇವನ ವಿನಾಶಕಾರ್ಯದಲ್ಲಿ ವಿಲಂಬಮಾಡಬೇಡ.'' ಹೀಗೆ ಹೇಳಿ ಶಂಕರನು ಅಲ್ಲಿಂದ ಅದೃಶ್ಯನಾದನು. ಗೌರೀಪತಿಯು ಅಲ್ಲಿಂದ ಅಂತರ್ಹಿತನಾಗಿ ಹೊರಟುಹೋದ ಬಳಿಕ ನರನು ಶಿವ ತೋರಿಸಿ ಹೋದ ಆ ಬ್ರಹ್ಮಕುಮಾರನನ್ನು ಕಂಡನು. ಚಂದ್ರಚೂಡನ ಆಣತಿಯಂತೆ ನಿದ್ರಾ ನಿಮೀಲಿತ ನಯನನಾದ ಆ ವಿರಿಂಚಿಪುತ್ರನನ್ನು ನರನು ನಾರಾಯಣನ ಎದುರೇ ಎಡಗಾಲಿನಿಂದ ಒದ್ದುಬಿಟ್ಟನು. ನರನು ಈ ವಾಮಪಾದ ಪ್ರಹಾರದಿಂದ ಆ ವಿಧಿಜಾತನು ತಕ್ಷಣದಲ್ಲಿ ದಿಗ್ಗನೇ ಎದ್ದು ನಿಂತನು. ಬ್ರಹ್ಮದೇವರ ಬೆವರಿನಿಂದ ಹುಟ್ಟಿದ ಆ ರಾಕ್ಷಸನಿಗೂ ವಿಷ್ಣುವಿನ ರಕ್ತದಿಂದ ಹುಟ್ಟಿದ ನರವೀರನಿಗೂ ನಿಖರದ ಹೋರಾಟವು ನಡೆಯಿತು. ಇಬ್ಬರೂ ತಮ್ಮತಮ್ಮ ಧನುಷ್ಟಂಕಾರಮಾಡಿ ಹೂಂಕಾರ ಮಾತ್ರದಿಂದ ಭೂಮಂಡಲವೇ ದುಮದುಮಿಸುವಂತೆ ಮಾಡಿದರು. ಆ ವೀರ ಶೂರರಿಬ್ಬರ ಘೋರ ಯುದ್ಧವು ನೂರು ವರ್ಷ ನಡೆಯಿತು. ಕೊನೆಗೆ ಬ್ರಹ್ಮದೇವರ ಬೆವರಿನ ಕುವರನಿಗೆ ಒಂದು ಕವಚ ಮಾತ್ರ ಉಳಿಯಿತು. ವಿಷ್ಣುವಿನ ರಕ್ತಜಾತ ವರನಿಗೆ ಎರಡು

ಕೈಗಳು ಉಳಿದವು. ಶಿವಮಾನದಿಂದ ನೂರ ಹದಿಮೂರು ವರ್ಷಗಳು ಇವರೀರ್ವರ ಯುದ್ಧದಲ್ಲಿ ಕಳೆದು ಹೋದವು. ಆಗ ವಾಸುದೇವನು ಬ್ರಹ್ಮದೇವರ ಮನೆಗೆ ಹೋಗಿ ''ಬ್ರಹ್ಮನ್, ನಿನ್ನ ಬೆವರಿನ ಮಗನು ನನ್ನ ನೆತ್ತರಿನ ಮಗನು ಹೋರಾಡುತ್ತಿರುವಾಗ ನಿನ್ನ ಬೆವರಿನ ಕುಮಾರನನ್ನು ನನ್ನ ರಕ್ತಕುಮಾರನು ಹೊಡೆದು ಕೆಳಗೆ ಕೆಡವಿದ್ದಾನೆ'' ಎಂದು ಹೇಳಿದನು. ಅದನ್ನು ಕೇಳಿ ಬ್ರಹ್ಮದೇವರಿಗೆ ಕೆಡುಕೆನಿಸಿತು. ಭಗವಂತನಿಗೆ ಬ್ರಹ್ಮನು - ''ಪ್ರಭು, ನಿನ್ನ ರಕ್ತೋದ್ಭವನಾದ ನರನು ಈ ಒಂದು ಜನ್ಮದಲ್ಲಿ ಮಾತ್ರವಲ್ಲ ಮುಂದಿನ ಜನ್ಮದಲ್ಲಿಯೂ ಗೆಲ್ಲುವದರಲ್ಲಿ ಸಂದೇಹವಿಲ್ಲ ಎಂದು ನುಡಿದನು. ಹೋರಾಡುತ್ತಿರುವ ಸ್ವೇದಜ ರಕ್ತಜ-ಬೆವರು ಹಾಗೂ ರಕ್ತಗಳಿಂದ ಜನಿಸಿದ ಆ ಇಬ್ಬರೂ ವೀರರನ್ನು ಯುದ್ಧದಿಂದ ಪರಾಙ್ಮುಖಗೊಳಿಸಿ ಶ್ರೀಹರಿ ಇಂತು ನುಡಿದನು ನಿಮ್ಮಿಬ್ಬರಲ್ಲಿ ಮುಂದಿನ ಜನ್ಮದಲ್ಲಿಯಾದರೂ ಈ ಹೋರಾಟವು ನಡೆಯಲಿ. ದ್ವಾಪರಯುಗದ ಕೊನೆಗಾಲ ಹಾಗೂ ಕಲಿಯುಗದ ಪ್ರಾರಂಭ ಕಾಲಗಳು ಒಂದಕ್ಕೊಂದು ಸಂಗಮಿಸುವ ಸಂಧಿಕಾಲದಲ್ಲಿ ನಿಮ್ಮಿಬ್ಬರಿಗೂ ಪರಸ್ಪರ ಯುದ್ಧಮಾಡುವ ಅವಕಾಶವನ್ನು ನಾನು ಕೊಡುತ್ತೇನೆ. ಕಲಿ ದ್ವಾಪರಗಳ ಸಂಧಿಕಾಲದಲ್ಲಿ ಮಹಾಭಾರತ ಯುದ್ಧವು ನಡೆಯಲಿದೆ. ಆಗ ನೀವಿಬ್ಬರೂ ಹುಟ್ಟಿ ಮತ್ತೊಮ್ಮೆ ನಿಮ್ಮಿಬ್ಬರ ಕದನ ಕುತೂಹಲವನ್ನು ಕಳೆದುಕೊಳ್ಳಿರಿ.

ಹೀಗೆ ಹೇಳಿ ಶ್ರೀಹರಿಯು ಅವರಿಬ್ಬರನ್ನು ಸಂಗ್ರಾಮದಿಂದ ನಿವೃತ್ತರನ್ನಾಗಿ ಮಾಡಿದನು. ಅದೇ ವೇಳೆಯಲ್ಲಿ ಆ ಜಗದೀಶ್ವರನು ಸೂರ್ಯ ಇಂದ್ರರನ್ನು ಆಹ್ವಾನಿಸಿ ಹೇಳಿದನು.

**ವಿಷ್ಣು :-** ಭಾಸ್ಕರ, ಈ ವೀರನನ್ನು ನೋಡಿರುವೆಯಷ್ಟೇ ! ಇವನು ಬ್ರಹ್ಮದೇವನ ಬೆವರಿನಿಂದ ಹುಟ್ಟಿದ್ದಾನೆ. ದೇವತೆಗಳ ಕಾರ್ಯಸಿದ್ಧಿಗಾಗಿ ಕಲಿ ದ್ವಾಪರ ಸಂಧಿಕಾಲದಲ್ಲಿ ಇವನು ಭೂಮಿಯಲ್ಲಿ ಮತ್ತೊಮ್ಮೆ ಹುಟ್ಟುವಂತೆಮಾಡು. ಯಾದವರ ಕುಲದಲ್ಲಿ ಶೂರ ಎಂಬ ಹೆಸರಿನ ಅತ್ಯಂತ ಬಲಿಷ್ಠನಾದ ವೀರನು ಜನಿಸಲಿರುವನು. ಆ ವೀರನಾದ ಶೂರನಿಗೆ ಪೃಥಾ ಎಂಬ ಮಗಳು ಆಗುವಳು. ಸೌಂದರ್ಯದಲ್ಲಿ ಅವಳಿಗೆ ಸಮಾನರು ಯಾರೂ ಇರುವುದಿಲ್ಲ. ಅಪ್ರತಿಮ ಸುಂದರಿಯಾದ ಆ ಪೃಥಾದೇವಿಯು ದೇವಕಾರ್ಯದ ಸಿದ್ಧಿಗೋಸ್ಕರ ಭೂಲೋಕದಲ್ಲಿ ಅವತರಿಸಲಿರುವಳು. ಚಂಡಕೋಪರಾದ ದೂರ್ವಾಸರನ್ನು ಪೃಥಾದೇವಿಯು ಸೇವಿಸುವಳು. ಚಾತುರ್ಮಾಸ್ಯ ಕಾಲದಲ್ಲಿ ಸೇವಾಭಾವ, ಸಶ್ರದ್ಧ ಪರಿಚರ್ಯೆಗಳಿಂದ ದೂರ್ವಾಸರು ಸಂತುಷ್ಟರಾಗಿ ಹಲವಾರು ಮಂತ್ರಗಳನ್ನು ವರರೂಪವಾಗಿ ಕೊಡುವರು. ''ರಾಜಕುಮಾರಿ, ನಾನು ನಿಮಗೆ ಉಪದೇಶಿಸಿರುವ ಈ ಮಂತ್ರಗಳೆಲ್ಲವೂ ಅತ್ಯಂತ ಪ್ರಭಾವದಿಂದ ದೀಪ್ತವಾಗಿರುತ್ತವೆ. ಈ ಮಂತ್ರಗಳಿಂದ ನೀನು ಯಾವ ದೇವತೆಯನ್ನು ಆಹ್ವಾನಮಾಡುವೆಯೋ ಅವನ ಅನುಗ್ರಹದಿಂದ ನಿನಗೆ ಗಂಡು ಮಗು ಹುಟ್ಟುತ್ತಾನೆ. ನೀನು ಅಪೇಕ್ಷಿತ ಸಂತಾಸ ಪಡೆಯಬಹುದು.

ಮುಂದೆ ಒಂದು ದಿನ ಆ ಪೃಥಾದೇವಿಯು ಋತುಮತಿ ಆದಾಗ ನಿನ್ನೆಡೆಗೆ ದೃಷ್ಟಿ ಹರಿಸುವಳು. ತೇಜಃಪುಂಜವಾದ ನಿನ್ನ ಮಾರ್ತಾಂಡ ಮುಖಮಂಡಲ ಕಂಡು ಋತುಸ್ನಾತಳಾದ ಆ ರಾಜಕುಮಾರಿಯ ಮನಸ್ಸಿನಲ್ಲಿ ಅನುರಾಗದ ಅಂಕುರವು ಉದಿಸುವದು. ನಿನ್ನನ್ನು ಕಂಡು ಅವಳು ನಿನ್ನನ್ನೇ ಧ್ಯಾನಮಾಡುತ್ತ ನಿಂತು ಕೊಳ್ಳುವಳು. ನಿನ್ನ ಪ್ರಸಾದದಿಂದ ಅವಳ ಗರ್ಭದಲ್ಲಿ ಈ ಬ್ರಹ್ಮಕುಮಾರನು ಕನ್ಯಾಪುತ್ರನಾಗಿ

ಜನಿಸುವನು. ಕನ್ಯಾವಸ್ಥೆಯಲ್ಲಿ ಆ ಕುಂತಿಕುಮಾರಿಯ ಹೊಟ್ಟೆಯಿಂದ ಹುಟ್ಟಿದ ಕುಮಾರನಿಗೆ ವಸುಷೇಣ ಎಂದು ಹೆಸರು ಬರುವುದು.'' ಮಹಾವಿಷ್ಣುವಿನ ಈ ಮಾತುಗಳನ್ನು ಕೇಳಿ ತೇಜೋರಾಶಿಯಾದ ಸೂರ್ಯನು ಅದಕ್ಕೆ ಒಪ್ಪಿಕೊಂಡನು.

''ಭಗವನ್ ನಿನ್ನ ಅಪ್ಪಣೆಯಂತೆ ಕುಂತೀದೇವಿಯಲ್ಲಿ ಬಲಿಷ್ಠನೂ ಗರ್ವಿಷ್ಠನೂ ಆದ ಒಬ್ಬ ಪುತ್ರಶ್ರೇಷ್ಠನನ್ನು ನಾನು ಉತ್ಪಾದಿಸುವೆನು. ಕನ್ಯಾವಸ್ಥೆಯಲ್ಲಿ ಹುಟ್ಟಿದ ಆ ಕುಂತೀ ಕುಮಾರನಿಗೆ **'ಕರ್ಣ'** ಎಂದು ಜಗತ್ತಿನಲ್ಲಿ ಹೆಸರು ಪ್ರಸಿದ್ಧವಾಗುವುದು. ಮಹಾ ಪ್ರಭವೆ, ನಿನ್ನ ಆಜ್ಞೆಯಿಂದ ಆ ಕರ್ಣ ಕೊಡುಗೈ ವೀರನಾಗಿ ಬ್ರಾಹ್ಮಣರಿಗೆ ಸರ್ವಸ್ವ ದಾನಮಾಡುವ ದಾನವೀರನಾಗುವಂತೆ ಮಾಡುತ್ತೇನೆ.'' ಹೀಗೆ ಪರಮಪೂರ್ಣ ಪರಮಾತ್ಮನು ಎನಿಸಿದ ನಾರಾಯಣದೇವರ ಎದುರು ಕಿರಣಮಾಲೆಯಾದ ದಿನಕರನು ನುಡಿದು ಅಲ್ಲಿಂದ ಹೊರಟುಹೋದನು. ದಿವಾಕರನು ಅಲ್ಲಿಂದ ಅಂತರ್ಹಿತನಾದ ಬಳಿಕ ಭಗವಾನ್ ಶ್ರೀಹರಿಯು ಅಲ್ಲಿಯೇ ತನ್ನ ಬಳಿ ನಿಂತಿರುವ ದೇವೇಂದ್ರನಿಗೆ ಪ್ರೀತಿಯಿಂದ ನುಡಿದನು. ''ಸಾಸಿರಗಣ್ಣಿನ ಶಚೀಪತಿಯೆ, ಈ ನರನನ್ನು ನೋಡಿರುವೆಯಷ್ಟೇ ಇವನು ನನ್ನ ದೇಹದ ರಕ್ತದಿಂದ ಉದ್ಭೋತನಾಗಿದ್ದಾನೆ. ಇವನು ದ್ವಾಪರಯುಗದ ಕೊನೆಯಭಾಗದಲ್ಲಿ ಭೂತಳದಲ್ಲಿ ಜನಿಸುವಂತೆ ಏರ್ಪಡಿಸಬೇಕು. ಇವನಲ್ಲಿ ನಾನು ಒಂದು ಅಂಶವನ್ನು ಇರಿಸುತ್ತೇನೆ. ಆ ದ್ವಾಪರಾಂತಿಮ ಭಾಗದಲ್ಲಿ ಕುರುವಂಶದಲ್ಲಿ ಪಾಂಡು ಎಂಬ ಮಹಾರಾಜನು ಜನಿಸಲಿರುವನು. ಅವನು ಗುಣಧರ್ಮಗಳಿಂದ ನಿಜವಾಗಿಯೂ ಮಹಾತ್ಮನೇ ಸರಿ.

ದೂರ್ವಾಸ ಮುನಿಗಳಿಂದ ಅನುಗ್ರಹಿತಳಾದ ಪೃಥಾದೇವಿಯು ಆ ಪಾಂಡುರಾಜನ ಧರ್ಮಪತ್ನಿ ಎನಿಸುವಳು. ಮಹಾನುಭಾವಳಾದ ಮಾದ್ರೀದೇವಿಯು ಆ ಪಾಂಡುರಾಜನ ಕೈ ಹಿಡಿದು ದ್ವಿತೀಯ ಪತ್ನಿಯಾಗುವಳು. ಹೀಗೆ ಇಬ್ಬರೂ ಭಾರ್ಯೆಯರನ್ನು ವಿವಾಹವಾದ ಆ ಪಾಂಡುಭೂಪಾಲ ಒಂದು ದಿನ ಅರಣ್ಯಕ್ಕೆ ಹೋದಾಗ ತಿಳಿಯದೆ ಒಂದು ಚಿಗರೆಗೆ ಬಾಣ ಬಿಡುವನು. ಅದು ನಿಜವಾದ ಚಿಗರೆಯಾಗದೆ ಮೃಗರೂಪದ ಮುನಿ. ಬಾಣ ತಾಕಿ ಪ್ರಾಣ ಹೋಗುತ್ತಲಿರುವ ಮೃಗರೂಪದ ಆ ಮುನಿಯು ಆ ಪಾಂಡುದೊರೆಗೆ ಕೋಪದಿಂದ ಶಾಪವೀಯುವನು. ಮುನಿ ಶಾಪದಿಂದ ಆ ಭೂಪನಿಗೆ ವೈರಾಗ್ಯವು ಜನಿಸುವುದು. ಮನೆ, ಮಾರು, ರಾಜ್ಯ, ಕೋಶಗಳನ್ನೆಲ್ಲ ತೊರೆದು ತಪಸ್ಸಿಗಾಗಿ ಆ ಪಾಂಡುನೃಪಾಲನು ಶತಶೃಂಗ ಬೆಟ್ಟಕ್ಕೆ ಹೋಗುವನು. ಆ ಶತಶೃಂಗಗಿರಿಯಲ್ಲಿ ಈ ರಾಜಪರಿವಾರದವರು ವಾಸಿಸಿದಾಗ ಪಾಂಡುರಾಜನಿಗೆ ಪುತ್ರಾಪೇಕ್ಷೆಯಾಗುವುದು. ಆದರೆ ತಾನು ಶಾಪಗ್ರಸ್ತನಾದ್ದರಿಂದ ತನ್ನಿಂದ ಔರಸ ಸಂತತಿ ಪಡೆಯುವುದು ಸಾಧ್ಯವಿಲ್ಲ. ಅದಕ್ಕಾಗಿ ನಿಯೋಗವಿಧಿಯಿಂದ ಪುತ್ರರನ್ನು ಪಡೆಯಲು ಕುಂತಿದೇವಿಗೆ ಹೇಳುವನು. ಆದರೆ ಅವಳಿಗೆ ತನ್ನ ಪತಿಯ ಹೊರತು ಬೇರೊಬ್ಬರಿಂದ ಸಂತಾನ ಪಡೆಯಲು ಇಚ್ಛೆ ಇರುವದಿಲ್ಲ. ಆದುದರಿಂದ ಅವಳು ತನ್ನ ಪತಿಯನ್ನು ಕುರಿತು ಇಂತು ಬಿನ್ನವಿಸುವಳು.

''ಪ್ರೀತಿಯ ದೊರೆಯೆ, ನಾನು ನಿಮ್ಮ ಹೊರತು ಬೇರೆ ಯಾವದೇ ಮಾನವರಿಂದ ನಿಯೋಗ ವಿಧಿಯನ್ನು ಬಳಿಸಿಕೊಂಡು ಸಂತಾನಪಡೆಯಲು ಅಪೇಕ್ಷಿಸುವುದಿಲ್ಲ. ನೀವು ಅಪ್ಪಣೆಯಿತ್ತರೆ ದೇವತಾ ಪ್ರಸಾದದಿಂದ ಸಂತಾನ ಪಡೆಯಲು ಸಿದ್ಧಳಿದ್ದೇನೆ.'' ತನ್ನ ಮನದನ್ನೆಯ ಈ ಬಿನ್ನಹಕ್ಕೆ ಪಾಂಡುಪೃಥ್ವಿಪಾಲನು ಸಂತೋಷದಿಂದ ಸಮ್ಮತಿಯಿತ್ತನು.

ಆಗ ಆ ಪೃಥಾದೇವಿಯು ದೇವತೆಗಳನ್ನು ಪ್ರಾರ್ಥಿಸುವಳು. ಶಚಿಪತಿಯೆ, ಕುಂತಿದೇವಿಯು ಮುಂದೆ ನಿನ್ನನ್ನು ಪ್ರಾರ್ಥನೆ ಮಾಡಿಕೊಂಡಾಗ ನೀನು ನನ್ನ ಆಜ್ಞೆಯಂತೆ ಈ ನರನನ್ನು ಪುತ್ರನನ್ನಾಗಿ ಕರುಣಿಸು'' ಎಂದು ನಾರಾಯಣನು ದೇವೇಂದ್ರನಿಗೆ ಅಪ್ಪಣೆ ಕೊಡಿಸಿದನು.

ಶ್ರೀಮನ್ ನಾರಾಯಣನ ಈ ಮಾತುಗಳನ್ನು ಕೇಳಿ ದೇವೇಂದ್ರನು ದುಃಖಿತನಾಗಿ ನುಡಿದನು. ''ಭಗವನ್, ಇಪ್ಪತ್ತೇಳು ಮನ್ವಂತರಗಳ ಹಿಂದೆ ನೀನು ರಘುಕುಲದಲ್ಲಿ ರಾಮರೂಪದಿಂದ ಅವತಾರಮಾಡಿದ್ದೆ. ಆಗ ರಾವಣನ ಸಂಹಾರ, ದೇವತೆಗಳಿಗೆ ಶಾಂತಿ ಸಂತಸ ನೀಡುವುದು, ಸಜ್ಜನರನ್ನು ರಕ್ಷಿಸುವುದು, ನಿನ್ನ ಅವತಾರದ ಪ್ರಯೋಜನವಾಗಿದ್ದವು. ಆ ಕಾಲದಲ್ಲಿ ದುಷ್ಟ ರಾವಣನು ನಿನ್ನ ಧರ್ಮಪತ್ನಿಯಾದ ಜಾನಕಿಯನ್ನು ಅಪಹರಿಸಿದ್ದನು. ಆ ಸೀತಾ ಸಂಶೋಧನೆಗಾಗಿ ನೀನು ವನವನಗಳಲ್ಲಿ ತಿರುಗುತ್ತಲಿದ್ದೆ. ಆ ಸೀತಾ ಶೋಧನೆಯ ಸಂದರ್ಭದಲ್ಲಿ ನಿನಗೆ ಸೂರ್ಯಪುತ್ರನಾದ ಸುಗ್ರೀವನೊಡನೆ ಸಖ್ಯವು ಬೆಳೆಯಿತು. ಆ ಸುಗ್ರೀವನ ಹಿತಕ್ಕಾಗಿ ನೀನು ನಿರಪರಾಧಿಯಾದ ವಾಲಿಯನ್ನು ಸಂಹಾರಮಾಡಿದೆ. ಆ ವಾಲಿಯು ಬೇರೆ ಯಾರೂ ಆಗದೆ ನನ್ನ ಮಗನೇ ಆಗಿದ್ದನು. ನನ್ನ ಪುತ್ರನಾದ ವಾಲಿಯನ್ನು ನೀನು ಅಂದು ಸಂಹರಿಸಿದ ಸಂದರ್ಭ ನೆನೆದು ನನಗೆ ದುಃಖವಾಗುತ್ತದೆ. ಆದುದರಿಂದ ಈಗ ನಾನು ನಿನ್ನ ಅಂಶದಿಂದ ಒಡಗೂಡಿದ ನರನನ್ನು ಮಗನನ್ನಾಗಿ ಹುಟ್ಟಿಸಲಾರೆ.'' ಸುರಪತಿಯು ಹೀಗೆ ಏನೇನೋ ನೆಪ ಮುಂದೆ ಮಾಡಿ ಆ ನರನನ್ನು ಪುತ್ರನನ್ನಾಗಿ ಮಾಡಿಕೊಳ್ಳಲು ಹಿಂದೆಗೆಯುತ್ತಿದ್ದುದನ್ನು ಗಮನಿಸಿ ಶ್ರೀಹರಿಯು ಅವನಿಗೆ ಇಂತು ತಿಳಿ ಹೇಳಿದನು.

''ಸ್ವರ್ಗದ ಒಡೆಯನೆ, ಭೂದೇವಿಯ ಹೊರೆಯನ್ನು ಇಳಿಸುವ ಉದ್ದೇಶದಿಂದ ನಾನು ಮರ್ತ್ಯಲೋಕದಲ್ಲಿ ಅವತಾರವನ್ನು ತಾಳಲಿರುವೆನು. ಆ ಕಾಲದಲ್ಲಿ ಸೂರ್ಯನ ಮಗನಾದ ಕರ್ಣನನ್ನು ಕೊಲ್ಲಿಸುವುದು, ನಿನ್ನ ಮಗನಾದ ಅರ್ಜುನನನ್ನು ಗೆಲ್ಲಿಸುವುದು ನನ್ನ ಉದ್ದೇಶ. ನಿನ್ನ ಪುತ್ರನಾದ ಆ ನರನಿಗೆ ಗೆಲುವನ್ನು ತಂದುಕೊಡಲು ನಾನು ಅವನ ರಥದ ಸಾರಥಿಯಾಗಲಿರುವೆ. ನಿನ್ನ ಪುತ್ರನಾದ ಪಾರ್ಥನನ್ನು ಮುಂದೆ ಮಾಡಿಕೊಂಡು ಭೂಭಾರವನ್ನು ಅಳಿದುಹಾಕುವ ಸಂಕಲ್ಪ ಮಾಡಿದ್ದಾನೆ.''

ವಿಷ್ಣುವಿನ ಈ ವಾಕ್ಯವನ್ನು ಕೇಳಿ, ಸುರರಾಜನಿಗೆ ಸಂತೋಷವೆನಿಸಿತು. ಹಿಗ್ಗಿದ ಹೃದಯದಿಂದ ಹರಿಯ ಮಾತಿಗೆ ಅವನು ತನ್ನ ಹೃತ್ಪೂರ್ವಕವಾದ ಸಮ್ಮತಿಸೂಚಿಸಿ, ''ಭಗವನ್, ನೀನು ಈಗ ಆಡಿದ ನುಡಿಯನ್ನು ಯಥಾರ್ಥವನ್ನಾಗಿ ಮಾಡು. ನನ್ನ ಮಗನಾದ ಈ ನರನನ್ನು ರಕ್ಷಿಸು. ಸೂರ್ಯಪುತ್ರನನ್ನು ಶಿಕ್ಷಿಸು.'' ಹೀಗೆ ಭಗವಂತನನ್ನು ಬಿನ್ನವಿಸಿ ಶಚೀಪತಿಯು ಸಂತೃಪ್ತನಾಗಿ ಆ ನರನನ್ನು ತನ್ನೊಡನೆ ಕರೆದುಕೊಂಡು ದೇವಲೋಕಕ್ಕೆ ಹೋದನು. ಹೀಗೆ ಮಹೇಂದ್ರನನ್ನು ಬೀಳ್ಕೊಟ್ಟು ಪರಬ್ರಹ್ಮನು ಚತುರ್ಮುಖ ಬ್ರಹ್ಮನೆಡೆಗೆ ನಡೆದನು. ಬ್ರಹ್ಮ ಭವನದಲ್ಲಿ ಅವನನ್ನು ಕುರಿತು ನುಡಿದನು. ''ಸತ್ಯ ಲೋಕಾಧಿಪತಿಯಾದ ಚತುರ್ಮುಖನೆ, ಈ ಮೂರು ಲೋಕಗಳನ್ನೆಲ್ಲ ನೀನೇ ಸೃಷ್ಟಿಮಾಡಿರುವೆ. ಈ ಚರಾಚರಾತ್ಮವಾದ ಪ್ರಪಂಚವೆಲ್ಲವೂ ನಿನ್ನಿಂದಲೆ, ಸಂಸೃಷ್ಟವಾಗಿದೆ. ಈ ಜಗದ್ವ್ಯಾಪರ ಮಾಡಲು ನಾನು ಮತ್ತು ಶಿವನು ಸಹಾಯಕರಾಗಿದ್ದೇವೆ. ನೀನು ಸೃಷ್ಟಿ ಮಾಡಿದ್ದನ್ನು ನೀನೇ ನಷ್ಟಗೊಳಿಸಲಾರೆ. ಹುಟ್ಟಿಸುವುದು ನಿನ್ನ ಕೆಲಸ. ರಕ್ಷಣೆ ನನ್ನ ಕೆಲಸ. ಸಂಹರಿಸುವುದು ಶಿವನ

ಕೆಲಸ. ಹೀಗೆ ನಾವು ಮೂವರು ಕೂಡಿ ಈ ವಿಶ್ವವ್ಯಾಪಾರ ಮಾಡುತ್ತಲಿದ್ದೇವೆ. ಈ ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಂಕರನನ್ನು ಕೊಲ್ಲಬೇಕೆಂಬ ಉದ್ದೇಶದಿಂದ ನೀನು ನಿನ್ನ ಬೆವರಿನಿಂದ ಆ ಶ್ವೇತಪುರುಷನನ್ನು ಉತ್ಪಾದಿಸಿದ್ದು ಸರಿಯಲ್ಲ. ಸಿಟ್ಟಿನ ಭರದಲ್ಲಿ ನೀನು ಮಾಡಬಾರದ್ದನ್ನು ಮಾಡಿಬಿಟ್ಟೆ. ಅದು ನಿನ್ನ ತಪ್ಪು. ಆ ಪಾಪಕ್ಕಾಗಿ ನೀನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ನೀನು ಅವಹನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಗಳನ್ನು ಪ್ರತಿಷ್ಠಾಪನೆಮಾಡಿ ಅಗ್ನಿಹೋತ್ರವನ್ನು ಕೈಕೊಳ್ಳು. ಪುಣ್ಯತೀರ್ಥದಲ್ಲಿ ನನ್ನ ಅಪ್ಪಣೆ ಪಡೆದು ಯಜ್ಞಮಾಡು. ಆದಿತ್ಯರು, ರುದ್ರರು ನೀನು ಹೇಳಿದಂತೆ ಆಜ್ಞೆ ಪಾಲಿಸುತ್ತಾರೆ. ಯಾಕೆಂದರೆ ನೀನು ಎಲ್ಲರಿಗೂ ಪ್ರಭುವು. ನನ್ನ ಹೊರತು ಮಿಕ್ಕ ಸರ್ವ ದೇವತೆಗಳು ನಿನ್ನ ಆಜ್ಞಾಪಾಲಕರು ತಾನೆ!

ಗಾರ್ಹಪತ್ಯ, ದಕ್ಷಿಣಾಗ್ನಿ ಆಹವನೀಯಾಗ್ನಿಗಳನ್ನು ಪ್ರತ್ಯೇಕವಾಗಿ ರಚಿತವಾದ ಮೂರು ಹೋಮಕುಂಡಗಳಲ್ಲಿ ಸ್ಥಾಪನೆಮಾಡು. ವರ್ತುಲಾಕಾರದ ಕುಂಡದಲ್ಲಿ ಬ್ರಹ್ಮನನ್ನು, ಬಿಲ್ಲಿನ ಆಕಾರದ ಕುಂಡದಲ್ಲಿ ವಿಷ್ಣುವನ್ನು, ಚತುಷ್ಕೋನಕುಂಡದಲ್ಲಿ ಗೌರಿಪತಿ ರುದ್ರನನ್ನು ಋಗ್ವೇದ, ಯಜುರ್ವೇದ, ಸಾಮವೇದಗಳ ಹೆಸರಿನಿಂದ ಸ್ಥಾಪನೆಗೈಯಬೇಕು. ತಪಸ್ಸಿನಿಂದ ಅಲ್ಲಿ ಅಗ್ನಿಗಳನ್ನು ಉತ್ಪಾದನೆಮಾಡಿ ಅದನ್ನು ಅಭಿವೃದ್ಧಿಗೊಳಿಸುತ್ತ ಸಾವಿರ ವರ್ಷ ಹೋಮಮಾಡು. ಆದರಿಂದ ಕೊನೆಗೆ ನೀನು ನನ್ನನ್ನು ಹೊಂದುವಿ. ಅಗ್ನಿಹೋತ್ರವ್ರತವನ್ನು ಪಾಲನೆ ಮಾಡುತ್ತ ಹೋಮಮಾಡುವ ಬ್ರಾಹ್ಮಣರು ದಿವ್ಯಗತಿಯನ್ನು ಹೊಂದುತ್ತಾರೆ. ಅಗ್ನಿಹೋತ್ರಕ್ಕಿಂತ ಪವಿತ್ರವಾದುದು ಬೇರೆ ಯಾವುದೂ ಇರುವದಿಲ್ಲ. ಈ ಅಗ್ನಿಗಳು ದೇವಲೋಕದ ದಿವ್ಯ ಪಥವನ್ನು ತೋರಿಸುತ್ತವೆ. ಅಗ್ನಿಹೋತ್ರವನ್ನು ಇರಿಸಿಕೊಂಡ ಬ್ರಾಹ್ಮಣರು ಅದು ಎಂದೂ ಆರದಂತೆ, (ನಂದದಂತೆ) ನೋಡಿಕೊಳ್ಳಬೇಕು. ಅಗ್ನಿಯಿಲ್ಲದೆ -ಬ್ರಾಹ್ಮಣರು ಗೃಹಸ್ಥರಾಗಿ ಬಾಳಲಾರರು. ಗ್ರಹಸ್ಥಾಶ್ರಮಕ್ಕೆ ಅಗ್ನಿಕಾರ್ಯವು ಮುಖ್ಯವಾದದ್ದು.'' ಎಂದು ಹರಿ ಬ್ರಹ್ಮನಿಗೆ ಉಪದೇಶಿಸಿದ. ವಿಷ್ಣುವಿನ ಈ ಆದೇಶವನ್ನು ಭಕ್ತಿಯಿಂದ ಪಾಲಿಸಿ ಬ್ರಹ್ಮ ಕೃತಾರ್ಥನಾದ.

**ಭೀಷ್ಮ** :- ಶಿವನ ಕಪಾಲದಿಂದ ಧನುರ್ಧರನಾಗಿ ನರನು ಉತ್ಪನ್ನನಾದನಷ್ಟೇ ! ಈ ನರನು ಹುಟ್ಟಿದ್ದು ಮಾಧವನಿಂದಲೋ ಮಹೇಶನಿಂದಲೋ ಅಥವಾ ಬ್ರಹ್ಮನಿಂದಲೋ ? ಅವನಂಥವನು ಜನಿಸಿದ್ದು ಯಾರ ಕರ್ಮಕೌಶಲದಿಂದ ? ಅವನು ಉದಿಸಿದ್ದು ಯಾರಿಂದ ಏತಕ್ಕಾಗಿ ? ಮತ್ತು ಬ್ರಹ್ಮಾಂಡದಿಂದ ಆವಿರ್ಭವಿಸಿದ ಹಿರಣ್ಯಗರ್ಭ ಎಂದು ಹೆಸರು ಹೊಂದಿದ ಬ್ರಹ್ಮದೇವನು ಚತುರ್ಮುಖನೆಂದು ಪ್ರಸಿದ್ಧನಾಗಿರುವನಷ್ಟೆ ! ಅವನಿಗೆ ಐದನೆಯ ಮುಖವು ಉದ್ಭೂತವಾದುದು ಎಂತು ? ಇದು ಅತ್ಯಾಶ್ಚರ್ಯಕರ ಎನಿಸುವುದು.

ಸ್ವತಗುಣವು ಪೂರ್ಣವಾಗಿದ್ದಾಗ ರಜೋಗುಣದ ಕಾರ್ಯವಿರುವುದಿಲ್ಲ. ಸಂಪೂರ್ಣ ರಾಜಸಭಾವವಿದ್ದಲ್ಲಿ ಸತ್ವಕ್ಕೆ ಅವಕಾಶವಿರುವುದಿಲ್ಲ. ಬ್ರಹ್ಮನು ಸತ್ವಮೂರ್ತಿ. ಸತ್ವಸ್ಥ ಅವನಿಗೆ ರಜೋಗುಣದ ಸಂಪರ್ಕವು ಹೇಗೆ ಆಯಿತು ? ಮತ್ತು ರಜಃ ಪರಿಣಾಮವಾದ ಮೂಢತನವು ಆ ಚತುರ್ಮುಖನನ್ನು ಆವರಿಸಿದ್ದು ಹೇಗೆ ? ಶಿವನನ್ನು ಸಂಹರಿಸಲು ನರನನ್ನು ಕಳಿಸವಷ್ಟರಮಟ್ಟಿಗೆ ರಜೋವಿಕಾರಕ್ಕೆ ಅವನು ವಶವಾದುದೆಂತು ?

**ಪುಲಸ್ತ್ಯ :-** ಶಂಕರ ಹಾಗೂ ಶ್ರೀಹರಿ ಇವರಿಬ್ಬರೇ ನಿಜವಾಗಿ ಮಹಾಪುರುಷರು. ಅವರು ಎಂದೂ ನ್ಯಾಯಮಾರ್ಗದಿಂದ ವಿಚಲಿತರಾಗುವುದಿಲ್ಲ. ಸಿದ್ಧ ಹಾಗೂ ಸಾಧ್ಯ ವಸ್ತುಗಳಲ್ಲಿ ಅವರಿಗೆ ತಿಳಿಯದಿದ್ದುದು ಯಾವುದಿದೆ ? ಬ್ರಹ್ಮನ ಐದನೆಯ ಮುಖವು ಮೇಲುಗಡೆಗೆ ಇದ್ದಿತು. ಊರ್ಧ್ವಾಭಿಮುಖವಾದ ಆ ಮುಖದಿಂದ ಬ್ರಹ್ಮನು ಮೂಢನಾದನು. ಮತ್ತು ರಜೋಗುಣವು ಅವನನ್ನು ಆವರಿಸಿತು. ಪರಮಾತ್ಮನ ತೇಜಸ್ಸಿನಿಂದ ಸಾಧ್ಯವಾದ ಸೃಷ್ಟಿಯನ್ನೆಲ್ಲ ನಾನೇ ಮಾಡಿದ್ದೇನೆ ಎಂಬ ಅಹಂಕಾರವು ಅವನಲ್ಲಿ ಅಂಕುರಿಸಿತು. ದೇವತೆಗಳನ್ನು, ಗಂಧರ್ವರನ್ನು, ಪಶು-ಪಕ್ಷಿ, ಮೃಗಗಳನ್ನು ಸ್ವಸಾಮರ್ಥ್ಯದಿಂದ ನಿರ್ಮಾಣಗೈದ ನನ್ನಂತಹ ಸೃಷ್ಟಿ ಕರ್ತ್ವಾರನು ಯಾರು ? ಎಂಬ ಹಮ್ಮು ಅವನ ಹೃದಯದಿಂದ ಹೊಮ್ಮಿತು. ಸೃಷ್ಟಿಕರ್ತೃತ್ವ ಸರ್ವ ಜೀವೋತ್ತಮತ್ವಗಳ ಹಮ್ಮು-ಬಿಮ್ಮುಗಳಿಂದ ಬೀಗಿನಿಂತನು. ಹೀಗೆ ದರ್ಪಿಷ್ಟನಾದ ಆ ಪರಮೇಷ್ಠಿಯ ತನ್ನ ಸ್ಥಾನಬಲದಿಂದ ವಿನಾಶವಿದೂರನೂ ಆಗಿದ್ದನು.

ಆ ಚತರ್ಮುಖನ ನಾಲ್ಕು ವದನಗಳಲ್ಲಿ ಪೂರ್ವಾಭಿಮುಖವಾದ ಮೋರೆಯು ಪ್ರಮುಖವಾದದ್ದು. ಅದು ಋಗ್ವೇದದಕ್ಕೆ ಪ್ರವರ್ತಕವಾಗಿರುತ್ತದೆ. ಆ ಹಂಸವಾಹನನ ದ್ವಿತೀಯ ವದನವು ಯಜುರ್ವೇದಕ್ಕೆ ಆರಂಭಕವಾಗಿದೆ. ಆ ಕಮಲಾಸನನ ಮೂರನೆಯ ಮುಖವು ಸಾಮವೇದಕ್ಕೆ ಅವಿರ್ಭಾವಕವಾಗಿದೆ. ಆ ಚತುರ್ಮುಖನ ಚತುರ್ಥ ಮುಖವು ಅಥರ್ವಣವೇದಕ್ಕೆ ಪ್ರಾರಂಭಿಕ. ವೇದಗಳ ಅಂಗ, ಉಪಾಂಗ, ಇತಿಹಾಸ ರಹಸ್ಯಾರ್ಥಗಳಿಂದ ಒಡಗೂಡಿದ ಎಲ್ಲ ವೇದಗಳನ್ನೂ ಆ ಕಮಲಯೋಗಿಯು ಮೇಲು ನೋಟದ ಐದನೆಯ ಮುಖದಿಂದ ಪಠಿಸುತ್ತಲಿದ್ದನು. ಆ ಪಂಚಮವದನದ ಪ್ರಕಾಶವು ಅತ್ಯದ್ಭುತ. ಅದರ ದೇದೀಪ್ಯಮಾನವಾದ ಪ್ರಕಾಶ ದೀಪ್ತಿಯಿಂದ ಸಮಸ್ತ ದೇವ, ದಾನವ ಧುರೀಣರೆಲ್ಲರೂ ನಿಸ್ತೇಜರಾಗಿದ್ದರು. ದಿವಾಕರನು ಉದಿಸುವಾಗ ದೀಪಗಳು ಕಳೆಗುಂದುವಂತೆ ಬ್ರಹ್ಮನ ಆ ಪಂಚಮಮುಖದ ಎದುರು ಎಲ್ಲ ಸುರಾಸುರಶ್ರೇಷ್ಠರು ನಿಷ್ಪ್ರಭರಾಗಿದ್ದರು. ಬ್ರಹ್ಮಲೋಕಕ್ಕೆ ಹೋದಾಗ ಅಷ್ಟೇ ಅಲ್ಲ ತಮ್ಮ ತಮ್ಮ ಗ್ರಾಮ ಧಾಮಗಳಲ್ಲಿ ತಂಗಿದಾಗಲೂ ಸುರಾಸುರರಿಗೆಲ್ಲ ಅದೇ ಒಂದು ಚಿಂತೆ ಆಗಿದ್ದಿತು. ಯಾರಿಗೂ ಬ್ರಹ್ಮದೇವನ ಬಳಿಗೆ ಹೋಗದಂತಾಗಿತ್ತು. ಅವನನ್ನು ಕಾಣಲಿಕ್ಕೂ ಮಾತನಾಡಲಿಕ್ಕೂ ಅವಕಾಶವೇ ದೊರಕುತ್ತಿರಲಿಲ್ಲ. ತೇಜೋ ದೀಪ್ತವಾದ ಆ ಶಾರದಾ ಪತಿಯ ಮೇಲ್ಮುಖದ ಪ್ರಭಾಃಪುಂಜದಿಂದ ಎಲ್ಲರಿಗೂ ತೇಜೋವಧೆಯಾದಂತಾಗಿ ಅವಮಾನದಿಂದ ಪ್ರತಿಯೊಬ್ಬನೂ ತಲೆ ತಗ್ಗಿಸಬೇಕಾಗಿತ್ತು. ಆಗ ಸುರಾಸುರ ವೃಂದದ ಮುಂದಾಳುಗಳೆಲ್ಲ ಒಂದೆಡೆಗೆ ಸೇರಿ ಮುಂದೇನು ಮಾಡುವುದೆಂದು ಆಲೋಚನೆಗೈದರು. ತಮ್ಮ ಈ ತೇಜೋಭಂಗ ಹಾಗೂ ಆತ್ಮಾವಮಾನಗಳ ಪರಿಹಾರಕ್ಕಾಗಿ ಕೈಲಾಸಪತಿ ಶಂಕರನನ್ನೇ ಶರಣು ಹೋಗುವುದನ್ನು ನಿರ್ಧರಿಸಿ ಶಿವನ ಬಳಿಗೆ ಬಂದರು.

ಎಲ್ಲ ದೇವತೆಗಳಿಗೂ ಅಧಿಪತಿಯಾದ ಮಹೇಶ್ವರನೆ ನಿನಗೆ ನಮಸ್ಕಾರ. ನಿನ್ನನ್ನು ನಾವು ವಂದಿಸುವೆವು. ಯಜ್ಞಯಾಗಾದಿ ಪುಣ್ಯ ಕರ್ಮಗಳೆಲ್ಲವೂ ನಿನ್ನ ಉದೇಶದಿಂದ ಪ್ರವೃತ್ತವಾಗುವವು. ಸರ್ವಪ್ರಾಣಿಗಳ ಅಂತರ್ಯಾಮಿಯಾದ ನೀನು ಪರಬ್ರಹ್ಮ ಎನಿಸುವೆ. ಆದಿಪುರುಷನಾದ ನೀನು ವಿಷ್ಣುವಿನೊಂದಿಗೆ ಹದಿನಾಲ್ಕು ಲೋಕಗಳಿಗೂ ಆಧಾರಭೂತನಾಗಿರುವೆ.'' ಹೀಗೆ ದೇವತೆಗಳು, ಋಷಿಗಳು, ದಾನವರು ಕೂಡಿ

ಒಕ್ಕೊರಲಿನಿಂದ ಕೈ ಜೋಡಿಸಿ ಸ್ತೋತ್ರಮಾಡುವದನ್ನು ಕೇಳಿ ಪರಮೇಶ್ವರನು ಸಂತುಷ್ಟನಾದನು. ಅದೃಶ್ಯನಾಗಿದ್ದುಕೊಂಡೇ ಅವರಿಗೆ ''ದೇವತೆಗಳೆ, ನಿಮಗೆ ಅಪೇಕ್ಷಿತವಾದುದನ್ನು ಕೇಳಿಕೊಳ್ಳಿರಿ'' ಎಂದು ಹೇಳಿದನು. ಆಗ ಆ ದೇವಾದಿ ಭಕ್ತರೆಲ್ಲರೂ ಕೈ ಮುಗಿದು. ''ಭಗವನ್, ಮೊದಲು ನೀನು ನಮಗೆ ದರ್ಶನ ದಯಪಾಲಿಸು. ತದನಂತರ ನಮಗೆ ಇಷ್ಟವಾದ ವರವನ್ನು ಕರುಣಿಸು. ನಮಗೆ ಮೊದಲು ಬೇಕಾದದ್ದು ನಿನ್ನ ಕರುಣೆ ಮತ್ತು ನಿನ್ನ ದರ್ಶನ ಆ ಮೇಲೆ ವರ. ಶಿವಪ್ರಭುವೆ, ನಮ್ಮೆಲ್ಲರ ವಿಶಿಷ್ಟ ಶಕ್ತಿ ತೇಜಸ್ಸು ಹಾಗೂ ಪರಾಕ್ರಮಗಳೆಲ್ಲವೂ ಚತುರ್ಮುಖನ ತೇಜಸ್ವಿ ವದನದಿಂದ ನುಂಗಲ್ಪಟ್ಟಿವೆ. ಎಲ್ಲ ಪ್ರಾಣಿಗಳ ಎಲ್ಲ ತೇಜಸ್ಸು ಬ್ರಹ್ಮಮುಖದ ಅವಿಶಿಷ್ಟದೀಪ್ತಿಯಿಂದ ನಷ್ಟಭ್ರಷ್ಟವಾಗಿವೆ.

ನಮ್ಮೆಲ್ಲರ ನಷ್ಟವಾದ ಪ್ರಕಾಶವು ಪುನಃ ನಮಗೆ ಪ್ರಾಪ್ತವಾಗಬೇಕಾದರೆ ನಿನ್ನ ಪರಮಾನುಗ್ರಹದಿಂದ ಮಾತ್ರ ಸಾಧ್ಯ. ಪ್ರಸಾದರೂಪವಾದ ತೇಜಪ್ರಾಪ್ತಿ ವರವಾಗಿ ಕೇಳಿಕೊಳ್ಳುತ್ತೇವೆ.'' ಸುರಾಸುರ ಸಂದೋಹದ ಈ ವರಯಾಚನೆಯನ್ನು ಕೇಳಿ ಶಿವನು ತಕ್ಷಣ ಅಲ್ಲಿಂದ ಹೊರಟನು. ಅವನು ಮುಖವು ಪ್ರಸನ್ನವಾಗಿದ್ದಿತು. ಅದನ್ನು ಕಂಡು ದೇವತೆಗಳಿಗೆ ತಮ್ಮ ಕೆಲಸವಾದಂತೆ ಎಂಬ ಭರವಸೆ ಮೂಡಿತು. ಅವರೆಲ್ಲರೂ ಪರಮೇಶ್ವರನಿಗೆ ಭಕ್ತಿಯಿಂದ ನಮಸ್ಕಾರ ಮಾಡಿದರು. ಬ್ರಹ್ಮಲೋಕಕ್ಕೆ ನೇರವಾಗಿ ನಡೆದನು. ಆ ನಾಗಭೂಷಣನು. ದೇವತೆಗಳು ಅವನನ್ನು ಹಿಂಬಾಲಿಸಿದರು. ಅವರ ಮುಖದಿಂದ ನಡೆದೇ ಇತ್ತು ಶಿವಸ್ತುತಿ. ಬ್ರಹ್ಮನು ಮಾತ್ರ ರಜೋಗುಣದ ಕಾರ್ಯವಾದ ಅಹಂಕಾರದಿಂದ ಸಂಪೂರ್ಣವಾಗಿ ಆವರಿಸಲ್ಪಟ್ಟಂತೆ ನಡೆಸುತ್ತಿದ್ದನು. ಆದರೆ ಅವನ ಸ್ವಾಭಾವಿಕವಾದ ಕಾಂತಿಗೆ ಕೊರತೆ ಇರಲಿಲ್ಲ. ಕೋಟಿ ಕೋಟಿ ಸೂರ್ಯರು ಏಕಕಾಲಕ್ಕೆ ಬೆಳಗಿ ಬಂದಂತಿತ್ತು. ಆ ಚತುರ್ಮುಖನ ಆತ್ಮಶ್ರೀ. ದೇವಮಂಡಲ ಮಧ್ಯದಲ್ಲಿ ಸುಖಾಸೀನನಾದ ಆ ಪಿತಾಮಹ ಬಳಿಗೆ ಸಾರಿ ರುದ್ರನು ನುಡಿದನು. ''ಬ್ರಹ್ಮನೆ, ಏನು ಅದ್ಭುತವಪ್ಪ ನಿನ್ನ ತೇಜಸ್ಸು. ನಿನ್ನ ಈ ಪಂಚಮುಖದ ಪ್ರಭೆಯು ಅತಿಯಾಗಿದೆ'' ಎಂದು ನುಡಿದ ಶಿವನು ಅಟ್ಟಹಾಸ ಮಾಡಿದನು ಮತ್ತು ತನ್ನ ಎಡಗೈ ಹೆಬ್ಬೆರಳಿನ ಉಗುರಿನ ತುದಿಯಿಂದ ಆ ವಾಣೀಪತಿಯ ಪಂಚಮ ಶಿರವನ್ನು ಕತ್ತರಿಸಿದನು. ಮಾನವನು ಉಗುರಿನಿಂದ ಬಾಳೆಗೊನೆಯನ್ನು ಸೀಳಿದಂತೆ ಲೀಲಾಜಾಲವಾಗಿ ಅರೆ ನಿಮಿಷದಲ್ಲಿ ಹರನು ಬ್ರಹ್ಮನ ತಲೆಯನ್ನು ಸೀಳಿಹಾಕಿದನು. ಕತ್ತರಿಸಿದ ವಿಧಾತನ ಆ ಐದನೆಯ ತಲೆಯು ಕೈಲಾಸಪತಿಯ ಕೈಗೆ ಅಂಟಿಕೊಂಡಿತು. ನವಗ್ರಹಗಳ ಮಂಡಲದ ಮಧ್ಯದಲ್ಲಿ ಎರಡನೆಯ ಚಂದ್ರನಂತೆ ರುದ್ರನ ಹಸ್ತದಲ್ಲಿ ಆ ಬ್ರಹ್ಮಕಪಾಲವು ತೋರುತ್ತಿತ್ತು. ವಿಧಿಯ ತಲೆಬುರುಡೆಯನ್ನು ಕೈಯಿಂದ ಮೇಲಕ್ಕೆ ಎತ್ತಿ ಹಿಡಿದು ದೇವತೆಗಳ ಒಡೆಯನಾದ ರುದ್ರನು ಕುಣಿಯತೊಡಗಿದನು.

ಶಿಖರದ ತುದಿಯಲ್ಲಿ ಕಂಗೊಳಿಸುವ ಸೂರ್ಯನಿಂದ ಕೈಲಾಸಪರ್ವತವು ಶೋಭಾಯಮಾನವಾಗುಂತೆ ಕರಕಮಲವನ್ನು ಶರಕಪಾಲವನ್ನು ಹೊಂದಿದ ಶಿವನು ಕಣ್ಣಿಗೆ ಎಸೆಯುತ್ತಿದ್ದನು. ಹೀಗೆ ತನ್ನ ತೇಜಃಪ್ರಕರ್ಷದಿಂದ ಸಕಲ ಸುರಾಸರು ಸಿದ್ಧ ಮಾನವ ವೃಂದವನ್ನೆಲ್ಲ ನಿಸ್ತೇಜರನ್ನಾಗಿ ಮಾಡುತ್ತಲಿರುವ ಪರಮೇಷ್ಠಿಯ ಪಂಚಮ ಶಿರವು ವಿಚ್ಛಿನ್ನವಾದದ್ದನ್ನು ಕಂಡು ದೇವತೆಗಳಿಗೆಲ್ಲ ಪರಮಾನಂದವಾಯಿತು. ಆನಂದಭರಿತರಾದ

ಅಮರ ಗಣಾಧೀಶ್ವರರೆಲ್ಲರೂ ವೃಷಭವಾಹನನಾದ ಆ ಗಿರೀಶ್ವರನನ್ನು ಬಗೆ ಬಗೆಯ ಭಕ್ತಿಭಾವಭರಿತವಾದ ಸ್ತೋತ್ರಗಳಿಂದ ಪ್ರಾರ್ಥಿಸಿದರು.

ಕಪಾಲಿಯಾದ ಮಹಾಕಾಲ ರುದ್ರನಿಗೆ ನಿತ್ಯವೂ ನಮಸ್ಕಾರ. ಭಕ್ತರಿಗೆ ಸಕಲವಿಧ ಭೋಗಗಳನ್ನು ನೀಡುವ ಹಾಗೂ ಜ್ಞಾನ ಐಶ್ವರ್ಯಗಳಿಂದ ಒಡಗೂಡಿದ ಶಿವನಿಗೆ ವಂದನೆ. ಪ್ರಳಯಕಾಲದಲ್ಲಿ ಎಲ್ಲರನ್ನೂ ಸಂಹರಿಸುವವನು ನೀನೇ. ಆದ್ದರಿಂದ ನಿನಗೆ ಮಹಾಕಾಲ ಎಂದು ಹೆಸರು ಬಂದಿದೆ. ''ಇಂತಹ ನೀನು ಈಗ ನಮ್ಮ ಮೇಲೆ ಪ್ರಸನ್ನನಾಗು.'' ಹೀಗೆ ದೇವತೆಗಳಕಾರ್ಯಮಾಡಿ ಸಂತೋಷಪಡಿಸಿದ ಬಳಿಕ ಸುರರೆಲ್ಲರೂ ಶಂಕರನ ಅನುಜ್ಞೆ ಪಡೆದು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಸಂತುಷ್ಟ ಚಿತ್ತನಾದ ಶಂಭುವು ಅಲ್ಲಿಯೇ ವಾಸಿಸಿದನು. ಅನಂತರ ಮಹೇಶ್ವರನು ಬ್ರಹ್ಮದೇವರ ಭಾವವನ್ನೂ ವೀರಪುರಷನ ಜನ್ಮವನ್ನೂ ಅರಿತು ಆ ವೀರವರೇಣ್ಯನ ಮಾತಿನಂತೆ ಬ್ರಹ್ಮದೇವರನ್ನು ಸ್ತೋತ್ರಮಾಡಲು ಉಪಕ್ರಮಿಸಿದ. ಅಪ್ರಮೇಯನೂ, ಪರಾತ್ಪರನೂ, ಅತ್ಯಾಶ್ಚರ್ಯಕ್ಕೆಲ್ಲ ಮೂಲಕಾರಣನೂ, ತೇಜೋನಿಧಿಯೂ, ನಾಶರಹಿತನೂ ಆದ ಬ್ರಹ್ಮದೇವನೆ ನಿನಗೆ ನನ್ನ ನಮಸ್ಕಾರವಿರಲಿ. ನೀರಿನಲ್ಲಿ ಹುಟ್ಟಿ ನೀರಿನಲ್ಲಿ ನೆಲೆಸಿ, ನೀರನಿಂದ ಉದ್ಭವಿಸಿದ ಕಮಲದಂತೆ ವಿಶಾಲ ಕಣ್ಣುಗಳುಳ್ಳ ಪ್ರಪಂಚದ ಪಿತಾಮಹನಾದ ಬ್ರಹ್ಮದೇವನೆ, ನಿನಗೆ ನಮಸ್ಕಾರ. ನಿನಗೆ ಯಾವಾಗಲೂ ಜಯವಿರಲಿ. ಪ್ರಭುವೆ, ದೇವತೆಗಳ ಮಾತಿನಿಂದ ನಾನು ನಿನ್ನ ಶಿರಚ್ಛೇದನವನ್ನು ಮಾಡಿದೆನು ಕ್ಷಮಿಸು. ನನಗೆ ಬ್ರಹ್ಮಹತ್ಯಾಪಾತಕವು ತಟ್ಟಿದೆ ಘೋರವಾದ ಈ ಮಹಾಪಾಪದಿಂದ ನನ್ನನ್ನು ರಕ್ಷಿಸು. ''ಮಹಾದೇವನ ಈ ಮಾತನ್ನು ಕೇಳಿ ಬ್ರಹ್ಮ ನುಡಿದ- ''ನಾರಾಯಣನು ಜೀವಾತ್ಮರಿಗೆಲ್ಲ ಸಖನೆಂದು'' ದ್ವಾಸಂಪರ್ಣಾಸಯುಜಾಸಖಾಯಾ' ಎಂಬ ವೇದ ಮಂತ್ರಗಳಲ್ಲಿ ಸಾರಲ್ಪಟ್ಟಿದೆಯಷ್ಟೆ ಅಂತಹ ಗುಣ ಪರಿಪೂರ್ಣವಾದ ಭಗವಂತನು ಬ್ರಹ್ಮಹತ್ಯಾ ಪಾತಕದಿಂದ ಆಕ್ರಾಂತನಾದ ನಿನ್ನನ್ನು ಪವಿತ್ರಗೊಳಿಸಿದನು.

ಈ ಪಾಪ ಪರಿಹಾರಕ್ಕೆ ನೀನು ಆ ಪರಮಾತ್ಮನನ್ನೇ ಸ್ತೋತ್ರಮಾಡಬೇಕು. ಮಹಾಪ್ರಭುವಾದ ಆ ವಿಷ್ಣುವು ನನಗೂ ಪೂಜ್ಯನಾಗಿದ್ದಾನೆ. ನನ್ನ ಶಿರಚ್ಛೇದವನ್ನು ಮಾಡಿದ ನಿನಗೆ ಪುನಃ ನನ್ನನ್ನು ಸುತ್ತಿಸಿ, ಅಪರಾಧ ಕ್ಷಮಾಪಣೆ ಬುದ್ಧಿ ಹುಟ್ಟಿಸಿದ್ದು ಕೂಡ ಆ ನಾರಾಯಣನ ಅನುಗ್ರಹದಿಂದಲೇ ಎಂದು ತಿಳಿ. ಅವನು ನಿನಗೆ ಒಳ್ಳೆಯದಾಗಲಿ ಎಂದು ಭಾವಿಸಿದ್ದರಿಂದಲೇ ನಿನಗೆ ನನ್ನಲ್ಲಿ ಭಕ್ತಿ ಹುಟ್ಟಿಸ್ತೋತ್ರಮಾಡಿರುವೆ. ನನ್ನ ಶಿರಚ್ಛೇದದಿಂದ ನೀನು ಕಪಾಲಿ ಎಂದು ಹೆಸರಾಗಿ ಸೋಮ ಸಿದ್ಧಾಂತದ ಸಂಸ್ಥಾಪಕನಾಗುವೆ. ಮತ್ತು ಪ್ರಾಣಿಗಳ ಉದ್ಧಾರಗೈಯುವೆ. ಅನೇಕ ಅನುಶಾಸನಗಳನ್ನು ನೀನು ಹೊರಡಿಸುವೆ. ನೂರು ಕೋಟಿ ಬ್ರಾಹ್ಮಣರನ್ನು ನೀನು ಮುಂದೆ ಉದ್ಧಾರಗೈಯುವೆ. ಇದೆಲ್ಲವೂ ನಿನಗೆ ಆ ನಾರಾಯಣನ ಅನುಗ್ರಹದಿಂದ ಮಾತ್ರ ಸಾಧ್ಯವಾಗಬಲ್ಲದು. ಇಲ್ಲದಿದ್ದರೆ, ನೀನು ಗೈದ ಈ ಬ್ರಹ್ಮ ಹತ್ಯಾಪಾತಕಕ್ಕೆ ಬೇರೆ ಯಾವ ಪರಿಹಾರವೂ ಇಲ್ಲ. ಯಾವ ವ್ರತ ಅನುಷ್ಠಾನಗಳೂ ಈ ಪಾಪವನ್ನು ತೊರೆಯಲಾರವು. ಬ್ರಹ್ಮಹತ್ಯಾರೂಪವಾದ ಘೋರ ಪಾತಕಗೈದ ಪಾತಕಿಗಳನ್ನು ಮಾತನಾಡಿಸಬಾರದು. ಸಂಭಾಷಣೆಗೂ ಅವರು ಅನರ್ಹರು. ಅವರನ್ನು ಪೂಜಿಸುವುದಿರಲಿ, ಅವರನ್ನು ನೋಡಿದ ಮಾತ್ರಕ್ಕೆ ತಿರುಗಿ ಸೂರ್ಯನನ್ನು ಕಾಣಬೇಕು.

ಇಲ್ಲದಿದ್ದರೆ ಅಶೌಚ, ಬ್ರಹ್ಮಹತ್ಯಾ ಪಾತಕಿಗಳ ದೇಹ ಸ್ಪರ್ಶವಾದರೆ ಉಟ್ಟ ತೊಟ್ಟ ಬಟ್ಟೆ ಸಹಿತ ನೀರಿನಲ್ಲಿ ಮುಳುಗಿ ಏಳಬೇಕು. ಇಷ್ಟು ಭಯಂಕರವಾಗಿದೆ ಈ ಬ್ರಹ್ಮಹತ್ಯಾ ಪಾಪ. ಇಂತಹ ಭಯಂಕರವಾದ ಬ್ರಹ್ಮಹತ್ಯಾ ಪಾಪವನ್ನು ನೀನು ಆಚರಿಸಿರುವೆ. ಆದರ ಶುದ್ಧಿಗಾಗಿ ಶ್ರೀಮನ್ ನಾರಾಯಣನ ಧ್ಯಾನ, ಸೇವೆ, ಆಚರಿಸಬೇಕು. ವಿಷ್ಣುವಿನ ಧ್ಯಾನದಿಂದ ''ವಿಷ್ಣು ವ್ರತ'' ದಿಂದ ತೊಳೆಯದ ಪಾಪವಿಲ್ಲ, ಕಳೆಯದ ದೋಷವಿಲ್ಲ. ಬ್ರಹ್ಮಹತ್ಯಾ ರೂಪವಾದ ಪಾತಕವನ್ನು ನೀನು ಮಾಡಿದ್ದರೂ ಆ ಭಾಗವಧ್ಯಾನದಿಂದ ಮತ್ತು ವಿಷ್ಣುವ್ರತದ ಪ್ರಭಾವದಿಂದ ಪರಿಶುದ್ಧನಾಗುವೆ. ನಿನ್ನ ಪಾಪಗಳು ಪರಿಹಾರವಾಗವದಲ್ಲದೆ ಆ ಪರಮಾತ್ಮನಿಂದ ಅನೇಕ ವರಗಳನ್ನು ನೀನು ಪಡೆಯುವೆ'' ಹೀಗೆ ಹೇಳಿ ಕಮಲಾಸನನನು ಅಲ್ಲಿಂದ ಹೊರಟು ಹೋದನು. ಕೈಲಾಸಪತಿಗೆ ಆ ವಿಧಾತನು ಅಲ್ಲಿಂದ ನಿಷ್ಕ್ರಮಿಸಿದ್ದೂ ಕೂಡ ಗೊತ್ತಾಗಲಿಲ್ಲ. ಆಗಲೇ ಅವನ ಮನಸ್ಸು ಮಹಾವಿಷ್ಣುವಿನ ಧ್ಯಾನದಲ್ಲಿ ಲೀನವಾಗಿದ್ದಿತು. ಏಕತಾನ ಮಾನಸದಿಂದ ಲಕ್ಷ್ಮೀಪತಿಯೂ ದೇವ-ದೇವನೂ, ವರಪ್ರದನೂ ಆದ ಆ ಜಗದೀಶ್ವರನನ್ನು ಅವನು ಧ್ಯಾನಿಸತೊಡಗಿದನು. ಭಕ್ತಿಯುಕ್ತನಾದ ಮುಕ್ಕಣ್ಣನು ಧ್ಯಾನಗೋಚರನಾದ ಭಗವಾನ್ ನಾರಾಯಣನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಸ್ತೋತ್ರ ಮಾಡಿದನು.

## ॥ ರುದ್ರಉವಾಚ ॥

**ಪರಂ ಪರಾಣಾಂ ಪರಮಂ ಪುರಾಣಂ ಪರಾತ್ಪರಂ ವಿಷ್ಣುಮನಂತ ವೀರ್ಯಂ ।**
**ಸ್ವರಾಮಿನಿತ್ಯಂ ಪುರುಷಂ ವರೇಣ್ಯಂ ನಾರಾಯಣಂ ತ್ರಿಪ್ರಥಮಂ ಪುರಾಣಂ॥**

''ಶ್ರೇಷ್ಠರಲ್ಲಿ ಶ್ರೇಷ್ಠನು, ಪುರಾಣ ಪುರುಷೋತ್ತಮನು, ಬ್ರಹ್ಮ-ರುದ್ರಾದಿ ದೇವತೆಗಳಿಗಿಂತ ಉತ್ತಮನು, ಅಪರಿಮಿತವಾದ ಶಕ್ತಿಯುಕ್ತನು, ಭಕ್ತರಿಗೆ ಪ್ರಪ್ರಥಮನು ಆದ ನಾರಾಯಣನನ್ನು ನಾನು ಸ್ಮರಿಸುತ್ತೇನೆ. ಜ್ಞಾನರೂಪಿಯೂ, ದೋಷವಿದೂರನೂ, ಸಹಸ್ರಶೀರ್ಷನೂ, ಸಹಸ್ರಪಾದನೂ ಆದ ಶ್ರೀವಿಷ್ಣುವನ್ನು ನಾನು ಶರಣು ಹೊಂದಿದ್ದೇನೆ. ಆದುದರಿಂದ ಈ ವಿಶ್ವವೆಲ್ಲವೂ ತ್ವನ್‌ಮಯವಾಗಿದೆ. ಚರಾಚರ ಪ್ರಪಂಚವೆಲ್ಲವೂ ವಿಷ್ಣುಮಯವೇ ಸರಿ. ಹೀಗೆ ಚಂದ್ರಶೇಖರನು ಭಕ್ತಿಯಿಂದ ಸ್ತೋತ್ರ ಮಾಡಲು ಚಕ್ರಪಾಣಿಯಾದ ಮಹಾವಿಷ್ಣುವು ದೇದೀಪ್ಯಮಾನ ತನ್ನ ರೂಪದಿಂದ ಗರುಡಾರೂಢನಾಗಿ ಪರಮೇಶ್ವರನಿಗೆ ದರ್ಶನವನ್ನಿತ್ತನು.

ಒಮ್ಮೆಲೆ ಸೂರ್ಯನಂತೆ ಉದಿಸಿ, ಶಿವನು ಎದುರುನಿಂತು, ''ವತ್ಸ ಏಳು, ನಿನಗೆ ಬೇಕಾದ ವರವನ್ನು ಕೇಳು. ನಿನಗೆ ಬಯಸಿದ ವರವನ್ನು ನೀಡಲು ನಾನು ಇಲ್ಲಿಗೆ ಆಗಮಿಸಿದ್ದೇನೆ'' ಎಂದು ನುಡಿದನು. ಪರಮಾತ್ಮನ ವಚನವನ್ನು ಕೇಳಿ, ಹರನು ಕೇಳಿಕೊಂಡನು. ''ಸುರೋತ್ತಮ, ನನಗೆ ಶುದ್ಧಿಯು ಹೇಗಾಯಿತು ? ನಿನ್ನ ಹೊರತು ನನ್ನ ಘೋರ ಪಾಪವನ್ನು ಪರಿಹರಿಸುವವರು ಬೇರೆ ಯಾರೂ ನನಗೆ ಕಾಣುವುದಿಲ್ಲ. ಬ್ರಹ್ಮಹತ್ಯೆಯ ಪಾಪವು ತಟ್ಟಿ ನನ್ನ ಶರೀರವೆಲ್ಲವೂ ಕಪ್ಪು ಕಪ್ಪಾಗಿದೆ. ನನ್ನ ಆಭರಣವೆಲ್ಲವೂ ಕಬ್ಬಿಣವಾಗಿ ಮಾರ್ಪಟ್ಟಿವೆ. ನನ್ನ ದೇಹದಿಂದ ಶವದ ವಾಸನೆ ಎದ್ದು ಬಡಿಯುತ್ತಿದೆ. ಈ ಎಲ್ಲ ಅಸಹ್ಯ ವಿಕಾರವು ನನ್ನ ದೇಹಕ್ಕೆ ಉಂಟಾಗಿದ್ದು ಉಪಶಮನವಾಗುವ ಬಗೆ ಯಾವುದು ? ನನ್ನ ದೇಹವು ಮೊದಲಿನಂತಾಗಲು ನಾನೇನು ಮಾಡಬೇಕು ? ನನ್ನ

ಪೂರ್ವಸ್ಥಿತಿಯು ಪುನಃ ಪ್ರಾಪ್ತವಾಗಬೇಕಾದರೆ ನಿನ್ನ ಪ್ರಸಾದದಿಂದ ಸಾಧ್ಯ ಎಂಬುದೇನೋ ನಿಶ್ಚಿತ. ಆದರೆ ಆ ನಿನ್ನ ಪೂರ್ಣಪ್ರಸಾದ ಪ್ರಾಪ್ತಿಗಾಗಿ ನಾನೀಗ ಏನು ಮಾಡಲಿ ?

**ವಿಷ್ಣು :-** ಪರಾಕ್ರಮಶಾಲಿಯಾದ ಪರಮೇಶ್ವರನೆ, ಬ್ರಹ್ಮಹತ್ಯಾ ಪಾಪವು ಅತ್ಯಂತ ಉಗ್ರವಾದದ್ದು. ಅದರಷ್ಟು ಕಷ್ಟಕರವಾದ ಪಾತಕವೇ ಇಲ್ಲ. ಮನಸ್ಸಿನಿಂದ ಕೂಡ ಅಂತಹ ಘೋರಪಾಪಮಾಡಬಾರದು. ಇಂತಹ ಈ ಭೀಕರಕೃತ್ಯವನ್ನು ದೇವತೆಗಳ ಮಾತಿನಿಂದ ಮಾಡಿದೆ ಎಂದು ನೀನು ಹೇಳುತ್ತಲಿರುವೆ. ಅದಕ್ಕಾಗಿ ನೀನೀಗ ಬ್ರಹ್ಮದೇವರು ಹೇಳಿದಂತೆ ನಾನು ಹೇಳಿದ ವ್ರತವನ್ನುಮಾಡು. ಮುಂಜಾವು ಮಧ್ಯಾಹ್ನ ಸಂಜೆ ಮೂರು ಕಾಲಗಳಲ್ಲಿ ನಿನ್ನ ದೇಹವನ್ನು ಮತ್ತೆ ಮತ್ತೆ ಉಜ್ಜು. ನಿನ್ನ ಅಂಗಾಂಗಳನ್ನೆಲ್ಲ ತಿಕ್ಕಿ ತಿಕ್ಕಿ ತೊಳೆಯಬೇಕು. ತಲೆ, ಕಿವಿ ಹಾಗೂ ಕೈಗಳಲ್ಲಿ ಮೂಳೆಗಳನ್ನು ಧರಿಸು. ಇದರಿಂದ ನಿನಗೆ ಹೆಚ್ಚಿನ ಕಷ್ಟವು ಆಗುವುದಿಲ್ಲ. ಹೀಗೆ ಹೇಳಿ, ಲಕ್ಷ್ಮೀಸಹಿತನಾದ ನಾರಯಣನು ಅಲ್ಲಿಯೇ ಅಂತರ್ಧಾನ ಹೊಂದಿದನು. ಮಧುಸೂಧನನೂ ಅಲ್ಲಿಂದ ನಿರ್ಗಮಿಸಿದ ನಂತರ ತ್ರ್ಯಂಬಕನು ಸ್ಥಾನದಿಂದ ಹೊರಟನು. ಅವನ ಕೈಯಲ್ಲಿ ಕಪಾಲವು ಗಟ್ಟಿಯಾಗಿ ಅಟ್ಟಿಕೊಂಡಿತ್ತು. ಹಾಗೆಯೆ, ಅವನು ಪೃಥ್ವೀಮಂಡಲದಲ್ಲಿ ಪರ್ಯಟನ ಕೈಗೊಂಡನು. ಹಿಮಾಲಯ, ಮೈನಾಕ, ಮೇರು, ವಿಂಧ್ಯ, ನೀಲಗಿರಿ ಮುಂತಾದ ಗಿರಿಶೈಲಗಳಲ್ಲಿ ಸಂಚರಿಸಿದನು. ಕಾಂಚಿ, ಕಾಶಿ, ತಾಮ್ರಲಿಪ್ತ, ಮಗಧ, ಮಾಳವ, ಗೋಕರ್ಣ, ಭದ್ರಾಶ್ವ, ಕಾಮರೂಪ, ಪ್ರಭಾಸ, ಕುರುಕ್ಷೇತ್ರ ಮುಂತಾದ ಪುಣ್ಯ ದೇಶಗಳಲ್ಲಿ ಪಾವನ ತೀರ್ಥಕ್ಷೇತ್ರಗಳ ಯಾತ್ರೆಗೈದನು. ಬ್ರಹ್ಮಹತ್ಯಾದೋಷವು ಬೆನ್ನುಹತ್ತಿದ ಭವಾನಿಪತಿಯು ಭೂಮಂಡಲವನ್ನೆಲ್ಲ ಸುತ್ತುಹಾಕುತ್ತ ತಿರುಗತೊಡಗಿದನು.

ಏನು ಮಾಡಿದರೂ ಕೈಗೆ ಅಂಟಿದ ಕಪಾಲವು ಬೀಳಲಿಲ. ಕ್ಷಣಕ್ಷಣಕ್ಕೊಮ್ಮೆ ಕೈಯನ್ನು ಜೋರಿನಿಂದ ಜಾಡಿಸಿದ್ದಾಯಿತು. ಬೀಸಿದ್ದಾಯಿತು. ಮೇಲೆ, ಕೆಳಗೆ ಬಡಿದದ್ದಾಯಿತು. ವೇಗದಿಂದ ಕೊಡವಿದ್ದಾಯಿತು. ಅತ್ತಿತ್ತ ಸುತ್ತಕಡೆಗೂ ತಿರುಗಿದ್ದಾಯಿತು. ಏನಾದರೂ ಅಂಗೈಗೆ ಅಂಟಿದ ತಲೆಬುರುಡೆ ಕೆಳಗೆ ಬೀಳಲಿಲ್ಲ; ಶಿವನ ಕೈ ಬಿಡಲಿಲ್ಲ. ಮಹಾದೇವನಿಗೆ ಏನು ಮಾಡಬೇಕೆಂದು ತಿಳಿಯದಾಯಿತು. ಕೊನೆಗೆ ತನ್ನದೇ ಆದ ಬುದ್ಧಿಯಿಂದ ವಿಚಾರಿಸಿದನು. ಅನೇಕ ಬ್ರಾಹ್ಮಣರು ಹಿಡಿದ ಬೇರೊಂದು ದಾರಿ ಹಿಡಿಯಲು ನಿರ್ಧರಿಸಿದನು. ಭೂಖಂಡ ದಲ್ಲೆಲ್ಲ ಸಂಚರಿಸುತ್ತ ಪುಷ್ಕರಾರಣ್ಯಕ್ಕೆ ಆಗಮಿಸಿದನು. ಅಲ್ಲಿಯ ಗೊಂಡಾರಣ್ಯಕ್ಕೆ ಪ್ರವೇಶಿಸಿದನು. ಬಗೆಬಗೆಯ ಗಿಡಬಳ್ಳಿಗಳಿಂದ ನಿಬಿಡವಾಗಿತ್ತು ಆ ಅರಣ್ಯ. ನಾನಾತರಹದ ಹೂವುಗಳು ಅರಳಿ ಅಲ್ಲಿ ಶೋಭಿಸುತ್ತಿದ್ದವು. ಅಲ್ಲಿರುವ ಪಕ್ಷಿಗಳಿಗೆ ಲೆಕ್ಕವಿಲ್ಲ. ಅಸಂಖ್ಯ ಮೃಗಗಳು ನೋಡಿದಲ್ಲೆಲ್ಲ ಹೂಗಳ ಸುಗ್ಗಿ, ಫಲಪುಷ್ಪಭಾರದಿಂದ ಬಗ್ಗಿನಿಂತ ತರುಲತೆಗಳ ಸುಗಂಧವು ಸೂಸುತ್ತಲಿತ್ತು. ದಾರಿಗುಂಟ ರಂಗವಲ್ಲಿಹಾಕಿ ವನಾಂತರವನ್ನೆಲ್ಲ ಸಿಂಗರಿಸಿದಂತೆ ಪುಷ್ಪ ಗುಚ್ಛಗಳು, ಲತಾಮಂಟಪಗಳು ಕಂಗೊಳಿಸುತ್ತಿದ್ದವು.

ಇಂತಹ ನಿಸರ್ಗ ಸುಂದರವಾದ ವನವಿಥೀಯ ಲತಾಕುಂಜ ನಿಕುಂಜಗಳ ನಟ್ಟನಡುವೆ ಅಲ್ಲಿಯ ಸುಗಂಧ ಮಾರುತದಿಂದ ಆನಂದಪಡುತ್ತ ಮುಂದೆ ನಡೆದನು ಮಹೇಶ್ವರ. ಆ ಪುಷ್ಕರ ಕ್ಷೇತ್ರವನ್ನು ಕಂಡಕೂಡಲೇ ಶಿವನ ಅಂತರಂಗಕ್ಕೆ ಸಂತಸವೆನಿಸಿತು. 'ಈ ಶಾಂತಿಯ

ತಾಣದಲ್ಲಿ ನಿಂತು ತಪಗೈದರೆ ಬ್ರಹ್ಮನು ಖಂಡಿತವಾಗಿ ವರವನ್ನು ನೀಡುವನು. ಬ್ರಹ್ಮದೇವರ ಅನುಗ್ರಹದಿಂದಲೇ ನನಗೆ ಇಲ್ಲಿಗೆ ಬರಬೇಕೆಂಬ ಜ್ಞಾನೋದಯವಾಗಿದೆ. ಈ ಪುಷ್ಕರ ಕ್ಷೇತ್ರವು ನಿಜವಾಗಿಯೂ ದುರಿತಗಳನ್ನೆಲ್ಲ ದೂರಮಾಡುವಂತಹದು. ದೋಷಗಳನ್ನೆಲ್ಲ ಕಳೆಯಲು ಈ ಕ್ಷೇತ್ರವು ಸಮರ್ಥವಾಗಿದೆ. ಈ ಕ್ಷೇತ್ರದಲ್ಲಿ ನಿಂತು ಪರಮಾತ್ಮನನ್ನು ಆರಾಧಿಸಿದವರಿಗೆ ಆರೋಗ್ಯ, ಐಶ್ವರ್ಯ, ಶಕ್ತಿ ಸೌಭಾಗ್ಯಗಳು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ. ಇಲ್ಲಿದ್ದು ಭಗವಂತನನ್ನು ಸೇರಿಸಿದದರಿಗೆ ಸ್ವರ್ಗ ಮೋಕ್ಷಗಳು ಖಂಡಿತವಾಗಿ ದೊರಕುವವು. ಹೀಗೆ ಆಲೋಚನೆಗೈದು, ಬ್ರಹ್ಮಧ್ಯಾನವನ್ನು ಮಾಡತೊಡಗಿದ ಮಹಾತೇಜಸ್ವಿಯಾದ ಮಹಾದೇವನ ಬಳಿಗೆ ಅವನ ಭಕ್ತಿಗೆ ಮೆಚ್ಚಿದ ಬ್ರಹ್ಮದೇವನು ಆಗಮಿಸಿದನು. ತನ್ನನ್ನು ನಮಿಸಿ ನಿಂತ, ಶಂಕರನನ್ನು ಎರಡೂ ಕೈಗಳಿಂದ ಎತ್ತಿ ಹಿಡಿದು ಪ್ರೀತಿಯಿಂದ ಮಾತನಾಡಿಸಿ ನುಡಿದನು - ''ಶಿವನೆ, ನೀನು ದಿವ್ಯವ್ರತವನ್ನು ಸ್ವೀಕರಿಸಿ, ಅತ್ಯಂತ ಶ್ರದ್ಧೆಯಿಂದ ನನ್ನನ್ನು ಆರಾಧಿಸಿರುವೆ. ನನ್ನನ್ನು ಕಾಣಬೇಕೆಂದು ಬಯಸಿ, ವಿಶೇಷವಾದ ಸೇವೆ ಮಾಡಿರುವೆ, ವ್ರತಾನುಷ್ಠಾನ ಮಾಡದ ಹೊರತು ನನ್ನ ದರ್ಶನ ದೊರಕದು. ನಿನ್ನ ಈ ಭಕ್ತಿಯುತವಾದ ಉಪಾಸನೆಯಿಂದ ನಾನು ಪ್ರೀತಿನಾಗಿದ್ದೇನೆ. ಅದಕ್ಕಾಗಿ ನಿನಗೆ ಬೇಕಾದ ವರಬೇಡು. ನಿನ್ನ ಇಷ್ಟಾರ್ಥವನ್ನು ನಾನು ಈಡೇರಿಸುವೆನು.

**ರುದ್ರ** :- ಪೂಜ್ಯನಾದ ಚತುರ್ಮುಖನೆ, ಜಗತ್ ಸೃಷ್ಟಾರನಾದ ನೀನು ಈಗ ನನಗೆ ದರ್ಶನ ಕೊಟ್ಟಿರುವೆ. ಇದೇ ನನಗೆ ದೊಡ್ಡ ವರ ಎಂದು ನಾನು ತಿಳಿದಿದ್ದೇನೆ. ದೇವ, ಪಂಚಪ್ರಾಣಗಳನ್ನು ಪಣಕ್ಕೆ ಹಚ್ಚಿ ಬಹುಕಾಲ ತಪಸ್ಸನ್ನು ಮತ್ತು ಘೋರಯಜ್ಞ, ಯಾಗ, ವ್ರತಾನುಷ್ಠಾನಗಳನ್ನು ಮಾಡಿದವರಿಗೆ ಮಾತ್ರ ನಿನ್ನ ದರ್ಶನವಾಗುವುದು. ದೇವನೆ, ಈ ನಿನ್ನ ಕಪಾಲವು ಏನು ಮಾಡಿದರೂ ನನ್ನ ಕೈಯಿಂದ ಕೆಳಗೆ ಬೀಳದಂತಾಗಿದೆ. ಇದರಿಂದ ನನಗೆ ಬಹಳ ನಾಚಿಕೆ ಆಗಿದೆ. ಋಷಿ ಮುನಿಗಳಿಗೆ ನನಗೆ ಮುಖ ತೋರಿಸಲು ಲಜ್ಜೆ ಎನಿಸುವದು. ಅದಕ್ಕಾಗಿ ನಾನೀಗ, ಇಷ್ಟು ದಿನ ಕಾಪಾಲಿಕ ವ್ರತವನ್ನು ಆಚರಿಸಿದ್ದೇನೆ. ಇನ್ನು ಮೇಲೆ ನಾನು ಏನು ಮಾಡಲಿ, ಯಾವ ಪುಣ್ಯ ಕ್ಷೇತ್ರದಲ್ಲಿ ಈ ಕಪಾಲವನ್ನು ಕೈ ಬಿಡಲಿ ಎಲ್ಲಿ ಹೋದರೆ ಈ ಬ್ರಹ್ಮಕಪಾಲವು ನನ್ನ ಕೈ ಬಿಟ್ಟು ತೊಲಗುವುದು ? ಏನು ಮಾಡಿದರೆ ನಾನು ಪರಿಶುದ್ಧನಾಗುವೆನು ನನ್ನ ಆ ಮೊದಲಿನ ದೇವತ್ವವು ಮರಳಿ ಬರುವ ಬಗೆ ಎಂತು ?

**ಬ್ರಹ್ಮ** :- ಭಗವಂತನ ಸನ್ನಿಧಾನದಿಂದ ಮುಕ್ತವಾದ ಅವಿಮುಕ್ತವೆಂಬ ಪುರಾತನ ಕ್ಷೇತ್ರವಿದೆ. ಅದು ಇನ್ನು ಮುಂದೆ ನಿನ್ನ ಕೈಗೆ ಅಂಟಿಕೊಂಡಿರುವ ಬ್ರಹ್ಮ ಕಪಾಲವನ್ನು ಮೋಚನ ಮಾಡಿಸಿ, ಕಪಾಲಮೋಚನಕ್ಷೇತ್ರವೆಂದು ಪ್ರಸಿದ್ಧವಾಗುವುದು. ಅಲ್ಲಿ ನಾನು, ನೀನು ಹಾಗೂ ವಿಷ್ಣುವು ಮೂವರೂ ಸನ್ನಿಹಿತರಾಗೋಣ. ಆ ಕ್ಷೇತ್ರದಲ್ಲಿ ನಿನ್ನ ದರ್ಶನ ಮಾಡಿಕೊಂಡ ಮಹಾಪಾಪಿಗಳು ಕೂಡ ಪರಿಶುದ್ಧರಾಗಿ ಭೋಗ-ಭಾಗ್ಯಗಳನ್ನು ಹೊಂದುವರು.

ವರುಣಾ ಮತ್ತು ಅಸಿ ಎಂಬ ದೇವತೆಗಳಿಗೆ ಪ್ರೀತ್ಯಾಸ್ಪದವಾದ ಎರಡು ನದಿಗಳಿರುವವಷ್ಟೆ ! ಆ ಎರಡೂ ನದಿಗಳ ನಡುವಿನದೇ ಅವಿಮುಕ್ತಕ್ಷೇತ್ರ. ಅದು ಎಲ್ಲ ತೀರ್ಥಗಳಲ್ಲಿ ಉತ್ತಮ. ಕ್ಷೇತ್ರಗಳಲ್ಲಿ ಶ್ರೇಷ್ಠ ಕ್ಷೇತ್ರ. ನೀನು ಆ ವರುಣಾ ಮತ್ತು ಅಸಿ ನದಿಗಳ ಮಧ್ಯದಲ್ಲಿರುವ ಅವಿಮುಕ್ತಕ್ಷೇತ್ರದಲ್ಲಿ ಸ್ನಾನಮಾಡಿದ ಕೂಡಲೇ ನಿನ್ನ ಕೈಗೆ ಅಂಟಿದ ಬ್ರಹ್ಮಕಪಾಲವು ತಾನಾಗಿ ನಿನ್ನ ಕೈಬಿಟ್ಟುಹೋಗುವುದು. ಮುಂದೆ

ಆ ಕ್ಷೇತ್ರದಲ್ಲಿಯೇ ನಿರಂತರ ನೆಲೆಸಿ. ತಮ್ಮ ದೇಹ ಪಾತ (ಬದುಕಿ) ಇರುವವರೆಗೆ ದೇಹ ಸೇವೆ ಮಾಡುವವರು ಹಂಸವಾಹನವಾದ ವಿಮಾನದಲ್ಲಿ ಕುಳಿತು ನಿರ್ಭಯರಾಗಿ ಸ್ವರ್ಗಲೋಕವನ್ನು ಸೇರುತ್ತಾರೆ. ಪಂಚಕೋಶದಷ್ಟು ವಿಶಾಲವಾದ ಕ್ಷೇತ್ರವನ್ನು ನಿನಗೆ ದಾನ ಕೊಟ್ಟಿದ್ದೇನೆ. ನದಿಗಳಲ್ಲೆಲ್ಲ ಗಂಗೆ ಸರ್ವಶ್ರೇಷ್ಠಳಷ್ಟೇ ! ಆ ದೇವ ಗಂಗೆಯು ಈ ಅವಿಮುಕ್ತಕ್ಷೇತ್ರದಲ್ಲಿ ಇದ್ದುದರಿಂದ ಅದೊಂದು ದೊಡ್ಡ ಪುಣ್ಯನಗರಿ ಎನಿಸುವದು. ಉತ್ತರವಾಹಿನಿಯಾದ ಗಂಗೆಯು ಪರಮ ಪವಿತ್ರ. ಪೂರ್ವವಾಹಿನಿಯಾದ ಸರಸ್ವತೀ ಪವಿತ್ರ ಎಂದು ಶಾಸ್ತ್ರಗಳಲ್ಲಿ ಹೇಳಿದೆ.

ಆ ಅವಿಮುಕ್ತಕ್ಷೇತ್ರದಲ್ಲಿ ಗಂಗೆ ಎರಡು ಯೋಜನ ಉತ್ತರಾಭಿಮುಖವಾಗಿ ಹರಿದಿದ್ದಾಳೆ. ಆದುದರಿಂದ ಈ ಕ್ಷೇತ್ರವು ಅತ್ಯಂತ ಪವಿತ್ರೋತ್ತಮ ಎನಿಸುತ್ತದೆ. ಅಲ್ಲಿ ನಾನು ನೆಲೆ ನಿಲ್ಲುತ್ತೇನೆ. ನನ್ನೊಟ್ಟಿಗೆ ಎಲ್ಲ ದೇವತೆಗಳೂ ಅಲ್ಲಿ ವಾಸಿಸುತ್ತಾರೆ. ಆದುದರಿಂದ ನೀನು ಹೋಗಿ ನಿನ್ನ ಕೈಗೆ ಅಂಟಿದ ಈ ಕಪಾಲವನ್ನು ಆ ಗಂಗಾ ತೀರ್ಥದಲ್ಲಿ ಬಿಡು. ವರುಣಾ ಮತ್ತು ಅಸಿ ನದಿಗಳ ಸಂಗಮದ ರಂಗಸ್ಥಳದಲ್ಲಿ ಪ್ರತಿಷ್ಠಿತವಾದ ಆ ಅವಿಮುಕ್ತ ಕ್ಷೇತ್ರಕ್ಕೆ **ವಾರಣಾಸಿ** ಎಂದು ಹೆಸರು ಬರುವುದು. ಅಲ್ಲಿ ಸ್ನಾನಮಾಡಿ ಪಿತೃಗಳ ಉದ್ದೇಶದಿಂದ ಪಿಂಡಪ್ರದಾನಮಾಡಿದವರು ಅಕ್ಷಯಲೋಕಗಳನ್ನು ಪಡೆಯುತ್ತಾರೆ. ಈ ವಾರಣಾಸಿ ಕ್ಷೇತ್ರದರ್ಶನದಿಂದಲೇ ಮಾನವರು ಏಳು ಜನ್ಮದಲ್ಲಿ ಗೈದ ಪಾಪಗಳು ನಾಶವಾಗುತ್ತವೆ. ಸ್ನಾನಮಾಡುವುದರಿಂದ ಸಂಸಾರ ಬಂಧನದಿಂದ ವಿಮೋಚತನಾಗುತ್ತಾನೆ. ಅಲ್ಲಿ ಪ್ರಾಣ ಪರಿತ್ಯಾಗ ಮಾಡಿದ ನಿನ್ನ ಭಕ್ತರಾದ ಪ್ರಾಣಿಗಳು ನಿನ್ನ ರುದ್ರಗಣದಲ್ಲಿ ಸೇರ್ಪಡೆ ಆಗಿ ಮುಂದೆ ಆನಂದಪಡುವರು.

ಅಲ್ಲಿ ಮಾಡಿದ ಸ್ನಾನದಿಂದ ಸರ್ವಪಾಪಮುಕ್ತರಾಗಿ ರುದ್ರಲೋಕ ನಿವಾಸವಾಗಿ ದೊರಕುವದು. ಆ ಕ್ಷೇತ್ರದಲ್ಲಿ ಮಾಡಿದ ಜಪ, ತಪ, ಹೋಮ ಮುಂತಾದ ಎಲ್ಲ ಧರ್ಮ ಕರ್ಮಗಳು ಅನಂತಫಲವನ್ನು ಕೊಡುತ್ತವೆ. ರುದ್ರನಲ್ಲಿ ಭಕ್ತಿಮಾಡಿ ಆ ಕ್ಷೇತ್ರದಲ್ಲಿ ದೀಪದಾನಮಾಡಿದವರಿಗೆ ಜ್ಞಾನದೃಷ್ಟಿಮೂಡುವದು. ಅಲ್ಲಿ ಗೋದಾನ ಮಾಡಿದವರಿಗೆ ದಿವ್ಯಗತಿಯಾಗುವದು. ತರುಣವಾದ, ಇರಿಯದ, ಸೌಮ್ಯ ಸ್ವಭಾವದ ಕರಿ ಅಥವಾ ಕೆಂಪು ಬಣ್ಣದ ಎತ್ತನ್ನು ರುದ್ರನ ಹೆಸರಿನಿಂದ ಮೈ ಮೇಲೆ ಮುದ್ರೆಹಾಕಿ ದೇವರ ಹೆಸರಿನಿಂದ ಬಿಟ್ಟುಬಿಟ್ಟರೆ, ಅವನಿಗೆ ಪಿತೃಗಳೊಂದಿಗೆ ಮೋಕ್ಷಪ್ರಾಪ್ತಿಯಾಗುವುದು. ಹೆಚ್ಚಿನ ಮಾತಿನಿಂದೇನು ? ಈ ಕ್ಷೇತ್ರದಲ್ಲಿ ಎಲ್ಲ ಧರ್ಮಕಾರ್ಯಗಳಿಗೂ ಕ್ಷೇತ್ರವಾಗಿದೆ. ಸತ್ಪುತ್ರರಾದವರು ಈ ಕಾಶೀ ಕ್ಷೇತ್ರದಲ್ಲಿ ಸ್ನಾನಮಾಡಿ ಪಿಂಡದಾನಮಾಡಿದರೆ ಪಿತೃಗಳಿಗೆ ಪರಮಾನಂದವನ್ನು ನೀಡಿದ ಪುಣ್ಯಭಾಗಿಗಳಾಗುವರು. ಇಂತಹ ದರ್ಶನದಿಂದ ಮೋಕ್ಷನೀಡುವ ದಿವ್ಯ ತೀರ್ಥವನ್ನು ನಿನಗಾಗಿ ನಾನು ಹೇಳಿದ್ದೇನೆ. ಅಲ್ಲಿ ನೀನು ಸ್ನಾನ ಮಾಡಿ ನಿನ್ನ ಬ್ರಹ್ಮಹತ್ಯಾಪಾಪವನ್ನು ಕಳೆದುಕೊ ! ನಿನ್ನ ಕೈಗೆ ಅಂಟಿದ ಕಪಾಲವನ್ನು ಅಲ್ಲಿ ಹಾಕಿ ನಿನ್ನ ಕೈತೊಳೆದುಕೊ. ನಾನು ನಿನಗೆ ದಾನವಾಗಿ ಕೊಟ್ಟ ಈ ಅವಿಮುಕ್ತ ಕ್ಷೇತ್ರದಲ್ಲಿ ನೀನು ನಿನ್ನ ಭಾರ್ಯೆಯಾದ ಪಾರ್ವತಿಯೊಂದಿಗೆ ಸುಖವಾಗಿ ವಾಸಮಾಡು.

**ರುದ್ರ :-** ಪೃಥ್ವಿಯಲ್ಲಿ ಇರುವ ಎಲ್ಲ ತೀರ್ಥಗಳಲ್ಲಿ ನಾನು ವಿಷ್ಣುವಿನೊಂದಿಗೆ ವಾಸಮಾಡುತ್ತೇನೆ. ಇದನ್ನೆ ನಾನು ನಿನ್ನಲ್ಲಿ ವರ ಕೇಳುತ್ತಿರುವುದು. ನಾನು ಭಗವಂತನಾದ

ಆ ವಿಷ್ಣುವಿನೊಂದಿಗೆ ನೆಲೆಸಿದಾಗ ನಿನಗೂ ಆರಾಧ್ಯನಾಗುತ್ತೇನೆ. ಸಂತುಷ್ಟನಾದ ಮನಸ್ಸಿನಿಂದ ನಿನಗೂ ಬೇಕಾದ ವರಕೊಡುತ್ತೇನೆ. ಈ ಸ್ಥಾನದಲ್ಲಿದ್ದು ಅಭೀಷ್ಟವಾದ ವರಗಳನ್ನು ದಯಪಾಲಿಸುತ್ತೇನೆ. ಆ ಪರಮಾತ್ಮನೊಂದಿಗೆ ನೆಲೆಸಿದಾಗ ನಾನು ಯಾಚಕನಲ್ಲ, ವರಪ್ರದಾತ.

**ಬ್ರಹ್ಮ** :- ರುದ್ರನೆ, ನೀನು ಹೇಳಿದ ಮಾತು ಸತ್ಯವೂ ಆಗಿದೆ. ಶುಭವೂ ಆಗಿದೆ. ನಿನ್ನ ಮಾತನ್ನು ಆ ಸ್ವಾಮಿ ಶ್ರೀ ನಾರಾಯಣನು ನಡೆಸುವುದರಲ್ಲಿ ಸಂದೇಹವಿಲ್ಲ. ಹೀಗೆ ಹೇಳಿ ಬ್ರಹ್ಮದೇವರು ರುದ್ರನನ್ನು ಸಂತೈಸಿ ಅಲ್ಲಿಯೇ ಅದೃಶ್ಯನಾದನು. ಅವನ ಆದೇಶದಂತೆ ಮಹಾದೇವನು ಕಾಶೀಪಟ್ಟಣಕ್ಕೆ ನಡೆದನು ಮತ್ತು ಅಲ್ಲಿಯ ಗಂಗಾತೀರ್ಥದಲ್ಲಿ ಸ್ನಾನಮಾಡಿದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸ್ವೇದ ಪುರುಷನ ಉತ್ಪತ್ತಿ ಎಂಬ ಹದಿನಾಲ್ಕನೇ ಅಧ್ಯಾಯ ಮುಗಿದುದು*



## ಪುಷ್ಕರದ ಉತ್ಪತ್ತಿ, ಬ್ರಹ್ಮದೇವರ ಬ್ರಹ್ಮೋಪದೇಶ | ಅಧ್ಯಾಯ - ೧೫

**ಭೀಷ್ಮ** :- ಪೂಜ್ಯರಾದ ಬ್ರಾಹ್ಮಣರೆ, ಬ್ರಹ್ಮದೇವರು ಮಹಾದೇವನನ್ನು ಕಾಶೀಕ್ಷೇತ್ರಕ್ಕೆ ಕಳಿಸಿ ಏನು ಮಾಡಿದರು ? ವಿಷ್ಣುವು ಏನು ಮಾಡಿದ ? ಅಲ್ಲಿಗೆ ಹೋಗಿ ಶಂಕರನು ಮಾಡಿದ ಕಾರ್ಯ ಯಾವುದು ? ಬ್ರಹ್ಮದೇವರು ಯಜ್ಞವನ್ನು ಹೇಗೆ ಮಾಡಿದನು ? ಯಾವ ತೀರ್ಥದಲ್ಲಿ ಬ್ರಹ್ಮಯಜ್ಞ ನೆರವೇರಿತು ? ಬ್ರಹ್ಮಕೃತ ಆ ಯಾಗಕ್ಕೆ ಋತ್ವಿಜರು, ಸದಸ್ಯರು ಯಾರು ? ಯಾವ ದೇವರನ್ನು ಬ್ರಹ್ಮನು ಆ ಯಜ್ಞಮಾಡಿ ಪೂಜಿಸಿದನು ? ಇವೆಲ್ಲವನ್ನು ತಿಳಿದುಕೊಳ್ಳಬೇಕೆಂದು ನನಗೆ ಕುತೂಹಲ ಉಂಟಾಗಿದೆ. ಇದೆಲ್ಲವನ್ನು ನನಗೆ ತಿಳಿಸಿರಿ.

**ಪುಲಸ್ತ್ಯ** :- ಪೂರ್ವಕಾಲದಲ್ಲಿ ಮೇರು ಪರ್ವತವು ಲಕ್ಷ್ಮೀನಿವಾಸವಾಗಿದ್ದಿತು. ಅದು ಅನೇಕ ಆಶ್ಚರ್ಯಗಳಿಗೆ ತವರು. ಚಿತ್ರವಿಚಿತ್ರವಾದ ಧಾತುಗಳಿಗೆ ನೆಲೆವೀಡು. ಬಗೆ ಬಗೆಯ ಗಿಡಬಳ್ಳಿಗಳಿಂದ ಆ ಪರ್ವತ ಪ್ರದೇಶವೆಲ್ಲವೂ ನಿಬಿಡವಾಗಿದೆ. ಅಲ್ಲಿಯ ಬಳ್ಳಿವಾಡಗಳಲ್ಲಿ ನಿರಂತರವೂ ನವಿಲುಗಳು ಕೇಕೆಹಾಕಿ ಕುಣಿಯುತ್ತಿರುವವು. ಸಿಂಹಗಳ ಗುಡುಗಿನಿಂದ ಭಯಭ್ರಾಂತವಾದ ಆನೆಗಳು ಹಿಂಡು ಅಲ್ಲಿ ಅತ್ತಿತ್ತ ಓಡಾಡುತ್ತಿರುತ್ತವೆ. ಅಲ್ಲಿಯ ಅನೇಕ ಜಲಪಾತಗಳಿಂದ ಧುಮ್ಮಿಕ್ಕಿ ಹರಿಯುವ ನದಿ ಪ್ರವಾಹಗಳ ತೆರೆತುಂತುರಗಳಿಂದ ಆ ಪ್ರದೇಶವೆಲ್ಲವೂ ತಂಪಿಡಿದು ಶೋಭಿಸುತ್ತಿದೆ. ಅಲ್ಲಿ ಒಂದೆಡೆ ಕಸ್ತೂರಿಮೃಗಗಳ ಹಿಂಡುಗಳು ಕುಳಿತು, ಪರ್ವತ ಪ್ರದೇಶವೆಲ್ಲವೂ ಸುಗಂಧಿತವಾದರೆ ಮತ್ತೊಂದೆಡೆ, ತಂಗಾಳಿಗೆ ಲತಾ ಕುಂಜಗಳ ಕುಸುಮ ಸಮೃದ್ಧಿಯು ಕೆದರಿದಂತಾಗಿ ಸೌರಭವು ಸೂಸುತ್ತಿರುತ್ತದೆ. ಮತ್ತೊಂದೆಡೆ ಬಳ್ಳಿವಾಡಗಳಲ್ಲಿ ವಿಹಾರಗೈದು ವಿದ್ಯಾಧರ ದಂಪತಿಗಳು, ವಿಶ್ರಾಂತಿ ಹೊಂದುತ್ತಿರುತ್ತಾರೆ. ಇನ್ನೊಂದು ಕಡೆ, ಕಿಂಪುರುಷರ ಮಧುರ ಸಂಗೀತದ ಸುಸ್ವರ ಧ್ವನಿ ತರಂಗಗಳು ಪ್ರತಿಧ್ವನಿತವಾಗುತ್ತವೆ.

ಇಂತಹ ಪರಮ ರಮಣೀಯವಾದ ಆ ಮೇರು ಶಿಖರದಲ್ಲಿ ಬ್ರಹ್ಮದೇವರ ಸುಂದರ ಮಂದಿರವಿರುತ್ತದೆ. ಆ ಬ್ರಹ್ಮವನದಲ್ಲಿ ಒಂದು ದಿವ್ಯ ಸಭಾಮಂಟಪವಿದೆ. ಅಲ್ಲಿ ಸುರಸುಂದರಿಯ ಸಂಗೀತದ ಇಂಚರ ಯಾವಾಗಲೂ ಕೇಳಿಬರುವುದು. ನಂದನವನದ ಪಾರಿಜಾತ ಕುಸುಮಗಳ ಮಾಲೆಗಳನ್ನು ಅಲ್ಲಲ್ಲಿ ತೂಗು ಬಿಟ್ಟಿರುವುದು. ಬಗೆಬಗೆಯ ರತ್ನಗಳ, ಬಣ್ಣಬಣ್ಣಗಳ ಕಾಂತಿ ಕುಂಜಗಳ ಇಂದ್ರಚಾಪ ಸೌಂದರ್ಯವು ಕಣ್ಣು ಕೋರೈಸುವುದು. ಅಲ್ಲಿರುವ ರತ್ನದ ಕಂಬಗಳು ನೃತ್ಯ ಮಾಡುತ್ತಿರುವ ಅಪ್ಸರೆಯರ ಭಾವಭಂಗಿಗಳನ್ನೆಲ್ಲ ತಮ್ಮ ಎದೆಗನ್ನಡಿಯಲ್ಲಿ ಪ್ರತಿಬಿಂಬಿಸಿ, ವಿಚಿತ್ರದೃಶ್ಯವನ್ನು ಉಂಟುಮಾಡಿರುವವು. ರಾಗ. ತಾಳ-ಬದ್ಧವಾಗಿ ಬಗೆಬಗೆಯ ಸಂಗೀತ ಪ್ರಕಾರಗಳನ್ನು ಹಿನ್ನೆಲೆಯೊಂದಿಗೆ ನುಡಿಸುತ್ತಲಿರುವ ಆ ಸಭಾಮಂಟಪವು ನಾದ-ಮೋದಮಯವಾಗಿ, ಎಲ್ಲ ದೇವತೆಗಳಿಗೂ ಸಂತೋಷದ ಕೇಂದ್ರವಾಗಿರುವುದು.

ಋಷಿಮುನಿ, ಬ್ರಾಹ್ಮಣ ಹಾಗೂ ದೇವತೆಗಳೊಂದಿಗೆ ಒಡಗೂಡಿದ ಆ ಸಭೆಗೆ ಕಾಂತಿಮತಿ ಎಂಬ ಹೆಸರಿರುವುದು. ಆ ದಿವ್ಯ ಸಭಾಮಂದಿರದಲ್ಲಿ ಕುಳಿತು ಮಹಾವಿಷ್ಣುವನ್ನು ಧ್ಯಾನಮಾಡುತ್ತಲಿರುವ ಪಿತಾಮಹನಿಗೆ ಒಂದು ದಿನ ಯಜ್ಞಮಾಡಬೇಕೆಂದೆನಿಸಿತು. ಆದರೆ ಅದನ್ನು ಎಲ್ಲಿ ಮಾಡಬೇಕು ? ತನ್ನಲ್ಲಿಯೇ ಇಂತು ಆಲೋಚಿಸಿದ ಆ ಬ್ರಹ್ಮ. ''ಕಾಶಿ, ಪ್ರಯಾಗ, ಗಂಗಾತೀರ, ನೈಮಿಷ, ಕಂಚಿ, ಸರಸ್ವತಿ, ಪ್ರಭಾಸ ಮುಂತಾಗಿ ಅನೇಕ ಕ್ಷೇತ್ರಗಳು ಭೂಮಂಡಲದ ಭಾರತ ದೇಶದಲ್ಲಿ ಇರುತ್ತವೆ. ಇವಲ್ಲದೆ ನನ್ನ ಅಪ್ಪಣೆಯಿಂದ ಮಹಾದೇವನು ಇನ್ನೂ ಅನೇಕ ಪುಣ್ಯಕ್ಷೇತ್ರಗಳನ್ನು ನಿರ್ಮಿಸಿದ್ದಾನೆ. ಭೂಲೋಕದ ಈ ಎಲ್ಲ ತೀರ್ಥಕ್ಷೇತ್ರಗಳಲ್ಲಿ ಭೂಲೋಕದ ಪುಷ್ಕರಕ್ಷೇತ್ರವು ಸರ್ವಶ್ರೇಷ್ಠವಾದುದು. ದೇವತೆಗಳಲ್ಲಿ ನಾನು ಶ್ರೇಷ್ಠನಾದಂತೆ, ಕ್ಷೇತ್ರಗಳಲ್ಲಿ ಪುಷ್ಕರ. ನಾನು ಹುಟ್ಟಿದ್ದು ಪದ್ಮದಿಂದ ಆ ಪದ್ಮಕ್ಕೆ ಇನ್ನೊಂದು ಹೆಸರು ಪುಷ್ಕರ. ನನ್ನ ಹುಟ್ಟಿಗೆ ಕಾರಣವಾದ ಪುಷ್ಕರವು ಹುಟ್ಟಿದ್ದು ಶ್ರೀವಿಷ್ಣುವಿನ ನಾಭೀ ಪುಷ್ಕರಣಿಯಲ್ಲಿ. ಅದೇ ಪುಷ್ಕರದ ಹೆಸರಿನಿಂದ ವೇದ ಪಾಠದಲ್ಲಿ ಪರಿಣಿತರಾದ ಋಷಿ, ಪಂಡಿತರು, ಪುಷ್ಕರತೀರ್ಥ ಎಂದು ಕರೆದಿದ್ದಾರೆ. ನಾನು ಯಜ್ಞಮಾಡಿ ಇದನ್ನು ಸರ್ವಶ್ರೇಷ್ಠ ತೀರ್ಥವನ್ನಾಗಿ ಮಾಡುತ್ತೇನೆ'' ಹೀಗೆ ವಿಚಾರಮಾಡಿ ಬ್ರಹ್ಮದೇವರು ಭೂಲೋಕಕ್ಕೆ ಇಳಿದು ಬಂದು ಅದರ ಪೂರ್ವ ಭಾಗಕ್ಕೆ ಹೋಗಿ ಪುಷ್ಕರಾರಣ್ಯ ಪ್ರವೇಶಮಾಡಿದರು. ಅಲ್ಲಿ ಬಗೆ ಬಗೆಯ ಬಳ್ಳಿಗಳು, ತರತರದ ಗಿಡಗಳು, ಎಲ್ಲ ಬಗೆಯ ಹೂಗಳು ಲಕ್ಷಪಕ್ಷಿಗಳು, ನಾನಾ ವಿಧವಾದ ಮೃಗಗಳು, ಜೇನು ಜಿನುಗುವ ಹೂಗಳು, ಸುಗಂಧ ಸೂಸುವ ಗಿಡಗಳು, ಕುಶಲತೆಯಿಂದ ಇರಿಸಿದಂತಿರುವ ಹೂಗಳಿಂದ ರಂಗವಲ್ಲಿ ಹಾಕಿದಂತಿರುವ ಸ್ಥಾನಗಳು. ಹೀಗೆ ವಿವಿಧ ಲತಾ ವೃಕ್ಷಗಳಿಂದಲೂ, ಮೃಗ ಪಕ್ಷಿಗಳಿಂದಲೂ ತುಂಬಿ ತುಳುಕುತ್ತಿರುವ ಆ ಪುಷ್ಕರಾರಣ್ಯವು ನಂದನವನದಂತೆ ನೋಡುವವರಿಗೆ ಆನಂದವನ್ನು ಕೊಡುತ್ತಿತ್ತು. ಇಂತಹ ರಮಣೀಯವಾದ ಅವನ ಪ್ರಾಂತಕ್ಕೆ ಕೈಯಲ್ಲಿ ಪದ್ಮವನ್ನು ಹಿಡಿದುಕೊಂಡು ಬ್ರಹ್ಮದೇವನು ಪ್ರವೇಶಿಸಿದನು. ತನ್ನ ಎಂಟು ಕಣ್ಣುಗಳಿಂದ ವನದ ಸೌಂದರ್ಯವನ್ನು ಕುಡಿಯುವಂತೆ ವನಶ್ರೀಯನ್ನು ನೋಡುತ್ತಿರುವ ಅವನನ್ನು ನೋಡುತ್ತಲೇ ಎಲ್ಲ ಗಿಡ ಮರಗಳು ತಮ್ಮ ತಲೆಯ ಮೇಲೆ ಹೊತ್ತು ನಿಂತ ಹೂಗಳಿಂದ ಪುಷ್ಪವೃಷ್ಟಿಮಾಡಿದವು. ಗಿಡಗಳ ಈ ಪುಷ್ಪವೃಷ್ಟಿಯಿಂದ ಬ್ರಹ್ಮದೇವರಿಗೆ ಪರಮಾನಂದ ವಾಯಿತು. ಆ ವೃಕ್ಷಗಳನ್ನೆಲ್ಲ ಹರಿಸಿ

''ನಿಮಗೆ ಬೇಕಾದ ವರ ಬೇಡಿರಿ'' ಎಂದನು ಆ ಪರಮೇಷ್ಠಿ. ಆಗ ವೃಕ್ಷಾಭಿಮಾನಿ ದೇವತೆಗಳು ವಿಧಾತನಿಗೆ ವಂದಿಸಿ ನುಡಿದರು.

''ಶರಣು ಬಂದವರನ್ನು ಕರುಣೆಯಿಂದ ಕಾಪಾಡುವ ಬ್ರಹ್ಮದೇವರೇ, ನೀನು ಒಂದು ವರಕೊಡು. ನೀನು ಈ ಅರಣ್ಯದಲ್ಲಿಯೇ ನೆಲೆಸಿ ಸನ್ನಿಹಿತವಾಗಿರಬೇಕು. ಪಿತಾಮಹನೆ, ನಿನಗೆ ನಮ್ಮ ನಮಸ್ಕಾರ. ಈ ವನದಲ್ಲಿ ನೀನು ನಿರಂತರ ನೆಲೆಸಿದರೆ ಈ ಪುಷ್ಕರ ಕ್ಷೇತ್ರವು ಎಲ್ಲ ಕ್ಷೇತ್ರಗಳಿಗಿಂತ ಶ್ರೇಷ್ಠವಾಗುವುದು. ನೀನು ಒಂದು ವರವನ್ನು ದಯಪಾಲಿಸಿದರೆ ಕೋಟಿ ವರಗಳನ್ನು ಕೊಟ್ಟಂತೆ ಸರಿ.''

**ಬ್ರಹ್ಮ** :- ನಿಮ್ಮ ಅಪೇಕ್ಷೆಯಂತೆ ಆಗಲಿ. ಎಲ್ಲ ಕ್ಷೇತ್ರಗಳಿಗಿಂತ ಈ ಕ್ಷೇತ್ರವು ಅತಿ ಉತ್ತಮ ಕ್ಷೇತ್ರವೆಂದು ಪರಿಗಣಿಸಲ್ಪಡುವದು. ನಿಮ್ಮ ಈ ಹೂವಿನ ಸುಗ್ಗಿಗೆ ಹಾಗೂ ಹಣ್ಣಿನ ಸಮೃದ್ಧಿಗೆ ಎಂದೂ ಚ್ಯುತಿ ಬಾರದಂತಿರಲಿ. ಹರೆಯ ಸಿರಿ ನಿಮ್ಮೆಲ್ಲ ಮರಬಳ್ಳಿಗಳಲ್ಲಿ ಯಾವಾಗಲೂ ಹೊಮ್ಮುತ್ತಿರಲಿ. ಮನ ಬಂದ ರೂಪವನ್ನು ನೀವು ತಾಳಬಹುದು. ಬಯಸಿದ ಫಲಗಳನ್ನು ನೀವು ಭಕ್ತರಿಗೆ ನೀಡಬಹುದು. ನನ್ನ ಅನುಗ್ರಹದಿಂದ ನಿಮಗೆ ಇನ್ನು ಮೇಲೆ ತಪಂಗೈಯುವ ಪುಣ್ಯಾತ್ಮರಿಗೆ ಅಭೀಷ್ಟಿತ ಫಲನೀಡುವ ಸಾಮರ್ಥ್ಯ ಉಂಟಾಗಲಿ. ವಿಲಕ್ಷಣವಾದ ಕಾಂತಿಯು ನಿಮ್ಮಲ್ಲಿ ಕಂಗೊಳಿಸುವುದು.'' ಹೀಗೆ ಬ್ರಹ್ಮದೇವರು ಆ ಪುಷ್ಕರಾರಣ್ಯದಲ್ಲಿರುವ ಆ ಎಲ್ಲ ಮರಗಳಿಗೂ ವರಕೊಟ್ಟು ಅನುಗ್ರಹಿಸಿದನು. ಮತ್ತು ಸಾವಿರ ವರ್ಷಗಳವರೆಗೆ ತಾನು ಅಲ್ಲಿಯೇ ಇದ್ದು ತನ್ನ ಕೈಯಲ್ಲಿ ಹಿಡಿದುಕೊಂಡಿದ್ದ ಪುಷ್ಕರ ಕುಸುಮವನ್ನು ನೆಲದ ಮೇಲೆ ಎಸೆದನು. ಆ ಹೂವು ನೆಲದ ಮೇಲೆ ಬೀಳುವಾಗ ರಸಾತಲವು ನಡುಗಿತು. ಸಾಗರಗಳು ಅಲ್ಲೋಲ ಕಲ್ಲೋಲವಾದವು. ವಜ್ರಾಯುಧದಿಂದ ಹೊಡೆದಂತೆ ಬೆಟ್ಟಗಳು ಕಂಪಿಸಿದವು. ಅನೇಕ ಗಂಧರ್ವ ನಗರಗಳು ಹೊಯ್ದಾಡಿ ನೆಲದ ಮೇಲೆ ಉರುಳಿ ಬಿದ್ದವು. ಆ ಪುಷ್ಕರ ಪಾತದಿಂದ ಉಂಟಾದ ಭಯಂಕರ ಶಬ್ದದಿಂದ ಮೂರುಲೋಕಗಳೆಲ್ಲವೂ ಗುಡಗಿ ಮೂಕೀಕೃತವಾದವು. ಜಗದಂಡ ಮಂಡಲ ತತ್ತರಿಸಿ ತಲ್ಲಣಿಸಿತು. ದೇವ-ದಾನವರೆಲ್ಲರೂ ಖೇದ-ವಿಷಾದಗಳಿಗೆ ಒಳಗಾಗಿ ಭಯಭ್ರಾಂತರಾಗಿ ನಿಂತರು.

ಇದೇಕೆ ಹೀಗೆ ಆಯಿತು ? ಎನ್ನುವದು ಅವರಿಗೂ ತಿಳಿಯಲಿಲ್ಲ. ಅವರೆಲ್ಲರೂ ಗಟ್ಟಿ ಮನಸ್ಸು ಮಾಡಿ ಧೈರ್ಯದಿಂದ ಬ್ರಹ್ಮನೆಡೆಗೆ ನೋಡಿದರು. ಆದರೆ ಅವರು ಅಲ್ಲಿರಲಿಲ್ಲ. ಬ್ರಹ್ಮದೇವರು ಎಲ್ಲಿ ಹೋದರು ? ಭೂಮಿಯು ನಡುಗಿದ್ದೇಕೆ ? ಎಂದು ಅವರೆಲ್ಲರೂ ಯೋಚಿಸತೊಡಗಿದರು. ಆಗ ಅಷ್ಟರಲ್ಲಿ ಅಲ್ಲಿ ಲಕ್ಷ್ಮೀಪತಿ ನಾರಾಯಣನು ದಯಮಾಡಿಸಿದನು. ಅವನಿಗೆ ಎಲ್ಲ ದೇವತೆಗಳು ನಮಸ್ಕಾರ ಮಾಡಿದರು. ಮತ್ತು ಪ್ರಶ್ನೆ ಕೇಳಿದರು. ''ಭಗವನ್ ಇದೇನು ಹೇಳು. ಮೂರುಲೋಕಗಳೆಲ್ಲವೂ ಕಂಪಿಸುವುದಲ್ಲ ಏನು ಹೇಳು ? ಈ ಉತ್ಪಾತಕ್ಕೆ ನಿಮಿತ್ತವೇನು ? ಈ ಕಲ್ಪವು ಕೊನೆಗೊಂಡು ಪ್ರಳಯಕಾಲವು ಸನ್ನಿಹಿತವಾಯಿತೆ ? ದಿಕ್ಕುಗಳನ್ನು ಹೊತ್ತುನಿಂತ ಆನೆಗಳು ಅಲುಗಾಡಿದವೆ ? ಯಾವುದು ಇದಕ್ಕೆಲ್ಲ ಕಾರಣ ? ಸಮುದ್ರಗಳು ಮೇರೆ ಮೀರಿ ಮೆರೆದುದೇಕೆ ? ಈ ಭೂಕಂಪಕ್ಕೆ ಕಾರಣವೇನು ? ಯಾವ ನಿಮಿತ್ತವಿಲ್ಲದೆ ಇಂತಹ ಶಬ್ದ ಉಂಟಾಗುವುದಿಲ್ಲ. ಬ್ರಹ್ಮಾಂಡ ಬಿರಿಯುವಂತಹ ಇಂಥ ಭೀಕರ ಶಬ್ದವನ್ನು ನಾವು ಈವರೆಗೆ ಕೇಳಿಲ್ಲ. ಈ ಭಯಂಕರ

ಶಬ್ದವು ಮೂರೂ ಲೋಕಗಳಿಗೆ ಶುಭವೊ ? ಅಮಂಗಲವೊ ? ಇವೆಲ್ಲವನ್ನು ಸರ್ವಜ್ಞನಾದುದರಿಂದ ನೀನು ತಿಳಿದಿರುವೆ. ಇದೆಲ್ಲವನ್ನು ನಮಗೆ ಅರುಹು.''

**ವಿಷ್ಣು** :- ದೇವತೆಗಳೇ, ಹೆದರಬೇಡಿ. ತ್ರೈಲೋಕ್ಯ ಕಂಪನಕ್ಕೆ ಕಾರಣವಾದ ಈ ಶಬ್ದನಿರ್ಭೇದ ಮೂಲವನ್ನು ತಿಳಿದು ಹೇಳುತ್ತೇನೆ. ಲೋಕಕ್ಕೆಲ್ಲ ಪಿತಾಮಹ ಎನಿಸಿದ ಬ್ರಹ್ಮನು ತಾವರೆಯನ್ನು ತನ್ನ ಹಸ್ತದಲ್ಲಿ ಹಿಡಿದುಕೊಂಡು ಭೂಲೋಕದ ಪುಣ್ಯ ಪ್ರದೇಶದಲ್ಲಿ ಯಜ್ಞವನ್ನು ಮಾಡಲು ಹೊರಟಿದ್ದಾನೆ. ಪರ್ವತಗಳ ಇಳುಕಲಿನಲ್ಲಿ ಇರುವ ಒಂದು ನಿಸರ್ಗ ಸುಂದರವಾದ ವನಪ್ರಾಂತದಲ್ಲಿ ಆ ಪಿತಾಮಹನ ಕರತಲದಲ್ಲಿರುವ ಕಮಲವು ನೆಲದ ಮೇಲೆ ಬಿದ್ದಿತು. ಬ್ರಹ್ಮದೇವರ ಹಸ್ತಾಗ್ರಹದಿಂದ ಬಿದ್ದ ಆ ಕಮಲದಿಂದ ಇಂತಹ ಭಯಂಕರವಾದ ಸದ್ದು ಉಂಟಾಗಿರುತ್ತದೆ. ಅದರಿಂದಲೇ ನೀವು ನಡುಗಿ ಹೋಗಿರುವಿರಿ. ವಿಧಾತನ ಕರಕಮಲದಿಂದ ಪತಿತವಾದ ಆ ಪದ್ಮವನ್ನು ಅಲ್ಲಿಯ ಪರ್ವತವು ತನ್ನ ಪುಷ್ಪರಾಶಿಯ ಸೌಗಂಧದಿಂದ ಸ್ವಾಗಿತಿಸಿತು. ಪೂಜ್ಯನಾದ ಹಂಸಕೇತನ್ನು ಭೂಮಂಡಲದ ಮೇಲೆ ವಿಶೇಷ ಅನುಗ್ರಹಮಾಡುವ ಉದ್ದೇಶದಿಂದ ನಾನಾ ವಿಧವಾದ ಪಕ್ಷಿಗಳಿಂದ ಸಂಕೀರ್ಣವಾದ ಪದ್ಮಪಾತವಾದ ಅದೇ ಅರಣ್ಯದಲ್ಲಿ ವಾಸಮಾಡಲು ಸಂಕಲ್ಪಿಸಿದ್ದಾನೆ. ಆ ತೀರ್ಥವು ಪರಮೇಷ್ಠಿಯ ಕೈಯಲ್ಲಿಯ ಪದ್ಮಪಾತದ ನಿಮಿತ್ತದಿಂದ ಪುಷ್ಕರತೀರ್ಥವೆಂದು ಹೆಸರುಗೊಂಡಿದೆ. ಇದೆಲ್ಲವೂ ಆ ಭಗವಂತನು ಲೋಕಹಿತಾರ್ಥವಾಗಿಯೇ ಮಾಡಿದ್ದಾಗಿದೆ. ನೀವೆಲ್ಲರೂ ಅಲ್ಲಿಗೆ ಹೋಗಿರಿ. ನಾನು ಬರುತ್ತೇನೆ. ಬ್ರಹ್ಮನನ್ನು ಸಂತೋಷಪಡಿಸಿರಿ. ಭಕ್ತಿಯಿಂದ ಆರಾಧಿಸಿದವರಿಗೆ ಅಲ್ಲಿ ಆ ಲೋಕ ಪುಷ್ಕರನು ದಿವ್ಯವಾದ ವರಗಳನ್ನುದಯಪಾಲಿಸುವನು.'' ವಿಷ್ಣುವಿನ ಈ ವಚನವನ್ನು ಕೇಳಿ ಎಲ್ಲ ದೇವತೆಗಳು ಪುಷ್ಕರ ಕ್ಷೇತ್ರಕ್ಕೆ ಹೊರಡಲು ಸನ್ನದ್ಧರಾದರು. ವಿಷ್ಣುವು ಎಲ್ಲರನ್ನು ಕರೆದುಕೊಂಡು ಆ ವನಕ್ಕೆ ಆಗಮಿಸಿದನು. ಕಮಲದ ಕೂಸು ಎನಿಸಿದ ಬ್ರಹ್ಮನಂತೂ ಅಲ್ಲಿ ಮೊದಲೇ ಬಂದು ನೆಲೆಸಿದ್ದನು. ಈ ಜಗದ ಜನರನ್ನೆಲ್ಲ ಅನುಗ್ರಹಿಸುವುದೇ ಅವನ ಉದ್ದೇಶವಾಗಿತ್ತು. ಸುರೋತ್ತಮರೆಲ್ಲರು ಪ್ರಸನ್ನಚಿತ್ತರಾದರು. ಆ ವನವು ಕೋಗಿಲೆಗಳ ಮಧುರಧ್ವನಿಯಿಂದ ತುಂಬಿತ್ತು. ಸುಗಂಧಿ ಪುಷ್ಪಗಳ ಸಮೃದ್ಧಿಯಿಂದ ಆ ಬ್ರಹ್ಮ ವನವು ಶೋಭಾಯಮಾನವಾಗಿ ತೋರುತ್ತಿದ್ದಿತು. ಚಿಗರೆ, ಚಿಗುರು ಹೂ ಹಣ್ಣುಗಳಿಂದ ತುಂಬಿ ತುಳುಕುವ ಆ ವನವು, ಸರ್ವವೃಂದಾರಕರ ನಂದನವನದ ಸನ್ನಿಧಿಯಿಂದ ಅಂದಚಂದವಾಗಿವನವು ಕಂಗೊಳಿಸಿತು. ಹೀಗೆ ಸರ್ವವಿಧವಾದ ಪುಷ್ಪಶ್ರೀಯಿಂದ ಸುಮನೋಹರವಾಗಿ ಕಾಣುವ ಆ ವನದಲ್ಲಿ ಬ್ರಹ್ಮದೇವನನ್ನು ಕಾಣುವ ಕುತೂಹಲದಿಂದ ದೇವತೆಗಳು ಅತ್ತಿತ್ತ ಹುಡುಕತೊಡಗಿದರು. ಅತ್ಯದ್ಭುತವಾದ ಆ ವನದ ತುಂಬ ತಿರುಗಾಡಿದರೂ, ಆ ಅಮರ ಗಣಾಧೀಶರಿಗೆ ವಿಶಾಲವಾದ ಆ ಅರಣ್ಯ ಪ್ರದೇಶದ ತುದಿ ಮೊದಲುಗಳು ತೋರಲಿಲ್ಲ. ಕೊನೆ ಕಾಣಲಿಲ್ಲ. ಬ್ರಹ್ಮನನ್ನು ಹುಡುಕಿ ಹುಡುಕಿ ದೇವತೆಗಳು ಮನದಲ್ಲಿ ಮಿಡುಕಿ ದೇವನನ್ನು ಕಾಣದೆ ಖಿನ್ನರಾದ ತ್ರಿದಶರನ್ನು ಕಂಡು ವಾಯುದೇವನು ನುಡಿದನು. ''ಸುರೋತ್ತಮರೆ, ತಪಸ್ಸುಮಾಡದೆ ನೀವು ಬ್ರಹ್ಮದೇವನನ್ನು ಕಾಣಲಾರಿರಿ. ಭಕ್ತಿಯಿಂದ ಪೂಜೆಮಾಡಿದವರಿಗೆ ಮಾತ್ರ ಬ್ರಹ್ಮದರ್ಶನವು ಸಾಧ್ಯವಾಗುವುದು. ಕೇವಲ ಜ್ಞಾನದಿಂದ ಶ್ರದ್ದೆಯು ಕಡಿಮೆ

ಆಗುವುದು. ಶ್ರದ್ಧಾಹೀನನಾದ ಮನುಷ್ಯನು ಎಂತಹ ತಪಸ್ಸನ್ನು ಮಾಡಿದರೂ ಭಗವಂತನ ಸಾಕ್ಷಾತ್ಕಾರವು ಆಗಲಾರದು. ಅದಕ್ಕಾಗಿ ಕಾಯಾ, ವಾಚಾ, ಮನಸಾ, ತ್ರಿಕರಣ ಪೂರ್ವಕವಾಗಿ ಬ್ರಹ್ಮನನ್ನು ಆರಾಧಿಸಬೇಕು. ಇಂತಹ ಅತ್ಯಂತ ಭಕ್ತಿಯುತವಾದ ಪೂಜೆಗೆ ಮೊದಲು ಭಕ್ತರು ಬ್ರಾಹ್ಮೀ ದೀಕ್ಷೆಯನ್ನು ತೊಡಬೇಕು. ಅಂತಹ ದೀಕ್ಷೆತೊಟ್ಟು ಆ ಬ್ರಹ್ಮನಲ್ಲಿಯೇ ಮನಸ್ಸನ್ನು ಮಾಡಿದರೆ ಮಾತ್ರ ನೀವು ಸುಲಭವಾಗಿ ಬ್ರಹ್ಮಾಪರೋಕ್ಷವನ್ನು ಪಡೆಯುವಿರಿ.'' ವಾಯುದೇವನ ಈ ನಿರ್ದೇಶನದ ನುಡಿಯನ್ನು ಕೇಳಿ, ದೇವತೆಗಳು ತಮ್ಮ ಕುಲಗುರುವಾದ ಬೃಹಸ್ಪತ್ಯಾಚಾರ್ಯರನ್ನು ಕೇಳಿದರು. ''ಗುರುಗಳೆ, ನಮಗೆ ಬ್ರಾಹ್ಮೀ ದೀಕ್ಷೆಯನ್ನು ದಯಪಾಲಿಸಿರಿ.''

ಆ ಎಲ್ಲ ಸುರಪುರದ ನಾಗರೀಕರ ಬಿನ್ನಹವನ್ನು ಮನ್ನಿಸಿ ಬೃಹಸ್ಪತ್ಯಾಚಾರ್ಯರು ವೇದೋಕ್ತ ವಿಧಾನಗಳಿಂದ ಎಲ್ಲ ದೇವತೆಗಳಿಗೂ ದೀಕ್ಷೆಯಿತ್ತರು. ವಿನೀತ ವೇಷದಿಂದ ನಮಿಸಿ, ಶಿಷ್ಯತ್ವನ್ನು ಅಂಗೀಕರಿಸಿದರು. ಬ್ರಹ್ಮದೀಕ್ಷೆ ಪಡೆದರು. ಬ್ರಹ್ಮದೇವರ ಪರಮಾನುಗ್ರಹ ಪ್ರಾಪ್ತಿಗೆ ಕಾರಣವಾದ ಪೌಷ್ಕರ ಜ್ಞಾನವನ್ನು ಹೊಂದಿದರು. ಸುರಾಚಾರ್ಯನು ಬ್ರಾಹ್ಮೀದೀಕ್ಷೆಯ ಪ್ರಯೋಗಾಂಗವಾಗಿ ದೇಟು ಸಹಿತವಾದ ತಾವರೆಯನ್ನು ಸಿದ್ಧಪಡಿಸಿ, ವಿಧಿಪೂರ್ವಕವಾಗಿ ಯಜ್ಞವನ್ನು ಮಾಡಿಸಿದನು.

ವೇದೋಕ್ತ ವಿಧಿಯಿಂದ ಅವರೆಲ್ಲರಿಗೂ ದೀಕ್ಷಾ ಪ್ರದಾನ ಮಾಡಿದರು. ತ್ರಿಸುಪರ್ಣ, ತ್ರಿಮಧು ಮತ್ತು ಪವಮಾನಸೂಕ್ತ ಮೊದಲಾದವುಗಳನ್ನು ಪಾರಾಯಣಮಾಡಿಸಿ, ಬೇರೆ ಬೇರೆ ವೇದ ಮಂತ್ರಗಳ ಜಪಮಾಡಲು ಹೇಳಿ, ಅಗ್ನಿ ಪ್ರತಿಷ್ಠೆಗೈದು ಪೂರೈಸಿದನು. ಮುಂದೆ ಪ್ರತಿ ದಿನವೂ ಮಾಡಬೇಕಾದ ಜಪ, ಅನುಷ್ಠಾನಗಳ ವಿಧಿಯನ್ನು ಅವರಿಗೆ ಕಲಿಸಿದನು. ಅವರೆಲ್ಲರಿಗೂ ಅಪೋಹಿಷ್ಠಾ ಮಂತ್ರ ಹೇಳಿ ಬ್ರಾಹ್ಮ ಸ್ನಾನಮಾಡಿಸಿದನು. ಬ್ರಾಹ್ಮಸ್ನಾನವು ಪಾಪ ನಾಶಕವು, ಸೌಭಾಗ್ಯ ವರ್ಧಕವು, ಸಾಮರ್ಥ್ಯಾದಾಯಕವು, ಸಿದ್ಧಿಪ್ರದವು, ಕಲಿಕಲುಷ ಪರಿಹಾರಕವೂ ಆಗಿರುತ್ತದೆ. ಸರ್ವಪ್ರಯತ್ನಮಾಡಿ ಬ್ರಾಹ್ಮಸ್ನಾನವನ್ನು ಮಾಡಬೇಕು. ಹೀಗೆ ಬ್ರಹ್ಮದೇವರಿಂದ ಉಪದಿಷ್ಟಾರದ ಆ ದೇವತೆಗಳೆಲ್ಲರೂ ಬ್ರಾಹ್ಮಸ್ನಾನದಿಂದ ಪರಿಶುದ್ಧರಾದರು. ದೀಕ್ಷಾಬದ್ಧರಾಗಿ ಇಂದ್ರಿಯಗಳನ್ನು ನಿಗ್ರಹಿಸಿದರು. ಅವರು ಒಂದು ಕೈಯಲ್ಲಿ ಕಮಂಡಲು, ಇನ್ನೊಂದರಲ್ಲಿ ಜಪಮಾಲೆ, ಉಟ್ಟಿದ್ದು ನಾರುಮಡಿ, ತಲೆಯ ಮೇಲೆ ಜಟಾಕಲಾಪ, ಮುಖದಲ್ಲಿ ಸೌಮ್ಯಶ್ರೀ, ಹೃದಯದಲ್ಲಿ ಬ್ರಹ್ಮನನ್ನು ಕಾಣುವ ಹಂಬಲ.

ಹೀಗೆ ಒಂದು ಸ್ಥಳದಲ್ಲಿ ಎಲ್ಲ ದೇವತೆಗಳು ವೀರಾಸನಹಾಕಿಕೊಂಡು ಕುಳಿತು ಬ್ರಹ್ಮಧ್ಯಾನಮಾಡಲು ತೊಡಗಿದರು. ದೇವತೆಗಳ ಈ ನಿರಂತರ ತಪಶ್ಚರ್ಯೆಯಿಂದ ಅವರ ಕಲ್ಮಷ ರಾಶಿಯೆಲ್ಲವೂ ಸುಟ್ಟುಹೋಯಿತು. ಬ್ರಹ್ಮಾ ಪರೋಕ್ಷವಾಯಿತು. ತಮ್ಮ ಎದುರು ಬಂದ ಬ್ರಹ್ಮದೇವರ ದಿವ್ಯ ತೇಜಸ್ಸನ್ನು ಕಂಡು ಅವರು ದಿಗ್ಭ್ರಮೆಗೊಂಡರು. ಅನಂತರ ತುಸು ಧೈರ್ಯ ತಂದುಕೊಂಡು, ಬ್ರಹ್ಮದೇವರನ್ನು ಸ್ತೋತ್ರ ಮಾಡಿದರು.

**॥ ದೇವಾಉವಾಚ ॥**

**ಬ್ರಹ್ಮಣೇ ಬ್ರಹ್ಮದೇವಾಯ ಬ್ರಹ್ಮಣ್ಯಯಾಜಕಾಯ ಚ ।**
**ನಮಸ್ಕುರ್ಮಃ ಸುನಿಯತಾಃ ಕ್ರುತುವೇದ ಪ್ರದಾಯಿನೇ ।**

**ಭಕ್ತಾನುಕಂಪಿನೇ ದೇವ ಸೃಷ್ಟಿರೂಪಾಯ ತೇ ನಮಃ ।**
**ಪಂಚಾಸ್ಯ ಶೋಭಯಾ ಭಕ್ತ್ಯಾವೇದ ಚಾಪ್ಯ ಸ್ತುತಾಯ ಚ ॥**
**ಬಹುರೂಪ ಸ್ವರೂಪಾಯ ರೂಪಾಣಾಂ ಶತಧಾರಿಣೇ ।**
**ಸಾವಿತ್ರೀಪತಯೇ ದೇವಗಾಯತ್ರೀ ಪತಯೇ ನಮಃ ।**
**ಪದ್ಮಾಸನಾಯ ಪದ್ಮಾಯ ಪದ್ಮವಕ್ತ್ರಾಯ ತೇ ನಮಃ ।**
**ವರದಾಯ ವರಾರ್ಹಾಯ ಕೂರ್ಮಾಯ ಚ ಮೃಗಾಯ ಚ ॥**
**ಜಟಾಮುಕುಟಯುಕ್ತಾಯ ಸ್ರುಮಸ್ರುಚನಿಧಾರಿಣೇ ।**
**ಮೃಗಾಂಕ ಮೃಗಧರ್ಮಾಯ ಧರ್ಮನೇತ್ರಾಯ ತೇ ನಮಃ ।**
**ವಿಷ್ವಕ್ಸೇನಾಯ ವಿಶ್ವಾಯ ವಿಶ್ವೇಶಾಯ ನಮೋ ನಮಃ ।**
**ಧರ್ಮನೇತ್ರತ್ರಾಣಮಸ್ಮಾದಧಿಕಂ ಕರ್ತುಮರ್ಹಸಿ ॥**

**ದೇವತೆಗಳು :-** ಪರಬ್ರಹ್ಮನೆನಿಸಿದ ಆ ಪರಮಾತ್ಮನ ಮುಖ್ಯ ಪ್ರತೀಕವಾಗಿರುವ ಬ್ರಹ್ಮಜ್ಞಾನಿಗಳ ಮೇಲೆ ವಿಶೇಷ ಅನುಗ್ರಹಮಾಡುವ ಮತ್ತು ವೇದೋಕ್ತ ಯಜ್ಞ, ಯಾಗಗಳ ದಿವ್ಯಜ್ಞಾನವನ್ನು ಜಗತ್ತಿಗೆಲ್ಲ ಉಪದೇಶಿಸಿದ ಯಾರಿಂದಲೂ ಗೆಲ್ಲಲು ಶಕ್ಯವಿರದ ಬ್ರಹ್ಮದೇವನಿಗೆ ನಾವೆಲ್ಲರೂ ಭಕ್ತಿಬದ್ಧರಾಗಿ ನಮಸ್ಕರಿಸುತ್ತೇವೆ. ಹೀಗೆ ದೇವತೆಗಳು ಬ್ರಹ್ಮದೇವರನ್ನು ಸ್ತೋತ್ರಮಾಡಲು ಅವನು ಸಂತುಷ್ಟನಾದನು. ಮತ್ತು ನುಡಿದನು. ''ಮಕ್ಕಳೆ, ನೀವು ನನ್ನನ್ನು ನೆನೆದಿದ್ದೀರಿ. ನನ್ನ ಧ್ಯಾನಮಾಡಿದ್ದೀರಿ. ಭಕ್ತಿಯುಕ್ತರಾಗಿ ನನ್ನ ಪ್ರಾರ್ಥನೆಮಾಡಿದ್ದೀರಿ. ನನ್ನ ದರ್ಶನವು ಎಂದೂ ವ್ಯರ್ಥವಾಗಲಾರದು. ನಿಮಗೆ ಏನು ಅಪೇಕ್ಷೆ, ಅಭಿಲಾಷೆಗಳನ್ನು ತಿಳಿಸಿರಿ ಪೂರ್ಣಗೊಳಿಸುತ್ತೇನೆ. ಆಗ ದೇವತೆಗಳು ಇಂತು ನುಡಿದರು. ''ಪೂಜ್ಯನಾದ ಪಿತಾಮಹನೆ, ಈಗ ನಮಗೆ ಬೇರಾವ ವರವೂ ಬೇಡ. ನೀನು ನಿನ್ನ ಕರತಲದ ಪದ್ಮವನ್ನು ನೆಲಕ್ಕೆ ಎಸೆದೆ ಅಷ್ಟೇ! ಅದರಿಂದ ಭೀಕರ ಶಬ್ದವಾಯಿತು. ಆ ಪದ್ಮಪಾತದ ಶಬ್ದದಿಂದ ಭೂಮಿಯು ಏಕೆ ಕಂಪಿಸಿತು. ಲೋಕಗಳು ಏಕೆ ತಲ್ಲಣಿಸಿದವು. ಇದೆಲ್ಲವೂ ನಿರ್ನಿಮಿತ್ತವಾಗಿ ನಡೆದಿರಲಿಕ್ಕಿಲ್ಲ. ಆದುದರಿಂದ ಈ ವಸುಧಾ ಕಂಪನದ ಕಾರಣವನ್ನು ತಿಳಿಸು.''

**ಬ್ರಹ್ಮ :-** ನಿಮ್ಮ ಹಿತಕ್ಕಾಗಿಯೇ ನಾನು ಇದನ್ನೆಲ್ಲ ಮಾಡಿದ್ದು. ಈ ಭಯೋತ್ಪಾದನೆಗೆ ಮೂಲಕಾರಣವು ದೇವತಾರಕ್ಷಣೆಯೇ. ಇದರ ಕಾರಣವನ್ನು ಹೇಳುತ್ತೇನೆ ಕೇಳಿರಿ. ವಜ್ರನಾಭ ಎಂಬ ಅಸುರನು ಚಿಕ್ಕಮಕ್ಕಳ ಜೀವನವನ್ನು ಅಪಹರಿಸುವುದು ನಿಮಗೆ ತಿಳಿದಿದೆ ಅಷ್ಟೇ! ಆ ರಕ್ಕಸನು ಎಲ್ಲ ಕಡೆಗೂ ಶಿಶುಹತ್ಯೆ ಮಾಡುತ್ತ ರಸಾತಲದಲ್ಲಿ ನೆಲೆಸಿದ್ದಾನೆ. ನೀವು ಇಲ್ಲಿಗೆ ಬಂದುದನ್ನು ತಿಳಿದು ಬ್ರಹ್ಮದೇವರ ದರ್ಶನಕ್ಕಾಗಿ ಬಂದ ದೇವತೆಗಳ ಕೈಯಲ್ಲಿ ಯಾವ ಆಯುಧವೂ ಇರುವುದಿಲ್ಲವೆಂಬುದನ್ನು ಅವನು ಬಲ್ಲ. ಇದೇ ಒಳ್ಳೆಯ ಸಂಧಿ ಎಂದು ಆಲೋಚಿಸಿ, ಆ ದುಷ್ಟ ದಾನವನು ನಿಮ್ಮೆಲ್ಲರನ್ನು ಸಂಹರಿಸಲು ಸಿದ್ಧನಾಗಿದ್ದ ಆ ದುರುಳನ ದುರ್ವಿಚಾರವನ್ನು ತಿಳಿದು ನಾನು ರಸಾತಳದಲ್ಲಿ ಆಶ್ರಯ ಹೊಂದಿರುವ ಆ ವಜ್ರನಾಭವನ್ನು ಕೊಲ್ಲಲಿಕ್ಕಾಗಿ ನನ್ನ ಕೈಯಲ್ಲಿಯ ಪದ್ಮಪುಷ್ಪವನ್ನು ಎಸೆದನು. ಆ ಪದ್ಮಪಾತದಿಂದ ಇಂದ್ರ ಸಹಿತ ಸಮಸ್ತ ಸುರವೃದಂದ ಸಂಹಾರಕ್ಕಾಗಿ ಪ್ರತಿಜ್ಞಾಬದ್ಧನಾದ ದುಷ್ಟ ರಕ್ಕಸನು ಹತನಾದನು. ರಾಜ್ಯ,

ಐಶ್ವರ್ಯಗಳನ್ನು ಹೊಂದಿ, ಆ ದೈತ್ಯನು ಮಹಾಮದಾಂಧನಾಗಿದ್ದ. ದೇವ, ದಾನವ, ಮನುಷ್ಯ, ಯಕ್ಷ, ರಾಕ್ಷಸ ಮುಂತಾದ ಎಲ್ಲ ಪ್ರಾಣಿಗಳಲ್ಲಿ ನಾನು ಸಮಾನವಾಗಿ ಇರುತ್ತೇನೆ. ನನಗೆ ಪಕ್ಷಪಾತವಿಲ್ಲ. ನಿಮಗೆ ಕಲ್ಯಾಣ ಉಂಟು ಮಾಡಲು ನಾನು ಈ ದರ್ಪಿಷ್ಟನಾದ ವಜ್ರನಾಭನನ್ನು ಸಂಹರಿಸಿದೆನು. ಆದರೂ ಕೂಡ ಅವನು ಈ ದಿವ್ಯಕಮಲದ ಸಂದರ್ಶನದಿಂದ ಉತ್ತಮಗತಿಯನ್ನು ಹೊಂದಿದ್ದಾನೆ. ನಾನು ಕೈಯಿಂದ ಕೆಳಗೆ ಬೀಳಿಸಿದ ಪದ್ಮ ಅರ್ಥಾತ್ ಪುಷ್ಕರದ ಪ್ರಭಾವದಿಂದ ಈ ತೀರ್ಥವು ಮುಂದೆ ಪುಷ್ಕರ ತೀರ್ಥವೆಂದು ಪ್ರಸಿದ್ಧವಾಗುತ್ತದೆ. ಎಲ್ಲ ಪ್ರಾಣಿಗಳಿಗೂ ಇದು ಪುಣ್ಯಪ್ರದವಾಗಿರುತ್ತದೆ. ನನ್ನ ಭಕ್ತವೃಂದವನ್ನು ಅನುಗ್ರಹಿಸುವದಕ್ಕಾಗಿ ಈ ಪರ್ವತ ಪ್ರಾಂತದಲ್ಲಿರುವ ಎಲ್ಲ ವೃಕ್ಷಗಳ ಅಪೇಕ್ಷೆಯಂತೆ ನಾನು ಇದೇ ಪುಷ್ಕರಕ್ಷೇತ್ರದಲ್ಲಿ ವಾಸಮಾಡುತ್ತೇವೆ.

ಮಹಾದೇವನಾದರೂ, ನನ್ನ ನಿರ್ದೇಶನದಿಂದ ಇಲ್ಲಿಗೆ ಆಗಮಿಸಿ ವಾಸಿಸಿದ್ದಾನೆ. ತಪಂಗೈಯುತ್ತಿದ್ದ ನಿಮಗೆ ದಿವ್ಯಜ್ಞಾನವನ್ನು ಉಪದೇಶಿಸುತ್ತೇನೆ. ಇದು ನಿಮ್ಮ ಹೃದಯದಲ್ಲಿಯೇ ಗುಟ್ಟಾಗಿರಲಿ. ಬೇರಾರಿಗೂ ನೀವು ಈ ರಹಸ್ಯವನ್ನು ಹೇಳಬಾರದು. ಇದರಿಂದ ನೀವು ಸ್ವಾರ್ಥ ಪರಾರ್ಥಗಳನ್ನು ಸಾಧಿಸುತ್ತೀರಿ. ನೀವು ಭೂಮಂಡಲದಲ್ಲಿ ಬಗೆ ಬಗೆಯ ರೂಪಗಳನ್ನು ಧರಿಸಿ, ಈ ದಿವ್ಯಜ್ಞಾನವನ್ನು ಜನರಿಗೆ ಉಪದೇಶಿಸಿರಿ. ಲೋಕದಲ್ಲಿ ಜ್ಞಾನಿಯಾದ ಮನುಷ್ಯನನ್ನು ದ್ವೇಷ ಮಾಡಿದರೆ ಮಹಾಪಾತಕ. ಅಂಥವನು ಕೋಟಿ ಜನ್ಮ ಉರುಳಿದರೂ ಪಾಪನಾಶವಿಲ್ಲ. ವೇದ ಪಾರಂಗತ ವಿದ್ವಾಂಸರನ್ನು ಯಾರೂ ಕೊಲ್ಲಬಾರದು. ಕೊಂದರೆ ಅವನಿಗೆ ಯಾವ ಜನ್ಮದಲ್ಲಿಯೂ ಮುಕ್ತಿಯಿಲ್ಲ. ಅಂತಹ ಒಬ್ಬ ಬ್ರಹ್ಮಜ್ಞಾನಿಯನ್ನು ಕೊಂದರೆ ಕೋಟಿ ಜನರನ್ನು ಹಿಂಸೆ ಮಾಡಿದಂತೆ.

ವೇದವೇದಾಂಗಗಳನ್ನು ಚೆನ್ನಾಗಿ ಅರಿತುಕೊಂಡ ವಿದ್ವಾಂಸರನ್ನು ಶ್ರದ್ಧೆಯಿಂದ ಮನೆಗೆ ಕರೆದು ಭೋಜನಮಾಡಿಸಬೇಕು. ಅಂತಹ ಒಬ್ಬ ವಿದ್ವಾಂಸನು ಉಂಡರೆ ಕೋಟಿ ಜನರಿಗೆ ಊಟಕ್ಕೆ ಹಾಕಿದಂತೆ ಸನ್ಯಾಸಿಗಳಿಗೆ ಅವರು ತಂದ ಪಾತ್ರೆಯ ತುಂಬ ಭಿಕ್ಷೆಹಾಕಿದರೆ ಮಾನವರಿಗೆ ದುರ್ಗತಿಯಿಲ್ಲ. ಸದ್ಗತಿ ಅವರಿಗೆ ಕಟ್ಟಿಟ್ಟ ಬುತ್ತಿ, ದೇವತೆಗಳಲ್ಲೆಲ್ಲ ನಾನು ಹೇಗೆ ಶ್ರೇಷ್ಠನೋ ಮತ್ತು ಪೂಜ್ಯನೋ ಅದರಂತೆ ಮಾನವರಲ್ಲಿ ಜ್ಞಾನಿಯು ಸರ್ವಶ್ರೇಷ್ಠನು. ಹೀಗೆ ದುರ್ಜನರ ಸಹವಾಸಬಿಡುವುದು. ಜ್ಞಾನಿಗಳನ್ನು ಪೂಜಿಸುವುದು, ವೇದ ಪಾರಂಗತ ಯತಿ ಬ್ರಾಹ್ಮಣರನ್ನು ಶ್ರದ್ಧೆಯಿಂದ ಪೂಜಿಸುವುದು ಒಂದು ವ್ರತ. ಈ ತರಹದ ತಿಳುವಳಿಕೆಯನ್ನು ನಿಮಗಿಲ್ಲಿ ಬಂದು ನೆಲೆಸಿ ನಾನು ಮಾಡಿ ಕೊಟ್ಟಿದ್ದೇನೆ. ನೀವು ಇದರಂತೆ ನಡೆದು ಜನರಿಗೆ ಬೋಧಿಸಿ, ಅವರನ್ನು ಇದೇ ಮಾರ್ಗದಲ್ಲಿ ನಡೆಯ ಹಚ್ಚಿ, ಉದ್ಧಾರ ಸಾಧಿಸಿಕೊಳ್ಳಿರಿ.'' ಬ್ರಹ್ಮದೇವರು ತನ್ನ ದರ್ಶನಕ್ಕಾಗಿ ಬಂದ ದೇವತೆಗಳಿಗೆ ಈ ರೀತಿಯಾಗಿ ಹಿತೋಪದೇಶಮಾಡಿ ಆ ಎಲ್ಲ ಸುರೋತ್ತಮರೊಂದಿಗೆ ಅಲ್ಲಿಯೇ ನೆಲೆಸಿದರು. ಅಂದಿನಿಂದ ಅದೊಂದು ದಿವ್ಯ ಕ್ಷೇತ್ರ ಎನಿಸಿತು. ಈ ಪುಷ್ಕರತೀರ್ಥವು ಸರಸ್ವತಿ ನದಿಯು ಪೂರ್ವ ವಾಹಿನಿಯಾಗಿ ಹರಿಯುವವರೆಗೆ ಬಿತ್ತರಿಸಿದೆ. ಸರಸ್ವತಿ ನದಿಯ ಪೂರ್ವ ತೀರದ ನಂದನವನದಿಂದ ಪುಷ್ಕರದವರೆಗೆ ಚಾಚಿದ ಪ್ರದೇಶವನ್ನೆಲ್ಲ ಲೋಕ ಸೃಷ್ಟಾರನಾದ ಬ್ರಹ್ಮನು ಯಜ್ಞವೇದಿಕೆಯನ್ನಾಗಿ ಮಾಡಿದ್ದನು. ಈ ಪುಷ್ಕರ ಕ್ಷೇತ್ರದಲ್ಲಿ ಬ್ರಹ್ಮದೇವತಾಕರವಾದ ಕೆಲವು ತೀರ್ಥಗಳು ಇರುತ್ತವೆ. ವಿಷ್ಣುವೆ ಅಧಿದೇವತೆಯಾಗಿರುವ

ಹಲವಾರು ಮಧ್ಯಮ ತೀರ್ಥಗಳಿವೆ. ರುದ್ರನಿಂದ ಅನುಗ್ರಹಿತವಾದ ಕೆಲವು ತೀರ್ಥಗಳೂ ಉಂಟು. ಇವೆಲ್ಲವೂ ಲೋಕಪಾವನವಾಗಿರುತ್ತವೆ. ಪುಷ್ಕರ ನಾಮಕವಾದ ಈ ಪುಣ್ಯಾರಣ್ಯದಲ್ಲಿ ಬ್ರಹ್ಮಾದಿ ದೇವತೆಗಳು ನಿರಂತರ ನೆಲೆಸಿರುವರು. ಈ ಕ್ಷೇತ್ರದಲ್ಲಿ ವೇದಪಾರಾಯಣ ಮಾಡುವವರು. ಅಗ್ನಿ ಹೋತ್ರಾದಿ ಪುಣ್ಯಕಾರ್ಯ ನೆರವೇರಿಸುವವರು, ಬ್ರಹ್ಮ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಅವನ ಲೋಕದಲ್ಲಿ ವಾಸಿಸುತ್ತಾರೆ.

**ಭೀಷ್ಮ :-** ಬ್ರಹ್ಮಲೋಕದ ಅಪೇಕ್ಷೆಯಿಂದ ಈ ಪುಷ್ಕರ ಕ್ಷೇತ್ರದಲ್ಲಿ ವಾಸ ಮಾಡುವ ಮನುಷ್ಯನು ಹೇಗೆ ನಡೆಯಬೇಕು? ಯಾವ ಯಾವ ವಿಧಿವಿಧಾನಗಳನ್ನು ಅನುಸರಿಸಬೇಕು? ಪುಷ್ಕರ ಕ್ಷೇತ್ರವಾಸಿಗಳು ಆಚರಿಸಬೇಕಾದ ವರ್ಣಾಶ್ರಮ ಧರ್ಮಗಳು ಯಾವುವು ? ಸ್ತ್ರೀಯರಾಗಲಿ, ಪುರುಷರಾಗಲಿ ಈ ಪುಷ್ಕರಕ್ಷೇತ್ರದಲ್ಲಿ ನಿವಾಸಗೈಯುವ ಬಗೆ ಎಂತು ?

**ಪುಲಸ್ತ್ಯ :-** ಈ ಕ್ಷೇತ್ರದಲ್ಲಿ ನೆಲೆಸುವವರು ಮೊದಲು ಅಸೂಯೆ , ಜಂಭ, ಮೋಹ ಮುಂತಾದ ದುರ್ಗುಣಗಳನ್ನು ಬಿಡಬೇಕು. ತಮಗೆ ಉಚಿತವಾದ ವರ್ಣಾಶ್ರಮ ಧರ್ಮ ಪಾಲಿಸಬೇಕು. ಸದಾಚಾರಿಗಳಾಗಿ ಇರಬೇಕು. ಯಾವಾಗಲೂ ಸರ್ವಪ್ರಾಣಿಗಳಿಗೆ ಹಿತವನ್ನುಂಟುಮಾಡಬೇಕು. ಮಾತಿನಿಂದ, ಮನಸ್ಸಿನಿಂದ, ಕೃತಿಯಿಂದ ಯಾರಿಗೂ ನೋವನ್ನುಂಟುಮಾಡದೆ ತ್ರಿಕರಣಶುದ್ಧರಾಗಿರಬೇಕು. ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರಬೇಕು. ಬ್ರಹ್ಮಭಕ್ತನಾಗಿರಬೇಕು.

**ಭೀಷ್ಮ :-** ಬ್ರಹ್ಮಭಕ್ತನೆಂದರೆ ಯಾರು ? ಅದನ್ನು ತಿಳಿಸಿರಿ.

**ಪುಲಸ್ತ್ಯ :-** ಭಕ್ತಿ ಮೂರು ವಿಧ. ಮಾನಸಿಕ ಭಕ್ತಿ, ವಾಚಕ ಭಕ್ತಿ, ಕಾಯಕ ಭಕ್ತಿ ಎಂದು. ಲೌಕಿಕ ವೈದಿಕ ಮತ್ತು ಆಧ್ಯಾತ್ಮಿಕ ಎಂದೂ ಈ ಭಕ್ತಿಯು ಮೂರು ತೆರವಾಗಿದೆ. ಬುದ್ಧಿಯಿಂದ ವೇದ ಮಂತ್ರಗಳ ಅರ್ಥವನ್ನು ಸ್ಮರಣಕ್ಕೆ ತಂದುಕೊಂಡು ಪರಮಾತ್ಮನ ಧ್ಯಾನಮಾಡುತ್ತ ಭಗವಂತನ ಬಿಂಬರೂಪವನ್ನು ಮನಸ್ಸಿನಲ್ಲಿ ಗಟ್ಟಿಮಾಡುವುದು ಮಾನಸಿಕ ಭಕ್ತಿ. ಇದು ಬ್ರಹ್ಮದೇವರಿಗೆ ಅತ್ಯಂತ ಪ್ರೀತಿಕರ ಭಕ್ತಿಯಾಗಿರುತ್ತದೆ. ಮಂತ್ರಗಳನ್ನು ಪಠಿಸುವುದು, ವೇದಪಾರಾಯಣಮಾಡುವುದು, ನಮಸ್ಕಾರಮಾಡಿ ಸ್ತೋತ್ರಗೈಯುವುದು, ಅಗ್ನಿಯಲ್ಲಿ ಮಂತ್ರೋಚ್ಚಾರ ಪೂರ್ವಕ ಹೋಮಮಾಡುವುದು, ಶ್ರದ್ಧೆಯಿಂದ ಭಜನೆಮಾಡುವುದು, ಜಪಗಳನ್ನು ಜಪಿಸುವುದು. ಶ್ರುತಿ ಸ್ಮೃತಿಗಳಲ್ಲಿ ಹೇಳಿದ ಮತ್ತು ಅಪರೋಕ್ಷ ಜ್ಞಾನಿಗಳು ರಚಿಸಿದ ಸ್ತುತಿ, ಗೀತ, ಗಾಥಾಗಳನ್ನು ಉಚ್ಚಕಂಠದಿಂದ ಹಾಡುವುದು ವಾಚಕ ಭಕ್ತಿ ಎನಿಸುತ್ತದೆ.

ಕಷ್ಟಕರವಾದ ವ್ರತ, ಉಪವಾಸ, ನಿಯಮ, ಇಂದ್ರಿಯ ನಿಗ್ರಹ, ಕೃಚ್ಛ್ರ, ಸಾಂತಪವ, ಚಾಂದ್ರಾಯಣ, ಬ್ರಹ್ಮಕೃಚ್ಛ್ರ, ವಿವಿಧ ಉಪೋಷಣ ಮತ್ತು ಬೇರೆ ಬೇರೆ ವ್ರತಾನುಷ್ಠಾನ, ಜಪ, ತಪಗಳಿಂದ ದೇಹದಂಡನೆಮಾಡಿ ಧ್ಯಾನೋಪಾಸನೆ ಗೈಯುವದು ಕಾಯಕ ಭಕ್ತಿ ಎಂದು ಕರೆಯಲ್ಪಡುತ್ತದೆ.

ಈ ಮೂರು ವಿಧ ಭಕ್ತಿಯಲ್ಲದೆ ಲೌಕಿಕ, ವೈದಿಕ, ಆಧ್ಯಾತ್ಮಿಕ ಭಕ್ತಿಗಳೆಂಬ ಬೇರೆ ಮೂರು ಪ್ರಕಾರಗಳು ಭಕ್ತಿಯಲ್ಲಿಉಂಟು. ಲೌಕಿಕ ಭಕ್ತಿ ಎಂದರೆ ಹಸುವಿನ ಹಾಲು, ತುಪ್ಪ, ಮೊಸರು ಮುಂತಾದವುಗಳಿಂದ ಪಂಚಾಮೃತ ಅಭಿಷೇಕವನ್ನು ದೇವರಿಗೆ ಮಾಡಿ,

ಕೊನೆಗೆ ಶುದ್ಧೋದಕದಿಂದ ಸ್ನಾನಮಾಡಿಸಬೇಕು. ಮತ್ತು ರತ್ನಾದಿ ಆಭರಣ ಏರಿಸಿ, ನಂದಾದೀಪವನ್ನಿರಸಬೇಕು. ಹೂವಿನ ಹಾರ, ಗಂಧ, ತುಳಸಿಗಳಿಂದ ಅರ್ಚಿಸಬೇಕು.

ಗುಗ್ಗುಳದಿಂದ ಸುಗಂಧಿತವಾದ ಧೂಪದಿಂದ ಆರತಿ ಎತ್ತಿ, ದೇವರಿಗೆ ವಿವಿಧ ಭಕ್ಷ್ಯ ಭೋಜ್ಯ, ಹಣ್ಣು ಹಂಪಲು ಅರ್ಪಿಸಿ ನೈವೇದ್ಯ ತೋರಿಸಬೇಕು. ಚಿನ್ನರನ್ನದ ಆಭರಣಗಳನ್ನು ತೊಡಿಸಬೇಕು. ಭಗವಂತನಿಗೆ ಭಕ್ತಿಯಿಂದ ಮಂಗಳಾರತಿ ಎತ್ತಿ, ನೃತ್ಯ ಸಂಗೀತ, ವಿವಿಧ ವಾದ್ಯ ಮುಂತಾದ ಸೇವೆಗಳನ್ನು ಸಲ್ಲಿಸಬೇಕು. ಇವೆಲ್ಲವೂ ಲೌಕಿಕ ಭಕ್ತಿ ಎನಿಸುತ್ತದೆ.

ಋಗ್ವೇದ, ಯಜುರ್ವೇದ, ಸಾಮವೇದ ಮಂತ್ರಗಳನ್ನು ಪಾರಾಯಣಮಾಡಿ, ಹೋಮ ಹವನಗಳಿಂದ ಪೂಜಿಸುವುದು ವೈದಿಕ ಭಕ್ತಿ ಎನಿಸುತ್ತದೆ. ಹುಣ್ಣಿಮೆ, ಅಮಾವಾಸ್ಯೆ ಮುಂತಾದ ಪುಣ್ಯ ದಿನಗಳಲ್ಲಿ ಹೋಮ, ಹವನಗಳನ್ನು ಮಾಡುವುದು. ದಕ್ಷಿಣೆ ನೀಡುವುದು ವೈದಿಕಭಕ್ತಿ ಎನಿಸುತ್ತದೆ.

ಇನ್ನು ಮೂರನೆಯದಾದ ಆಧ್ಯಾತ್ಮಿಕಭಕ್ತಿಯು ಎರಡು ವಿಧವಾಗಿವೆ - ಸಾಂಖ್ಯ, ಯೋಗಿಕ ಎಂದು ಅದರಲ್ಲಿಯ ಮೊದಲನೆಯ ಸಾಂಖ್ಯ ಭಕ್ತಿಯನ್ನು ವಿವರಿಸುತ್ತೇನೆ, ಕೇಳು. ತತ್ವಗಳು ಇಪ್ಪತ್ತನಾಲ್ಕು. ಅವೆಲ್ಲವು ಅಚೇತವಾದವುಗಳು. ಇಪ್ಪತ್ತೈದನೆಯದು 'ಪುರುಷತತ್ವ' ಅವನು ಚೇತನ. ಅವನೇ ಭೋಕ್ತಾರ. ಆತ್ಮನು, ನಿತ್ಯನು, ನಾಶರಹಿತನು, ಅಧಿಷ್ಠಾತೃವು ಆಗಿದ್ದಾನೆ. ಅವನು ಅವ್ಯಕ್ತ ಪುರುಷ, ಈ ಸೃಷ್ಟಿಗೆಲ್ಲ ಅವನೇ ಕಾರಣ. ಅವನನ್ನೇ ಪಿತಾಮಹ ಎಂದು ಕರೆಯುತ್ತಾರೆ. ಇದೇ ಇಪ್ಪತ್ತೈದನೇ ತತ್ವ.

ಹೀಗೆ ಜಡ, ಚೇತನ, ಸೃಷ್ಟಿಯಲ್ಲಿ ಘಟಕವಾದ ಇಪ್ಪತ್ತೈದು ಸಂಖ್ಯೆಯ ತತ್ವಗಳನ್ನು ತಿಳಿದು ಮಾಡುವದೇ ಸಾಂಖ್ಯಭಕ್ತಿಯು. ಇಪ್ಪತ್ತೈದನೆಯ ತತ್ವವಾದ ಚೇತನ ತತ್ವದಲ್ಲಿ ಎರಡು ವಿಧ-ಸ್ವತಂತ್ರ ಹಾಗೂ ಅಸ್ವತಂತ್ರ ಎಂದು. ಹಿಂದೆ ಹೇಳಿದ ಆತ್ಮ, ನಿತ್ಯ, ಅವ್ಯಕ್ತ ಮುಂತಾದ ಶಬ್ದಗಳಿಂದ ವಾಚ್ಯವಾದದ್ದೇ ಈಶ್ವರತತ್ವ. ಅದಕ್ಕೆ ಅಧೀನವಾಗಿರುವ ಒಂದು ಪುರುಷತತ್ವವು ಈ ಇಪ್ಪತ್ತೈದನೆಯ ತತ್ವದಲ್ಲಿಯೇ ಅಂತರ್ಗತವಾಗಿದೆ. ಇವನೇ ಜೀವಾತ್ಮ. ಇವನು ಪರಮಾತ್ಮ. ತತ್ವಕ್ಕೆ ಅಧೀನ. ಇವನು ಆ ಪರಮಾತ್ಮ ತತ್ವದಂತೆ ನಿತ್ಯ, ನಾಶರಹಿತ. ಆದರೆ ಅಸ್ವತಂತ್ರ. ಇವನಿಗೆ ದೇಹತಃ ನಾಶ ಉಂಟು. ಪರಮಾತ್ಮ, ಜೀವಾತ್ಮ, ಪ್ರಕೃತಿ ಈ ಮೂರು ತತ್ವಗಳಲ್ಲಿಯ ಸಾಧರ್ಮ್ಯ ವೈಧರ್ಮಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಅನಾದಿ ನಿತ್ಯವಾದರೂ ಪುರುಷಾಧೀನವಾಗಿ, ಅಚೇತನವಾದರೂ ಕಾರ್ಯೋನ್ಮುಖವಾಗುವದು, ಪ್ರಕೃತಿತತ್ವ. ಅನಾದಿ ನಿತ್ಯವಾಗಿ ಚೇತನವಾದರೂ ಅಸ್ವತಂತ್ರವಾಗಿ ಪರಾಧೀನ ಕರ್ತೃತ್ವ ಉಳ್ಳದ್ದು ಜೀವ. ಅನಾದಿ ನಿತ್ಯವಾಗಿ, ಚೇತನವಾಗಿ ಸರ್ವಕರ್ತೃವಾಗಿ, ಸರ್ವತಂತ್ರ ಸ್ವತಂತ್ರವಾಗಿರುವದೇ ಬ್ರಹ್ಮತತ್ವ. ಇದನ್ನೆಲ್ಲ ಗುಣಿಸಿ ಪರಿಗಣಿಸಿ, ತಿಳಿದುಕೊಂಡು ಉಪಾಸನೆಮಾಡುವದೇ ಸಾಂಖ್ಯಭಕ್ತಿ ಎನಿಸುವದು. ಇನ್ನು ಯೋಗದಭಕ್ತಿಯ ಸ್ವರೂಪವನ್ನು ವಿವರಿಸುತ್ತೇನೆ ಕೇಳು ! ನಿತ್ಯವೂ ಸ್ನಾನ, ಸಂಧ್ಯೆ, ಪಾಣಾಯಾಮಗಳನ್ನು ಆಚರಿಸಬೇಕು. ಇಂದ್ರಿಯಗಳನ್ನು ನಿಗ್ರಹಿಸಿ, ಪರಮಾತ್ಮನ ಧ್ಯಾನಮಾಡಬೇಕು. ಭಿಕ್ಷಾನ್ನವನ್ನು ಊಟಮಾಡಿ ವ್ರತಾನುಷ್ಠಾನ ತತ್ಪರನಾಗಿ ಸರ್ವ ವಿಷಯಗಳಿಂದ ವಿರಕ್ತನಾಗಿ ಹೃದಯದಲ್ಲಿ ದೇವರ ಮೂರ್ತಿಯನ್ನು ಚಿಂತಿಸಬೇಕು. ಹೃದಯ ಪದ್ಮದ ಕರ್ಣಿಕೆಯಲ್ಲಿ

ಕೆಂಪು ಬಟ್ಟೆಯನ್ನು ಧರಿಸಿ, ದಿವ್ಯ ದೃಷ್ಟಿಯಿಂದ ಭಕ್ತರನ್ನು ಅನುಗ್ರಹಿಸುತ್ತಿರುವ ತೇಜಸ್ವಿ ಮಂಡಲ ಉಳ್ಳ, ಯಜ್ಞೋಪವೀತವನ್ನು ಕೊರಳಲ್ಲಿ ಧರಿಸಿದ ನಾಲ್ಕು ತೋಳುಗಳುಳ್ಳ ವರನೀಡುವ ಅಭಯಮುದ್ರೆಯಿಂದ ತೋರುವ ಭಗವನ್‌ಮೂರ್ತಿಯನ್ನು ಧ್ಯಾನಿಸಬೇಕು. ಹೀಗೆ ಯೋಗ ಶಕ್ತಿಯಿಂದ ಭಗವಂತನ ಮಾನಸ ಪೂಜೆ ಮಾಡಿ ನಿರಂತರ ಧ್ಯಾನಗೈಯುವದು ಯೋಗಭಕ್ತಿ ಎನಿಸುವದು. ಇಂತಹ ಮನುಷ್ಯನು ಬ್ರಹ್ಮ ಭಕ್ತನೆಂದು ಕರೆಯಲ್ಪಡುತ್ತಾನೆ. ಈ ಕ್ಷೇತ್ರದಲ್ಲಿ ವಾಸಮಾಡುವ ಭಕ್ತರು ಇಂತಹ ಬ್ರಹ್ಮಭಕ್ತಿಯಲ್ಲಿ ತೊಡಗಬೇಕು.

ಬ್ರಹ್ಮದೇವನು ಮುಕ್ತಿಮಂದಿರಕ್ಕೆ ಹೋಗಲು ನಾಲ್ಕು ಕಾಲಿನ ಒಂದು ನಿಚ್ಚಣಿಕೆ ನಿರ್ಮಿಸಿದ್ದಾನೆ. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂದು ನಾಲ್ಕು ಏಣಿಗಳು ಅದಕ್ಕಿರುತ್ತವೆ. ಆತ್ಮೋನ್ನತಿಯನ್ನು ಸಾಧಿಸಬಯಸುವವರು ಈ ನಾಲ್ಕು ಆಶ್ರಯಗಳ ಸೂಕ್ಷ್ಮವಾದ ಆಚರಣೆಯ ರಹಸ್ಯಗಳನ್ನು ಅರಿತುಕೊಳ್ಳುವುದು ಅತ್ಯವಶ್ಯ. ಮನುಷ್ಯನ ಆಯುಷ್ಯವು ನೂರುವರ್ಷಕ್ಕೆ ಪರಿಮಿತವಾಗಿರುತ್ತದೆ. ಅದರಲ್ಲಿ ನಾಲ್ಕು ಭಾಗ ಮಾಡಿ, ಒಂದು ಆಯುರ್ಭಾಗದಲ್ಲಿ ಒಂದೊಂದು ಆಶ್ರಮವನ್ನು ಅನುಷ್ಠಾನ ಮಾಡುತ್ತ ಹೋದರೆ, ಶಾಶ್ವತವಾದ ಬ್ರಹ್ಮಲೋಕ ಪ್ರಾಪ್ತಿಯಾಗುವದು.

ಆಯುಷ್ಯದ ಮೊದಲನೆಯ ಭಾಗವಾದ ಇಪ್ಪತ್ತೈದುವರ್ಷ ಗುರುಗಳಲ್ಲಿ ಇದ್ದು ಧರ್ಮಕರ್ಮಗಳನ್ನುಮಾಡುತ್ತ ವೇದಾಧ್ಯಯನಮಾಡಬೇಕು. ಗುರುಗಳ ಸೇವೆಯನ್ನು ಮಾಡಬೇಕು. ಗುರುಗಳು ಮಲಗಿದ ಮೇಲೆ ಮಲಗಬೇಕು. ಅವರಿಗಿಂತ ಮೊದಲೇ ಏಳಬೇಕು. ಅವರು ಉಣ್ಣುವುದಕ್ಕಿಂತ ಮೊದಲು ಉಣ್ಣಬಾರದು. ಕುಡಿಯುವುದಕ್ಕಿಂತ ಮೊದಲು ಕುಡಿಯಬಾರದು. ಅವರು ನಿಂತಾಗ ಕೂಡಬಾರದು. ಅವರು ಮಲಗಿದಾಗಲೂ ಅವರ ಕಾಲುಗಳನ್ನು ಮೃದುವಾಗಿ ನೀವಬೇಕು. ಅಧ್ಯಯನ ಮಾಡುವಾಗ ಅವರ ಪಾದ ಮುಟ್ಟಿ ನಮಸ್ಕರಿಸಿ ಓದಲು ಆರಂಭಿಸಬೇಕು. ಎಲ್ಲ ಕಾರ್ಯಗಳನ್ನು ಗುರುಗಳ ಅಪ್ಪಣೆ ಯಿಂದಲೇ ಮಾಡಬೇಕು. ಬ್ರಹ್ಮಚಾರಿಯಾಗಿದ್ದಾಗ ರುಚಿ, ರಸಗಳಿಗೆ, ಭಕ್ಷ್ಯ ಭೋಜ್ಯಗಳತ್ತ ಗಮನಿಸಬಾರದು. ಆಗ ಬಿಟ್ಟದ್ದನ್ನೆಲ್ಲ ಸಮಾವರ್ತನೆಯಾದ ಬಳಿಕ ಸೇವಿಸಬಹುದು.

ಹೀಗೆ ನಿಯಮ ವ್ರತಸ್ಥನಾಗಿ ಗ್ರಾಮದಿಂದ ದೂರವಿದ್ದ ಆಶ್ರಮಗಳಲ್ಲಿ ಇದ್ದು ಒಂದೋ, ಎರಡೋ, ಮೂರೋ ವೇದಶಾಖೆಗಳ ಅಧ್ಯಯನ ಮಾಡಬೇಕು. ಕೊನೆಗೆ ಗುರುದಕ್ಷಿಣೆ ಕೊಟ್ಟು ತನ್ನ ಬ್ರಹ್ಮಚರ್ಯ ವ್ರತವನ್ನು ಸಮಾಪನ ಮಾಡಬೇಕು. ಅನಂತರ ಗುರುಗಳ ಅಪ್ಪಣೆಯಿಂದ ಮದುವೆ ಮಾಡಿಕೊಂಡು ಗೃಹಸ್ಥಾಶ್ರಮ ಧರ್ಮವನ್ನು ಅಂಗೀಕರಿಸಬೇಕು. ಹೆಂಡತಿಯೊಡನೆ ಅಗ್ನಿಹೋತ್ರ ಇಟ್ಟುಕೊಂಡು ದೇವರ ಉಪಾಸನೆ ಮಾಡಬೇಕು. ಮಾನವೀಯ ಆಯುರ್ಮಾನದ ಎರಡನೆಯ ಅವಧಿಯಲ್ಲಿ (೨೫ ರಿಂದ ೫೦ನೇ ವರ್ಷಗಳವರೆಗೆ) ಗೃಹಸ್ಥ ಧರ್ಮವನ್ನು ಪರಿಪಾಲಿಸಬೇಕು.

ಗೃಹಸ್ಥಾಶ್ರಮಿಗಳಿಗೆ ನಾಲ್ಕು ವಿಧವಾದ ಉಪಜೀವನದ ಸಾಧನೆ ಹೇಳಿದ್ದಾರೆ. ಕುಶಬ, ಕುಂಭೀಧಾನ್ಯ, ಅಶ್ವಸ್ಥನಿ, ಕಾಪೋತಿ ಇವೇ ಆ ನಾಲ್ಕು ವೃತ್ತಿಗಳು. ಇವು ಒಂದಕ್ಕಿಂತ ಒಂದು ಮಿಗಿಲಾದದ್ದು ಆಗಿರುತ್ತವೆ. ಈ ಗೃಹಸ್ಥಾಶ್ರಮಿಗಳಲ್ಲಿ ಕೆಲವರು ಅಧ್ಯಯನ ಅಧ್ಯಾಪನ, ದಾನ, ಪ್ರತಿಗ್ರಹ ಯಜನ, ಯಾಜನ ಎಂಬ ಷಟ್ಕರ್ಮಗಳಲ್ಲಿ ಅಂದರೆ-ಓದುವುದು, ಕಲಿಸುವುದು, ದಾನಕೊಡುವುದು, ದಾನಕೊಳ್ಳುವುದು, ಯಜ್ಞಆಸಕ್ತರಾಗಿ

ಉಪಜೀವಿಸುತ್ತಾರೆ. ಇನ್ನೊಂದು ಬಗೆಯ ಗೃಹಸ್ಥಾಶ್ರಮಿಗಳು ಅಧ್ಯಯನ, ದಾನ, ಯಜನ ಎಂದರೆ ತಾನೇ ಅಧ್ಯಯನಮಾಡುವುದು, ದಾನಮಾಡುವುದು, ಯಜ್ಞಮಾಡುವುದು ಇವುಗಳಲ್ಲಿ ಆಸಕ್ತರಾಗಿರುತ್ತಾರೆ. ಮೂರನೆಯವರು ಅಧ್ಯಯನ ದಾನ ಇವೆರಡರಲ್ಲಿ ನಿರತರಾಗಿರುವರು. ನಾಲ್ಕನೆಯ ವರ್ಗದವರು ಕೇವಲ ಬ್ರಹ್ಮನಲ್ಲಿ, (ವೇದದಲ್ಲಿಯೇ) ಆಸಕ್ತರಾಗಿರುವರು. ಇವರೆಲ್ಲರೂ ಪೂಜ್ಯರು. ಭಗವದ್ಭಕ್ತರು ಆಗಿರುತ್ತಾರೆ. ಗೃಹಸ್ಥಾಶ್ರಮ ವ್ರತ ಪಾಲಿಸುವದಕ್ಕಿಂತ ಬೇರೆ ತೀರ್ಥವು ಇರುವದಿಲ್ಲ. ಗೃಹಸ್ಥಾಶ್ರಮಿಗಳು ಕೆಳಗೆ ಹೇಳಿದ ಕೆಲವು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಕೇವಲ ತನ್ನ ಹೊಟ್ಟೆ ತುಂಬಿಕೊಳ್ಳಲು ಅಡಿಗೆ ಮಾಡಬಾರದು. ವ್ಯರ್ಥವಾಗಿ ಪಶುಗಳನ್ನು ಹಿಂಸಿಸಬಾರದು. ಹಗಲು ಹೊತ್ತು ಮಲಗಬಾರದು. ಮುಂಜಾವು ಸಂಜೆಗಳಲ್ಲಿ ನಿದ್ರೆ ಮಾಡಬಾರದು. ಎರಡು ಊಟಗಳ ನಡುವೆ ಏನೂ ತಿನ್ನಬಾರದು. ಎಂದೂ ಸುಳ್ಳು ಮಾತನಾಡಬಾರದು. ಮನೆಯಲ್ಲಿ ಇದ್ದ ದ್ವಿಜನಿಗೆ ಊಟಕ್ಕೆ ಹಾಕದೆ ತಾನು ಉಣ್ಣಬಾರದು. ಇದ್ದ ವಿದ್ವಾಂಸನಿಗೆ ಗೌರವ ಸಲ್ಲಿಸದೆ ಇರಬಾರದು. ಹವ್ಯ-ಕವ್ಯ ಹಬ್ಬ-ಹುಣ್ಣಿಮೆಗಳಲ್ಲಿ ಅತಿಥಿಗಳನ್ನು ಅವಶ್ಯ ಪೂಜಿಸಬೇಕು. ಹವ್ಯ ಎಂದರೆ ದೇವತಾ ಕಾರ್ಯ. ಕವ್ಯ ಎಂದರೆ ಪಿತೃಕಾರ್ಯ. ಈ ದೇವತಾ ಪಿತೃ ಕಾರ್ಯಗಳಿಗೆ ವೇದಾಧ್ಯಯನ ಮಾಡಿದ ಶ್ರೋತ್ರಿಯರು ತಪಸ್ವಿಗಳು ಸ್ವತಂತ್ರವಾಗಿ ಜೀವಿಸುವ ಉದ್ಯೋಗಿಗಳು ಅರ್ಹರಾಗಿದ್ದಾರೆ.

ತಮ್ಮ ವರ್ಣಾಶ್ರಮಕ್ಕೆ ವಿಹಿತವಾದ ಕರ್ಮಾನುಷ್ಠಾನ ಮಾಡದಿರುವ ವ್ಯಸನಾಧೀನರಾದ, ಗುರುದ್ರೋಹ ಮಾಡುವ, ಸುಳ್ಳುಹೇಳುವ, ಅಗ್ನಿಹೋತ್ರ ಇಟ್ಟು ತೆಗೆದುಬಿಟ್ಟಿರುವ ಜನರನ್ನು ಹವ್ಯ-ಕವ್ಯಗಳಲ್ಲಿ ಭೋಜನಕ್ಕೆ ನಿಯಂತ್ರಿಸಬಾರದು. ಗೃಹಸ್ಥನು ತಾನು ಮಾಡಿದ ಅಡಿಗೆಯಲ್ಲಿ ಭೂತಗಳಿಗೂ ಪ್ರಾಣಿಗಳಿಗೂ ಭಾಗವನ್ನು ಕೊಡಬೇಕು. ಅದರಲ್ಲಿಯೂ ಸ್ವಂತಕ್ಕಾಗಿ ಅಡಿಗೆ ಮಾಡಿಕೊಳ್ಳದಿರುವ ಸನ್ಯಾಸಿಗಳಿಗೆ ಮೊದಲು ಅನ್ನನೀಡಬೇಕು. ಇಂಥವರಿಗೆ ನಿತ್ಯವೂ ಅನ್ನದಾನ ಮಾಡಿದವನು ಅಮೃತ ಭೋಜನಮಾಡಿದಂತೆ. ಅಮೃತ ಎಂದರೆ ಯಜ್ಞಶೇಷ ಇಂತಹ ಯತಿಗಳಿಗೆ ಕೊಟ್ಟು ಉಂಡ ಊಟವು ಹವಿಷ್ಯಾನ್ನವೇ ಸರಿ. ಅತಿಥಿ, ಬ್ರಾಹ್ಮಣ, ಯತಿಗಳನ್ನು ಪೂಜಿಸಿ, ಬಡಿಸಿ, ಊಟಕ್ಕೆ ಹಾಕಿ, ತಾನು ಊಟಮಾಡಿದರೆ ಅದೂ ಕೂಡ ಯಜ್ಞಾನ್ನ ಭೋಜನ ಮಾಡಿದಂತೆ. ಇಂತಹವರಿಗೆ **''ವಿಘಸಾಸಿ''** ಎಂದರೆ ಪವಿತ್ರಾನ್ನ ಭೋಜನ ಮಾಡುವವ ಎಂದು ಕರೆಯುತ್ತಾರೆ. ಗೃಹಸ್ಥನು ಮುಖ್ಯವಾಗಿ ತನ್ನ ಮಡದಿಯಲ್ಲಿ ಮಾತ್ರ ರಮಿಸಬೇಕು. ಇಂದ್ರಿಯಗಳನ್ನು ವಶದಲ್ಲಿ ಇರಿಸಿಕೊಂಡು ಅಸೂಯೆಪಡದೆ ಜಿತೇಂದ್ರಿಯನಾಗಿ ಇರಬೇಕು. ಋತ್ವಿಜರು, ಪುರೋಹಿತರು, ಸೋದರಮಾವ, ಅತಿಥಿ, ಮುದುಕ,ಮಕ್ಕಳು, ರೋಗಿ, ವೈದ್ಯ, ಜ್ಞಾತಿ, ನೆಂಟರು, ಬೀಗರು, ತಾಯಿ, ತಂದೆ, ಅಳಿಯ, ಸೋದರರು, ಮಡದಿ, ಮಗಳು, ಆಳು-ಹೋಳು ನೌಕರ, ಚಾಕರ ಜನರಲ್ಲಿ ಯಾರೊಂದಿಗೂ ಜಗಳವಾಡಬಾರದು.

ಇವರೊಂದಿಗೆ ವಾದಹೂಡಿ ಕಲಹಮಾಡದಿದ್ದರೆ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಈ ಎಲ್ಲ ಆಪ್ತೇಷ್ಟರ ಪ್ರೀತಿ ಸಂಪಾದಿಸಿ ಇವರ ಮನಸ್ಸನ್ನು ಗೆದ್ದು ಕೊಂಡರೆ ಎಲ್ಲ ಲೋಕಗಳನ್ನು ಗೆದ್ದಂತೆ ಇದರಲ್ಲಿ ಸಂದೇಹವಿಲ್ಲ. ಯಾಕೆಂದರೆ ಎಲ್ಲ ಮಹನೀಯರಲ್ಲಿಯೂ ಒಂದೊಂದು ದೇವತಾ ಸನ್ನಿಧಾನ ಇರುತ್ತದೆ. ಆಚಾರ್ಯ ಎಂದರೆ ಗುರುಗಳಲ್ಲಿ ಸಾಕ್ಷಾತ್ ಬ್ರಹ್ಮದೇವರೆ ಸನ್ನಿಹಿತವಾಗಿರುತ್ತಾರೆ.

**ಆಚಾರ್ಯೋ ಬ್ರಹ್ಮಲೋಕೇಶಃ ।**

ಎಂದು ಹಿರಿಯರು ಹೇಳಿದ್ದಾರೆ. **''ಅತಿಥಿಃ ಸರ್ವ ಲೋಕೇಶಃ''** ಅತಿಥಿಗಳಲ್ಲಿ ಶ್ರೀಹರಿಯೇ ಸನ್ನಿಹಿತವಾಗಿರುತ್ತಾನೆ. **''ಋತ್ವಿಕ್ ವೇದಾಶ್ರಯಃ ಪ್ರಭು''** ಋತ್ವಿಜನು ವೇದಪುರುಷನ ಸನ್ನಿಧಾನೋಪೇತ. **''ಜಾಮಾತಾ ಅಪ್ಸರಸಾಂ ಲೋಕೆ''** ಅಳಿಯನಲ್ಲಿ ಅಪ್ಸರ ಲೋಕದ ಅಧಿಪತಿಯ ಸಾನ್ನಿಧ್ಯ. ಜ್ಞಾತಿಗಳಲ್ಲಿ ವಿಶ್ವೇದೇವತೆಗಳ ಸನ್ನಿಧಾನ. ಬಂಧು-ಬಾಂಧವರಲ್ಲಿ ದಿಗಭಿಮಾನಿ ದೇವತೆಗಳು ಇರುವರು. ತಾಯಿಯಲ್ಲಿ ಭೂಮಾತೆ, ಮುದುಕ, ಬಾಲ, ರೋಗಿಗಳಲ್ಲಿ ಆಕಾಶನಾಮಕನಾದ ಶ್ರೀಹರಿಯ ವಿಶೇಷ. ಪುರೋಹಿತರಲ್ಲಿ ಋಷಿಗಳ ಅಂಶ. ಮನೆಯ ಆಳುಗಳಲ್ಲಿ ಸಾಧ್ಯ ಎಂಬ ದೇವತೆಗಳ ನೆಲೆ, ವೈದ್ಯ ಅಶ್ವಿನೀ ದೇವತೆಗಳ ಪ್ರತಿಬಿಂಬ. ಅಣ್ಣ-ತಮ್ಮಂದಿರು ಅಷ್ಟ ವಸುಗಳ ಪ್ರತಿರೂಪ.

ಮಡದಿಯು ದೇವಲೋಕೇಶ್ವರಿಯ ಮೂರ್ತಿ. ಮಗಳು ಅಪ್ಸರೆಯ ಅಪರಾವತಾರ. ಹಿರಿಯ ಅಣ್ಣನು ತಂದೆಗೆ ಸಮಾನ. ಮಡದಿ ಮಕ್ಕಳಂತೂ ತನ್ನದೇ ದೇಹವಿದ್ದಂತೆ. ದಾಸಿಯರು ಎಂದರೆ ತನ್ನದೇ ನೆರಳು. ಆದುದರಿಂದ ತಿಳುವಳಿಕೆಯುಳ್ಳ ಗೃಹಸ್ಥಾಶ್ರಮಿಯು ಧರ್ಮದೃಷ್ಟಿಯಿಂದ ವಿಚಾರಿಸಿ ಈ ಎಲ್ಲ ಮೇಲೆ ಹೇಳಿದ ಆಪ್ತೇಷ್ಟರು ಏನೇ ಅಂದರೂ, ಆಡಿದರೂ, ನಿಂದಿಸಿದರೂ ಕೋಪಗೊಳ್ಳದೆ ಸಹನೆಮಾಡಬೇಕು. ಯಾವದೇ ತರಹದ ಸಂತಾಪವನ್ನು ಹೊಂದಬಾರದು.

ಗೃಹಸ್ಥನು ಬಹಳ ಕಾರ್ಯಗಳನ್ನು ಒಮ್ಮೆಲೆ ಆರಂಭಿಸಬಾರದು. ಧರ್ಮದಲ್ಲಿ ನಿಷ್ಠೆ ಇರಿಸಿಕೊಂಡು, ಸ್ವಲ್ಪಸ್ವಲ್ಪವಾಗಿ ಕಾರ್ಯಾರಂಭಮಾಡಬೇಕು. ಸಣ್ಣ ಕೆಲಸಗಳನ್ನು ಧರ್ಮನಿಷ್ಠನಾಗಿಯೇ ಮಾಡಬೇಕು. ಗೃಹಸ್ಥರಿಗೆ ಅಧ್ಯಾಪನ ಅಂದರೆ ಓದು ಹೇಳುವುದು. ದಾನ ಸ್ವೀಕರಿಸುವುದು. ಯಜ್ಞ ಮಾಡಿಸುವುದು ಇವು ಮೂರು ಉಪಜೀವನ ಸಾಧನೆ ಎಂದು ಹೇಳಿದ್ದಾರೆ. ಇವುಗಳಿಂದ ಪರಮ ಶ್ರೇಯಸ್ಸು ಎನಿಸಿದ ಮೋಕ್ಷವು ಸಾಧ್ಯವಾಗುವುದು. ಈ ರೀತಿ ಗೃಹಸ್ಥ ವೃತ್ತಿಯಲ್ಲಿದ್ದುಕೊಂಡು ಧರ್ಮಾಚರಣೆಮಾಡಿದ ಮನುಷ್ಯನು ತನ್ನ ಹಿಂದಿನ ಹಾಗೂ ಮುಂದಿನ ಏಳು ತಲೆಮಾರಿನ ಪಿತೃಗಳನ್ನು ಪೌತ್ರಾದಿಗಳನ್ನು ತನ್ನೊಡನೆ ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಾನೆ. ಕೊನೆಗೆ ವಿಷ್ಣುಲೋಕವನ್ನು ಹೊಂದುತ್ತಾನೆ.

ಆಯುಷ್ಯದ ಮೂರನೆಯ ಭಾಗದಲ್ಲಿ ಮನುಷ್ಯನು ಮೂರನೆಯ ಆಶ್ರಮವಾದ ವಾನಪ್ರಸ್ಥವನ್ನು ಅಂಗೀಕರಿಸಬೇಕು. ಗೃಹಸ್ಥಾಶ್ರಮದಲ್ಲಿದ್ದು ವಿಷಯ ಸುಖದಲ್ಲಿ ವೈರಾಗ್ಯ ಹುಟ್ಟಿದ ಬಳಿಕ ದೀಕ್ಷೆಯನ್ನು ಪಡೆದು ವಾನಪ್ರಸ್ಥಾಶ್ರಮ ಪಡೆಯಬೇಕು. ಗೃಹಸ್ಥಾಶ್ರಮದಲ್ಲಿ ಇಟ್ಟುಕೊಂಡ ಅಗ್ನಿಗಳನ್ನೇ ಈ ಆಶ್ರಮದಲ್ಲಿ ಮುಂದುವರೆಸಿ ಅಗ್ನಿಕಾರ್ಯಗಳನ್ನೇ ಮಾಡಬೇಕು. ಹೋಮ ಹವನಗಳಿಂದ ದೇವತೆಗಳನ್ನು ಆರಾಧಿಸಬೇಕು.

ಆಹಾರದಲ್ಲಿ ಮಿತಿ, ಭಗವಂತನಲ್ಲಿ ರತಿ, ತಪಸ್ಸಿನಲ್ಲಿ ಸ್ಥಿತಿ ಇವು ಮೂರು ವಾನಪ್ರಸ್ಥದ ಧರ್ಮಗಳಾಗಿರುತ್ತವೆ. ಹೊಲಗಳಲ್ಲಿ ಹರಗದೆ ಬೆಳೆದ ಭತ್ತ, ಮತ್ತು ನೀವಾರ ಧಾನ್ಯವನ್ನು ಯಜ್ಞಕಾರ್ಯಕ್ಕಾಗಿ ಉಪಯೋಗಿಸಬೇಕು.

ಹೀಗೆ ಬ್ರಹ್ಮಚರ್ಯ, ಗ್ರಾರ್ಹಸ್ಥ್ಯ, ವಾನಪ್ರಸ್ಥ ಎಂಬ ಮೂರು ಆಶ್ರಮ ಧರ್ಮಗಳನ್ನು ಪರಿಪಾಲಿಸುತ್ತ ದೇಹಕ್ಕೆ ಮುಪ್ಪು ಬಂದು ಶಕ್ತಿ ಕುಂಠಿತವಾದ ಬಳಿಕ

ಕೊನೆಯದಾದ ಸನ್ಯಾಸ ಆಶ್ರಮವನ್ನು ಸ್ವೀಕಾರಮಾಡುತ್ತಾರೆ. ಈ ಸನ್ಯಾಸ ಆಶ್ರಮಕ್ಕೆ ವಾನಪ್ರಸ್ಥಾಶ್ರಮದಿಂದ ಬೇಕೆಂದರೆ ಬ್ರಹ್ಮಚರ್ಯಾಶ್ರಮದಿಂದಲೂ ಪ್ರವೇಶ ಮಾಡಬಹುದು. ಸನ್ಯಾಸ ಆಶ್ರಮವನ್ನು ಸ್ವೀಕರಿಸುವ ಮೊದಲು ಮನುಷ್ಯನು ಸಾಂಸಾರಿಕ ವಿಷಯಗಳಲ್ಲಿ ಹಾಗೂ ವಿಷಯ ಸುಖಗಳಲ್ಲಿ ವಿರಕ್ತನಾಗಬೇಕು. ತನ್ನನ್ನು ಅವಲಂಬಿಸಿರುವ ಮಡದಿ ಮಕ್ಕಳು ಮುಂತಾದವರಿಗೆಲ್ಲ ಉಪಜೀವನದ ಏರ್ಪಾಡುಮಾಡಿ ಅಭಯದಾನಮಾಡಬೇಕು. ಎಲ್ಲ ವಿಧವಾದ ಯಜ್ಞಯಾಗಗಳನ್ನು ಮಾಡಿ ಮುಗಿಸಬೇಕು. ಹೀಗೆ ಎಲ್ಲ ಪ್ರಾಣಿಗಳಿಗೂ ಅಭಯವಿತ್ತು ಸನ್ಯಾಸ ಧರ್ಮ ಸ್ವೀಕರಿಸಿ, ಭಗವದಾರಾಧನೆಮಾಡಿದ ಮನುಷ್ಯನಿಗೆ ದಿವ್ಯಲೋಕ ಪ್ರಾಪ್ತಿಯಾಗುವುದು. ಮುಂದೆ ಶಾಶ್ವತ ಮೋಕ್ಷವು ಕೂಡ ದೊರೆಯುವುದು.

ಸನ್ಯಾಸ ಧರ್ಮವು ವಿಶೇಷ ಪುಣ್ಯಪ್ರದವಾದರೂ ಆಚರಿಸಲು ಕಠಿಣವಾಗಿರುತ್ತದೆ. ಸನ್ಯಾಸಿಯಾದವನ ಶೀಲ ನಡತೆಗಳು ಪರಿಶುದ್ಧವಾಗಿರಬೇಕು. ಪಾಪಕಾರ್ಯಗಳನ್ನು ಎಂದಿಗೂ ಮಾಡಬಾರದು. ಐಹಿಕ ಸುಖಗಳನ್ನು ಅವನು ಬಯಸಕೂಡದು. ಸ್ವರ್ಗಾದಿ ಭೋಗಗಳನ್ನು ಅವನು ಅಪೇಕ್ಷಿಸಕೂಡದು. ಕೋಪ ಮೋಹಗಳನ್ನು ಸಂಪೂರ್ಣವಾಗಿ ತ್ಯಜಿಸಬೇಕು. ರಾಜಕಾರಣದಲ್ಲಿ ಎಂದೂ ಇಳಿಯಕೂಡದು. ಇನ್ನೊಬ್ಬರ ಡೊಂಕನ್ನು ತಿದ್ದಲು ಹೋಗಬಾರದು. ಸುಖದುಃಖಗಳಿಂದ ಹಿಗ್ಗಿ ಕುಗ್ಗಬಾರದು. ಅಹಂಕಾರವು ಅವನಲ್ಲಿ ಅಂಕುರಿಸಬಾರದು. ಧರ್ಮ ಕಾರ್ಯಗಳಲ್ಲಿಯೇ ಅವನು ಆಸಕ್ತನಾಗಿರಬೇಕು. ಎಲ್ಲ ಇಂದ್ರಿಯಗಳನ್ನು ತನ್ನ ಸ್ವಾಧೀನ ಇರಿಸಿಕೊಂಡಿರಬೇಕು. ಅವನ ಬದುಕೆಲ್ಲವೂ ಪರಮಾತ್ಮನ ಸೇವೆಗೆ ಅರ್ಪಿತವಾಗಿರಬೇಕು.

ಇಂತಹ ಶ್ರೇಷ್ಠನಾದ ಸನ್ಯಾಸಿಯು ಹೆಣ್ಣು, ಹೊನ್ನು, ಕಾಷ್ಠ, ಲೋಷ್ಠ ಎಲ್ಲವನ್ನು ಒಂದೇ ತೆರನಾಗಿ ಕಾಣುತ್ತಾನೆ. ಕೋಪ ಎಂದರೆ ಏನು ಎಂಬುದೇ ಅರಿಯಲಾರ. ಯಾವ ಪಾಪಗಳಿಗೂ ಅವನಲ್ಲಿ ಆಸ್ಪದವಿಲ್ಲ. ಯಾರೊಡನೆಯೂ ಅವನ ಸಖ್ಯವನ್ನಾಗಲಿ, ದ್ವೇಷವನ್ನಾಗಲಿ ಬೆಳೆಸಲಾರ. ಅವನಿಗೆ ಹೊಗಳಿದರೂ ಅಷ್ಟೆ. ತೆಗಳಿದರೂ ಅಷ್ಟೆ. ಶತ್ರುಗಳೂ ಅಷ್ಟೆ. ಮಿತ್ರರೂ ಅಷ್ಟೆ. ಎಲ್ಲ ಲೌಕಿಕ ವಿಷಯಗಳಲ್ಲಿ ಅವನು ಉದಾಸೀನ. ಇಂತಹನೇ ನಿಜವಾದ ಸನ್ಯಾಸಿ ಎನಿಸುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪುಷ್ಕರದ ಉತ್ಪತ್ತಿ, ಬ್ರಹ್ಮದೇವರ ಬ್ರಹ್ಮೋಪದೇಶ ಹದಿನೈದನೇ ಅಧ್ಯಾಯ ಮುಗಿದುದು*

—o—

**ಭೀಷ್ಮ :-** ಚತುರ್ಮುಖ ಹಸ್ತದಿಂದ ಬಿದ್ದು ಪತಿತವಾದವ ಪದ್ಮದಿಂದ ನಿರ್ಮಿತ ಪುಷ್ಕರ ತೀರ್ಥದ ಉತ್ಪತ್ತಿ ಹಾಗೂ ಅದರ ಮಹಿಮೆಗಳನ್ನು ನೀವು ಹೇಳಿದಿರಿ. ಈಗ ಅಲ್ಲಿ ನೆಲೆ ನಿಂತ ಭಗವಾನ್ ವಿಷ್ಣು ಹಾಗೂ ಶಂಕರ ಇವರಿಬ್ಬರು ಏನು ಮಾಡಿದರು ? ಅದೆಲ್ಲವನ್ನು ಮುನಿಗಳಲ್ಲಿ ಶ್ರೇಷ್ಠರಾಗಿದ್ದ ತಾವು ನಿರೂಪಿಸಬೇಕು. ಬ್ರಹ್ಮದೇವನು ಅಲ್ಲಿ ಯಜ್ಞವನ್ನು ಹೇಗೆ ಆಚರಿಸಿದನು ! ಅದರಲ್ಲಿ ಸದಸ್ಯ, ಋತ್ವಿಜರು ಯಾರಾರು ? ಬ್ರಾಹ್ಮಣರಾರು ? ಆ ಯಜ್ಞಗಳಲ್ಲಿ ಎಷ್ಟು ವಿಭಾಗ ಮಾಡಿದರು ? ಅದರಲ್ಲಿ ದ್ರವ್ಯ ಎಷ್ಟು ? ದಕ್ಷಿಣೆ ಎಷ್ಟು ? ಅದರ ವಿಭಾಗಗಳೇನು ? ಅದರ ಆಳತೆ ಎಷ್ಟು ?

ಬ್ರಹ್ಮದೇವರು ಯಜ್ಞ ಮಾಡಬೇಕಾದರೆ ಪುಣ್ಯಭೂಮಿಯಾದ ದೇವಲೋಕವು ಇರಲಿಲ್ಲವೇ ? ಉಳಿದ ಊರ್ಧ್ವಲೋಕ ಬಿಟ್ಟು ಭೂಲೋಕಕ್ಕೆ ಬರಲು ಕಾರಣವೇನು ? ಮುಖ್ಯವಾಗಿ ಯಜ್ಞ, ಯಜ್ಞಾಂಗಗಳನ್ನೂ, ಯಜ್ಞದ ಕಾಲವನ್ನೂ, ಉಳಿದೆಲ್ಲ ಚರಾಚರಸೃಷ್ಟಿ ನಿರ್ಮಿಸಿದ ಯಜ್ಞ ಫಲರೂಪನಾದ ಸ್ವಯಂ ಬ್ರಹ್ಮನು ತನಗೆ ಯಾವ ಯಜ್ಞದಿಂದ ಬರತಕ್ಕ ಫಲದ ಅಪೇಕ್ಷೆಯೂ ಇಲ್ಲದಿದ್ದರೆ ಏಕೆ ಯಜ್ಞ ಮಾಡಿದನು ? ಇವೇ ಮೊದಲಾದ ಅನೇಕ ಸಂಶಯಗಳು ನನ್ನನ್ನು ಕಾಡುತ್ತಿವೆ. ಈ ಎಲ್ಲ ನನ್ನ ಸಂಶಯಗಳನ್ನು ತಾವು ದೂರ ಮಾಡಬೇಕು.

**ಪುಲಸ್ತ್ಯ :-** ಭೀಷ್ಮನೆ, ನೀನೊಂದು ನನ್ನ ಮೇಲೆ ದೊಡ್ಡ ಪ್ರಶ್ನೆಗಳ ಭಾರವನ್ನೆ ಹೊರೆಸಿರುವಿ. ನಿನ್ನ ಈ ಎಲ್ಲ ಪ್ರಶ್ನೆ ಮಾಲಿಕೆಗಳಿಗೆ ನನ್ನ ಶಕ್ತಿಗೆ ಅನುಸರಿಸಿ ಉತ್ತರ ಹೇಳುತ್ತೇನೆ. ನಿನಗೆ ಯಾವ ಸಂಶಯವೂ ಇಲ್ಲದಂತೆ ಮಾಡುತ್ತೇನೆ ಕೇಳು. ಬ್ರಹ್ಮದೇವರು ಯಜ್ಞ ಮಾಡಿದ್ದು, ಸಾವಿರ ಕಣ್ಣು, ಸಾವಿರ ಮುಖ, ಸಾವಿರ ಕಾಲು, ಸಾವಿರಾರು ಆಭರಣ, ಸಾವಿರಕೈಗಳು, ಸಹಸ್ರನಾಲಿಗೆ, ಸಹಸ್ರರೂಪ, ಸಹಸ್ರ ಬಾಹುಗಳುಳ್ಳ ಹರಿಯ ಪ್ರೀತಿಗಾಗಿ ಭಕ್ತರಿಗೆ ಅಸಂಖ್ಯ ವರಗಳನ್ನು ನೀಡುವ, ನಾಶ ರಹಿತನಾದ ಆ ವಿಷ್ಣುರೂಪಿ ಪರಮಾತ್ಮನೇ ಬ್ರಹ್ಮದೇವರ ಆ ಯಜ್ಞದ ಉದ್ದೇಶನಾಗಿದ್ದ.

ಹವ್ಯ, ಹವನ, ಹೋತಾ, ವೇದಿಕೆ, ಚರು, ಸೌಟು, ಸೋಮ, ಉದ್ಧರಣೆ, ದಕ್ಷಿಣೆ, ಯಜ್ಞಸ್ತಂಭ, ಸಮಿಧೆ, ಯಜ್ಞಭೂಮಿ ಮುಂತಾದ ಎಲ್ಲ ಯಜ್ಞದ ಉಪಕರಣಗಳಲ್ಲಿ ಯಜ್ಞ ಪುರುಷ ಎನಿಸಿದ ಆ ಭಗವಂತನು ಸನ್ನಿಹಿತನಾಗಿದ್ದನು. ಆದುದರಿಂದಲೇ ವೇದ ವಿದ್ವಾಂಸರಾದ ವಿಪ್ರವರೇಣ್ಯರು ಸರ್ವ ಯಜ್ಞಮಯನಾದ ಆ ಸ್ವಾಮಿಗೆ **"ಯಜ್ಞ"** ಎಂದೇ ಕರೆಯುತ್ತಾರೆ. ದೇವತೆಗಳ ಹಿತ, ಮಾನವರ ಕಲ್ಯಾಣ, ಸರ್ವಲೋಕ ಕ್ಷೇಮವೇ ಆ ಬ್ರಹ್ಮಯಜ್ಞದ ಮುಖ್ಯ ಉದ್ದೇಶವಾಗಿದ್ದಿತು. ಬ್ರಹ್ಮ, ಕಪಿಲ, ಸಪ್ತರ್ಷಿ, ರುದ್ರ, ಸನತ್ಕುಮಾರ, ಹದಿನಾಲ್ಕು ಮನುಗಳು, ಪ್ರಜಾಪತಿಗಳು ಇವರೆಲ್ಲರಿಗೂ ಇಂತಹ ಪ್ರಭಾವ, ಮಹಾತ್ಮ ಮತ್ತು ಅಗ್ನಿ ಸಮಾನವಾದ ಕಳೆ ಕಾಂತಿಗಳನ್ನು ತಂದು ಕೊಟ್ಟುವನೆಂದರೆ ಪುರಾಣ ಪುರುಷನಾದ ಮಹಾವಿಷ್ಣುವೇ. ಪೂರ್ವಕಾಲದಲ್ಲಿ ಬ್ರಹ್ಮದೇವನು ಕಮಲದಿಂದ ಜನಿಸಿ, *ತಪಸ್ಸನ್ನು ಮಾಡುತ್ತಿದ್ದಾಗ ಲೋಕ ಪದ್ಮದಲ್ಲಿ ದೇವತೆಗಳು, ಋಷಿಗಳು ಜನಿಸಿದರು.

* *ಕಮಲಜಾತಸ್ಯತಃ ಎಂದು (ಕ) ಪ್ರತಿಯ ಪಾಠಾಂತರ*
*ಪುರಾಕಮಲಜಾತಸ್ಯ ತಪಸ್ತಸ್ಯ .... (ಖ) ಪ್ರತಿಯ ಪಾಠಾಂತರ.*

ಋಷಿಗಳು ಆ ಲೋಕ ಪುಷ್ಕರದಿಂದಲೇ ಸಂಭವಿಸಿದರು. ಇದನ್ನೇ ''ಪುಷ್ಕರ ಪ್ರಾದರ್ಭಾವ'' ಎಂದು ಕರೆಯುವರು. ಈ ಬ್ರಹ್ಮದೇವರಿಗೆ ಸಹಾಯ ಮಾಡಲಿಕ್ಕಾಗಿ ಎಲ್ಲ ದೇವ-ದೇವೋತ್ತಮನಾದ ವಿಷ್ಣುವು ವರಾಹರೂಪವನ್ನು ತಳೆದು ಅವಿರ್ಭವಿಸಿದ. ಅವನು ತನ್ನ ಮುಖದಿಂದ ವೇದಗಳನ್ನು ಉಚ್ಚರಿಸುತ್ತಿದ್ದ. ಲೋಕ ಪುಷ್ಕರದಲ್ಲಿ ಬ್ರಹ್ಮದೇವನ ಎದುರು ಪ್ರಾದುರ್ಭೂತನಾದ. ವರಾಹರೂಪಿಯಾದ ಶ್ರೀಹರಿಯು ತನ್ನ ಮುಸುಡೆಯನ್ನು ಯಾವ ಸ್ಥಳದಲ್ಲಿ ಅಗಲಗೊಳಿಸಿದನೋ ಅದೇ ಕೋಕಾಮುಖ ಎಂದು ಪ್ರಸಿದ್ಧವಾಯಿತು. ಹಂದಿಗಳ ಮುಸುಡೆಗೆ-(ಮುಖಕ್ಕೆ) ಪುಷ್ಕರ ಎಂದು ಸಂಸ್ಕೃತದಲ್ಲಿ ಕರೆಯುತ್ತಾರೆ. ವರಾಹ ದೇವರು ತನ್ನ ಪುಷ್ಕರವನ್ನು ತುಸು ಅಗಲಗೊಳಿಸಿದ್ದರಿಂದ ಇದಕ್ಕೆ ಪುಷ್ಕರಕ್ಷೇತ್ರವೆಂದು ಹೆಸರು ಬರಲು ಕಾರಣವಾಯಿತು. ಈ ಕ್ಷೇತ್ರದಲ್ಲಿ ತನ್ನ ದೇಹ ಚಲನೆಯನ್ನು ಪ್ರಾರಂಭಿಸಿದ ಆ ವರಾಹ ಮೂರ್ತಿಯೇ ಯಜ್ಞಪುರುಷ. ಯಜ್ಞದ ಯೂಪಸ್ತಂಭವೇ ವರಾಹನ ಕೋರೆದಾಡೆ. ನಾಲ್ಕು ವೇದಗಳೇ ಆ ಆದಿವರಾಹನ ನಾಲ್ಕು ಪಾದಗಳು. ಕ್ರತುವೇ ಕೈ, ಅಗ್ನಿಯೇ ನಾಲಿಗೆ, ದರ್ಭೆಗಳೇ ಆ ವರಾಹಕೇಶ.

ಹಗಲುರಾತ್ರಿಗಳೇ ಕಣ್ಣು, ಶಿಕ್ಷಾಕಲ್ಪ ಮೊದಲಾದ ಆರು ವೇದಾಂಗಗಳೇ ವರಾಹನ ಆಭರಣಗಳು. ತುಪ್ಪವೇ ಮೂಗು. ಸ್ರುವವೇ ಮುಖ ಸಾಮವೇದವೇ ಅದರ ಧ್ವನಿ, ಪ್ರಾಯಶ್ಚಿತವೇ ಉಗುರು. ಯಜ್ಞಪಶುಗಳೇ ಮೊಳಕಾಲು. ಉದ್ಗಾತನೇ ಕರುಳು. ಹೋಮವೇ ಲಿಂಗ. ಮಂತ್ರಗಳೇ ಮೂಳೆ. ಸೋಮನೇ ರಕ್ತ. ವೇದವೇ ಹಗಲು, ಹವಿಸ್ಸೇ ಗಂಧ. ಹವ್ಯಕವ್ಯಗಳೇ ವೇಗ. ದಕ್ಷಿಣೆಯೇ ಹೃದಯ.

ಹೀಗೆ ಲೋಕ ಪುಷ್ಕರಕ್ಷೇತ್ರದಲ್ಲಿ ಸೃಷ್ಟಿಯ ಆರಂಭದಲ್ಲಿ ಪ್ರಾದುರ್ಭೂತನಾದ ವಿಷ್ಣುರೂಪಿ ವರಾಹನು ಬ್ರಹ್ಮದೇವರ ಯಜ್ಞದ ಗುರಿಯಾಗಿ ಪೂಜ್ಯನಾಗಿ ''ಯಜ್ಞಮಯ'' ''ಯಜ್ಞ'' ಎಂದು ಅನಿಸಿಕೊಂಡನು.

ಇಂತಹ ಆ ಯಜ್ಞ ವರಾಹನು ಎಲ್ಲ ಲೋಕಗಳ ಹಿತಕ್ಕಾಗಿ ತನ್ನ ಕೋರೆದಾಡೆಯಿಂದ ಸಾಗರದ ಆಳದಲ್ಲಿ ಮುಳುಗಿ ಹೋದ ಪೃಥ್ವೀ ಮಂಡಲವನ್ನು ಎತ್ತಿ ತನ್ನ ಸ್ಥಾನದಲ್ಲಿ ಗಟ್ಟಿಯಾಗಿ ನಿಲ್ಲಿಸಿದನು. ಅವನು ಧರಿಸಿ ಎತ್ತಿ ಹಿಡಿದದ್ದರಿಂದ ಭೂಮಿಯು ಒಂದು ಸ್ಥಿರವಾದ ನೆಲೆಯನ್ನು ಕಂಡು, ಸ್ಥೇಮ ಕ್ಷೇಮಗಳನ್ನು ಪಡೆಯಿತು.

ಹೀಗೆ ಸೃಷ್ಟಿಯನ್ನು ನಿರ್ಮಿಸಿದ ಬ್ರಹ್ಮದೇವನಿಗೂ ವೇದಗಳಿಗೂ ಬ್ರಾಹ್ಮಣರಿಗೂ ಎಲ್ಲ ಜೀವಿಗಳಿಗೂ ಹಿತವನ್ನು ಮಾಡಬೇಕೆಂದು ಬಯಸಿದ ವಿಷ್ಣು ವರಾಹನು ಸಮುದ್ರ ಮಧ್ಯದಲ್ಲಿ ಮುಳುಗಿ ಹೋದ ಮಹೀತತ್ವವನ್ನು ತನ್ನ ಪುಷ್ಕರದಿಂದ ಎತ್ತಿ ತಂದು, ಗಟ್ಟಿಯಾಗಿ ನಿಲ್ಲಿಸಿ, ತಾನು ಬಂದು, ಈ ಕೋಕಾಮುಖ ಕ್ಷೇತ್ರದಲ್ಲಿ ಬಂದು ನಿಂತನು. ಮತ್ತು ಮನಸ್ಸಿಗೆ ಶಾಂತಿ, ಸಂತಸಗಳನ್ನು ಪಡೆದನು.

ಆಗ ಬ್ರಹ್ಮದೇವರು ಸುರ, ವಸು, ಸಾಧ್ಯ ರುದ್ರ, ಯಕ್ಷ, ರಾಕ್ಷಸ, ಕಿನ್ನರ. ಮರುದ್ಗಣ, ದಿಕ್ಪಾಲಕ, ಪೃಥ್ವೀದೇವಿ, ಗಂಗಾತೀರ್ಥ, ಸಪ್ತಸಾಗರ ವರುಣ ಮುಂತಾದವರಿಂದ ಕೂಡಿಕೊಂಡು ಪರಮಾತ್ಮ ರೂಪಿಯಾದ ವರಾಹ ಸ್ವಾಮಿಗೆ ಹೇಳಿಕೊಂಡನು.

''ಮಹಾಪ್ರಭುವೆ, ನೀನು ಯಾವಾಗಲೂ ಈ ಕೋಕಾಮುಖ ಕ್ಷೇತ್ರವನ್ನು ರಕ್ಷಣೆ ಮಾಡಬೇಕು. ಮತ್ತು ಈ ಯಜ್ಞದಲ್ಲಿ ನೀನು ನಮ್ಮೆಲ್ಲರ ಹಾಗೂ ಈ ಯಜ್ಞದ

ರಕ್ಷಣೆಯನ್ನು ಮಾಡಬೇಕು.'' ಬ್ರಹ್ಮದೇವರ ಬಿನ್ನಹಕ್ಕೆ ಆ ಯಜ್ಞ ವರಾಹನು ''ಹಾಗೇ ಮಾಡುತ್ತೇನೆ'' ಎಂದು ಆಶ್ವಾಸನೆ ಕೊಟ್ಟನು. ಅನಂತರ ಬ್ರಹ್ಮದೇವನು ಮತ್ತೆ ಆ ಶ್ರೀಹರಿಯನ್ನು ಕುರಿತು ಮಾತನಾಡಿದನು. ''ದೇವನೇ ನಮಗೆ ಪರಮದೇವತೆ ಎಂದರೆ ನೀನು ಪರಮಗತಿ ಎಂದರೂ ನೀನೇ. ನಮ್ಮ ಪರಮಧಾಮ, ಚರಮ ಆಶ್ರಯನೂ ನೀನೇ. ಇಂದ್ರಾದಿ ದೇವತೆಗಳಿಗೆಲ್ಲ ನೀನೇ ಆಧಾರ. ನಿನ್ನ ಕಣ್ಣುಗಳು ಅರಳಿದ ಕಮಲದಂತೆ ಉತ್ಫುಲ್ಲವಾಗಿವೆ. ವೈರಿಗಳ ಗುಂಪನ್ನೆಲ್ಲ ಸದೆಬಡಿದು ಓಡಿಸಲು ಸಮರ್ಥನು ನೀನೊಬ್ಬನೇ.

ಆದ್ದರಿಂದ ಈ ಯಜ್ಞದಲ್ಲಿ ದಾನವರು ಬಂದು ಯಾವದೇ ಅಡ್ಡಿ ಆತಂಕಗಳನು ಒಡ್ಡದಂತೆ, ನನ್ನ ಈ ಯಜ್ಞ ಧ್ವಂಸಮಾಡದಂತೆ ನೋಡಿಕೊಳ್ಳಬೇಕು. ನಿನಗೆ ನಾನು ನಮಸ್ಕಾರ ಮಾಡಿ, ಈ ವಿಷಯವನ್ನು ಮತ್ತೆ ಮತ್ತೆ ಕೇಳಿಕೊಳ್ಳುತ್ತೇನೆ.

**ವಿಷ್ಣು** :- ''ದೇವತೆಗಳ ಅರಸನಾದ ಬ್ರಹ್ಮನೆ, ಭೀತಿಯನ್ನು ಬಿಟ್ಟು ಬಿಡು. ಇದಕ್ಕೆ ವಿಘ್ನ ಮಾಡಬಂದ ಅಸುರರನ್ನೆಲ್ಲ ನಾನು ನಾಶ ಮಾಡುತ್ತೇನೆ. ಇದಕ್ಕೆ ಆತಂಕ ಪಡಿಸುವ ಯಾವುದೇ ದೈತ್ಯ ದಾನವರನ್ನು ನಾನು ಬಿಡುವದಿಲ್ಲ ; ಸಂಹರಿಸಿ ಬಿಡುವೆನು. ನಿನಗೆ ಒಳ್ಳೆಯದಾಗಲಿ. ಪಿತಾಮಹನೆ, ಕೆಲಸವು ನಿರ್ವಿಘ್ನವಾಗಿ ನೆರವೇರಲಿ. ನಿರ್ಭಯನಾಗಿ ನಿನ್ನ ಕಾರ್ಯ ನೆರವೇರಿಸು.'' ಹೀಗೆ ಮಹಾವಿಷ್ಣುವು ಬ್ರಹ್ಮದೇವನ ಯಜ್ಞಕಾರ್ಯದಲ್ಲಿ ಸಹಾಯ ಸಲ್ಲಿಸಲೆಂದು ಜಾಗರೂಕನಾಗಿ ಅಲ್ಲಿಯೇ ನಿಂತುಕೊಂಡನು.

ಆಗ ದಶ-ದಿಕ್ಕುಗಳು ಪ್ರಸನ್ನವಾದವು. ಮಂಗಳಕರ ತಂಗಾಳಿ ತೀಡಿತು. ಜೋತಿಷ್ಪುಂಜಗಳೆಲ್ಲ ವಿಲಕ್ಷಣವಾದ ತೇಜಃಪಕರ್ಷದಿಂದ ಪ್ರಭಾಪುಂಜಗಳಾಗಿ ಕಂಗೊಳಿಸಿದವು. ಮುಗಿಲಲ್ಲಿಯ ಪ್ರಕಾಶ ಮಂಡಲಗಳು ಸೂರ್ಯನಿಗೆ ಪ್ರದಕ್ಷಿಣೆಹಾಕಿದವು. ಗ್ರಹಮಂಡಲಗಳಲ್ಲಿ ಘರ್ಷಣೆ ಆಗಲಿಲ್ಲ. ಸಾಗರಗಳೆಲ್ಲವೂ ಪ್ರಸನ್ನ ಗಂಭೀರವಾಗಿ ಮೊರೆದವು. ಎಲ್ಲ ಹಾದಿ ಬೀದಿಗಳು ಧೂಳದಾಳಿ ಇಲ್ಲದೆ ಗಂಧೋದಕ ಪ್ರೋಕ್ಷಣೆ ಮಾಡಿದಂತೆ ಸುವಾಸನೆ ಬೀರಿದವು. ನದಿಗಳು ತಮ್ಮ ಎಲ್ಲೆಯಲ್ಲಿಯೇ ಹರಿದು ಮೆರೆದವು. ಮಾನವರ ಮನಸ್ಸು ಮತ್ತು ಇಂದ್ರಿಯಗಳು ಸುಪ್ರಸನ್ನವಾದವು.

ಬ್ರಹ್ಮದೇವರ ಬಲಗಡೆ ವಿಷ್ಣು, ಎಡಗಡೆಗೆ ರುದ್ರರು ನಿಂತುಕೊಂಡಿದ್ದರು. ಮಹಾತ್ಮನಾದ ಪಿತಾಮಹನು ಋತ್ವಿಜರು ವರಣವನ್ನು ಈ ರೀತಿಯಾಗಿಮಾಡಿದನು ಭೃಗುಮುನಿಯನ್ನು ಹೋತೃವನ್ನಾಗಿ, ಪುಲಸ್ತ್ಯವನ್ನು ಅಧ್ವರ್ಯವನ್ನಾಗಿ ಆಯ್ದುಕೊಂಡನು. ಮರೀಚಿಮುನಿಯನ್ನು ಉದ್ಗಾತನನ್ನಾಗಿ ಮಾಡಿದನು. ನಾರದನನ್ನು ಬ್ರಹ್ಮಾ ಆಗಲು ಹೇಳಿದನು. ಸನತ್ಕುಮಾರರು ಆ ಯಜ್ಞದಲ್ಲಿ ಸದಸ್ಯರಾದರು. ದಕ್ಷ ಮೊದಲಾದ ಪ್ರಜಾಪತಿಗಳು ಸಹಾಯಕರಾಗಿ ನಿಂತುಕೊಂಡರು.

ಬ್ರಹ್ಮದೇವರ ಸಮೀಪ ಕುಳಿತ ಋತ್ವಿಜರಿಗೆ, ಸದಸ್ಯರಿಗೆ ಕುಬೇರನು ವಸ್ತ್ರಾಭರಣ ಗಳನ್ನು ಕೊಟ್ಟು ಗೌರವಿಸಿದನು. ಉಂಗುರ, ಬಳೆ, ಕಿರೀಟ ಮುಂತಾದವುಗಳನ್ನು ಇರಿಸಿ ಸಿಂಗರಿಸಿದನು. ಆಗ ಬ್ರಹ್ಮದೇವನು ಯಜ್ಞಮಾಡಿಸುವ ಹೊಣೆಗಾರಿಕೆ ಹೊತ್ತುನಿಂತ ಹದಿನಾರು ಋತ್ವಿಜರಿಗೆ ನಮಸ್ಕರಿಸಿ (ಲೋಕದೃಷ್ಟಿಯಿಂದ) ಬೇಡಿಕೊಂಡನು. ''ಪೂಜ್ಯರೆ, ನಾನು ನನ್ನ ಹೆಂಡತಿ ಸಾವಿತ್ರಿ ಇಬ್ಬರೂ ಈ ಯಜ್ಞವನ್ನು ಆರಂಭಿಸಿದ್ದೇವೆ. ನೀವೆಲ್ಲರೂ ನನ್ನ ಮೇಲೆ ಅನುಗ್ರಹಿಸಿ, ಯಜ್ಞವನ್ನು ಯಥಾಸಾಂಗನೆರವೇರಿಸಿ ಕೊಡಬೇಕು.'' ಅನಂತರ

ಋತ್ವಿಜರು ವಿಶ್ವಕರ್ಮನನ್ನು ಕರೆದು, ಬ್ರಹ್ಮದೇವನಿಗೆ ಕ್ಷೌರಮಾಡಿಸಿದರು. ರೇಷ್ಮೆಯ ಬಟ್ಟೆಗಳನ್ನು ಆ ದಂಪತಿಗಳಿಗೆ ಉಡಲು ಕೊಟ್ಟರು. ಯಜ್ಞದಲ್ಲಿ ಮಾಡಿಸಬೇಕಾದುದನ್ನು ಬ್ರಹ್ಮ-ಸಾವಿತ್ರಿಯರಿಂದ ವಿಧಿ-ವತ್ತಾಗಿ ಮಾಡಿಸಿದರು. ಅಲ್ಲಿಯ ಋತ್ವಿಜರ ವೇದಘೋಷಗಳಿಂದ ಲೋಕಗಳೆಲ್ಲ ದುಮುದುಮಿಸಿದವು. ಯಜ್ಞ ರಕ್ಷಣೆಗಾಗಿ ಕ್ಷತ್ರಿಯರು ಆಯುಧಪಾಣಿಗಳಾಗಿ ನಿಂತರು. ವೈಶ್ಯರು ಅತ್ಯಂತ ರುಚಿರುಚಿಯಾದ ಭಕ್ಷ ಭೋಜ್ಯಗಳನ್ನು ತಯಾರುಮಾಡಿದರು. ಅದನ್ನು ನೋಡಿ ಬ್ರಹ್ಮದೇವನಿಗೆ ಸಂತೋಷ ವಾಯಿತು. ಇಷ್ಟು ತರಹದ ರಸಭರಿತ ಮಧುಪಾಕ, ಮೃಷ್ಟಾನ್ನಗಳನ್ನು ಬ್ರಹ್ಮದೇವರೇ ಕಂಡಿರಲಿಲ್ಲ. ವೈಶ್ಯರ ಈ ಪರೋಪಕಾರಿ ಬುದ್ಧಿಯನ್ನು ಕಂಡು ವಿಧಾತನು ಅವರಿಗೆ 'ಪ್ರಾಗ್ವಾಟ' ಎಂಬ ಬಿರುದನ್ನು ಕೊಟ್ಟನು. ಸಮಾರಂಭಕ್ಕೆ ಬಂದ ಜನರ ಸೇವಾಶುಶ್ರೂಷೆ ಮಾಡುವ ಶೂದ್ರರನ್ನು ಕಂಡು ಬ್ರಹ್ಮದೇವನಿಗೆ ಪ್ರೀತಿ ಉಕ್ಕಿ ಬಂದಿತು. ಶ್ರೀ ಹರಿಯ ಪಾದದಿಂದ ಹುಟ್ಟಿದ ನೀವು ಎಲ್ಲರ ಪಾದಸೇವೆ ಮಾಡಿ ಪಾವನರಾಗಿರಿ ಎಂದು ಹರಿಸಿದನು.

ಆಗ ಬ್ರಹ್ಮದೇವನು ದೇವೇಂದ್ರನನ್ನು ದ್ವಾರಪಾಲಕನನ್ನಾಗಿ ವರುಣನನ್ನು ರಸಭರಿತವಾದ ಭೋಜ್ಯ ವಸ್ತುಗಳನ್ನು ನೀಡಲಿಕ್ಕೂ ನಿಯಮಿಸಿದನು. ಬಂದವರಿಗೆಲ್ಲ ಬೇಡಿದಷ್ಟು ಹಣ, ಹೊನ್ನು, ರತ್ನಗಳನ್ನು ನೀಡಬೇಕೆಂದು ಕುಬೇರನನ್ನು ನಿಯೋಜಿಸಿದನು. ಬಂದ ಜನರಿಗೆಲ್ಲ ಗಂಧ ಸೇವೆ ಗೈಯಲು ಗಾಳಿಗೆ ಆದೇಶ ನೀಡಿದನು. ಎಲ್ಲೆಡೆಗೂ ಸಾಕಷ್ಟು ಬೆಳಕು ಬೀರಲು ಭಾಸ್ಕರನಿಗೆ ಕಟ್ಟಪ್ಪಣೆ ಮಾಡಲಾಯಿತು. ಈ ಸಮಗ್ರ ಯಜ್ಞಕಾರ್ಯದ ಯಜಮಾನನಾಗಿ ನಿಲ್ಲಬೇಕೆಂದು ಶ್ರೀಹರಿಯನ್ನು ಪ್ರಾರ್ಥಿಸಲಾಯಿತು. 'ಪ್ರಭುತ್ವೇ ಮಾದವಃ ಸ್ಥಿತಃ' ಬ್ರಹ್ಮನ ಬಿನ್ನಹದಂತೆ ಮಾಧವನು ಆ ಯಜ್ಞ ಸಮಾರಂಭದ ಯಜಮಾನನಾಗಿ ನಿಂತುಕೊಂಡನು. ಚಂದ್ರನಿಗೆ ಆಗದವರ ಆಯಾಸ ಪರಿಹಾರ ಮಾಡುವಂತೆ ತನ್ನ ಚಂದ್ರಿಕೆಯನ್ನು ಚಿಮುಕಿಸಲು ಹೇಳಲಾಯಿತು. ಇಷ್ಟೆಲ್ಲ ಸಿದ್ಧತೆ ಆದ ಬಳಿಕ ಬ್ರಹ್ಮದೇವರ ಧರ್ಮಪತ್ನಿ ಸಾವಿತ್ರಿದೇವಿಯು ಅಲಂಕೃತಳಾಗಿ ನಿಂತುಕೊಂಡಿದ್ದಳು. ಅಧ್ವರ್ಯುವಾದ ಪುಲಸ್ತ್ಯಮುನಿಯು ಸಾವಿತ್ರಿದೇವಿಯನ್ನು ''ಬೇಗ ಬನ್ನಿ ತಾಯಿ, ಹೋಮ ಕುಂಡದಲ್ಲಿಯ ಅಗ್ನಿಗಳು ಉದ್ದೀಪಿತವಾಗಿವೆ. ದೀಕ್ಷೆಯಕಾಲ ಬಂದಿದೆ. ಆದ್ದರಿಂದ ಈಗಲೇ ಬನ್ನಿ'' ಎಂದು ಕೂಗಿ ಕರೆದನು.

ಎಷ್ಟಾದರೂ ಸಾವಿತ್ರಿ ಹೆಂಗಸಲ್ಲವೇ ! ಆಗ ಅವಳಿಗೆ ಮಾಡಲು ನೂರೆಂಟು ಕೆಲಸ. 'ದೂರದೂರದ' ದೇಶಗಳಿಂದ ದೊಡ್ಡ ದೊಡ್ಡ ಜನ ಬರುತ್ತಾರೆ. ಈ ಹೆಬ್ಬಾಗಿಲ ಶೃಂಗಾರ ಸರಿಯಾಗಿಲ್ಲ. ಈ ಅಂಗಳದಲ್ಲಿ ಅಲಂಕಾರ ಪೂರ್ಣಗೊಂಡಿಲ್ಲ. ಇತ್ತ ಕಡೆಯ ಭಿತ್ತಿಗಳಲ್ಲಿ ಚಿತ್ರಗಳನ್ನು ಸರಿಯಾಗಿ ಇನ್ನೂ ಬಿಡಿಸಿಲ್ಲ. ಈ ಮುಂಭಾಗದಲ್ಲಿ ರಂಗವಲ್ಲಿಯನ್ನು ಚೆನ್ನಾಗಿ ಹಾಕುವದು ಮುಗಿದಿಲ್ಲ. ಈ ಮನೆಯಲ್ಲಿ ತಿಕ್ಕಿ ಇಟ್ಟ ಪಾತ್ರೆಗಳಿಗೆ ಇನ್ನೂ ಹೊಳಪು ಸಾಲದು. ಇನ್ನೂ ಮಿಂಚು ಬರುವಂತೆ ಅವುಗಳನ್ನು ತೊಳೆಯಬೇಕು. ಇವಾವ ಕೆಲಸಗಳಾಗದೆ ನಾನು ಹೇಗೆ ಬರಲಿ ? ಇನ್ನೂ ಕೆಲಸಗಳಿವೆ ಮೇಲಾಗಿ ನಾನು ನನ್ನ ಗೆಳೆಯರ ನೋಡಬೇಡವೆ?'' ನಾರಾಯಣನ ಲಲನೆ ಲಕ್ಷ್ಮೀ ಬಂದಿಲ್ಲ. ಶಿವನ ಸತಿ ಉಮಾದೇವಿಯು ಇಲ್ಲಿ ಬಂದಂತೆ ಕಾಣುವದಿಲ್ಲ. ಅವಳಿಗೆ ಬೇಗ ಬರಲು ಎಷ್ಟು ಆಗ್ರಹಮಾಡಿ ಬಂದಿದ್ದೆ ಏಕೋ ಕಾಣೆ ಅವಳಿನ್ನೂ ಬಂದಿಲ್ಲ.

ಮೇಧಾ, ಶ್ರದ್ಧಾ, ವಿಭೂತಿ, ಧೃತಿ, ಕ್ಷಮಾ ಮುಂತಾದ ದೊಡ್ಡ ಮುತ್ತೈದೆಯರಿಗೆ ಹೇಳಿ ಕಳಿಸಿದ್ದೇನೆ. ಅವರು ಬರಬೇಡವೆ ? ಮತ್ತು ನನ್ನ ಮಕ್ಕಳಾದ ಗಂಗಾ, ಸರಸ್ವತಿ, ರೋಹಿಣಿ ಮುಂತಾದವರು ಇಲ್ಲಿಗೆ ಬಂದಿಲ್ಲ. ಸೊಸೆಯಂದಿರಾದ ಅಗ್ನಿಯ ಮಡದಿ ಸ್ವಾಹಾ, ಯಮನ ಪತ್ನಿ ಧೂಮರೋರ್ಣಾ, ವರುಣನ ವನಿತೆ ಗೌರಿ, ವಾಯು ಕುಟುಂಬಿನಿ ಸುಪ್ರಭಾ, ಕುಬೇರನ ಕಾಮಿನಿ ಬುದ್ಧಿ, ವಶಿಷ್ಠನಿ ಆರುಂಧತಿ, ಸಪ್ತರ್ಷಿಗಳ ಹೆಂಡಂದಿರು ನಾನೊಬ್ಬಳೆ ಹೇಗೆ ಆ ಯಜ್ಞಮಂಟಪದಲ್ಲಿ ಬಂದು ಕುಳಿತುಕೊಳ್ಳಲಿ ? ಆದುದರಿಂದ ಅವರೆಲ್ಲರು ಬರುವವರೆಗೆ ತುಸು ತಾಳಿರಿ. ನಾನೊಬ್ಬಳೆ ಅಲ್ಲಿಗೆ ಬರಲಾರೆ. ನೀನು ಹೋಗಿ ಬ್ರಹ್ಮದೇವರಿಗೆ ಹೇಳು ಬರಿ ಅವಸರ ಮಾಡಬೇಡಿರಿ, ಸ್ವಲ್ಪ ಹೊತ್ತು ನಿಲ್ಲಿರಿ. ಅವರೆಲ್ಲರೂ ಬಂದ ಬಳಿಕ ನಾನು ಬರುವೆನು. ಆ ಎಲ್ಲ ಜನರ ಸಮಕ್ಷಮ ನಾವು ದಂಪತಿಗಳು ಜೋಡಿಯಾಗಿ ಯಜ್ಞಕಾರ್ಯ ಪ್ರಾರಂಭಿಸಿದರೆ ನಿಮಗೂ ಕೀರ್ತಿ, ನನಗೂ ಪ್ರೀತಿ, ಈ ಸಮಾರಂಭಕ್ಕೂ ಶೋಭೆ, ನೋಡುವವರಿಗೂ ಸಂತೋಷ ಅಲ್ಲವೆ ? ಅದಕ್ಕಾಗಿ ನನ್ನ ಪತಿದೇವರಿಗೆ ತುಸು ತಡೆಯಲು ಹೇಳಿರಿ. ಪುರೋಹಿತರಿಗೆ ತುಸು ತಾಳಲು ತಿಳಿಸಿರಿ.''

ಕರೆಯಲು ಬಂದ ಅಧ್ವರ್ಯವಿಗೆ ಈ ಮಾತು ಕೇಳಿ ದಿಗಿಲಾಯಿತು. ಅವನು ಬ್ರಹ್ಮದೇವರ ಬಳಿಗೆ ಬಂದು ''ದೇವನೆ, ಸಾವಿತ್ರಿಯು ಗೃಹಕಾರ್ಯದಲ್ಲಿ ವ್ಯಗ್ರಳಾಗಿದ್ದಾಳೆ. ಅವಳಿಗೆ ಈ ಹೋಮಕಾರ್ಯಕ್ಕೆ ಬರಲು ಅವಕಾಶವಿಲ್ಲವಂತೆ, ಮೇಲೆ ಅವಳ ಗೆಳತಿಯರು ಬಂದಿಲ್ಲ. ಅವರೆಲ್ಲರೂ ಬರುವವರೆಗೆ ನಾನು ಬರುವುದಿಲ್ಲವೆಂದು ಹೇಳಲು ತಿಳಿಸಿದ್ದಾಳೆ. ಈಗ ಏನು ಮಾಡಬೇಕು ? ಕಾಲ ಮೀರುತ್ತಿದೆ. ತಮಗೆ ಯೋಗ್ಯ ಕಂಡಂತೆ ಮಾಡಬಹುದು.'' ಸಾವಿತ್ರಿ ಹೇಳಿ ಕಳಿಸಿದ ಈ ನಿಷ್ಠುರ ವಚನಕೇಳಿ ಬ್ರಹ್ಮದೇವನಿಗೆ ಕೋಪ ಬಂದಿತು. ಅವನು ದೇವೇಂದ್ರನನ್ನು ಕರೆದು ಅಪ್ಪಣೆಮಾಡಿದನು.

**ಬ್ರಹ್ಮ** :- ಸುರನಾಥನೆ, ಸಾವಿತ್ರಿಯು ಈಗ ಬರುವದಾಗುವದಿಲ್ಲವೆಂದು ಹೇಳಿ ಕಳಿಸಿದ್ದಾಳೆ. ಅವಳು ಬರುವವರೆಗೆ ತಡೆಯುವಂತಿಲ್ಲ. ಅದಕ್ಕಾಗಿ ನನಗೆ ಈಗ ಬೇರೊಬ್ಬ ಪತ್ನಿಯನ್ನು ನೋಡು. ಕೂಡಲೇ, ಓರ್ವ ಕಾಮಿನಿಯನ್ನು ಕರೆದುಕೊಂಡು ಬಾ. ಹೇಗಾದರೂ ಮಾಡಿ ಈ ಯಜ್ಞವನ್ನು ಮುಗಿಸಬೇಕಾಗಿದೆ. ಅವಳ ರೂಪ, ಬಣ್ಣ, ಜಾತಿ, ಯಾವುದನ್ನೂ ವಿಚಾರಿಸುವುದಿಲ್ಲ. ನೀನೂ ಈ ಬಗ್ಗೆ ಚಿಂತೆ ಮಾಡಬೇಡ. ಯಜ್ಞವು ಮುಗಿದ ಕೂಡಲೇ ಬೇಕಾದಲ್ಲಿ ಅವಳನ್ನು ಬಿಡುಗಡೆ ಮಾಡುತ್ತೇನೆ.'' ಬ್ರಹ್ಮದೇವರ ಈ ಆಜ್ಞೆಯನ್ನು ತಲೆಯ ಮೇಲೆ ಹೊತ್ತು ಧರಣೀ ಮಂಡಲದಲ್ಲಿ ಕನ್ಯಾನ್ವೇಷಣೆ ಮಾಡುತ್ತ ತಿರುಗಾಡಿದನು. ಆ ಇಂದ್ರ ಹೆಣ್ಣು ಕಂಡಲ್ಲೆಲ್ಲ ವಿಚಾರಿಸುತ್ತಿದ್ದನು. ಅವನು ನೋಡಿದ ಹೆಂಗಸರೆಲ್ಲರು ಹೆಚ್ಚಾಗಿ ಮದುವೆಯಾದವರೇ ಇದ್ದರು. ಕೊನೆಗೆ ಅವನಿಗೆ ಒಬ್ಬ ಗೋಪಾಲ ಕನ್ಯೆಯು ಕಣ್ಣಿಗೆ ಬಿದ್ದಳು. ಒಳ್ಳೇ ಚೆಲುವೆ. ಮುಖವು ಮೋಹಕವಾಗಿತ್ತು. ಕಣ್ಣು ಕಾಂತಿ ಗೂಡಿದ್ದವು. ಅವಳೇನು ದೇವ ಸ್ತ್ರೀಯಲ್ಲ; ಗಂಧರ್ವ ಸ್ತ್ರೀಯಲ್ಲ, ಅಸುರಾಂಗನೆಯಲ್ಲ; ನಾಗಕನ್ಯೆಯಲ್ಲ. ಆದರೆ ಅವಳಿಗಿದ್ದ ರೂಪ ಅವರಾರಿಗೂ ಇಲ್ಲ ಎಂಬುದು ಸತ್ಯ. ಇಂತಹ ಸುಂದರಿಯರು ದೇವ ಗಂಧರ್ವ ಲೋಕಗಳಲ್ಲಿ ಹುಡುಕಿದರೂ ದೊರಕುತ್ತಿದ್ದಿಲ್ಲ. ತಾವರೆಗಣ್ಣಿನ ತುಂಬ ತಾರುಣ್ಯದ ಆ ಸರ್ವಾಂಗ ಮೋಹಿನಿಯನ್ನು ದೇವೇಂದ್ರನು ತನ್ನ ಸಾವಿರ ಕಣ್ಣುಗಳನ್ನು ಅರಳಿಸಿ ನೋಡಿದನು. ಮತ್ತು ಅವನ ಬಳಿ ಬಂದು ಕೇಳಿದನು.

''ಸುಂದರಿ, ನೀನು ಯಾರು ? ನಿನ್ನ ತಾಯಿ-ತಂದೆ ಯಾರು ? ನೀನು ಎಲ್ಲಿಂದ ಬಂದೆ ? ಒಬ್ಬಳೇ ಹೀಗೆ ನಡುದಾರಿಯಲ್ಲಿ ನಿಂತು ಕೊಂಡಿರುವೆ ? ನೀನು ನಿನ್ನ ಮೈತುಂಬ ಹೊನ್ನರತ್ನದ ಆಭರಣಗಳನ್ನು ಧರಿಸಿರುವೆ ಅಷ್ಟೇ ! ಅವುಗಳಿಂದ ಸ್ವಭಾವ ಸುಂದರಿ ಯಾದ ನೀನು ಚಂದ ಕಾಣುವುದಿಲ್ಲ. ಆದರೆ ನಿನ್ನಿಂದ ಆ ಆಭರಣಗಳೇ ಅತ್ಯಂತ ಚಂದ ಕಾಣುತ್ತವೆ. ದೇವ ಗಂಧರ್ವರಲ್ಲಿ ನಿನ್ನಂತಹ ಸ್ಫುರದ್ರೂಪಿಣಿಯಾದ ನಾರಿಯನ್ನು ನಾನು ನೋಡಿಲ್ಲ. ನಾನು ಇಷ್ಟು ಮಾತನಾಡಿಸಿದರೂ ನೀನು ಉತ್ತರವನ್ನೇಕೆ ಕೊಡಲೊಲ್ಲೆ ?

**ಕನ್ಯೆ** :- ವೀರನೆ, ನಾನು ತುರುಗಾಹಿಗಳ ಕನ್ಯೆ. ಹಸುವಿನ ಹಾಲು, ಮೊಸರು, ಬೆಣ್ಣೆ ಮಾರಲು ಬಂದಿದ್ದೇನೆ. ನಿಮಗೆ ಹಾಲು ಬೇಕೆ ? ಅಥವಾ ಮೊಸರು ಬೇಕೆ ? ರುಚಿಕರವಾದ ಮಜ್ಜಿಗೆಯನ್ನು ನಿಮಗೆ ನೀಡಲೆ ? ಬೇಕಾದರೆ ಈ ಬೆಣ್ಣೆಯನ್ನಾದರೂ ನೀವು ಸ್ವೀಕರಿಸಬಹುದು. ನಿಮಗೇನು ಬೇಕು ಹೇಳಿರಿ. ನಿಮಗೆ ಬೇಕಾದುದನ್ನು ಬೇಕಾದಷ್ಟು ಕೊಳ್ಳಿರಿ.'' ಹೀಗೆ ನುಡಿದ ಆ ಚಪಲೆಯನ್ನು ದೇವೇಂದ್ರನು ಕೈ ಹಿಡಿದು ಯಜ್ಞಮಂಟಪಕ್ಕೆ ಕರೆದುಕೊಂಡು ಹೋದನು. ಯಜ್ಞ ಮಾಡುವಲ್ಲಿ ತುಂಬು ಮೊಗದ ತಾವರೆಗಣ್ಣಿನ ಆ ತರಳೆಯನ್ನು ಕರೆದೊಯ್ದನು.

ಆ ಕನ್ಯೆ ಮಾತ್ರ ''ಹಾ ತಂದೆ, ಎಲ್ಲೆ ತಾಯಿಯೇ ! ಅಯ್ಯೊ ಅಣ್ಣನೆ ! ಬನ್ನಿ ಈ ಮನುಷ್ಯನು ನನ್ನನ್ನು ಬಲಾತ್ಕಾರದಿಂದ ಸೆಳೆದೊಯ್ಯುತ್ತಿದ್ದಾನೆ. ನನ್ನನ್ನು ಬಿಡಿಸಿರಿ'' ಎಂದು ಒಮ್ಮೆಲೆ ಅಳತೊಡಗಿದಳು. ತಂದೆ-ತಾಯಿಗಳನ್ನು ಕೂಗಿ ಕರೆದು, ಅತ್ತು ಗೋಗರೆದು ವಿಲಾಪಿಸಿ ಬೇಡಿಕೊಂಡಳು. ಗೋಳಾಡುತ್ತಿದ್ದಂತೆಯೇ ಇಂದ್ರನು ಆ ಗೋಪ ಬಾಲೆಯನ್ನು ಒಯ್ದು ಬ್ರಹ್ಮದೇವರ ಎದುರು ನಿಲ್ಲಿಸಿ ಹೇಳಿದನು !

''ಬೊಗಸೆಗಣ್ಣಿನ ಬಾಲೆಯೆ, ನಾನು ನಿನ್ನನ್ನು ನಿನ್ನ ಎದುರು ಕುಳಿತಿರುವ ಈ ಬ್ರಹ್ಮದೇವನಿಗಾಗಿ ಕರೆತಂದಿದ್ದೇನೆ. ಸುಂದರಿ ಶೋಕ ಮಾಡಬೇಡ.'' ಆಗ ಆ ಗೋಪಾಲ ಬಾಲಿಕೆಯು ದೃಷ್ಟಿ ಎತ್ತಿ ಬ್ರಹ್ಮದೇವನ ಕಡೆಗೆ ನೋಡಿದಳು.

ಕಮಲದ ಕಾಂತಿ ಕರೆವ ತಾಳ, ಹೃಷ್ಟ ಹೊಳೆವ ಹೊನ್ನಿನಂತಹ ಹೊಂಬಣ್ಣ, ಪೌರುಷ ಪೀಠದಂತೆ ಇರುವ ವಿಶಾಲ ವಕ್ಷಸ್ಥಲ, ಆಜಾನುಬಾಹು, ಹೊಂದಾವರೆಯಂತಿರುವ ಸುಂದರಮುಖ, ಮಿಂಚುವಕಾಂತಿ, ಉಕ್ಕುವಕಳೆ, ಇಂತಹ ಧೀರ ಪುರುಷನನ್ನು ಕಂಡು ಆ ಮುಗ್ಧೆ ತತ್‌ಕ್ಷಣವೆ ಮನ್ಮಥನ ಬಾಣಗಳಿಗೆ ಗುರಿಯಾದಳು. ಇಂತಹ ಸರ್ವಾಂಗ ಸುಂದರ ಯುವಕನನ್ನು ನೋಡಿದ ಕೂಡಲೆ ಅವಳ ಮನಸ್ಸು ಮಾರುಹೋಯಿತು. ಅವಳ ಸರ್ವೇಂದ್ರಿಯಗಳು ಆ ಪುರುಷೋತ್ತಮನ ಪ್ರಾಪ್ತಿಗಾಗಿ ತವಕಿಸಿದವು. ಅವನಿಗೆ ತನ್ನನ್ನು ಒಪ್ಪಿಸಲು ಕೂಡಲೇ ಸಿದ್ಧಳಾದಳು.

''ಈ ಮನುಷ್ಯನು ನನ್ನನ್ನು ಚೆಲುವೆ ಎಂದು ಕೈ ಹಿಡಿಯಲು ಸಮ್ಮತಿಸಿದರೆ ನನ್ನಂತಹ ಧನ್ಯಳಾದ ಕನ್ಯೆ ಜಗತ್ತಿನಲ್ಲಿ ಬೇರೆ ಯಾರು ? ಆ ಇನ್ನೊಬ್ಬ ಪುರುಷನು ನನ್ನನ್ನು ಜುಲುಮೆಯಿಂದ ಇಲ್ಲಿಗೆ ಎಳೆದು ತಂದದ್ದು ಉಪಕಾರವೆ ಆಯಿತು. ಈಗ ಇವನನ್ನು ನಾನು ಮದುವೆಯಾಗದೆ ಬಿಟ್ಟರೆ ಸಾಯುವದು ಖಂಡಿತ. ಇವನು ನನ್ನನ್ನು ಕೈ ಹಿಡಿದರೆ ನಾನು ಸುಖಿಸುವದೂ ಖಂಡಿತ. ಇವನನ್ನು ಬಿಟ್ಟು ಈಗ ನಾನು ನನ್ನ ಊರಿಗೆ ತೆರಳಿದರೆ ನನ್ನ ರೂಪವು ವ್ಯರ್ಥ. ನನ್ನ ಬದುಕೇ ಅನರ್ಥ. ಈ ಪುಣ್ಯಪುರುಷನನ್ನು ಕಣ್ಣಿನಿಂದ ನೋಡಿದ

ಹೆಣ್ಣೆ ಧನ್ಯ ! ಇವನನ್ನು ಆಲಿಂಗಿಸಿದ ಅಂಗನೆಯ ಭಾಗ್ಯವನ್ನು ಕೇಳಬೇಕೆ ! ಈ ಪುರುಷ ಶ್ರೇಷ್ಠನು ನನ್ನ ಕೈಹಿಡಿಯದಿದ್ದರೆ, ನನ್ನೊಡನೆ ಮಾತನಾಡದಿದ್ದರೆ ಇವನನ್ನು ನೆನೆಯುತ್ತಲೆ ನಾನು ಈ ದೇಹತ್ಯಾಗಮಾಡಿಬಿಡುತ್ತೇನೆ. ನಾನು ಹಿಂದಿನ ನೂರಾರು ಜನ್ಮಗಳಲ್ಲಿ ಏನಾದರೂ ಶುಭ ಕರ್ಮವನ್ನು ಮಾಡಿದ್ದರೆ ಆ ಪುಣ್ಯದಿಂದ ನನ್ನ ಮನಸ್ಸಿಗೆ ಒಪ್ಪಿದ ಈ ಪುರುಷನು ನನಗೆ ಪತಿಯಾಗಿ ದೊರಕಲಿ.'' ಹೀಗೆ ಆ ಗೋಪಕುಮಾರಿಯು ಮನಸ್ಸಿನಲ್ಲಿ ವಿಚಾರಮಾಡುತ್ತಿರುವಾಗ ಬ್ರಹ್ಮನು ತನ್ನ ಪಕ್ಕದಲ್ಲಿರುವ ವಿಷ್ಣುವಿಗೆ ಹೇಳಿದನು - ''ಪ್ರಭೋ, ಈ ಗೋಪಕುಮಾರಿಯು ನನ್ನ ಪತ್ನಿಯಾಗಲು ಯೋಗ್ಯಳಿದ್ದಾಳೆ. ಇವಳ ಹೆಸರು ಗಾಯತ್ರಿ ಎಂದು ಇರಲಿ.'' ಬ್ರಹ್ಮನು ಹೀಗೆ ನುಡಿಯಲು ವಿಷ್ಣುವು ಇಂತು ಉತ್ತರಿಸಿದನು.

''ಬ್ರಹ್ಮನೆ, ನಾನು ನಿನಗೆ ಈ ಕನ್ಯೆಯನ್ನು ಅವಶ್ಯ ಮದುವೆ ಮಾಡಿಕೊಡುವೆನು. ಗಾಂಧರ್ವವಿವಾಹದಿಂದ ನೀನು ಇವಳನ್ನು ಪರಿಗ್ರಹಿಸು. ಇದರಲ್ಲಿ ನೀನು ತಡಮಾಡಬೇಡ. ಸಂದೇಹ ಪಡಬೇಡ. ಇವಳನ್ನು ಈಗಲೇ ಮದುವೆಯಾಗು.''

ಹರಿಯ ಮಾತು ಕೇಳಿ ಬ್ರಹ್ಮನು ಗಾಂಧರ್ವವಿಧಿಯಿಂದ ಆಗಲೇ ಆ ಗೋಪ ಕನ್ಯೆಯನ್ನು ಮದುವೆಯಾಗಿ, ಅವಳನ್ನು ಕರೆದುಕೊಂಡು ಯಜ್ಞಮಂಟಪಕ್ಕೆ ಬಂದು, ಪುಲಸ್ತ್ಯನಿಗೆ ಹೇಳಿದನು. ''ಇವಳು ನನ್ನ ಹೊಸ ಹೆಂಡತಿ. ಇವಳನ್ನು ಯಜ್ಞಶಾಲೆಗೆ ಕರೆದುಕೊಂಡು ನಡೆಯಿರಿ.'' ಕಸ್ತೂರಿ ತಿಲಕವನ್ನು ಧರಿಸಿ, ರೇಶಿಮೆ ವಸ್ತ್ರವನ್ನು ಧರಿಸಿದ ಆ ಬಾಲೆಯನ್ನು ವೇದಪಾರಂಗತರಾದ ಋತ್ವಿಜರು ಯಜ್ಞಶಾಲೆಗೆ ಕರೆದೊಯ್ದರು. ಕೃಷ್ಣಾಜಿನವನ್ನು ಹೊತ್ತುಕೊಂಡು, ಕೈಯಲ್ಲಿ ಔದುಂಬರ ಹಿಡಿದ ಬ್ರಹ್ಮದೇವನು ಅನನ್ಯ ಕಾಂತಿಯಿಂದ ಕಂಗೊಳಿಸಿದನು. ವೇದಪಾರಂಗತರಾದ ಬ್ರಾಹ್ಮಣರು, ಭೃಗುಋಷಿಯನ್ನು ಮುಂದೆ ಮಾಡಿಕೊಂಡು, ಯಜ್ಞವನ್ನು ಆರಂಭಿಸಿದರು. ಆ ಯಜ್ಞವು ಒಂದು ಸಾವಿರ ಯುಗಗಳ ವರೆಗೆ ಈ ಪುಷ್ಕರ ಕ್ಷೇತ್ರದಲ್ಲಿ ನಡೆಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಬ್ರಹ್ಮದೇವರ ಯಜ್ಞ ಎಂಬ ಹದಿನಾರನೇ ಅಧ್ಯಾಯ ಮುಗಿದುದು*



**ಭೀಷ್ಮ** :- ಬ್ರಾಹ್ಮಣೋತ್ತಮನೆ, ಆ ಯಜ್ಞದಲ್ಲಿ ಏನು ಆಶ್ಚರ್ಯ ನಡೆಯಿತು ? ಹರಿಹರರು ಅಲ್ಲಿ ಇದ್ದು ಏನುಮಾಡಿದರು ? ಬ್ರಹ್ಮದೇವನ ಹೊಸ ಹೆಂಡತಿಯ ಸ್ಥಾನದಲ್ಲಿ ಬಂದ ಗಾಯತ್ರಿಯು ಏನುಮಾಡಿದಳು ? ತಮ್ಮ ಹುಡುಗಿಯನ್ನು ಬಲಾತ್ಕಾರದಿಂದ ಬರಸೆಳೆದು ಒಯ್ದು ಬ್ರಹ್ಮನು ಮದುವೆಯಾದ ಸುದ್ದಿ ಕೇಳಿ ಆ ಹುಡುಗಿಯ ಸಂಬಂಧಿಕರು ಏನುಮಾಡಿದರು ? ಇದೆಲ್ಲವನ್ನು ತಿಳಿದುಕೊಳ್ಳಬೇಕೆಂದು ನನಗೆ ಕೌತುಕಉಂಟಾಗಿದೆ. ಆದುದರಿಂದ ಬ್ರಹ್ಮನ ವೈವಾಹಿಕ ಕ್ರಿಯೆ, ಅದಕ್ಕೆ ತುರುಗಾಹಿಗಳ ಪ್ರತಿಕ್ರಿಯೆ ಎರಡನ್ನೂ ತಿಳಿಸಿರಿ.

**ಪುಲಸ್ತ್ಯ** :- ಆ ಯಜ್ಞದಲ್ಲಿ ಏನು ಆಶ್ಚರ್ಯ ನಡೆಯಿತೆಂಬುದನ್ನು ಹೇಳುತ್ತೇನೆ ಕೇಳಿರಿ. ರುದ್ರನು ಈ ಯಜ್ಞದಲ್ಲಿ ಅತ್ಯಾಶ್ಚರ್ಯಕರ ಕಾರ್ಯಮಾಡಿದನು. ಅವನು ಬೆಂಕಿಯ ಜ್ವಾಲೆಯ ರೂಪ ಧರಿಸಿ ಅಲ್ಲಿಯ ಸಭಾಮಂಟಪದಲ್ಲಿರುವ ಬ್ರಾಹ್ಮಣರ ಬಳಿ ನಿಂತುಕೊಂಡನು. ಆ ಬ್ರಹ್ಮ ಯಜ್ಞಕ್ಕೆ ವಿಷ್ಣುವು ತಾನೆ ಪ್ರಧಾನವಾಗಿದ್ದರಿಂದ ಏನನ್ನೂ ಮಾಡಲಿಲ್ಲ. ಇತ್ತ ಈ ಹುಡುಗಿಯ ಸಂಬಂಧಿಕರಾದ ದನ ಕಾಯುವವರು, ಗೋಪಾಲಕರು ಮತ್ತು ಉಳಿದ ಆ ಗೋಪಾಲಕುಲದ ಕುಮಾರಿಯರು ಕೇಳಿಕೊಂಡು ಅಲ್ಲಿಗೆ ಬಂದರು. ಅವರು ಬರುವಷ್ಟರಲ್ಲಿಯೇ ಅವರ ಕನ್ಯೆಯಾದ ಗೋಪ ಬಾಲಿಕೆಯು ಗಾಯಿತ್ರಿಯಾಗಿ ಯಜ್ಞ ಮೇಖಲೆ ಬಿಗಿದುಕೊಂಡು ಆರ್ಯಶಾಲೆಯಲ್ಲಿ ಕುಳಿತುಕೊಂಡಿದ್ದಳು. ಅದನ್ನು ನೋಡಿ ಅವರೆಲ್ಲರೂ ಗಾಬರಿಯಾದರು.

''ಅಯ್ಯೋ ಮಗಳೆ, ಇದೇನು ನಿನ್ನ ಅವಸ್ಥೆ. ನಮ್ಮ ಕೂಸಿಗೆ ಇಂತಹ ಆಪತ್ತು ಹೇಗೆ ಬಂದಿತು ? ಹಾ ಪುತ್ರಿ ! ಹಾ ಮಗಳೆ ! ಅಯ್ಯೋ ಗೆಳತಿ ! ಯಾರು ನಿನ್ನನ್ನು ಇಲ್ಲಿಗೆ ತಂದರು ? ನಿನ್ನ ಮೈಗೆಲ್ಲ ಮೂರು ಪದರಿನ ಬಳ್ಳಿಯನ್ನು ಏಕೆ ಬಿಗಿದಿದ್ದಾರೆ ! ನೆತ್ತರಿನಲ್ಲಿ ಎದ್ದಿದ್ದ ದಾರದಿಂದ ನಿನ್ನ ಕೂದಲನ್ನು ಜಡೆಗಳಂತೆ ಮುಡಿ ಕಟ್ಟಿದ್ದಾರಲ್ಲ ! ಯಾವದಾದರೂ ಒಂದು ಪಶುವನ್ನು ತರುವದು ಬಿಟ್ಟು ನಿನ್ನನ್ನೇ ನರಬಲಿ ಕೊಡಲು ಈ ಯಜ್ಞಮಂಟಪದಲ್ಲಿ ತಂದು ಕೂಡಿಸಿದರೆ ? ಅಯ್ಯೋ ನಮ್ಮ ಕೂಸಿಗೆ ಎಂತಹ ಕುತ್ತು ಬಂದಿತು ! ಎಂದು ಗೋಳಿಡತೊಡಗಿದರು. ಅವರ ಈ ವಿಲಾಪ ಪ್ರಲಾಪ ಕೇಳಿ ಇಂದ್ರನು ಕೈಮಾಡಿ ಸುಮ್ಮನಿರಿಸಿ. ಸಂತೈಸುತ್ತ ನುಡಿದನು - ''ಗೋಪಾಲಕರೆ, ಸುಮ್ಮನೆ ಅಳಬೇಡಿರಿ, ಗೋಳಿಡಬೇಡಿರಿ. ಈ ನಿಮ್ಮ ಹುಡುಗಿಯನ್ನು ನಾವು ಕರೆತಂದಿದ್ದು ಬಲಿಕೊಡಲಿಕ್ಕೆ ಅಲ್ಲ. ಮದುವೆ ಮಾಡಲಿಕ್ಕೆಂದು ಕರೆ ತಂದಿದ್ದೇವೆ. ಬ್ರಹ್ಮದೇವನಿಗೆ ಮದುವೆ ಮಾಡಿ ಇವಳನ್ನು ದೇವಪತ್ನಿಯನ್ನಾಗಿ ಮಾಡಿದ್ದೇವೆ. ಅದೂ ಸಹ ಜುಲುಮೆಯಿಂದಲ್ಲ ಅವಳ ನಲುಮೆಯಿಂದ; ಅವಳನ್ನೇ ಕೇಳಿರಿ. ಅವಳೇ ಸ್ವಯಂ ಆನಂದದಿಂದ ಈ ಬ್ರಹ್ಮದೇವರನ್ನು ಮದುವೆ ಆಗಿದ್ದಾಳೆ. ಇಂತಹ ಶ್ರೇಷ್ಠ ವರ ಸಿಕ್ಕಿದ್ದು ಅವಳ ಪುಣ್ಯ. ನಿಮ್ಮ ಕುಲಕ್ಕೆಲ್ಲ ಆನಂದದ ಸಂಗತಿ. ಇವಳು ಪುಣ್ಯವತಿ ಆಗದಿದ್ದರೆ ಈ ಸಭೆಗೆ ಹೇಗೆ ಬರುತ್ತಿದ್ದಳು ? ಇದೆಲ್ಲವನ್ನೂ ತಿಳಿದು ಈ ಕನ್ಯೆಯ ತಂದೆಯಾದ ಗೋಪಾಲನೆ, ನೀನು ಶೋಕ ಮಾಡಬೇಡ ಪ್ರಸನ್ನನಾಗು''.

ಹೀಗೆ ಇಂದ್ರನು ನುಡಿದ ಬಳಿಕ ಆ ದನ ಕಾಯುವವರೆಲ್ಲರನ್ನು ಅಲ್ಲಿಯೇ ತಡೆದು, ಪ್ರೀತಿಪೂರ್ಣವಾದ ದೃಷ್ಟಿಯಿಂದ ನೋಡಿ, ವಿಷ್ಣುವು ನುಡಿದನು.

**ವಿಷ್ಣು** :- ಸದಾಚಾರಿಯಾದ ಗೋಪಾಲಕನೆ, ಈಗ ನೀನು ಖಂಡಿತವಾಗಿಯೂ ಶೋಕ ಮಾಡಬೇಡ. ನಿನ್ನ ಅದೃಷ್ಟ ತೆರೆದಿದೆ. ಆಗಲೆ ಈ ನಿನ್ನ ಮಗಳು ಬ್ರಹ್ಮದೇವರ ಕೈಹಿಡಿದಿದ್ದಾಳೆ. ಇವಳು ನಿಜವಾಗಿಯೂ ಯೋಗಿನಿ. ಯೋಗಶಕ್ತಿಯಿಂದ ಬ್ರಹ್ಮಪತ್ನಿ ಆಗಿದ್ದಾಳೆ. ನೀನು ಸದಾಚಾರಿ, ಧರ್ಮನಿಷ್ಠ ಎಂದು ಗೊತ್ತು. ಇದೆಲ್ಲವನ್ನೂ ತಿಳಿದು ನಾನೇ ನಿನ್ನ ಮಗಳನ್ನು ಬ್ರಹ್ಮದೇವರಿಗೆ ಕೊಟ್ಟು ಮದುವೆ ಮಾಡಿದ್ದೇನೆ. ಇವಳಿಂದ ನಿಮ್ಮ ಕುಲವೇ ಉದ್ಧೃತವಾಗಿದೆ. ನಿಮಗೆಲ್ಲರಿಗೂ ದಿವ್ಯಲೋಕ ಪ್ರಾಪ್ತಿ ಕಟ್ಟಿಟ್ಟದ್ದು. ಅಷ್ಟೇ ಅಲ್ಲ. ಇನ್ನು ಮುಂದೆ ನಾನು ದೇವತೆಗಳ ಕಾರ್ಯ ಪೂರ್ಣಗೊಳಿಸಲು ನಿಮ್ಮ ಗೋಪಾಲಕರ ಕುಲದಲ್ಲಿಯೇ ಅವತಾರ ಮಾಡುವೆನು. ನಂದಗೋಪ ಮೊದಲಾದವರು ಕೂಡ ನಾನೂ ನಿಮ್ಮ ಕುಲದಲ್ಲಿ ವಾಸಮಾಡುವೆನು. ನಿಮ್ಮ ಗೋಪಿಯರು ನನ್ನೊಡನೆ ರಮಿಸಿ ಲೀಲಾವಿಲಾಸಗೈಯುವರು. ಅದರಿಂದ ಅವರಿಗೆ ಯಾವ ಪಾಪಲೇಪವಿಲ್ಲ. ಉಳಿದ ಗೋಪಾಲಕರಿಗೆ ನನ್ನೊಡನೆ ತಮ್ಮ ಸ್ತ್ರೀಯರು ವಿಹರಿಸಿದರೂ ದ್ವೇಷ ಇಲ್ಲ. ಮತ್ಸರವೂ ಇಲ್ಲ. ನಾನು ಅಲ್ಲಿ ಇರುವದರಿಂದ ನಿಮ್ಮ ಗೋಪಕುಲಕ್ಕೆ ಯಾವ ಭಯ ಅಪಾಯ ಸಂಭವಿಸದಂತೆ ಮಾಡುತ್ತೇನೆ.'' ವಿಷ್ಣುವಿನ ಈ ವಾಕ್ಯವನ್ನು ಕೇಳಿ ದನಗಾಹಿಗಳಿಗೆಲ್ಲ ಮಹದಾನಂದವಾಯಿತು. ಅವರೆಲ್ಲರೂ ವಿನುತ ಮಸ್ತಕರಾಗಿ ವಿಷ್ಣುವನ್ನು ವಂದಿಸಿದರು. ಭಕ್ತಿಯುತರಾಗಿ ನುಡಿದರು. ''ದೇವನೆ, ಇದೇ ನಮಗೆ ವರವನ್ನು ಕೊಡು. ನೀನಾಡಿದ ಮಾತನ್ನು ಸತ್ಯವನ್ನಾಗಿಡು. ನೀನು ಅವತಾರಮಾಡಿ ಭೂಮಿಗೆ ಬಾ. ನಿನ್ನ ಅವತಾರವು ನಮಗೆಲ್ಲ ಧರ್ಮಕ್ಕೆ ಸಾಧನ. ಪುಣ್ಯಕ್ಕೆ ದಾರಿ. ಕಲ್ಯಾಣಕ್ಕೆ ನಾಂದಿ ಆಗುವದರಲ್ಲಿ ಸಂದೇಹವಿಲ್ಲ. ಎಂದಾದರೂ ಒಂದು ದಿನ, ನಿನ್ನ ಸಂದರ್ಶನವಾದರೂ ಜನರು ಸ್ವರ್ಗವನ್ನು ಹೊಂದುತ್ತಾರಂತೆ. ಅಂದಬಳಿಕ ನೀನು ನಮ್ಮಲ್ಲಿ ಜನಿಸಿ, ನಮ್ಮ ಒಡನಾಡಿಯಾಗಿ ಇದ್ದರೆ, ನಿತ್ಯವೂ ನಿನ್ನ ದರ್ಶನ, ನಿನ್ನ ದೇಹ ಸ್ಪರ್ಶನ ನಮಗೆ ದೊರಕುವದು. ಅದರಿಂದ ಬರಿ ಸ್ವರ್ಗವೇಕೆ ? ಮೋಕ್ಷವೂ ಕೂಡ ನಮಗೆ ಸುಲಭವಾಗಿ ಎಟುಕಬಹುದು. ಈ ನಮ್ಮ ಕನ್ಯೆಯು ಬ್ರಹ್ಮದೇವನ ಕೈಹಿಡಿದು ನಮ್ಮ ಕುಲಕ್ಕೆ ಕಲ್ಯಾಣಕಾರಿಣಿ ಆಗಿದ್ದಾಳೆ. ಇವಳಿಂದ ನಮ್ಮ ವಂಶವು ಉದ್ಧೃತವಾಗುವದು, ಈ ಶುಭಾಂಗಿಯು ನಮ್ಮೆಲ್ಲ ಬಂಧುಬಳಗದವರ ಭವತಾರಿಣಿ. ಉದ್ಧಾರಕಾರಿಣಿಯಾದ ಮಹಾದೇವಿಯೇ ಸರಿ. ನೀನು ಕೊಟ್ಟ ವರವು ಸತ್ಯವಾಗಲಿ. ಅದು ಅತ್ಯಂತ ಶ್ರೇಷ್ಠವಾದದ್ದು.'' ಎಂದು ನುಡಿದರು.

ಅವರೆಲ್ಲರ ಮನಸ್ಸಿಗೂ ವಿಷ್ಣುವಿನ ಮಾತಿನಿಂದ ಸಂತಸವಾಗಿತ್ತು. ಬ್ರಹ್ಮದೇವರು ಕೂಡ ವಿಷ್ಣುವಿನಂತೆಯೇ ಮಧುರ ಮಾತುಗಳನ್ನು ಆಡಿ ಸಂತೋಷಪಡಿಸಿದರು. ಹೀಗೆ ಗೋಪಕನ್ಯೆಯಾಗಿದ್ದು ಈಗ ಬ್ರಹ್ಮದೇವರ ಕೈ ಹಿಡಿದು ಗಾಯಿತ್ರಿ ಎಂಬ ಹೆಸರಿನಿಂದ ಮಾರ್ಪಾಡು ಹೊಂದಿದ ಆ ನವವಧುವಿಗೆ ತನ್ನ ಬಳಗದ ಜನರಿಗೆ ಮುಖ ತೋರಿಸಲು ಏನೋ ಒಂದು ತರಹದ ಸಂಕೋಚ ; ನಾಚಿಕೆ. ತಾನು ಇಲ್ಲಿ ಬಂದು ದೇವೋತ್ತಮನ ಕೈಹಿಡಿದದ್ದು ಇವರಿಗೆ ಹೇಗೆ ಗೊತ್ತಾಯಿತು ? ಎಂದು ಅಚ್ಚರಿ. ಆದರೂ ಅವಳು ಅಲ್ಲಿಗೆ ಬಂದು ಒಂದು ಕೈಯನ್ನು ಬ್ರಹ್ಮದೇವರು ಹಿಡಿದಿದ್ದರೂ ಇನ್ನೊಂದು ಎಡಗೈಯಿಂದ ಬಂಧು ಬಾಂಧವರಿಗೆ ವಂದಿಸಿ, ಆನಂದದಿಂದ ತಾಯಿಯನ್ನು ಕುರಿತು ಮಂದಹಾಸ ಮಧುರ ಮುಖದಿಂದ ಮಾತನಾಡಿದಳು-

**ಗಾಯತ್ರಿ :-** ತಾಯಿಯೇ ನಾನು ಇಲ್ಲಿಯೇ ಇರುತ್ತೇನೆ. ಬ್ರಹ್ಮದೇವರ ಬಳಿಗೆ ಬಂದಿದ್ದೇನೆ. ಪ್ರಪಂಚವನ್ನೆಲ್ಲ ಸೃಷ್ಟಿಮಾಡುವ ಸಾಕ್ಷಾತ್ ಬ್ರಹ್ಮದೇವನೇ ನನಗೆ ಪತಿಯಾಗಿ ದೊರಕಿದ್ದಾನೆ. ನನ್ನ ಬಗ್ಗೆ ಯೋಚಿಸಬೇಡಿ. ತಂದೆಯಾಗಲಿ ಬಾಂಧವರಾಗಲಿ ನನ್ನ ಬಗ್ಗೆ ಚಿಂತೆ ಮಾಡುವುದು ಬೇಡ. ನಾನು ಹೊಂದಿರುವ ಪತಿ, ಪಡೆದಿರುವ ಭಾಗ್ಯಗಳನ್ನು ಕಂಡು ನೀವೆಲ್ಲರೂ ಹೆಮ್ಮಪಡಬೇಕು. ಆತ್ಮಾನಂದವನ್ನು ಹೊಂದಬೇಕು. ಅಂತಹ ಸ್ಪೃಹಣೀಯವಾದ ಸ್ಥಾನದಲ್ಲಿ ನನ್ನ ಸುದೈವ ನನ್ನನ್ನು ತಂದು ಕೂಡಿಸಿದೆ. ಇದನ್ನೆಲ್ಲ ನಮ್ಮ ಊರಲ್ಲಿಯ ನನ್ನ ಗೆಳತಿಯರಿಗೆಲ್ಲ ತಿಳಿಸಿರಿ. ನನ್ನ ಸೋದರಿಯರಿಗೆಲ್ಲ ವಿವರಿಸಿ. ಅಲ್ಲಿಯ ನಮ್ಮ ಪರಿಚಿತ ಜನರಿಗೆಲ್ಲರಿಗೂ ನಾನು ಕುಶಲವಾಗಿ ಇದ್ದುದನ್ನು ವಿಶ್ವಸ್ರಷ್ಟಾರನ ಪ್ರೇಯಸಿಯ ಪದವಿಗೆ ಏರಿದುದನ್ನು ತಿಳಿಸಿರಿ. ಗೋಪಾಲಕುಲದಲ್ಲಿ ಹುಟ್ಟಿದ ನಾನು ದೇವೋತ್ತಮರ ಶ್ರೇಣಿಯಲ್ಲಿ ಸೇರ್ಪಡೆಯಾದದ್ದು ನಿಮ್ಮೆಲ್ಲ ಹಿರಿಯರ ಹರಕೆ ಹಾಗೂ ಹಾರೈಕೆಯ ಫಲ. ಗಾಯತ್ರಿಯ ಈ ನುಡಿಗಳನ್ನು ಕೇಳಿ ಅವಳ ಬಂಧುವರ್ಗಕ್ಕೆಲ್ಲ ಆದ ಆನಂದ ಅಪಾರ. ಎಲ್ಲರ ಮುಖದಲ್ಲಿಯೂ ಸಂತಸದ ನಗೆ ನಲಿದಾಡಿತು. ಪ್ರತಿಯೊಬ್ಬರ ಹೃದಯದಿಂದಲೂ ಹೆಮ್ಮೆ ಹೊಮ್ಮಿತು. ಅತ್ಯಂತ ಉತ್ಸಾಹದಿಂದ ಅವರು ಗಾಯತ್ರಿ ಹಾಗೂ ಬ್ರಹ್ಮದೇವರನ್ನು ಬೀಳ್ಕೊಂಡು ತಮ್ಮ ನಾಡಿಗೆ ನಡೆದರು. ಬಂಧು ಬಳಗದವರೆಲ್ಲರೂ ಅಲ್ಲಿಂದ ಹೊರಟು ಹೋದ ಬಳಿಕ ಗಾಯತ್ರಿಯು ಯಜ್ಞಮಂಟಪದಲ್ಲಿ ಬ್ರಹ್ಮದೇವರ ಎಡಬದಿಯಲ್ಲಿ ಧರ್ಮಪತ್ನಿಯಾಗಿ ಕುಳಿತಳು. ಆ ವಧೂವರರ ಜೋಡಿಯು ನೋಡುವವರ ಕಣ್ಮನಗಳಿಗೆ ಹರ್ಷವನ್ನುಂಟುಮಾಡುತ್ತಿತ್ತು.

ಬ್ರಾಹ್ಮಣರು ಬಂದು ಬ್ರಹ್ಮನಿಗೆ ''ವರಕೊಡು'' ಎಂದು ಕೇಳಿಕೊಂಡರು. ಅವರು ಬೇಡಿದ ವರಗಳನ್ನು ನೀಡಿದನು. ಪಿತಾಮಹ. ಹೊಸದಾಗಿ ಬ್ರಹ್ಮದೇವರ ಭಾರ್ಯಾಪದದಲ್ಲಿ ಕಾಲಿರಿಸಿದ ಗಾಯತ್ರಿಯನ್ನು ಆ ಬ್ರಾಹ್ಮಣರು ವರನೀಡಲು ಕೇಳಿಕೊಂಡರು. ಅವಳು ಕೂಡ ಕೇಳಿದ ವರಗಳನ್ನು ಕೊಟ್ಟು ಕರುಣಿಸಿದಳು. ಅವಳು ಕೊಟ್ಟ ವರಗಳಿಗೆ ಬ್ರಹ್ಮದೇವರು ''ಅಸ್ತು'' ಅನ್ನುತ್ತಿದ್ದರು. ಹೀಗೆ ಆ ಯಜ್ಞವು ದೇವಮಾನದ ಒಂದು ಸಾವಿರ ವರ್ಷ ನಡೆಯಿತು. ಪುಷ್ಕರಕ್ಷೇತ್ರದಲ್ಲಿ ಬ್ರಹ್ಮದೇವರು ಕೈಕೊಂಡ ಮಹಾಯಜ್ಞದ ಅಗ್ನಿ ಕಾರ್ಯಕ್ಕಾಗಿ ಸಾವಿತ್ರಿಯನ್ನು ಕರೆಯಲು ಅಧ್ವರ್ಯ ಬಂದಿದ್ದನಷ್ಟೆ ! ಅದಕ್ಕೆ ಸಾವಿತ್ರಿಯು ತನ್ನ ಗೆಳತಿಯರು ಪರಿವಾರದವರು ಬರುವವರೆಗೆ ಪುರೋಹಿತರಿಗೂ ಪರಮೇಷ್ಠಿಗೂ ತಡೆಯಲಿಕ್ಕೆ ಹೇಳಿರಿ, ಎಂದು ಹೇಳಿ ಕಳಿಸಿದಳು. ಅದರಂತೆ ಎಲ್ಲ ದೇವತಾ ಸ್ತ್ರೀಯರು ಅಲ್ಲಿಗೆ ಆಗಮಿಸಿದರು. ಸಾವಿತ್ರಿಯ ಅವಸರದ ಕರೆಯನ್ನು ಮನ್ನಿಸಿ ಭೃಗುಮುನಿಯಿಂದ ಖ್ಯಾತಿ ದೇವಿಯಲ್ಲಿ ಹುಟ್ಟಿದ ಲಕ್ಷ್ಮೀದೇವಿಯು ಅಲ್ಲಿಗೆ ಬಂದಳು.

ಯೋಗನಿದ್ರೆಯ ಭಾಗ್ಯವನ್ನು ಕರುಣಿಸುವ ಮದಿರಾದೇವಿಯು, ದಕ್ಷನ ಮಗಳಾದ ಉಮಾದೇವಿಯು, ಪುಲೋಮ ಮಗಳಾದ ಶಚಿ, ಸ್ವಧಾ, ಸ್ವಾಹಾನ, ಯಮ ಭಾಮಿನಿ ಧೂಮ್ರವರ್ಣಾ, ಕುಬೇರ ಕಾಮಿನಿ ಗೌರಿ, ವಾಯು ವನಿತಾ ಮನೋಜವಾ, ಸೂರ್ಯಸತಿ ಸೌಜ್ಞಾ, ಕಮಲವಾಸಿನಿ ಶ್ರೀದೇವಿ, ಜಯಾ, ವಿಜಯಾ, ಮಧುಃಚ್ಛಂದಾ, ಕಾಂತಿ, ಶ್ರದ್ಧಾ, ತುಷ್ಟಿ ಮುಂತಾದ ಎಲ್ಲ ಸುರನಾರಿಯರು ಸಾವಿತ್ರಿಯ ಆಮಂತ್ರಣದಂತೆ ಆಗಮಿಸಿದರು.

ಸಾವಿತ್ರಿಯೊಡನೆ ಬಂದ ಮುತ್ತೈದೆಯರು ಕೈಯಲ್ಲಿ ಮರದ ತುಂಬ ಹಾಗೂ ಪಾತ್ರೆಗಳ ತುಂಬ ಹಣ್ಣು ಹಂಪಲು, ಕರ್ಜಿಕಾಯಿ, ಚಕ್ಕುಲಿ, ಉದ್ದು, ಅವರೆ ತೆಂಗಿನಕಾಯಿ,

ಖರ್ಜೂಗರ, ದ್ರಾಕ್ಷಿ, ಕೇಶರ, ಪಚ್ಚಕರ್ಪೂರ, ನೆಲ್ಲಿಕಾಯಿ, ಅವಲಕ್ಕಿ, ಬಗೆಬಗೆಯ ತಿಂಡಿ, ತೀರ್ಥ, ಪಕ್ವಾನ್ನ ಫಲಹಾರದ ವಸ್ತುಗಳನ್ನು, ಪಟ್ಟೆ ಪೀತಾಂಬರ ಕುಪ್ಪುಸ, ಆಭರಣ ಮೊದಲಾದವುಗಳನ್ನು ಹಿಡಿದುಕೊಂಡು ನಡೆದರು. ಹೀಗೆ ಸಂಭ್ರಮದಿಂದ ಬಂದ ಸಾವಿತ್ರಿಯನ್ನು ಕಂಡು, ಸುರರಾಜನಾದ ಇಂದ್ರನು ಹೆದರಿ ಹೋದನು. ಅವಳು ಏನು ಅನ್ನುವಳೋ ಎಂಬ ಸಂಶಯದಿಂದ ಬ್ರಹ್ಮನು ಮುಖ ಕೆಳಗೆ ಹಾಕಿಕೊಂಡು ಕುಳಿತನು. ಹರಿಹರರು ನಾಚಿಕೆಯಿಂದ ಹತಶರಾಗಿ ನಿಂತುಕೊಂಡರು. ಉಳಿದ ಎಲ್ಲ ಬ್ರಾಹ್ಮಣರು ಸಭಾಸದ್ಯಸರು, ದೇವತೆಗಳು, ಮಕ್ಕಳು, ಮೊಮ್ಮಕ್ಕಗಳು ಮರಿಮಕ್ಕಳು, ಸೋದರ ಮಾವಂದಿರು, ಗುರುಗಳು, ಹಾಗೂ ದೊಡ್ಡ ದೊಡ್ಡ ದೇವಾದಿ ದೇವತೆಗಳೂ ಕೂಡ ಸಾವಿತ್ರಿ ಏನನ್ನುವಳೋ ಎಂದು ಭಯ ಭ್ರಾಂತರಾಗಿ ನಿಂತು ಕೊಂಡರು.

ಹೊಸದಾಗಿ ಪಿತಾಮಹನ ಪ್ರಾಣಿಗ್ರಹಣಮಾಡಿದ ಗಾಯತ್ರಿ ದೇವಿಯು ಬ್ರಹ್ಮದೇವರ ಪಕ್ಕದಲ್ಲಿಯೇ ಜನರಾಡುವ ಮಾತುಗಳನ್ನು ಕೇಳುತ್ತ, ಮೌನಗೌರಿಯಂತೆ ಅವಾಕ್ ಆಗಿ ನಿಂತುಕೊಂಡಳು. ಸಾವಿತ್ರಿಯು ಕರೆದರೂ ಕೂಡ ಸಕಾಲದಲ್ಲಿ ಬರದಿದ್ದಕ್ಕಾಗಿ, ಇಂದ್ರನು ಗೋಪ ಬಾಲಿಕೆಯನ್ನು ಕರೆತಂದು, ರುದ್ರ, ಅನುಮೋದಿಸಿದ ಬ್ರಹ್ಮ ಮದುವೆ ಆದ. ಇನ್ನು ಮುಂದೆ ಈ ಯಜ್ಞವು ಪೂರ್ತಿ ಆಗುವ ಬಗೆ ಎಂತು ? ಈ ಯಜ್ಞದಲ್ಲಿ ಯಜಮಾನಿನಿ ಆಗುವವಳು ಯಾರು ? ಹಳೆಯ ಹೆಂಡತಿ ಸಾವಿತ್ರಿಯೋ ? ಹೊಸ ಹೆಂಡತಿ ಗಾಯತ್ರಿಯೋ ? ಎಂದು ಜನರೆಲ್ಲರೂ ಯೋಚಿಸುತ್ತಿರುವಾಗಲೇ ಸಾವಿತ್ರಿಯು ಯಜ್ಞ ವೇದಿಕೆಯ ಬಳಿಗೆ ಬಂದಳು.

ಬ್ರಹ್ಮದೇವರು ಋತ್ವಿಜರಿಂದಲೂ ದೇವತೆಗಳಿಂದಲೂ ಕೂಡಿಕೊಂಡು ಯಜ್ಞ ಸಾಗಿಸಿದ್ದನು. ವೇದ ಪಾರಂಗತ ಬ್ರಾಹ್ಮಣರು ಉದ್ದಿಪ್ತವಾದ ಅಗ್ನಿಕುಂಡದಲ್ಲಿ ಮಂತ್ರೋಚ್ಚಾರ ಪೂರ್ವಕ ಆಹುತಿ ಹಾಕುತ್ತಿದ್ದರು. ಪತ್ನಿ ಪಕ್ಕದಲ್ಲಿ ಓರ್ವ ಗೋಪ ಕನ್ಯೆಯು ಚಿಗರೆಯ ಕೊಂಬನ್ನು ಕಟ್ಟಿಕೊಂಡು ಪಟ್ಟ ಧರಿಸಿ, ಯಜಮಾನಿನಿಯ ವೇಷದಲ್ಲಿ ನಿಂತುಕೊಂಡಿದ್ದಳು. ಸೂರ್ಯ ಕಾಂತಿಯೇ ಸಾಕಾರವಾಗಿ ಬಂದಂತಿತ್ತು ಅವಳ ಅಂಗಪ್ರಭೆ, ಬೊಗಸೆಗಣ್ಣು, ಸೂರ್ಯ ಕಾಂತಿ ಮುಖದಲ್ಲಿ ಪಾತಿವ್ರತ್ಯದ ಸೌಮ್ಯ ಕಳೆ, ಅವಳ ದಿವ್ಯ ದೇಹದ ದೀಪದ್ಯುತಿಯಿಂದ ಆ ಸಭಾಮಂಟಪವೆಲ್ಲಿ ಪ್ರಕಾಶಿತವಾಗಿತ್ತು ಅವಳು ಮನಸ್ಸಿನಲ್ಲಿ ಆಗ ಪರಮಾತ್ಮನನ್ನು ಧ್ಯಾನಿಸುತ್ತಿದ್ದಳು. ಹೋಮಕುಂಡದ ಸುತ್ತಲೂ ಋತ್ವಿಜರು ಕುಳಿತುಕೊಂಡು ತಮ್ಮ ತಮ್ಮ ಕೈಯಲ್ಲಿರುವ ಚರುಗಳನ್ನು ಅಗ್ನಿಯಲ್ಲಿಹಾಕುತ್ತಿದ್ದರು.

ಯಜ್ಞ ಭಾಗಗಳನ್ನು ಸ್ವೀಕರಿಸಲು ಬಂದ ದೇವತೆಗಳು ''ಕಾಲಮೀರಿ ಮಾಡಿದ ಯಜ್ಞ ಕಾರ್ಯವು ಫಲಪ್ರದವಾಗುವುದಿಲ್ಲ. ಆದುದರಿಂದ ಯಜ್ಞ ವಿಧಿಯನ್ನು ಸಕಾಲದಲ್ಲಿಯೇ ಮಾಡಿಬಿಡಿ'' ಎಂದು ಅವಸರಪಡಿಸಲು ವೇದಪಾರಂಗತರಾದ ಬ್ರಾಹ್ಮಣರು ಪ್ರವರ್ಗವನ್ನುಮಾಡಿ, ಎರಡು ಆಡುಗಳನ್ನು ಸೇರಿಸಿ ಹೋಮಮಾಡಿದರು. ಅದನ್ನು ಸಾವಿತ್ರಿಯು ನೋಡಿ ಅತ್ಯಂತ ಕ್ರುದ್ಧಳಾದಳು. ಸಭಾ ಮಧ್ಯದಲ್ಲಿ ಮೌನದಿಂದ ಕುಳಿತು ಬ್ರಹ್ಮದೇವನನ್ನು ಕುರಿತು ಕೇಳಿದಳು. ''ಪತಿದೇವ, ಇದೇನು ನಿನಗೆ ವಿಪರೀತ ಬುದ್ಧಿಯು ಹುಟ್ಟಿತು ! ಈ ಕಾಲದಲ್ಲಿ ಇದೇನು ನಿನ್ನ ಆಟ ! ನನ್ನನ್ನು ಬಿಟ್ಟು ಹೀಗೇಕೆ ಪಾಪ ಕೆಲಸವನ್ನು ಮಾಡಹೊರಟೆ ?'' ನೀನು ಈಗ ವರಿಸಿದ ಗೋಪಾಲ ಕುಮಾರಿಯು ನನ್ನ ಅಡಿ

ಹುಡಿಗೆ ಸಮನಲ್ಲ. ಈ ಸಭೆಯಲ್ಲಿ ನೆರೆದ ಮಹನೀಯರೆಲ್ಲರೂ ದೇವಲೋಕದ ಸೊತ್ತು. ನಿಷ್ಪಕ್ಷಪಾತಿಗಳಾದ ಈ ಮಹಾಜನರೆಲ್ಲರೂ ಹೇಗೆ ಹೇಳುವರೋ ಹಾಗೆ ಕೇಳು.

ಈ ತುರುಗಾಹಿಗಳ ತರುಣ ತರಳೆಯ ತಾರುಣ್ಯ ಹಾಗೂ ಲಾವಣ್ಯ ಕಂಡು ರೂಪ ಪ್ರಿಯನಾದ ನೀನು ಈ ಕೆಲಸ ಮಾಡಿರುವೆ. ನಿಂದ್ಯವಾದ ಈ ನಿನ್ನ ಕಾರ್ಯವನ್ನು ಯಾರೂ ಮೆಚ್ಚಲಾರರು. ನಿನಗೆ ಮಕ್ಕಳಿದ್ದಾರೆ. ಮೊಮ್ಮಕ್ಕಳಿದ್ದಾರೆ. ಅವರೆಲ್ಲರ ಎದುರು ಇಂತಹ ಹೇಯ ಕಾರ್ಯವನ್ನು ಮಾಡಬೇಕಾದರೆ ನಿನಗೆ ಕಾಮವಿಕಾರವು ತಲೆಗೆ ಏರಿರುವದೇ ಖಂಡಿತ. ದೇವತೆಗಳಿಗೆಲ್ಲ ನೀನು ಅಜ್ಞನಾಗಿರುವೆ. ಋಷಿಗಳೆಲ್ಲ ಮುತ್ತಜ್ಜನಾಗಿರುವೆ. ನೀನು ಎಳೆ ವಯಸ್ಸಿನ ಈ ಗೋಪ ಕನ್ಯೆಯನ್ನು ಮದುವೆಯಾಗಲು ನಾಚಿಕೆಯಾದರೂ ಹೇಗೆ ಆಗಲಿಲ್ಲ. ಜನರಲ್ಲಿ ನೀನು ಅಪಹಾಸ್ಯಕ್ಕೆ ಗುರಿಯಾದೆ. ನನಗೂ ಜನರಿಗೆ ಮೋರೆ ತೋರಿಸದಷ್ಟು ಅವಮಾನವಾಯಿತು. ಈ ನಿನ್ನ ಕಾಮುಕಭಾವವು ನಿನ್ನ ಹೃದಯದಲ್ಲಿ ಸ್ಥಿರವಾಗಿ ಬೇರೂರಿದ್ದರೆ ಇರಲಿ. ನೀನು ಇಲ್ಲಿಯೇ ಇರು. ನಿನಗೆ ನಮಸ್ಕಾರ. ನಾನು ನನ್ನ ಗೆಳತಿಯರಿಗೆ ಹೇಗೆ ಮುಖವನ್ನು ತೋರಿಸಲಿ ? ನನ್ನ ಗಂಡನು ಬೇರೊಬ್ಬ ಸವತಿಯನ್ನು ತಂದಿದ್ದಾನೆಂದು ಹೇಗೆ ಹೇಳಲಿ ?

**ಬ್ರಹ್ಮ** :- ಯಜ್ಞದಲ್ಲಿ ದೀಕ್ಷೆಯ ಕಾಲವು ಮುಗಿದ ಬಳಿಕ ಋತ್ವಿಜರು ನನ್ನನ್ನು ಕರೆದರು. ''ಈಗ ಹೋಮವು ಧರ್ಮಪತ್ನಿ ಇಲ್ಲದೆ ಆಗದು. ದಂಪತಿಗಳಿಬ್ಬರೂ ಕೂಡಿಯೇ ಹೋಮಮಾಡಬೇಕು. ಅದಕ್ಕಾಗಿ ನಿನ್ನ ಭಾರ್ಯೆಯನ್ನು ಕರೆದುಕೊಂಡು ಬೇಗ ಬಾ, ಮುಹೂರ್ತವು ಮೀರುತ್ತ ಬಂದಿದೆ ವಿಲಂಬವಾದರೆ ಯಜ್ಞ ಕೆಡುವುದು.'' ಹೀಗೆ ಪುರೋಹಿತರು ಒತ್ತಾಯಪಡಿಸಿದರು. ಆಗ ನಾನು ನಿನಗೆ ಹೇಳಿ ಕಳಿಸಿದೆ ನೀನು ಬರಲಿಲ್ಲ. ಸ್ವಯಂ ಅಧ್ವರ್ಯವನ್ನು ನಿನ್ನನ್ನು ಕರೆಯಲು ಅಟ್ಟಿದೆ. ಅವನೆದುರಿಗೆ ನೀನು ಸ್ಪಷ್ಟವಾಗಿ 'ನನ್ನ ಗೆಳತಿಯರೆಲ್ಲರು ಬರುವವರೆಗೆ ಯಜ್ಞವಾಟಕ್ಕೆ ಆಗಮಿಸುವದಿಲ್ಲ. ಅಲ್ಲಿಯವರೆಗೆ ಪರಮೇಷ್ಠಿಗೂ, ಪುರೋಹಿತರಿಗೂ ಕಾಯಲು ಹೇಳಿರಿ.' ಎಂದು ಹೇಳಿ ಕಳಿಸಿದೆ. ಕಾಯುವದು ಸಾಧ್ಯವಿರಲಿಲ್ಲ. ಮುಹೂರ್ತವು ಮೀರುತ್ತಿತ್ತು. ನಿನಗೆ ಬರುವದೂ ಆಗ ಶಕ್ಯವಿರಲಿಲ್ಲ. ಕರೆಯಲು ಬಂದವರ ಮುಂದೆ ನೀನು ಸ್ಪಷ್ಟವಾಗಿ ಹಾಗೂ ಖಚಿತವಾಗಿ ನಿಷ್ಠುರವಾಗಿ ''ನಾನು ಈಗಲೆ ಬರುವದಿಲ್ಲ'' ಎಂದು ಹೇಳಿ ಕಳಿಸಿದೆ. ಅಂತಹ ಸಂದರ್ಭದಲ್ಲಿ ನಾನೇನು ಮಾಡಬೇಕು ? ಆ ಸ್ಥಳದಲ್ಲಿಯೇ ಇಂದ್ರನು ಈ ಪಶುಪಾಲ ಪುತ್ರಿಯನ್ನು ಕರೆತಂದ. ಸ್ವಯಂ ವಿಷ್ಣು ಮದುವೆ ಮಾಡಿಕೊಟ್ಟ. ಯಜ್ಞಕಾರ್ಯವನ್ನು ಸಾಂಗಗೊಳಿಸಲು ನಾನು ಇವಳ ಕೊರಳಿಗೆ ತಾಳಿಕಟ್ಟಿದೆ. ಹೋಮ ಕಾರ್ಯವನ್ನು ಈ ನವವಧುವಿನೊಂದಿಗೆ ನೆರವೇರಿಸಿದೆ. ಹೀಗೆ ಅನಿವಾರ್ಯವಾಗಿ ಮಾಡಲೇಬೇಕಾಯಿತು. ಪರಿಸ್ಥಿತಿ ಪರತಂತ್ರನಾಗಿ ನಾನು ಎಸಗಿದ ಈ ಅಪರಾಧವನ್ನು ನೀನು ಕ್ಷಮಿಸು. ''ಇಂತಹ ಅಚಾತುರ್ಯವನ್ನು ಮುಂದೆ ನಾನು ಮಾಡುವುದಿಲ್ಲ. ನೀನು ನನ್ನ ಮಡದಿಯಾದರೂ ಚಿಂತೆ ಇಲ್ಲ. ನಿನ್ನ ಕಾಲಿಗೆ ಬೀಳುತ್ತೇನೆ. ಕೈ ಮುಗಿದು ಬೇಡಿಕೊಳ್ಳುತ್ತೇನೆ. ನನ್ನನ್ನು ಕ್ಷಮಿಸು, ನಿನಗೆ ನಮಸ್ಕಾರ.'' ಬ್ರಹ್ಮದೇವನು ಇಷ್ಟು ನಯ ವಿನಯ ಅನುನಯಗಳಿಂದ ತನ್ನ ಪ್ರೇಯಸಿಯನ್ನು ಪರಿ ಪರಿಯಿಂದ ಪ್ರಾರ್ಥಿಸಿ ಸಂತೈಸಿದರೂ ಸಾವಿತ್ರಿಯು ಶಾಂತಳಾಗಲಿಲ್ಲ. ಅವಳಿಗೆ ಬ್ರಹ್ಮಾಂಡ ಕೋಪ ಬಂದಿತು. ತನ್ನ ಗಂಡ ತಾನು ಬದುಕಿರುವಾಗಲೆ ಇಷ್ಟು ಜನರೆದುರು ತನ್ನನ್ನು

ಧಿಕ್ಕರಿಸಿ, ಬೇರೊಬ್ಬ ದನಹಿಂಡುವ ಹುಡುಗೆಯನ್ನು ಹೆಂಡತಿ ಎಂದು ಬದಿಯಲ್ಲಿ ಕೂಡಿಸಿಕೊಂಡಿದ್ದೂ, ಅವಳೊಡನೆ ಹೋಮಕಾರ್ಯವನ್ನು ನೆರವೇರಿಸಿದ್ದು ಅವಳ ಕೋಪದ ದುಳ್ಳುರಿಗೆ ತುಪ್ಪ ಎರೆದಿತ್ತು. ಅವಳ ಕ್ರೋಧವು ಕಿಚ್ಚಾಗಿ ಹೆಚ್ಚಾಗಿ ಭುಗಿಲೆದ್ದಿತು. ಕ್ರೋಧಾಂಧಳಾಗಿ ಹಿಂದು ಮುಂದಿನ ವಿಚಾರವಿಲ್ಲದೆ ಅವಳು ತನ್ನ ಕೈ ಹಿಡಿದ ಪತಿ ಪರಮೇಷ್ಠಿಯನ್ನೇ ಸಿಕ್ಕಾಪಟ್ಟೆ ಶಾಪ ಕೊಟ್ಟು ಪೂತ್ಕರಿಸಿದಳು.

**ಸಾವಿತ್ರಿ :-** ನಾನು ಹಿಂದೆ ಎಂದಾದರೂ ತಪಸ್ಸು ಮಾಡಿದ್ದರೆ, ಹಿರಿಯರ ಗುರುಗಳ ಸೇವೆ ಮಾಡಿದ್ದರೆ, ನಾನು ಈಗ ನಿನಗೆ ಕೊಡಲಿರುವ ಶಾಪವು ಸತ್ಯವಾಗಲಿ. ನನ್ನ ಪತಿಯಾದ ನೀನು ನಿನ್ನ ಯೋಗ್ಯತೆಯಿಂದ ದೇವಾಧಿದೇವತೆಗಳಿಗೆಲ್ಲ ಅಧಿಪತಿಯಾಗಿದ್ದರೂ ಯಾವ ಬ್ರಾಹ್ಮಣನೂ ನಿನ್ನನ್ನು ಪೂಜಿಸದಂತೆ ಹೋಗಲಿ. ವರ್ಷಕ್ಕೊಂದು ಸಾರೆ ಮಾತ್ರ-ಕಾರ್ತಿಕ ಮಾಸದಲ್ಲಿ ಒಂದೇ ಸಲ ಭೂಮಂಡಲದಲ್ಲಿ ನಿನ್ನ ಪೂಜೆ ನಡೆಯಲಿ. ಅದರ ಹೊರತು ಬ್ರಹ್ಮಪೂಜೆಯು ಇಂದಿನಿಂದ ನಿಂತು ಹೋಗಲಿ. ಹೀಗೆ ತನ್ನ ಪತಿಗೆ ಶಾಪಕೊಟ್ಟು ಅವಳು ಅಲ್ಲಿಯೇ ನಿಂತ ಸುರರಾಜನ ಕಡೆಗೆ ನೋಡಿದಳು. ತನ್ನ ಪತಿಯು ಹೆಣ್ಣು ಬೇಕು ಎಂದು ನುಡಿಯುವಷ್ಟರಲ್ಲಿಯೇ ಭೂಲೋಕದಲ್ಲಿಯ ಕೀಳುಕುಲದ ಚಿಕ್ಕ ಹುಡಿಗಿಯನ್ನು ತಂದು, ಮದುವೆಗೆ ಮುಖ್ಯ ಏರ್ಪಾಟುಮಾಡಿದ ಅಪರಾಧವು ದೇವೇಂದ್ರನದಾಗಿತ್ತು. ಆದುದರಿಂದ ಆ ಸುರೇಶ್ವರನನ್ನು ಕಂಡಕೂಡಲೇ ಸಾವಿತ್ರಿಯ ಸಿಟ್ಟು ಒಮ್ಮೆಲೆ ಉಲ್ಬಣಿಸಿತು. ಕ್ರೋಧದಿಂದ ಕಂಪಿತದೇಹಿನಿಯಾಗಿ ನುಡಿದಳು. ಎಲೈ ಇಂದ್ರನೆ, ಹೆಣ್ಣು ಎಂದ ಕೂಡಲೆ, ಎನ್ನ ಗಂಡನ ಎದುರು ಓರ್ವ ಗೋಪಾಲ ಕನ್ಯೆಯನ್ನು ತಂದು ನಿಲ್ಲಿಸಿ, ಈ ವಿಷಮ ವಿವಾಹಕ್ಕೆ ನೀನು ಕಾರಣನಾದಿ. ಅಂತಹ ಪರರಿಗೆ ಉಪದ್ರವಕಾರಿಯಾದ ಕ್ಷುದ್ರ ಕೆಲಸ ಮಾಡಿದ್ದಕ್ಕಾಗಿ ನೀನೂ ಕೂಡ ಶಿಕ್ಷೆ ಅನುಭವಿಸಬೇಕು. ನಿನಗೂ ಶಾಪ ಕೊಡುತ್ತೇನೆ.

''ನೀನು ನಿನ್ನ ವೈರಿಗಳೊಡನೆ ಹೋರಾಡುವಾಗ ಸೋತು ಹೋಗುವೆ. ವೈರಿಗಳು ನಿನ್ನನ್ನು ಸೆರೆಹಿಡಿಯುವರು. ನಿನ್ನ ಕೈಯಲ್ಲಿಯ ಅಧಿಕಾರ, ಐಶ್ವರ್ಯವೆಲ್ಲವೂ ಕಳೆದು ಹೋಗುವವು. ನಿನ್ನ ಸಾಮರ್ಥ್ಯ ನಷ್ಟವಾಗುವದು. ಶತ್ರುವಶನಾಗಿ ಆ ವೈರಿ ಪಟ್ಟಣದಲ್ಲಿಯೇ ನೀನು ನೆಲೆಸಬೇಕಾಗುವದು. ಹೀಗೆ ಘೋರವಾದ ಸೋಲು ಸಂಕಟ ಅನುಭವಿಸಿ ನಂತರವೇ ಬಿಡುಗಡೆ ಹೊಂದುವೆ.'' ಇಂದ್ರ ತಂದ ಹೆಣ್ಣನ್ನು ಉಪೇಂದ್ರನಾದ ವಿಷ್ಣುವು ಬ್ರಹ್ಮನಿಗೆ ವಿಧಿಪೂರ್ವಕ ಧಾರೆ ಎರೆದುಕೊಟ್ಟು ಮೂರನೆಯ ಅಪರಾಧಿ ಆಗಿದ್ದಾನೆ. ವಿರಿಂಚಿ ವಿವಾಹದ ಒಳಸಂಚಿನಲ್ಲಿ ಧೈರ್ಯದಿಂದ ದನಕಾಯುವವರ ಹುಡುಗಿಯನ್ನು ಸತ್ಯಲೋಕದ ದೊರೆಗೆ ಧಾರೆಯೆರೆದುಕೊಟ್ಟ ಧಾರ್ಷ್ಟ್ಯವನ್ನು ಕಂಡು ಸಾವಿತ್ರಿಗೆ ಸಂತಾಪವಾಯಿತು. ವಿಷ್ಣುವಿನ ಉಡಿಯಲ್ಲಿಯೂ ಹಿಡಿ ಶಾಪಹಾಕಿದಳು.

**ಸಾವಿತ್ರಿ :-** ಭೃಗು ಋಷಿಯ ಶಾಪದಿಂದ ನೀನು ಹೇಗೋ ಮರ್ತ್ಯಲೋಕದಲ್ಲಿ ಮಾನವನಾಗಿ ಜನಿಸಲಿರುವೆ. ಆಗ ನಿನ್ನ ಹೆಂಡತಿಯನ್ನು ಯಾರೋ ಹಾರಿಸಿಕೊಂಡು ಹೋಗುವರು. ಆಗ ನಿನಗೆ ದುಃಖೋದ್ರೇಕವಾಗುವದು. ನಿನ್ನ ವೈರಿಯು ನಿನ್ನ ಮೆಚ್ಚಿನ ಮಡದಿಯನ್ನು ದೂರದ ಸಮುದ್ರದ ಆಚೆಯ ದಂಡೆಯಲ್ಲಿ ಇಟ್ಟುಬಿಡುವನು. ಅದು ನಿನಗೆ ಗೊತ್ತು ಆಗುವುದಿಲ್ಲ. ನಿನಗೆ ದುಃಖ ತಪ್ಪಿದ್ದಲ್ಲ. (ಲೋಕದೃಷ್ಟಿಯಿಂದ) ಮಡದಿಯನ್ನುಹುಡುಕಿ ನೀನು ವನದಲ್ಲಿ ಮಿಡುಕುವೆ. ತಮ್ಮನೊಂದಿಗೆ ವನವನಗಳಲ್ಲಿ

ಅಲೆಯುವೆ ಕಾಂತೆಯನು ಕಾಣದೆ ತೊಳಲುವೆ ತಿರುಗಿ ತಿರುಗಿ ಬಳಲುವೆ. ನನ್ನ ಮೇಲೆ ನನ್ನ ಗಂಡನಿಗೆ ಸವತಿಯನ್ನು ತಂದ ಈ ದುಷ್ಕರ್ಮದ ದುರ್ಧರ ಫಲರೂಪವಾಗಿ ದುಃಖ ದುರವಸ್ಥೆಗಳನ್ನು ಅನುಭವಿಸುವೆ. ಇದಿಷ್ಟೆ ಅಲ್ಲ. ವಿಷ್ಣುವೆ ನೀನು ದನಕಾಯುವ ಹುಡುಗಿಯನ್ನು ತಂದು ನನ್ನ ಗಂಡನಿಗೆ ಮದುವೆ ಮಾಡಿದ್ದರಿಂದ ನೀನು ಆ ಕಾಯುವರ ಕುಲದಲ್ಲಿಯೇ ಬೆಳೆಯುವೆ. ನಿನ್ನ ಮೈಬಣ್ಣವೆಲ್ಲವೂ ಕಪ್ಪಾಗುವದು. ಒಂದೆಡೆಗೆ ನಿಲ್ಲದೆ ಆ ಕೃಷ್ಣಾವತಾರ ಕುಲದಲ್ಲಿ ನೀನು ಎಲ್ಲೆಡೆಗೂ ಅಲೆದಾಡಬೇಕಾಗುವದು.'' ಹೀಗೆ ಸುರಪತಿ ಹಾಗೂ ಲಕ್ಷ್ಮೀಪತಿಯನ್ನು ಶಪಿಸಿ ಸಾವಿತ್ರಿಯು ಬ್ರಹ್ಮದೇವರ ಈ ಪುನರ್ವಿವಾಹವನ್ನು ಅನುಮೋದಿಸಿದ ರುದ್ರನಿಗೂ ಶಾಪವಿತ್ತಳು. ''ರುದ್ರನೆ ನೀನು ದಾರುವನದಲ್ಲಿ ಇದ್ದಾಗ ಋಷಿಗಳು ನಿನ್ನ ಮೇಲೆ ಕೋಪಗೊಂಡು ಶಾಪಕೊಡುವರು. ಆಗ ಕಾಪಾಲಿಕನಾದ ನೀನು ಪರಸ್ತ್ರೀಯನ್ನು ಅಪಹರಿಸ ಬಯಸುವೆ. ಆಗ ನಿನ್ನ ಸೊಕ್ಕಿದ ಲಿಂಗವು ಪತಿತವಾಗಿ ನಿನ್ನ ಪೌರುಷವೇ ನಷ್ಟವಾಗಿ. ನೀನು ನಿರ್ವೀರ್ಯನಾಗುವೆ. ಮುನಿಗಳ ಶಾಪ ನಿನ್ನನ್ನು ಕಾಡಿ ಪೀಡಿಸುವದು. ಆಗ ಗಂಗಾ ತೀರದಲ್ಲಿರುವ ನಿನ್ನ ಮಡದಿಯು ನಿನ್ನನ್ನು ಸಂತೈಸುವಳು.''

ರುದ್ರನನ್ನು ಶಪಿಸಿ ಅನಂತರ ಆ ಮಹಾದೇವಿಯು ವಿಧಾತನ ದ್ವಿತೀಯ ವೈವಾಹಿಕ ವಿಧಿಯಲ್ಲಿ ಸಹಕರಿಸಿದ ಅಗ್ನಿಯನ್ನು ಶಪಿಸಿದಳು. ''ಅಗ್ನಿಯೇ, ನನ್ನ ಮಗನಾದ ಭೃಗುವು ಅತ್ಯಂತ ಧರ್ಮಿಷ್ಠ. ಅವನು ಈ ಮೊದಲೇ ನನ್ನನ್ನು 'ಹಾಕಿದ್ದನ್ನೆಲ್ಲ ಸುಡು, ಸರ್ವ ಭಕ್ಷಕನಾಗು' ಎಂದು ಶಾಪ ಇತ್ತಿದ್ದಾನೆ. ಒಮ್ಮೆ ಶಾಪದಿಂದ ನೊಂದು ಬೆಂದು ಹೋದ ನಿನ್ನನು ನಾನು ಮತ್ತೆ ಹೇಗೆ ಶಾಪವಿತ್ತು ತಾಪ ಕೊಡಲಿ? ಆದರೂ ಕೂಡ ವಿರಂಚಿಯ ವಿವಾಹಕ್ಕೆ ನೀನು ಅನುಕೂಲವಾಗಿದ್ದೀಯಷ್ಟೇ ? ಆದುದರಿಂದ ನಿನಗೆ ನಾನು ಈ ಶಾಪಕೊಡುತ್ತೇನೆ. ಮಹಾದೇವನು ತನ್ನ ವೀರ್ಯದಿಂದ ನನ್ನನ್ನು ನೆನೆಸಿ ಬಿಡುತ್ತಾನೆ. ಅಪವಿತ್ರ ಪದಾರ್ಥಗಳನ್ನು ಕಂಡು ನಿನ್ನ ಜ್ವಾಲೆಯ ಕೆನ್ನಾಲಿಗೆಯು ಹೆಚ್ಚು ಉದ್ದೀಪಿತವಾಗುವದು. ಇದರಂತೆ ಅಲ್ಲಿ ನೆರೆದ ಬ್ರಾಹ್ಮಣ, ಋತ್ವಿಜರಿಗೂ ಸಾವಿತ್ರಿಯು ಶಾಪಕೊಟ್ಟಳು. ''ನಿಮ್ಮ ಧರ್ಮಗಳೆಲ್ಲವೂ ಡಾಂಭಿಕವಾಗಲಿ. ನೀವು ಅಗ್ನಿಹೋತ್ರವನ್ನು ಇಟ್ಟರೆ ದಾನ ಸ್ವೀಕರಿಸಲಿಕ್ಕಾಗಿಯೇ. ಅಡವಿಯಲ್ಲಿ ಆಶ್ರಮ ಕಟ್ಟಿಕೊಂಡಿರುವುದು ಧನ ಸಂಗ್ರಹಕ್ಕಾಗಿ. ಕ್ಷೇತ್ರತೀರ್ಥಗಳಲ್ಲಿ ಲೋಭವು ನಿಮ್ಮ ಬೆನ್ನು ಬಿಡದಿರಲಿ. ನೀವು ಮಾಡುವ ತೀರ್ಥಕ್ಷೇತ್ರ ಯಾತ್ರೆಯು ದ್ರವ್ಯದ ಆಶೆಯಿಂದಲೇ, ಪರರ ಮನೆಯ ಅನ್ನದಿಂದಲೇ ನಿಮಗೆ ತೃಪ್ತಿ. ಸ್ವಂತ ಮನೆಯಲ್ಲಿ ಊಟ ಮಾಡಿದರೆ ಉಂಡಂತೆ ಆಗುವದಿಲ್ಲ. ದುಷ್ಟ ಜನರ ಕಡೆಯಿಂದ ಯಜ್ಞ ಮಾಡಿಸುವುದು. ಪಾಪಿಗಳ ಕಡೆಯಿಂದ ದಾನ ಕೊಳ್ಳುವದು. ಹಣ ಗಳಿಸಿ ವ್ಯರ್ಥ ವ್ಯಯ ಮಾಡುವುದು ನಿಮ್ಮ ಸ್ವಭಾವವಾಗಲಿ, ಸತ್ತ ಬಳಿಕ ಪ್ರೇತಗಳಾಗಿರಿ.''

ಹೀಗೆ ಇಂದ್ರನನ್ನು, ವಿಷ್ಣುವನ್ನು, ರುದ್ರನನ್ನು ಬ್ರಹ್ಮನನ್ನು, ಬ್ರಾಹ್ಮಣರನ್ನು ಹಾಗೂ ಇನ್ನುಳಿದ ಎಲ್ಲರನ್ನೂ ಕ್ರೋದಾಂಧಳಾದ ಬ್ರಹ್ಮ ಭಾಮಿನಿಯು ಶಪಿಸಿ ಆ ಯಜ್ಞಮಂಟಪದಿಂದ ಹೊರಬಿದ್ದು ಬಿರಬಿರನೆ ಹೊರಟು ಹೋದಳು. ಕ್ಷೇತ್ರ ಪುಷ್ಕರಕ್ಕೆ ಹೋಗಿ ಹೊರಗೆ ನಿಂತಳು. ಮತ್ತು ತನ್ನೊಡನೆ ಬಂದ ಮುಕುಂದನ ಸುಂದರಿ ಇಂದಿರೆಯನ್ನು, ಚಂದ್ರಚೂಡನ ನಾರಿಯಾದ ಗೌರಿಯನ್ನು ಕುರಿತು ನುಡಿದಳು. ''ಸಖಿಯರೆ, ನನಗಂತೂ ಇನ್ನು ಇಲ್ಲಿ ನಿಲ್ಲಲಾಗುವುದಿಲ್ಲ. ಎಲ್ಲಿ ಈ ಯಜ್ಞದ ಧ್ವನಿಯು ಕೇಳಿ ಬರುವದಿಲ್ಲವೊ ಅಲ್ಲಿಗೆ ಹೋಗುವೆನು.''

**ಪುಲಸ್ತ್ಯ :-** ಆಗ ಅವಳೊಡನೆ ಬಂದ ನಾರಿಯರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಯಾರೂ ಅವಳನ್ನು ಅನುಸರಿಸಲಿಲ್ಲ. ಅದನ್ನು ಕಂಡು ಸಾವಿತ್ರಿಗೆ ಮತ್ತೆ ಕೋಪ ಬಂದಿತು. ನನಗೆ ದುಃಖ ಕಾಲದಲ್ಲಿ ಇವರಾರೂ ನನ್ನ ಬೆನ್ನು ಕಟ್ಟಿ ನಿಲ್ಲಲಿಲ್ಲವಲ್ಲ ! ಎಂದು ಕಳವಳವಾಯಿತು. ಅವರೆಲ್ಲರಿಗೂ ಶಾಪ ಕೊಡಬೇಕೆಂದು ನಿರ್ಧರಿಸಿ ನುಡಿದಳು.

**ಸಾವಿತ್ರಿ :-** ಲಕ್ಷ್ಮಿಯೇ ''ನಿನಗೆ ಒಂದು ಕಡೆಗೆ ಎಂದೂ ಸ್ಥಿರ ವಸತಿ ಇಲ್ಲದಂತೆ ಆಗಲಿ. ನೀನು ಚಪಲಚಿತ್ತಳಾಗಿ, ಮೂರ್ಖರಲ್ಲಿಯೇ ಹೆಚ್ಚಾಗಿ ವಾಸಮಾಡು, ಜಾತಿಭ್ರಷ್ಟರಾದ ಮ್ಲೇಂಛರಲ್ಲಿಯೂ, ಕಾಡು ಕಿರಾತರಲ್ಲಿಯೂ, ಮದಾಂಧರಲ್ಲಿಯೂ ದುಷ್ಟರಲ್ಲಿಯೂ ನೀನು ನೆಲೆ ನಿಲ್ಲು.'' ಇಂತು ವಿಷ್ಣುವಿನ ಲಲನೆ ಲಕ್ಷ್ಮಿಯನ್ನು ಶಪಿಸಿ, ಪುರಂದರನ ಪ್ರೇಯಸಿ ಪೌಲೋಮಿಗೂ ಶಾಪವಿತ್ತಳು. ನನ್ನ ಬೆಂದ ಎದೆಗೆ ಬೆಂಕಿ ಇಟ್ಟ ಶಚಿಯೇ, ನಿನ್ನ ಗಂಡನಿಗೆ ಮುಂದೆ ಒಂದು ದಿನ ಬ್ರಹ್ಮಹತ್ಯಾ ಶಾಪವು ತಟ್ಟುವುದು. ಆಗ ನಹುಷ ಎಂಬ ನರನಾಥನು ನಾಕಲೋಕದ ನಿನ್ನ ಪತಿಯ ಸಿಂಹಾಸನವನ್ನು ಏರುವನು. ಇಂದ್ರ ಪದವಿಯಲ್ಲಿ ಮಂಡಿಸದ ಆ ನಹುಷನಿಗೆ ನಿನ್ನ ಮೇಲೆ ಮನಸ್ಸಾಗುವದು. ಅವನೆನ್ನುವನು.

''ನಾನು ಇಂದ್ರನಾದ ಬಳಿಕ ಇಂದ್ರಾಣಿಯು ನನ್ನ ಬಳಿಗೆ ಏಕೆ ಬರಬಾರದು ? ಶಚಿಯೊಡನೆ ಸರಸವಿಲ್ಲದ ಇಂದ್ರನ ಸ್ಥಾನವು ಎಂತಹದು ? ಆದುದರಿಂದ ಆ ಸುರೇಂದ್ರನ ಸುಂದರಿಯು ನನ್ನ ಭೋಗಕ್ಕೆ ಬರಲೇಬೇಕು. ಇಲ್ಲದಿದ್ದರೆ ನಾನು ಎಲ್ಲ ದೇವತೆಗಳನ್ನು ಕೊಂದುಹಾಕುವೆನು. ನಹುಷನ ಈ ದುರಾಸೆಯನ್ನು ಕೇಳಿ ನೀನು ಓಡಿ ಹೋಗುವೆ. ಬೃಹಸ್ಪತಿಯ ಮನೆಯಲ್ಲಿ ದುಃಖದಿಂದ ಬಂದು ಅಡಗುವೆ. ಗರ್ವಿಷ್ಠಳಾದ ಇಂದ್ರನ ರಾಣಿಯೇ, ಆ ಸಂದರ್ಭದಲ್ಲಿ ನಿನಗೆ ನನ್ನ ಶಾಪದಿಂದ ಭಯಂಕರ ದುಃಖ ಆಗುವದು.'' ಅನಂತರ ಆ ಸಾವಿತ್ರಿಯು ದೇಲೋಕದಲ್ಲಿ ನೆಲೆಸಿರುವ ಸುರಸುಂದರಿಯರೆಲ್ಲರಿಗೂ ಒಂದು ಸಾಮೂಹಿಕ ಶಾಪಕೊಟ್ಟಳು. ''ನಿಮಗೆ ಯಾರಿಗೂ ಮಕ್ಕಳ ಸುಖವಿಲ್ಲದಂತಾಗಿ ಬಂಜೆಯರಾಗಿಯೇ ಉಳಿಯಿರಿ. ನೀವು ಈ ಸಂತತಿಯ ಅಭಾವದ ದುಃಖದಿಂದ ಹಗಲಿರುಳೂ ಮನಸ್ಸಿನಲ್ಲಿ ಕುದಿಯುವಿರಿ, ಕಂಡವರೆಲ್ಲರೂ ಬಂಜೆಯರೆಂದು ಹೀಗಳೆಯುವರು.''

ರುದ್ರರಮಣಿಯಾದ ಪಾರ್ವತಿಗೂ ಸಾವಿತ್ರಿಯು ಹೀಗೆಯೇ ಬಂಜೆತನದ ಶಾಪಕೊಟ್ಟಳು. ಹೀಗೆ ಸಾವಿತ್ರಿಯು ಕಂಡವರನ್ನೆಲ್ಲ ಮನಬಂದಂತೆ ನಿಂದಿಸಿದಳು. ಬಾಯಿಗೆ ಬಂದಂತೆ ಶಪಿಸಿದಳು. ಇಷ್ಟಾದರೂ ಅವಳಿಗೆ ಸಮಾಧಾನವಾಗಲಿಲ್ಲ. ಸಿಟ್ಟು ಶಾಂತವಾಗಲಿಲ್ಲ. ದುಃಖವು ಮತ್ತೆ ಮತ್ತೆ ಉಕ್ಕಿ ಬರತೊಡಗಿತು. ಕೊನೆಗೆ ಅವಳು ದೊಡ್ಡ ದನಿ ತೆಗೆದು ಅಳಲು ಉಪಕ್ರಮಿಸಿದಳು. ಆಗ ಶ್ರೀಹರಿಯು ಅಲ್ಲಿ ಬಂದು ಸಂತೈಸಿದನು.

**ಪುಲಸ್ತ್ಯ :-** ವಿಷ್ಣುವು ಎಷ್ಟು ಹೇಳಿದರೂ ಸಾವಿತ್ರಿ ಕೇಳಿಲಿಲ್ಲ. ಮತ್ತೂ ಸಿಟ್ಟಿನಿಂದಲೇ ನುಡಿದಳು - ''ನಾನು ನಿನ್ನ ಮಾತನ್ನು ಕೇಳುವುದಿಲ್ಲ, ನಿಮ್ಮ ಸಭೆಗೆ ಬರುವುದಿಲ್ಲ. ಸವತಿ ಕುಳಿತ ಆ ಯಜ್ಞವಾಟದಲ್ಲಿ ಪ್ರವೇಶಿಸುವುದಿಲ್ಲ. ಈ ಯಜ್ಞದ ಧ್ವನಿಯನ್ನೇ ನನ್ನಿಂದ ಕೇಳುವದಾಗುವದಿಲ್ಲ. ಈ ಯಜ್ಞದಲ್ಲಿ ನಡೆದ ವೇದ-ಘೋಷವು ಕೇಳದಷ್ಟು ದೂರ ಹೋಗಿ ಕುಳಿತುಕೊಳ್ಳುತ್ತೇನೆ.'' ಹೀಗೆ ಹೇಳಿ ಸಾವಿತ್ರಿಯು ಅಲ್ಲಿಂದ ಹೊರಟು ಹೋದಳು. ಬೆಟ್ಟವನ್ನು ಏರಿದಳು. ತುತ್ತತುದಿಯಲ್ಲಿ ಎತ್ತರದ ಸ್ಥಾನದಲ್ಲಿ ಕುಳಿತು

ಕೊಂಡಳು. ವಿಷ್ಣುವು ಅಲ್ಲಿಗೆ ಹೋದನು. ಅವಳ ಬದಿಯಲ್ಲಿ ನಿಂತು ಎರಡೂ ಕೈಗಳನ್ನು ಜೋಡಿಸಿದ್ದನು. ಭಕ್ತಿಯಿಂದ ಬಾಗಿ ನಿಂತು ಪ್ರಾರ್ಥನೆ ಸಲ್ಲಿಸಿದನು. ಲೋಕ ವಿಡಂಬನಾವಿಚಕ್ಷಣನಲ್ಲವೆ ಆ ವಿಷ್ಣು !

**॥ ವಿಷ್ಣುಃ ಉವಾಚ ॥**

**ಸರ್ವಗಾಸರ್ವಭೂತೇಷುದ್ರಷ್ಟವ್ಯಾಸರ್ವತೋಭುವಿ ।**
**ಸರ್ವಲೋಕೇಷುಯತ್ಕಿಂಚಿದ್ದೃಶ್ಯಂ ತನ್ನವಿನಾತ್ವಯಾ ॥**

ನೀನು ಸರ್ವ ಪ್ರಾಣಿಗಳಲ್ಲಿ ನೆಲೆಸಿ ಭೂಮಂಡಲದಲ್ಲಿ ಸರ್ವಾಂತರ್ಯಾಮಿಯಾದ ನಿನ್ನನ್ನು ನೋಡುವಂತಾಗಲಿ, ನೀನಿಲ್ಲದಿರುವ ಯಾವ ಪದಾರ್ಥವೂ ಇಲ್ಲದಿರಲಿ.

**ತಥಾಪಿಯೇಷುಸ್ಥಾನೇಷುದ್ರಷ್ಟವ್ಯಾಸಿ ತ್ವಮೀಪ್ಸುಭಿಃ ।**
**ಸ್ಮರ್ತವ್ಯಾ ಭೂತಿಕಾಮೈರ್ವಾ ತಾನಿ ವಕ್ಷ್ಯಾಮಿ ತತ್ವತಃ ॥**

ಆದರೂ ನಿನ್ನನ್ನು ನೋಡಬಯಸುವವರು ಇಲ್ಲಿ ಕೆಳಗೆ ಹೇಳಿದ ಸ್ಥಳಗಳಲ್ಲಿ ನಿನ್ನನ್ನು ಕಾಣಬಹುದು. ಇಂತಹ ವಿಶಿಷ್ಟವಾದ ಸ್ಥಾನಗಳಲ್ಲಿ ನಿನ್ನನ್ನು ದರ್ಶನ ತೆಗೆದುಕೊಂಡು ತಮ್ಮ ಮನೋರಥ ಈಡೇರಿಸಿಕೊಳ್ಳಲಿ. ನಿನ್ನ ಸಾನ್ನಿಧ್ಯ ಯುಕ್ತವಾದ ಸ್ಥಳಗಳನ್ನು ಹೇಳುತ್ತೇನೆ.

**ಸಾವಿತ್ರಿ ಪುಷ್ಕರೇ ನಾಮ ತೀರ್ಥಾನಾಂ ಪ್ರವರೇ ಶುಭೇ ।**
**ವಾರಾಣಸ್ಯಾಂ ವಿಶಾಲಾಕ್ಷೀ ನೈಮಿಷೇ ಲಿಂಗಧಾರಿಣೀ ॥**

ಪುಷ್ಕರಕ್ಷೇತ್ರದಲ್ಲಿ ನೀನು ನಿನ್ನ ನಿಜರೂಪವಾದ ಸಾವಿತ್ರಿ ಸ್ವರೂಪದಿಂದ ಇರುವೆ. ಈ ಪುಷ್ಕರಕ್ಷೇತ್ರವು ಎಲ್ಲ ತೀರ್ಥಗಳಲ್ಲಿ ಅತ್ಯಂತ ಶ್ರೇಷ್ಠವಾದ ತೀರ್ಥವೆಂದು ಪ್ರಖ್ಯಾತಿ ಪಡೆಯುವುದು. ಕಾಶಿಯಲ್ಲಿ ನೀನು ವಿಶಾಲಾಕ್ಷಿ ಎಂಬ ಹೆಸರಿನಿಂದ ನೆಲೆಸುವೆ. ನೈಮಿಷಾರಣ್ಯದಲ್ಲಿ ಲಿಂಗಧಾರಿಣೀ ದೂರದಿಂದ ಮೆರೆಯುವೆ.

**ಪ್ರಯಾಗೆ ಲಲಿತಾ ದೇವೀ ಕಾಮುಕಾ ಗಂಧಮಾದನೇ ।**
**ಮಾನಸೇ ಕುಮುದಾ ನಾಮ ವಿಶ್ವಕಾಯಾ ತಥಾಂಬರೇ ॥**

ಪ್ರಯಾಗದಲ್ಲಿ ಲಲಿತಾದೇವಿ, ಗಂಧಮಾದನದಲ್ಲಿ ಕಾಮುಕಾದೇವಿ, ಮಾನಸ ತಡಿಯಲ್ಲಿ ಕುಮುದಾದೇವಿ, ಚಿದಂಬರದಲ್ಲಿ ವಿಶ್ವಕಾಯಾದೇವಿಯಾಗಿರುವೆ.

**ಅಶ್ವತ್ಥೇ ವಂದನೀಯಾ ತು ನಿಧಿರ್ವೈ ಶ್ರವಣಾಲಯೇ ।**
**ಗಾಯತ್ರೀ ವೇದವದನೇ ಸಾವಿತ್ರೀ ಬ್ರಹ್ಮ ಸನ್ನಿಧೌ ॥**

ಅಶ್ವತ್ಥದಲ್ಲಿ ವಂದನೀಯೆ, ಶ್ರವಣಾಲಯದಲ್ಲಿ ನಿಧಿ, ವೇದದ ಆದಿಯಲ್ಲಿ ಗಾಯತ್ರಿ, ಬ್ರಹ್ಮನ ಸಮೀಪದಲ್ಲಿ ಸಾವಿತ್ರಿ.

**ದೇವಲೋಕೇ ತಥೇಂದ್ರಾಣೀ ಬ್ರಹ್ಮಾಸೀ ತು ಸರಸ್ವತೀ ।**
**ಸೂರ್ಯೇ ವಿಶ್ವಪ್ರಭಾನಾಮ ಮಾತೃಣಾಂ ವೈಷ್ಣವೀ ಮತಾ ॥**

ದೇವಲೋಕದಲ್ಲಿ ಇಂದ್ರಾಣಿ, ಬ್ರಹ್ಮನ ಮುಖದಲ್ಲಿ ಸರಸ್ವತಿ, ಸೂರ್ಯನಲ್ಲಿ ವಿಶ್ವಪ್ರಭೆ, ಮಾತೆಯರಲ್ಲಿ ವೈಷ್ಣವಿ ಮುಂತಾದ ಈ ಎಲ್ಲ ಹೆಸರಿನಿಂದ ಸೂಚಿತಳಾಗು.

**ಅರುಂಧತೀ ಸತೀನಾಂ ತು ರಾಮಾಸು ಚ ತಿಲೋತ್ತಮಾ ।**
**ಚಿತ್ತೇ ಬ್ರಹ್ಮಕಲಾ ನಾಮ ಶಕ್ತಿಃ ಸರ್ವಶರೀರಿಣಾಂ ॥**

ಸತಿಯರಲ್ಲಿ ಅರುಂಧತಿ, ಹೆಂಗಸರಲ್ಲಿ ತಿಲೋತ್ತಮೆ, ಚಿತ್ತದಲ್ಲಿ ಬ್ರಹ್ಮಕಲೆ, ಎಲ್ಲಾ ಪ್ರಾಣಿಗಳಲ್ಲಿಯೂ ಶಕ್ತಿ ಎಂಬ ಹೆಸರಿನಿಂದ ಪ್ರಸಿದ್ಧಳಾಗು. ಈ ರೀತಿಯಾಗಿ ಸ್ತೋತ್ರ ಮಾಡುತ್ತಿರುವ ವಿಷ್ಣುವನ್ನು ಕುರಿತು ಸಾವಿತ್ರಿಯು ನುಡಿದಳು -

"ಪ್ರಭು, ನೀನು ನನ್ನನ್ನು ಚೆನ್ನಾಗಿ ಸ್ತೋತ್ರಮಾಡಿದೆ. ಇನ್ನು ಮುಂದೆ ಈ ಜಗತ್ತಿನಲ್ಲಿ ನೀನು ಅಜೇಯನಾಗುವೆ. ನಿನ್ನ ವಿವಿಧ ಅವತಾರಗಳಲ್ಲಿಯೂ ಯಾರೂ ನಿನ್ನನ್ನು ಸೋಲಿಸಲಾರರು.

ನೀನು ನಿನ್ನ ಅವತಾರರೂಪಗಳಲ್ಲಿ ಭೂಮಿಗೆ ಬರಲು ನಿಮಿತ್ತ ಮಾತ್ರರಾಗಿ ಮಾಡಿಕೊಂಡ ತಾಯಿತಂದೆಗಳ ಮೇಲೆ ವಿಲಕ್ಷಣ ಭಕ್ತಿಯನ್ನುಮಾಡಿ ಲೋಕದ ಜನರಿಗೆ ಮಾರ್ಗದರ್ಶನ ಮಾಡಿಸುವೆ".

ಇನ್ನು ಮೇಲೆ ನೀನು ನನ್ನ ಪತಿ ಬ್ರಹ್ಮದೇವನು ಕೈಕೊಂಡ ಯಜ್ಞಮಂಟಪಕ್ಕೆ ಹೋಗು ಕೈಕೊಂಡ ಶುಭಕಾರ್ಯವನ್ನು ಪೂರ್ಣಗೊಳಿಸಿರಿ. ನಾನು ಇನ್ನು ಮುಂದೆ ಕುರುಕ್ಷೇತ್ರ ಹಾಗೂ ಪ್ರಯಾಗ ತೀರ್ಥಗಳಲ್ಲಿ ನನ್ನ ಪತಿದೇವನ ಸಮೀಪವರ್ತಿಯಾಗಿ ನಿನ್ನ ವಚನವನ್ನು ಪಾಲಿಸುತ್ತೇನೆ.

**ಪುಲಸ್ತ್ಯ** :- ಹೀಗೆ ಹೇಳಿದ ಬಳಿಕ ವಿಷ್ಣುವು ಸಂತೋಷದಿಂದ ಅವಳನ್ನು ಬೀಳ್ಕೊಂಡು ಯಜ್ಞಮಂಟಪದ ಸಭಾಸ್ಥಾನಕ್ಕೆ ಬಂದನು. ಅನಂತರ ಶಾರದಾಪತಿಯ ಹೊಸ ಹೆಂಡತಿಯಾದ ಗಾಯತ್ರಿಯು ಈ ರೀತಿಯಾಗಿ ಮಾತನಾಡಿದಳು.

**ಗಾಯತ್ರಿ** :- ಋಷಿಪುಂಗವರೆ, ಪತಿಯ ಸನ್ನಿಧಿಯಲ್ಲಿ ನಾನು ನಿರೂಪಿಸುವ ನುಡಿಗಳನ್ನು ಆಲಿಸಿರಿ. ಸಂತುಷ್ಟಳಾದ ನಾನು ಈಗ ವರಗಳನ್ನು ನೀಡಬೇಕೆಂದು ನಿರ್ಧರಿಸಿದ್ದೇನೆ. ನನ್ನ ಅಕ್ಕಳಾದ ಸಾವಿತ್ರಿದೇವಿಯ ನೆಚ್ಚಿನ ಪತಿಯಾದ ಈ ಕಮಲಾಸನನಿಗೆ ಯಾರೂ ಪೂಜೆ ಮಾಡದೆ ಇರಲಿ ಎಂದು ಶಾಪಕೊಟ್ಟಳಷ್ಟೇ!

ಅವಳ ಆ ಶಾಪಕ್ಕೆ ಪ್ರತಿಯಾಗಿ ನಾನು ಪತಿಗೆ ಒಂದು ವರವನ್ನು ಕೊಡುತ್ತೇನೆ! ಯಾವ ಮನುಷ್ಯನು ಭಕ್ತಿಯುಕ್ತನಾಗಿ ಬ್ರಹ್ಮನನ್ನು ಪೂಜಿಸುವನೋ ಅವನಿಗೆ ಧನಧಾನ್ಯ, ಮಡದಿ ಮಕ್ಕಳು, ವಸ್ತ್ರ, ಆಭರಣ ಮುಂತಾದವುಗಳೆಲ್ಲ ಸಮೃದ್ಧವಾಗಿ ಲಭಿಸುವವು. ಅವನ ಮಂದಿರದಲ್ಲಿ ಆನಂದಕ್ಕೆ ಎಂದೂ ಚ್ಯುತಿ ಬರುವುದಿಲ್ಲ. ಮಕ್ಕಳು ಮೊಮ್ಮಕ್ಕಳಿಂದ ತುಂಬಿ ತುಳುಕುವ ಆ ಮನೆಯಲ್ಲಿ ನಿರಂತರ ಶಾಂತಿ ಸಂತಸಗಳು ನಲಿಯುವವು. ಇರುವವರೆಗೆ ಇಂತಹ ಬ್ರಹ್ಮ ಪೂಜಕನಾದ ನರನು ಸೌಭಾಗ್ಯ, ಸೌಖ್ಯಗಳಿಂದ ಒಡಗೂಡಿ, ನೆಮ್ಮದಿಯಿಂದ ಬಾಳಿಬದುಕಿ, ಕೊನೆಗಾಲದಲ್ಲಿ ಪರಮ ಪುರುಷಾರ್ಥ ರೂಪವಾದ ಮೋಕ್ಷವನ್ನು ಹೊಂದುತ್ತಾನೆ. ಬ್ರಹ್ಮದೇವನ ಪ್ರತಿಮೆಯನ್ನು ಎಲ್ಲ ವಿಧಿವಿಧಾನಗಳಿಂದ ಪ್ರತಿಷ್ಠೆಗೈದು, ಪೂಜೆಗೈಯುವವರಿಗೆ ಸಕಲ ವಿಧವಾದ ಯಜ್ಞಗಳನ್ನು ನಡೆಸಿದರೆ ಬರುವಷ್ಟು ಪುಣ್ಯಪ್ರಾಪ್ತವಾಗುವದು. ಉಗ್ರತಪಸ್ಸು, ಉದಾರದಾನ, ಪುಣ್ಯತೀರ್ಥ ಸ್ನಾನ, ಚತುರ್ವೇದ ಪಾರಾಯಣಗಳಿಂದ ಎಷ್ಟು ಫಲ ಬರುವದೋ ಅದರ ಕೋಟಿಪಟ್ಟು ಪುಣ್ಯವು ಪರಮೇಷ್ಠಿಯ ಪ್ರತಿಮಾ ಪ್ರತಿಷ್ಠೆಯಿಂದ ಬರುವದು. ಹುಣ್ಣಿಮೆ ದಿನ ಉಪವಾಸ ಮಾಡಬೇಕು.

ವಿಧಿಪೂರ್ವಕವಾಗಿ ಪ್ರತಿಪದೆಯ ದಿನ ಬ್ರಹ್ಮದೇವನ ಪೂಜೆ ಮಾಡಿದವನಿಗೆ ಬ್ರಹ್ಮಪದವೇ ದೊರಕುವದು. ಬ್ರಹ್ಮದೇವನನ್ನು ಉದ್ದೇಶಿಸಿ ಕಾರ್ತಿಕಮಾಸದಲ್ಲಿ ಋತ್ವಿಜರಿಂದ ಒಡಗೂಡಿ ವಿಶೇಷಪೂಜೆಮಾಡಿ ರಥೋತ್ಸವ ನೆರವೇರಿಸಿದರೆ ಬ್ರಹ್ಮಲೋಕ ಪ್ರಾಪ್ತಿ. ಕಾರ್ತಿಕ ಮಾಸದಲ್ಲಿ ಹುಣ್ಣಿಮೆ ದಿನ ನನ್ನ ಹಿರಿಯ ಅಕ್ಕಳಾದ ಸಾವಿತ್ರಿಯೊಂದಿಗೆ ಬ್ರಹ್ಮದೇವರ ಮೂರ್ತಿಯನ್ನು ನಗರ ಬೀದಿಗಳಲ್ಲಿ ಅಥವಾ ಗ್ರಾಮ ಬೀದಿಗಳಲ್ಲಿ ಮೆರವಣಿಗೆಮಾಡಿದರೆ ವಿಶೇಷ ಪುಣ್ಯ. ಬ್ರಹ್ಮದೇವರ ಎಡಕ್ಕೆ ಸಾವಿತ್ರಿ, ಬಲಕ್ಕೆ ಗಾಯತ್ರಿ ಪ್ರತಿಮೆಗಳನ್ನು ಸ್ಥಾಪಿಸಬೇಕು. ಪೂಜಾರಿಯು ಎಡಬದಿಯಲ್ಲಿ ಕುಳಿತುಕೊಳ್ಳಬೇಕು. ಉತ್ಸವ ಪ್ರತಿಮೆಯ ಎದುರು ಪಕಳೆದೆರದ ಕಮಲಪುಷ್ಪವನ್ನು ಇರಿಸಬೇಕು. ರಥೋತ್ಸವ ಪ್ರಾರಂಭದಿಂದ ಮುಗಿಯು ವವರೆಗೆ ಮಂಗಳವಾದ್ಯಗಳು ಭೋರ್ಗರೆಯುತ್ತಿರಬೇಕು. ಶಂಖವನ್ನು ಊದಬೇಕು. ಜಾಗಟೆ ಬಾರಿಸಬೇಕು. ವೇದ ಪಾರಾಯಣ ನಡೆದಿರಬೇಕು. ಮೇಳದವರು ದೇವರ ನಾಮಗಳನ್ನು ವಾದ್ಯಗಳೊಂದಿಗೆ ನುಡಿಸುತ್ತಿರಬೇಕು. ಭಕ್ತರು ಹಾಡಬೇಕು. ಭಕ್ತಿಯಿಂದ ಕುಣಿಯಬೇಕು. ಆಗಾಗ ದೇವರ ಹೆಸರಿನ ಜಯಘೋಷಗಳನ್ನು ಉದ್ಘೋಷಿಸಬೇಕು.

ಹೀಗೆ ಇಡೀ ಊರಿನ ತುಂಬ ಪ್ರದಕ್ಷಿಣಾಕಾರವಾಗಿ ರಥವನ್ನು ಸುತ್ತಾಡಿಸಿ, ವಿಜೃಂಭಣೆಯಿಂದ ಮೆರವಣಿಗೆ ಮಾಡಿಕೊಂಡು ಬರಬೇಕು. ರಥವು ತನ್ನ ಮೂಲ ಸ್ಥಳಕ್ಕೆ ಬಂದಕೂಡಲೆ, ಪಂಡಿತರು ಭಗವಂತನಿಗೆ ಆರತಿ ಎತ್ತಬೇಕು. ಹೀಗೆ ಭಕ್ತಿಯಿಂದ ಬ್ರಹ್ಮದೇವರ ರಥಯಾತ್ರೆಯನ್ನು ಮಾಡಿದವರು, ಮಾಡಿಸಿದವರು ಅದರಂತೆ ಈ ಸಂಭ್ರಮ ನೋಡಿದವರು, ರಥ ಎಳೆದವರು, ಹಿಂಬದಿಯಿಂದ ನೂಕಿದವರು ಬ್ರಹ್ಮದೇವರ ಪರಮಾನುಗ್ರಹಕ್ಕೆ ಪಾತ್ರರಾಗುತ್ತಾರೆ. ಕಾರ್ತಿಕ ಅಮವಾಸ್ಯೆ ಬ್ರಹ್ಮದೇವರ ದೇವಸ್ಥಾನದ ಮೇಲೆ, ಕೆಳಗೆ, ಸುತ್ತಲೂ ದೀಪೋತ್ಸವ ಮಾಡಿಸಬೇಕು. ಅದರಿಂದ ಪರಮಪದ ಪ್ರಾಪ್ತಿ ನಿಶ್ಚಿತ. ಪ್ರತಿಪದೆಯ ದಿನ ಬ್ರಹ್ಮದೇವನಿಗೆ ಗಂಧ ಲೇಪಿಸಿ, ಹೂ ಏರಿಸಿ, ಬಟ್ಟೆ ಹೊದಿಸಿ, ಪಕ್ವಾನ್ನ ನಿವೇದಿಸಿ, ಶ್ರದ್ಧೆಯಿಂದ ಅರ್ಚನೆಮಾಡಿದ ನರರು ಬ್ರಹ್ಮ ಪದಗಾಮಿ ಆಗುವನು. ಬಲಿರಾಜನು ತ್ರೈಲೋಕ್ಯ ರಾಜನನ್ನೇ ವಾಮನ ರೂಪಿಯಾದ ಭಗವಂತನಿಗೆ ದಾನಕೊಟ್ಟ. ಈ ಬಲಿಪ್ರತಿಪದೆ ತಿಥಿಯು ಅತ್ಯಂತ ಪುಣ್ಯದಿನ. ಆ ದಿನಮಾಡಿದ ಪೂಜೆಯಿಂದ ಬ್ರಹ್ಮದೇವನಿಗೆ ವಿಶೇಷ ಪ್ರೀತಿ. ಅಂದು ಬ್ರಹ್ಮದೇವನನ್ನು ಅವನ ಅಂತರ್ಯಾಮಿಯಾದ ಪರಬ್ರಹ್ಮ ವಿಷ್ಣುವನ್ನು ಭಕ್ತಿಭರಿತನಾಗಿ ಪೂಜೆ ಮಾಡಿದರೆ ತೇಜೋನಿಧಿಯಾದ ಸಾಕ್ಷಾತ್ ಶ್ರೀ ವಿಷ್ಣುವಿನ ಸನ್ನಿಧಾನ ದೊರಕುವುದು. ಇದರಂತೆ ಚೈತ್ರಶುದ್ಧಪ್ರತಿಪದೆ ತಿಥಿಯು ಕೂಡ ಪುಣ್ಯಕರ ಎನಿಸಿದೆ. ಅಂದು ಪ್ರಾತಃಸ್ನಾನಮಾಡಿ, ಪರಮಾತ್ಮನಿಗೆ ವಿಧಿಯಿಂದ ಆರತಿ ಮಾಡಿದರೆ ಎಲ್ಲ ರೋಗಗಳು ನಾಶವಾಗುವವು. ಅಂದು ಹಸು ಮತ್ತು ಎಮ್ಮೆ ಮೊದಲಾದ ಮನೆಯಲ್ಲಿರುವ ಪಶುಗಳನ್ನೆಲ್ಲ ಸ್ನಾನಮಾಡಿಸಿ ಅಲಂಕರಿಸಬೇಕು. ಬಟ್ಟೆ ಹೊದಿಸಬೇಕು. ಮಠ ಮಂದಿರಗಳನ್ನೆಲ್ಲ ಸಾರಣೆ ಕಾರಣೆ ಮಾಡಿ, ಬಾಗಿಲ ಮುಂದೆ ತೋರಣ ಕಟ್ಟಬೇಕು. ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಕಾರ್ತಿಕ, ಅಶ್ವೀಜ ಚೈತ್ರ ಮಾಸಗಳ ಶುಕ್ಲಪಕ್ಷದ ಪ್ರತಿಪದೆ ತಿಥಿಗಳು ಪುಣ್ಯಕರವಾಗಿವೆ. ಈ ದಿನತ್ರಯದಲ್ಲಿ ಮಾಡಿದ ಸ್ನಾನಕ್ಕೆ ಹಾಗೂ ದಾನಕ್ಕೆ ಮೂರುಪಟ್ಟು ಹೆಚ್ಚಿನ ಪುಣ್ಯ. ಅದರಲ್ಲಿಯೂ ಬಲಿಪ್ರತಿಪದೆಯ ದಿನ ಮಾಡಿದ ಭಗವತ್ಪೂಜೆಯು ಯಜಮಾನನಿಗೆ ಸೌಭಾಗ್ಯ ಪ್ರದವಾಗಿರುತ್ತದೆ. ವಿಶೇಷವಾಗಿ ಪಶುಸಂಪತ್ತು ಅಭಿವೃದ್ಧಿ ಹೊಂದುವುದು.

ನನ್ನ ಸೋದರಿಯಾದ ಸಾವಿತ್ರಿಯು ಮಹಾಪತಿವ್ರತೆ ಇದ್ದುದೇನೋ ನಿಜ. ಅವಳ ಮಾತು ಸುಳ್ಳಾಗಲಾರದು. ಆದರೆ ಅವಳ ಶಾಪಕ್ಕೆ ಅವಳ ಚಿಕ್ಕ ತಂಗಿ ಆದ ನಾನು ಉಶ್ಶಾಪವಿತ್ತದ್ದನ್ನು ಕೇಳಿ ನನ್ನ ಮಾತನ್ನು ನೆನೆದು ಬ್ರಹ್ಮದೇವರನ್ನು ಪೂಜಿಸಿದವರಿಗೆ ಯಾವ ದೋಷವೂ ತಟ್ಟದು. ಇಷ್ಟೇ ಅಲ್ಲ, ನನ್ನ ಮಾತಿನಿಂದ ಬ್ರಹ್ಮದೇವನ ಪೂಜೆಯನ್ನು ಭಕ್ತಿಯಿಂದ ಮಾಡಿದರೆ ಎಲ್ಲವೂ ಸಿದ್ಧಿಯಾಗುವುದು. ಹೀಗೆ ಬ್ರಾಹ್ಮಣರಿಗೆ ವರ ಕೊಟ್ಟು ಗಾಯತ್ರಿಯು ಇಂದ್ರನನ್ನು ಕುರಿತು ನುಡಿದಳು -

''ಸುರಪತಿಯೆ, ನಾನು ನಿನಗೂ ವರವೀಯುತ್ತೇನೆ. ಸಾವಿತ್ರಿಯ ಮಾತಿನಂತೆ ಸಮರದಲ್ಲಿ ಸೋಲು ಬಂದು ನೀನು ಶತ್ರುವಶವಾಗುವೆ. ಅಲ್ಲಿಗೆ ಅವಳ ಶಾಪವು ಮುಕ್ತಾಯವಾಯಿತು. ಮುಂದೆ ನನ್ನ ವರದಂತೆ ನನ್ನ ಪತಿ ವಿರಂಚಿಯು ಬಂದು ನಿನ್ನನ್ನು ವೈರಿಗಳ ಬಂಧನದಿಂದ ವಿಮೋಚನಮಾಡಿಸುವನು. ಶತ್ರು ಸೇನೆಯನ್ನೆಲ್ಲ ಬ್ರಹ್ಮ ಬಲದಿಂದ ನೀನು ಪರಾಭವಗೊಳಿಸಿ ಸಾಮ್ರಾಜ್ಯವನ್ನು ಪಡೆಯುವೆ. ನೀನು ಸ್ವಸ್ಥಾನಕ್ಕೆ ಮರುಳುವೆ. ಮೂರುಲೋಕಗಳ ಸಾಮ್ರಾಜ್ಯ ವೈಭವವು ನಿನ್ನ ಅಧೀನವಾಗುವುದು. ನಿಷ್ಕಂಟಕವಾದ ಆತ್ಮೈಲೋಕ್ಯ ಸಾಮ್ರಾಜ್ಯದ ಸಾರ್ವಭೌಮಾಧಿಪತ್ಯವನ್ನು ನೀನು ನಿಶ್ಶಂಕಾತಂಕವಾಗಿ ನಡೆಸುವೆ.'' ಹೀಗೆ ದೇವೇಂದ್ರನಿಗೆ ವರವಿತ್ತು ಮೊದಲು ಗೋಪಕುಮಾರಿಯಾದ ಗಾಯಿತ್ರಿಯು ವಿಷ್ಣುವಿನ ಕಡೆ ತಿರುಗಿ ಹೇಳಿದಳು. ಲೋಕಶಿಕ್ಷಣಕ್ಕಾಗಿ ಸಚ್ಚಿದಾನಂದ ವಿಗ್ರಹನಾದ ನೀನು ಭೂಲೋಕದಲ್ಲಿ ಮಾನವನಾಗಿ ಅವತರಿಸಿದಾಗ, ಕಾಂತೆಯನ್ನು ಕಳೆದುಕೊಂಡು ಕಾಡುಮೇಡುಗಳಲ್ಲಿ ಅಲೆದಲೆದು ಕಷ್ಟಪಡುವೆ ಎಂದು ಸಾವಿತ್ರಿಯು ನಿನ್ನನ್ನು ಶಾಪಿಸಿದಳಷ್ಟೇ ! ಅದು ನಿಜವಾದರೂ ನಿನಗೇನೂ ಅಪಾಯವಿಲ್ಲ. ನಿನ್ನ ನಲ್ಲೆಯನ್ನು ಕದ್ದು ಒಯ್ದ ದುಷ್ಟ ರಕ್ಕಸನನ್ನು ನೀನು ಪರಾಕ್ರಮದಿಂದ ಸಂಹರಿಸುವೆ. ವಿಜಯಶ್ರೀಯೊಂದಿಗೆ ನಿನ್ನ ಪ್ರೇಯಸಿಯಾದ ಸಾಕ್ಷಾತ್ ಶ್ರೀದೇವಿಯನ್ನು ಕರೆದುಕೊಂಡು ಬಂದು ರಾಜ್ಯಶ್ರೀಯನ್ನು ಪಡೆಯುವೆ. ಅಖಂಡ ಭೂಮಂಡಲಕ್ಕೆಲ್ಲ ಏಕಮಾತ್ರ ಸಾರ್ವಭೌಮನಾಗಿ ಹನ್ನೊಂದು ಸಾವಿರ ವರುಷ ರಾಜ್ಯಶಾಸನ ಮಾಡುವೆ. ಅನಂತರ ನಿನ್ನ ಅಚ್ಚುಮೆಚ್ಚಿನ ಭಕ್ತವೃಂದದೊಡನೆ ಪರಂಧಾಮಕ್ಕೆ ಪ್ರಯಾಣ ಬೆಳೆಸುವೆ. ಆ ರಾಮಾವತಾರ ಮಾಡಿದಾಗ ಅದ್ಭುತ ಜನಾನುರಾಗಗಳಿಸುವೆ. ರಾಮರಾಜ್ಯದ ಕೀರ್ತಿಯು ಯುಗಯುಗಗಳವರೆಗೆ ಶಾಶ್ವತವಾಗುವದು. ದಿನಗಳೆದಂತೆ ನಿನ್ನ ಮಹಿಮೆಯು ಬೆಳೆಯುವದು. ನಿನ್ನ ನಾಮವನ್ನು ನೆನೆದವರಿಗೆ ಶಾಶ್ವತ ಶುಭಗತಿ ಲಭಿಸುವದು. ನಿನ್ನ ಸಂತತಿಯನ್ನು ಮುಂದೆ ಜನಿಸಲಿರುವ ಭಾಗ್ಯವಂತರಿಗೆಲ್ಲ ಅನೇಕ ತಲೆಮಾರುಗಳವರೆಗೆ ನಿನ್ನ ಪುಣ್ಯಪ್ರತಾಪ ಹಾಗೂ ನೀನು ಗೈದ ಮಹಿಮೆಗಳು ಹರಡಿ ಸುಖ ಸೌಭಾಗ್ಯಗಳು ಪ್ರಾಪ್ತವಾಗುವವು. ನಿನ್ನ ರಾಮರೂಪವು ಮಹಾಪ್ರಭೋ, ಜಗದೋದ್ಧಾರಕ ವಾಗುವದರಲ್ಲಿ ಸಂದೇಹವೇ ಇಲ್ಲ. ವಿಷ್ಣುವಿಗೆ ಈ ರೀತಿಯಾಗಿ ಹೇಳಿ, ಆ ಬ್ರಹ್ಮಪತ್ನಿಯ ಶಂಕರನ ಕಡೆಗೆ ತಿರುಗಿ ಶುಭಕರ ನುಡಿಯನ್ನು ನುಡಿದಳು.

**ಗಾಯಿತ್ರಿ** :- ಶಂಭುವೆ, ನಿನ್ನ ಲಿಂಗಪಾತವಾಗುವದೆಂದು, ಆ ತಾಯಿಯು ನುಡಿದಿರುವಳಷ್ಟೇ ! ಅದೇನೋ ನಿಜ, ಆ ಸತೀಮಣಿಯ ಮಾತು ಸತ್ಯವಾಗಲೇ ಬೇಕು. ಅದರ ಮೇಲೆ ನಾನು ನಿನಗೆ ವಿಶಿಷ್ಟ ವರಕೊಡುತ್ತೇನೆ. ''ನಿನ್ನ ಲಿಂಗಪಾತವಾದರೂ ಪತಿತವಾದ ಆ ನಿನ್ನ ಲಿಂಗವನ್ನೇ ಜನರೆಲ್ಲರೂ ಪೂಜಿಸುವರು. ನಿನ್ನ ಲಿಂಗದ

ಪೂಜೆಗೈದವರು ಪುಣ್ಯ ವಿಶೇಷಕ್ಕೆ ಭಾಗಿಗಳಾಗುವರು. ಸ್ವರ್ಗ ಮೋಕ್ಷಗಳಿಗೆ ಅವರಿಗೆ ಅರ್ಹತೆ ಬರುವುದು. ಅಗ್ನಿಹೋತ್ರ ವಿಧಿಯಿಂದ ಯಜ್ಞಕುಂಡದಲ್ಲಿ ಹೋಮ ಮಾಡುವರಿಂದ ಬರುವ ಪುಣ್ಯ ನಿನ್ನ ಲಿಂಗಪೂಜೆಯಿಂದ ಬರುವ ಪುಣ್ಯಕ್ಕೆ ಸರಿಹೋಗಲಾರದು. ಗಂಗಾ ತಟಾಕದಲ್ಲಿ ಬಿಲ್ವಪತ್ರದಿಂದ ಶಿವಪೂಜೆಯನ್ನು ಸದಾಕಾಲ ಮಾಡುವವರು ಮೋಕ್ಷಭಾಗಿಗಳಾಗುವವರು. ನೀನು ಪ್ರೀತನಾದರೆ ಎಲ್ಲ ದೇವತೆಗಳು ಪ್ರೀತರಾದಂತೆ.'' ಮಹಾದೇವರಿಗೆ ವರವಿತ್ತು. ಪ್ರಸನ್ನ ಮುಖದಿಂದ ಗಾಯತ್ರೀಯು ಅಗ್ನಿಯ ಕಡೆ ಮುಖಮಾಡಿದಳು. ''ಅಗ್ನಿಯೇ ದೇವತೆಗಳಿಗೆಲ್ಲ ನೀನೆ ಮುಖ್ಯ. ನೀನು ಉಂಡಾಗಲೇ ದೇವತೆಗಳಿಗೆ ಊಟ. ವೇದದಲ್ಲಿ ಹೇಳಿದ ಮಾತು ಎಂದೂ ಸುಳ್ಳಾಗುವದಿಲ್ಲ. ನಿನ್ನ ಮುಂಖಾತರ ದೇವತೆಗಳಿಗೆ ಯಜ್ಞಾಹುತಿಗಳು ದೊರಕುವುವು.'' ಅನಂತರ ಸಾವಿತ್ರಿಯಿಂದ ಶಪಿತರಾದ ಎಲ್ಲ ಬ್ರಾಹ್ಮಣರನ್ನು ಸಂತೈಸುತ್ತ ಗಾಯತ್ರಿಯು ನುಡಿದಳು -

**ಗಾಯತ್ರಿ :-** ಸಾವಿತ್ರಿಯ ಶಾಪದಿಂದ ನೀವು ತೀರ್ಥ ಕ್ಷೇತ್ರಗಳಲ್ಲಿ ನೆಲೆಸಿರಿ ಅದರಿಂದ ಲೋಕೋಪಕಾರವೇ ಆಗುವದು. ಕ್ಷೇತ್ರವಾಸಿಗಳಾದ ನಿಮ್ಮಂತಹ ಬ್ರಾಹ್ಮಣರಿಗೆ ಬಗೆ ಬಗೆಯ ಭಕ್ಷ್ಯ ಭೋಜ್ಯ ಪಕ್ವಾನ್ನ ಊಟಮಾಡಿಸಿ, ನಾನಾ ಬಗೆಯ ದಾನಗಳನ್ನು ಕೊಟ್ಟರೆ, ಮನುಷ್ಯರಿಗೆ ''ವೈರಾಜ'' ಎಂಬ ಹೆಸರಿನ ಸ್ವರ್ಗ ಲಭಿಸುವದು. ಸದಾಚಾರ ಸಂಪನ್ನರಾದ ಶಿಷ್ಟ ದ್ವಿಜ ಶ್ರೇಷ್ಠರ ಮುಖದಲ್ಲಿಯೇ, ದೇವತೆಗಳು ಊಟಮಾಡುತ್ತಾರೆ - ತಮ್ಮ ಹವ್ಯ ಭಾಗವನ್ನು, ಪಿತೃಗಳು ಕೂಡ ಕವ್ಯ ಭಾಗವನ್ನು ದ್ವಿಜ ಮುಖಾಂತರ ಭುಂಜಿಸುತ್ತಾರೆ. ಆದುದರಿಂದ ಪಾಪಿಗಳನ್ನು ತಾರಣಮಾಡುವವರು ಸಂಸಾರದಿಂದ ಪಾರುಮಾಡುವವರು ನೀವೇ ಆಗುವಿರಿ. ಶ್ರಾದ್ಧನ್ನ ಭೋಜನಾದಿಗಳಿಂದ ಮತ್ತು ದುರ್ಜನರ ದಾನ ದಕ್ಷಿಣಾದಿಗಳ ಸ್ವೀಕರಣದಿಂದ ನಿಮಗೆ ಬಂದ ಪಾಪವು ಕ್ರಮ ಬದ್ಧವಾಗಿ ಮಾಡಿದ ಪ್ರಾಣಾಯಮದಿಂದ ಕರಗಿ ಹೋಗುವದು. ನೀವೆಲ್ಲರು ಭಕ್ತಿಯಿಂದ ಪುಷ್ಕರತೀರ್ಥದಲ್ಲಿ ಸ್ನಾನಮಾಡಿ ವೇದಮಾತೆಯಾದ ಗಾಯತ್ರಿಯ ಮಂತ್ರವನ್ನು ಜಪಿಸಿದರೆ ನಿಮ್ಮ ಪಾತಕಗಳೆಲ್ಲವೂ ಪರಿಹೃತವಾಗಿರುವವು. ಧೂತ ಪಾಪರಾಗಿ ನೀವು ಪೂತಾತ್ಮನರೆಂದು ಪರಿಗಣಿಸಲ್ಪಡುವಿರಿ. ಈ ಪುಷ್ಕರಕ್ಷೇತ್ರದಲ್ಲಿ ದಾನವನ್ನು ತೆಗೆದುಕೊಂಡರೆ ಪಾಪವು ಬರಲಾರದು. ಇಲ್ಲಿಯ ಅನ್ನದಾನದಿಂದ ಎಲ್ಲ ದೇವತೆಗಳಿಗೂ ಪ್ರೀತಿ, ಒಬ್ಬ ಜ್ಞಾನಿಯ ಭೋಜನದಿಂದ ಕೋಟಿ ಬ್ರಾಹ್ಮಣ ಜನ ಭೋಜನದ ಫಲ, ಬ್ರಹ್ಮಹತ್ಯಾದಿ ಪಾಪಗಳು ಕೂಡ ನಿಮ್ಮ ಕೈಯಲ್ಲಿ ದಕ್ಷಿಣೆ ಇಟ್ಟಕೂಡಲೇ ಮಾಯವಾಗಿ ಬಿಡುವದು. ಆ ಕ್ಷಣದಲ್ಲಿ ಇಂತಹ ಪಾಪ ಪರಿಹರಣ ಶಕ್ತಿಯು ನಿಮ್ಮಲ್ಲಿ ಬರಬೇಕಾದರೆ -

ತ್ರಿಕಾಲದಲ್ಲಿ ಸಂಧ್ಯಾವಂದನೆಮಾಡಿ ನನ್ನ ಜಪ (ಗಾಯತ್ರೀಜಪ) ಮಾಡಿರಿ, ಜನ್ಮಾವಧಿ ಮಾಡಿದ ಪಾಪವು ಹತ್ತು ಗಾಯತ್ರಿ ಮಂತ್ರ ಜಪದಿಂದ ನಾಶ. ನೂರು ಗಾಯತ್ರಿ ಜಪಿಸಿದರೆ ಪೂರ್ವಜನ್ಮದಲ್ಲಿ ಮಾಡಿದ ಪಾಪವು ಪರಿಹಾರವಾಗುವದು. ಒಂದು ಸಹಸ್ರ ಗಾಯಿತ್ರಿ ಜಪಮಾಡಿದರೆ, ಯುಗಯುಗಾಂತರಗಳಲ್ಲಿ ಮಾಡಿದ ಪಾಪಗಳೆಲ್ಲ ನಾಶ ಹೊಂದುವದು. ಅದನ್ನು ಅರಿತು ಪರಮ ಪವಿತ್ರ ಗಾಯತ್ರಿ ಮಂತ್ರವನ್ನು ನನ್ನ ಪ್ರೀತಿಗಾಗಿ ಮಾಡಬೇಕು. ಓಂಕಾರ ಸಹಿತವಾದ ಗಾಯತ್ರಿ ಜಪದಿಂದ ಬ್ರಾಹ್ಮಣರು ಪೂಜ್ಯರಾಗುವರು. ಇದರಲ್ಲಿ ಸಂದೇಹವಿಲ್ಲ. ಗಾಯತ್ರಿ ರೂಪಳಾದ ನಾನು ಅಷ್ಟಾಕ್ಷರಗಳು ನಾನು ಸರ್ವ ವೇದಗಳ ಮಾತೆ

ಜಗತ್ತೆಲ್ಲವನ್ನು ನಾನು ವ್ಯಾಪಿಸಿದ್ದೇನೆ. ನನ್ನನ್ನು ಶ್ರದ್ಧೆಯಿಂದ ಜಪಮಾಡಿದ ಜ್ಞಾನಿಗಳು ಸಿದ್ಧಿಯನ್ನು ಹೊಂದುತ್ತಾರೆ. ಗಾಯತ್ರೀಮಂತ್ರ ಜಪಮಾತ್ರದಿಂದಲೆ, ನೀವು ಬ್ರಾಹ್ಮಣರಿಗೆಲ್ಲ ವಿಶಿಷ್ಟವಾದ ಪ್ರಾಧಾನ್ಯವು ಪ್ರಾಪ್ತವಾಗುವದು.

**''ಗಾಯತ್ರೀಸಾರ ಮಾತ್ರೋऽಪಿ ವರಮ್‌ವಿಪ್ರಃ ಸುಯಂತ್ರಿತಃ''**

**''ನಾಯಂತ್ರಿತಃ ಚತುರ್ವೇದಃ ಸರ್ವಾಸಿ ಸರ್ವಕ್ರಯಿ''**

ಸದಾಚಾರ ಸಂಪನ್ನನಾಗಿ ಇಂದ್ರಿಯಗಳನ್ನು ನಿಗ್ರಹಿಸಿ, ಕೇವಲ ಗಾಯತ್ರಿ ಮಂತ್ರಾರ್ಥ ತಿಳಿದುಕೊಂಡು ಅದನ್ನು ಪ್ರತಿನಿತ್ಯ ಪಠಿಸುವ ಹೆಚ್ಚಿನ ಜ್ಞಾನವಿಲ್ಲದ ಬ್ರಾಹ್ಮಣನು ನಾಲ್ಕು ವೇದಗಳನ್ನು ಓದಿ ಆಚಾರವಿಲ್ಲದ, ಕಂಡದ್ದನ್ನು ತಿನ್ನುವ, ಮಾಡಬಾರದ್ದನ್ನು ಮಾಡುವ, ಇಂದ್ರಿಯ ಲೋಲುಪನಾದ ವಿದ್ವಾನ್ ಬ್ರಾಹ್ಮಣನಿಗಿಂತ ಶ್ರೇಷ್ಠನಾಗಿದ್ದಾನೆ. ಬ್ರಾಹ್ಮಣರಿಗೆ ಗಾಯತ್ರಿಯೇ ಮುಖ್ಯ, ಗಾಯತ್ರಿಯೇ ಬಲ, ಗಾಯತ್ರಿಮಂತ್ರದ ಬಲದಿಂದ ಬ್ರಾಹ್ಮಣನು ಪರಮಸಿದ್ಧಿಯನ್ನು ಪಡೆಯಬಲ್ಲನು. ನನ್ನ ಸವತಿಯಾದ ಸಾವಿತ್ರಿಯು ನಿಮಗೆ ಶಾಪ ಕೊಟ್ಟಿದ್ದರಿಂದ ನಾನು ಈಗ ನಿಮಗೆ ಪ್ರತಿಯಾಗಿ ಆ ಶಾಪವು ಬಾಧಿಸದಂತೆ ವರವಿತ್ತು ನಿಮ್ಮ ಬ್ರಾಹ್ಮಣ್ಯವೃದ್ಧಿಗೆ ಉಪಾಯ ಹೇಳಿಕೊಟ್ಟಿದ್ದೇನೆ. ಇಂತಹ ಗಾಯತ್ರಿಯ ಬಲವುಳ್ಳ ಬ್ರಾಹ್ಮಣರಲ್ಲಿ ದಾನಕೊಟ್ಟದ್ದು, ಊಟಕ್ಕೆ ಹಾಕಿದ್ದು ಅಕ್ಷಯಫಲವನ್ನು ನೀಡುತ್ತದೆ. ತ್ರಿಕಾಲದಲ್ಲಿ ಸ್ನಾನ, ಸಂಧ್ಯೆ, ಗಾಯತ್ರಿ ಜಪಮಾಡಿ, ಅಗ್ನಿಹೋತ್ರ ಇಟ್ಟು ಹೋಮಮಾಡುವ ಬ್ರಾಹ್ಮಣರು ತಾವು ಸ್ವರ್ಗಕ್ಕೆ ಹೋಗುವರಲ್ಲದೆ ತಮ್ಮ ಹಿಂದುಮುಂದಿನ ಇಪ್ಪತ್ತೊಂದು ತಲೆಮಾರಿನವರನ್ನು ಉದ್ಧರಿಸುವರು.

**ಪುಲಸ್ತ್ಯ** :- ಹೀಗೆ ವಿಷ್ಣು, ಶಿವ, ಶುಕ್ರ, ಅಗ್ನಿ, ಬ್ರಹ್ಮ, ಬ್ರಾಹ್ಮಣ ಮೊದಲಾದವರಿಗೆಲ್ಲ ಸಾವಿತ್ರಿಯು ಶಪಿಸಿದ್ದನ್ನು ತಿಳಿದು ಗಾಯತ್ರಿಯು ಅವರಿಗೆ ಬಾಧಕವಾಗದಂತೆ ವರದಾನಮಾಡಿ ಸಮಾಧಾನಪಡಿಸಿದಳು. ಈ ಪುಷ್ಕರ ಕ್ಷೇತ್ರದಲ್ಲಿ ಎಲ್ಲರಿಗೂ ವರವಿತ್ತು ಗಾಯತ್ರಿಯ ಬ್ರಹ್ಮದೇವರ ಬದಿಯಲ್ಲಿ ಬಂದು ಕುಳಿತುಕೊಂಡಳು. ಆಗ ಚಾರಣರು ಬಂದು ''ಸಾವಿತ್ರಿ ದೇವಿಯು ಸಿಟ್ಟಿನ ಭರದಲ್ಲಿ ಸಾಕ್ಷಾತ್ ಲಕ್ಷ್ಮಿದೇವಿಗೂ ಉಳಿದೆಲ್ಲ ಸ್ತ್ರೀಯರಿಗೂ ಶಾಪಹಾಕಿದ್ದಾಳೆ'' ಎಂದು ಹೇಳಿದರು. ವರಗಳನ್ನು ನೀಡಬೇಕೆಂದು ಸಂಕಲ್ಪಿಸಿದಳು. ಅದರಂತೆ ಬ್ರಹ್ಮದೇವರ ಆ ಮನದನ್ನೆಯು ಮೊದಲು ಮಹಾಲಕ್ಷ್ಮಿದೇವಿಗೆ ವರವನ್ನು ನೀಡಿದಳು.

**ಗಾಯತ್ರಿ** :- ಲಕ್ಷ್ಮಿದೇವಿಯೇ, ''ನೀನು ಎಲ್ಲ ಕಡೆಗೂ ತಿರುಗುತ್ತಲಿರು. ಒಂದೆಡೆ ಸ್ಥಿರವಾಗಿ ನಿಲ್ಲಬೇಡ. ಚಂಚಲಳಾಗು.'' ಎಂದು ಮುಂತಾಗಿ ನನ್ನ ಹಿರಿಯಕ್ಕ ಶಪಿಸಿರುವಳಷ್ಟೆ ! ಅದು ಒಳ್ಳೆಯದೆ, ನಿನ್ನಂತಹ ಮಹಾದೇವಿಯು ಒಂದೇ ಕಡೆ ಕಾಲೂರಿ ನಿಂತರೆ ಹೇಗೆ ? ನೀನು ಬಹುಜನರಿಗೆ ಬೇಕು. ಆದುದರಿಂದ ನೀನು ಅನೇಕ ಕಡೆಗಳಲ್ಲಿ ಇರಬೇಕಾಗುವದು. ನೀನು ಎಲ್ಲಿಯೇ ಇದ್ದರೂ ಎಲ್ಲರೂ ನಿನ್ನನ್ನು ಯಾರೂ ತಿರಸ್ಕರಿಸಲಾರರು. ನಿನ್ನ ಬಿಟ್ಟರೆ, ಅಥವಾ ಅವರನ್ನು ಬಿಟ್ಟು ಬಂದರೆ ದುಃಖ-ದುರವಸ್ಥೆಗಳು ಆ ದರಿದ್ರರಿಗೆ ಕಟ್ಟಿಟ್ಟದ್ದು. ನೀನು ಯಾರ ಮೇಲೆ ಅನುಗ್ರಹಮಾಡಿ ಮನೆಯಲ್ಲಿ ನೆಲೆಸುವಿಯೋ ಅವರು ಎಂತಹ ಕೀಳುಕುಲದವರಾದರೂ ಒಮ್ಮೆಲೆ ಕುಲೀನರು ಎನಿಸಿ ಬಿಡುವರು. ಶೀಲವಂತರು, ಧರ್ಮವಂತರೂ ಎಂದು ಅವರು

ಗೌರವಿಸಲ್ಪಡುವರು. ಸಭೆಗಳಲ್ಲಿ ಒಂದು ಶೋಭೆ. ಲಕ್ಷ್ಮಿಯ ಅನುಗ್ರಹಕ್ಕೆ ಪಾತ್ರರಾದ ಶ್ರೀಮಂತರ ಬಳಿಗೆ ಬ್ರಾಹ್ಮಣರು ಬೇಡಲು ಬರುವರು. ಅಣ್ಣ, ತಮ್ಮ, ತಂದೆ, ತಾಯಿ ಯಾರನ್ನೂ ಜನರು ''ಸ್ವಜನ'' ತಮ್ಮವರು ಎಂದು ಎಣಿಸದೆ, ಸಿರವಂತನನ್ನೇ ''ಸ್ವಜನ'' ಎಂದು ಭಾವಿಸಿ ಗೌರವಿಸುತ್ತಾರೆ. ಸಿರಿದೇವಿಯ ದೃಷ್ಟಿಬಿದ್ದ ಹಣವಂತರ ಬಳಿಗೆ ಎಲ್ಲ ಜನರು ಬರುವರು. ಹರಿಯ ಮನದರಸಿಯಾದ ಸಿರಿದೇವಿಗೆ ಹೀಗೆ ವರವಿತ್ತು. ಗಾಯತ್ರಿಯು ದೇವೇಂದ್ರನ ಮಡದಿಯಾದ ಪೌಲೋಮಿಯನ್ನು ಸಂತೈಸಿದಳು.

**ಗಾಯತ್ರಿ :-** ತಾವರೆಗಣ್ಣಿನ ಸುರರಾಣಿಯೆ, ನೀನು ಚಿಂತಿಸಬೇಡ. ಸಾವಿತ್ರಿಯ ಶಾಪದಿಂದ ನಹುಷನು ಇಂದ್ರ ಪದಾರೂಢನಾಗಿ ನಿನ್ನನ್ನು ಬಯಸುವದೇನೋ ನಿಜ. ಆದರೆ ದುಷ್ಟ ಭಾವನೆಯಿಂದೊಡಗೂಡಿದ ಅವನನ್ನು ನೀನು ನಿನ್ನ ದೃಷ್ಟಿಯಿಂದ ನೋಡಿದರೆ ಸಾಕು. ಅವನ ಪುಣ್ಯ ನಷ್ಟವಾಗುವದು. ಅಗಸ್ತ್ಯ ಋಷಿಗಳು ಅವನಿಗೆ ಶಾಪಕೊಟ್ಟು ಅವನನ್ನು ಧರೆಗೆ ಉರುಳಿಸುವರು. ಅವನು ಹಾವಾಗಿ ಸ್ವರ್ಗದಿಂದ ಹೊರಳಿ ಮಹೀಮಂಡಲಕ್ಕೆ ಬೀಳುವ ಪ್ರಸಂಗ ಬರುವದು. ಹೀಗೆ ನಹುಷನು ಸ್ವರ್ಗದಿಂದ ಭ್ರಷ್ಟನಾಗಿ ಹೋದ ಬಳಿಕ ನಿನ್ನ ಪ್ರಾಣದರಸನಾದ ಪುರಂದರನು ಅಶ್ವಮೇಧ ಯಜ್ಞಮಾಡುವನು. ಅನಂತರ ನೀನು ನಿನ್ನ ಪತಿಯೊಂದಿಗೆ ನನ್ನ ವರದ ಮಹಿಮೆಯಿಂದ ನಿನ್ನ ಸುರಸಾಮ್ರಾಜ್ಯವನ್ನು, ಸ್ವರ್ಗ ಸಿಂಹಾಸನವನ್ನು ಮರಳಿ ಪಡೆಯುವೆ.

ಶಚೀದೇವಿಯನ್ನು ಸಾಂತ್ವನಗೊಳಿಸಿದ ಬಳಿಕ ಗಾಯತ್ರಿದೇವಿಯು ಉಳಿದೆಲ್ಲ ದೇವ ಪತ್ನಿಯರನ್ನು ಸಮಾಧಾನಗೊಳಿಸುತ್ತ ನುಡಿದಳು. ಸಾವಿತ್ರಿಯು ಶಾಪದಿಂದ ನಿಮಗೆ ಮಕ್ಕಳಿಲ್ಲದಿದ್ದರೂ ಚಿಂತೆಯಿಲ್ಲ ನಿಮಗೆ ಅದರಿಂದ ಏನೂ ದುಃಖವಾಗುವದಿಲ್ಲ. ನಿಮ್ಮ ಪಕ್ಕೆ ನೀವು ಸ್ವರ್ಗಸುಖವನ್ನು ಅನುಭವಿಸುತ್ತ ಅಮರಾವತಿಯಲ್ಲಿ ಆನಂದದಿಂದ ಇರುವಿರಿ. ಇದೇ ರೀತಿಯಾಗಿ ಗಾಯತ್ರಿಯ ಗಜಚರ್ಮಾಂಬರಧಾರಿಯಾದ ಶಿವನ ಗೃಹಿಣಿ ಗೌರಿದೇವಿಯನ್ನು ನಲುಮೆ ದುಂಬಿದ ನುಡಿಗಳನ್ನು ಆಡಿ ಸಂತೋಷಪಡಿಸಿದಳು. ಅವಳ ಮನದ ಕೊರಗನ್ನು ದೇವಪತ್ನಿಯರ ಮನಸ್ಸಿನ ಮರಗನ್ನು ದೂರ ಮಾಡಿದಳು. ಈ ರೀತಿಯಾಗಿ ಅತ್ಯಂತ ಸಂತೋಷದಿಂದ ಮೇಧಾವಿನಿಯಾದ ಗಾಯತ್ರಿದೇವಿಯು ಶಪಿತರಾದ ಎಲ್ಲ ದೇವತಾ ಸ್ತ್ರೀ ಪುರುಷರನ್ನು ಸಾಂತ್ವನಗೊಳಿಸಿದಳು. ಬ್ರಹ್ಮದೇವರ ಯಜ್ಞವನ್ನು ಪೂರ್ಣಗೊಳಿಸಬೇಕೆಂದು ಪತಿ, ಪಿತಾಮಹನ ಹತ್ತಿರ ವಿನಯದಿಂದ ಕುಳಿತುಕೊಂಡಳು. ಆಗ ಮಹಾರುದ್ರದೇವರು ಆ ವೇದಮಾತೆಯಾದ ಗಾಯತ್ರಿ ದೇವಿಯನ್ನು ಸ್ಮರಿಸಿ ಸ್ತೋತ್ರಮಾಡಿದರು.

**॥ ರುದ್ರಉವಾಚ ॥**

**ನಮೋಽಸ್ತು ತೇ ವೇದ ಮಾತರಷ್ಟಾಕ್ಷರ ವಿಶೋಧಿತೆ ।**
**ಗಾಯತ್ರೀ ದುರ್ಗತರಣಿ ವಾಣಿ ಸಪ್ತವಿಧಾ ತಥಾ ॥**

ಎಲೈ ವೇದಮಾತೆಯಾದ ಗಾಯತ್ರಿಯೆ, ನಿನಗೆ ನಮಸ್ಕಾರವು. ಎಂಟು ಅಕ್ಷರಗಳಿಂದ ಸ್ತುತಿಸಲ್ಪಡುವವಳೇ, ನಿನಗೆ ನಮಸ್ಕಾರವು. ನೀನೇ ಕಷ್ಟಗಳನ್ನು ನಾಶಮಾಡತಕ್ಕವಳು. ನೀನೇ ಏಳು ವಿಧವಾದ ವಿದ್ಯೆಯು.

**ಸರ್ವಾಣಿಸ್ತುತಿಶಾಸ್ತ್ರಾಣಿ ಗಾಥಾಶ್ಚ ನಿಯಮಾಸ್ತಥಾ ।**
**ಅಕ್ಷರಾಣಿ ಚ ಸರ್ವಾಣಿ ಲಕ್ಷಣಾನಿ ತಥೈವ ಚ ॥**

ಎಲ್ಲ ಸ್ತುತಿ ಶಾಸ್ತ್ರಗಳು, ಗಾಥೆಯು, ನಿಯಮವು, ಎಲ್ಲ ಅಕ್ಷರಗಳು, ಲಕ್ಷಣಗಳು ನೀನಾಗಿದ್ದೀಯೇ,

**ಭಾಷ್ಯಾಣಿ ಸರ್ವಶಾಸ್ತ್ರಾಣಿ ತ್ವಂ ತು ದೇವಿ ನಮೋಽಸ್ತುತೇ ।**
**ಶ್ವೇತಾ ತ್ವಂ ಶ್ವೇತರೂಪಾಸಿ ಶಶಾಂಕೇನ ಸಮಾನನಾ ॥**

ಭಾಷ್ಯಗಳೂ ಸರ್ವಶಾಸ್ತ್ರಗಳೂ ನೀನಾಗಿದ್ದೀಯೆ. ಇಂತಹ ದೇವಿಯೇ, ನಿನಗೆ ನಮಸ್ಕಾರವು. ನೀನು ಬಿಳಿಯ ಬಣ್ಣವುಳ್ಳ ವಳಾಗಿದ್ದೀಯೆ. ಚಂದ್ರನಂತಿರುವ ಮುಖವನ್ನು ಹೊಂದಿದ್ದಿ.

**ಬಿಭ್ರತೀ ವಿಫಲಾ ಬಾಹೂ ಕದಲೀಗರ್ಭಕೋಮಲೌ ।**
**ಏಣಶೃಂಗಂ ಕರೇ ಗೃಹ್ಯ ಪಂಕಜಂ ಚ ಸುನಿರ್ಮಲಂ ॥**

ಬಾಳೆಯ ಕಂಬದ ಒಳಗಿರುವಂತೆ ಬಣ್ಣವುಳ್ಳ, ಸೌಂದರ್ಯವುಳ್ಳ ಎರಡು ತೋಳುಗಳನ್ನು ಹೊಂದಿದ್ದ. ಹುಲ್ಲೆಯ ಕೊಂಬನ್ನು ಕೈಲಿ ಹಿಡಿದು ಕಮಲವನ್ನು ಕೈಲಿ ಹಿಡಿದಿದ್ದೀಯೆ.

**ವಸಾನಾ ವಸನೇ ಕ್ಷೌಮೇ ರಕ್ತೇನೋತ್ತರವಾಸಸಾ ।**
**ಶಶಿರಶ್ಮಿ ಪ್ರಕಾಶೇನ ಹಾರೇಣೋರಸಿ ರಾಜತಾ ॥**

ದುಕೂಲವನ್ನುಟ್ಟು ಮೇಲೊಂದು ಕೆಂಪುಬಣ್ಣದ ಹಾರವನ್ನು ಕತ್ತಿಗೆ ಹಿಡಿದಿದ್ದಿ.

**ದಿವ್ಯಕುಂಡಲ ಪೂರ್ಣಾಭ್ಯಾಂ ಸುಕರ್ಣಾಭ್ಯಾಂ ವಿರಾಜಿತಾ ।**
**ಚಂದ್ರಸಾಪತ್ನ್ಯ ಭೂತೇನ ಮುಖೇನ ತ್ವಂ ವಿರಾಜಸೇ ॥**

ಉತ್ತಮವಾದ ಓಲೆಗಳಿಂದ ಪ್ರಕಾಶಿಸುವ ಕಿವಿಗಳನ್ನು ಹೊಂದಿದ್ದೀಯೆ. ಚಂದ್ರನಂತಿರುವ ಮುಖದಿಂದ ಪ್ರಕಾಶಿಸುತ್ತಿದ್ದೀಯೆ.

**ಮುಕುಟೇನಾತಿ ಶುದ್ಧೇನ ಕೇಶಬಂಧೇನ ಶೋಭಿತಾ ।**
**ಭುಜಂಗಭೋಗ ಸದೃಶೌ ಭುಜೌ ತೇ ಭೂಷಣಂ ದಿವಃ ॥**

ಅಶುದ್ಧವಾದ ಕಿರೀಟದಿಂದಲೂ ಕೂದಲಿನ ಗಂಟಿಂದಲೂ, ಪ್ರಕಾಶಿಸುತ್ತಿದ್ದಿ. ಸರ್ಪದ ಶರೀರದಂತಿರುವ ನಿನ್ನ ತೋಳುಗಳು ಸ್ವರ್ಗಕ್ಕೆ ಅಲಂಕಾರವಾಗಿವೆ. ಕಾರ್ತಿಕಮಾಸದ ಹುಣ್ಣಿಮೆಯ ದಿನ ನಿನ್ನನ್ನು ಪೂಜಿಸಿದರೆ ಸಕಲೇಷ್ಟಿಗಳನ್ನು ಕೊಡುವವಳಾಗುತ್ತೀಯೆ. ಈ ಸ್ತೋತ್ರವನ್ನು ಓದುವವನೂ ಭಕ್ತಿಯಿಂದ ಕೇಳುವವನೂ ಸಕಲ ಇಷ್ಟಗಳನ್ನು ಹೊಂದುತ್ತಾನೆ. ಸಂಶಯವಿಲ್ಲ.

**ಗಾಯತ್ರಿಯು ಹೇಳಿದಳು :-** ''ಎಲೈ ರುದ್ರನೇ, ನೀನು ಹೇಳಿದಂತೆಯೇ ಎಲ್ಲರೂ ನಡೆಯಲಿ. ನೀನಿರುವ ಜಾಗದಲ್ಲೆಲ್ಲ ವಿಷ್ಣುವು ಇರಲಿ.''

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಬ್ರಹ್ಮ, ಗಾಯತ್ರಿ ದೇವಿಯ ಮದುವೆ ಎಂಬ ಹದಿನೇಳನೇ ಅಧ್ಯಾಯ ಮುಗಿದುದು*

**ಭೀಷ್ಮ :-** ಬ್ರಹ್ಮಜ್ಞಾನಿಗಳೆ, ನೀವು ಈವರೆಗೆ ಹೇಳಿದ ಗಾಯತ್ರಿ ದೇವಿಯ ಬಗೆಗೆ ಸಭೆಯಲ್ಲಿ ನಡೆದ ಸಮಾಚಾರವನ್ನು ಯಥಾರ್ಥವಾಗಿ ನಾನು ಕೇಳಿದನು. ಅದಕ್ಕೆ ಸಾವಿತ್ರಿಯ ವಿರೋಧದ ವೃತ್ತಾಂತವನ್ನೂ ಕೇಳಿದೆ. ಅದರ ಮುಂದಿನ ಸಮಾಚಾರವನ್ನು ತಾವು ಹೇಳಬೇಕು. ಗಾಯಿತ್ರಿದೇವಿಯ ಪರಮ ಪವಿತ್ರವಾದ ಈ ಕಥಾ ಶ್ರವಣದಿಂದಲೇ ನನ್ನ ದೇಹ ಶುದ್ಧಿಯಾಗುವುದು.

**ಪುಲಸ್ತ್ಯ :-** ಪರಮೇಷ್ಠಿ ಎನಿಸಿ ಬ್ರಹ್ಮನು ಆ ಪುಷ್ಕರಕ್ಷೇತ್ರದಲ್ಲಿ ಯಜ್ಞಮಾಡುವಾಗ ನಡೆದ ವೃತ್ತಾಂತವನ್ನೂ, ಹಿಂದಿನ ಸಮಾಚಾರವನ್ನೂ ತಿಳಿಸುತ್ತೇನೆ ಕೇಳು. ಮೊದಲು ಕೃತಯುಗದ ಪ್ರಾರಂಭದಲ್ಲಿ ಬ್ರಹ್ಮದೇವರು ಯಜ್ಞಮಾಡುತ್ತಿರುವಾಗ ಮರೀಚಿ, ಅಂಗಿರಸ, ಪುಲಸ್ತ್ಯ, ಪುಲಹ, ಕೃತು ದಕ್ಷ ಮುಂತಾದವರೆಲ್ಲರೂ ಬಂದು ಅವನಿಗೆ ನಮಸ್ಕಾರ ಮಾಡಿದರು. ಅಲ್ಲಿಯೇ ಉಚ್ಚಾಸನದ ಮೇಲೆ ವಿಷ್ಣುವು ಮಂಡಿಸಿದ್ದನು. ಅವನ ಎದುರು ಎಲ್ಲ ಆಭರಣಗಳಿಂದ ಶೃಂಗಾರಿತರಾದ ಅಪ್ಸರಾಂಗನೆಯರು ನರ್ತನ ಮಾಡುತ್ತಿದ್ದರು. ಗಂಧರ್ವರು ಹಾಡುತ್ತಿದ್ದರು. ತುಂಬರು, ಮಹಾಶ್ರುತಿ, ಚಿತ್ರಸೇನ, ಊರ್ಣಾಯು, ಗೋಮಾಯು ಸೂರ್ಯವರ್ಚ, ಸೋಮವರ್ಚ, ಯುಗಪತ್, ತೃಣಾಯು, ನಂದಿ, ಶಾಲಿಶಿರ, ಪರ್ಜನ್ಯ, ಕಲಿ, ತಾರಕ ಈ ಹದಿನಾರು ಜನ ಗಂಧರ್ವರು ಶ್ರೀ ಹರಿಯನ್ನು ಹೊಗಳಿಹಾಡುತ್ತಿದ್ದರು. ಹಾ, ಹಾ ಹೂ... ಹೂ.... ಈ ನಾಲ್ಕು ಜನ ದೇವ ಗಂಧರ್ವರು ಭಗವಂತನನ್ನು ರಾಗ, ತಾಳಬದ್ಧವಾಗಿ ಸಂಗೀತದಿಂದ ಪೂಜಿಸುತ್ತಿದ್ದರು.

ಹೀಗೆ ನೃತ್ಯ, ಸಂಗೀತ, ಸ್ತೋತ್ರಗಳು ಆ ಬ್ರಹ್ಮಸಭೆಯಲ್ಲಿ ನಡೆದಾಗಲೇ ಇಂದ್ರ, ವಿವಸ್ವಾನ್, ಪೂಷಾ, ತ್ವಷ್ಟ, ಪರ್ಜನ್ಯ, ಧಾತೃ, ಆರ್ಯಮ, ಸವಿತ್ರ, ವರುಣ, ಅಂಶ, ಭಗ, ಇಂದ್ರ ಈ ಹನ್ನೆರಡು ಜನ ಆದಿತ್ಯರು ಬಂದು ಬ್ರಹ್ಮದೇವರಿಗೆ ವಂದಿಸಿದರು. ಮೃಗವ್ಯಾಧ, ಶರ್ವ, ನಿರ್ಋತಿ, ಅಜೈಕಪಾದ, ಅಹಿರ್‌ಬುಧ್ನ್ಯ, ಪಿನಾಕಿ, ಭವವಿಶ್ವೇರ, ಕಪರ್ದಿ, ಸ್ಥಾಣು, ಭಗ, ಈ ಹನ್ನೊಂದು ಜನ ರುದ್ರರು, ಇಬ್ಬರು ಅಶ್ವಿನಿ ದೇವತೆಗಳು, ಎಂಟು ವಸ್ತುಗಳು, ನಲವತ್ತೊಂಭತ್ತು ಮರತ್ತುಗಳು; ವಿಶ್ವೇದೇವಾರ್ತೆ ಸಾಧ್ಯರು ಮೊದಲಾದವರೆಲ್ಲರೂ ಬ್ರಹ್ಮದೇವನೆದುರು ಕೈಮುಗಿದುಕೊಂಡು ನಿಂತಿದ್ದರು. ಶೇಷಕುಲದ ಧುರೀಣರಾದ ಕಶ್ಯಪ, ಅಪರಗಂಧ, ತಕ್ಷಕ ಮೊದಲಾದವರೂ ಅರಿಷ್ಟನೇಮಿ, ಗರುಡ, ಅರುಣಿ, ವೈನತೇಯ ಮುಂತಾದವರೆಲ್ಲರೂ ಬಂದು ಬ್ರಹ್ಮನಿಗೆ ವಂದಿಸಿ, ಅವನ ಅಪ್ಪಣೆಗೆ ಕಾದು ನಿಂತರು. ಮೋಕ್ಷ ಬಯಸುವ ಜ್ಞಾನಿಗಳು ಈ ವಿಷ್ಣುವನ್ನು ಆರಾಧಿಸಿ ಜನನ ಮರಣಗಳಿಂದ ಮುಕ್ತರಾಗುತ್ತಾರೆ. ಸೂರ್ಯ ಚಂದ್ರರೇ ಅವನ ಕಣ್ಣುಗಳು ಭೂಮ್ಯಾಕಾಶಗಳೇ ಅವನ ದೇಹ. ಎಲ್ಲ ಲೋಕಗಳ ನಿಜವಾದ ಸೃಷ್ಟಾರನು ಅವನೇ. ಲೋಕಗಳನ್ನೆಲ್ಲ ಪಾಲಿಸುವವನು ಅವನೇ. ಅಂತಹ ವಿಷ್ಣುವು ಬ್ರಹ್ಮನ ಯಜ್ಞ ರಕ್ಷಣೆಗೆ ಕೈಯಲ್ಲಿ ಬಿಲ್ಲು ಬಾಣ ಹಿಡಿದು ನಿಂತುಕೊಂಡು ಎಲ್ಲ ಕಡೆಗೂ ದಿಟ್ಟಿಸಿ, ಪರಿಪಾಲಿಸುತ್ತಿದ್ದನು.

ಇಂತಹ ದಿವ್ಯ ಯಜ್ಞದ ಪ್ರಾರಂಭದಲ್ಲಿ ಬ್ರಹ್ಮದೇವರು ಭೃಗು ಮೊದಲಾದ ಋತ್ವಿಜರನ್ನು ವರಣ ಮಾಡಿ ಆಯ್ಕೆಗೈದು ಅವರಿಂದ ಹೋಮಕಾರ್ಯ ಪ್ರಾರಂಭಿಸಿದರು.

ನ್ಯಾಯ, ವ್ಯಾಕರಣ, ಮೀಮಾಂಸಾ, ಇತಿಹಾಸ, ಪುರಾಣಗಳಲ್ಲಿ ಪರಿಣತರಾದ ವಿದ್ವಾಂಸರು ಅಲ್ಲಿ ಶಾಸ್ತ್ರೀಯ ವಿಷಯಗಳನ್ನು ಚರ್ಚಿಸುತ್ತಿದ್ದರು. ಋಗ್ವೇದಾದಿ ಎಲ್ಲ ವೇದ ಹಾಗೂ ಶಿಕ್ಷಾಕಲ್ಪಾದಿ ವೇದಾಂಗಗಳು, ಆಯುರ್ವೇದಾದಿ ಉಪವೇದಗಳು ಮೂರ್ತಿಮಂತಾಗಿ ಬಂದು ಬ್ರಹ್ಮನನ್ನು ಸೇವಿಸುತ್ತಿದ್ದವು. ನವಗ್ರಹಗಳು, ದೇವಮಾತೆಯರು, ಅಪ್ಸರೆಯರು, ಕ್ಷಣ ಮುಹೂರ್ತ, ಹಗಲು, ರಾತ್ರಿ, ಮಾಸ, ಋತು, ವರ್ಷ, ಯುಗ ಮುಂತಾದ ಕಲಾಭಿಮಾನಿಗಳು ವಿಪ್ರಚಿತ್ತಿ ಮುಂತಾದ ದೈತ್ಯರು, ವಾತಾಪಿ, ಶಂಬರ ಮೊದಲಾದ ದಾನವರು ಆ ಬ್ರಹ್ಮನನ್ನು ಸೇವಿಸುತ್ತಿದ್ದರು. ಮತ್ತು 'ಈ ಯಜ್ಞದಲ್ಲಿ ನಾವು ಏನು ಮಾಡಬೇಕು ?' ಎಂದು ಕೇಳಿ, ಅವನ ಅಪ್ಪಣೆ ಪಾಲಿಸಲು, ಉತ್ಸುಕರಾಗಿ ನಿಂತು ಕೊಂಡಿದ್ದರು. ಉತ್ಸಾಹದ ಭರದಲ್ಲಿ ಅವರು ದೇವತೆಗಳನ್ನು ಧಿಕ್ಕರಿಸಿ ಮಾತನಾಡತೊಡಗಿದರು.

**ದಾನವರು :-** ಪೂಜ್ಯನಾದ ''ಬ್ರಹ್ಮದೇವ, ನೀನು ನಮ್ಮನ್ನು ಸೃಷ್ಟಿಸಿದೆ. ನಮಗೆ ಮೂರು ಲೋಕಗಳ ಆಧಿಪತ್ಯ ದಯಪಾಲಿಸಿದೆ. ದೇವತೆಗಳಿಗಿಂತ ನಮ್ಮನ್ನು ಬಲಿಷ್ಠರನ್ನಾಗಿ ಮಾಡಿದ್ದಕ್ಕೆ ನಾವು ಕೃತಜ್ಞರಾಗಿದ್ದೇವೆ. ನಿನ್ನ ಯಜ್ಞದಲ್ಲಿ ನಮ್ಮಿಂದ ನಿನಗೇನು ಸಹಾಯ ಬೇಕು ? ನೀನು ಯಾವ ಕೆಲಸವನ್ನು ಹೇಳಿದರೂ ಮಾಡಲು ನಾವು ಸಮರ್ಥರಿದ್ದೇವೆ. ಅದಿತಿಯ ಮಕ್ಕಳಾದ ಈ ದೇವತೆಗಳ ಕೈಯಿಂದ ಏನಾಗುತ್ತದೆ ! ಯಾವಾಗಲೂ ಸೋಲುವುದೇ ಇವರಿಗೆ ಶೀಲವಾಗಿದೆ. ದೈವವು ಇವರಿಗೆ ವಿರುದ್ಧ ನಿಂತಿರುತ್ತದೆ. ಈಗ ನಿನ್ನ ಯಜ್ಞವು ನಡೆದಿದ್ದರಿಂದ ನಾವು ಸುಮ್ಮನಿದ್ದೇವೆ. ಈ ಕಾರ್ಯ ಮುಗಿದ ಕೂಡಲೇ ನಾವು ಮತ್ತೇ ದೇವತೆಗಳೊಡನೆ ಐಶ್ವರ್ಯಕ್ಕಾಗಿ ಹೋರಾಡುತ್ತೇವೆ. ಆದರೆ ನಿನ್ನ ಕಾರ್ಯಕ್ಕೆ ಆತಂಕವಾಗಬಾರದೆಂದು ಸುಮ್ಮನೆ ಕುಳಿತು ಎಲ್ಲವನ್ನು ನೋಡುತ್ತಿದ್ದೇವೆ. ದೈತ್ಯರು ದರ್ಪಾಂಧರಾಗಿ ಆಡಿದ ಆ ಮಾತುಗಳನ್ನು ಕೇಳಿ, ಶ್ರೀ ವಿಷ್ಣುವು ಇಂದ್ರನನ್ನು ಕರೆದುಕೊಂಡು ರಾಕ್ಷಸರಿಲ್ಲದಾಗ ಬ್ರಹ್ಮದೇವನ ಬಳಿಗೆ ಹೋದನು ಮತ್ತು ನುಡಿದನು.

''ಈ ಪಿತಾಮಹನ ಯಜ್ಞಕ್ಕೆ ದಾನವ ಧುರೀಣರು ಬಂದಿರುವರಷ್ಟೇ. ಅವರೆಲ್ಲರನ್ನು ಬ್ರಹ್ಮನೇ ಆಹ್ವಾನಿಸಿದ್ದಾನೆ. ಅವರು ಈ ಯಜ್ಞಕ್ಕೆ ವಿಘ್ನವನ್ನು ಒಡ್ಡಲು ಪ್ರಯತ್ನಿಸುವರು. ಯಜ್ಞಮುಗಿಯುವವರೆಗೆ ಅವರು ಏನು ಮಾಡಿದರೂ ನಾವು ಕ್ಷಮಿಸಬೇಕು. ಯಜ್ಞ ಸಮಾಪ್ತವಾದ ಬಳಿಕ ದೇವತೆಗಳೆಲ್ಲರೂ ದೈತ್ಯರೊಡನೆ ಯುದ್ಧ ಮಾಡಬೇಕು. ದುಷ್ಟ ದಾನವರು ಈ ಧರಣೀತಲದಲ್ಲಿ ಎಲ್ಲರೂ ಅಳಿಯುವಂತೆ ಮಾಡುವುದು ನಮ್ಮ ಕರ್ತವ್ಯವಾಗಿದೆ. ''ನಮ್ಮ'' ಎಂಬ ಬಹುವಚನಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರ ಎಂದು ಅರ್ಥ. ಇಂದ್ರಾದಿ ದೇವತೆಗಳಿಗೆ ಜಯವನ್ನು ತಂದು ಕೊಡಲಿಕ್ಕಾಗಿ ನಾವು ತ್ರಿಮೂರ್ತಿಗಳು ಪ್ರಯತ್ನ ಶೀಲರಾಗುವುದು ಅತ್ಯವಶ್ಯವಿದೆ. ಬ್ರಾಹ್ಮಣರಿಗೆ ಭೋಜನ ಬಡಿಸಲು, ದೇವತೆಗಳನ್ನು ನೇಮಿಸಿದ್ದೇವೆ. ದಾನವರ ಧನವನ್ನೆಲ್ಲ ತೆಗೆದುಕೊಂಡು ಯಜ್ಞಮಾಡೋಣ. ಆ ಹಣವನ್ನು ದುಃಖ ದಾರಿದ್ರ್ಯಗಳಿಂದ ಬಳಲುವ ಜ್ಞಾನಿಗಳಿಗೂ ಯಾಂತ್ರಿಕರಿಗೂ ಕೊಟ್ಟು ವೆಚ್ಚಮಾಡೋಣ.'' ಹೀಗೆ ಮಾತನಾಡುವ ಹರಿಯ ಆದೇಶದಂತೆ ಬ್ರಹ್ಮದೇವರು ದಾನವರನ್ನು ಕರೆಸಿ ಅವರಿಗೆ ಹೇಳಿದನು. ''ನೀವು ದೇವತೆಗಳೊಡನೆ ಇಲ್ಲಿ ಸ್ನೇಹದಿಂದಿರಬೇಕು. ದ್ವೇಷ, ಕಲಹ ಮಾಡಕೂಡದು. ನೀವಿಬ್ಬರೂ ಸ್ನೇಹದಿಂದ ಹೊಂದಿಕೊಂಡು ನಮ್ಮ ಈ ಪುಣ್ಯ ಕಾರ್ಯದಲ್ಲಿ ಸಹಕರಿಸಬೇಕು.''

**ದಾನವರು :-** ಪಿತಾಮಹನೆ, ನಾವು ನಿನ್ನ ಅಪ್ಪಣೆಯನ್ನು ಅಕ್ಷರಶಃ ಪಾಲಿಸುತ್ತೇವೆ. ದೇವತೆಗಳು ಕೂಡ ನಮ್ಮ ಸಹೋದರರು ಅಲ್ಲವೆ ? ಅಂದ ಬಳಿಕ ನಮ್ಮಿಂದ ಅವರಿಗೇಕೆ ಭಯ ? ಅವರು ಕಿಂಚಿತ್ತಾದರೂ ಹೆದರುವ ಕಾರಣವಿಲ್ಲ. ದಾನವರ ಈ ಮಾತನ್ನು ಕೇಳಿ, ಬ್ರಹ್ಮದೇವನಿಗೆ ಸಂತೋಷವಾಯಿತು. ಹೀಗೆ ಬ್ರಹ್ಮದೇವರು ಸಂತೋಷದಲ್ಲಿ ನೆಮ್ಮದಿಯಿಂದ ನಿಂತುಕೊಂಡಾಗಲೆ, ಒಂದು ಕೋಟಿ ಋಷಿಗಳು ಬ್ರಹ್ಮದೇವರ ಈ ಯಜ್ಞ ಕಾರ್ಯವನ್ನು ನೋಡಿ ಧನ್ಯರಾಗಬೇಕೆಂದು ಅಲ್ಲಿಗೆ ಬಂದರು. ಆಗಮಿಸಿದ ಅತಿಥಿಗಳ ಪೂಜೆಯನ್ನು ಕೇಶವನು ತಾನೇ ನಿಂತು ಮಾಡಿದನು. ಶಂಭುವು ಅವರಿಗೆ ಕುಳಿತುಕೊಳ್ಳಲು ಆಸನಗಳನ್ನು ಇತ್ತನು. ವಶಿಷ್ಠರು ಬ್ರಹ್ಮದೇವರ ಪ್ರೇರಣೆಯಿಂದ ಆ ಋಷಿಗಳನ್ನೆಲ್ಲ ಅರ್ಘ್ಯಪಾದಾದ್ಯಗಳನ್ನಿತ್ತು ಕುಶಲಪ್ರಶ್ನೆಮಾಡಿದನು. ಮತ್ತು ಆ ಎಲ್ಲ ಋಷಿಗಳಿಗೆ ಒಂದೊಂದು ಗೋದಾನನೀಡಿ, ಪುಷ್ಕರಕ್ಷೇತ್ರದಲ್ಲಿ ಅವರಿಗೆಲ್ಲ ಉಳಿದುಕೊಳ್ಳಲು ಸ್ಥಾನವನ್ನು ಕೊಟ್ಟು, 'ಇಲ್ಲಿಯೇ ನೀವು ಇರಬೇಕು' ಎಂದು ಹೇಳಿದರು. ಅನಂತರ ಜಡೆ ಮತ್ತು ಕೃಷ್ಣಾಜಿನಗಳನ್ನು ಧರಿಸಿದ ಆ ಎಲ್ಲ ಋಷಿಗಳು ಗಂಗಾತೀರದಲ್ಲಿ ದೇವತೆಗಳು ಕುಳಿತುಕೊಳ್ಳುವಂತೆ ಆ ಬ್ರಹ್ಮಸಭೆಯಲ್ಲಿ ಆಸೀನರಾದರು.

ಅವರೆಲ್ಲರೂ ವಿರಕ್ತರಾದ ಋಷಿಗಳಾಗಿದ್ದರೂ ನೋಡಲು ವಿರೂಪಿಗಳಾಗಿದ್ದರು. ತಲೆ ಬೋಳಿಸಿಕೊಂಡ, ಕಾವಿ ಬಟ್ಟೆ ಉಟ್ಟ, ಆ ಋಷಿಗಳ ಮುಖದಲ್ಲಿ ಉದ್ದುದ್ದ ಮೀಸೆ. ಅಲ್ಲೊಂದು ಇಲ್ಲೊಂದು ಹಲ್ಲು, ಉದ್ದ ಕಿವಿ, ಹರಕ ಕಿವಿ, ಸಣ್ಣ ಹಣೆ, ಒಳನಟ್ಟ ಕಣ್ಣು, ಜೋಲಾಡುವ ಹೊಟ್ಟೆ, ಎಲುವಿನ ಹಂದರದಂತಿರುವ ದೇಹ ಹೀಗೆ ಒಬ್ಬರಿಗಿಂತ ಒಬ್ಬರು ಕಾಯದಿಂದ ಕುರೂಪಿಗಳಾಗಿದ್ದರು. ಆದರೆ ಅವರ ಯೋಗ್ಯತೆ ದೊಡ್ಡದಿತ್ತು. ಅವರೆಲ್ಲರೂ ವಿರಕ್ತರು. ಶಿಲೇಂಛ ವೃತ್ತಿಯವರು. ಅವರು ಬೆಂಕಿಯಲ್ಲಿ ಬೇಯಿಸಿದ್ದನ್ನು ಉಣ್ಣುತ್ತಿದ್ದಿಲ್ಲ. ಒರಳಿಗೆ ಹಚ್ಚಿದ್ದನ್ನು ತಿನ್ನುತ್ತಿದ್ದಿಲ್ಲ. ಅವರ ಯಮ ನಿಯಮಗಳು ಕಠಿಣತರವಾಗಿದ್ದವು. (ವಾಲಖಿಲ್ಯರೆ ಮೊದಲಾದ ಮಹಾನುಭಾವರಾದ ಆ ವಿರೂಪಿ ಮಹರ್ಷಿಗಳು) ಬ್ರಹ್ಮದೇವರ ಯಜ್ಞದ ಸಲುವಾಗಿ ಈ ಪುಷ್ಕರ ಕ್ಷೇತ್ರಕ್ಕೆ ಆಗಮಿಸಿದ್ದರು.

ಬ್ರಹ್ಮದೇವರು ಅವರಿಗಾಗಿ ಉಳಿದುಕೊಳ್ಳಲು ಕೊಟ್ಟ ನಿವೇಶನದಲ್ಲಿ ನೆಲೆಸಿದ್ದರು. ಪುಷ್ಕರ ತೀರ್ಥದ ಮಹಾಪ್ರಭಾವವನ್ನು ಕಂಡು ಅವರಿಗೂ ಈ ದಿವ್ಯ ತೀರ್ಥವನ್ನು ಬಿಟ್ಟು ಹೋಗಬಾರದು ಎನಿಸಿತು. ಆ ತೀರ್ಥದ ಮೇಲಿನ ಲೋಭದಿಂದ ಹಾಗೂ ಬ್ರಹ್ಮದೇವರ ಅಪ್ಪಣೆಯಿಂದಲೂ ಅವರು ಅಲ್ಲಿಯೇ ಉಳಿದರು. ಸ್ನಾನಕ್ಕೆಂದು ತೀರ್ಥಕ್ಕೆ ಹೋದರು. ತೀರದಲ್ಲಿ ನಿಂತು ಆ ಪವಿತ್ರ ತೀರ್ಥವನ್ನು ಕಣ್ತುಂಬ ನೋಡಿದರು. ದರ್ಶನ ತೆಗೆದುಕೊಂಡು ಅವರು ನೀರಿನ ಬಳಿಗೆ ಬಂದರು. ಆ ನೀರಿನಲ್ಲಿ ಬಗ್ಗಿದಾಗ ಅವರಿಗೊಂದು ಪ್ರತಿಬಿಂಬವು ಅತ್ಯಂತ ಸುಂದರವು ಆಗಿತ್ತು. ತಮ್ಮ ಪಡಿನೆಳಲು ಇಷ್ಟೊಂದು ಚೆಂದವಾಗಿದ್ದನ್ನು ಕಂಡು ಅಚ್ಚರಿಪಟ್ಟರು. ಮುಖ ಮೇಲೆತ್ತಿ ತಮ್ಮೊಡನೆ ಬಂದ ತಮ್ಮ ಸ್ನೇಹಿತರನ್ನು ನೋಡಿದರು. ಅವರೆಲ್ಲ ಸುರೂಪಿಗಳಾಗಿ ಕಂಗೊಳಿಸುತ್ತಿದ್ದರು.

ಪರಸ್ಪರ ಪರೀಕ್ಷಿಸಿ ನೋಡಿಕೊಂಡಾಗ ಪ್ರತಿಯೊಬ್ಬನು ಸುಂದರ, ದಿವ್ಯ ದೇಹದಿಂದ ಕಂಗೊಳಿಸುತ್ತಿದ್ದನು. ಇದೆಲ್ಲವೂ ಈ ತೀರ್ಥದ ಮಹಿಮೆಯೆಂಬುದು ಖಚಿತವಾಯಿತು. ಆ ತೀರ್ಥ ದರ್ಶನದಿಂದಲೇ ಅಪೂರ್ವ ಸೌಂದರ್ಯ ಬರುವದೆಂದು ತಿಳಿದು ಅವರಿಗೆ

ಆನಂದ ಆಶ್ಚರ್ಯಗಳು ಏಕಕಾಲಕ್ಕೆ ಆದವು. ಆಗ ಆ ತಪಸ್ವಿಗಳು ಆ ತೀರ್ಥಕ್ಕೆ **ಮುಖದರ್ಶನತೀರ್ಥ** ಎಂದು ಹೆಸರಿಟ್ಟರು. ಅನಂತರ ಅವರೆಲ್ಲರೂ ಅಲ್ಲಿ ಸ್ನಾನ ಮಾಡಿ, ದೇವರನ್ನು ಆರಾಧಿಸಿದರು. ಆ ಎಲ್ಲ ಮುನಿಜನರು ದೇವಪುತ್ರರಂತೆ ದಿವ್ಯವಾದ ದೇಹಕಾಂತಿಯಿಂದ ಅನುಪಮ ಗುಣದಿಂದ ಹೊಳೆಹೊಳೆದರು. ಆ ಎಲ್ಲ ಮಹರ್ಷಿಗಳು ಅಗ್ನಿಹೋತ್ರಾದಿ ತಮ್ಮ ವೈದಿಕ ವಿಧಿ-ವಿಧಾನಗಳನ್ನು ಮಾಡುತ್ತ ತಪಸ್ಸನ್ನಾಚರಿಸುತ್ತ ಅಲ್ಲಿಯೇ ನೆಲೆಸಿದರು. ನಾವು ಈ ಸ್ಥಳವನ್ನು ಬಿಟ್ಟು ಹೋಗುವುದೇ ಬೇಡವೆಂದು ಆ ತೀರ್ಥಕ್ಕೆ ''ಶ್ರೇಷ್ಠಪುಷ್ಕರತೀರ್ಥ'' ಎಂದು ಹೆಸರಿಸಿದರು. ಅಲ್ಲಿದ್ದ ದ್ವಿಜರಿಗೆ ಬಗೆ ಬಗೆಯ ಪಾತ್ರೆಗಳನ್ನು ದಾನಕೊಟ್ಟು, ದಕ್ಷಿಣೆಯಿತ್ತು ಅವರು ಪೂರ್ವವಾಹಿನಿಯಾದ ಸರಸ್ವತಿ ತೀರಕ್ಕೆ ಸ್ನಾನಕ್ಕಾಗಿ ಹೊರಟರು. ತೀರ್ಥಗಳಲ್ಲಿ ಶ್ರೇಷ್ಠವಾದ ಸರಸ್ವತಿ ನದಿಯು ಬಗೆಬಗೆಯ ಭಕ್ತರಿಂದ, ಹಕ್ಕಿಗಳಿಂದ ಶೋಭಿಸುತ್ತಿತ್ತು. ಸುಪ್ರಭಾ, ಕಾಂಚನಿ, ಪ್ರಾಚಿ, ನಂದಾ, ವಿಶಾಲಿಕಾ ಎಂಬ ಐದು ನದಿಗಳು ಸರಸ್ವತಿಯಂತೆ ಆ ಪುಷ್ಕರಕ್ಷೇತ್ರದಲ್ಲಿ ಹರಿಯುತ್ತವೆ. ಆ ಎಲ್ಲ ತೀರ್ಥಗಳಲ್ಲಿಯೂ ಋಷಿಗಳು ಮಿಂದು ಬಂದರು. ಹೀಗೆ ಜ್ಞಾನಿಗಳೆಲ್ಲರೂ ಸ್ನಾನಮಾಡಿಕೊಂಡು ಯಜ್ಞ ಮಂಟಪಕ್ಕೆ ಬಂದರು. ಬ್ರಹ್ಮದೇವರು ದೀಕ್ಷಾಬದ್ಧರಾಗಿ ಯಜ್ಞಕಾರ್ಯವನ್ನು ನೆರವೇರಿಸಿದರು. ದೇವಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಬ್ರಾಹ್ಮಣರು ವೇದಮಂತ್ರಗಳನ್ನು ಪಠಿಸಿದರು. ಮಿಕ್ಕವರು ನಾನಾ ವಿಧದ ವಾದ್ಯಗಳನ್ನು ಬಾರಿಸಿದರು. ಆ ಯಜ್ಞವು ಸರ್ವಾಂಗ ಪರಿಪೂರ್ಣವಾಯಿತು. ಆ ಪುಷ್ಕರ ಕ್ಷೇತ್ರದಲ್ಲಿ ಬ್ರಹ್ಮದೇವರ ಯಜ್ಞವು ಸಾಂಗವಾಗಿದ್ದನ್ನು ಕಂಡು ಎಲ್ಲ ನದಿಗಳು ಅಲ್ಲಿ ಹರಿದು ಆ ಕ್ಷೇತ್ರವನ್ನೆಲ್ಲ ತನ್ನ ನಾನಾ ಉಪನದಿಗಳಿಂದ ತೊಳೆದು ತೀರ್ಥಗೈಯುವ ಸರಸ್ವತಿ ನದಿಯನ್ನು ಕುರಿತು ಹೀಗೆ ನುಡಿದರು -

''ಸುಪ್ರಭೆಯೆ, ನೀನು ವೇಗವತ್ತರವಾದ ಪ್ರವಾಹದಿಂದ ಹರಿದು, ನಮಗೆಲ್ಲರಿಗೂ ಪ್ರೀತಿಯನ್ನುಂಟುಮಾಡುವೆ. ಬ್ರಹ್ಮದೇವರನ್ನು ಗೌರವಿಸಿರುವಿರಿ. ಸುಪ್ರಭೆಯೆಂದು ಕರೆಯುತ್ತಿರುವ ನಿನಗೆ ''ಸರಸ್ವತಿ'' ಎಂದು ಹೆಸರಾಗಲಿ'' ಎಂದು ನುಡಿದು ಸರಸ್ವತೀ ನದಿಯನ್ನು, ಯಜ್ಞವನ್ನು ಗೌರವಿಸಿದರು. ಹೀಗೆ ಬ್ರಹ್ಮಜ್ಞಾನಿಗಳ ಪ್ರೀತಿಗಾಗಿ ಬ್ರಹ್ಮದೇವರ ಯಜ್ಞಕ್ಕಾಗಿ ನದಿ ಶ್ರೇಷ್ಠಳಾದ ಸರಸ್ವತಿಯು ಪುಷ್ಕರ ಕ್ಷೇತ್ರದಲ್ಲಿ ಮೈದಾಳಿದಳು. ಐದು ಕವಲುಗಳಾಗಿ ಹರಿದು ಅವೇ ಐದು ಉಪನದಿಗಳಿಂದ ಪುಷ್ಕರ ಕ್ಷೇತ್ರದ ಪರಿಸರವನ್ನು ಪುಣ್ಯಮಯವನ್ನಾಗಿ ಮಾಡುವ ಆ ಸರಸ್ವತೀ ನದಿಯನ್ನು ಎಲ್ಲ ಋಷಿಮುನಿಗಳೂ ಪೂಜಿಸಿದರು. ಅವಳ ತೀರದಲ್ಲಿ ನಿಂತು, ತಮ್ಮ ಅಧ್ಯಯನ ಅಧ್ಯಾಪನಾದಿ ಕಾರ್ಯನಡೆಸಿದರು. ಹೀಗೆ ಪುಷ್ಕರಕ್ಷೇತ್ರದಲ್ಲಿ ಎಲ್ಲ ಋಷಿಗಳಿಂದ ಧ್ಯಾನಮಾಡಲ್ಪಟ್ಟ ಆ ಸರಸ್ವತಿಯು ಮುಂದೆ ಪೂರ್ವದಿಕ್ಕಿಗೆ ಹರಿದು ಕೆಲವು ಅಂತರ ಕ್ರಮಿಸಿದ ಬಳಿಕ ಮಹಾನದಿಯಾಗಿ ಮುನಿವೃಂದ ವಂದಿತವಾಯಿತು.

ಪೂರ್ವಕಾಲದಲ್ಲಿ ಮುಕಣಕ ಎಂಬ ಬ್ರಾಹ್ಮಣನು ಇದ್ದನು. ಒಂದು ದಿನ ಅವನಿಗೆ ದರ್ಭೆ ಮೊನೆಯು ಕೈಗೆ ಚುಚ್ಚಿ ಗಾಯವಾಯಿತು. ಗಾಯವಾದ ಕೈಯಿಂದ ಶಾಕರಸವು ಸುರಿಯಿತು. ಅದನ್ನು ಕಂಡು ಮಹದಾನಂದದಿಂದ ಕುಣಿದಾಡಿದನು. ಆಗ ಆಶ್ರಮದ ಸುತ್ತಲಿದ್ದ ಸ್ಥಾವರ ಜಂಗಮ ವಸ್ತುಗಳೂ ಕುಣಿಯತೊಡಗಿದವು. ಚರಾಚರವಸ್ತುಗಳ

ಈ ಕುಣಿತ ಕಂಡು ಎಲ್ಲ ದೇವತೆಗಳು ಈ ಮುಕಣಕನ ತಾಂಡವವನ್ನು ನಿಲ್ಲಿಸುವಂತೆ ಮಧುಸೂದನನಿಗೆ ಮೊರೆಯಿಟ್ಟರು. ಆಗ ಬ್ರಹ್ಮನು ರುದ್ರನನ್ನು ಕರೆದು ''ಮಹೇಶ, ಈ ಮುಕಣಕ ಕುಣಿಯದಂತೆ ಮಾಡು'' ಎಂದು ಹೇಳಿದಾಗ ಮಹೇಶನು ಹರ್ಷೋದ್ರೇಕದಿಂದ ನಗೆಯ ನಾಟ್ಯ ವಾಡುತ್ತಿದ್ದ ಮುಕಣನ ಬಳಿಗೆ ಬಂದು, ವಿಪ್ರೋತ್ತಮಾ ನೀನು ಹೀಗೇಕೆ ಕುಣಿಯುವೆ, ನೀನು ಕುಣಿದರೆ ವಿಶ್ವವೆಲ್ಲವೂ ಕುಣಿವುದು. ಆದುದರಿಂದ ಸಾಕು ನಿಲ್ಲಿಸು ಈ ನಿನ್ನ ಕುಣಿತವನ್ನು - ಎಂದು ಹೇಳಿದನು.

**ಮುಕಣ :-** ಶಿವದೇವನೆ, ನಿನಗೆ ಕಣ್ಣು ಕಾಣುವುದಿಲ್ಲವೆ ? ದರ್ಭವಿದ್ದವಾದ ನನ್ನ ಕರತಲದಿಂದ ತರಕಾರಿಯ ರಸವೇ ಸುರಿದು ಹರಿಯುತ್ತಿದೆ. ನನ್ನ ಈ ತಪಃ ಪ್ರಭಾವ ಕಂಡು ನನಗೆ ಹಿಗ್ಗಾಗಿದೆ. ಅದಕ್ಕಾಗಿ ನನ್ನ ಈ ನಲ್ಲುಣಿತ, ನನ್ನ ತಪಸ್ಸಿದ್ಧಿಗೆ ಇದಕ್ಕಿಂತ ಬೇರೆ ನಿದರ್ಶನ ಬೇಕೆ ? ಇದನ್ನು ಕೇಳಿ ಪರಮೇಶ್ವರನು ಬಿದ್ದುಬಿದ್ದು ನಕ್ಕನು. ರಾಗಮೋಹಿತನಾದ ಆ ಮುಕಣಕ ಮುನಿಯನ್ನು ಕುರಿತು ಮಹಾದೇವನು ನುಡಿದನು -

**ಶಿವ :-** ಬ್ರಾಹ್ಮಣನೆ, ''ಕೈಯಿಂದ ಶಾಕರಸವು ಸುರಿದರೆ ನನಗೇನು ಅಷ್ಟು ಆಶ್ಚರ್ಯವಾಗುವದಿಲ್ಲ. ತುಸು ನನ್ನ ಕಡೆಗೆ ನೋಡು.'' ಶಿವನ ಈ ಮಾತನ್ನು ಕೇಳಿ ಮುಕಣಕನು ''ನನ್ನ ಕುಣಿತವನ್ನು ತಡೆಯುವ ಈ ಧೈರ್ಯಶಾಲಿಯು ಯಾರಿಗಿರಬಹುದು ?'' ಎಂಬ ಕೌತುಕದಿಂದ ಶಿವನ ಕಡೆಗೆ ನೋಡಿದನು. ಆಗ ಆ ವಿರೂಪಾಕ್ಷನು ತನ್ನ ಒಂದು ಬೆರಳಿನಿಂದ ತನ್ನ ಕೈಯ ಹಿರಿ ಬೆರಳನ್ನು ಹೊಡೆದನು. ಕೂಡಲೇ ಆ ಹೊಡೆದ ಬೆರಳಿನಿಂದ ಭಸ್ಮ ಉದುರತೊಡಗಿತು. ಅದು ಹಿಮದಂತೆ ಶುಭ್ರವಾಗಿದ್ದಿತು. ಇದನ್ನು ನೋಡಿ ಮುಕಣಕನಿಗೆ ನಾಚಿಕೆ ಎನಿಸಿತು. ತನ್ನ ಅಲ್ಪತನಕ್ಕಾಗಿ ಹಾಗೂ ಗರ್ವಾಂಧತೆಗಾಗಿ ವಿಷಾದವೆನಿಸಿತು. ಅವನು ಶಿವನ ಎರಡೂ ಪಾದಗಳನ್ನು ಗಟ್ಟಿಯಾಗಿ ಹಿಡಿದನು. ಇಂತಹ ಅದ್ಭುತ ಪ್ರಭಾವ ಶಾಲಿಯಾದ ಈ ಮನುಷ್ಯನು ಸಾಕ್ಷಾತ್ ಪರಮೇಶ್ವರನೇ ಆಗಿರಬೇಕೆಂದು ಅವನಿಗೆ ನಿಶ್ಚಯ ಆಯಿತು. ಅವನು ಮಹಾದೇವರನ್ನು ಭಕ್ತಿಭಾವಭರಿತನಾಗಿ ಸ್ತೋತ್ರಮಾಡಿದನು. ರುದ್ರನಿಗಿಂತ ಶ್ರೇಷ್ಠರಾದ ದೇವರು ಯಾರೂ ಇಲ್ಲವೆಂದು ನಾನು ತಿಳಿದಿದ್ದೇನೆ. ಶೂಲಪಾಣಿಯೇ, ಪರಾತ್ಪರ ಮಹಾದೇವ ಎನಿಸಿದ ನೀನು ಈ ಚರಾಚರ ಜಗತ್ತಿಗೆಲ್ಲ ಏಕಮಾತ್ರ ಆಧಾರನಾಗಿರುವೆ.

ಸ್ಥಾವರ ಜಂಗಮ ರೂಪಾತ್ಮನಾದ ರುದ್ರದೇವನೇ, ಈ ವಿಶ್ವಕ್ಕೆಲ್ಲ ನೀನೇ ಗತಿಯು. ಈ ಸಮಸ್ತ ಲೋಕವೆಲ್ಲವೂ ನಿನ್ನಿಂದಲೇ ಉದ್ಭೂತವಾಗಿದೆಯೆಂದು ಅನುಭವಿಕರು ಅಭಿಪ್ರಾಯಪಡುತ್ತಾರೆ. ಯುಗಾವಸಾನದಲ್ಲಿ ಪ್ರಪಂಚವೆಲ್ಲವೂ ನಿನ್ನನ್ನೇ ಹೊಂದುತ್ತದೆ. ದೇವಾನುದೇವತೆಗಳೂ ಸಹ ನಿನ್ನ ಮಹಿಮೆಯನ್ನು ತಿಳಿಯಲಾರರು. ಇನ್ನು ನನ್ನಿಂದ ಸಾಧ್ಯವೆ? ನಿನ್ನ ಪರಮಾನುಗ್ರಹದಿಂದಲೇ ದೇವತೆಗಳೆಲ್ಲರೂ ಯಾರಿಂದಲೂ ಭಯ ಭ್ರಾಂತರಾಗದೇ ಇದ್ದಾರೆ. ಈ ರೀತಿ ಮಹಾದೇವನನ್ನು ನಮಸ್ಕರಿಸಿ, ಸ್ತುತಿಸುತ್ತ ಭಗವನ್, 'ನಿನ್ನ ಪ್ರಸಾದದಿಂದ ನನ್ನ ತಪಸ್ಸು ನಾಶವಾಗದಂತೆ ಮಾಡು' ಎಂದು ಬೇಡಿಕೊಂಡನು. ಅನಂತರ ಪ್ರೀತನಾದ ಆ ಪರಮೇಶ್ವರನು ಬ್ರಾಹ್ಮಣನನ್ನು ಕುರಿತು ನುಡಿದನು.

**ರುದ್ರ :-** ಬ್ರಾಹ್ಮಣ, ನಿನ್ನ ತಪಸ್ಸು ಅಭಿವೃದ್ಧಿಯಾಗಲಿ. ನಿನ್ನ ಮೇಲಿನ ನನ್ನ ಪ್ರಸಾದವು ಸಾವಿರ ಮಡಿಯಾಗಿ ಬೆಳೆದು ನಿನ್ನನ್ನು ಅನುಗ್ರಹಿಸುವುದು. ನಾನೂ ನಿನ್ನೊಡನೆ

ಪೂರ್ವವಾಹಿನಿಯಾದ ಸರಸ್ವತಿ ನದಿಯಲ್ಲಿ ವಾಸಮಾಡುತ್ತೇನೆ. ಈ ಪುಷ್ಕರಕ್ಷೇತ್ರದಲ್ಲಿ ಹರಿಯುವ ಸರಸ್ವತೀ ನದಿಯು ಅತ್ಯಂತ ಪುಣ್ಯಕರವಾಗಿದೆ. ಇಲ್ಲಿ ಸ್ನಾನ ಮಾಡಿದವನಿಗೆ ಯಾವುದೂ ದುರ್ಲಭ್ಯವಿಲ್ಲ. ಹೀಗೆ ಸರಸ್ವತಿ ಎಂಬ ಪುಣ್ಯ ಪಯಶ್ವಿನಿಯು ಪೂರ್ವ ದಿಗ್ವಾಹಿನಿಯಾಗಿ ಹೇಗೆ ಹರಿಯುವಳೆಂಬುದನ್ನು ಹೇಳುತ್ತೇನೆ ಕೇಳು - ಪೂರ್ವ ಕಾಲದಲ್ಲಿ ಇಂದ್ರನೆ ಮೊದಲಾದ ದೇವತೆಗಳು ಬಂದು ಸರಸ್ವತಿ ನದಿಗೆ ಹೇಳಿದರಂತೆ -

**ದೇವತೆಗಳು :-** ನದೀ ಶ್ರೇಷ್ಠಳೆ, ನೀನು ದೇವತೆಗಳಿಗೆ ತಾಯಿ ಇದ್ದಂತೆ. ನೀನು ನಮಗೆಲ್ಲರಿಗೂ ಅಭಯದಾನಮಾಡಬೇಕು. ದೇವತೆಗಳ ಹಿತಕ್ಕಾಗಿ ನೀನು ಈಗ ಪಶ್ಚಿಮ ಸಮುದ್ರಕ್ಕೆ ಪ್ರಯಾಣ ಬೆಳೆಸು. ಈ ವಡವಾಗ್ನಿ ತೆಗೆದುಕೊಂಡು ಹೋಗಿ ಸಮುದ್ರದಲ್ಲಿ ಬಿಟ್ಟುಬಿಡು. ಅದರಿಂದ ಎಲ್ಲ ದೇವತೆಗಳ ಭಯ ಅಪಾಯಗಳು ದೂರವಾಗುವವು. ಇಲ್ಲದಿದ್ದರೆ ಈ ವಾಡವವಹ್ನಿಯು ತನ್ನ ಉಲ್ಬಣವಾದ ತೇಜಸ್ಸಿನಿಂದ ಎಲ್ಲರನ್ನು ಸುಟ್ಟುಬಿಡುವುದು. ಆದುದರಿಂದ ಈಗ ಒದಗಿದ ಮಹಾಭಯದಿಂದ ಎಲ್ಲ ದೇವತೆಗಳನ್ನು ನೀನು ರಕ್ಷಿಸು. ಹೀಗೆ ಸರ್ವಸಮರ್ಥನಾದ ವಿಷ್ಣು ಹಾಗೂ ದೇವತೆಗಳು ಸರಸ್ವತಿಯನ್ನು ಕೇಳಿಕೊಂಡರು. ಅದಕ್ಕೆ ಸರಸ್ವತಿಯು ಉತ್ತರ ಕೊಟ್ಟಳು.

**ಸರಸ್ವತಿ :-** ದೇವತೆಗಳೆ, ''ನಾನು ಸ್ವತಂತ್ರಳಲ್ಲ. ನಮ್ಮ ತಂದೆಯನ್ನು ಕೇಳಿ ಕೊಳ್ಳಿರಿ. ನಾನು ಇನ್ನೂ ಕುಮಾರಿ. ತಂದೆಯ ಮಾತು ನಡೆಸುವದಷ್ಟೇ ನನ್ನ ಕೆಲಸ. ಪಿತ್ರಾಜ್ಞಾ ಪರಿಪಾಲನೆಯೇ ನನ್ನ ವ್ರತ. ಅವನ ಅಪ್ಪಣೆಯಿಲ್ಲದೆ ನಾನು ಒಂದು ಹೆಜ್ಜೆ ಕೂಡ ಇಡುವದಿಲ್ಲ. ಅದಕ್ಕಾಗಿ ಏನಾದರೂ ಬೇರೆ ಒಂದು ಉಪಾಯ ಚಿಂತಿಸಿರಿ.'' ಅವಳ ಈ ನುಡಿಯನ್ನು ಕೇಳಿ ದೇವತೆಗಳು ಬ್ರಹ್ಮದೇವನ ಬಳಿಗೆ ಬಂದು ನುಡಿದರು. ಬ್ರಹ್ಮನೆ, ಈ ವಡವಾಗ್ನಿಯನ್ನು ಒಯ್ಯುವದು ನಿನ್ನ ಮಗಳವಾದ ಸರಸ್ವತಿ ಒಬ್ಬಳನ್ನು ಬಿಟ್ಟು ಬೇರೆ ಯಾರಿಗೂ ಶಕ್ಯವಿಲ್ಲ. ಆ ನಿನ್ನ ಮಗಳಲ್ಲಿ ಯಾವ ದೋಷವೂ ಇರುವುದಿಲ್ಲ. ನಿರ್ದೋಷಳಾದ ಅವಳು ಈ ವಡವಾಗ್ನಿಯನ್ನು ಸಾಗರದಲ್ಲಿ ಎಸೆದು ಬರಬಲ್ಲಳು. ಆಗ ಪಿತಾಮಹನು ಸರಸ್ವತಿಯನ್ನು ಕರೆಕಳುಹಿಸಿದನು. ಪುತ್ರೀ ವಾತ್ಸಲ್ಯದಿಂದ ಅವಳನ್ನು ಕರೆದು, ತನ್ನತೊಡೆಯ ಮೇಲೆ ಕೂಡಿಸಿಕೊಂಡು, ತಲೆಯನ್ನು ಮೂಸುತ್ತ ಸ್ನೇಹದಿಂದ ನುಡಿದನು.

**ಬ್ರಹ್ಮ :-** ದೇವಿ, ನೀನು ನನ್ನನ್ನೂ ಉಳಿದೆಲ್ಲ ದೇವತೆಗಳನ್ನೂ ಈಗ ಕಾಪಾಡ ಬೇಕಾಗಿದೆ. ಈ ವಡವಾಗ್ನಿಯನ್ನು ಒಯ್ದು ಲವಣಸಮುದ್ರದಲ್ಲಿ ಬೀಸಾಡು. ಈ ಕಾರ್ಯದಲ್ಲಿ ನೀನು ಯಶಸ್ವಿಯಾಗುವೆ. ತಂದೆಯ ಮಾತನ್ನು ಕೇಳಿ ಸರಸ್ವತಿಯು ಅಗಲಿದ ಕುರಿಯಂತೆ ಅತ್ತಳು. ಕಂಬನಿದುಂಬಿದ ಅವಳ ಸುಂದರ ಮುಖವು ತುಂತುರು ತಳೆದ ತಾವರೆಯಂತೆ ತೋರಿತು. ಹೀಗೆ ಶೋಕಿಸುವ ಸುಂದರಿಯನ್ನು ಕಂಡ ಬ್ರಹ್ಮಾದಿ ಎಲ್ಲ ದೇವತೆಗಳಿಗೆ ದುಃಖ ಎನಿಸಿತು. ಬ್ರಹ್ಮದೇವರು ಅವಳಿಗೆ ಮನಸ್ಸನ್ನು ಗಟ್ಟಿಮಾಡಿಕೊಳ್ಳಲು ಹೇಳಿ, ಅವಳನ್ನು ಸಂತೈಸಿ ಸಮಾಧಾನ ಪಡಿಸಿ ನುಡಿದರು.

**ಪಿತಾಮಹ :-** ಮಗಳೆ, ನೀನು ಶೋಕಿಸಬೇಡ. ನಿನಗೆ ಯಾವ ಭಯವೂ ಇಲ್ಲ. ದೇವತೆಗಳ ಪ್ರಭಾವದಿಂದ ನಿನಗೆ ಯಾವ ಅಪಾಯವೂ ಆಗುವದಿಲ್ಲ. ದೇವಹಿತಾರ್ಥವಾಗಿ ಈ ಬೆಂಕಿಯನ್ನು ಉಡಿಯಲ್ಲಿ ಕಟ್ಟಿಕೊ, ಸಮುದ್ರದಲ್ಲಿ ಈ ಕೆಂಡದುಂಡೆಯನ್ನು ಒಯ್ದುಹಾಕು. ಬ್ರಹ್ಮದೇವರ ಈ ನಿರ್ದೇಶನವನ್ನು ಸರಸ್ವತಿಯು ಒಪ್ಪಿಕೊಂಡಳು.

ಕಂಗಳಿಂದ ಅಶ್ರುಬಿಂದುಗಳನ್ನು ಉದುರಿಸುತ್ತಲೇ ಅವಳು ಕಮಲ ಸಂಭವನಿಗೆ ನಮಿಸಿ, 'ನಾನು ಹೋಗುತ್ತೇನೆ' ಎಂದು ಹೇಳಿದಳು. ನೀನು ಹೆದರುವ ಕಾರಣವಿಲ್ಲ ಎಂದು ಎಲ್ಲ ದೇವತೆಗಳು ಆಶ್ವಾಸನವಿತ್ತರು. 'ಹೆದರಬೇಡ' ಎಂದು ಬ್ರಹ್ಮದೇವನೂ ಭರವಸೆ ನೀಡಿದನು. ಆಗ ಅವಳಿಗೆ ಅಪಾಯದ ಅಂಜಿಕೆ ತಪ್ಪಿತು. ಮನಸ್ಸು ಮುದಗೊಂಡಿತು. ಹೊರಡಲು ಸನ್ನದ್ಧಳಾದಳು ಆ ಬ್ರಹ್ಮಕುಮಾರಿ. ಅವಳ ಪ್ರಯಾಣ ಸಮಯದಲ್ಲಿ ಶಂಖಗಳು ಊದಲ್ಪಟ್ಟವು. ದುಂದುಭಿಗಳು ಮೊಳಗಿದವು. ಮಂಗಳಘೋಷಗಳು ದುಮುದುಮಿಸಿದವು. ಈ ಶುಭಕರವಾದ ಮಂಗಳ ಶಬ್ದದಿಂದ ಜಗತ್ತೆಲ್ಲವು ತುಂಬಿ ಕೊಂಡಿತು. ಸರಸ್ವತಿ ಹೊರಟಳು. ಶುಭ್ರವಸ್ತ್ರ, ಶ್ವೇತ ಚಂದನ ಧರಿಸಿದ ಅವಳು ಕೊರಳಲ್ಲಿ ಹಾಕಿಕೊಂಡ ಮಾಲೆಗಳೆಲ್ಲ ಮಹಾದೇವನ ಮಂದಹಾಸದಂತೆ ಧವಲದೀಧಿತಿಯಿಂದ ಹೊಳೆಯುತ್ತಿದ್ದವು. ಹೃದಯದಲ್ಲಿ ಧರಿಸಿದ ನಕ್ಷತ್ರಮಾಲೆಯು ಶರತ್ಕಾಲದ ಮೋಡದಂತೆ ಶುಭ್ರಕಾಂತಿಯಿಂದ ಮಿನುಗುತ್ತಿತ್ತು. ಪೂರ್ಣಚಂದ್ರನಕಾಂತಿ ಮುಖದಲ್ಲಿ ತುಂಬು ತಾವರೆಯ ಚಲುವು ಕಂಗಳಲ್ಲಿ. ದೇವೇಂದ್ರನ ಧವಲಕೀರ್ತಿಯನ್ನು ದಶದಿಕ್ಕುಗಳಲ್ಲಿ ಪಸರಿಸುತ್ತ ಸರಸ್ವತಿಯು ಬ್ರಹ್ಮದೇವರ ತೊಡೆಯಿಂದ ಎದ್ದು ಹೊರಟಳು. ಅವಳನ್ನು ಬೆಂಬತ್ತಿ ಬಾಂದೊರೆ ಎನಿಸಿದ ಗಂಗೆಯೂ ಹೊರಟಳು. ಗೆಳತಿ ಸರಸ್ವತಿ ಗಂಗೆಗೆ ಹೇಳಿದಳು. ''ಸಖಿ ನಾನು ನಿನ್ನನ್ನು ಮತ್ತೆ ಎಲ್ಲಿ ಕಾಂಬೆನು ? ನೀನು ಎತ್ತ ಪ್ರಯಾಣ ಬೆಳೆಸುವೆ ?'' ಆಗ ಮಂದಾಕಿನಿಯು ಮಧುರವಾಗಿ ಮಾತನಾಡಿದಳು. 'ನೀನು ಇಲ್ಲಿಂದ ಹರಿದು ಪೂರ್ವ ದಿಕ್ಕಿನಲ್ಲಿ ಪ್ರವಹಿಸತೊಡಗಿದಾಗ ನನ್ನನ್ನು ಕಾಣುವೆ. ನಿನ್ನನ್ನು ದೇವತೆಗಳು ಸುತ್ತುಗಟ್ಟಿದಾಗ ನಿನ್ನ ದರ್ಶನವು ಆಗುವುದು ಆಗ ನೀನು ಉತ್ತರಾಭಿಮುಖಿಯಾಗಿ ನಿನ್ನ ಶೋಕವನ್ನು ಬಿಡು.'

ಗಂಗೆಯು ಉತ್ತರವಾಹಿನಿಯಾದಾಗ ಪುಣ್ಯನದಿ ಅನಿಸುವಳು. ಸರಸ್ವತಿಯು ಪೂರ್ವವಾಹಿನಿಯಾದಾಗ ಪಾವನ ಪಯಸ್ವಿನಿ ಎನಿಸುವಳು. ಅಲ್ಲಿ ಸ್ನಾನ, ದಾನಮಾಡಿದರೆ, ಹೋಮ ಹವನಮಾಡಿದರೆ ಪುಣ್ಯ ಶ್ರಾದ್ಧ ಮಾಡಿ ಅಲ್ಲಿ ಪಿತೃಗಳಿಗೆ ಕೊಟ್ಟಿದ್ದೆಲ್ಲ ಅಕ್ಷಯ. ಉತ್ತರವಾಹಿನಿ ಗಂಗೆ, ಪೂರ್ವವಾಹಿನಿ ಸರಸ್ವತಿ ನದಿಗಳು ಬಹಳ ಪುಣ್ಯಕರ. ಅಲ್ಲಿ ಸ್ನಾನ ದಾನ ಹಾಗೂ ಪಿತೃಕಾರ್ಯ ಮಾಡಿದವರು ದೇವ ಋಣ, ಪಿತೃ ಋಣ, ಋಷಿ ಋಣಗಳಿಂದ ಮುಕ್ತರಾಗಿ ಮೋಕ್ಷ ಮಾರ್ಗಹಿಡಿಯುತ್ತಾರೆ. ಇದರಲ್ಲಿ ಸಂದೇಹವಿಲ್ಲ. ಹೀಗೆ ಹೇಳಿ ಗಂಗೆಯು 'ಪುನರ್ದರ್ಶನಮಸ್ತುತೆ' ನಾವು ಮತ್ತೆ ಕೂಡೋಣ ಎಂದು ಹೇಳಿ ಅವಳನ್ನು ಬೀಳ್ಕೊಂಡು ಹೊರಟಳು. ಆಗ ಸರಸ್ವತಿಯೂ ಕೂಡ ಗಂಗೆಗೆ ''ಶುಭಾಂಗಿ ಗಂಗೆಯೇ, ನೀನು ನಿನ್ನ ಮನೆಗೆ ಹೋಗು. ನೀನು ದೋಷದೂರಳು. ಈ ನಿನ್ನ ಸಖಿಯನ್ನು ತಿರುಗಿ ನೆನೆಯುತ್ತಿರು ಎಂದು ಹೇಳಿ ಬೀಳ್ಕೊಟ್ಟಳು. ಹೀಗೆ ಯಮುನೆ, ಗಾಯಿತ್ರಿ, ಸಾವಿತ್ರಿ ಹಾಗೂ ಉಳಿದೆಲ್ಲ ಸಖಿಯರನ್ನು ಬೀಳ್ಕೊಂಡು ಆ ಸರಸ್ವತೀದೇವಿಯು ಹರಿದು ಹೋಗತೊಡಗಿದಳು. ಉತ್ತಂಕ ಋಷಿಯ ಆಶ್ರಮದಲ್ಲಿ ಒಂದು ಬಸರೀಗಿಡದ ಬುಡದಲ್ಲಿ ಮಹಾನದಿ ರೂಪದಿಂದ ಉಗಮ ಹೊಂದಿದಳು. ಅಲ್ಲಿಂದ ಶತಪ್ರಭ ಎಂಬ ಪರ್ವತದಿಂದ ಕೆಳಗಿಳಿದು ಎಲ್ಲ ದೇವತೆಗಳಿಗೂ ಕಾಣುವಂತೆ ಹರಿಯತೊಡಗಿದಳು.

ಸರಸ್ವತಿಯು ಉಗಮ ಹೊಂದಿದ ಆ ಪ್ಲಕ್ಷ (ಬದರಿ) ವೃಕ್ಷವು ಸಾಕ್ಷಾತ್ ವಿಷ್ಣು ರೂಪವಾದುದು. ಆದುದರಿಂದ ಎಲ್ಲ ದೇವತೆಗಳು, ಋಷಿಗಳು ಅದಕ್ಕೆ ವಂದಿಸುತ್ತಾರೆ.

ಬ್ರಾಹ್ಮಣರು ಅನುದಿನವು ಸೇವೆಗೈಯ್ಯುವರು. ಅನೇಕ ಶಾಖೋಪಶಾಖೆಗಳಿಂದ ಹೆಮ್ಮರವಾಗಿ ನಿಂತ ಆ ವೃಕ್ಷರಾಜನು ಇನ್ನೊಬ್ಬ ಚತುರ್ಮುಖ ಬ್ರಹ್ಮನಂತೆ ಕಾಣಿಸುವನು. ಅವನ ಅಳವಾದ ಹೊದರು ಪೊದರುಗಳಲ್ಲಿ ಒಳಹೊಕ್ಕು ಹಕ್ಕಿಗಳ ಹಾಗೂ ಅಲ್ಲಿಯೇ ವಾಸಗೈದ ಬ್ರಾಹ್ಮಣರ ಧ್ವನಿಗಳು ಕೇಳಬರುತ್ತವೆ. ಆ ಗಿಡಕ್ಕೆ ಹೂ ಬಿಡದಿದ್ದರೂ ಹೂವು ಬಿಟ್ಟಂತೆ ಕಾಣುವದು. ಆ ಬದರೀಗಿಡದ ಎಲ್ಲ ರೆಂಬೆ-ಕೊಂಬೆಗಳಲ್ಲಿ ಕುಕಿಲುವ ಹಕ್ಕಿ-ಪಕ್ಕಿಗಳು ಆ ವನಸಪ್ತಿಗೆ ಅಪೂರ್ವ ಸೌಂದರ್ಯವನ್ನು ಒದಗಿಸುವುವು. ಆ ಹೆಮ್ಮರದ ಮೂಲದಿಂದ ಮಹಾದೇವರಿಂದ ಗಂಗೆಯಂತೆ ಇಳಿದು ನದಿ ರೂಪವಾಗಿ ಹೊಮ್ಮುವ ಸರಸ್ವತಿಯು ತನ್ನ ಉದ್ಭಾವನೆಗೆ ಕಾರಣೀಭೂತನಾದ ಶ್ರೀ ಹರಿಯನ್ನು ಕುರಿತು ಕೇಳಿದಳು.

**ಸರಸ್ವತಿ** :- ದೇವನೆ, ನಾನು ನಿನ್ನ ಅಪ್ಪಣೆ ಪಾಲಿಸುತ್ತೇನೆ. ಆ ವಡವಾಗ್ನಿಯನ್ನು ಇಲ್ಲಿ ಕೊಡು. ಸರಸ್ವತಿಯ ಈ ಮಾತನ್ನು ಕೇಳಿ ವಿಷ್ಣುವು ನುಡಿದನು.

**ವಿಷ್ಣು** :- ಇದೇ ಆ ವಡವಾನಲವು, ಇದರಿಂದ ನಿನಗೆ ಸುಡುವ ಅಂಜಿಕೆಯೇ ಇಲ್ಲ ಇದನ್ನು ನೀನು ಪಡವಲ ಕಡಲಿನ ಒಡಲಿನಲ್ಲಿ ಈ ವಡವಾಗ್ನಿಯನ್ನು ಒಯ್ದು ಒಗೆದು ಬಿಡು. ನೀನು ಹೀಗೆ ಹರಿಯುತ್ತ ಮುಂದೆ ಹೋದರೆ ಆ ಪಶ್ಚಿಮ ಸಮುದ್ರವು ನಿನಗೆ ದೊರಕುವದು. ಶುಭಾಂಗಿಯೇ ಹೋಗಿ ಬಾ. ನಿನಗೆ ಒಳ್ಳೆಯದು ಆಗಲಿ. ಹೀಗೆ ಹೇಳಿ ಜನಾರ್ಧನನು ಆ ವಡವಾಗ್ನಿಯನ್ನು ಒಂದು ಬಂಗಾರದ ಕೊಡದಲ್ಲಿ ಇಟ್ಟು ಸರಸ್ವತಿ ಪ್ರವಾಹದ ನಡುವೆ ತೇಲಿ ಬಿಟ್ಟನು. ಅನಂತರ ತನ್ನ ತರಳ ತೆರೆಗಳನ್ನು ತೂರುತ್ತ ಆ ಸರಸ್ವತಿಯು ಪಶ್ಚಿಮಾಭಿಮುಖಿಯಾಗಿ ಹೊರಟಳು. ಮುಂದೆ ಅವಳು ಅದೃಶ್ಯಳಾಗಿ ಪುಷ್ಕರ ಕ್ಷೇತ್ರಕ್ಕೆ ಬಂದಳು. ಬ್ರಹ್ಮದೇವನು ಯಜ್ಞಮಾಡಿದ ಹೋಮಕುಂಡದಿಂದ ಹೊರಹೊಮ್ಮಿ ಆ ಯಜ್ಞ ಸ್ಥಳವೆಲ್ಲವನ್ನು ತನ್ನ ತೋಯ ತರಂಗದಿಂದ ತೋಯಿಸಿದಳು.

ತುಂತುರಗಳಿಂದ ತೊಳೆದಳು. ಈ ಪುಷ್ಕರ ಕ್ಷೇತ್ರದಲ್ಲಿ ಮಹಾ ಪುಣ್ಯ ನದಿ ಎಂದು ಹೆಸರಾದ ಸರಸ್ವತಿಯು ಅಗ್ನಿಕುಂಡದಲ್ಲಿ ಬಿದ್ದಿದ್ದಾಳೆ. ಆ ಸರಸ್ವತಿಯು ಈ ಪುಷ್ಕರ ಕ್ಷೇತ್ರದಲ್ಲಿ ಎದ್ದು ಪುನಃ ಪ್ರಾದುರ್ಭೂತಳಾಗಿ ಇದನ್ನು ತುಂಬಿದ್ದಾಳೆ ಎಂದು ಜಗತ್ತಿಗೆಲ್ಲ ಪ್ರಾಣ ನಾಯಕನಾದ ವಾಯುದೇವನೇ ಹೇಳಿದ್ದಾನೆ. ಈ ಪುಷ್ಕರಕ್ಷೇತ್ರದಲ್ಲಿ ಪುನರುದ್ಭೂತಳಾದ ಸರಸ್ವತಿಯು ನರರ ಹೆಚ್ಚಿನ ಪಾಪ ಪ್ರಣಾಶಕಶಕ್ತಿಯನ್ನು ಹೊಂದಿದಳು. ಈ ಪುಷ್ಕರ ಕ್ಷೇತ್ರದಲ್ಲಿ ಸರಸ್ವತೀ ಸನ್ನಿಧಾನವನ್ನು ಕಂಡವನಿಗೆ ನರಕ ದರ್ಶನವಿಲ್ಲ. ಅಲ್ಲಿ ನರರು ಭಕ್ತಿಯಿಂದ ಸ್ನಾನಮಾಡಿದರೆ ಬ್ರಹ್ಮಲೋಕ ಪ್ರಾಪ್ತಿಯಾಗಿ ಬ್ರಹ್ಮಾನಂದವನ್ನು ಪಡೆಯುತ್ತಾರೆ. ಅಲ್ಲಿ ಜ್ಞಾನಿಗಳಿಗೆ ಮೊಸರನ್ನ ದಾನವಿತ್ತವರಿಗೆ ಅಗ್ನಿಲೋಕದಲ್ಲಿ ಇಷ್ಟಭೋಗ ದೊರಕುವವು.

ಅಲ್ಲಿ ದರಿದ್ರರಿಗೆ ವಸ್ತ್ರ ದಾನ ಮಾಡಿದರೆ ಹತ್ತು ಪಟ್ಟು ಹೆಚ್ಚಿನ ಫಲ, ವಿಶಿಷ್ಟ ಪುಣ್ಯ ಬರುವುದು. ಅಲ್ಲಿಯ ಜ್ಯೇಷ್ಠ ಕುಂಡದಲ್ಲಿ ಸ್ನಾನಮಾಡಿ ಪಿತೃಗಳನ್ನು ತೃಪ್ತಿ ಪಡಿಸಿದರೆ ಪಿತೃಗಳೆಲ್ಲ ನರಕದಿಂದ ಉದ್ಧಾರ ಹೊಂದುವರು. ಇಲ್ಲಿ ಒಮ್ಮೆ ಸ್ನಾನ ಮಾಡಿದರೆ, ಸರ್ವತೀರ್ಥ ಸ್ನಾನದಫಲವು ಸ್ನಾನಮಾಡಿದವನಿಗೆ ತಾನಾಗಿ ಬರುವುದು. ಕಾರ್ತಿಕ, ವೈಶಾಖ, ಹುಣ್ಣಿಮೆ, ಗ್ರಹಣ ಕಾಲಗಳಲ್ಲಿ ಇಲ್ಲಿ ಸ್ನಾನಮಾಡಬೇಕೆಂದು ಹೇಳಿದೆ. ಎಲ್ಲ ತೀರ್ಥಗಳಿಗಿಂತ ಇದು ಪುಣ್ಯಕರವಾದದ್ದು. ಪುಷ್ಕರಾರಣ್ಯದಲ್ಲಿ ಪೂರ್ವದಿಕ್ಕಿನಲ್ಲಿ

ಹರಿಯುವ ಸರಸ್ವತಿ ನದಿಯಲ್ಲಿ ಸ್ನಾನದಿಂದ ಮತಿ, ಪ್ರಜ್ಞಾ, ಮೇಧಾ, ಬುದ್ಧಿ, ವಾಣಿ, ಇವು ಆರೂ ಸಿದ್ಧಿಸುತ್ತವೆ. ಈ ಪೂರ್ವ ಸರಸ್ವತಿ ದರ್ಶನದಿಂದ ಅಶ್ವಮೇಧಫಲ, ಸ್ನಾನದಿಂದ ಸೂರ್ಯಲೋಕ, ಪಿತೃಕಾರ್ಯದಿಂದ ದಿವ್ಯ ಲೋಕಪ್ರಾಪ್ತಿ. ಈ ತೀರ್ಥವು ಚತುರ್ವಿಧ ಪುರುಷಾರ್ಥದಾಯಕವಾಗಿದೆ. ಇಲ್ಲಿ ದರ್ಭೆಯಿಂದ ಕೂಡಿದ ನೀರಿನಿಂದ ಪಿತೃತರ್ಪಣ ಕೊಟ್ಟರೆ ವಂಶವೆಲ್ಲ ಪಾವನವಾಗುವುದು. ಪೂರ್ವವಾಹಿನಿಯಾದ ಈ ಸರಸ್ವತೀ ತೀರದಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಪಿಂಡಪ್ರದಾನಾದಿಗಳನ್ನು ಭಕ್ತಿಯಿಂದ ಮಾಡಿದರೆ ಪಿತೃಗಳು ಕುಣಿದಾಡುವರು. ಇಲ್ಲಿ ಸ್ನಾನಮಾಡಿದವರಿಗೆ ಗೋದಾನದ ಪುಣ್ಯ. ತರ್ಪಣದಿಂದ ಸುವರ್ಣದಾನದ ಪುಣ್ಯ. ಪಿಂಡಪ್ರದಾನದಿಂದ ಸ್ವರ್ಗ ಪ್ರಾಪ್ತಿ. ನದಿ ಜಲ ಪಾನದಿಂದ ಬ್ರಹ್ಮಲೋಕ ಪ್ರಾಪ್ತಿ. ಈ ಸರಸ್ವತಿ ನದಿಯು ಎಲ್ಲ ಸ್ಥಳಗಳಲ್ಲಿ ಪ್ರಶಸ್ತವೇ. ಆದರೆ ಪುಷ್ಕರದಲ್ಲಿ ಮಾತ್ರ ಪವಿತ್ರಕ್ಕಿಂತಲೂ ಪವಿತ್ರಳು. ಈ ಜಗತ್ತಿನಲ್ಲಿ ಸರಸ್ವತಿಯು ಹರಿಯುವಲ್ಲೆಲ್ಲ ಸುಲಭವಾಗಿರುವಳು. ಆದರೆ ಕುರುಕ್ಷೇತ್ರ, ಪ್ರಭಾಸ ಮತ್ತು ಪುಷ್ಕರ ಕ್ಷೇತ್ರಗಳಲ್ಲಿ ಸ್ನಾನದೊರಕುವುದು ಮಾತ್ರ ದುರ್ಲಭ. ಪೂರ್ವವಾಹಿನಿಯಾದ ಸರಸ್ವತಿಯನ್ನು ಹೊಂದಿದ ಬಳಿಕ ಬೇರೆ ತೀರ್ಥಕ್ಕೆ ಹೋಗಬಯಸುವವನು ಕೈಯಲ್ಲಿಯ ಅಮೃತಬಿಟ್ಟು ವಿಷವನ್ನು ಆರಿಸಿ ಹೊರಟವನಷ್ಟೇ ಮೂರ್ಖ. ಈ ಕ್ಷೇತ್ರದಲ್ಲಿ ಕೃಷ್ಣಪಕ್ಷ ಚತುರ್ದಶಿ ದಿನ ಸ್ನಾನ ಹಾಗೂ ಎಳ್ಳಿನ ದಾನಗಳು ಪುಣ್ಯಕರ. ಅಲ್ಲಿ ಎಳ್ಳು ಚಿಗುಳಿಮಾಡಿ ಪಿಂಡವನ್ನು ದಾನಕೊಟ್ಟರೆ ಪಿತೃಲೋಕವನ್ನು ಹೊಂದುತ್ತಾರೆ. ಇಂತಹ ಸರಸ್ವತಿಯು ಪುಷ್ಕರಾರಣ್ಯಕ್ಕೆ ಹೋಗಿ ಅದೃಶ್ಯಳಾಗಿ ಮುಂದೆ ಪಶ್ಚಿಮಕ್ಕೆ ಹೋಗುತ್ತಾಳೆ. ಪುಷ್ಕರ ತೀರ್ಥಕ್ಕೆ ಸ್ವಲ್ಪ ದೂರದಲ್ಲಿ ಹೂ ಹಣ್ಣುಗಳಿಂದ ಶೋಭಿಸುವ ಒಂದು ಖರ್ಜೂರದ ವನವಿದೆ. ಅಲ್ಲಿ ಅನೇಕ ಮುನಿಗಳು ಸಿದ್ಧರು, ಚಾರಣರು, ಇರುವರು. ಅಲ್ಲಿ ಸರಸ್ವತಿ ನದಿಯು ಮತ್ತೆ ತಲೆ ಎತ್ತುತ್ತದೆ. ಉದ್ಭೂತವಾಗುತ್ತದೆ.

ಅದಕ್ಕೆ ಅಲ್ಲಿ **''ನಂದಾ''** ಎಂದು ಹೆಸರಾಗುವದು. ಈ ನಂದಾನದಿಯೆಂಬ ಸರಸ್ವತಿಯ ಶಾಖೆಯು ಮೂರು ಲೋಕಗಳಲ್ಲಿಯೇ ಪ್ರಸಿದ್ಧವಾಗಿದೆ. ಅಲ್ಲಿ ಸರಸ್ವತಿಯು ನಂದಾ ನಾಮಿನಿಯಾಗಿ, ದೊಡ್ಡ ಹೊಳೆಯಾಗಿ ತಿಳಿನೀರು ತುಂಬಿ ಹರಿಯುವಳು. ಅನೇಕ ಮೀನು, ಮೊಸಳೆ, ಆಮೆ, ಮುಂತಾದ ಜಲಚರ ಪ್ರಾಣಿಗಳು ಅಲ್ಲಿ ವಿಹರಿಸುವವು. ನಂದಾ ನದಿ ಎಂದರೆ ಆ ಸರಸ್ವತಿ ನದಿಯೋ ಅಥವಾ ಅದೊಂದು ಬೇರೆಯಾದ ನದಿಯೋ ? ಅದು ಸರಸ್ವತಿಯೇ ಆಗಿದ್ದರೆ ''ನಂದಾ'' ಎಂಬ ಹೆಸರು ಬರಲು ಕಾರಣವೇನು ? ಸರಸ್ವತಿ ನದಿಯ ನಂದಾ ನಾಮಧೇಯ ಪ್ರಾಪ್ತಿಯ ಹಿನ್ನೆಲೆಯನ್ನು ವಿವರಿಸಬೇಕು ಎಂದು ಭೀಷ್ಮರು ಪುಲಸ್ತ್ಯರನ್ನು ಕೇಳಿದರು. ಆಗ ಪುಲಸ್ತ್ಯರು ನುಡಿದರು -

**ಪುಲಸ್ತ್ಯ :-** ಪೂರ್ವಕಾಲದಲ್ಲಿ ಪ್ರಭಂಜನ ಎಂಬ ರಾಜನಿದ್ದ. ಅವನಿಗೆ ಕ್ಷತ್ರಿಯ ಧರ್ಮದಲ್ಲಿ ಒಳ್ಳೇ ದೀಕ್ಷೆ. ಒಂದು ದಿನ ಆ ಮಹಾರಾಜನು ಬೇಟೆಯಾಡಲು ಅರಣ್ಯಕ್ಕೆ ಹೋಗಿದ್ದನು. ಅವನ ಕಣ್ಣಿಗೆ ಒಂದು ಪೊದರಿನಲ್ಲಿರುವ ಹೆಣ್ಣು ಜಿಂಕೆಯು ಇದ್ದಿತು. ಕೂಡಲೇ ರಾಜನು ಗುರಿಯಿಟ್ಟು ಅತ್ಯಂತ ತೀಕ್ಷ್ಣ ಬಾಣದಿಂದ ಆ ಎರಳೆಗೆ ಹೊಡೆದನು. ಆಗ ಆ ಹೆಣ್ಣು ಜಿಂಕೆಯು ಬೆದರುಗಣ್ಣುಗಳಿಂದ ಸುತ್ತಲೂ ನೋಡಿತು. ಬಿಲ್ಲು ಬಾಣ ಹಿಡಿದು ರಾಜನು ಎದುರಿಗೆ ನಿಂತುಕೊಂಡಿದ್ದನು. ಅವನನ್ನು ನೋಡಿ ಚಿಗರೆಯು

ನುಡಿಯಿತು. ಮೂಢನೆ, ನೀನೇನು ಮಾಡಿದೆ ? ನೀನು ಇಂತಹ ಘೋರ ಕೃತ್ಯಮಾಡಲು ಕಾರಣವೇನು ? ನಾನು ನನ್ನ ಕೂಸಿಗೆ ಕೆಳಗೆ ಮುಖಮಾಡಿ, ಹೆದರಿಕೆಯಿಲ್ಲದೆ ಹಾಲು ಕುಡಿಸುತ್ತಿದ್ದೆ. ಆಗ ನೀನು ನನ್ನ ಮೈಯೊಳಗಿನ ಮಾಂಸದ ಲೋಭದಿಂದ ಬಾಣ ಹೊಡೆದು ಘಾತಮಾಡಿದೆ. ನೀರು ಕುಡಿಯುವ ಚಿಗರೆಯನ್ನು ಕೊಲ್ಲಬಾರದು. ಇದರಂತೆ ಮಲಗಿದಾಗ ಮತ್ತು ಸಂಭೋಗ ಕ್ರಿಯೆಯಲ್ಲಿ ತೊಡಗಿದಾಗ ಮೃಗಗಳನ್ನು ಹೊಡೆಯಬಾರದು ಎಂದು ಹಿರಿಯರು ಹೇಳುವುದನ್ನು ನಾನು ಕೇಳಿದ್ದೇನೆ.

ಆದುದರಿಂದಲೇ ನಾನು ನಿರ್ಭಯವಾಗಿ ನನ್ನ ಮಗುವಿಗೆ ಹಾಲು ಉಣಿಸುತ್ತಿದ್ದೆ. ಇಂತಹ ವೇಳೆಯಲ್ಲಿ ವಜ್ರಕಠೋರವಾದ ನಿನ್ನ ಬಾಣದಿಂದ ನೀನು ನನ್ನನ್ನು ಪ್ರಹರಿಸಿದೆ. ನನ್ನದೇನು ತಪ್ಪು ? ನಾನೇನು ನಿನ್ನ ಸೀಮೆ, ನಿನ್ನ ಗ್ರಾಮದಲ್ಲಿ ಬಂದಿರಲಿಲ್ಲ. ಕಾಡಿನಲ್ಲಿದ್ದು, ನಿರುಪದ್ರವಿಯಾಗಿ, ನಿರಪರಾಧಿಯಾಗಿ ಬಾಳುವ ಸಾಧು ಪ್ರಾಣಿಯಾದ ನನ್ನನ್ನು ಹೊಡೆದದ್ದರಿಂದ ನೀನು ಮಾಂಸಾಹಾರಿಯಾದ ಕ್ರೂರ ಶ್ವಾಪದ ರೂಪವನ್ನು ಹೊಂದು. ಮುಳ್ಳು ತುಂಬಿದ ಈ ಘೋರಾರಣ್ಯದಲ್ಲಿ ನೀನು ಹುಲಿಯಾಗಿ ಹರಿದಾಡು. ಹೀಗೆ ತನ್ನನ್ನು ಶಪಿಸಿದ ಆ ಚಿಗರೆಯನ್ನು ರಾಜನು ಕೈಮುಗಿದು ಕೇಳಿಕೊಂಡನು. ಅವನಿಗೆ ಬಹಳ ಪಶ್ಚಾತ್ತಾಪವಾಗಿತ್ತು.

**ರಾಜ :-** ಭದ್ರೆ, ನೀನು ನಿನ್ನ ಮಗುವಿಗೆ ಮೊಲೆಹಾಲು ಕೊಡುತ್ತಿರುವುದನ್ನು ನಾನು ನೋಡಲಿಲ್ಲ. ಅಜ್ಞಾನದಿಂದ ನಾನು ನಿನ್ನನ್ನು ಹೊಡೆದೆ. ಕ್ಷಮಿಸು; ಶಾಂತಳಾಗು. ಪ್ರಸನ್ನಳಾಗು ನನ್ನ ಮೇಲೆ ದಯೆದೋರು. ನಿನ್ನ ಶಾಪದಂತೆ ನಾನು ಹುಲಿಯ ರೂಪ ಹೊಂದಿ ನಂತರ ನಾನು ಮಾನವನಾಗುವುದು ಎಂದು ? ನಿನ್ನ ಶಾಪದಿಂದ ನನಗೆ ಎಂದು ಬಿಡುಗಡೆ ಎಂಬುದನ್ನೂ ಈಗಲೇ ಹೇಳು. ಮಹಾರಾಜನ ಬಿನ್ನಹ ಮನ್ನಿಸಿ ಆ ಜಿಂಕೆಯು ಮಾತನಾಡಿತು.

**ಮೃಗೆ :-** ದೊರೆಯೆ, ''ನೂರು ವರ್ಷಗಳ ನಂತರ ಆ ಸ್ಥಳಕ್ಕೆ ನಂದಾ ಎಂಬ ಒಂದು ಆಕಳು ಬರುವದು. ಆ ಹಸುವಿನೊಂದಿಗೆ ನೀನು ಸಂಭಾವಣೆ ನಡೆಸುವೆ ಆಗಲೆ ನಿನ್ನ ಶಾಪದ ಕೊನೆ ಆಗುವದು.'' ಆ ಹರಿಣಿಯ ಶಾಪವು ಕಾರ್ಯಗತವಾಗಲು ವಿಲಂಬವಾಗಲಿಲ್ಲ. ಆಗಲೇ ರಾಜನಿಗೆ ಹೆಬ್ಬುಲಿಯ ರೂಪವು ಬಂದುಬಿಟ್ಟಿತು. ಹದನವಾದ ಉಗುರು, ಕೊಡಲಿಯಂತಹ ಹಲ್ಲು, ಕೆಂಡದುಂಡೆಯಂತೆ ಕಿಡಿ ಉಗುಳುವ ಕಣ್ಣು, ಗುಡುಗಿನಂತಹ ಧ್ವನಿ, ಅತ್ಯಂತ ಘೋರವಾದ ರೂಪವು ಕಂಡ ಪ್ರಾಣಿಗಳನ್ನೆಲ್ಲ ಹೆದರಿಸುತ್ತಿತ್ತು. ಇಂತಹ ಭಯಂಕರ ಪ್ರಾಣಿಯಾದ ಆ ಮಹಾರಾಜನು ಆ ಕಗ್ಗಾಡಿನಲ್ಲಿ ಕಣ್ಣಿಗೆ ಕಂಡವರನ್ನೆಲ್ಲ ಕೊಂದು ತಿಂದು ಹಾಕುತ್ತಿತ್ತು. ನಾಲ್ಕು ಕಾಲಿನ ಪ್ರಾಣಿಗಳನ್ನು ಎರಡು ಕಾಲಿನ ಜೀವಿಗಳನ್ನು ಸಂಹರಿಸುತ್ತ ಹಿಂಸಾ ತಾಂಡವವನ್ನೇ ಆ ಗೊಂಡಾರಣ್ಯದಲ್ಲಿ ಅದು ನಡೆಸಿತು.

ಹೀಗೆ ನೂರು ವರ್ಷಗಳವರೆಗೆ ಹಿಂಸಾಕೃತದಲ್ಲಿ ತೊಡಗಿದ್ದರೂ ಆ ವ್ಯಾಘ್ರಕ್ಕೆ ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಕಾರ್ಯದಿಂದ ಸ್ಮರಣವು ಉಳಿದಿತ್ತು. ಹರಿಣಿಯ ಶಾಪದಿಂದ ತನಗೆ ಈ ದುರವಸ್ಥೆ ಬಂದದ್ದನ್ನೂ ತಾನು ನಡೆಸಿದ ಹಿಂಸಾಕೃತ್ಯವನ್ನೂ ಆಗಾಗ ನನೆಯುತ್ತಿತ್ತು. ತಾನು ಮಾಡುವ ದುಷ್ಕೃತ್ಯಗಳಿಂದ ಅದಕ್ಕೆ ಪಶ್ಚಾತ್ತಾಪವಾಗಿ ತನ್ನನ್ನು ತಾನೇ ಅದು ಕಟುವಾಗಿ ನಿಂದಿಸಿಕೊಳ್ಳುತ್ತಿತ್ತು. ''ಅಯ್ಯೋ ! ನನಗೆ ಇದು ಇಂತಹ ಜನ್ಮ ಬಂದಿತು ! ನಾನು ಮುಂದೆ ಎಂದು ಮಾನವ ಜನ್ಮ ಹೊಂದುವೆನು ?'' ಮಾಂಸದ

ಆಶೆಯಿಂದಲೇ ನಾನು ಈ ದುಷ್ಕೃತವನ್ನು ಮಾಡುತ್ತಲಿಲ್ಲ. ಹಿಂಸೆಯನ್ನು ಮಾಡಬಾರದೆಂದು ನಾನೇನೋ ನಿರ್ಧರಿಸಬಹುದು. ಆದರೆ ಈ ಹುಲಿಯ ಜನ್ಮದಲ್ಲಿ ಮಾಂಸವನ್ನು ಬಿಟ್ಟರೆ ಬದುಕುವದೆಂತು ? ನಾಲ್ಕು ಕಾಲಿನ ಪ್ರಾಣಿಗಳನ್ನು ಕೊಲ್ಲದೆ ನಮಗೆ ಜೀವನವೇ ಇಲ್ಲ. ಆದರೆ ಎರಡು ಕಾಲಿನ ಮಾನವನನ್ನು ಮಾತ್ರ ಕೊಲ್ಲದೆ ಇರಬಹುದು. ಆದರೆ ಏನು ಮಾಡುವದು ? ಮನುಷ್ಯರು ನಮ್ಮಂತಹ ಕ್ರೂರ ಶ್ವಾಪದಗಳಿಗಿಂತ ಹೆಚ್ಚು ಮಾಂಸ ಲೋಭಿಗಳಾಗಿರುತ್ತಾರೆ. ಪ್ರಾಣಿಗಳನ್ನು ಬೇಟೆಯಾಡಲು ಬಂದ ಮಾನವರ ದರ್ಶನವೇ ನಮಗೆ ಮೃತ್ಯು ಇದ್ದಂತೆ. ಅವರನ್ನು ಮೇಲೆ ಎರಗಿ ಕೊಲ್ಲದಿದ್ದರೆ, ಅವರೇ ನಮ್ಮಂತಹ ಪ್ರಾಣಿಗಳನ್ನು ಕೊಂದು ನಮ್ಮ ಮಾಂಸ ತಿನ್ನುತ್ತಾರೆ.

ಆತ್ಮರಕ್ಷಣೆಗಾಗಿ, ನಾನು ಎರಡು ಕಾಲಿನ ಪ್ರಾಣಿಗಳನ್ನು ಕೊಲ್ಲಲೇಬೇಕು. ಬದುಕಲಿಕ್ಕೆ ನಾಲ್ಕುಕಾಲಿನಪ್ರಾಣಿಗಳನ್ನು ಕೊಲ್ಲಬೇಕಾಗುವುದು. ಎಂತೆಂತಹ ಸಾಧು ಸ್ವಭಾವದ ಮಾನವರು ಕೂಡ ಸಹವಾಸ ದೋಷದಿಂದ ನಮ್ಮ ಬೇಟೆ ಆಡಲು ಬರುವರು. ಅವರನ್ನು ಹೊಡೆಯದಿದ್ದರೆ ನಮ್ಮ ಸರ್ವನಾಶ. ಹೊಡೆದರೆ ಹಿಂಸಾ ಮೂಲಕ ಮಹಾಪಾಪ. ಹೀಗಾಗಿ ನಾನು ಹುಲಿ ಜನ್ಮದಲ್ಲಿರುವವರೆಗೆ ಹಿಂಸೆಯಿಂದ ಮುಕ್ತಿಯಿಲ್ಲ. ಆದುದರಿಂದ ಬಂದ ಪಾಪದಿಂದಲೂ ಮುಕ್ತಿಯಿಲ್ಲ. ಆದರೆ ಶಾಪಕೊಟ್ಟ ಚಿಗರೆಯು ಮಾತ್ರ ನೀನು ವ್ಯಾಘ್ರ ಜನ್ಮದಿಂದ ಮುಕ್ತನಾಗಿ ಮಾನವ ಜನ್ಮಪಡೆಯುವೆ ಎಂದಿದೆ. ನನಗೆ ಕ್ರೂರ ಜನ್ಮದಿಂದ ಮುಕ್ತಿ ಎಂದಾದೀತು ? ಏನೇ ಆಗಲಿ, ಇನ್ನು ಮೇಲಿಂದ ಹಿಂಸೆಯಿಂದ ನಾನು ಪರಾಙ್ಮುಖನಾಗುತ್ತೇನೆ. ಇದರಲ್ಲಿ ನನ್ನ ಮರಣವಾದರೂ ಚಿಂತೆಯಿಲ್ಲ. ಹೀಗೆ ವಿಚಾರಿಸಿ, ಆ ಹುಲಿಯು ಶಾಂತವೃತ್ತಿಯನ್ನು ತಾಳಿತು. ಹಿಂಸಾಕೃತ್ಯವನ್ನು ತೊರೆಯಬೇಕೆಂದು ಸಂಕಲ್ಪಿಸಿತು. ಆದರೂ ಹಸು ಪಶುಗಳನ್ನು ಕಂಡಾಗ ಅದರ ಸಂಕಲ್ಪ ಮರೆಯಾಗಿ ಹುಲಿ ಜಾತಿ ಸಹಜವಾದ ಹಿಂಸಾಭಾವ ತಲೆ ಎತ್ತುತ್ತಿತ್ತು. ಹೀಗೆ ನೂರು ವರ್ಷ ಕಳೆದವು. ಆ ವನಕ್ಕೆ ಒಂದು ದೊಡ್ಡ ಹಸುಗಳ ಹಿಂಡು ಆಗಮಿಸಿತು. ಹುಲ್ಲು ನೀರು ಹುಡುಕುತ್ತ ದನಗಾಹಿಗಳು ಬಂದು ಹಸಿರು ಮೆರೆಯುವ ಹುಲ್ಲುಗಾವಲಿನ ಆ ಬೆಟ್ಟದ ಬಯಲಲ್ಲಿ ಬೀಡುಬಿಟ್ಟರು. ಅಲ್ಲಿ ನೆಲೆಸಿದ ಆಕಳು - ಕರುಗಳ ಅಂಬಾರವದಿಂದ ಆ ವನ ಪ್ರಾಂತವು ತುಂಬಿಹೋಯಿತು. ಯಾದವರಂತಿರುವ ಗೋಪಾಲಕರು ಹಗಲಿರುಳು ಆ ಕಾಡಿನಲ್ಲಿ ಸಂಚರಿಸತೊಡಗಿದರು.

ಹೀಗೆ ಖಜ್ಜೂರಿ ವನದ ಪರಿಸರದಲ್ಲಿ ಆ ಹುಲಿಯು ವಾಸಿಸಿದಾಗ ಹಿಂಡು ಹಿಂಡಾಗಿ, ಹಸುಗಳು ಹಸಿರು ಕಂಡಲ್ಲೆಲ್ಲ ಅಂಡಲೆಯುತ್ತಿದ್ದವು. ಆ ಹಸುಗಳ ಹಿಂಡಿನ ಮುಂಭಾಗದಲ್ಲಿ ನಂದಾ ಎಂಬ ಆಕಳು ಆ ಗೋಮಂಡಲದ ಮುಖ್ಯಧೇನು ಆಗಿ ಬರುತ್ತಿತ್ತು. ಅದರ ಬಣ್ಣವು ರಾಜಹಂಸದಂತೆ ಸ್ಫಟಿಕ ಧವಳವಾಗಿತ್ತು. ಹಂಸವರ್ಣ, ಕೊಡಗೊಚ್ಚಲು, ಉದ್ದಕೊರಲು, ಮಿದುತೊಗಲು, ಸುಂದರವಾದ ಗಂಗೆದೊಗಲು, ಫಣಿಫಣಿಸುವ ಕೊರಳಗಂಟೆಗಳು, ಕಪ್ಪುಕುತ್ತಿಗೆ, ಪುಷ್ಟದೇಹ, ಸುಂದರ ಆಕಾರವುಳ್ಳದ್ದಾಗಿತ್ತು ಆ ಹಸು.

ಈ ಸುಂದರವಾದ ಹಸುವು ಹಿಂಡಿನ ಮುಂದೆ ಹೊಸಹೊಸ ಹಸಿರು ಹುಲ್ಲುಗಾವಲು ಮೈದಾನ ಹುಡುಕ್ತ, ಅದನ್ನು ಹಿಂಬಾಲಿಸಿ ಆ ಹಸುಗಳ ಹಿಂಡು ಹುಲ್ಲುಮೇಯುತ್ತ ತಿರುಗುತ್ತಿತ್ತು. ಅದೇ ಸರಸ್ವತೀ ನದಿ ತೀರದಲ್ಲಿ ರೋಹಿತ ಎಂಬ ಮತ್ತೊಂದು ದರೀ

ಕಂದರಗಳಿಂದ ಭೀಕರವಾದ ಬೆಟ್ಟವಿದೆ. ನೂರಾರು ಗುಹೆಗಳು ಗುಡ್ಡದಲ್ಲಿ; ಅದರ ಈಶಾನ್ಯ ದಿಕ್ಕಿನಲ್ಲಿ ಒಂದು ಘೋರಾರಣ್ಯವಿದೆ. ಅಲ್ಲಿ ಹೋಗುವುದೇ ದುಸ್ತರ. ಆದರೆ ಅಲ್ಲಿ ಹಸಿರು ಹುಲ್ಲಿನದೇ ಸುಗ್ಗಿ. ಅಲ್ಲಿಯ ಹಚ್ಚುಹಸಿರು ಹುಲ್ಲನ್ನು ಕಂಡರೆ ಹಸುಗಳಿಗೆಲ್ಲ ಹುಚ್ಚೇ ಹಿಡಿಯಬೇಕು. ಇಂತಹ ಶ್ಯಾಮಲ, ಪೂರ್ಣವಾದ ಆ ಶೈಲ ಪ್ರಾಂತವು ಅನೇಕ ಹುಲಿ, ಸಿಂಹಗಳಿಂದ ತುಂಬಿ ಅಸಂಖ್ಯ ಕ್ರೂರ ಮೃಗಗಳಿಂದ ಭೀಕರವಾಗಿತ್ತು. ಗಿಡ-ಬಳ್ಳಿಗಳಿಂದ ನಿಬಿಡವಾಗಿ ಸುಂದರವೂ ಶ್ವಾಪದಗಳಿಂದ ಭೀಷಣವೂ ಆಗಿದ್ದಿತು. ಆ ಭಯಂಕರ ಕಗ್ಗಾಡಿನಲ್ಲಿ ಒಂದು ಭೀಷಣವಾದ ಮೃತ್ಯುರೂಪಿ ಹೆಬ್ಬುಲಿಯ ವಾಸವಾಗಿತ್ತು. ಹದನವಾದ ಹಲ್ಲು, ತೀಕ್ಷ್ಣ ಉಗುರುಗಳಿದ್ದ ಆ ಹುಲಿಯನ್ನು ನೋಡಿದರೆ ದೊಡ್ಡ ಬೆಟ್ಟವನ್ನೇ ಕಂಡಂತಾಗುತ್ತಿತ್ತು. ಅದು ಗರ್ಜಿಸಿದರೆ ಮಳೆಗಾಲದ ಮೋಡವು ಗುಡುಗಿದಂತೆ, ಅದರ ಬಾಯಿ ದೊಡ್ಡ ಗುಹೆಯಂತೆ ಭೀಕರ, ಹಲ್ಲು, ಉಗುರು ತೀಕ್ಷ್ಣ ಆಯುಧದಂತಿದ್ದವು.

ಆ ವನದಲ್ಲಿ ನಂದ ಎಂಬ ಒಬ್ಬ ಧರ್ಮಾತ್ಮನಿದ್ದನು. ಅವನು ಗೋಪಾಲಕರಿಗೆ ಹಿತ ಮಾಡುವುದರಲ್ಲಿಯೇ ದೃಷ್ಟಿ ಉಳ್ಳವನು. ಅವನು ಮಿದುವಾದ ಹಸಿರುಹುಲ್ಲನ್ನು ಕಿತ್ತು ಹಸುಗಳಿಗೆ ತಿನ್ನಿಸಿ ಸಂರಕ್ಷಿಸುತ್ತಿದ್ದನು. ಆ ನಂದಗೋಪನ ಹಸುವಾದ ನಂದೆಯು ಒಂದು ದಿನ ಹಸಿರಿನ ಆಶೆಯಿಂದ ತನ್ನ ಹಿಂಡನ್ನು ತಪ್ಪಿಸಿಕೊಂಡು ಬೆಂಗಾಡಿನಲ್ಲಿ ಹೊಕ್ಕಿತು. ಆ ಘೋರವಾದ ಕಾಡನ್ನು ಕಂಡರೇನೇ ಮೈ ನವಿರೇಳುತ್ತಿತ್ತು ! ಆ ಭಯಂಕರ ಅರಣ್ಯದಲ್ಲಿ ವಾಸಮಾಡಿದ ಭೀಕರಾಕಾರದ ಆ ಹೆಬ್ಬುಲಿಯ ಎದುರು ನಂದೆಯು ಬಂದಿತು. ಹುಲಿಯನ್ನು ಕಂಡ ಕೂಡಲೇ ಹಸುವು ಓಡತೊಡಗಿತು. ಆಗ ಹುಲಿಯು ಕೂಗಿ ''ನಿಲ್ಲುನಿಲ್ಲು'' ಎಂದು ಒದರಿ ಹೇಳಿತು. ಗೋವೆ, ಏಕೆ ನಡುಗುವೆ ? ಇಂದು ನೀನು ನನಗೆ ಆಹಾರವಾಗಲು ಅನಾಯಾಸವಾಗಿ ನೀನಾಗಿ ಇಲ್ಲಿಗೆ ಬಂದಿರುವೆ. ದೈವವೇ ನನ್ನ ಊಟಕ್ಕಾಗಿ ನಿನ್ನನ್ನು ಕಳಿಸಿದೆ.

ಆ ಹುಲಿಯ ನಿಷ್ಠುರವಾದ ನುಡಿಯನ್ನು ಕೇಳಿ ಆ ನಂದಾ ಧೇನುವಿನ ಮೈಗೂದಲು ನಿಮಿರಿನಿಂತವು. ಅದಕ್ಕೆ ಒಮ್ಮೆಲೆ ತಾನು ಮನೆಯಲ್ಲಿ ಬಿಟ್ಟುಬಂದ ಕರುವಿನ ನೆನಪಾಯಿತು. ''ಅಯ್ಯೋ ನನ್ನ ಅಚ್ಚಬಿಳಿಬಣ್ಣದ ಮಗುವನ್ನು ಬಿಟ್ಟು ಬಂದೆನಲ್ಲ ! ಚಂದ್ರನಂತೆ ಸುಂದರವಾದ ನನ್ನ ಕೂಸನ್ನು ನಾನು ನೋಡಲಾರೆನೆ ? ಅಯ್ಯೋ ಮಗನೆ, ಮುಂದೆ ನಿನ್ನ ಗತಿ ಏನು ? ಎಂದು ಆ ಧೇನನೊಂದುಬೆಂದು, ಕಣ್ಣೀರು ಸುರಿಸತೊಡಗಿತು. ದುಃಖದಿಂದ ಅದರ ಕೊರಳು ಬಿಗಿದು ಪುತ್ರಶೋಕವು ಆ ಹಸುವಿನ ಕರುಳನ್ನು ಸುಡತೊಡಗಿತು. ಒಮ್ಮೆಲೆ ಅಳತೊಡಗಿತು ಆ ದೀನಧೇನು. ಹೀಗೆ ದೀನವಾಗಿ ವಿಲಾಪಿಸುವ ಆಕಳವನ್ನು ಕಂಡು ಆಘೋರಾಕಾರದ ಹುಲಿಯು ಕೇಳಿತು.

ವ್ಯಾಘ್ರ ! ಧೇನುವೆ, ನೀನು ಏಕೆ ಅಳುತ್ತಿ ? ದೈವದಿಂದಲೇ ನೀನು ನನ್ನ ಆಹಾರವಾಗಿ ನನ್ನ ಮುಖದ ಬಳಿಗೆ ಬಂದಿರುವೆ. ನೀನು ಈಗ ಅತ್ತರೂ ಅಷ್ಟೇ, ನಕ್ಕರೂ ಅಷ್ಟೆ. ಇಂದು ನೀನು ನನಗೆ ಭಕ್ಷ್ಯ. ಏನಾದರೂ ನೀನಿನ್ನು ಬದುಕಲಾರೆ. ಅವರವರಿಗೆ ವಿಧಿ ವಿಹಿತಪಡಿಸಿದ ಆಹಾರವನ್ನು ಪ್ರಾಣಿಯು ತಿನ್ನುತ್ತಾನೆ. ದೈವವು ಇಂದೇ ನಿನಗೆ ಮೃತ್ಯುವನ್ನು ತಂದಿದೆ. ನೀನು ಏಕೆ ಅಳುವೆ ? ನೀನು ರೋದನಮಾಡುವುದನ್ನು ಕೇಳಿ ಮತ್ತು ಈ ನಿನ್ನ ದುಃಖ ಮುಖನೋಡಿ ನನಗೆ ಕುತೂಹಲವಾಗಿದೆ. ಅಳುವ ಕಾರಣವನ್ನು ಹೇಳು !

ಹುಲಿಯ ಈ ಮಾತನ್ನು ಕೇಳಿ ನಂದೆಯು ನುಡಿಯಿತು. ''ತೇಜಸ್ವಿಯಾದ ವ್ಯಾಘ್ರನೇ, ನಿನಗೆ ನನ್ನ ನಮಸ್ಕಾರವಿರಲಿ. ನನ್ನ ತಪ್ಪನ್ನು ಕ್ಷಮಿಸು. ನಿನ್ನ ಬಳಿಗೆ ಬಂದ ಬಳಿಕ ಯಾವ

ಪ್ರಾಣಿಗೂ ಬದುಕುವ ಆಶೆಯಿಲ್ಲ. ನಾನಾದರೂ ಸಾವಿಗೆ ಹೆದರುವುದಿಲ್ಲ. ಎಂದಾದರೂ ಒಂದು ದಿನ ಹುಟ್ಟಿದ ಪ್ರಾಣಿಯು ಮರಣವನ್ನು ಹೊಂದಲೇ ಬೇಕಷ್ಟೇ! ಹುಟ್ಟಿದವರಿಗೆ ಮರಣ ನಿಶ್ಚಿತ. ಇದು ಅಪರಿಹಾರ್ಯ. ಅದಕ್ಕಾಗಿ ನಾನು ಶೋಕಿಸುವುದಿಲ್ಲ.

ಮೃಗರಾಜನೆ, ಎಲ್ಲ ದೇವತೆಗಳು ಕಾಲನೇಮಕ ಪರಮಾತ್ಮನ ಅಧೀನರಾಗಿ ಒಂದು ದಿನ ಮರಣವನ್ನು ಹೊಂದಿಯೇ ತೀರುವರು. ಆದುದರಿಂದ ನಾನು ಮೃತ್ಯುವಿಗೆ ಹೆದರಿ ಶೋಕಮಾಡುವುದಿಲ್ಲ. ಆದರೆ ನಾನು ಪ್ರೇಮ ವಿಹ್ವಲಳಾಗಿ ಅಳುತ್ತಿದ್ದೇನೆ. ನನ್ನ ಹೃದಯದಲ್ಲಿರುವ ಸಂತಾಪವನ್ನು ನಿನ್ನ ಎದುರು ತೋಡಿಕೊಳ್ಳುತ್ತೇನೆ; ಕೇಳು. ಮೃಗರಾಜನೆ, ನಾನು ಚಿಕ್ಕ ವಯಸ್ಸಿನಲ್ಲಿ ಒಂದು ಕರುವನ್ನು ಪ್ರಸವಿಸಿದೆನು. ಆ ನನ್ನ ಚೊಚ್ಚಲ ಗಂಡುಮಗನು ಇನ್ನೂ ಸಣ್ಣ ಕೂಸು. ನನ್ನ ಮೊಲೆ ಹಾಲನ್ನು ಕುಡಿದೇ ಜೀವಿಸುತ್ತಲಿದೆ. ಅದು ಇನ್ನೂ ಹುಲ್ಲನ್ನು ಮೂಸುವುದಿಲ್ಲ. ಅದನ್ನು ಮನೆಯಲ್ಲಿ ದನದ ಕೊಟ್ಟಿಗೆಯಲ್ಲಿ ಕಟ್ಟಿದ್ದಾರೆ. ಅದು ಹಸಿವೆಯಿಂದ ಕಸಿವಿಸಿಪಡುತ್ತಲಿದೆ. ಆ ಮಗುವಿಗಾಗಿ ನಾನು ಅಳುತ್ತಲಿದ್ದೇನೆ. ನಾನು ಹೋಗದಿದ್ದರೆ ಆ ಮಗು ಹೇಗೆ ಬದುಕೀತು ?

ಆ ಮಗುವಿಗೆ ಸ್ತನಪಾನಮಾಡಿಸಿ, ನೆತ್ತಿಯನ್ನು ಮೂಸಿ, ಮಗುವನ್ನು ಪ್ರೀತಿಯಿಂದ ಮೈದಡವಿ ಬರಬೇಕೆಂದು ಆತುರಳಾಗಿದ್ದೇನೆ. ನನ್ನ ಕರುಳುಗಳು ಅತ್ತಕಡೆಗೆ ಎಳೆಯುತ್ತಲಿವೆ. ನೀನು ದಯದೋರಿದರೆ ನಾನು ಅಲ್ಲಿಗೆ ಹೋಗಿ ಆ ಮಗುವಿನ ಹೊಟ್ಟೆಗೆ ಕೊಟ್ಟು, ಅದರ ನೆತ್ತಿಯನ್ನು ಮೂಸಿ, ಅದಕ್ಕೆ ಹಿತ-ಅಹಿತಗಳನ್ನು ತಿಳಿಸಿ, ನನ್ನ ಗೆಳೆಯರ ಕೈಯಲ್ಲಿ ಆ ಕೂಸನ್ನು ಒಪ್ಪಿಸಿ ಬರುತ್ತೇನೆ. ನಾನು ಖಂಡಿತವಾಗಿಯೂ ಬರುತ್ತೇನೆ. ನಾನು ಬಂದ ಬಳಿಕ ನನ್ನನ್ನು ಯಥೇಚ್ಛವಾಗಿ ಕೊಂದು ತಿನ್ನಬಹುದು. ನಂದ ಧೇನುವಿನ ಈ ಮಾತು ಕೇಳಿ ಹುಲಿಯು ನುಡಿಯಿತು :- ''ಸಾಯಲು ಹೊರಟಿರುವ ನಿನಗೆ ಮಗುವಿನಿಂದೇನಾಗಬೇಕಾಗಿದೆ. ಮೃತ್ಯುವಿನೆದುರಿಗೆ ನಿಂತಿರುವೆ ಕಾಣುವುದಿಲ್ಲವೆ ? ನನ್ನನ್ನು ಕಂಡ ಕೂಡಲೇ ಎಲ್ಲ ಪ್ರಾಣಿಗಳು ಹೆದರಿ ತಲ್ಲಣಿಸಿ ಹೋಗುತ್ತವೆ. ಕೈಕಾಲುಕಳೆದು ಕೊಂಡು ಪ್ರಾಣ ಬಿಡುತ್ತವೆ. ಆದರೆ ನಿನ್ನೆದುರು ಮೃತ್ಯುವು ಬಾಯ್ದೆರೆದು ನಿಂತರೂ ನೀನು ಲೆಕ್ಕಿಸದೆ ''ಮಗಮಗ'' ಎಂದು ಧ್ಯಾನಿಸುತ್ತ ದೀನಳಾಗಿ ಕರುಣಾಕ್ರಂದನ ಮಾಡುತ್ತಲಿರುವೆ. ಮಕ್ಕಳಾಗಲಿ, ತಪಸ್ಸಾಗಲಿ, ದಾನವಾಗಲಿ, ತಾಯಿ-ತಂದೆ, ಗೆಳೆಯರು ಯಾರೇ ಆಗಲಿ. ಮೃತ್ಯುವಿನಿಂದ ಅಕ್ರಾಂತನಾದ ಮನುಷ್ಯನನ್ನು ರಕ್ಷಿಸಲು ಶಕ್ತರು ಆಗುವುದಿಲ್ಲ. ಅಂದರೆ ಬಳಿಕ ಮಗನ ಸಲುವಾಗಿ ನೀನು ಏಕೆ ಇಷ್ಟು ಶೋಕ ಮಾಡುವೆ ? ನಿನ್ನ ಮಗನು ನಿನ್ನನ್ನು ಮೃತ್ಯುಪಾಶದಿಂದ ಉಳಿಸುವನೇ ? ನೀನೇನೋ ಈಗ ಗೋಕುಲಕ್ಕೆ ಹೋಗಿ ಮಗನನ್ನು ಸಂತೈಸುವೆನೆಂದು ಬಾಯಿಯಿಂದ ಹೇಳುವೆ. ಅಂದರೆ ಪರಮಪವಿತ್ರವೂ ರಮಣೀಯವೂ ಆದ ಸ್ವರ್ಗದಂತಿರುವ ಆ ಗೋಕುಲವನ್ನು ತೊರೆದು ನಿನಗೆ ಹೇಗೆ ಬರಲಿಕ್ಕೆ ಆದೀತು ? ಓಡಾಡುತ್ತಿರುವ ಕಮಲಗಳುಳ್ಳ ಸರೋವರದಂತೆ ಆ ಗೋಕುಲವು ಪ್ರಕಾಶಿಸುತ್ತಿದೆ. ಅದು ಸಂಪತ್ತಿಗೆ ಮನೆಯಂತಿರುವ ಸೌಂದರ್ಯ, ಸಂತೋಷದಾರ್ಢ್ಯವುಳ್ಳ ಜನಗಳಿಂದ ಕೂಡಿದೆ. ಗೋಕುಲದಂತೆಯೇ ಇದೆ. ಇದನ್ನು ನೋಡಿ ನೀನು ಹೇಗೆ ತಾನೆ ಹಿಂತಿರುಗಿ ಬರುತ್ತಿಯೇ ? ನೀನು ಸಾಯಲಿಕ್ಕೆ ಹೋಗುತ್ತೇನೆ ಎಂದು ಹೇಳಿದಾಗ ನಿನ್ನ ಮಗುವು ದೀನ ದನಿಯಿಂದ ಕರುಣಾಜನಕನಾಗಿ ಕೂಗಿಕೊಳ್ಳತೊಡಗಿದರೆ ನಿನಗೆ ಆ ಕರುವನ್ನು ಬಿಟ್ಟು ಬರಲು ಸಾಧ್ಯವಾಗುವುದೆ ?

ಗೋಕುಲದಲ್ಲಿ ತಾಯಂದಿರನ್ನು ನೆನೆದು ಅಂಬಾರವವನ್ನು ಮಾಡುವ ಕರುಗಳ ದನಿಯು ಯಾರ ಹೃದಯವನ್ನು ಎಳೆಯಲಿಕ್ಕಿಲ್ಲ? ಇಂತಹ ಪ್ರತಿ ಗೋಕುಲದಂತಿರುವ ಆ ಗೋಷ್ಠವನ್ನು ಬಿಟ್ಟು ಹೇಗೆ ತಿರುಗಿಬರುವೆ ? ಇದು ಅಶಕ್ಯ. ನನ್ನ ಪಂಚೇಂದ್ರಿಯಗಳು ಹಸಿದು ನಿನ್ನ ರಕ್ತವನ್ನು ಕುಡಿಯಬೇಕೆಂದು ಕಾತರಿಸಿನಿಂತಿವೆ. ನಿನ್ನ ಮಾತಿನ ಭರವಸೆಯಿಂದ ನಾನು ಹೇಗೆ ಸಮಾಧಾನ ಪಡಲಿ ?

**ನಂದಾ :-** ಮೃಗರಾಜನೇ, ನನ್ನ ಮಾತನ್ನು ಕೇಳು. ನಾನು ಒಂದೇ ಕರುವನ್ನು ಈದಿದ್ದೇನೆ. ಆ ಮಗುವನ್ನು ನೋಡಿ, ನಮ್ಮ ಹಿಂಡಿನ ನಾಯಕನನ್ನು ಕಂಡು, ಪ್ರತಿದಿನವೂ ನಮ್ಮ ಹಾಲು ಕರೆಯುವ ಗೋಪಿಯರಿಗೆಲ್ಲ ಹೇಳಿ, ನಾನು ಖಂಡಿತವಾಗಿ ಮರಳಿ ಬರುತ್ತೇನೆ. ಆ ಗೋಷ್ಠದಲ್ಲಿ ನನ್ನ ತಾಯಿಯು ಇರುತ್ತಾಳೆ. ಅವಳಿಗೂ ಸಮಾಧಾನಮಾಡಿ, ನಾನು ನಿಶ್ಚಿತ ವಾಗಿಯೂ ನಿನ್ನ ಬಳಿಗೆ ಬರುತ್ತೇನೆ. ನಾನು ಆಣೆಮಾಡಿ ಹೇಳುತ್ತೇನೆ. ನನ್ನನ್ನು ನಂಬು. ನಾನು ಬರದಿದ್ದರೆ ನನಗೆ ಬ್ರಹ್ಮಹತ್ಯಾ, ಪಿತೃಮಾತೃ ಹತ್ಯಾ ಪಾಪಗಳು ಬರಲಿ. ವಿಷಕೊಟ್ಟ ವರಿಗೂ, ಬೇಟೆಗಾರರಿಗೂ ಮ್ಲೇಂಛರಿಗೂ ಬರುವ ಪಾಪಗಳು ಬರಲಿ. ಆಕಳುಗಳು ನಿಲ್ಲಲು ಅಡ್ಡಿಪಡಿಸುವವರಿಗೂ, ಗೋಹತ್ಯೆಗೈಯುವವರಿಗೂ, ಮಲಗಿದವರನ್ನು ಹೊಡೆದೆಬ್ಬಿಸಿದವರಿಗೂ ಬರುವ ಪಾಪಗಳು ನನಗೆ ಬರಲಿ. ಒಮ್ಮೆ ಒಬ್ಬನಿಗೆ ಕನ್ಯೆ ಕೊಡುತ್ತೇನೆಂದು ನಿಶ್ಚಯಮಾಡಿ, ಮದುವೆಮಾಡಿ ಬೇರೊಬ್ಬರಿಗೆ ಕೊಟ್ಟ ನಂತರ ಮತ್ತೆ ಧಾರೆಯೆರೆದು ಕೊಟ್ಟರೆ, ಇಬ್ಬರು ಹೆಂಡಂದಿರನ್ನು ಮಾಡಿಕೊಂಡು ಒಬ್ಬಳನ್ನೇ ಪ್ರೀತಿಯಿಂದ ಬರುವ ಪಾಪವು ನಾನು ನಿನ್ನ ಬಳಿಗೆ ತಿರುಗಿ ಬಾರದಿದ್ದರೆ, ಬರಲಿ. ಭಾರಹೊರಲು ಶಕ್ತಿಯಿಲ್ಲದ ಚಿಕ್ಕಮಯಸ್ಸಿನ ಅಥವಾ ಮುದುಕನಾದ ಅಥವಾ ರೋಗಿಷ್ಠ ಎತ್ತುಗಳನ್ನು ಹೂಡಿ ತಗ್ಗುದಿನ್ನೆಯಲ್ಲಿ ಹೊಡೆಯುತ್ತ ಓಡಿಸಿದಾಗ ಬರುವ ಪಾಪ ನನಗೆ ಬರಲಿ. ಮನೆಗೆ ಬಂದ ಮಿತ್ರನನ್ನು ನಿರಾಶನನ್ನಾಗಿ ಬರಿಗೈಯಿಂದ ತಿರುಗಿ ಕಳುಹಿಸುವವನಿಗೆ ಬರುವ ಪಾಪವು ನಾನು ಮರಳಿ ಬಾರದಿದ್ದರೆ ನನಗೆ ಬರಲಿ. ನಂದೆಯ ಈ ಮಾತನ್ನು ಕೇಳಿ ಹುಲಿಯು ನುಡಿಯಿತು -ಧೇನುವೇ, ನೀನು ಮಾಡಿದ ಈ ಆಣೆಗಳಿಂದಾಗಿ ನನಗೆ ನಿನ್ನಲ್ಲಿ ವಿಶ್ವಾಸವಾಗಿದೆ. ನೀನು ಹೋಗಬಹುದು. ನಿನಗೆ ಕದಾಚಿತ್ 'ಈ ಹುಲಿಯು ಮೂರ್ಖವಿರುತ್ತದೆ. ಇದನ್ನು ನಾನು ಸರಿಯಾಗಿ ವಂಚಿಸಿದೆ' ಎಂದು ನೀನು ತಿಳಿಯಬಹುದು. ಈ ವಿಷಯದಲ್ಲಿ ಕೆಲವರು ಒಂದು ಧರ್ಮಶಾಸ್ತ್ರ ಹೇಳುತ್ತಾರೆ. ಹೆಣ್ಣುಮಕ್ಕಳ ಮುಂದೆ, ವಿವಾಹ ಸಂದರ್ಭಗಳಲ್ಲಿ ಹಾಗೂ ಆಕಳುಗಳನ್ನು ಬಿಡುಗಡೆಮಾಡುವ ಪ್ರಸಂಗದಲ್ಲಿ ಮತ್ತು ಪ್ರಾಣಕ್ಕೆ ಗಂಡಾಂತರ ಒದಗಿದಾಗ ಆಣೆಇಟ್ಟು ತಪ್ಪಿದರೂ ಪಾಪವಿಲ್ಲ ಎಂದು ಹೇಳುತ್ತಾರೆ. ಇಂತಹ ಸಂದರ್ಭದಲ್ಲಿ ನೀನು ಯಾರ ಮಾತನ್ನು ನಂಬಬೇಡ. ಅನೇಕ ತರ್ಕ, ಕುತರ್ಕ ಹೇತು ದೃಷ್ಟಾಂತಗಳಿಂದ ಕ್ಷುದ್ರರಾದ ಅಜ್ಞಾನಿಮಾನವರು, ವೇದಶಾಸ್ತ್ರಗಳನ್ನೆಲ್ಲ ತಿರುವು ಮುರುವು ಮಾಡಿ ತಮಗೆ ಅನುಕೂಲವಾಗುವಂತೆ ಉಪನ್ಯಾಸಮಾಡಿ ಜನರನ್ನು ಮೋಸಗೊಳಿಸುತ್ತಾರೆ. ಸುಳ್ಳಾದದ್ದನ್ನು ಸತ್ಯವಾಗಿಮಾಡಿ ಹೇಳುತ್ತಾರೆ. ಜನರು ತಮ್ಮ ಕೆಲಸವಾದ ಬಳಿಕ ಉಪಕಾರ ಮಾಡಿದವರನ್ನು ಬಹುಶಃ ಮನ್ನಿಸುವುದೇ ಇಲ್ಲ. ಕೆಚ್ಚಲದಲ್ಲಿಯ ಹಾಲು ಎಲ್ಲವೂ ತೀರಿದ ಬಳಿಕ ಕರುವು ತಾಯಿಯನ್ನು ಬಿಟ್ಟುಹೋಗುವುದಿಲ್ಲವೇ ! ಅದರಂತೆ ಮನುಷ್ಯನು ತನ್ನ ಕೆಲಸವಾದ ಬಳಿಕ ಉಪಕಾರ ಮಾಡಿದವನನ್ನು ಮರೆಯುತ್ತಾನೆ. ಉಪಕಾರಮಾಡಿದವರಿಗೆ

ಪ್ರತಿ ಉಪಕಾರ ಮಾಡುವ ಪುಣ್ಯಾತ್ಮನನ್ನು ನಾನು ಈ ವರೆಗೂ ನೋಡಿಲ್ಲ. ಯಾರೇ ಆಗಲಿ, ತಮ್ಮ ಉದ್ದಿಷ್ಟವಾದ ಕಾರ್ಯವು ಆದ ಬಳಿಕ ಬುದ್ಧಿಯು ಬದಲಾಗಿ ಬಿಡುತ್ತದೆ.

ತಮ್ಮ ಕಾರ್ಯವನ್ನು ಸಾಧಿಸಲು ಜನರು ದೇವತೆಗಳ ಆಣೆ ಇಟ್ಟುಕೊಳ್ಳುತ್ತಾರೆ. ಎಂತೆಂತಹ ಸುರರು, ಋಷಿಗಳು, ನರರು, ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಮನಬಂದ ಆಣೆಮಾಡಿ, ಅನಂತರ ಮರೆತುಬಿಡುತ್ತಾರೆ ದೇವತೆಗಳ, ಅಗ್ನಿಯ ಹಾಗೂ ಗುರುಗಳ ಎದುರು ಯಾರು ಸತ್ಯದಿಂದ ಪ್ರತಿಜ್ಞೆಮಾಡಿ ಅದಕ್ಕೆ ತಪ್ಪಿ ನಡೆಯುವವರೋ ಅವರಿಗೆ ಯಮಧರ್ಮನು ಒಳ್ಳೇ ಶಾಸನವನ್ನು ಮುಂದೆ ಮಾಡುತ್ತಾನೆ. ಆದುದರಿಂದ ನಿನಗೂ ಕೂಡ ಆಣೆಮಾಡಿ ನನ್ನನ್ನು ವಂಚಿಸಿದೆನು ಎಂಬ ಬುದ್ಧಿ ಹುಟ್ಟದಿರಲಿ. ನೀನೇ ಎಲ್ಲ ಪ್ರತಿಜ್ಞೆಮಾಡಿ ಬರುತ್ತೇನೆ ಎಂದು ಹೇಳಿರುವೆ. ಬರದಿದ್ದಲ್ಲಿ ಎಂತಹ ಪಾಪ ಬರಲಿ ಎಂದು ಆಡಿ ತೋರಿಸಿರುವೆ. ಇನ್ನು ಮುಂದಿನ ಮಾತನ್ನು ನಿನಗೇ ಬಿಟ್ಟಿದ್ದೇನೆ. ನಿನ್ನ ಇಷ್ಟದಂತೆ ಮಾಡು.

ಎಲವೋ ಒಳ್ಳೆಯ ಹುಲಿಯೆ, ನಿನ್ನನ್ನು ಅಥವಾ ನಿನ್ನಂತಹ ಸಾಧುಪ್ರಾಣಿಯನ್ನು ಯಾವನು ವಂಚಿಸಿ ಮುಂದೆ ಬಂದಾನು ! ಇನ್ನೊಬ್ಬರನ್ನು ವಂಚಿಸಿದವನು ತನ್ನನೇ ವಂಚಿಸಿ ಕೊಂಡಂತೆ.

**ಹುಲಿ :-** ಗೋಮಾತೆಯೆ ಹೋಗು. ಪುತ್ರವತ್ಸಲೆಯಾದ ನೀನು ಮಗುವಿನ ಮುಖ ನೋಡು. ಮಗನನ್ನು ಮುದ್ದಾಡು. ಅದಕ್ಕೆ ಹೊಟ್ಟೆ ತುಂಬ ನಿನ್ನ ಹಾಲನ್ನು ಕುಡಿಸು. ನಿನ್ನ ತಾಯಿಯನ್ನು ಸಂತೈಸು. ಅಣ್ಣನ ನಿರೂಪ ತೆಗೆದುಕೊ. ನಿನ್ನ ಗೆಳತಿ ಹಾಗೂ ಬಂಧು ಬಳಗದವರನ್ನು ಕಂಡು ಮಾತನಾಡಿ ಬೀಳ್ಕೊಂಡು ಬಾ ನಿನ್ನ ವಚನವನ್ನು ಸತ್ಯವಾಗಿಸಬೇಕು ಎಂಬ ಧ್ಯೇಯವು ನಿನ್ನ ಮುಂದಿರಲಿ. ನೀನು ಬೇಗ ಆಗಮಿಸು.

**ಪುಲಸ್ತ್ಯ :-** ಸತ್ಯವನ್ನು ನುಡಿಯುವ ಆ ಆಕಳು ಹುಲಿಯ ಮುಂದೆ ಬಗೆಬಗೆಯ ಆಣೆಗಳನ್ನಿಟ್ಟು, ಅದರ ಅಪ್ಪಣೆ ಪಡೆದು, ತನ್ನ ಸ್ಥಳಕ್ಕೆ ಹೊರಟಿತು. ಕರುಳು ಎಳೆದೆಡೆಗೆ ಹೆಜ್ಜೆಯಿಕ್ಕುತ್ತ ಅದು ನಡೆಯಿತು. ಅದರ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯುತ್ತಿದ್ದವು. ಮೈ ನಡುಗುತ್ತಿತ್ತು. ದುಃಖದ ಸಮುದ್ರದಲ್ಲಿಯೇ ಅದು ಮುಳುಗಿ ಏಳುತ್ತಿತ್ತು. ತನ್ನ ಕರುವನ್ನು ''ಅಂಬಾ ಅಂಬಾ'' ಎಂದು ಕರುಳು ಕಿತ್ತು ಬರುವಂತೆ ಕೂಗುತ್ತಾ ಮನೆಯೆಡೆಗೆ ಶೋಕಾಕುಲವಾಗಿ ಸಾಗಿತು. ನೀರಿನಲ್ಲಿ ಮೊಸಳೆ ಹಿಡಿದ ಆನೆಯು ಬಿಡಿಸಿಕೊಳ್ಳಲಾರದೆ ಒದ್ದಾಡುವಂತೆ ತನ್ನ ಮಗುವನ್ನೂ ತನ್ನನ್ನೂ ಕಾಪಾಡಿಕೊಳ್ಳಲಿಕ್ಕೆ ಆಗದೆ ದುಃಖಪಡುತ್ತ ಗೋಳಾಡುತ್ತಿತ್ತು. ಅದು ತನ್ನ ಮಗುವನ್ನು ''ಅಂಬಾ'' ಎಂದು ಕೂಗುತ್ತಾ ಮನೆಯಕಡೆಗೆ ಹೊರಟಿತು. ಗೋಕುಲಕ್ಕೆ ಧಾವಿಸಿತು. ಇಂದ್ರಾನದಿಯ ತೀರದಲ್ಲಿಯೇ ಅದರ ಕರುವು ಒದರುತ್ತ ನಿಂತಿತ್ತು. ಮಗುವಿನ ದನಿಕೇಳಿದ ಕೂಡಲೇ ನಂದೆಯು ಅತ್ತ ಧಾವಿಸಿತು. ತಾಯಿಯನ್ನು ಕಂಡಕೂಡಲೇ ಕರುವಿಗೆ ಏನೋ ಸಂಶಯ ಬಂದಿತು. ಪ್ರತಿದಿನವೂ ತನ್ನ ಬಳಿಗೆ ಆನಂದದಿಂದ ಬರುವ ತನ್ನ ತಾಯಿಯ ಕಣ್ಣಿನಲ್ಲಿ ನೀರೇಕೆ ! ಎಂದು ಶಂಕೆ ಬಂದು ಆ ಕೂಸು ಕೇಳಿತು.

**ಕರು :-** ತಾಯಿ ನಿನ್ನ ದೇಹದಲ್ಲಿ ಆರೋಗ್ಯವಿಲ್ಲವೇ ? ನೀನೇಕೊ ಸಂತ್ರಸ್ತಳಾಗಿ ಕಾಣುವೆಯಲ್ಲ. ಬಹಳ ಗಾಬರಿ ಆದಂತಿರುವೆ. ನಿನ್ನ ಕಣ್ಣಿನಲ್ಲಿ ಏನೋ ಭಯವು ಇಣುಕುತ್ತಿದೆ. ನಿನ್ನ ದುಃಖಕ್ಕೆ ಕಾರಣವೇನು ?

**ನಂದಾ :-** ಮಗನೆ, ''ಮೊದಲು ನನ್ನ ಸ್ತನವನ್ನು ಕುಡಿ. ಎನ್ನ ಈ ದುಃಖಕ್ಕೆ ಕಾರಣ ಕೇಳಿದರೆ ನನಗೆ ಹೇಳಲು ಶಕ್ತಿಯಿಲ್ಲ. ಮೊದಲು ಯಥೇಚ್ಛವಾಗಿ ಹಾಲುಕುಡಿದು ತೃಪ್ತನಾಗು, ಮಗನೆ. ನಿನಗೆ ಇದೇ ನಿನ್ನ ತಾಯಿಯ ಕೊನೆಯ ಭೇಟಿ. ನಿನಗೆ ಇನ್ನು ಮುಂದೆ ನಿನ್ನ ಹಡದವ್ವನ ದರ್ಶನವಾಗಲಾರದು. ಅಯ್ಯೋ ವತ್ಸಾ ! ಇಂದೊಂದು ದಿನ ನೀನು ನನ್ನ ಮೊಲೆ ಹಾಲು ಕುಡಿಯುವೆ. ನಾಳೆ ಯಾರ ಸ್ತನಪಾನ ಮಾಡುವೆ ? ಪುತ್ರನೇ, ನಾನು ಇಂದು ಮತ್ತೆ ಹೋಗಲೇಬೇಕು. ಆಣೆ ಇಟ್ಟು ಬಂದಿದ್ದೇನೆ. ಅಲ್ಲಿ ಒಂದು ಹುಲಿ ಹಸಿದು ಕುಳಿತಿದೆ. ಅದಕ್ಕೆ ನನ್ನ ದೇಹವನ್ನು ನಾನು ಉಣ್ಣಲು ಕೊಡಬೇಕಾಗಿದೆ.'' ತಾಯಿಯ ಈ ಮಾತನ್ನು ಕೇಳಿ ಕರುವು ಮತ್ತೆ ನುಡಿಯಿತು.

**ಕರು :-** ಅಮ್ಮಾ, ನಾನೂ ನಿನ್ನ ಜೊತೆಗೆ ಅಲ್ಲಿಗೆ ಬರುತ್ತೇನೆ. ಇಲ್ಲಿ ನಾನೊಬ್ಬನೇ ಬದುಕಿ ಇರುವುದಕ್ಕಿಂತ ತಾಯಿಯೊಡನೆ ನಾನೂ ಮರಣಹೊಂದುವುದು ಲೇಸಲ್ಲವೆ ? ಅಮ್ಮಾ ನೀನು ನನ್ನನ್ನು ಬಿಟ್ಟು ಹೋದರೆ ಒಂಟಿಯಾದ ನಾನು ತಾಯಿಯ ರಕ್ಷಣೆಯಿಲ್ಲದೆ ಸಾಯಬೇಕು. ಅದಕ್ಕಿಂತ ವನದಲ್ಲಿ ಆ ಹುಲಿಯು ನಿನ್ನೊಡನೆ ನನ್ನನ್ನೂ ಕೊಂದು ಬಿಡಲಿ. ಆ ಹುಲಿಯು ಕರು ಸಹಿತವಾಗಿಯೇ ನಿನ್ನನ್ನು ಕೊಂದು ಬಿಟ್ಟರೆ ನನಗೆ ಮುಂದಾದರೂ ಮಾತೃಭಕ್ತರಿಗೆ ಆಗುವ ಸದ್ಗತಿಯು ತಾನಾಗಿಯೇ ಲಭಿಸುವದು. ಆದುದರಿಂದ ನಾನೂ ನಿನ್ನ ಜೊತೆಗೆ ಆ ಹುಲಿಯ ಬಳಿಗೆ ಬರುತ್ತೇನೆ. ಅಥವಾ ತಾಯಿಯೇ ನೀನೇ ಇಲ್ಲಿರು. ನಿನ್ನ ಮಾತು, ನಿನ್ನ ಆಣೆ ಎಲ್ಲವನ್ನೂ ನಾನೇ ಸತ್ಯಮಾಡುತ್ತೇನೆ. ಆ ಹುಲಿಯು ನಿನ್ನ ಬದಲಾಗಿ ನನ್ನನ್ನೇ ತಿಂದು ಬಿಡಲಿ. ತಾಯಿ ಇಲ್ಲದ ಮಗು ಬದುಕಿಯಾದರೂ ಏನು ಪ್ರಯೋಜನ ! ಆ ಹುಲಿ ನನ್ನನ್ನು ತಿಂದರೆ ಅದಕ್ಕೆ ಆಹಾರವಾಯಿತು. ನೀನು ಬದುಕಿ ಉಳಿದಂತಾಯಿತು.

ನೀನಿಲ್ಲದೆ ಎಳೆ ಕರುವಾದ ನಾನು ಬದುಕಲಾರೆ. ನೀನು ಹೋದರೆ ಅನಾಥನಾದ ನನ್ನನ್ನು ಕಾಪಾಡುವವರಾರು ? ಹಾಲು ಕುಡಿಯುವ ಮಕ್ಕಳಿಗೆ ತಾಯಿಯಂಥ ಹಿತಬಂಧು ಯಾರಾದರೂ ಉಂಟೇ ಈ ಜಗತ್ತಿನಲ್ಲಿ ? ನಾನು ಸತ್ತು ಹೋದರೆ ನೀನು ಹೇಗಾದರೂ ಬದುಕಬಹುದು. ಮತ್ತೆ ಬೇರೆ ಮಕ್ಕಳು ಹುಟ್ಟಬಹುದು. ನನಗೂ ತಾಯಿಯನ್ನು ಉಳಿಸಿದ ಪುಣ್ಯವು ಬರುವುದು. ತಾಯಿಗೆ ಸಮನಾದ ನಾಥರಿಲ್ಲ. ತಾಯಿಗೆ ಸಮನಾದ ಗತಿಯಿಲ್ಲ. ತಾಯಿಯಂತಹ ಸ್ನೇಹವನ್ನು ಯಾರೂ ಮಾಡಲಾರರು. ತಾಯಿಯಷ್ಟು ಸುಖವನ್ನು ಯಾರೂ ಕೊಡಲಾರರು. ತಾಯಿಗೆ ಸಮಾನರಾದ ದೇವರು ಪರಲೋಕದಲ್ಲಿ ಇಲ್ಲ. ಇಹಲೋಕದಲ್ಲಿಯೂ ತಾಯಿಗೆ ಸಮನಾದ ದೇವತೆಯು ಇಲ್ಲ. ಬ್ರಹ್ಮದೇವರು ಈ ಅತ್ಯಂತ ಮಹತ್ವದ ಧರ್ಮವನ್ನು ನಿರ್ಮಿಸಿದ್ದಾನೆ. ಇಂತಹ ಮಾತೃಸೇವಾ ಧರ್ಮವನ್ನು ಆಚರಿಸುವ ಮಕ್ಕಳು ದಿವ್ಯಗತಿಯನ್ನು ಹೊಂದುವರು.

**ನಂದಾ :-** ಮಗನೇ, ಈಗ ಮೃತ್ಯುವು ನನಗೆ ಬಂದಿರುತ್ತದೆ. ಆ ಹುಲಿಯು ನನ್ನನ್ನೇ ಕಬಳಿಸುತ್ತದೆ. ನೀನು ಅಲ್ಲಿ ಬರುವುದು ಬೇಡ. ಚಿಕ್ಕಮಕ್ಕಳಿಗೆ ಮತ್ತೊಬ್ಬರ ಮರಣದಿಂದ ಮರಣವು ಬರುವುದು ಸರಿಯಲ್ಲ. ಪುತ್ರನೆ, ನಿನ್ನ ತಾಯಿಯು ನಿನಗೆ ಸಂದೇಶ ಕೊಡುವುದು ಇದೇ ಕೊನೆಯದು. ಮಕ್ಕಳು ಮೊದಲು ತಾಯಿಯ ಮಾತನ್ನು ಕೇಳಬೇಕು. ಅನಂತರ ಅವರ ಸೇವೆಯ ವಿಚಾರ. ನನ್ನ ಈ ಕೊನೆಯ ಸಂದೇಶವನ್ನು ಆಲಿಸು. ನೀನು ವನದಲ್ಲಿ ತಿರುಗಾಡುವಾಗ ಅಥವಾ ನದಿ ಕೆರೆಗಳಲ್ಲಿ ನೀರು ಕುಡಿಯಲು ಹೋದಾಗ

ಏನಾದರೂ ತಪ್ಪು ಪ್ರಮಾದ ಮಾಡಬೇಡ. ಎಲ್ಲ ಪ್ರಾಣಿಗಳೂ ತಾವು ಮಾಡುವ ತಪ್ಪು, ಅನವಧಾನ, ಪ್ರಮಾದಗಳಿಂದಲೇ ನಾಶಹೊಂದುವವು. ಇದರಲ್ಲಿ ಸಂಶಯವಿಲ್ಲ. ಏನಾದರೂ ತಪ್ಪುಮಾಡಿದರೆ ವಿನಾಶ ಖಂಡಿತ ಬಹಳಷ್ಟು ಆಶೆಪಡಬೇಡ. ಲೋಭದಿಂದ ದುರ್ಗಮವಾದ ಸ್ಥಳದಲ್ಲಿರುವ ಹುಲ್ಲನ್ನು ತಿನ್ನಲು ಹೋಗಬೇಡ. ಲೋಭದಿಂದ ಈ ಜಗತ್ತಿನಲ್ಲಿ ಮತ್ತು ಪರತ್ರದಲ್ಲಿ ವಿನಾಶವಾಗುವುದು ಖಂಡಿತ.

ಅತ್ಯಾಶೆಗೆ ಒಳಗಾದ ಜನರು ಲೋಭದಿಂದ ಸಮುದ್ರದ ಆಳಕ್ಕೆ ಇಳಿಯುತ್ತಾರೆ. ದುರ್ಗಮವಾದ ಅರಣ್ಯಗಳಲ್ಲಿ ಹೊಕ್ಕು ತಿರುಗುತ್ತಾರೆ. ಎಂತಹ ವಿದ್ವಾಂಸನಾಗಿದ್ದರೂ ಮನುಷ್ಯನು ಲೋಭದಿಂದ ಅತಿ ಭೀಕರವಾದ ಅಕೃತ್ಯಗಳನ್ನು ಎಸಗುತ್ತಾನೆ. ಲೋಭ ಪ್ರಮಾದ ಮತ್ತು ವಿಶ್ವಾಸ ಇವು ಮೂರರಿಂದ ಜಗತ್ತು ಹಾಳಾಗುತ್ತವೆ. ಆದುದರಿಂದ ಮನುಷ್ಯನು ಅತಿ ಆಶೆ. ಅತಿ ತಪ್ಪುಗಳನ್ನು, ಅತಿ ವಿಶ್ವಾಸಗಳನ್ನು ಮಾಡಬಾರದು. ಪುತ್ರನೆ, ಎಲ್ಲ ಕ್ರೂರ ಪ್ರಾಣಿಗಳಿಂದಲೂ ಮ್ಲೇಂಛ ಹಾಗೂ ಕಳ್ಳಕಾರರ ಉಪದ್ರವಗಳಿಂದಲೂ ಸರ್ವ ಪ್ರಯತ್ನಮಾಡಿ ಆತ್ಮರಕ್ಷಣೆಯನ್ನು ಸರ್ವಪ್ರಾಣಿಗಳು ಮಾಡಿಕೊಳ್ಳಬೇಕು. ದುಷ್ಟಸ್ವಭಾವದ ನೀಚ ಜಾತಿಯ ಪಶು ಪಕ್ಷಿಗಳು ಒಂದೇ ಸ್ಥಳದಲ್ಲಿ ವಾಸಿಸುತ್ತಿದ್ದರೂ ಅವುಗಳ ಚಿತ್ತಲಹರಿಯ ನೆಲೆ ಹತ್ತುವದಿಲ್ಲ. ಒಮ್ಮೊಮ್ಮೆ ಅವುಗಳ ದುಃಸ್ವಭಾವವು ವಿಪರೀತವಾಗುತ್ತದೆ. ಉಗುರುಳ್ಳ ಪ್ರಾಣಿಗಳು, ನದಿಗಳು, ಕೊಂಬುಳ್ಳ ಪ್ರಾಣಿಗಳು, ಶಸ್ತ್ರಧಾರಿಗಳು, ಇವರಲ್ಲಿ ವಿಶ್ವಾಸವನ್ನು ಇಡಬಾರದು ಮತ್ತು ಹೆಂಗಸರಲ್ಲಿ, ಆಳುಗಳಲ್ಲಿ ನಂಬಿಕೆ ಇಡಬಾರದು. ವಿಶ್ವಾಸ ಹೊಂದದವನಲ್ಲಿ ವಿಶ್ವಾಸವಿಡಬಾರದು. ವಿಶ್ವಾಸವಿಟ್ಟವನಲ್ಲಿ ಹೆಚ್ಚು ವಿಶ್ವಾಸವಿಡಬಾರದು. ವಿಶ್ವಾಸದಿಂದ ಹುಟ್ಟಿದ ಭಯವು ಬುಡದಿಂದಲೇ ಕತ್ತರಿಸುತ್ತದೆ. ತನ್ನ ದೇಹದಲ್ಲಿಯೂ ವಿಶ್ವಾಸಪಡಬಾರದು. ಹೆದರುವವನಲ್ಲಿಯೂ ವಿಶ್ವಾಸವಿಡಬಾರದು. ಎಚ್ಚರದಪ್ಪಿದವನ ವಿಷಯದಲ್ಲಿಯೂ ನಂಬಿಕೆ ಇಡಬಾರದು. ಯಾಕೆಂದರೆ ಅವರ ಪ್ರಮಾದದಿಂದ ಗುಟ್ಟನ್ನೆಲ್ಲ ಜನರಿಗೆ ಹೇಳಿಬಿಡುವರು. ವಾಸನೆಯಿಂದ ಪ್ರಯತ್ನಪಟ್ಟು ಎಲ್ಲಾ ಕಡೆಯಲ್ಲಿ ನೋಡು. ಗೋವುಗಳು ಗಂಧದಿಂದಲೇ ತಿಳಿಯುತ್ತವೆ. ರಾಜರು ಆಳುಗಳೆಂಬ ಕಣ್ಣಿನಿಂದ ತಿಳಿಯುತ್ತಾರೆ. ಒಬ್ಬನೇ ಘೋರವಾದ ಕಾಡಿನಲ್ಲಿ ಇರಬಾರದು. ಧರ್ಮವನ್ನೇ ಯೋಚಿಸಬೇಕು. ನೀನು ಆತುರ ಪಡಬೇಡ. ಎಲ್ಲರಿಗೂ ಸಾವು ಸಿದ್ಧವಾಗಿದೆ. ಒಬ್ಬ ಹಾದಿಗಾರನು ನೆರಳಲ್ಲಿ ಬಂದು ಕುಳಿತುಕೊಂಡು ಸುಧಾರಿಸಿಕೊಂಡು ಹೋಗುವಂತೆ, ಪ್ರಾಣಿಗಳ ಸೇರುವಿಕೆಯೂ ಹಾಗೆ ಆಗಿದೆ. ಎಲೈ ಮಗನೆ, ಈ ಜಗತ್ತು ಅನಿತ್ಯವಾದದ್ದು. ನೀನೊಬ್ಬನೇ ದುಃಖಿಸುತ್ತಿಯೇ ? ಶೋಕವನ್ನು ದೂರವಾಗಿ ಬಿಟ್ಟು ನನ್ನ ಮಾತನ್ನು ಅನುಸರಿಸು.

**ಪುಲಸ್ತ್ಯ** :- ಹೀಗೆ ಹೇಳಿ ನಂದಾ ಧೇನುವು ತನ್ನ ಕರುವನ್ನು ಹತ್ತಿರ ಕರೆದು ಕೊಂಡು ಅದರ ನೆತ್ತಿ ಮೂಸಿ, ತಲೆಯನ್ನು ನೇವರಿಸಿ, ಮೈಯನ್ನು ನೆಕ್ಕಿ ನಾಗಿನಿಯಂತೆ ಬಿಸಿ ಉಸಿರನ್ನು ಮತ್ತೆ ಮತ್ತೆ ಬಿಡುತ್ತ ಶೋಕಾಕ್ರಾಂತವಾಗಿ ನಿಂತುಕೊಂಡಿತು. ಅದರ ಕಂಗಳಿಂದ ದುಃಖಾಶ್ರುಗಳು ಒಂದೇ ಸವನೆ ಉದುರುತ್ತಿದ್ದವು. ಪುತ್ರಹೀನವಾದ ಜಗತ್ತು ಅವಳಿಗೆ ಶೂನ್ಯವಾದಂತೆ ಕಂಡಿತು. ಆಳವಾದ ಕೆಸರಿನಲ್ಲಿ ಕುಸಿಯುತ್ತಿರುವಂತೆ ದುಃಖಾತಿರೇಕದಿಂದ ಕಸಿವಿಸಿಪಡುತ್ತ ಅವಳು ಶೋಕಿಸಿದಳು. ಮತ್ತು ಆ ನಂದೆಯು ಮಗನನ್ನು ಕುರಿತು ನುಡಿಯಿತು.

**ನಂದ :-** ಮಗನಿಗೆ ಸಮಾನವಾದ ಸ್ನೇಹವಿಲ್ಲ. ಮಗನಿಗೆ ಸಮನಾದ ಸುಖ ಬೇರೊಂದಿಲ್ಲ. ಮಗನಿಗೆ ಸಮಾನವಾದ ಪ್ರೀತಿ ಯಾವುದೂ ಇಲ್ಲ. ಮಗನಿಂದ ದೊರೆಯುವ ಗತಿ ಅಥವಾ ಮೋಕ್ಷವು ಬೇರಿಂದ ದೊರೆಯದು. ಮಕ್ಕಳಿಲ್ಲದ ಮನೆ ಶೂನ್ಯ. ಮಕ್ಕಳಿಲ್ಲದ ಜನ್ಮ ವ್ಯರ್ಥ. ಮಕ್ಕಳಿಂದಲೇ ಈ ಲೋಕದಲ್ಲಿ ಸುಖ. ಪರದಲ್ಲಿ ಮೋಕ್ಷ. ಸಂತಾನ ವಿಹೀನರಿಗೆ ಶಾಶ್ವತವಾದ ನರಕವೇ ಗತಿ. ಗುಂಪಿನ ಮುಂಭಾಗದಲ್ಲಿ ಸಂಚರಿಸುತ್ತಿದ್ದ ನನ್ನನ್ನು ಹುಲಿಯು ಹಿಡಿಯಿತು. ಅನೇಕ ಪ್ರತಿಜ್ಞೆಗಳನ್ನು ಮಾಡಿ ಬಿಡಿಸಿಕೊಂಡು ಬಂದಿರುವೆನು. ಮತ್ತೆ ಅಲ್ಲಿಗೆ ಹೋಗುತ್ತೇನೆ. ಮಗು, ತಾಯಿ, ಸ್ನೇಹಿತರು, ಗೋಕುಲ ಮತ್ತು ಗೋವುಗಳನ್ನು ನೋಡಲು ಆ ಸತ್ಯ ವಾಕ್ಯದಿಂದ ಬಂದಿರುವೆನು. ಮತ್ತೆ ಅಲ್ಲಿಗೆ ಹೋಗುತ್ತೇನೆ. ಹೀಗೆ ಮಗನನ್ನು ಸಂತೈಸಿ, ಆ ನಂದಾಧೇನವು ತನ್ನ ತಾಯಿಯನ್ನೂ ಸೋದರಿಯರನ್ನೂ ಗೆಳತಿಯರನ್ನೂ ಕುರಿತು ದೀನವಾಗಿ ಬೇಡಿಕೊಂಡಿತು. ಅಮ್ಮ, ದುಷ್ಟತನದಿಂದ ನಾನೇನು ಮಾಡಿದ್ದರೂ ಅದೆಲ್ಲವನ್ನೂ ಕ್ಷಮಿಸು. ನನ್ನ ಮಗನು ನಿನ್ನ ಮಗನೇ ಮತ್ತೇನನ್ನು ಹೇಳಲಿ ?

**ಪುಲಸ್ತ್ಯ :-** ಹೀಗೆ ಮಗನ ಗುಣವನ್ನು ಹೇಳಿ, ಮತ್ತೆ ತನ್ನ ಕರುವಿನೆಡೆಗೆ ಸ್ನೇಹದಿಂದ ನೋಡಿ, ಮತ್ತೆ ತನ್ನ ತಾಯಿಯನ್ನು, ಗೆಳತಿಯರಾದ ಗೋವುಗಳನ್ನು, ತಮ್ಮನ್ನು ಪಾಲಿಸುವ ಗೃಹಿಣಿಯರನ್ನು ಕುರಿತು ಹೇಳಿತು -

**ನಂದಾ :-** ನಿಮ್ಮ ಹಸುಗಳ ಹಿಂಡಿನ ಮುಂಭಾಗದಲ್ಲಿ ನಾನು ಹೋಗುತ್ತಲಿದ್ದೆ. ಆಗ ಭೀಕರವಾದ ಒಂದು ಹುಲಿಯು ನನ್ನನ್ನು ಹಿಡಿಯಿತು. ಆದರೂ ನಾನು ಮರಳಿ ಬರುವೆನೆಂದು ಆಣೆಮಾಡಿ ಹೇಳಿದ್ದರಿಂದ ಅದು ನನ್ನನ್ನು ಬಿಟ್ಟಿದೆ. ನಾನು ಮಗನನ್ನು ಕಂಡು, ನಿಮ್ಮನ್ನೆಲ್ಲ ಮಾತನಾಡಿಸಿ ಬರುತ್ತೇನೆಂದು ಅದಕ್ಕೆ ಹೇಳಿ ಬಂದಿದ್ದೇನೆ. ಅದರಂತೆ ನಾನು ಈಗ ಬಂದಾಯಿತು. ಮಗನನ್ನು ಮುದ್ದಾಡಿದ್ದಾಯಿತು. ನಿಮ್ಮೆಲ್ಲರನ್ನು ನೋಡುವುದೂ ಆಯಿತು. ನಾನು ಬಂದ ಕೆಲಸವು ಮುಗಿದಂತಾಗಿದೆ. ಮತ್ತೆ ಈಗ ನಾನು ಆ ಹುಲಿಗೆ ನನ್ನ ಆತ್ಮಾರ್ಪಣೆ ಮಾಡಲು ಹೋಗುತ್ತೇನೆ. ನನ್ನನ್ನು ಹಡೆದ ತಾಯಿಯಾದ ಗೋಮಾತೆಯೆ ನಾನು ನಿನ್ನ ಹೊಟ್ಟೆಯ ಮಗಳಾಗಿ ಏನಾದರೂ ನನ್ನ ದುಷ್ಟತನದಿಂದ ತಪ್ಪುಮಾಡಿದ್ದರೆ ನನ್ನ ಮಗುವನ್ನು ಕ್ಷಮಿಸಿ, ರಕ್ಷಿಸು. ಇದಕ್ಕೂ ಹೆಚ್ಚಿಗೆ ನಾನೇನು ಹೇಳಲಿ ? ನನ್ನ ಗೋ ಗೆಳತಿಯರಾದ ಸುರಭಿಮಾಲಿನ, ವಿಪುಲೆ, ಚಂಪಕೆ, ಭದ್ರೆ, ವಸುಧಾರೆ, ನಂದೆ, ಮಹಾನಂದೆ, ಘಟಸ್ರವೆ ಹಾಗೂ ಉಳಿದೆಲ್ಲ ಸೋದರಿಯರೆ ನಿಮಗೆಲ್ಲರಿಗೂ ವಂದಿಸುವೆನು. ತಿಳಿದಾಗಲಿ, ತಿಳಿಯದೇ ಆಗಲಿ, ನಾನು ಏನಾದರೂ ನಿಮಗೆ ಅಪ್ರಿಯವಾದದ್ದನ್ನು ನುಡಿದಿದ್ದರೆ, ನಿಮಗೆ ಬೇಸರವಾಗುವಂತೆ ನಡೆದಿದ್ದರೆ ಕ್ಷಮಿಸಿರಿ. ನೀವೆಲ್ಲರೂ ದೊಡ್ಡ ಮನಸ್ಸಿನ ಪೂಜ್ಯ ಗೋಮಾತೆಯರಲ್ಲವೆ ? ಇನ್ನೂ ಏನಾದರೂ ನಾನು ಅಲ್ಲದಸಲ್ಲದ ಕೃತ್ಯಗಳನ್ನು ಮಾಡಿದ್ದರೆ, ನೀವೆಲ್ಲರೂ ನನ್ನನ್ನು ಕ್ಷಮಿಸಬೇಕು. ಇದರಂತೆ ಸರ್ವಲೋಕದ ಮಾತೆಯರು, ಸರ್ವಸದ್ಗುಣಭರಿತೆಯರು ಆದ ಧೇನು ದೇವಿಯರೆಲ್ಲರೂ ಕಾಮಧೇನುಗಳೇ ಇದ್ದಂತೆ. ನೀವೆಲ್ಲರೂ ನನ್ನ ಬಾಲಕನನ್ನು ಕ್ಷಮಿಸಿರಿ ಮತ್ತು ರಕ್ಷಿಸಿರಿ. ಎಷ್ಟೆಂದರೂ ಅವನು ಚಿಕ್ಕವನಲ್ಲವೆ ? ಅವನಿಂದ ಅನೇಕ ತಪ್ಪುಗಳು ಆಗುವದು ಸಹಜ. ತಾಯಿಯಿಲ್ಲದ ತಬ್ಬಲಿಯೂ, ದೀನನೂ, ಊನನೂ,

ತಾಯಿಯ ವಿರಹಾಗ್ನಿಯಿಂದ ಬೆಂದು ಹೋದ ನನ್ನ ಮಗುವನ್ನು ಸೋದರಿಯರೇ ನೀವು ಕ್ಷಮಿಸಿರಿ. ಇಂದಿನಿಂದ ಆ ಅನಾಥ ಮಗುವಿಗೆ ನೀವೇ ತಾಯಂದಿರು. ಮಾತೃಶೋಕದಿಂದ ಸೊರಗಿ ಕೊರಗಿದ ಆ ನನ್ನ ದೀನವತ್ಸಲನನ್ನು ನನ್ನ ಸಹೋದರಿಯರಾದ ನೀವೆಲ್ಲರೂ ವಾತ್ಸಲ್ಯದಿಂದ ರಕ್ಷಿಸಿರಿ. ಅವನು ಹಿಂದಿನಂತೆ ಇನ್ನು ಮೇಲೆ ಅನಾಥನಲ್ಲ. ನಿಮ್ಮೆಲ್ಲರಿಗೂ ಮಗನು. ನೀವೆಲ್ಲರೂ ಕೂಡಿ ಅನಾಥ ದೀನನಾದ ಅವನನ್ನು ನಿಮ್ಮ ಮಗನೇ ಎಂದು ತಿಳಿದು ಕ್ಷಮಿಸಿ ರಕ್ಷಿಸಬೇಕು.

ನಾನು ಇನ್ನು ಹೋಗುತ್ತೇನೆ. ಅಲ್ಲಿ ಹುಲಿಯ ಎದುರು ಶಪಥಮಾಡಿದ್ದರಿಂದ ನಾನು ನಿಲ್ಲುವಂತಿಲ್ಲ. ಸತ್ಯಕ್ಕಾಗಿ ಹುಲಿಯ ಬಾಯಿಗೆ ಹೋಗುತ್ತೇನೆ. ಸಖಿಯರೇ ನೀವು ಯಾರೂ ಬಹಳಷ್ಟು ಚಿಂತೆ ಮಾಡಬೇಡಿರಿ. ಹುಟ್ಟಿದವನಿಗೆ ಸಾವು ತಪ್ಪದು. ಮೊದಲು ಹುಟ್ಟಿದವರಿಗೆ ಮೊದಲು ಮರಣ ಬರುವದು ನ್ಯಾಯವಾದದ್ದು. ನಾನು ನನ್ನ ಸೋದರಿಯರಿಗಿಂತ ಜೇಷ್ಠಳಾಗಿ ಹುಟ್ಟಿದ್ದರಿಂದ ನನಗೆ ಅವರೆಲ್ಲರಿಗಿಂತ ಮುಂಚಿತವಾಗಿಯೇ ಮರಣ ಬಂದಿದೆ. ಈ ಕ್ರಮ ಪ್ರಾಪ್ತ ಮರಣಕ್ಕೆ ಚಿಂತಿಸುವದೇಕೆ ?

ಆಗ ಆ ನಂದೆಯ ಮಾತೆಯರು, ಗೆಳತಿಯರು, ಆಶ್ಚರ್ಯ ಚಕಿತರೂ, ದುಃಖಿತರೂ ಆಗಿ ನುಡಿದರು. ನಂದೆಯೇ, ಇದು ಅತ್ಯಾಶ್ಚರ್ಯ. ಹುಲಿಯ ಮಾತಿನಿಂದ ನೀನು ದೊಡ್ಡ ಆಪತ್ತನ್ನು ಮೈ ಮೇಲೆ ಹಾಕಿಕೊಂಡಿರುವೆ. ಸತ್ಯವನ್ನಾಡುವ ಭರದಲ್ಲಿ ಈಗ ನೀನೇ ಸತ್ತು ಹೋಗುವೆ. ನ್ಯಾಯವಾಗಿ ವಿಚಾರ ಮಾಡಿದರೆ ಕ್ರೂರವಾದ ಭಯಂಕರವಾದ ಪ್ರಾಣಿಗಳನ್ನು ಆಣೆ ಪ್ರತಿಜ್ಞೆ ಹಾಗೂ ಸತ್ಯ ಮಾತುಗಳಿಂದ ವಂಚಿಸಿ ಪ್ರಯತ್ನ ಪೂರ್ವಕವಾಗಿಯೇ ನಾಶಮಾಡತಕ್ಕದ್ದು. ಅಂತಹ ಕ್ರೂರ ಶ್ವಾಪದಗಳಿಂದ ಆತ್ಮ ರಕ್ಷಣೆ ಮಾಡಿಕೊಳ್ಳುವದು ಧರ್ಮ. ಆದ್ದರಿಂದ, ನಂದೆ ನೀನು ಅಲ್ಲಿಗೆ ಹೋಗಕೂಡದು. ಸತ್ಯದ ಮೇಲಿನ ಲೋಭದಿಂದ ನಿನ್ನ ಈ ಹಸುಗೂಸನ್ನು ಬಿಟ್ಟು ಹುಲಿಯ ಬಾಯಿಗೆ ಬೀಳುವುದು ಘೋರ ಅಧರ್ಮವೇ ಆಗಿರುತ್ತದೆ. ಪೂರ್ವಕಾಲದಲ್ಲಿ ಧರ್ಮವಾದಿಗಳಾದ ಋಷಿಗಳು ಹಾಡಿದ ನೀತಿ ಗಾಥೆಯನ್ನು ನೀನು ಕೇಳಿಲ್ಲವೆ ? ಪ್ರಾಣಹೋಗುವ ಪ್ರಸಂಗ ಬಂದಾಗ ಆಣೆಮಾಡಿದರೆ ಪಾಪವಿಲ್ಲವೆಂದು ಒಂದು ಗಾದೆಯನ್ನು ಹೇಳಿದ್ದಾರೆ ಪೂರ್ವಕಾಲದ ಧರ್ಮ ಹೇಳುವ ಋಷಿಗಳು. ಯಾವ ಜಾಗದಲ್ಲಿ ಸುಳ್ಳು ಹೇಳಿದರೆ ಪ್ರಾಣ ಉಳಿಯುತ್ತದೆಯೋ, ಅಲ್ಲಿ ಸುಳ್ಳು ನಿಜವಾಗುತ್ತವೆ. ಪ್ರಾಣಿಗಳ ಹಿಂಸೆಯಾಗುವಂತಿದ್ದರೆ ನಿಜವೂ ಸುಳ್ಳಾಗುತ್ತದೆ. ಹೆಂಗಸರ ವಿಷಯದಲ್ಲಿ, ವಿವಾಹದಲ್ಲಿ, ಗೋವುಗಳ ಬಿಡುಗಡೆಯಲ್ಲಿ, ಜ್ಞಾನಿಗಳಿಗೆ ಕಷ್ಟದಲ್ಲಿ ಪ್ರತಿಜ್ಞೆಯನ್ನು ಮಾಡಿದರೆ ಪಾಪವಿಲ್ಲ.

**ನಂದಾ :-** ನೀವು ಹೇಳುವ ಮಾತು ನಿಜ. ಈ ಹಿರಿಯರ ಅಭಿಪ್ರಾಯ ನನಗೂ ಮಾನ್ಯವಾದದ್ದೇ. ಆದರೆ ಆ ಋಷಿವಚನವನ್ನು ಬಳಸಿಕೊಂಡು, ನಾನು ಸ್ವಾರ್ಥ ಸಾಧಿಸಿಕೊಳ್ಳಲು ಇಚ್ಛಿಸಲಾರೆ. ಇನ್ನೊಬ್ಬರ ಪ್ರಾಣರಕ್ಷಣೆಯ ಪ್ರಸಂಗದಲ್ಲಿ ನಾನು ಕೂಡ ಸುಳ್ಳಾಡಲು ಸಿದ್ಧಳಿದ್ದೇನೆ. ಆದರೆ ನನ್ನ ಜೀವ ಉಳಿಸಿಕೊಳ್ಳಲು ಮಾತ್ರ ನಾನು ಸುಳ್ಳನ್ನು ಆಡಲಾರೆ.

ಪ್ರಾಣಿಯು ತಾಯಿಯ ಗರ್ಭದಲ್ಲಿ ಇದ್ದಾಗ ಒಬ್ಬನೇ ಇರುವನು. ಮುಂದೆ ಮರಣ ಕಾಲದಲ್ಲಿಯೂ ಒಬ್ಬನೇ ಸಾಯುವನು. ಬದುಕಿದಾಗಲೂ ಅವನಿರುವುದು ಒಬ್ಬನೆ. ಸುಖ-ದುಃಖಗಳನ್ನೆಲ್ಲ ಅವನೊಬ್ಬನೇ ಅನುಭವಿಸುವನು. ಮಾನವನ ಹುಟ್ಟು-ಸಾವು

ಬದುಕಿನಲ್ಲಿ ಸತ್ಯವು ಹಾಸು ಹೊಕ್ಕಾಗಿದೆ. ಆದುದರಿಂದ ನಾನು ಸತ್ಯವನ್ನೇ ನುಡಿಯುತ್ತೇನೆ ಲೋಕಗಳೆಲ್ಲವೂ ಸತ್ಯದ ಮೇಲೆಯೇ ನಿಂತಿದೆ. ಧರ್ಮವು ಸತ್ಯದಿಂದಲೇ ನಿಂತಿರುವುದು. ಸಮುದ್ರವು ಕೂಡ ಸತ್ಯದಿಂದಲೇ ಎಲ್ಲೆಯನ್ನು ಮೀರದಿರುವುದು.

ಬಲಿಯು ವಿಷ್ಣುವಿಗೆ ಭೂಮಿಯನ್ನು ಕೊಟ್ಟು ಪಾತಾಳಕ್ಕೆ ಹೋದನು. ಮೋಸದಿಂದ ಬಲಿಯನ್ನು ಕಟ್ಟಿ ಹಾಕಿದರೂ ಆ ಬಲಿಯು ಸತ್ಯವನ್ನು ಬಿಡಲಿಲ್ಲ. ವಿಂಧ್ಯಪರ್ವತವು ಅತಿಯಾಗಿ ಬೆಳೆಯುತ್ತ ನೂರಾರು ಶಿಖರಗಳುಳ್ಳದ್ದಾಗಿ ಬೆಳೆಯಿತು ಆಗ ಅಗಸ್ತ್ಯರ ಮಾತನ್ನು ಕೇಳಿ ಕಟ್ಟುಬಿದ್ದು, ತಾನು ಬರುವವರೆಗೂ ಏಳುವುದಿಲ್ಲವೆಂದು ಮಾತುಕೊಟ್ಟು ಸತ್ಯವನ್ನು ಮೀರದಿದೆ. ಸ್ವರ್ಗ, ಮೋಕ್ಷ, ಧರ್ಮಗಳೆಲ್ಲವೂ ಸತ್ಯವಾದ ಮಾತಿನಲ್ಲಿಯೇ ಇವೆ.ಆ ಸತ್ಯವನ್ನು ಯಾವನು ಕಳೆದುಕೊಳ್ಳುತ್ತಾನೆಯೊ ಅವನು ಎಲ್ಲವನ್ನೂ ನಾಶ ಮಾಡಿಕೊಳ್ಳುತ್ತಾನೆ. ಒಂದು ವಿಷಯವನ್ನು ಇದ್ದುದನ್ನು ಇದ್ದಂತೆ ತಿಳಿಯದೇ ಅದನ್ನು ಬೇರೆಯ ರೀತಿಯಾಗಿ ತಪ್ಪಾಗಿ ತಿಳಿದರೆ ಅವನು ಪಾಪವನ್ನು ಮಾಡದೇ ಮತ್ತೇನು ! ಅವನು ಆತ್ಮವನ್ನು ಹಾಳುಮಾಡಿಕೊಳ್ಳುವ ಕಳ್ಳನೇ ಆಗಿರುತ್ತಾನೆ. ಸುಳ್ಳನ್ನು ಹೇಳಿದರೆ ನನಗೆ ನಾನೇ ಲೋಪ ಮಾಡಕೊಂಡಂತಾಗುತ್ತದೆ. ಆಗ ಘೋರವಾದ ನರಕವನ್ನು ಹೊಂದುತ್ತೇನೆ. ಆಗ ಅಂತಹನ ಧರ್ಮದ ಅರ್ಥವನ್ನು ಯಮನು ನಾಶ ಮಾಡುತ್ತಾನೆ. ಬಹಳ ಆಳವಾದ, ಶುದ್ಧವಾದ ಕ್ಷಮೆ ಎಂಬ ಮಡುವುಳ್ಳ ಸತ್ಯವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಪಾಪವನ್ನು ಕಳೆದುಕೊಂಡು ಉತ್ತಮಗತಿಯನ್ನು ಹೊಂದುತ್ತಾನೆ ಮಾನವ. ಸಾವಿರ ಅಶ್ವಮೇಧಗಳಿಗಿಂತಲೂ ಸತ್ಯವೇ ಭಾರವಾಗಿತ್ತು ! ಸತ್ಯವು ಉತ್ತಮವಾದ ತಪಸ್ಸು. ಕ್ಲೇಶಾದಿಗಳಿಲ್ಲದ ಉತ್ತಮಜ್ಞಾನವು. ಇದು ಸಾಧುಗಳಿಗೆ ಒರೆಗಲ್ಲು. ಸತ್ಪುರುಷರಿಗೆ ಕುಲಧನ. ಎಲ್ಲ ಆಶ್ರಮಕ್ಕಿಂತ ಶ್ರೇಷ್ಠವು. ತಮ್ಮ ವಶದಲ್ಲಿರುವ ಸುಲಭವಾದ ಜಗತ್ತಿನ ಸಾಮಾನ್ಯ ಒಡವೆಯು ಇದನ್ನು ಮ್ಲೇಂಛರೂ ಕೂಡ ಹೇಳಿ ಸ್ವರ್ಗವನ್ನು ಹೊಂದುತ್ತಾರೆ.

**ಸಖಿಯರು** :- ನಂದೆಯೆ, ನೀನು ಎಲ್ಲ ದೇವದಾನವರಿಂದಲೂ ನಮಸ್ಕಾರಕ್ಕೆ ಅರ್ಹಳಾಗಿರುವೆ. ಸತ್ಯಕ್ಕಾಗಿ ಪ್ರಾಣ ಬಿಡುವುದು ಸಾಮಾನ್ಯವೆ ? ನೀನಾಗಿ ಸ್ವಸಂತೋಷ ದಿಂದ ಆತ್ಮ ಬಲಿದಾನ ಮಾಡಲು ಹೊರಟಾಗ ನಾವೇನು ಹೇಳೋಣ ? ನೀನು ಧರ್ಮಶಾಸ್ತ್ರದ ಮರ್ಮಜ್ಞಳೇ ಆಗಿರುವಿ. ಇಂತಹ ಸತ್ಯನಿಷ್ಠೆಯಿಂದ ಮೂರುಲೋಕದಲ್ಲಿ ದುರ್ಲಭವಾದುದು ಯಾವುದು ಇಲ್ಲ ನಿನ್ನ ಆ ಸತ್ಯವು ನಿನ್ನನ್ನು ಕಾಪಾಡುವುದು. ಸತ್ಯಕ್ಕಾಗಿ ಈಗ ನೀನು ಮಾಡಲಿರುವ ತ್ಯಾಗದಿಂದ ನಿನ್ನ ಮಗನಿಂದ ಆಗಲುವ ಪ್ರಸಂಗ ಬರುವುದಿಲ್ಲ ಎಂದು ನಮಗೆ ಭರವಸೆ ಇದೆ. ಮನಸ್ಸಿನಿಂದ ಕೃತಿಯಿಂದ ಮತ್ತು ಮಾತಿನಿಂದ ಜನರ ಕಲ್ಯಾಣವನ್ನೇ ಚಿಂತಿಸುವ ನಾರೀಮಣಿಗೆ ಎಲ್ಲಿಯೂ ವಿಪತ್ತುಗಳು ಒದಗಲಾರವು.

**ಪುಲಸ್ತ್ಯ** :- ಅಲ್ಲಿರುವ ಗೋಪಕುಲದ ಮುತ್ತೈದೆಯರನ್ನು ಕಂಡು ನೋಡಿ, ಇಡೀ ಗೋಕುಲವನ್ನೆಲ್ಲ ಪುನಃ ಪ್ರದಕ್ಷಿಣೆಹಾಕಿ ಆ ಗೋಕುಲದ ಸುತ್ತ ಮುತ್ತಲಿರುವ ಬಳ್ಳಿಗಳನ್ನು ಮರಗಳನ್ನು ತಟ್ಟಿಮುಟ್ಟಿಹೋಗಿ ಬರುವೆನೆಂದು ಹೇಳಿ, ಆ ನಂದಾಧೇನುವು ಅಲ್ಲಿಂದ ಹೊರಟಿತು. ಹೊರಡುವಾಗ ಆ ಗೋವು, ಭೂದೇವಿಯನ್ನು ವರುಣನನ್ನು, ಅಗ್ನಿಯನ್ನು, ವಾಯುವನ್ನು, ಚಂದ್ರನನ್ನು, ದಶದಿಶೆವೆಣ್ಣುಗಳನ್ನು, ವೃಕ್ಷ, ನಕ್ಷತ್ರ, ಗ್ರಹಗಳನ್ನು ಮತ್ತೊಮ್ಮೆ ನಮಿಸಿ, ಕೈ ಮುಗಿದು ಎಲ್ಲರಿಗೆ ಹೀಗೆ ವಿಜ್ಞಾಪಿಸಿ ಕೊಂಡಳು.

**ನಂದಾ :-** ಈ ವನದಲ್ಲಿ ನೆಲೆಸಿರುವ ಸಿದ್ಧ ಪುರುಷರೆ, ಎಲ್ಲ ಬನದೇವಿಯರೆ, ನನ್ನ ಮಗನಾದ ವತ್ಸನು ನಿಮ್ಮನ್ನೇ ಶರಣು ಬಂದಿದೆ. ಅದು ಈ ಕಾಡಿನಲ್ಲಿ ಸಂಚರಿಸುವಾಗ ಅವನನ್ನು ನೀವು ರಕ್ಷಿಸಿರಿ. ಎಲೈ ಸಂಪಿಗೆಯಮರವೆ, ಅಶೋಕವೃಕ್ಷವೆ, ಪುನ್ನಾಗ ಪಾದಪವೆ, ಸರಳಮರವೆ ಮತ್ತು ಈ ವನವನ್ನು ಆಶ್ರಯಿಸಿದ ಎಲ್ಲ ವನಸ್ಪತಿಗಳೆ, ಕೇಳಿರಿ, ನನ್ನ ಮಗನು ಏಕಾಕಿಯಾಗಿ ಈ ಘೋರಾರಣ್ಯದಲ್ಲಿ ತಿರುಗುತ್ತಾನೆ. ತಾಯಿತಂದೆಯಿಲ್ಲದ ದೀನ ದುಃಖಿತನಾದ ಆ ಅನಾಥ ಮಗುವನ್ನು ನೀವೆಲ್ಲರೂ ತರುಲತೆಗಳು ನಿಮ್ಮ ಔರಸ ಮಗನೆಂದು ಭಾವಿಸಿ, ರಕ್ಷಿಸಿರಿ. ಈ ಮಹಾವನದಲ್ಲಿ ದುಃಖಿಸುತ್ತ ಕೂಗುತ್ತಿರುವ ಹೆಚ್ಚು ಶೋಕದಿಂದ ಕೂಡಿದ ಹಸಿವು ಬಾಯಾರಿಕೆಗಳಿಂದ ಕೂಡಿದ, ಯಾರೂ ಇಲ್ಲದಿರುವ, ಒಬ್ಬಂಟಿಗನಾದ ಜಗತ್ತನ್ನೇ ಶೂನ್ಯವನ್ನಾಗಿ ನೋಡುತ್ತಿರುವ, ಓಡಾಡುತ್ತಿರುವ, ನನ್ನ ಮಗನ ರಕ್ಷಣೆಯನ್ನು ನೀವು ದಯೆಯಿಂದ ಕೂಡಿಕೊಂಡು ಮಾಡಬೇಕು.

ಹೀಗೆ ಎಲ್ಲರನ್ನು ಬಿನ್ನವಿಸಿಕೊಂಡು, ಬೀಳ್ಕೊಂಡು, ಬೀಳುತ್ತ, ಏಳುತ್ತ, ಆ ಹಸು ಅಲ್ಲಿಂದ ಹೊರಟಿತು. ಇನ್ನು ಮೇಲೆ ತನಗೆ ಮಗನ ದರ್ಶನವಾಗುವುದಿಲ್ಲ ಎಂಬ ದುಃಖವು ಆ ಹಸುವಿನ ಕರುಳಲ್ಲಿ ಕಿಚ್ಚನ್ನಿಟ್ಟಂತಾಗಿತ್ತು. ಗೆಳವಕ್ಕಿಯಿಂದ ಆಗಲಿದ ಚಕ್ರವಾಕಿಯಂತೆ, ಮರದ ಆಧಾರತಪ್ಪಿ ನೆಲಕ್ಕೆ ಉರುಳಿದ ಬಳ್ಳಿಯಂತೆ, ಕೈಯೊಳಗಿನ ಕೋಲುಕಳೆದ ಕುರುಡನಂತೆ, ಹೆಜ್ಜೆ ಹೆಜ್ಜೆಗೆ ಮುಗ್ಗರಿಸುತ್ತ, ಏಳುತ್ತ ಬೀಳುತ್ತ ಆ ದೀನ ಧೇನುವು ಮಾಂಸದ ರುಚಿ ಕಂಡ ಆ ಹೆಬ್ಬುಲಿಯು ನೆಲೆಸಿದ್ದ ಸ್ಥಳಕ್ಕೆ ಬಂದಿತು. ತನ್ನ ಮಾತಿನಂತೆ ಹಸುವು ಸತ್ಯನಿಷ್ಠೆವಾಗಿ ಬಂದುದನ್ನು ಕಂಡು ಹುಲಿಯು ಹುರುಪುಗೊಂಡು ಹಾರಿಬಂದಿತು. ಮುಖವನ್ನು ಉಬ್ಬಿಸಿ, ಚೂಪಾದ ಉಗುರುಗಳನ್ನು ಹೊರದೆಗೆದು ಭೀಕರವಾದ ಆ ಹುಲಿಯು ಹಸುವಿನೆಡೆಗೆ ಬರುವಷ್ಟರಲ್ಲಿ ಅದರ ಮನೆಯಲ್ಲಿ ನಂದೆಯು ಬಿಟ್ಟು ಬಂದ ಅದರ ಕರುವು ಬಾಲನೆಗೆಹಿ ಅತಿ ವೇಗದಿಂದ ಓಡುತ್ತ ತಾಯಿಗಿಂತ ಮುಂದಾಗಿ ಹುಲಿ ಎದುರಿಗೆ ಬಂದು ನಿಂತಿತು. ನಂದಾ ಧೇನುವು ಮಗ ಬಂದದ್ದನ್ನು ನೋಡಿತು. ಮಗನ ಮುಂದೆ ಮೃತ್ಯುವು ಮುಖ ತೆರೆದು ನಿಂತಿದ್ದನ್ನೂ ನೋಡಿತು. ಅದನ್ನು ಕಂಡು ಆ ನಂದೆಯು ನುಡಿಯಿತು - ಮೃಗರಾಜನೆ, ನಾನು ನಿನಗೆ ಹೇಳಿದಂತೆ ಬಂದಿದ್ದೇನೆ. ನಿನ್ನ ಎದುರು ನಿಂತಿದ್ದೇನೆ. ನಾನು ನನ್ನ ಸತ್ಯಪಾಲನೆಯ ವ್ರತದಿಂದ ಚಲಿಸಿಲ್ಲ. ಸತ್ಯಧರ್ಮದಿಂದ ಸರಿದಿಲ್ಲ. ಇನ್ನು ನೀನು ನನ್ನ ಮಾಂಸವನ್ನು ಯಥೇಚ್ಛವಾಗಿ ತಿನ್ನು. ಈಗ ನನ್ನ ದೇಹದಿಂದ ನಿನಗೆ ತೃಪ್ತಿಯಾಗಲಿ. ನಿನ್ನ ದೇಹದಲ್ಲಿರುವ ಪಂಚಭೂತಗಳು ನನ್ನ ರಕ್ತದಿಂದ ತೃಪ್ತವಾಗಲಿ. ನಿನಗೆ ಸಾಕಾಗುವವರೆಗೆ ನನ್ನ ರಕ್ತವನ್ನು ಪಾನಮಾಡು. ನಾನು ಸತ್ತ ಬಳಿಕ ಇದೀಗ ಬಂದ ನನ್ನ ಮಗನನ್ನೂ ತಿಂದು ಆನಂದಪಡು.

**ವ್ಯಾಘ್ರ :-** ಸತ್ಯವಾದಿನಿಯಾದ ನಂದಾ ಧೇನುವೆ, ನಿನಗೆ ಸುಸ್ವಾಗತ. ನೀನೊಂದು ಕಲ್ಯಾಣದಾಯಿನಿಯಾದ ಕಾಮಧೇನುವೇ ಸರಿ. ಸತ್ಯವಂತರಿಗೆ ಎಲ್ಲಿಯಾದರೂ ಅಮಂಗಳ ಉಂಟೆ ? ಎಂದಿಗೂ ಇಲ್ಲ. ಗೋಮಾತೆಯೇ, ನೀನೇನೋ ಮೊದಲು ನನ್ನ ಮುಂದೆ, ನಿಜವಾಗಿಯೂ ನೀನು ಮರಳಿ ಬರುತ್ತೇನೆಂದು ಹೇಳಿದ್ದೆ. ಆದರೆ ನನಗೆ ನಿನ್ನ ಮಾತಿನ ಮೇಲೆ ನಂಬಿಗೆಯಾಗಿರಲಿಲ್ಲ. ಆದರೆ ಕೌತುಕವಾಗಿತ್ತು. ಮನೆಗೆ ಹೋದ ಬಳಿಕ ಈ ಹಸುವು ಮರಳಿ ಹೇಗೆ ಬಂದೀತು ಎಂದು ನಿನ್ನ ಸತ್ಯವನ್ನು ಪರೀಕ್ಷಿಸಲಿಕ್ಕಾಗಿ ನಾನು ನಿನ್ನನ್ನು ಹೋಗಲುಬಿಟ್ಟೆ. ಇಲ್ಲದಿದ್ದರೆ ನನ್ನ ಬಳಿಗೆ ಬಂದು ಬದುಕಿ ಹೋಗುವುದು

ಯಾವ ಪ್ರಾಣಿಗಾದರೂ ಸಾಧ್ಯವೆ ? ನಾನು ಕುತೂಹಲದಿಂದ ನಿನ್ನ ನೆಪಮಾಡಿಕೊಂಡು ಸತ್ಯವನ್ನೇ ಹುಡುಕಿದೆನು. ನನ್ನ ಈ ಸತ್ಯದ ಅನ್ವೇಷಣೆಯು ಸಾರ್ಥಕವಾಯಿತು. ತಾಯಿ, ನೀನು ನಡೆದು, ನುಡಿದ ಆ ಸತ್ಯವು ನಿನ್ನನ್ನು ಬಿಡುಗಡೆ ಮಾಡಿದೆ. ನಾನು ನಿನ್ನನ್ನು ಈಗ ಜೀವಂತಳಾಗಿ ಬಿಟ್ಟುಬಿಟ್ಟಿದ್ದೇನೆ. ಇಂದಿನಿಂದ ನೀನು ನನಗೆ ತಂಗಿ. ಈ ನಿನ್ನ ಮಗನು ನನಗೆ ತಂಗಿಯ ಮಗ. ಶುಭಾಂಗಿಯೆ, ಮಹಾಪಾಪಿಯೂ ಕ್ರೂರಕರ್ಮಿಯೂ ಆದ ನನಗೆ ನೀನು ಬಹಳ ಒಳ್ಳೇ ಉಪದೇಶ ಕೊಟ್ಟಂತಾಯಿತು. ಎಲ್ಲ ಲೋಕಗಳು ಸತ್ಯದ ಆಧಾರದ ಮೇಲೆಯೇ ನಿಂತಿವೆ. ಧರ್ಮವೂ ಸತ್ಯದಲ್ಲಿ ಪ್ರತಿಷ್ಠಿತವಾಗಿದೆ. ಸತ್ಯದಿಂದಲೇ ಹಸುವು ಹವಿಸ್ಸಿಗೆ ಯೋಗ್ಯವಾದ ಹಾಲನ್ನು ಧಾರಾಕಾರವಾಗಿ ಹರಿಸುತ್ತದೆ.

ಅಮ್ಮಾ, ನಿನ್ನ ಹಾಲು ಕುಡಿದವರು ಈ ಲೋಕದಲ್ಲಿ ಧನ್ಯರು, ಅತ್ಯಂತ ಧನ್ಯರು. ನೀನು ಯಾವ ನೆಲದಲ್ಲಿಯ ಹಸಿರು ಹುಲ್ಲನ್ನು ತಿನ್ನುವಿಯೋ ಆ ಭೂ ಭಾಗವೆಲ್ಲವೂ ಧನ್ಯ. ಅಂಬ, ನಿನ್ನ ಅದ್ಭುತಧಾರೆಯಂತಿರುವ ಹಾಲನ್ನು ಒಮ್ಮೆಯಾದರೂ ಕುಡಿದರೆ, ಮನುಷ್ಯನು ಹುಟ್ಟಿದ್ದು ಸಾರ್ಥಕ. ಜನ್ಮಜನ್ಮಾಂತರಗಳಲ್ಲಿ ಮಾಡಿದ ಪುಣ್ಯವಿಶೇಷದಿಂದ ನಿನ್ನ ಕೆಚ್ಚಲಿನ ರಸವು ಮಾನವರಿಗೆ ದೊರಕುವುದು. ನಿನ್ನ ತಾಯ್ತನದ ಅಮೃತವನ್ನು ಪ್ರಾಶನ ಮಾಡಿದವರು ಧನ್ಯರು.

ಹೀಗೆ ನುಡಿದು, ಆ ಹುಲಿಯು ಬೆಕ್ಕಸೆ ಬೆರಗಾಗಿ ನಿಂತುಕೊಂಡಿತು. ಆ ಧೇನುವಿನ ಪ್ರಾಮಾಣಿಕತೆ, ಸತ್ಯನಿಷ್ಠೆಗಳನ್ನು ಕಂಡು, ಆ ಕ್ರೂರ ಪಶುವಿಗೆ ಒಮ್ಮೆಲೆ ಒಂದು ಹೊಸ ದೃಷ್ಟಿಯೇ ಮೂಡಿದಂತಾಯಿತು. ಅದು ತನ್ನಲ್ಲಿಯೇ ತನ್ನ ಆತ್ಮನಿರೀಕ್ಷಣೆ ಮಾಡಿಕೊಳ್ಳತೊಡಗಿತು. ಕ್ರೂರವೂ, ಹಿಂಸಾಮಯವೂ ಆದ ನನ್ನ ಬದುಕಿಗೆ ದೇವತೆಗಳು ಇಂದು ಒಂದು ರಾವುಗನ್ನಡಿಯನ್ನು ಹಿಡಿದಿದ್ದಾರೆ. ಈ ಹಸುವಿನ ಸತ್ಯ ಸಂಧತೆಯನ್ನು ಕಂಡು, ನನಗೆ ನನ್ನ ಮೇಲೆಯೇ ಜಿಗುಪ್ಸೆಮೂಡಿದೆ. ನನಗೇಕೊ ಬದುಕೇ ಬೇಸರವೆನಿಸಿದೆ. ನನ್ನ ಈ ಪಾಪ ಜೀವವು ಏನು ಮಾಡಿದರೆ ಕೊನೆಗೊಂಡೀತು ಹಾಗೆ ಮಾಡುವೆನು. ಇಂದಿನ ವರೆಗೆ ಕ್ರೌರ್ಯದಿಂದ ನಾನು ಕೊಂದ ಪ್ರಾಣಿಗಳಿಗೆ ಲೆಕ್ಕವಿಲ್ಲ. ತಿಂದ ಪ್ರಾಣಿಗಳಿಗೆ ಗಣನೆಯಿಲ್ಲ. ಸಹಸ್ರ ಸಂಖ್ಯೆಗೂ ಮಿಕ್ಕಿರಬಹುದು. ಇಂತಹ ಘೋರ ಹಿಂಸೆಮಾಡಿದ ನಾನು ಮುಂದೆ ಯಾವ ಗತಿಯನ್ನು ಹೊಂದುವೇನು ! ನನ್ನಂತೆ ನಾಲ್ಕು ಕಾಲಿನ ಪಶುವಾದ ಈ ಹಸುವಿನ ಸತ್ಯ ಪಾರಾಯಣತೆಯನ್ನು ನೋಡಿದಾಗ ನಾನು ಎಂತಹ ಪಾಪಿ, ಎಷ್ಟು ದುಷ್ಟ! ಎಂತಹ ಘಾತಕ ! ನನ್ನಂತಹ ಕ್ರೂರ ಪಶುವು ಇಂತಹ ಹೇಯ ಕೆಲಸ ಮಾಡಿ ಯಾವ ಲೋಕಕ್ಕೆ ಹೋಗುವೆನೋ ಏನೋ ! ಈಗ ಇರುವಷ್ಟು ದಿನ ಪುಣ್ಯತೀರ್ಥಯಾತ್ರೆ ಮಾಡುವೆನು. ಸಾಧ್ಯವಾದಷ್ಟು ನನ್ನ ಪಾಪಗಳನ್ನೆಲ್ಲ ತೀರ್ಥಜಲದಲ್ಲಿ ತೊಳೆದು ಕಳೆಯುವೆನು. ನಂತರ ಯಾವುದಾದರೂ ಒಂದು ಬೆಟ್ಟದ ತುದಿಗೇರಿ ಅಲ್ಲಿಂದ ಬೀಳುವೆನು. ಇಲ್ಲದೆ ಉರಿಯುತ್ತಿರುವ ದಳ್ಳುರಿಯಲ್ಲಿ ಹಾಯುವೆನು. ಹೀಗೆ ಮನಸ್ಸಿನಲ್ಲಿ ನಿರ್ಧರಿಸಿ ತನ್ನ ಮುಂದೆ ನಿಂತ ಆ ನಂದಾ ಧೇನುವಿಗೆ ಕ್ರೂರವಾದ ಆ ಕಾಡಪಶು ಕೇಳಿಕೊಂಡಿತು.

**ವ್ಯಾಘ್ರ :-** ಧೇನು ದೇವಿಯೆ, ನನ್ನ ಘೋರ ಪಾಪಗಳೆಲ್ಲ ಪರಿಹಾರವಾಗಲು ನಾನು ಏನು ಮಾಡಲಿ ! ಎಂತಹ ತಪಸ್ಸನ್ನು ಆಚರಿಸಲಿ ? ಅದನ್ನೆಲ್ಲ ಸಂಕ್ಷಿಪ್ತವಾಗಿ ಹೇಳು. ವಿಸ್ತಾರದಿಂದ ಕೇಳಲು ನನಗೆ ಅವಕಾಶವಿಲ್ಲ.

**ನಂದಾ :-** ಕೃತಯುಗದಲ್ಲಿ ತಪಸ್ಸು ಒಳ್ಳೆಯದೆಂದು ಹಿರಿಯರು ಹೇಳುತ್ತಾರೆ. ತ್ರೇತ್ರಾಯುಗದಲ್ಲಿ ಜ್ಞಾನ ಕರ್ಮಗಳು ಶ್ರೇಷ್ಠ. ದ್ವಾಪರದಲ್ಲಿ ಯಜ್ಞವೇ ಅತ್ಯುತ್ತಮವಾದದ್ದು. ಕಲಿಯುಗದಲ್ಲಿ ದಾನವೇ ಶ್ರೇಷ್ಠವಾದದ್ದು. ಎಲ್ಲ ದಾನಗಳಿಗಿಂತ ಅತ್ಯುತ್ತಮ ದಾನವೆಂದರೆ ಪ್ರಾಣಿಗಳಿಗೆ ಅಭಯದಾನ. ಅದಕ್ಕಿಂತ ಶ್ರೇಷ್ಠವಾದ ದಾನವೇ ಇಲ್ಲ. ಚರಾಚರ ಪ್ರಾಣಿಗಳಿಗೆ ಅಭಯದಾನವನ್ನು ಯಾವನು ಕೊಡುತ್ತಾನೆಯೋ ಅವನು ಭಯಗಳನ್ನೆಲ್ಲ ಕಳೆದುಕೊಂಡು ಪರಬ್ರಹ್ಮನನ್ನು ಹೊಂದುತ್ತಾನೆ.

ಅಹಿಂಸೆಗೆ ಸಮನಾದ ದಾನವಿಲ್ಲ. ಅಹಿಂಸೆಗೆ ಸಮನಾದ ತಪವಿಲ್ಲ. ಆನೆಯ ಕಾಲಿನ ಹೆಜ್ಜೆಯಲ್ಲಿ ಮಿಕ್ಕವುಗಳ ಹೆಜ್ಜೆಯು ಹೇಗೆ ಮುಳಗಿ ಹೋಗುತ್ತದೆಯೋ ಹಾಗೆ ಅಹಿಂಸೆಯಲ್ಲಿ ಎಲ್ಲ ಧರ್ಮಗಳೂ ಅಡಗುತ್ತವೆ. ಎಲೈ ವ್ಯಾಘ್ರನೆ, ಎಲ್ಲ ಧರ್ಮಗಳೂ ಅಹಿಂಸೆ ಇದ್ದರೇನೆಯೇ ಪ್ರಕಾಶಿಸುತ್ತವೆ. ಯೋಗವೆಂಬ ಮರದ ನೆರಳು ತಾಪತ್ರಯಗಳನ್ನು ನಾಶಮಾಡುತ್ತದೆ. ಆ ಯೋಗವೆಂಬ ಮರಕ್ಕೆ ಧರ್ಮಜ್ಞಾನವೆ ಹೂವು. ಸ್ವರ್ಗವೂ ಮೋಕ್ಷವೂ ಫಲಗಳು, ತಾಪತ್ರಯಗಳಿಂದ ಸುಡಲ್ಪಟ್ಟ ನೊಂದ-ಬೆಂದ ಯೋಗವೆಂಬ ಮರದ ನೆರಳನ್ನು ಆಶ್ರಯಿಸಿರಬೇಕು. ಮೋಕ್ಷವನ್ನು ಹೊಂದಿದವರು ದುಃಖಕ್ಕೆ ಒಳಗಾಗುವುದಿಲ್ಲ. ಈ ರೀತಿ ಶ್ರೇಯಸ್ಕರವಾದುದನ್ನು ನಿನಗೆ ಹೇಳಿದ್ದೇನೆ. ನಿನಗೆ ಎಲ್ಲವೂ ಗೊತ್ತಿದೆ. ನನ್ನನ್ನು ಸುಮ್ಮನೆ ಕೇಳುತ್ತಿದ್ದೀಯೆ.

**ವ್ಯಾಘ್ರ :-** ನಾನು ಪೂರ್ವದಲ್ಲಿ ಮಗುವಿಗೆ ಸ್ತನಪಾನಮಾಡಿಸುತ್ತಿದ್ದ ಒಂದು ಹರಿಣಿಯನ್ನು ಸಂಹರಿಸಿದ್ದೆ. ಆಗ ಆ ತಾಯಿ ಚಿಗರೆಯು ನನಗೆ ಶಾಪ ಕೊಟ್ಟಿತು. ಆದುದರಿಂದ ನಾನು ಹುಲಿಯಾಗಿ ಈ ಕಾಡಿನಲ್ಲಿ ನಿಂತುಕೊಂಡೆ. ಈ ವ್ಯಾಘ್ರರೂಪದಲ್ಲಿ ಪ್ರಾಣಿಗಳ ಹಿಂಸೆ ಮಾಡಿದ್ದರಿಂದ ನನಗೆ ಹಿಂದಿನದೆಲ್ಲವೂ ಮರೆತು ಹೋಯಿತು ನಿನ್ನ ಸಂಪರ್ಕ ಉಪದೇಶದಿಂದ ನನಗೆ ಮತ್ತೆ ಪೂರ್ವ ಜನ್ಮದ ಸ್ಮರಣ ಉಂಟಾಗಿದೆ. ಈ ಸತ್ಯದಿಂದ ನೀನೂ ಕೂಡ ಉತ್ತಮವಾದ ಗತಿಯನ್ನು ಹೊಂದುವೆ. ನಾನೂ ಸದ್ಗತಿ ಹೊಂದುವೆನು. ಆದುದರಿಂದ ಈಗ ನಾನು ನನ್ನ ಮನಸ್ಸಿನಲ್ಲಿರುವ ಒಂದು ಪ್ರಶ್ನೆ ಕೇಳುತ್ತೇನೆ. ಈ ವಿಷಯವನ್ನು ನಾನು ನೂರು ವರ್ಷಗಳಿಂದಲೂ ಆಲೋಚಿಸುತ್ತಿದ್ದೇನೆ. ತಾಯಿ, ನಿನ್ನ ಸಹವಾಸದಿಂದ, ಸಂದರ್ಶನದಿಂದ ನನ್ನ ಭಾಗ್ಯದ ಬಾಗಿಲು ತೆರೆದಿದೆ. ನನ್ನ ಸ್ವರ್ಗದ ದಾರಿಯು ಸುಗಮವಾಗಿದೆ. ಅತ್ಯಂತ ಕ್ರೂರನಾದ ನಾನು ಸನ್ಮಾರ್ಗದಲ್ಲಿ ತಂದು ನಿಲ್ಲಿಸಲ್ಪಟ್ಟಿದ್ದೇನೆ. ನನ್ನಲ್ಲಿ ಮತ್ತೆ ಧರ್ಮ ಪ್ರತಿಷ್ಠೆಯನ್ನು ನಿನ್ನ ಸಹವಾಸವು ಮಾಡಿದೆ. ಇಷ್ಟೆಲ್ಲ ನನಗೆ ಉಪಕಾರಮಾಡಿದ ನಿನ್ನ ಹೆಸರೇನು? ಶುಭಾಂಗಿಯೆ ನಿನ್ನ ಮಂಗಳಕರವಾದ ಹೆಸರನ್ನು ಹೇಳು !

**ನಂದಾ :-** ನನ್ನ ಸ್ವಾಮಿಯ ಹೆಸರು ನಂದ. ಅವನ ಹೆಸರಿನಿಂದ ನನಗೆ ನಂದಾ ಎಂಬ ಸಂಜ್ಞೆ ಬಂದಿದೆ. ಈಗ ನಿನ್ನ ಮಾತಿನಂತೆ ನೀನು ನನ್ನನ್ನು ತಿಂದುಬಿಡು. ನೀನು ನನ್ನನ್ನು ತಿನ್ನದೆ ಹೀಗೇಕೆ ಸುಮ್ಮನೆ ನಿಂತಿರುವೆ ?

**ಪುಲಸ್ತ್ಯ :-** ನಂದಾ ಎಂಬ ಹೆಸರು ಕಿವಿಗೆ ಬಿದ್ದ ಕೂಡಲೇ ಹಿಂದೆ ಪ್ರಭಂಜನ ರಾಜನಾಗಿದ್ದ ಆ ಹುಲಿಯು ತನ್ನ ವ್ಯಾಘ್ರ ಜನ್ಮದಿಂದ ಮುಕ್ತವಾಗಿ ಮೊದಲಿನಂತೆ ಪ್ರಭಂಜನ ದೊರೆಯಾಗಿ ನಿಂತನು. ಅಂದಿನ ಆ ರೂಪ, ಸಾಮರ್ಥ್ಯ, ಕಳೆ, ಕಾಂತಿ, ಪೌರುಷ, ಪ್ರತಿಷ್ಠೆ

ಎಲ್ಲವೂ ಎಂದಿನಂತೆ ಅಚ್ಚಳಿಯದೆ ಬೆಳಗತೊಡಗಿದವು. ಇದೇ ವೇಳೆಯಲ್ಲಿ ಆ ಸತ್ಯವಾದಿನಿಯಾದ ನಂದಾ ಧೇನುವಿನ ಬಳಿಗೆ ಧರ್ಮವು ಸಾಕ್ಷಾತ್ ದೇವತಾ ರೂಪಿಯಾಗಿ ಬಂದಿತು. ಆ ನಂದೆಯನ್ನು ನೋಡಬೇಕೆಂದು ಬಂದ ಧರ್ಮವು ಇಂತು ನುಡಿಯಿತು -

**ಧರ್ಮ :-** ನಂದಿನಿಯೇ, ನಿನ್ನ ಸತ್ಯ ವಚನದಿಂದ ನಾನು ಸೆಳೆಯಲ್ಪಟ್ಟಿದ್ದೇನೆ. ನಾನೇ ಮೂರ್ತಿವಂತ ಧರ್ಮ, ನಿನ್ನ ಬಳಿಗೆ ಬಂದಿದ್ದೇನೆ. ನಿನಗೆ ಒಳ್ಳೆಯದು ಆಗಲಿ. ಶ್ರೇಷ್ಠವಾದ ವರವನ್ನು ಕೇಳಿಕೊ. ಧರ್ಮದ ಈ ನುಡಿಯನ್ನು ಕೇಳಿ ನಂದೆಯು ಆನಂದದಿಂದ ಒಂದು ವರವನ್ನು ಬೇಡಿಕೊಂಡಿತು.

**ನಂದೆ :-** ಧರ್ಮದೇವನೇ, ನಿನ್ನ ಪ್ರಭಾವದಿಂದ ಮತ್ತು ಅನುಗ್ರಹದಿಂದ ನಾನು ನನ್ನ ಮಗನೊಂದಿಗೆ ಉತ್ತಮವಾದ ಸ್ಥಾನಕ್ಕೆ ಹೋಗುವೆನು. ಈ ಶುಭಪ್ರದವಾದ ತೀರ್ಥವು ಮುನಿಗಳಿಗೆಲ್ಲ ಪುಣ್ಯದಾಯಕವಾಗಲಿ. ಈ ಸರಸ್ವತೀ ನದಿಯೂ ಸಹ ನನ್ನ ಹೆಸರಿನಿಂದ ನಂದಾ ಎಂದು ಕರೆಯಲ್ಪಡಲಿ.

**ಪುಲಸ್ತ್ಯ :-** ಧರ್ಮದೇವತೆಯ ಪ್ರಸಾದದಿಂದ ನಂದಾದೇವಿಯು ಸತ್ಯವಂತರಿಗೆಲ್ಲ ದೊರಕುವ ದಿವ್ಯ ಸ್ಥಾನವನ್ನು ಆ ಕ್ಷಣದಲ್ಲಿಯೇ ಪಡೆದಳು. ಪ್ರಭಂಜನು ತನ್ನ ಮೊದಲಿನ ದಿವ್ಯದೇಹವನ್ನೂ, ತನ್ನ ವಿಸ್ತಾರವಾದ ಸಾಮ್ರಾಜ್ಯದ ಆದಿಪತ್ಯವನ್ನೂ ಹೊಂದಿದನು. ನಂದಾ ಅಥವಾ ನಂದಿನಿ ಎಂಬ ಆ ಪುಣ್ಯ ಧೇನುವು ಸರಸ್ವತೀ ನದಿಯ ದಂಡೆಯಲ್ಲಿ ಬಂದು ಮೂರ್ತಿವಂತ ಧರ್ಮಪ್ರಸಾದವನ್ನು ಪಡೆದು ಸ್ವರ್ಗಲೋಕವನ್ನು ಐದಿತು.

ಆದುದರಿಂದ ಇಲ್ಲಿ ಹರಿಯುವ ಈ ನದಿಗೆ ಸರಸ್ವತಿ ಎಂದು ಕರೆದರು ಬಲ್ಲವರು. ಸರಸ್ವತಿ ನದಿಯು ಖರ್ಜೂರ ಎಂಬ ಹೆಸರಿನ ಆ ವನದಿಂದ ಮುಂದೆ ದಕ್ಷಿಣಾಭಿಮುಖವಾಗಿ ಭೂಮಂಡಲವನ್ನೆಲ್ಲ ಪಾವನಗೊಳಿಸುತ್ತ ಪ್ರವಹಿಸಿದಳು. ಈ ನಂದಾ ಸರಸ್ವತಿ ಎಂಬ ನದಿಯು ಹರಿದಲ್ಲಿಯೇ ಹೋಗಿ ಸ್ನಾನಮಾಡಬೇಕೆಂದೇನಿಲ್ಲ. ಇದ್ದಲ್ಲಿಯೇ ಈ ನಂದಾ ಸರಸ್ವತಿಯ ನಾಮೋಚ್ಚಾರಣೆ ಮಾಡಿದರೂ ಮನುಷ್ಯನು ಪುನೀತನಾಗುತ್ತಾನೆ. ಇರುವವರೆಗೆ ಸುಖಪಟ್ಟು, ಸತ್ತ ಬಳಿಕ ದೇವತಾ ಪುರುಷನಾಗುತ್ತಾನೆ. ಅಲ್ಲಿಗೆ ಹೋದಾಗ, ಈ ನಂದಾ ಸರಸ್ವತೀ ತೀರದಲ್ಲಿಯೇ ದೇಹತ್ಯಾಗಮಾಡಿದ ಮನುಷ್ಯನು ಮೋಕ್ಷ ಹೊಂದಿದ ಬಳಿಕ ವಿದ್ಯಾಧರನಾಗಿ ಆಕಾಶದಲ್ಲಿ ಸುಖದಿಂದ ಸಂಚರಿಸುತ್ತಾನೆ.

ಸರಸ್ವತಿಯು ಮಾನವರಿಗೆ ಒಂದು ಸ್ವರ್ಗದ ನಿಚ್ಚಣಿಕೆ ಅಷ್ಟಮಿ ದಿನ ಈ ನದಿಯಲ್ಲಿ ಮಿಂದವರು ಸ್ವರ್ಗದಲ್ಲಿ ಸುಖಿಸುವರು. ಅದರಲ್ಲಿ ಸ್ತ್ರೀಯರಿಗೆ ಈ ನದಿಯು ಸೌಭಾಗ್ಯ ದಾಯಕ. ತದಿಗೆ ದಿನ ಉಪವಾಸಮಾಡಿ ಈ ನಂದಾ ನದಿಯಲ್ಲಿ ಮಿಂದು ಬಂದರೆ ನಿಂತರ ಸೌಭಾಗ್ಯವತಿಯರಾಗುವರಲ್ಲದೆ ಬೇರೆಯವರಿಗೂ ಸೌಭಾಗ್ಯದಾಯಿಕೆಯರಾಗುವರು.

ಈ ನದಿಯನ್ನು ಕಂಡವರ ಪಾಪರಾಶಿ ಎಲ್ಲವೂ ನಾಶವಾಗುವುದು. ಈ ನದಿಯ ನೀರನ್ನು ಮುಟ್ಟಿದವರೆಲ್ಲರೂ ಮುನಿಗಳೆಂದೇ ತಿಳಿಯಬೇಕು. ಒಳ್ಳೆಯ ರೂಪವು ತನಗೆ ಬರಬೇಕೆಂದು ಬಯಸಿದವರು ಈ ನದಿಯ ತೀರದಲ್ಲಿ ಬೆಳ್ಳಿಯನ್ನು ದಾನ ಕೊಡಬೇಕು. ಬ್ರಹ್ಮದೇವರ ಮಗಳಾದ ಈ ನದಿಯು ಪುಣ್ಯಪರವಾದ ಈ ಜಲದಿಂದ ಕೂಡಿ ಮತ್ತಿಷ್ಟು ಅಧಿಕ ಪುಣ್ಯದಾಯಕವಾಗಿದೆ.

ಬ್ರಹ್ಮಕುಮಾರಿಯಾದ ಈ ಸರಸ್ವತೀ ಎಂಬ ಹೆಸರಿನ ಪುಣ್ಯಪಯಸ್ವಿನಿಯು ನಂದಾ ಎಂಬ ನಾಮವನ್ನು ಹೊಂದಿ ದಕ್ಷಿಣಾಭಿಮುಖವಾಗಿ ತುಸು ದೂರ ಹರಿದು ಮತ್ತೆ ತಿರುಗಿ ಬರುತ್ತಾಳೆ. ತದನಂತರ ಮಾತ್ರ ಆ ಸರಸ್ವತಿಯು ಪ್ರಕಟವಾಗಿಯೇ ಹರಿಯುತ್ತಾಳೆ. ಆ ನದಿ ತೀರಗಳಲ್ಲಿ ರಮ್ಯವಾದ ತೀರ್ಥಗಳು, ಆಶ್ರಮಗಳು ಇರುತ್ತವೆ. ಅಲ್ಲೆಲ್ಲ ಸಿದ್ಧರು ಮುನಿಗಳು ಇದ್ದುಕೊಂಡು ಶ್ರದ್ಧೆಯಿಂದ ಜಪ ತಪ ನಡೆಸುವರು. ಅವರೆಲ್ಲರಿಗೂ ಈ ನದಿಯು ಧರ್ಮಾಚರಣಕ್ಕೆ ಸಾಧನವಾಗುವದು. ಈ ನಂದಾ ಸರಸ್ವತಿಯಲ್ಲಿ ಸ್ನಾನಪಾನ, ಸುವರ್ಣದಾನ, ಗೋದಾನ, ಭೂದಾನ ಮುಂತಾದವುಗಳಿಂದಲೂ ಸುವರ್ಣಗೌರೀ, ಮಣ್ಣಿನ ಗೌರೀ ಮುಂತಾದ ಪ್ರತಿಮಾ ಪ್ರದಾನಗಳಿಂದಲೂ ಸೌಭಾಗ್ಯ ಅಭಿವೃದ್ಧಿ ಆಗುವುದು. ಸ್ನಾನ ಮಾಡಿದ ಜನರು ಇಲ್ಲಿ ಕೊಟ್ಟ ದಾನವು ಅಕ್ಷಯ ಫಲವನ್ನು ನೀಡುತ್ತದೆ. ಈ ನದಿ ತಟಾಕದಲ್ಲಿ ಧಾನ್ಯ ಕೊಟ್ಟರೆ ಹೆಚ್ಚಿನ ಫಲ. ವಸ್ತ್ರ ಕೊಟ್ಟರೆ ಅಧಿಕ ಫಲ. ಈ ನದಿ ತೀರದ ತೀರ್ಥಗಳಲ್ಲಿ ನರರು ಏನು ಕೊಟ್ಟರೂ ಅಧಿಕವಾದ ಪುಣ್ಯಫಲಪ್ರಾಪ್ತಿ. ಇಲ್ಲಿ ಪ್ರಯತ್ನದಿಂದ ಗಂಡಾಗಲೀ ಹೆಣ್ಣಾಗಲೀ ಪ್ರಾಯೋಪದೇಶವನ್ನು ತೆಗೆದುಕೊಂಡು ದೇಹ ತ್ಯಾಗಮಾಡಿದರೆ ಅವರಿಗೆ ಬ್ರಹ್ಮಲೋಕ ಪ್ರಾಪ್ತಿ ಹಾಗೂ ಸಾಯುಜ್ಯ ಮುಕ್ತಿ. ಮತ್ತು ಬ್ರಹ್ಮದೇವರ ಮನೆಯಲ್ಲಿಯೇ ಯಥೇಚ್ಛ ಸುಖೋಪಭೋಗ. ಈ ನದಿತೀರದ ಸಮೀಪದಲ್ಲಿ ಮರಣ ಹೊಂದಿದ ಚರಾಚರ ಜೀವಿಗಳೆಲ್ಲವೂ ಕರ್ಮಕ್ಷಯವನ್ನು ಹೊಂದಿ ದುರ್ಲಭದಿಂದ ಯಜ್ಞಾನುಷ್ಠಾನ ಫಲವನ್ನು ಹೊಂದುವವು. ಹೀಗೆ ಧರ್ಮರೂಪವಾದ ಶ್ರೇಷ್ಠ ಫಲವನ್ನು ಜನನ ಮರಣಾದಿ ದುಃಖದಿಂದ ವಿಕಲಗೊಂಡ ಪ್ರಾಣಗಳಿಗೆ ಕೊಡುವ ಈ ಸರಸ್ವತೀನದಿಯನ್ನು ಸರ್ವಪ್ರಯತ್ನದಿಂದಲೂ ಮನುಷ್ಯರು ಸೇವಿಸತಕ್ಕದ್ದು. ಈ ಮಹಾನದಿಯು ಪುಣ್ಯ ಜಲ ಮತ್ತು ಪುಣ್ಯ ಫಲ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ನಂದಾ ಸರಸ್ವತಿ ನದಿಯ ಉತ್ಪತ್ತಿ ಹದಿನೆಂಟನೇ ಅಧ್ಯಾಯ ಮುಗಿದುದು*



**ಭೀಷ್ಮ :-** ಪುಷ್ಕರ ತೀರ್ಥದ ಮಹಿಮೆಯನ್ನು ನಂದಾ ಸರಸ್ವತಿ ಮಹಿಮೆಯನ್ನು ನಂದಾಧೇನುವಿನ ಸತ್ಯನಿಷ್ಠೆಯ ಮಹಾತ್ಮ್ಯವನ್ನು ನಾನು ನಿಮ್ಮ ಮುಖದಿಂದ ಕೇಳಿದೆನು. ಪುಷ್ಕರಕ್ಷೇತ್ರಕ್ಕೆ ಬಂದ ಕೋಟಿ ಜನ ಋಷಿಗಳು ಅಲ್ಲಿಯ ಪುಣ್ಯಕ್ಷೇತ್ರದ ಮುಖದರ್ಶನ ದಿಂದಲೇ ಹೇಗೆ ಸುಂದರವಾದ ರೂಪಪಡೆದರು ಎಂಬುದನ್ನು ನಾನು ಕೇಳಿದೆನು. ಆ ಋಷಿಗಳು ಆ ತೀರ್ಥದರ್ಶನದಿಂದ ಸ್ಫುರದ್ರೂಪಿಗಳಾದ ಬಳಿಕ ತಮ್ಮ ಯಜ್ಞೋಪವೀತಗಳಿಂದ ಅಲ್ಲಿಯ ತೀರ್ಥಗಳನ್ನು ವಿಭಾಗಮಾಡಿದರು ಎಂದು ಕೇಳಿದ್ದೇನೆ. ಆ ಮಹಾತ್ಮರು ತೀರ್ಥವಿಭಾಗ ಮಾಡಿದ್ದೆಂತು ? ಆ ತೀರ್ಥಗಳ ತೀರದಲ್ಲಿ ಋಷಿಗಳು ಯಾವ ಯಾವ ಆಶ್ರಮಗಳನ್ನು ಮಾಡಿಕೊಂಡು ನೆಲೆಸಿದರು.

ಬ್ರಹ್ಮದೇವರು ಯಜ್ಞಮಾಡಿದ ಆ ಬೆಟ್ಟದಲ್ಲಿ ಮಹಾವಿಷ್ಣುವು ತನ್ನ ಕಾಲಿನ ಗುರುತನ್ನು ಪದನ್ಯಾಸದಿಂದ ಹೇಗೆ ಮಾಡಿದನು. ಉಲ್ಬಣ ವಿಷವುಳ್ಳ ಸರ್ಪಗಳು ಪಂಚ ತೀರ್ಥರಚಿಸಿದ ಬಗೆ ಎಂತು ? ಆ ಕ್ಷೇತ್ರದಲ್ಲಿ ಪಿಂಡ ಪ್ರದಾನ ಪಾಪಿ ಎಂಬ ಹೆಸರಿನ ಬಾವಿಯನ್ನು ಯಾರು ನಿರ್ಮಿಸಿದರು ? ಈ ಕ್ಷೇತ್ರದಲ್ಲಿ ಗಂಗಾ ಮತ್ತು ಸರಸ್ವತಿ ಎರಡೂ ನದಿಗಳು ಭೂಗರ್ಭದಲ್ಲಿ ಉತ್ತರಾಭಿಮುಖವಾಗಿ ಹರಿಯುವದೇಕೆ ? ವೇದಗಳನ್ನು ಬಲ್ಲ ಜ್ಞಾನಿಗಳು ಈ ತ್ರಿಪುಷ್ಕರ ಯಾತ್ರೆಯನ್ನುಮಾಡಿದರೆ ಎಂತಹ ಫಲ ಬರುವುದು ಎಂಬುದನ್ನು ತಿಳಿಸಿ ಹೇಳಿರಿ.

**ಪುಲಸ್ತ್ಯ :-** ಭೀಷ್ಮನೆ, ನಿನ್ನ ಈ ಪ್ರಶ್ನೆಯ ಹೊರೆ ಹೆಚ್ಚಾಯಿತು. ಆಗಲಿ ಇದನ್ನು ಏಕಾಗ್ರ ಮನಸ್ಸಿನಿಂದ ನೀನು ಕೇಳು. ಈ ತೀರ್ಥಯಾತ್ರೆಯಿಂದ ಬರುವ ಮಹಾಫಲವನ್ನು ವಿವರಿಸುವೆನು ಕೇಳು. ಯಾವನ ಕೈ ಕಾಲು ಮತ್ತು ಮನಸ್ಸುಬದ್ಧವಾಗಿದೆಯೋ, ನಿಷಿದ್ಧವಾದುದರಲ್ಲಿ ಪ್ರವೇಶಿಸುವದಿಲ್ಲವೋ, ಅಂತಹ ವಿದ್ಯಾವಂತನು ತಪಸ್ವಿಯು ಆದ ಮನುಷ್ಯನು ತೀರ್ಥಯಾತ್ರೆಯ ಫಲವನ್ನು ಹೊಂದುತ್ತಾನೆ. ದಾನ ತೆಗೆದುಕೊಳ್ಳುವವನೂ, ಏನು ಸಿಕ್ಕಿದರೂ, ಅದಕ್ಕೆ ಸಂತೋಷಪಡುವವನೂ, ಅಹಂಕಾರವನ್ನು ಬಿಟ್ಟವನೂ, ತೀರ್ಥದ ಫಲವನ್ನು ಹೊಂದುತ್ತಾನೆ. ಕ್ರೋಧವನ್ನು ಬಿಟ್ಟು ಸತ್ಯಶೀಲನಾಗಿ, ಧೃಡವ್ರತ ವುಳ್ಳವನು, ಪ್ರಾಣಗಳನ್ನು ತನ್ನಂತೆಯೇ ಕಾಣುವವನು ತೀರ್ಥಫಲವನ್ನು ಹೊಂದುತ್ತಾನೆ.

ಭರತಕುಲ ಶ್ರೇಷ್ಠನೆ, ಇದೆಲ್ಲವೂ ಪರಮ ಋಷಿಗಳ ರಹಸ್ಯವಾಗಿದೆ. ಪೂರ್ವ ಕಾಲದಲ್ಲಿ ಬ್ರಹ್ಮದೇವರ ಯಜ್ಞಕ್ಕಾಗಿ ಆಗಮಿಸಿದ ಉಗ್ರ ತಪಸ್ವಿಗಳಾದ ಕೋಟಿ ಋಷಿಗಳು ಇಲ್ಲಿಯ ಜ್ಯೇಷ್ಠ ತೀರ್ಥದ ಮುಖ ದರ್ಶನದಿಂದಲೇ ಅತ್ಯಂತ ಸುಂದರವಾದ ರೂಪವನ್ನು ಹೊಂದಿದರು. ಆ ಸುರೂಪತೆಯಿಂದ ಅವರಿಗೆ ಪರಮಾನಂದವಾಯಿತು. ಅವರಿಗೆ ಬ್ರಹ್ಮ ದರ್ಶನವಾಗಬೇಕೆಂದು ಹೆಬ್ಬಯಕೆ. ಆ ಋಷಿಗಳು ತಮ್ಮ ಯಜ್ಞೋಪವೀತದಿಂದ ನಾಲ್ಕು ದಿಕ್ಕುಗಳಲ್ಲಿ ಭೂಮಿಯನ್ನು ಅಳೆದು ವಿಭಾಗ ಮಾಡಿದರು. ಆಗ ಬ್ರಹ್ಮದೇವನು ಒಬ್ಬೊಬ್ಬ ಋಷಿಗೆ ಒಂದೊಂದು ತೀರ್ಥ ಎಂದು ವಿಭಾಗಮಾಡಿ ಅಳೆದುದನ್ನು ನೋಡಿ ಸಂತುಷ್ಟನಾದನು. ಇದರಿಂದ ನಿಮ್ಮೆಲ್ಲರಿಗೂ ಧರ್ಮವೃದ್ಧಿ ಆಗುವದು. ಇಲ್ಲಿಗೆ ಬಂದು ಯಾವ ಮನುಷ್ಯನು ಇಲ್ಲಿಯ ನೀರಿನಲ್ಲಿ ತನ್ನ ಎಲ್ಲ ಅವಯವಗಳನ್ನು ಅದ್ದುವನೋ, ಸೌಂದರ್ಯದ ಸ್ನಾನ ಮಾಡುವನೋ ಅವನಿಗೆ ಸುಸ್ವರೂಪವು ಪ್ರಾಪ್ತವಾಗುವುದು.

ಈ ತೀರ್ಥವು ಒಂದು ಯೋಜನ ವಿಸ್ತಾರವಿದೆ. ಅರ್ಧ ಯೋಜನ ಅಗಲವಾಗಿಯೂ, ಎರಡು ಯೋಜನ ಉದ್ದವಾಗಿಯೂ ಈ ತೀರ್ಥವು ಇದ್ದು ಅನೇಕ ಟಿಸಲುಗಳಿಂದ ಒಡಗೂಡಿರುತ್ತದೆ. ಈ ಪುಷ್ಕರತೀರ್ಥಕ್ಕೆ ಆಗಮನ ಮಾಡುವುದರಿಂದ ರಾಜಸೂಯ ಯಾಗದ ಫಲಬರುವುದು.

ಜ್ಯೇಷ್ಠ ತೀರ್ಥದಲ್ಲಿ ಸರಸ್ವತಿಯು ಮಹಾಪುಣ್ಯಪ್ರದಳಾಗಿದ್ದಾಳೆ. ಚೈತ್ರಶುದ್ಧ ಚತುರ್ದಶಿದಿನ ಬ್ರಹ್ಮಾದಿ ದೇವತೆಗಳು, ಸಿದ್ಧರು, ಚಾರಣರು ಇಲ್ಲಿ ಸ್ನಾನಕ್ಕಾಗಿ ಬರುತ್ತಾರೆ. ಅಂದು ಇಲ್ಲಿ ಸ್ನಾನಮಾಡಿ ಪಿತೃಗಳನ್ನು ಪೂಜಿಸಿದರೆ, ದೇವತೆಗಳನ್ನು ಅರ್ಚಿಸಿದರೆ ಮಾನವನಿಗೆ ಯಾವ ಭಯವೂ ಇಲ್ಲ ; ಮೇಲೆ ಕುಲೋದ್ಧಾರವಾಗುವುದು. ಹೀಗೆ ಆ ಮಹರ್ಷಿಗಳು ತೀರ್ಥಭಾಗಮಾಡಿದರು. ಇಲ್ಲಿ ಸ್ನಾನಮಾಡಿ ಪಿತೃಗಳಿಗೆ, ದೇವತೆಗಳಿಗೆ ತರ್ಪಣಗೈದರೆ ಆ ಮನುಷ್ಯನಿಗೆ ಚಂದ್ರನ ಕಾಂತಿಯು ಬರುವುದು. ವಿಷ್ಣುವಿನ ಪ್ರಸಾದವು ಅವನ ಮೇಲೆ ಆಗುವುದು.

ಹತ್ತುಸಾವಿರಕೋಟಿ ತೀರ್ಥಗಳು ಮಹಾಪಾತಕಗಳನ್ನು ನಾಶಮಾಡುವ ಸುಪ್ರಸಿದ್ಧವಾದ ಈ ಪುಷ್ಕರತೀರ್ಥದಲ್ಲಿ ಸನ್ನಿಹಿತವಾಗಿರುತ್ತವೆ. ಆದಿತ್ಯರು, ವಸುಗಳು, ರುದ್ರರು, ಸಾಧ್ಯಯರು, ಮರುದ್ಗಣಗಳು, ಗಂಧರ್ವರು ಇಲ್ಲಿ ಮೂರು ಸಂಧ್ಯೆಗಳಲ್ಲಿ ಸನ್ನಿಹಿತರಾಗುತ್ತಾರೆ. ಇಲ್ಲಿ ಒಬ್ಬ ಜ್ಞಾನಿಗೆ ಭೋಜನಮಾಡಿಸಿದರೆ ಕೋಟಿ ಪುಣ್ಯಪುರುಷರಿಗೆ ಭೋಜನಮಾಡಿಸಿದ ಪುಣ್ಯಬರುವದು. ಇಲ್ಲಿ ಕಾಯಿಪಲ್ಲೆ, ಗಡ್ಡೆಗೆಣಸುಗಳನ್ನು, ಭಕ್ಷ್ಯಭೋಜನಗಳನ್ನು ದಾನಮಾಡುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ನಾಲ್ಕೂ ವರ್ಣದ ಜನರಿಗೂ ಅಶ್ವಮೇಧದ ಫಲವು ಬರುವುದು.

ಸರಸ್ವತಿಯು ಇಲ್ಲಿಂದಲೇ ಸಮುದ್ರಕ್ಕೆ ಹೋಗುತ್ತಾಳೆ. ವಿಷ್ಣುವು ಆದಿವರಾಹ ರೂಪದಿಂದ ಇಲ್ಲಿ ಪೂಜಿತನಾಗಿ ಇಲ್ಲಿಯೇ ನೆಲೆಸಿದ್ದಾನೆ. ಈ ಪುಷ್ಕರತೀರ್ಥದಲ್ಲಿ ಯಜ್ಞ ಮಾಡಿದರೆ ಸರ್ವಫಲ. ಕಾರ್ತೀಕ ಮಾಸದ ಸ್ನಾನದಿಂದ ನೂರು ವರ್ಷ ಅಗ್ನಿಹೋತ್ರದ ಫಲವು ದೊರೆಯುತ್ತದೆ. ಬ್ರಾಹ್ಮಣನು ಇಲ್ಲಿ ಒಂದು ದಿನ ಸಂಧ್ಯಾವಂದನೆ ಮಾಡಿದರೆ ಹನ್ನೆರಡು ವರುಷ ಸಂಧ್ಯಾವಂದನೆ ಮಾಡಿದ ಫಲ. ಸಂಧ್ಯಾವಂದನೆ ಮಾಡುವ ಗಂಡನಿಗೆ ಶುಚಿ ನೀರು. ತಾಮ್ರ ಪಾತ್ರೆ ಒದಗಿಸುವ ಹೆಂಡತಿ ಮುಕ್ತಿ ಹೊಂದುವಳು. ಇಲ್ಲಿ ಪಿತೃತರ್ಪಣಮಾಡುವಾಗ ಹೆಂಡತಿ ಪತಿಯ ಪಕ್ಕದಲ್ಲಿ ನಿಲ್ಲಬೇಕು. ದಕ್ಷಿಣ ದಿಕ್ಕಿಗೆ ಮುಖಮಾಡಿ ಗಾಯತ್ರಿ ಮಂತ್ರದಿಂದ ತರ್ಪಣಕೊಟ್ಟರೆ ಪಿತೃಗಳಿಗೆ ಅತ್ಯಂತ ಶಾಶ್ವತ ಆನಂದ ತೃಪ್ತಿ ಮತ್ತು ಧನ, ಧಾನ್ಯ, ಸಂತತಿ, ಸೌಭಾಗ್ಯ ಎಲ್ಲವೂ ಪ್ರಾಪ್ತವಾಗುವವು. ಇನ್ನು ಆಶ್ರಮಗಳ ವಿಚಾರ ಹೇಳುತ್ತೇನೆ. ಯೋಗ್ಯತೆಯಲ್ಲಿ ದೇವತೆಗಳಿಗೆ ಸಮನಾದ ಅಗಸ್ತ್ಯಮುನಿಯು ಇಲ್ಲಿಯೇ ನೆಲೆಸಿದ್ದಾನೆ. ಅದರಂತೆ ಸಪ್ತರ್ಷಿ ಹಾಗೂ ಬ್ರಹ್ಮರ್ಷಿಗಳ ಮನುಮಹಾರಾಜರ ಆಶ್ರಮಗಳು ಈ ಪುಷ್ಕರತೀರ್ಥದ ತೀರದಲ್ಲಿ ಇರುತ್ತವೆ. ಮಹಾರಾಜನೆ, ಮಹಾಪ್ರಭಾವಶಾಲಿಯಾದ ಅಗಸ್ತ್ಯ ಋಷಿಗಳ ಮಹಾತ್ಮ್ಯವನ್ನು ಸಂಕ್ಷಿಪ್ತ ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಕೃತಯುಗದಲ್ಲಿ ಕಾಲೇಯ ಎಂಬ ದುಷ್ಟದಾನವರು ಮದಾಂಧರಾಗಿ ಕೊಬ್ಬಿ ನಿಂತಿದ್ದರು. ಬಗೆಬಗೆಯ ಭೀಕರ ಶಸ್ತ್ರಾಸ್ತ್ರಗಳಿಂದ ಸನ್ನದ್ಧರಾದ ಅವರು ಅನೇಕ ಗಣಗಳು ವೃತ್ರಾಸುರನನ್ನು ಮುಂದೆ ಮಾಡಿಕೊಂಡು ಇಂದ್ರಾದಿ

ದೇವತೆಗಳ ಮೇಲೆ ಏರಿಹೋದರು. ಆಗ ಎಲ್ಲ ದೇವತೆಗಳು ವೃತ್ರನನ್ನು ಸಂಹರಿಸಬೇಕೆಂದು ಪ್ರಯತ್ನಮಾಡಿದರು. ಇಂದ್ರನನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರ ಬಳಿಗೆ ಬಂದರು. ಕೈ ಮುಗಿದು ನಿಂದರು.

**ಬ್ರಹ್ಮ** :- ದೇವತೆಗಳೆ, ನೀವು ಬಂದ ಕಾರಣ ನನಗೆ ತಿಳಿದಿದೆ. ನೀವು ಏನು ಮಾಡಬೇಕೆಂದಿರುವಿರಿ ಎಂಬುದನ್ನು ನಾನು ಬಲ್ಲೆ. ವೃತ್ರನನ್ನು ಸಂಹರಿಸುವ ಉಪಾಯ ಹೇಳುತ್ತೇನೆ. ದಧೀಚಿ ಎಬ ಪ್ರಖ್ಯಾತನಾದ ಮಹರ್ಷಿಯನ್ನು ಬಲ್ಲಿರಷ್ಟೇ ? ಅವನು ಅತ್ಯಂತ ಉದಾರಬುದ್ಧಿಯ ಮುನಿ. ನೀವೆಲ್ಲರೂ ಅವನ ಬಳಿಗೆ ಹೋಗಿರಿ. ವರವನ್ನು ಬೇಡಿಕೊಳ್ಳಿರಿ. ಆ ಮಹಾಪುರುಷನು ಅತ್ಯಂತ ಪ್ರಸನ್ನ ಮನಸ್ಸಿನಿಂದ ನೀವು ಬೇಡಿದ್ದನ್ನು ಕೊಡುತ್ತಾನೆ. ನಿಮಗೆ ಗೆಲವು ಬೇಕಷ್ಟೇ ? ಹಾಗಾದರೆ ನೀವೆಲ್ಲರೂ ಕೂಡಿ ಆ ಮಹರ್ಷಿಯನ್ನು ಬೇಡಿಕೊಳ್ಳಿರಿ. ಪೂಜ್ಯರೆ, ''ನೀವು ಮೂರು ಲೋಕಗಳ ಹಿತಕ್ಕಾಗಿ ನಿಮ್ಮ ಮೂಳೆಗಳನ್ನು ಕೊಡಿರಿ.'' ನೀವು ಕೇಳಿದ ಕೂಡಲೆ ಅವನು ತನ್ನ ಶರೀರವನ್ನು ಬಿಟ್ಟು ಎಲವುಗಳನ್ನು ಕೊಟ್ಟುಬಿಡುತ್ತಾನೆ. ಆ ಮುನಿಪುಂಗವನ ಮೂಳೆಗಳಿಂದ ನೀವು ಅತ್ಯಂತ ಘೋರವಾದ ವಜ್ರಾಸ್ತ್ರವನ್ನೂ ನಿರ್ಮಿಸಿರಿ. ಮುನಿಯ ಮೂಳೆಯಿಂದ ನಿರ್ಮಿತವಾದ ಆ ಅಸ್ತ್ರವು ಎಂತಹರನ್ನೂ ಕೊಲ್ಲಬಲ್ಲದು. ಗುಡುಗಿನಂತೆ ಅದರ ಭೀಕರ ಧ್ವನಿಯನ್ನು ಕೇಳಿಯೇ ವೈರಿಗಳು ಭಯಗೊಳ್ಳುವರು. ವಜ್ರಾಯುಧದಿಂದ ದೇವೇಂದ್ರನು ವೃತ್ರಾಸುರನನ್ನು ಕೊಲ್ಲುವನು. ನೀವು ಈ ಕಾರ್ಯವನ್ನು ಶೀಘ್ರವಾಗಿ ಮಾಡಿಸಿ.

**ಪುಲಸ್ತ್ಯ** :- ಬ್ರಹ್ಮದೇವರು ಹೇಳಿದ ಈ ಉಪಾಯವನ್ನು ದೇವತೆಗಳು ಕೇಳಿದರು. ಅನಂತರ ಆ ಪಿತಾಮಹನನ್ನು ಬೀಳ್ಕೊಂಡು ದಧೀಚಿಮುನಿಯ ಆಶ್ರಮಕ್ಕೆ ನಡೆದರು. ಅವರ ಮುಂದಾಳು ಆಗಿದ್ದ ಇಂದ್ರ. ಸರಸ್ವತೀ ನದಿಯ ಆಚೆಯ ದಂಡೆಯಲ್ಲಿ ಇತ್ತು ಅಗಸ್ತ್ಯ ಮುನಿಯ ಆಶ್ರಮ. ಆಶ್ರಮದ ಸುತ್ತಲೂ ಅನೇಕಾನೇಕ ಗಿಡಬಳ್ಳಿಗಳು, ಆ ಮರ ಬಳ್ಳಿಗಳ ತುಂಬ ಹಣ್ಣು ಹೂವುಗಳ ಸಮೃದ್ಧಿ, ಆ ಪುಷ್ಪಾರಸವವನ್ನು ಹೀರಿ ಗಾನ ಮಾಡುವ ದುಂಬಿಗಳ ಝೇಂಕಾರವು ಆಶ್ರಮ ವಟುಗಳ ಸಾಮಗಾನದಂತೆ ಇಂಪಾಗಿತ್ತು ಕೇಳುವವರ ಕಿವಿಗಳಿಗೆ. ಗಂಡುಕೋಗಿಲೆಗಳ ಮಧುರಧ್ವನಿಗೆ ಹೆಣ್ಣುಕೋಗಿಲೆಗಳ ಧ್ವನಿಶ್ರುತಿ ಕೂಡುತ್ತಿತ್ತು. ಅಲ್ಲಲ್ಲಿ ಕೋಣ, ಹಂದಿ, ಗವಯ ಮುಂತಾದ ಕ್ರೂರ ಪ್ರಾಣಿಗಳು ತಿರುಗಾಡುತ್ತಿದ್ದವು. ಚಿಗರೆಗಳು ಹಸುರು ಮೇಯುತ್ತಿದ್ದವು. ಮುನಿಗಳ ಆಶ್ರಮದಲ್ಲಿದ್ದ ಅವುಗಳಿಗೆ ಹುಲಿ ಸಿಂಹಗಳ ಭಯವೆಲ್ಲಿ ? ಆದುದರಿಂದಲೇ ಮದ ತುಂಬಿದ ಹೆಣ್ಣಾನೆ ಗಂಡಾನೆಗಳು ಸ್ವಚ್ಛಂದದಿಂದ ಅಲ್ಲಿ ಆಡುತ್ತಿದ್ದವು. ಅಲ್ಲಿಯ ನಿಬಿಡವಾದ ಹೆಮ್ಮರಗಳ ನೆರಳಿನಲ್ಲಿ ಗರಿಗೆದರಿದ ನವಿಲುಗಳ ಸ್ವಚ್ಛಂದ ತಾಂಡವವು ಪ್ರೇಕ್ಷಣೀಯವಾಗಿತ್ತು. ಪರಿಸರದ ಪರ್ವತ ಪ್ರದೇಶಗಳಲ್ಲಿ ಸಿಂಹ, ಹುಲಿ, ಮದ್ದಾನೆ ಮುಂತಾದ ಕ್ರೂರಪ್ರಾಣಿಗಳ ಸಿಂಹನಾದವು ಪ್ರತಿಧ್ವನಿತವಾಗಿ ದಿಗಂತರಾಳವನ್ನೆಲ್ಲ ತುಂಬುತ್ತಿತ್ತು. ಕಣ್ಣಿಗೆ ನೋಡಲು ಆ ಅಗಸ್ತ್ಯಾಶ್ರಮವು ಮತ್ತೊಂದು ಸ್ವರ್ಗದಂತೆ ತೋರುತ್ತಿತ್ತು. ಇಂತಹ ಪುಣ್ಯಾಶ್ರಮದಲ್ಲಿ ಕುಳಿತಿದ್ದರು ಮಹರ್ಷಿ ದಧೀಚಿ. ಸೂರ್ಯನಿಗೆ ಕಡಿಮೆ ಇರಲಿಲ್ಲ ಅವರ ತೇಜಸ್ಸು. ದೇದೀಪ್ಯಮಾನನಾದ ಸಾಕ್ಷಾತ್ ಬ್ರಹ್ಮದೇವನೇ ಕುಳಿತಂತಿತ್ತು. ಅವರ ಮುಖದ ಮೇಲಿನ ತೇಜಸ್ಸು. ಅವರ ಎರಡೂ ಪಾದಗಳನ್ನು

ಗಟ್ಟಿಯಾಗಿ ಹಿಡಿದರು ದೇವತೆಗಳು. ಅವರ ಅಭಿನಂದನೆಯನ್ನು ಮಾಡಿದರು. ಅನಂತರ ಪಿತಾಮಹನು ಹೇಳಿಕೊಟ್ಟಂತೆ ವರವನ್ನೂ ಕೂಡ ಕೇಳಿದರು ಆ ಸುರೋತ್ತಮರು. ಆ ದೇವತೆಗಳ ವಿಚಿತ್ರವಾದ ಈ ಮೂಳೆಗಳ ಬೇಡಿಕೆಯನ್ನು ಕೇಳಿ ದಧೀಚಿ ಮುನಿಗೆ ಆಶ್ಚರ್ಯಕ್ಕಿಂತ ಆನಂದವೇ ಹೆಚ್ಚಾಯಿತು. ವಿನಯದಿಂದ ಅವರ ತಲೆ ತಾನೇ ತಗ್ಗಿತು. ಮಾತಿನ ಮೈಗೆಲ್ಲ ವಿನಯದ ರಸವನ್ನು ಲೇಪಿಸಿ ಆ ಮುನಿಯು ನುಡಿದರು. ''ದೇವತೆಗಳೆ, ನೀವು ನನ್ನ ಬಳಿಗೆ ಬಂದದ್ದು ಏಕೆ ? ನಾಕಲೋಕದ ನಾಯಕನಾದ ಈ ಪುರರಾಜನು ನಿಮಗೆ ಒಡೆಯನಾಗಿರುವಾಗ ನಿಮಗೆ ಏತರ ಚಿಂತೆ ? ನಿಮ್ಮ ಮುಖವು ಏಕೆ ಕಾಂತಿಗುಂದಿದೆ ? ಈ ನಿಮ್ಮ ಬಾಡಿದ ಮುಖಚರ್ಯೆಯನ್ನು ಕಂಡಾಗ ಯಾವದೋ ಪೀಡೆ ನಿಮ್ಮ ಅಂತರಂಗವನ್ನು ಕೊರೆಯುತ್ತಿರಬಹುದು. ನಿಮ್ಮ ಮನಸ್ತಾಪದ ಕಾರಣವು ಏನು ? ಅದನ್ನು ತಿಳಿಸಿರಿ. ನನ್ನ ಎದುರು ಮಾತನಾಡಲು ನಿಮ್ಮಗೆ ಸಂಕೋಚ ಬೇಡ.

**ದೇವತೆಗಳು :-** ಪೂಜ್ಯರೆ, ನಮ್ಮೆಲ್ಲ ದೇವತೆಗಳ ಚಿಂತೆ ಹಾಗೂ ಸಂತಾಪಗಳು ದೂರವಾಗಬೇಕಾದರೆ ನಿಮ್ಮ ಮೂಳೆ ಬೇಕು. ನಿಮ್ಮ ದೇಹದ ಎಲುವಿನಿಂದ ಶಸ್ತ್ರವನ್ನು ಸಿದ್ಧಪಡಿಸಿಕೊಂಡು ನಮ್ಮ ಪೀಡೆಗಳನ್ನೆಲ್ಲ ಕಳೆದುಕೊಳ್ಳುತ್ತೇವೆ.

**ದಧೀಚಿ :-** ದೇವತೆಗಳೆ, ನಿಮಗೆ ಹಿತಕರವಾದದ್ದನ್ನು ನಾನು ಇಂದೇ ಮಾಡುತ್ತೇನೆ. ನಿಮಗೆ ಕಲ್ಯಾಣವಾಗುವುದಾದರೆ ಈ ನನ್ನ ಶರೀರವನ್ನು ಈಗಲೇ ತೊರೆದು ಬಿಡುವೆನು.

**ಪುಲಸ್ತ್ಯ :-** ಮಹಾತಪಸ್ವಿಯಾದ ಆ ದಧೀಚಿ ಮುನಿಯು ದೇವತೆಗಳಿಗೆ ಬರೀ ಬಾಯಿ ಮಾತಿನ ಅಶ್ವಾಸನೆಯನ್ನು ಕೊಡಲಿಲ್ಲ. ನುಡಿದಂತೆ ನಡೆದೇ ತೋರಿಸಿದನು. ದೇವತೆಗಳ ಕಲ್ಯಾಣಕ್ಕಾಗಿ ತನ್ನ ಪ್ರಾಣಾರ್ಪಣೆಯನ್ನು ಕೂಡಲೇ ಮಾಡಿಬಿಟ್ಟನು. ಎರಡು ಕಾಲುಗಳ ಮೇಲೆ ತಿರುಗಾಡುವ ಮಾನವ ಪ್ರಾಣಿಗಳಲ್ಲಿ ನಿಜವಾಗಿಯೂ ಆ ದಧೀಚಿ ಅತ್ಯಂತ ಶ್ರೇಷ್ಠನಲ್ಲವೇ ? ಹೀಗೆ ಸುರ ಸಮೂಹದ ಕ್ಷೇಮಕ್ಕಾಗಿ ಪ್ರಾಣಪರಿತ್ಯಾಗಮಾಡಿದ ಆ ದಧೀಚಿ ಮುನಿಯ ಅಸ್ತಿಗಳನ್ನು ದೇವತೆಗಳು ತೆಗೆದುಕೊಂಡರು.

ಅಲ್ಲಿ ಒಂದನ್ನೂ ಬಿಡದಂತೆ ಆ ಮುನಿಯ ಮೂಳೆಗಳನ್ನೆಲ್ಲ ಸಂಗ್ರಹಿಸಿದ್ದಾದ ಬಳಿಕ ಅವರೆಲ್ಲರಿಗೂ ಪರಮಾನಂದವಾಯಿತು. ಗೆಲುವು ತಮ್ಮ ಕೈಯಲ್ಲಿಯೇ ಇದೆ ಎಂದು ಎನಿಸಿತು. ಅಲ್ಲಿಂದ ಅವರು ನೇರವಾಗಿ ತಮ್ಮ ಬಡಿಗನ ಬಳಿಗೆ ಬಂದರು. ಮಹಾಮುನಿಯ ದೇಹದ ದೃಢವಾದ ಆಸ್ಥಿಗಳಿಂದ ದಿವ್ಯಾಸ್ತ್ರ ನಿರ್ಮಿಸಲು ಕೇಳಿಕೊಂಡರು. ದೇವತೆಗಳ ಬಡಿಗನಾದ ವಿಶ್ವಕರ್ಮನು ಮಹಾ ಮಹರ್ಷಿಯ ಮೈಮೂಳೆಗಳನ್ನು ಕಂಡು ಮತ್ತು ಸುರರ ಮಾತುಗಳನ್ನು ಕೇಳಿ ಅತ್ಯಂತ ಸಂತುಷ್ಟನಾದನು. ಅವನು ಸ್ವಯಂ ಶುಚಿರ್ಭೂತನಾಗಿ ಆ ಮಹಾತ್ಮರ ದೇಹದ ಆಸ್ತಿಗಳನ್ನು ತೆಗೆದುಕೊಂಡು ವಜ್ರಾಯುಧವನ್ನು ಪ್ರಯತ್ನ ಪೂರ್ವಕವಾಗಿ ನಿರ್ಮಿಸಿದನು. ಅತ್ಯಂತ ಉಗ್ರವಾಗಿದ್ದಿತು. ಆ ಆಯುಧ ಆ ದಿವ್ಯಾಸ್ತ್ರವು ಸಿದ್ಧವಾದ ಬಳಿಕ ನುಡಿದನು ಆ ವಿಶ್ವಕರ್ಮ - ಇಂದ್ರದೇವ, ಈ ಶಸ್ತ್ರ ಸಾಮಾನ್ಯವಾದುದಲ್ಲ. ಈ ಶ್ರೇಷ್ಠವಾದ ಶಸ್ತ್ರದಿಂದ ನಿನ್ನ ವೈರಿಗಳನ್ನೆಲ್ಲ ನೀನು ಸುಟ್ಟು ಬೂದಿಮಾಡಿ ಒಗೆದುಬಿಡು. ಮೂರು ಲೋಕದ ಆಧಿಪತ್ಯವು ಇಂದೇ ನಿನ್ನದಾಯಿತೆಂದು ತಿಳಿ. ನೀನು ವೈರಿಗಳನ್ನೆಲ್ಲ ಗೆದ್ದು ಅಮರಾವತಿಯಲ್ಲಿ ಇದ್ದುಕೊಂಡು. ಸಮಗ್ರ ಸಾಮ್ರಾಜ್ಯವನ್ನು ನೀನು ಸುಖವಾಗಿ ಆಳು.

**ಪುಲಸ್ತ್ಯ** :- ಸ್ವರ್ಗದ ಕಾರ್ಯಗಾರರು ಆಡಿದ ಮಾತು ಪುರಂದರನನ್ನು ಪುಲಕಿತನನ್ನಾಗಿ ಮಾಡಿತು. ಅವರು ನಿರ್ಮಿಸಿದ ವಜ್ರಾಯುಧವನ್ನು ಕಂಡು ಅವನಿಗೆ ಹಿಗ್ಗು ಗರಿಗೆದರಿತು. ಅವನು ಶುಚಿಯಾಗಿ ವಿಶ್ವಕರ್ಮನು ಸಿದ್ಧಪಡಿಸಿದ ಆ ವಜ್ರಾಸ್ತ್ರವನ್ನು ಸಂತಸದಿಂದ ತನ್ನ ಕೈಯಲ್ಲಿ ಎತ್ತಿಕೊಂಡನು. ವಜ್ರಾಯುಧವನ್ನು ಎತ್ತಿಕೊಂಡು ಆ ನಾಕನಾಥನು ವೃತ್ರಾಸುರನನ್ನು ನಿಗ್ರಹಿಸಲು ಹೊರಟನು. ಸಮರ ಸನ್ನದ್ಧರಾಗಿ ನಡೆದ ಆ ಸುರಪತಿಗೆ ಬೆಂಬಲವಾಗಿ ನಿಂತರು ಆ ದೇವತೆಗಳು. ಇತ್ತ ವೃತ್ರಾಸುರನು ಸಂಗ್ರಾಮದ ಸನ್ನಾಹದಲ್ಲೇ ಇದ್ದನು. ಭೂಮ್ಯಾಕಾಶಗಳನ್ನೆಲ್ಲ ತನ್ನ ಬಲದಿಂದ ವ್ಯಾಪಿಸಿ ನಿಂತುಕೊಂಡಿದ್ದ ಆ ದರ್ಪಿಷ್ಠ ದೈತ್ಯ. ಕಾಲಕೇಯರೆಂಬ ಮಹಾ ರಕ್ಕಸರು ಅವನನ್ನು ರಕ್ಷಿಸುತ್ತಿದ್ದರು. ಅವರೆಲ್ಲರಿಗೂ ಗುಡ್ಡದಂತಹ ದೊಡ್ಡ ದೊಡ್ಡ ದೇಹ. ಕೈಗಳಲ್ಲಿ ಉಗ್ರವಾದ ತೀಕ್ಷ್ಣ ಆಯುಧಗಳು.

ದೇವ-ದಾನವರಲ್ಲಿ ನಡೆದ ಘನ ಘೋರ ಸಂಗ್ರಾಮವು ಭೀಕರವಾಗಿ ನಡೆಯಿತು. ಆದರಿಂದ ಎಲ್ಲ ಲೋಕಗಳು ಸಂತ್ರಸ್ತವಾದವು. ವೃತ್ರಾಸುರನ ಬೆಂಬಲಿಗರಾದ ಕಾಲಕೇಯರು ಕಾಳ್ಗಿಚ್ಚಿನಂತೆ ಉರಿಯುತ್ತ ಸುರಸೇನೆಯ ಮೇಲೆ ಎರಗಿದರು. ದೈತ್ಯರ ಈ ಭೀಕರದಾಳಿಯನ್ನು ತಾಳಲಾರದೆ ದೇವತೆಗಳು ದಿಕ್ಕೆಟ್ಟು ಓಡತೊಡಗಿದರು. ಅಮರ ಗಣದ ಈ ಪಲಾಯನ ಪ್ರವೃತ್ತಿಯನ್ನು ಕಂಡು ಇಂದ್ರನ ಮುಖವು ಬಾಡಿಹೋಯಿತು.

ಹೀಗೆ ಸಮರಾಂಗಣದಲ್ಲಿ ದೇವೇಂದ್ರನ ಹಾಗೂ ದೇವತೆಗಳ ಶಕ್ತಿಹ್ರಾಸ ವಾದುದನ್ನು ಕಂಡು ವಿಷ್ಣುವು ಅವರ ಮೇಲೆ ದಯೆದೋರಿದನು. ಇಂದ್ರನಲ್ಲಿ ಸನ್ನಿಹಿತನಾಗಿ ಅವನ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸಿದನು. ಹೀಗೆ ಶ್ರೀಹರಿಯಿಂದ ಬಲಪಡಿಸಲ್ಪಟ್ಟ ಸುರರಾಜನನ್ನು ಕಂಡು ದೇವತೆಗಳೆಲ್ಲ ಉತ್ಸಾಹಿತರಾದರು. ಎಲ್ಲ ಬ್ರಹ್ಮರ್ಷಿಗಳು ಆ ದೇವ ಸಮೂಹಕ್ಕೆ ತಮ್ಮ ತಪೋಬಲ ಧಾರೆ ಎರೆದರು. ಹೀಗೆ ಭಗವಾನ್ ಹಾಗೂ ಭಗವದ್ಭಕ್ತರ ಶಕ್ತಿ ಪೂರಣದಿಂದ ದೇವತೆಗಳೆಲ್ಲರೂ ಅತ್ಯಂತ ಬಲಿಷ್ಠರಾಗಿ ವಿಜೃಂಭಿಸಿದರು. ಹೀಗೆ ವಿಷ್ಣು ಹಾಗೂ ಭಕ್ತರ ದಿವ್ಯ ತೇಜಸ್ಸಂಕ್ರಮಣದಿಂದ ಬಲೋದ್ದೀಪಿತರಾಗಿ ಕಂಗೊಳಿಸುವ ಸುರಸೇನಾಪತಿಗಳನ್ನು ಕಂಡು ವೃತ್ರಾಸುರನು ಕೆರಳಿಹೋದನು. ಭಯಂಕರ ಸಿಂಹನಾದವನ್ನು ಮಾಡಿದನು. ಅವನ ಅಬ್ಬರದಿಂದ ಭೂಮಿ ಕಂಪಿಸಿತು. ದಿಕ್ಕುಗಳೆಲ್ಲ ನಡುಗಿದವು. ಗಗನ ಮಂಡಲವೆಲ್ಲ ಗುಡುಗಾಡಿತು. ಬ್ರಹ್ಮಾಂಡವೂ ಬಿರಿಯುವಂತಿರುವ ಅಘೋರತರ ಶಬ್ದವನ್ನು ಕೇಳಿ ದೇವೇಂದ್ರನಿಗೂ ಭಯವಾಯಿತು. ಆದರ ಜೊತೆಗೆ ಕೈಯಲ್ಲಿರುವ ವಜ್ರಾಯುಧದ ನೆನಪಾಯಿತು. ದಧೀಚಿ ಋಷಿಗಳ ದೇಹದ ದೃಢತರ ಅಸ್ತಿಗಳಿಂದ ನಿರ್ಮಿತವಾದ ಆ ದಿವ್ಯಾಯುಧವನ್ನು ಆ ದುಷ್ಟ ದಾನವನ ಮೇಲೆ ದೇವೇಂದ್ರನು ಪ್ರಯೋಗಿಸಿದನು. ವಜ್ರಾಯುಧ ಪ್ರಹಾರದಿಂದ ಬಂಗಾರದ ಹಾರಗಳನ್ನು ಹಾಕಿಕೊಂಡ ವೃತ್ರಾಸುರನು ನೆಲಕ್ಕೆ ಉರುಳಿಬಿದ್ದನು. ಮಂದರ ಪರ್ವತವೇ ಉರುಳಿಬಿದ್ದಂತಾಯಿತು. ವಜ್ರಾಯುಧವನ್ನು ತನ್ನ ಕೈಯಿಂದ ತೂರಿ ಒಗೆದದ್ದಷ್ಟೆ ನೆನಪು ದೇವೇಂದ್ರನಿಗೆ ಅದರ ಪರಿಣಾಮ ಏನಾಯಿತು ಎಂಬುದನ್ನು ತಿಳಿಯಲು ಧೈರ್ಯವಿರಲಿಲ್ಲ. ವಜ್ರಯುಧವನ್ನು ವೃತ್ರನ ಮೇಲೆ ಬೀಸಿ ಒಗೆದವನೇ ಓಡಿಬಿಟ್ಟ ಆ ದೇವೇಂದ್ರ, ಭಯದಿಂದ ನಡುಗುತ್ತ ಯಾವುದೋ ಒಂದು ಜಲಾಶಯದ

ನೀರಿನತಳದಲ್ಲಿ ಮುಳುಗಿ ಅಡಗಿಬಿಟ್ಟನು. ತನ್ನ ಕೈಯಿಂದ ಸಿಡಿದು ಹೋದ ವಜ್ರಾಯುಧವು ವೃತ್ರಾಸುರನನ್ನು ಕೊಂದುಹಾಕಿದೆ ಎಂಬದನ್ನು ತಿಳಿಯಲು ಅವನಿಗೆ ಎಷ್ಟೋ ಸಮಯ ಹಿಡಿಯಿತು. ವಜ್ರಾಸ್ತ್ರದಿಂದ ವೃತ್ರಾಸುರನು ಹತನಾಗಿ ಬಿದ್ದಿದ್ದನ್ನು ಕಂಡು ದೇವತೆಗಳು ಹಿಗ್ಗಿದರು. ಮುನಿಮಂಡಲ ಮುದಿತವಾಗಿ ಸ್ತೋತ್ರ ಮಾಡಿತು. ದೈತ್ಯ ಪತಿಯು ಹತನಾದ ಬಳಿಕ ದೇವತೆಗಳು ಉತ್ಸಾಹದಿಂದ ಉಳಿದ ದಾನವರ ಮೇಲೆ ಎರಗಿ ಕಂಡಲ್ಲೆಲ್ಲ ತುಂಡರಿಸಿದರು. ಸುರ ಸೇನಾಪತಿಗಳ ಉಗ್ರ ದಾಳಿಯಿಂದ ದೈತ್ಯರ ದಳವೆಲ್ಲವೂ ಕ್ಷತವಿಕ್ಷತ ಆಗಿಹೋಯಿತು. ಆ ಸಮರದಲ್ಲಿ ಅಳಿದುಳಿದ ದೈತ್ಯ ದಾನವರೆಲ್ಲರೂ ಓಡುತ್ತ ಸಮುದ್ರವನ್ನು ಹೊಕ್ಕರು. ಸಾಗರದ ತಳದಲ್ಲಿ ನೆರೆಯಿತು. ಪರಾಜಿತರಾದ ದೈತ್ಯ ಧುರೀಣರ ಗುಪ್ತ ಸಭೆ ದೈತ್ಯಕುಲಕ್ಕೆಲ್ಲ ಸನ್ನಿಹಿತವಾಗಿತ್ತು ಸಾಯುವ ಸಮಯ. ''ವಿನಾಶ ಕಾಲೆ ವಿಪರೀತ ಬುದ್ಧಿಃ'' ಕ್ಷಯ ಕಾಲವು ಒದಗಿ ಬಂದಾಗ ಆ ದೈತ್ಯರೆಲ್ಲರೂ ಅದಕ್ಕೆ ತಕ್ಕಂತೆಯೇ ಆಲೋಚನೆ ಮಾಡಿದರು. ''ನಾವು ಇನ್ನು ಮೇಲೆ ಬದುಕಿರುವವರೆಗೆ ಹಿಂಸಾ ಕಾರ್ಯ ಮುಂದುವರಿಸಬೇಕು. ಕೈಗೆ ಸಿಕ್ಕವರನ್ನೆಲ್ಲ ಕೊಚ್ಚಿ ಹಾಕಬೇಕು. ಕಣ್ಣಿಗೆ ಕಂಡವರನ್ನು ಕೊಂದು ಹಾಕಬೇಕು. ಅದರಲ್ಲಿಯೂ ವಿದ್ಯಾವಂತನನ್ನು ಮೊದಲೆ ಮುಗಿಸಿ ಬಿಡಬೇಕು.

ಎರಡನೇಯದಾಗಿ ತಪಸ್ವಿಗಳನ್ನು ತರಿದು ಹಾಕಬೇಕು. ವಿದ್ಯಾ ಮತ್ತು ತಪಸ್ಸು ಇವೆರಡೂ ಈ ಪ್ರಪಂಚದಲ್ಲಿ ಇರದಂತೆ ಮಾಡುವುದೇ ನಮ್ಮ ಹೆಗ್ಗುರಿ. ಈ ಚರಾಚರ ಪ್ರಪಂಚವೆಲ್ಲವೂ ತಪಸ್ಸಿನಿಂದಲೇ ರಚಿಸಲ್ಪಟ್ಟಿದೆ. ಅದಕ್ಕೆ ಮೊದಲು ತಪಸ್ವಿಗಳನ್ನು ಸಂಹರಿಸೋಣ. ಆ ತಪಸ್ವಿಗಳು ವಿದ್ಯಾವಂತರೇ ಆಗಿರುವುದರಿಂದ ನಮ್ಮ ಎರಡೂ ಕಾರ್ಯಗಳು ತಪಸ್ಸು ನಾಶ ರೂಪವಾದ ಒಂದೇ ಪ್ರಯತ್ನದಿಂದ ಸಿದ್ಧಿಸಿದಂತಾಗುವವು. ಬಂಧುಗಳೇ ನಾವೆಲ್ಲರೂ ಇಂದು ಒಂದೇ ಪ್ರತಿಜ್ಞೆಯನ್ನು ಮಾಡೋಣ. ಈ ವಸುಂಧರೆಯಲ್ಲಿ ತಪಸ್ವಿಗಳು, ಧರ್ಮನಿಷ್ಠರು, ಪಂಡಿತರು, ಯಾರು ಯಾರು ಇರುವರೋ ಅವರೆಲ್ಲರ ವಧೆಯನ್ನು ಕೂಡಲೇ ಮಾಡಿರಿ ವಿದ್ವಾಂಸರಾದ ಧಾರ್ಮಿಕ ತಪಸ್ವಿಗಳು ನಾಶ ಹೊಂದಿದರೆ ಜಗತ್ತೆಲ್ಲವೂ ನಷ್ಟವಾದಂತೆಯೇ ಸರಿ. ಪ್ರಪಂಚದ ನಾಶವೇ ನಮ್ಮ ಉದ್ದೇಶ. ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವನ್ನೂ ನಮ್ಮಿಂದ ವಿನಾಶಗೊಳಿಸಲಾಗುವುದಿಲ್ಲ. ಅದಕ್ಕೆ ಮೂಲಾಧಾರ ಧರ್ಮ, ತಪಸ್ಸು, ಜ್ಞಾನ ಈ ಮೂವರನ್ನು ನಾಶಮಾಡಿದರೆ ಮೂರು ಲೋಕವೇ ನಾಶವಾಗುವವು. ಧರ್ಮ, ತಪಸ್ಸು, ಜ್ಞಾನ ಈ ಮೂರು ತಪಸ್ವಿಗಳನ್ನು ಆಶ್ರಯಿಸಿರುತ್ತವೆ. ಆದ್ದರಿಂದ ಮೊದಲು ಈ ತಪಸ್ವಿಗಳ ಕುಲವನ್ನು ನಾಶಮಾಡಿ ಬಿಡಬೇಕು. ಇದರಿಂದ ನಮ್ಮ ಪರಮ ಧ್ಯೇಯವು ಸುಲಭವಾಗಿ ಸಾಧಿತವಾಗುವುದು.

ಹೀಗೆ ಆ ದುರುಳ ದಾನವರೆಲ್ಲರೂ ವಿಚಾರಮಾಡಿ ಪ್ರಪಂಚ ವಿನಾಶಕ್ಕಾಗಿ ಟೊಂಕ ಕಟ್ಟಿದರು. ಅದಕ್ಕಾಗಿ ರತ್ನಗಳಿಗೆಲ್ಲ ಆಶ್ರಯದಂತಿದ್ದ ವರುಣನ ನೆಲೆ ಸಮುದ್ರವನ್ನೇ ಆಶ್ರಯಿಸಿದರು. ಪರ್ವತೋಪಮವಾದ ಹೆದ್ದೆರೆಗಳಿಂದ ಘೂರ್ಮಿಸುವ ಆ ಸಾಗರವು ಒಂದು ದೊಡ್ಡ ದುರ್ಗವೇ ಅಲ್ಲವೆ? ಇಂತಹ ಅಭೇದ್ಯವಾದ ಶರಧಿ ಇಲ್ಲಿಂದ ದುರ್ಗವನ್ನು ಆಶ್ರಯಿಸಿ, ಕಾಳಿಕೇಯರು ತಮ್ಮ ಲೋಕೋಪದ್ರವ ಕಾರ್ಯವನ್ನು ಪ್ರಾರಂಭಿಸಿದರು. ಅವರ ಈ ಜಗದ್ವಿನಾಶದ ಕಾರ್ಯದ ಪ್ರಥಮ ಗ್ರಾಸ ಆಗಿದ್ದರು ಋಷಿಮುನಿಗಳು. ರಾತ್ರಿಯಾದ

ಕೂಡಲೇ ಆ ದೈತ್ಯರಿಗೆ ನೆತ್ತರಿನ ಹಸಿವು ನೆತ್ತಿಗೇರುತ್ತಿತ್ತು. ಕೆಂಪಡರಿದ ಕಣ್ಣುಗಳಿಂದ ತಮ್ಮ ಕೆನ್ನಾಲಿಗೆಗಳನ್ನು ಚಾಚಿ, ಅವರು ಮುನಿಗಳ ಮನೆಗಳ ಮೇಲೆ ಎರಗುತ್ತಿದ್ದರು. ಆಶ್ರಮ, ಮಠ, ಮಂದಿರಗಳಲ್ಲಿ ಹೊಕ್ಕು ಮುನಿಗಳನ್ನು ಕೊಲ್ಲುತ್ತಿದ್ದರು. ಋಷಿಗಳನ್ನು ಮುರಿದು ತಿನ್ನುತ್ತಿದ್ದರು. ತಪಸ್ವಿಗಳನ್ನು ಸಂಹರಿಸುತ್ತಿದ್ದರು. ಹೀಗೆ ದುಷ್ಟರೂ, ದರ್ಪಿಷ್ಠರು, ಬಲಿಷ್ಠರೂ ಆದ ಆ ದೈತ್ಯರು ಒಂದು ದಿನ ವಶಿಷ್ಠರ ಆಶ್ರಮದಲ್ಲಿ ಹೊಕ್ಕರು. ಒಂದು ನೂರು ಎಂಭತ್ತೆಂಟು ಜನ ತಪಸ್ವಿಗಳನ್ನು ಕೊಂದರು. ಹಸಿನೆತ್ತರ್ ಬಸಿಯುತ್ತಿರುವ ಅವರ ದೇಹಗಳನ್ನು ತಿಂದರು. ಚವನ ಮುನಿಯ ಆಶ್ರಮದಲ್ಲಿ ನುಗ್ಗಿ ತಪಸ್ವಿಗಳನ್ನು ನುಂಗಿ ನೀರು ಕುಡಿದರು. ಹೀಗೆ ಎಲ್ಲ ಮುನಿಗಳ, ಪುಣ್ಯಾಶ್ರಮಗಳ ಮೇಲೆ ಬರ ಸಿಡಿಲಿನಂತೆ ಎರಗಿ ಇದ್ದವರನ್ನೆಲ್ಲ ಬಡಿದು ಕೊಂದುತಿಂದು ಬಿಡುತ್ತಿದ್ದರು. ಭರದ್ವಾಜರ ಆಶ್ರಮದಲ್ಲಿಯ ಇಪ್ಪತ್ತು ಜನ ತಾಪಸರು ರಕ್ಕಸರ ಹತ್ಯಾಕಾಂಡಕ್ಕೆ ಬಲಿಯಾದರು. ಅವರೆಲ್ಲರೂ ಬಾಲ ಬ್ರಹ್ಮಚಾರಿಗಳು, ಬರಿ ಗಾಳಿ ಕುಡಿದು ಬದುಕಿರುವವರು. ಬಹಳವಾದರೆ ಆಗಾಗ ಬೊಗಸೆ ನೀರನ್ನು ಮಾತ್ರ ಕುಡಿಯುತ್ತಿದ್ದರು.

ಇಂತಹ ಅನೇಕ ನಿರುಪದ್ರವಿ ಮುನಿಗಳು ದೈತ್ಯರ ಬಾಯಿಗೆ ತುತ್ತಾದರು. ಹೀಗೆ ರಾತ್ರಿಯಲ್ಲಿ ಹಿಂಸಾತಾಂಡವನ್ನು ಕೈಕೊಂಡು ಮುನಿಗಳ ಬಳಗವನ್ನೆಲ್ಲ ಕಬಳಿಸಿ ಬೆಳಗಾಗುವಷ್ಟರಲ್ಲಿ ಆ ದೈತ್ಯರೆಲ್ಲರೂ ಸಮುದ್ರದಲ್ಲಿ ಅಡಗಿ ಬಿಡುತ್ತಿದ್ದರು. ಹೀಗೆ ಕ್ರೂರ ರಾಕ್ಷಸರ ಕರಾಳ ಕೃತ್ಯದಿಂದ ಕಾಡು-ಬೀಡುಗಳಲ್ಲಿ ನೆಲೆಸಿದ ತಪಸ್ವಿ ಮುನಿಗಳ ಕುಲಗಳೆಲ್ಲ ಕ್ರಮವಾಗಿ ಕರಗಿ ಹೋದವು. ಋಷಿ ಮುನಿಗಳ ಸಂಹಾರಕಾರ್ಯವು ಎಷ್ಟೋ ಕಾಲ ಮಾನವರಿಗೆ ತಿಳಿಯಲೇ ಇಲ್ಲ. ತಪಸ್ವಿ ಮುನಿಗಳ ಈ ಸಾಮೂಹಿಕ ಕಗ್ಗೊಲೆಯ ದುಷ್ಪರಿಣಾಮದಿಂದ ಈ ಪ್ರಪಂಚದಲ್ಲಿ ಅಧ್ಯಯನ, ಅಧ್ಯಾಪನಗಳು, ಯಜ್ಞಗಳೆಲ್ಲ ನಷ್ಟವಾದವು. ಹಬ್ಬ ಹರಿದಿನಗಳು, ಉತ್ಸವ ಸಮಾರಂಭಗಳು ಪ್ರತಿಬದ್ಧವಾದವು. ಎಲ್ಲಿಯೂ ಉತ್ಸಾಹವಿಲ್ಲ. ಎಲ್ಲ ಕಡೆಗೂ ಕಾಲಕೇಯರ ಭಯಭ್ರಾಂತಿ, ಜಗತ್ತೇ ಶೂನ್ಯ. ದಾನವರ ಭಯದಿಂದ ಪ್ರಪಂಚವೆಲ್ಲವೂ ಒಂದು ದೊಡ್ಡ ಸ್ಮಶಾನದಂತೆ ರಣಗುಡಹತ್ತಿತ್ತು. ಕಾಲಾಂತಕರಾದ ಕಾಲೇಯ ದಾನವರ ಭಯದಿಂದ ಮಾನವರು ಸಿಕ್ಕು. ಸಿಕ್ಕಲ್ಲಿ ಓಡಿ ಹೋದರು. ಕೆಲವರು ಗುಹೆಗಳಲ್ಲಿ ಅಡಗಿದರು. ಹಲವರು ದರಿ-ಕಂದರಿಗಳಿಗೆ ಹಾರಿದರು. ಎಷ್ಟೋ ಜನರು ನದಿ ಸಮುದ್ರ ಮುಳಗಿದರು. ಎಲ್ಲಿ ಹೋದರೂ ದೈತ್ಯರ ಭಯ ತಪ್ಪಿದ್ದಲ್ಲ.

ಅವರಿಂದ ಭಯಭ್ರಾಂತರಾಗಿ, ಅನೇಕ ಜನರು ಅಸುವು ನೀಗಿದರು. ಎದೆ ಒಡೆದುಕೊಂಡು ಪ್ರಾಣ ನೀಗಿದರು. ಇನ್ನು ಕೆಲವರು ಅತ್ಯಂತ ಶೂರರೂ, ಧೀರರೂ ಆಗಿದ್ದರು. ಅವರು ತಮ್ಮ ಜನ್ಮ ಸಹಜವಾದ ಧೈರ್ಯದಿಂದ ಆ ದೈತ್ಯರನ್ನು ಎದುರಿಸಬೇಕೆಂದು ಪ್ರಯತ್ನಮಾಡಿದರು. ದೈತ್ಯರನ್ನು ಹೊಡೆದು ಬಡಿದು, ಬೆನ್ನಟ್ಟಿದಾಗ ಆ ದಾನವರೆಲ್ಲರೂ ಸಮುದ್ರವನ್ನು ಹೊಕ್ಕು, ಅಲ್ಲಿಯ ನೀರಿನ ಅಳಕ್ಕೆ ಇಳಿದು ಬಿಟ್ಟರು. ಆದುದರಿಂದ ಈ ಧೀರ-ವೀರರಿಗೆ ಅವರನ್ನು ಕೊಂದು ಬಿಡಬೇಕೆಂದು ಇಚ್ಛೆ ಇದ್ದರೂ ಅದು ಸಾಧ್ಯವಾಗಲಿಲ್ಲ. ಕೋಪದಿಂದ ಸಮುದ್ರದಲ್ಲಿಯೇ ಮುನ್ನುಗ್ಗಿ ದೈತ್ಯರನ್ನು ಹೊಡೆಯ ಹೋದವರು ಸಾಗರದ ಅಪಾರ ಜಲರಾಶಿಯಲ್ಲಿ ದೈತ್ಯರ ಕೈಗೆ ಸುಲಭವಾಗಿ ಸಿಕ್ಕು

ಮರಣವನ್ನು ಅಪ್ಪ ಬೇಕಾಗುತ್ತಿತ್ತು. ಮೇಲಿದ್ದವರು ನಿರಾಶೆಯಿಂದ ತಮ್ಮ ಸ್ಥಾನಕ್ಕೆ ಹಿಂದಿರುಗ ಬೇಕಾಗುತ್ತಿತ್ತು. ಅವರನ್ನು ಕೂಡ ದೈತ್ಯರು ಕಣ್ಣು ತಪ್ಪಿಸಿ, ಒಮ್ಮೆಲೆ ನೀರಿನ ಮಧ್ಯದಿಂದ ಮೇಲೆದ್ದು ಹಿಂಬದಿಯಿಂದ ಬಂದು ಹೊಡೆದು ಹಾಕುತ್ತಿದ್ದರು. ಹೀಗೆ ದಾನವರ ಹಾವಳಿಯಿಂದ ಜಗತ್ತಿನಲ್ಲಿಯ ವೀರರೆಲ್ಲರೂ ಮಡಿದರು. ಶೂರರು ಸಾವನ್ನಪ್ಪಿದರು. ಯಜ್ಞ ಉತ್ಸವಗಳು ನಿಂತು ಹೋದವು. ಯಜ್ಞವಿಲ್ಲದೆ ದೇವತೆಗಳಿಗೆ ಉಪವಾಸವಾಗಿ ಅವರೆಲ್ಲ ಬಹಳ ದುಃಖಿತರಾದರು. ಆಗ ಅವರೆಲ್ಲರು ಒಂದೆಡೆ ಕೂಡಿದರು. ಇಂದ್ರನೂ ಅವರಲ್ಲಿ ಇದ್ದ. ಹೆದರಿದ ಅವರು ಗುಪ್ತಾಲೋಚನೆಯನ್ನು ನಡೆಸಿದರು. ಇಂತಹ ಪರಿಸ್ಥಿತಿಯಲ್ಲಿ ದೇವರೇ ಗತಿ ಎಂದು ವೈಕುಂಠಲೋಕಕ್ಕೆ ಬಂದರು. ಸಾಮೂಹಿಕವಾಗಿ ಭಗವಂತನಿಗೆ ನಮಸ್ಕಾರಮಾಡಿ ಒಕ್ಕೊರಲಿನಿಂದ ಮಧುಸೂಧನನನ್ನು ಸ್ತುತಿಸಿದರು.

ದೇವತೆಗಳು :- ಎಲೈ ಸ್ವಾಮಿಯೇ, ನೀನೇ ನಮ್ಮನ್ನು ಸೃಷ್ಟಿಸಿದವನು, ಕಾಪಾಡುವವನು, ನಮಗೆ ಒಡೆಯನಾಗಿ ಬೇಕಾದುದನ್ನೆಲ್ಲಾ ಕೊಡತಕ್ಕವನು. ನೀನೇ ಜಗತ್ತನ್ನೆಲ್ಲಾ ಸೃಷ್ಟಿಸಿದೆ. ಚರಾಚರಗಳೆಲ್ಲವನ್ನು ಉತ್ಪತ್ತಿಮಾಡಿದೆ. ನೀನೇ ಪೂರ್ವದಲ್ಲಿ ನಾಶವಾಗಿದ್ದ ಭೂಮಿಯನ್ನು ವರಾಹ ಅವತಾರದಿಂದ ಎತ್ತಿ ಸಮುದ್ರದಿಂದ ತಂದು ಪ್ರಪಂಚಕ್ಕೋಸ್ಕರ ಇಟ್ಟೆ. ಆದಿದೈತ್ಯನಾದ ಮಹಾ ಪರಾಕ್ರಮಿಯಾದ ಹಿರಣ್ಯಕಶಿಪುವನ್ನು ನೀನು ನರಸಿಂಹಾವತಾರಮಾಡಿ ಕೊಂದು ಹಾಕಿದೆ. ಬಲಿಯು ಒಬ್ಬನಿಂದಲೂ ಸಾಯತಕ್ಕವನಲ್ಲ ಮತ್ತು ಬಲಿಷ್ಠನು. ಅಂತಹವನನ್ನು ವಾಮನಾವತಾರವನ್ನು ಮಾಡಿ ಮೂರು ಲೋಕಗಳಿಗೂ ಅವನ ಬಂಧವಿಲ್ಲದಂತೆ ಮಾಡಿ ಅವನನ್ನು ಹಾಳುಮಾಡಿದೆ. ಶೂರನಾದ ಜಂಭಾಸುರನು ಯಜ್ಞಗಳನ್ನೆಲ್ಲ ನಾಶ ಮಾಡುತ್ತಿದ್ದುದರಿಂದ ನೀನು ಅವನನ್ನೂ ಕೊಂದೆ.

ಈ ರೀತಿಯಾಗಿ ಲೆಕ್ಕವಿಲ್ಲದ ಅನೇಕ ಕೆಲಸಗಳನ್ನು ಮಾಡಿದ್ದಿಯೆ! ಎಲೈ ಮಧುಸೂದನನೇ ಭಯಪಡುತ್ತಿರುವ ನಮಗೆ ನೀನೇ ಗತಿ. ದೇವ ದೇವನೆ! ಆದ್ದರಿಂದ ನಿನ್ನನ್ನು ಲೋಕ ರಕ್ಷಣೆಗೋಸ್ಕರ ವಿಜ್ಞಾಪಿಸಿಕೊಳ್ಳುತ್ತೇವೆ. ಈ ಮಹಾಭಯದಿಂದ ಲೋಕಗಳನ್ನು, ದೇವತೆಗಳನ್ನು, ಇಂದ್ರನನ್ನು ರಕ್ಷಿಸು. ಪ್ರಜೆಗಳಲ್ಲಿಯೂ ನಾಲ್ಕು ಬಗೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು. ಇವರೆಲ್ಲರೂ ನಿಶ್ಚಿಂತೆಯಿಂದ ಸುಖವಾಗಿ ಇರುವದು ನಿನ್ನ ಪ್ರಸಾದದಿಂದಲೆ. ಇದರಂತೆ ದೇವತೆಗಳು. ಪಿತೃಗಳು ಹವ್ಯಕವ್ಯಗಳಿಂದ ತೃಪ್ತಿಪಟ್ಟು ಸುಖಿಸುವದು ನಿನ್ನ ಪ್ರಸಾದದಿಂದಲೇ. ಅವರೆಲ್ಲರನ್ನು ಯಾವುದೇ, ಭಯಾಪಾಯಗಳಿಲ್ಲದಂತೆ ಸುಖಿಸುವವನು ನೀನೇ. ಆದರೆ ಈಗ ಮಾತ್ರ ಲೋಕಗಳಿಗೆಲ್ಲ ಮಹತ್ತರವಾದ ಭಯವು ಒದಗಿ ಬಂದಿದೆ. ಎಲ್ಲ ಜ್ಞಾನಿಗಳು ರಾತ್ರಿಕಾಲದಲ್ಲಿ ಗೂಢವಾಗಿ ವಧಿಸಲ್ಪಡುತ್ತಾರೆ. ವಿಪ್ರವೃಂದದ ಮತ್ತು ತಪಸ್ವಿಮಂಡಲದ ಈ ವಿಶಾನಾಶಕ್ಕೆ ಕಾರಣರು ಯಾರು ? ರಹಸ್ಯವಾಗಿ ಋಷಿಕುಲವನ್ನು ಪರಿಹರಿಸುವ ಕ್ರೂರ ವ್ಯಕ್ತಿ ಯಾರು ಎಂಬುದನ್ನು ನಾವು ತಿಳಿಯಲಾರದಂತಾಗಿದ್ದೇವೆ. ಬ್ರಹ್ಮನನ್ನು ಅರಿತ ಬಲ್ಲವರು ತಪಸ್ವಿ ಪುಂಗವರು ಕ್ಷಯವನ್ನು ಹೊಂದಿದ ಬಳಿಕ ಭೂಲೋಕಕ್ಕೂ ವಿನಾಶವು ಕಟ್ಟಿಟ್ಟದ್ದು. ಜಗದೊಡೆಯನೆ, ನಿನ್ನ ಪ್ರಸಾದದಿಂದ ಲೋಕದಲ್ಲಿಯ ಜನರೆಲ್ಲರೂ ನಾಶ ಹೊಂದದಂತೆ ನೀನು ಎಲ್ಲರನ್ನು ಕರುಣೆಯಿಂದ ಕಾಪಾಡು.

**ವಿಷ್ಣು :-** ದೇವತೆಗಳೆ, ಈ ಪ್ರಜಾಕೋಟಿಯ ಕ್ಷಯದ ಕಾರಣವನ್ನು ನಾನು ಚೆನ್ನಾಗಿ ಬಲ್ಲೆ ; ಹೇಳುತ್ತೇನೆ ಕೇಳಿರಿ. ನಿಮ್ಮ ಚಿಂತೆ ಕಳೆಯಲಿ. ಭೂಲೋಕದಲ್ಲಿ 'ಕಾಲೇಯ' ಎಂಬ ಖ್ಯಾತಿವೆತ್ತ ಬಲದ ತಂಡ ಬಂದಿದೆ. ಅತ್ಯಂತ ಕ್ರೂರರ ಆ ಗುಂಪು ಲೋಕ ಭಯಂಕರ. ಆ ದುರುಳ ದಾನವರು ಒಂದು ದುರ್ಗಮವಾದ ಸ್ಥಳದಲ್ಲಿ ನೆಲೆನಿಂತಿದ್ದಾರೆ. ಪೊಡವಿಯನ್ನೆಲ್ಲ ಪೀಡಿಸುತ್ತಿದ್ದಾರೆ. ಹಿಂದೆ ದೇವೇಂದ್ರನು ವೃತ್ರನನ್ನು ಕೊಂದನಷ್ಟೆ. ಅದನ್ನು ಕಂಡು ಹೌಹಾರಿದ ಈ ದುಷ್ಟ ದೈತ್ಯಾಧಮರು ವರುಣನ ನೆಲೆಯಾದ ವಾರಿಧಿಯನ್ನು ಆಶ್ರಯಿಸಿದ್ದಾರೆ. ಇದೇ ಉದಧಿಯನ್ನೇ ಒಂದು ಜಲದುರ್ಗವನ್ನಾಗಿ ಮಾರ್ಪಡಿಸಿಕೊಂಡು ತಮ್ಮ ಜೀವನವನ್ನು ಸುಭದ್ರವಾಗಿ ಕಾಪಾಡಿಕೊಂಡಿದ್ದಾರೆ. ರಾತ್ರಿಯಾದ ಕೂಡಲೇ ಸಾಗರದ ಜಲಗರ್ಭದಿಂದ ಎದ್ದು ಬಂದು ಮುನಿಗಳನ್ನು ತಿನ್ನುತ್ತಾರೆ. ಮಾನವರನ್ನು ಕೊಲ್ಲುತ್ತಾರೆ. ಪ್ರಪಂಚವನ್ನೆಲ್ಲ ಹಿಂಸಿಸುತ್ತಾರೆ. ಅಪರಂಪಾರ ಸಮುದ್ರದಲ್ಲಿ ಅಂತರ್ಭೂತರಾದ ಆ ಭೂತ ಪಿಶಾಚ; ರಕ್ಕಸರ ಗುಂಪನ್ನು ಯಾರೂ ಜಯಿಸಲಾರರು, ಯಾರೂ ನಿಗ್ರಹಿಸಲಾರರು. ಸಾಗರವನ್ನೇ ತಮ್ಮ ಆಗರವನ್ನಾಗಿ ಮಾಡಿಕೊಂಡು ಆ ದುಷ್ಟ ದೈತ್ಯರ ದಲವನ್ನು ಧ್ವಂಸಮಾಡುವ ಉಪಾಯವೆಂದರೆ ಆ ನೀರ ನಿಧಿಯನ್ನೇ ನಾಶಮಾಡುವುದು. ಭಯಂಕರವಾದ ಈ ಸಮುದ್ರ ಕ್ಷಯಕ್ಕೆ ಒಂದು ಉಪಾಯವನ್ನು ಯೋಚಿಸಿರಿ. ಅವರು ನಿಂತ ನೆಲೆಯಾದ ನೀರ ಸಾಗರವೆ ನಷ್ಟವಾಗಿ ಹೋಗಿ ಬಿಟ್ಟರೆ ಆ ದುಷ್ಟರು ತಾವಾಗಿಯೇ ನಾಶಹೊಂದುತ್ತಾರೆ. ಅದಕ್ಕಾಗಿ ಆ ಸಿಂಧು ಶೋಷಣೆಗೆ ಉಪಾಯವನ್ನು ಹುಡುಕಿ ತೆಗೆಯುವುದು ನಿಮ್ಮ ಮೊದಲ ಕರ್ತವ್ಯ.

**ಪುಲಸ್ತ್ಯ :-** ವಿಷ್ಣುವಿನ ಈ ನುಡಿಯಲ್ಲಿ ಆಶಾಂಕುರದ ಕುಡಿಯನ್ನು ಕಂಡ ದೇವತೆಗಳು ಬ್ರಹ್ಮದೇವನ ಬಳಿಗೆ ಬಂದರು. ಅವನ ಜೊತೆಗೆ ಸಮಾಲೋಚನೆ ನಡೆಸಿ. ಸಲಹೆ ಸೂಚನೆ ಪಡೆದುಕೊಂಡರು ! ಆ ವಾಣೀಪತಿಯ ನಿರ್ದೇಶನದಂತೆ ದೇವತೆಗಳು ಅಗಸ್ತ್ಯ ಋಷಿಯ ಆಶ್ರಮಕ್ಕೆ ಬಂದರು. ಆಶ್ರಮದಲ್ಲಿ ಅಗಸ್ತ್ಯ ಮುನಿಯನ್ನು ಕಂಡರು. ವರುಣ ಪುತ್ರನಾದ ಆ ಮಹಾಮುನಿಯು ತನ್ನ ದೇದೀಪ್ಯಮಾನವಾದ ತೇಜಸ್ಸಿನಿಂದ ಜ್ಯೋತಿಸ್ವರೂಪನಾಗಿ ಬೆಳಗುತ್ತಿದ್ದ. ಅನೇಕ ಋಷಿ ಮುನಿಗಳು ಸೇವಿಸುತ್ತಿದ್ದರು. ಪರಿವಾರದವರು ಕೈಕಟ್ಟಿಕೊಂಡು ನಿಂತಿದ್ದರು. ಮಿತ್ರಾ ವರುಣ ಪುತ್ರನಾದ ಅಗಸ್ತ್ಯನು ಮಹಾತ್ಮನು. ಅವನ ಧ್ಯಾನ, ಜ್ಞಾನ, ಉಪಾಸನೆಗಳಿಗೆ ಎಂದೂ ಚ್ಯುತಿ ಇಲ್ಲ. ಎಲ್ಲ ಧರ್ಮ, ಕರ್ಮ ಲೋಕೋದ್ಧಾರ ಕಾರ್ಯದಲ್ಲಿ ಸದಾ ಜಾಗರೂಕ. ಒಟ್ಟಾರೆ ಅದೊಂದು ತೇಜಸ್ಸಿನ ನಿಧಿ. ಇಂತಹ ಮಹಾಮಹಿಮ ಅಗಸ್ತ್ಯನನ್ನು ಅವನ ಪೂರ್ವಚರಿತ್ರೆಯನ್ನು ಜ್ಞಾಪಿಸುತ್ತ ದೇವತೆಗಳು ಸ್ತುತಿಸಿದರು. ಅವರ ಭಕ್ತಿಯುಕ್ತವಾದ ಆ ಪ್ರಸ್ತುತ ಸ್ತುತಿಯಲ್ಲಿ ಅಗಸ್ತ್ಯ ಮುನಿಯ ಉಜ್ವಲವಾದ ಚರಿತ್ರೆಯೆಲ್ಲ ಓತಪ್ರೋತವಾಗಿ ತುಂಬಿದ್ದಿತು.

**ದೇವತೆಗಳು :-** ಮುನಿಪುಂಗವನೆ, ನೀನು ಲೋಕಪೂಜಿತ, ಪ್ರಜಾಕ್ಷೇಮಕ್ಕಾಗಿ ಕಂಕಣಬದ್ಧ. ಹಿಂದೆ ನಹುಷನೆಂಬ ನರನಾಥನು ನಾಕಲೋಕಕ್ಕೆ ಒಡೆಯನಾಗಿದ್ದ ಅಧಿಕಾರ ಮದ ಅವನಿಗೆ ತಲೆಗೇರಿತು. ಶಕ್ರನ ಪತಿಯಾದ ಶಚಿದೇವಿಯನ್ನೇ ಕಾಮಿಸಿದ. ಇಂದ್ರನಾದ ಅವನ ಮಾತಿಗೆ ಎದುರಾಡುವವರಾರು ? ಸುರರೆಲ್ಲ ಸಂಭ್ರಾಂತರಾದರು. ಲೋಕಕಂಟಕನಾದ ಆ ನಹುಷನನ್ನು ಆ ಬಿಕ್ಕಟ್ಟಿನ ಪ್ರಸಂಗದಲ್ಲಿ ಕೆಳಗಿಸಿದವ ನೀನು. ಸ್ವರ್ಗದಿಂದ ತಳ್ಳಿ ಶಚಿದೇವಿಯ ಸತಿತ್ವವನ್ನು ರಕ್ಷಿಸಿದವನು ನೀನು.

ಮತ್ತೊಂದು ಪ್ರಸಂಗ ! ಹಿಂದೊಮ್ಮೆ ವಿಂಧ್ಯಗಿರಿಯು ಕೋಪಾಂಧವಾಗಿತ್ತು. ಸೂರ್ಯನೊಡನೆ ಅದರ ಪೈಪೋಟಿ. ರವಿಗೆ ಸಮನಾಗಿ ಬೆಳೆಯಬೇಕೆಂಬ ಹುಚ್ಚು ಹೊಕ್ಕಿತ್ತು. ಅದಕ್ಕೆ ಆಗ ಜಗತ್ತೆಲ್ಲವೂ ಸಂತ್ರಸ್ತವಾಯಿತು. ಆ ಸಂದರ್ಭದಲ್ಲಿ ನೀನು ಉತ್ತರದಿಂದ ಹೊರಟು ವಿಂಧ್ಯಗಿರಿಯ ಬಳಿಗೆ ಬಂದು ಹೇಳಿದೆ. ''ನಾನು ಆಚೆಗೆ ಹೋಗುತ್ತೇನೆ. ಬರುವವರೆಗೆ ನೀನು ಮುಂದೆ ಬೆಳೆಯಕೂಡದು'' ಎಂದು. ಈ ನಿನ್ನ ಕಟ್ಟಪ್ಪಣೆಯಂತೆ ಆ ವಿಂಧ್ಯ ಪರ್ವತವು ಹೆಚ್ಚು ಬೆಳೆಯದೆ ಅಷ್ಟಕ್ಕೆ ನಿಂತುಕೊಂಡಿದೆ. ಮತ್ತೊಂದು ಸಂದರ್ಭ. ಜಗತ್ತಿನ ತುಂಬೆಲ್ಲ ತಮಸ್ತೋಮ. ಎತ್ತೆತ್ತಲೂ ಸುತ್ತಲೂ ಕತ್ತಲು ಮೊತ್ತಮೊತ್ತವಾಗಿ ಕತ್ತಲೆ ಮೃತ್ಯುವಿನಂತೆ ಜಗತ್ತನ್ನೆಲ್ಲ ಸುತ್ತತೊಡಗಿತ್ತು. ಆಗ ದೀನ ವದನರಾದ ಪ್ರಜೆಗಳೆಲ್ಲರು ನಿನ್ನ ಮೊರೆಹೊಕ್ಕರು. ಅವರ ಭಯ ದೂರವಾಯಿತು. ಕತ್ತಲೆ ಕಳೆದು ಕುತ್ತು ಪರಿಹಾರವಾಯಿತು. ನೀನು ನಾಡಿನ ಬೆಳಕಾದೆ ನರಕುಲದ ನಿಧಿಯಾದೆ.

ಹೀಗೆ ಅನೇಕ ಬಾರಿ ಭಯಭೀತವಾದ ಮನುಕುಲಕ್ಕೆ ಕರುಣೆಯ ಕೈವಾರಿಯಾಗಿ ಕಾಪಾಡಿರುವೆ. ಪೂಜ್ಯರೆ, ನಮಗೂ ಈಗ ಅಂತಹ ಘೋರ ಪ್ರಸಂಗ ಬಂದಿದೆ. ನಾವೆಲ್ಲ ಬೆದರಿ ಬೆಂಡಾಗಿದ್ದೇವೆ. ನೀವೇ ಗತಿ ಎಂದು ಶರಣು ಬಂದಿದ್ದೇವೆ. ನೀವು ವರಕೊಡುವ ತಾಪಸ ಪ್ರವರರಲ್ಲವೆ ! ಅದಕ್ಕಾಗಿ ತಮ್ಮಿಂದ ವರ ಪಡೆಯಲು ಬಂದಿದ್ದೇವೆ.

**ಭೀಷ್ಮ :-** ವಿಂಧ್ಯಗಿರಿಯು ಹಿಂದೆ ಅಷ್ಟೇಕೆ ಕುಪಿತವಾಗಿತ್ತು. ಕೋಪವು ನೆತ್ತಿಗೇರಲು ಕಾರಣವೇನು ? ಇದನ್ನು ತುಸು ಬಿತ್ತರಿಸಿ ಹೇಳಬೇಕು. ವಿಂಧ್ಯಶೈಲದ ಕೋಪದ ಹಿಂದಿರುವ ಇತಿಹಾಸವನ್ನು ಕೇಳುವ ಅಪೇಕ್ಷೆ ನನಗೆ.

**ಪುಲಸ್ತ್ಯ :-** ಬಂಗಾರದ ಬೆಟ್ಟ ಎಂದು ಹೆಸರಾದ ಮೇರುಗಿರಿಯು ಶೈಲಗಳಿಗೆಲ್ಲ ಸಾರ್ವಭೌಮನೆಂಬುದು ನೀನು ಬಲ್ಲೆಯಷ್ಟೇ. ಆ ಮೇರುಪರ್ವತಕ್ಕೆ ಸೂರ್ಯನು ಅನುದಿನವೂ ಪ್ರದಕ್ಷಿಣೆ ಹಾಕುತ್ತಲಿರುತ್ತಾನೆ. ರವಿಯು ಈ ಮೇರು ಪರಿಕ್ರಮಣದಿಂದ ಉದಯಾಸ್ತಮಗಳು ಲೋಕಕ್ಕೆ ಉಂಟಾಗುತ್ತವೆ. ಇದನ್ನು ನೋಡಿತು. ಆ ವಿಂಧ್ಯಗಿರಿ, ನೇರವಾಗಿ ಸೂರ್ಯನನ್ನು ಕುರಿತು ಆ ಬೆಟ್ಟವು ನುಡಿಯಿತು.

**ವಿಂಧ್ಯ :-** ಭಾಸ್ಕರನೆ, ನೀನು ಪ್ರತಿದಿನವೂ ಮೇರುಪರ್ವತಕ್ಕೆ ಪ್ರದಕ್ಷಿಣೆ ಹಾಕುವೆಯಲ್ಲವೆ ! ಅದರಂತೆ ನನಗೇಕೆ ಪ್ರದಕ್ಷಿಣೆ ಹಾಕುವುದಿಲ್ಲ. ನನ್ನ ಈ ಬೃಹದಾಕಾರದ ಶೈಲ ಶಿಖರವನ್ನು ನೀನು ಪ್ರತಿದಿನವೂ ಪರಿಕ್ರಮಣಮಾಡು. ವಿಂಧ್ಯಶೈಲದ ಈ ನುಡಿಯನ್ನು ಕೇಳಿ ಸೂರ್ಯದೇವನು ಉತ್ತರಿಸಿದನು. ''ಅದ್ರಿರಾಜನೆ, ನಾನು ಮೇರು ಪರ್ವತವನ್ನು ನನ್ನ ಇಚ್ಛೆಯಿಂದ ಸುತ್ತುತ್ತಿಲ್ಲ. ಈ ಬ್ರಹ್ಮಾಂಡವನ್ನು ನಿರ್ಮಿಸಿದ ಭಗವಂತನೇ ನನಗೆ ಮೇರುಗಿರಿಯ ಸುತ್ತಲೂ ಪ್ರದಕ್ಷಿಣೆಹಾಕುವಂತೆ ಅನುಶಾಸನ ಗೈದಿದ್ದಾನೆ. ವಿಂಧ್ಯಾಚಲವನ್ನು ಸುತ್ತುಹಾಕು ಎಂದು ನನಗೆ ಭಗವಂತನ ಅಪ್ಪಣೆ ಇಲ್ಲ.

**ಪುಲಸ್ತ್ಯ :-** ಪ್ರಭಾಕರನ ಈ ಸ್ಪಷ್ಟ ವಚನ ಕೇಳಿ ವಿಂಧ್ಯಾಚಲಕ್ಕೆ ಭಾರಿ ಕೋಪ ಬಂದಿತು. ಅತಿ ಸಿಟ್ಟಿನಿಂದ ಅದರ ವಿವೇಕದ ಕಣ್ಣು ಕುರುಡಾಯಿತು. ಹಿಂದು ಮುಂದಿನ ವಿಚಾರ ಇಲ್ಲದೆ, ಅದು ಬಾನಿನಂಗಳದಲ್ಲಿ ಬೃಹದಾಕಾರವಾಗಿ ಬೆಳೆಯತೊಡಗಿತು. ಸೂರ್ಯ-ಚಂದ್ರರ ನಡೆಗೆ ತಡೆ ಉಂಟುಮಾಡುವುದೆ ಅದರ ಉದ್ದೇಶವಾಗಿತ್ತು. ಹೀಗೆ ಅಸೂಯೆಯಿಂದ ಅಬ್ಬರಿಸಿ, ತನ್ನ ಬೆಟ್ಟ, ಶಿಖರ, ಸಾನುಕಾನುಪ್ರದೇಶಗಳನ್ನೆಲ್ಲ ಉಬ್ಬಿಸಿ

ಗಗನದೆತ್ತರ ಬೆಳೆಯಹೊರಟ ಆ ದೈತ್ಯ ಪರ್ವತವನ್ನು ಕಂಡು ದೇವತೆಗಳೆಲ್ಲರೂ ಧಾವಿಸಿ ಬಂದರು. ಇಂದ್ರದೇವನು ಆ ವೃಂದಾರಕ ವೃಂದದ ಮುಂದಾಳುವಾಗಿದ್ದ. ಶೈಲೇಂದ್ರನಾದ ವಿಂಧ್ಯಾದ್ರಿಗೆ ಅವನು ಹಿತವಚನ ಉಪದೇಶಿಸಿದ. ಪರ್ವತ ರೂಪದಿಂದ ನೀನಿನ್ನು ಬೆಳೆಯುವುದು ಬೇಡವೆಂದು ಎಲ್ಲ ದೇವತೆಗಳು ಬಿನ್ನಹಮಾಡಿಕೊಂಡರು. ಆದರೆ ಕೋಪೋದ್ರಿಕ್ತನಾದ ಆ ಶೈಲರಾಜನು ಅವನ ಮಾತನ್ನು ಕೇಳಲಿಲ್ಲ. ಆಗ ಋಷಿ ಮುನಿಗಳೆಲ್ಲರೂ ಗಾಬರಿಯಾದರು. ದೇವತೆಗಳು ಚಿಂತಾಕ್ರಾಂತರಾದರು. ಆಗ ಎಲ್ಲ ದೇವತೆಗಳು ಅಗಸ್ತ್ಯಮುನಿಯ ಆಶ್ರಮಕ್ಕೆ ಬಂದರು. ಅಂದು ಆಗ ಆಶ್ರಮದಲ್ಲಿಯೇ ಇದ್ದ ಆ ಧರ್ಮಿಷ್ಠ ಮುನಿ ಅವನ ಮುಖದ ದೀಪ್ತಿ ದೇಹದ ದಿಧೀತಿಗಳನ್ನು ಕಂಡು ದೇವತೆಗಳೆಲ್ಲರೂ ನಿಬ್ಬೆರಗಾಗಿ ನಿಂತರು. ಆ ತಪೋನಿಧಿಯ ಬಳಿಗೆ ಬಂದು ನುಡಿದರು.

**ದೇವತೆಗಳು :-** ಮುನಿಶ್ರೇಷ್ಠರೆ, ಪರ್ವತಗಳ ಪತಿಯಾದ ಈ ವಿಂಧ್ಯಾದ್ರಿ ಇರುವದಷ್ಟೆ. ಅದಕ್ಕೆ ಈಗ ಬಹಳೇ ಸಿಟ್ಟು ಬಂದಿದೆ. ಆ ಕೋಪದ ಭರದಲ್ಲಿ ಅದು ಸೂರ್ಯನಗತಿಗೂ ಚಂದ್ರನಸ್ಥಿತಿಗೂ ಆತಂಕವನ್ನುಂಟುಮಾಡಿದೆ. ಯಾವ ಅಂಕೆಗಳಿಲ್ಲದೆ ಅದು ಬಾನಿನೆತ್ತರ ಭರದಿಂದ ಬೆಳೆಯುತ್ತ ನಡೆದಿದೆ. ಇದರಿಂದ ಚಿಕ್ಕೆ ಅಂಕುಶಗಳಿಗೆ ಚಲಿಸಲು, ಸೂರ್ಯನಿಗೆ ಚಲಿಸಲು ಬಾರದಂತಾಗಿದೆ. ಕ್ರೋಧದಿಂದ ಕುರಡಾಗಿ ಹುಚ್ಚಾಪಟ್ಟೆ ಬೆಳೆಯುತ್ತಲಿರುವ ಇದನ್ನು ತಡೆಯುವ ಶಕ್ತಿ ನಿಮ್ಮ ಹೊರತು ಬೇರೆ ಯಾರಿಗುಂಟು ? ನೀವೇ ಆ ಪರ್ವತವನ್ನು ಮುಂದೆ ಬೆಳೆಯದಂತೆ ತಡೆದು ನಿಲ್ಲಿಸಬೇಕು. ದೇವತೆಗಳ ಈ ಬಿನ್ನಹ ಕೇಳಿ ಅಗಸ್ತ್ಯರು ಕೂಡಲೇ ಆ ಪರ್ವತದ ಬಳಿಗೆ ಧಾವಿಸಿ ಬಂದರು ಮತ್ತು ಅದಕ್ಕೆ ಹೀಗೆ ಅಂದರು.

**ಅಗಸ್ತ್ಯ :-** ಪರ್ವತರಾಜನೆ, ನಾನು ದಕ್ಷಿಣ ದಿಕ್ಕಿಗೆ ಹೋಗಬೇಕಾಗಿದೆ. ಅಲ್ಲಿ ನನಗೆ ಒಂದು ಮಹತ್ವದ ಕೆಲಸವಿದೆ. ಅದಕ್ಕಾಗಿ ನೀನು ನನಗೆ ದಾರಿ ಕೊಡು. ನಾನು ನನ್ನ ಕಾರ್ಯ ಮುಗಿಸಿಕೊಂಡು ಬೇಗನೆ ಮರಳುತ್ತೇನೆ. ನಾನು ಬರುವವರೆಗೆ ನೀನು ಬೆಳೆಯಕೂಡದು. ನೀನು ಬೆಳೆದರೆ ನಾನು ತಿರುಗಿ ಉತ್ತರ ದೇಶದಲ್ಲಿರುವ ಆಶ್ರಮಕ್ಕೆ ಮರಳಿ ಬರುವುದೇ ಅಶಕ್ಯವಾಗುವುದು. ಆದ್ದರಿಂದ ನೀನಿನ್ನು ಹೆಚ್ಚಿಗೆ ಬೆಳೆಯಬೇಡ. ನಾನು ಆಚೆಯ ದಕ್ಷಿಣ ಪಥದಲ್ಲಿಯ ನನ್ನ ಕೆಲಸವನ್ನೆಲ್ಲ ಪೂರೈಸಿಕೊಂಡು ಮರಳಿ ಉತ್ತರಕ್ಕೆ ತಿರುಗಿ ಬಂದ ಬಳಿಕ ನೀನು ಬೇಕಾದಷ್ಟು ಬೆಳೆಯಬಹುದು.

**ಪುಲಸ್ತ್ಯ :-** ಹೀಗೆ ಹೇಳಿ, ಅಗಸ್ತ್ಯರು ದಾರಿ ಬಿಡಿಸಿಕೊಂಡು ದಕ್ಷಿಣಕ್ಕೆ ಬಂದು ನೆಲೆಸಿದರು. ಅವರ ಅಪ್ಪಣೆಯಂತೆ ಆ ವಿಂಧ್ಯಪರ್ವತವು ತನ್ನ ಬೆಳವಣಿಗೆಯನ್ನು ನಿಲ್ಲಿಸಿ, ಅಗಸ್ತ್ಯರ ಆಗಮನವನ್ನು ನೋಡುತ್ತಲಿದೆ. ಆದರೆ ಲೋಕಕಲ್ಯಾಣಾಕಾಂಕ್ಷಿಗಳಾದ ಆ ಅಗಸ್ತ್ಯ ಮುನಿಗಳು ಉತ್ತರಕ್ಕೆ ಮರಳಿ ಬರಲೇ ಇಲ್ಲ. ದಕ್ಷಿಣವೃತ್ತದಲ್ಲಿ ಮರಳಿ ನಿಂತರು. ಅದರಿಂದ ಈ ಪರ್ವತವು ಬೆಳೆಯಲಿಲ್ಲ. ಅದರಿಂದ ಸೂರ್ಯನ ಗತಿ ವಿರುದ್ಧವಾಗಲಿಲ್ಲ. ಚಂದ್ರನ ಗತಿ ಪ್ರತಿಬದ್ಧವಾಗಲಿಲ್ಲ. ಚಿಕ್ಕೆಗಳ ಚಲನವು ಅವರುದ್ಧವಾಗಿರಲಿಲ್ಲ. ಹೀಗೆ ಅಗಸ್ತ್ಯರ ಪ್ರಭಾವದಿಂದ ವಿಂಧ್ಯಾದ್ರಿಯ ವೃದ್ಧಿಕಾರ್ಯವು ಕುಂಠಿತವಾದ ವಿಷಯ ವೃತ್ತಾಂತವನ್ನು ನಿನಗೆ ನಿರೂಪಿಸಿದೆ. ಇನ್ನು ಮುಂದೆ ಅಗಸ್ತ್ಯಮುನಿಯ ವರಪಡೆದು ದೇವತೆಗಳು ಕಾಲೇಯರೆಂಬ ದೈತ್ಯರನ್ನು ನಿಗ್ರಹಿಸಿ

ವಿಷಯವನ್ನು ಹೇಳುತ್ತೇನೆ ಕೇಳು ; ವರಾರ್ಥಿಗಳಾದ ದೇವತೆಗಳ ಯಾಚನೆಯನ್ನು ಕೇಳಿ ಮಿತ್ರಾವರಣ ಪುತ್ರರಾದ ಅಗಸ್ತ್ಯರು ನುಡಿದರು.

**ಅಗಸ್ತ್ಯ** :- ದೇವತೆಗಳೆ, ನೀವು ಇಲ್ಲಿಗೆ ಬಂದ ಕಾರಣವೇನು ? ನಿಮಗೆ ನನ್ನಿಂದ ಯಾವ ವರವು ಬೇಕಾಗಿದೆ ? ಅಗಸ್ತ್ಯರ ವಚನ ಕೇಳಿ ದೇವತೆಗಳು ಮಾತನಾಡಿದರು. ಮಹಾತ್ಮರೆ, ನಾವು ತಮ್ಮಿಂದ ಒಂದು ವರವನ್ನು ಅಪೇಕ್ಷಿಸುತ್ತೇವೆ. ಆದರೆ ಆ ವರವು ಮಾತ್ರ ಅತ್ಯದ್ಭುತವಾಗಿದೆ. ನೀವು ಸಾಮಾನ್ಯ ಮುನಿಗಳಲ್ಲ. ದೇವತೆಗಳ ಮುನಿಗಳು. ಅದರಿಂದ ನಿಮ್ಮ ಕಾರ್ಯವು ಅಲೌಕಿಕವಾಗಿರಬೇಕು. ನೀವು ಈಗ ಸಮುದ್ರವನ್ನೆಲ್ಲ ಕುಡಿದು ಬಿಡಬೇಕು. ಮಹಾತ್ಮರೆ, ನೀವು ಸಾಗರ ನೀರನ್ನೆಲ್ಲ ಗುಟುಕರಿಸಿಬಿಟ್ಟರೆ, ಎಲ್ಲ ಲೋಕಕ್ಕೂ ಮಹೋಪಕಾರವಾಗುವದು. ಆ ಸಮುದ್ರಗರ್ಭದಲ್ಲಿ ಕಾಲೇಯ ಎಂಬ ದುಷ್ಟದೈತ್ಯರು ಅಡಗಿಕುಳಿತಿದ್ದಾರೆ ಅವರು ರಾತ್ರಿ ಸಮಯದಲ್ಲಿ ಹೊರಬಿದ್ದು ಮುನಿಜನರನ್ನು ಕೊಂದು ಇರುಳು ಅಗಾಧ ವಾರಿಧಿಯ ನೀರಿನಾಳದಲ್ಲಿ ಅಡಗಿ ಬಿಡುತ್ತಾರೆ. ಅದರಿಂದ ಅವರನ್ನು ಗೆಲ್ಲುವದೂ, ಕೊಲ್ಲುವದೂ ಅಶಕ್ಯವಾಗಿದೆ. ತಾವು ಈಗ ಸಮುದ್ರಪಾನ ಮಾಡಿಬಿಟ್ಟರೆ ಆ ದಾನವಾಧಮರೆಲ್ಲರೂ ನಮ್ಮ ಕೈಗೆ ಸಿಕ್ಕವರು. ದೇವತೆಗಳ ಈ ನುಡಿಯನ್ನು ಕೇಳಿ ಅಗಸ್ತ್ಯ ಮುನಿಗಳು ಕೂಡಲೇ ಅದಕ್ಕೆ ತಮ್ಮ ಸಮ್ಮತಿ ನೀಡಿದರು. ದೇವತೆಗಳ ಅರಸನಾದ ದೇವೇಂದ್ರನಿಗೆ ಹೇಳಿದರು.

''ಲೋಕನಾಥ ಇಂದ್ರ, ನಿಮ್ಮ ಕಾರ್ಯವನ್ನು ನಾನು ಮಾಡುತ್ತೇನೆ. ನಿಮ್ಮ ಅಪೇಕ್ಷೆಯಂತೆ ಸಮುದ್ರಪಾನವನ್ನು ಮಾಡುತ್ತೇನೆ.'' ಹೀಗೆ ಹೇಳಿ, ಸಮುದ್ರದ ಕಡೆಗೆ ಹೆಜ್ಜೆಹಾಕಿದರು ಆ ಅಗಸ್ತ್ಯಮುನಿ. ದೇವತೆಗಳು ಅವರನ್ನು ಹಿಂಬಾಲಿಸಿದರು. ಸಿದ್ಧರು. ಬೆಂಬಲಿಸಿದರು ತಪಸ್ವಿಗಳು ಅನುಸರಿಸಿದರು. ಜಲಧಿಪಾನಕ್ಕಾಗಿ ಹೊರಟ ಆ ಮಹಾಮುನಿಯು ವೀರಪ್ರತಿಜ್ಞೆ ಕೇಳಿ ಬೆರಗು ಬಡೆದ ಮಾನವರು, ಗಂಧರ್ವರು, ಯಕ್ಷರು, ಕಿಂಪುರುಷರು ಆ ಮಹಾತ್ಮನ ಬೆನ್ನು ಹತ್ತಿ ಬಂದರು ಸಾಗರ ತೀರಕ್ಕೆ. ಸಮುದ್ರ ಆಚಮನದ ಅದ್ಭುತ ಪ್ರಕಾರನೋಡುವ ತವಕವು ತಾಂಡವ ಆಡುತ್ತಿತ್ತು ಎಲ್ಲರ ಕಂಗಳಲ್ಲಿ. ಅವರೆಲ್ಲರು ಸಮುದ್ರದ ತೀರಕ್ಕೆ ಬಂದಾಗ ಆ ನೀರರಾಶಿಯ ಘೋರ ಸ್ವರವು ಕೂರಿ ಬರುತ್ತಿತ್ತು. ಅದರ ಮಧ್ಯದಲ್ಲಿ ಎದ್ದು ಬಿದ್ದೇಳುವ ಹೆದ್ದೆರೆಗಳಿಂದ ಉನ್ಮತ್ತ ಾಗರವು ಹೊಮ್ಮುವಂತೆ ತೋರುತ್ತಿತ್ತು. ವಾಯು ಲಹರಿಗಳ ಗತಿಗುಂಟಕುಣಿಯುತ್ತ ಿದು ಹೊಯ್ದಾಡುತ್ತಿತ್ತು. ಪ್ರಪಂಚವನ್ನೇ ಉಪಹಾಸ ಗೈಯುವಂತೆ ಅದರ ಬುರುಗು ಭ್ರವಾಗಿ ಹೊಳೆಯುತ್ತಿತ್ತು. ಮೊಸಳೆ, ತಿಮಿಂಗಿಲ ಮೊದಲಾದ ಜಲಚರ ಪ್ರಾಣಿಗಳಿಂದ ಸಾಗರವು ಇನ್ನೂ ಭೀಕರವಾಗಿತ್ತು.

ಅಗಸ್ತ್ಯರು ಬಂದು ಸಮುದ್ರದ ಅಡಿಯಲ್ಲಿ ನಿಂತುಕೊಂಡರು. ಅವರೊಡನೆ ಷಿಗಳೂ, ದೇವತೆಗಳೂ, ಗಂಧರ್ವರೂ ಆ ಶರಧಿಯ ಪುಲಿನಪೀಠದ ಮೇಲೆ ಮಂಡಿಸಿದರು. ಆ ಮಹರ್ಷಿ ವರೇಣ್ಯನಾದ ಅಗಸ್ತ್ಯರು ಸುರೋತ್ತಮರನ್ನೂ, ಮುನಿಪುಂಗವರನ್ನೂ ೀಡಿದರು. ಸಾಗರತೀರಕ್ಕೆ ಸಾಗಿಬಂದ ಅವರು ಆ ಜಲಧಿಯ ಜಲವನ್ನೆಲ್ಲ ಪಾನ ಡಲು ಬಯಸಿ ಈ ಕೌತುಕವನ್ನು ಕಾಣಲು ಬಂದವರೆಲ್ಲರನ್ನೂ ಕುರಿತು ನುಡಿದರು.

**ಅಗಸ್ತ್ಯ** :- ಎಲ್ಲರ ಹಿತಕ್ಕಾಗಿ ಜಗತ್ತಿನ ಕ್ಷೇಮಕ್ಕಾಗಿ ನಾನು ಈ ಕಡಲನ್ನು ಿಯುತ್ತೇನೆ. ನೀವು ಮಾಡಿಕೊಳ್ಳಬೇಕಾದುದನ್ನು ಬೇಗಮಾಡಿ ಮುಗಿಸಿರಿ. ಹೀಗೆ

ನುಡಿದು ಆ ಅಗಸ್ತ್ಯ ಮುನಿಯು ಕುಪಿತರಾಗಿ ಸಮುದ್ರವನ್ನು ಪಾನಮಾಡಲು ಪ್ರಾರಂಭಿಸಿದರು. ಎಲ್ಲ ಜನರೂ ಕಣ್ತೆರೆದು ಈ ಅತ್ಯದ್ಭುತವಾದ ಸಮುದ್ರಪಾನದ ದೃಶ್ಯವನ್ನು ನೋಡುತ್ತಲೇ ನಿಂತುಕೊಂಡಿದ್ದರು. ಇಂದ್ರಾದಿ ದೇವತೆಗಳು ಎಲ್ಲರೂ ನೋಡ ನೋಡುತ್ತಿರುವಂತೆ ಅಪರಾಂಪರ ಮಹಾಸಮುದ್ರವನ್ನೆಲ್ಲ ಆ ತೇಜಸ್ವಿ ತಪಸ್ವಿಯು 'ಗಟಗಟ' ಕುಡಿಯತೊಡಗಿದರು. ಅವರ ಈ ಲೋಕ ವಿಲಕ್ಷಣ-ಅದ್ಭುತ ಕೃತ್ಯ ಕಂಡು ಸುರರೆಲ್ಲರೂ ಬೆಕ್ಕಸ ಬೆರಗಾಗಿ ನಿಂತರು. ಋಷಿಗಳೆಲ್ಲರೂ ಪ್ರಾರ್ಥಿಸತೊಡಗಿದರು. ಅಲ್ಲಿ ನಿಂತ ಉಳಿದವರು ಆ ಮುನಿ ಶ್ರೇಷ್ಠನನ್ನು ಪೂಜಿಸಿದರು. ಎಲ್ಲರೂ ಕೂಡಿ ಒಕ್ಕೊರಲಿನಿಂದ ಸ್ತೋತ್ರಮಾಡಿದರು. ಮಹಾಮುನಿಗಳೆ, ನೀವೇ ನಮ್ಮ ರಕ್ಷಕರು. ನೀವೇ ಲೋಕಗಳ ಹಿತಕಾರಕರು. ನಿಮ್ಮ ಅನುಗ್ರಹದಿಂದ ಈ ಚರಾಚರ ಪ್ರಪಂಚವು ಸಂಪೂರ್ಣ ನಾಶವಾಗದಂತೆ ತಾವು ಕಾಪಾಡಬೇಕು. ಹೀಗೆ ದೇವತೆಗಳು ಮುನಿಗಳು ಹೊಗಳಿ ಹಾಡುತ್ತಿರುವಾಗ ಆ ಮಹಾಮುನಿಯು ತನ್ನ ಸಮುದ್ರಪಾನ ಕಾರ್ಯವನ್ನು ಮಾಡಿಬಿಟ್ಟರು. ಇಡೀ ಕಡಲನ್ನೆಲ್ಲ ಕುಡಿದು ಬಿಟ್ಟರು. ಅಪರಂಪಾರ ಜಲರಾಶಿ ರೂಪವಾದ ಸಮುದ್ರದಲ್ಲಿ ಒಂದು ಹನಿ ನೀರು ಇಲ್ಲದಂತೆ ಮಾಡಿದರು.

ಹೀಗೆ ಸಾಗರವೆಲ್ಲವೂ ನಿರ್ಜಲವಾದ ಬಳಿಕ ದೇವತೆಗಳಿಗೆ ಪರಮ ಪ್ರಮೋದ ಆಯಿತು. ಕೂಡಲೇ ಅವರು ತಮ್ಮ ಉಗ್ರವಾದ ಆಯುಧಗಳನ್ನು ಎತ್ತಿಕೊಂಡು ದಾನವರನ್ನು ಸಂಹರಿಸಿದರು. ದೇವತೆಗಳು ಮಹಾ ಬಲಿಷ್ಠರು. ಆನಂದದಿಂದ ಸಿಂಹನಾದಗೈಯುತ್ತ ವೇಗದಿಂದ ದಾನವರನ್ನು ಪ್ರಹರಿಸತೊಡಗಿದರು. ಅವರ ಉಗ್ರ ದಾಳಿಯನ್ನು ಎದುರಿಸಲಾರದೇ ದಾನವರೆಲ್ಲರೂ ತತ್ತರಿಸಿಹೋದರು. ಆದರೂ ಅವರು ಸಾವರಿಸಿಕೊಂಡು ಧೈರ್ಯದಿಂದ ದೇವತೆಗಳ ಮೇಲೆ ಮುನ್ನುಗ್ಗಿ ಬಂದರು. ಸುರಾಸುರರ ನಡುವೆ ಪ್ರಾಣಾಂತಿಕವಾದ ಸಂಗ್ರಾಮವು ಏರ್ಪಟ್ಟಿತು. ಕಾಲಿಕೇಯರು ಎಷ್ಟೇ ಕಲಿತನದಿಂದ ಕಾದಾಡಿದರೂ ಅವರ ಕೈ ಸಾಗದಾಯಿತು. ಅದಕ್ಕೆ ಕಾರಣ ದೇವತೆಗಳ ಪರಾಕ್ರಮ ಪ್ರಾಬಲ್ಯ ಮಾತ್ರವಲ್ಲ. ಆ ದುಷ್ಟದಾನವರು ತಾವು ನಾಶಮಾಡಿದ ಮುನಿಗಳ ಸಂಹಾರದಿಂದ ಬಂದ ಬ್ರಹ್ಮಹತ್ಯಾ ಪಾತಕದಿಂದ ಮೊದಲೇ ನಿರ್ಬಲರಾಗಿದ್ದರು. ಮಹಾತ್ಮರ ತಪಶಕ್ತಿಯು ಅವರನ್ನು ಹಣ್ಣುಮಾಡಿತು. ದೇವತೆಗಳ ಪ್ರಬಲ ಶಸ್ತ್ರಾಘಾತದಿಂದ ಅವರು ಕೂಡಲೇ ಗರ್ಭಗಲಿತರಾಗಿ ಹತಪತಿತರಾಗಿ ಬಿದ್ದರು.

ಉಗ್ರದಾಳಿಯನ್ನು ಕೈಕೊಂಡ ದೇವತೆಗಳ ರಭಸದ ಸಾಹಸದಿಂದ ಬಹಳಷ್ಟು ಜನ ಕಾಲಿಕೇಯ ದಾನವರು ಮಡಿದುಬಿದ್ದರು. ಆ ಸಂಗ್ರಾಮದಲ್ಲಿ ಅಳಿದುಳಿದ ದಾನವ ಮುಂದಾಳುಗಳು ನೆಲದ ಮೇಲೆ ಎಲ್ಲಿಯೂ ಗತಿಗಾಣದೆ ಭೂಮಿಯ ಬಸಿರನ್ನು ಬಗೆದ ನೆಲವನ್ನು ಸೀಳಿ ಪಾತಾಳವನ್ನು ಹೊಕ್ಕರು. ಹೀಗೆ ದಾನವ ಕುಲವೆಲ್ಲವೂ ಹತಮೃತವಾ ಹೋದುದನ್ನು ಕಂಡು ದೇವತೆಗಳು ಅಗಸ್ತ್ಯ ಮುನಿಗಳನ್ನು ಕೊಂಡಾಡಿದರು.

**ದೇವತೆಗಳು :-** ಮಹಾನುಭಾವರೆ, ನಿಮ್ಮ ತೇಜಸ್ಸಿನಿಂದ ಕಾಲಿಕೇಯರೆಂ ಈ ಖಳರ ಕುಲವು ಅಳಿದುಹೋಯಿತು. ಇವರು ಮಹಾಕ್ರೂರರೂ, ನೀಚರೂ ಆಗಿದ್ದರ ಇವರೆಲ್ಲರೂ ಸತ್ತುಹೋದದ್ದರಿಂದ ಜನರು ನೆಮ್ಮದಿಯಿಂದ ಬಾಳುವಂತಾಯಿತ ಇದೆಲ್ಲವೂ ತಮ್ಮ ಅನುಗ್ರಹ, ತಮ್ಮ ತಪಸ್ಸಿನ ಪ್ರಭಾವ. ಆದರೆ ಪೂಜ್ಯ

ಲೋಕಕ್ಷೇಮವೇ ತಮ್ಮ ಗುರಿಯಷ್ಟೆ ! ತಾವು ಲೋಕಹಿತದ ಆ ಕಾರ್ಯವನ್ನು ಪೂರ್ತಿಗೊಳಿಸಬೇಕು. ಭಗವಂತನು ನಿರ್ಮಿಸಿದ ಈ ಕಡಲಿನ ಒಡಲು ಜಲಶೂನ್ಯವಾದರೆ ಪ್ರಪಂಚ ಹೇಗೆ ಬದುಕೀತು ? ಸೂರ್ಯರಶ್ಮಿಯಿಂದ ಸಾಗರದ ನೀರು ಆವಿಯಾಗಬೇಡವೆ! ಆ ಆವಿಯು ಮೋಡವಾಗಿ, ಮೋಡ ಮಳೆಯಾಗಿ, ಮಳೆಯಿಂದ ಬೆಳೆಯಾಗಿ, ಆ ಬೆಳೆಯಿಂದಲೇ ಜಗತ್ತು ಬಾಳಬೇಕು, ಬೆಳಗಬೇಕು, ಬದುಕಬೇಕು. ಅಂದ ಬಳಿಕ ಅಂತಹ ಲೋಕಾಧಾರ ಭೂತವಾದ ಜಗಜ್ಜೀವ ಎನಿಸಿದ ಜಲಧಿಯನ್ನೇ ತಾವು ಬತ್ತಿಸಿಬಿಟ್ಟರೆ ಲೋಕ ಉಳಿದೀತೇ ? ನೆಮ್ಮದಿ ಲಭಿಸೀತೇ ? ಆದುದರಿಂದ ತಾವು ಕುಡಿದ ಈ ಕಡಲಿನ ನೀರನ್ನೆಲ್ಲ ಮರಳಿ ಇಲ್ಲಿಯೇ ಉಗುಳಿಬಿಡಿರಿ. ಇದು ಮತ್ತೆ ಮೊದಲಿನಂತೆ ಅಂಭೋರಾಶಿಯಿಂದ ತುಂಬಿ ಅಂಬುಧಿಯಾಗಿ ವಿಜೃಂಭಿಸಲಿ ಈ ಸಾಗರ. ಆದುದರಿಂದ ತಾವು ಈಗ ಕುಡಿದದ್ದನ್ನೆಲ್ಲ ಕಕ್ಕಿಬಿಡಿರಿ. ಪಾನ ಮಾಡಿದ್ದನ್ನೆಲ್ಲ ಬಿಟ್ಟುಬಿಡಿರಿ. ದೇವತೆಗಳ ಈ ವಿಜ್ಞಾಪನೆಯನ್ನು ಕೇಳಿ ಆ ಮುನಿಸತ್ತಮನು ನುಡಿದರು.

**ಅಗಸ್ತ್ಯ** :- ಸುರರೆ, ನಿಮ್ಮ ಪ್ರಾರ್ಥನೆಯಂತೆ ನಾನು ಈ ಪಯೋನಿಧಿಯನ್ನೆಲ್ಲ ಪಾನಮಾಡಿಬಿಟ್ಟೆ. ನಾನು ಕುಡಿದ ಈ ಕಡಲಿನ ನೀರೆಲ್ಲವೂ ನನ್ನ ಒಡಲಿನಲ್ಲಿ ಈಗ ಉಳಿದಿಲ್ಲ. ಅದೆಲ್ಲವೂ ಜೀರ್ಣವಾಗಿ ಹೋಗಿದೆ. ಈಗ ನಾನು ಅದನ್ನು ಎಲ್ಲಿಂದ ತರಲಿ ? ನಿಮಗೆ ಮತ್ತೆ ಸಮುದ್ರವನ್ನು ಜಲರಾಶಿಯಿಂದ ತುಂಬಿಸಬೇಕಾಗಿದ್ದರೆ ಬೇರೆ ಪ್ರಯತ್ನ ಮಾಡಿರಿ. ಸಾಗರ ಗರ್ಭದಲ್ಲಿ ಪುನಃ ಪಯಃಪೂರಣಕ್ಕಾಗಿ ಮತ್ತೆ ಏನಾದರೂ ಉಪಾಯವನ್ನು ಕಂಡುಹಿಡಿಯಿರಿ. ಮಹರ್ಷಿಯ ಈ ವಚನವನ್ನು ಕೇಳಿ. ಅವರಿಗೆಲ್ಲ ಅಚ್ಚರಿಯೂ ಆಯಿತು. ಖೇದವೂ ಆಯಿತು. ಮುಂದೇನು ಗತಿ ಎಂಬ ಚಿಂತೆ ಅವರನ್ನು ಕೊರೆಯತೊಡಗಿತು. ಅವರು ಮುನಿಯನ್ನು ನಮಿಸದರು. ಅವರ ನಿರೂಪ ತೆಗೆದುಕೊಂಡು, ಬಂದ ದಾರಿಯಿಂದ ಹೊರಟು ಹೋದರು. ನಂತರ ಅವರೆಲ್ಲರೂ ಮುಕುಂದನನ್ನು ಮುಂದೆ ಮಾಡಿಕೊಂಡು ಅಖಿಲ ಪ್ರಪಂಚಕ್ಕೆ ಅಜ್ಜ ಎನಿಸಿದ ಬ್ರಹ್ಮನ ಬಳಿಗೆ ಹೋದರು. ಶೂನ್ಯವಾದ ಸಾಗರದ ಒಡಲಿನಲ್ಲಿ ಜಲಪೂರಣವನ್ನು ಮಾಡುವದೆಂತು ಎಂಬ ವಿಚಾರವು ಅವರ ತಲೆ ತಿನ್ನುತ್ತಿತ್ತು. ಆ ವಿಷಯದಲ್ಲಿ ಮಾತನಾಡುತ್ತಲೇ ಅವರು ನಡೆದಿದ್ದರು. ಬ್ರಹ್ಮದೇವರ ಬಳಿಯಲ್ಲಿಯೂ ಸಮುದ್ರಪೂರಣದ ಬಗೆಗೆ ಬಂದು ಬೇಡಿಕೊಂಡರು. ಆಗ ಬ್ರಹ್ಮದೇವರು ಆ ಎಲ್ಲ ಸುರಭಿಯ ಸದಸ್ಯರನ್ನು ಉದ್ದೇಶಿಸಿ ಇಂತು ನುಡಿದರು.

**ಬ್ರಹ್ಮ** :- ದೇವತೆಗಳೇ, ನೀವಾದರೂ ಚಿಂತಿಸುವ ಕಾರಣವಿಲ್ಲ. ನೀವೆಲ್ಲರೂ ನಿಮ್ಮ ಮನ ಬಂದರಲ್ಲಿ ಹೋಗಿರಿ. ನಿಮಗೆ ತಿಳಿದಂತೆ ಮಾಡಿರಿ. ಸುಖವಾಗಿ ನಿಮ್ಮ ಮನೆಗಳಲ್ಲಿ ವಾಸಮಾಡಿರಿ ಕಾಲಕ್ರಮದಿಂದ ಸಮುದ್ರವು ತನ್ನಷ್ಟಕ್ಕೆ ತಾನೇ ಜಲಪೂರಣವಾಗುವುದು. ಮುಂದೆ ಭಗೀರಥನೆಂಬ ಮಹಾರಾಜನು ತನ್ನ ಪಿತೃಗಳ ಉದ್ಧಾರಕ್ಕಾಗಿ ದೇವಗಂಗೆಯನ್ನು ಭೂಲೋಕಕ್ಕೆ ಕರೆತರುವನು. ಆ ಭಾಗೀರಥಿಯ ಅಪಾರ ಜಲರಾಶಿಯಿಂದ ಸಮುದ್ರವು ಮತ್ತೆ ಮೊದಲಿನಂತೆ ನೀರಿನಿಂದ ತುಂಬಿ ತುಳುಕಾಡುವದು.

ಹೀಗೆ ಬ್ರಹ್ಮದೇವರು ಅಸುರೋತ್ತಮರನ್ನೆಲ್ಲ ಸಂತಯಿಸಿ ಕಳಿಸಿಕೊಟ್ಟರು. ಅನಂತರ ಎಲ್ಲ ಅಮರ ಗಣಾಧೀಶ್ವರರು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಬ್ರಹ್ಮದೇವರು ಸಂತುಷ್ಟರಾಗಿ ಋಷಿ ಕುಲೋತ್ತಮನಾದ ಅಗಸ್ತ್ಯನನ್ನು ಕುರಿತು ಅಂದರು.

**ಬ್ರಹ್ಮ :-** ಮುನಿಯೆ, ದಾನವರ ಸಂಹಾರವು ದೇವತಾ ಕಾರ್ಯ. ಅದು ಈಗ ನಿನ್ನಿಂದ ಸಾಧ್ಯವಾಯಿತು. ನೀನು ಮಾಡಿದ ಈ ದೇವಕಾರ್ಯದಿಂದ ನಾನು ಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು. ನಾನು ಕೊಡುತ್ತೇನೆ. ಬ್ರಹ್ಮದೇವರ ಈ ಸಂತಸದ ನುಡಿಯನ್ನು ಕೇಳಿ ಅಗಸ್ತ್ಯಮುನಿಯು ನುಡಿದನು ಪ್ರಣಾಮ ಪುರಸ್ಸರವಾಗಿ.

**ಅಗಸ್ತ್ಯ :-** ದೇವ ದೇವ, ನಾನು ಈ ಪುಷ್ಕರ ಕ್ಷೇತ್ರದಲ್ಲಿ ನಿಂತು ಈ ದೇವತಾಕಾರ್ಯ ನೆರವೇರಿಸಿದ್ದೇನೆ. ಇಲ್ಲಿ ನನ್ನ ಆಶ್ರಮವು ಸರ್ವಶ್ರೇಷ್ಠವಾದ ಆಶ್ರಮವಾಗಲಿದೆ. ನೀವು ವರ ಕೊಟ್ಟರೆ ಹಾಗೆ ಆಗುವುದರಲ್ಲಿ ಸಂಶಯವಿಲ್ಲ. ಪುಷ್ಕರಕ್ಷೇತ್ರದ ಯಾತ್ರೆ ಮಾಡಿ ಯಾವ ಮನುಷ್ಯರು ಇಲ್ಲಿ ಬಂದು ಈ ತೀರ್ಥದಲ್ಲಿ ಮಿಂದು ದೇವ, ಪಿತೃ ತರ್ಪಣವನ್ನು ಕೊಟ್ಟು ದೇವತಾ ಪೂಜೆಯನ್ನು ನೆರವೇರಿಸುವರೋ ಅವರಿಗೆ ಅಕ್ಷಯ ಪುಣ್ಯ ಪ್ರಾಪ್ತಿಯಾಗುವುದು. ಬಗೆ ಬಗೆಯ ಅನ್ನ, ಚಕ್ಕಲಿ, ಅನಾರಸ ಹಾಗೂ ಬಗೆ ಬಗೆಯ ಸಿಹಿತಿಂಡಿಗಳನ್ನುಮಾಡಿ ದ್ವಿಜರಿಗೆ ಪೂಜೆಗೈದು ನೀಡುವವರು ಸ್ವರ್ಗವನ್ನು ಹೊಂದುತ್ತಾರೆ. ಇಲ್ಲಿ ಶ್ರಾದ್ಧ ಮಾಡುವುದರಿಂದ ಪಿತೃಗಳಿಗೆ ತೃಪ್ತಿ. ಶಾಶ್ವತ ಸಂತೋಷ. ಇಲ್ಲಿ ಕಂದ ಮೂಲ ಫಲಗಳಿಂದ ಇಲ್ಲಿ ತಪಂಗೈಯುತ್ತಿರುವ ಜ್ಞಾನಿ ಮುನಿಗಳಿಗೆ ತೃಪ್ತಿಯನ್ನುಂಟುಮಾಡುವರೋ ಅವರು ಸಪ್ತರ್ಷಿಗಳ ಪದವಿ ಪಡೆಯುವರು.

ಇಲ್ಲಿರುವ ಯಜ್ಞಪರ್ವತದ ಮೇಲೆ ಹತ್ತಿ ಗಂಗೆಯು ಹೊರಹೊಮ್ಮುವ ಸ್ಥಾನವನ್ನು ನೋಡಬೇಕು. ಇಲ್ಲಿಂದ ಗಂಗಾದೇವಿಯು ಉತ್ತರಾಭಿಮುಖವಾಗಿ ಪುಷ್ಕರ ಕ್ಷೇತ್ರದ ಕಡೆಗೆ ಹರಿಯುತ್ತದೆ. ಇಲ್ಲಿ ಸ್ನಾನಮಾಡಿ ಪಿತೃಗಳನ್ನೂ ದೇವತೆಗಳನ್ನು ಭಕ್ತಿಯಿಂದ ಪೂಜಿಸಿದರೆ ಅಶ್ವಮೇಧದ ಫಲ ನಿಶ್ಚಯವಾಗಿಯೂ ದೊರಕುವುದು. ಈ ವಿಷಯದಲ್ಲಿ ಸಂದೇಹವೇ ಇರುವದಿಲ್ಲ. ಇಲ್ಲಿ ಒಬ್ಬ ಜ್ಞಾನಿಗೆ ಊಟ ಮಾಡಿಸಿದರೆ ಕೋಟಿ ವಿಪ್ರರ ಭೋಜನದ ಫಲವು ಬರುವುದು. ಇಲ್ಲಿ ಬಡಬಗ್ಗರಿಗೂ ಜ್ಞಾನಿಗಳಿಗೂ ನೀಡಿದ ಅನ್ನಪಾನಗಳು ಅಕ್ಷಯಫಲನೀಡುವವು. ಕ್ಷೇತ್ರದಲ್ಲಿ ಮಾನವನು ಬಯಸಿದ್ದೆಲ್ಲವೂ ಸಿದ್ಧಿಸುವುದು. ಇಲ್ಲಿ ಸ್ನಾನಮಾಡಿದವರು ಎಂದೂ ನೀಚ ಜಾತಿಯಲ್ಲಿ ಹುಟ್ಟುವುದಿಲ್ಲ. ದುರ್ಯೋನಿಯನ್ನು ಹೊಂದುವುದಿಲ್ಲ. ಕ್ಷೇತ್ರಗಳಲ್ಲೆಲ್ಲ ಇದು ಅತ್ಯುತ್ತಮ. ತೀರ್ಥಗಳಲ್ಲಿ ಇದು ಸರ್ವ ಶ್ರೇಷ್ಠ. ನರನೇ ಆಗಲಿ, ನಾರಿಯೇ ಆಗಲಿ, ಬದುಕಿರುವವರೆಗೆ ಮಾಡಿದ ಪಾಪಗಳು ಇಲ್ಲಿ ಸ್ನಾನಮಾಡುವುದರಿಂದ ನಾಶವಾಗುತ್ತವೆ. ಹೀಗೆ ಹೇಳಿ ಲೋಕ ಪಿತಾಮಹನಾದ ಪೂಜ್ಯ ಬ್ರಹ್ಮದೇವರು ಮುನಿಶ್ರೇಷ್ಠನಾದ ಅಗಸ್ತ್ಯ ಮುನಿಯನ್ನು ಬೀಳ್ಕೊಂಡು ಹೊರಟು ಹೋದರು.

ಅಗಸ್ತ್ಯ ಮುನಿಯು ತನ್ನದೇ ಆದ ಆಶ್ರಮದಲ್ಲಿ ನೆಲೆ ನಿಂತರು. ಈ ವರೆಗೆ ನಾನು ನಿನಗೆ ಅಗಸ್ತ್ಯಾಶ್ರಮದ ಉತ್ಪತ್ತಿಯ ಸಮಾಚಾರವನ್ನು ತಿಳಿಸಿದೆನು. ಇನ್ನು ಸಪ್ತರ್ಷಿಗಳೆಂದು ಪ್ರಸಿದ್ಧರಾದ ಏಳು ಮಹರ್ಷಿಗಳ ಆಶ್ರಮಗಳ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಅತ್ರಿ, ವಶಿಷ್ಠ, ಪುಲಸ್ತ್ಯ, ಪುಲಹ, ಕ್ರತು, ಅಂಗೀರಸ, ಗೌತಮ, ಸುಮತಿ, ಸುಮುಖ, ವಿಶ್ವಾಮಿತ್ರ, ಸ್ಥೂಲಶಿರ, ಸಂವರ್ತ ಪ್ರತರ್ದನ, ಶೈಭ್ಯ, ಬೃಹಸ್ಪತಿ, ಚ್ಯವನ, ಕಶ್ಯಪ, ಭೃಗು, ದುರ್ವಾಸ, ಜಮದಗ್ನಿ, ಮಾರ್ಕಾಂಡೇಯ, ಗಾಲವ, ಉಶಾನ, ಭರದ್ವಾಜ, ಯವಕ್ರೀತ, ಸ್ಥೂಲಾಕ್ಷ, ಮಕರಾಕ್ಷ, ಕಣ್ವ, ಮೇಧಾತಿಥಿ, ನಾರದ, ಪರ್ವತ,

ಸ್ವಗಂಧೀ, ಕಣ್ವ, ಚ್ಯವನ, ತೃಣಾಂಬು ಸವಲ, ಧೌಮ್ಯ, ಶತಾನಂದ, ಅಕೃತವ್ರಣ ಜಾಮದಗ್ನಿ, ರಾಮ ಅಷ್ಟಕ, ವ್ಯಾಸ, ಪರಾಶರ ಅವನ ಶಿಷ್ಯರು ಇವರೆಲ್ಲರೂ ಪುಷ್ಕರಕ್ಕೆ ಬಂದು ಸಪ್ತರ್ಷಿಗಳ ಆಶ್ರಮದಲ್ಲಿ ನಿಯಮದಿಂದಲೂ ಇಂದ್ರಿಯ ನಿಗ್ರಹದಿಂದಲೂ ಇರುತ್ತಾರೆ. ಇಂದ್ರಿಯ ನಿಗ್ರಹ, ಧೈರ್ಯ, ತಪಸ್ಸು, ಕ್ಷಮಾ, ಸರಳತೆ, ದಯ, ದಾನ ಇವೆಲ್ಲವು ಋಷಿಗಳ ಸದ್ಗುಣಗಳಾಗಿರುತ್ತವೆ.

ಈ ಎಲ್ಲ ಸುಗುಣಗಳು ಮುನಿಗಳಲ್ಲಿ ಶಾಶ್ವತವಾಗಿ ನೆಲೆಸಿರುತ್ತವೆ. ಇಂತಹ ಸರ್ವ ಸದ್ಗುಣಗಳಿಂದ ಮಂಡಿತರಾದ ಮುನಿಗಳು ಈ ಕ್ಷೇತ್ರಕ್ಕೆ ಬರಲು ಕಾರಣವೇನೆಂದರೆ ಇದರ ಮಹಾ ಮಹಿಮೆಯನ್ನು ಸರಿಯಾಗಿ ತಿಳಿದಿದ್ದೆ ಆಗಿದೆ. ಇಲ್ಲಿ ಮಾಡಿದ ಅಲ್ಪ ಕಾರ್ಯಕ್ಕೆ ಅನಂತ ಫಲದ ರಹಸ್ಯವನ್ನು ಅವರು ಬಲ್ಲರು. ನಾಸ್ತಿಕರು, ಕಳ್ಳರು, ಇಂದ್ರಿಯಲೋಲುಪರು, ಕ್ರೂರರು, ಚಾಡಿಕೋರರು, ಕೃತಘ್ನರು, ದುರಭಿಮಾನಿಗಳು, ಪುಷ್ಕರ ಕ್ಷೇತ್ರಕ್ಕೆ ಹೋಗಲಾರರು. ಸತ್ಯನಿಷ್ಠರಾದ ತಪಸ್ವಿಗಳು, ದಯಾಳುಗಳು, ಶೂರರು, ಬಲಿಷ್ಠರು, ಯಜ್ಞಮಾಡುವ ವಿದ್ವಾಂಸರು, ಪುಷ್ಕರ ಪ್ರಯಾಣ ಮಾಡಿ ಪುಣ್ಯ ಭಾಗಿಗಳಾಗುವರು. ಮೇಲೆ ಹೇಳಿದ ಮುನಿಗಳೆಲ್ಲರೂ ಇಂತಹ ಮಹಾ ಪುಣ್ಯಕ್ಕೆ ಭಾಗಿದಾರರೆ ಸರಿ. ಸತ್ಯವಂತರು, ತಪಸ್ವಿಗಳು, ಶೂರರು, ದಯೆ, ಕ್ಷಮೆಯುಳ್ಳವರು, ಯಾಗಮಾಡಿದವರು, ಯಾಗಮಾಡುವವರು ಆ ಪುಷ್ಕರಕ್ಕೆ ಹೋಗುತ್ತಾರೆ. ಅಲ್ಲಿರುವವರಿಗೆ ರೋಗ, ಮುಪ್ಪು, ಸಾವುಗಳು ಬರುವದೇ ಇಲ್ಲ. ಹಸಿವು ಬಾಯಾರಿಕೆಗಳು ತೇಜೋಹಾನಿ (ಬಳಲಿಕೆ)ಗಳು ಉಂಟಾಗುವುದೇ ಇಲ್ಲ. ಅಲ್ಲಿಗೆ ಮೂಢರು, ವಿಷಯಲಂಪಟರು, ದಂಭ, ಲೋಭ, ಮದ, ದ್ರೋಹ, ಕ್ರೋಧ, ಮೋಹಗಳುಳ್ಳವರು ಹೋಗಲಾರರು.

ಮಮತೆಯಿಲ್ಲದವರೂ, ಅಹಂಕಾರವಿಲ್ಲದವರೂ ಪುಷ್ಕರಕ್ಕೆ ಹೋಗುತ್ತಾರೆ. ಮಾನಾಪಮಾನಗಳೂ ಶೀತೋಷ್ಣಾದಿ ದ್ವಂದ್ವಗಳು ಒಂದೇ ಸಮನಾಗಿ, ಉಳ್ಳವರು, ಜಿತೇಂದ್ರಿಯರು, ಧ್ಯಾನಪರರು, ಯೋಗಪರರು ಈ ಪುಷ್ಕರಕ್ಕೆ ಹೋಗುತ್ತಾರೆ. ಯಾರು ತಮ್ಮ ತಮ್ಮ ಆಶ್ರಮಗಳ ಕರ್ಮಗಳನ್ನು ಸರಿಯಾದ ಸ್ಥಿತಿಯಲ್ಲಿ ಮಾಡುತ್ತಾರೆಯೋ ಯೋಚನೆಯಿಲ್ಲದೆ ಯಾರಿರುವರೊ ಅವರಿಗೆ ಉತ್ತಮವಾದ ಲೋಕಗಳುಂಟು ಯಾರು ಪ್ರಾಣಿಗಳನ್ನು ಹಿಂಸಿಸುವುದಿಲ್ಲವೋ, ಮನೋವಾಕ್ಕಾಯಗಳಿಂದ ಯಾರು ಘಾತಕರಾಗುವುದಿಲ್ಲವೋ, ಯಾವಾಗಲೂ ಒಳ್ಳೆಯ ಮಾತನ್ನು ಆಡುತ್ತಾರೆಯೋ, ಯಾರು ನಿತ್ಯವೂ ಅಗ್ನಿಹೋತ್ರವನ್ನು ಮಾಡುತ್ತಾರೆಯೋ ನಿತ್ಯವೂ ಯಾರು ಸ್ನಾನಮಾಡುತ್ತಾರೆಯೋ, ಯಾರು ಪರರ ಹೆಂಡತಿಯನ್ನು ತಾಯಿ ಸಹೋದರಿ ಹೆಣ್ಣು ಮಕ್ಕಳಂತೆ ಕಾಣುತ್ತಾರೆಯೋ, ಪರದ್ರವ್ಯವನ್ನು ಮಣ್ಣು ಹೆಂಟೆಯಂತೆ ಕಾಣುತ್ತಾರೆಯೋ ಇಂತಹವರು ಪುಷ್ಕರಕ್ಕೆ ಹೋಗುತ್ತಾರೆ.

ಯಾರು ತಮ್ಮನ್ನು ಬೈದರೂ ಕೋಪಿಸಿಕೊಳ್ಳುವದಿಲ್ಲವೋ, ಹಿಂಸೆಮಾಡಿದರೂ ತಾವು ಹಿಂಸಿಸುವದಿಲ್ಲವೋ, ಸುಖ, ದುಃಖಗಳೂ ಒಂದೇ ಸಮನಾಗಿವೆಯೋ ದಮನವಾಗಿ ಜಿತೇಂದ್ರಿಯರಾಗಿರುವರೋ, ಅವರು ಈ ಪುಷ್ಕರವನ್ನು ಹೊಂದಿ ಸುಖಿಸುವರು. ನಿತ್ಯವೂ ಅಗ್ನಿಹೋತ್ರವಿಟ್ಟು ಅತಿಥಿಗಳನ್ನು ಪೂಜಿಸುತ್ತ ಸ್ವಾಧ್ಯಾಯ ವ್ರತ ಕೈಕೊಂಡು ಸ್ನಾನ, ಪೂಜೆ, ಪಾಠ ಪ್ರವಚನಮಾಡುವ ಈ ಮುನಿಗಳು ಪರಸ್ತ್ರೀಯರನ್ನೆಲ್ಲ ತಮ್ಮ ತಾಯಿ, ತಂಗಿಯರಂತೆ ಪರದ್ರವ್ಯವನ್ನು ಇಟ್ಟಿಗೆಯಂತೆ ನೋಡುತ್ತಿದ್ದರು. ಅವರನ್ನು ನಿಂದಿಸಿದರೂ ಅವರೆಂದೂ

ಸಿಟ್ಟಿಗೇಳುತ್ತಿದ್ದಿಲ್ಲ. ಹೊಡೆದರೂ ಪ್ರತಿಯಾಗಿ ಹೊಡೆಯುತ್ತಿದ್ದಿಲ್ಲ. ಅವರಿಗೆ ಸುಖವಾದರೂ ಅಷ್ಟೇ. ದುಃಖವಾದರೂ ಅಷ್ಟೇ. ಹೇಳಿ ಕೇಳಿ ಅವರು ಮಹಾತ್ಮರು. ಇಂದ್ರಿಯಗಳೆಲ್ಲ ಅವರಿಗೆ ದಾಸಾನುದಾಸ.

ಸಮಾಧಿಯಿಂದ ಬ್ರಹ್ಮಲೋಕವನ್ನು ಹೊಂದುವಂಥ ಅವರುಗಳು ಭೂಮಿಯನ್ನು ಸುತ್ತುತ್ತಿದ್ದರು. ಒಂದು ಸಾರಿ ಮಳೆಯಿಲ್ಲದೆ ಕ್ಷಾಮವು ಉಂಟಾಗಿ ಲೋಕವೆಲ್ಲ ಹಸಿವಿನಿಂದ ಕೂಡಿ ಕಷ್ಟಕ್ಕೀಡಾಯಿತು. ಆಗ ಈ ಲೋಕವು ಅನ್ನವಿಲ್ಲದೆ ಕಷ್ಟ ಪಡುತ್ತಿರಲು ತಮ್ಮನ್ನು ಪರೀಕ್ಷೆ ಮಾಡಿಕೊಳ್ಳಲು ಇಚ್ಛೆಪಟ್ಟರು. ಇಂತಹ ಈ ಮಹಾಮಹರ್ಷಿಗಳು ಹಿಂದೆ ಒಂದು ಸಲ ಲೋಕ ಸಂಚಾರ ಕೈಕೊಂಡಿದ್ದರು. ಆಗ ಈ ಜಗತ್ತಿನಲ್ಲಿ ಎಲ್ಲ ಕಡೆಗೂ ಬರಗಾಲ. ನೋಡಿದಲ್ಲೆಲ್ಲ ಕ್ಷಾಮಡಾಮರಗಳು, ಎಲ್ಲಿಯೂ ಮಳೆ ಬೆಳೆಗಳಿಲ್ಲ. ಬದುಕು ಭಾರವಾಗಿದ್ದಿತು. ಅವರೆಲ್ಲ ಜನರು ಹೊಟ್ಟೆಗೆ ಅನ್ನವಿಲ್ಲದೆ ಉಪವಾಸದಿಂದ ಕ್ಷೀಣವಾಗಿದ್ದರು. ನೋಡಿದಲ್ಲೆಲ್ಲ ಹಸಿವೆಯ ತಾಂಡವ. ಯಾರಿಗೂ ತುತ್ತು ಅನ್ನವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರಿಗೆ ತಮ್ಮ ಆತ್ಮಪರೀಕ್ಷೆ ಮಾಡಿಕೊಳ್ಳಬೇಕೆಂದು ಎನಿಸಿತು. ಒಂದು ಸತ್ತ ಮಗುವನ್ನು ತಂದು ಮುನಿಗಳೆಲ್ಲರೂ ಬೇಯಿಸತೊಡಗಿದರು.

ಆಕಸ್ಮಿಕವಾಗಿ ಅಲ್ಲಿಗೆ ಒಬ್ಬ ರಾಜನು ಬಂದನು. ಋಷಿಗಳ ಈ ಕಂಗಾಲು ಪರಿಸ್ಥಿತಿಯನ್ನು ಹಾಗೂ ಅವರು ಕೈಕೊಂಡ ಕೀಳು ಕಾರ್ಯನೋಡಿ ಅವನಿಗೆ ವಿಷಾದ ವಾಯಿತು. ಅವನು ದೀನನಾಗಿ ನುಡಿದನು. ಮುನಿ ಮಾನ್ಯರೆ ತಾವೆಲ್ಲರೂ ಬ್ರಾಹ್ಮಣರಷ್ಟೇ, ಬ್ರಾಹ್ಮಣರಿಗೆ ಪ್ರತಿಗ್ರಹವು ವಿಹಿತವಾಗಿದೆ. ದಾನವನ್ನು ಸ್ವೀಕರಿಸುವದು ಅವರ ಸ್ವಧರ್ಮ. ಆದುದರಿಂದ ತಾವು ನನ್ನಿಂದ ದಾನವನ್ನು ಸ್ವೀಕರಿಸಿರಿ. ನಿಮಗೆ ನಾನು ಸಮೃದ್ಧವಾದ ಗ್ರಾಮಗಳನ್ನು, ಹೇರಳವಾದ ಅಕ್ಕಿಯನ್ನು, ಗೋಧಿಯನ್ನು ಷಡ್ರಸ ನವರಸಗಳಿಂದ ರುಚಿಕರವಾದ ಪಕ್ವಾನ್ನಗಳನ್ನು ಹಸು, ಹಣ್ಣು, ಹೊಲ, ನೆಲ ಏನು ಬೇಕೋ ಅದನ್ನೆಲ್ಲ ಕೊಡುತ್ತೇನೆ. ಆದರೆ ದಯವಿಟ್ಟು ತಾವು ಈ ಮಾಂಸವನ್ನು ಬೇಯಿಸಿ ತಿನ್ನುವುದು ಬೇಡ. ದಯಮಾಡಿ ನಾನು ನೀಡುವ ದಾನವನ್ನು ಪರಿಗ್ರಹಿಸಬೇಕು.

**ಋಷಿಗಳು :-** ರಾಜನೆ, ಯಾವಾಗಲೂ ದಾನಕೊಡುವುದು ಶ್ರೇಷ್ಠ ಧರ್ಮ. ಕೊಳ್ಳುವುದು ಮಾತ್ರ ಪಾಪ. ಅದರ ರುಚಿ ಜೇನಿನಂತಿದ್ದರೂ ಪರಿಣಾಮ ಮಾತ್ರ ವಿಷದಷ್ಟೇ ಉಗ್ರವಾಗಿದೆ. ಪ್ರತಿಗ್ರಹದ ಪರಿಣಾಮವನ್ನು ನೀನೂ ಚೆನ್ನಾಗಿ ಬಲ್ಲೆ. ಹಾಗಿದ್ದೂ ನೀನು ನಮಗೇಕೆ ಆಶೆ ಹುಟ್ಟಿಸುವೆ ? ಕತ್ತರಿಸುವುದು, ಅರೆಯುವುದು, ಬೇಯಿಸುವುದು, ನೆನೆಸುವುದು, ಕಸಬಳಿವುದು ಇವನ್ನು ನಿತ್ಯವೂ ಮಾಡುವುದು ಪಾಪ. ಇವಕ್ಕೆ ಪಂಚಸೂನವೆಂದು ಹೆಸರು. ಇಂತಹ ಪಾಪವನ್ನು ಮಾಡಿದ ಹತ್ತು ಜನರಿಗೆ ಒಬ್ಬ ಗಾಣಿಗನು ಸಮಾನನು. ಅಂತಹ ಹತ್ತು ಜನ ಗಾಣಿಗರಿಗೆ ಒಬ್ಬ ಕಪಟ ಸನ್ಯಾಸಿಯು ಸಮನು. ಅಂತಹ ಹತ್ತು ಜನ ಕಪಟ ಸನ್ಯಾಸಿಗಳಿಗೆ ಒಬ್ಬ ವೇಶ್ಯೆಯು ಸಮಳು. ಅಂತಹ ಹತ್ತು ಜನ ವೇಶ್ಯೆಯರಿಗೆ ಒಬ್ಬ ರಾಜನು ಸಮನು. ಸೂನ ಎಂದರೆ ದನಗಳನ್ನು ಕತ್ತರಿಸುವ ಜಾಗ. ಅಂತಹ ಸಾವಿರ ಜಾಗಗಳಿಗೆ ಅಧಿಕಾರಿಯಾದವನು ಕಟುಕನು. ಒಂದು ಲಕ್ಷ ಕಟುಕರಿಗೆ ಸಮನಾದವನು ರಾಜನು. ಆದ್ದರಿಂದ ರಾಜನು ಅಷ್ಟು ಪಾಪಿ ಎನಿಸಿಕೊಳ್ಳುವನು.

ಯಾವನು ರಾಜನಿಂದ ದಾನ ತೆಗೆದುಕೊಳ್ಳುತ್ತಾನೆಯೋ ಆ ಆಶೆಯುಳ್ಳ ಬ್ರಾಹ್ಮಣನು

ತಾಮಿಸ್ರವೇ ಮುಂತಾದ ಘೋರ ನರಕಗಳಲ್ಲಿ ಯಾತನೆಯನ್ನು ಹೊಂದುತ್ತಾನೆ. ನೀನು ಹೊರಡು ನಿನಗೆ ಮಂಗಳವಾಗಲಿ. ನಿನ್ನ ದಾನಕ್ಕೂ ಮಂಗಳವಿರಲಿ. ಬೇರೆ ಯಾರಿಗಾದರೂ ಕೊಡು. ಹೀಗೆಂದು ಹೇಳಿ ಅವರು ಕಾಡಿಗೆ ಹೋದರು. ರಾಜನ ಅಪ್ಪಣೆಯಂತೆ ಮಂತ್ರಿಗಳು ಅಲ್ಲಿಗೆ ಹೋಗಿ ಅತ್ತಿಯ ಹಣ್ಣಿನೊಳಕ್ಕೆ ಚಿನ್ನದ ಚೂರುಗಳನ್ನು ಸೇರಿಸಿ ಅವನ್ನು ಅವರಿರುವ ಜಾಗದಲ್ಲಿ ಆ ಮರದ ಕೆಳಗೆ ಹಾಕಿದರು. ಅನಂತರ ಆಹಾರವನ್ನು ಹುಡುಕುತ್ತ ಅವರೆಲ್ಲರೂ ಅಲ್ಲಿಗೆ ಬಂದು ಆ ಹಣ್ಣುಗಳನ್ನು ನೋಡಿ ತೆಗೆದುಕೊಳ್ಳಲು ಅವು ಭಾರವಾಗಿದ್ದವು. ಅತ್ರಿಯು ತೆಗೆದುಕೊಳ್ಳ ಬೇಡಿರೆಂದನು. ಅನಂತರ ಅತ್ರಿಯು ಹೇಳಿದನು. ನಾವು ವಿಮರ್ಶೆಯಿಲ್ಲದೆ ವಿಜ್ಞಾನಿಗಳಾಗ ಬಾರದು. ಬುದ್ಧಿವಂತರಲ್ಲದೆ ಇರಲೂ ಬಾರದು. ಇವುಗಳೊಳಗೆ ಚಿನ್ನವಿರಬೇಕು. ಜ್ಞಾನದಿಂದ ನೋಡಿದರೆ ಗೊತ್ತಾಗುವುದು. ತೆಗೆದುಕೊಂಡ ಹಣವು ಅಲ್ಲಿ ಪ್ರೀತಿಯನ್ನೇನೋ ಉಂಟುಮಾಡುತ್ತದೆ. ಸತ್ತ ನಂತರ ಕೆಟ್ಟದ್ದನ್ನು ಕೊಡುತ್ತದೆ. ಹೆಚ್ಚಾದ ಸುಖವು ಬೇಕಾದರೆ ಇದನ್ನು ತೆಗೆದುಕೊಳ್ಳಬಾರದು. ನಾವು ತೆಗೆದುಕೊಂಡ ಚಿನ್ನಕ್ಕೆ ಪ್ರತಿಯಾಗಿ ಲಕ್ಷದಷ್ಟನ್ನು ಕೊಡಬೇಕಾಗುತ್ತದೆ. ಇದನ್ನು ಬೇರೆಯವನಿಂದ ತೆಗೆದುಕೊಂಡರೆ ಅವನಿಗೆ ಪಾಪಿಷ್ಠಗತಿ ಬರುತ್ತದೆ. ಪ್ರಪಂಚದಲ್ಲಿ ಅಕ್ಕಿ, ಭತ್ತ, ಯವ, ಚಿನ್ನ, ಬಟ್ಟೆ, ಹೆಂಗಸರು ಮುಂತಾದವು ಎಷ್ಟು ಕೊಟ್ಟರೂ ಯಾವನಿಗೂ ಸಾಕಾಗುವುದೇ ಇಲ್ಲ. ಅದನ್ನು ತಿಳಿದು ಶಾಂತನಾಗಿರಬೇಕು.

**ವಶಿಷ್ಠರು :-** ಯಾವನು ಹಣವನ್ನು ಧರ್ಮಕ್ಕಾಗಿ ತೆಗೆದು ಕೊಳ್ಳುತ್ತಾನೆಯೋ ಅದು ಉತ್ತಮವಲ್ಲ. ದುಡ್ಡನ್ನು ಕೂಡಿಹಾಕುವುದಕ್ಕಿಂತಲೂ ತಪ್ಪನ್ನು ಕೂಡಿಹಾಕಿಕೊಳ್ಳುವುದು ಮೇಲಾಗಿರುತ್ತದೆ. ದುಡ್ಡನ್ನು ಕೊಡುತ್ತಿರುವವನಿಗೆ ತೊಂದರೆಗೆಳೆಲ್ಲಾ ನಾಶಹೊಂದುತ್ತವೆ ! ಹಣವನ್ನು ಕೂಡಿಹಾಕಿದವನೊಬ್ಬನೂ ಸುಖಿಯಾಗಿರುವದಿಲ್ಲ. ಬ್ರಾಹ್ಮಣನು ದಾನವನ್ನು ತೆಗೆದುಕೊಳ್ಳುವುದನ್ನು ಬಿಟ್ಟ ಹಾಗೆಲ್ಲ ಸಂತೋಷದಿಂದ ಬ್ರಹ್ಮತೇಜಸ್ಸು ಹೆಚ್ಚುತ್ತದೆ. ಬಡತನವನ್ನು, ರಾಜ್ಯವನ್ನು ತಕ್ಕಡಿಯಲ್ಲಿ ಹಾಕಿ ತೂಗಿದರೆ ಜಿತೇಂದ್ರಿಯನಿಗೆ ರಾಜ್ಯಕ್ಕಿಂತಲೂ ಬಡತನವೇ ಮೇಲು.

**ಕಶ್ಯಪರು :-** ಹಣವನ್ನು ಕೂಡಿಹಾಕಿಕೊಳ್ಳುವುದು ಬ್ರಾಹ್ಮಣನಿಗೆ ಅನರ್ಥವನ್ನು ಉಂಟುಮಾಡುತ್ತದೆ. ಹಣದ ಐಶ್ವರ್ಯದಿಂದ ಮೂಢನಾಗಿ ಆತನ ಶ್ರೇಯಸ್ಸನ್ನು ಹಾಳುಮಾಡಿಕೊಳ್ಳುತ್ತಾನೆ. ಹಣದ ಸಂಪತ್ತು ಅಜ್ಞಾನವನ್ನುಂಟು ಮಾಡುತ್ತದೆ. ಅಜ್ಞಾನದಿಂದ ನರಕ ಬರುತ್ತದೆ. ಆದ್ದರಿಂದ ಹಣವು ಅನರ್ಥವನ್ನುಂಟು ಮಾಡುತ್ತದೆ. ಶ್ರೇಯಸ್ಕಾಮಿಯು ಆ ಹಣವನ್ನು ದೂರದಲ್ಲಿಯೇ ಬಿಟ್ಟು ಬಿಡಬೇಕು. ಯಾವನಿಗೆ ಧರ್ಮಕ್ಕಾಗಿ ಹಣದ ಅಪೇಕ್ಷೆಯೋ ಅವನಿಗೆ ಆ ಅಪೇಕ್ಷೆಯಿಲ್ಲದಿರುವದೇ ಉತ್ತಮವು. ಕೆಸರನ್ನು ತುಳಿದು ಕಾಲು ತೊಳೆದು ಕೊಳ್ಳುವದಕ್ಕಿಂತಲೂ ಅದನ್ನು ತುಳಿಯದಿರುವದೇ ಉತ್ತಮವು. ಹಣದಿಂದ ಸಾಧಿಸುವ ಧರ್ಮವು ನಾಶವಾಗತಕ್ಕದ್ದೆಂದು ಹೇಳಲ್ಪಟ್ಟಿದೆ. ಪರರ ಉಪಕಾರಕ್ಕಾಗಿ ಯಾರು ತ್ಯಾಗ ಮಾಡುತ್ತಾರೋ ಅದು ಅಕ್ಷಯ ಮುಕ್ತಿಯನ್ನು ಕೊಡುತ್ತದೆ.

**ಭಾರದ್ವಾಜರು :-** ಮುದುಕನಾದವನಿಗೆ ಹಲ್ಲುಗಳೂ, ಕೂದಲುಗಳೂ ಹಣ್ಣಾಗುತ್ತವೆ. ಜೀವದ ಆಶೆ, ಹಣದ ಆಶೆಗಳು ಮಾತ್ರ ಜೀರ್ಣವಾಗುವದಿಲ್ಲ. ಕಣ್ಣು-ಕಿವಿಗಳು ಹಣ್ಣಾಗಿ ನಾಶವಾಗುತ್ತವೆ. ಆಶೆ ಮಾತ್ರ ಹೆಚ್ಚುತ್ತದೆ. ಚಿಪ್ಪಿಗನು

ಸೂಜಿಯಿಂದ ಬಟ್ಟೆಯನ್ನು ಹೊಲೆಯುವಂತೆ ಸಂಸಾರವೆಂಬ ನೂಲನ್ನು ಆಶೆಯೆಂಬ ಸೂಜಿಯಿಂದ ಹೊಲಿಯುತ್ತಾನೆ. ಚಿಗರೆಯ ದೇಹದ ಜೊತೆಗೆ ಕೋಡು ಬೆಳದಂತೆ ದ್ರವ್ಯದ ಜೊತೆಗೆ ಮಾನವನ ಆಶೆಯೂ ಬೆಳೆಯುತ್ತದೆ. ಆಶೆಯು ಬಹು ದೊಡ್ಡದ್ದು. ದಾಟಲು ಅಸಾಧ್ಯವಾದುದು. ಅನೇಕ ದೋಷಗಳುಳ್ಳದ್ದು. ಅಧರ್ಮವೇ ಹೆಚ್ಚಾಗಿ ಹುಟ್ಟಿದ್ದು. ಆದ್ದರಿಂದ ಅದನ್ನು ಬಿಟ್ಟುಬಿಡಬೇಕು. ದೊರೆತಷ್ಟೆ ಫಲದಿಂದಲೆ ನೆಮ್ಮದಿಯಿಂದ ಬಾಳಲು ಸಂತುಷ್ಟ ಸ್ವಭಾವದ ಯಾವ ಮನುಷ್ಯನಿಗೆ ಸಾಧ್ಯವಾಗುವುದಿಲ್ಲ? ಇಂದ್ರಿಯಗಳ ಲೋಭದಿಂದ ಎಲ್ಲ ಜನರೂ ದುಃಖ ಸಂಕಟಗಳನ್ನು ಅನುಭವಿಸ ಬೇಕಾಗುತ್ತದೆ.

ಯಾವನ ಮನಸ್ಸು ತೃಪ್ತವಾಗಿದೆಯೋ ಅಂತಹ ಸಂತುಷ್ಟ ಚಿತ್ತವೃತ್ತಿಯ ವ್ಯಕ್ತಿಗೆ ಎಲ್ಲ ಕಡೆಗೂ ಸಂತಸ ಸಂಪದ ಸೌಲಭ್ಯಗಳಿರುತ್ತವೆ. ಪಾದರಕ್ಷೆಯಿಂದ ಕಾಲುಗಳನ್ನು ಮುಚ್ಚಿಕೊಂಡಿರುವವನಿಗೆ ಇಡೀ ಭೂಮಿಯೆಲ್ಲವೂ ಚರ್ಮವನ್ನು ಹೊದಿಸಿದಂತೆ ಮಿದುವು ಎನಿಸುವುದು. ಸಂತೋಷವೆಂಬ ಅಮೃತವನ್ನು ಕುಡಿದು ತೃಪ್ತಿಯನ್ನು ಪಡೆದ ಸಾಂತಚೇತನರಿಗೆ ದೊರೆಯುವ ಸುಖವು ದುಡ್ಡಿನ ಆಶೆಯಿಂದ ಅತ್ತ ಇತ್ತ ಹರಿದಾಡುವ ಧನಲೋಭಿಗಳಿಗೆ ಹೇಗೆ ದೊರಕೀತು? ತೃಪ್ತಿ, ಸಂತೋಷ ಇಲ್ಲದಿರುವುದೇ ಹೆಚ್ಚಿನ ದುಃಖ. ಸಂತೋಷವೇ ಪರಮ ಸುಖ. ಆದ್ದರಿಂದ ಸುಖವನ್ನು ಬಯಸುವ ಮನುಷ್ಯನು ಯಾವಾಗಲೂ ಸಂತುಷ್ಟಚಿತ್ತನಾಗಿ ಇರಬೇಕು ಯಾವದಾದರೂ ಒಂದು ವಸ್ತುವನ್ನು ಮನುಷ್ಯರು ಬಯಸಿ, ಪಡೆದ ಬಳಿಕ ಮತ್ತೊಂದು ಬಯಕೆ ಬಾಣದಂತೆ ಅವನನ್ನು ಬಡಿದೆಬ್ಬಿಸುತ್ತದೆ. ಒಂದು ಕಾಮವು ಸಿದ್ಧಿಸಿದ ಬಳಿಕ ಮತ್ತೊಂದು ಕಾಮ. ಅದು ಸಿದ್ಧಿಸಿದ ಬಳಿಕ ಮಗದೊಂದು.

ಆಶೆಯು ಆಶೆಮಾಡಿದ ಭೋಗಗಳನ್ನು ಅನುಭವಿಸುವುದರಿಂದ ಎಂದೂ ಶಾಂತವಾಗುವುದಿಲ್ಲ. ಹವಿಸ್ಸನ್ನು ಹಾಕಿದ ಯಜ್ಞಕುಂಡದ ಅಗ್ನಿಯು ಹವಿಸ್ಸಾಂಗದ ಹೋಮದಿಂದ ಮತ್ತಷ್ಟು ಉದ್ದೀಪಿತವಾಗುವಂತೆ ಕಾಮವೂ ಕೆರಳುತ್ತಲೇ ಹೋಗುತ್ತದೆ. ಮೋಹವಶನಾಗದೆ, ಯಾವ ಕಾಮನೆಗಳನ್ನು ಬಯಸದ ಮನುಷ್ಯನೇ ಸುಖದಿಂದ ಇರುತ್ತಾನೆ. ಗಿಡಗವು ಕುಳಿತುಕೊಂಡ ಮರದ ನೆರಳನ್ನು ಆಶ್ರಯಿಸಿದ ಗುಬ್ಬಚ್ಚಿಗೆ ಎಂದಾದರೂ ಸುಖವಾಗುವುದೆ? ನಾಲ್ಕು ಸಮುದ್ರಗಳವರೆಗಿರುವ ಸಮಗ್ರ ಭೂಮಂಡಲ ವನ್ನೆಲ್ಲ ಆಳುವ ರಾಜನಿಗೆ ಆಶೆ ಒಂದಿದ್ದರೆ, ಸುಖವಾಗುವುದಿಲ್ಲ ಆದರೆ ಕಲ್ಲು ಕಾಂಚನ ಎರಡನ್ನು ಸಮನಾಗಿ ತಿಳಿಯುವ ತಿರುಕನು ನಿಜವಾಗಿಯೂ ಸಮಾಧಾನದಿಂದ ಬಾಳುತ್ತಾನೆ.

ದಾನ ತೆಗೆದುಕೊಳ್ಳಲು ಅಧಿಕಾರವಿದ್ದರೂ, ಯಾರ ವೈರಾಗ್ಯದಿಂದ ದಾನವನ್ನು ಸ್ವೀಕರಿಸುವದಿಲ್ಲವೋ ಅವರು ದಾನ ಮಾಡುವವರು ಹೊಂದುವ ಶಾಶ್ವತ ಲೋಕಗಳನ್ನು ಪಡೆಯುತ್ತಾರೆ. ರಾಜರಿಂದ ಹಣವನ್ನು ಪಡೆದುಕೊಂಡ ಬ್ರಾಹ್ಮಣನನ್ನು ನೋಡಿ, ಋಷಿಗಳು ದುಃಖಪಡುತ್ತಾರೆ. ದಾನ ತೆಗೆದುಕೊಂಡ ಮೂರ್ಖ ಬ್ರಾಹ್ಮಣನಿಗೆ ತನಗೆ ಮುಂದೆ ಒದಗಬಹುದಾದ ನರಕ ಯಾತನೆಯ ಕಲ್ಪನೆಯು ಈಗ ಇರುವುದಿಲ್ಲ. ದಾನ ತೆಗೆದುಕೊಳ್ಳುವ ಯೋಗ್ಯತೆ ಇದ್ದರೂ ನಿಜವಾದ ಬ್ರಾಹ್ಮಣನು ತೆಗೆದುಕೊಳ್ಳಬಾರದು. ದಾನ ಗ್ರಹಣದಿಂದ ಬ್ರಾಹ್ಮಣನ ಬ್ರಹ್ಮ ತೇಜಸ್ಸು ಕ್ಷೀಣವಾಗುತ್ತದೆ. ದಾನ ತೆಗೆದುಕೊಳ್ಳುವ ಅರ್ಹತೆ ಇದ್ದರೂ, ದಾನ-ದಕ್ಷಿಣೆಗಳನ್ನು ಸ್ವೀಕರಿಸದ ಅಪರಿಗ್ರಹ ವೃತ್ತಿಯ ಸಾಧಿಗಳಿಗೆ ದಾನ ನೀಡುವವರಿಗೆ ದೊರಕುವ ಲೋಕಗಳೇ ಲಭಿಸುವವು.

ಕಮಲದ ದೇಟು ಯಾವಾಗಲೂ ನೀರಿನಲ್ಲಿಯೇ ಇರುವದು. ಅದರಂತೆ ಆಶೆಯು ಯಾವಾಗಲೂ ಮಾನವರ ದೇಹದಲ್ಲಿ ನೆಲೆಸಿರುತ್ತದೆ. ಅದಕ್ಕೆ ತುದಿ ಮೊದಲುಗಳು ಇಲ್ಲ. ಮನುಷ್ಯನ ದೇಹಕ್ಕೆ ಮುಪ್ಪು ಬಂದರೂ ಆಶೆಗೆ ಮುಪ್ಪಿಲ್ಲ. ಬುದ್ಧಿಗೇಡಿಗಳಿಗೆ ಈ ಆಶೆಯನ್ನು ಬಿಟ್ಟು ಬದುಕಲಿಕ್ಕೆ ಆಗುವುದಿಲ್ಲ. ಆಶೆ ಎನ್ನುವದು ಪ್ರಾಣಾಂತಿಕವಾದ ರೋಗವಿದ್ದಂತೆ ಅಂತಹ ಆಶೆಯನ್ನು ಬಿಟ್ಟವರಿಗೆ ನಿಜವಾದ ಸುಖವು ದೊರಕುವದು.

**ಪಶುಸಖರು** :- ಯಾವಾಗಲೂ ಧರ್ಮನಿಷ್ಠರಾದ ವಿದ್ವಾಂಸರು ಯಾವುದನ್ನು ಆಚರಿಸುತ್ತಾರೆಯೋ ಅದನ್ನೇ ತನಗೆ ಹಿತಾಕಾಂಕ್ಷಿಯು ಮಾಡಬೇಕು. ಹೀಗೆಂದು ಹೇಳಿ ಆ ಚಿನ್ನವನ್ನು ತುಂಬಿದ್ದ ಹಣ್ಣುಗಳನ್ನು ಆ ಋಷಿಗಳು ಬಿಟ್ಟು ಬೇರೆ ಕಡೆಗೆ ಹೋದರು. ಅನಂತರ ಅವರು ಸಂಚರಿಸುತ್ತ ಮಧ್ಯಮ ಪುಷ್ಕರಕ್ಕೆ ಹೋಗಿ ಅಲ್ಲಿ ಬಂದಿದ್ದ ಒಬ್ಬ ಶುನಸ್ಸಖನೆಂಬ ಸನ್ಯಾಸಿಯನ್ನು ಕಂಡರು. ಆ ಋಷಿಗಳು ಅವನೊಡನೆ ಸ್ವಲ್ಪ ದೂರ ಕಾಡಿನೊಳಗೆ ಹೋಗಿ ಪದ್ಮಗಳು ಬೆಳೆದಿರುವ ಒಂದು ಸರೋವರವನ್ನು ನೋಡಿದರು. ಆ ಸರೋವರದ ದಡದಲ್ಲಿ ಕೂತುಕೊಂಡು ಉತ್ತಮಗತಿಯನ್ನು ಯೋಚಿಸುತ್ತಿರುವ ಆ ಋಷಿಗಳನ್ನು ಕುರಿತು ಅವರು ಹಸಿದಿರುವದನ್ನು ನೋಡಿ ಶುನಸ್ಸಖನೆಂದನು.

**ಶುನಸ್ಸಖ** :- ನೀವೆಲ್ಲರೂ ಹೇಳಿ, ಹಸಿವೆಯಿಂದ ಉಂಟಾಗುವ ತೊಂದರೆ ಎಂತಹದು ? ಎನ್ನಲು ಆತನನ್ನು ಕುರಿತು ಇಂತೆಂದರು -

**ಋಷಿಗಳು** :- ಶಕ್ತಿ, ಖಡ್ಗ, ಗದೆ, ಚಕ್ರ, ತೋಮರ, ಬಾಣಗಳಿಂದ ಹೊಡೆದರೆ ಆಗುವ ಯಾತನೆಯನ್ನೂ ಹಸಿವಿನ ಯಾತನೆಯು ಜಯಿಸುತ್ತದೆ. ಶ್ವಾಸ, ಕೆಮ್ಮು, ಕ್ಷಯ, ಜ್ವರ, ಅಪಸ್ಮಾರ ಮುಂತಾದ ರೋಗಗಳಿಂದ ಕೂಡಿದವನ ವ್ಯಥೆಗಿಂತಲೂ ಹಸಿವೆಯಿಂದಾಗುವ ತೊಂದರೆಯು ಹೆಚ್ಚಾಗುತ್ತದೆ. ಚಿನ್ನದಭುಜಕೀರ್ತಿ, ಕಿರೀಟ, ಪ್ರಕಾಶಮಾನವಾದ ಕರ್ಣಾಭರಣ ಇವುಗಳಿಂದ ಅಲಂಕೃತರಾಗಿದ್ದರೂ ಹಸಿವೆಯಿಂದ ಕೂಡಿದರೆ ಅವರು ಪ್ರಕಾಶಿಸುವದಿಲ್ಲ. ಭೂಮಿಯಲ್ಲಿಯ ನೀರು ಸೂರ್ಯ ಕಿರಣಗಳಿಂದ ಹೇಗೆ ಒಣಗುತ್ತದೆಯೋ ಹಾಗೆ ಶರೀರದಲ್ಲಿರುವ ನರಗಳು ಹಸಿವಿನಿಂದ ಶೋಷಿಸುತ್ತವೆ. ಹಸಿವಿನಿಂದ ಕೂಡಿದವನಿಗೆ ಕಿವಿ ಕೇಳುವದಿಲ್ಲ. ವಾಸನೆ ತೋರುವದಿಲ್ಲ. ಕಣ್ಣು ಕಾಣುವದಿಲ್ಲ. ಸುಡಲ್ಪಡುತ್ತಾನೆ. ನಡುಗುತ್ತಾನೆ ಒಣಗುತ್ತಿರುತ್ತಾನೆ. ಹಸಿವುಗೊಂಡವನು ಪೂರ್ವ, ದಕ್ಷಿಣ, ಪಶ್ಚಿಮೋತ್ತರಗಳನ್ನು ಮೇಲುಕೆಳಗುಗಳನ್ನು ತಿಳಿಯಲಾರನು. ಹಸಿವುಗೊಂಡವನಲ್ಲಿ ಮೂಗುತನ, ಕಿವುಡತನ, ದಡ್ಡತನ, ಕುಂಟುತನ, ಹೆದ್ದರಿಕೆ, ಗೌರವಿಸದಿರುವದು ಇಷ್ಟೂ ಇರುತ್ತದೆ. ತಂದೆ-ತಾಯಿ, ಮಕ್ಕಳು, ಹೆಂಡತಿ, ಅಣ್ಣ, ಹೆಣ್ಣು ಮಕ್ಕಳು, ಬಂಧುಗಳು ಸ್ವಜನರು ಇವರೆಲ್ಲರನ್ನೂ ಹಸಿದವನು ಬಿಟ್ಟುಬಿಡುತ್ತಾನೆ. ಹಸಿದವನು ಪಿತೃಗಳನ್ನಾಗಲಿ, ಗುರುಗಳನ್ನಾಗಲಿ ಗಮನಿಸುವದಿಲ್ಲ. ಋಷಿ ಅಭ್ಯಾಗತರನ್ನು ಪೂಜಿಸುವದಿಲ್ಲ. ಅನ್ನವಿಲ್ಲದವನಿಗೆ ಈ ವಿಷಯಗಳೆಲ್ಲವೂ ಆಗುತ್ತವೆ. ಅನ್ನವಿಲ್ಲದೆ ಅತೃಪ್ತನಾದವನಿಗೆ ಇವೇ ಅದಕ್ಕೆ ವಿರುದ್ಧವಾಗಿ ತೋರುತ್ತವೆ. ಲೋಕದಲ್ಲಿ ಅನ್ನಕ್ಕಿಂತಲೂ ಉತ್ತಮವಾದುದು ಮತ್ತೊಂದಿಲ್ಲ. ಹಿಂದೂ ಇಲ್ಲ ಮುಂದೂ ಇಲ್ಲ. ಅನ್ನವನ್ನು ಮುಖ್ಯವಾಗಿ ಉಳ್ಳದ್ದು ಪ್ರಪಂಚವು ಎಲ್ಲವೂ ಅನ್ನದಲ್ಲಿಯೇ ನಿಂತಿದೆ. ಪಿತೃಗಳು, ದೇವತೆಗಳು, ದೈತ್ಯರು, ಯಕ್ಷರು, ರಾಕ್ಷಸರು, ಕಿನ್ನರರು, ಮನುಷ್ಯರು, ಪಿಶಾಚರು ಇವರೆಲ್ಲರೂ ಅನ್ನದಿಂದಲೇ ಬದುಕಿರುತ್ತಾರೆ. ''ಅನ್ನವೇ ದೇವರು.''

ಕೋಳಿ, ಕಾಗೆ, ನಾಯಿ, ಇಲಿ, ಹಾವು ಮೀನು, ಹುಳು, ಇರುವೆ ಇವೆಲ್ಲವೂ ಅನ್ನದಿಂದಲೇ ಕೂಡಿವೆ. ಆದ್ದರಿಂದ ಅನ್ನವನ್ನು ಪ್ರಯತ್ನಪಟ್ಟು ದಾನಮಾಡು. ಅದಕ್ಕಾಗಿ ಅನ್ನವನ್ನು ಸಂಗ್ರಹ ಮಾಡು. ಅನ್ನವನ್ನು ದಾನಮಾಡುವವನು ತೃಪ್ತಿ ಹೊಂದುತ್ತಾನೆ. ನಾಶರಹಿತವಾದ ಸ್ಥಿತಿಯನ್ನು ಹೊಂದುತ್ತಾನೆ.

ತಪಸ್ಸು, ಸತ್ಯ, ಜಪ, ಹೋಮ, ಧ್ಯಾನ, ಯೋಗ, ಉತ್ತಮಗತಿ, ಸ್ವರ್ಗ, ಸುಖ, ಇವೆಲ್ಲವೂ ಅನ್ನದಿಂದಲೇ ಸಿಕ್ಕತಕ್ಕವು. ಚಂದ್ರ, ವರುಣ, ಯಮ, ಕುಬೇರ, ಗೋವು, ಬ್ರಹ್ಮ ಈ ಎಲ್ಲ ಲೋಕಗಳು ಅನ್ನದಿಂದಲೇ ಸಿಕ್ಕುವವು. ಚಂದನ, ಆಗುರು, ಧೂಪ, ಚಳಿಗಾಲದಲ್ಲಿ ಸೌದೆಯನ್ನು ದಾನಮಾಡುವದು ಇವು ಅನ್ನದಾನಕ್ಕೆ ಹದಿನಾರನೆಯ ಒಂದು ಭಾಗವನ್ನು ಹೋಲಲಾರವು. ಬಾವಿ, ಉದ್ಯಾನ, ವೃಷೋತ್ಸರ್ಗ, ಇಳಿಯುವ ಬಾವಿ, ಮನೆಗಳು ಇವುಗಳ ದಾನಗಳು ಅನ್ನದಾನಕ್ಕೆ ಹದಿನಾರನೆಯ ಒಂದು ಭಾಗವನ್ನು ಹೋಲಲಾರವು. ಉದಕದಾನ, ಭೂಮಿದಾನ, ಗೋದಾನ ಇವನ್ನೂ ಅನ್ನದಾನವನ್ನೂ ದೇವತೆಗಳು ತಕ್ಕಡಿಯಲ್ಲಿಟ್ಟು ತೂಗಲು ಅನ್ನದಾನವೇ ಹೆಚ್ಚಾಗಿದ್ದಿತು. ಅನ್ನವೇ ಪ್ರಾಣ, ಬಲ, ತೇಜಸ್ಸು ಆಗಿರುತ್ತದೆ. ಅನ್ನವೇ ಪರಾಕ್ರಮ. ಅನ್ನದಿಂದಲೇ ತೇಜಸ್ಸು ಹುಟ್ಟುತ್ತದೆ. ಅನ್ನದಿಂದಲೇ ಪ್ರಾಣಿಯು ಬದುಕುತ್ತದೆ. ಪೌಂಡರೀಕ, ಅಶ್ವಮೇಧ, ಷೋಡಶಿಕ, ಅಗ್ನಿಷ್ಟೋಮ, ತ್ರಿರಾತ್ರಿ ರಾಜಸೂಯ, ಸೌತ್ರಾಮಣಿ, ವಾಜಪೇಯ, ಮಾನುಷಯಾಗ, ಪಶವೂ ಇವೆಲ್ಲವೂ ಕೂಡ ಅನ್ನದಿಂದಲೇ ಆಗತಕ್ಕವುಗಳು. ಅನ್ನವಿದ್ದರೆ ಸವಿಸ್ತಾರವಾಗಿ ಈ ಯಜ್ಞಗಳು ನಡೆಯುತ್ತವೆ. ಪರ್ವತ, ನದಿ, ಕಾಡು, ಭಾವಿ, ಇವುಗಳೊಡನೆ ಕೂಡಿದ ಭೂಮಿಯನ್ನು ಅನ್ನದಾನಮಾಡಿದವನು ದಾನ ಮಾಡಿದಂತಾಗುತ್ತದೆ.

ಎಲೈ ಭೀಷ್ಮನೇ, ರಕ್ತದ ವಿಕಾರವನ್ನು ಕೊಡತಕ್ಕ ಅನ್ನದ ವಿಚಾರವನ್ನು ಹೇಳಿದ್ದೇನೆ. ಆದ್ದರಿಂದ ಹಸಿದವನಿಗೆ ಶ್ರದ್ಧೆಯಿಂದ ಅನ್ನಹಾಕಬೇಕು. ಅನ್ನವನ್ನು ಹಾಕುವವನು ಬ್ರಹ್ಮಹತ್ಯೆ ಪಾಪವನ್ನು ನಾಶ ಮಾಡಿಕೊಳ್ಳುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ಇದನ್ನು ಕೇಳಬೇಕಾದದ್ದೇ ಇಲ್ಲ. ಹಸಿದುಬಂದ ಜ್ಞಾನಿಗಳಿಗೆ ಅನ್ನವನ್ನು ಹಾಕಿದರೆ ಸರ್ವದಾನಗಳನ್ನು ದಕ್ಷಿಣೆಯೊಡನೆ ಕೊಟ್ಟಂತಾಗುತ್ತದೆ. ನಿತ್ಯವೂ ಅನ್ನದಾನ ಮಾಡುತ್ತಿದ್ದರೆ ದೇವತೆಗಳೆಲ್ಲರನ್ನೂ ಪೂಜೆಮಾಡಿದಂತೆ ಆಗುತ್ತದೆ. ಎಲ್ಲ ತೀರ್ಥದಲ್ಲಿಯೂ ಸ್ನಾನಮಾಡಿದಂತಾಗುತ್ತದೆ. ಎಲ್ಲ ವ್ರತಗಳನ್ನು ಮಾಡಿದಂತೆ ಆಗುತ್ತದೆ. ಹಸಿದವನಿಗೆ ಶ್ರದ್ಧೆಯಿಂದ ಅನ್ನವನ್ನು ಕೊಟ್ಟರೆ ಅವನು ಬ್ರಹ್ಮನಾಗಿ ಬ್ರಹ್ಮಲೋಕದಲ್ಲಿ ಬ್ರಹ್ಮನೊಡನೆ ಸುಖಿಸುತ್ತಾನೆ. ಚೆನ್ನಾಗಿರುವ ಅನ್ನವನ್ನು ಪ್ರತಿದಿನವೂ ಬ್ರಾಹ್ಮಣರಿಗೆ ದಾನ ಮಾಡಬೇಕು. ಶ್ರಾದ್ಧದಲ್ಲಿ ಅನ್ನದಾನವನ್ನು (ಪ್ರಕರಣವನ್ನು) ಒಂದೇ ಮನಸ್ಸಿನಿಂದ ಓದಬೇಕು. ಅಮಾವಾಸ್ಯೆ, ಚಂದ್ರಗ್ರಹಣ, ಸಿಡಿಲು, ಬಡಿತ, ಭೂಕಂಪಗಳಲ್ಲಿ (ಈ ಪ್ರಕರಣ) ಓದಬೇಕು. ಅಂದರೆ ಅವನ ಪಿತೃಗಳು ಅವರಿರುವವರೆಗೆ ತೃಪ್ತಿಪಡುತ್ತಾರೆ, ಸಂಶಯವಿಲ್ಲ. ದೇವರು ಬ್ರಾಹ್ಮಣರ ಹತ್ತಿರವಿದ್ದು ಕೊಂಡಾಗಲೀ ಹತ್ತಿರವಿಲ್ಲದಿದ್ದು ಕೊಂಡಾಗಲೀ, ಎಚ್ಚೆತ್ತಿರಲಿ, ಎಚ್ಚೆತ್ತಿರದಿರಲಿ ಪ್ರಮಾದದಿಂದ ಬಂದಿರಲಿ, ಭಕ್ತಿಯಿಲ್ಲದೆ ಇರಲಿ ಇದನ್ನು ಪಠಿಸಿದರೆ ಎಲ್ಲ ಪಾಪಗಳು ಹೋಗುತ್ತವೆ. ಇಂದ್ರಿಯ ನಿಗ್ರಹದಿಂದ ಕೂಡಿದ ಜ್ಞಾನಿಗಳು ಸುಖಿಗಳೂ, ಧರ್ಮಭಾಗಿಗಳೂ ಆಗುತ್ತಾರೆ. ಧರ್ಮವೇ ದಾನವು.

ಅದೇ ಯಮವು ಎಂದು ತಿಳಿದವರು ಹೇಳುತ್ತಾರೆ. ಬ್ರಾಹ್ಮಣರು ಈ ಧರ್ಮವನ್ನು ಅತಿಶಯದಿಂದ ಆಚರಿಸಬೇಕು. ಇದು ಹಿಂದಿನಿಂದಲೂ ಬಂದುದು. ಧರ್ಮವೇ ತೇಜಸ್ಸನ್ನು ಹೆಚ್ಚಿಸುತ್ತದೆ. ಧರ್ಮವೇ ಪವಿತ್ರವಾದದ್ದು. ಧರ್ಮವುಳ್ಳವನು ಪಾಪರಹಿತನಾಗಿಯೂ ತೇಜಸ್ವಿಯಾಗಿಯೂ ಆಗುವನು. ಲೋಕದಲ್ಲಿ ನಿಯಮಗಳು, ಶುಭಕರ್ಮಗಳು ಧರ್ಮವಿದ್ದರೆ ಹೆಚ್ಚಿಗೆ ಫಲ ಕೊಡುತ್ತವೆ. ಸರ್ವಯಜ್ಞಫಲಗಳು ಧರ್ಮವಿದ್ದರೆ ಹೆಚ್ಚುತ್ತವೆ. ಆ ಧರ್ಮವಿಲ್ಲದಿದ್ದರೆ, ದಾನಸಿದ್ಧಿಯು ಉಂಟಾಗುವದಿಲ್ಲ. ಧರ್ಮದಿಂದಲೇ ಯಜ್ಞವೂ ದಾನವೂ ನಡೆಯುತ್ತದೆ. ಧರ್ಮಾಗುಣವಿಲ್ಲದವನು ಅರಣ್ಯದಲ್ಲಿದ್ದರೇನು ? ಧರ್ಮ ಗುಣವಿರುವವನು ಅರಣ್ಯಕ್ಕೆ ಹೋಗಬೇಕಾದುದಿಲ್ಲ. ದಾಂತನು ವಾಸಮಾಡುವ ಸ್ಥಳಗಳೆಲ್ಲವೂ ಆಶ್ರಮಗಳೇ. ಶೀಲ ತನ್ನ ವೃತ್ತಿ ಇವುಗಳಲ್ಲಿದ್ದು ಕೊಂಡು ಇಂದ್ರಿಯನಿಗ್ರಹ ಹೊಂದಿ ಋಜುಮಾರ್ಗದಲ್ಲಿ ಇರುವವನಿಗೆ ಆಶ್ರಮ ಬೇಕಿಲ್ಲ. ಆಶೆಯುಳ್ಳವರಿಗೆ ಕಾಡಿನಲ್ಲಿಯೂ ದೋಷಗಳಿವೆ. ಪಂಚೇಂದ್ರಿಯಗಳನ್ನು ನಿಗ್ರಹಿಸಿದವನು ಮನೆಯಲ್ಲಿದ್ದರೂ ತಪಸ್ಸು ಹೆಚ್ಚುತ್ತದೆ. ಅಯೋಗ್ಯವಾದ ಕೆಲಸವನ್ನು ಮಾಡದೆ ಆಶೆಯನ್ನು ಬಿಟ್ಟದ್ದವನಿಗೆ ಮನೆಯೇ ತಪೋವನ.

ತಮ್ಮ ಧರ್ಮದಿಂದಲೇ ಸಂಪಾದಿಸಿದ ಜೀವನವುಳ್ಳ, ತಮ್ಮ ಹೆಂಡಿರಲ್ಲಿ ಆಸಕ್ತರಾಗಿರುವ, ಜಿತೇಂದ್ರಿಯರಾದ, ಅತಿಥಿಯಲ್ಲಿ ಆಸಕ್ತರಾದ ಉತ್ತಮ ಪುರುಷರಿಗೆ ಮನೆಯಲ್ಲಿದ್ದರೂ ಮೋಕ್ಷವೆ. ಶಬ್ದಶಾಸ್ತ್ರ, ವರ್ಣಶಾಸ್ತ್ರಗಳಲ್ಲಿಯೇ ಆಸಕ್ತನಿಗೆ ಮೋಕ್ಷವಿಲ್ಲ. ಯಾವಾಗಲೂ ಏಕಾಂತದಲ್ಲಿರುತ್ತ ಹಿಡಿದ ವ್ರತವನ್ನು ಬಿಡದೇ ಇಂದ್ರಿಯ ನಿಗ್ರಹಮಾಡಿಕೊಂಡು ಆತ್ಮನಲ್ಲಿ ಮನಸಿಟ್ಟು ಹಿಂಸೆ ಮಾಡದವನಿಗೆ ಮೋಕ್ಷವು ಖಂಡಿತ ಸಿಗುತ್ತದೆ. ಇಂದ್ರಿಯನಿಗ್ರಹ ಉಳ್ಳವನು ಸುಖವಾಗಿ ಮಲಗುತ್ತಾನೆ. ಸುಖವಾಗಿ ಏಳುತ್ತಾನೆ. ಎಲ್ಲ ಪ್ರಾಣಿಗಳಲ್ಲಿಯೂ ಸಂತೋಷವಾಗಿರುವವನಿಗೆ ಸುಖನಿದ್ರೆಯೂ ಸುಖದಿಂದ ಏಳುವಿಕೆಯೂ ಉಂಟಾಗುತ್ತವೆ. ಅಂತಹ ಇಂದ್ರಿಯ ನಿಗ್ರಹವುಳ್ಳವನು ಸುಖವಾಗಿ ದಾರಿಯಲ್ಲಿ ಹೋಗುವಂತೆ ನಿಗ್ರಹವಿಲ್ಲದವನು ರಥದಲ್ಲಿಯಾಗಲೀ ಕುದುರೆ ಆನೆಗಳ ಮೇಲಾಗಲಿ ಸುಖವಾಗಿ ಹೋಗಲಾರನು. ಶತ್ರುವು ಯಾವಾಗಲೂ ಕೋಪಿಸಿಕೊಳ್ಳುವ ಕೆಲಸವನ್ನು ಮಾಡಬಾರದು. ಹಾಗೆಯೇ ಇಂದ್ರಿಯ ನಿಗ್ರಹವಿಲ್ಲದ ಕೆಲಸವನ್ನೂ ಮಾಡಬಾರದು. ಯಮನನ್ನು ಯಮನೆನ್ನುವದಿಲ್ಲ. ಆತ್ಮನೇ ಯಮನು. ಯಾವನು ಆತ್ಮನನ್ನು ಗ್ರಾಹಿಸುವನೋ ಅವನಿಗೆ ಯಮನು ಸೋಲುತ್ತಾನೆ. ಯಮ ಎಂದರೆ ಜನರು ವ್ಯಥವಾಗಿ ಹೆದರುತ್ತಾರೆ. ಯಾವನು ಆತ್ಮವನ್ನು ನಿಗ್ರಹಿಸುತ್ತಾನೋ ಅವನನ್ನು ಯಮನು ಏನು ಮಾಡಿಯಾನು ? ಇಂದ್ರಿಯ ನಿಗ್ರಹವಿಲ್ಲದಿರುವವನಿಗೆ ಭೂತಗಳಿಂದಲೂ, ಪ್ರಾಣಿಗಳಿಂದಲೂ ಹೆದರಿಕೆ ಇರುತ್ತದೆ. ಅವರಿಗೆ ಬುದ್ಧಿ ಕಲಿಸುವದಕ್ಕೆ ಬ್ರಹ್ಮನು ಶಿಕ್ಷೆಯನ್ನು ನಿರ್ಮಿಸಿರುವನು. ದಂಡವು ಭೂತಗಳನ್ನೂ, ಪ್ರಜೆಗಳನ್ನೂ ಕಾಪಾಡುತ್ತದೆ. ಪಾಪಿಗಳನ್ನೂ ತಡೆಗಟ್ಟುತ್ತದೆ. ದಂಡವನ್ನು ತಡೆಗಟ್ಟುವದು ಅಸಾಧ್ಯ. ಕಪ್ಪಾಗಿ ಯುವಕನಾಗಿ ಕೆಂಪಾಗಿರುವ ಕಣ್ಣುಳ್ಳವನು ಎಲ್ಲ ಪ್ರಾಣಿಗಳಿಗೆ ಭಯವನ್ನುಂಟುಮಾಡುತ್ತಾನೆ. ದಂಡವಾದರೋ ಮನುಷ್ಯರಿಗೆ ಶಿಕ್ಷೆಯನ್ನು ಕೊಡುತ್ತದೆ. ಅದರಲ್ಲಿಯೇ ಧರ್ಮವು ನಿಂತಿರುತ್ತದೆ.

ಕೋಳಿ, ಕಾಗೆ, ನಾಯಿ, ಇಲಿ, ಹಾವು ಮೀನು, ಹುಳು, ಇರುವೆ ಇವೆಲ್ಲವೂ ಅನ್ನದಿಂದಲೇ ಕೂಡಿವೆ. ಆದ್ದರಿಂದ ಅನ್ನವನ್ನು ಪ್ರಯತ್ನಪಟ್ಟು ದಾನಮಾಡು. ಅದಕ್ಕಾಗಿ ಅನ್ನವನ್ನು ಸಂಗ್ರಹ ಮಾಡು. ಅನ್ನವನ್ನು ದಾನಮಾಡುವವನು ತೃಪ್ತಿ ಹೊಂದುತ್ತಾನೆ. ನಾಶರಹಿತವಾದ ಸ್ಥಿತಿಯನ್ನು ಹೊಂದುತ್ತಾನೆ.

ತಪಸ್ಸು, ಸತ್ಯ, ಜಪ, ಹೋಮ, ಧ್ಯಾನ, ಯೋಗ, ಉತ್ತಮಗತಿ, ಸ್ವರ್ಗ, ಸುಖ, ಇವೆಲ್ಲವೂ ಅನ್ನದಿಂದಲೇ ಸಿಕ್ಕತಕ್ಕವು. ಚಂದ್ರ, ವರುಣ, ಯಮ, ಕುಬೇರ, ಗೋವು, ಬ್ರಹ್ಮ ಈ ಎಲ್ಲ ಲೋಕಗಳು ಅನ್ನದಿಂದಲೇ ಸಿಕ್ಕುವವು. ಚಂದನ, ಆಗುರು, ಧೂಪ, ಚಳಿಗಾಲದಲ್ಲಿ ಸೌದೆಯನ್ನು ದಾನಮಾಡುವದು ಇವು ಅನ್ನದಾನಕ್ಕೆ ಹದಿನಾರನೆಯ ಒಂದು ಭಾಗವನ್ನು ಹೋಲಲಾರವು. ಬಾವಿ, ಉದ್ಯಾನ, ವೃಷೋತ್ಸರ್ಗ, ಇಳಿಯುವ ಬಾವಿ, ಮನೆಗಳು ಇವುಗಳ ದಾನಗಳು ಅನ್ನದಾನಕ್ಕೆ ಹದಿನಾರನೆಯ ಒಂದು ಭಾಗವನ್ನು ಹೋಲಲಾರವು. ಉದಕದಾನ, ಭೂಮಿದಾನ, ಗೋದಾನ ಇವನ್ನೂ ಅನ್ನದಾನವನ್ನೂ ದೇವತೆಗಳು ತಕ್ಕಡಿಯಲ್ಲಿಟ್ಟು ತೂಗಲು ಅನ್ನದಾನವೇ ಹೆಚ್ಚಾಗಿದ್ದಿತು. ಅನ್ನವೇ ಪ್ರಾಣ, ಬಲ, ತೇಜಸ್ಸು ಆಗಿರುತ್ತದೆ. ಅನ್ನವೇ ಪರಾಕ್ರಮ. ಅನ್ನದಿಂದಲೇ ತೇಜಸ್ಸು ಹುಟ್ಟುತ್ತದೆ. ಅನ್ನದಿಂದಲೇ ಪ್ರಾಣಿಯು ಬದುಕುತ್ತದೆ. ಪೌಂಡರೀಕ, ಅಶ್ವಮೇಧ, ಷೋಡಶಿಕ, ಅಗ್ನಿಷ್ಟೋಮ, ತ್ರಿರಾತ್ರಿ ರಾಜಸೂಯ, ಸೌತ್ರಾಮಣಿ, ವಾಜಪೇಯ, ಮಾನುಷಯಾಗ, ಪಶವೂ ಇವೆಲ್ಲವೂ ಕೂಡ ಅನ್ನದಿಂದಲೇ ಆಗತಕ್ಕವುಗಳು. ಅನ್ನವಿದ್ದರೆ ಸವಿಸ್ತಾರವಾಗಿ ಈ ಯಜ್ಞಗಳು ನಡೆಯುತ್ತವೆ. ಪರ್ವತ, ನದಿ, ಕಾಡು, ಭಾವಿ, ಇವುಗಳೊಡನೆ ಕೂಡಿದ ಭೂಮಿಯನ್ನು ಅನ್ನದಾನಮಾಡಿದವನು ದಾನ ಮಾಡಿದಂತಾಗುತ್ತದೆ.

ಎಲೈ ಭೀಷ್ಮನೇ, ರಕ್ತದ ವಿಕಾರವನ್ನು ಕೊಡತಕ್ಕ ಅನ್ನದ ವಿಚಾರವನ್ನು ಹೇಳಿದ್ದೇನೆ. ಆದ್ದರಿಂದ ಹಸಿದವನಿಗೆ ಶ್ರದ್ಧೆಯಿಂದ ಅನ್ನಹಾಕಬೇಕು. ಅನ್ನವನ್ನು ಹಾಕುವವನು ಬ್ರಹ್ಮಹತ್ಯೆ ಪಾಪವನ್ನು ನಾಶ ಮಾಡಿಕೊಳ್ಳುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ಇದನ್ನು ಕೇಳಬೇಕಾದದ್ದೇ ಇಲ್ಲ. ಹಸಿದುಬಂದ ಜ್ಞಾನಿಗಳಿಗೆ ಅನ್ನವನ್ನು ಹಾಕಿದರೆ ಸರ್ವದಾನಗಳನ್ನು ದಕ್ಷಿಣೆಯೊಡನೆ ಕೊಟ್ಟಂತಾಗುತ್ತದೆ. ನಿತ್ಯವೂ ಅನ್ನದಾನ ಮಾಡುತ್ತಿದ್ದರೆ ದೇವತೆಗಳೆಲ್ಲರನ್ನೂ ಪೂಜೆಮಾಡಿದಂತೆ ಆಗುತ್ತದೆ. ಎಲ್ಲ ತೀರ್ಥದಲ್ಲಿಯೂ ಸ್ನಾನಮಾಡಿದಂತಾಗುತ್ತದೆ. ಎಲ್ಲ ವ್ರತಗಳನ್ನು ಮಾಡಿದಂತೆ ಆಗುತ್ತದೆ. ಹಸಿದವನಿಗೆ ಶ್ರದ್ಧೆಯಿಂದ ಅನ್ನವನ್ನು ಕೊಟ್ಟರೆ ಅವನು ಬ್ರಹ್ಮನಾಗಿ ಬ್ರಹ್ಮಲೋಕದಲ್ಲಿ ಬ್ರಹ್ಮನೊಡನೆ ಸುಖಿಸುತ್ತಾನೆ. ಚೆನ್ನಾಗಿರುವ ಅನ್ನವನ್ನು ಪ್ರತಿದಿನವೂ ಬ್ರಾಹ್ಮಣರಿಗೆ ದಾನ ಮಾಡಬೇಕು. ಶ್ರಾದ್ಧದಲ್ಲಿ ಅನ್ನದಾನವನ್ನು (ಪ್ರಕರಣವನ್ನು) ಒಂದೇ ಮನಸ್ಸಿನಿಂದ ಓದಬೇಕು. ಅಮಾವಾಸ್ಯೆ, ಚಂದ್ರಗ್ರಹಣ, ಸಿಡಿಲು, ಬಡಿತ, ಭೂಕಂಪಗಳಲ್ಲಿ (ಈ ಪ್ರಕರಣ) ಓದಬೇಕು. ಅಂದರೆ ಅವನ ಪಿತೃಗಳು ಅವರಿರುವವರೆಗೆ ತೃಪ್ತಿಪಡುತ್ತಾರೆ, ಸಂಶಯವಿಲ್ಲ. ದೇವರು ಬ್ರಾಹ್ಮಣರ ಹತ್ತಿರವಿದ್ದು ಕೊಂಡಾಗಲೀ ಹತ್ತಿರವಿಲ್ಲದಿದ್ದು ಕೊಂಡಾಗಲೀ, ಎಚ್ಚೆತ್ತಿರಲಿ, ಎಚ್ಚೆತ್ತಿರದಿರಲಿ ಪ್ರಮಾದದಿಂದ ಬಂದಿರಲಿ, ಭಕ್ತಿಯಿಲ್ಲದೆ ಇರಲಿ ಇದನ್ನು ಪಠಿಸಿದರೆ ಎಲ್ಲ ಪಾಪಗಳು ಹೋಗುತ್ತವೆ. ಇಂದ್ರಿಯ ನಿಗ್ರಹದಿಂದ ಕೂಡಿದ ಜ್ಞಾನಿಗಳು ಸುಖಿಗಳೂ, ಧರ್ಮಭಾಗಿಗಳೂ ಆಗುತ್ತಾರೆ. ಧರ್ಮವೇ ದಾನವು.

ಅದೇ ಯಮವು ಎಂದು ತಿಳಿದವರು ಹೇಳುತ್ತಾರೆ. ಬ್ರಾಹ್ಮಣರು ಈ ಧರ್ಮವನ್ನು ಅತಿಶಯದಿಂದ ಆಚರಿಸಬೇಕು. ಇದು ಹಿಂದಿನಿಂದಲೂ ಬಂದುದು. ಧರ್ಮವೇ ತೇಜಸ್ಸನ್ನು ಹೆಚ್ಚಿಸುತ್ತದೆ. ಧರ್ಮವೇ ಪವಿತ್ರವಾದದ್ದು. ಧರ್ಮವುಳ್ಳವನು ಪಾಪರಹಿತನಾಗಿಯೂ ತೇಜಸ್ವಿಯಾಗಿಯೂ ಆಗುವನು. ಲೋಕದಲ್ಲಿ ನಿಯಮಗಳು, ಶುಭಕರ್ಮಗಳು ಧರ್ಮವಿದ್ದರೆ ಹೆಚ್ಚಿಗೆ ಫಲ ಕೊಡುತ್ತವೆ. ಸರ್ವಯಜ್ಞಫಲಗಳು ಧರ್ಮವಿದ್ದರೆ ಹೆಚ್ಚುತ್ತವೆ. ಆ ಧರ್ಮವಿಲ್ಲದಿದ್ದರೆ, ದಾನಸಿದ್ಧಿಯು ಉಂಟಾಗುವದಿಲ್ಲ. ಧರ್ಮದಿಂದಲೇ ಯಜ್ಞವೂ ದಾನವೂ ನಡೆಯುತ್ತದೆ. ಧರ್ಮಾಗುಣವಿಲ್ಲದವನು ಅರಣ್ಯದಲ್ಲಿದ್ದರೇನು ? ಧರ್ಮ ಗುಣವಿರುವವನು ಅರಣ್ಯಕ್ಕೆ ಹೋಗಬೇಕಾದುದಿಲ್ಲ. ದಾಂತನು ವಾಸಮಾಡುವ ಸ್ಥಳಗಳೆಲ್ಲವೂ ಆಶ್ರಮಗಳೇ. ಶೀಲ ತನ್ನ ವೃತ್ತಿ ಇವುಗಳಲ್ಲಿದ್ದು ಕೊಂಡು ಇಂದ್ರಿಯನಿಗ್ರಹ ಹೊಂದಿ ಋಜುಮಾರ್ಗದಲ್ಲಿ ಇರುವವನಿಗೆ ಆಶ್ರಮ ಬೇಕಿಲ್ಲ. ಆಶೆಯುಳ್ಳವರಿಗೆ ಕಾಡಿನಲ್ಲಿಯೂ ದೋಷಗಳಿವೆ. ಪಂಚೇಂದ್ರಿಯಗಳನ್ನು ನಿಗ್ರಹಿಸಿದವನು ಮನೆಯಲ್ಲಿದ್ದರೂ ತಪಸ್ಸು ಹೆಚ್ಚುತ್ತದೆ. ಅಯೋಗ್ಯವಾದ ಕೆಲಸವನ್ನು ಮಾಡದೆ ಆಶೆಯನ್ನು ಬಿಟ್ಟದ್ದವನಿಗೆ ಮನೆಯೇ ತಪೋವನ.

ತಮ್ಮ ಧರ್ಮದಿಂದಲೇ ಸಂಪಾದಿಸಿದ ಜೀವನವುಳ್ಳ, ತಮ್ಮ ಹೆಂಡಿರಲ್ಲಿ ಆಸಕ್ತರಾಗಿರುವ, ಜಿತೇಂದ್ರಿಯರಾದ, ಆತಿಥಿಯಲ್ಲಿ ಆಸಕ್ತರಾದ ಉತ್ತಮ ಪುರುಷರಿಗೆ ಮನೆಯಲ್ಲಿದ್ದರೂ ಮೋಕ್ಷವೆ. ಶಬ್ದಶಾಸ್ತ್ರ, ವರ್ಣಶಾಸ್ತ್ರಗಳಲ್ಲಿಯೇ ಆಸಕ್ತನಿಗೆ ಮೋಕ್ಷವಿಲ್ಲ. ಯಾವಾಗಲೂ ಏಕಾಂತದಲ್ಲಿರುತ್ತ ಹಿಡಿದ ವ್ರತವನ್ನು ಬಿಡದೇ ಇಂದ್ರಿಯ ನಿಗ್ರಹಮಾಡಿಕೊಂಡು ಆತ್ಮನಲ್ಲಿ ಮನಸಿಟ್ಟು ಹಿಂಸೆ ಮಾಡದವನಿಗೆ ಮೋಕ್ಷವು ಖಂಡಿತ ಸಿಗುತ್ತದೆ. ಇಂದ್ರಿಯನಿಗ್ರಹ ಉಳ್ಳವನು ಸುಖವಾಗಿ ಮಲಗುತ್ತಾನೆ. ಸುಖವಾಗಿ ಏಳುತ್ತಾನೆ. ಎಲ್ಲ ಪ್ರಾಣಿಗಳಲ್ಲಿಯೂ ಸಂತೋಷವಾಗಿರುವವನಿಗೆ ಸುಖನಿದ್ರೆಯೂ ಸುಖದಿಂದ ಏಳುವಿಕೆಯೂ ಉಂಟಾಗುತ್ತವೆ. ಅಂತಹ ಇಂದ್ರಿಯ ನಿಗ್ರಹವುಳ್ಳವನು ಸುಖವಾಗಿ ದಾರಿಯಲ್ಲಿ ಹೋಗುವಂತೆ ನಿಗ್ರಹವಿಲ್ಲದವನು ರಥದಲ್ಲಿಯಾಗಲೀ ಕುದುರೆ ಆನೆಗಳ ಮೇಲಾಗಲಿ ಸುಖವಾಗಿ ಹೋಗಲಾರನು. ಶತ್ರುವು ಯಾವಾಗಲೂ ಕೋಪಿಸಿಕೊಳ್ಳುವ ಕೆಲಸವನ್ನು ಮಾಡಬಾರದು. ಹಾಗೆಯೇ ಇಂದ್ರಿಯ ನಿಗ್ರಹವಿಲ್ಲದ ಕೆಲಸವನ್ನೂ ಮಾಡಬಾರದು. ಯಮನನ್ನು ಯಮನೆನ್ನುವದಿಲ್ಲ. ಆತ್ಮನೇ ಯಮನು. ಯಾವನು ಆತ್ಮನನ್ನು ಗ್ರಾಹಿಸುವನೋ ಅವನಿಗೆ ಯಮನು ಸೋಲುತ್ತಾನೆ. ಯಮ ಎಂದರೆ ಜನರು ವ್ಯಥವಾಗಿ ಹೆದರುತ್ತಾರೆ. ಯಾವನು ಆತ್ಮವನ್ನು ನಿಗ್ರಹಿಸುತ್ತಾನೋ ಅವನನ್ನು ಯಮನು ಏನು ಮಾಡಿಯಾನು ? ಇಂದ್ರಿಯ ನಿಗ್ರಹವಿಲ್ಲದಿರುವವನಿಗೆ ಭೂತಗಳಿಂದಲೂ, ಪ್ರಾಣಿಗಳಿಂದಲೂ ಹೆದರಿಕೆ ಇರುತ್ತದೆ. ಅವರಿಗೆ ಬುದ್ಧಿ ಕಲಿಸುವದಕ್ಕೆ ಬ್ರಹ್ಮನು ಶಿಕ್ಷೆಯನ್ನು ನಿರ್ಮಿಸಿರುವನು. ದಂಡವು ಭೂತಗಳನ್ನೂ, ಪ್ರಜೆಗಳನ್ನೂ ಕಾಪಾಡುತ್ತದೆ. ಪಾಪಿಗಳನ್ನೂ ತಡೆಗಟ್ಟುತ್ತದೆ. ದಂಡವನ್ನು ತಡೆಗಟ್ಟುವದು ಅಸಾಧ್ಯ. ಕಪ್ಪಾಗಿ ಯುವಕನಾಗಿ ಕೆಂಪಾಗಿರುವ ಕಣ್ಣುಳ್ಳವನು ಎಲ್ಲ ಪ್ರಾಣಿಗಳಿಗೆ ಭಯವನ್ನುಂಟುಮಾಡುತ್ತಾನೆ. ದಂಡವಾದರೋ ಮನುಷ್ಯರಿಗೆ ಶಿಕ್ಷೆಯನ್ನು ಕೊಡುತ್ತದೆ. ಅದರಲ್ಲಿಯೇ ಧರ್ಮವು ನಿಂತಿರುತ್ತದೆ.

ಆಶ್ರಮದಲ್ಲಿರುವ ಪ್ರಾಣಿಗಳಿಗೆ ದಮವೇ ಉತ್ತಮ ವ್ರತವು. ಆ ದಮವನ್ನು ಧರಿಸಿರುವವರ ಗುರುತನ್ನು ಹೇಳುತ್ತೇನೆ. ಕೃಪಣತೆ ಇಲ್ಲದಿರುವಿಕೆ, ಕಠಿಣವಾಗಿಲ್ಲದಿರುವಿಕೆ, ಸಂತೋಷ, ಶ್ರದ್ಧೆ, ಅಸೂಯೆ ಇಲ್ಲದಿರುವದು. ಗುರುಪೂಜಾ, ದಯೆ, ಸುಳ್ಳು ಹೇಳದಿರುವಿಕೆ ಇವುಗಳನ್ನು ಶಾಂತ ಬುದ್ಧಿಯುಳ್ಳ ಋಷಿಗಳು ದಮನದ ಚಿನ್ಹೆಗಳೆನ್ನುತ್ತಾರೆ.

ಧರ್ಮ ಮೋಕ್ಷ, ಸ್ವರ್ಗಗಳು ದಯೆಗೆ ಅಧೀನವಾಗಿವೆ. ಅವನಿಗೆ ಅವಮಾನವಾದರೆ ಕೋಪ ಬರುವಂತೆಯೂ ಇಲ್ಲ. ಗೌರವಿಸಿದರೆ ಸಂತೋಷಪಡುವಂತೆಯೂ ಇಲ್ಲ. ಸುಖದುಃಖಗಳು ಸಮನಾಗಿದ್ದರೆ ಅವನೇ ಶಾಂತನೆಂದು ಹೇಳುತ್ತಾರೆ. ಅವಮಾನ ಮಾಡಿದರೂ ಸುಖದಿಂದ ಇರುತ್ತಾನೆ. ಸುಖವಾಗಿ ಏಳುತ್ತಾನೆ. ಆದ್ದರಿಂದ ಶ್ರೇಯಸ್ಸಿಗೆ ಬೇಕಾದ ಬುದ್ಧಿಯನ್ನು ನೋಡಿಕೊಳ್ಳಬೇಕು. ಅವಮಾನಮಾಡುವವನು ನಾಶವಾಗುತ್ತಾನೆ. ಅಪಮಾನವಾದರೆ ಯೋಚಿಸಲೇಬಾರದು. ಅವನಿಗೆ ಪಾಪವೇ ಇರುವದಿಲ್ಲ. ತನ್ನ ಧರ್ಮವನ್ನುಮಾಡುತ್ತ ಪರಧರ್ಮವನ್ನು ದೂಷಿಸಬಾರದು. ತನ್ನನ್ನು ಧರ್ಮವಂತನೆಂದೇ ತಿಳಿಯಬೇಕು. ಬರಿಯ ದೋಷದಿಂದ ತಿರಸ್ಕರಿಸಿ ಕೊಳ್ಳಬಾರದು. ಮಂತ್ರ ಕ್ರಿಯೆಗಳಿಂದ ಅಥವಾ ಜನ್ಮದಿಂದ ತಿರಸ್ಕರಿಸಿ ಕೊಳ್ಳಬಾರದು.

ಕೆಟ್ಟುಹೋದ ಲಿಂಗವನ್ನು ಬಟ್ಟೆಯು ಮುಚ್ಚುವಂತೆ ದಮವು ಎಲ್ಲವನ್ನು ಮುಚ್ಚುತ್ತದೆ. ದಯವಿಲ್ಲದೇ ಅಧ್ಯಯನಮಾಡುವದು ವ್ಯರ್ಥ. ಅವರು ದಮದ ವಿಷಯ ತಿಳಿಯರು. ಜ್ಞಾನಕ್ಕೆ ದಮವೇ ಕಾರಣವು ದಮವೇ ಪುರಾತನ ಧರ್ಮವು. ಯಾವನು ತನ್ನನ್ನು ಆದರಿಂದ ತೂಗಿಕೊಳ್ಳುತ್ತಾನೋ ಅವನು ಚಿನ್ನದ ತಕ್ಕಡಿಯಲ್ಲಿ ತೂಗಿಕೊಂಡಂತೆ. ಅವನು ಆದರಿಂದಲೇ ಧೈರ್ಯವಂತನೆಂದು ಎನಿಸಿಕೊಳ್ಳುತ್ತಾನೆ. ಅದಕ್ಕೆ ಅವನು ಮೋಹಗೊಂಡಿರುವನು. ಎಲ್ಲ ವ್ರತಗಳಿಗೂ ದಮವೇ ಕಾರಣ. ವೇದತತ್ವವನ್ನು ಬಲ್ಲ ಬ್ರಾಹ್ಮಣನು ವೇದದ ಆರು ಅಂಗಗಳನ್ನು ಓದಿದರೂ ದಯವಿಲ್ಲದಿದ್ದರೆ ಅವನಿಗೆ ಗೌರವವೇ ಇರುವದಿಲ್ಲ. ದಮವಿಲ್ಲದವರನ್ನು ಅವರು ಷಡಂಗಗಳನ್ನು ಓದಿದ್ದರೂ ಅವುಗಳು ಅವನನ್ನು ಪವಿತ್ರವನ್ನಾಗಿ ಮಾಡುವದಿಲ್ಲ. ಬ್ರಾಹ್ಮಣನು ಅಪಮಾನವಾಯಿತೆಂದರೆ ಅಮೃತವನ್ನು ಕುಡಿದಂತೆ ತೃಪ್ತಿಪಡಬೇಕು. ಬಹುಮಾನದಿಂದ ವಿಷಯವನ್ನು ಕುಡಿದಂತೆ ಅಸಹ್ಯ ಪಡಬೇಕು. ಅವಮಾನ ಹೊಂದೋಣದರಿಂದ ತಪಸ್ಸಿನ ವೃದ್ಧಿಯೂ, ಸಮ್ಮಾನ ದಿಂದ ತಪಸ್ಸಿನ ನಾಶವೂ ಉಂಟಾಗುತ್ತದೆ. ಗೌರವಿಸಿ ಪೂಜಿಸಲ್ಪಟ್ಟ ಬ್ರಾಹ್ಮಣನು ಕರೆದ ಹಸುವಿನಂತೆ ಬರಿದಾಗುತ್ತಾನೆ. ಅನಂತರ ಹಸುವಿಗೆ ನೀರನ್ನೂ ಹಾಕಿ ಸಮಾಧಾನ ಮಾಡುವಂತೆ ಇವನು ಜಪದಿಂದಲೂ, ಹೋಮದಿಂದಲೂ ಮತ್ತೆ ಮೊದಲಿನ ತಪಸ್ಸನ್ನು ಹೊಂದಬೇಕು. ನಮ್ಮ ಮೇಲೆ ಕೋಪ ಮಾಡಿ ಬಯ್ಯುವವನು ನಮ್ಮ ಪಾಪವನ್ನು ತೆಗೆದುಕೊಂಡು ಅವನ ಪುಣ್ಯವನ್ನು ಕೊಡುವದರಿಂದ ಇವನಂತಹ ಸ್ನೇಹಿತನೇ ಇಲ್ಲವೆಂದು ಹೇಳಬೇಕು. ಬೈದವರನ್ನು ಬೈಯದೆ ತನ್ನ ಮನಸ್ಸನ್ನು ಬೈಯುವಿಕೆಯಿಂದ ಹಾಗೆ ತಿರುಗಿಸಿದರೆ ತನ್ನ ಆತ್ಮನನ್ನು ಅಮೃತದಿಂದ ಚುಮುಕಿಸಿಕೊಳ್ಳುತ್ತಾನೆ. ಕಪಾಲವನ್ನು ಹಿಡಿದಿರುವುದು, ಮರದ ಬುಡದಲ್ಲಿರುವದು, ಹರಕು ಬಟ್ಟೆ ಹೊದೆಯುವದು. ಒಬ್ಬಂಟಿಗನಾಗಿರುವದು, ಆಶೆಪಡದಿರುವುದು, ಬ್ರಹ್ಮಚರ್ಯದಿಂದಿರುವುದು ಇವು ಉತ್ತಮಗತಿಯನ್ನು ಕೊಡುತ್ತವೆ. ಕಾಮ-ಕ್ರೋಧಗಳನ್ನು ಜಯಿಸಿದರೆ ಅರಣ್ಯಕೇಕೆ ಹೋಗಬೇಕು ಅನ್ನದಿಂದ ದೇಹವನ್ನು ಪೋಷಿಸಿಕೊಳ್ಳುತ್ತೇವೆ. ಕುಲವು ಶೀಲದಿಂದ

ಪ್ರಕಾಶಿಸುತ್ತದೆ. ಪ್ರಾಣಗಳನ್ನು ಮಿತ್ರನು ರಕ್ಷಿಸಿ ಹಿಡಿಯುತ್ತಾನೆ. ಕ್ರೋಧವನ್ನು ಸತ್ಯವು ಹಿಡಿಯುತ್ತದೆ. ಯಾವನು ಹುಟ್ಟಿದ ಕೋಪವನ್ನು ತಡೆಯುತ್ತಾನೆಯೋ ಅವನು ಆ ಕೋಪ ಹಿಡಿಯುವುದರಿಂದಲೇ ಜಯಿಸಿದರೆ ಆ ವೀರನಿಗೆ ಸಮಾನನು ಯಾವನಿದ್ದಾನೆ ? ತನ್ನಲ್ಲಿ ಹುಟ್ಟಿದ ಕೋಪವನ್ನು ಯಾವನು ಭಯಪಟ್ಟು ಹಿಡಿಯುತ್ತಾನೆಯೋ ಅವನು ಉತ್ತಮವಾದ ಸಾರಥಿಯೆಂದು ತಿಳಿಯುತ್ತೇನೆ. ಅವನು ಆಶೆಯಲ್ಲಿ ಸಾವಕಾಶ ಪಡುವದಿಲ್ಲ. ಇದೇ ಬ್ರಹ್ಮನ ಗುಟ್ಟು. ಹಿಂದಿನಿಂದಲೂ ಬ್ರಹ್ಮದ ರಾಶಿಯು ಧರ್ಮದ ಹೃದಯವನ್ನೇ ನಿನಗೆ ಹೇಳಿದ್ದೇನೆ. ಯಾಗ ಮಾಡಿದವರು, ತಪಸ್ವಿಗಳು, ದಯಾವಂತರು, ಇವರ ಲೋಕಗಳೇ ಬೇರೆ. ಇವೆಲ್ಲವೂ ಉತ್ಕೃಷ್ಟವಾದವುಗಳು.

ಕ್ಷಮೆಯಿಂದ ಕೂಡಿದವನನ್ನು ಜನರು ಅಶಕ್ತನೆಂದು ತಿಳಿಯುತ್ತಾರೆ. ಇದೊಂದೆ ಕ್ಷಮಾವಂತರಿಗೆ ಇರುವ ದೋಷವು ಮತ್ತೊಂದಿಲ್ಲ. ಇದು ಒಂದು ದೋಷವಲ್ಲ. ಕ್ಷಮೆಯು ಜ್ಞಾನಿಗಳಿಗೆ ಬಲವು. ಕ್ಷಮೆಯನ್ನು ತಿಳಿಯದವನು ಇಷ್ಟಾರ್ಥಗಳನ್ನು ಹೊಂದುವುದೇ ಇಲ್ಲ. ಕೋಪಿಷ್ಠನಾಗಿ ಮಾಡುವ ಜಪ, ಹೋಮ, ಪೂಜೆ, ಇವೆಲ್ಲವೂ ತೂತು ಮಡಕೆಯಿಂದ ನೀರು ಸೋರಿ ಹೋಗುವಂತೆ ಅದೆಲ್ಲವೂ ಹೋಗುತ್ತದೆ.

ಈ ಧರ್ಮಾಧ್ಯಾಯವನ್ನು ಬೆಳಿಗ್ಗೆ ಎದ್ದು ಓದುವವನು ಧರ್ಮದ ಹಡಗವನ್ನು ಹತ್ತಿ ಎಷ್ಟೇ ಕಷ್ಟ ಬಂದರೂ ಪಾರಾಗುತ್ತಾನೆ. ಈ ಧರ್ಮಾಧ್ಯಾಯವನ್ನು ಕೇಳಿಸುವವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಅಲ್ಲಿಂದ ಬೀಳುವದೇ ಇಲ್ಲ. ಈ ಧರ್ಮಸರ್ವಸ್ವವನ್ನು ಕೇಳು. ಕೇಳಿ ಮನಸ್ಸಿನಲ್ಲಿ ಟ್ಟುಕೊ ತನಗೆ ಕೆಟ್ಟದಾಗಿರುವನದನ್ನು ಇತರರಿಗೆ ಮಾಡಬಾರದು. ಪರರ ಹೆಂಡತಿಯನ್ನು ತಾಯಿಯಂತೆಯೂ, ಪರರ ಪದಾರ್ಥವನ್ನು ಮಣ್ಣುಹಂಟೆಯಂತೆಯೂ, ಎಲ್ಲ ಪ್ರಾಣಿಗಳನ್ನು ತನ್ನಂತೆಯೂ ನೋಡತಕ್ಕವನು ಅಂದರೆ ಜ್ಞಾನಿಯು. ಯಾವನ ಅಡಿಗೆಯು ವೈಶ್ವದೇವಕ್ಕೋಸ್ಕರವೋ, ಯಾವನ ಜೀವಿತವು ಸತ್ಯಕ್ಕೋಸ್ಕರವೋ, ಯಾವನ ರತಿಯು ಮಕ್ಕಳನ್ನು ಹುಟ್ಟಿಸುವುದಕ್ಕೋ, ಅವನ ಜೀವನವು ಸ್ವರ್ಗವೆಂದು ತಿಳಿಯಬೇಕು. ಧಾತುಗಳಿಗೆ ಚಿನ್ನವು ಹೇಗೆ ಉತ್ತಮವೋ ಹಾಗೆ ಇದೇ ಎಲ್ಲಕ್ಕೂ ಸಾರವು. ಇದು ಸರ್ವಭೂತಗಳಿಗೂ ಹಿತವಾದದ್ದು. ಓದಿದರೆ ಅಮೃತವನ್ನು ಕುಡಿದಂತೆ.

**ಪುಲಸ್ತ್ಯರು** :- ಈ ರೀತಿ ಧರ್ಮದ ಗುಟ್ಟನ್ನೆಲ್ಲ ಆ ಶುನಸ್ಸಖನಿಗೆ ಹೇಳಿ ಅವರೊಡನೆಯೇ ಅವರೆಲ್ಲರೂ ಸ್ವಲ್ಪದೂರ ಕಾಡಿನೊಳಗೆ ಹೋಗಿ ಒಂದು ದೊಡ್ಡದಾದ ಕಮಲದಿಂದ ಕೂಡಿದ ಸರೋವರವನ್ನು ನೋಡಿದರು. ಅವರು ಆಗ ಕೆಳಗೆ ಇಳಿದು ಆ ಮೃಣಾಲನಾಳವನ್ನು ಕಿತ್ತು ದಡದಲ್ಲಿ ಇಟ್ಟುಕೊಂಡು ನೀರಿನಲ್ಲಿ ಮಾಡಬೇಕಾದ ಸಂಧ್ಯಾವಂದನಾದಿ ಕರ್ಮಗಳೆಲ್ಲವನ್ನೂ ಮಾಡಿದರು. ಆ ನೀರಿನಿಂದ ಮೇಲಕ್ಕೆ ಬಂದು ಎಲ್ಲರೂ ಸೇರಿ ಆ ಮೃಣಾಳಗಳನ್ನು ಅಲ್ಲಿ ಕಾಣದೆ ಇಂತೆಂದರು.

**ಋಷಿಗಳು** :- ನಾವು ಮೊದಲೆ ಹಸಿವೆಯಿಂದ ಕಸವಿಸಿಪಡುತ್ತಲಿದ್ದೇವೆ. ನಮ್ಮ ಈ ಕಮಲದ ದೇಟುಗಳನ್ನು ಯಾವ ಪಾಪಿಯು ಅಪಹರಿಸಿರಬಹುದು ? ಆ ದುಷ್ಟನು ಹೊಟ್ಟೆಬಾಕನೆ ಇರಬೇಕು. ಅವರಿಗೆ ಒಬ್ಬರಿಗೊಬ್ಬರ ಮೇಲೆಯೇ ಸಂದೇಹ. ಎಲ್ಲರೂ ಈ ಕಮಲನಾಳವನ್ನು ಕದ್ದವರು ಯಾರು ಎಂದು ಕೇಳುವವರು ? ದಾರಿಯಲ್ಲಿ ಅವರೆಲ್ಲರೂ ಪ್ರತಿಜ್ಞೆ ಮಾಡಿದರು. ಒಬ್ಬೊಬ್ಬರ ಪ್ರತಿಜ್ಞೆಯು ಒಂದೊಂದು ತೆರನಾಗಿತ್ತು.

**ಕಾತ್ಯಾಯನ :-** ಈ ಕಮಲದ ದೇಟನ್ನು ಕದ್ದವನು ಎಲ್ಲ ಕಡೆಗೂ ಕಳ್ಳನೇ ಆಗಲಿ. ಆಡುವು ಇಟ್ಟ ವಸ್ತುವನ್ನು ಅಪಹರಿಸುವವನೂ ಲೋಭಿ ಆಗಲಿ. ಸುಳ್ಳು ಸಾಕ್ಷಿ ನುಡಿಯಲಿ. ಈ ಮೃಣಾಲವನ್ನು ತುಡುಗುಮಾಡಿದವನು ಮಾಡುವ ಧರ್ಮವೆಲ್ಲವೂ ಕೇವಲ ದಂಭ ಮೂಲಕವಾಗಲಿ. ಮತ್ತು ರಾಜನ ಗುಲಾಮನಾಗಿ ಸೇವೆ ಸಲ್ಲಿಸಲಿ. ಮದ್ಯಮಾಂಸಗಳನ್ನು ತಿನ್ನಲಿ. ಸುಳ್ಳು ಮಾತನಾಡಲಿ. ಅಕಾಲದಲ್ಲಿ ಮುಪ್ಪು ಅಡರಿ ಕಷ್ಟದಿಂದ ಜೀವಿಸಲಿ. ತೆರವು ತೆಗೆದುಕೊಂಡು ಹೆಣ್ಣುಮಕ್ಕಳನ್ನು ವರನಿಗೆ ಕೊಡಲಿ.

ಈ ಕಮಲದ ನಾಳವನ್ನು ಅಪಹರಿಸಿದವನು ಋತುಕಾಲವಿಲ್ಲದಾಗ ಸಂಭೋಗ ಮಾಡಿದ ಪಾಪಹೊಂದಲಿ. ಹಗಲು ನಿದ್ದೆಮಾಡಿದ ಪಾಪವು ತಟ್ಟಲಿ. ಒಬ್ಬರಿಗೊಬ್ಬರು ಕರಾರು ಮಾಡಿಕೊಂಡು ಒಬ್ಬರಿಗೊಬ್ಬರ ಮನೆಗೆ ಅತಿಥಿಯಾಗಿ ಬರಲಿ. ಈ ತಾವರೆಯ ದೇಟನ್ನು ಕದ್ದವನು ಒಂದೇ ಬಾವಿಯಿರುವ ಗ್ರಾಮದಲ್ಲಿ ಶೂದ್ರ ಹೆಣ್ಣು ಮಕ್ಕಳನ್ನು ಇಟ್ಟುಕೊಂಡು ವಾಸಮಾಡಿದ ಬ್ರಾಹ್ಮಣನಿಗೆ ಬರುವ ಪಾಪ ಲೋಕವನ್ನು ಹೊಂದಲಿ.

**ಭಾರದ್ವಾಜ :-** ಈ ಪಂಕಜದ ಕೆಳಗಿನ ನಾಳದ ತುಂಡನ್ನು ಕದ್ದವನು ಎಲ್ಲ ಜನರಲ್ಲಿ ಅತ್ಯಂತ ಕ್ರೂರನೂ, ಅಹಂಕಾರಿಯೂ, ಕಪಟಿಯೂ, ಚಾಡಿಕೋರನೂ ಆಗಲಿ, ಬೈದವರಿಗೆ ತಿರುಗಿ ಬೈಯುವ, ಹೊಡೆದವರಿಗೆ ಮರಳಿ ಹೊಡೆಯುವ ಪಾಪಗಳಿಗೆ ಭಾಜನನಾಗಲಿ, ರಸವಿಕ್ರಯ, ಅನ್ನದ ಮಾರಾಟ ಮಾಡುವವನ ಪಾಪವು ಈ ಬಿಸಚೋರನಿಗೆ ಬರಲಿ. ಅತಿಥಿ ಬಂದಾಗ ಕೆಟ್ಟ ಅಡಿಗೆಯನ್ನು ಬಡಿಸಿ, ತಾನು ಮಾತ್ರ ಒಳ್ಳೇ ರುಚಿಕರ ಊಟಮಾಡುವ ಸ್ವಾರ್ಥಿ ಮನುಷ್ಯನಿಗೆ ಬರುವ ಪಾಪವೂ. ಯಾವಾಗಲೂ ಶೂದ್ರರ ಅನ್ನ ಉಣ್ಣುವುದರಿಂದ ಪ್ರಾಪ್ತವಾಗುವ ಪಾತಕವೂ ಈ ಬಿಸಚೋರನಿಗೆ ಬರಲಿ ದಾನಕೊಟ್ಟ ಮೇಲೆ, ಅದನ್ನು ಜನರಿಗೆ ಹೇಳಿ ಹೊಗಳಿ ಕೊಳ್ಳುವವನು ಮತ್ತು ಪರಸ್ತ್ರೀಗಮನಮಾಡಿದವನ ಪಾಪವು, ಏಕಾಏಕಿಯಾಗಿ ಮೃಷ್ಟಾನ್ನ ತಿಂದವನ ಪಾಪವು ಮೃಣಾಲ ಚೋರನಿಗೆ ಬರಲಿ.

**ವಿಶ್ವಾಮಿತ್ರ :-** ದುರ್ಬುದ್ಧಿಯಿಂದ ತಾಯಿ-ತಂದೆಗಳನ್ನು ಅವಮಾನಮಾಡಿದ ನರನಿಗೆ ಬರುವ ಪಾಪವು, ಮಗಳಿಂದ-ಬದುಕುವವರಿಗೆ ಬರುವ ಪಾಪವು ಈ ಮೃಣಾಲಚೋರನಿಗೆ ಬರಲಿ. ಪರಪಾಕಭಕ್ಷಣ, ಪರಸ್ತ್ರೀಗಮನ, ಹಸುಗಳ ಮಾರಾಟ ಮಾಡುವವನಿಗೆ ಬರುವ ಪಾಪವು ಈ ತಾವರೆಯ ದಂಟನ್ನು ಕದ್ದವನಿಗೆ ಬರಲಿ. ಈ ಪದ್ಮನಾಳವನ್ನು ಕದ್ದವನು. ನಿಂತರ ಹೆರವರ ಮನೆಯಲ್ಲಿ ಜೀತದಾಳಾಗಿ ದುಡಿಯಲಿ, ಜನ್ಮಜನ್ಮಾಂತರದಲ್ಲಿ ಅವನಿಗೆ ಕೋಪಾಂಧತೆಯು ಇರಲಿ ಹಾಗೂ ಅವನು ಎಲ್ಲ ಧರ್ಮ-ಕರ್ಮರಹಿತನಾಗಲಿ.

**ಶುನಸ್ಸಖ :-** ಈ ಕಮಲದನಾಳವನ್ನು ಕದ್ದವನು ಗೃಹಸ್ಥನಾಗಿದ್ದರೂ, ನ್ಯಾಯದಿಂದ ವೇದಶಾಸ್ತ್ರಗಳನ್ನು ಅಧ್ಯಯನಮಾಡಿ, ಬಂದ ಅತಿಥಿ ಅಭ್ಯಾಗತರಿಗೆ ಆದರದ ಆತಿಥ್ಯನೀಡುತ್ತ ಸರ್ವದಾ ಸತ್ಯನಿಷ್ಠನಾಗಿ ಇರಲಿ. ವಿಧಿಪೂರ್ವಕವಾಗಿ ಅಗ್ನಿ ಹೋತ್ರ ವ್ರತವನ್ನು ಕೈಕೊಂಡು ಪ್ರತಿದಿನ ಯಜ್ಞವನ್ನು ಮಾಡಲಿ ಹಾಗೂ ಬ್ರಹ್ಮಲೋಕವನ್ನು ಕೊನೆಗೆ ಪ್ರಯಾಣ ಮಾಡಲಿ.

**ಋಷಿಗಳು :-** ಶುನಸ್ಸಖನೆ, ನೀನು ಮಾಡಿದ ಶಪಥವು ನಮ್ಮೆಲ್ಲರ ಶಪಥಕ್ಕಿಂತ ವಿಲಕ್ಷಣವಾಗಿವೆ. ನಾವೆಲ್ಲರೂ ಕದ್ದವನಿಗೆ ಅನಿಷ್ಟವಾಗಲಿ ಎಂದು ಶಪಥಮಾಡಿದರೆ, ನೀನು

ಬ್ರಾಹ್ಮಣರಿಗೆ ಇಷ್ಟವಾದುದೆಲ್ಲವೂ ಆ ಬಿಸಚೋರನಿಗೆ ಆಗಲಿ ಎಂದು ಶಪಥ ಪೂರ್ವಕವಾಗಿ ಆಶಂಸಿಸುತ್ತಲಿರುವೆ. ಆದುದರಿಂದ ನೀನೆ ಆ ಕಮಲನಾಳದ ಚೋರನು.

**ಶುನಸ್ಸಖ :-** ನೀವು ಹೇಳಿದ್ದು ನಿಜ. ಬ್ರಾಹ್ಮಣರೆ, ನಾನೇ ಆ ಕಮಲದ ದೇಟುಗಳನ್ನು ಬಚ್ಚಿಟ್ಟಿರುತ್ತೇನೆ. ಅವುಗಳ ಮೇಲಿನ ಆಶೆಯಿಂದಲ್ಲ. ಆದರೆ ನಿಮ್ಮ ಮುಖದಿಂದ ಧರ್ಮದ ಮರ್ಮವನ್ನು ಅರಿತುಕೊಳ್ಳಬೇಕೆಂಬ ಹೆಬ್ಬಯಕೆಯಿಂದ. ನಾನು ಬೇರೆ ಯಾರೂ ಅಲ್ಲ. ಸಾಕ್ಷಾತ್ ದೇವೇಂದ್ರ. ಮುನಿವರ್ಯರೆ, ನಿಮಗೆ ಲೋಭ ಎನ್ನುವದೇ ಇಲ್ಲ. ಆಶೆಯಿಲ್ಲ. ಸ್ವಾರ್ಥವಿಲ್ಲ. ಈ ನಿಮ್ಮ ವೈರಾಗ್ಯ ಭಾಗ್ಯದಿಂದ, ಪುಣ್ಯ ಲೋಕಗಳನ್ನೆಲ್ಲ ನೀವು ಗೆದ್ದಿದ್ದೀರಿ. ಈಗ ಸ್ವರ್ಗಕ್ಕೆ ಹೋಗೋಣ. ಈ ವಿಮಾನವನ್ನು ಆರೋಹಣ ಮಾಡಿರಿ. ಶುನಸ್ಸಖನ ಈ ನುಡಿಗಳನ್ನು ಮುನಿಗಳು ಕೇಳಿದರು ಅವನೇ ಇಂದ್ರನೆಂದು ತಿಳಿದು ಸಂತಸವಾಯಿತು. ಇಂದ್ರನನ್ನು ಕುರಿತು ಅವರು ನುಡಿದರು. ಆ ಮುನಿಗಳಲ್ಲಿ ಒಬ್ಬೊಬ್ಬರೂ ಮಾತುಗಾರಿಕೆಯಲ್ಲಿ ಬಲ್ಲಿದರು.

**ಋಷಿಗಳು :-** ಈ ಪುಷ್ಕರಕ್ಷೇತ್ರಕ್ಕೆ ಬಂದು, ನಟ್ಟನಡುವಿನ ಈ ಪುಷ್ಕರ ತೀರ್ಥದಲ್ಲಿ ಸ್ನಾನಮಾಡಿ ಮೂರುರಾತ್ರಿ ಉಪವಾಸವಿದ್ದ ನರನು ಅನಂತಫಲವನ್ನು ಹೊಂದುವನು. ಅರಣ್ಯದಲ್ಲಿದ್ದು ಹನ್ನೆರಡು ವರ್ಷದ ದೀರ್ಘ ದೀಕ್ಷೆ ತೆಗೆದುಕೊಂಡು ಯಜ್ಞ, ತಪ, ಮಾಡುವವದರಿಂದ ಬರುವ ಪುಣ್ಯ ಫಲವು ಈ ಪುಷ್ಕರಕ್ಷೇತ್ರ ಯಾತ್ರೆಯಿಂದ ತಾನಾಗಿಯೇ ಪ್ರಾಪ್ತವಾಗುವದು. ಇದಕ್ಕೆ ಸಂದೇಹವಿಲ್ಲ. ವಿಧಿ ಪೂರ್ವಕವಾಗಿ ಪುಷ್ಕರ ಕ್ಷೇತ್ರದ ಯಾತ್ರೆಗಳಿಂದ ನರನು ಎಂದೂ ದುರ್ಗತಿ ಹೊಂದುವುದಿಲ್ಲ. ಕುಟುಂಬ ಪರಿವಾರ ಸಹಿತ ಅವನು ಉದ್ಧೃತನಾಗುವನು. ಕೊನೆಗೆ ಬ್ರಹ್ಮದೇವರ ಸ್ಥಾನ ಹೊಂದಿ, ಒಂದು ಕಲ್ಪಕಾಲ ಸುಖದಿಂದ ಇರುವನು.

**ಪುಲಸ್ತ್ಯ :-** ಇಂದ್ರದೇವರಿಂದ ತಮಗೆ ಅಭಿಮತವಾದ ವರಗಳನ್ನು ಪಡೆದು ಕೊಂಡರು. ಆ ಮುನಿಗಳು ಆನಂದದಿಂದ ಸುರರಾಜನೊಂದಿಗೆ ಅವರೆಲ್ಲರೂ ಸ್ವರ್ಗವನ್ನು ಸೇರಿದರು. ಸ್ವರ್ಗವೆಂದರೆ ಬಗೆಬಗೆಯ ಭೋಗಾನುರಾಗಗಳ ಆಗರ. ಬಯಸಿದ ಸುಖ, ಬೇಡಿದ ಭೋಗ, ಅಪೇಕ್ಷಿಸಿದ ಸೌಭಾಗ್ಯ ಅಲ್ಲಿ ಯಾವದಕ್ಕೂ ಕೊರತೆಯಿಲ್ಲ. ಬಾಯಿಂದ ಬರುವಷ್ಟರಲ್ಲಿ ಮನೋರಥಗಳೆಲ್ಲವೂ ಸಿದ್ಧವಾಗಿ ಎದುರು ಬಂದು ನಿಲ್ಲುತ್ತವೆ ಆ ಸ್ವರ್ಗದಲ್ಲಿ. ಇಂತಹ ಪ್ರಾಣಿಮಾತ್ರರಿಗೆಲ್ಲ ಅತ್ಯಂತ ಸ್ಪೃಹಣೀಯವಾದ ಸ್ವರ್ಗಲೋಕದ ಸಕಲ ಭೋಗ-ಭಾಗ್ಯಗಳನ್ನು ಇಂದ್ರನು ಕೂಡ ಮಾಡಿದರೂ ಅವರು ಯಾವುದಕ್ಕೂ ಆಶೆ ಪಡಲಿಲ್ಲ. ಯಾವ ಸ್ವರ್ಗ ಸೌಖ್ಯವನ್ನೂ ಬಯಸದೆ, ಅವರು ತಮ್ಮ ತಪೋನುಷ್ಠಾನದಲ್ಲಿ ನಿರತರಾದರು. ಈ ವೈರಾಗ್ಯದಿಂದ ಮತ್ತು ಭಗವದಾರಾಧನೆಯ ಪುಣ್ಯ ಪ್ರಭಾವದಿಂದ ಅವರು ಸ್ವರ್ಗವನ್ನು ತಮ್ಮ ಪುಣ್ಯದಿಂದ ಗೆದ್ದು ಅನಂತರ ಅಲ್ಲಿಗೆ ಪ್ರಯಾಣಮಾಡಿದರು. ಪುಣ್ಯಚರಿತರೂ, ಪಾವನಮೂರ್ತಿಗಳೂ, ತಪೋಧನರೂ ಆದ ಈ ಮಾನನೀಯ ಮುನಿ ಮಹಾತ್ಮರ ಪವಿತ್ರವಾದ ಚರಿತ್ರವನ್ನು ಭಕ್ತಿಯಿಂದ ಶ್ರವಣಮಾಡಿದ ಮನುಷ್ಯನು ತಾನು ಮಾಡಿದ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಸ್ವರ್ಗಲೋಕದಲ್ಲಿ ಸುಪ್ರತಿಷ್ಠಿತನಾಗುತ್ತಾನೆ.

*ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

**ಕಾತ್ಯಾಯನ :-** ಈ ಕಮಲದ ದೇಟನ್ನು ಕದ್ದವನು ಎಲ್ಲ ಕಡೆಗೂ ಕಳ್ಳನೇ ಆಗಲಿ. ಆಡುವು ಇಟ್ಟ ವಸ್ತುವನ್ನು ಅಪಹರಿಸುವವನೂ ಲೋಭಿ ಆಗಲಿ. ಸುಳ್ಳು ಸಾಕ್ಷಿ ನುಡಿಯಲಿ. ಈ ಮೃಣಾಲವನ್ನು ತುಡುಗುಮಾಡಿದವನು ಮಾಡುವ ಧರ್ಮವೆಲ್ಲವೂ ಕೇವಲ ದಂಭ ಮೂಲಕವಾಗಲಿ. ಮತ್ತು ರಾಜನ ಗುಲಾಮನಾಗಿ ಸೇವೆ ಸಲ್ಲಿಸಲಿ. ಮದ್ಯಮಾಂಸಗಳನ್ನು ತಿನ್ನಲಿ. ಸುಳ್ಳು ಮಾತನಾಡಲಿ. ಅಕಾಲದಲ್ಲಿ ಮುಪ್ಪು ಅಡರಿ ಕಷ್ಟದಿಂದ ಜೀವಿಸಲಿ. ತೆರವು ತೆಗೆದುಕೊಂಡು ಹೆಣ್ಣುಮಕ್ಕಳನ್ನು ವರನಿಗೆ ಕೊಡಲಿ.

ಈ ಕಮಲದ ನಾಳವನ್ನು ಅಪಹರಿಸಿದವನು ಋತುಕಾಲವಿಲ್ಲದಾಗ ಸಂಭೋಗ ಮಾಡಿದ ಪಾಪಹೊಂದಲಿ. ಹಗಲು ನಿದ್ದೆಮಾಡಿದ ಪಾಪವು ತಟ್ಟಲಿ. ಒಬ್ಬರಿಗೊಬ್ಬರು ಕರಾರು ಮಾಡಿಕೊಂಡು ಒಬ್ಬರಿಗೊಬ್ಬರ ಮನೆಗೆ ಅತಿಥಿಯಾಗಿ ಬರಲಿ. ಈ ತಾವರೆಯ ದೇಟನ್ನು ಕದ್ದವನು ಒಂದೇ ಬಾವಿಯಿರುವ ಗ್ರಾಮದಲ್ಲಿ ಶೂದ್ರ ಹೆಣ್ಣು ಮಕ್ಕಳನ್ನು ಇಟ್ಟುಕೊಂಡು ವಾಸಮಾಡಿದ ಬ್ರಾಹ್ಮಣನಿಗೆ ಬರುವ ಪಾಪ ಲೋಕವನ್ನು ಹೊಂದಲಿ.

**ಭಾರದ್ವಾಜ :-** ಈ ಪಂಕಜದ ಕೆಳಗಿನ ನಾಳದ ತುಂಡನ್ನು ಕದ್ದವನು ಎಲ್ಲ ಜನರಲ್ಲಿ ಅತ್ಯಂತ ಕ್ರೂರನೂ, ಅಹಂಕಾರಿಯೂ, ಕಪಟಿಯೂ, ಚಾಡಿಕೋರನೂ ಆಗಲಿ, ಬೈದವರಿಗೆ ತಿರುಗಿ ಬೈಯುವ, ಹೊಡೆದವರಿಗೆ ಮರಳಿ ಹೊಡೆಯುವ ಪಾಪಗಳಿಗೆ ಭಾಜನನಾಗಲಿ, ರಸವಿಕ್ರಯ, ಅನ್ನದ ಮಾರಾಟ ಮಾಡುವವನ ಪಾಪವು ಈ ಬಿಸಚೋರನಿಗೆ ಬರಲಿ. ಅತಿಥಿ ಬಂದಾಗ ಕೆಟ್ಟ ಅಡಿಗೆಯನ್ನು ಬಡಿಸಿ, ತಾನು ಮಾತ್ರ ಒಳ್ಳೇ ರುಚಿಕರ ಊಟಮಾಡುವ ಸ್ವಾರ್ಥಿ ಮನುಷ್ಯನಿಗೆ ಬರುವ ಪಾಪವೂ. ಯಾವಾಗಲೂ ಶೂದ್ರರ ಅನ್ನ ಉಣ್ಣುವುದರಿಂದ ಪ್ರಾಪ್ತವಾಗುವ ಪಾತಕವೂ ಈ ಬಿಸಚೋರನಿಗೆ ಬರಲಿ ದಾನಕೊಟ್ಟ ಮೇಲೆ, ಅದನ್ನು ಜನರಿಗೆ ಹೇಳಿ ಹೊಗಳಿ ಕೊಳ್ಳುವವನು ಮತ್ತು ಪರಸ್ತ್ರೀಗಮನಮಾಡಿದವನ ಪಾಪವು, ಏಕಾಏಕಿಯಾಗಿ ಮೃಷ್ಟಾನ್ನ ತಿಂದವನ ಪಾಪವು ಮೃಣಾಲ ಚೋರನಿಗೆ ಬರಲಿ.

**ವಿಶ್ವಾಮಿತ್ರ :-** ದುರ್ಬುದ್ಧಿಯಿಂದ ತಾಯಿ-ತಂದೆಗಳನ್ನು ಅವಮಾನಮಾಡಿದ ನರನಿಗೆ ಬರುವ ಪಾಪವು, ಮಗಳಿಂದ-ಬದುಕುವವರಿಗೆ ಬರುವ ಪಾಪವು ಈ ಮೃಣಾಲಚೋರನಿಗೆ ಬರಲಿ. ಪರಪಾಕಭಕ್ಷಣ, ಪರಸ್ತ್ರೀಗಮನ, ಹಸುಗಳ ಮಾರಾಟ ಮಾಡುವವನಿಗೆ ಬರುವ ಪಾಪವು ಈ ತಾವರೆಯ ದಂಟನ್ನು ಕದ್ದವನಿಗೆ ಬರಲಿ. ಈ ಪದ್ಮನಾಳವನ್ನು ಕದ್ದವನು. ನಿಂತರ ಹೆರವರ ಮನೆಯಲ್ಲಿ ಜೀತದಾಳಾಗಿ ದುಡಿಯಲಿ, ಜನ್ಮಜನ್ಮಾಂತರದಲ್ಲಿ ಅವನಿಗೆ ಕೋಪಾಂಧತೆಯು ಇರಲಿ ಹಾಗೂ ಅವನು ಎಲ್ಲ ಧರ್ಮ-ಕರ್ಮರಹಿತನಾಗಲಿ.

**ಶುನಸ್ಸಖ :-** ಈ ಕಮಲದನಾಳವನ್ನು ಕದ್ದವನು ಗೃಹಸ್ಥನಾಗಿದ್ದರೂ, ನ್ಯಾಯದಿಂದ ವೇದಶಾಸ್ತ್ರಗಳನ್ನು ಅಧ್ಯಯನಮಾಡಿ, ಬಂದ ಅತಿಥಿ ಅಭ್ಯಾಗತರಿಗೆ ಆದರದ ಅತಿಥ್ಯನೀಡುತ್ತ ಸರ್ವದಾ ಸತ್ಯನಿಷ್ಠನಾಗಿ ಇರಲಿ. ವಿಧಿಪೂರ್ವಕವಾಗಿ ಅಗ್ನಿ ಹೋತ್ರ ವ್ರತವನ್ನು ಕೈಕೊಂಡು ಪ್ರತಿದಿನ ಯಜ್ಞವನ್ನು ಮಾಡಲಿ ಹಾಗೂ ಬ್ರಹ್ಮಲೋಕವನ್ನು ಕೊನೆಗೆ ಪ್ರಯಾಣ ಮಾಡಲಿ.

**ಋಷಿಗಳು :-** ಶುನಸ್ಸಖನೆ, ನೀನು ಮಾಡಿದ ಶಪಥವು ನಮ್ಮೆಲ್ಲರ ಶಪಥಕ್ಕಿಂತ ವಿಲಕ್ಷಣವಾಗಿವೆ. ನಾವೆಲ್ಲರೂ ಕದ್ದವನಿಗೆ ಅನಿಷ್ಟವಾಗಲಿ ಎಂದು ಶಪಥಮಾಡಿದರೆ, ನೀನು

ಬ್ರಾಹ್ಮಣರಿಗೆ ಇಷ್ಟವಾದುದೆಲ್ಲವೂ ಆ ಬಿಸಚೋರನಿಗೆ ಆಗಲಿ ಎಂದು ಶಪಥ ಪೂರ್ವಕವಾಗಿ ಆಶಂಸಿಸುತ್ತಲಿರುವೆ. ಆದುದರಿಂದ ನೀನೆ ಆ ಕಮಲನಾಳದ ಚೋರನು.

**ಶುನಸ್ಸಖ :-** ನೀವು ಹೇಳಿದ್ದು ನಿಜ. ಬ್ರಾಹ್ಮಣರೆ, ನಾನೇ ಆ ಕಮಲದ ದೇಟುಗಳನ್ನು ಬಚ್ಚಿಟ್ಟಿರುತ್ತೇನೆ. ಅವುಗಳ ಮೇಲಿನ ಆಶೆಯಿಂದಲ್ಲ. ಆದರೆ ನಿಮ್ಮ ಮುಖದಿಂದ ಧರ್ಮದ ಮರ್ಮವನ್ನು ಅರಿತುಕೊಳ್ಳಬೇಕೆಂಬ ಹೆಬ್ಬಯಕೆಯಿಂದ. ನಾನು ಬೇರೆ ಯಾರೂ ಅಲ್ಲ. ಸಾಕ್ಷಾತ್ ದೇವೇಂದ್ರ. ಮುನಿವರ್ಯರೆ, ನಿಮಗೆ ಲೋಭ ಎನ್ನುವದೇ ಇಲ್ಲ. ಆಶೆಯಿಲ್ಲ. ಸ್ವಾರ್ಥವಿಲ್ಲ. ಈ ನಿಮ್ಮ ವೈರಾಗ್ಯ ಭಾಗ್ಯದಿಂದ, ಪುಣ್ಯ ಲೋಕಗಳನ್ನೆಲ್ಲ ನೀವು ಗೆದ್ದಿದ್ದೀರಿ. ಈಗ ಸ್ವರ್ಗಕ್ಕೆ ಹೋಗೋಣ. ಈ ವಿಮಾನವನ್ನು ಆರೋಹಣ ಮಾಡಿರಿ. ಶುನಸ್ಸಖನ ಈ ನುಡಿಗಳನ್ನು ಮುನಿಗಳು ಕೇಳಿದರು ಅವನೇ ಇಂದ್ರನೆಂದು ತಿಳಿದು ಸಂತಸವಾಯಿತು. ಇಂದ್ರನನ್ನು ಕುರಿತು ಅವರು ನುಡಿದರು. ಆ ಮುನಿಗಳಲ್ಲಿ ಒಬ್ಬೊಬ್ಬರೂ ಮಾತುಗಾರಿಕೆಯಲ್ಲಿ ಬಲ್ಲಿದರು.

**ಋಷಿಗಳು :-** ಈ ಪುಷ್ಕರಕ್ಷೇತ್ರಕ್ಕೆ ಬಂದು, ನಟ್ಟನಡುವಿನ ಈ ಪುಷ್ಕರ ತೀರ್ಥದಲ್ಲಿ ಸ್ನಾನಮಾಡಿ ಮೂರುರಾತ್ರಿ ಉಪವಾಸವಿದ್ದ ನರನು ಅನಂತಫಲವನ್ನು ಹೊಂದುವನು. ಅರಣ್ಯದಲ್ಲಿದ್ದು ಹನ್ನೆರಡು ವರ್ಷದ ದೀರ್ಘ ದೀಕ್ಷೆ ತೆಗೆದುಕೊಂಡು ಯಜ್ಞ, ತಪ, ಮಾಡುವದರಿಂದ ಬರುವ ಪುಣ್ಯ ಫಲವು ಈ ಪುಷ್ಕರಕ್ಷೇತ್ರ ಯಾತ್ರೆಯಿಂದ ತಾನಾಗಿಯೇ ಪ್ರಾಪ್ತವಾಗುವದು. ಇದಕ್ಕೆ ಸಂದೇಹವಿಲ್ಲ. ವಿಧಿ ಪೂರ್ವಕವಾಗಿ ಪುಷ್ಕರ ಕ್ಷೇತ್ರದ ಯಾತ್ರೆಗಳಿಂದ ನರನು ಎಂದೂ ದುರ್ಗತಿ ಹೊಂದುವುದಿಲ್ಲ. ಕುಟುಂಬ ಪರಿವಾರ ಸಹಿತ ಅವನು ಉದ್ಧೃತನಾಗುವನು. ಕೊನೆಗೆ ಬ್ರಹ್ಮದೇವರ ಸ್ಥಾನ ಹೊಂದಿ, ಒಂದು ಕಲ್ಪಕಾಲ ಸುಖದಿಂದ ಇರುವನು.

**ಪುಲಸ್ತ್ಯ :-** ಇಂದ್ರದೇವರಿಂದ ತಮಗೆ ಅಭಿಮತವಾದ ವರಗಳನ್ನು ಪಡೆದು ಕೊಂಡರು. ಆ ಮುನಿಗಳು ಆನಂದದಿಂದ ಸುರರಾಜನೊಂದಿಗೆ ಅವರೆಲ್ಲರೂ ಸ್ವರ್ಗವನ್ನು ಸೇರಿದರು. ಸ್ವರ್ಗವೆಂದರೆ ಬಗೆಬಗೆಯ ಭೋಗಾನುರಾಗಗಳ ಆಗರ. ಬಯಸಿದ ಸುಖ, ಬೇಡಿದ ಭೋಗ, ಅಪೇಕ್ಷಿಸಿದ ಸೌಭಾಗ್ಯ ಅಲ್ಲಿ ಯಾವದಕ್ಕೂ ಕೊರತೆಯಿಲ್ಲ. ಬಾಯಿಂದ ಬರುವಷ್ಟರಲ್ಲಿ ಮನೋರಥಗಳೆಲ್ಲವೂ ಸಿದ್ಧವಾಗಿ ಎದುರು ಬಂದು ನಿಲ್ಲುತ್ತವೆ ಆ ಸ್ವರ್ಗದಲ್ಲಿ. ಇಂತಹ ಪ್ರಾಣಿಮಾತ್ರರಿಗೆಲ್ಲ ಅತ್ಯಂತ ಸ್ಪೃಹಣೀಯವಾದ ಸ್ವರ್ಗಲೋಕದ ಸಕಲ ಭೋಗ-ಭಾಗ್ಯಗಳನ್ನು ಇಂದ್ರನು ಕೂಡ ಮಾಡಿದರೂ ಅವರು ಯಾವುದಕ್ಕೂ ಆಶೆ ಪಡಲಿಲ್ಲ. ಯಾವ ಸ್ವರ್ಗ ಸೌಖ್ಯವನ್ನೂ ಬಯಸದೆ, ಅವರು ತಮ್ಮ ತಪೋನುಷ್ಠಾನದಲ್ಲಿ ನಿರತರಾದರು. ಈ ವೈರಾಗ್ಯದಿಂದ ಮತ್ತು ಭಗವದಾರಾಧನೆಯ ಪುಣ್ಯ ಪ್ರಭಾವದಿಂದ ಅವರು ಸ್ವರ್ಗವನ್ನು ತಮ್ಮ ಪುಣ್ಯದಿಂದ ಗೆದ್ದು ಅನಂತರ ಅಲ್ಲಿಗೆ ಪ್ರಯಾಣಮಾಡಿದರು. ಪುಣ್ಯಚರಿತರೂ, ಪಾವನಮೂರ್ತಿಗಳೂ, ತಪೋಧನರೂ ಆದ ಈ ಮಾನನೀಯ ಮುನಿ ಮಹಾತ್ಮರ ಪವಿತ್ರವಾದ ಚರಿತ್ರವನ್ನು ಭಕ್ತಿಯಿಂದ ಶ್ರವಣಮಾಡಿದ ಮನುಷ್ಯನು ತಾನು ಮಾಡಿದ ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಸ್ವರ್ಗಲೋಕದಲ್ಲಿ ಸುಪ್ರತಿಷ್ಠಿತನಾಗುತ್ತಾನೆ.

*ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

**ಭೀಷ್ಮ** :- ಈ ಕಥೆಯು ರಮ್ಯವಾದಷ್ಟೇ ಆಶ್ಚರ್ಯಕರವೂ ಆಗಿದೆ. ಇದು ಪಾಪನಾಶಿನಿ ಆಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಇದನ್ನು ಇದ್ದುದಿದ್ದಂತೆ ವಿಸ್ತಾರವಾಗಿ ನನಗೆ ಹೇಳಿರಿ. ಇದರ ಯಥಾರ್ಥ ಸ್ವರೂಪವನ್ನೇ ನಾನು ಕೇಳುತ್ತಿರುವದು. ಮಧ್ಯಮ ಪುಷ್ಕರದ ಮಹಿಮೆ, ಅನ್ನದ ಫಲ, ದಾನದ ಮಹಿಮೆಗಳನ್ನು ಋಷಿಗಳು ನಿರೂಪಣೆಮಾಡಿದರು. ವಿಷ್ಣುವು ಹೆಜ್ಜೆ ಇರಿಸಿದ ಚಿಕ್ಕ ಪುಷ್ಕರಣಿಯ ಉತ್ಪತ್ತಿಯು ಹೇಗಾಯಿತೆನ್ನುವದನ್ನು ಹೇಳಿರಿ.

**ಪುಲಸ್ತ್ಯ** :- ಹಿಂದೆ ರಥಂತರ ಕಲ್ಪದಲ್ಲಿ ಒಬ್ಬ ರಾಜನಿದ್ದನು. ಪುಷ್ಪವಾಹನ ಅವನ ಹೆಸರು. ಮೂರು ಲೋಕಗಳಲ್ಲಿಯೂ ಅವನ ಖ್ಯಾತಿ ಸೂರ್ಯನಿಗೆ ಸಮಾನವಾಗಿತ್ತು ಅವನ ತೇಜಸ್ಸು. ಈ ಪುಷ್ಪವಾಹನ ದೊರೆಯು ಉಗ್ರತಪವನ್ನು ಆಚರಿಸಿದನು. ಆದರಿಂದ ಚತುರ್ಮುಖ ಬ್ರಹ್ಮನಿಗೆ ಪ್ರೀತಿ ಉಂಟಾಯಿತು. ಬ್ರಹ್ಮನು ಆ ಅರಸನಿಗೆ ಒಂದು ಚಿನ್ನದ ತಾವರೆಯನ್ನು ಕರುಣಿಸಿದನು. ಅದರಲ್ಲಿ ಕುಳಿತು ಮನಬಂದ ಕಡೆಗೆ ಸ್ವೈರ ಸಂಚಾರ ಗೈಯುವ ಶಕ್ತಿಯನ್ನು ಅವನಿಗೆ ದಯಪಾಲಿಸಿದನು ಚತುರ್ಮುಖ. ಆ ವರದ ಬಲದಿಂದ ಪುಷ್ಪವಾಹನನು ಏಳು ದ್ವೀಪಗಳನ್ನು ಸುತ್ತಿದನು. ಮರ್ತ್ಯಲೋಕದಲ್ಲಿ ಎಲ್ಲೆಡೆಗೆ ಸಂಚರಿಸಿದನು. ಅವನೊಟ್ಟಿಗೆ ಋಷಿಗಳೂ ಇರುತ್ತಿದ್ದರು. ಆ ಋಷಿಗಳೊಂದಿಗೆ ಆ ರಾಜನು ಬ್ರಹ್ಮದೇವರು ಕೊಟ್ಟ, ಬೇಕಾದಲ್ಲಿ ಸಂಚರಿಸಬಹುದಾದ ಕಮಲರೂಪ ವಾಹನದಲ್ಲಿಯೇ ತಿರುಗಾಡುತ್ತಿದ್ದನು. ಸರ್ವತ್ರ ಅಪ್ರತಿಹತಗತಿಯಿಂದ ಸ್ವೈರಸಂಚರಣ ಶೀಲವಾದ ಆ ಕಮಲವಾಹನವು ಸರ್ವ ಜನರಿಂದಲೂ ಪೂಜಿತವಾಗಿತ್ತು. ಕಮಲಕ್ಕೆ ಪುಷ್ಕರ ಎಂದೂ ಹೆಸರು ಉಂಟು. ಪುಷ್ಕರ ವಾಹನನಾದ ರಾಜನು ನೆಲೆಸಿದ್ದರಿಂದ ಆ ದೇಶವು ಪುಷ್ಕರ ದ್ವೀಪವೆಂದು ಪ್ರಸಿದ್ಧವಾಯಿತು.

ಪುಷ್ಕರ ಎಂಬ ಹೆಸರುಳ್ಳ ಕಮಲರೂಪದ ಪುಷ್ಪವನ್ನು ಅವನಿಗೆ ವಾಹನವನ್ನಾಗಿ ಬ್ರಹ್ಮದೇವರು ಕೊಟ್ಟದ್ದೆ ಆ ರಾಜನಿಗೆ ಪುಷ್ಪವಾಹನ ಎಂದು ಹೆಸರು ಬರಲು ಹೇತುವಾಗಿತ್ತು. ಆ ಪುಷ್ಕರ ಪುಷ್ಪದ ಮೇಲೆ ಕುಳಿತುಕೊಂಡು ಅವನು ಎಲ್ಲೆಡೆಗೂ ಸಂಚರಿಸುತ್ತಿದ್ದನು. ವಿಧಾತನು ಕೊಟ್ಟ ಆ ತಾವರೆ ಹೂವಿನ ವಾಹನಕ್ಕೆ ಸಮನಾದ ವಾಹನವು ಈ ಪ್ರಪಂಚದಲ್ಲಿ ಬೇರೆ ಇರಲಿಲ್ಲ. ಈ ರಾಜನಿಗೂ ಮತ್ತೊಬ್ಬರು ಸಮರಿರಲಿಲ್ಲ. ಆ ರಾಜನಿಗೆ ತಕ್ಕದಾಗಿದ್ದಳು ಅವನ ತರುಣ ರಮಣಿ. ಅವಳೂ ತಪಸ್ವಿನಿ. ರಾಜ್ಯದ್ದಲಿಯ ಜನರೆಲ್ಲರೂ ಅವಳನ್ನು ವಂದಿಸುವವರೆ. ಲಾವಣ್ಯವತಿ ಎಂದು ಆ ಅರಸಿಯ ಹೆಸರು. ರೂಪಕ್ಕೆ ತಕ್ಕ ಹೆಸರು. ಹೆಸರಿಗೆ ತಕ್ಕ ಗುಣ. ಗುಣಕ್ಕೆ ಅನುಗುಣವಾಗಿ ಕೀರ್ತಿ. ಪಟ್ಟದರಸಿಯ ಅನುಪಮ ಲಾವಣ್ಯ, ತುಂಬು ತಾರುಣ್ಯ, ಸತೀತ್ವ, ಸದ್ಗುಣ ಮುಂತಾದವುಗಳಿಂದ ಮಹಾರಾಜನಿಗೆ ಲಾವಣ್ಯವತಿಯು ಅತ್ಯಂತ ಪ್ರೀತಿ ಪಾತ್ರಳು - ಶಿವನಿಗೆ ಸತಿ ಇದ್ದಂತೆ. ಆ ಮೆಚ್ಚಿನ ಮಡದಿಯಲ್ಲಿ ಆ ದೊರೆಗೆ ಸಾವಿರ ಜನ ಮಕ್ಕಳು ಜನಿಸಿದರು. ಒಬ್ಬೊಬ್ಬರು ಧರ್ಮಾತ್ಮರು. ಮೇಲಾಗಿ ಎಲ್ಲರೂ ಒಳ್ಳೇ ಬಿಲ್ಲಾಳುಗಳು. ಅಂತಹ ಹೆಂಡತಿ, ಇಂತಹ ಮಕ್ಕಳು, ಅಧಿಕಾರ, ವೈಭವ, ಸೌಭಾಗ್ಯ, ಸಂಪತ್ತು, ಸಂತಸ, ಮಾನವೀಯ ಜೀವಿತದಲ್ಲಿ ಬಯಸಬೇಕಾದುದ್ದೆಲ್ಲವೂ ಬೇಡದೆ, ಬಯಸದೆ ತಾನಾಗಿ

ಒದಗಿ ಬಂದಿತ್ತು. ಇಂತಹ ಸಮೃದ್ಧ ಜೀವನ, ಸಂಪನ್ನ ಬದುಕು ತನ್ನದು ಎಂದು ಹಿಗ್ಗಾಗಿತ್ತು ಮಹಾರಾಜನಿಗೆ. ಇಂತಹ ಭಾಗ್ಯಪೂರ್ಣವಾದ ತನ್ನ ವೈಭವದ ಜೀವನಕ್ಕೆ ತನ್ನ ಹಿಂದಿನ ಯಾವ ಪುಣ್ಯರಾಶಿ ಕಾರಣವಿರಬಹುದು ಎಂದುಕೊಳ್ಳುತ್ತಿದ್ದ ಒಮ್ಮೊಮ್ಮೆ ಆ ಮಹಾರಾಜ. ಒಂದು ದಿನ ಆ ರಾಜನಿದ್ದಲ್ಲಿಗೆ ದಯಮಾಡಿಸಿದ ಮಹಾನುಭಾವರಾದ ನಾರದಮುನಿ. ಮುನಿಯನ್ನು ಮನ್ನಿಸಿದ ಮಹಾರಾಜ. ಸ್ವಾಗತಮಾಡಿದ. ಅರ್ಘ್ಯನೀಡಿದ, ಆಸನಕೊಟ್ಟು ಕುಶಲ ಪ್ರಶ್ನೆಗೈದ. ಅನಂತರ ಹೀಗೆ ನುಡಿದ -

**ರಾಜ :-** ಮುನೀಂದ್ರನೆ, ಸುರರು ಕೂಡ ಬಯಸುವಂತಹ ಐಸಿರಿ ನನಗಿದೆ. ಸಿರಿಯಂತಹ ಮಡದಿ ನನಗೆ ದೊರೆತಿದ್ದಾಳೆ. ಇವುಗಳಿಂದ ಸ್ವರ್ಗ ಸೌಭಾಗ್ಯವನ್ನೇ ನಾನು ಗೆದ್ದುಕೊಂಡಂತಾಗಿದೆ. ನನ್ನ ಅತ್ಯಲ್ಪ ತಪಸ್ಸಿನಿಂದಲೇ ಬ್ರಹ್ಮದೇವನು ಸಂತುಷ್ಟನಾದ. ನನಗೆ ಒಂದು ಕಮಲ ಗೃಹವನ್ನು ಕರುಣಿಸಿದ್ದಾನೆ ಆ ವಿಧಾತ. ಅದರಲ್ಲಿ ಕೋಟ್ಯಾವಧಿ ರಾಜರು ಚತುರಂಗಬಲಸಹಿತರಾಗಿ ಒಳಗೆ ಹೊಕ್ಕರೂ ಎಲ್ಲಿರುವರೆಂಬುದು ಪತ್ತೆ ಆಗುವದಿಲ್ಲ. ಇಷ್ಟೆಲ್ಲ ಜನರನ್ನು ಹೊತ್ತುಕೊಂಡು ಆ ಪುಷ್ಕರ ವಾಹನವು ಗಗನ ಮಂಡಲದಲ್ಲಿ ಉಡ್ಡಾಣ ಮಾಡುತ್ತಿರುವಾಗ ಅದು ಹೋಗುತ್ತಲಿದೆ ಎಂಬುದೇ ಯಾರಿಗೂ ತಿಳಿಯುವದಿಲ್ಲ. ಅದು ಎಲ್ಲಿಗೆ ಹೇಗೆ ಹಾರಿ ಹೋಗುತ್ತದೆ ಚಿಕ್ಕೆ,ಚಂದ್ರರಿಗೂ ಗೊತ್ತಾಗುವದಿಲ್ಲ. ಅಂತಹ ವೇಗ ಗತಿಯುಳ್ಳ ವಾಹನವು ನನಗೆ ದೊರೆತದ್ದು ಯಾವ ಪುಣ್ಯದ ಫಲ? ಈ ಜನ್ಮದ ಫಲವೋ ಅಥವಾ ನಾನು ಜನ್ಮಾಂತರದಲ್ಲಿ ಹುಟ್ಟಿದ ತಾಯಿಯ ಹೊಟ್ಟೆಯ ಪುಣ್ಯವೊ ಅಥವಾ ಜನ್ಮಾಂತರದಲ್ಲಿ ಮಾಡಿದ ವಿಲಕ್ಷಣ ಧರ್ಮಕರ್ಮಗಳ ಪರಿಣಾಮವೊ ಈ ಎಲ್ಲ ಮಕ್ಕಳ ಸುದೈವದ ಪ್ರಭಾವವೊ ಅಥವಾ ನನ್ನ ಮೆಚ್ಚಿನ ಮಡದಿಯಾದ ಲಾವಣ್ಯವತಿಯ ಪಾತಿವ್ರತ್ಯದ ಪುಣ್ಯದ ಪ್ರತಾಪವೊ ? ಇವರಾದರೂ ಈ ಜನ್ಮದಲ್ಲಿ ಇಂತಹ ಭೋಗ ಭಾಗ್ಯಗಳು ಒದಗಿ ಬರಬೇಕಾದರೆ ಎಂತಹ ಸುಕೃತವನ್ನು ಮಾಡಿರಬಹುದು ! ಇದೆಲ್ಲವನ್ನು ತಿಳಿದುಕೊಳ್ಳಬೇಕೆಂದು ಕುತೂಹಲ ಉಂಟಾಗಿದೆ ನನಗೆ. ತಾವು ತಿಳಿಸುವ ಕೃಪೆ ಮಾಡಿರಿ.

**ಪುಲಸ್ತ್ಯ :-** ಪುಷ್ಪವಾಹನನ ಈ ಪ್ರಶ್ನೆಯನ್ನು ಕೇಳಿ ನಾರದರು ತಮ್ಮ ದಿವ್ಯದೃಷ್ಟಿಯಿಂದ ಅವನ ಜನ್ಮಾಂತರದ ಇತಿಹಾಸವನ್ನು ತುಸು ಪರೀಕ್ಷಿಸಿದರು. ಅನಂತರ ಅವನಿಗೆ ಹೀಗೆ ತಿಳಿಸಿದರು -

ನಾರದ :- ಪೊಡವಿಯ ಒಡೆಯ, ನಿನ್ನ ಜನ್ಮಾಂತರದ ವೃತ್ತಾಂತವು ಅತ್ಯದ್ಭುತ ವಾಗಿದೆ. ಅದನ್ನೆಲ್ಲ ಬಿತ್ತರಿಸುವೆನು ಕೇಳು. ನೀನು ಹಿಂದಿನ ಜನ್ಮದಲ್ಲಿ ಹುಟ್ಟಿದ್ದು ಬೇಡರ ಕುಲದಲ್ಲಿ. ಬಹಳ ಕ್ರೂರವಾಗಿತ್ತು ನಿನ್ನ ಕುಲ, ಕೀಳಾಗಿತ್ತು ಗೈಮೆ. ಅನುದಿನವೂ ನೀನು ಪಾಪಕೃತ್ಯಗಳನ್ನು ಮಾಡುತ್ತಲೇ ಇದ್ದಿ. ನಿನ್ನ ದೇಹವು ದೃಢವಾಗಿದ್ದರೂ ದುರ್ಗಂಧ ಪೂರಿತವಾಗಿತ್ತು. ಕಪ್ಪು ಉಗುರು, ದಪ್ಪ ತೊಗಲು, ದುರ್ನಾತ ಹೊಡೆಯುವ ಅಂಗಾಂಗಗಳು. ಮೈತುಂಬ ಕಾಡು ಒಡವೆ, ಕ್ರೂರ ಸ್ವಭಾವ, ಇಂತಹ ವಿಕಾರ ಸ್ವರೂಪ. ನಿನಗೆ ಆಗ ಒಳ್ಳೆಯ ಗೆಳೆಯರಾಗಲಿ, ಮಕ್ಕಳಾಗಲಿ, ಬಾಂಧವರಾಗಲಿ, ತಾಯಿಯಾಗಲಿ, ತಂಗಿಯರಾಗಲಿ ಇರಲಿಲ್ಲ. ಇದ್ದವರೆಲ್ಲರೂ ಶುದ್ಧ ಅಯೋಗ್ಯರೂ, ದುರ್ಗುಣಿಗಳೂ ಆಗಿದ್ದರು. ಅವರಾರಿಗೂ ನಿನ್ನ ಮೇಲೆ ಪ್ರೀತಿ ಇರಲಿಲ್ಲ.

ಆ ಜನ್ಮದಲ್ಲಿಯೂ ನಿನಗೆ ಅತ್ಯಂತ ಪ್ರೀತ್ಯಾಸ್ಪದಳಾದವಳೆಂದರೆ ಇಂದು ನಿನ್ನ ಮಡದಿಯಾದ ಈ ಲಾವಣ್ಯವತಿಯೇ. ಆಗಲೂ ಇವಳು ನಿನಗೆ ಮೆಚ್ಚಿನ ಮಡದಿಯೇ ಆಗಿದ್ದಳು. ಹೀಗಿರುವಾಗ ಒಂದು ಸಲ ಭೀಕರವಾದ ಕ್ಷಾಮವು ತಲೆದೋರಿತು. ಆ ಬರಗಾಲದಲ್ಲಿ ನೀನು ಹಸಿವೆಯಿಂದ ಕಂಗಲಾಗಿದ್ದಿ. ಎಲ್ಲೆಲ್ಲಿಯೂ ಸುತ್ತಾಡಿದಿ. ಎಲ್ಲಿ ಹೋದರೂ ನಿನಗೆ ತಿನ್ನಲು ಏನೂ ದೊರಕಿಲ್ಲ. ಹಾಗೆಯೇ ಮುಂದೆ ನಡೆದೆ. ಅಲ್ಲಿ ಒಂದು ತಿಳಿನೀರಿನ ಕೊಳ, ಕೊಳದ ತುಂಬ ತಾವರೆಗಳು. ಆಗ ನೀನು ಆ ಕಮಲ ಕುಸುಮಗಳನ್ನು ಕಿತ್ತುಕೊಂಡೆ. ವೈದಿಶ ಎಂಬ ಪಟ್ಟಣಕ್ಕೆ ನಡೆದೆ. ನೀನು ಕೊಳದಿಂದ ಕಿತ್ತು ತಂದ ತಾವರೆಗಳನ್ನು ಮಾರಬೇಕೆಂದು ಆ ನಗರದಲ್ಲೆಲ್ಲ ನೀನು ಸುತ್ತಾಡಿದೆ. ಆದರೆ ಅಲ್ಲಿಯ ಆ ಕಮಲ ಕುಸುಮಗಳನ್ನು ಕೊಳ್ಳಲು ಯಾರೂ ಮುಂದೆ ಬರಲಿಲ್ಲ. ನಿನಗೋ ಹಸಿವೆ, ಬಾಯಾರಿಕೆ. ಹೀಗೆ ಹಸಿವು ನೀರಡಿಕೆಯಿಂದ ಬೆಂದು ಬಸವಳಿದು ನೀನು ನಿನ್ನ ಮಡದಿಯೊಂದಿಗೆ ಒಂದು ಮನೆಯ ಅಂಗಳದಲ್ಲಿ ಕುಳಿತುಕೊಂಡೆ. ಅಲ್ಲಿಯೇ ಹೊತ್ತು ಮುಳುಗಿ ಇರುಳು ಆಯಿತು. ಕತ್ತಲೆ ಕವಿಯಿತು. ನೀವಿಬ್ಬರೂ ಕ್ಷುದ್ರಾಕ್ರಾಂತರಾಗಿ ರಾತ್ರಿಯಲ್ಲಿ ಅಲ್ಲಿಯೇ ತಂಗಿದಿರಿ. ಒಂದು ಮಂಗಳ ಧ್ವನಿಯು ನಿಮಗೆ ಕೇಳಿ ಬಂದಿತು. ಆ ಶುಭಕರ ಸದ್ದು ತೇಲಿ ಬರುವಲ್ಲಿಗೆ ನೀವಿಬ್ಬರೂ ತೆವಳುತ್ತ ಹೋದರಿ. ಅಲ್ಲಿ ಅನೇಕ ಜನರು ಸೇರಿ ವಿಷ್ಣುವಿನ ಪೂಜೆ ನಡೆಸಿದ್ದರು. ಮಂಡಲದ ಮಧ್ಯದಲ್ಲಿ ಶ್ರೀಹರಿಯ ದಿವ್ಯಮೂರ್ತಿಯು ವಿರಾಜಿಸುತ್ತಿತ್ತು. ಅನಂಗವತಿ ಎಂಬ ವೇಶ್ಯೆಯು ವಿಭೂತಿ ದ್ವಾದಶ ವ್ರತವನ್ನು ಮಾಡಿ ಮುಗಿಸಿದ್ದಳು. ಅಂದು ಮಾಘಶುದ್ಧದ್ವಾದಶಿ. ಅಂದು ಉದ್ಯಾಪನೆ ಉಪ್ಪಿನ ಗುಡ್ಡವನ್ನು ಗುರುವಿಗೆ ಅವಳು ಶ್ಯಯಾದಾನದೊಂದಿಗೆ ನಿವೇದಿಸ ಹೊರಟಿದ್ದಳು. ಹಾಸಿಗೆಗೆ ತಕ್ಕ ದಿಂಬು ಮೇಲ್ಹಾಸು ಎಲ್ಲವನ್ನೂ ಸಜ್ಜುಗೊಳಿಸಿ ಇರಿಸಲಾಗಿತ್ತು. ಗುರುವಿಗೆ ಕೊಡಬೇಕಾದ ಮುಕುಂದನ ಚಿನ್ನದ ಪ್ರತಿಮೆಯನ್ನು ಅಲಂಕರಿಸಲಾಗಿತ್ತು.

ಭಗವಂತನ ಬಂಗಾರದಮೂರ್ತಿಯನ್ನು ನೀವಿಬ್ಬರೂ ನಿರೀಕ್ಷಿಸಿದಿರಿ. ನೀವು ದಾರಿಯಲ್ಲಿ ಬರುವಾಗ ಕೊಳದಿಂದ ಕಿತ್ತು ತಂದ ಕಮಲ ಕುಸುಮಗಳನ್ನು ಈ ಭಗವಂತನ ಪ್ರತಿಮೆಗೆ ಕೊಟ್ಟು ಏಕೆ ಅಲಂಕರಿಸಬಾರದು ? ವ್ಯಥವಾಗಿ ಈ ಹೊಂದಾವರೆಗಳನ್ನು ಕಂಡ ಕಂಡವರಿಗೆ ಮಾರುವದಕ್ಕಿಂತ ಈ ಭಗವನ್ಮೂರ್ತಿಯನ್ನು ಅಲಂಕರಿಸಲು ಉಪಯೋಗಿಸಿದರೆ ಎಷ್ಟು ಚೆನ್ನ. ಎಂಬ ಸದ್ಬುದ್ಧಿಯು ನಿಮಗೆ ಉದಿಸಿತು. ಭಗವಂತನ ವಿಷಯದಲ್ಲಿ ಅತ್ಯಾದರ ಯುಕ್ತವಾದ ಭಕ್ತಿಭಾವವು ಉದಿಸಿನಿಂತಿತ್ತು. ನಿಮ್ಮಿಬ್ಬರು ದಂಪತಿಗಳ ಹೃದಯದಲ್ಲಿ ಆಗ, ಕೂಡಲೇ ನೀವಿಬ್ಬರೂ ಭಕ್ತಿಯ ಉದ್ರೇಕದಿಂದ ಆ ವೇಶ್ಯೆಯು ಉಪ್ಪಿನ ಬೆಟ್ಟದ ಮೇಲೆ ಕೂಡಿಸಿರುವ ಕೇಶವನ ಪ್ರತಿಮೆಗೆ ನೀವು ತಂದ ಸುಂದರವಾದ ಕಮಲ ಪುಷ್ಪಗಳನ್ನು ಏರಿಸಿದಿರಿ. ಅಲಂಕಾರ ಮಾಡಿದಿರಿ. ಮತ್ತು ದಾನಕೊಡಲು ಸಜ್ಜುಗೊಳಿಸಿ ಇಟ್ಟ ಹಾಸಿಗೆ ಮೇಲೆ ಅನೇಕ ಪದ್ಮ ಪುಷ್ಪಗಳನ್ನು ಇರಿಸಿ ಅಲಂಕಾರ ಮಾಡಿದಿರಿ.

ಇದರಿಂದ ಅನಂಗವತಿ ಎಂಬ ಸೂಳೆಗೆ ಸಂತೋಷವಾಯಿತು. ''ಮುನ್ನೂರು ಬಂಗಾರದ ನಾಣ್ಯಗಳನ್ನು ಈ ಪದ್ಮಪುಷ್ಪಗಳನ್ನು ತಂದು ದೇವರ ಮೂರ್ತಿಯನ್ನು ಅಲಂಕರಿಸಿದ ದಂಪತಿಗಳಿಗೆ ಕೊಡಿರಿ. ಮತ್ತು ಮೂರು ಪಲ ಚಿನ್ನವನ್ನು ಅವರಿಗೆ ನೀಡಿರಿ'' ಎಂದು ಅವಳು ತನ್ನ ಆಳುಗಳಿಗೆ ಆದೇಶವಿತ್ತಳು. ಆದರೆ ನೀವು ಮಾತ್ರ ಆ ಹಣವನ್ನಾಗಲಿ,

ಚಿನ್ನವನ್ನಾಗಲಿ, ಕಮಲಪುಷ್ಪಗಳಿಗೆ ಪ್ರತಿಯಾಗಿ ತೆಗೆದುಕೊಳ್ಳಲಿಲ್ಲ. ಭಗವಂತನ ಸೇವೆಯೆಂದು ಕೊಟ್ಟಿದ್ದಿರಲ್ಲವೆ ನೀವು ಆ ಕುಸುಮಗಳನ್ನು ! ಭಕ್ತಿಭಾವದಿಂದ ಹದಗೊಂಡ ನಿಮ್ಮ ಹೃದಯದಲ್ಲಿ ಆಶೆಗೆ ಅವಕಾಶವೇ ಇರಲಿಲ್ಲ.

ಇದನ್ನು ನೋಡಿ ಅನಂಗವತಿಗೆ ನಿಮ್ಮ ಮೇಲೆ ಇನ್ನೂ ಪ್ರೀತಿ ಹೆಚ್ಚಾಯಿತು. ಕೂಡಲೇ ಅವಳು ತನ್ನ ಪರಿಚಾರಕರಿಗೆ ಆಜ್ಞೆಮಾಡಿದಳು. ಅವರು ಬಗೆಬಗೆಯ ಭಕ್ಷ್ಯ, ಭೋಜ್ಯ, ಲೇಹ, ಚೋಷ್ಯಗಳನ್ನು, ಪಕ್ವಾನ್ನ ಮೃಷ್ಟಾನ್ನಗಳನ್ನು ನಿಮ್ಮ ಮುಂದೆ ತಂದಿರಿಸಿದರು. ಅವಳೂ ಆದರದಿಂದ ''ಬನ್ನಿರಿ'' ಈ ರುಚಿಕರವಾದ ಮೃಷ್ಟಾನ್ನವನ್ನು ತಿನ್ನಿರಿ. ಈ ಪಾನೀಯ ಕುಡಿಯಿರಿ ಎಂದು ಆದರದಿಂದ ನುಡಿದಳು. ಆಗ್ರಹಪಡಿಸಿದಳು. ಆದರೆ ನೀವಿಬ್ಬರೂ ಆಗ ಊಟ ಮಾಡಲಿಲ್ಲ, ವಿನಯದಿಂದ ನೀವು ಅವಳಿಗೆ ಹೇಳಿದಿರಿ - ''ಚೆಲುವೆ, ಇಂದು ನಾವು ಉಪವಾಸಮಾಡಬೇಕೆಂದು ನಿರ್ಧರಿಸಿದ್ದೇವೆ. ನಾಳೆ ಪಾರಣೆಮಾಡುವೆವು. ನಾವು ಹುಟ್ಟಿದಂದಿನಿಂದ ಕೀಳು ಕೃತ್ಯಗಳನ್ನೇಮಾಡುತ್ತ ಬಂದಿದ್ದೇವೆ. ವ್ರತನಿಷ್ಠಳೇ, ನಾವು ಪಾಪಿಷ್ಠರು. ನಿನ್ನ ಸಹವಾಸದಿಂದ ಮಾತ್ರ ಇವತ್ತು ನಮಗೆ ಸದ್ಬುದ್ಧಿ ಹುಟ್ಟಿದೆ. ಇಷ್ಟು ದಿನ ನಾವು ಮಾಡಿದ ಪಾಪಕ್ಕಾಗಿ ಇಂದು ಪ್ರಾಯಶ್ಚಿತ್ತವಾಗಲಿ. ಅದಕ್ಕಾಗಿ ಒಂದು ದಿನ ಉಪವಾಸ ಮಾಡುತ್ತೇವೆ. ನೀನು ಪೂಜಿಸುವ ಭಗವಂತನ ಸೇವೆಯನ್ನು ಯಥಾಶಕ್ತಿ ಸಲ್ಲಿಸುತ್ತೇವೆ. ಈ ಭಗವತ್ ಸೇವೆಗೆ ನಮಗೆ ಅವಕಾಶ ಮಾಡಿಕೊಡು ಎಂದು ಬೇಡಿಕೊಂಡರು.

ಅನಂಗವತಿಯ ಜೊತೆಗೆ ನೀವಿಬ್ಬರೂ ಅಂದು ರಾತ್ರಿ ಜಾಗರಣೆ ಮಾಡಿದಿರಿ. ಅಂದಿನ ಇರುಳೆಲ್ಲ ಭಗವಂತನ ಧ್ಯಾನ, ಗಾನ, ಭಜನೆಗಳಿಂದ ಕಳೆದಿರಿ. ಬೆಳಗಾಯಿತು, ಅನಂಗವತಿಯು ತನ್ನ ಗುರುವಿಗೆ ಶಯ್ಯಾದಾನ ಮಾಡಿದಳು. ಉಪ್ಪಿನ ಬೆಟ್ಟವನ್ನು ಕೊಟ್ಟಳು. ಒಂದು ಗ್ರಾಮವನ್ನೇ ಕೊಂಡು ಗುರುದಕ್ಷಿಣೆ ಎಂದು ಜ್ಞಾನಿಗಳಿಗೆ ಅರ್ಪಿಸಿದಳು. ಹನ್ನೆರಡು ಜನ ವಿಪ್ರರಿಗೆ ಗೋದಾನ ನೀಡಿದಳು. ಎಲ್ಲ ಗೋವುಗಳನ್ನು ಬಟ್ಟೆ ಹೊದಿಸಿ, ಚಿನ್ನದಿಂದ ಅಲಂಕರಿಸಿ ಶೃಂಗಾರಿಸಲಾಗಿತ್ತು. ಅನಂತರ ಇಷ್ಟ ಮಿತ್ರರಿಗೂ, ದೀನ ದಲಿತರಿಗೂ, ಕುರುಡ ಕುಂಟರಿಗೂ ಆದರದಿಂದ ಊಟಕ್ಕೆ ಹಾಕಿದಳು. ಅವರೊಡನೆ ಬೇಡರ ದಂಪತಿಗಳಾದ ನಿಮಗೂ ಆನಂದದಿಂದ ಅನ್ನ ಸಂತರ್ಪಣೆ ಮಾಡಿದಳು.

ಕೊಳದಿಂದ ಆಯ್ದು ತಂದ ಕಮಲಗಳನ್ನು ಕೇಶವನಿಗೆ ಅರ್ಪಿಸಿ ಕಳೆದ ಜನ್ಮದಲ್ಲಿ ನೀವು ಪೂಜೆ ಮಾಡಿದಿರಿ. ಆ ಪುಣ್ಯದಿಂದ ಈ ಜನ್ಮದಲ್ಲಿ ನೀವಿಬ್ಬರೂ ಸತಿ-ಪತಿಯರು ಅರಸು-ಅರಸಿಯರಾದಿರಿ. ಭಗವಂತನಿಗೆ ಭಕ್ತಿಯಿಂದ ಹೂವುಗಳನ್ನು ಏರಿಸಿದ್ದರಿಂದಲೇ ಈ ಜನ್ಮದಲ್ಲಿ ಇಂತಹ ಐಸಿರಿ ಭೋಗ-ಭಾಗ್ಯಗಳು ತುಷ್ಟಿ ತೃಪ್ತಿಗಳು ನಿಮ್ಮ ಜೀವನದಲ್ಲಿ ತುಳುಕುತ್ತಲಿವೆ. ಭಗವತ್ಪೂಜೆಯಿಂದ ನಿನ್ನ ಜನ್ಮಾಂತರದ ದುರಿತಗಳೆಲ್ಲವೂ ದೂರಾದವು. ಅನಿಷ್ಟಗಳೆಲ್ಲವೂ ಪರಿಹಾರವಾದವು. ಸುಂದರವಾದ ಈ ಕಮಲ ಮಂದಿರವು ನಿನ್ನದಾಯಿತು. ಇದರ ಪ್ರಭಾವದಿಂದ ನಿನ್ನಲ್ಲಿ ಭಕ್ತಿ ಉದಿಸಿತು. ಆ ಭಕ್ತಿಯಿಂದ ನೀನು ರಾಗ-ದ್ವೇಷಗಳನ್ನು ಬಟ್ಟೆ, ಲಾಭ-ಲೋಭವನ್ನು ಕಳೆದುಕೊಂಡೆ. ಸರ್ವಸಂಗವನ್ನು ಪರಿತ್ಯಜಿಸಿದೆ. ಉಗ್ರ ತಪವನ್ನು ಆಚರಿಸಿದೆ. ಅದರಿಂದ ಬ್ರಹ್ಮ ಪ್ರೀತನಾದ, ನಾಲ್ಕು ಮುಖದ ಆ ಪಿತಾಮಹನು ಈ ಕಮಲ ರೂಪವಾದ ವಾಹನವನ್ನು ನಿನಗೆ ನೀಡಿದ. ಇದು

ಕಾಮುಗಾಮಿ, ಅಂದರೆ ಮನ ಬಂದಲ್ಲಿ ಚಲಿಸಬಲ್ಲದು. ಇನ್ನು ಮುಂದೆ ನೀನು ಅದೇ ಪುಷ್ಕರ ದ್ವೀಪಕ್ಕೆ ತೆರಳು. ಅಲ್ಲಿ ವಿಭೂತಿ ದ್ವಾದಶಿ ವ್ರತವನ್ನು ಅನುಷ್ಠಾನ ಮಾಡು. ಅದರಿಂದ ನಿನಗೆ ದಿವ್ಯಗತಿಯು ಪ್ರಾಪ್ತವಾಗುವದು. ಕಲ್ಪಾಯುಷಿಯೂ ನೀನಾಗುವಿ. ಹೀಗೆ ಹೇಳಿ ಮಹಾಮುನಿ ಪ್ರಚೇತಸರು ಹೊರಟುಹೋದರು. ದೊರೆ ಪುಷ್ಪವಾಹನನು ಮುನಿ ಹೇಳಿದಂತೆ ಮಾಡಿದ. ಪುಷ್ಕರ ಕ್ಷೇತ್ರಕ್ಕೆ ಪ್ರಯಾಣಿಸಿದ.

ವಿಭೂತಿ ದ್ವಾದಶಿ ವ್ರತವನ್ನು ಯಥೋಕ್ತವಾಗಿ ಆಚರಿಸಿದ. ಇಂತಹ ಹನ್ನೆರಡು ವಿಭೂತಿ ದ್ವಾದಶಿ ವ್ರತಗಳನ್ನು ವಿಧಿಪೂರ್ವಕವಾಗಿ ಮಾಡಿದರೆ ಈ ಪೂರ್ಣ ವ್ರತವು ಯಥಾ ಸಾಂಗವಾಗಿ ನೆರವೇರಿದಂತಾಗುವುದು. ಈ ವ್ರತಾನುಷ್ಠಾನ ಕಾಲದಲ್ಲಿ ಜ್ಞಾನಿಗಳಿಗೆ ಯಥಾ ಶಕ್ತಿ ದಕ್ಷಿಣೆ ಕೊಡಬೇಕು. ಮೊದಲಿನ ದ್ವಾದಶಿ ಗೋದಾನ ಮಾಡಬೇಕು. ನಡುವಿನ ದ್ವಾದಶಿಯೆಂದು ಭೂದಾನ, ಕೊನೆಯ ದ್ವಾದಶಿಯಂದು ಸುವರ್ಣ ದಾನ ನೀಡಬೇಕು. ಇದರಲ್ಲಿ ಹೆಚ್ಚು ಹೆಚ್ಚು ಗೋದಾನ ಮಾಡುವುದು ಉತ್ತಮ ಪಕ್ಷ. ಭೂದಾನ ಮಧ್ಯಮ ಪಕ್ಷ. ಸುವರ್ಣ ದಾನ ಕನಿಷ್ಠ ಪಕ್ಷ. ಉತ್ತಮ ಕಲ್ಪಕ್ಕೆ ಬ್ರಹ್ಮನೇ ಅಧಿದೇವತೆ. ಮಧ್ಯಮಕ್ಕೆ ವಿಷ್ಣು, ಕನಿಷ್ಠ ಪಕ್ಷಕ್ಕೆ ಮಹಾದೇವರು. ಈ ವಿಭೂತಿ ದ್ವಾದಶಿ ವ್ರತವನ್ನು ಮಾಡಿದರೆ ಮಹತ್ಫಲ. ಕೇಳಿದರೂ ಪಾಪ ನಾಶ. ಇದರ ವಿಧಿ ವಿಧಾನಗಳನ್ನು ಮತ್ತೊಬ್ಬರಿಗೆ ಹೇಳಿದರೆ ಮೈ ಮೇಲಿನ ಕೂದಲುಗಳಷ್ಟು ವರ್ಷ ದೇವಲೋಕ ನಿವಾಸವು ದೊರಕುವದು.

**ಉತ್ತಮವ್ರತ** :- ಇನ್ನು ಮೇಲೆ ವ್ರತಗಳಲ್ಲಿ ಶ್ರೇಷ್ಠವಾದ ಉತ್ತಮ ವ್ರತದ ವಿಷಯವನ್ನು ಹೇಳುತ್ತೇನೆ. ಇದರಿಂದ ಮಹಾ ಪಾತಕಗಳು ಪರಿಹಾರವಾಗುವವೆಂದು ಸ್ವಯಂ ಶಿವನೇ ಹೇಳಿದ್ದಾನೆ. ಹಗಲು ಉಪವಾಸ, ರಾತ್ರಿಮಾತ್ರ ಊಟ, ಕುಟುಂಬಿಯಾದ ಜ್ಞಾನಿಗಳಿಗೆ ಗೋದಾನ, ಅದರೊಟ್ಟಿಗೆ ಚಿನ್ನದ ಚಕ್ರವನ್ನು, ತ್ರಿಶೂಲವನ್ನು ಮಾಡಿಸಿ ಕೊಡಬೇಕು. ಅದರೊಡನೆ ಉಟ್ಟುಕೊಳ್ಳಲು ಹಾಗೂ ಹೊದ್ದುಕೊಳ್ಳಲು ಜತೆಧೋತರಗಳನ್ನೂ ಕೊಡಬೇಕು. ಇದಕ್ಕೆ **ಉತ್ತಮವ್ರತ** ಎನ್ನುವರು. ಒಂದು ತಿಂಗಳವರೆಗೆ ಇಂಥ ಉತ್ತಮ ವ್ರತವನ್ನು ಮಾಡಿದ ಮನುಷ್ಯನ ಪಂಚಮಹಾಪಾತಕಾದಿ ದೋಷಗಳೆಲ್ಲವೂ ಪರಿಹಾರವಾಗುವವು. ಮುಂದೆ ಅವನು ಕೈಲಾಸ ಪರ್ವತದಲ್ಲಿ ಚಿರಕಾಲ ಆನಂದದಿಂದ ವಾಸಮಾಡುವನು.

**ರುದ್ರವ್ರತ** :- ಒಪ್ಪತ್ತು, ಅದೂ ರಾತ್ರಿ ಹೊತ್ತು ಮಾತ್ರ ಊಟ ಮಾಡಿ, ಕರು ಸಹಿತವಾದ ಹಸುವನ್ನು ಸೇವೆ ಮಾಡುತ್ತಿರಬೇಕು. ಹೀಗೆ ಒಂದು ತಿಂಗಳ ವ್ರತಮಾಡಿ ಕೊನೆಗೆ ಎಳ್ಳಿನಿಂದ ಒಂದು ಹಸುವನ್ನುಮಾಡಿ ದಾನಕೊಡಬೇಕು. ಇದಕ್ಕೆ **ರುದ್ರವ್ರತ**ವೆಂದು ಹೆಸರು. ಇದರ ಅನುಷ್ಠಾನದಿಂದ ಪಾಪ ಪರಿಹಾರ. ದುಃಖನಾಶ. ಕೊನೆಗೆ ಶಿವಪದ ಪ್ರಾಪ್ತಿ.

**ನೀಲವ್ರತ** :- ಒಂದು ವರ್ಷದವರೆಗೆ ಧಾರಣೆ-ಪಾರಣೆ. ಒಂದು ದಿನ ಬಿಟ್ಟು ಒಂದು ದಿನ ಊಟ ಅದೂ ರಾತ್ರಿಯಲ್ಲಿ ಹೀಗೆ ಒಂದು ಉಪವಾಸ ಒಂದು ಊಟ ಮಾಡುತ್ತ ಒಂದು ವರ್ಷ ಕಾಲ ಭಗವಂತನ ಸೇವೆ ಮಾಡಬೇಕು. ಕೊನೆಯಲ್ಲಿ ಬಂಗಾರದ ತಾವರೆಯನ್ನು ಮಾಡಿ, ಸಕ್ಕರೆ ತುಂಬಿದ ಪಾತ್ರೆಯಲ್ಲಿಟ್ಟು ದಾನ ಕೊಡಬೇಕು. ಅದರ ಜೊತೆಗೆ ಒಂದು ಎತ್ತನ್ನೂ ದಾನಮಾಡಬೇಕು ಇದರಿಂದ ವೈಕುಂಠಲೋಕ ಪ್ರಾಪ್ತಿ. ಇದಕ್ಕೆ **ನೀಲವ್ರತ** ಎಂದು ಹೆಸರು.

**ಕಾಮವ್ರತ :-** ಚಾತುರ್ಮಾಸ ಕಾಲದಲ್ಲಿ ಎಂದರೆ ಆಷಾಢ, ಶ್ರಾವಣ, ಭಾದ್ರಪದ ಆಶ್ವೀಜ ಈ ನಾಲ್ಕು ತಿಂಗಳ ಅಭ್ಯಂಗ ಸ್ನಾನವನ್ನು ವರ್ಜಿಸಬೇಕು. ಪ್ರತಿ ದಿನವೂ ಒಂದು ಜ್ಞಾನಿಗಳ ಕುಟುಂಬಕ್ಕೆ ಸಾಕಾಗುವಷ್ಟು ಭೋಜನ ಸಾಮಗ್ರಿಗಳನ್ನು ದಾನ ನೀಡಬೇಕು. ಇದರಿಂದ ವೈಕುಂಠಲೋಕ ಲಭಿಸುವದು. ಚೈತ್ರ, ವೈಶಾಖ ಮಾಸಗಳಲ್ಲಿ ಹಾಲು-ಮೊಸರು, ತುಪ್ಪ, ಸಕ್ಕರೆ, ಬೆಲ್ಲಗಳನ್ನು ಬಿಟ್ಟು ಬಿಡಬೇಕು. ಎರಡು ತಿಂಗಳು ಪೂರ್ತಿ ಪ್ರತಿ ದಿನವೂ ಗೌರಿಯ ಸೇವೆಯನ್ನು ಮಾಡಬೇಕು. ಕೊನೆಯಲ್ಲಿ ಬ್ರಾಹ್ಮಣ ದಂಪತಿಗಳನ್ನು ಕರೆದು ಪೂಜೆಮಾಡಬೇಕು. ಹೊಸ ಬಟ್ಟೆಗಳನ್ನು ಹೊದಿಸಬೇಕು. ಹಾಲು, ಮೊಸರು, ತುಪ್ಪ, ಸಕ್ಕರೆ, ಬೆಲ್ಲಗಳನ್ನು ಪಾತ್ರೆಗಳಿಗೆ ತುಂಬಿ, ಆ ಪೂರ್ಣ ಪಾತ್ರೆಗಳನ್ನು **'ಗೌರೀ ಮೇ ಪ್ರಿಯತಾಂ'** ಎಂದು ಬೇಡಿಕೊಂಡು ಜ್ಞಾನಿ ದಂಪತಿಗಳಿಗೆ ದಾನ ನೀಡಬೇಕು. ಇದರಿಂದ ಪಾರ್ವತಿ ಲೋಕವು ಲಭಿಸುವದು. ಪುಷ್ಯ ಶುದ್ಧ ತ್ರಯೋದಶಿ ದಿನ ಉಪವಾಸ ಮಾಡಬೇಕು. ಹತ್ತು ಬೆರಳು ಉದ್ದವಿರುವ ಬಂಗಾರದ ಸಲಾಕೆಯನ್ನು ಮಾಡಿಸಿ ನೆಲಕಬ್ಬಿನೊಡನೆ ಜ್ಞಾನಿಗೆ **'ಪ್ರದ್ಯುಮ್ನಃ ಪ್ರೀಯತಾಂ'** ಎಂದು ಹೇಳಿ ದಾನಕೊಡಬೇಕು. ಅದರ ಜೊತೆಗೆ ವಸ್ತ್ರಜೋಡಿಯನ್ನು ದಾನ ನೀಡಬೇಕು. ಇದರಿಂದ ಒಂದು ಕಲ್ಪಕಾಲದ ವರೆಗೆ ವಿಷ್ಣುಲೋಕದ ವಾಸವು ದೊರಕುವುದು. ಇದಕ್ಕೆ **ಕಾಮವ್ರತ** ಎಂದು ಹೆಸರಿದೆ. ಇದರ ಆಚರಣೆಯಿಂದ ಮಾನವರ ಸಕಲ ವಿಧವಾದ ಶೋಕಗಳೂ ದೂರವಾಗುವವು.

**ಶಿವವ್ರತ :-** ಆಷಾಢ ಮೊದಲಾಗಿ ಚಾತುರ್ಮಾಸ್ಯದ ನಾಲ್ಕು ತಿಂಗಳು ಹಣ್ಣುಹಂಪಲು ತಿನ್ನುವುದನ್ನು ಬಿಟ್ಟುಬಿಡಬೇಕು. ನಾಲ್ಕು ತಿಂಗಳ ನಂತರ ಬಂಗಾರದ ಕೊಡದಲ್ಲಿ ತುಪ್ಪ ಬೆಲ್ಲ ತುಂಬಿ ಕಾರ್ತಿಕಮಾಸದಲ್ಲಿ ಜ್ಞಾನಿಗಳಿಗೆ ದಾನನೀಡಬೇಕು. ಫಲ ರುದ್ರಲೋಕಾಪ್ರಾಪ್ತಿ. ಇದಕ್ಕೆ **ಶಿವವ್ರತ** ಎಂದು ಹೆಸರು ಇರುತ್ತದೆ.

**ಸೌಮ್ಯವ್ರತ :-** ಮಾರ್ಗಶೀರ್ಷ, ಪುಷ್ಯ, ಮಾಘ-ಮೂರು ತಿಂಗಳಲ್ಲಿ ಯಾವ ಹೂವುಗಳನ್ನೂ ಮುಡಿಯಬಾರದು. ಮೂಸಬಾರದು. ಹರಿಹರರನ್ನು ಮೂರು ತಿಂಗಳ ಕಾಲ ಪೂಜಿಸಬೇಕು. ಫಾಲ್ಗುಣ ಮಾಸದಲ್ಲಿ ಚಿನ್ನದ ಮೂರು ಹೂವುಗಳನ್ನು ಶಕ್ತ್ಯಾನುಸಾರ ಮಾಡಿಸಿ ಸಾಯಂಕಾಲದಲ್ಲಿ ದಾನ ಮಾಡಬೇಕು. **''ಪ್ರೀಯತಾಂ ಶಿವಕೇಶವೌ'' ''ಶಿವ ಮತ್ತು ವಿಷ್ಣು ಪ್ರೀತರಾಗಲಿ''** ಎಂದು ಬೇಡಿಕೊಳ್ಳಬೇಕು. ಇದರ ಆಚರಣೆಯಿಂದ ನರನು ದಿವ್ಯ ಪದವನ್ನು ಹೊಂದುವನು. ಇದಕ್ಕೆ **ಸೌಮ್ಯವ್ರತ** ಎನ್ನುವರು.

**ಸೌಭಾಗ್ಯ ಗೌರೀವ್ರತ :-** ಫಾಲ್ಗುಣ ಶುದ್ಧ ತದಿಗೆಯ ದಿನದಿಂದ ಉಪ್ಪನ್ನು ಬಿಟ್ಟು ಬಿಡಬೇಕು. ಒಂದು ಮಂಡಲ ಕಾಲ ಅಲವಣ ಭೋಜನ ಮಾಡಿ, ಕೊನೆಯಲ್ಲಿ ಶಯ್ಯಾದಾನ ಮಾಡಬೇಕು. ಆ ಹಾಸಿಗೆ ದಿಂಬು, ಮೇಲ್ಹಾಸು ಮುಂತಾದವುಗಳಿಂದ ಒಡಗೂಡಿರಬೇಕು. ಅದರೊಡನೆ ಅವರ ಸಂಸಾರಕ್ಕೆ ಬೇಕಾಗುವ ಸಾಮಾನುಗಳನ್ನೆಲ್ಲ ಇರಿಸಿ ಗೃಹದಾನವನ್ನೂ ಮಾಡಬೇಕು. ದಂಪತಿಗಳನ್ನು ಪೂಜೆಮಾಡಿ, **''ಭವಾನೀ ಪ್ರೀಯತಾಂ''** ಪಾರ್ವತಿಯು ಪ್ರೀತಳಾಗಲಿ ಎಂದು ಸಂಕಲ್ಪ ಮಾಡಿ, ವಿಪ್ರದಂಪತಿಗಳನ್ನು ಭಕ್ತಿಯಿಂದ ಆರಾಧಿಸಬೇಕು. ಇದರಿಂದ ಗೌರೀ ಲೋಕದಲ್ಲಿ ಒಂದು ಕಲ್ಪಕಾಲವಾಸವು ಪ್ರಾಪ್ತಿ.

**ಸಾರಸ್ವತವ್ರತ :-** ಸಂಜೆ ಹೊತ್ತು ಮೌನದಿಂದ ಇರಬೇಕು. ಒಂದು ವರ್ಷದವರೆಗೆ ಸಂಧ್ಯಾಮೌನವನ್ನು ಆಚರಿಸಿ ಕೊನೆಯಲ್ಲಿ ತುಪ್ಪ ತುಂಬಿದ ಕೊಡವನ್ನು ವಿಪ್ರರಿಗೆ ದಾನ ಕೊಡಬೇಕು. ಜೋಡುವಸ್ತ್ರ, ಎಳ್ಳು, ಗಂಟೆ ಮುಂತಾದವುಗಳನ್ನು ನೀಡಬೇಕು. ಇದರಿಂದ ಇಹಲೋಕದಲ್ಲಿ ಸೌಂದರ್ಯ ಪ್ರಾಪ್ತಿಯಾಗುವದಲ್ಲದೆ, ಭಾಗ್ಯವೂ ಬರುವದು. ಮುಂದೆ ಸರಸ್ವತಿಯ ಲೋಕ ಪ್ರಾಪ್ತಿಯೂ ಆಗುವದು. ಅಲ್ಲಿಂದ ವ್ರತ ಮಾಡಿದವರು ಮುಂದೆ ಎಂದೂ ಮರಳಿ ಮರ್ತ್ಯಲೋಕಕ್ಕೆ ಬರುವದಿಲ್ಲ. ಇಲ್ಲಿರುವವರೆಗೆ ಒಳ್ಳೇ ಸುಂದರವಾದ ರೂಪ ಮತ್ತು ಉತ್ತಮ ಜ್ಞಾನಗಳು ಪ್ರಾಪ್ತವಾಗುವವು. ಇದಕ್ಕೆ **ಸಾರಸ್ವತ ವ್ರತ** ಎಂದು ಹೆಸರು.

**ಲಕ್ಷ್ಮೀವ್ರತ :-** ತಿಂಗಳಿನ ಎರಡೂ ಪಂಚಮಿ ತಿಥಿಗಳಂದು ಉಪವಾಸವಿದ್ದು ಲಕ್ಷ್ಮೀದೇವಿಯನ್ನು ಪೂಜಿಸಬೇಕು. ಹಾಗೆ ಒಂದು ವರ್ಷ ಶ್ರೀದೇವಿಯ ಸಮಾರಾಧನೆ ಮಾಡಿ ಚಿನ್ನದ ಕಮಲವನ್ನು ಹಸುವಿನೊಂದಿಗೆ ದಾನಕೊಡಬೇಕು. ಇದರಿಂದ ಮಾನವರ ದುಃಖಗಳೆಲ್ಲವೂ ದೂರವಾಗುವವು. ಜನ್ಮ ಜನ್ಮಾಂತರದಲ್ಲಿ ಸಮೃದ್ಧ ಐಶ್ವರ್ಯ ಪ್ರಾಪ್ತಿ. ಕೊನೆಯಲ್ಲಿ ವಿಷ್ಣುಪದ. ಈ ವ್ರತದ ಅನುಷ್ಠಾನದಿಂದ ವ್ರತಮಾಡಿದವರ ದುಃಖ ದಾರಿದ್ರ್ಯಗಳೆಲ್ಲವೂ ದೂರಾಗುವವು. ಇದಕ್ಕೆ ಲಕ್ಷ್ಮೀವ್ರತ ಎಂದು ಹೆಸರು.

**ಆಯುವ್ರತ :-** ಶಿವ ಮತ್ತು ಕೇಶವರ ಮುಂದೆ ನಿತ್ಯವೂ ಸಾರಿಸಿ ಗುಡಿಸಿ ಗುಡಿಯನ್ನು ಅಲಂಕರಿಸಬೇಕು. ಹೀಗೆ ಒಂದು ವರ್ಷದವರೆಗೆ ಹರಿಹರರ ಸೇವೆ ಮಾಡಬೇಕು. ಕೊನೆಗೆ ಹಿಂಡುವ ಪಾತ್ರೆ ಸಹಿತವಾಗಿ ಒಂದು ಹಸುವನ್ನು ದಾನನೀಡಬೇಕು. ಇದರಿಂದ ಜನ್ಮಾಂತರದಲ್ಲಿ ರಾಜನಾಗಿ ಹುಟ್ಟುವನು. ಕೊನೆಗೆ ಶಿವ ಸಾನ್ನಿಧ್ಯ. ಇದರ ಹೆಸರು ಆಯುವ್ರತ ಎಂದಿರುತ್ತದೆ. ಈ ವ್ರತವು ಸರ್ವ ಅಭೀಷ್ಟಗಳನ್ನು ಕೊಡುವ ವ್ರತವಾಗಿದೆ.

**ಕೀರ್ತಿ ವ್ರತ :-** ಪ್ರತಿ ದಿನವೂ ಬೆಳಿಗ್ಗೆ ಯಾರೊಡನೆಯೂ ಮಾತನಾಡದೆ ಮೌನವಾಗಿ ಅಶ್ವತ್ಥವೃಕ್ಷದ ಪ್ರದಕ್ಷಿಣೆ, ನಮಸ್ಕಾರ, ಅನಂತರ ಸೂರ್ಯನಮಸ್ಕಾರ ಮಾಡಿ ಗಂಗಾನದಿಯ ಧ್ಯಾನಮಾಡಬೇಕು. ಹೀಗೆ ವರ್ಷದವರೆಗೆ ಅಶ್ವತ್ಥ, ಗಂಗಾ, ಸೂರ್ಯ- ಈ ದೇವತೆಗಳನ್ನು ಆರಾಧಿಸುತ್ತ ಒಂದೇ ಹೊತ್ತು ಊಟ ಮಾಡಬೇಕು.

ವ್ರತ ಸಮಾಪ್ತಿ ಕಾಲದಲ್ಲಿ ದಂಪತಿಪೂಜೆಮಾಡಿ ಮೂರು ಹಸುಗಳನ್ನು ಚಿನ್ನದ ಅಶ್ವತ್ಥ ವೃಕ್ಷವನ್ನೂ ಮಾಡಿಸಿ ದಾನಕೊಡಬೇಕು. ಇದರಿಂದ ಐಶ್ವರ್ಯಪ್ರಾಪ್ತಿ. ಅಶ್ವಮೇಧದ ಪುಣ್ಯ. ಇದಲ್ಲದೆ ನರನಿಗೆ ಶಾಶ್ವತ ಕೀರ್ತಿ ಪುಣ್ಯ ಪ್ರಾಪ್ತಿಯಾಗುವವು. ಇದಕ್ಕೆ ಕೀರ್ತಿವ್ರತ ಎನ್ನುವರು.

**ಸಾಮ ವ್ರತ :-** ತುಪ್ಪ ಹಚ್ಚಿ ಎರೆದುಕೊಂಡು ಹರಿ ಅಥವಾ ಹರರ ಮೂರ್ತಿಯ ಮುಂದೆ ಅಕ್ಷತೆಗಳಿಂದ ಪದ್ಮವನ್ನು ಬರೆಯಬೇಕು. ಗೋಮಯ ಮಂಡಲದಲ್ಲಿ ಹೀಗೆ ಒಂದು ವರ್ಷ ಕಾಲ ದೇವರ ಮುಂದೆ ಗೋಮಯದಿಂದ ಸಾರಿಸಿ ಅಕ್ಷತೆಗಳಿಂದ ಗೋಪದ್ಮಗಳನ್ನು ಬರೆದು ಹರಿ-ಹರರ ಸೇವೆಮಾಡಿ ಕೊನೆಯಲ್ಲಿ ಎಳ್ಳಿನಿಂದ ಮಾಡಿದ ಹಸುಗಳನ್ನು ದಾನ ಕೊಡಬೇಕು. ದಾನ ಕೊಡುವಾಗ ಹಾಗೂ ಗೋಪದ್ಮ ಬರೆಯುವಾಗ ಸಾಮವೇದ ಮಂತ್ರಗಳನ್ನು ಗಾನರೂಪವಾಗಿ ಪಠಿಸುತ್ತಿರಬೇಕು. ಸಾಮವೇದದ

ಮಂತ್ರಗಳನ್ನು ಪಠಿಸುತ್ತಲೇ ಈ ವ್ರತದ ಎಲ್ಲ ಕರ್ಮಗಳನ್ನೂ ನಡೆಸಬೇಕಾದುದರಿಂದ ಇದು ಸಾಮವ್ರತವೆನಿಸಿದೆ.

**ವೀರವ್ರತ :-** ನವಮಿ ದಿನ ಒಂದೇ ಹೊತ್ತು ಊಟ ತನ್ನ ಕೈಲಾದಷ್ಟು ಕನ್ಯಾಮಣಿಗಳನ್ನು ಕರೆತಂದು ಆ ದಿನ ಭೋಜನ ಮಾಡಿಸಬೇಕು. ಹೀಗೆ ಒಂದು ವರುಷ ಮಾಡಿ ಕೊನೆಯಲ್ಲಿ ಅವರಿಗೆಲ್ಲ ಉಟ್ಟುಕೊಳ್ಳುವ ಸೀರೆ, ಕುಪ್ಪಸ, ಇಟ್ಟುಕೊಳ್ಳಲು ಬಂಗಾರದ ಒಡವೆ ಹಾಗೂ ಒಂದು ಚಿನ್ನದ ಸಿಂಹವನ್ನು ಮಾಡಿಸಿ ಕೊಡಬೇಕು. ಇದರಿಂದ ಸ್ಥಾಣುವಿನ ಸ್ಥಾನವನ್ನು ಹೊಂದುತ್ತಾನೆ. ವ್ರತಕರ್ತಾ ಮೇಲಾಗಿ ಅವನಿಗೆ ಆಕರ್ಷಕವಾದ ರೂಪವು ಬರುವುದು. ಅವನು ಎಂದಿಗೂ ವೈರಿಗಳಿಗೆ ತಲೆಬಾಗುವುದಿಲ್ಲ.

**ಪಯೋವ್ರತ :-** ಹದಿನೈದು ದಿನಗಳವರೆಗೆ ಹಸುವಿನ ಹಾಲು, ಮೊಸರು, ತುಪ್ಪ, ಬೆಣ್ಣೆ ಯಾವುದನ್ನೂ ತಿನ್ನಬಾರದು. ಹೀಗೆ ಒಂದು ಪಕ್ಷ ಕಳೆದ ಬಳಿಕ ಐದು ಹಿಂಡುವ ಹಸುಗಳನ್ನು ಸುವರ್ಣ ಪಾತ್ರೆಗಳೊಂದಿಗೆ ದಾನ ಕೊಡಬೇಕು. ಬಟ್ಟೆಗಳನ್ನು ನೀಡಬೇಕು. ಇದರ ಫಲ ವೈಕುಂಠ ಲೋಕಪ್ರಾಪ್ತಿ. ಇದರಿಂದ ನೂರು ಪಿತೃಗಳ ಉದ್ಧಾರ. ವ್ರತ ಮಾಡಿದವನು ಕಲ್ಪಾಂತರಗಳಲ್ಲಿ ಚಕ್ರವರ್ತಿಯಾಗಿ ಹುಟ್ಟುವನು. ಇದಕ್ಕೆ ಪಿತೃಗಣ ನೂರು ತಲೆಯು ಉದ್ಧಾರವಾಗುವುದರಿಂದ **ಪಿತೃವ್ರತ** ಎಂದು ಹೆಸರಾಗಿದೆ.

**ಸಾನಂದವ್ರತ :-** ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ ನಾಲ್ಕು ತಿಂಗಳ ಬಂದವರಿಗೆಲ್ಲ ನೀರು ಕೊಡಬೇಕು. ಬೇಡಿದವರಿಗೆಲ್ಲ ತಂಪು ಪಾನೀಯ ನೀಡಬೇಕು. ತಾವಾಗಿ ಬಂದು ಕೇಳದಿದ್ದರೂ ನೀರಡಿಸಿದವರು ಇದ್ದಲ್ಲಿ ಹೋಗಿ ಕೊಡಬೇಕು. ಬೇಸಿಗೆ ಕಳೆದ ಬಳಿಕ ದ್ವಿಜ ದಂಪತಿಗಳಿಗೆ ಭೋಜನಮಾಡಿಸಿ ವಸ್ತ್ರ ಎಳ್ಳಿನ ಪಾತ್ರೆಗಳೊಡನೆ ಗೋದಾನ ಮಾಡಬೇಕು. ಸುವರ್ಣವನ್ನೂ ಯಥಾಶಕ್ತಿ ನೀಡಬೇಕು. ಇದರಿಂದ ಶಾಶ್ವತ ಐಶ್ವರ್ಯ ಪ್ರಾಪ್ತಿಯಾಗಿ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಶಾಶ್ವತ ಆನಂದವೂ ವ್ರತಕರ್ತನಿಗೆ ಲಭಿಸುವುದು. ಆದುದರಿಂದ ಇದಕ್ಕೆ **ಸಾನಂದವ್ರತ** ಎನ್ನುವರು. ದೇವರಿಗೆ ಒಂದು ವರುಷದವರೆಗೆ ನಿತ್ಯವೂ ಪಂಚಾಮೃತ ಅಭಿಷೇಕ ಮಾಡಬೇಕು. ವರ್ಷ ಪೂರ್ತಿಯಾದ ಬಳಿಕ ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ತುಂಬಿದ ಪಾತ್ರೆಗಳನ್ನು ಒಂದು ಗೋವನ್ನು ದಾನ ಕೊಡಬೇಕು.

**ಧೃತಿವ್ರತ :-** ಯೋಗ್ಯನಾದ ಜ್ಞಾನಿ ಮನುಷ್ಯನಿಗೆ ಲಕ್ಷ್ಮಿಯ ಸನ್ನಿಧಾನೋಪೇತವಾದ ಶಂಖವನ್ನು ದಾನ ನೀಡಬೇಕು. ಇದರಿಂದ ವ್ರತಕರ್ತನು ಜನ್ಮಾಂತರದಲ್ಲಿ ಸಾರ್ವಭೌಮ ರಾಜನಾಗಿ ಆನಂದವನ್ನು ಅನುಭವಿಸುವನು. ಇದಕ್ಕೆ **ಧೃತಿವ್ರತ** ಎಂದು ಹೆಸರು ಇರುತ್ತದೆ. ಹಾಗೂ ಶಂಖವನ್ನು ಬ್ರಾಹ್ಮಣರಿಗೆ ದಾನ ನೀಡಬೇಕು. ಇದರಿಂದ ಇಹದಲ್ಲಿ ರಾಜ್ಯಭೋಗ, ಪರದಲ್ಲಿ ಶಿವಸ್ಥಾನ. ಅಹಿಂಸಾವ್ರತ ಒಂದು ವರ್ಷದವರೆಗೆ ಯಾವ ಪ್ರಾಣಿಯನ್ನು ಹಿಂಸಿಸಬಾರದು. ಮಾಂಸ ಮುಟ್ಟಬಾರದು. ಕೊನೆಯಲ್ಲಿ ಒಂದು ಹಸು ಹಾಗೂ ಬಂಗಾರದ ಚಿಗರೆಯನ್ನು ದಾನ ಕೊಡಬೇಕು. ಇದರಿಂದ ಅಶ್ವಮೇಧ ಫಲ. ಇದಕ್ಕೆ ಅಹಿಂಸಾ ವ್ರತ ಎನ್ನುವರು.

**ಸೂರ್ಯವ್ರತ :-** ಮಾಘ ಮಾಸದಲ್ಲಿ ಮೂವತ್ತು ದಿನ ಉಷಃ ಕಾಲದಲ್ಲಿ ತಣ್ಣೀರಿನ ಸ್ನಾನ ಕೊನೆಯಲ್ಲಿ ಯಥಾಶಕ್ತಿ ದಂಪತಿ ಭೋಜನ. ವಸ್ತ್ರ ಒಡವೆ ತನ್ನ ಐಶ್ವರ್ಯಕ್ಕನು

ಗುಣವಾಗಿ ದಾನಕೊಡಬೇಕು. ಅದರಿಂದ ಒಂದು ಕಲ್ಪಕಾಲದ ವರೆಗೆ ಸೂರ್ಯಲೋಕ ದಲ್ಲಿ ವ್ರತಕರ್ತನು ವಾಸಿಸುತ್ತಾನೆ. ಇದಕ್ಕೆ **ಸೂರ್ಯವ್ರತ** ಎಂಬ ಹೆಸರು ಬಂದಿದೆ.

**ವಿಷ್ಣುವ್ರತ** :- ಚಾತುರ್ಮಾಸ್ಯ ನಾಲ್ಕು ತಿಂಗಳು ಅಂದರೆ ಆಷಾಢದಿಂದ ಕಾರ್ತಿಕ ಮಾಸದವರೆಗೆ ತಪ್ಪದೆ ಉಷಃ ಕಾಲದಲ್ಲಿಯೇ ಸ್ನಾನವನ್ನು ಮಾಡಬೇಕು. ಕಾರ್ತಿಕ ಮಾಸದಲ್ಲಿ ಬ್ರಾಹ್ಮಣ ಭೋಜನ ಮಾಡಿಸಿ ಗೋದಾನ ನೀಡಿದರೆ ವೈಕುಂಠ ಪ್ರಾಪ್ತಿಯಾಗುವದು. ಆದುದರಿಂದಲೇ ಇದಕ್ಕೆ ವಿಷ್ಣು ವ್ರತ ಎಂದು ಹೆಸರು ಬಂದಿದೆ.

**ಶೀಲವ್ರತ** :- ಉತ್ತರಾಯಣ ಅಥವಾ ದಕ್ಷಿಣಾಯನ ಪ್ರಾರಂಭದ ಮೊದಲ ದಿನ ತುಪ್ಪವನ್ನು ಹೂವನ್ನು ಬಿಟ್ಟುಬಿಡಬೇಕು. ಹಾಗೆ ಆ ಅಯನವು ಮುಗಿಯುವವರೆಗೂ ಬಿಡಬೇಕು. ಆರು ತಿಂಗಳ ಕಾಲ ದೇವರಸೇವೆಮಾಡಿ ಕೊನೆಯಲ್ಲಿ ವಿದ್ವಾಂಸರಿಗೆ ತುಪ್ಪ ತುಂಬಿದ ಪಾತ್ರೆಯನ್ನು ನೀಡಬೇಕು. ಗೋವನ್ನೂ, ತುಪ್ಪಹಾಕಿ ಮಾಡಿದ ಪಾಯಸವನ್ನೂ, ಹೂವಿನ ಮಾಲೆಯನ್ನೂ ವಿದ್ವಾನ್ ದಂಪತಿಗಳಿಗೆ ನೀಡಿ ಇಚ್ಛಾಭೋಜನ ಮಾಡಿಸಬೇಕು. ಇದರಿಂದ ಶಿವಪದ ಪ್ರಾಪ್ತಿ. ಹಾಗೂ ಶೀಲ, ಸೌಭಾಗ್ಯ, ಆರೋಗ್ಯ, ಸಂಪತ್ತು ಶೀಲಪ್ರಧಾನವಾದುದರಿಂದ ಇದಕ್ಕೆ **ಶೀಲವ್ರತ** ಎಂದೇ ಹೆಸರು ಬಂದಿದೆ.

**ದೀಪವ್ರತ** :- ಪ್ರತಿನಿತ್ಯ ಸಾಯಂಕಾಲ ದೇವರ ಮುಂದೆ ದೀಪ ಹಚ್ಚಬೇಕು. ಒಂದು ವರ್ಷ ಕಾಲ ಹೀಗೆ ದೀಪಾರಾಧನೆ ಮಾಡುವದೇ ಒಂದು ವ್ರತ. ಕೊನೆಯಲ್ಲಿ ದೀಪದಾನ ಮಾಡಿ ಚಿನ್ನದ ಚಕ್ರ, ತ್ರಿಶೂಲಗಳನ್ನು ಒಳ್ಳೇ ಜೋಡುಬಟ್ಟೆಗಳನ್ನೂ ಯೋಗ್ಯರಿಗೆ ನೀಡಬೇಕು. ಇದರಿಂದ ನರನು ತೇಜಸ್ವಿಯಾಗಿ ರುದ್ರಲೋಕವನ್ನು ಹೊಂದುವನು. ಇಂಥ ವ್ರತವು ಬೇರೆ ಯಾವುದೂ ಇರುವುದಿಲ್ಲ. ಈ ಅತ್ಯುತ್ತಮವಾದ ವ್ರತಕ್ಕೆ **ದೀಪ ವ್ರತ** ಎಂದು ಹಿಂದಿನ ಹಿರಿಯರೂ ಕರೆದಿದ್ದಾರೆ.

**ಶಿವವ್ರತ** :- ಕಾರ್ತೀಕ ಮಾಸದ ತದಿಗೆಯ ದಿನ ಗೋಮೂತ್ರದಲ್ಲಿ ಬೇಯಿಸಿದ ಗಂಜಿ ಊಟಮಾಡಬೇಕು. ಹೀಗೆ ಒಂದು ವರ್ಷದವರೆಗೆ ಪ್ರತಿದಿನ ಒಪ್ಪತ್ತು ಹೀಗೆ ಗೋಮೂತ್ರ ಗಂಜಿ ಊಟ ಮಾಡುತ್ತ ಇದ್ದು. ವರ್ಷದ ನಂತರ ವಿದ್ವಾನ್ ದಂಪತಿಗಳನ್ನು ಪೂಜಿಸಿ ಗೋದಾನಮಾಡಬೇಕು. ಇದರಿಂದ ಇಹಲೋಕದಲ್ಲಿ ರಾಜನಾಗಿ ಪರಲೋಕದಲ್ಲಿ ಒಂದು ಕಲ್ಪಕಾಲದವರೆಗೆ ಗೌರೀಲೋಕದಲ್ಲಿ ನೆಲೆಸುವನು. ಸರ್ವರಿಗೂ ಸರ್ವ ರೀತಿಯಿಂದಲೂ ಕಲ್ಯಾಣವನ್ನು ಉಂಟುಮಾಡುವ ಈ ವ್ರತಕ್ಕೆ **ರುದ್ರವ್ರತ**ವೆಂದು ಅಭಿದಾನ ಬಂದಿರುತ್ತದೆ.

**ದೃಢವ್ರತ** :- ನಾಲ್ಕು ತಿಂಗಳು ಗಂಧವನ್ನುಬಳಿದುಕೊಳ್ಳಬಾರದು. ಅನಂತರ ಮುತ್ತು ಚಿಪ್ಪು, ಗಂಧ, ಅಕ್ಷತೆಗಳನ್ನು ಬಟ್ಟೆಗಳೊಂದಿಗೆ ದಾನಕೊಡಬೇಕು. ಫಲ ವರುಣಲೋಕ ಪ್ರಾಪ್ತಿ. ಇದಕ್ಕೆ **ದೃಢವ್ರತ** ಎಂದು ಕರೆಯುವರು.

**ಶಾಂತಿವ್ರತ** :- ವೈಶಾಖದಲ್ಲಿ ಹೂವು ಮುಡಿಯಬಾರದು. ಹೊಸ ಉಡುಪು ತೊಡದೆ ಕೊನೆಯಲ್ಲಿ ಜ್ಞಾನಿ ದಂಪತಿಗಳಿಗೆ ಭೋಜನ ಮಾಡಿಸಿ, ಬಟ್ಟೆಗಳೊಂದಿಗೆ ಗೋದಾನ ಮಾಡಬೇಕು. ಇಹದಲ್ಲಿ ರಾಜ್ಯ, ಪರದಲ್ಲಿ ವೈಕುಂಠ ಪ್ರಾಪ್ತಿ. ಇದರ ಫಲ ಇದರ ಅನುಷ್ಠಾನದಿಂದ ಕೀರ್ತಿ ಬೆಳೆದು ಕಾಮನೆಗಳೆಲ್ಲವೂ ತಾವಾಗಿ ಸಿದ್ಧಿಸುವವು. ಇದಕ್ಕೆ **ಶಾಂತಿವ್ರತ** ಎಂದು ಹೆಸರು ಬಂದಿದೆ.

**ಬ್ರಹ್ಮವ್ರತ :-** ಚಿನ್ನದಲ್ಲಿ ಬ್ರಹ್ಮಾಂಡ ಮಾಡಿಸಬೇಕು. ಅದನ್ನು ಎಳ್ಳಿನ ರಾಶಿಯ ಮೇಲಿರಿಸಿ ಹೋಮ ಹವನ ಮಾಡಬೇಕು. ಜ್ಞಾನಿಗಳು ಸಂತರ್ಪಣೆ ಗೈಯಬೇಕು. ಜ್ಞಾನಿ ದಂಪತಿಗಳನ್ನು ವಸ್ತ್ರಾಲಂಕಾರಗಳಿಂದ ಪೂಜಿಸಿ 'ವಿಶ್ವಾತ್ಮಾ ಪ್ರೀಯತಾಂ' ಎಂದು ಆ ಬ್ರಹ್ಮಾಂಡದ ಬಂಗಾರವನ್ನು, ಎಳ್ಳಿನ ರಾಶಿಯನ್ನು ದಾನ ಕೊಡಬೇಕು. ಆ ಬ್ರಹ್ಮಾಂಡವು ಮೂರು ಫಲ ತೂಕಕ್ಕಿಂತ ಕಡಿಮೆ ಇರಬಾರದು. ಕೊಡುವವನ ಶಕ್ತ್ಯಾನುಸಾರ ಹೆಚ್ಚಿಗೆ ಇದ್ದಷ್ಟು ಒಳ್ಳೆಯದು. ಮೋಕ್ಷವೇ ಇದರ ಫಲ. ಇದಕ್ಕೆ ಬ್ರಹ್ಮವ್ರತ ಎಂದು ಕರೆಯುವರು.

**ಸುವ್ರತ:-*** ಉಭಯಮುಖಿಹಸುವನ್ನು ಸಲಕರಣೆಗಳೊಂದಿಗೆ ಜ್ಞಾನಿಯಾದವನಿಗೆ ದಾನ ಕೊಡಬೇಕು. ಅಂದು ಬರಿಹಾಲಿನಮೇಲೆ ಇರಬೇಕು. ಇದರಿಂದ ಪುನರ್ಜನ್ಮವಿಲ್ಲ. ಮುಂದೆ ದಿವ್ಯ ಗತಿ ಪ್ರಾಪ್ತಿ. ಸುವ್ರತ ಎಂಬ ಹೆಸರಿನ ಈ ವ್ರತವನ್ನು ಆಚರಿಸಿದವರಿಗೆ ಪುನರ್ಜನ್ಮವೇ ಇಲ್ಲ.

**ಕಲ್ಪವೃಕ್ಷ ವ್ರತ :-** ಮೂರು ದಿನ ಬರಿ ಹಾಲು ಕುಡಿದು ಇರಬೇಕು. ನಾಲ್ಕನೆಯ ದಿನ ಒಂದು ಫಲಕ್ಕೆ ಕಡಿಮೆ ಇರದ ತೂಕದಲ್ಲಿ ಚಿನ್ನದ ಕಲ್ಪವೃಕ್ಷ ಮಾಡಿಸಿ, ಒಂದು ಕೊಳಗ ಅಕ್ಕಿಯೊಂದಿಗೆ ಜ್ಞಾನಿ ಮಾನವನಿಗೆ ದಾನ ಕೊಡಬೇಕು. ಇದರಿಂದ ಬ್ರಹ್ಮಲೋಕ ಪ್ರಾಪ್ತಿ ವ್ರತಸ್ಥನಿಗೆ ಆಗುವದು. ಇದು ಕಲ್ಪವೃಕ್ಷ ವ್ರತ.

**ಭೀಮವ್ರತ :-** ಒಂದು ತಿಂಗಳವರೆಗೆ ಬರಿ ಕ್ಷೀರಪಾನ ಮಾಡಿ, ಕೊನೆಗೆ ಜ್ಞಾನಿಗೆ ಗೋದಾನ ಮಾಡಬೇಕು. ಇದರಿಂದ ವಿಷ್ಣುಪದ ಪ್ರಾಪ್ತಿ. ಇದಕ್ಕೆ **ಭೀಮವ್ರತ** ಎನ್ನುವರು.

**ಭೂಮಿವ್ರತ :-** ಒಂದು ದಿನ ಪೂರ್ತಿ ಬರಿ ಹಾಲು ಕುಡಿದು ಉಪವಾಸದಿಂದ ಇರಬೇಕು. ಮರುದಿನ ಇಪ್ಪತ್ತು ಪಲಕ್ಕಿಂತ ಹೆಚ್ಚಿನ ತೂಕದ ಬಂಗಾರದಿಂದ ಭೂಮಂಡಲದ ಚಿತ್ರವನ್ನು ಮಾಡಿಸಿ, ಯೋಗ್ಯನಾದ ನರನಿಗೆ ದಾನಕೊಡಬೇಕು. ಇದರಿಂದ ಇಹದಲ್ಲಿ ಐಶ್ವರ್ಯ, ಪರದಲ್ಲಿ ಶಿವ ಸಾನಿಧ್ಯ. ಏಳು ನೂರು ಕಲ್ಪಗಳಿಂದ ಪ್ರಚಾರದಲ್ಲಿದ್ದ ಈ ಭೂಮಿದಾನ ವ್ರತದಿಂದ ಮನುಷ್ಯನಿಗೆ ಅಪಾರ ಐಶ್ವರ್ಯ ಪ್ರಾಪ್ತಿಯಾಗುವದು.

**ಗುಡವ್ರತ :-** ಮಾಘ ಅಥವಾ ಚೈತ್ರ ಮಾಸದಲ್ಲಿ ಬೆಲ್ಲದಿಂದ ಗೋವನ್ನು ಮಾಡಿ, ತದಿಗೆಯ ದಿನ ದಾನಮಾಡಬೇಕು. ಅದರಿಂದ ಇರುವವರೆಗೆ ಪರಮಾನಂದ. ಅನಂತರ ಗೌರೀ ಲೋಕದಲ್ಲಿ ಸುಖವಾಸ. ಇದಕ್ಕೆ ಗುಡವ್ರತ ಎನ್ನುವರು.

**ಪ್ರಭಾವ್ರತ :-** ಮಾಘ ಅತವಾ ಚೈತ್ರಮಾಸಗಳಲ್ಲಿ ಹದಿನೈದು ದಿನ ಹಾಲು ಮಾತ್ರ ಪಾನಮಾಡಿ ಕೊನೆಗೆ ಎರಡು ಕಪಿಲೆ ಗೋವುಗಳನ್ನು ದಾನ ಮಾಡಬೇಕು. ಇದರಿಂದ ಇರುವವರೆಗೆ ಈ ಲೋಕದಲ್ಲಿ ಒಂದು ಕಲ್ಪಕಾಲ ಚಕ್ರವರ್ತಿ ಪದವಿ. ಅನಂತರ ಬ್ರಹ್ಮಲೋಕ ಲಾಭ. ಸುರಾಸುರರೆಲ್ಲರೂ ಅಂಥ ವ್ರತಮಾಡಿದ ಪುಣ್ಯಾತ್ಮನನ್ನು ಪೂಜಿಸುವರು. ಈ ವ್ರತಕ್ಕೆ ಪ್ರಭಾವ್ರತ ಎಂದು ಹೆಸರು.

---

* ಹಸು ಈಯಲಾಗಿ ತಾಯಿಯ ಹೊಟ್ಟೆಯಿಂದ ಅರ್ಧ ಕರು ಈಚೆಗೆ ಬಂದಾಗ ಎರಡೂ ಕಡೆಯೂ ಮುಖ ಕಾಣುವದು. ಮುಂದೆ ತಾಯಿಯ ಮುಖ ಹಿಂದೆ ಕರುವಿನ ಮುಖ. ಇಂತಹ ಪ್ರಸವಕಾಲದ ಹಸುವಿಗೆ ಉಭಯಮುಖಿಧೇನು ಎನ್ನುವರು.

**ಪ್ರಾಪ್ತಿವ್ರತ** :- ಒಂದು ವರ್ಷ ಒಪ್ಪತ್ತು ಊಟ, ಪ್ರತಿದಿನವೂ ಭಕ್ಷ್ಯ ಭೋಜ್ಯಗಳೊಂದಿಗೆ ನೀರು ತುಂಬಿದ ಕೊಡವನ್ನು ದಾನಕೊಡಬೇಕು. ಹೀಗೆ ಮಾಡಿದವನು ಶಿವಲೋಕ ಸೇರುತ್ತಾನೆ. ಇದಕ್ಕೆ **ಪ್ರಾಪ್ತಿವ್ರತ** ಎನ್ನುವರು.

**ಸುಗತಿ ವ್ರತ** :- ಪ್ರತಿಯೊಂದು ಅಷ್ಟಮಿ ತಿಥಿ ರಾತ್ರಿ ಊಟ ಮಾಡಬೇಕು. ವರ್ಷದ ನಂತರ ಗೋದಾನ ಗೈಯಬೇಕು. ಅಂದರೆ ಇಂದ್ರಲೋಕವನ್ನು ಹೊಂದುವರು. ಈ ಉತ್ತಮವಾದ ವ್ರತಕ್ಕೆ **ಸುಗತಿವ್ರತ** ಎಂದು ಕರೆಯುವರು.

**ವೈಶ್ವಾನರ ವ್ರತ** :- ವರ್ಷ, ಶರದ್, ಹೇಮಂತ, ಶಿಶಿರ ಈ ನಾಲ್ಕು ಋತುಗಳಲ್ಲಿ ಜ್ಞಾನಿ ನರರಿಗೆ ಸೌದೆಯನ್ನು ದಾನ ಮಾಡಬೇಕು. ಕೊನೆಗೆ ತುಪ್ಪ ತುಂಬಿದ ಪಾತ್ರೆ ಹಾಗೂ ಗೋವನ್ನು ಕೊಡಬೇಕು. ಇದರಿಂದ ಬ್ರಹ್ಮನ ಸಾಯುಜ್ಯ ಹೊಂದುವನು. ಇದು ಮನುಷ್ಯರು ಮಾಡಿದ ಎಲ್ಲ ಪಾಪಗಳನ್ನೂ ಕಳೆಯುತ್ತದೆ. ಪಾಪಗಳನ್ನೆಲ್ಲ ಸುಟ್ಟುಹಾಕುವುದರಿಂದ ಇದಕ್ಕೆ **ವೈಶ್ವಾನರ ವ್ರತ**ವೆಂದು ಹೆಸರು ಬಂದಿದೆ.

**ಸುವರ್ಣ ವ್ರತ** :- ಹತ್ತು ದಿನ ಉಪವಾಸ. ಹನ್ನೊಂದನೆಯ ದಿನ ವ್ರತ ಸಮಾಪ್ತಿ. ಚಿನ್ನದಿಂದ ಮಾಡಿದ ಗರುಡ ಚಕ್ರವನ್ನು ಯೋಗ್ಯವಾದ ದ್ವಿಜನಿಗೆ ದಾನ ನೀಡಬೇಕು. ಇಹದಲ್ಲಿ ಸಾಮ್ರಾಜ್ಯ ಪರದಲ್ಲಿ ವಿಷ್ಣುಲೋಕ ಇದರ ಫಲ. ಇದಕ್ಕೆ **ಸುವರ್ಣ ವ್ರತ** ಎಂದು ಕರೆಯುತ್ತಾರೆ.

**ದೇವೀವ್ರತ** :- ಒಂದು ತಿಂಗಳವರೆಗೆ ಬರಿ ಪಾಯಸ ಕುಡಿದಿದ್ದು ಕೊನೆಗೆ ಎರಡು ಗೋವುಗಳನ್ನು ದಾನಮಾಡಬೇಕು. ಇದರಿಂದ ಲಕ್ಷ್ಮೀಲೋಕ ಪ್ರಾಪ್ತಿ ನಿಶ್ಚಿತವಾಗಿ ಲಭಿಸುವದು. ಇದಕ್ಕೆ **ದೇವೀವ್ರತ**ವೆಂದು ಕರೆಯುವರು.

**ಭಾನುವ್ರತ** :- ಒಂದು ವರ್ಷದವರೆಗೆ ಸಪ್ತಮಿ ದಿನ ಹಗಲು ಊಟ ವ್ಯರ್ಜ. ಕೊನೆಗೆ ಹಿಂಡುವ ಗೋವನ್ನು ದಾನ ನೀಡಬೇಕು. ಇದರ ಫಲ ಸೂರ್ಯಲೋಕ ಪ್ರಾಪ್ತಿ. ಇದಕ್ಕೆ **ಭಾನುವ್ರತ** ಎಂದು ಹೆಸರು.

**ವಿನಾಯಕವ್ರತ** :- ಚಾತುರ್ಮಾಸದಲ್ಲಿ ಎರಡೂ ಚತುರ್ಥಿ ದಿನಗಳಲ್ಲಿ ಹಗಲು ಹೊತ್ತು ಉಪವಾಸಗೈದು ಒಂದು ವರ್ಷದವರೆಗೆ ವ್ರತವನ್ನು ಆಚರಿಸಬೇಕು. ಕೊನೆಗೆ ಬಂಗಾರದ ಆನೆಮಾಡಿಸಿ ದಾನಕೊಡಬೇಕು. ಇದರಿಂದ ಶಿವ ಪದ ಪ್ರಾಪ್ತಿ ರೂಪವಾದ ಫಲವು ದೊರಕುವದು. ಇದಕ್ಕೆ **ವಿನಾಯಕವ್ರತ** ಎಂದು ಹೆಸರು ಇರುತ್ತದೆ.

**ಸೌರವ್ರತ** :- ಚಾತುರ್ಮಾಸ್ಯ ಕಾಲದಲ್ಲಿ ಹಣ್ಣುಗಳನ್ನು ತಿನ್ನಬಾರದು. ಕಾರ್ತಿಕ ಮಾಸದಲ್ಲಿ ತಾನು ತಿನ್ನದೇ ಬಿಟ್ಟ ಹಣ್ಣುಗಳನ್ನು ಕೊನೆಗೆ ಚಿನ್ನದಿಂದ ಮಾಡಿಸಿ ಹವನ ಹೋಮ ಮಾಡಿ ದ್ವಿಜರಿಗೆ ದಾನಕೊಡಬೇಕು. ಅವುಗಳೊಡನೆ ಎರಡು ಗೋವುಗಳನ್ನು ದಾನ ನೀಡಬೇಕು. ಇದರಿಂದ ಸೂರ್ಯಲೋಕ ಪ್ರಾಪ್ತಿ.

**ವಿಷ್ಣುವ್ರತ** :- ಹನ್ನೆರಡು ಏಕಾದಶಿ ನಿಶ್ಚಕ್ರ ಉಪವಾಸಮಾಡಿ, ದ್ವಾದಶಿ ಪಾರಣೆಯನ್ನು ವಿಧಿಪೂರ್ವಕ ಮಾಡಬೇಕು. ಪ್ರತಿ ದ್ವಾದಶಿ ದಿನ ಬ್ರಾಹ್ಮಣನಿಗೆ ಗೋದಾನ, ವಸ್ತ್ರ, ಸುವರ್ಣದಾನಮಾಡಿ ಪೂಜೆಮಾಡಬೇಕು. ಯಥಾಶಕ್ತಿ ದಕ್ಷಿಣೆ ನೀಡಬೇಕು. ಇದರಿಂದ ಪರಮಪದವನ್ನು ಹೊಂದುವನು. ಇದಕ್ಕೆ ವಿಷ್ಣುವ್ರತ ಎನ್ನುವರು.

**ವೃಷವ್ರತ** :- ಕಾರ್ತಿಕಮಾಸದಲ್ಲಿ ಹಗಲು ಉಪವಾಸಮಾಡಿ ದೇವರ ಹೆಸರಿನಿಂದ ಎತ್ತನ್ನು ಬಿಡಬೇಕು. ಈ ಏಕಭುಕ್ತವ್ರತದಿಂದ ನರನು ಶಿವಪದವನ್ನು ಹೊಂದುವನು. ಇದಕ್ಕೆ ವೃಷವ್ರತ ಎಂದು ಕರೆಯುವರು.

**ತ್ರ್ಯಂಬಕವ್ರತ** :- ಪ್ರತಿ ತಿಂಗಳಿನ ಎರಡೂ ಚತುರ್ದಶಿ ಉಪವಾಸಮಾಡಿ ವರ್ಷದಕೊನೆಗೆ ಎರಡು ಹಸುಗಳನ್ನು ದಾನ ನೀಡಬೇಕು. ಫಲ ರುದ್ರಸ್ಥಾನ.

**ಪ್ರಾಜಾಪತ್ಯಕೃಚ್ಛ್ರವ್ರತ** :- ತನ್ನ ಶಕ್ತಿಗೆ ಅನುಗುಣವಾಗಿ ಕೃಚ್ಛ್ರವ್ರತವನ್ನು ಆಚರಿಸಬೇಕು. ಅನಂತರ ಅನ್ನಸಂತರ್ಪಣೆಗೈದು ಜ್ಞಾನಿಗಳಿಗೆ ಹಸುಗಳನ್ನು ದಾನನೀಡಬೇಕು. ಇದರಿಂದ ವ್ರತಕಾರನು ರುದ್ರಸ್ಥಾನವನ್ನು ಪಡೆಯುತ್ತಾನೆ. ಇದಕ್ಕೆ **ಪ್ರಾಜಾಪತ್ಯಕೃಚ್ಛ್ರವ್ರತ** ಎಂದು ಹೆಸರು ಇರುತ್ತದೆ.

**ವರವ್ರತ** :- ಏಳು ರಾತ್ರಿ ಉಪವಾಸವಿದ್ದು, ತುಪ್ಪ ತುಂಬಿದ ಬಿಂದಿಗೆಗಳನ್ನು ಅಲಂಕರಿಸಿ ಪಾತ್ರೆಯೊಂದಿಗೆ ದಾನಕೊಡಬೇಕು. ಇದರಿಂದ ಇಂದ್ರಲೋಕವು ಲಭಿಸುವದು. ಒಂದು ಕಲ್ಪಕಾಲ ವ್ರತಕಾಲ ಮಾಡಿದವನು ಸ್ವರ್ಗಲೋಕದಲ್ಲಿ ಇರುವನು. ಇದಕ್ಕೆ **ವರವ್ರತ** ಎನ್ನುವರು.

**ಮಿತ್ರವ್ರತ** :- ಕಾಶಿಗೆ ಹೋಗಿ, ಹಿಂಡುವ ಹಸುಗಳನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ, ಪಾತ್ರೆಯೊಂದಿಗೆ ದಾನಕೊಡಬೇಕು. ಇದರಿಂದ ಇಂದ್ರಲೋಕವು ಲಭಿಸುವುದು. ಒಂದು ಕಲ್ಪಕಾಲ ವ್ರತ ಮಾಡಿದವನು ಸ್ವರ್ಗಲೋಕದಲ್ಲಿ ಇರುವನು. ಇದಕ್ಕೆ **ಮಿತ್ರವ್ರತ** ಎನ್ನುವರು.

**ಶಂಕರ ವ್ರತ** :- ಪ್ರತಿಯೊಂದು ತೃತಿಯಾ ದಿನ ಬೆಂಕಿಯಲ್ಲಿ ಬೇಯಿಸಿದ್ದನ್ನು ತಿನ್ನಬಾರದು. ಅರ್ಥಾತ್ ಬರಿ ಹಾಲು, ಗಡ್ಡೆ, ಗೆಣಸು ತಿಂದಿರಬೇಕು. ಹೀಗೆ ಒಂದು ವರ್ಷ ವ್ರತ ಮಾಡಿ ಕೊನೆಗೆ ಗೋದಾನ ಮಾಡಬೇಕು. ಇದರಿಂದ ಶಿವಲೋಕ ಪ್ರಾಪ್ತಿ.

**ಅಶ್ವವ್ರತ** :- ಎರಡು ಸಲ ಚಿನ್ನಕ್ಕಿಂತ ಹೆಚ್ಚಿನ ತೂಕವುಳ್ಳ ಬಂಗಾರದಲ್ಲಿ ಒಂದು ರಥ ಹಾಗೂ ಕುದುರೆಮಾಡಿಸಿ ದಾನಕೊಡಬೇಕು. ದಾನಕೊಡುವವನು ಅಂದು ಉಪವಾಸವಿರಬೇಕು. ಇದರಿಂದ ಇಹದಲ್ಲಿ ಚಕ್ರವರ್ತಿ ಪರದಲ್ಲಿ ನೂರು ಕಲ್ಪ ಸ್ವರ್ಗದಲ್ಲಿ ಸುಖಿಸುವನು.

**ಕರಿವ್ರತ** :- ಎರಡು ಫಲ ಪ್ರಮಾಣಕ್ಕಿಂತ ಹೆಚ್ಚಿನ ಚಿನ್ನದಲ್ಲಿ ಒಂದು ರಥ, ಎರಡು ಆನೆಗಳನ್ನು ಮಾಡಿಸಿ, ಉಪಕರಣಗಳೊಂದಿಗೆ ಜ್ಞಾನಿಗಳಿಗೆ ವ್ರತಗೈಯುವವನು ಉಪವಾಸ ಮಾಡಿ ಈ ಬಂಗಾರದ ಆನೆ, ರಥಗಳನ್ನು ದಾನಮಾಡಬೇಕು. ಇದರಿಂದ ಸಾವಿರ ಕಲ್ಪಸತ್ಯಲೋಕ ಪ್ರಾಪ್ತಿ. ಇದಕ್ಕೆ ಕರಿವ್ರತ ಅರ್ಥಾತ್ ಆನೆಯ ವ್ರತ ಎಂದು ಕರೆಯುವರು.

**ಸುಮುಖವ್ರತ** :- ಮುಖವನ್ನು ಸುವಾಸನೆಯುಳ್ಳದ್ದನ್ನಾಗಿ ಮಾಡುವ ಯಾಲಕ್ಕಿ, ಪತ್ರಿ ಮುಂತಾದ ಸುಗಂಧಿ ದ್ರವ್ಯಗಳನ್ನು ಒಂದು ವರ್ಷ ತಿನ್ನದೆ ಅನಂತರ ಬ್ರಾಹ್ಮಣರಿಗೆ ದಾನ ಕೊಡಬೇಕು. ಜೊತೆಗೆ ಗೋದಾನವನ್ನು ನೀಡಬೇಕು. ಇದರಿಂದ ಕುಬೇರನಂತೆ ಯಕ್ಷ ಕುಲಕ್ಕೆ ಅಧಿಪತಿ ಆಗುವನು. ಇದಕ್ಕೆ **ಸುಮುಖವ್ರತ**ವೆಂದು ಹೆಸರಿರುತ್ತದೆ.

**ವಾರುಣ ವ್ರತ** :- ರಾತ್ರಿ ಹೊತ್ತು ಸ್ನಾನಮಾಡಿ, ಊಟ ಬಿಟ್ಟು ಬರಿ ಜಲಪಾನ ಮಾಡಿ, ಬೆಳಿಗ್ಗೆ ಎದ್ದು ; ಗೋದಾನ ಮಾಡಬೇಕು. ಇದರಿಂದ ವರುಣ ಲೋಕ ಲಾಭ. ಇದಕ್ಕೆ **ವರುಣವ್ರತ** ಎಂದು ಕರೆಯುತ್ತಾರೆ.

**ಚಂದ್ರವ್ರತ** :- ಚಾಂದ್ರಾಯಣ ವ್ರತ ಮಾಡಬೇಕೆನ್ನುವರು ವ್ರತ ಸಮಾಪ್ತಿ ಕಾಲದಲ್ಲಿ ಚಿನ್ನದ ಚಂದ್ರನನ್ನು ಮಾಡಿಸಿ ದಾನಕೊಡಬೇಕು. ಇದರಿಂದ ಚಂದ್ರ ಲೋಕ ಪ್ರಾಪ್ತಿಯಾಗುವದು. ಇದನ್ನು ಚಂದ್ರವ್ರತವೆಂಬ ಹೆಸರಿನಿಂದ ಕರೆದಿದ್ದಾರೆ.

**ಶಂಭುವ್ರತ** :- ಜ್ಯೇಷ್ಠ ಮಾಸದಲ್ಲಿ ಪಂಚಾಗ್ನಿ ಮಧ್ಯೆ ನಿಂತು ತಪಸ್ಸುಮಾಡಬೇಕು. ಕೊನೆಗೆ ಚಿನ್ನದ ಹಸುವನ್ನು ಮಾಡಿಸಿ ದಾನ ನೀಡಬೇಕು. ಜ್ಯೇಷ್ಠಮಾಸದ ಅಷ್ಟಮಿಯಿಂದ ಚತುರ್ದಶಿಯವರೆಗೆ ಇಂತಹ ವ್ರತಮಾಡಿದರೆ ಸ್ವರ್ಗಲೋಕವು ಲಭಿಸುವದು. **ಮಹಾದೇವ ವ್ರತ** ಎಂದು ಇದನ್ನು ಹೆಸರಿಸಿದ್ದಾರೆ.

**ಭವಾನೀವ್ರತ** :- ಪ್ರತಿ ತಿಂಗಳ ಶುಕ್ಲಕೃಷ್ಣಪಕ್ಷಗಳ ತೃತಿಯಾ ದಿನಗಳಲ್ಲಿ ಶಿವಮಂದಿರಕ್ಕೆ ಹೋಗಿ, ಶಿವ-ಸತಿಯರಿಗೆ ಕೈಜೋಡಿಸಿ ನಮಸ್ಕಾರವನ್ನು ಮಾಡಬೇಕು. ವರ್ಷದ ಕೊನೆಗೆ ಗೋದಾನ ಗೈಯಬೇಕು. ಇದರ ಹೆಸರು **ಭವಾನೀವ್ರತ**.

**ತಾಪಕವ್ರತ** :- ಮಾಘ ಮಾಸದಲ್ಲಿ ಸ್ನಾನ ಮಾಡಿ. ಒದ್ದೆ ಬಟ್ಟೆಯಲ್ಲಿಯೇ ದೇವರ ಪ್ರದಕ್ಷಿಣೆ ನಮಸ್ಕಾರಾದಿ ಸೇವೆಮಾಡಿ, ಸಪ್ತಮಿ ದಿನ ಗೋದಾನ ಕೊಡಬೇಕು. ಇದರಿಂದ ಸ್ವರ್ಗ ಸುಖವು ಲಭಿಸುವುದು. ಇದೇ **ತಾಪಕವ್ರತ**.

**ಧಾಮವ್ರತ** :- ಫಾಲ್ಗುಣ ಮಾಸದಲ್ಲಿ ಮೂರು ರಾತ್ರಿ ಉಪವಾಸ ಇರಬೇಕು. ಅನಂತರ ಒಂದು ಮನೆಯನ್ನು ಕಟ್ಟಿಸಿ ಜ್ಞಾನಿಗೆ ದಾನಕೊಟ್ಟರೆ ಸೂರ್ಯಲೋಕ ಪ್ರಾಪ್ತಿ. ಸೂರ್ಯಾಂತನಾದ ನಾರಾಯಣನು ಇದರಿಂದ ಪ್ರೀತನಾಗುವನು. ಇದು **ಧಾಮವ್ರತ**.

**ಮೋಕ್ಷವ್ರತ** :- ಮೂರುದಿನ ಉಪವಾಸಮಾಡಿ, ಸಾಯಂಕಾಲ ದಂಪತಿಪೂಜೆ ಮಾಡಬೇಕು. ಅವರಿಗೆ ವಸ್ತ್ರಾಭರಣ ನೀಡಬೇಕು. ಇದು ಮೋಕ್ಷಸಾಧಕ. ಆದುದರಿಂದಲೇ ಇದಕ್ಕೆ **ಮೋಕ್ಷವ್ರತ** ಎಂಬ ಹೆಸರು ಬಂದಿದೆ.

**ಸೋಮವ್ರತ** :- ಶುಕ್ಲಪಕ್ಷ ದ್ವಿತೀಯಾ ದಿನ ಬ್ರಾಹ್ಮಣನಿಗೆ ಕಂಚಿನಪಾತ್ರೆಯಲ್ಲಿ ಉಪ್ಪನ್ನು ಒಂದು ವರ್ಷದವರೆಗೆ ದಾನಕೊಡಬೇಕು. ಕೊನೆಗೆ ಹಸುವನ್ನು ದಾನನೀಡಬೇಕು. ಇದರಿಂದ ಸಾರ್ವಭೌಮ ಪದವಿ ಇಲ್ಲಿಯಾದರೆ, ಪರದಲ್ಲಿ ಶಿವಲೋಕ ಪ್ರಾಪ್ತಿ. ಶಿವಸ್ಥಾನವನ್ನು ವ್ರತಕರ್ತನಿಗೆ ದೊರಕಿಸಿ ಕೊಡುವದರಿಂದ ಇದನ್ನು **ಸೋಮವ್ರತ** ಎಂದಿದ್ದಾರೆ.

**ಅಗ್ನಿವ್ರತ** :- ಪ್ರತಿಪದೆಯ ದಿನ ಒಪ್ಪತ್ತು ಊಟ, ವರ್ಷದ ಕೊನೆಗೆ ಬಂಗಾರದ ಪದ್ಮವನ್ನು ಮಾಡಿಸಿ ದಾನ ನೀಡಬೇಕು. ಇದರಿಂದ ಅಗ್ನಿಲೋಕ ಪ್ರಾಪ್ತಿ. ಇದಕ್ಕೆ **ಅಗ್ನಿವ್ರತ** ಎಂದು ಕರೆಯುತ್ತಾರೆ.

**ವಿಶ್ವವ್ರತ** :- ಎರಡೂ ಪಕ್ಷಗಳ ದಶಮಿ ತಿಥಿಯಂದು ಒಪ್ಪತ್ತುಊಟ. ವರ್ಷದ ಕೊನೆಗೆ ಹತ್ತು ಗೋದಾನ, ಒಂದು ಬಂಗಾರದ ನೀಲಾಂಜನ ದಾನಮಾಡಬೇಕು.

ಇದರಿಂದ ಸರ್ವಪಾತಕ ಪರಿಹಾರ. ಮತ್ತು ಸರ್ವಲೋಕಾಧಿಪತ್ಯವು ಜನ್ಮಾಂತರದಲ್ಲಿ ಲಭಿಸುವದು. ಇದನ್ನು ಶಾಸ್ತ್ರಕಾರರು **ವಿಶ್ವವ್ರತ** ಎಂದಿದ್ದಾರೆ.

**ಕನ್ಯಾದಾನವ್ರತ** :- ದಾನಗಳಲ್ಲಿ ಸರ್ವಶ್ರೇಷ್ಠವೆಂದರೆ ಕನ್ಯಾದಾನವನ್ನು ಮಾಡಿದವನು ತನ್ನ ಇಪ್ಪತ್ತೊಂದು ತಲೆಮಾರಿನ ವಂಶಜರಿಂದ ಒಡಗೂಡಿಕೊಂಡು ಬ್ರಹ್ಮಲೋಕಕ್ಕೆ ಪ್ರಯಾಣಮಾಡುವನು. ಕನ್ಯಾದಾನಕ್ಕಿಂತ ಹೆಚ್ಚಿನದಾನವಿಲ್ಲ. ಕನ್ಯಾದಾನಮಾಡಿದವನಷ್ಟೇ ಅಲ್ಲ, ಯೋಗ್ಯಸ್ಥಳನೋಡಿ ಮದುವೆಗೆ ಎಲ್ಲ ರೀತಿಯಿಂದ ಅನುಕೂಲಮಾಡಿಕೊಟ್ಟು ವರಕನ್ಯಾ ಘಟನಾ ಆಗುವಂತೆ ಪ್ರಯತ್ನ ಮಾಡಿದವರೂ ಕೂಡ ಊದ್ಧೃತರಾಗಿ ಪಿತೃಗಳನ್ನೂ ಉದ್ಧರಿಸಿ ಅವರೊಂದಿಗೆ ಪಿತೃಲೋಕದಲ್ಲಿ ಸುಖಪಡುವರು.

ಈ ಅರವತ್ತು ವ್ರತಗಳಲ್ಲಿ ಒಂದನ್ನಾಗಲಿ ಪುಷ್ಕರ ಕ್ಷೇತ್ರದಲ್ಲಿ ವಿಶೇಷವಾಗಿ ಕಾರ್ತಿಕಮಾಸದಲ್ಲಿ ಯೋಗ್ಯವಾದ ಮನುಷ್ಯನಿಗೆ ಅಕ್ಷಯ ಸ್ವರ್ಗಲೋಕ ಪ್ರಾಪ್ತಿ ಆಗುವದು. ಎಳ್ಳನ್ನು ಸೇರಿಸಿ ಹಿಟ್ಟಿನಲ್ಲಿ ಆನೆಯನ್ನುಮಾಡಿ ಅದನ್ನು ಅಲಂಕರಿಸಿ ನಡುನೀರಿನಲ್ಲಿ ನಿಂತುಕೊಂಡು ಬ್ರಾಹ್ಮಣನಿಗೆ ದಾನ ಮಾಡಿದರೆ ಇಂದ್ರಲೋಕವು ಲಭಿಸುವದು. ಅರವತ್ತು ವ್ರತಗಳನ್ನು ಮಾಡಿದವರು ಮಾತ್ರವಲ್ಲದೆ ಭಕ್ತಿಯಿಂದ ಹೇಳಿದವರೂ ಕೇಳಿದವರೂ ಮೂರು ಮನ್ವಂತರ ಕಾಲ ಗಂಧರ್ವ ಲೋಕಕ್ಕೆ ಅಧಿಪತಿಯಾಗಿ ಇರುವರು. ಭೀಷ್ಮನೆ, ಪ್ರಪಂಚದಲ್ಲಿ ಸದಾಚಾರ ಸಂಪನ್ನರಾದ ಆಸ್ತಿಕ ಜನರು ಮಾಡಲುಯೋಗ್ಯವಾದ ಈ ಅರವತ್ತು ವ್ರತಗಳನ್ನು ಆಚರಿಸಲು ಮುಖ್ಯವಾಗಿ ಇರಬೇಕಾದ ಅರ್ಹತೆ ಎಂದರೆ ಆಸ್ತಿಕ್ಯ ದೇವಭಕ್ತಿ.

## ಸ್ನಾನವಿಧಿ

ಎಲ್ಲ ಪುಣ್ಯಕರ್ಮಗಳಿಗೂ ಮನುಷ್ಯನಿಗೆ ಅಂತಃಕರಣ ಶುದ್ಧಿ ಅತ್ಯಾವಶ್ಯಕ. ಆ ಅಂತಃಕರಣ ಶುದ್ಧಿಯಾಗಬೇಕಾದರೆ ಮನಸ್ಸು ನಿರ್ಮಲವಾಗಿರಬೇಕು. ಸ್ನಾನ ಇಲ್ಲದೆ ಮನಸ್ಸು ನಿರ್ಮಲವಾಗಲಾರದು. ಆದುದರಿಂದ ಮನಃಶುದ್ಧಿಗಾಗಿ ಮೊಟ್ಟ ಮೊದಲು ಸ್ನಾನವನ್ನು ಶಾಸ್ತ್ರದಲ್ಲಿ ವಿಧಾನ ಮಾಡಿದ್ದಾರೆ. ಸ್ನಾನವನ್ನು ಮನೆಯಲ್ಲಿ ತುಂಬಿಟ್ಟ ನೀರಿನಿಂದಾಗಲಿ ಅಥವಾ ಬಾವಿಯಿಂದ ಸೇದಿದ ನೀರಿನಿಂದಾಗಲಿ ಅಥವಾ ಜಲಾಶಯಗಳಲ್ಲಿ ಮುಳುಗು ಹಾಕುವದರಿಂದಾಗಲಿ ಮಾಡಬಹುದು. ಯಾವ ನೀರಿನಲ್ಲಿಯೇ ಸ್ನಾನಮಾಡಲಿ ಮೊದಲು ತಾನು ಸ್ನಾನ ಮಾಡುವ ನೀರನ್ನು 'ಓಂ ನಮೋ ನಾರಾಯಣಾಯ' ಎಂಬ ಮೂಲಮಂತ್ರದಿಂದ ಅಭಿಮಂತ್ರಿಸಿ ತೀರ್ಥವನ್ನಾಗಿ ಮಾಡಿಕೊಳ್ಳಬೇಕು.

**ಅವಗಾಹನ ಸ್ನಾನವೆಂದರೆ** :- ನದೀ ಸರೋವರ ಮುಂತಾದ ಜಲಾಶಯಗಳಲ್ಲಿ ಮುಳುಗುಹಾಕಲು ಬರುವ ನೀರಿನ ಸ್ನಾನ ಎಂದು ಅರ್ಥ. ಇಂತಹ ಜಲಾಶಯಗಳಲ್ಲಿ ಸ್ನಾನ ಮಾಡುವಾಗ ದರ್ಭೆಯಿಂದ ಮಾಡಿದ ಪವಿತ್ರ ಹಾಕಿಕೊಂಡು ಆಚಮನ ಮಾಡಬೇಕು. ಸ್ನಾನಕ್ಕಾಗಿ ತಾನು ನಿಂತುಕೊಂಡ ನೀರಿನ ಸುತ್ತಲೂ ನಾಲ್ಕು ತೋಳಿನಷ್ಟು ಸ್ಥಳದಲ್ಲಿ ಕಸಕಡ್ಡಿ ಪಾಚಿ ಮುಂತಾದ ದ್ರವ್ಯಗಳಿದ್ದರೆ ಹೊಡೆದು ಸ್ವಚ್ಛಮಾಡಿಕೊಂಡು ಮೂಲ

ಮಂತ್ರದಿಂದ ಆ ನೀರನ್ನು ತೀರ್ಥವನ್ನಾಗಿ ಮಾಡಿಕೊಂಡು ಅನಂತರ ಗಂಗೆಯನ್ನು ಆಹ್ವಾನಿಸಬೇಕು. ವಿಷ್ಣುವಿನ ಪಾದದಿಂದ ನೀರು ಹುಟ್ಟಿದ್ದರಿಂದ ಗಂಗೆಯೆ, ನಿನಗೆ ವೈಷ್ಣವೀ ಎಂದು ಹೆಸರು. ವಿಷ್ಣುವಿನಂತೆ ನೀನೂ ಲೋಕ ಪೂಜಿತಳಾಗಿರುವೆ. ಇಂತಹ ಮಹಾಮಹಿಮೋಪೇತಳಾದ ನೀನು, ನಮ್ಮ ಹುಟ್ಟಿದಂದಿನಿಂದ ಸಾಯುವವರೆಗೆ ಗೈದ ಪಾಪಗಳನ್ನೆಲ್ಲ ಕಳೆದು ರಕ್ಷಣೆ ಮಾಡು.

ಮರಣ ಕಾಲದವರೆಗೆ ನೀನೇ ನಮ್ಮ ರಕ್ಷಕಳಾಗಿ ಭೂಮಿ, ಆಕಾಶ, ಸ್ವರ್ಗ ಎಂಬ ತ್ರಿಲೋಕದಲ್ಲಿ ಇರುವ ಒಟ್ಟು ತೀರ್ಥಗಳ ಸಂಖ್ಯೆ ಮೂರೂವರೆ ಕೋಟಿ. ಆ ಎಲ್ಲ ತೀರ್ಥಗಳು ಗಂಗಾ ನದಿಯಲ್ಲಿ ಸನ್ನಿಹಿತವಾಗಿರುವದಾಗಿ ವಾಯುದೇವರು ಹೇಳಿದ್ದಾರೆ. ನಿನಗೆ ನಂದಿನಿ ಎಂದು ಹೆಸರಿದೆ. ದೇವತೆಗಳು ನಲಿನಿ ಎಂದೂ ಕರೆಯುತ್ತಾರೆ. ಇವಲ್ಲದೆ ದಕ್ಷಾ, ಪೃಥ್ವಿ, ಸುಭಗಾ, ವಿಶ್ವಕಾಯಾ, ಶಿವ, ಅಮೃತಾ, ವಿದ್ಯಾಧರಿ, ಮಹಾದೇವಿ, ಲೋಕ ಪ್ರಸಾದಿನಿ, ಕ್ಷೇಮಾ, ಜಾನ್ಹವಿ, ಶಾಂತಾ, ಶಾಂತಿಪ್ರದಾ ಮುಂತಾಗಿ ನಿನಗೆ ಬೇರೆ ಬೇರೆ ಹೆಸರುಗಳು ಉಂಟು. ಇವೆಲ್ಲ ನಿನ್ನ ನಾಮಗಳು, ಪುಣ್ಯನಾಮಗಳು. ಇವುಗಳನ್ನು ಸ್ನಾನಮಾಡುವಾಗ ಪಠಿಸಬೇಕು. ಪವಿತ್ರವಾದ ಈ ಗಂಗಾದೇವಿಯ ಪುಣ್ಯನಾಮಗಳ ಸಂಸ್ಮರಣೆಯಿಂದ ಸ್ನಾನಮಾಡುವ ಜಲದಲ್ಲಿ ಗಂಗೆಯ ಸನ್ನಿಧಾನ ಬರುವುದು.

ಏಳು ಸಲ ಗಂಗೆಯ ಹೆಸರನ್ನು ಬೆರಳು ಹಾಕಿ ಜಪಿಸಿ, ಕೈ ಮುಗಿದು ಮೂರು ಸಲ ಮುಳುಗು ಹಾಕಬೇಕು. ಆ ಮೇಲೆ ಮತ್ತೆ ಗಂಗೆಯ ಸ್ಮರಣೆ ಮಾಡಿ ನಾಲ್ಕು ಸಲ ಮುಳುಗು ಹಾಕಬೇಕು. ಅನಂತರ ಐದು ಸಲ, ಏಳು ಸಲ, ಹೀಗೆ ಗಂಗೆಯ ಶುಭ ನಾಮಗಳನ್ನು ಪಠಿಸಿ, ಜಲಾಶಯಗಳಲ್ಲಿ ಅವಗಾಹನ ಸ್ನಾನಮಾಡಬೇಕು. ಮಂತ್ರ ಹೇಳಿ ಗಂಗೆಯ ನೀರಿನ ಕೆಳಗಡೆ ಇರುವ ಮಣ್ಣನ್ನು ತೆಗೆದು ಮೈಗೆ ಲೇಪಿಸಿಕೊಂಡು ಮೃತ್ತಿಕಾ ಸ್ನಾನಮಾಡಬೇಕು.

"ತಾಯಿ, ಭೂದೇವಿಯೆ, ನಿನ್ನ ಮೇಲೆ ಕುದುರೆ, ರಥ, ಮಾನವರೆ ಮೊದಲಾದ ಪ್ರಾಣಗಳು ಓಡಾಡಿದಂತೆ ಶ್ರೀಹರಿಯೂ ತಿರುಗಾಡಿದ್ದಾನೆ. ಅವನ ಪಾದ ಸ್ಪರ್ಶದಿಂದ ನೀನು ಪವಿತ್ರಳಾಗಿರುವಿ. ಇಂತಹ ನಿನ್ನನ್ನು ಶ್ರೀ ಕೃಷ್ಣನು ವರಾಹ ರೂಪದಿಂದ ಎತ್ತಿ ಹಿಡಿದಿದ್ದಾನೆ. ಅನಂತ ಬಾಹುವಾದ ಆ ಪರಮಾತ್ಮನು ಯಾವಾಗಲೂ ಚರಾಚರ ಪ್ರಪಂಚದ ಭಾರವನ್ನು ಹೊರಲು ಸಮರ್ಥನಾಗುವಂತೆ ನಿನ್ನನ್ನು ಎತ್ತಿ ಹಿಡಿದಿದ್ದಾನೆ. ಭಗವಂತನು ಎತ್ತಿ ಹಿಡಿದ ಮೃತ್ತಿಕೆಯೇ ನಾನು ಈ ವರೆಗೂ ಮಾಡಿದ ಎಲ್ಲ ಪಾಪಗಳನ್ನು ನೀನು ಪರಿಹರಿಸು. ಎಲ್ಲ ಲೋಕಗಳೂ ಎಲ್ಲ ಜೀವಿಗಳೂ ಮಣ್ಣಿನ ಮಕ್ಕಳೇ ಅಲ್ಲವೆ ? ವಿಶ್ವಜನನಿಯಾದ ಭೂಮಾತೆಯೇ ನಿನಗೆ ನಮಸ್ಕಾರ."

ಹೀಗೆ ಪ್ರಾರ್ಥನೆಮಾಡಿ ಮೈಗೆ ಮೃತ್ತಿಕಾ ಲೇಪಗೈದು ಸ್ನಾನಮಾಡಿ ಅನಂತರ ವಿಧಿಪೂರ್ವಕವಾಗಿ ಆಚಮನ ಮಾಡಿ ಮೇಲೇಳಬೇಕು. ನಂತರ ಮೇಲೆದ್ದು, ಒಂದು ಶುಭ್ರ ಒಣ ಬಟ್ಟೆ ಉಟ್ಟುಕೊಂಡು, ಮತ್ತೊಂದು ಮಡಿ ಪಂಚೆಯನ್ನು ಹೊದ್ದುಕೊಳ್ಳಬೇಕು. ನಂತರ ಮೂರು ಲೋಕಗಳ ಶಾಂತಿಗಾಗಿ ತರ್ಪಣ ಕೊಡಬೇಕು. ಮೊದಲು ವಿಷ್ಣು, ನಂತರ ಬ್ರಹ್ಮ ಹಾಗೂ ರುದ್ರ ಮತ್ತು ಉಳಿದ ದೇವತೆಗಳನ್ನು ಕುರಿತು ನೀರಿನಿಂದ ತರ್ಪಣ ನೀಡಬೇಕು. ಬಳಿಕ ಯಕ್ಷ, ನಾಗ, ಗಂಧರ್ವ, ಅಪ್ಸರ, ಅಸುರ, ಸರ್ಪ, ಗರುಡ, ಜಂಭಕ, ವಿದ್ಯಾಧರ, ಜಲಧರ, ಖೇಚರ ಮುಂತಾದ ದೇವ, ಜೀವ, ಜಂತುಗಳನ್ನು ಉದ್ದೇಶಿಸಿ

ಜಲಾಂಜಲಿಯನ್ನು ಕೊಡಬೇಕು. ಕೊನೆಗೆ ನಿರಾಧಾರರು, ಗತಿಯಿಲ್ಲದವರು ಆದ ಸಚೇತನರಿಗೆ ಶಾಂತಿಯಾಗಲಿ ಎಂದು ತರ್ಪಣನೀಡಬೇಕು. ದೇವತೆಗಳಿಗೆ ತರ್ಪಣ ಕೊಡುವಾಗ ಜನಿವಾರವನ್ನು ಎಡ ಭುಜದ ಮೇಲೆ ಹಾಕಿಕೊಂಡು 'ಸವ್ಯ' ದಿಂದಲೇ ತರ್ಪಣ ಕೊಡಬೇಕು. ಋಷಿ, ಋಷಿಪುತ್ರ ಮುಂತಾದವರಿಗೆ ತರ್ಪಣಕೊಡುವಾಗ ಜನಿವಾರವನ್ನು ಮಾಲಾಕಾರ ಮಾಡಿಕೊಂಡು ತರ್ಪಣ ಕೊಡಬೇಕು. ಸನಕ, ಸನಂದನ, ಸನಾತನ, ಕಪಿಲ, ಅಸುರ, ಒಡು, ಪಂಚಶಿಖ, ಮರೀಚಿ, ಅತ್ರಿ, ಅಂಗಿರಸ, ಪುಲಹ, ಪುಲಸ್ತ್ಯ, ಪ್ರಚೇತ, ಕ್ರತು, ವಶಿಷ್ಠ, ಭೃಗು, ನಾರದ ಮುಂತಾದ ಮಹರ್ಷಿಗಳು ನಾನು ಕೊಟ್ಟ ಈ ನೀರಿನಿಂದ ತೃಪ್ತರಾಗಲಿ ಎಂದು ಅಕ್ಷತ ಸಹಿತವಾದ ನೀರಿನಿಂದ ತರ್ಪಣ ಕೊಡಬೇಕು.

**ಅನಂತರ ಅಪಸವ್ಯ :-** ಅಂದರೆ ಬಲ ಭುಜದ ಮೇಲೆ ಜನಿವಾರ ಹಾಕಿ, ಪಿತೃಗಳನ್ನು ಉದ್ದೇಶಿಸಿ, ಮೊಳಕಾಲು ಮಡಿಚಿಕೊಂಡು, ಎಡಮಂಡಿಯನ್ನು ನೆಲಕ್ಕೆ ಊರಿ, ಅಗ್ನಿಷ್ವಾತ್ತ, ಸೌಮ್ಯ, ಹವಿಷ್ಮಂತ, ಸುಕಾಲಿ, ಬರ್ಹಿಷದ, ಅಜ್ಯಪ ಮುಂತಾದ ಪಿತೃಗಳಿಗೆ ತರ್ಪಣ ಕೊಡಬೇಕು. ಪಿತೃ ತರ್ಪಣದಲ್ಲಿ ನೀರಿನೊಂದಿಗೆ ಎಳ್ಳನ್ನು ಬೆರೆಸಬೇಕು. ತದನಂತರ ದರ್ಭಪಾಣಿಯಾಗಿಯೇ ಮರಣ ಹೊಂದಿದ ತನ್ನ ತಂದೆ ಹಾಗೂ ತಾಯಿಯ ತಂದೆ, ತನ್ನ ಅಜ್ಜ ಮುಂತಾದವರ ಹೆಸರು ಗೋತ್ರಗಳನ್ನು ಉಚ್ಚರಿಸಿ, ತರ್ಪಣ ನೀಡಬೇಕು. ಹೀಗೆ ಶಾಸ್ತ್ರೋಕ್ತವಾಗಿ ಪಿತೃಗಳಿಗೆಲ್ಲ ನಾಮ ಗೋತ್ರೋಚ್ಚಾರಣದ ಮೂಲಕ ತರ್ಪಣ ನೀಡಿ, ಕೊನೆಗೆ ಜಲಾಂಜಲಿಯನ್ನು ನೀಡಬೇಕು. ನನಗೆ ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಬಾಂಧವರಾಗಿರುವವರಿಗೆ ನೀರು ಕೊಡಲು ಮಕ್ಕಳು ಅಥವಾ ಹತ್ತಿರದ ಬಂಧುಗಳಿಲ್ಲದಿದ್ದಲ್ಲಿ ಅವರೆಲ್ಲರಿಗೂ ನಾನು ಈ ತರ್ಪಣ ಕೊಡುತ್ತೇನೆ. ನನ್ನಿಂದ ನೀರನ್ನು ಬಯಸುವ ಆ ಎಲ್ಲ ಬಂಧುಗಳು ಈ ಜಲಾಂಜಲಿಯಿಂದ ತೃಪ್ತಿ ಹೊಂದಲಿ ಎಂದು ಮಂತ್ರಹೇಳಿ, ತರ್ಪಣಬಿಡಬೇಕು. ಅನಂತರ ಆಚಮನಮಾಡಿ, ತನ್ನ ಮುಂಭಾಗದಲ್ಲಿ ಒಂದು ಪದ್ಮವನ್ನು ಬರೆಯಬೇಕು. ಅದರಲ್ಲಿ ಸೂರ್ಯನ ನಾಮೋಚ್ಚಾರಣೆ ಮಾಡಿ ಅಕ್ಷತೆ, ಕೆಂಪು ಚಂದನದಿಂದ ಸಹಿತವಾಗಿ "ಸೂರ್ಯಾಯ"ನಮಃ ಎಂದು ಹೇಳಿ ಅರ್ಘ್ಯವನ್ನು ಕೊಡಬೇಕು. ಹೀಗೆ ಸೂರ್ಯದೇವನನ್ನು ಪ್ರಾರ್ಥಿಸಿ ನಮಸ್ಕಾರಮಾಡಿ ಮೂರು ಪ್ರದಕ್ಷಿಣೆ ಹಾಕಬೇಕು. ಅನಂತರ ಬ್ರಾಹ್ಮಣ ಹಸು ಬಂಗಾರವನ್ನು ಕೈಯಿಂದ ಮುಟ್ಟಿ ಜಲಾಶಯದಿಂದ ಹೊರಟು ಮನೆಗೆ ಹೋಗಬೇಕು. ಮನೆ ಅಥವಾ ಮಠ ಅಥವಾ ಆಶ್ರಮಗಳಿರುವ ಸ್ಥಾನವನ್ನು ದೇವರ ಪೂಜೆಯನ್ನು ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತ ರೀತಿಯಲ್ಲಿ ವಿಧಿಪೂರ್ವಕ ಮಾಡಬೇಕು. ಪೂಜೆಮುಗಿದ ಬಳಿಕ ಮೊದಲು ಜ್ಞಾನಿಗಳಿಗೆ ಭೋಜನಮಾಡಿಸಿ ನಂತರ ತಾನೂ ಊಟಮಾಡಬೇಕು. ಹಿಂದಿನ ಋಷಿ ಮುನಿಗಳೆಲ್ಲ ಸಿದ್ಧಿ ಪಡೆದದ್ದು ಇದೇ ಮಾರ್ಗದಿಂದ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪುಷ್ಪವಾಹನ ರಾಜನ ಕಥೆ ಎಂಬ ಇಪ್ಪತ್ತನೇಯ ಅಧ್ಯಾಯ ಮುಗಿದುದು*

—o—

॥ ಪುಲಸ್ತ್ಯ ಉವಾಚ ॥

ಆಸೀತ್ಪುರಾ ಬೃಹತ್ಕಲ್ಪೇ ಧರ್ಮಮೂರ್ತಿರ್ನರಾಧಿಪಃ ।
ಸುಹೃಚ್ಛಕ್ರಸ್ಯ ನಿಹತಾಯೇನ ದೈತ್ಯಾಸ್ಸಹಸ್ರಶಃ ॥

**ಪುಲಸ್ತ್ಯ** :- ಹಿಂದೆ ಬೃಹತ್ಕಲ್ಪದಲ್ಲಿ ಓರ್ವ ರಾಜನಿದ್ದನು. ಧರ್ಮಮೂರ್ತಿ ಅವನ ಹೆಸರು. ಅವನು ಇಂದ್ರನಿಗೆ ಮಿತ್ರ. ಅವನು ಸಂಹರಿಸಿದ ದೈತ್ಯರು ಸಹಸ್ರಾರು. ಚಂದ್ರ ಸೂರ್ಯರೂ ಕೂಡ ಅವನ ತೇಜಸ್ಸಿನಿಂದ ಕಾಂತಿಕಳೆದು ಕೊಂಡಂತಾಗಿದ್ದರು. ಬಯಸಿದ ರೂಪವನ್ನು ಧರಿಸಬಲ್ಲವನಾಗಿದ್ದ ಆ ದೊರೆ. ಅವನ ಪಟ್ಟದರಾಣಿ ಭಾನುಮತಿ. ಮೂರು ಲೋಕಗಳಲ್ಲಿಯೇ ಸಮರಿಲ್ಲದ ಸುಂದರಿ. ರೂಪದಲ್ಲಿ ಅವಳೊಬ್ಬ ಸಿರಿದೇವಿ. ಎಲ್ಲ ಸುರಸುಂದರಿಯರನ್ನು ಚೆಲುವಿಕೆಯಿಂದ ಗೆಲ್ಲುವಂಥ ಸೌಂದರ್ಯ ಶ್ರೀ ಅವಳದಾಗಿತ್ತು. ಆ ಪಟ್ಟಮಹಿಷಿಯು ಧರ್ಮಮೂರ್ತಿ ಮಹಾರಾಜನಿಗೆ ತನ್ನ ಪಂಚಪ್ರಾಣಗಳ ಪ್ರಿಯೆ. ಹತ್ತು ಸಾವಿರ ಚೆಲುವೆಯರಲ್ಲಿಯೂ ಎದ್ದು ಕಾಣುವಂತಹ ರೂಪವು ಅವಳದು. ಅವಳು ನಕ್ಕರೆ, ನುಡಿದರೆ ನಡೆದರೆ ಸಾಕ್ಷಾತ್ ಇಂದಿರೆಯಂತೆ ಅತ್ಯಂತ ಸುಂದರಿಯಾಗಿ ತೋರುತ್ತಿದ್ದಳು. ಆ ರಾಜನಿಗೆ ವಶಿಷ್ಠರೇ ಪುರೋಹಿತರು.

ಒಂದು ದಿನ ಆ ಧರ್ಮಮೂರ್ತಿ ಮಹಾರಾಜನು ಕುಲಗುರುಗಳನ್ನು ಪ್ರಶ್ನಿಸಿದ. ಅವನಿಗೆ ದೈವವು ತನಗೆ ಕೊಟ್ಟ ಭೋಗ ಭಾಗ್ಯಗಳನ್ನು ಕಂಡು ಕೌತುಕವೆನಿಸಿತ್ತು.

**ರಾಜ** :- ಪೂಜ್ಯರೆ, ರಾಜ್ಯಲಕ್ಷ್ಮೀ, ಧನಲಕ್ಷ್ಮೀ, ಕಾಂತಿಲಕ್ಷ್ಮೀ, ಮೂರೂ ನನ್ನಲ್ಲಿ ಮೇಳವಿಸಿರುತ್ತವೆ. ನನ್ನ ಶರೀರವನ್ನು ನೋಡಿದರೆ ತಮಗೆ ಗೊತ್ತಾಗಬಹುದು, ಎಂತಹ ತೇಜ ನನ್ನ ಅಂಗಾಗಗಳಲ್ಲಿ ಬೆಳಗುತ್ತಿದೆ. ಎಂಬುದು ನನ್ನ ಇಂತಹ ಶ್ರೀ ಸಮೃದ್ಧಿಗೆ ಕಾರಣವಾದರೂ ಏನು ?

**ವಶಿಷ್ಠ** :- ಹಿಂದೆ ಓರ್ವ ವೇಶ್ಯೆ ಇದ್ದಳು. ಅವಳು ಶಿವಭಕ್ತಳು ಶಿವನ ಸೇವೆಯಲ್ಲಿಯೇ ತನ್ನ ತೆಳುವಾದ ತನುವನ್ನು ತೇಯುತ್ತಲಿದ್ದಳು. ಲೀಲಾವತಿ ಆ ಲಲನೆಯ ಹೆಸರು. ಒಂದು ಚತುರ್ದಶಿಯ ದಿನ ಆ ಚೆಲೆವೆಣ್ಣು ಉಪ್ಪಿನ ಬೆಟ್ಟವನ್ನು ದಾನನೀಡಿದಳು. ಆ ಪುಣ್ಯಕಾರ್ಯವನ್ನು ನೆರವೇರಿಸಿದ್ದು ಪುಷ್ಕರ ಕ್ಷೇತ್ರದಲ್ಲಿ. ಆ ಉಪ್ಪಿನ ಮೂಟೆಯ ಮೇಲೆ ಚಿನ್ನದ ಪ್ರತಿಮೆಯನ್ನಿಟ್ಟು ವಿಧಿಯಲ್ಲಿ ಹೇಳಿದಂತೆ ದಾನಕಾರ್ಯವನ್ನು ನೆರವೇರಿಸಿದಳು. ಆ ಬಂಗಾರದ ಮೂರ್ತಿಯನ್ನು ಒಬ್ಬ ಸೊನ್ನಲಿಗ ಮಾಡಿದ್ದ. ದಾಸ ಎಂದು ಅವನ ಹೆಸರು. ಆ ಅಕ್ಕಸಾಲಿಗನು ಲೀಲಾವತಿಯ ಮನೆಯಲ್ಲಿಯೇ ಊಳಿಗದ ಆಳಾಗಿದ್ದ. ಚಿನ್ನದ ದೇವತಾಮೂರ್ತಿಗಳನ್ನು ಮಾಡುವಾಗ ಅದರಲ್ಲಿಯೂ ಮುಖ್ಯ ಮುಖ್ಯ ದೇವೋತ್ತಮರ ಪ್ರತಿಮೆಗಳನ್ನು ನಿರ್ಮಿಸುವಾಗ ಅತ್ಯಂತ ಶ್ರದ್ಧೆಯಿಂದ ಮಾಡುತ್ತಿದ್ದನು. ದೈವೀಪ್ರತಿಮೆಗಳ ನಿರ್ಮಿತಿಗೆ ತನ್ನ ಒಂದು ಧರ್ಮಕಾರ್ಯ ಎಂಬ ಭಾವನೆಯಿಂದಲೇ ಮಾಡುತ್ತಿದ್ದ. ಭಕ್ತಿ ಅವನ ಪ್ರೇರಕ ಶಕ್ತಿ. ವಿಶ್ವಾಸದಿಂದ, ಜಾಗರೂಕತೆ, ಕೌಶಲ್ಯಗಳಿಂದ ಮಾಡುತ್ತಿದ್ದ- ಅವನು ಎಲ್ಲ ಭಗವನ್ಮೂರ್ತಿಗಳನ್ನು, ಆದುದರಿಂದ ಅವನು ಮುಟ್ಟಿದ ಚಿನ್ನದ ಮೂರ್ತಿಗಳೆಲ್ಲ ಚೆಲುವಿನ ಪುತ್ಥಳಿಗಳಾಗಿಯೇ ಅರಳುತ್ತಿದ್ದವು.

ಧರ್ಮಬುದ್ಧಿಯಿಂದ ದೇವತಾ ಪ್ರತಿಮೆಗಳನ್ನು ಮಾಡುತ್ತ ಇದ್ದುದರಿಂದ ಅವನು ಎಂದಿಗೂ ಸಂಬಳ ಅಥವಾ ಕೂಲಿ ತೆಗೆದುಕೊಳ್ಳುತ್ತಿರಲಿಲ್ಲ. ಉಚಿತವಾಗಿಯೇ ಚೆಲುವಿನ ಚಿನ್ನದ ಮೂರ್ತಿಗಳನ್ನು ಚಾತುರ್ಯದಿಂದ ಕಡೆದು, ಕಟೆದು, ನಿರ್ಮಿಸಿ ಕೊಡುತ್ತಿದ್ದ. ಆ ಹೇಮಕಾರನ ಮಡದಿಯು ತನ್ನ ಗಂಡಗೈಯುವ ಈ ಪುಣ್ಯಕರ್ಮದಲ್ಲಿ ಭಕ್ತಿಯಿಂದ ಭಾಗವಹಿಸುತ್ತಿದ್ದಳು. ಬಂಗಾರವನ್ನು ಕರಗಿಸುವ, ಕಾಯಿಸುವ, ಎರಕಹಾಕುವ, ಎಳೆತೆಗೆಯುವ, ಮೈ ಮೂಡಿಸುವ, ಮುಖ ಅರಳಿಸುವ, ಅಂಗಾಂಗಗಳನ್ನು ಬಿಡಿಸುವ ಕಾರ್ಯಗಳಲ್ಲಿ ಶ್ರದ್ಧೆಯಿಂದ ಪತಿಗೆ ಸಹಾಯ ಸಲ್ಲಿಸುತ್ತಿದ್ದಳು. ಹೀಗೆ ಆ ಸುವರ್ಣಕಾರ ದಂಪತಿಗಳು ಲೀಲಾವತಿಯೆಂಬ ಬೆಲೆವೆಣ್ಣಿನ ಮನೆಯಲ್ಲಿ ಬಂಗಾರದ ಕೆಲಸ ಮಾಡುವುದಲ್ಲದೆ, ಬಂದ ಬ್ರಾಹ್ಮಣರ ಹಾಗೂ ಅತಿಥಿ ಅಭ್ಯಾಗತರ ಸೇವೆ, ಶಿಶ್ರೂಷೆ ಮಾಡುತ್ತಿದ್ದರು. ವ್ಯರ್ಥವಾಗಲಿಲ್ಲ ಆ ದಂಪತಿಗಳ ಸೇವೆ ಹಾಗೂ ಭಗವದಾರಾಧನೆ.

ಕೆಲವು ಕಾಲದ ನಂತರ ಭಗವದ್ಭಕ್ತಳಾದ ಆ ಲೀಲಾವತಿ ಪಾಪರಾಶಿಯಿಂದ ಮುಕ್ತಳಾಗಿ ಜನ್ಮ ನೀಗಿದಳು. ಶಿವಮಂದಿರಕ್ಕೆ ಕೊನೆಯ ಪ್ರಯಾಣ ಬೆಳೆಸಿದಳು. ಇತ್ತ ಆ ದರಿದ್ರ ಅಕ್ಕಸಾಲಿಗನು ಬದುಕಿ-ಇರುವವರೆಗೆ ಭಗವಂತನ ಹಾಗೂ ಭಗವದ್ಭಕ್ತರ ಸೇವೆ ಮಾಡುತ್ತಲೇ ದೇಹವನ್ನು ಸವಿಸಿದನು. ಬಡತನ, ಎಳೆತನದಿಂದಲೇ ಅವನಿಗೆ ಬೆನ್ನು ಹತ್ತಿದ್ದರೂ ಅವನ ಸತ್ವಗುಣಕ್ಕೆ ಕೊರತೆ ಇರಲಿಲ್ಲ. ಸಂಬಳ ಅಥವಾ ಕೂಲಿ ತೆಗೆದುಕೊಳ್ಳದೆ ದೇವರ ಪ್ರತಿಮೆಗಳನ್ನು ನಿರ್ಮಿಸಿಕೊಟ್ಟಿದ್ದಕ್ಕಾಗಿ ಆ ಸೊನ್ನಲಿಗನು ಜನ್ಮಾಂತರದಲ್ಲಿ ಭಾಗ್ಯವಂತ ಭೂಪಾಲನಾಗಿ ಹುಟ್ಟಿದನು. ಆ ಅಕ್ಕಸಾಲಿಗನು ಮಹಾರಾಜ. ನೀನೇ ಆಗಿರುವಿ. ಆ ಜನ್ಮದಲ್ಲಿ ಮಾಡಿದ ಪುಣ್ಯದಿಂದ ಈಗ ನೀನು ಸಪ್ತದ್ವೀಪಗಳ ಒಡೆಯನಾಗಿ ಸಾಮ್ರಾಜ್ಯವನ್ನು ಆಳುತ್ತಲಿರುವೆ. ಸಹಸ್ರ ಸೂರ್ಯನಿಗೆ ಸಮನಾಗಿದೆ ನಿನ್ನ ದಿವ್ಯವಾದ ದೇಹಕಾಂತಿ. ನಿನ್ನ ಮಡದಿಯಾದ ಈ ಭಾನುಮತಿಯು ನೀನು ಮಾಡುವ ದೇವತಾಕಾರ್ಯದಲ್ಲಿ ಸರ್ವರೀತಿಯಿಂದಲೂ ಸಹಾಯ ಸಲ್ಲಿಸಿದ್ದರಿಂದ ಈಗ ಮಹಾರಾಣಿಯಾಗಿ ಜನಿಸಿದ್ದಾಳೆ. ಇವಳು ಆಗ ಅಕ್ಕಸಾಲಿಗನ ಅಕ್ಕರೆಯ ಅಂಗನೆ ಆಗಿದ್ದಾಗ ದೇವತಾ ಪ್ರತಿಮೆಗಳ ಅಂಗಾಂಗಗಳನ್ನೆಲ್ಲ ಉಜ್ಜಿ, ತಿಕ್ಕಿ ಪ್ರಕಾಶಮಾನವಾಗಿ ಮಾಡಿದ್ದರಿಂದ ಈಗ ಅಪೂರ್ವವಾದ ಕಾಂತಿಯು ಮಿನುಗುತ್ತಲಿದೆ ಇವಳ ಈ ಸುಂದರ ಶರೀರದಲ್ಲಿ ನಿನಗೆ ದೊರೆತ ದೊರೆತನ, ಇವಳಿಗೆ ಲಭಿಸಿದ ಲಾವಣ್ಯ, ನಿಮಗಿಬ್ಬರೂ ಈಗ ಬಂದ ಸಿರಿತನ ಇವುಗಳಿಗೆಲ್ಲ ಅಂದಿನ ಅರ್ಥಾತ್ ಹಿಂದಿನ ನಿಮ್ಮ ನಿರ್ವ್ಯಾಜ ಭಕ್ತಿ, ನಿಷ್ಕಾಮ ಸೇವೆಗಳೇ ಕಾರಣ. ಆ ವೇಶ್ಯೆಯು ಉಪ್ಪಿನ ಮೂಟೆಯನ್ನು ದಾನ ನೀಡುವಾಗ ನೀವು ಅವಳಿಗೆ ಸರ್ವ ವಿಧವಾದ ಸಹಾಯ-ಸಹಕಾರ ನೀಡಿದ್ದರಿಂದ ನಿಮಗೆ ಈಗ ಆರೋಗ್ಯ ಲಭಿಸಿದೆ. ಸೌಭಾಗ್ಯ ದೊರಕಿದೆ. ಗೆಲುವು ನಿಮ್ಮ ಬಾಳಿನ ಉದ್ದಕ್ಕೂ ಗೋಪುರ ಗಟ್ಟಿದೆ. ಇದನ್ನು ತಿಳಿದು ಇನ್ನು ಮೇಲೆ ಮೊದಲಿಗಿಂತ ಹೆಚ್ಚಾಗಿ ಉಪ್ಪಿನ ಬೆಟ್ಟ, ಧಾನ್ಯದ ಬೆಟ್ಟ ಮುಂತಾಗಿ ದಾನಗಳನ್ನು ಮಾಡಿರಿ. ಇಂದಿನ ದಾನವು ನಿನ್ನ ಆ ಹಿಂದಿನ ದಾನಕ್ಕಿಂತ ಹೆಚ್ಚಾಗಲಿ ಕನಿಷ್ಠ ಹತ್ತು ಪಟ್ಟು.

**ಪುಲಸ್ತ್ಯ :-** ಇಂತಹ ಸೌಭಾಗ್ಯದಾಯಕ ಸಲಹೆಗೆ ಆಗದು ಎನುವನೇ ಆ ದೊರೆ ಧರ್ಮಮೂರ್ತಿ. ತಕ್ಷಣ ವಶಿಷ್ಠರ ನುಡಿಗಳಿಗೆ ಒಪ್ಪಿಗೆ ಇತ್ತ. ಅದೇ ವಶಿಷ್ಠ ಮುನಿಗೆ ಎಲ್ಲ ವಿಧದ ದಾನಗಳನ್ನು ನೀಡಿದ. ಅಂತಹ ಮಹಾತ್ಮರಿಗೆ ಕೊಟ್ಟ ದಾನವು ಹೇಗೆ

**॥ ಪುಲಸ್ತ್ಯ ಉವಾಚ ॥**

**ಆಸೀತ್ಪುರಾ ಬೃಹತ್ಕಲ್ಪೇ ಧರ್ಮಮೂರ್ತಿರ್ನರಾಧಿಪಃ ।**
**ಸುಹೃಚ್ಛಕ್ರಸ್ಯ ನಿಹತಾಯೇನ ದೈತ್ಯಾಸ್ಸಹಸ್ರಶಃ ॥**

**ಪುಲಸ್ತ್ಯ :-** ಹಿಂದೆ ಬೃಹತ್ಕಲ್ಪದಲ್ಲಿ ಓರ್ವ ರಾಜನಿದ್ದನು. ಧರ್ಮಮೂರ್ತಿ ಅವನ ಹೆಸರು. ಅವನು ಇಂದ್ರನಿಗೆ ಮಿತ್ರ. ಅವನು ಸಂಹರಿಸಿದ ದೈತ್ಯರು ಸಹಸ್ರಾರು. ಚಂದ್ರ ಸೂರ್ಯರೂ ಕೂಡ ಅವನ ತೇಜಸ್ಸಿನಿಂದ ಕಾಂತಿಕಳೆದು ಕೊಂಡಂತಾಗಿದ್ದರು. ಬಯಸಿದ ರೂಪವನ್ನು ಧರಿಸಬಲ್ಲವನಾಗಿದ್ದ ಆ ದೊರೆ. ಅವನ ಪಟ್ಟದರಾಣಿ ಭಾನುಮತಿ. ಮೂರು ಲೋಕಗಳಲ್ಲಿಯೇ ಸಮರಿಲ್ಲದ ಸುಂದರಿ. ರೂಪದಲ್ಲಿ ಅವಳೊಬ್ಬ ಸಿರಿದೇವಿ. ಎಲ್ಲ ಸುರಸುಂದರಿಯರನ್ನು ಚೆಲುವಿಕೆಯಿಂದ ಗೆಲ್ಲುವಂಥ ಸೌಂದರ್ಯ ಶ್ರೀ ಅವಳದಾಗಿತ್ತು. ಆ ಪಟ್ಟಮಹಿಷಿಯು ಧರ್ಮಮೂರ್ತಿ ಮಹಾರಾಜನಿಗೆ ತನ್ನ ಪಂಚಪ್ರಾಣಗಳ ಪ್ರಿಯೆ. ಹತ್ತು ಸಾವಿರ ಚೆಲುವೆಯರಲ್ಲಿಯೂ ಎದ್ದು ಕಾಣುವಂತಹ ರೂಪವು ಅವಳದು. ಅವಳು ನಕ್ಕರೆ, ನುಡಿದರೆ ನಡೆದರೆ ಸಾಕ್ಷಾತ್ ಇಂದಿರೆಯಂತೆ ಅತ್ಯಂತ ಸುಂದರಿಯಾಗಿ ತೋರುತ್ತಿದ್ದಳು. ಆ ರಾಜನಿಗೆ ವಶಿಷ್ಠರೇ ಪುರೋಹಿತರು.

ಒಂದು ದಿನ ಆ ಧರ್ಮಮೂರ್ತಿ ಮಹಾರಾಜನು ಕುಲಗುರುಗಳನ್ನು ಪ್ರಶ್ನಿಸಿದ. ಅವನಿಗೆ ದೈವವು ತನಗೆ ಕೊಟ್ಟ ಭೋಗ ಭಾಗ್ಯಗಳನ್ನು ಕಂಡು ಕೌತುಕವೆನಿಸಿತ್ತು.

**ರಾಜ :-** ಪೂಜ್ಯರೆ, ರಾಜ್ಯಲಕ್ಷ್ಮೀ, ಧನಲಕ್ಷ್ಮೀ, ಕಾಂತಿಲಕ್ಷ್ಮೀ, ಮೂರೂ ನನ್ನಲ್ಲಿ ಮೇಳವಿಸಿರುತ್ತವೆ. ನನ್ನ ಶರೀರವನ್ನು ನೋಡಿದರೆ ತಮಗೆ ಗೊತ್ತಾಗಬಹುದು, ಎಂತಹ ತೇಜ ನನ್ನ ಅಂಗಾಗಗಳಲ್ಲಿ ಬೆಳಗುತ್ತಿದೆ. ಎಂಬುದು ನನ್ನ ಇಂತಹ ಶ್ರೀ ಸಮೃದ್ಧಿಗೆ ಕಾರಣವಾದರೂ ಏನು ?

**ವಶಿಷ್ಠ :-** ಹಿಂದೆ ಓರ್ವ ವೇಶ್ಯೆ ಇದ್ದಳು. ಅವಳು ಶಿವಭಕ್ತಳು ಶಿವನ ಸೇವೆಯಲ್ಲಿಯೇ ತನ್ನ ತೆಳುವಾದ ತನುವನ್ನು ತೇಯುತ್ತಲಿದ್ದಳು. ಲೀಲಾವತಿ ಆ ಲಲನೆಯ ಹೆಸರು. ಒಂದು ಚತುರ್ದಶಿಯ ದಿನ ಆ ಬೆಲೆವೆಣ್ಣು ಉಪ್ಪಿನ ಬೆಟ್ಟವನ್ನು ದಾನನೀಡಿದಳು. ಆ ಪುಣ್ಯಕಾರ್ಯವನ್ನು ನೆರವೇರಿಸಿದ್ದು ಪುಷ್ಕರ ಕ್ಷೇತ್ರದಲ್ಲಿ. ಆ ಉಪ್ಪಿನ ಮೂಟೆಯ ಮೇಲೆ ಚಿನ್ನದ ಪ್ರತಿಮೆಯನ್ನಿಟ್ಟು ವಿಧಿಯಲ್ಲಿ ಹೇಳಿದಂತೆ ದಾನಕಾರ್ಯವನ್ನು ನೆರವೇರಿಸಿದಳು. ಆ ಬಂಗಾರದ ಮೂರ್ತಿಯನ್ನು ಒಬ್ಬ ಸೊನ್ನಲಿಗ ಮಾಡಿದ್ದ. ದಾಸ ಎಂದು ಅವನ ಹೆಸರು. ಆ ಅಕ್ಕಸಾಲಿಗನು ಲೀಲಾವತಿಯ ಮನೆಯಲ್ಲಿಯೇ ಊಳಿಗದ ಆಳಾಗಿದ್ದ. ಚಿನ್ನದ ದೇವತಾಮೂರ್ತಿಗಳನ್ನು ಮಾಡುವಾಗ ಅದರಲ್ಲಿಯೂ ಮುಖ್ಯ ಮುಖ್ಯ ದೇವೋತ್ತಮರ ಪ್ರತಿಮೆಗಳನ್ನು ನಿರ್ಮಿಸುವಾಗ ಅತ್ಯಂತ ಶ್ರದ್ಧೆಯಿಂದ ಮಾಡುತ್ತಿದ್ದನು. ದೈವೀಪ್ರತಿಮೆಗಳ ನಿರ್ಮಿತಿಗೆ ತನ್ನ ಒಂದು ಧರ್ಮಕಾರ್ಯ ಎಂಬ ಭಾವನೆಯಿಂದಲೇ ಮಾಡುತ್ತಿದ್ದ. ಭಕ್ತಿ ಅವನ ಪ್ರೇರಕ ಶಕ್ತಿ. ವಿಶ್ವಾಸದಿಂದ, ಜಾಗರೂಕತೆ, ಕೌಶಲ್ಯಗಳಿಂದ ಮಾಡುತ್ತಿದ್ದ- ಅವನು ಎಲ್ಲ ಭಗವನ್ಮೂರ್ತಿಗಳನ್ನು, ಆದುದರಿಂದ ಅವನು ಮುಟ್ಟಿದ ಚಿನ್ನದ ಮೂರ್ತಿಗಳೆಲ್ಲ ಚೆಲುವಿನ ಪುತ್ಥಳಿಗಳಾಗಿಯೇ ಅರಳುತ್ತಿದ್ದವು.

ಧರ್ಮಬುದ್ಧಿಯಿಂದ ದೇವತಾ ಪ್ರತಿಮೆಗಳನ್ನುಮಾಡುತ್ತ ಇದ್ದುದರಿಂದ ಅವನು ಎಂದಿಗೂ ಸಂಬಳ ಅಥವಾ ಕೂಲಿ ತೆಗೆದುಕೊಳ್ಳುತ್ತಿರಲಿಲ್ಲ. ಉಚಿತವಾಗಿಯೇ ಚೆಲುವಿನ ಚೆನ್ನದ ಮೂರ್ತಿಗಳನ್ನು ಚಾತುರ್ಯದಿಂದ ಕಡೆದು, ಕಟೆದು, ನಿರ್ಮಿಸಿ ಕೊಡುತ್ತಿದ್ದ. ಆ ಹೇಮಕಾರನ ಮಡದಿಯು ತನ್ನ ಗಂಡಗೈಯುವ ಈ ಪುಣ್ಯಕರ್ಮದಲ್ಲಿ ಭಕ್ತಿಯಿಂದ ಭಾಗವಹಿಸುತ್ತಿದ್ದಳು. ಬಂಗಾರವನ್ನು ಕರಗಿಸುವ, ಕಾಯಿಸುವ, ಎರಕಹಾಕುವ, ಎಳೆತೆಗೆಯುವ, ಮೈ ಮೂಡಿಸುವ, ಮುಖ ಅರಳಿಸುವ, ಅಂಗಾಂಗಗಳನ್ನು ಬಿಡಿಸುವ ಕಾರ್ಯಗಳಲ್ಲಿ ಶ್ರದ್ಧೆಯಿಂದ ಪತಿಗೆ ಸಹಾಯ ಸಲ್ಲಿಸುತ್ತಿದ್ದಳು. ಹೀಗೆ ಆ ಸುವರ್ಣಕಾರ ದಂಪತಿಗಳು ಲೀಲಾವತಿಯೆಂಬ ಚೆಲೆವೆಣ್ಣಿನ ಮನೆಯಲ್ಲಿ ಬಂಗಾರದ ಕೆಲಸ ಮಾಡುವುದಲ್ಲದೆ, ಬಂದ ಬ್ರಾಹ್ಮಣರ ಹಾಗೂ ಅತಿಥಿ ಅಭ್ಯಾಗತರ ಸೇವೆ, ಶಿಶ್ರೂಷೆ ಮಾಡುತ್ತಿದ್ದರು. ವ್ಯರ್ಥವಾಗಲಿಲ್ಲ ಆ ದಂಪತಿಗಳ ಸೇವೆ ಹಾಗೂ ಭಗವದಾರಾಧನೆ.

ಕೆಲವು ಕಾಲದ ನಂತರ ಭಗವದ್ಭಕ್ತಳಾದ ಆ ಲೀಲಾವತಿ ಪಾಪರಾಶಿಯಿಂದ ಮುಕ್ತಳಾಗಿ ಜನ್ಮ ನೀಗಿದಳು. ಶಿವಮಂದಿರಕ್ಕೆ ಕೊನೆಯ ಪ್ರಯಾಣ ಬೆಳೆಸಿದಳು. ಇತ್ತ ಆ ದರಿದ್ರ ಅಕ್ಕಸಾಲಿಗನು ಬದುಕಿ-ಇರುವವರೆಗೆ ಭಗವಂತನ ಹಾಗೂ ಭಗವದ್ಭಕ್ತರ ಸೇವೆ ಮಾಡುತ್ತಲೇ ದೇಹವನ್ನು ಸವಿಸಿದನು. ಬಡತನ, ಎಳೆತನದಿಂದಲೇ ಅವನಿಗೆ ಬೆನ್ನು ಹತ್ತಿದ್ದರೂ ಅವನ ಸತ್ವಗುಣಕ್ಕೆ ಕೊರತೆ ಇರಲಿಲ್ಲ. ಸಂಬಳ ಅಥವಾ ಕೂಲಿ ತೆಗೆದುಕೊಳ್ಳದೆ ದೇವರ ಪ್ರತಿಮೆಗಳನ್ನು ನಿರ್ಮಿಸಿಕೊಟ್ಟಿದ್ದಕ್ಕಾಗಿ ಆ ಸೊನ್ನಲಿಗನು ಜನ್ಮಾಂತರದಲ್ಲಿ ಭಾಗ್ಯವಂತ ಭೂಪಾಲನಾಗಿ ಹುಟ್ಟಿದನು. ಆ ಅಕ್ಕಸಾಲಿಗನು ಮಹಾರಾಜ. ನೀನೇ ಆಗಿರುವಿ. ಆ ಜನ್ಮದಲ್ಲಿ ಮಾಡಿದ ಪುಣ್ಯದಿಂದ ಈಗ ನೀನು ಸಪ್ತದ್ವೀಪಗಳ ಒಡೆಯನಾಗಿ ಸಾಮ್ರಾಜ್ಯವನ್ನು ಆಳುತ್ತಲಿರುವೆ. ಸಹಸ್ರ ಸೂರ್ಯನಿಗೆ ಸಮನಾಗಿದೆ ನಿನ್ನ ದಿವ್ಯವಾದ ದೇಹಕಾಂತಿ. ನಿನ್ನ ಮಡದಿಯಾದ ಈ ಭಾನುಮತಿಯು ನೀನು ಮಾಡುವ ದೇವತಾಕಾರ್ಯದಲ್ಲಿ ಸರ್ವರೀತಿಯಿಂದಲೂ ಸಹಾಯ ಸಲ್ಲಿಸಿದ್ದರಿಂದ ಈಗ ಮಹಾರಾಣಿಯಾಗಿ ಜನಿಸಿದ್ದಾಳೆ. ಇವಳು ಆಗ ಅಕ್ಕಸಾಲಿಗನ ಅಕ್ಕರೆಯ ಅಂಗನೆ ಆಗಿದ್ದಾಗ ದೇವತಾ ಪ್ರತಿಮೆಗಳ ಅಂಗಾಂಗಗಳನ್ನೆಲ್ಲ ಉಜ್ಜಿ, ತಿಕ್ಕಿ ಪ್ರಕಾಶಮಾನವಾಗಿ ಮಾಡಿದ್ದರಿಂದ ಈಗ ಅಪೂರ್ವವಾದ ಕಾಂತಿಯು ಮಿನುಗುತ್ತಲಿದೆ ಇವಳ ಈ ಸುಂದರ ಶರೀರದಲ್ಲಿ ನಿನಗೆ ದೊರೆತ ದೊರೆತನ, ಇವಳಿಗೆ ಲಭಿಸಿದ ಲಾವಣ್ಯ, ನಿಮಗಿಬ್ಬರೂ ಈಗ ಬಂದ ಸಿರಿತನ ಇವುಗಳಿಗೆಲ್ಲ ಅಂದಿನ ಅರ್ಥಾತ್ ಹಿಂದಿನ ನಿಮ್ಮ ನಿರ್ವ್ಯಾಜ ಭಕ್ತಿ, ನಿಷ್ಕಾಮ ಸೇವೆಗಳೇ ಕಾರಣ. ಆ ವೇಶ್ಯೆಯು ಉಪ್ಪಿನ ಮೂಟೆಯನ್ನು ದಾನ ನೀಡುವಾಗ ನೀವು ಅವಳಿಗೆ ಸರ್ವ ವಿಧವಾದ ಸಹಾಯ-ಸಹಕಾರ ನೀಡಿದ್ದರಿಂದ ನಿಮಗೆ ಈಗ ಆರೋಗ್ಯ ಲಭಿಸಿದೆ. ಸೌಭಾಗ್ಯ ದೊರಕಿದೆ. ಗೆಲುವು ನಿಮ್ಮ ಬಾಳಿನ ಉದ್ದಕ್ಕೂ ಗೋಪುರ ಗಟ್ಟಿದೆ. ಇದನ್ನು ತಿಳಿದು ಇನ್ನು ಮೇಲೆ ಮೊದಲಿಗಿಂತ ಹೆಚ್ಚಾಗಿ ಉಪ್ಪಿನ ಬೆಟ್ಟ, ಧಾನ್ಯದ ಬೆಟ್ಟ ಮುಂತಾಗಿ ದಾನಗಳನ್ನು ಮಾಡಿರಿ. ಇಂದಿನ ದಾನವು ನಿನ್ನ ಆ ಹಿಂದಿನ ದಾನಕ್ಕಿಂತ ಹೆಚ್ಚಾಗಲಿ ಕನಿಷ್ಠ ಹತ್ತು ಪಟ್ಟು.

**ಪುಲಸ್ತ್ಯ** :- ಇಂತಹ ಸೌಭಾಗ್ಯದಾಯಕ ಸಲಹೆಗೆ ಆಗದು ಎನುವನೇ ಆ ದೊರೆ ಧರ್ಮಮೂರ್ತಿ. ತಕ್ಷಣ ವಶಿಷ್ಠರ ನುಡಿಗಳಿಗೆ ಒಪ್ಪಿಗೆ ಇತ್ತ. ಅದೇ ವಶಿಷ್ಠ ಮುನಿಗೆ ಎಲ್ಲ ವಿಧದ ದಾನಗಳನ್ನು ನೀಡಿದ. ಅಂತಹ ಮಹಾತ್ಮರಿಗೆ ಕೊಟ್ಟ ದಾನವು ಹೇಗೆ

ವ್ಯರ್ಥವಾದೀತು ? ದೇವತೆಗಳೂ ಕೂಡ ಆ ಧರ್ಮಮೂರ್ತಿ ಮಹಾರಾಜನ ದಾನ-ಧರ್ಮ-ಪುಣ್ಯ ಕರ್ಮಗಳನ್ನು ಹಾಡಿ ಹೊಗಳಿಸಿದರು ಪೂಜಿಸಿದರು. ಹೀಗೆ ತನ್ನ ಧರ್ಮಕಾರ್ಯ ಹಾಗೂ ಹಿರಿಯರ ಆಶೀರ್ವಾದದ ಬಲದಿಂದ ಮಹಾಪ್ರಭು ಧರ್ಮಮೂರ್ತಿಯು ಶಂಕರನ ಸನ್ನಿಧಾನವನ್ನು ಹೊಂದಿದನು. ಸ್ವಯಂ ದಾನ ಕೊಡುವದಂತೂ ಸರಿ. ದಾನ ನೀಡುವವರಿಗೆ ಎಂತಹ ಫಲ ಎಂಬುದಕ್ಕೆ ಧರ್ಮಮೂರ್ತಿ ದೊರೆಯು ದಿವ್ಯದೃಷ್ಟಾಂತವಾಗಿಯೇ ಇರುವನಲ್ಲ ! ಆದರೆ ಪರರುಮಾಡುವ ದಾನಧರ್ಮಗಳನ್ನು ಕಣ್ಣಿಂದ ನೋಡಿದರೂ, ಮನಸ್ಸಿನಿಂದ ಅನುಮೋದಿಸಿದರೂ, ಹೃದಯದಿಂದ ಹಿಗ್ಗಿದರೂ, ಭಕ್ತಿಯಿಂದ ಕೇಳಿದರೂ, ಪಾಪಕೋಟಿ ತೊಲಗಿಹೋಗಿ ಒಳ್ಳೇ ಬುದ್ಧಿ ಉದಿಸುತ್ತದೆ. ಎಂದೂ ಬೀಳುವದಿಲ್ಲ ಅಂಥವರಿಗೆ ಕೆಟ್ಟ ಕೆಟ್ಟ ಕನಸು. ಇನ್ನೊಮ್ಮೆ ಹುಟ್ಟುವದಿಲ್ಲ. ಮತ್ತೊಮ್ಮೆ ಸಾಯುವದಿಲ್ಲ ಇಂತಹ ಪುಣ್ಯ ದಾನಗಳನ್ನು ಕಣ್ಣಿಂದ ನೋಡಿದವರು.

**ಭೀಷ್ಮ** :- ಇಷ್ಟಜನರ ವಿಯೋಗ, ಆದರಿಂದ ಆಗುವ ದುಃಖದಿಂದ ಮಾನವರನ್ನು ಪಾರುಮಾಡಲು ಯಾವುದಾದರೂ ವ್ರತ ಅಥವಾ ಉಪವಾಸ ಉಂಟೆ ? ಸಂಸಾರದ ಅಂಜಿಕೆಯನ್ನು ದೂರಮಾಡಿ, ಭಾಗ್ಯವನ್ನು ಕರುಣಿಸುವ ಉಪಾಯವಿದ್ದರೆ ದಯವಿಟ್ಟು ತಿಳಿಸಿರಿ.

**ಪುಲಸ್ತ್ಯ** :- ಜಗತ್ತಿಗೆಲ್ಲ ಪ್ರಿಯವಾದ ಪ್ರಶ್ನೆಯನ್ನೇ ನೀನು ಮಾಡಿದಿ. ದೇವತೆಗಳಿಗೂ ಇದರ ರಹಸ್ಯ ಹೊಳೆಯದು. ಮರ್ಮತಿಳಿಯದು. ಆದರೂ ನೀನು ಅತ್ಯಂತ ಭಕ್ತಿವಂತನಲ್ಲವೆ ? ಆದುದರಿಂದ ಈ ರಹಸ್ಯವಾದ ವ್ರತವನ್ನು ಹೇಳುತ್ತೇನೆ.

**ವಿಶೋಕ ದ್ವಾದಶಿ ವ್ರತ** :- ವಿಶೋಕ ಎಂದರೆ ಶೋಕವನ್ನು ದೂರಮಾಡುವ ದ್ವಾದಶಿ ವ್ರತವೆಂದು ಇದಕ್ಕೆ ಹೆಸರು. ಅಶ್ವಿಜ ಮಾಸದಲ್ಲಿಯೇ ಮಾಡಬೇಕು ಈ ಪವಿತ್ರವಾದ ವ್ರತವನ್ನು, ದಶಮಿಯದಿನ ಅಲ್ಪಆಹಾರವನ್ನು ಸೇವಿಸಬೇಕು. ನಿಯಮದಿಂದ ಇಂದ್ರಿಯಗಳನ್ನು ನಿಗ್ರಹಿಸಬೇಕು. ಮರುದಿನ ಏಕಾದಶಿ. ಅಂದು ಪೂರ್ಣ ಉಪವಾಸ. ಭಕ್ತಿಯಿಂದ ಲಕ್ಷ್ಮೀ-ನಾರಾಯಣರನ್ನು ಪೂಜಿಸಬೇಕು. ವಿಶೇಷವಾಗಿ ಅಂದು ದೇವತಾರಾಧನೆ ಮಾಡಬೇಕು. ''ಇಂದು ಪೂರ್ಣ ಉಪವಾಸ ಮಾಡಿ ಭಗವಂತನನ್ನು, ಲಕ್ಷ್ಮೀಯನ್ನು ಪೂಜಿಸುತ್ತೇನೆ. ಮರುದಿನ-ದ್ವಾದಶಿ ದಿನ ಭಗವಂತನ ಪೂಜೆಮಾಡಿ, ಲಕ್ಷ್ಮೀ-ನಾರಾಯಣರಿಗೆ ನೈವೇದ್ಯ ಸಮರ್ಪಿಸಿ, ತದನಂತರವೇ ನಾನು ಭೋಜನ ಮಾಡುತ್ತೇನೆ'' ಎಂದು ಏಕಾದಶಿ ದಿನವೇ ಸಂಕಲ್ಪ ಮಾಡಬೇಕು. ಮರುದಿನ ಬೆಳಿಗ್ಗೆ ಉಷಃಕಾಲದಲ್ಲಿಯೇ ಏಳಬೇಕು. ಎಲ್ಲ ಗಿಡ ಮೂಲಿಕೆಗಳನ್ನು ನೀರಿನಲ್ಲಿ ಹಾಕಿ ಪಂಚಗವ್ಯಬೆರೆಸಿ ಸ್ನಾನ ಮಾಡಬೇಕು. ಅನಂತರ ಬಿಳಿ ಬಟ್ಟೆ ಉಟ್ಟುಕೊಳ್ಳಬೇಕು. ಶುಭ್ರವಾದ ಹೂವಿನ ಮಾಲೆಗಳನ್ನು ಧರಿಸಬೇಕು. ಶುಚಿರ್ಭೂತನಾಗಿ ವಿಷ್ಣುವನ್ನು ಪೂಜಿಸಬೇಕು. ವಿಷ್ಣುವಿನ ಪೂಜಾ ಕ್ರಮವು ಕೆಳಗೆ ಕಾಣಿಸಿದಂತಿದೆ. ಅಡಿಯಿಂದ ಮುಡಿಯವರೆಗೆ ಶಾಸ್ತ್ರೋಕ್ತ ಪದ್ಧತಿಯಿಂದ ಶ್ರೀಹರಿಯನ್ನು ಪೂಜಿಸಬೇಕು.

''ವಿಶೋಕಾಯ ನಮಃ'' ಶೋಕ ರಹಿತನಿಗೆ ನಮಸ್ಕಾರ ಎಂದು ಅಚ್ಯುತನ ಅಡಿದಾವರೆಗಳನ್ನು ಪೂಜಿಸಬೇಕು.

| | | |
|---|---|---|
| 'ವರದಾಯನಮಃ' | ಎಂದು | ಮೊಳಕಾಲುಗಳನ್ನು |
| 'ಶ್ರೀಶಾಯ ನಮಃ' | ಎಂದು | ಮಂಡಿಗಳನ್ನು |
| 'ಜಲಶಾಯಿನೇ ನಮಃ' | ಎಂದು | ತೊಡೆಗಳನ್ನು |
| 'ಕಂದರ್ಪಾಯ ನಮಃ' | ಎಂದು | ಗುಹ್ಯ ಭಾಗಗಳನ್ನು |
| 'ಮಾಧವಾಯ ನಮಃ' | ಎಂದು | ಸೊಂಟವನ್ನು |
| 'ದಾಮೋದರಾಯ ನಮಃ' | ಎಂದು | ಹೊಟ್ಟೆಯನ್ನು |
| 'ವಿಪುಲಾಯ ನಮಃ' | ಎಂದು | ಉದರದ ಎಡಬಲ ಭಾಗಗಳನ್ನು |
| 'ಪದ್ಮನಾಭಾಯ ನಮಃ' | ಎಂದು | ಹೊಕ್ಕಳವನ್ನು |
| 'ಮನ್ಮಥಾಯ ನಮಃ' | ಎಂದು | ಎದೆಯನ್ನು |
| 'ಶ್ರೀಧರಾಯ ನಮಃ' | ಎಂದು | ಎದೆಯ ಮೇಲ್ಭಾಗವನ್ನು |
| 'ಮಧುಸೂದನಾಯ ನಮಃ' | ಎಂದು | ಎರಡು ಕಣ್ಣುಗಳನ್ನು |
| 'ವೈಕುಂಠಾಯ ನಮಃ' | ಎಂದು | ಕೊರಳನ್ನು |
| 'ಯಜ್ಞಮುಖಾಯ ನಮಃ' | ಎಂದು | ಮುಖವನ್ನು |
| 'ಅಶೋಕನಿಧಯೇ ನಮಃ' | ಎಂದು | ಮೂಗನ್ನು |
| 'ವಾಸುದೇವಾಯ ನಮಃ' | ಎಂದು | ಕಣ್ಣುಗಳನ್ನು |
| 'ವಾಮನಾಯ ನಮಃ' | ಎಂದು | ಹಣೆಯನ್ನು |
| 'ಹರಯೇ ನಮಃ' | ಎಂದು | ಹುಬ್ಬುಗಳನ್ನು |
| 'ಮಾಧವಾಯ ನಮಃ' | ಎಂದು | ಕೂದಲುಗಳನ್ನು |
| 'ವಿಶ್ವ ರೂಪಿಣೇ ನಮಃ' | ಎಂದು | ಕಿರೀಟವನ್ನು |

'ಸರ್ವಾತ್ಮನೇ ನಮಃ' ಎಂದು ತಲೆಯನ್ನು ಮುಟ್ಟಿ, ಹೂವು ಏರಿಸಿ ಪೂಜಿಸಬೇಕು. ಅನಂತರ ಧೂಪ, ದೀಪಾರತಿ, ನೈವೇದ್ಯ ಸಮರ್ಪಣ ಮೊದಲಾಗಿ ವಿಧಿವತ್ತಾಗಿ ಪೂಜೆಮಾಡಬೇಕು. ಅನಂತರ, ವಿಶಾಲ ಮಂಡಲಮಾಡಿ, ಅದರ ನಡುವೆ ಸ್ಥಂಡಿಲವನ್ನು ನಿರ್ಮಿಸಬೇಕು. ಅದರ ಮೇಲೆ ಎಂಟು ಬೆರಳಿನ ಗೋಡೆಮಾಡಿ, ಅದರಲ್ಲಿ ನದಿ ತೀರದ ಮರಳಿನಿಂದ ಲಕ್ಷ್ಮಿಯ ಮೂರ್ತಿಯನ್ನು ಮೂಡಿಸಬೇಕು. ಸ್ಥಂಡಿಲದಲ್ಲಿ ಸೂರ್ಯನನ್ನು ಆಹ್ವಾನಿಸಿ, ಲಕ್ಷ್ಮೀದೇವಿಯನ್ನು ಪೂಜಿಸಬೇಕು. ಮೊದಲು ಆ ಶ್ರೀದೇವಿಯನ್ನು ಈ ಮಂತ್ರದಿಂದ ಪ್ರಾರ್ಥಿಸಿ, ನಮಸ್ಕರಿಸಬೇಕು.

ನಮೋದೇವ್ಯೈ ನಮಶ್ಶಾಂತ್ಯೈ ನಮೋ ಲಕ್ಷ್ಮ್ಯೈ ನಮಶ್ಶ್ರಿಯೆ ।
ನಮಸ್ತುಷ್ಟ್ಯೈ ನಮಃ ಪುಷ್ಟ್ಯೈ ನಮಸ್ತ್ವಷ್ಟ್ಯೈ ನಮೋ ನಮಃ ।
ವಿಶೋಕಾ ದುಃಖನಾಶಾಯ ವಿಶೋಕಾ ವರದಾಸ್ತುಮೇ ॥
ವಿಶೋಕಾಮೇಽಸ್ತು ಸಂತತ್ಯೈವಿಶೋಕಾ ಸರ್ವಸಿದ್ಧಯೇ ॥

ಅನಂತರ ಸ್ಥಂಡಿಲದಲ್ಲಿ ಬರೆದ ಸೂರ್ಯನಿಗೆ ಬಿಳಿಬಟ್ಟೆ, ಹತ್ತಿಹಣ್ಣು ಹಾಗೂ ಬಗೆಬಗೆಯ ಭಕ್ಷ್ಯ, ಭೋಜ್ಯಗಳನ್ನಿಟ್ಟು, ಬಂಗಾರದ ತಾವರೆಗಳಿಂದ (ಏರಿಸಿ) ಪೂಜಿಸಬೇಕು. ಬೆಳ್ಳಿಯ ಪಾತ್ರೆಗಳಲ್ಲಿ ದರ್ಭೆಹಾಕಿದ ನೀರನ್ನು ಪಕ್ಕದಲ್ಲಿ ಇರಿಸಬೇಕು. ಅನಂತರ ದೇವರನ್ನು ಹೊಗಳುತ್ತ ಹಾಡುತ್ತ ಕುಣಿಯಬೇಕು; ಪ್ರಾರ್ಥಿಸಬೇಕು. ಹೀಗೆ ಬೆಳಗಾಗುವವರೆಗೆ ಇಡೀ ರಾತ್ರಿ ಜಾಗರಣ ಮಾಡಬೇಕು. ಮೂರು ಪ್ರಹರವಾದ ಬಳಿಕ ಅಲ್ಲಿಂದೆದ್ದು ಜ್ಞಾನಿ ದಂಪತಿಗಳನ್ನು ಕರೆತರಬೇಕು. ಅವರಿಗೆ ಬಟ್ಟೆ ಕೊಟ್ಟು, ಮಾಲೆಹಾಕಿ, ಗಂಧ ಲೇಪಿಸಿ 'ದಂಪತಿಪೂಜೆ' ಮಾಡಬೇಕು. ಮೂರು, ಎರಡು, ಕೊನೆಗೆ ಒಂದಾದರೂ ದಂಪತಿಗಳನ್ನು ಅಂದು ಯಥಾಶಕ್ತಿ ಪೂಜಿಸಬೇಕು. ಹಾಸಿಗೆಯ ಮೇಲೆ ಕೂಡಿಸಿ 'ಜಲಶಾಯಿನೇನಮಃ' ಎಂದು ಹೇಳಿ, ಜಾಗರಣ ಪೂಜೆಯನ್ನು ಮುಗಿಸಬೇಕು. ಅನಂತರ ಸ್ನಾನ ಮಾಡಿ ದೇವತಾರ್ಚನೆಯನ್ನು ವಿಧ್ಯುಕ್ತವಾಗಿ ಮಾಡಬೇಕು. ಅನಂತರ ಆ ದಂಪತಿಗಳಿಗೆ ಭೋಜನ ಮಾಡಿಸಬೇಕು. ಅನಂತರ ಇಷ್ಟ ಜನರೊಂದಿಗೆ ತಾನೂ ಊಟ ಮಾಡಬೇಕು. ಮಧ್ಯಾಹ್ನ ಪುರಾಣಾದಿ ಪುಣ್ಯ ಗ್ರಂಥ ಶ್ರವಣ ಮಾಡುತ್ತ ಆ ದಿನ ಕಳೆಯಬೇಕು. ಪ್ರತಿ ತಿಂಗಳೂ ಹೀಗೆಯೇ ಮಾಡುತ್ತ ಇರಬೇಕು. ವರ್ಷದ ಕೊನೆಗೆ ಬೆಲ್ಲದಿಂದ ಮಾಡಿದ ಹಸುವನ್ನು, ದಿಂಬು ಮೇಲ್ಹಾಸು, ಹೊದಿಕೆಗಳಿಂದ ಕೂಡಿದ ಹಾಸಿಗೆಯನ್ನು ದಾನ ಮಾಡಬೇಕು ಮತ್ತು ದೇವರನ್ನು ಕುರಿತು -

**''ಯಥಾಲಕ್ಷ್ಮೀರ್ನರೇಶ ತ್ವಾಂ ನ ಪರಿತ್ಯಜ ಗಚ್ಛತಿ ।**
**ತಥಾ ಸುರೂಪತಾರೋಗ್ಯ ಮಶೋಂಕಚಾಸ್ತುಮೇಸದಾ''**

''ಜಗದೀಶನೆ, ಲಕ್ಷ್ಮಿಯು ನಿನ್ನನ್ನು ಬಿಟ್ಟು ಹೇಗೆ ಎಂದೂ ಬೇರೆಕಡೆಗೆ ಹೋಗುವುದಿಲ್ಲವೋ ಅದರಂತೆ ನನಗೆ ಆ ತಾಯಿಯ ಅನುಗ್ರಹದಿಂದ ಸೌಂದರ್ಯ ಬರಲಿ, ಆರೋಗ್ಯ ಲಭಿಸಲಿ, ದುಃಖಗಳೆಲ್ಲವೂ ದೂರವಾಗಲಿ. ನಿನ್ನಲ್ಲಿ ಭಕ್ತಿ ಅಧಿಕ ವಾಗಲಿ'' ಹೀಗೆ ಪ್ರಾರ್ಥಿಸಬೇಕು. ಬೆಲ್ಲದ ಅಚ್ಚಿನಿಂದ ಮಾಡಿದ ಆಕಳನ್ನು ಮತ್ತು ಲಕ್ಷ್ಮೀಸೂರ್ಯರ ಪ್ರತಿಮೆಗಳನ್ನು ದಾನಕೊಡಬೇಕು. ಕನ್ನೈದಿಲೆ, ಕಣಗಿಲೆ, ದಾಸವಾಳ, ಕುಂಕುಮದ ಹೂ, ತಾಳೆ, ಲಕ್ಷ್ಮಿ, ಮಲ್ಲಿಗೆ, ಪಾದರಿ, ಕದಂಬ, ಜಾಜಿ ಮುಂತಾದ ಪುಷ್ಪಗಳು ಲಕ್ಷ್ಮೀನಾರಾಯಣರ ಪೂಜೆಗೆ ಪ್ರಶಸ್ತವಾಗಿವೆ.

**ಭೀಷ್ಮ** :- ಮುನಿವರ್ಯರೆ, ಬೆಲ್ಲದ ಹಸುವನ್ನು ಮಾಡಿ ದಾನಕೊಡಬೇಕೆಂದು ಹೇಳಿದಿರಿ. ಆ ಗುಡಧೇನು ದಾನದ ವಿಧಾನವು ಯಾವುದು ? ಅದಕ್ಕೆ ಯಾವ ಮಂತ್ರ ಪಠಿಸಬೇಕು ಹೇಳಿರಿ ?

**ಪುಲಸ್ತ್ಯ** :- ಬೆಲ್ಲದ ಆಕಳಿನ ದಾನವಿಧಿಯನ್ನು ಹೇಳುತ್ತೇನೆ ಕೇಳು. ಮೊದಲು ಗೋಮಯದಿಂದ ಭೂಮಿಯನ್ನು ಸಾರಿಸಿ, ದರ್ಭೆಹಾಸಿ, ನಾಲ್ಕುಮೊಳದ ಕೃಷ್ಣಾಜಿನವನ್ನು ಪೂರ್ವಕ್ಕೆ ಮುಖಮಾಡಿ ಹಾಸಬೇಕು. ಕರುವಿನ ಸ್ಥಾನದಲ್ಲಿ ಒಂದು ಚಿಕ್ಕ ಕೃಷ್ಣಾಜಿನವನ್ನು ಬಳಿಯಲ್ಲಿಯೇ ಹಾಸಬೇಕು. ನಾಲ್ಕು ಮಣ ಬೆಲ್ಲದಿಂದ ಹಸುವನ್ನು, ಒಂದು ಮಣ ಬೆಲ್ಲದಿಂದ ಕರುವನ್ನು ಮಾಡಿದರೆ ಉತ್ತಮ ಪಕ್ಷ. ಇದರ ಅರ್ಧ ಮಾಡಿದರೆ ಮಧ್ಯಮ ಪಕ್ಷ. ಅದರ ಅರ್ಧ ಮಾಡಿದರೆ ಅಧಮ ಪಕ್ಷ. ತಮ್ಮ ಯೋಗ್ಯತೆಗೆ ತಕ್ಕಂತೆ ಮಾಡಬೇಕು. ಕರುವು ಹಸುವಿನ ಕಾಲು ಭಾಗ ಬೆಲ್ಲದಿಂದ ನಿರ್ಮಿತವಾಗಿರಬೇಕು. ಆತುರು,

ಕರುಗಳೆರಡಕ್ಕೂ ಒಳ್ಳೇ ಬಟ್ಟೆ ಹೊದಿಸಿ, ಚಿಪ್ಪಿನಿಂದ ಕಿವಿಗಳನ್ನು, ಮುತ್ತಿನಿಂದ ಕಣ್ಣುಗಳನ್ನು, ಕಬ್ಬಿನ ಕಾಲು, ಬಿಳಿನೂಲಿನ ನರನಾಡಿ, ಬಿಳಿಕೂದಲಿನ ಗಂಗೆದೊಗಲು, ಹವಳದ ಹುಬ್ಬು, ಚಾಮರದ ಕೂದಲು, ಬೆಣ್ಣೆಯ ಮೊಲೆ, ರೇಶಿಮೆಯ ಬಾಲ, ಇಂದ್ರನೀಲ ಮಣಿಯ ಕಣ್ಣಿನ ಗುಡ್ಡೆಗಳನ್ನು ರಚಿಸಬೇಕು. ಬಗೆಬಗೆಯ ಹಣ್ಣುಗಳನ್ನು ಹಾಗೂ ಕಂಚಿನ ಪಾತ್ರೆಗಳನ್ನು ಅಲ್ಲಿಯೇ ಇರಿಸಬೇಕು. ಹೀಗೆ ಗೋವತ್ಸಗಳನ್ನು ನಿರ್ಮಿಸಿ ಧೂಪ, ದೀಪಗಳಿಂದ ಪೂಜಿಸಬೇಕು.

**''ಯಾಲಕ್ಷ್ಮೀಃಸ್ಸರ್ವಭೂತಾನಾಂ ಯಾಚದೇವೇಷ್ವ ವಸ್ಥಿತಾ ।**
**ಧೇನುರೂಪೇಣ ಸಾದೇವೀ ಮಮಪಾಪಂ ವ್ಯಪೋಹತು ।**
**ಚತುರ್ಮುಖಸ್ಯ ಯಾ ಲಕ್ಷ್ಮೀರ್ಯಾಲಕ್ಷ್ಮೀ ಧನದಸ್ಯ ಚ ॥''**

ಬ್ರಹ್ಮದೇವರಿಗೆ ಐಶ್ವರ್ಯವನ್ನು, ತೇಜಸ್ಸು, ಜ್ಞಾನಗಳನ್ನು, ಕುಬೇರನಿಗೆ ಸಂಪತ್ತು ಸೌಭಾಗ್ಯವನ್ನು ಕರುಣಿಸುವ, ಲೋಕಪಾಲಕರಿಗೆಲ್ಲ ಭಾಗ್ಯದಾಯಿನಿಯಾದ ಮಹಾಲಕ್ಷ್ಮೀದೇವಿಯು ಈ ಗೋವಿನಲ್ಲಿದ್ದು ನನಗೆ ವರವನ್ನು ಕೊಡಲಿ. ಹೀಗೆ ಮಂತ್ರದಿಂದ ಪ್ರಾರ್ಥನೆ ಗೈದು, ಆ ಬೆಲ್ಲದ ಹಸುವನ್ನು ಕರು ಸಹಿತವಾಗಿ ದ್ವಿಜರಿಗೆ ದಾನ ಕೊಡಬೇಕು. ಎಲ್ಲ ಬಗೆಯ ಆಕಳಗಳ ದಾನಗಳಿಗೆ ಇದೇ ವಿಧಾನವು ಶಾಸ್ತ್ರೋಕ್ತವಾಗಿರುತ್ತದೆ. ಹತ್ತು ಬಗೆಯ ಗೋದಾನವನ್ನು ಪಾಪನಾಶಕವೆಂದು ಶಾಸ್ತ್ರಗಳಲ್ಲಿ ಹೇಳಿದ್ದಾರೆ ಅವು ಯಾವುವೆಂದರೆ -

೧) ಗುಡಧೇನು ೨) ಘೃತಧೇನು ೩) ತಿಲಧೇನು ೪) ಜಲಧೇನು ೫) ಕ್ಷೀರಧೇನು ೬) ಮಧುಧೇನು ೭) ಶರ್ಕರಾಧೇನು ೮) ಲವಣಧೇನು ೯) ರಸಧೇನು ೧೦) ಜೀವಂತಧೇನು. ಹೀಗೆ ದಶವಿಧವಾದ ಧೇನುದಾನವನ್ನು ಶಾಸ್ತ್ರಕಾರರು ವಿಧಿಸಿದ್ದಾರೆ. ಈ ದಶವಿಧ ಧೇನುದಾನಗಳಲ್ಲದೆ, ಸುವರ್ಣಧೇನು, ನವನೀತಧೇನು, ತೈಲಧೇನು ಮುಂತಾಗಿ ಹಲವಾರು ವಿಧದಧೇನು ದಾನಗಳನ್ನು ಹಿಂದಿನ ಹಿರಿಯ ಮಹರ್ಷಿಗಳು ಹೇಳಿದ್ದುಂಟು. ಈ ಎಲ್ಲ ವಿಧದ ಗೋದಾನಗಳಿಗೂ ಇಲ್ಲಿ ಮೇಲೆ ಹೇಳಿದ ವಿಧಾನವೇ ವಿದ್ಯುಕ್ತವಾಗಿದೆ. ಸಲಕರಣೆಗಳು ಇಲ್ಲಿ ಹೇಳಿದವುಗಳೇ ಎಲ್ಲ ಬಗೆಯ ಆಕಳುಗಳು ದಾನದಲ್ಲಿ ಉಪಯುಕ್ತವಾಗಿವೆ. ಗೋದಾನಗಳನ್ನು ಪರ್ವಕಾಲ. ಪುಣ್ಯಕಾಲಗಳಲ್ಲಿ ಮಂತ್ರಪಠಣಪೂರ್ವಕ ಆವಾಹನೆಮಾಡಿ ನೆರವೇರಿಸಬೇಕು. ಇಂತಹ ಗೋದಾನ ಮಾಡುವಾಗ ಭಕ್ತಿಮುಖ್ಯ. ಭಕ್ತಿಯಿಂದ ಮಾಡಿದರೆ, ಈ ಧೇನು ದಾನಗಳಿಂದ ಮುಕ್ತಿರೂಪ ಫಲವು ದೊರಕುವುದು.

ವಿಶೋಕ ದ್ವಾದಶಿ ವ್ರತವು ವ್ರತಗಳಲ್ಲೆಲ್ಲ ಸರ್ವಶ್ರೇಷ್ಠವು. ಅದನ್ನು ನಿರೂಪಿಸುವಾಗ ಆನುಷಂಗಿಕವಾಗಿ ಗುಡಧೇನು ದಾನ ಹಾಗೂ ಇತರ ಗೋದಾನಗಳ ಪ್ರಕಾರಗಳನ್ನು ನಿನಗೆ ನಾನು ಬಿತ್ತರಿಸಿದೆ. ದಕ್ಷಿಣಾಯನ, ಉತ್ತರಾಯಣ ಪುಣ್ಯಕಾಲ, ವ್ಯತೀಪಾತ, ಸಂಕ್ರಮಣ ಮುಂತಾದ ಪರ್ವಕಾಲಗಳಲ್ಲಿ ಈ ದಾನಗಳನ್ನು ಮಾಡಬೇಕು. ವಿಶೋಕದ್ವಾದಶಿವ್ರತವು ಪಾಪ ಪರಿಹಾರಕ ಹಾಗೂ ಮಂಗಳದಾಯಕವಾಗಿದೆ. ಏಕಾದಶಿ ಉಪವಾಸ ಮಾಡಿ ದ್ವಾದಶಿಗೆ ದಾನನೀಡಿದರೆ, ಈ ಲೋಕದಲ್ಲಿ ಸೌಭಾಗ್ಯ, ಆರೋಗ್ಯ, ಆಯುಷ್ಯ. ಮುಂದೆ ಮರಣ ಕಾಲದಲ್ಲಿ ವಿಷ್ಣುವಿನ ಸ್ಮರಣ, ಸತ್ತನಂತರ ವೈಕುಂಠಲೋಕ ಪ್ರಾಪ್ತಿ. ಪುರುಷನಾಗಲಿ,

ಸ್ತ್ರೀಯರಾಗಲಿ ಈ ವ್ರತವನ್ನುಮಾಡಿ, ಭಕ್ತಿಯಿಂದ ಭಗವಂತನ ಎದುರು ಹಾಡಿ ಪಾಡಿ, ಕುಣಿದು, ಕುಪ್ಪಳಿಸಿ, ಶ್ರದ್ಧೆಯಿಂದ ಭಗವತ್ ಸೇವೆ ಮಾಡಿದರೆ ಅನಂತರ ಪುಣ್ಯ ಫಲವು ಪ್ರಾಪ್ತವಾಗುವದು. ಈ ವ್ರತದ ವಿಧಿ, ವಿಧಾನ, ಮಂತ್ರ, ತಂತ್ರಗಳನ್ನು ಓದುವವರು, ಕೇಳುಗರು, ನೋಡುವವರು ಇಂದ್ರಲೋಕದಲ್ಲಿ ಒಂದು ಕಲ್ಪಕಾಲ ವಾಸಿಸುವರು.

**ಭೀಷ್ಮ** :- ಪೂಜ್ಯರೆ, ದಾನದ ಮಹಿಮೆಯನ್ನು ಕೇಳಬೇಕೆಂದು ಇಚ್ಛೆ ಆಗಿದೆ. ದೇವತೆಗಳು, ಋಷಿಗಳು ಕೂಡ ದಾನದ ಅಕ್ಷಯ ಫಲವನ್ನು ಕೊಂಡಾಡುತ್ತಾರೆ.

**ಪುಲಸ್ತ್ಯ** :- ಗೋದಾನದಂತೆ, ಮೇರುದಾನವೂ ಹತ್ತು ಬಗೆಯಾಗಿದೆ. ದಶವಿಧವಾದ ಈ ಮೇರು ಪ್ರಧಾನದಿಂದ ಬರುವ ಪುಣ್ಯವು ಬರೀ ವೇದ ಪುರಾಣಗಳನ್ನು ಓದಿದರೂ, ಯಜ್ಞ, ಯಾಗ ಮಾಡಿದರೂ, ದೇವಸ್ಥಾನಗಳನ್ನು ಕಟ್ಟಿಸಿದರೂ ಬರಲಾರದು. ಇಂತಹ ಪುಣ್ಯಪ್ರದವಾದ ಮೇರುದಾನ ಅಥವಾ ಶೈಲದಾನಗಳು ಧಾನ್ಯಾಚಲ, ಲವಣಾಚಲ, ಗುಡಾಚಲ, ಹೇಮಗಿರಿ, ತಿಲಶೈಲ, ಕಾರ್ಪಾಸ, ಪರ್ವತ, ರತ್ನಕಾನನ, ರಜತಾದ್ರಿ, ಶರ್ಕರಾಚಲ ಎಂದು ಹತ್ತು ಬಗೆಯಾಗಿವೆ. ದಶವಿಧವಾದ ಈ ಶೈಲದಾನದ ಕ್ರಮವನ್ನು ಹೇಳುತ್ತೇನೆ; ಕೇಳು. ಗ್ರಹಣ, ಸಂಕ್ರಮಣ, ಉತ್ಸವ, ಯಜ್ಞ, ಹುಣ್ಣಿಮೆ, ಅಮಾವಾಸ್ಯೆ, ವಿಷುವಕಾಲ, ಪುಣ್ಯ, ನಕ್ಷತ್ರ ಮುಂತಾದ ಸಂದರ್ಭಗಳಲ್ಲಿ ಈ ಧಾನ್ಯ ಪರ್ವತವೇ ಮೊದಲಾದ ಶೈಲದಾನಗಳನ್ನು ಮಾಡಬೇಕು. ಕಾರ್ತಿಕ ಮತ್ತು ಜ್ಯೇಷ್ಠಗಳಲ್ಲಿ ಪುಷ್ಕರದಲ್ಲಿ ಈ ದಾನಗಳಿಂದ ವಿಶೇಷ ಪುಣ್ಯ. ತೀರ್ಥ ದೇವಸ್ಥಾನ. ದನಕಟ್ಟುವ ಸ್ಥಳ, ಮಂಟಪ ಎಲ್ಲಿಯಾದರೂ ಆಗಬಹುದು - ಈ ದಾನಕ್ಕೆ ಸ್ಥಳ, ದಾನಮಂಟಪವನ್ನು ಉತ್ತರಾಭಿಮುಖ, ಪೂರ್ವಾಭಿಮುಖ ರಚಿಸಬೇಕು. ಪೂರ್ವ ಭಾಗದಲ್ಲಿ ಗೋಮಯದಿಂದ ಸಾರಿಸಿ, ದರ್ಭೆಗಳನ್ನು ಹರಿವಿ ಮಧ್ಯದಲ್ಲಿ ರಾಶಿಯಾಗಿ ಪೇರಿಸಿ ಆಯಾ ಪದಾರ್ಥಗಳನ್ನು ಗುಡ್ಡದಂತೆ ಒಟ್ಟಬೇಕು. ಧಾನ್ಯಗಳ ಬೆಟ್ಟವನ್ನು ಕೊಡುವ ಪಕ್ಷದಲ್ಲಿ ಒಂದು ಸಾವಿರ ಕೊಳಗಗಳ ಗುಡ್ಡೆಮಾಡಿ ದಾನನೀಡಿದರೆ ಉತ್ತಮಪಕ್ಷ. ಐನೂರು ಕೊಳಗೆ ಮಧ್ಯಮ, ಮುನ್ನೂರು ಕೊಳಗ ಅಧಮ. ಭತ್ತದ ಬೆಟ್ಟವನ್ನು ಅಥವಾ ವ್ರೀಹಿ ಮೇರುವನ್ನು ದಾನ ಕೊಡುವದಾದಲ್ಲಿ ಅಧಮ. ಅದರ ಸುತ್ತಲೂ ಮೂರು ಮರಗಳನ್ನು ಮಾಡಿಸಿಡಬೇಕು. ಬೆಳ್ಳಿಯ ನಾಲ್ಕು ಶಿಖರಗಳು. ಪೂರ್ವಭಾಗದಲ್ಲಿ - ಮುತ್ತು ವಜ್ರ, ದಕ್ಷಿಣದಲ್ಲಿ ಗೋಮೇಧ-ಪುಷ್ಪರಾಗ-ಪಶ್ಚಿಮದಲ್ಲಿ ಗಾರುತ್ಮತ್ತ. ನೀಲ ಉತ್ತರದಲ್ಲಿ ವಜ್ರ-ವೈಢೂರ್ಯಗಳನ್ನು ಇರಿಸಬೇಕು. ಚಂದನದ ಖಂಡ, ಹವಳದ ಬಳ್ಳಿ, ಅಲ್ಲಲ್ಲಿ ಕಂಗೊಳಿಸುವಂತೆ ಏರ್ಪಡಿಸಬೇಕು. ಬ್ರಹ್ಮ, ವಿಷ್ಣು, ರುದ್ರ, ಸೂರ್ಯರ, ಪ್ರತಿಮೆಗಳನ್ನು ಚಿನ್ನದಿಂದ ಮಾಡಿಸಿ ಇಡಬೇಕು. ಬೆಳ್ಳಿಯ ಅಷ್ಟದಿಕ್ಪಾಲಕರನ್ನೂ ಕಬ್ಬಿನ ಜಲ್ಲೆಯಿಂದ ಕೊಳ್ಳಗಳನ್ನೂ ತುಪ್ಪದ ಝರಿಗಳನ್ನೂ ಬಳಗ ಆ ಗುಡ್ಡದಲ್ಲಿ ನಿರ್ಮಿಸಬೇಕು. ಬಿಳಿ, ಕಪ್ಪು ಮಿಶ್ರಿತ ಬೂದುಬಣ್ಣದ ಬಟ್ಟೆ ಹೊದಿಸಿ, ಮೇಘವನ್ನಾಗಿ ಮಾಡಬೇಕು. ಬೆಳ್ಳಿಯ ಅಷ್ಟದಿಕ್ಪಾಲಕರನ್ನು ಎಂಟೂ ಕಡೆ ನಿಲ್ಲಿಸಿ, ಸುತ್ತಲೂ ಬಗೆಬಗೆಯ ಹಣ್ಣು ಹೂವಿನ ಗಿಡಗಳನ್ನು ನಿರ್ಮಿಸಬೇಕು. ಹೀಗೆ ನಡುವೆ ಮೇರು ಪರ್ವತ ಮಾಲೆ, ಸುತ್ತಲೂ ನಾಲ್ಕು ದಿಕ್ಕುಗಳಿಗೆ ಚಿಕ್ಕ ಚಿಕ್ಕ ನಾಲ್ಕು ಗುಡ್ಡಗಳನ್ನು ಮಾಡಬೇಕು. ಪೂರ್ವಕ್ಕೆ ಮಂದಾರ ಪರ್ವತದಂತೆ ಮೇರುವಿನ ಕಾಲುಭಾಗ ಧಾನ್ಯದಲ್ಲಿ ಒಂದು ಧಾನ್ಯಾಚಲವನ್ನು

ಮಾಡಿಸಬೇಕು. ಅದರಲ್ಲಿ ಚಿನ್ನದ ಕಮಲ, ಬಗೆ ಬಗೆಯ ಫಲಗಳನ್ನಿಡಬೇಕು. ಅಲ್ಲಿ ಬಂಗಾರದ ಕಾಮನಮೂರ್ತಿಯನ್ನು ಮಾಡಿಸಿ, ಅದನ್ನು ವಸ್ತ್ರ ಒಡವೆ, ಹೂ, ಗಂಧಗಳಿಂದ ಅಲಂಕರಿಸಬೇಕು. ದಕ್ಷಿಣದಲ್ಲಿ ಗಂಧಮಾದನ ಗಿರಿಯನ್ನು ಗೋಧಿಯಿಂದ ಮಾಡಿಸಿ, ಅದರಲ್ಲಿ ಕುಬೇರ ವಿಗ್ರಹವಿರಿಸಬೇಕು. ಹಾಗೂ ತುಪ್ಪದ ಮಾನಸ ಸರೋವರವನ್ನೂ ಒಳ್ಳೆಯ ಉಪವನವನ್ನೂ ಏರ್ಪಡಿಸಬೇಕು. ಪಶ್ಚಿಮದಲ್ಲಿ ಎಳ್ಳಿನಿಂದ ಬೆಟ್ಟಮಾಡಿ, ಅದರಲ್ಲಿ ಚಿನ್ನದ ಅರಳಿಮರ ಅದರಲ್ಲಿ ಹಂಸಪಕ್ಷಿ (ಬಂಗಾರದ್ದು) ರಚಿಸಬೇಕು. ಮೊಸರಿನ ಸರೋವರ, ಬೆಳ್ಳಿಯ ಪುಷ್ಪವನಗಳನ್ನು ಅಲ್ಲಿ ಮಾಡಬೇಕು. ಉತ್ತರ ದಿಕ್ಕಿನಲ್ಲಿ ಉದ್ದಿನ ಬೆಟ್ಟ ಏರ್ಪಡಿಸಬೇಕು. ಅದಕ್ಕೆ ಚಿನ್ನದ ಹೂ, ಚಿನ್ನದ ಧ್ವಜ, ಜೇನುಹುಟ್ಟು ಮುಂತಾದವುಗಳನ್ನು ಅಲ್ಲಿ ಮಾಡಿಸಬೇಕು.

ವೇದಶಾಸ್ತ್ರಗಳನ್ನು ಬಲ್ಲ ನಾಲ್ಕು ಜನ ದ್ವಿಜರಿಂದ ಹೋಮಮಾಡಿಸಬೇಕು. ಹೋಮಕ್ಕಾಗಿ ಪೂರ್ವದಿಕ್ಕಿನಲ್ಲಿ ಒಂದು ಮೊಳ ಆಳವಾದ ಅಗ್ನಿಕುಂಡ ನಿರ್ಮಿಸಿ ಅದರಲ್ಲಿ ಸಮಿಧೆ, ಅಕ್ಕಿ, ತುಪ್ಪ, ದರ್ಭೆಗಳಿಂದ ಹೋಮಮಾಡಬೇಕು. ರಾತ್ರಿ ಜಾಗರಣೆ ಮಾಡಬೇಕು. ಆಗ ಭಕ್ತಿರಸ ಪ್ರಧಾನವಾದ ಗೀತೆಗಳನ್ನು ಹಾಡಬೇಕು. ಆ ಪರ್ವತಗಳನ್ನು ಕೆಳಗಿನ ಮಂತ್ರಗಳಿಂದ ಆವಾಹನೆಮಾಡಿ ಪೂಜಿಸಬೇಕು. ಮುಖ್ಯವಾದ ಮೇರು ಪರ್ವತದ ಆವಾಹನೆ, ಸ್ತೋತ್ರ, ನಮಸ್ಕಾರ ಮೊದಲು ಮಾಡಬೇಕು.

**ಯಸ್ಮಾತ್ತ್ವಂ ಲೋಕಪಾಲಾನಾಂ ವಿಶ್ವಮೂರ್ತೇಶ್ಚ ಮಂದಿರಂ ।**
**ರುದ್ರಾದಿತ್ಯವಸೂನಾಂ ಚ ತಸ್ಮಾಚ್ಛಾಂತಿಂ ಪ್ರಯಚ್ಛಮೇ ॥**
**ಯಸ್ಮಾದಶೂನ್ಯಮಮರ್ತ್ಯೈರ್ನಾರೀಭಿಶ್ಚ ಶಿರಸ್ತವ ।**
**ತಸ್ಮಾನ್ಮಾಮುದ್ಧರಾಶೇಷ ದುಃಖ ಸಂಸಾರಸಾಗರಾತ್ ॥**

ನೀನು ಎಲ್ಲ ಲೋಕಪಾಲಕರಿಗೂ, ವಿಶ್ವಮೂರ್ತಿ ಪರಮಾತ್ಮನಿಗೂ, ಶಿವ, ರುದ್ರ ಹಾಗೂ ವಸುಗಳಿಗೂ ನಿರಂತರ ನೆಲೆಯಾಗಿರುವೆ. ಆದುದರಿಂದ ನನಗೆ ಶಾಂತಿಯನ್ನೂ ಸಮಾಧಾನವನ್ನೂ ನೀಡು. ಮೇರುಗಿರಿಯೇ, ನಿನ್ನ ಶಿಖರಗಳಲ್ಲಿ ಯಾವಾಗಲೂ ದೇವತೆಗಳು ತುಂಬಿರುತ್ತಾರೆ. ಸುರಸ್ತ್ರೀಯರಿಂದ ಹಾಗೂ ಸುರೋತ್ತಮರಿಂದ ಎಂದೂ ನಿನ್ನ ಶಿರೋಭಾಗವು ಶೂನ್ಯವಾಗಿರುವುದಿಲ್ಲ. ಆದುದರಿಂದ ನೀನು ನನ್ನನ್ನು ದುಃಖಪೂರ್ಣವಾದ ಈ ಸಾಗರದಿಂದ ಉದ್ಧಾರಮಾಡು.

ಹೀಗೆ ಉಪಪರ್ವತವಾದ ಮಂದಾರಚಲವನ್ನು ಕೂಡ,

**ಶೋಭಸೇ ಮಂದರ ಕ್ಷಿಪ್ರ ಮತಸ್ತುಷ್ಟಿ ಕರೋಭವ ।**
**ಯಸ್ಮಾತ್ತ್ವಂ ಶೋಭಸೇ ಜಂಬೂದ್ವೀಪೇ ತ್ವಂ ಗಂಧಮಾದನ ॥**
**ಗಂಧರ್ವವನ ಶೋಭಾವಾನತಃ ಕೀರ್ತಿದೃಢಾಸ್ತು ಮೇ ।**
**ಯಸ್ಮಾತ್ವಂ ಕೇತುಮಾಲೇನ ವೈಭ್ರಾಜೇನ ವನೇನ ಚ ॥**
**ಹಿರಣ್ಮಯೋಸಿ ಭಗವನ್ ತಸ್ಮಾತ್ಪುಷ್ಟಿರ್ದೃಢಾಸ್ತು ಮೇ ।**
**ಸುಪಾರ್ಶ್ವ ರಾಜಸೇ ನಿತ್ಯ ಮತಶ್ರೀರಕ್ಷಯಾಸ್ತು ಮೇ ॥**

ಈ ಮಂತ್ರಗಳಿಂದ ಎಲ್ಲ ಉಪಪರ್ವತಗಳನ್ನು ಆಹ್ವಾನಿಸಿ ಪೂಜಿಸಬೇಕು.

ಬೆಳಿಗ್ಗೆ ಎದ್ದು ಸ್ನಾನಮಾಡಿ, ಗುರುವಿಗೆ ಮೊದಲು ನಡುವಿನ ಬೆಟ್ಟವಾದ ಮೇರುಗಿರಿಯನ್ನು ದಾನ ಕೊಡಬೇಕು. ಅನಂತರ ಉಳಿದ ನಾಲ್ಕು ದಿಕ್ಕಿನಲ್ಲಿರುವ ಉಪಪರ್ವತಗಳನ್ನು ಕ್ರಮವಾಗಿ ದಾನಕೊಡಬೇಕು. ಇಪ್ಪತ್ತುನಾಲ್ಕು, ಹತ್ತು, ಎಂಟು, ಐದು ಕೊನೆಗೆ ಯಥಾಶಕ್ತಿ ಗೋದಾನಗಳನ್ನು ನೀಡಬೇಕು. ಗುರುವಿಗೆ ಒಂದು ಕಪಿಲೆ ಹಸುವನ್ನುದಾನನೀಡಬೇಕು. ಅದು ಚೆನ್ನಾಗಿ ಹಿಂಡುವಂತಹದಿರಬೇಕು. ಇದು ಎಲ್ಲ ಪರ್ವತಗಳ ದಾನದಲ್ಲಿ ಸಾಮಾನ್ಯವಾದ ವಿಧಿಯೆಂದು ತಿಳಿಯಬೇಕು. ಬ್ರಹ್ಮಾದಿದೇವತೆಗಳು ಗ್ರಹ, ಪರ್ವತ ಮುಂತಾದವರನ್ನು ಉದ್ದೇಶಿಸಿ ಅವರವರ ಮಂತ್ರಗಳಿಂದಲೇ ಯಜಮಾನ, ಋತ್ವಿಜರು ಉಪವಾಸವಿದ್ದು ಹೋಮಮಾಡಬೇಕು. ಪೂರ್ಣ ಉಪವಾಸವಿರಲು ಶಕ್ತಿಇಲ್ಲದಿದ್ದರೆ ರಾತ್ರಿ ಒಂದು ಹೊತ್ತು ಮಾತ್ರ ಅಲ್ಪಾಹಾರಗಳನ್ನು ತೆಗೆದುಕೊಳ್ಳಬೇಕು. ಇದು ವ್ರೀಹಿಮೇರು ಅರ್ಥಾತ್ ಬತ್ತದ ಬೆಟ್ಟದ ದಾನ ಕ್ರಮವಾಯಿತು. ಉಳಿದ ಬೆಟ್ಟದ ದಾನವಿಧಿಯನ್ನು ಹೇಳುತ್ತೇನೆ ಕೇಳು. ಅನ್ನಾಚಲದ ದಾನ ಮಾಡುವಾಗ, ಬತ್ತದ ಬೆಟ್ಟದ ದಾನದಲ್ಲಿ ಹೇಳಿದ ಮಂತ್ರ ತಂತ್ರ ವಿಧಾನ ಅನುಸರಿಸಿ ಎಲ್ಲವನ್ನು ಮಾಡಬೇಕು. ದಾನಕಾಲದ ಮಂತ್ರವನ್ನು ಮಾತ್ರ ಕೆಳಗೆ ಹೇಳಿದಂತೆ ಪಠಿಸಬೇಕು.

**ಅನ್ನಂ ಬ್ರಹ್ಮಯತಃ ಪ್ರೋಕ್ತಮನ್ನಂ ಪ್ರಾಣಾಃ ಪ್ರಕೀರ್ತಿತಾಃ ।**
**ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ಧತೇ ॥**
**ಅನ್ನಮೇವ ಯತೋ ಲಕ್ಷ್ಮೀರನ್ನಮೇವ ಜನಾರ್ಧನಃ ।**
**ಧಾನ್ಯ ಪರ್ವತರೋಪೇಣ ಪಾಹಿ ತಸ್ಮಾನ್ನಗೋತ್ತಮ ॥**

ಎಲ್ಲರ ಪ್ರಾಣಾಧಾರವಾದುದರಿಂದ ಪರಬ್ರಹ್ಮನಿಗೆ ಅನ್ನ ಒಂದು ಕರೆಯುತ್ತಾರೆ. ಅನ್ನವೇ ಪ್ರಾಣವೆಂದು ಹೇಳುತ್ತಾರೆ. ಅನ್ನನಾಮ ಪರಮಾತ್ಮನಿಂದಲೇ ಪ್ರಪಂಚದಲ್ಲಿ ಹುಟ್ಟಿದೆ. ಹುಟ್ಟಿದ್ದೆಲ್ಲ ಬೆಳೆದಿದೆ. ಬೆಳೆದದ್ದೆಲ್ಲ ಬದುಕಿದೆ. ಆದುದರಿಂದ ಅನ್ನವೇ ವಿಷ್ಣು, ಅನ್ನವೇ ಲಕ್ಷ್ಮೀ. ಈ ಪರ್ವತರೂಪಿಯಾದ ನೀನು ನಮ್ಮನ್ನು ರಕ್ಷಿಸು. ಈ ಮಂತ್ರ ಹೇಳಿ. ಧಾನ್ಯದ ಗುಡ್ಡವನ್ನುಮಾಡಿ ವಿಧಿಪೂರ್ವಕವಾಗಿ ದಾನಕೊಡಬೇಕು. ಈ ಧಾನ್ಯ ಪರ್ವತದ ದಾನದಿಂದ ಮೂರು ಮನ್ವಂತರ ಕಾಲ ದೇವಲೋಕದಲ್ಲಿ ನರನು ಪೂಜಿತನಾಗುತ್ತಾನೆ.

**ಲವಣಾಚಲ ದಾನ :-** ಹದಿನಾರು ಕೊಳಗ ಉಪ್ಪನ್ನು ಗುಡ್ಡೆಹಾಕಿ ದಾನಕೊಟ್ಟರೆ ಉತ್ತಮ. ಅರ್ಧ ಮಧ್ಯಮ, ಕಾಲು ಭಾಗ ಮಾಡಿದರೆ ಅಧಮ. ಅರ್ಧ ಕೊಳಗಕ್ಕಿಂತ ಲವಣಾಚಲವು ಕಡಿಮೆ ಆಗಬಾರದು. ಆ ಲವಣಾಚಲದಲ್ಲಿ ಬ್ರಹ್ಮಾದಿ ದೇವತಾ ಸ್ಥಾಪನೆ, ಲೋಕಪಾಲಕರ ಆವಾಸ, ಸರೋವರ, ಮರ ಮುಂತಾದವುಗಳನ್ನೆಲ್ಲ ವ್ರೀಹಿ ಮೇರುವಿನ ದಾನವಿಧಿಯಲ್ಲಿ ಹೇಳಿದಂತೆ ಮಾಡಬೇಕು. ಈ ಲವಣಾಚಲದ ದಾನ ಕಾಲದಲ್ಲಿ ಮಾತ್ರ ಕೆಳಗೆ ಹೇಳಿದ ಮಂತ್ರವನ್ನು ಹೇಳಬೇಕು.

'ಸೌಭಾಗ್ಯ ರಸ ಸಂಭೂತೋ ಯತೋಽಸೌ ಲವಣೋರಸಃ ।
ವಿಷ್ಣುದೇಹಾತ್ ಸಮುದ್ಭೂತೋ ಯಸ್ಮಾದಾರೋಗ್ಯ ವರ್ಧನಃ ॥
ಯಸ್ಮಾದನ್ನೇ ರಸಾಸ್ಸರ್ವೇನೋತ್ಕಟಾ ಲವಣಂವಿನಾ
ಪ್ರಿಯಶ್ಚ ಶಿವಯೋರ್ನಿತ್ಯಂ ತಸ್ಮಾತ್ ಶಾಂತಿ ಪ್ರದೋ ಭವ ॥

ಲವಣರಸವು ಸೌಭಾಗ್ಯರಸದಿಂದ ಒಡಗೂಡಿದೆ. ವಿಷ್ಣುವಿನ ದೇಹದಿಂದ ಜನಿಸಿದೆ. ಆಕಾರಣದಿಂದಲೇ ಆರೋಗ್ಯವರ್ಧಕವು ಆಗಿದೆ. ಉಪ್ಪು ಒಂದು ಇಲ್ಲದಿದ್ದರೆ ಉಳಿದ ಯಾವ ರಸಗಳೂ ರುಚಿಕರವಾಗುವುದಿಲ್ಲ. ಮೇಲಾಗಿ ಶಿವ, ಪಾರ್ವತಿಯರಿಗೆ ಉಪ್ಪು ಅತ್ಯಂತ ಪ್ರೀತಿಯದಾಗಿದೆ. ಆದುದರಿಂದ ಎಲೈ, ಲವಣರಸವೇ ನೀನು ನನಗೆ ಶಾಂತಿಯನ್ನು ನೀಡು. ಈ ವಿಧಿಯಿಂದ ಉಪ್ಪಿನಬೆಟ್ಟವನ್ನು ದಾನನೀಡಿದವನು ಒಂದು ಕಲ್ಪಕಾಲ ಪಾರ್ವತಿ ಲೋಕದಲ್ಲಿ ವಾಸಿಸುವನು.

**ಗುಡಪರ್ವತ ದಾನ :-** ಬೆಲ್ಲದ ಬೆಟ್ಟವನ್ನು ಹತ್ತುಮಣ ಬೆಲ್ಲದಿಂದ ಮಾಡಿದರೆ ಉತ್ತಮ. ಐದು ಮಣ ಮಧ್ಯಮ, ಮೂರು ಮಣ ಕನಿಷ್ಠ, ದರಿದ್ರರು ಒಂದು ಮಣದಿಂದ ಮಾಡಬಹುದು ಇದರ ವಿಧಾನ ಎಲ್ಲವೂ ಹಿಂದಿನಂತೆ ಹೋಮ, ಜಾಗರಣ, ಉಪಪರ್ವತ ನಿರ್ಮಾಣ, ಆಹ್ವಾನ, ಲೋಕಪಾಲಕರ ಪ್ರತಿಷ್ಠಾಪನ ಎಲ್ಲವನ್ನೂ ಹಿಂದೆ ಹೇಳಿದಂತೆ ಮಾಡಿ, ರಾತ್ರಿ ಜಾಗರಣಮಾಡಿ, ದಾನ ಕೊಡುವಾಗ ಈ ಮಂತ್ರ ಹೇಳಬೇಕು-

**'ಯಥಾ ದೇವೇಷು ವಿಶ್ವಾತ್ಮಾ ಪ್ರವರೋಽಯಂ ಜನಾರ್ದನಃ ।**
**ಸಾಮವೇದಸ್ತು ವೇದಾನಾಂ ಮಹಾದೇವಸ್ತು ಯೋಗಿನಾಂ ।**
**ಪ್ರಣವಸ್ಸರ್ವಮಂತ್ರಾಣಾಂ ನಾರೀಣಾಂ ಪಾರ್ವತೀ ಯಥಾ ।**
**ತಥಾ ರಸಾನಾಂ ಪ್ರವರಸ್ಸದೈವೇಕ್ಷುರಸೋ ಮತಃ ।**
**ಮಮ ತಸ್ಮಾತ್ಪರಾಂ ಲಕ್ಷ್ಮೀಂ ದದಾತು ಗುಡಪರ್ವತಃ**
**ಯಸ್ಮಾತ್ಸೌಭಾಗ್ಯದಾಯಿನ್ಯಾ ಧಾಮ ತ್ವಂ ಗುಡಪರ್ವತ**

ದೇವತೆಗಳಲ್ಲಿ ಜಗದಂತರ್ಯಾಮಿಯಾದ ವಿಷ್ಣು ಶ್ರೇಷ್ಠ. ವೇದಗಳಲ್ಲಿ ಸಾಮವೇದ. ಯೋಗಿಗಳಲ್ಲಿ ಮಹಾದೇವ. ಮಂತ್ರಗಳಲ್ಲಿ ಓಂಕಾರ. ಸ್ತ್ರೀಯರಲ್ಲಿ ಪಾರ್ವತಿ ಹೇಗೆ ಶ್ರೇಷ್ಠಳೋ ಅದರಂತೆ ಎಲ್ಲ ರಸಗಳಲ್ಲಿ ಕಬ್ಬಿನ ರಸವು ಶ್ರೇಷ್ಠವಾಗಿದೆ. ಅದರ ವಿಕಾರವಾದ ಬೆಲ್ಲದಿಂದ ಮಾಡಿದ ಈ ಗುಡಪರ್ವತವು ಸೌಭಾಗ್ಯಪ್ರದಳಾದ ಲಕ್ಷ್ಮಿಯ ಸ್ಥಾನವಾಗಿದೆ. ಆದುದರಿಂದ ನನಗೆ ಗುಡಪರ್ವತವು ಹೆಚ್ಚಿನ ಐಶ್ವರ್ಯವನ್ನು ಕೊಡಲಿ. ಈ ವಿಧಿಯಿಂದ ಗುಡಪರ್ವತ ದಾನ ಮಾಡಿದರೂ ಗಂಧರ್ವರಿಂದ ಅರ್ಚಿತನಾಗಿ ಗೌರಿಯ ಲೋಕದಲ್ಲಿ ಗೌರವಾನ್ವಿತನಾಗಿ ನೆಲೆಸುತ್ತಾನೆ.

**ಸುವರ್ಣಾಚಲ ದಾನ :-** ಬಂಗಾರದ ಬೆಟ್ಟವನ್ನು ಸಾವಿರ ಫಲ ಪರಿಮಿತ ಚಿನ್ನದಿಂದ ಮಾಡಿದರೆ ಉತ್ತಮ ಐನೂರು ಫಲ ಮಧ್ಯಮ. ಅದರ ಅರ್ಧ ಮಾಡಿದವನು ಅಧಮ, ಗತಿಯಿಲ್ಲದವನು ಒಂದು ಪಲಕ್ಕಿಂತ ಕಡಿಮೆ ಮಾಡಬಾರದು ಒಂದು ಫಲವೆಂದರೆ (೨ ತೊಲೆ) ಇದರ ವಿಧಾನವೆಲ್ಲವೂ ಹಿಂದಿನಂತೆ.

**ನಮಸ್ತೇ ಬ್ರಹ್ಮಬೀಜಾಯ ಬ್ರಹ್ಮಗರ್ಭಾಯ ವೈ ನಮಃ ।**
**ಯಸ್ಮಾದನಂತಫಲದಸ್ತಸ್ಮಾತ್ ಪಾಹಿಶಿಲೋಚ್ಚಯ ॥**
**ಯಸ್ಮಾದಗ್ನೇರಪತ್ಯಂ ತ್ವಂ ಯಸ್ಮಾತ್ಪುತ್ರೋ ಜಗತ್ಪತೇಃ ।**
**ಹೇಮಪರ್ವತರೂಪೇಣ ತಸ್ಮಾತ್ಪಾಹಿ ನಗೋತ್ತಮ ॥**

ಎಂದು ಮಂತ್ರಹೇಳಿ ಈ ಸುವರ್ಣಾಚಲವನ್ನು ದಾನಕೊಡಬೇಕು. ಇದರಿಂದ ನೂರು ಕಲ್ಪಕಾಲ ಬ್ರಹ್ಮಲೋಕದಲ್ಲಿ ನರನು ಇರುತ್ತಾನೆ.

**ತಿಲಪರ್ವತ ದಾನ :-** ಹತ್ತು ಕೊಳಗ ಎಳ್ಳುಗಳಿಂದ ಎಳ್ಳಿನ ಗುಡ್ಡೆಹಾಕಿ ದಾನ ನೀಡಿದರೆ ಉತ್ತಮ. ಅದರ ಅರ್ಧವಾದರೆ ಮಧ್ಯಮ. ಮೂರು ಕೊಳಗವಾದರೂ ಎಳ್ಳು ಪರ್ವತಾಕಾರವೇರಿಸಿ ದಾನನೀಡಿದರೆ ಕನಿಷ್ಠ.

**ಯಸ್ಮಾನ್ಮಧುವನೇ ವಿಷ್ಣೋರ್ದೇಹಸ್ವೇದ ಸಮುದ್ಭವಾಃ ।**
**ತಿಲಾಃ ಕುಶಾಶ್ಚ ಮಾಷಾಶ್ಚ ತಸ್ಮಾತ್ ಶಾಂತಿಪ್ರದೋ ಭವ ॥**

**ಹವ್ಯಕವ್ಯೇಷು ಯಸ್ಮಾತ್ ಚ ತಿಲಾ ಏ ವಹಿ ರಕ್ಷಣಂ ।**
**ಭವಾನ್‌ರುದ್ರಶ್ಚ ಶೈಲೇಂದ್ರ ತಿಲಾಚಲ ನಮೋಽಸ್ತುತೇ ॥**

ಮಧುವನದಲ್ಲಿ ವಿಷ್ಣುವಿನ ದೇಹದ ಬೆವರಿನಿಂದ ಎಳ್ಳು, ದರ್ಭೆ ಹಾಗೂ ಉದ್ದುಗಳು ಜನಿಸಿರುತ್ತವೆ. ಭಗವದ್ದೇಹ ಜನಿತವಾದುದರಿಂದ ಎಳ್ಳು ನಮಗೆ ಶಾಂತಿಯನ್ನು ನೀಡಲಿ. ಹವ್ಯಕವ್ಯ ಎಂದರೆ ದೇವಕಾರ್ಯ-ಪಿತೃಕಾರ್ಯಗಳಲ್ಲಿ ಎಳ್ಳು ಬಳಸಲ್ಪಡುತ್ತದೆ. ಆದರಿಂದಲೇ ಹವ್ಯಕವ್ಯಾದಿಗಳು ಸುರಕ್ಷಿತವಾಗಿ ಜರುಗುತ್ತವೆ. ಎಳ್ಳಿನಲ್ಲಿ ರುದ್ರದೇವರ ಸನ್ನಿಧಾನವಿದೆ. ಆದುದರಿಂದ ನಿನಗೆ ನಮಸ್ಕಾರ. ಈ ಮಂತ್ರ ಹೇಳಿ ಎಳ್ಳಿನ ಗುಡ್ಡವನ್ನು ದಾನಕೊಟ್ಟವನು ತಿರುಗಿ ಬಾರದ ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ. ಇಲ್ಲಿ ಇರುವವರೆಗೆ ಸೌಭಾಗ್ಯವನ್ನು, ಮಕ್ಕಳು, ಮೊಮ್ಮಕ್ಕಳೊಂದಿಗೆ ಆರೋಗ್ಯ, ಆಯುಷ್ಯ ಪಡೆಯುತ್ತಾನೆ.

**ಕಾರ್ಪಾಸ ಪರ್ವತದಾನ :-** ಕಾರ್ಪಾಸ ಎಂದರೆ ಹತ್ತಿ-ಅರಳೆ, ಇಪ್ಪತ್ತು ಮಣ ಅರಳೆಯಿಂದ ಒಂದು ಪರ್ವತವನ್ನು ಏರ್ಪಡಿಸಿ ದಾನ ಕೊಟ್ಟರೆ ಉತ್ತಮ ಪಕ್ಷ. ಅದರ ಅರ್ಧ ಮಧ್ಯಮ ಪಕ್ಷ. ಅರ್ಧದ ಅರ್ಧ ಅರ್ಥಾತ್ ಐದು ಮಣ ಅರಳೆಯನ್ನು ಗುಡ್ಡದ ಆಕಾರದಲ್ಲಿ ಒಟ್ಟಿ ದಾನ ನೀಡಿದರೆ ಕನಿಷ್ಠ ಪಕ್ಷ. ಇದರ ವಿಧಾನಗಳೆಲ್ಲವೂ ಪೂರ್ವೋಕ್ತ. ಮರುದಿನ ಬೆಳಗಾದ ಬಳಿಕ ಎದ್ದು ವಿಧಿಗಳನ್ನೆಲ್ಲ ಮುಗಿಸಿ, ಕಾರ್ಪಾಸ ಶೈಲವನ್ನು ದಾನನೀಡುವಾಗ ಈ ಮಂತ್ರವನ್ನು ಹೇಳಬೇಕು.

**ತ್ವಮೇವ ಪ್ರವರೋ ಯಸ್ಮಾಲ್ಲೋಕಾನಾಮಿಹ ಸರ್ವದಾ ।**
**ಕಾರ್ಪಾಸಾದ್ರೇ ನಮಸ್ತಸ್ಮಾದಘೌಘ ಧ್ವಂಸನೋ ಭವ ॥**

ಎಂದು ಮಂತ್ರವನ್ನು ಪಠಿಸಿ, ರುದ್ರದೇವರ ಸನ್ನಿಧಿಯಲ್ಲಿ ಅರಳೆಯ ಅದ್ರಿಯನ್ನು ದಾನಕೊಡಬೇಕು. ಅದರಿಂದ ಭೂಲೋಕದಲ್ಲಿ ರಾಜೈಶ್ವರ್ಯವನ್ನು ಭೋಗಿಸಿ ಒಂದು ಕಲ್ಪಕಾಲ ಶಿವಲೋಕದಲ್ಲಿ ನರನು ನಿವಾಸಿಸುವನು.

**ಘೃತಾಚಲದಾನ :-** ತುಪ್ಪದ ರಾಶಿಯನ್ನು ಬೆಟ್ಟದಾಕಾರವಾಗಿ ಒಟ್ಟಿ ದಾನನೀಡಿದರೆ ಮಹಾಪಾತಕಗಳು ಕೂಡ ವಿನಾಶಹೊಂದುವವು. ಇಪ್ಪತ್ತುಕೊಡ ಗಟ್ಟಿತುಪ್ಪವನ್ನು ಬೆಟ್ಟದಂತೆ ಒಟ್ಟಿ, ದಾನನೀಡುವುದು ಉತ್ತಮ ಪಕ್ಷ. ಹತ್ತು ಕೊಡ ಮಧ್ಯಮ. ಐದು ಕನಿಷ್ಠ. ಅತಿ ಕಡುಬಡವನಾಗಿದ್ದರೆ ಎರಡೇ ಕೊಡ ತುಪ್ಪದಿಂದ ಒಂದು ಗುಡ್ಡೆಮಾಡಿ, ಮುಖ್ಯ ಪರ್ವತದ ಕಾಲುಭಾಗ ತುಪ್ಪದಿಂದ ನಾಲ್ಕುದಿಕ್ಕುಗಳಲ್ಲಿ ಒಂದೊಂದು ಘೃತಾಚಲಗಳನ್ನುಮಾಡಿ, ಕುಂಭಗಳ ಮೇಲೆ ನೆಲ್ಲು, ಅಕ್ಕಿ ತುಂಬಿದ ಪಾತ್ರೆಗಳನ್ನು ಇರಿಸಿ, ದಾನ ನೀಡಬೇಕು. ವಿಧಾನವೆಲ್ಲವೂ ಹಿಂದಿನಂತೆ. ಹೋಮ, ಅಧಿವಾಸನ, ದೇವತಾರ್ಚನ ಮುಂತಾದವುಗಳನ್ನೆಲ್ಲ ವಿಧಿಪೂರ್ವಕ ಮುಗಿಸಿ ಮಾರನೆಯ ದಿನ ಪ್ರಭಾತ ಕಾಲದಲ್ಲಿ

ಗುರುಗಳಿಗೆ ಮುಖ್ಯ ಪರ್ವತವನ್ನು, ಉಳಿದ ಋತ್ವಿಜರಿಗೆ ಚಿಕ್ಕ ಚಿಕ್ಕ ಉಪ ಪರ್ವತಗಳನ್ನು ದಾನಮಾಡಬೇಕು. ''ಪ್ರಿಯತಾಂ ಶಂಕರಃ'' ಶಂಕರನು ಪ್ರೀತನಾಗಲಿ ಎಂದು ಈ ದಾನ ವಿಧಿಯನ್ನು ಭಕ್ತಿಯಿಂದ ನೆರವೇರಿಸಬೇಕು. ಇದರಿಂದ ಮಹಾಪಾತಕಿಯಾದ ನರರೂ ಕೂಡ ಶಂಭುಲೋಕವನ್ನು ಪಡೆಯುತ್ತಾನೆ. ಹಂಸ, ಸಾರಸ ಹಕ್ಕಿಗಳನ್ನು ಹೂಡಿದ ವಿಮಾನದಿಂದ ಅಪ್ಸರೆಯೊಂದಿಗೆ ಸ್ವಚ್ಛಂದ ಸಂಚಾರಗೈಯ್ಯುತ್ತಾನೆ.

**ರತ್ನಾಚಲ ದಾನ :-** ಸಾವಿರ ಮುತ್ತುಗಳಿಂದ ರತ್ನಗಿರಿಯನ್ನು ಮಾಡಿ ದಾನನೀಡಿದರೆ ಉತ್ತಮ ಕಲ್ಪ. ಐನೂರು ಮುತ್ತುಗಳಿಂದ ಮಾಡಿದರೆ ಮಧ್ಯಮ. ಮುನ್ನೂರು ಹರಳುಗಳಿಂದ ರತ್ನ ಶೈಲ ಮಾಡಿದರೆ ಕನಿಷ್ಠ. ಮಧ್ಯದಲ್ಲಿ ಮುಖ್ಯವಾದ ಮಣಿಮಯ ಮೇರುಗಿರಿಯನ್ನು ಮಾಡಿ ಸುತ್ತ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಚಿಕ್ಕ ಚಿಕ್ಕ ವಿಷ್ಕಂಭ ಪರ್ವತಗಳನ್ನು ಮಾಡಬೇಕು. ಪೂರ್ವ ದಿಕ್ಕಿನಲ್ಲಿ ವಜ್ರ, ಗೋ-ಮೇಧಗಳಿಂದ, ಒಂದು ಉಪಪರ್ವತ ನಿರ್ಮಿಸಬೇಕು. ದಕ್ಷಿಣದಲ್ಲಿ ಇಂದ್ರ ನೀಲಮಣಿ ಹಾಗೂ ಪುಷ್ಯರಾಗ ರತ್ನಗಳೊಂದಿಗೆ ಗಂಧಮಾದನಗುಡ್ಡ ಏರ್ಪಡಿಸಬೇಕು. ಪಶ್ಚಿಮದಲ್ಲಿ ವೈಡೂರ್ಯಗಳಿಂದ ಚಿಕ್ಕ ರತ್ನಗಿರಿಯನ್ನು ನಿರ್ಮಿಸಬೇಕು. ಉತ್ತರದಲ್ಲಿ ಪದ್ಮರಾಗ ಹಾಗೂ ಸುವರ್ಣಗಳಿಂದ ಉಪಪರ್ವತ ನಿರ್ಮಿಸಬೇಕು. ಉಳಿದೆಲ್ಲ ವಿಧಾನವು ಧಾನ್ಯಮೇರು ದಾನವಿಧಾನದಂತೆ.

ದಾನ ನೀಡುವಾಗ -

**ಯಥಾ ದೇವಗಣಾ ಸರ್ವೇ ಸರ್ವರತ್ನೇಷ್ವವಸ್ಥಿತಾಃ ।**
**ತ್ವಂ ಚ ರತ್ನಮಯೋ ನಿತ್ಯಮತಃಪಾಹಿ ಮಹಾಚಲ ॥**
**ಯಸ್ಮಾದ್ರತ್ನಪ್ರದಾನೇನ ತುಷ್ಟಿಮೇತಿ ಜನಾರ್ದನಃ ।**
**ಪೂಜಾಮಂತ್ರ ಪ್ರಗಾನೇನ ತಸ್ಮಾನ್ನಃ ಪಾಹಿ ಸರ್ವದಾ ॥**

ಈ ಮಂತ್ರವಿಧಿಯಿಂದ ರತ್ನಾದ್ರಿಯನ್ನು ದಾನನೀಡಿದವನು ವಿಷ್ಣುಲೋಕವನ್ನು ಪ್ರಯಾಣಿಸುವನು. ಒಂದು ಕಲ್ಪಕಾಲ ಸ್ವರ್ಗದಲ್ಲಿ ನಿವಾಸ. ದೇವಾಧಿದೇವತೆಗಳು ಗೌರವಿಸುವರು. ಇಂತಹ ಪುಣ್ಯಪುರುಷನನ್ನು. ಇಲ್ಲಿ ಇರುವವರೆಗೂ ರೂಪ, ಆರೋಗ್ಯ, ಆಯುಷ್ಯ ಹಾಗೂ ಉಳಿದೆಲ್ಲ ಸದ್ಗುಣಗಳಿಂದ ಒಡಗೂಡಿದವನಾಗುವನು ಸಪ್ತದ್ವೀಪಗಳ ಅಧಿಪತ್ಯ ದೊರಕುವದು. ಬ್ರಹ್ಮಹತ್ಯಾದಿ ದೋಷಗಳೂ ಕೂಡ ಈ ದಾನದಿಂದ ಪರಿಹೃತವಾಗುವವು.

**ರಜತಾದ್ರಿ ದಾನ :-** ಹತ್ತು ಸಾವಿರ ಪಲ ಬೆಳ್ಳಿಯಿಂದ ರೌಪ್ಯ ಗಿರಿಯನ್ನು ಮಾಡಿಸಿ ದಾನ ಕೊಟ್ಟರೆ ಉತ್ತಮ. ಐದುನೂರು ಮಧ್ಯಮ. ಎರಡುನೂರಾ ಐವತ್ತು ಫಲ ಬೆಳ್ಳಿಯಿಂದ ರಜತಗಿರಿಯನ್ನು ಮಾಡಿ ದಾನನೀಡಿದರೆ ಅಧಮ. ಅತಿ ದರಿದ್ರನಾಗಿದ್ದರೆ ಇಪ್ಪತ್ತು ಫಲಕ್ಕಿಂತ ಹೆಚ್ಚು ಎಷ್ಟಾದರೂ ಬೆಳ್ಳಿಯಿಂದ ಬೆಟ್ಟಮಾಡಿ ದಾನ ಕೊಡಬೇಕು. ಮುಖ್ಯ ಪರ್ವತದ ಕಾಲು ಭಾಗದಿಂದ ಉಪ ಪರ್ವತಗಳನ್ನು ಮಾಡಿಸಿ ಬ್ರಹ್ಮ, ವಿಷ್ಣು, ಸೂರ್ಯ ಮುಂತಾದ ದೇವತಾ ಪ್ರತಿಮೆಗಳನ್ನು ರಚಿಸಬೇಕು. ಹೋಮ, ಹವನ, ಜಾಗರ ಪೂಜೆ, ಮುಂತಾದುದೆಲ್ಲವು ಹಿಂದೆ ಹೇಳಿದಂತೆ ಮಾರನೆಯ ದಿನ ಗುರುವಿಗೆ ಮುಖ್ಯ ಪರ್ವತವನ್ನು ಋತ್ವಿಜರಿಗೆ ಉಪಶೈಲಗಳನ್ನು ವಸ್ತ್ರಾಲಂಕಾರಗಳಿಂದ ಸಿಂಗರಿಸಿ ಕೊಡಬೇಕು. ರಜತಾಚಲವನ್ನು ದಾನ ಕೊಡುವಾಗ ಈ ಮಂತ್ರ ಹೇಳಬೇಕು.

**ಪಿತೃಣಾಂ ವಲ್ಲಭಂ ಯಸ್ಮಾದ್ವಿಷ್ಣೋರ್ವಾ ಶಂಕರಸ್ಯ ಚ ।**
**ರಜತಂ ಪಾಹಿ ತಸ್ಮಾನ್ ಮಾಂ ಶೋಕಸಂಸಾರಸಾಗರಾತ್ ॥**

ಹೀಗೆ ರಜತಾಚಲವನ್ನು ದಾನಮಾಡಿದವನಿಗೆ ಸಹಸ್ರಾರು ಗೋವುಗಳನ್ನು ದಾನಮಾಡಿದ ಫಲವು ಬರುತ್ತದೆ. ಅವನು ಗಂಧರ್ವರು ಹಾಗೂ ಅಪ್ಸರೆಯರಿಂದ ಪೂಜಿತನಾಗಿ ಚಂದ್ರಲೋಕದಲ್ಲಿ ಪ್ರಳಯ ಕಾಲದವರೆಗೆ ನೆಲೆಸುವನು.

**ಶರ್ಕರಾಚಲದಾನ :-** ಎಂಟು ಮಣ ಸಕ್ಕರೆಯಿಂದ ಶರ್ಕರಾದ್ರಿ ದಾನಮಾಡಿದರೆ ಉತ್ತಮ. ನಾಲ್ಕು ಮಣ ಮಧ್ಯಮ, ಎರಡು ಮಣ ಅಧಮ. ಕಡುಬಡವ ಅರ್ಧಮಣದಿಂದಲೂ ಮಾಡಬಹುದು. ನಾಲ್ಕು ದಿಕ್ಕುಗಳಲ್ಲಿ ಉಪಪರ್ವತ ಮುಖ್ಯ ಪರ್ವತಗಳ ಮೇಲ್ಭಾಗದಲ್ಲಿ ಮಂದಾರ, ಪಾರಿಜಾತ, ಕಲ್ಪವೃಕ್ಷ, ಹರಿಚಂದನ ಸಂತಾನ ಎಂಬ ಐದು ದೈವೀದ್ರುಮಗಳನ್ನು ನೆಡಬೇಕು. ಉಪಪರ್ವತಗಳಾದ ಮಂದಾರದಲ್ಲಿ ಪಶ್ಚಿಮಾಭಿಮುಖವಾಗಿ ಕಾಮನನ್ನು ಪ್ರತಿಷ್ಠಾಪಿಸಬೇಕು. ಗಂಧ ಮಾದನಗಿರಿಯಲ್ಲಿ ಕುಬೇರನ ಪ್ರತಿಮೆಯನ್ನು ಉತ್ತರಾಭಿಮುಖವಾಗಿ ಪ್ರತಿಷ್ಠಾಪಿಸಬೇಕು. ವಿಪುಲಾಚಲದಲ್ಲಿ ಬಂಗಾರದ ಹಂಸ ಪಕ್ಷಿಯನ್ನು ಪೂರ್ವಾಭಿಮುಖವಾಗಿ ಸುಪಾರ್ಶ್ವದಲ್ಲಿ ಯಥೋಕ್ತವಾಗಿ ನೆರವೇರಿಸಿ ಮುಖ್ಯ ಪರ್ವತವನ್ನು ಗುರುವಿಗೂ ಉಪಪರ್ವತಗಳನ್ನು ಋತ್ವಿಜರಿಗೂ ದಾನಕೊಡಬೇಕು. ದಾನ ಕಾಲದಲ್ಲಿ ಈ ಕೆಳಗಿನ ಪದ್ಯವನ್ನು ಹೇಳಬೇಕು.

**ಸೌಭಾಗ್ಯಮೃತಸಾರೋಽಯಂ ಪರಮಶ್ಶರ್ಕರಾಚಲಃ**
**ತಸ್ಮಾದಾನಂದಕಾರೀ ತ್ವಂ ಭವ ಶೈಲೇಂದ್ರ ಸರ್ವದಾ**
**ಅಮೃತಂ ಪಿಬತಾಂ ಯೇ ತು ಪತಿತಾ ಭುವಿ ಶೀಕರಾಃ**
**ದೇವಾನಾಂ ತತ್ಸಮುತ್ಥಸ್ತ್ವಂ ಪಾಹಿ ನಶ್ಶರ್ಕರಾಚಲ**
**ಮನೋಭವತನೋರ್ಮಧ್ಯಾದಂದ್ಭೂತಾ ಶರ್ಕರಾ ಯತಃ**

ಸೌಭಾಗ್ಯ, ಅದ್ಭುತಗಳ ಸಾರವೇ ಈ ಸಕ್ಕರೆಯ ಬೆಟ್ಟ. ದೇವತೆಗಳು ಅಮೃತಪಾನ ಮಾಡುವಾಗ ನೆಲದಮೇಲೆಬಿದ್ದ ಆ ಅಮೃತ ಬಿಂದುಗಳೇ ಎದ್ದು ಸಕ್ಕರೆಯಾಗಿದೆ. ಆದುದರಿಂದ ಎಲ್ಲರಿಗೂ ಆನಂದ ನೀಡುವ ಶರ್ಕರಾಚಲನೇ. ನೀನು ನಮ್ಮನ್ನು ರಕ್ಷಿಸು. ಈ ಸಕ್ಕರೆಯು ಹುಟ್ಟಿದ್ದು ಕಾಮನ ಮೈಯಿಂದ, ಕಂದರ್ಪನ ದೇಹವೆಲ್ಲವೂ ಸಿಹಿಯಷ್ಟೆ ! ಮನ್ಮಥರೂಪಿಯಾದ ಶರ್ಕರಾದ್ರಿಯೇ ಸಂಸಾರ ಸಾಗರದಿಂದ ನಮ್ಮನ್ನು ಕಾಪಾಡು. ಈ ವಿಧಿಯಿಂದ ಸಕ್ಕರೆಯ ಬೆಟ್ಟವನ್ನು ದಾನನೀಡಿದವನು ಎಲ್ಲ ಪಾಪಗಳಿಂದ ಮುಕ್ತನಾಗಿ ಬ್ರಹ್ಮಲೋಕವನ್ನು ಕುರಿತು ಪ್ರಯಾಣಿಸುತ್ತಾನೆ. ಈ ಎಲ್ಲ ಬೆಟ್ಟಗಳ ದಾನವಿಧಿಯಲ್ಲಿ ತನ್ನ ಶಕ್ತಿಗೆ ಅನುಗುಣವಾಗಿ ಭೂರಿಭೋಜನಮಾಡಿಸಬೇಕು. ತಾನು ಮಾತ್ರ ಉಪ್ಪು ಕಾರಗಳನ್ನು ವರ್ಜಿಸಿ ದ್ವಿಜರ ಅನುಜ್ಞೆಯಿಂದ ಕೊನೆಗೆ ಊಟ ಮಾಡಬೇಕು. ಪರ್ವತ ನಿರ್ಮಾಣಕ್ಕಾಗಿ ಉಪಯೋಗಿಸಿದ ಸಾಮಗ್ರಿಗಳನ್ನು ಆಯಾ ದ್ವಿಜರ ಮನೆಗಳಿಗೆ ಕೊಟ್ಟು ಕಳಿಸಬೇಕು. ಈ ಎಲ್ಲ ಶೈಲದಾನಗಳ ವಿಧಿಯನ್ನು ನಿನಗೆ ಹೇಳಿದ್ದೇನೆ. ಮತ್ತೆ ಏನು ಹೇಳಲಿ ?

**ಭೀಷ್ಮ :-** ಪೂಜ್ಯರೆ, ಸಂಸಾರ ಸಮುದ್ರದಿಂದ ಪಾರುಗಾಣಿಸುವ ಯಾವುದಾದರೂ ಒಂದು ವ್ರತವಿದ್ದರೆ ಹೇಳಿರಿ. ಇಹದಲ್ಲಿ ಆರೋಗ್ಯ ಐಶ್ವರ್ಯ ದೊರೆಯಬೇಕು. ಪರದಲ್ಲಿ ಸ್ವರ್ಗಸುಖವೂ ಲಭಿಸಬೇಕು. ಇಂತಹ ಬಗೆ ಬಗೆಯ ಇಷ್ಟೋದ್ದಿಷ್ಟಗಳನ್ನು ಸಾಧಿಸುವ ಒಂದು ವ್ರತವನ್ನು ನಿರೂಪಿಸಿರಿ.

**ಪುಲಸ್ತ್ಯ :-** ಸೌರಧರ್ಮ ಎಂದರೆ ಸೂರ್ಯನ ಅನುಗ್ರಹವನ್ನು ಸಂಪಾದಿಸಿ ಕೊಡುವ ಕೆಲವು ಧರ್ಮಗಳನ್ನು ಹಾಗೂ ಹಲವಾರು ವ್ರತಗಳನ್ನು ಹೇಳುತ್ತೇನೆ ಕೇಳು. ಕಲ್ಯಾಣ ಸಪ್ತಮಿ, ವಿಶೋಕ ಸಪ್ತಮಿ, ಶರ್ಕರಾ ಸಪ್ತಮಿ, ಅಮಲ ಸಪ್ತಮಿ ಹೀಗೆ ದೇವರ್ಷಿಗಳಿಂದ ಪೂಜಿತವಾದ ಕೆಲವು ಸಪ್ತಮಿ ವ್ರತಗಳಿರುತ್ತವೆ. ಅವುಗಳ ವಿಧಾನ ಹೇಳುತ್ತೇನೆ ಕೇಳು. ಶುಕ್ಲಪಕ್ಷದಸಪ್ತಮಿಯ ತಿಥಿಯಂದು ಭಾನುವಾರ ಬಂದರೆ ಅದಕ್ಕೆ ಕಲ್ಯಾಣ ಸಪ್ತಮಿ ಮತ್ತು ವಿಜಯ ಸಪ್ತಮಿ ಎಂದು ಕರೆಯುತ್ತಾರೆ.

**ಕಲ್ಯಾಣಸಪ್ತಮಿ ವ್ರತ :-** ಪ್ರಾತಃಕಾಲದಲ್ಲಿ ಪಂಚಗವ್ಯ ತೆಗೆದುಕೊಂಡು ನದಿಯಲ್ಲಿ ಸ್ನಾನಮಾಡಿ ಬಿಳಿಬಟ್ಟೆಯನ್ನು ಧರಿಸಬೇಕು. ಅಕ್ಷತೆಗಳಿಂದ ಪದ್ಮವನ್ನು ಮಧ್ಯದಲ್ಲಿ ವೃತ್ತವನ್ನು ಬಿಡಿಸಿ ಪೂರ್ವಾಭಿಮುಖವಾಗಿ ಕುಳಿತು ಬರೆಯಬೇಕು. ಮಧ್ಯದಲ್ಲಿ ಅಕ್ಷತೆಗಳಿಂದ ಬಿಡಿಸಿದ ಪದ್ಮದದಳಗಳಲ್ಲಿ ಕೆಳಗೆ ಹೇಳಿದ ಕ್ರಮದಿಂದ ಬೇರೆ ಬೇರೆ ನಾಮಗಳಿಂದ ಸೂರ್ಯನನ್ನು ಆಹ್ವಾನಿಸಿ ಪೂಜಿಸಬೇಕು.

**ಪೂರ್ವೇ ತಪನಾಯ ನಮಃ**
**ಅಗ್ನೇಯ ಮಾರ್ತಂಡಾಯ ನಮಃ**
**ದಕ್ಷಿಣೇ ದಿವಾಕರಾಯ ನಮಃ**
**ನೈಋತ್ಯೇ ವಿಧಾತ್ರೇ ನಮಃ**
**ಪಶ್ಚಿಮೇ ಮರುಣಾಯ ನಮಃ**
**ವಾಯವ್ಯೇ ಭಾಸ್ಕರಾಯ ನಮಃ**
**ಉತ್ತರೇ ವಿಕರ್ತನಾಯ ನಮಃ**
**ಈಶಾನ್ಯೇ ದೇವಾಯ ನಮಃ**
**ಮಧ್ಯೇ ಪರಮಾತ್ಮನೇ ನಮಃ**

ಎಂದು ಅಕ್ಷತೆಗಳಿಂದ ರಚಿಸಿದ ಪದ್ಮದ ಎಂಟು ದಳಗಳಲ್ಲಿಯೂ ಆದಿ, ಮಧ್ಯ ಅಂತ್ಯಗಳಲ್ಲಿಯೂ ದೇವತಾ ಪ್ರತಿಷ್ಠಾಪನೆಮಾಡಿ ಪೂಜಿಸಬೇಕು. ಬಿಳಿಬಟ್ಟೆ, ಹಣ್ಣು, ಹಂಪಲ, ಭಕ್ಷ್ಯಭೋಜ್ಯಗಳನ್ನು ನಿವೇದನೆಗೈದು, ಧೂಪ ತೋರಿಸಬೇಕು. ಭಕ್ತಿಯಿಂದ ಪೂಜಿಸಬೇಕು. ಸ್ಥಂಡಿಲದಲ್ಲಿ ಬೆಲ್ಲ ಉಪ್ಪುಗಳನ್ನಿಟ್ಟು ನಿವೇದನಮಾಡಬೇಕು. ಅನಂತರ ''ಓಂ ಭೂರ್ಭುವಸ್ವಃ'' ಎಂಬ ಮಂತ್ರದಿಂದ ವಿಸರ್ಜನೆಗೈದು ಬಳಿಕ ತನ್ನ ಯೋಗ್ಯತೆಗೆ ತಕ್ಕಂತೆ ದ್ವಿಜರಿಗೆ ಪಾಯಸ, ತುಪ್ಪ, ಅನ್ನಗಳಿಂದ ತೃಪ್ತಿಯಾಗುವಂತೆ ಭೋಜನಮಾಡಿಸಬೇಕು. ಅನಂತರ ಎಳ್ಳು, ಚಿನ್ನಗಳನ್ನು ದಾನಕೊಡಬೇಕು. ಹೀಗೆ ನಿಯಮದಿಂದ ಇದ್ದು, ಮರುದಿನ ಬೆಳಿಗ್ಗೆ ಎದ್ದು ಸ್ನಾನ, ಜಪ, ಪೂಜೆ, ಅನುಷ್ಠಾನಗಳನ್ನು ಮಾಡಬೇಕು. ಅನಂತರ ತಾನು ಭೋಜನ ಮಾಡಬೇಕು. ತುಪ್ಪದ ಪಾತ್ರೆ, ಉದಕ ಕುಂಭಗಳನ್ನು ದ್ವಿಜರಿಗೆ ದಾನ ನೀಡಬೇಕು.

**''ಪ್ರಿಯತಾಂ ಅತ್ರ ಭಗವಾನ್ ಪರಮಾತ್ಮಾ ದಿವಾಕರಃ''**

ಈ ಕಲ್ಯಾಣ ಸಪ್ತಮಿ ವ್ರತದಿಂದ ಸೂರ್ಯಾಂತರ್ಯಾಮಿಯಾದ ಪರಮಾತ್ಮನು ಪ್ರೀತನಾಗಲಿ ಎಂದು ಪ್ರಾರ್ಥಿಸಬೇಕು. ಇದೇ ವಿಧಾನದಿಂದ ಪ್ರತಿ ತಿಂಗಳೂ ವ್ರತಾನುಷ್ಠಾನಮಾಡಬೇಕು. ಹೀಗೆ ಹನ್ನೆರಡು ತಿಂಗಳುಮಾಡಿ, ಹದಿಮೂರನೆಯ

ತಿಂಗಳವೂ ಶುಕ್ಲ ಪಕ್ಷ ಸಪ್ತಮಿಯ ದಿನ ಹದಿಮೂರು ಗೋವುಗಳನ್ನು ವಸ್ತ್ರಾಲಂಕಾರ ಗಳಿಂದ ಸಿಂಗರಿಸಿ, ಕೊಂಬಿಗೆ ಬಂಗಾರದ ಕವಚಮಾಡಿಸಿ ದಾನಕೊಡಬೇಕು. ಕೊನೆಯ ಪಕ್ಷ ಒಂದಾದರೂ ಹಸುವನ್ನು ನೀಡಬೇಕು. ವಿತ್ತಶಾಠ್ಯವನ್ನು ಐಶ್ವರ್ಯವನ್ನು ಪ್ರದರ್ಶನ ಮಾಡಬಾರದು. ಅಸೂಯೆ ಇರಬಾರದು; ಇವನ್ನೆಲ್ಲ ಮಾಡಿದರೆ ಅಧಃಪಾತ ನಿಶ್ಚಿತ. ಈ ರೀತಿಯಿಂದ ಕಲ್ಯಾಣ ಸಪ್ತಮಿ ವ್ರತ ಗೈದವನು ಸರ್ವ ಪಾಪಗಳಿಂದ ಮುಕ್ತನಾಗಿ ಸೂರ್ಯಲೋಕದಲ್ಲಿ ಸತ್ಕೃತನಾಗುವನು.

**ವಿಶೋಕ ಸಪ್ತಮಿ ವ್ರತ :-** ಮಾಘ ಶುಕ್ಲ ಪಂಚಮಿ, ಉಪೋಷಣ ಮಾಡಬೇಕು. ನರ-ನಾರಿ ಯಾರಾದರೂ ಆಗಬಹುದು. ಈ ವ್ರತಕ್ಕೆ. ವ್ರತ ಪ್ರಾರಂಭದ ದಿನ ಕರಿ ಎಳ್ಳಿನ ಎಣ್ಣೆಯನ್ನು ಹಚ್ಚಿಕೊಂಡು ಸ್ನಾನಮಾಡಿ, ಕೃಶರ ಮಾತ್ರ ತಿಂದಿರಬೇಕು. ರಾತ್ರಿ ಬ್ರಹ್ಮಚರ್ಯ ವ್ರತವನ್ನು ಪಾಲಿಸಬೇಕು. ಮಾರನೆಯ ದಿನ ಉಷಃಕಾಲದಲ್ಲಿ ಎದ್ದು ಸ್ನಾನ, ಜಪ, ದೇವತಾರ್ಚನೆಗಳನ್ನು ಮುಗಿಸಬೇಕು. ಒಂದು ಹೊಂದಾವರೆಯನ್ನು ಮಾಡಿಸಿ 'ಅರ್ಕಾಯ ನಮಃ' ಎಂದು ಪೂಜಿಸಬೇಕು. ಕೆಂಪುಬಟ್ಟೆ, ಕೆಂಪು ಹೂಗಳನ್ನು ಸೂರ್ಯನಿಗೆ ಏರಿಸಬೇಕು.

**ಯಥಾ ವಿಶೋಕಂ ಭವನಂ ತ್ವಯ್ಯೇವಾದಿತ್ಯ ಸರ್ವದಾ ।**
**ತಥಾ ವಿಶೋಕತಾ ಮೇಸ್ಯಾತ್ತ್ವದ್ಭಕ್ತಿಃ ಪ್ರತಿಜನ್ಮಚ ॥**

ಎಂದು ಸೂರ್ಯನನ್ನು ನಮಿಸಿ, ನಿನ್ನಿಂದ ನನ್ನ ಮನೆಯಲ್ಲಿ ದುಃಖವಿಲ್ಲದಂತಾಗಲಿ ನನಗೂ ದುಃಖವಿಲ್ಲದಂತಾಗಲಿ. ಪ್ರತಿಯೊಂದು ಜನ್ಮದಲ್ಲಿ ನನಗೆ ಭಕ್ತಿಯಿರಲಿ ಎಂದು ಪ್ರಾರ್ಥಿಸಬೇಕು. ಹೀಗೆ ಪ್ರಾರ್ಥನೆ ಮಾಡಿ, ಗೋಮೂತ್ರವನ್ನು ಪ್ರಾಶನ ಮಾಡಬೇಕು. ಜ್ಞಾನಿಗಳನ್ನು ಷಷ್ಠೀ ದಿನ ಭಕ್ತಿಯಿಂದ ಪೂಜಿಸಬೇಕು. ಸಪ್ತಮಿಯ ದಿನ ಬೆಳಿಗ್ಗೆ ಎದ್ದು ಬೆಲ್ಲದ ಪಾತ್ರೆ, ವಸ್ತ್ರ ಹಾಗೂ ಆ ಪ್ರತಿಮೆಯನ್ನು ಪದ್ಮವನ್ನು ಜ್ಞಾನಿಗಳಿಗೆ ದಾನಕೊಡಬೇಕು. ಸಪ್ತಮಿಯ ದಿನ ಎಣ್ಣೆ ಉಪ್ಪುಗಳಿಲ್ಲದೆ ಮೌನದಿಂದ ಊಟಮಾಡಿ, ಪುರಾಣ ಶ್ರವಣಮಾಡಬೇಕು. ಹೀಗೆ ತಿಂಗಳಿನ ಎರಡೂ ಪಕ್ಷಗಳ ಸಪ್ತಮಿಯ ದಿನದಲ್ಲಿ ಹೀಗೆ ಹನ್ನೆರಡು ತಿಂಗಳೂ ಮುಂದಿನ ಮಾಘ ಸಪ್ತಮಿಯವರೆಗೂ ಮಾಡಬೇಕು. ವ್ರತದ ಕೊನೆಯಲ್ಲಿ ಕಲಶ, ಬಂಗಾರದ ಕಮಲ, ಸುಸಜ್ಜಿತ ಹಾಸಿಗೆ, ಕಪಿಲವರ್ಣದ ಹಿಂಡುವ ಹಸು ಮುಂತಾದವುಗಳನ್ನು ಭೋಗ್ಯ ಸಜ್ಜನನಿಗೆ ದಾನ ಕೊಡಬೇಕು. ಇದರಿಂದ ಮನುಷ್ಯರ ಮನೋರಥಗಳೆಲ್ಲವೂ ಪೂರ್ಣವಾಗುವವು. ರೋಗ, ದುಃಖ, ದಾರಿದ್ರ್ಯಗಳು ದೂರವಾಗುವವು. ನಿಷ್ಕಾಮ ಭಾವನೆಯಿಂದ ಈ ವಿಶೋಕಸಪ್ತಮೀ ವ್ರತವನ್ನಾಚರಿಸಿದವನು ಬ್ರಹ್ಮಪದ ಹೊಂದುತ್ತಾರೆ.

**ಫಲಸಪ್ತಮಿ ವ್ರತ :-** ಮಾರ್ಗಶೀರ್ಷ ಶುದ್ಧ ಪಂಚಮಿ ದಿನ ನಿಯಮದಿಂದ ಇರಬೇಕು. ಷಷ್ಠಿಯ ದಿನ ಉಪವಾಸ ಮಾಡಬೇಕು. ಬಂಗಾರದ ಕಮಲಮಾಡಿಸಿ ಸಕ್ಕರೆಯೊಂದಿಗೆ ತುಂಬಿ ಸತ್ಪಾತ್ರದಲ್ಲಿ ದಾನನೀಡಬೇಕು. ಮತ್ತು ಒಂದು ಬಂಗಾರದ ಹಣ್ಣನ್ನು ಮಾಡಿಸಿ - 'ಭಾನುರ್ಮೇ ಪ್ರೀಯತಾಂ' ಎಂದು ಸಾಯಂಕಾಲದಲ್ಲಿ ಭಕ್ತರಿಗೆ ದಾನನೀಡಬೇಕು. ಸಕ್ಯಾನುಸಾರ ಭಕ್ತರ ಪೂಜೆಗೈದು, ಸಪ್ತಮಿಯ ದಿನ ಹಾಲು, ಅನ್ನವನ್ನು ಊಟ ಮಾಡಬೇಕು. ಹಣ್ಣುಗಳನ್ನು ಅಂದು ತಿನ್ನಕೂಡದು. ಇಷ್ಟೇ ಅಲ್ಲ ; ಇದರ ಮುಂದಿನ ಕೃಷ್ಣಪಕ್ಷದ ಸಪ್ತಮಿ ದಿನ ಬರುವವರೆಗೆ ಯಾವ ಹಣ್ಣನ್ನೂ ತಿನ್ನಕೂಡದು. ಆ ಸಪ್ತಮಿಯ

ದಿನವೂ ಉಪವಾಸವಿದ್ದು, ಚಿನ್ನದ ಹಣ್ಣು, ಚಿನ್ನದ ಕಮಲಗಳನ್ನು ಸಕ್ಕರೆಯ ಪಾತ್ರೆ, ಬಟ್ಟೆ, ದಕ್ಷಿಣೆಗಳೊಂದಿಗೆ ದಾನಕೊಡಬೇಕು. ಹೀಗೆ ತಿಂಗಳಿನ ಶುಕ್ಲ, ಕೃಷ್ಣ ಪಕ್ಷಗಳ ಸಪ್ತಮಿ ತಿಥಿಗಳಂದು, ವ್ರತಾನುಷ್ಠಾನವನ್ನು ಒಂದು ವರ್ಷದವರೆಗೆ ಮಾಡುತ್ತಲಿರಬೇಕು. ಅನುಷ್ಠಾನದ ದಿನ ಉಪವಾಸವಿದ್ದು ಒಂದೊಂದು ತಿಂಗಳ ಸೂರ್ಯನ ಒಂದೊಂದು ಹೆಸರಿನಿಂದ ದಾನವನ್ನು ಕೊಡಬೇಕು. ಮಾರ್ಗಶಿರ ಮಾಸದ ಶುಕ್ಲ ಹಾಗೂ ಕೃಷ್ಣ ಪಕ್ಷದ ಸಪ್ತಮಿ ದಿನಗಳಲ್ಲಿ ದಾನ ಕೊಡುವಾಗ 'ಭಾನುರ್ಮೇ ಪ್ರೀಯತಾಂ' ಎಂದು ಹೇಳಬೇಕು. ಪುಷ್ಯ ಮಾಸದಲ್ಲಿ 'ಅರ್ಕೋಮೇ ಪ್ರೀಯತಾಂ', ಮಾಘದಲ್ಲಿ 'ರವಿರ್ಮೇ ಪ್ರೀಯತಾಂ', ಫಾಲ್ಗುಣದಲ್ಲಿ 'ಬ್ರಧ್ನೋಮೇ', ಚೈತ್ರದಲ್ಲಿ 'ಸೂರ್ಯೋಮೇ', ವೈಶಾಖದಲ್ಲಿ 'ಅರ್ಕೋಮೇ', ಜ್ಯೇಷ್ಠದ್ಲಲಿ 'ಶ್ರೀಹರಿರ್ಮೇ, ಆಷಾಢದಲ್ಲಿ 'ಶಿವೋಮೇ....', ಶ್ರಾವಣದಲ್ಲಿ 'ಶ್ರೀಮಾನ್‌ಮೇ.....' ಭಾದ್ರಪದದಲ್ಲಿ 'ವಿಭಾವಸುಃ' ಅಶ್ವೀಜದಲ್ಲಿ 'ತ್ವಷ್ಟಾ' ಕಾರ್ತಿಕದಲ್ಲಿ 'ವರುಣೋಮೇ ಪ್ರೀಯತಾಂ' ಎಂದು ಹೇಳಿ ದಾನಕೊಡಬೇಕು. ವ್ರತದ ಕೊನೆಯಲ್ಲಿ ದಂಪತಿಗಳನ್ನು ವಸ್ತ್ರಾಲಂಕಾರಗಳಿಂದ ಪೂಜಿಸಿ, ಬಂಗಾರದ ಫಲವನ್ನು ಮಾಡಿಸಿ ಸಕ್ಕರೆಯ ಕಲಶದೊಂದಿಗೆ ದಾನ ಕೊಡಬೇಕು.

'ಯಥಾನ ವಿಫಲಃ ಕಾಮಃ ತ್ವದ್ಭಕ್ತಾನಾಂ ಸದಾ ಭವೇತ್ ।
ತಥಾನಂತ ಫಲಾವಾಪ್ತಿರಸ್ತುಮೇ ಜನ್ಮಜನ್ಮನಿ ॥

ನಿನ್ನ ಭಕ್ತರ ಕಾಮನೆಯು ಹೇಗೆ ಎಂದೂ ವಿಫಲವಾಗುವುದಿಲ್ಲವೋ ಅದರಂತೆ ನನ್ನ ಮನೋರಥಗಳೆಲ್ಲವೂ ಪೂರ್ಣವಾಗಿ ನನ್ನ ಮುಂದಿನ ಎಲ್ಲ ಜನ್ಮಗಳಲ್ಲಿಯೂ ಅನಂತಫಲ ಲಭಿಸಲಿ. ಹೀಗೆ ಪ್ರಾರ್ಥನೆಯನ್ನು ಸಲ್ಲಿಸಿ ವ್ರತವನ್ನು ಪೂರ್ಣಗೊಳಿಸಬೇಕು. ಈ ಫಲಸಪ್ತಮಿ ವ್ರತದ ಆಚರಣೆಯಿಂದ ಸುರಾಪಾನ ಮೊದಲಾದ ಮಹಾಪಾತಕಗಳು ನಾಶವಾಗುವವು. ಹಿಂದಿನ, ಇಂದಿನ, ಮುಂದಿನ ಒಟ್ಟು ಇಪ್ಪತ್ತೊಂದು ತಲೆಯ ವಂಶಜರು ಉದ್ಧೃತರಾಗುವರು. ವ್ರತ ಮಾಡಿದವನು ಕೊನೆಗೆ ಸೂರ್ಯಲೋಕದಲ್ಲಿ ಸುಖದಿಂದ ವಾಸಿಸುವನು.

**ಶರ್ಕರಾ ಸಪ್ತಮಿ ವ್ರತ** :- ವೈಶಾಖ ಶುಕ್ಲ ಸಪ್ತಮಿ ಬಿಳಿಯ ಎಳ್ಳಿನ ಎಣ್ಣೆಯಿಂದ ಸ್ನಾನಮಾಡಿ, ಬಿಳಿಬಟ್ಟೆ, ಬಿಳಿಹೂ ಧರಿಸಬೇಕು. ಸ್ಥಂಡಿಲದಲ್ಲಿ ಪದ್ಮವನ್ನು ಕುಂಕುಮದಿಂದ ಬರೆಯಬೇಕು. ಅದರಲ್ಲಿ 'ಸವಿತ್ರೇ ನಮಃ' ಎಂದು ನಮಿಸಿ, ಗಂಧ, ಧೂಪ, ದೀಪಗಳನ್ನು ನಿವೇದಿಸಬೇಕು. ನೀರಿನ ಕಲಶ, ಸಕ್ಕರೆಯ ಪಾತ್ರೆಗಳನ್ನು ಬಿಳಿಬಟ್ಟೆ ಹೊದಿಸಿ, ಶ್ವೇತ ಪುಷ್ಪಗಳನ್ನು ಹೊದಿಸಿ ಸ್ಥಾಪಿಸಬೇಕು. ಅಲ್ಲಿಯೇ ಬಂಗಾರದ ಹೂವನ್ನು ಮಾಡಿಸಿ, ಮುಂದೆ ಹೇಳುವ ಮಂತ್ರದಿಂದ ಪೂಜಿಸಬೇಕು.

'ವಿಶ್ವದೇವ ಮಯೋ ಯಸ್ಮಾದ್ವೇದವಾದೀತಿ ಪಠ್ಯತೇ ।
ತ್ವಮೇವಾಮೃತ ಸರ್ವಸ್ವಮತಶ್ಯಾಂತಿಂ ಪ್ರಯಚ್ಛಮೇ ॥

ಸೂರ್ಯದೇವನೇ ಎಲ್ಲ ದೇವತೆಗಳು, ನಿನ್ನಲ್ಲಿ ಅಂತರ್ಗತರಾಗಿದ್ದಾರೆ. ವೇದವನ್ನು ಮುಖ್ಯವಾಗಿ ಉಪದೇಶ ಮಾಡುವವನು ನೀನೇ ಎಂದು ಹೇಳಲಾಗಿದೆ. ನೀನು ಅಮೃತಮೂರ್ತಿ. ಆದುದರಿಂದ ನೀನು ನನಗೆ ಶಾಂತಿ ನೀಡು. ಹೀಗೆ ಪ್ರಾರ್ಥನೆ ಸಲ್ಲಿಸಿ,

ಪಂಚಗವ್ಯವನ್ನು ಕುಡಿದು, ಆ ಸ್ಥಂಡಿಲದ ಮಧ್ಯದಲ್ಲಿಯೇ ಮಲಗಬೇಕು. ಸೌರಸೂಕ್ತವನ್ನು ಪಠಿಸಬೇಕು. ಪುರಾಣಶ್ರವಣ ಮಾಡಬೇಕು. ಮರುದಿನ ಅಷ್ಟಮಿ ತಿಥಿಯಂದು ನಿತ್ಯ ಕರ್ಮಾನುಷ್ಠಾನಮಾಡಿ ಮುಗಿಸಿ, ಅವೆಲ್ಲವನ್ನು ವೇದಬಲ್ಲ ವಿದ್ವಾಂಸನಿಗೆ ದಾನಮಾಡಬೇಕು. ಕ್ಷೀರ, ತುಪ್ಪಗಳನ್ನು ವರ್ಜಿಸಿ ಮೌನಿಯಾಗಿ ಊಟ ಮಾಡಿಸಬೇಕು. ತಾನು ಮಾತ್ರ ಎಣ್ಣೆ, ಉಪ್ಪುಗಳನ್ನು ವರ್ಜಿಸಿ ಮೌನಿಯಾಗಿ ಊಟ ಮಾಡಬೇಕು. ಹೀಗೆ ಪ್ರತಿ ತಿಂಗಳು ಮಾಡುತ್ತ ವರ್ಷದ ಕೊನೆಗೆ ಸಲಕರಣೆಗಳಿಂದ ಸಹಿತವಾಗಿ ಶಯ್ಯಾದಾನವನ್ನು, ಶರ್ಕರಾಕಲಶ ದಾನವನ್ನು, ಗೋದಾನವನ್ನು ಶಕ್ತಿಯಿದ್ದರೆ ಗೃಹದಾನವನ್ನು, ಗೃಹೋಪಯುಕ್ತ ಸಂಸಾರ ಸಾಮಗ್ರಿಗಳನ್ನು, ಹತ್ತು ಬಂಗಾರದ ನಾಣ್ಯಗಳಿಂದ ಸಾವಿರ ನಾಣ್ಯಗಳವರೆಗೆ ವೆಚ್ಚ ಮಾಡಿ ನಿರ್ಮಿಸಿದ ಚಿನ್ನದ ಕಮಲವನ್ನೂ ದಾನಮಾಡಬೇಕು. ಸೂರ್ಯನು ಹಿಂದೆ ಅಮೃತಪಾನ ಮಾಡುವಾಗ ಅವನ ಬಾಯಲ್ಲಿಯ ಅಮೃತದ ಹನಿಗಳು ನೆಲದ ಮೇಲೆ ಬಿದ್ದವು. ಆದರಿಂದ ನೆಲ್ಲು, ಹೆಸರು, ಕಬ್ಬುಗಳು ಹುಟ್ಟಿದವು. ಆ ಕಬ್ಬಿನ ರಸದಿಂದಲೇ ಸಕ್ಕರೆಯು ನಿರ್ಮಿತವಾಗಿದೆ. ಆದುದರಿಂದ ಸಕ್ಕರೆಯು ಸೂರ್ಯನಿಗೆ ಪ್ರಿಯವಾದುದು. ಅದೇ ಕಾರಣದಿಂದ ಹವ್ಯ ಕವ್ಯಗಳಲ್ಲಿ ಸಕ್ಕರೆಯನ್ನು ಉಪಯೋಗಿಸುತ್ತಾರೆ.

**ಅಮೃತಂಪಿಬತೋವಕ್ತ್ರಾತ್ಸೂರ್ಯಸ್ಯಾಮೃತಬಿಂದವಃ ।**
**ಸಮುತ್ಪೇತುರ್ಧರಣ್ಯಾಂ ಯೇಶಾಲಿಮುದ್ಗೇಕ್ಷವಃಕ್ರಮಾತ್ ॥**

**ಶರ್ಕರಾಯಾ ರಸಸ್ತಸ್ಮಾದಿಕ್ಷುಸಾರೋಽಮೃತಾತ್ಮವಾನ್ ।**
**ಇಷ್ಟಾರವೇರತಃ ಪುಣ್ಯಶರ್ಕರಾ ಹವ್ಯಕವ್ಯಯೋಃ ॥**

ಈ ಶರ್ಕರಾ ಸಪ್ತಮೀ ವ್ರತಾನುಷ್ಠಾನದಿಂದ ಅಶ್ವಮೇಧ ಫಲವು. ಬ್ರಹ್ಮಲೋಕ ಪ್ರಾಪ್ತಿ ಆಗುತ್ತದೆ. ಇದರ ಶ್ರವಣ ಮಾತ್ರದಿಂದಲೂ ಇಂದ್ರಲೋಕ ನಿಶ್ಚಿತ.

**ಕಮಲ ಸಪ್ತಮೀ ವ್ರತ :** ಚೈತ್ರ ಶುದ್ಧ ಸಪ್ತಮಿಯಂದು ಬಿಳಿಸಾಸಿವೆ ಎಣ್ಣೆಯಿಂದ ಸ್ನಾನಮಾಡಬೇಕು. ಒಂದು ಎಳ್ಳಿನ ಪಾತ್ರೆಯಲ್ಲಿ ಚಿನ್ನದ ಕಮಲ ಮಾಡಿಸಿ ಇಟ್ಟು ಜೋಡು ಬಟ್ಟೆಹೊದಿಸಿ ಗಂಧ ತುಪ್ಪಗಳಿಂದ ಪೂಜಿಸಬೇಕು.

**ನಮಸ್ತೇ ಪದ್ಮಹಸ್ತಾಯ ನಮಸ್ತೇ ವಿಶ್ವಧಾರಿಣೇ ।**
**ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತುತೇ ॥**

''ಪದ್ಮಹಸ್ತನೂ ವಿಶ್ವಾಧಾರನೂ ಆದ ದಿವಾಕರನೆ, ನಿನಗೆ ನಮಸ್ಕಾರ. ಎಲ್ಲೆಡೆ ಬೆಳಕು ಬೀರುವ ಪ್ರಭಾಕರನೆ, ನಿನಗೆ ನಮಸ್ಕಾರ'' ಎಂದು ಪ್ರಾರ್ಥನೆ ಸಲ್ಲಿಸಬೇಕು. ಅನಂತರ ಸಾಯಂಕಾಲದಲ್ಲಿ ನೀರು ತುಂಬಿದ ಕೊಡವನ್ನು ದ್ವಿಜರಿಗೆ ವಸ್ತ್ರ ಮಾಲ್ಯಾದಿಗಳಿಂದ ಪೂಜಿಸಿ ದಾನ ಕೊಡಬೇಕು. ಶಕ್ತಿ ಇದ್ದವರು ಕಪಿಲಗೋವನ್ನು ಕೊಡಬೇಕು. ಮರುದಿನ ಅಷ್ಟಮಿ ಯಥಾಶಕ್ತಿ ಜ್ಞಾನಿಗಳ ಭೋಜನ ಮಾಡಿಸಿ ತಾನು ಮಾತ್ರ ಮಾಂಸ, ಎಣ್ಣೆಗಳನ್ನು ವರ್ಜಿಸಿ ಭೋಜನಮಾಡಬೇಕು. ಪ್ರತಿ ತಿಂಗಳು ಹೀಗೆ ಶುಕ್ಲಪಕ್ಷದ ಸಪ್ತಮಿ ದಿನದಂದು, ನಿಯಮದಿಂದ ಹೀಗೆ ಈ ವ್ರತವನ್ನು ಆಚರಿಸಬೇಕು. ವ್ರತ ಸಮಾಪ್ತಿಯಾದ ಬಳಿಕ ಸುವರ್ಣ ಕಮಲವನ್ನು,ಹಾಸಿಗೆಯನ್ನು, ಹಿಂಡುವ

ಹಸುವನ್ನು, ಅವುಗಳಿಗೆ ಅನುಗುಣವಾಗಿ ಆಸನ ದೀಪಗಳನ್ನುಕೊಟ್ಟು ಭೋಜನಮಾಡಿಸಬೇಕು. ವಿಧಿಯಿಂದ ಕಮಲ ಸಪ್ತಮೀವ್ರತ ಮಾಡಿದವನು ವಿಪುಲ ಐಶ್ವರ್ಯವನ್ನು ಪಡೆಯುತ್ತಾನೆ. ಸೂರ್ಯಲೋಕವನ್ನು ಹೊಂದುತ್ತಾನೆ.

**ಮಂದಾರ ಸಪ್ತಮೀ ವ್ರತ :-** ಮಾಘ ಶುಕ್ಲ ಪಂಚಮಿ ದಿನ ಮಿತಾಹಾರ, ಷಷ್ಠೀ ಉಪವಾಸ, ಜ್ಞಾನಿ ಪೂಜೆ, ಮಂದಾರ ವೃಕ್ಷ ಪ್ರಾರ್ಥನೆ, ಮೂರನೆಯದಿನ ಪ್ರಾತಃ ಸ್ನಾನ, ದ್ವಿಜ ಭೋಜನ, ಮಂದಾರ ಪುಷ್ಪಗಳನ್ನು ಎಂಟು ಮಾಡಿಸಬೇಕು. ಒಂದು ಚಿನ್ನದ ಪ್ರತಿಮೆ ಮಾಡಿಸಿ, ಅವನ ಕೈಯಲ್ಲಿ ಕಮಲವನ್ನು ಬಿಡಿಸಬೇಕು. ಹಾಗೂ ಒಂದು ತಾಮ್ರದ ಪಾತ್ರೆಯಲ್ಲಿ ಕರಿ ಎಳ್ಳುಗಳಿಂದ ಕಮಲವನ್ನುರಚಿಸಬೇಕು. ಆ ಕಮಲದ ಒಂದೊಂದು ದಳದಲ್ಲಿಯೂ ಕೆಳಗೆ ಹೇಳಿದ ನಾಮಗಳಿಂದ ಸೂರ್ಯನನ್ನು ಮಂದಾರ ಕುಸುಮಗಳಿಂದ ಆವಾಹನೆಮಾಡಿ ನಮಸ್ಕರಿಸಬೇಕು. 'ಭಾಸ್ಕರಾಯ ನಮಃ' ಎಂದು ಪೂರ್ವ ದಳದಲ್ಲಿ ಹೂವನ್ನೇರಿಸಿ ಆವಾಹನೆ ಮಾಡಬೇಕು.

| | | |
|---|---|---|
| 'ಸೂರ್ಯಾಯ ನಮಃ' | ಎಂದು | ಆಗ್ನೇಯ ದಳದಲ್ಲಿ |
| 'ಅರ್ಕಾಯ ನಮಃ' | ಎಂದು | ದಕ್ಷಿಣ ದಳದಲ್ಲಿ |
| 'ಅರ್ಯಮೇ ನಮಃ' | ಎಂದು | ನೈಋತ್ಯ ದಳದಲ್ಲಿ |
| 'ಚಂಡಭಾನವೇ ನಮಃ' | ಎಂದು | ಪಶ್ಚಿಮದಳದಲ್ಲಿ |
| 'ಚಂಡ ಭಾನವೇ ನಮಃ' | ಎಂದು | ವಾಯವ್ಯ ದಳದಲ್ಲಿ |
| 'ಪೂಷ್ಣೇ ನಮಃ' | ಎಂದು | ಉತ್ತರ ದಳದಲ್ಲಿ |
| 'ಆನಂದಾಯ ನಮಃ' | ಎಂದು | ಈಶಾನ್ಯ ದಳದಲ್ಲಿ |

ಸೂರ್ಯನನ್ನು ಆಹ್ವಾನಿಸಿ ಮಧ್ಯ ಕರ್ಣಿಕೆಯಲ್ಲಿ 'ಸರ್ವಾತ್ಮನೇ ನಮಃ' ಎಂದು ಚಿನ್ನದ ಪ್ರತಿಮೆಯಿಟ್ಟು ಪೂಜೆ ಮಾಡಬೇಕು. ಬಿಳಿಯ ಬಟ್ಟೆ ಸುತ್ತಬೇಕು. ಮಾಲೆಗಳನ್ನು ಮುಡಿಸ ಬೇಕು. ಫಲ, ಭಕ್ಷ್ಯಗಳನ್ನು ನಿವೇದಿಸಬೇಕು. ಹೀಗೆ ಪೂಜೆಮಾಡಿ; ವೇದ ಓದಿದ ದ್ವಿಜರಿಗೆ ದಾನ ಕೊಡಬೇಕು. ಅನಂತರ ಮೌನದಿಂದ ತೈಲವರ್ಜಿತವಾದ ಭೋಜನ ಮಾಡಬೇಕು. ಹೀಗೆ ಪ್ರತಿತಿಂಗಳು ಮಾಡುತ್ತ ಒಂದು ವರ್ಷದವರೆಗೆ ಈ ವ್ರತಾಚರಣೆಯನ್ನು ಮಾಡಬೇಕು. ವ್ರತದ ಕೊನೆಯಲ್ಲಿ-

''ನಮೋ ಮಂದಾರನಾಥಾಯ ಮಂದಾರ ಭವನಾಯ ಚ ।
ತ್ವಂ ರವೇ ತಾರಯಸ್ವಾಸ್ಮಾನಸ್ಮಾತ್ ಸಂಸಾರಸಾತ್ ॥''

ಎಂದು ಮಂತ್ರವನ್ನು ಹೇಳಿ, ಗೋದಾನ ನೀಡಬೇಕು.

ಈ ವಿಧಿಯಿಂದ ಮಂದಾರಸಪ್ತಮಿವ್ರತವನ್ನು ಮಾಡಿದವನ ಎಲ್ಲ ಪಾಪಗಳು ಪರಿಹಾರ ವಾಗಿ, ಒಂದು ಕಲ್ಪಕಾಲ ಸ್ವರ್ಗದಲ್ಲಿ ಸುಖದಿಂದ ನಿವಾಸಿಸುತ್ತಾನೆ.

''ಇಮಾನಘೌಘಪಟಲಭೀಷಣಧ್ವಾಂತದೀಪಿಕಾಂ ।
ಗಚ್ಛನ್ಸಂಗೃಹ್ಯ ಸಂಸಾರಶರ್ವರ್ಯಾಂ ನ ಸ್ಖಲೇನ್ನರಃ ॥''

ಪಾಪವೆಂಬ ಕಗ್ಗತ್ತಲೆಗೆ ದೀಪವಾದ ವ್ರತವನ್ನು ಮಾಡಿದರೆ ಸಂಸಾರವೆಂಬ ಕಗ್ಗತ್ತಲೆ ಯಲ್ಲಿ ಹೋಗುವವನು ಎಡವುದಿಲ್ಲ. ಶುಭ ಸಪ್ತಮಿ ವ್ರತ-ಆಶ್ವೀಜ ಶುದ್ಧ ಸಪ್ತಮಿಯ

ದಿನ ಕಪಿಲಗೋವನ್ನು ಭಕ್ತಿಯಿಂದ ಹೂ, ಗಂಧ, ಅರಿಷಿಣ, ಕುಂಕುಮಗಳಿಂದ ಪೂಜಿಸಬೇಕು. ದ್ವಿಜರನ್ನು ಕರೆದು ಪುಣ್ಯಾಹವಾಚನ ಮಾಡಿಸಿ, ಈ ವ್ರತವನ್ನು ಆರಂಭಿಸಿ, ಕಪಿಲ ಗೋವನ್ನು ಪ್ರಾರ್ಥಿಸಬೇಕು.

**''ನಮಾಮಿ ಸೂರ‍್ಯ ಸಂಭೂತಾ ಮಶೇಷ ಭುವನಾಲಯಾಂ ।**
**ತ್ವಾಮಹಮ್ ಶುಭಕಲ್ಯಾಣಿ ಸ್ವಶರೀರ ವಿಶುದ್ಧಯೇ ॥**

ಹೀಗೆ ಗೋ-ಪ್ರಾರ್ಥನೆಗೈದು ತಾಮ್ರಪಾತ್ರೆಯಲ್ಲಿ ಒಂದು ಕೊಳಗ ಎಳ್ಳನ್ನು ತುಂಬಿ ಇಟ್ಟು, ಅದರಲ್ಲಿ ಬಂಗಾರದ ಎತ್ತನ್ನು ಮಾಡಿಸಿ, ಅದನ್ನು ವಸ್ತ್ರಹೊದಿಸಿ ಅಲಂಕರಿಸಿ, ಭಕ್ಷ್ಯ, ಭೋಜ್ಯ, ಫಲ, ಘೃತ ಪಾಯಸ ಮುಂತಾದವುಗಳೊಂದಿಗೆ ಪಾತ್ರೆ ಸಹಿತವಾಗಿ ದ್ವಿಜರಿಗೆ ದಾನಕೊಡಬೇಕು. 'ಆರ್ಯಮಾ ಪ್ರೀಯತಾಂ' ಎಂದು ಉಚ್ಚರಿಸಿ, ಸಾಯಂಕಾಲದಲ್ಲಿ ದಾನ ನೀಡಬೇಕು. ತಾನು ಪಂಚಗವ್ಯ ಪ್ರಾಶನದಿಂದ ಉಪವಾಸವಿದ್ದು, ನೆಲದ ಮೇಲೆ ಮಲಗಬೇಕು. ಮರುದಿನ ಪ್ರಾತಃಕಾಲದಲ್ಲಿ ಎದ್ದು, ಅನ್ನ ಸಂತರ್ಪಣೆ ಮಾಡಬೇಕು. ಹೀಗೆ ಪ್ರತಿ ತಿಂಗಳು ಮಾಡಿ, ವರ್ಷದ ಕೊನೆಗೆ ಬಂಗಾರದ ಆಕಳು, ಎತ್ತು, ಹಾಸಿಗೆ, ಕಬ್ಬು, ಬೆಲ್ಲ, ತಾಮ್ರ ಪಾತ್ರೆಯ ತುಂಬ ಎಳ್ಳು ಮುಂತಾದವುಗಳನ್ನು 'ವಿಶ್ವಾತ್ಮಾ ಪ್ರೀಯತಾಂ' ಎಂದು ಹೇಳಿ ವೇದಾಧ್ಯಾಯಿ ದ್ವಿಜನಿಗೆ ದಾನ ಕೊಡಬೇಕು. ಈ ಶುಭ ಸಪ್ತಮಿ ವ್ರತವನ್ನು ವಿಧಿ ಪೂರ್ವಕವಾಗಿ ಮಾಡಿದವನು ಸಹಸ್ರಾರು ಭ್ರೂಣಹತ್ಯಾ, ಬ್ರಹ್ಮಹತ್ಯಾ ಪಾಪಗಳನ್ನು ಕಳೆದುಕೊಂಡು, ಜನ್ಮಾಂತರದಲ್ಲಿ ಸಪ್ತದ್ವೀಪ ಸಾರ್ವಭೌಮನಾಗಿ ಮುಂದೆ ಸ್ವರ್ಗದಲ್ಲಿ ಗಣಾಧೀಶನಾಗಿ ಪ್ರಳಯಕಾಲದವರೆಗೂ ಇರುತ್ತಾನೆ. ಈ ಏಳು ವಿಧವಾದ ಸಪ್ತಮಿ ವ್ರತಗಳನ್ನು, ಏಳು ವರ್ಷ ಕಾಲ ಅನುಷ್ಠಾನ ಮಾಡಿದವನು ಏಳು ಲೋಕಗಳಿಗೂ ಅಧೀಶ್ವರನಾಗಿದ್ದು, ಕೊನೆಗೆ ವೈಕುಂಠಲೋಕವನ್ನು ಹೊಂದುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಧರ್ಮಮೂರ್ತಿರಾಜನ ಉಪಾಖ್ಯಾನ ಎಂಬ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*



॥ ಭೀಷ್ಮ ಉವಾಚ ॥

**ಭೂರ್ಲೋಕೋऽಥ ಭುವರ್ಲೋಕಃ ಸ್ವರ್ಲೋಕೋऽಥ ಮಹರ್ಜನಃ।**
**ತಪಸ್ಸತ್ಯಂ ಸಪ್ತೈತೇ ದೇವಲೋಕಾಃ ಪ್ರಕೀರ್ತಿತಾಃ ॥**

**ಭೀಷ್ಮ** :- ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಇವು ಏಳು ದೇವಲೋಕಗಳೆಂದು ಪ್ರಸಿದ್ಧವಾಗಿವೆ. ಈ ಎಲ್ಲ ಲೋಕಗಳ ಒಡೆತನವು ಸರತಿಯಂತೆ ಬರುವ ಬಗೆಯೆಂತು? ಈ ಲೋಕದಲ್ಲಿ ಒಳ್ಳೆ ರೂಪ, ಆಯುಷ್ಯ, ಆರೋಗ್ಯ, ಐಶ್ವರ್ಯಗಳು ದೊರಕುವ ಬಗೆಯಾವುದು? ಲಕ್ಷ್ಮಿಯು ಪೂರ್ವ ಲೋಕದಲ್ಲಿ ದೇವತೆಗಳಿಂದ ಹೇಗೆ ಪೂಜಿತಳಾದಳು?

**ಪುಲಸ್ತ್ಯ** :- ಪೂರ್ವದಲ್ಲಿ ದೇವೇಂದ್ರನು ಅಗ್ನಿ ಹಾಗೂ ವಾಯುದೇವರಿಗೆ ಲೋಕದಲ್ಲಿ ರಾಕ್ಷಸರನ್ನು ಸಂಹಾರಮಾಡಲು ಆಜ್ಞೆನೀಡಿದನು. ಅವರಿಬ್ಬರೂ ಸಹಸ್ರಾರು ದೈತ್ಯರನ್ನು ಸುಟ್ಟು ಹಾಕಿದರು. ಅಳಿದುಳಿದ ತಾರಕ, ಕಮಲಾಕ್ಷ, ಕಾಲದೌಷ್ಟಿರ, ಐರಾವಸು, ವಿರೋಚನ, ಸಹ್ಲಾದಮುಂತಾದ ದೈತ್ಯವೀರರು ಓಡಿಹೋಗಿ ಸಮುದ್ರದಲ್ಲಿ ಅಡಗಿಕೊಂಡರು. ಇವರೆಲ್ಲರೂ ರಣಹೇಡಿಗಳಾದ ರಕ್ಕಸರು ಎಂದು ಅಗ್ನಿವಾಯುಗಳು ಅವರನ್ನು ಉಪೇಕ್ಷೆಮಾಡಿ ಬಿಟ್ಟುಬಿಟ್ಟರು. ಅಂದಿನಿಂದ ಆ ದೈತ್ಯರು ಸಮಯ ಸಿಕ್ಕಾಗಲೆಲ್ಲ ನೀರಿನಿಂದ ಎದ್ದು ಹೊರಬಿದ್ದು ಭೂಮಿಯ ಮೇಲಿರುವ ಮಾನವರನ್ನೆಲ್ಲ ಕೊಲ್ಲುತ್ತಾರೆ. ಆಕಾಶದಲ್ಲಿ ದೇವತೆಗಳನ್ನು ಪೀಡಿಸುತ್ತಾರೆ. ಪಾತಾಳದಲ್ಲಿಯ ಸರ್ಪಗಳನ್ನು ಹಿಂಸಿಸುತ್ತಾರೆ. ಋಷಿ ಮುನಿಗಳು ಎಲ್ಲಿಯೇ ಇದ್ದರೂ ಅವರನ್ನು ಗೋಳಾಡಿಸುತ್ತಾರೆ. ಅವರ ಯಜ್ಞಯಾಗಾದಿಕಾರ್ಯಗಳಿಗೆ ಅಡ್ಡಿ ಒಡ್ಡುತ್ತಾರೆ. ಹೀಗೆ ಎಲ್ಲ ಪ್ರಾಣಿಗಳಿಗೂ ಪ್ರಾಣಾಂತಿಕ ಉಪದ್ರವ ಕೊಟ್ಟ ಈ ದುಷ್ಟದೈತ್ಯರು ತಮ್ಮ ಜಲದುರ್ಗವಾದ ಸಮುದ್ರವನ್ನು ಸೇರುತ್ತಾರೆ. ಈ ರೀತಿಯಾಗಿ ಈ ಏಳು ಜನ ದೈತ್ಯವೀರರು ಸಹಸ್ರಾರು ಯುಗಗಳಿಂದ ಮೂರು ಲೋಕಗಳನ್ನೇ ಕಾಡಿ ಪೀಡಿಸುತ್ತ ಇದ್ದರು. ಇದನ್ನು ಕಂಡು ಕೋಪಗೊಂಡ ಸುರಸಾಮ್ರಾಟನಾದ ಶಚಿಪತಿಯು ಮತ್ತೆ ಅನಲಾನಿಲರನ್ನು ಕರೆದು ಹೇಳಿದನು. ''ನಮ್ಮ ವೈರಿಗಳಾದ ದೈತ್ಯವೀರರಿಗೆ ಈ ಸಾಗರವು ಆಶ್ರಯವಾಗಿದೆ. ಆದುದರಿಂದ ಈ ಸಮುದ್ರವನ್ನೇ ನೀವಿಬ್ಬರೂ ಕೂಡಿ ಈಗಲೇ ಒಣಗಿಸಿ ಬಿಡಿರಿ.''

**ಅಗ್ನಿ ವಾಯು** :- ದೇವತೆಗಳ ದೊರೆಯೇ ಸಮುದ್ರವನ್ನು ನಾಶಗೊಳಿಸುವುದು ಅಧರ್ಮವಲ್ಲವೇ? ಈ ಕಡಲಿನ ಒಡಲಿನಲ್ಲಿ ಅಮಿತ ಜೀವರಾಶಿಗಳು, ಜಲಚರ ಹುಳಗಳು ನೆಲೆನಿಂತಿವೆ. ಸರ್ವ ಸಾಗರದ ಶೋಷಣೆಯಿಂದ ಆ ಜೀವ ಜಂಗುಳಿಯೆಲ್ಲವೂ ಕ್ಷಯ ಹೊಂದುವದು. ಅದರಿಂದ ಬೇರೊಂದು ಉಪಾಯವನ್ನು ಯೋಚಿಸುವುದು ಸೂಕ್ತ. ಯಾವ ಜಲನಿಧಿಯ ಒಂದೊಂದು ಯೋಜನದಷ್ಟೇ ಸ್ಥಳದಲ್ಲಿಯೂ ಕೋಟಿ ಜೀವ ಜಂತುಗಳು ವಾಸಿಸಿರುವವೋ ಅಂಥ ಅಪಾರ ಸಾಗರವನ್ನು ನಾಶಗೈಯ್ಯುವುದು ಅನ್ಯಾಯವಲ್ಲವೇ ಸುರರಾಜ!

**ಪುಲಸ್ತ್ಯ** :- ಅನಲಾನಿಲರ ಈ ವಚನವನ್ನು ಕೇಳಿ ಸುರಪತಿಗೆ ಕೋಪ ಬಂದಿತು. ಅವನ ಕಣ್ಣುಗಳು ಆರಕ್ತವಾದವು. ಕಿಡಿಸಿಡಿದಂತೆ ನುಡಿಗಳನ್ನಾಡುತ್ತ ಅವನು ಹೀಗೆ ಮಾತನಾಡಿದನು.

**ಇಂದ್ರ :-** ದೇವತೆಗಳಿಗೆ ಪಾಪಪುಣ್ಯಗಳ ಭೇದವಿಲ್ಲ. ಧರ್ಮ ಅಧರ್ಮಗಳ ಸಂಬಂಧವೂ ಇಲ್ಲ. ಆದರಲ್ಲಿಯೂ ವಿಶೇಷವಾಗಿ ನೀವಿಬ್ಬರೂ ಮಹಾಮಹಿಮಾ ಶಾಲಿಗಳಾಗಿದ್ದೀರಿ. ಹೀಗಿದ್ದರೂ ನೀವಿಬ್ಬರೂ ನನ್ನಮಾತನ್ನು ಮೀರಿದಿರಿ. ಆ ಕಾರಣದಿಂದ ನೀವಿಬ್ಬರೂ ಭೂಲೋಕದಲ್ಲಿ ಒಂದೇ ಶರೀರದಿಂದ ಮಾನವರಾಗಿ ಜನ್ಮ ತಾಳಿರಿ. ಅಗ್ನಿಯೇ, ಆ ಮಾನವ ಶರೀರದಲ್ಲಿ ವಾಯುವಿನ ಜೊತೆಗೆ ನೀನು ಜನಿಸಿದಾಗ 'ಎಂದು ನೀನು ಸಮುದ್ರವನ್ನು ಬಾಯಿ ಮುಕ್ಕಳಿಸಿ ಒಣಗಿಸುವಿಯೋ' ಆಗ ಪುನಃ ದೇವತ್ವವನ್ನು ಪಡೆಯುವಿ. ಅಲ್ಲಿಯವರೆಗೆ ಮುನಿಯರೂಪದಿಂದ ಏಕ ದೇಹದಿಂದ ಮರ್ತ್ಯಲೋಕದಲ್ಲಿ ನೀವಿಬ್ಬರೂ ಜನಿಸಿರಿ. ಧರ್ಮವಂತರ ಕುಲದಲ್ಲಿ ನೀವು ಹುಟ್ಟಿರಿ.

**ಪುಲಸ್ತ್ಯ :-** ದೇವೇಂದ್ರನು ಆ ಶಾಪದಿಂದ ಆ ವಾಯುವಹ್ನಿ ಇಬ್ಬರೂ ಆಕ್ಷಣದಲ್ಲಿಯೇ ನೆಲಕ್ಕೆ ಉರುಳಿದರು. ಮಹಾ ತೇಜಸ್ವಿಗಳಾದ ಅವರಿಬ್ಬರೂ ಕೊಡದಿಂದ ಜನಿಸಿದರು. ದೇಹವನ್ನು ಪಡೆದು ನಿಂತರು. ಮಿತ್ರಾವರುಣರ ವೀರ್ಯದಿಂದ ವಸಿಷ್ಠ ಮತ್ತು ಅಗಸ್ತ್ಯ ಎಂಬ ಮುನಿಶ್ರೇಷ್ಠರಾಗಿ, ಆ ಇಬ್ಬರೂ ಜೀವೋತ್ತಮರು ಧರಣೀ ಮಂಡಲವನ್ನು ಅಲಂಕರಿಸಿದರು. ಅವರಿಬ್ಬರೂ ತನ್ನ ಯೋಗ್ಯತೆಯಿಂದ ಮುನಿ ಮಂಡಲದಲ್ಲಿ ಸರ್ವಶ್ರೇಷ್ಠರೆಂದು ಖ್ಯಾತಿಯನ್ನು, ಗೌರವವನ್ನು ಪಡೆದರು.

**ಭೀಷ್ಮ :-** ವಶಿಷ್ಠ ಅಗಸ್ತ್ಯರಾಗಿ ಜನಿಸಿದ ಈ ವಹ್ನಿ,ವಾಯುಗಳಿಗೆ ಮಿತ್ರಾವರುಣರು ಹೇಗೆ ತಂದೆಯಾದಾರು? ಅಗಸ್ತ್ಯರ ಈ ಜನನವು ಕುಂಭ ಅರ್ಥಾತ್ ಗಡಿಗೆಯಿಂದ ಹೇಗೆ ಆಯಿತು? ಅದನ್ನು ಈಗ ನನಗೆ ನಿರೂಪಿಸಿರಿ.

**ಪುಲಸ್ತ್ಯ :-** ಭಗವಾನ್ ಶ್ರೀಹರಿಗೆ ಪುರಾಣಪುರುಷ ಎಂದು ಹೆಸರು ಉಂಟಷ್ಟೇ! ಸರ್ವಶಾಸ್ತ್ರ ಪುರಾಣ ಪ್ರತಿಪಾದ್ಯನಾದ ಆ ವಿಷ್ಣುವು ಧರ್ಮನ ಮಗನಾಗಿ ಗಂಧಮಾದನ ಗುಡ್ಡದಲ್ಲಿ ವಿಪುಲವಾದ ತಪಸ್ಸನ್ನು ಆಚರಿಸಿದನು. ಭಗವಂತನ ಈ ಉಗ್ರತಪಸ್ಸನ್ನು ಕಂಡು ಇಂದ್ರ ಹೆದರಿದ. ಅದಕ್ಕೆ ವಿಘ್ನ ಮಾಡಬೇಕೆಂದು ಬಯಸಿದ. ಅದಕ್ಕಾಗಿ ವಸಂತ ಹಾಗೂ ಕಾಮರನ್ನು ಭಗವಂತನ ಬಳಿಗೆ ಕಳಿಸಿದ. ಕಾಮನ ಜೊತೆಗೆ ಕಾಮಿನಿಯರ ಬಳಗ, ಅಪ್ಸರೆಯರ ದಂಡು,ಗಂಧಮಾದನಗಿರಿಯ ಬಂದಿಳಿಯಿತು. ಅವರೆಲ್ಲರೂ ಕೇಶವನ ಮನಸ್ಸನ್ನು ಮರುಳುಮಾಡಬೇಕೆಂದು ಮಧುರಕಂಠದಿಂದ ಹಾಡಿದರು. ವಿವಿಧ ಭಂಗಿಗಳಲ್ಲಿ ಕುಣಿದರು. ರಾಗ ತಾಳ ತಾನ ಲಯಗಳಿಗೆ ಅನುಗುಣವಾಗಿ ಕುಣಿಕುಣಿದು, ಮಣಿಮಣಿದು ದಣಿದರು. ಹಾವಭಾವಗಳಿಂದ ಧರ್ಮಪುತ್ರನಾದ ವಿಷ್ಣುವಿನ ಮನಸ್ಸನ್ನು ಗೆಲ್ಲಲು ಕಾಮ ವಸಂತರ ಪ್ರೇರಣೆಯಿಂದ ಶತಪ್ರಯತ್ನ ಮಾಡಿದರು. ಆ ಸುರಲೋಕದ ಸುಂದರಿಯರು. ಆದರೆ ಸ್ವಯಂ ವಿಷ್ಣುವಿನ ಅವತಾರವಾದ ಆ ಧರ್ಮಪುತ್ರನು ಈ ಸ್ವರ್ಗದ ಚಿಟ್ಟೆಗಳ ಹಾವಭಾವಗಳಿಗೆ ಬಗ್ಗಲಿಲ್ಲ. ಹಾಡುಪಾಡುಗಳಿಂದ ಮರುಳಾಗಲಿಲ್ಲ. ಇವರು ಎಷ್ಟೇ ವಿಲಾಸ ವೈಯ್ಯಾರಗಳಿಂದ ಹಾಡಿ ಮಣಿದು, ಕುಣಿದು ಕುಪ್ಪಳಿಸಿದರೂ, ಮಂದಹಾಸ ಬೀರಿದರೂ, ಆ ಧರ್ಮಕುಮಾರನು ಮೋಹವಶನಾಗದೆ ನಿರ್ವಿಕಾರನಾಗಿಯೇ ನಗುತ್ತ ನಿಂತಿದ್ದನು. ಅದರಿಂದ ಕಾಮ ಕರೆತಂದ ಕಾಮಿನಿಯರು, ವಸಂತನಿಂದ ಪ್ರೇರಿತರಾದ ವಿಲಾಸಿನಿಯರು ಬಹಳ ವಿಷಾದಹೊಂದಿದರು. ಆ ಅಪ್ಸರಾಂಗನೆಯರ ಸೌಂದರ್ಯದ ಮದವನ್ನು ಕಳೆಯಲು ಧರ್ಮಪುತ್ರನಾದ

ನಾರಾಯಣನು ತನ್ನ ತೊಡೆಯಿಂದಲೇ ಓರ್ವ ನಾರೀಮಣಿಯನ್ನು ನಿರ್ಮಿಸಿದನು. ಅವಳನ್ನು ನೋಡಿದರೆ ಸಾಕು, ಮೂರು ಲೋಕಗಳಲ್ಲಿರುವ ಜನರೆಲ್ಲರೂ ಮರುಳಾಗುತ್ತಿದ್ದರು. ಮೊಟ್ಟಮೊದಲು ಅಲ್ಲಿಯೇ ಇದ್ದ, ಕಾಮ ವಸಂತರು ಕೂಡ. ನಾರಾಯಣನ ಅಂಗಸಂಭೂತಳಾದ ಆ ಅಂಗನಾಮಣಿಯನ್ನು ಕಂಡು ಮಾರುಹೋದರು. ಆಗ ನಾರಾಯಣನು ದೇವತೆಗಳನ್ನು ಕರೆದು ''ಇವಳನ್ನು ಅಪ್ಸರೆಯೆಂದು ಗೌರವಿಸಿರಿ, ಊರ್ವಶಿ ಎಂಬ ಹೆಸರಿನಿಂದ ಇವಳು ಜಗತ್ತಿನಲ್ಲಿ ಪ್ರಸಿದ್ಧಿ ಪಡೆಯುವಳು'' ಎಂದು ಹೇಳಿದನು. ಅಂದಿನಿಂದ ಆ ನಾರಾಯಣ ಕುಮಾರಿ ಊರ್ವಶಿ ಎಂದು ಪ್ರಸಿದ್ಧಳಾದಳು.

ದೇವಲೋಕ ದುರ್ಲಭವಾದ ಊರ್ವಶಿಯ ದಿವ್ಯರೂಪವನ್ನುಕಂಡು ಮಿತ್ರನು ಮುಗ್ಧನಾದನು. ಕಾಮಾರ್ಥನಾಗಿ ಅವನು ಊರ್ವಶಿಯನ್ನು ಕರೆದು ನನ್ನೊಡನೆ ರಮಿಸಿ ನನ್ನನ್ನು ತೃಪ್ತಿಪಡಿಸು ಎಂದು ಹೇಳಿದನು. ಅದಕ್ಕೆ ಸಮ್ಮತಿಸಿ ಊರ್ವಶಿಯು ಮಿತ್ರದೇವನನ್ನು ರಮಿಸಿ ಸಂತೋಷಪಡಿಸಿದಳು. ಮಿತ್ರನಿಂದ ಅವಳು ಗರ್ಭಿಣಿಯಾದಳು. ಇದೇ ವೇಳೆಯಲ್ಲಿ ತಾವರೆಗಣ್ಣನ ಆ ತರುಣಿಯನ್ನು ಕಂಡು ವರುಣನೂ ಮರುಳಾದನು. ಕಾಮಾತುರನಾದ ಅವನು ಊರ್ವಶಿಗೆ ತನ್ನ ಕಾಮನೆ ಪೂರ್ಣಗೊಳಿಸಬೇಕೆಂದು ಕೇಳಿಕೊಂಡನು. ಅದಕ್ಕೆ ಊರ್ವಶಿಯು ಮಂದಹಾಸ ತೋರುತ್ತ ಕುಡಿನೋಟ ಬೀರಿ, ನಾಚುತ್ತ ನುಡಿದಳು.

'ಒಡೆಯ ಮಿತ್ರನು ಅರ್ಥಾತ್ ಸೂರ್ಯನು ನನ್ನನ್ನು ಮೊದಲೇ ಕೈಹಿಡಿದು ರಮಿಸಿದ್ದಾನೆ. ಅವನು ನನಗೆ ಧರ್ಮದೃಷ್ಟಿಯಿಂದ ಪತಿಯಾಗಬೇಕು. ಅಂದ ಬಳಿಕ ನಾನೀಗ ನಿನ್ನ ಬಯಕೆಯನ್ನು ಹೇಗೆ ಪೂರೈಸಲಿ ?'

**ವರುಣ :-** ಹಾಗಿದ್ದರೆ, ನೀನು ಮಿತ್ರನ ಕಡೆಗೆ ಹೋಗು, ಆದರೆ ನಿನ್ನ ಮನಸ್ಸು ಮಾತ್ರನನ್ನಲ್ಲಿ ಇರಲಿ. ವರುಣನು ಹೀಗೆ ನುಡಿದ ಬಳಿಕ ಊರ್ವಶಿಯು ಅವನನ್ನು ಸಂತೋಷಪಡಿಸಿ, ಅವನ ಆಜ್ಞೆಪಡೆದು ಸೂರ್ಯನ ಬಳಿಗೆ ಹೋದಳು. ಆದರಿಂದ ಸೂರ್ಯದೇವನಿಗೆ ಊರ್ವಶಿಯ ಈ ಅವಾಂತರ ತಿಳಿದು ಕೋಪಬಂದಿತು. 'ನೀನು ಈಗಲೇ ಮನುಷ್ಯಲೋಕಕ್ಕೆ ಹೋಗು. ನೀನು ಮಿಥ್ಯಾಧರ್ಮವನ್ನು ಆಚರಿಸಿದೆ. ನನ್ನನ್ನೂ ವಂಚಿಸಿದೆ' ಎಂದು ಶಾಪವಿತ್ತನು. ಅನಂತರ ಊರ್ವಶಿಯು ತನ್ನ ಗರ್ಭದಲ್ಲಿರುವ ಮಿತ್ರ ಹಾಗೂ ವರುಣ ಇಬ್ಬರ ವೀರ್ಯವನ್ನು ಒಂದು ನೀರು ತುಂಬಿದ ಕೊಡದಲ್ಲಿ ಹಾಕಿ ಇಟ್ಟಳು. ಅವುಗಳಿಂದ ಇಬ್ಬರು ತೇಜಸ್ವಿಗಳಾದ ಋಷಿಗಳು ಹುಟ್ಟಿದರು-ಒಬ್ಬ ಅಗಸ್ತ್ಯ, ಇನ್ನೊಬ್ಬ ವಶಿಷ್ಠ. ಹಿಂದೆ ನಿಮಿ ಎಂಬ ಹೆಸರಾದ ಒಬ್ಬ ರಾಜನಿದ್ದನು. ಅವನು ಮಹಾಸ್ತ್ರೈಣ. ಹೆಣ್ಣುಮಕ್ಕಳ ಜೊತೆಗೆ ಜೂಜು ಆಡುತ್ತಿದ್ದನು. ಅವನಿಗೆ ಮಿತ್ರ, ಅಮಿತ್ರ ಎಂಬ ಇಬ್ಬರು ಮಕ್ಕಳಿದ್ದರು. ಇದೇ ಸಮಯದಲ್ಲಿ ಬ್ರಹ್ಮದೇವನ ಮಕ್ಕಳಾದ ವಶಿಷ್ಠ ಮುನಿಗಳು ಅಲ್ಲಿಗೆ ಬಂದರು. ನಿಮಿರಾಜನು ಅವರ ಪೂಜೆ ಮಾಡಲಿಲ್ಲ. ಸ್ವಾಗತ ಸತ್ಕಾರ ನೀಡಲಿಲ್ಲ. ಅದರಿಂದ ವಶಿಷ್ಠರಿಗೆ ಕೋಪಬಂದಿತು. 'ನೀನು ದೇಹವಿಲ್ಲದವನಾಗು' ಎಂದು ಅವನಿಗೆ ಶಾಪ ಕೊಟ್ಟರು. ನಿಮಿಯು ಕೂಡ ವಶಿಷ್ಠರಿಗೆ 'ನೀನೂ ದೇಹರಹಿತನಾಗು' ಎಂದು ಮರಳಿ ಶಾಪವಿತ್ತನು. ಹೀಗೆ ಪರಸ್ಪರ ಶಾಪದಿಂದ ಅವರಿಬ್ಬರ ದೇಹಗಳು ಬಿದ್ದು ಹೋದವು. ಇಬ್ಬರೂ ಅಶರೀರರಾಗಿ, ತೋಜೋಮಯ ರೂಪದಿಂದ ನಿಂತುಕೊಂಡರು. ಅನಂತರ

**ಇಂದ್ರ :-** ದೇವತೆಗಳಿಗೆ ಪಾಪಪುಣ್ಯಗಳ ಭೇದವಿಲ್ಲ. ಧರ್ಮ ಅಧರ್ಮಗಳ ಸಂಬಂಧವೂ ಇಲ್ಲ. ಅದರಲ್ಲಿಯೂ ವಿಶೇಷವಾಗಿ ನೀವಿಬ್ಬರೂ ಮಹಾಮಹಿಮಾ ಶಾಲಿಗಳಾಗಿದ್ದೀರಿ. ಹೀಗಿದ್ದರೂ ನೀವಿಬ್ಬರೂ ನನ್ನ ಮಾತನ್ನು ಮೀರಿದಿರಿ. ಆ ಕಾರಣದಿಂದ ನೀವಿಬ್ಬರೂ ಭೂಲೋಕದಲ್ಲಿ ಒಂದೇ ಶರೀರದಿಂದ ಮಾನವರಾಗಿ ಜನ್ಮ ತಾಳಿರಿ. ಅಗ್ನಿಯೇ, ಆ ಮಾನವ ಶರೀರದಲ್ಲಿ ವಾಯುವಿನ ಜೊತೆಗೆ ನೀನು ಜನಿಸಿದಾಗ 'ಎಂದು ನೀನು ಸಮುದ್ರವನ್ನು ಬಾಯಿ ಮುಕ್ಕಳಿಸಿ ಒಣಗಿಸುವಿಯೋ' ಆಗ ಪುನಃ ದೇವತ್ವವನ್ನು ಪಡೆಯುವಿ. ಅಲ್ಲಿಯವರೆಗೆ ಮುನಿಯರೂಪದಿಂದ ಏಕ ದೇಹದಿಂದ ಮರ್ತ್ಯಲೋಕದಲ್ಲಿ ನೀವಿಬ್ಬರೂ ಜನಿಸಿರಿ. ಧರ್ಮವಂತರ ಕುಲದಲ್ಲಿ ನೀವು ಹುಟ್ಟಿರಿ.

**ಪುಲಸ್ತ್ಯ :-** ದೇವೇಂದ್ರನು ಆ ಶಾಪದಿಂದ ಆ ವಾಯುವಹ್ನಿ ಇಬ್ಬರೂ ಆಕ್ಷಣದಲ್ಲಿಯೇ ನೆಲಕ್ಕೆ ಉರುಳಿದರು. ಮಹಾ ತೇಜಸ್ವಿಗಳಾದ ಅವರಿಬ್ಬರೂ ಕೊಡದಿಂದ ಜನಿಸಿದರು. ದೇಹವನ್ನು ಪಡೆದು ನಿಂತರು. ಮಿತ್ರಾವರುಣರ ವೀರ್ಯದಿಂದ ವಸಿಷ್ಠ ಮತ್ತು ಅಗಸ್ತ್ಯ ಎಂಬ ಮುನಿಶ್ರೇಷ್ಠರಾಗಿ, ಆ ಇಬ್ಬರೂ ಜೀವೋತ್ತಮರು ಧರಣೀ ಮಂಡಲವನ್ನು ಅಲಂಕರಿಸಿದರು. ಅವರಿಬ್ಬರೂ ತನ್ನ ಯೋಗ್ಯತೆಯಿಂದ ಮುನಿ ಮಂಡಲದಲ್ಲಿ ಸರ್ವಶ್ರೇಷ್ಠರೆಂದು ಖ್ಯಾತಿಯನ್ನು, ಗೌರವವನ್ನು ಪಡೆದರು.

**ಭೀಷ್ಮ :-** ವಶಿಷ್ಠ ಅಗಸ್ತ್ಯರಾಗಿ ಜನಿಸಿದ ಈ ವಹ್ನಿ,ವಾಯುಗಳಿಗೆ ಮಿತ್ರಾವರುಣರು ಹೇಗೆ ತಂದೆಯಾದಾರು? ಅಗಸ್ತ್ಯರ ಈ ಜನನವು ಕುಂಭ ಅರ್ಥಾತ್ ಗಡಿಗೆಯಿಂದ ಹೇಗೆ ಆಯಿತು? ಅದನ್ನು ಈಗ ನನಗೆ ನಿರೂಪಿಸಿರಿ.

**ಪುಲಸ್ತ್ಯ :-** ಭಗವಾನ್ ಶ್ರೀಹರಿಗೆ ಪುರಾಣಪುರುಷ ಎಂದು ಹೆಸರು ಉಂಟಷ್ಟೇ! ಸರ್ವಶಾಸ್ತ್ರ ಪುರಾಣ ಪ್ರತಿಪಾದ್ಯನಾದ ಆ ವಿಷ್ಣುವು ಧರ್ಮನ ಮಗನಾಗಿ ಗಂಧಮಾದನ ಗುಡ್ಡದಲ್ಲಿ ವಿಪುಲವಾದ ತಪಸ್ಸನ್ನು ಆಚರಿಸಿದನು. ಭಗವಂತನ ಈ ಉಗ್ರತಪಸ್ಸನ್ನು ಕಂಡು ಇಂದ್ರ ಹೆದರಿದ. ಅದಕ್ಕೆ ವಿಘ್ನ ಮಾಡಬೇಕೆಂದು ಬಯಸಿದ. ಅದಕ್ಕಾಗಿ ವಸಂತ ಹಾಗೂ ಕಾಮರನ್ನು ಭಗವಂತನ ಬಳಿಗೆ ಕಳಿಸಿದ. ಕಾಮನ ಜೊತೆಗೆ ಕಾಮಿನಿಯರ ಬಳಗ, ಅಪ್ಸರೆಯರ ದಂಡು,ಗಂಧಮಾದನಗಿರಿಯಲ್ಲಿ ಬಂದಿಳಿಯಿತು. ಅವರೆಲ್ಲರೂ ಕೇಶವನ ಮನಸ್ಸನ್ನು ಮರುಳುಮಾಡಬೇಕೆಂದು ಮಧುರಕಂಠದಿಂದ ಹಾಡಿದರು. ವಿವಿಧ ಭಂಗಿಗಳಲ್ಲಿ ಕುಣಿದರು. ರಾಗ ತಾಳ ತಾನ ಲಯಗಳಿಗೆ ಅನುಗುಣವಾಗಿ ಕುಣಿಕುಣಿದು, ಮಣಿಮಣಿದು ದಣಿದರು. ಹಾವಭಾವಗಳಿಂದ ಧರ್ಮಪುತ್ರನಾದ ವಿಷ್ಣುವಿನ ಮನಸ್ಸನ್ನು ಗೆಲ್ಲಲು ಕಾಮ ವಸಂತರ ಪ್ರೇರಣೆಯಿಂದ ಶತಪ್ರಯತ್ನ ಮಾಡಿದರು. ಆ ಸುರಲೋಕದ ಸುಂದರಿಯರು. ಆದರೆ ಸ್ವಯಂ ವಿಷ್ಣುವಿನ ಅವತಾರವಾದ ಆ ಧರ್ಮಪುತ್ರನು ಈ ಸ್ವರ್ಗದ ಚಿಟ್ಟೆಗಳ ಹಾವಭಾವಗಳಿಗೆ ಬಗ್ಗಲಿಲ್ಲ. ಹಾಡುಪಾಡುಗಳಿಂದ ಮರುಳಾಗಲಿಲ್ಲ. ಇವರು ಎಷ್ಟೇ ವಿಲಾಸ ವೈಯ್ಯಾರಗಳಿಂದ ಹಾಡಿ ಮಣಿದು, ಕುಣಿದು ಕುಪ್ಪಳಿಸಿದರೂ, ಮಂದಹಾಸ ಬೀರಿದರೂ, ಆ ಧರ್ಮಕುಮಾರನು ಮೋಹವಶನಾಗದೆ ನಿರ್ವಿಕಾರನಾಗಿಯೇ ನಗುತ್ತ ನಿಂತಿದ್ದನು. ಅದರಿಂದ ಕಾಮ ಕರೆತಂದ ಕಾಮಿನಿಯರು, ವಸಂತನಿಂದ ಪ್ರೇರಿತರಾದ ವಿಲಾಸಿನಿಯರು ಬಹಳ ವಿಷಾದಹೊಂದಿದರು. ಆ ಅಪ್ಸರಾಂಗನೆಯರ ಸೌಂದರ್ಯದ ಮದವನ್ನು ಕಳೆಯಲು ಧರ್ಮಪುತ್ರನಾದ

ನಾರಾಯಣನು ತನ್ನ ತೊಡೆಯಿಂದಲೇ ಓರ್ವ ನಾರೀಮಣಿಯನ್ನು ನಿರ್ಮಿಸಿದನು. ಅವಳನ್ನು ನೋಡಿದರೆ ಸಾಕು, ಮೂರು ಲೋಕಗಳಲ್ಲಿರುವ ಜನರೆಲ್ಲರೂ ಮರುಳಾಗುತ್ತಿದ್ದರು. ಮೊಟ್ಟಮೊದಲು ಅಲ್ಲಿಯೇ ಇದ್ದ, ಕಾಮ ವಸಂತರು ಕೂಡ. ನಾರಾಯಣನ ಅಂಗಸಂಭೂತಳಾದ ಆ ಅಂಗನಾಮಣಿಯನ್ನು ಕಂಡು ಮಾರುಹೋದರು. ಆಗ ನಾರಾಯಣನು ದೇವತೆಗಳನ್ನು ಕರೆದು ''ಇವಳನ್ನು ಅಪ್ಸರೆಯೆಂದು ಗೌರವಿಸಿರಿ, ಊರ್ವಶಿ ಎಂಬ ಹೆಸರಿನಿಂದ ಇವಳು ಜಗತ್ತಿನಲ್ಲಿ ಪ್ರಸಿದ್ಧಿ ಪಡೆಯುವಳು'' ಎಂದು ಹೇಳಿದನು. ಅಂದಿನಿಂದ ಆ ನಾರಾಯಣ ಕುಮಾರಿ ಊರ್ವಶಿ ಎಂದು ಪ್ರಸಿದ್ಧಳಾದಳು.

ದೇವಲೋಕ ದುರ್ಲಭವಾದ ಊರ್ವಶಿಯ ದಿವ್ಯರೂಪವನ್ನುಕಂಡು ಮಿತ್ರನು ಮುಗ್ಧನಾದನು. ಕಾಮಾರ್ಥನಾಗಿ ಅವನು ಊರ್ವಶಿಯನ್ನು ಕರೆದು ನನ್ನೊಡನೆ ರಮಿಸಿ ನನ್ನನ್ನು ತೃಪ್ತಿಪಡಿಸು ಎಂದು ಹೇಳಿದನು. ಅದಕ್ಕೆ ಸಮ್ಮತಿಸಿ ಊರ್ವಶಿಯು ಮಿತ್ರದೇವನನ್ನು ರಮಿಸಿ ಸಂತೋಷಪಡಿಸಿದಳು. ಮಿತ್ರನಿಂದ ಅವಳು ಗರ್ಭಿಣಿಯಾದಳು. ಇದೇ ವೇಳೆಯಲ್ಲಿ ತಾವರೆಗಣ್ಣಿನ ಆ ತರುಣಿಯನ್ನು ಕಂಡು ವರುಣನೂ ಮರುಳಾದನು. ಕಾಮಾತುರನಾದ ಅವನು ಊರ್ವಶಿಗೆ ತನ್ನ ಕಾಮನೆ ಪೂರ್ಣಗೊಳಿಸಬೇಕೆಂದು ಕೇಳಿಕೊಂಡನು. ಅದಕ್ಕೆ ಊರ್ವಶಿಯು ಮಂದಹಾಸ ತೋರುತ್ತ ಕುಡಿನೋಟ ಬೀರಿ, ನಾಚುತ್ತ ನುಡಿದಳು.

'ಒಡೆಯ ಮಿತ್ರನು ಅರ್ಥಾತ್ ಸೂರ್ಯನು ನನ್ನನ್ನು ಮೊದಲೇ ಕೈಹಿಡಿದು ರಮಿಸಿದ್ದಾನೆ. ಅವನು ನನಗೆ ಧರ್ಮದೃಷ್ಟಿಯಿಂದ ಪತಿಯಾಗಬೇಕು. ಅಂದ ಬಳಿಕ ನಾನೀಗ ನಿನ್ನ ಬಯಕೆಯನ್ನು ಹೇಗೆ ಪೂರೈಸಲಿ ?'

**ವರುಣ :-** ಹಾಗಿದ್ದರೆ, ನೀನು ಮಿತ್ರನ ಕಡೆಗೆ ಹೋಗು, ಆದರೆ ನಿನ್ನ ಮನಸ್ಸು ಮಾತ್ರನನ್ನಲ್ಲಿ ಇರಲಿ. ವರುಣನು ಹೀಗೆ ನುಡಿದ ಬಳಿಕ ಊರ್ವಶಿಯು ಅವನನ್ನು ಸಂತೋಷಪಡಿಸಿ, ಅವನ ಆಜ್ಞೆಪಡೆದು ಸೂರ್ಯನ ಬಳಿಗೆ ಹೋದಳು. ಆದರಿಂದ ಸೂರ್ಯದೇವನಿಗೆ ಊರ್ವಶಿಯ ಈ ಅವಾಂತರ ತಿಳಿದು ಕೋಪಬಂದಿತು. 'ನೀನು ಈಗಲೇ ಮನುಷ್ಯಲೋಕಕ್ಕೆ ಹೋಗು. ನೀನು ಮಿಥ್ಯಾಧರ್ಮವನ್ನು ಆಚರಿಸಿದೆ. ನನ್ನನ್ನೂ ವಂಚಿಸಿದೆ' ಎಂದು ಶಾಪವಿತ್ತನು. ಅನಂತರ ಊರ್ವಶಿಯು ತನ್ನ ಗರ್ಭದಲ್ಲಿರುವ ಮಿತ್ರ ಹಾಗೂ ವರುಣ ಇಬ್ಬರ ವೀರ್ಯವನ್ನು ಒಂದು ನೀರು ತುಂಬಿದ ಕೊಡದಲ್ಲಿ ಹಾಕಿ ಇಟ್ಟಳು. ಅವುಗಳಿಂದ ಇಬ್ಬರು ತೇಜಸ್ವಿಗಳಾದ ಋಷಿಗಳು ಹುಟ್ಟಿದರು-ಒಬ್ಬ ಅಗಸ್ತ್ಯ, ಇನ್ನೊಬ್ಬ ವಶಿಷ್ಠ. ಹಿಂದೆ ನಿಮಿ ಎಂಬ ಹೆಸರಾದ ಒಬ್ಬ ರಾಜನಿದ್ದನು. ಅವನು ಮಹಾಸ್ತ್ರೈಣ. ಹೆಣ್ಣುಮಕ್ಕಳ ಜೊತೆಗೆ ಜೂಜು ಆಡುತ್ತಿದ್ದನು. ಅವನಿಗೆ ಮಿತ್ರ, ಅಮಿತ್ರ ಎಂಬ ಇಬ್ಬರು ಮಕ್ಕಳಿದ್ದರು. ಇದೇ ಸಮಯದಲ್ಲಿ ಬ್ರಹ್ಮದೇವನ ಮಕ್ಕಳಾದ ವಶಿಷ್ಠ ಮುನಿಗಳು ಅಲ್ಲಿಗೆ ಬಂದರು. ನಿಮಿರಾಜನು ಅವರ ಪೂಜೆ ಮಾಡಲಿಲ್ಲ. ಸ್ವಾಗತ ಸತ್ಕಾರ ನೀಡಲಿಲ್ಲ. ಆದರಿಂದ ವಶಿಷ್ಠರಿಗೆ ಕೋಪಬಂದಿತು. 'ನೀನು ದೇಹವಿಲ್ಲದವನಾಗು' ಎಂದು ಅವನಿಗೆ ಶಾಪ ಕೊಟ್ಟರು. ನಿಮಿಯು ಕೂಡ ವಶಿಷ್ಠರಿಗೆ 'ನೀನೂ ದೇಹರಹಿತನಾಗು' ಎಂದು ಮರಳಿ ಶಾಪವಿತ್ತನು. ಹೀಗೆ ಪರಸ್ಪರ ಶಾಪದಿಂದ ಅವರಿಬ್ಬರ ದೇಹಗಳು ಬಿದ್ದು ಹೋದವು. ಇಬ್ಬರೂ ಅಶರೀರರಾಗಿ, ತೋಜೋಮಯ ರೂಪದಿಂದ ನಿಂತುಕೊಂಡರು. ಅನಂತರ

ತಮ್ಮ ಶಾಪದ ಪರಿಹಾರಕ್ಕಾಗಿ ಬ್ರಹ್ಮದೇವರ ಬಳಿಗೆ ಬಂದರು. ನಿಮಿ-ವಶಿಷ್ಠರು. ಮುಂದೆ ಬ್ರಹ್ಮದೇವರ ಅಪ್ಪಣೆಯಂತೆ ನಿಮಿಯು ಜನರ ಕಣ್ಣಿನ ರೆಪ್ಪೆಗಳಲ್ಲಿ ನೆಲೆಸಿದನು. ನಿಮಿಯ ನಿವಾಸಕ್ಕಾಗಿಯೇ ಬ್ರಹ್ಮನು ಅಂದಿನಿಂದ ಜನರೆಲ್ಲರಿಗೂ ಕಣ್ಣಿನ ಮುಂಭಾಗದಲ್ಲಿ 'ಎಮೆ' ಅಥವಾ ರೆಪ್ಪೆಗಳನ್ನು ನಿರ್ಮಿಸಿದ್ದಾನೆ. ವಶಿಷ್ಠನು ಕೂಡ ಬ್ರಹ್ಮದೇವನ ಅಪ್ಪಣೆಯಂತೆ, ವೀರ್ಯವನ್ನು ಇರಿಸಿದ ಗಡಿಗೆಯಲ್ಲಿಯೇ ಮೊದಲಿನಂತೆ ನಾಲ್ಕುತೋಳು, ಬ್ರಹ್ಮಸೂತ್ರ, ಕಮಂಡಲು ಸಹಿತವಾಗಿ ಹುಟ್ಟಿದನು. ಅನಂತರ ಅಗಸ್ತ್ಯ ಎಂಬ ಶಾಂತಸ್ವಭಾವದ ಮಹರ್ಷಿಯು ಕೂಡ ಅದೇ ನೀರಿನ ಕೊಡದಿಂದ ಜನಿಸಿದನು. ಈ ಅಗಸ್ತ್ಯ ಮುನಿಯು ಲೋಪಾಮುದ್ರಾ ಎಂಬ ಕನ್ನೆಯನ್ನು ಕೈಹಿಡಿದು ವಿವಾಹವಾದನು. ಮುಂದೆ ತನ್ನ ಪ್ರಿಯ ಪತ್ನಿಯೊಂದಿಗೆ ಮಲಯಶೈಲದ ಒಂದು ಭಾಗದಲ್ಲಿ ನಿಂತುಕೊಂಡು, ವೈಖಾನಸ ವಿಧಾನದಿಂದ ಅತಿ ಉಗ್ರ ತಪಸ್ಸನ್ನು ಮಾಡಿದನು.

ಹೀಗೆ ಕೆಲ ಕಾಲವು ಕಳೆಯಿತು. ಬಹುಕಾಲದ ಮೇಲೆ, ತಾರಕ ಮೊದಲಾದ ದಾನವರು ಪ್ರಜೆಗಳಿಗೆಲ್ಲ ಬಹಳ ಉಪದ್ರವ ಕೊಡತೊಡಗಿದರು. ಜಗತ್ತೆಲ್ಲವೂ ಆ ದುಷ್ಟ ದಾನವರ ಕಾಟಕೋಟಲೆಗಳಿಂದ ಪ್ರಕ್ಷುಬ್ಧವಾಯಿತು. ಅದನ್ನು ಕಂಡು ಅಗಸ್ತ್ಯನಿಗೆ ಕಡು ಕೋಪ ಬಂದಿತು. ಭೂಲೋಕದಲ್ಲಿರುವ ಪ್ರಾಣಿಗಳನ್ನೆಲ್ಲ ಹೊಡೆದು ಹಿಂಸಿಸಿ ಆ ದೈತ್ಯರೆಲ್ಲರೂ ಓಡಿಹೋಗಿ, ಸಮುದ್ರದಲ್ಲಿ ಅಡಗುತ್ತಿದ್ದರು. ಆ ದುಷ್ಟದೈತ್ಯರು ತಂಗುವ ತಾಣವಾದ ಆ ತೋಯನಿಧಿಯನ್ನು ತಪೋಧನರಾದ ಅಗಸ್ತ್ಯ ಮುನಿಗಳು ಕೋಪದಿಂದ ಕುಡಿದುಬಿಟ್ಟರು. ಶಂಕರನೇ ಮೊದಲಾದ ದೇವತೆಗಳೆಲ್ಲರೂ ಅಗಸ್ತ್ಯರ ಕಾರ್ಯವನ್ನು ಮೆಚ್ಚಿದರು. ಅವರಿಗೆ ಬಯಸಿದ ವರಗಳನ್ನು ನೀಡಿದರು. ಅದರಂತೆ ದೇವೋತ್ತಮರಾದ ಬ್ರಹ್ಮ, ವಿಷ್ಣು ಇಬ್ಬರೂ ವರ ನೀಡಬೇಕೆಂದು ಅಗಸ್ತ್ಯ ಮುನಿಗಳ ಬಳಿಗೆ ಬಂದರು.

'ಮುನಿಯೇ, ನಿನಗೆ ಕಲ್ಯಾಣವಾಗಲಿ, ವರವನ್ನು ಕೇಳಿಕೋ, ನಿನಗೆ ಏನು ಬೇಕಾಗಿದೆ ಹೇಳು. ಬೇಡಿದ್ದನ್ನು ಕೊಡುವೆವು.'

**ಅಗಸ್ತ್ಯ** :- ಇಪ್ಪತ್ತೈದು ಕೋಟಿ ಸಾವಿರ ಬ್ರಹ್ಮದೇವರುಗಳ ಕಲ್ಪಕಾಲದವರೆಗೂ ದಕ್ಷಿಣಾಪಥದ ಆಕಾಶದಲ್ಲಿ ವಿಮಾನರೂಢನಾಗಿ ಸಂಚರಿಸುವೆನು. ನನ್ನ ವಿಮಾನವನ್ನು ಕಂಡ ಕೂಡಲೇ ನನ್ನನ್ನು ಯಾರು ಪೂಜೆ ಮಾಡುವರೊ ಅವರು ಏಳು ಲೋಕಗಳಿಗೆಲ್ಲ ಕ್ರಮದಿಂದ ಅಧಿಪತಿಯಾಗಲಿ. ಪುಷ್ಕರಕ್ಷೇತ್ರದಲ್ಲಿರುವ ನನ್ನ ಈ ಕ್ಷೇತ್ರವನ್ನು ನನ್ನ ಹೆಸರು ಹೇಳಿ, ಯಾರು ಸಂದರ್ಶಿಸುವರೋ ಅಥವಾ ಯಾರು ಯಾತ್ರೆಯಲ್ಲಿ ಇಲ್ಲಿಗೆ ಬಂದು ಹೋಗುವರೋ ಅವರು ಪುಣ್ಯಭಾಗಿಗಳಾಗಲಿ. ಇಲ್ಲಿ ಬಂದು ಪಿಂಡಪ್ರಧಾನಪೂರ್ವಕವಾಗಿ ಯಥಾಶಕ್ತಿ ಶ್ರಾದ್ಧಮಾಡುವವರ ಪಿತೃಗಳೆಲ್ಲರೂ ನನ್ನೊಡನೆ ಸ್ವರ್ಗಲೋಕಕ್ಕೆ ಬರಲಿ. ಅಲ್ಲಿಯೇ ಸುಖದಿಂದಿರಲಿ, ನಾನು ಹೇಳುವಷ್ಟು ದಿವಸ ಅವರೆಲ್ಲರೂ ಆ ಸುರಲೋಕದಲ್ಲಿಯೇ ನೆಲೆಸಲಿ, ಇದೇ ನಾನು ಕೇಳುವ ವರ. ಅಗಸ್ತ್ಯರ ಈ ವರಯಾಚನೆಗೆ ಬ್ರಹ್ಮ, ವಿಷ್ಣು ಮೊದಲಾದ ದೇವತಾಧೀಶರು ಒಪ್ಪಿ ಸಂತೋಷದಿಂದ ವರಗಳನ್ನು ಕರುಣಿಸಿದರು. ಮತ್ತು ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು. ಆದುದರಿಂದ ವಿವೇಕಿಗಳಾದವರು ಅಗಸ್ತ್ಯ ಋಷಿಯನ್ನು ಕುರಿತು ಅರ್ಘ್ಯವನ್ನು ಕೊಡಬೇಕು.

**ಭೀಷ್ಮ** :-ಮಹಾಮುನಿಗಳಾದ ಆ ಅಗಸ್ತ್ಯರಿಗೆ ಅರ್ಘ್ಯಪೂಜೆ ಹೇಗೆ ಮಾಡಬೇಕು ? ಆ ಅಗಸ್ತ್ಯ ಪೂಜೆಗೆ ವಿಶೇಷ ವಿಧಿವಿಧಾನಗಳೇನಾದರೂ ಉಂಟೆ? ಇದ್ದರೆ ನನಗೆ ಹೇಳಬೇಕು.

**ಪುಲಸ್ತ್ಯ :-** ಪ್ರಾತಃಕಾಲದಲ್ಲಿ ಅಗಸ್ತ್ಯ ನಕ್ಷತ್ರವು ಉದಯವಾದಾಗ ಬಿಳಿ ಎಣ್ಣೆ ಹಚ್ಚಿಕೊಂಡು ಸ್ನಾನಮಾಡಬೇಕು. ಬಿಳಿ ಹೂಗಳನ್ನೇ ಧರಿಸಬೇಕು. ಒಂದು ಕಲಶವನ್ನು ಮಾಲೆ ವಸ್ತುಗಳಿಂದ ಅಲಂಕರಿಸಿ, ಐದು ರತ್ನಗಳನ್ನು ಒಳಗೆ ಹಾಕಿ, ತುಪ್ಪದ ಪಾತ್ರೆಯೊಂದಿಗೆ ಸ್ಥಾಪಿಸಬೇಕು. ಅಂಗುಲದಷ್ಟು ಉದ್ದಳತೆಯ ಅಗಸ್ತ್ಯ ಮುನಿಯ ಚಿನ್ನದ ಒಂದು ನಾಲ್ಕು ತೋಳಿನ ಮೂರ್ತಿಯನ್ನು ಮಾಡಿಸಿ ಆ ಕಲಶದಲ್ಲಿ ಹಾಕಬೇಕು. ನವಧಾನ್ಯವನ್ನು ಅದರೊಳಗೆ ಇರಿಸಿ, ಜೊತೆಗೆ ಸಾಧ್ಯವಿದ್ದ ಎಲ್ಲ ವಿಧ ಬಟ್ಟೆಗಳನ್ನಿಡಬೇಕು. ಕಂಚಿನ ಪಾತ್ರೆಯಲ್ಲಿ ಅಡಕೆ, ಶಿಂಪುಗಳನ್ನಿಟ್ಟು ಮಂತ್ರಹೇಳಿ ವಿಧಿಪೂರ್ವಕವಾಗಿ ದ್ವಿಜಶ್ರೇಷ್ಠರಿಗೆ,ದೊಡ್ಡ ಹೊಟ್ಟೆಯ, ನೀಳದೋಳಿನ ಪ್ರತಿಮೆಯನ್ನು ದಾನಕೊಡಬೇಕು. ಇದರೊಂದಿಗೆ ಗೋದಾನ ನೀಡಬೇಕು. ಆಕಳಿಗೆ ಬೆಳ್ಳಿಯ ಗೊರಸು,ಚಿನ್ನದ ಕೊಂಬು ಹಾಗೂ ಮುಖವಾಡಗಳಿಂದ ಅಲಂಕರಿಸಿ, ವಸ್ತ್ರ ಹಾಗೂ ಪಾತ್ರೆ ಸಹಿತವಾಗಿ, ಗೆಜ್ಜೆ, ಗಂಟೆಗಳನ್ನು ಕಟ್ಟಿದಾನ ಕೊಡಬೇಕು. ಹೀಗೆ ಏಳು ದಿನ ಅಗಸ್ತ್ಯೋದಯ ಕಾಲದಲ್ಲಿ ಅರ್ಘ್ಯವನ್ನು ಮುಂದೆ ಹೇಳಿದ ಮಂತ್ರವನ್ನುಚ್ಚರಿಸಿ ಕೊಡಬೇಕು.

**'ಕಾಶಪುಷ್ಪ ಪ್ರತೀಕಾಶಅಗ್ನಿಮಾರತಸಂಭವ ।**
**ಮಿತ್ರಾವರುಣಯೋಃ ಪುತ್ರ ಕುಂಭಯೋನೇ ನಮೋಸ್ತುತೇ ॥**

ಹೀಗೆ ಹದಿನೇಳು ವರ್ಷ ಅಥವಾ ಆಮೇಲಾದರೂ ಕೂಡ ಅಗಸ್ತ್ಯರನ್ನು ಕುರಿತು ಅರ್ಘ್ಯ ಪ್ರದಾನಮಾಡುತ್ತ ಹೋಗಬೇಕು. ಹೀಗೆ ವಿಧಿಪೂರ್ವಕವಾಗಿ ಅರ್ಘ್ಯದಾನಗೈದವನು ಸೌಂದರ್ಯ, ಆರೋಗ್ಯ ಹೊಂದುವನು. ಅಗಸ್ತ್ಯರನ್ನು ಉದ್ದೇಶಿಸಿ ಮೂರು ಅರ್ಘ್ಯಗಳನ್ನು ಕೊಡಬೇಕು. ಮೊದಲನೆಯ ಅರ್ಘ್ಯದಿಂದ ಭೂಲೋಕದಲ್ಲಿ ಸೌಭಾಗ್ಯ, ಸೌಂದರ್ಯಗಳು. ಎರಡನೆಯದರಿಂದ ಭುವರ್ಲೋಕದಲ್ಲಿಸ್ಥಾನ-ಮಾನಗಳು, ಮೂರನೇಯದರಿಂದ ಸ್ವರ್ಗಲೋಕದಲ್ಲಿ ಶಾಂತಿ, ಸಂತಸಗಳು ಲಭಿಸುವವು.

**ಭೀಷ್ಮ :-** ಮಹಾಮುನಿಗಳೆ, ಭುಕ್ತಿ ಹಾಗೂ ಮುಕ್ತಿ ಎರಡನ್ನೂ ಕೊಡುವ ಯಾವುದಾದರೂ ವ್ರತವು ಇರುವುದೆ ? ಸೌಭಾಗ್ಯ, ಆರೋಗ್ಯಗಳನ್ನು ದಯಪಾಲಿಸುವ, ವೈರಿಗಳನ್ನು ನಾಶ ಮಾಡುವ, ಶ್ರೇಷ್ಠ ವ್ರತದ ವಿಷಯವಾಗಿ ನಿರೂಪಣೆ ಮಾಡಿರಿ?

**ಪುಲಸ್ತ್ಯ :-** ಒಂದು ಸಲ ಪಾರ್ವತೀ ಪರಮೇಶ್ವರರು ಮಾತನಾಡುತ್ತ ಕುಳಿತಿದ್ದರು. ಧರ್ಮ-ಕರ್ಮಗಳ ವಿಷಯದಲ್ಲಿ ವಿಚಾರವು ಪ್ರವೃತ್ತವಾಗಿತ್ತು. ಆ ಸಂದರ್ಭದಲ್ಲಿ ಅಂಧಕ ದೈತ್ಯನನ್ನು ನಾಶಪಡಿಸಿದ ಇಂದುಶೇಖರನು ಉಮಾದೇವಿಗೆ ಒಂದು ವ್ರತವನ್ನು ಹೇಳಿದನು. ಅದು ನೀನು ಕೇಳಿದಂತೆ ಮುಕ್ತಿ-ಭಕ್ತಿಪ್ರದಾಯಕವಾಗಿದೆ.

**ಗೌರಿ :-** ಕೈಲಾಸಪತಿಯೆ, ಹಿಂದೆ ಸಾವಿತ್ರಿಯು ಲಕ್ಷ್ಮೀದೇವಿಗೆ ಶಾಪ ಕೊಟ್ಟಳಷ್ಟೇ! 'ನೀನು ಚಂಚಲಳಾಗು. ಒಂದು ಕಡೆ ನಿಲ್ಲಬೇಡ' ಎಂದು ಆ ಶಾಪದ ಅಭಿಪ್ರಾಯವಿದ್ದಿತು. ನನಗೆ ಈಗ ಸೌಭಾಗ್ಯ ಲಾಭವಾಗಬೇಕಾಗಿದೆ. ಲಕ್ಷ್ಮಿಯೇ ನನಗೆ ಪ್ರಧಾನವಾಗಿರಬೇಕು ಎಂದು ಆಸೆಯಿದೆ. ಅದಕ್ಕೆ ಏನು ಉಪಾಯ ತಿಳಿಸಿರಿ.

## ಅನಂತ ತೃತೀಯಾ

**ಶಂಕರ :-** ಚಿತ್ತವಿಟ್ಟು ಕೇಳು ದೇವಿ,ನಾನು ಸ್ವಂತಮಾಡಿ ಅನುಭವ ತೆಗೆದುಕೊಂಡು

ಈಗ ನಿನಗೆ ಹೇಳುತ್ತಲಿದ್ದೇನೆ. ನರನಾಗಲೀ, ನಾರಿಯಾಗಲಿ ಮಾಡಬೇಕಾದ ಪೂಜೆಯನ್ನು ಹೇಳುತ್ತೇನೆ; ಕೇಳು. ಭಾದ್ರಪದ, ವೈಶಾಖ, ಮಾರ್ಗಶೀರ್ಷ ಮಾಸಗಳ ಶುಕ್ಲಪಕ್ಷ ತೃತೀಯದಿನ ಬಿಳಿ ಸಾಸಿವೆ ಎಣ್ಣೆಯಿಂದ ಸ್ನಾನಮಾಡಬೇಕು. ಗೋರೋಚನ, ಗೋಮೂತ್ರ, ಗೋಮಯ, ದರ್ಭೆ, ಮೊಸರು, ಚಂದನ ಎಲ್ಲವನ್ನು ಮಿಶ್ರಮಾಡಿ, ಹಣೆಯಲ್ಲಿ ತಿಲಕ ಧರಿಸಬೇಕು. ಶುಕ್ಲ ಅಥವಾ ಕೃಷ್ಣಪಕ್ಷದ ತದಿಗೆ ತಿಥಿಯು ಲಲಿತಾ ದೇವಿಗೆ ಪ್ರಿಯವಾದುದು. ಸೌಭಾಗ್ಯ, ಆರೋಗ್ಯಗಳನ್ನು ನೀಡುವಂತಹದು. ಪುರುಷನಾಗಲೀ, ಪ್ರಮದೆಯಾಗಲಿ ತೃತೀಯಾದಿನದಂದು ಸ್ನಾನಮಾಡಿ ಕೆಂಪುಬಟ್ಟೆಗಳನ್ನು, ಬಿಳಿ ಹೂಗಳನ್ನು ಧರಿಸಬೇಕು. ವಿಧವಾ ಸ್ತ್ರೀಯರು ಮಾತ್ರ ಬಿಳಿ ಬಟ್ಟೆ ಅದೂ ಕೂಡ ಒಂದನ್ನು ಮಾತ್ರ ಧರಿಸಬೇಕು. ಕನ್ಯೆಯಾಗಿದ್ದರೆ ತೆಳ್ಳಗಿನ ಬಟ್ಟೆ ಉಟ್ಟು, ಅಂತಹದೇ ಮತ್ತೊಂದು ಶ್ವೇತವಸ್ತ್ರವನ್ನು ಹೊದೆಯಬೇಕು. ದೇವಿಗೆ ಮೊದಲು ಪಂಚಗವ್ಯ ಸ್ನಾನಮಾಡಿಸಿ, ನಂತರ ಬರಿಹಾಲು, ಬರಿಜೇನುತುಪ್ಪ, ಕೊನೆಗೆ ಹೂ, ಗಂಧ ಹಾಕಿದ ನೀರಿನಿಂದ ಸ್ನಾನಮಾಡಿಸಬೇಕು. ಅನಂತರ ಶುಭ್ರವಾದ ಕುಸುಮಗಳಿಂದ ಪೂಜೆ ಮಾಡಬೇಕು. ಬಗೆ ಬಗೆಯ ಹಣ್ಣು, ಧಾನ್ಯಗಳನ್ನು, ಅರಳು, ಭತ್ತದ ಅರಳು, ಉಪ್ಪು, ಬೆಲ್ಲ, ಹಾಲು, ತುಪ್ಪಗಳನ್ನು ದೇವಿಗೆ ನೈವೇದ್ಯ ತೋರಿಸಬೇಕು. ಎರಡೂ ಪಕ್ಷಗಳಲ್ಲಿಯೂ ಮಂತ್ರಾಕ್ಷತೆಗಳಿಂದ ದೇವಿಯಮೂರ್ತಿಯನ್ನು ಅಡಿಯಿಂದ ಮುಡಿಯವರೆಗೆ ಆಹ್ವಾನಿಸಿ, ಅರ್ಚನೆ ಮಾಡಬೇಕು. ದೇವಿಯ ನಖಶಿಖಾಂತ ಪೂಜೆಯ ಮಂತ್ರಗಳು ಇರುತ್ತವೆ.

''ವರದಾಯೈ ನಮಃ-ಪಾದೌ ಪೂಜಯಾಮಿ'' (ಎಂದು ಉಚ್ಚರಿಸಿ ದೇವಿಯ ಪಾದಗಳಿಗೆ ಮಂತ್ರಾಕ್ಷತೆ, ಹೂ, ಎಳ್ಳುಗಳನ್ನು ಏರಿಸಬೇಕು).

''ಶ್ರೀಯೈ ನಮಃ ಗುಲ್ಫೌ ಪೂಜಯಾಮಿ'' (ಎಂದು ದೇವಿಯ ಚರಣದ ಮೇಲ್ಭಾಗ ಪೂಜಿಸಬೇಕು).

| | |
|---|---|
| 'ಅಶೋಕಾಯೈ ನಮಃ' | (ಎಂದು ಕಾಲಿನ ಗಣಿಕೆ ಪೂಜಿಸಬೇಕು). |
| 'ಪಾರ್ವತ್ಯೈ ನಮಃ' | (ಮೊಣಕಾಲು...) |
| 'ಮಾಂಗಲ್ಯಕಾರಿಣ್ಯೈ ನಮ' | (ತೊಡೆಯನ್ನು...) |
| 'ವಾಮದೇವ್ಯೈ ನಮಃ' | (ಸೊಂಟವನ್ನು) |
| 'ಪದ್ಮೋದರಾಯೈ ನಮ' | (ಹೊಟ್ಟೆಯನ್ನು) |
| 'ಶ್ರೀಯೋದಾತ್ಯೈ ನಮಃ' | (ಎದೆಯನ್ನು) |
| 'ಸೌಭಾಗ್ಯದಾಯಿನ್ಯೈ ನಮಃ' | (ಕೈಗಳನ್ನು...) |
| 'ಸುಮುಖಿ ಶ್ರೀಯೈ ನಮಃ' | (ತೋಳುಗಳನ್ನು...) |
| 'ದರ್ಪವಿನಾಶಿನ್ಯೈ ನಮಃ' | (ಮುಖವನ್ನು...) |
| 'ಸ್ಮರದಾಯೈ ನಮಃ' | (ನಗೆಯನ್ನು...) |
| 'ಗೌರ್ಯೈ ನಮಃ' | (ಮೂಗನ್ನು...) |
| 'ಉತ್ಪಲಾಯೈ ನಮಃ' | (ಕಣ್ಣುಗಳನ್ನು...) |

'ತುಷ್ಟ್ಯೈ ನಮಃ' (ಹಣೆಯನ್ನು...)

'ಕಾತ್ಯಾಯಿನ್ಯೈ ನಮಃ' (ಕುರುಳನ್ನು...)

'ಪುಷ್ಟ್ಯೈ ನಮಃ' ಎಂದು ಹೇಳಿ ತಲೆಯನ್ನು ಪೂಜಿಸಬೇಕು. ಕೊನೆಗೆ

**'ನಮೋ ಗೌರ್ಯೈ ನಮಃ ಪುಷ್ಟ್ಯೈ ನಮಃ ಕಾಂತ್ಯೈ ನಮಃ ಶ್ರೀಯೈಃ ರಂಭಾಯೈಲಲಿತಾಯೈ ಚ ವಾಸುದೇವ್ಯೈ ನಮೋ ನಮಃ'**

ಎಂದು ಭಕ್ತಿಯಿಂದ ಪ್ರಾರ್ಥನೆಯನ್ನು ಸಲ್ಲಿಸಬೇಕು. ಹೀಗೆ ಅಡಿಯಿಂದ ಮುಡಿಯವರೆಗೆ ದೇವಿಯನ್ನು ಪೂಜೆಗೈದು ದೇವಿಯ ಎದುರು ಹನ್ನೆರಡು ಎಲೆಗಳಿಂದ ಒಂದು ಪದ್ಮವನ್ನು ಬರೆಯಬೇಕು. ಅದಕ್ಕೆ ಕುಂಕುಮ ಧರಿಸಿ ಅದರ ಒಂದೊಂದು ದಳದಲ್ಲಿ ದೇವಿಯ ಒಂದೊಂದು ರೂಪಗಳನ್ನು ಪ್ರತಿಷ್ಠಾಪಿಸ ಬೇಕು.

| | | | | |
|---|---|---|---|---|
| ಪೂರ್ವದ ಎಲೆಯಲ್ಲಿ | ಗೌರಿಯನ್ನು | ಪಶ್ಚಿಮದ | ಎಲೆಯಲ್ಲಿ | ಸೌಮ್ಯಾ |
| ಆಗ್ನೇಯದ '' | ಅರ್ಪಣೆಯನ್ನೂ | ವಾಯವ್ಯದ | ,, | ಪಾಟಲೆ |
| ದಕ್ಷಿಣದ ,, | ಭವಾನಿಯನ್ನು | ಉತ್ತರದ | ,, | ಉಗ್ರಾಗಳನ್ನು |
| ನೈಋತ್ಯದ ,, | ರುದ್ರಾಣಿಯನ್ನು | ಈಶಾನ್ಯದ | ,, | ಉಮಾದೇವಿಯನ್ನು |

ಆಹ್ವಾನಿಸಬೇಕು.

ಮಧ್ಯಭಾಗದಲ್ಲಿ ಸಾಧ್ಯಾ, ಪಥ್ಯಾ, ಶುಭಾ, ಸೌಮ್ಯಾ, ಮಂಗಲಾ, ಕುಮುದಾ, ಸತಿ, ಭದ್ರಾ ಇಷ್ಟು ದೇವಿಯ ರೂಪಗಳನ್ನು ಸ್ಥಾಪಿಸಿ, ಕರ್ಣಿಕೆಯ ಮಧ್ಯದಲ್ಲಿ ಲಲಿತಾದೇವಿಯನ್ನು ಇರಿಸಬೇಕು. ಕೈಯಲ್ಲಿ ಹೂವು, ಅಕ್ಷತೆಗಳನ್ನು ತೆಗೆದುಕೊಂಡು ನಮಸ್ಕಾರಮಾಡಿ, ಪೂಜೆಯನ್ನು ನೆರವೇರಿಸಬೇಕೆಂದು ದೇವಿಯ ಮಹಿಮೆಯನ್ನು ಗಾನಮಾಡಬೇಕು. ಪೂಜೆಯಕಾಲದಲ್ಲಿ ಮಂಗಳವಾದ್ಯಗಳನ್ನು ಮೊಳಗಿಸಬೇಕು. ಸುವಾಸಿನಿಯರನ್ನು ಕೆಂಪು ಗಂಧ, ಕೆಂಪು ಹೂ ಕೊಟ್ಟು ಪೂಜಿಸಬೇಕು. ಆವಾಹನೆ ಮಾಡಿದ ದೇವತೆಗಳಿಗೆ ಕುಂಕುಮ ಸ್ನಾನ ಮಾಡಿಸಬೇಕು. ಲಲಿತಾದೇವಿಗೆ ಕುಂಕುಮವು ಅತ್ಯಂತಪ್ರಿಯವಾದುದು.

**ತಥೋಪದೇಷ್ಟಾರಮಪಿ ಪೂಜಯೇದ್ಯತ್ನೋ ಗುರುಂ ।**
**ನಪೂಜ್ಯತೇ ಗುರುರ್ಯತ್ರ ಸರ್ವಾಸ್ತತ್ರಾ ಫಲಾಃ ಕ್ರಿಯಾಃ ॥**

ಉಪದೇಶ ಮಾಡಿದ ಗುರುವನ್ನು ಪ್ರಯತ್ನದಿಂದ ಕರೆತಂದು, ಆದರದಿಂದ ಮೊದಲು ಪೂಜಿಸಬೇಕು. ಗುರುಪೂಜೆ ಮಾಡದೆ ಮಾಡಿದ ಎಲ್ಲ ಪುಣ್ಯ ಕಾರ್ಯಗಳು ವ್ಯರ್ಥ. ಗೌರಿಯನ್ನು ಕನ್ಯೆದಿಲೆಗಳಿಂದಲೂ ದಾಸವಾಳ ಹೂವಿನಿಂದಲೂ ಕಾರ್ತೀಕ ಮಾಸದಲ್ಲಿ ಪೂಜೆಮಾಡಬೇಕು. ಮಾರ್ಗಶೀರ್ಷದಲ್ಲಿ ಜಾಜಿ ಮಲ್ಲಿಗೆಯಿಂದ, ಪುಷ್ಯದಲ್ಲಿ ಅರಿಷಿನ ಬಣ್ಣದ ಗೋರಂಟಿ ಹೂ, ಮಾಘದಲ್ಲಿ ಮಲ್ಲಿಗೆ ಹೂಗಳಿಂದ, ಫಾಲ್ಗುಣದಲ್ಲಿ ಜಾಜಿ, ಚೈತ್ರದಲ್ಲಿ ಮಲ್ಲಿಗೆ ಅಶೋಕ ಹೂಗಳಿಂದ, ವೈಶಾಖದಲ್ಲಿ ಗಂಧ, ಪಾದರಿಗಳಿಂದ, ಜ್ಯೇಷ್ಠದಲ್ಲಿ ಕಮಲ ಕಂಚವಾಳಗಳಿಂದ,ಆಷಾಢದಲ್ಲಿ ಕೊಳದ ಕಮಲಗಳಿಂದ ಶ್ರಾವಣದಲ್ಲಿ ಕದಂಬ ಜಾಜಗಳಿಂದ ಗೌರಿಯನ್ನು ಪೂಜಿಸಬೇಕು. ಭಾದ್ರಪದದಲ್ಲಿ ಗೋಮೂತ್ರವನ್ನು ಉಪಯೋಗಿಸಬೇಕು. ಅಶ್ವೀಜದಲ್ಲಿ ಗೋಮಯವನ್ನು ಕಾರ್ತಿಕದಲ್ಲಿ

ಗೋಕ್ಷೀರ, ಮಾರ್ಗಶಿರದಲ್ಲಿ ಹಸುವಿನ ಮೊಸರು, ಪುಷ್ಯದಲ್ಲಿ ಹಸುವಿನ ತುಪ್ಪ, ಮಾಘದಲ್ಲಿ ಕುಶೋದಕ, ಫಾಲ್ಗುಣದಲ್ಲಿ ಬಿಲ್ವಪತ್ರ ಹೂ, ಚೈತ್ರದಲ್ಲಿ ಎಕ್ಕದ ಹೂವನ್ನು ಭಕ್ಷಿಸಿ, ದೇವೀಪೂಜೆ ಮಾಡಬೇಕು. ನೀರು ಕುಡಿಯುವುದಾದರೆ, ಗೋಶೃಂಗ ತೇದು ಕೂಡಿಸಿದ ನೀರನ್ನುಕುಡಿಯಬೇಕು. ತಿಂಗಳಿನ ಎರಡೂ ತದಿಗೆಯ ದಿನ ದಂಪತಿ ಭೋಜನ ಮಾಡಿಸಿ, ಗಂಡನಿಗೆ ಪಟ್ಟೆ ಮಡಿ, ಮುತ್ತೈದೆಗೆ ರೇಶಿಮೆ ಸೀರೆಕೊಡಬೇಕು. ಅವರಿಗೆ ಜೀರಿಗೆ, ಉಪ್ಪು, ಕಬ್ಬು, ಬೆಲ್ಲಗಳಿಂದ ಕೂಡಿದ ವಿವಿಧ ಭಕ್ಷ್ಯಗಳನ್ನು ಮಾಡಿಸಿ ಹಾಕಬೇಕು. ಹೆಣ್ಣು ಮಕ್ಕಳಿಗೆ ಬಗೆ ಬಗೆಯ ಹಣ್ಣುಗಳನ್ನೂ ಗಂಡಸರಿಗೆ ಬಂಗಾರದ ನಾಣ್ಯಗಳನ್ನೂ ದಾನ ಕೊಡಬೇಕು.

**ಯಥಾ ನ ದೇವಿ ದೇವಸ್ತ್ವಾಂ ಸಂಪರಿತ್ಯಜ್ಯ ಗಚ್ಛತಿ ।**
**ತಥಾ ಮಾಮುದ್ಧರಾಶೇಷ ದುಃಖ ಸಂಸಾರ ಸಾಗರಾತ್ ॥**

ದೇವಿಯೇ, ನಿನ್ನ ಸ್ವಾಮಿಯು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ. ಈ ಮಾತು ನಿಜವಾದರೆ ನನ್ನನ್ನು ದುಃಖಸಾಗರದಿಂದ ಉದ್ಧರಿಸು. ಹೀಗೆ ಈ ವ್ರತವನ್ನು ಮಾಡಿ, ಭಾದ್ರಪದಾದಿ ಮಾಸಗಳಲ್ಲಿ ಕ್ರಮವಾಗಿ ದೇವಿಯ ಒಂದೊಂದು ರೂಪಗಳು ಪ್ರೀತವಾಗಲಿ ಎಂದು ಹೇಳಬೇಕು. ಭಾದ್ರಪದದಲ್ಲಿ 'ಕುಮುದಾ ಪ್ರೀಯತಾಂ' ಹೇಳಿ ಮುಂದಿನ ತಿಂಗಳಲ್ಲಿ ಕ್ರಮವಾಗಿ ವಿಮಲಾ, ನಂದಾ, ಭವಾನಿ, ವಸುದಾ, ಶಿವಾ, ಲಲಿತಾ, ಕಮಲಾ, ಗೌರೀ, ಸತೀ, ರಂಭಾ ಮತ್ತು ಪಾರ್ವತಿ, ಪ್ರೀಯತಾಂ' ಎಂದು ಹೇಳಬೇಕು. ವ್ರತದ ಕೊನೆಯಲ್ಲಿ ಬಂಗಾರದ ಪದ್ಮವನ್ನು ಹಾಸಿಗೆಯನ್ನೂ ದಾನಕೊಡಬೇಕು. ಇಪ್ಪತ್ತುನಾಲ್ಕು ಅಥವಾ ಹನ್ನೆರಡು ದಂಪತಿಗಳನ್ನು ಪೂಜಿಸಬೇಕು. ಆಷಾಢ, ಶ್ರಾವಣ, ಭಾದ್ರಪದ, ಆಶ್ವೀಜ ತಿಂಗಳುಗಳಲ್ಲಿ ಎಂಟೆಂಟು ದಂಪತಿಗಳನ್ನು ಪೂಜೆ ಮಾಡಬೇಕು. ಮೊದಲು ಗುರುಗಳಿಗೆ ದಾನಕೊಟ್ಟು ಅನಂತರ ಉಳಿದವರನ್ನು ಪೂಜಿಸಿ, ದಾನ ಕೊಡಬೇಕು. ಪಾಪಗಳನ್ನೆಲ್ಲ ಪರಿಹರಿಸಿ, ಸೌಭಾಗ್ಯ ಆರೋಗ್ಯಗಳನ್ನು ದಯಪಾಲಿಸಿ, ಅನಂತ ಫಲವನ್ನು ಕೊಡುವ ಈ ವ್ರತಕ್ಕೆ **ಅನಂತತೃತೀಯಾವ್ರತ** ಎಂದು ಕರೆಯುವರು. ಇದನ್ನು ಗಂಡು, ಹೆಣ್ಣು, ಬಂಜೆ,ಪುತ್ರವತಿ, ಗರ್ಭಿಣಿ, ಕನ್ನೆ, ಬಹಿಷ್ಠೆ ಯಾರೇ ಆಗಲಿ ಮಾಡಬಹುದು. ಅಶುದ್ಧವಾಗಿರುವಾಗ ಮತ್ತೊಬ್ಬರ ಕೈಯಿಂದ ಮಾಡಿಸಬೇಕು. ಈ ತದಿಗೆ ವ್ರತಮಾಡುವವರು ಕೋಟಿ ಕಲ್ಪ ಶಿವಲೋಕದಲ್ಲಿ ಸುಖಪಡುತ್ತಾರೆ. ಹಣವಿಲ್ಲದ ದರಿದ್ರನು ಬರಿ ಉಪವಾಸಮಾಡಿ ಮಂತ್ರ ವಿಧಿಯಿಂದ ಒಂದು ವರ್ಷ ಮಾಡಿದರೆ ಆಫಲವನ್ನು ಹೊಂದುತ್ತಾನೆ. ಕನ್ನೆಯಾಗಲೀ, ಮುತ್ತೈದೆಯಾಗಲಿ ಈ ವ್ರತವನ್ನು ಮಾಡಿದರೆ ಜನ್ಮಾಂತರದಲ್ಲಿ ಗೌರಿಯ ಅನುಗ್ರಹದಿಂದ ಗಂಡಸರಾಗಿ ಹುಟ್ಟುವರು.

**ರಸ ಕಲ್ಯಾಣಿನೀ ತೃತೀಯಾ :-** ಮತ್ತೊಂದು ಪಾಪನಾಶಕವಾದ ತೃತೀಯಾ ವ್ರತವನ್ನು ಹೇಳುತ್ತೇನೆ, ಕೇಳು. ಇದು ರಸ ಕಲ್ಯಾಣಿನೀ ತೃತೀಯಾ ವ್ರತ. ಮಾಘ ಶುಕ್ಲ ತದಿಗೆಯದಿನ ಸುಗಂಧ ನೀರಿನಿಂದ ಎಳ್ಳು ಹಚ್ಚಿಕೊಂಡು ಸ್ನಾನ ಮಾಡಬೇಕು. ದೇವಿಗೆ ಜೇನು, ಕಬ್ಬಿನ ರಸ ಮತ್ತು ಗಂಧೋದಕದಿಂದ ಅಭಿಷೇಕಮಾಡಿ, ಕುಂಕುಮ ಪೂಜೆ ಮಾಡಬೇಕು. ಅನಂತರ ದೇವಿಯ ಅವಯವಗಳನ್ನು ಒಂದೊಂದಾಗಿ ಬಲತುದಿಯಿಂದ ಆರಂಭಿಸಿ, ಪೂಜಿಸಿ, ಅನಂತರ ಎಡಬದಿಯಿಂದ ಪೂಜಿಸಬೇಕು.

| | | |
|---|---|---|
| 'ಲಲಿತಾಯ್ಯೆ ನಮಃ' | - | (ಪಾದ) |
| 'ದೇವ್ಯೈ ನಮಃ' | - | (ಗುಲ್ಫ) |
| 'ಶಾಂತ್ಯೈ ನಮಃ' | - | (ಮೊಳಕಾಲು) |
| 'ಶ್ರೀಯೈ ನಮಃ' | - | (ತೊಡೆ) |
| 'ಮದಾಲಸಾಯ್ಯೆ ನಮಃ' | - | (ಸೊಂಟ) |
| 'ಕಮಲಾಯ್ಯೆ ನಮಃ' | - | (ಉದರ) |
| 'ಮದನವಾಸಿನ್ಯೈ ನಮಃ' | - | (ಮೊಲೆ) |
| 'ಕುಮುದಾಯ್ಯೆ ನಮಃ' | - | (ಕೊರಳು) |
| 'ಮಾಧವ್ಯೈ ನಮಃ' | - | (ಭ್ರುವ) |
| 'ಕಮಲಾಯ್ಯೆ ನಮಃ' | - | (ನಗೆ) |
| 'ರುದ್ರಾಣ್ಯೈ ನಮಃ' | - | (ಹುಬ್ಬು, ಹಣೆ) |
| 'ಶಂಕರ್ಯೈ ನಮಃ' | - | (ಕರುಳು) |
| 'ಮದನಾಯ್ಯೆ ನಮಃ' | - | (ಲಲಾಟ) |
| 'ಚಂದ್ರಾರ್ಧ ಧಾರಿಣ್ಯೈ ನಮಃ' | - | (ಕಣ್ಣು) |
| 'ತುಷ್ಟ್ಯೈ ನಮಃ' | - | (ಮುಖ) |
| 'ಉತ್ಕಂಠಿನ್ಯೈ ನಮಃ' | - | (ಕುತ್ತಿಗೆ) |
| 'ಅಮೃತಾಯ್ಯೆ ನಮಃ' | - | (ದೇಹ) |
| 'ರಂಭಾಯ್ಯೆ ನಮಃ' | - | (ತೋಳು) |
| 'ವಿಶೋಕಾಯ್ಯೆ ನಮಃ' | - | (ಕೈ) |
| 'ಮನ್ಮಥಾಧಿಕಾಯ್ಯೆ ನಮಃ' | - | (ತೊಡೆ) |
| 'ಪಾಟಲಾಯ್ಯೆ ನಮಃ' | - | (ಉದರ) |
| 'ಸುರತವಾಸಿನ್ಯೈ ನಮಃ' | - | (ಸೊಂಟ) |
| 'ಪಂಚರಸಾಯ್ಯೆ ನಮಃ' | - | (ತೊಡೆ) |
| 'ಗೌರ್ಯೈ ನಮಃ' | - | (ಮೊಳಕಾಲು) |
| 'ಶಾಂತ್ಯೈ ನಮಃ' | - | (ಮುಂಗಾಲು) |

ಹೀಗೆ ಪೂಜೆ ಮಾಡಿ ಕೊನೆಗೆ-

''ನಮೋ ಭವಾನ್ಯೈ ಕಾಮಿನ್ಯೈ ವಾಸುದೇವ್ಯೈ ಜಗತ್ಪ್ರಿಯೈ ।
ಆನಂದಾಯ್ಯೆ ಚ ನಂದಾಯ್ಯೆ ಸುಭದ್ರಾಯ್ಯೆ ನಮೋ ನಮಃ ॥

ಎಂದು ಪ್ರಾರ್ಥನೆಯನ್ನು ಸಲ್ಲಿಸಿ, ವಿಧಿಪೂರ್ವಕವಾಗಿ ದ್ವಿಜ ದಂಪತಿಗಳನ್ನು ಪೂಜಿಸ ಬೇಕು. ಲಡ್ಡು ಮಾಡಿಸಿ, ಪಕ್ವಾನ್ನ ಭೋಜನ ಮಾಡಿಸಬೇಕು. ನೀರು ತುಂಬಿದ ಕೊಡವನ್ನು ಎರಡು ಶುಭ್ರ ವಸ್ತ್ರಗಳನ್ನು, ಬಂಗಾರದ ಕಮಲವನ್ನು ದಾನ ಕೊಟ್ಟು ಗಂಧಮಾಲೆಗಳಿಂದ ಪೂಜಿಸಬೇಕು. ಈ ಕ್ರಮದಿಂದ ದೇವಿಯನ್ನು ಪ್ರತಿ ತಿಂಗಳೂ ಪೂಜಿಸಬೇಕು. ಒಂದೊಂದು ತಿಂಗಳು ಒಂದೊಂದು ಪದಾರ್ಥವನ್ನು ಬಿಟ್ಟು ಒಂದೊಂದು ದೇವಿಯ ರೂಪವು ಪ್ರಸನ್ನವಾಗಲಿ ಎಂದು ಪ್ರಾರ್ಥನೆ ಮಾಡಬೇಕು. ಮಾಘ ಮಾಸದಲ್ಲಿ ಉಪ್ಪನ್ನು ಬಿಟ್ಟು ಲವಣ ವ್ರತ ಮಾಡಿ - ''ಪ್ರೀತಯಾ ಯಂತ್ರ ಕುಮುದಾ । ಯತ್ಕೃತೌ ಲವಣೌ ವ್ರತೌ'' ಎಂದು ದೇವಿಗೆ ತಾನು ಮಾಡಿದ ವ್ರತದ ಫಲವನ್ನು ಸಮರ್ಪಿಸಬೇಕು. ಫಾಲ್ಗುಣ ಮಾಸದಲ್ಲಿ ಬೆಲ್ಲ ಬಿಟ್ಟು 'ಮಾಧವೀ ಪ್ರಿಯತಾಂ' ಎಂದು ಹೇಳಬೇಕು. ಚೈತ್ರದಲ್ಲಿ 'ಗೌರಿ ಪ್ರೀಯತಾಂ' ಎಂದು ಕಬ್ಬನ್ನು ಬಿಡಬೇಕು. ವೈಶಾಖದಲ್ಲಿ 'ರಂಭಾ ಪ್ರೀಯತಾಂ' ಎಂದು ಜೇನನ್ನು, ಜ್ಯೇಷ್ಠದಲ್ಲಿ 'ಭದ್ರಾಪ್ರೀಯತಾಂ' ಎಂದು ನೀರಿನಂತಹ ಪೇಯಗಳನ್ನು, ಆಷಾಢದಲ್ಲಿ 'ಜಯಾ ಪ್ರೀಯತಾಂ' ಎಂದು ಜೀರಿಗೆ, ಶ್ರಾವಣದಲ್ಲಿ 'ಶಿವಾ ಪ್ರೀಯತಾಂ' ಎಂದು ಹಾಲು, ಭಾದ್ರಪದದಲ್ಲಿ ಲಲಿತೆಗೋಸ್ಕರ ಮೊಸರು, ಆಶ್ವೀನದಲ್ಲಿ ಕಮಲೆಗೋಸ್ಕರ ತುಪ್ಪ, ಕಾರ್ತಿಕದಲ್ಲಿ ಅನಂಗೆಗೋಸ್ಕರ ಜೇನುತುಪ್ಪ, ಮಾರ್ಗಶಿರದಲ್ಲಿ 'ಮಂಗಳಾ ಪ್ರೀಯತಾಂ' ಎಂದು ಕೊತ್ತಂಬರಿ, ಪುಷ್ಯದಲ್ಲಿ 'ರತಿ ಲಾಲಸಾ ಪ್ರೀಯತಾಂ' ಎಂದು ಸಕ್ಕರೆಯನ್ನು ಬಿಟ್ಟು 'ದೇವಿ ಪ್ರೀಯತಾಂ' ಎಂದು ಸಂಕಲ್ಪ ಮಾಡಬೇಕು. ವ್ರತ ಮುಗಿದ ಬಳಿಕ ಪ್ರತಿ ತಿಂಗಳೂ ಪಂಚಗವ್ಯ ಪ್ರಾಶನ ಮಾಡಿ ವ್ರತಾನುಷ್ಠಾನದ ದಿನ ಉಪವಾಸವಿದ್ದು, ಒಪ್ಪತ್ತು ಊಟ ಮಾಡಿ ದೇವಿಯ ಆರಾಧನೆ ಮಾಡಬೇಕು. ಹೀಗೆ 'ರಸ ಕಲ್ಯಾಣಿನೀ ವ್ರತ'ವನ್ನು ವರ್ಷ ಪೂರ್ತಿಯಾಗಿ ಮಾಡಿ ಮರು ವರ್ಷಮಾಘ ಮಾಸ ಬಂದ ಬಳಿಕ ಸಕ್ಕರೆಯ ಪಕ್ವಾನ್ನದ ಮೇಲೆ ಬಂಗಾರದ ಅಂಗುಷ್ಠ ಪ್ರಮಾಣದಗೌರೀ ಪ್ರತಿಮೆ ಮಾಡಿಸಿ ಪಂಚರತ್ನಗಳನ್ನು ಅದರ ಉಡಿಯಲ್ಲಿ ಹಾಕಿ, ತಲೆಯಲ್ಲಿ ಚಂದ್ರನನ್ನು ರಚಿಸಿ ಮೇಲೆ ಬಟ್ಟೆ ಹೊದಿಸಿ ದಾನ ಕೊಡಬೇಕು. ಶ್ವೇತ ಗೋವನ್ನು ಹಸು, ಪಾತ್ರ, ಕೊಂಬು, ಗೊರಸು, ಬಟ್ಟೆ, ಪಾತ್ರೆ ಸಹಿತವಾಗಿ 'ಭವಾನೀ ಪ್ರೀಯತಾಂ' ಎಂದು ದಾನ ಕೊಡಬೇಕು. ಇದರಿಂದ ಅನಂತ ಕಾಲದವರೆಗೆ ಪಾರ್ವತೀ ಲೋಕವನ್ನು ಹೊಂದಿ ಮನುಷ್ಯನು ಸುಖಪಡುತ್ತಾನೆ. ಸಾವಿರ ಅಗ್ನಿಷ್ಟೋಮ ಹೋಮಗಳನ್ನು, ಮಾಡಿದರೆ ಬರುವಷ್ಟು ಫಲವು ಬರುವುದು.

**ಆತ್ಮಾನಂದಕರೀ ತೃತೀಯಾ :** ಆಷಾಢ ಶುದ್ಧ ತದಿಗೆಯ ದಿನ ರೋಹಿಣೀ ಮಘಾ, ಹಸ್ತಾ, ಮೂಲಾ ಈ ನಾಲ್ಕು ನಕ್ಷತ್ರಗಳಲ್ಲಿ ಒಂದು ಬಂದಿದ್ದರೆ ಅಂದು ಈ ವ್ರತವನ್ನು ಪ್ರಾರಂಭಿಸಬೇಕು. ದರ್ಭೆ ಹಾಕಿದ ಸುಗಂಧಿ ನೀರಿನಲ್ಲಿ ಸ್ನಾನ ಮಾಡಿ, ಶ್ವೇತ ಪುಷ್ಪವನ್ನು ಧರಿಸಿ, ಶುಭ್ರ ಗಂಧವನ್ನು ಲೇಪಿಸಿಕೊಂಡು ಪಕ್ಕದಲ್ಲಿ ಮಹದೇವರನ್ನೂ ಕೂಡಿಸಿ, ಪಾರ್ವತಿಯನ್ನು ಶುಭ್ರ ಕುಸುಮಗಳಿಂದ ಪೂಜಿಸಬೇಕು. ಶಿವ ಹಾಗೂ ಪಾರ್ವತಿಯರ ಒಂದೊಂದು ಹೆಸರು ಹೇಳಿ ಒಂದೊಂದು ಅವಯವ ಪೂಜಿಸಬೇಕು.

| ಪಾರ್ವತಿ | | ಶಿವ | | ಅವಯವ | |
|---|---|---|---|---|---|
| ವಾಸುದೇವ್ಯೈ | ನಮಃ | ಶಂಕರಾಯ | ನಮಃ | ಪಾದೌ | ಪೂಜಯಾಮಿ |
| ಶೋಕವಿನಾಶಿನ್ಯೈ | ,, | ಆನಂದಾಯ | ,, | ಮಂಡಿ | ,, |
| ರಂಭಾಯ್ಯೆ | ,, | ಪಿನಾಕಿನೆ | ,, | ತೊಡೆ | ,, |
| ಆನಂದಿನ್ಯೈ | ,, | ಶೂಲಪಾಣಯೆ | ,, | ನಡು | ,, |
| ಮಾಧವ್ಯೈ | ,, | ಭವಾಯ | ,, | ಹೊಕ್ಕಳು | ,, |
| ಅನಂತಕಾರಿಣ್ಯೈ | ,, | ಇಂದುಧಾರಿಣೇ | ,, | ಸ್ತನ | ,, |
| ಉತ್ಕಂಠಿನ್ಯೈ | ,, | ನೀಲಕಂಠಾಯ | ,, | ಕೊರಳು | ,, |
| ಉತ್ಪಲಧಾರಿಣ್ಯೈ | ,, | ರುದ್ರಾಯ | ,, | ಕೈ | ,, |
| ಪರಿರಂಭಿಣ್ಯೈ | ,, | ನೃತ್ಯಪ್ರಿಯಾಯ | ,, | ತೋಳು | ,, |
| ವಿಲಾಸಿನ್ಯೈ | ,, | ವೃಷಭಾಯ | ,, | ಮುಖ | ,, |
| ಸ್ಮರಣೆಯಾಯ್ಯೆ | ,, | ವಿಶ್ವ-ವಕ್ತ್ರಾಯ | ,, | ತುಟಿ | ,, |
| ಮಂದಾರವಾಸಿನ್ಯೈ | ,, | ತ್ರಿಶೂಲಾಯ | ,, | ಕಣ್ಣು | ,, |
| ನೃತ್ಯಪ್ರಿಯಾಯ್ಯೆ | ,, | ಪಾಶಶೂಲಧರಾಯ | ,, | ಹುಬ್ಬು | ,, |
| ಇಂದ್ರಾಣ್ಯೈ | ,, | ವೃಷಭವಾಹನಾಯ | ,, | ಹಣೆ | ,, |
| ಸ್ವಾಹಾಯ್ಯೆ | ,, | ಗಂಗಾಧರಾಯ | ,, | ಕಿರೀಟ | ,, |

**ವಿಶ್ವಕಾಯೌ ವಿಶ್ವಮುಖೌ ವಿಸ್ವಪಾದಕರೌ ಶಿವೌ ।**
**ಪ್ರಸನ್ನವದನೌ ವಂದೇ ಪಾರ್ವತೀ ಪರಮೇಶ್ವರೌ ॥**

ಎಂದು ಪ್ರಾರ್ಥನೆಮಾಡಿ, ಶಿವ-ಶಿವೆಯರನು ವಿಧಿಪೂರ್ವಕವಾಗಿ ಪೂಜೆಗೈಯಬೇಕು. ಪಾರ್ವತೀ ಪರಮೇಶ್ವರ ಎದುರು ಬೇರೆ ಬೇರೆ ಬಣ್ಣಗಳ ಹಿಟ್ಟುಗಳಿಂದ ತಾವರೆ, ನೈದಿಲೆ, ಶಂಖ, ಚಕ್ರ, ಸ್ವಸ್ತಿಕ ಪದ್ಮಗಳನ್ನು ಬರೆಯಬೇಕು. ನಾಲ್ಕು ತುಪ್ಪದ ಪಾತ್ರೆ, ಅನ್ನದ ಪಾತ್ರೆ, ನೀರಿನ ಪಾತ್ರೆ ತುಂಬಿ, ದ್ವಿಜರಿಗೆ ದಾನ ಕೊಡಬೇಕು. ಆಷಾಢದಿಂದ ನಾಲ್ಕು ತಿಂಗಳ ಪ್ರತಿಪಕ್ಷದ ಎರಡೂ ತದಿಗೆ ದಿನಗಳಲ್ಲಿ ಹಾಗೆ ಮಾಡಬೇಕು. ಅನಂತರ ಕಾರ್ತಿಕದಿಂದ ಮುಂದಿನ ನಾಲ್ಕು ತಿಂಗಳು ಕಲಶದ ಜೊತೆಗೆ ಮತ್ತೆ ಬೇರೆ ನಾಲ್ಕು ತುಪ್ಪದ ಪಾತ್ರೆಗಳನ್ನು ದಾನ ಕೊಡಬೇಕು. ಮುಂದಿನ ನಾಲ್ಕು ತಿಂಗಳ ಎಳ್ಳಿನ ನಾಲ್ಕು ಪಾತ್ರೆಗಳನ್ನು ದಾನಕೊಡಬೇಕು. ದಾನ ಕೊಡುವಾಗ-

**''ಗೌರೀ ಮೇ ಪ್ರೀಯತಾಂ ನಿತ್ಯಮಘನಾಶಾಯ ಮಂಗಲಾ ।**
**ಸೌಭಾಗ್ಯಾಯಾಸ್ತು ಲಲಿತಾ ಭವಾನೀ ಸರ್ವಸಿದ್ಧಯೇ ॥**

ಎಂದು ಮಂತ್ರ ಪಠಿಸಿ ಪ್ರಾರ್ಥನೆ ಸಲ್ಲಿಸಬೇಕು. ವರ್ಷದ ಕೊನೆಗೆ ಹದಿನೈದು ದಿನ ಉಪ್ಪು ಹಾಗೂ ಬೆಲ್ಲವನ್ನು ಬಿಡಬೇಕು. ದಂಪತಿಗಳನ್ನು ಕರೆದು ಪೂಜೆಮಾಡಿ ಚಂದನ, ಚಿನ್ನದ ಕಮಲ, ಬಂಗಾರದ ಪಾರ್ವತಿ ಪರಮೇಶ್ವರರ ಪ್ರತಿಮೆ, ಕಬ್ಬು, ಹಣ್ಣು, ಸುಸಜ್ಜಿತವಾದ ಹಾಸುಗೆ ಮುಂತಾದವುಗಳನ್ನು, 'ಗೌರೀಮೇಪ್ರೀಯತಾಂ' ಎಂದು

ಉಚ್ಚರಿಸಿ ದಾನಮಾಡಬೇಕು. ಆಯುಷ್ಯ, ಆರೋಗ್ಯ, ಸಂತತಿ, ಸಂಪತ್ತು ದೊರಕುವದು. ನರನಾಗಲಿ, ನಾರಿಯೇ ಆಗಲಿ , ಕನ್ಯೆ, ವಿಧವೆಯಾಗಲಿ ಈ ವ್ರತವನ್ನು ಮಾಡಿದರೆ, ದೇವಿಯ ಅನುಗ್ರಹವು ಲಭಿಸುವದು. ಪ್ರತಿಯೊಂದು ಪಕ್ಷದ ಆ ತದಿಗೆಯ ದಿನ ಉಪವಾಸವಿದ್ದು ಪೂರ್ಣದಿನ ಮಂತ್ರದಿಂದ ಪಾರ್ವತಿಯನ್ನು ಪೂಜಿಸಿದರೆ ಪಾರ್ವತಿ ಲೋಕವನ್ನು ಹೆಂಗಸು ಹೊಂದುತ್ತಾಳೆ. ಇದನ್ನು ಓದಿದವರಿಗೂ, ಕೇಳಿದವರಿಗೂ ಎಂದು ಕಲ್ಪಕಾಲ ಇಂದ್ರಲೋಕ ಲಭಿಸುವದು.

**ಶಂಕರ** :- ಹೀಗೆ ಯಾವ ನಾರಿಯು ವ್ರತವನ್ನು ಆಚರಿಸುವಳೋ ಅವಳಿಗೆ ಸಾವಿತ್ರಿಯ ಶಾಪವು ಏನು ಮಾಡುವುದು ? ಲಕ್ಷ್ಮೀದೇವಿಯ ಮುಂದೆ ಸಾವಿತ್ರಿ ಏನೂ ಅಲ್ಲ. ಅವಳ ಶಾಪವು ಎಷ್ಟು ಮಾತ್ರಕ್ಕೂ ತಟ್ಟದು.

**ನ ಕಾಚಿದ್ಗಣನಾ ಚಾಸ್ತಿ ಯತಸ್ತ್ರೈಲೋಕ್ಯಸುಂದರೀ ।**
**ಸಾ ಪೂರ್ವಸ್ಯಾಪಿ ವಂದ್ಯಾ ಚ ಲಕ್ಷ್ಮೀರ್ವಿಷ್ಣುಪರಿಗ್ರಹಾತ್ ॥**

ಲಕ್ಷ್ಮೀದೇವಿಗೆ ಯಾರದೂ ಗಣನೆಯಿಲ್ಲ. ಮೂರುಲೋಕದಲ್ಲಿ ಸುಂದರಿಯಾದ ಅವಳು ಬ್ರಹ್ಮದೇವನಿಗೂ ಕೂಡ ವಂದ್ಯಳಾಗಿದ್ದಾಳೆ. ಲಕ್ಷ್ಮೀದೇವಿಯ ಈ ಮಹಾಮಹಿಮೆಗೆ ವಿಷ್ಣುವು ಅವಳನ್ನು ಕೈ ಹಿಡಿದು ತನ್ನ ಧರ್ಮಪತ್ನಿಯನ್ನಾಗಿ ಮಾಡಿಕೊಂಡದ್ದೆ ಕಾರಣ ಆಗಿದೆ. ಪಾರ್ವತಿ, ಹಿಂದೆ ನಾನು ನಿನಗಾಗಿ ದಕ್ಷಯಜ್ಞವನ್ನು ಧ್ವಂಸಗೊಳಿಸಿದೆ. ಅದರಂತೆ ವಿಷ್ಣುವು ಲಕ್ಷ್ಮಿಗಾಗಿ ಹಾಲಿನ ಕಡಲವನ್ನು ಕಡೆದನು. ನಾನು ನಿನ್ನ ಆಜ್ಞೆಯನ್ನು ಪಾಲಿಸುತ್ತೇನೆ. ವಿಷ್ಣುವು ಲಕ್ಷ್ಮಿಯ ಮಾತನ್ನು ನಡೆಸಿಕೊಡುತ್ತಾನೆ. ನೀನು ಇನಿತೂ ಭಯಪಡಬೇಡ. ಸಾವಿತ್ರಿಯ ಮಾನವನ್ನು ಕಾಪಾಡಬೇಕು. ಸಿಟ್ಟಿಗೆದ್ದ ಅವಳನ್ನು ಸಂತೈಸಬೇಕಾಗಿದೆ. ನಾನು, ವಿಷ್ಣು ಹಾಗೂ ಬ್ರಹ್ಮ - ಮೂವರೂ ಬ್ರಹ್ಮನಿಗಾಗಿ ಸಾವಿತ್ರಿಯನ್ನು ಸಮಾಧಾನ ಪಡಿಸುತ್ತೇವೆ. ಅದಕ್ಕಾಗಿ ಬ್ರಹ್ಮನ ಭವನಕ್ಕೆ ಹೋಗಲಿದ್ದೇನೆ. ನೀನು ಇಲ್ಲಿಯೇ ಇರು.

ಹೀಗೆ ಹೇಳಿ ರುದ್ರನು ಬ್ರಹ್ಮಸದನಕ್ಕೆ ಹೋದನು. ಗೌರಿಯು ತಾನಿದ್ದ ತಾಣದಲ್ಲಿಯೇ ನಿಂತುಕೊಂಡಳು. ಕೃತಯುಗ ಮುಗಿಯುವರೆಗೂ ಆ ಬ್ರಹ್ಮಯಜ್ಞವು ನಡೆಯಿತು. ವಿಧಿವಿಹಿತವಾದ ಆ ಸತ್ರದಲ್ಲಿ ಅಗ್ನಿಯು ದೇವತೆಗಳಿಗೆ ಹವ್ಯವನ್ನು ಹೊತ್ತು ಸಂತೋಷವನ್ನುಂಟುಮಾಡುತ್ತಿದ್ದನು. ಅದರಿಂದ ಮೂರ್ಲೋಕದ ಜನರೆಲ್ಲರೂ ಸಂತೋಷಪಡುತ್ತಿದ್ದರು. ದ್ವಿಜನರಿಗೆಲ್ಲ ಪ್ರತಿ ದಿನ ಇಚ್ಛಾ ಭೋಜನವಾಗುತ್ತಿತ್ತು. ದೇವತೆಗಳಿಗೆ ಅಮೃತಪ್ರಾಶನ, ಗಂಧರ್ವರಿಗೆ ಗಂಧ ಸೇವನೆಯಿಂದ ಆನಂದವಾಗುತ್ತಿತ್ತು. ವಿದ್ಯಾಧರರಿಗೂ ಭೋಗಾನುಭೋಗದಿಂದ ಪೂರ್ಣ ತೃಪ್ತಿ. ಮಾನವರಿಗಂತೂ ಸಕಲ ಇಷ್ಟಾರ್ಥಗಳು ತಕ್ಷಣದಲ್ಲಿ ಕೈಗೂಡುತ್ತಿದ್ದವು. ಹೀಗೆ ಬ್ರಹ್ಮದೇವನು ಆ ಯಜ್ಞದಲ್ಲಿ ಬೇಡಿದ್ದನ್ನು, ಬಯಸಿದ್ದನ್ನು ಕೊಟ್ಟು ಕೃತಾರ್ಥನಾಗುತ್ತಿದ್ದನು. ಆ ಉತ್ಸವ ಸಮಾರಂಭ ಕಾಲದಲ್ಲಿ ಹರನು ಹರಿಯನ್ನು ಪ್ರಶ್ನಿಸಿದನು.

**ಹರ** :- ಮಹಾವಿಷ್ಣುವೇ, ಧರ್ಮನಿಷ್ಠೆಯ ಬಗ್ಗೆ ಹೇಳು. ಗೌರೀ ಧರ್ಮಗಳನ್ನು ಬೋಧಿಸು. ಸರಸ್ವತೀ ವ್ರತದ ಬಗ್ಗೆ ಶಾಸ್ತ್ರದಲ್ಲಿ ಹೇಳಿದ್ದನ್ನು ತಿಳಿಸು. ಪರಮೇಶ್ವರನ ಈ ಪ್ರಶ್ನೆಗಳಿಗೆ ಉತ್ತರಿಸಿದನು ಮಹಾವಿಷ್ಣು.

**ವಿಷ್ಣು :-** ಶಂಕರನೆ, ನಾನು ಈಗ ಧರ್ಮದ ಮೇಲೆ ಪ್ರವಚನ ಮಾಡುವುದಿಲ್ಲ. ನನ್ನ ಮಹಿಮೆಯನ್ನು ಸುರಶ್ರೇಷ್ಠನಾದ ನೀನೇ ಹೇಳು. ಕೃತಯುಗದಲ್ಲಿ ಹಿಂದೆ ನೀನು ಧರ್ಮವನ್ನು ನಿರೂಪಣಮಾಡಿದೆ. ಆದರಿಂದ ಪಾಪರಾಶಿಯು ನಷ್ಟವಾಗುವುದು. ನೀನೂ ಕೂಡ ಪಾವನನಾಗುವೆ.

**ಭೀಷ್ಮ :-** ಮುನಿಪುಂಗವನೆ, ಯಾವ ವ್ರತದಿಂದ ಮಧುರ ಮಾತುಗಳನ್ನು ಆಡಲು ಬರುವುದು? ಮತ್ತು ಜನರಿಗೆ ಸೌಭಾಗ್ಯ, ಪಾಂಡಿತ್ಯ, ಕೌಶಲ್ಯ ಇವು ಯಾವುದರಿಂದ ಪ್ರಾಪ್ತವಾಗುವವು? ದಂಪತಿಗಳಲ್ಲಿ ಅವಿಚ್ಛಿನ್ನವಾದ ಪ್ರೀತಿಯು ಹೇಗೆ ಉಂಟಾಗುವುದು? ಬಂಧುಜನರ ಸ್ನೇಹ, ಆಯುಷ್ಯದಲ್ಲಿ ಅಭಿವೃದ್ಧಿ, ಸೌಭಾಗ್ಯ, ಸಮೃದ್ಧಿ, ಆರೋಗ್ಯ ಸಿದ್ಧಿ ಇವೆಲ್ಲ ಯಾವುದರಿಂದ ಲಭ್ಯವಾಗುತ್ತವೆ?

**ಪುಲಸ್ತ್ಯ :-** ರಾಜನೆ, ನೀನು ಒಳ್ಳೇ ಮಾರ್ಮಿಕ ಪ್ರಶ್ನೆ ಮಾಡಿದೆ. ನಿನಗೆ ಸರಸ್ವತೀ ವ್ರತವನ್ನು ಹೇಳುತ್ತೇನೆ ಕೇಳು. ಅದನ್ನು ಹೇಳುವುದರಿಂದಲೇ ಸಂತುಷ್ಟಳಾಗುವವಳು ಶಾರದಾದೇವಿ. ಈ ಸರಸ್ವತೀ ವ್ರತವನ್ನು ಭಕ್ತರು ಪ್ರಾರಂಭಿಸುವ ಮೊದಲು ದೇವಿಯ ಪ್ರಾರ್ಥನೆಮಾಡಬೇಕು. ಸೂರ್ಯೋದಯಕ್ಕಿಂತ ಮುಂಚಿತ ಎದ್ದು ಸ್ನಾನಮಾಡಿ ಸರಸ್ವತೀ ಪೂಜೆಯನ್ನುಮಾಡಿ ಅವಳ ಸ್ತೋತ್ರವನ್ನು ಪಾರಾಯಣ ಮಾಡಬೇಕು. ರವಿವಾರ ಪ್ರಾತಃಕಾಲದಲ್ಲಿ ವ್ರತ ಪ್ರಾರಂಭಮಾಡಬಹುದು. ಚಂದ್ರಬಲ, ತಾರಾಬಲ, ನೋಡಿ ಮಾಡುವದು ಪ್ರಶಸ್ತವಾದುದು. ದ್ವಿಜರಿಗೆ ಸಂತರ್ಪಣೆ ಮಾಡಿಸಿ, ಸ್ವಸ್ತಿವಾಚನ ಮಾಡಿಸಬೇಕು. ಶ್ವೇತವಸ್ತ್ರ ದಕ್ಷಿಣೆಗಳನ್ನು ಯಥಾಶಕ್ತಿ ದಾನಮಾಡಬೇಕು. ಬಿಳಿಯ ಹೂ, ಗಂಧಗಳಿಂದ ಪೂಜಿಸಬೇಕು. 'ಪೂಜ್ಯನಾದ ಬ್ರಹ್ಮದೇವನು ಜಗತ್ತಿಗೆಲ್ಲ ಪಿತಾಮಹನಾದರೂ ನಿನ್ನನ್ನು ಬಿಟ್ಟು ಎಂದೂ ಇರುವುದಿಲ್ಲ. ಇದು ನಿಜವಾಗಿದ್ದಲ್ಲಿ ನೀನು ನಗೆವರವನ್ನು ಕೊಡು.'

**ಯಥಾ ನ ದೇವಿ ಭಗವಾನ್ಬ್ರಹ್ಮಾ ಲೋಕ ಪಿತಾಮಹಃ ।**
**ತ್ವಾಂ ಪರಿತ್ಯಜ್ಯ ತಿಷ್ಠೇತ ತಥಾ ಭವ ವರಪ್ರದಾ ॥**
**ಲಕ್ಷ್ಮೀರ್ಮೇಧಾ ವರಾ ಪುಷ್ಟಿರ್ಗೌರೀ ತುಷ್ಟಿಃ ಪ್ರಭಾಮತಿಃ ।**
**ಏತಾಭಿಃ ಪಾಹಿ ಚಾಷ್ಟಾಭಿಸ್ತನುಭಿರ್ಮಾಂ ಸರಸ್ವತಿ ॥**

ಸರಸ್ವತಿ ದೇವಿಯೇ, ಲಕ್ಷ್ಮೀ, ಮೇಧಾ, ವರಾ, ಪುಷ್ಟಿ, ಗೌರಿ, ತುಷ್ಟಿ,ಪ್ರಭಾ, ಮತಿ ಎಂಬ ಈ ಎಂಟು ರೂಪಗಳಿಂದ ನೀನು ಅಷ್ಟದೇವಿಯಾಗಿ ಪ್ರಸಿದ್ಧಳಾಗಿರುವಿ. ನಿನ್ನ ಈ ಎಂಟು ರೂಪಗಳಿಂದಲೂ, ಸರಸ್ವತಿಯೇ ನನ್ನನ್ನು ರಕ್ಷಿಸು. ಹೀಗೆ ಪ್ರಾರ್ಥನೆಯನ್ನು ಮಾಡಿ, ತಂಬೂರಿ, ಅಕ್ಷಮಾಲೆ, ಕಮಂಡಲು, ಪುಸ್ತಕಗಳನ್ನು ಧರಿಸಿದ ಗಾಯತ್ರೀ ದೇವಿಯನ್ನು ಬಿಳಿ ಹೂ, ಅಕ್ಷತೆಗಳಿಂದ ಪೂಜಿಸಬೇಕು. ಎರಡು ಹೊತ್ತು ಊಟ ಮಾಡುವಾಗ ಮೌನದಿಂದ ಭೋಜನಮಾಡಬೇಕು. ಶುಕ್ಲ, ಕೃಷ್ಣಪಕ್ಷ ಪಂಚಮಿ ದಿನಗಳಲ್ಲಿ ಗ್ರಂಥ ರೂಪಿಣಿಯಾದ ಸರಸ್ವತಿಯನ್ನು ಪೂಜಿಸಬೇಕು. ಒಂದು ಕೊಳಗ ಅಕ್ಕಿ, ತುಪ್ಪ ತುಂಬಿದ ಪಾತ್ರೆ, ಹಾಲು ಮತ್ತು ಬಂಗಾರವನ್ನು 'ಗಾಯತ್ರೀ ಪ್ರೀಯತಾಂ' ಎಂದು ಹೇಳಿ ದಾನಕೊಡಬೇಕು. ಸಂಧ್ಯಾ ಕಾಲದಲ್ಲಿ ಮೌನವನ್ನು ಆಚರಿಸಬೇಕು. ವ್ರತವು ಪೂರ್ತಿಯಾದ ಬಳಿಕ ಬೆಳ್ಳಕ್ಕಿಯಅನ್ನ ಊಟಮಾಡಬೇಕು. ಜೋಡು ಬಟ್ಟೆಗಳನ್ನು, ಒಂದು ಹಸುವನ್ನು, ಸೊಳ್ಳೆ ಪರದೆಯನ್ನು, ಗಂಟೆಯನ್ನು, ಚಂದನವನ್ನು, ಮೊಸರನ್ನವನ್ನು ದಾನ

ಕೊಡಬೇಕು. ಉಪದೇಶ ಮಾಡಿದ ಗುರುವನ್ನು ಗಂಧ,ಹೂವಿನ ಹಾರ ಹಾಗೂ ಬಟ್ಟೆಗಳನ್ನು ಕೊಟ್ಟು ಸತ್ಕರಿಸಿ ಪೂಜಿಸಬೇಕು. ಈ ವಿಧಿಯಿಂದ ಸಾರಸ್ವತ ವ್ರತವನ್ನು ಆಚರಿಸಿದವನು ಪಂಡಿತನಾಗುವನು. ಮತ್ತು ಅವನ ಕಂಠದಲ್ಲಿ ಮಾಧುರ್ಯವು ತಾನಾಗಿ ಬರುವುದು. ಈ ವ್ರತಮಾಡಿದ ಮಾನವನು ಸರಸ್ವತಿಯ ಅನುಗ್ರಹದಿಂದ ಬ್ರಹ್ಮಲೋಕದಲ್ಲಿ ಗೌರವಿತನಾಗುತ್ತಾನೆ. ಗಂಡಸಾಗಲಿ, ಹೆಂಗಸಾಗಲಿ, ಈ ವ್ರತವನ್ನು ಮಾಡಿದರೆ, ಮೂರು ಕಲ್ಪಕಾಲ ಸತ್ಯಲೋಕದಲ್ಲಿ ನೆಲೆಸುವನು. ಇದನ್ನು ಹೇಳಿದವರು, ಕೇಳಿದವರು ಅನಂತ ಕಾಲದವರೆಗೆ ವಿದ್ಯಾಧರ ಲೋಕದಲ್ಲಿ ವಾಸಿಸುವರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಗೌರಿವ್ರತ ಕಥನ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ಅನಂಗದಾನ ವೇಶ್ಯಾವ್ರತ

ಅಧ್ಯಾಯ - ೨೩

**॥ ಭೀಷ್ಮ ಉವಾಚ ॥**

**ವೈಷ್ಣವಾ ಯೇ ತು ವೈ ಧರ್ಮಾ ಯಾನ್ರುದ್ರಃ ಪ್ರೋಕ್ತವಾನಿಹ ।**
**ತಾನ್ಮೇ ಕಥಯ ವಿಪ್ರೇಂದ್ರ ಕೀದೃಶಾಸ್ತೇ ಫಲಂ ತು ಕಿಂ ॥**

ಭೀಷ್ಮ :- ದ್ವಿಜಶ್ರೇಷ್ಠ, ವೈಷ್ಣವ ಧರ್ಮಗಳನ್ನೆಲ್ಲ ರುದ್ರದೇವರು ಹೇಳಿದರಷ್ಟೆ! ಅವುಗಳನ್ನು ನಿರೂಪಿಸು. ಆ ವಿಷ್ಣುಧರ್ಮಾಧರ್ಮಗಳ ಸ್ವರೂಪವೇನು? ಅವುಗಳಿಂದ ಬರುವ ಫಲಗಳನ್ನು ವಿವರಿಸು.

ಪುಲಸ್ತ್ಯ :- ಹಿಂದೆ ರಥಂತರ ಕಲ್ಪದಲ್ಲಿ, ಮಹಾದೇವನು ಮಂದರಗಿರಿಯಲ್ಲಿ ತಂಗಿದ್ದನು. ಆಗ ಅಲ್ಲಿಗೆ ಸ್ವಯಂ ಬ್ರಹ್ಮದೇವನು ತಾನಾಗಿ ಬಂದು ಆ ಪಿನಾಕ ಪಾಣಿಯನ್ನು ಕುರಿತು ಪ್ರಶ್ನಿಸಿದನು. ''ಪರಮೇಶ್ವರನೇ, ಐಶ್ವರ್ಯವು ಅಪಾರವಾಗಿ ದೊರೆಯಬೇಕಾದರೆ ಉಪಾಯ ಯಾವುದು? ಹಾಗೂ ಆರೋಗ್ಯ ಭಾಗ್ಯವು ಯಾವುದರಿಂದ ಲಭಿಸುವದು? ಮಹಾದೇವನೇ, ಮಾನವರಿಗೆ ಅಲ್ಪ ತಪಸ್ಸಿನಿಂದ ಮೋಕ್ಷವು ದೊರಕುವದೆಂತು?'' ಬ್ರಹ್ಮದೇವರ ಈ ಪ್ರಶ್ನೆಯನ್ನು ಕೇಳಿ ಮಹಾದೇವರು ಮರುನುಡಿದರು. ಶಿವನು ಲೋಕಕ್ಷೇಮಕ್ಕಾಗಿಯೇ ಬದ್ಧಕಂಕಣವಲ್ಲವೆ? ಬ್ರಹ್ಮದೇವರ ಈ ಪ್ರಶ್ನೆ ಕೇಳಿಯೇ ಶಿವನ ಮನಸ್ಸು ಸುಪ್ರಸನ್ನವಾಯಿತು.

**ಶಿವ :-** ಈ ರಥಂತರ ಕಲ್ಪದ ನಂತರ ಇಪ್ಪತ್ತನೆಯ ಕಲ್ಪವಾಗಿ, ವರಾಹಕಲ್ಪವು ಪ್ರಾರಂಭವಾಗುವದು. ಆ ವರಾಹ ಕಲ್ಪದಲ್ಲಿ ವೈವಸ್ವತ ಮನ್ವಂತರವು ಏಳನೆಯದಾಗಿ ಬಂದಾಗ, ಇಪ್ಪತ್ತೇಳನೇಯ ದ್ವಾಪರಯುಗದ ಕೊನೆಯಲ್ಲಿ ಪರಂಜ್ಯೋತಿರೂಪಿ ವಾಸುದೇವನು ಅವತರಿಸುವನು. ಭೂಮಿಯಭಾರವನ್ನು ಇಳಿಸುವ ಉದ್ದೇಶದಿಂದ ಆ ಜಗದೀಶ್ವರನು ಆ ಕಾಲದಲ್ಲಿ ಮೂರು ರೂಪದಿಂದ ಮರ್ತ್ಯಲೋಕದಲ್ಲಿ ಅವತಾರ ತಾಳುವನು. ವೇದವ್ಯಾಸ, ಬಲರಾಮ, ಕೇಶವ, ಇವೇ ಇಪ್ಪತ್ತೇಳನೆಯ ಕಲಿಯುಗದಲ್ಲಿ ಭೂಭಾರ ಕಡಿಮೆ ಮಾಡಲು ಅವತರಿಸಿದ ಮೂರು ರೂಪಗಳು. ಈಗ ಕುಶಸ್ಥಳಿ ಎಂದು

ಪ್ರಸಿದ್ಧವಾದ ನಗರವೇ ಮುಂಬರುವ ಆ ದ್ವಾಪರಯುಗದಲ್ಲಿ ದ್ವಾರಾವತಿ ಎಂದು ಹೆಸರಾಗುವದು. ಇದು ಆ ಸ್ಥಳದ ಸುದೈವವೇ ಸರಿ. ಸ್ವಾಮಿ ಶ್ರೀಹರಿಯು ತನ್ನ ನಿವಾಸಕ್ಕಾಗಿ ಲೀಲಾಭೂಮಿಯೆಂದು ಈ ಕುಶಸ್ಥಲಿಯನ್ನೇ ಆಯ್ದುಕೊಳ್ಳುವನು ವಿಶ್ವಕರ್ಮನು ಕೃಷ್ಣ ಪರಮಾತ್ಮನ ಆಜ್ಞೆಯಿಂದ ದಿವ್ಯವಾದ ದ್ವಾರಕಾಪಟ್ಟಣವನ್ನು ಅತ್ಯಂತ ಸುಂದರವಾಗಿ ಆಕರ್ಷಕವಾಗಿ ನಿರ್ಮಿಸುವನು. ಒಂದು ದಿನ ತೇಜೋನಿಧಿಯಾದ ಆ ವಾಸುದೇವನು ತನ್ನ ಅಷ್ಟ ಮಹಿಷಿಯರೊಂದಿಗೆ ಕೂಡಿಕೊಂಡು ಆಸ್ಥಾನದಲ್ಲಿ ಮಂಡಿಸಿರುವನು. ಯಾದವರು, ಕೌರವರು, ಪಂಡಿತರು, ಗಂಧರ್ವ ದೇವತೆಗಳು ಆ ಭಗವಂತನ ಸುತ್ತುಮುತ್ತು ಕೈಕಟ್ಟಿಕೊಂಡು ನಿಂತಿರುವರು. ಶಾಸ್ತ್ರ ಪುರಾಣಗಳಲ್ಲಿ ಚರ್ಚೆ ನಡೆದಿರುವುದು. ಧರ್ಮ ವಿಚಾರದಲ್ಲಿ ಎಲ್ಲರೂ ಸೂಕ್ಷ್ಮವಾಗಿ ಆಲೋಚನೆಯನ್ನು ಮಾಡುತ್ತಲಿರುವುರು. ಆ ಧರ್ಮವಿಚಾರದ ಸಂದರ್ಭದಲ್ಲಿ ಭೀಮಸೇನನು ಕೃಷ್ಣನನ್ನು ಕುರಿತು ನೀನು ಕೇಳಿದ ಪ್ರಶ್ನೆಯನ್ನೇ ಕೇಳುವನು. ಆಗ ಕೃಷ್ಣನು ಭೀಮಸೇನನ ಪ್ರಶ್ನೆಗಳಿಗೆ ಹೇಳಲಿರುವ ಉತ್ತರವನ್ನೇ ನಾನು ಭವಿಷ್ಯ ಭೇದಿನೀ ದೃಷ್ಟಿಯಿಂದ ತಿಳಿದುಕೊಂಡು ನಿನಗೆ ಹೇಳುತ್ತೇನೆ; ಕೇಳು.

ಮುಂದೆ ಹೇಳಲಿರುವ ಈ ಧರ್ಮಗಳಿಗೆಲ್ಲ ಪಾಂಡುರಾಜನ ಮಗನಾದ ಭೀಮಸೇನನೇ ಆದ್ಯ ಪ್ರವರ್ತಕನಾಗುವನು. ಆ ಬಲಭೀಮಸೇನನಿಗೆ ವೃಕೋದರ ಎಂದೂ ಹೆಸರಿರುವದು. ಅದಕ್ಕೆ ಕಾರಣ ನಾನೇ. ವೃಕ ಎಂಬ ಹೆಸರಿನ ಅಗ್ನಿಯನ್ನು ನಾನೇ ಧರ್ಮಾತ್ಮನಾದ ಆ ಭೀಮಸೇನನಿಗೆ ಕೊಟ್ಟಿದ್ದೇನೆ. ಅವನ ಹೊಟ್ಟೆಯಲ್ಲಿ ಇಟ್ಟಿದ್ದೇನೆ. ಅವನು ಒಳ್ಳೇ ಭೋಕ್ತಾಪುರುಷ, ಹತ್ತುಸಾವಿರ ಆನೆಗಳ ಬಲವಿದೆ ಅವನಲ್ಲಿ. ಅವನು ಆಹಾರ ತಿನ್ನುವುದು ಹೆಚ್ಚು. ಅವನು ತಿಂದದ್ದೆಲ್ಲವೂ ಅವನ ಉದರಾಂತರ್ಗತವಾದ ಈ ವೃಕಾಗ್ನಿಯಿಂದ ಧ್ವಂಸವಾಗಿ ಹೋಗುವುದು. ಇಷ್ಟು ಅತಿ ತೀಕ್ಷ್ಣವಾದ ಬೆಂಕಿಯು ಆಗ ಹೊಟ್ಟೆಯಲ್ಲಿ ಉರಿಯುತ್ತಿದ್ದರೂ, ಅವನು ಉಪವಾಸ ಮಾಡಿದನು. ಹಸಿವೆಯನ್ನು ತುಸುವೂ ತಾಳಲಾರದ ಭೀಮನು ಈ ವ್ರತವನ್ನು ಕೈಕೊಂಡು ಉಪವಾಸ ಮಾಡಿದನೆಂದರೆ ಇದರ ಮೇಲಿಂದಲೇ ಈ ವ್ರತದ ಮಹತ್ವವು ತಿಳಿದುಬರಲು ಸಾಕು. ಎಲ್ಲ ವ್ರತಕ್ಕಿಂತಲೂ ಇದು ಅತ್ಯುತ್ತಮವಾದ ವ್ರತ. ಇದನ್ನು ವಿಶ್ವವ್ಯಾಪಿಯೂ, ಜಗದ್ಗುರುವೂ ಆದ ಸಾಕ್ಷಾತ್ ವಾಸುದೇವನೇ, ಸ್ವಯಂ ನಿರೂಪಣೆಗೈದಿದ್ದಾನೆ. ಆದುದರಿಂದ ಇದು ಪಾಪರಾಶಿ ಗಳನ್ನೆಲ್ಲ ನಾಶಮಾಡುವದು. ಎಲ್ಲಯಜ್ಞ-ಯಾಗಗಳ ಫಲವೂ ಲಭಿಸುವದು. ಇದು ಪವಿತ್ರಕ್ಕಿಂತ ಪವಿತ್ರ. ಮಂಗಳಕ್ಕಿಂತ ಮಂಗಳ. ಅದನ್ನು ನಿನಗೆ ಹೇಳುತ್ತೇನೆ. ಕೇಳು.

ವಾಸುದೇವ :- ಭೀಮನೇ, ಅಷ್ಟಮಿ, ಚತುರ್ದಶಿ, ದ್ವಾದಶಿ ಹಾಗೂ ಉಳಿದ ನಕ್ಷತ್ರಗಳಲ್ಲಿ ಹಾಗೂ ಉಪವಾಸ ಯೋಗ್ಯವಾದ ದಿನಗಳಲ್ಲಿ ನೀನು ಉಪವಾಸವನ್ನು ಮಾಡಲಾರೆ. ಆದುದರಿಂದ ಬೇರೊಂದು ಪಾಪನಾಶಕವಾದ ತಿಥಿಯನ್ನು ಹೇಳುತ್ತೇನೆ. ಆ ದಿನದಂದು ನೀನು ಉಪವಾಸಮಾಡಿ, ವಿಷ್ಣುವಿನ ಸ್ಥಾನವನ್ನು ನಿರಾತಂಕವಾಗಿ ಹೊಂದು.

## ಭೀಮದ್ವಾದಶಿ ವ್ರತ

ಮಾಘ ಶುದ್ಧ ದಶಮಿಯ ದಿನ ಅಭ್ಯಂಗಸ್ನಾನಪೂರ್ವಕವಾಗಿ ಎರೆದುಕೊಳ್ಳಬೇಕು. ಮೈಗೆ ಎಣ್ಣೆಯ ಬದಲು ತುಪ್ಪ ಹಚ್ಚಿಕೊಳ್ಳಬೇಕು. ಸ್ನಾನಮಾಡುವಾಗ ಎಳ್ಳು

ಹಚ್ಚಿಕೊಳ್ಳಬೇಕು. ಅನಂತರ ವಿಷ್ಣುವನ್ನು ಅಡಿಯಿಂದ ಮುಡಿಯವರೆಗೆ ಆವಾಹನ ಮಾಡಿ, ನಮಸ್ಕರಿಸಿ ಪೂಜಿಸಬೇಕು. ಆಪಾದಮೌಲಿಪರ್ಯಂತವಾಗಿ ಹರಿಯನ್ನು ಪೂಜಿಸುವ ಕ್ರಮವು ಇಂತಿದೆ.

| | | | |
|---|---|---|---|
| 'ಕೃಷ್ಣಾಯ ನಮಃ' | ಎಂದು | ಪಾದಕಗಳನ್ನು | ಪೂಜಿಸಬೇಕು. |
| 'ಸರ್ವಾತ್ಮನೇ ನಮಃ' | " | ತಲೆ | " |
| 'ವೈಕುಂಠಾಯ ನಮಃ' | " | ಕಂಠ | " |
| 'ಶ್ರೀವತ್ಸಧಾರೀಣೇ ನಮಃ' | " | ಎದೆ | " |
| 'ದಾಮೋದರಾಯ ನಮಃ' | " | ಹೊಟ್ಟೆ | " |
| 'ಪ್ರಪಂಚಗಾಯ ನಮಃ' | " | ಸೊಂಟ | " |
| 'ಸೌಭಾಗ್ಯನಾಥಾಯ ನಮಃ' | " | ತೊಡೆ | " |
| 'ಭೂತಧಾರಿಣೇ ನಮಃ' | " | ಮಂಡೆ | " |
| 'ನೀಲಾಯ ನಮಃ' | " | ಮೊಳಕಾಲು | " |
| 'ವಿಶ್ವಸೃಜಾಯ ನಮಃ' | " | ಪಾದ | " |

ಹೀಗೆ ಅಡಿಯಿಂದ ಮುಡಿಯವರೆಗೆ ಪೂಜಿಸಿ ಶಂಖಿನೇ ನಮಃ ಗದಿನೇ ನಮಃ ಚಕ್ರಿಣೇ ನಮಃ ವರದಾಯ ನಮಃ ನಾರಾಯಣಾಯ ನಮಃ ಎಂದು ಸರ್ವಾಂಗಗಳನ್ನು ಆಹ್ವಾನಿಸಿ ಪೂಜಿಸಬೇಕು. ಅನಂತರ ಪಕ್ಷಿಗಳಿಗೆ ಒಡೆಯನೂ ವಾಯುವಿನಂತೆ ವೇಗಶಾಲಿಯೂ ಆದ ಗರುಡನಿಗೆ ನಮಸ್ಕಾರ ಎಂದು ಪಕ್ಷಿರಾಜನನ್ನು ಪೂಜಿಸಬೇಕು. ಹೀಗೆ ಗೋವಿಂದ, ಗರುಡರನ್ನು, ಗೌರೀಪತಿ, ಗಣಪತಿಯರನ್ನೂ ಪೂಜಿಸಿ, ಅನಂತರ ಗಂಧ, ಮಾಲೆ, ಧೂಪ, ದೀಪ, ಭಕ್ಷ್ಯ, ಪಾಯಸ, ಹಾಲು, ಮೊಸರು ಮುಂತಾದವುಗಳನ್ನು ನೈವೇದ್ಯ ಮಾಡಬೇಕು. ಆಕಳ ಹಾಲಿನಿಂದ ಸಿದ್ಧ ಮಾಡಿದ ತುಪ್ಪದೊಂದಿಗೆ (ಕೃಶರವನ್ನು) ಭಂಜಿಸಿ ಮೂರು ಹೆಜ್ಜೆ ಹೊರಗೆ ಹೋಗಿ, ಆಲದಗಿಡದ ಕಡ್ಡಿಯನ್ನು ತೆಗೆದುಕೊಂಡು ಹಲ್ಲನ್ನು ತಿಕ್ಕಿ ಪೂರ್ವಾಭಿಮುಖವಾಗಿ ಆಚಮನ ಮಾಡಬೇಕು. ಸೂರ್ಯಾಸ್ತಕಾಲದಲ್ಲಿ ಸಾಯಂಕಾಲ ಸಂಧ್ಯಾವಂದನೆಮಾಡಿ, 'ನಾರಾಯಣಾಯನಮಃ' ಎಂದು ನಾರಾಯಣದೇವರಿಗೆ ನಮಸ್ಕರಿಸಿ 'ತ್ವಾಂ ಅಹಂ ಶರಣಂಗತಃ' ಎಂದು ಬೇಡಿಕೊಳ್ಳಬೇಕು. ಮಾರನೆಯ ದಿನ ಏಕದಶಿಯಂದು ಯಾವ ಆಹಾರವನ್ನೂ ತೆಗೆದುಕೊಳ್ಳದೆ ಸಂಪೂರ್ಣ ಉಪೋಷಣೆಗೈದು ಕೇಶವನನ್ನು ಪೂಜಿಸಬೇಕು. ಅಂದು ರಾತ್ರಿ ಭಗವಂತನ ಭಜನೆಮಾಡುತ್ತ ಜಾಗರಣೆ ಮಾಡಬೇಕು. ಪುರಾಣ ಪುಣ್ಯ ಕಥೆಗಳನ್ನು ಶ್ರವಣ ಮಾಡಬೇಕು. ತುಸು ವಿಶ್ರಾಂತಿ ತೆಗೆದು ಕೊಳ್ಳುವದಿದ್ದರೆ ದೇವರಧ್ಯಾನಮಾಡುತ್ತ ನೆಲದ ಮೇಲೆಯೇ ಒರಗಬೇಕು. ನಸುಕಿನಲ್ಲಿಯೇ ದ್ವಾದಶಿ ದಿನ ಎದ್ದು ನದಿಗೆ ಹೋಗಿ ಸ್ನಾನ ಮಾಡಿ ಬರಬೇಕು. ನಾಸ್ತಿಕರ ಮುಖಾವಲೋಕನ ಮಾಡಬಾರದು. ಸಂಧ್ಯಾವಂದನೆ, ಪಿತೃತರ್ಪಣಗಳನ್ನು ಮಾಡಿ ಶೇಷಶಾಯಿಯಾದ ವಿಷ್ಣುವಿಗೆ ನಮಸ್ಕಾರ ಮಾಡಬೇಕು. ಮಣೆಯ ಮುಂಭಾಗದಲ್ಲಿ ಒಂದು ಮಂಟಪವನ್ನು ಮಾಡಿಸಿ, ಅಕ್ಕಿ, ಎಳ್ಳು, ತುಪ್ಪಗಳಿಂದ ವಿಷ್ಣು ದೇವತಾ ಮಂತ್ರ

ಹೇಳಿ, ವೈಷ್ಣವಯಾಗಮಾಡಬೇಕು. ಯಾಗಕ್ಕಾಗಿ ಮೊದಲೇ ನಾಲ್ಕು ಮಾರು ಉದ್ದಗಲ ವೇದಿಕೆಯನ್ನು ನಿರ್ಮಿಸಬೇಕು. ಹತ್ತುಮಾರು ಎತ್ತರದ ಮೇಲೆ ಒಂದು ಅಡ್ಡ ತೊಲೆಯನ್ನು ಹಾಕಬೇಕು. ಅದಕ್ಕೆ ಒಂದು ಬಿಂದಿಗೆಯನ್ನು ಕಟ್ಟಬೇಕು. ಆ ಕಲಶಕ್ಕೆ ಒಂದು ಉದ್ದಿನ ಕಾಳಿನಷ್ಟು ತೂತು ಮಾಡಬೇಕು. ಆ ಕಲಶದಲ್ಲಿ ನೀರನ್ನು ತುಂಬಿ ಅದರ ಕೆಳಗೆ ನೀರಿನ ಧಾರೆಯು ತಲೆಯ ಮೇಲೆ ಬೀಳುವಂತೆ ಕೃಷ್ಣಾಜಿನ ಹಾಸಿಕೊಂಡು ರಾತ್ರಿಯೆಲ್ಲ ಜಲ ಧಾರೆಯನ್ನು ಧರಿಸುತ್ತ ಕೂಡಬೇಕು. ದಕ್ಷಿಣದಲ್ಲಿ ಆ ವೇದಿಕೆಯು ಅರ್ಧಚಂದ್ರಾಕಾರ ಕಾಣುವಂತೆ ಪಶ್ಚಿಮದಲ್ಲಿ ವರ್ತುಲಾಕಾರ, ಉತ್ತರದಲ್ಲಿ ಅರಳಿಎಲೆಯ ಆಕಾರವಾಗಿಯೂ, ಮಧ್ಯದಲ್ಲಿ ಪದ್ಮಾಕಾರ ಕಾಣುವಂತೆ ಯಜ್ಞಮಂಟಪವನ್ನು ರಚಿಸಬೇಕು. ಎರಡನೆಯ ವೇದಿಕೆಯನ್ನು ದೇವರಿಗಾಗಿ ಮಾಡಿಸಬೇಕು. ಅಲ್ಲಿ ಪದ್ಮವನ್ನು ರಚಿಸಿ, ಆ ಪದ್ಮಕೋಶದಲ್ಲಿ ದೇವರನ್ನು ಪ್ರತಿಷ್ಠಾಪಿಸಬೇಕು. ದೇವರ ವೇದಿಕೆಯ ಎದುರು ಅಗ್ನಿಕುಂಡವನ್ನು, ಮೊಳ ಅಗಲ ಉದ್ದನ್ನಾಗಿ ನಿರ್ಮಿಸಬೇಕು. ಅಗ್ನಿಕುಂಡಗಳ ಬಾಯಿ ಸೋಮಸೂತ್ರದಂತೆ ತುಪ್ಪ ಹರಿದು ಹೋಗಲು ಅನುಕೂಲವಾಗಿರಬೇಕು. ದೇವರ ತಲೆಯ ಮೇಲೆ ಒಂದು ಕಲಶ ಸ್ಥಾಪಿಸಿ, ತಳದಲ್ಲಿ ರಂಧ್ರಮಾಡಬೇಕು. ನೀರಿನ ಧಾರೆ ಯಜಮಾನನ ಮೇಲೆ, ಹಾಲಿನ ಧಾರೆ ದೇವರತಲೆಯಮೇಲೆ, ತುಪ್ಪದ ಧಾರೆ ಯಜ್ಞಕುಂಡದ ಮೇಲೆ ಬೀಳುವಂತಿರಬೇಕು. ರಾತ್ರಿಯಲ್ಲಿ ಹಾಲು, ನೀರಿನ ಧಾರೆಗಳು ನಿಲ್ಲದಂತೆ ನೋಡಿಕೊಳ್ಳಬೇಕು. ಹದಿಮೂರು ನೀರಿನ ಕಲಶಗಳನ್ನು ಮಾಡಿ, ಬಿಳಿ ವಸ್ತ್ರ ಹೊದಿಸಿ, ಪಂಚರತ್ನಗಳನ್ನು ಒಳಗೆಹಾಕಿ, ಅತ್ತಿಯಮರದ ಸವಟುಗಳನ್ನು ಅವುಗಳಲ್ಲಿ ಹಾಕಿರಬೇಕು. ಉತ್ತರಕ್ಕೆ ಮುಖಮಾಡಿಕೊಂಡು ಋತ್ವಿಜರು ಹೋಮಮಾಡಬೇಕು. ನಾಲ್ಕು ಯಜುರ್ವೇದಿಗಳು ರುದ್ರಪಾರಾಯಣ, ನಾಲ್ಕು ಸಾಮವೇದಿಗಳು ವೈಷ್ಣವ ಸಾಮ ಮಂತ್ರಗಳನ್ನು ಅರಿಷ್ಟ ವರ್ಗ ಸಹಿತವಾಗಿ ಪಾರಾಯಣ ಮಾಡಬೇಕು. ಒಟ್ಟು ಹನ್ನೆರಡು ಜನ ವೇದ ಪಂಡಿತರಿಂದ ಹೋಮ ಕಾರ್ಯ ನೆರವೇರಿಸಬೇಕು. ಬಟ್ಟೆ, ಮಾಲೆ, ಗಂಧ, ಉಂಗುರ, ಬಳೆ, ಬಂಗಾರದ ಜನಿವಾರ, ಹಾಸಿಗೆ ಮುಂತಾದವುಗಳನ್ನು ಯಥಾಶಕ್ತಿ ದಾನ ಮಾಡಬೇಕು. ಹಿಂದಿನ ರಾತ್ರಿ ದೇವರ ಭಜನೆ, ಹಾಡು, ಮಂಗಳವಾದ್ಯಗಳೊಂದಿಗೆ ಜಾಗರಣೆಯಿಂದ ಕಳೆಯಬೇಕು. ಋತ್ವಿಜರು ಎರಡು ಪಟ್ಟು ಗುರುವಿಗೆ ದಾನ ನೀಡಬೇಕು. ಮಾರನೆಯ ದಿನ ಪ್ರಾತಃಕಾಲದಲ್ಲಿ ಎದ್ದು ಹಿಂಡುವ ಹದಿಮೂರು ಹಸುಗಳನ್ನು ಕಂಚಿನ ಪಾತ್ರೆ ಸಹಿತವಾಗಿ ದಾನ ನೀಡಬೇಕು. ಹಸುಗಳಿಗೆ ಬೆಳ್ಳಿಯ ಗೊರಸು, ಚಿನ್ನದ ಕೊಂಬು ತೊಡಿಸಿ, ಚಂದನ ಲೇಪಿಸಿ ಅಲಂಕರಿಸಬೇಕು. ಯಜ್ಞದಲ್ಲಿ ಭಾಗವಹಿಸಿದ ಹನ್ನೆರಡು ಜನ ಋತ್ವಿಜರನ್ನು, ದ್ವಿಜರನ್ನು ಭಕ್ಷ್ಯ, ಭೋಜ್ಯಗಳಿಂದ ತೃಪ್ತಿಪಡಿಸಬೇಕು. ತಾನು ಉಪ್ಪು, ಖಾರ ಬಿಟ್ಟು ದ್ವಿಜ ಭೋಜನಾ ನಂತರ ಊಟ ಮಾಡಬೇಕು. ಅವರನ್ನು ಮನೆಗೆ ಕಳಿಸುವಾಗ ಎಂಟು ಹೆಜ್ಜೆ ಮಡದಿ-ಮಕ್ಕಳೊಡನೆ ಬೀಳ್ಕೊಟ್ಟು ಬರಬೇಕು. 'ಪ್ರೀಯತಾಂ ಅತ್ರ ಕೇಶವಃ' ಕೇಶವನು ಪ್ರೀತನಾಗಲಿ ಎಂದು ಪರಮಾತ್ಮನಲ್ಲಿ ಕೃತಕಾರ್ಯದಲ್ಲಿ ಸಮರ್ಪಿಸಬೇಕು ಅಂದು ಇತಿಹಾಸ, ಪುರಾಣಗಳ ಶ್ರವಣಮಾಡುತ್ತ ಹಗಲಿರುಳು ಕಳೆಯಬೇಕು. ಹಿಂಸೆ, ಮಾತ್ಸರ್ಯವಿಲ್ಲದೆ ನೀನು ಸತ್ವಗುಣವನ್ನು ಆಶ್ರಯಿಸಿ ಈ ವ್ರತವನ್ನು ಚೆನ್ನಾಗಿ ಮಾಡು. ನೀನು ಇದನ್ನು ಮಾಡಿದರೆ ಇದು ನಿನ್ನ ಹೆಸರಿನಿಂದಲೇ, ಭೀಮದ್ವಾದಶಿ ಎಂದು

ಕರೆಯಲ್ಪಡುತ್ತದೆ. ಈ ವರಾಹ ಕಲ್ಪದಲ್ಲಿ ನೀನೇ ಈ ವ್ರತಕ್ಕೆ ಆದಿ ಪ್ರವರ್ತಕ. ಇದನ್ನು ನೆನೆದು ಒಂದು ಸಲ ಪಠಿಸಿದ್ದರಿಂದ ದೇವೇಂದ್ರನ ದುಃಖಗಳೆಲ್ಲವೂ ದೂರವಾದವು. ಇದಕ್ಕೆ ಕಲ್ಯಾಣಿನೀವ್ರತವೆಂದೂ ಕರೆಯುತ್ತಾರೆ. ಪೂರ್ವಕಲ್ಪದಲ್ಲಿ ಈ ವ್ರತವನ್ನು ಓರ್ವ ಗೊಲ್ಲರ ಹುಡುಗಿಯು, ಒಂದು ದಿನ ಅಪ್ಸರೆಯರು ಮಾಡುವದನ್ನು ಕಂಡಳು. ಅವರಿಂದ ಕೇಳಿ ತಿಳಿದುಕೊಂಡಳು. ತಾನೂ ಕೂಡ ಭೀಮದ್ವಾದಶಿಯನ್ನು ಆಚರಿಸಿದಳು. ಅದರ ಪ್ರಭಾವದಿಂದ ಆ ಗೊಲ್ಲಹುಡುಗೆಯು ಜನ್ಮಾಂತರದಲ್ಲಿ ಅಪ್ಸರ ಕುಲದಲ್ಲಿ ಹುಟ್ಟಿದಳು. ವ್ರತದ ಪ್ರಭಾವದಿಂದ ಆ ಗೊಲ್ಲ ಕನ್ಯೆಯೇ ಈಗ ಊರ್ವಶಿ ಎಂದು ದೇವಲೋಕದಲ್ಲಿ ಸುರಸಮಾಜದಲ್ಲಿ ಗೌರವದಿಂದ ಮೆರೆಯುತ್ತಿದ್ದಳು.

ಪೂರ್ವ ಕಾಲದಲ್ಲಿ ವೈಶ್ಯ ಕುಲದಲ್ಲಿ ಹುಟ್ಟಿದ ಓರ್ವ ಕನ್ಯೆಯು ಭೀಮದ್ವಾದಶಿ ಮಾಡಿ ಈ ಜನ್ಮದಲ್ಲಿ ಶಚೀದೇವಿಯಾಗಿ ದೇವೇಂದ್ರನ ಪಟ್ಟದರಸಿಯಾಗಿದ್ದಾಳೆ. ಆ ಕಾಲದಲ್ಲಿ ಆ ವೈಶ್ಯ ಕನ್ಯೆಯ ಪರಿಚಾರಕಳಾಗಿದ್ದ ಸತ್ಯಭಾಮೆಯು ಈಗ ನನ್ನ ಅತ್ಯಂತ ಪ್ರೀತಿಯ ಮಡದಿಯಾಗಿದ್ದಾಳೆ. ಇಂದ್ರಾದಿ ದೇವತೆಗಳು ಕೂಡ ಈ ದ್ವಾದಶೀ ವ್ರತವನ್ನು ಮಾಡಿ ಇಂತಹ ಸ್ಥಾನ-ಮಾನಗಳನ್ನು ಹೊಂದಿದ್ದಾರೆ. ಇದನ್ನು ಭಕ್ತಿಯಿಂದ ಓದಿದವರು, ಕೇಳಿದವರು ಈ ಜನ್ಮದಲ್ಲಿ ವಿಷ್ಣುಭಕ್ತರಾಗಿದ್ದು ಮರಣಾಂತರ ಇಂದ್ರಾದಿ ಸುರವೃಂದದಿಂದ ಗೌರವಿತರಾಗುತ್ತಾರೆ. ಮೊದಲು ಪೂರ್ವ ಕಲ್ಪದಲ್ಲಿ ಕಲ್ಯಾಣೀನಿವ್ರತ ಎಂದು ಹೆಸರಾದ ಈ ವ್ರತವು ಇಪ್ಪತ್ತೇಳನೆಯ ದ್ವಾಪರಯುಗದ ಕೊನೆಯಲ್ಲಿ ಜನಿಸಿದ ಪುತ್ರ ಭೀಮಸೇನನು ಆಚರಿಸಿದ್ದರಿಂದ ಭೀಮದ್ವಾದಶಿ ಎಂದು ಪ್ರಸಿದ್ಧವಾಗುವದು.

**ಬ್ರಹ್ಮ** :- ಪುರಾಣಗಳಲ್ಲಿ ವರ್ಣಾಶ್ರಮಗಳ ಉತ್ಪತ್ತಿ, ಧರ್ಮಶಾಸ್ತ್ರ ಮತ್ತು ಸದಾಚಾರ ಮೊದಲಾದ ವಿಷಯಗಳನ್ನು ನಾನು ಕೇಳಿದ್ದೇನೆ. ವೇಶ್ಯಾಸ್ತ್ರೀಯರ ಸಮಾಚಾರವನ್ನು ಕೇಳಬೇಕೆಂದು ನನಗೆ ಅಪೇಕ್ಷೆಯಾಗಿದೆ. ಅದರ ನಿಜ ತತ್ವವನ್ನು ಅರುಹು.

**ಪರಮೇಶ್ವರ** :- ಕಮಲದಿಂದ ಸಂಭವಿಸಿದ ಬ್ರಹ್ಮನೆ, ಮುಂದೆ ಬರಲಿರುವ ದ್ವಾಪರ ಯುಗದಲ್ಲಿ ಕೃಷ್ಣನಿಗೆ ಹದಿನಾರು ಸಾವಿರ ಜನ ಮಡದಿಯರು ಇರುವರು. ಮಧುರಕಂಠದ ಕೋಕಿಲಗಳು ಪುಷ್ಪಿತವಾದ ಉಪವನಗಳಲ್ಲಿ ಕುಕಿಲುವಾಗ, ವಸಂತಕಾಲದಲ್ಲಿ ಸುಂದರವಾದ ಹೊಂದಾವರೆಗಳು ಅರಳಿದ ಸರೋವರ ತೀರಗಳ ಲತಾ ಕುಂಜಗಳಲ್ಲಿ ಆ ಎಲ್ಲ ಚೆಲುವೆಯರ ಬಳಗದೊಂದಿಗೆ ಯಾದವ ಕುಲದಲ್ಲಿ ಜನಿಸಿದ ಶ್ರೀ ಕೃಷ್ಣ ಪರಮಾತ್ಮನು ವಿಹಾರಗೈಯುವನು. ಅದೇ ಕಾಲದಲ್ಲಿ ಚಿಗರೆಗಣ್ಣಿನ ಚೆಲುವರಾಜಕುಮಾರನಾದ ಸಾಂಬನು ಸಮೀಪದ ಕಾಲುದಾರಿಯಲ್ಲಿ ನಡೆದಿದ್ದನು. ತನ್ನ ಮೃದುವಾದ ಕೇಶ-ಕಲಾಪಗಳಲ್ಲಿ ಪುಷ್ಪ-ಮಾಲೆಯನ್ನು ಮುಡಿದಿದ್ದನು. ಅವನನ್ನು ನೋಡಿದರೆ ಸಾಕ್ಷಾತ್ ಕಾಮನೇ ಸರ್ವಾಭರಣ ಭೂಷಿತನಾಗಿ ಬಂದಂತೆ ತೋರುತ್ತಿತ್ತು. ತರುಣ ಸಾಂಬನ ರಮಣೀಯವಾದ ರೂಪವನ್ನು ಕಂಡು, ಆ ಕೃಷ್ಣನ ರಮಣೀಯರೆಲ್ಲರೂ ಕಾಮವಶರಾದರು. ತಮ್ಮ ಮನದಲ್ಲಿ ಅವನನ್ನು ಅಪೇಕ್ಷಿಸಿದರು. ತಮ್ಮ ಕುಡಿನೋಟಗಳಿಂದ ಅವನನ್ನು ನೋಡಿದರು. ಅದನ್ನು ಕಂಡು ಕೃಷ್ಣನು ಕಣ್ಣುಮುಚ್ಚಿಕುಳಿತನು. ಅವನ ಧ್ಯಾನ ದೃಷ್ಟಿಗೆ ತನ್ನ ಕಾಮಿನಿಯರ ಚಿತ್ತಚಾಂಚಲ್ಯವು ಸ್ಪಷ್ಟವಾಗಿ ಗೋಚರಿಸಿತು. ಕೂಡಲೇ ಅವನು ತನ್ನ ಮಡದಿಯರಿಗೆ ''ಮಾನಸಿಕವಾಗಿ

ವ್ಯಭಿಚಾರ ಮಾಡಿದ್ದರಿಂದ ಮುಂದೆ ಒಂದು ದಿನ ಕಳ್ಳರು ಬಂದು ನಿಮ್ಮನ್ನು ಅಪಹರಿಸಿಕೊಂಡು ಹೋಗುವರು'' ಎಂದು ಶಾಪಕೊಡುವನು. ಆಗ ಕೃಷ್ಣ ಕಾಮಿನಿಯರೆಲ್ಲರೂ ತಮ್ಮ ಪತಿಯ ಪಾದಹಿಡಿದು ಪಶ್ಚಾತ್ತಾಪ ದಗ್ಧರಾಗಿ 'ಕ್ಷಮಿಸಬೇಕು' ಎಂದು ಬೇಡಿಕೊಂಡರು. ಪರಿಪರಿಯಿಂದ ತನ್ನನ್ನು ಪ್ರಾರ್ಥಿಸಲು ಆ ಕಾಂತಾಮಣಿಗಳಿಗೆ ಕೃಷ್ಣಪರಮಾತ್ಮನು ಕರುಣೆ ತೋರಿ ಮರಳಿ ನುಡಿದನು. ''ಮುಂದೆ, ನಾನು ಪರಂಧಾಮಕ್ಕೆ ಹೋದಬಳಿಕ, ಉತ್ತರಪುರದೇಶದಲ್ಲಿರುವ ಬೆಸ್ತರಕುಲವನ್ನು ಉದ್ಧರಿಸಲಿಕ್ಕಾಗಿ ದಾಲ್ಭ್ಯ ಎಂಬ ಬ್ರಾಹ್ಮಣನು ಬರಲಿರುವನು. ಬ್ರಾಹ್ಮಣ ಪ್ರಿಯನಾನ ಆ ಮಹರ್ಷಿಯು ನಿಮ್ಮನ್ನು ಉದ್ಧರಿಸಲೋಸುಗ ಒಂದು ವ್ರತವನ್ನು ಉಪದೇಶಿಸುವನು. ನೀವು ಅವನು ಹೇಳಿದಂತೆ ನಡೆದರೆ ಉದ್ಧೃತರಾಗುವಿರಿ.

**ಪುಲಸ್ತ್ಯ :-** ಹೀಗೆ ತನ್ನ ಕೈ ಹಿಡಿದ ಕಾಂತೆಯರನ್ನೆಲ್ಲ ಸಂತೈಸಿ, ಭಗವಂತನು ಅಲ್ಲಿಂದ ಹೊರಟು ಹೋದನು. ಮುಂದೆ ಬಹುಕಾಲ ಕಳೆಯಿತು. ಶ್ರೀಕೃಷ್ಣನ ಅವತಾರ ಕಾರ್ಯವು ಮುಗಿಯಿತು. ಯಾದವರಲ್ಲಿ ಅಂತಃಕಲಹವು ಬೆಳೆದು ಮುಸಲಾಯುಧದಿಂದ ಸರ್ವಸಂಹಾರವಾಯಿತು ಶ್ರೀಕೃಷ್ಣನು ಪರಂಧಾಮವನ್ನು ಐದಿದನು. ಯಾದವಕುಲವೆಲ್ಲವೂ ಕ್ಷಯವನ್ನು ಹೊಂದುವುದು. ಕಳ್ಳಕಾರರು ಬಂದು ಕೃಷ್ಣಸಖನಾದ ಅರ್ಜುನನ್ನು ಗೆಲ್ಲುವರು. ಶ್ರೀ ಕೃಷ್ಣನ ಮೆಚ್ಚಿನ ಮಡದಿಯರಾದ ಹದಿನಾರು ಸಾವಿರ ಹೆಂಗಳೆಯರನ್ನೆಲ್ಲ ದುಷ್ಟ ದಸ್ಯುಕುಲದವರು ಅಪಹರಿಸಿಕೊಂಡು ಹೋಗುವರು. ಅವರನ್ನೆಲ್ಲ ತಮ್ಮ ಭೋಗವಸ್ತುವನ್ನಾಗಿ ಮಾಡಿಕೊಳ್ಳುವರು. ದುಷ್ಟರ ಸಂಗದಿಂದ ಆ ಸ್ತ್ರೀಯರೆಲ್ಲರೂ ಅಶುದ್ಧರಾಗಿ ಮನಸ್ಸಿನಲ್ಲೇ ಸಂತಾಪದಿಂದ ಕುದಿಯುವರು. ಅವರ ದುಃಖ ದುರ್ಗತಿಗಳನ್ನು ಕಂಡು ಬ್ರಹ್ಮದೇವನು ದಾಲ್ಭ್ಯ ಎಂಬ ಮಹಾಮುನಿಯನ್ನು ಅವರ ಬಳಿಗೆ ಕಳಿಸಿಕೊಡುವನು. ಆ ಭಗವಂತನು ಭಾರ್ಯೆಯರೆಲ್ಲರೂ ಆ ಮಹರ್ಷಿಯನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ, ಅವನ ಅಡಿದಾವರೆಗಳಿಗೆ ಎರಗುವರು. ಆರ್ತರಾಗಿ ಅವರೆಲ್ಲರೂ ತಮ್ಮ ದುಃಖ ದುರವಸ್ಥೆಗಳನ್ನು ತೋಡಿಕೊಂಡು ಶೋಕಮಾಡುವರು. ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುವುದು. ದ್ವಾರಕಪಟ್ಟಣದಲ್ಲಿ ತಾವು ಪರಮಾತ್ಮನ ಅರಸಿಯರಾಗಿ ಅಂತಃಪುರದಲ್ಲಿ ಇರುವಾಗ ತಾವು ಅನುಭವಿಸಿದ ವಿವಿಧ ಭಾಗ್ಯ ಭೋಗಗಳನ್ನು ನೆನೆದು ಕಣ್ಣೀರು ಕರೆಯುವರು. ಜನರೊಡನೆಯನಾದ ಶ್ರೀ ಕೃಷ್ಣನು ತಮಗೆ ಪತಿಯಾಗಿ ಅಪರಿಮಿತವಾದ ಸುಖವನ್ನು ಕೊಟ್ಟು ಸಾಕಿ ಸಲಹಿದ್ದನ್ನು ಸ್ಮರಿಸಿಕೊಂಡು, ಮತ್ತು ಅವನು ತಮಗೆ ಇರಲು, ಉಣ್ಣಲುಕೊಟ್ಟ ದೊಡ್ಡದೊಡ್ಡ ದಿವ್ಯಭವ್ಯ ಮಂದಿರಗಳನ್ನು ಮುತ್ತುರತ್ನಾದಿ ಆಭರಣಗಳನ್ನು ಬಗೆಬಗೆಯ ಭೋಗ ಭಾಗ್ಯಗಳನ್ನು ಸ್ಮರಿಸಿ ಗೋಳಿಡುವರು. ದ್ವಾರಕೆಯಲ್ಲಿ ವಾಸಿಸಿದ್ದ, ಕೃಷ್ಣಕುಮಾರನನ್ನು ಎಲ್ಲರೂ ನೆನೆಯುವರು. ಹೀಗೆ ಪರಿಪರಿಯಿಂದ ದುಃಖ ಪಟ್ಟು ಕೊನೆಗೆ ಆ ಮುನಿಗೆ ಪ್ರಶ್ನೆ ಮಾಡಿದರು.

''ಪೂಜ್ಯರೆ, ಕುಲಗೇಡಿಗಳಾದ ಕಳ್ಳರು ಭಗವಂತನು ಪರಂಧಾಮಕ್ಕೆ ತೆರಳಿದ ಬಳಿಕ ನಮ್ಮನ್ನು ಅಪಹರಿಸಿದರು ನಾವೇನೋ ಮನಸ್ಸಿನಿಂದ ಪರಿಶುದ್ಧರಾಗಿಯೇ ಇದ್ದೇವೆ' ಆದರೆ ಈ ಚೋರರು ನಮ್ಮನ್ನು ಬಲಾತ್ಕಾರದಿಂದ ಭೋಗಮಾಡಿ ದೂಷಿಸಿದ್ದಾರೆ. ಈ ಅಧರ್ಮದಿಂದ ನಮಗೆ ಬಹಳ ದುಃಖವಾಗಿದೆ. ನಮಗೆ ಈಗ ನೀವೇ ಶರಣು. ಹಿಂದೆ

ನಾವು ಭಗವಂತನನ್ನು ಅಗ್ನಿಸಾಕ್ಷಿಯಾಗಿ ಕೈಹಿಡಿದ ಭಾರ್ಯೆಯರಾಗಿದ್ದೆವು. ಆದರೆ ನಮ್ಮ ಮನಸ್ಸು ಚಂಚಲವಾಗಿ ಅಡ್ಡಹಾದಿ ಹಿಡಿದಿದ್ದರಿಂದ ಆ ಪರಮಾತ್ಮನು ನಮಗೆ ಶಾಪಕೊಟ್ಟಿದ್ದಾನೆ. ಆ ಭಗವಂತನ ಶಾಪದಿಂದಲೇ ನಾವು ಇಂತಹ ಘೋರ ಪಾಪವನ್ನು ಮಾಡುವ ಪ್ರಸಂಗ ಬಂದಿದೆ. ನಾವು ಈಗ ವೇಶ್ಯೆಯರಾದಂತೆ ಆಗಿದ್ದೇವೆ. ವೇಶ್ಯೆಯರಾದರೂ ಕೂಡ ನಮಗೆ ಧರ್ಮಬುದ್ಧಿಉಂಟು. ಆದುದರಿಂದ ವೇಶ್ಯಾ ಧರ್ಮವೆಂದರೆ ಏನು ? ಅದನ್ನಾದರೂ ತಪೋಧನರಾದ ತಾವು ನಮಗೆ ನಿರೂಪಿಸಿರಿ. ಅಂದು ನಮ್ಮ ಸ್ವಾಮಿಯು 'ದಾಲ್ಭ್ಯ ಮುನಿಯು ಬಂದು ನಿಮ್ಮ ಉದ್ಧಾರದ ಮಾರ್ಗತೋರುವನು' ಎಂದು ಸೂಚಿಸಿದ್ದನು. ಅವನ ಆದೇಶದಂತೆ ತಾವು ಇಲ್ಲಿಗೆ ಬಂದಿದ್ದೀರಿ. ನಮಗೆ ಮಾರ್ಗದರ್ಶನ ಮಾಡಿ ಉದ್ಧಾರಮಾಡಿರಿ.

ಕೃಷ್ಣ ಕುಟುಂಬಿನಿಯರ ಈ ಕಳಕಳಿಯ ಪ್ರಾರ್ಥನೆಯನ್ನು ಕೇಳಿ, ದಾಲ್ಭ್ಯ ಮುನಿಗೆ ಕರುಣೆ ತುಂಬಿ ಬಂದಿತು. ಅವನು ವೇಶ್ಯೆಯರಾಗಿ ಪರಿವರ್ತಿತರಾದ, ದುಷ್ಟರ ಬಲಾತ್ಕಾರಕ್ಕೆ ಸಿಲುಕಿ ದೇಹತಃ ದೂಷಿತರಾದ ಆ ಎಲ್ಲ ಕೃಷ್ಣಕಾಮಿನಿಯರಿಗೆ ಉಪದೇಶಗೈದನು.

**ದಾಲ್ಭ್ಯ:-** ಕಾಂತಮಣಿಗಳೆ, ನೀವೆಲ್ಲರೂ ಹಿಂದೆ ಅಪ್ಸರೆಯರು, ಅಗ್ನಿ ಕುಮಾರಿಯರು; ಒಂದು ದಿನ ಮಾನಸ ಸರೋವರದಲ್ಲಿ ನೀವೆಲ್ಲರೂ ಜಲಕ್ರೀಡೆ ಯನ್ನಾಡುತ್ತಿದ್ದೀರಿ. ನೀವೆಲ್ಲರೂ ಜಲವಿಹಾರದಲ್ಲಿ ವಿನೋದ, ವಿಲಾಸಗಳಲ್ಲಿ ಇರುವಾಗ, ನಾರದ ಮುನಿಗಳು ಅಲ್ಲಿಗೆ ಆಗಮಿಸಿದರು. ನೀವು ಆ ಮುನಿಗೆ ನಮಸ್ಕರಿಸಲಿಲ್ಲ. ನಿಮ್ಮ ಮನಸ್ಸಿನಲ್ಲಿ ಮದ ತುಂಬಿತ್ತು. ಉನ್ಮಾದ ತಲೆಗೇರಿತ್ತು. ಆ ಮಹರ್ಷಿಗೆ ಮರ್ಯಾದೆ ಮಾಡದೆ ಉಚ್ಛೃಂಖಲರಾಗಿ ಅವನಿಗೆ ಕೇಳಿದಿರಿ -

''ನಾರಾಯಣನು ನಮಗೆ ಪತಿಯಾಗಿ ಹೇಗೆ ದೊರಕುವನು ? ಅದಕ್ಕೆ ಏನಾದರೂ ಉಪಾಯವಿದ್ದರೆ ಉಪದೇಶಿಸಿರಿ.'' ನಿಮ್ಮ ಉನ್ಮತ್ತ ನಡತೆ ಹಾಗೂ ಕೃಷ್ಣಭಕ್ತಿ ಎರಡನ್ನೂ ಕಂಡು ನಾರದ ಮುನಿಗಳು ನಿಮಗೆ ಶಾಪವನ್ನೂ ವರವನ್ನೂ ಕೂಡಿಯೇ ಕೊಟ್ಟರು.

**ನಾರದ :-** ಚೈತ್ರ, ವೈಶಾಖ ಮಾಸಗಳಲ್ಲಿ ದಿಂಬು, ಮೇಲ್ಹಾಸು ಸಹಿತವಾಗಿ ಎರಡು ಶಯ್ಯಾ ದಾನವನ್ನು ಎಲ್ಲ ಸಲಕರಣೆಗಳೊಂದಿಗೆ ನೀಡಬೇಕು. ವಸಂತ ಋತುವಿನ ಶುಕ್ಲ ಪಕ್ಷ ದ್ವಾದಶಿಗಳಲ್ಲಿ ಸುವರ್ಣದಾನ, ಶಯ್ಯಾದಾನಗಳನ್ನು ಭಕ್ತಿಯಿಂದ ಮಾಡಿದರೆ ಜನ್ಮಾಂತರದಲ್ಲಿ ನಿಮ್ಮ ಅತ್ಯುತ್ಕಟ ಭಕ್ತಿಗೆ ಮೆಚ್ಚಿ, ಭಗವಾನ್ ನಾರಾಯಣನು ನಿಮಗೆ ನಿಶ್ಚಿತವಾಗಿಯೂ ಪತಿಯಾಗಿ ದೊರಕುವನು. ಆದರೆ ನೀವು ನಿಮ್ಮ ಸೌಂದರ್ಯದ ಮದ ಹಾಗೂ ಸೌಭಾಗ್ಯದ ಗರ್ವ ಮತ್ತು ಅಸೂಯೆ ಮುಂತಾದ ದೋಷಗಳಿಂದ ಉನ್ಮತ್ತರಾಗಿ ನನಗೆ ನಮಸ್ಕಾರ ಮಾಡಲಿಲ್ಲ. ಹಾಗೂ ವಿನಯದಿಂದ ನಡೆದುಕೊಳ್ಳಲಿಲ್ಲ. ಆ ದೋಷದಿಂದ ನಿಮಗೆ ನಿಮ್ಮ ಪತಿಯಾದ ಪರಮಾತ್ಮನಿಂದ ವಿಯೋಗವಾಗುವುದು. ಆ ಸ್ವಾಮಿಯು ವೈಕುಂಠವನ್ನು ಕುರಿತು ಪ್ರಯಾಣ ಮಾಡಿದ ಬಳಿಕ ಕಳ್ಳಕಾಕರು ಬಂದು ನಿಮ್ಮನ್ನೆಲ್ಲ ಸೆಳೆದೊಯ್ಯುವರು. ಅವರ ಸಂಪರ್ಕದಿಂದ ನೀವೆಲ್ಲರೂ ಸೂಳೆಯರಾಗುವಿರಿ.

ನಾರದ ಮುನಿಯ ಈ ಶಾಪದಿಂದ ಹಾಗೂ ಕೃಷ್ಣಪರಮಾತ್ಮನ ಕೋಪದಿಂದ ನೀವು ಈಗ ವೇಶ್ಯೆಯರಾದಿರಿ. ಹಿಂದೆ ದೇವದಾನವರಲ್ಲಿ ಭೀಕರವಾದ ಸಂಗ್ರಾಮವು ಆಯಿತಷ್ಟೆ ! ಆ ಯುದ್ಧದಲ್ಲಿ ಲಕ್ಷೋಪಲಕ್ಷ ರಾಕ್ಷಸರು, ದೇವತೆಗಳು ಹತಮೃತರಾಗಿ ಬಿದ್ದರು.

ಆ ಎಲ್ಲ ತರುಣ ಸೈನಿಕರ ರಮಣೀಯರಾದ ತರುಣಿಯರು ಅಸಂಖ್ಯ ಸಂಖ್ಯೆಯಲ್ಲಿ ವಿಧವೆಯರಾದರು. ಹೊಟ್ಟೆಗೆ ಗತಿಯಿಲ್ಲದೆ, ಇರಲು ಸ್ಥಳವಿಲ್ಲದೆ, ಉಡಲು ಬಟ್ಟೆಯಿಲ್ಲದೆ ಅನಾಥರಾಗಿ ತಿರುಗಾಡುವ ಆ ಸುರಾಸುರ ಸುಂದರಿಯರನ್ನು ಕೆಲವು ಕಾಮಿಗಳು ಹಿಡಿದು ಬಲಾತ್ಕಾರದಿಂದ ಭೋಗಿಸಿದರು. ಹೀಗೆ ಅಸಂಖ್ಯ ನಾರಿಯರ ಸತೀತ್ವವು ಕಾಲಮಹಿಮೆ ಯಿಂದ ಕಳೆದುಹೋಗಿ ಅವರೆಲ್ಲರೂ ಸೂಳೆಯರಾಗುವ ಪ್ರಸಂಗ ಬಂದಿತು. ''ಸುಂದರಿಯರೆ, ಇನ್ನು ಮೇಲೆ ನೀವು ವೇಶ್ಯಾಧರ್ಮದಿಂದ ಜೀವಿಸಿರಿ. ಅರಮನೆಗಳಲ್ಲಿ ಹಾಗೂ ದೇವಾಲಯಗಳಲ್ಲಿ ಭಕ್ತಿಯಿಂದ ನೀವು ಸೇವೆ ಸಲ್ಲಿಸಿರಿ. ಅರಸರನ್ನು ಜ್ಞಾನಿಗಳಾದ ದ್ವಿಜರನ್ನು, ಒಡೆಯನಿಗೆ ಸಮನಾಗಿ ಕಾಣಿರಿ. ಅರಮನೆ, ಗುರುಮನೆ, ಸಿರಿಮನೆಗಳನ್ನು ನೀವು ಆಶ್ರಯಿಸಿರಿ. ಅವುಗಳ ಒಡೆಯರು ಕೂಡ ನಿಮ್ಮನ್ನು ಊಳಿಗದ ಆಳುಗಳಂತೆ ಪ್ರೀತಿಯಿಂದ ಕಾಪಾಡಲಿ. ಇದರಿಂದ ನಿಮ್ಮ ಸೌಭಾಗ್ಯವು ಬೆಳೆಯಲಿ, ನೀವು ಒಬ್ಬನನ್ನೇ ನಂಬಿ ನೆಚ್ಚಿ ಕೂಡಬೇಡಿರಿ. ಹಣ ಕೊಡದ ಪುರುಷನಲ್ಲಿ ನೀವು ಪ್ರೀತಿಮಾಡುವದು ಬೇಡ. ದುಡ್ಡು ಕೊಟ್ಟವನು ಹೇಗೇ ಇದ್ದರೂ, ನೀವು ಅವನನ್ನು ಸಂತೋಷದಿಂದ ಆರಾಧಿಸಿರಿ. ದ್ರವ್ಯ ನಿಮ್ಮ ಪ್ರೀತಿಯ ಮುಖ್ಯ ಪ್ರಯೋಜನವಾಗಲಿ. ಹಣ ಕೊಟ್ಟವನು ಕಾಡು, ಕುರೂಪಿ, ದುಷ್ಟ, ಊನ, ಏನೇ ಇರಲಿ ಹೇಗೆ ಇರಲಿ, ಅವನನ್ನು ಅತಿಕ್ರಮಿಸಬಾರದು. ದ್ರವ್ಯ ಕೊಟ್ಟವನ ಜೊತೆಗೆ, ಪ್ರೀತಿಯಿಲ್ಲದೆ ಅಸಡ್ಡೆಯಿಂದ ನಡೆದರೆ ನಿಮಗೆ ಬ್ರಹ್ಮಹತ್ಯಾಪಾಪವು ಬರುವದು. ಹೊಟ್ಟೆಕಿಚ್ಚು, ವಕ್ರಬುದ್ಧಿ ಮುಂತಾದ ದೋಷಗಳು ಇಮ್ಮಲ್ಲಿ ಇರಕೂಡದು. ಕೈಯಲ್ಲಿ ಹಣವನ್ನು ಹಿಡಿದುಕೊಂಡು ಮನೆಗೆ ಬಂದವನು ಶುದ್ಧನಾಗಿರಲಿ, ಡಾಂಭಿಕನಾಗಿರಲಿ, ಕಪಟಿಯಾಗಿರಲಿ, ಅಶುದ್ಧನಾಗರಲಿ, ಹೇಗಿದ್ದರೂ ನೀವು ಮಾತ್ರ ಅವನನನ್ನು ಒಲುಮೆಯಿಂದ ಸತ್ಕರಿಸಬೇಕು. ದೇವತೆಗಳ ಉತ್ಸವ, ಹಬ್ಬ ಹರಿದಿನ, ಪಿತೃತಿಥಿ ಮುಂತಾದ ಪುಣ್ಯ ಪರ್ವಕಾಲಗಳಲ್ಲಿ ನೀವು ನಿಮ್ಮ ಶಕ್ತಿಗೆ ಅನುಗುಣವಾಗಿ ಗೋದಾನ, ಭೂದಾನ, ಹಿರಣ್ಯದಾನ ಧಾನ್ಯದಾನ ಮುಂತಾದವುಗಳನ್ನು ಮಾಡಬೇಕು. ರವಿವಾರ, ಹಸ್ತಾ, ಪುಷ್ಯ, ಪುನರ್ವಸು ನಕ್ಷತ್ರ ಬಂದರೆ ಸ್ತ್ರೀಯರು ಔಷಧಿ ಮಿಶ್ರಿತವಾದ ನೀರಿನಲ್ಲಿ ಸ್ನಾನ ಮಾಡಬೇಕು. ಅಂದು ಕಾಮನಲ್ಲಿ ಪರಮಾತ್ಮನ ಸನ್ನಿಧಾನವು ವಿಶೇಷವಾಗಿರುತ್ತದೆ. ಕಾಮನ ಹೆಸರುಗಳನ್ನು ಹೇಳಿ, ಅಂತರ್ಯಾಮಿಯಾದ ಶ್ರೀಹರಿಯನ್ನು ಪೂಜಿಸಬೇಕು.

| | | | |
|---|---|---|---|
| ಕಾಮಾಯ ನಮಃ | ಎಂದು | ಪಾದಗಳನ್ನು | ಪೂಜಿಸಬೇಕು |
| ಮೋಹಕಾರಿಣೇ ನಮಃ | " | ಮಂಡೆ | " |
| ಕಂದರ್ಪಾಯ ನಮಃ | " | ಪುರುಷೇಂದ್ರಿಯ | " |
| ಪ್ರೀತಿಮತೇ ನಮಃ | " | ಸೊಂಟ | " |
| ಸೌಖ್ಯಪ್ರದಾಯ ನಮಃ | " | ಹೊಕ್ಕಳ | " |
| ಅಭಿರಾಮಾಯ ನಮಃ | " | ಹೊಟ್ಟೆ | " |
| ಪುಷ್ಪಚಾಪಾಯ ನಮಃ | " | ಎಡಪಾರ್ಶ್ವ | " |
| ಪುಷ್ಪಬಾಣಾಯ ನಮಃ | " | ಬಲಪಾರ್ಶ್ವ | " |
| ಅನಂಗಾಯ ನಮಃ | " | ತಲೆ | " |

ಸುಲೋಮಾಯ ನಮಃ " ದೇಹ "

ಸರ್ವಾತ್ಮನೆ ನಮಃ " ಕಿರೀಟ "

ಹೀಗೆ ಅಂಗಾಂಗಳಲ್ಲಿ ಅನಂಗಾಂತರ್ಗತನಾದ ಅಚ್ಯುತನನ್ನು ಪೂಜಿಸಿ ಕೆಳಗಿನ ಮಂತ್ರದಿಂದ ಹರಿ ಮತ್ತು ಲಕ್ಷ್ಮೀದೇವಿಯರ ಪ್ರಾರ್ಥನ ಮಾಡಬೇಕು.

**ನಮಃ ಶ್ರೀಪತಯೇ ತಾರ್ಕ್ಷ್ಯಧ್ವಜಾಂಕುಶಧರಾಯ ಚ ।**
**ಗದಿನೇ ಪೀತವಸ್ತ್ರಾಯ ಶಂಖಚಕ್ರಧರಾಯ ಚ ॥**
**ನಮೋ ನಾರಾಯಣಾಯೇತಿ ಕಾಮದೇವಾತ್ಮನೇ ನಮಃ ।**
**ನಮಃ ಶಾಂತ್ಯೈ ನಮಃ ಪ್ರೀತ್ಯೈ ನಮೋ ರತ್ಯೈ ನಮಃ ಶ್ರಿಯೇ ॥**
**ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ನಮಃ ಸರ್ವಾರ್ಥ ಸಂಪದೇ ॥**

ಹೀಗೆ ಕಾಮರೂಪಿ ವಿಷ್ಣುವನ್ನು ಪ್ರಾರ್ಥಿಸಿ, ಗಂಧ, ದೀಪ, ಧೂಪ, ಮಾಲೆ, ನೈವೇದ್ಯ, ಮಂತ್ರ ಪುಷ್ಪಗಳಿಂದ ಅರ್ಚನೆಮಾಡಬೇಕು. ಅನಂತರ ವೇದ ಪಾರಂಗತನಾದ ಧರ್ಮಶಾಸ್ತ್ರದ ಮರ್ಮವನ್ನು ಅರಿತ ವಿದ್ವಾನ್ ದ್ವಿಜನನ್ನು ಕರೆದು ಕಾಮನನ್ನು ಆಹ್ವಾನಿಸಿ, ''ಅನಂಗಾಯನಮಃ'' ಎಂದು ಪೂಜಿಸಿ, ಅಕ್ಕಿಯ ಕೊಳಗ ತುಪ್ಪದ ಪಾತ್ರೆಗಳನ್ನು ದಾನ ಕೊಡಬೇಕು. 'ಮಾಧವಃ ಪ್ರೀಯತಾಂ' ಎಂದು ಹೇಳಿ ಉಪಚರಿಸಬೇಕು. ಅವನಿಗೆ ಸೇರುವ ಆಹಾರಗಳನ್ನು ನೀಡಬೇಕು. ಪ್ರತಿಕಾರ್ಯದಲ್ಲಿ ಇವನೊಬ್ಬ ಕಾಮನೇ ಎಂದು ತಿಳಿದು ಅವನ ಇಚ್ಛೆಯಂತೆಯೇ ನಡೆಯಬೇಕು. ತನ್ನ ಸರ್ವಸ್ವವನ್ನು ಅವನಿಗೆ ಅರ್ಪಿಸಬೇಕು. ಅವನಿಗೆ ಸುಖವಾಗುವಂತೆ ವಿಲಾಸಗೈಯುತ್ತ ಮಂದಹಾಸದಿಂದ ಯುಕ್ತವಾಗಿ ಮಾತನಾಡಬೇಕು. ಪ್ರತಿ ರವಿವಾರವೂ ಹೀಗೆ ಕಾಮನ ಸೇವೆಮಾಡಿ ದ್ವಿಜರ ಸೇವೆಮಾಡಬೇಕು. ಹೀಗೆ ಹದಿಮೂರು ತಿಂಗಳು ಮಾಡಿ, ಕೊನೆಯ ಮಾಸದಲ್ಲಿ ದಿಂಬು, ಮಗ್ಗಲು ಹಾಸಿಗೆ ಸಹಿತವಾದ ಶಯ್ಯಾದಾನವನ್ನು ಕೊಡಬೇಕು. ಮತ್ತು ದೀಪದಸಮೇತ, ಕೊಡೆ, ಪಾದರಕ್ಷೆ, ಆಸನ, ಚಿನ್ನದ ಜನಿವಾರ, ಉಂಗುರ, ಶುಭ್ರಬಟ್ಟೆ, ಕಡಗ ಮುಂತಾದವುಗಳನ್ನು ದಾನ ಕೊಡಬೇಕು. ದ್ವಿಜರ ಜೊತೆಗೆ ಅವನ ಧರ್ಮಪತ್ನಿಯನ್ನು ಕರೆದು ಧೂಪ, ದೀಪ, ಹೂವು, ಗಂಧ, ಅಕ್ಷತೆ, ಕುಂಕುಮಗಳಿಂದ ಪೂಜಿಸಬೇಕು. ಕಾಮನ ಒಂದು ಪ್ರತಿಮೆ ಮಾಡಿಸಿ ಬೆಲ್ಲ ತುಂಬಿದ ಗಡಿಗೆಯ ಮೇಲೆ ಇಡಬೇಕು. ಆ ಗಡಿಗೆಯನ್ನು ಒಂದು ತಾಮ್ರದ ಪಾತ್ರೆಯಲ್ಲಿಟ್ಟು ಅದಕ್ಕೆ ಬಂಗಾರದ ಕಣ್ಣುಗಳನ್ನು ಮಾಡಿಸಬೇಕು. ಕಂಚಿನ ಪಾತ್ರೆ, ಕಬ್ಬಿನ ಕೋಲು, ಹಿಂಡುವ ಹಸು, ಮುಂತಾದವುಗಳನ್ನು ಕಬ್ಬಿನ ಜಲ್ಲೆಯೊಂದಿಗೆ ದಾನಕೊಡಬೇಕು. ಕಾಮನ ಸುವರ್ಣ ಮೂರ್ತಿಯನ್ನು ತೆಗೆದುಕೊಂಡು ''ಕೋದಾತ್'' ಎಂಬ ವೇದ ಮಂತ್ರವನ್ನು ಹೇಳಬೇಕು. ಅಂತಹ ದ್ವಿಜನಿಗೆ ನಮಸ್ಕಾರ ಮಾಡಿ ಸಂತಸದಿಂದ ಬೀಳ್ಕೊಡಬೇಕು. ಅವನಿಗೆ ದಾನ ಕೊಟ್ಟ ಹಾಸಿಗೆ ಮುಂತಾದವುಗಳನ್ನೆಲ್ಲ ಅವನ ಮನೆಗೆ ಕಳಿಸಬೇಕು. ಅದರ ನಂತರ ರವಿವಾರದಲ್ಲಿ ರಾಗಲಾಲಸನಾಗಿ ಭೋಗಾಶೆಯಿಂದ ಯಾವನೇ ಬಂದರೂ ಅವನನ್ನು ಪ್ರೀತಿಸಬೇಕು. ಹೀಗೆ ಹದಿಮೂರು ತಿಂಗಳು ತಿಂಗಳಿಗೆ ಒಬ್ಬನಂತೆ ಕರೆದು ಅವನನ್ನು ತೃಪ್ತಿಪಡಿಸಿ ಮನೆಗೆ ಕಳಿಸಬೇಕು. ಅವನ ಅಪ್ಪಣೆಯಂತೆ ಬೇರೊಬ್ಬ ಸುಂದರ ಯುವಕನನ್ನು ಕರೆದುಕೊಳ್ಳಬಹುದು ತನಗೆ ಗರ್ಭ, ಮುಟ್ಟು ಸೂತಕಗಳು ಮುಂತಾಗಿ ದೈಹಿಕ ಮಾನಸಿಕ

ವಿಘ್ನಗಳು ಬಂದರೆ ಐವತ್ತು ಜನ ದಂಪತಿಗಳನ್ನು ಕರೆದು ಪೂಜಿಸಬೇಕು. ದೇವರ ಎದುರು ಹಾಡುವದು, ಕುಣಿಯುವದು ಮುಂತಾದವುಗಳನ್ನು ಶ್ರದ್ಧೆಯಿಂದ ಮಾಡಬೇಕು.

ಹಿಂದೆ ದೇವ-ದಾನವರಿಗೆ ದೇವೇಂದ್ರನು ನಿರೂಪಿಸಿದಂತೆ, ವೇಶ್ಯಾ ಧರ್ಮದ ವಿವರ, ಕರ್ತವ್ಯಗಳ ಬಗ್ಗೆ ಹೇಳಿದನು. ಆ ವೇಶ್ಯಾ ಧರ್ಮವು ಈಗ ನಿಮಗೂ ಅನ್ವಯಿಸುತ್ತದೆ. ಈ ವ್ರತದಂತೆ ನೀವು ಇದನ್ನು ಸರಿಯಾಗಿ ಪಾಲಿಸಿದರೆ ಇದರಿಂದ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಇದು ಸ್ತ್ರೀಯರ ಪಾಪಗಳನ್ನು ಪರಿಹರಿಸಿ ಪುಣ್ಯ ಕೊಡುತ್ತದೆ. ಇದು ವೇಶ್ಯಾಜನರಿಗೆ ಸೌಖ್ಯವನ್ನು ಕೊಡುವ ಪುರಾಣೋಕ್ತವಾದ ಧರ್ಮ ಸರ್ವಸ್ವವಾಗಿದೆ. ಯಾವ ನಾರಿಯು ಈ ವ್ರತವನ್ನು ಅಖಂಡವಾಗಿ ಮಾಡಿ ಪೂರ್ತಿ ಮಾಡುತ್ತಾಳೋ ಅವಳು ಮಾಧವನ ಲೋಕವನ್ನು ಸೇರಿ ಪೂಜ್ಯಳಾಗುತ್ತಾಳೆ.

**ಪುಲಸ್ತ್ಯ** :- ಭೀಷ್ಮನೆ, ದಾಲ್ಭ್ಯನು ಹೀಗೆ ಆ ಸ್ತ್ರೀಯರಿಗೆಲ್ಲ ಮಂತ್ರೋಪದೇಶಮಾಡಿ ತನ್ನ ಸ್ಥಾನಕ್ಕೆ ಹೊರಟು ಹೋದನು. ಆ ಹೆಂಗಸರೂ ಅದರಂತೆ ಮಾಡಿದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಅನಂಗದಾನ ವೇಶ್ಯಾವ್ರತ ಎಂಬ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*



ವ್ರತ ಕಥನ

**ಅಧ್ಯಾಯ - ೨೪**

**॥ ಬ್ರಹ್ಮೋವಾಚ ॥**

**ಭಗವನ್ಪುರುಷಸ್ಯೇದಂ ಸ್ತ್ರೀಯಾಶ್ಚ ವಿರಹಾದಿಕಂ ।**
**ಶೋಕವ್ಯಾಧಿಭಯಂ ದುಃಖಂ ನ ಭವೇದ್ಯೇನ ತದ್ವದ ॥**

**ಬ್ರಹ್ಮ** :- ಪೂಜ್ಯರೆ, ಪುರುಷರಿಗಾಗಲಿ, ಸ್ತ್ರೀಯರಿಗಾಗಲಿ ವಿಯೋಗ ದುಃಖ, ರೋಗಾದಿ ಉಪದ್ರವಗಳು ಆಗದಂತೆ ಇರಲು ಯಾವುದಾದರೂ ಒಂದು ವ್ರತವಿದ್ದರೆ ಅದನ್ನು ತಿಳಿಸಬೇಕು.

## ಅಶೂನ್ಯಶಯನದ್ವಿತಿಯಾವ್ರತ

**ಶಂಕರ**:-ಶ್ರಾವಣ ಕೃಷ್ಣ ಬಿದಿಗೆಯ ದಿನ ಕ್ಷೀರ ಸಮುದ್ರದಲ್ಲಿ ಲಕ್ಷ್ಮೀದೇವಿಯ ಜೊತೆಗೆ ವಾಸಮಾಡಿದ ಗೋವಿಂದನನ್ನು ಭಕ್ತಿಯಿಂದ ಪೂಜಿಸಿದರೆ ಮಾನವರ ಇಷ್ಟಾರ್ಥಗಳು ಕೈಗೂಡುತ್ತವೆ. ಆಗ ಗೋದಾನ, ಭೂದಾನ, ಹಿರಣ್ಯದಾನಗಳನ್ನು ಮಾಡಬೇಕು. ಇದಕ್ಕೆ "ಅಶೂನ್ಯಶಯನದ್ವಿತಿಯಾ" ಎಂದು ಹೆಸರು, ಅಂದು ಶ್ರೀಹರಿಯನ್ನು-

**ಶ್ರೀವತ್ಸಧಾಮ ಶ್ರೀಕಾಂತ ಶ್ರೀಧಾಮ ಶ್ರೀಪತೇಽವ್ಯಯ ।**
**ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ॥**
**ಅಗ್ನಯೋ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ದೇವತಾಃ ।**
**ಲಕ್ಷ್ಮ್ಯಾ ವಿಯುಜ್ಯತೇ ದೇವೋ ನ ಕದಾಚಿದ್ಯಥಾ ಹರಿಃ ।**
**ತಥಾ ಕಲತ್ರಸಂಬಂಧೋ ದೇವ ಮೇ ನ ವಿಜಯುಜ್ಯತಾಂ ।**

**ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇಶಯನಂ ಸದಾ ।**
**ಶಯ್ಯಾ ಮಮಾಪ್ಯಶೂನ್ಯಾSಸ್ತು ತಥೈವ ಮಧುಸೂದನ ॥**

ಶ್ರೀ ವತ್ಸ ಚಿಹ್ನವನ್ನು ಎದೆಯಲ್ಲಿ ಧರಿಸಿದ, ಲಕ್ಷ್ಮೀದೇವಿಗೆ ಪತಿಯೂ, ಆಶ್ರಯ ಸ್ಥಾನನೂ, ನಾಶರಹಿತನೂ ಆದ ಶ್ರೀಹರಿಯೆ, ನನ್ನ ಗೃಹಸ್ಥಧರ್ಮವು ಎಂದೂ ನಾಶವಾಗದಿರಲಿ, ಅದರಿಂದ ಧರ್ಮಾರ್ಥಕಾಮಗಳು ಸಿದ್ಧಿಸಲಿ, ನಮ್ಮ ದಾಂಪತ್ಯ ಧರ್ಮದಲ್ಲಿ ವ್ಯತ್ಯಾಸವಾಗದಿರಲಿ, ನನ್ನ ಅಗ್ನಿಕಾರ್ಯಕ್ಕೆ ಲೋಪಬಾರದಿರಲಿ. ನಾನು ಮಾಡುವ ದೇವತಾರಾಧನೆಗೆ ಚ್ಯುತಿಬಾರದಿರಲಿ. ನಾವಿಬ್ಬರು ಗಂಡಹೆಂಡಿರು ಕೂಡಿ ಮಾಡುವ ದೇವತಾಕಾರ್ಯಕ್ಕಾಗಲಿ, ಪಿತೃಕಾರ್ಯಕ್ಕಾಗಲಿ ಎಂದೂ ವಿಚ್ಛೇದನ ವಾಗದಿರಲಿ. ಲಕ್ಷ್ಮೀನಾರಾಯಣರಿಗೆ ಎಂದಾದರೂ ವಿಯೋಗವಾಗುವದುಂಟೆ ? ಅದರಂತೆ ನನಗೂ ಎಂದೂ ನನ್ನ ಮಡದಿಯೊಡನೆ ಇರುವ ಮಧುರ ಸಂಬಂಧಕ್ಕೆ ಚ್ಯುತಿ ಬಾರದಿರಲಿ. ಮಧುಸೂಧನನೆ, ನಿನ್ನ ಹಾಸಿಗೆಯ ಮೇಲೆ ಎಂದಾದರೂ ಲಕ್ಷ್ಮಿಯು ಇಲ್ಲದಂತಾಗುವಳೆ ? ಅದರಂತೆ ನನ್ನ ಶಯನವೂ ಕೂಡ ಪತ್ನಿಯಿಂದ ಎಂದೂ ಶೂನ್ಯವಾಗದಿರಲಿ. ಹೀಗೆ ಪರಮಾತ್ಮನನ್ನು ಸ್ತುತಿಸಬೇಕು. ದೇವರ ಎದುರು ಹಾಡು, ಮಂಗಲವಾದ್ಯ ಮುಂತಾದ ಶುಭಧ್ವನಿಗಳನ್ನು ಮಾಡಬೇಕು. ಗಂಟೆ ಬಾರಿಸಬೇಕು. ಗಂಟೆ ಇರದಿದ್ದರೆ, ಭಜಂತ್ರಿ ಮುಂತಾದ ವಾಲಗ ಸ್ವರವನ್ನು ಊದಿಸಬೇಕು. ಹೀಗೆ ಪೂಜೆ ಮಾಡಿ ರಾತ್ರಿ ಹೊತ್ತು ಎಣ್ಣೆ, ಉಪ್ಪು, ಕಾರಗಳನ್ನು ಬಿಟ್ಟು ಊಟ ಮಾಡಬೇಕು. ಮರುದಿನ ಬೆಳಗಾದ ಬಳಿಕ ಲಕ್ಷ್ಮೀನಾರಾಯಣ ಪ್ರತಿಮೆಗಳನ್ನೂ, ಸಲಕರಣೆಗಳೊಂದಿಗೆ ಹಾಸಿಗೆಯನ್ನೂ ದ್ವಿಜರಿಗೆ ದಾನ ಕೊಡಬೇಕು. ಶಯ್ಯಾದಾನವನ್ನು ಮಡದಿ ಮಕ್ಕಳೊಂದಿಗೆ ಒಡಗೂಡಿದ, ವಿಷ್ಣುಭಕ್ತನಾದ ವೇದ ವಿದ್ವಾಂಸನಿಗೆ ಕೊಡಬೇಕು. ವ್ರತಭ್ರಷ್ಟನಾದ ಅನಾಚಾರಿಗಾಗಲಿ, ಅಂಗಹೀನನಿಗಾಗಲಿ ಕೊಡಬಾರದು. ಇದರ ಜೊತೆಗೆ ಛತ್ರ, ಚಾಮರ, ಆಸನ, ಪಾದರಕ್ಷೆ, ಮುಂತಾದವುಗಳನ್ನು ಕೊಡಮಾಡಬೇಕು. ಹಾಸಿಗೆಯ ಮೇಲೆ ದಂಪತಿಗಳನ್ನು ಕೂಡಿಸಿ, ಅಲಂಕಾರಮಾಡಿ ಪತ್ನಿಗೆ ಭಕ್ಷ್ಯ, ಭೋಜ್ಯ ತುಂಬಿದ ಪಾತ್ರೆಗಳನ್ನೂ ಪತಿಗೆ ಬಂಗಾರದ ಪ್ರತಿಮೆಗಳನ್ನೂ ನೀಡಬೇಕು. ಹೀಗೆ ಜಿಪುಣತನ ಮಾಡದೆ, ಈ ಅಶೂನ್ಯಶಯನವ್ರತ ಮಾಡಿದವರಿಗೆ ಪತ್ನಿಯ ವಿರಹವು ಎಂದೂ ಆಗುವುದಿಲ್ಲ. ಮಕ್ಕಳು ಸಾಯುವುದಿಲ್ಲ. ಐಶ್ವರ್ಯವು ಸವೆಯುವುದಿಲ್ಲ. ಕೊನೆಗೆ ವಿಷ್ಣು ಲೋಕದಲ್ಲಿ ಸುಖದಿಂದ ವಾಸ ಮಾಡುವರು.

## ಅಂಗಾರಕಚತುರ್ಥಿವ್ರತ

**ಬ್ರಹ್ಮ** :- ವಿಷ್ಣುವಿನಲ್ಲಿ ಅಧಿಕ ಭಕ್ತಿಯು ಹೇಗೆ ಉಂಟಾಗುವದು ? ಹಾಗೂ ಧರ್ಮದಲ್ಲಿ ಸ್ಥಿರವಾದ ಬುದ್ಧಿಯು ಮನುಷ್ಯರಿಗೆ ಉಂಟಾಗುವ ಉಪಾಯವು ಯಾವುದು ? ಆರೋಗ್ಯ, ಐಶ್ವರ್ಯಗಳು ದೊರಕುವ ಬಗೆ ಹೇಗೆ ?

**ಈಶ್ವರ** :- ಬ್ರಹ್ಮನೇ, ನೀನು ಈಗ ಪ್ರಶ್ನೆ ಮಾಡಿದ್ದು ಚೆನ್ನಾಗಿದೆ. ಹಿಂದೆ ವಿರೋಚನನಿಗೂ, ಭಾರ್ಗವನಿಗೂ ನಡೆದ ಸಂವಾದವನ್ನು ಹೇಳುತ್ತೇನೆ; ಕೇಳು. ಶುಕ್ರಾಚಾರ್ಯನು ದೈತ್ಯರಾಜ ಪ್ರಲ್ಹಾದನ ಮಗನಾದ ಹದಿನೆಂಟು ವರ್ಷ ವಯಸ್ಸಿನ ವಿರೋಚನನ್ನು ನೋಡಿ, ''ಭಲೆ ಭಲೆ ! ಇದೋ ನಿನ್ನ ರೂಪ ಚೆನ್ನಾಗಿದೆ'' ಎಂದು ನುಡಿದು, ನಕ್ಕು, ಪ್ರಶಂಸೆಗೈದನು.

**ವಿರೋಚನ :-** ಬ್ರಾಹ್ಮಣೋತ್ತಮರೆ, ನನ್ನನ್ನು ನೋಡಿ, ನೀವು ನಕ್ಕದ್ದೇಕೆ ? ನನ್ನ ರೂಪವನ್ನು ಕಂಡು, 'ಭಲೆ ಚೆನ್ನಾಗಿದೆ' ಎಂದು ಉದ್ಗಾರ ತೆಗೆಯಲು ಕಾರಣವೇನು ?

**ಶುಕ್ರ :-** ವಿರೋಚನನೆ, ನಿನ್ನ ವ್ರತದ ಮಹಿಮೆಯನ್ನು ನೋಡಿ ಆಶ್ಚರ್ಯಗೊಂಡು ಹಾಗೆ ನಕ್ಕೆನು. ಹಿಂದೆ ಶಿವನು ಕೋಪದಿಂದ ದಕ್ಷಯಜ್ಞವನ್ನು ಧ್ವಂಸಗೈಯಲು ಹೊರಟನು. ಕ್ರೋಧತಪ್ತನಾದ ಅವನ ಮುಖದಿಂದ ಬೆವರಿನ ಹನಿಗಳು ಉದುರಿ ಬಿದ್ದವು. ಆ ಸ್ವೇದ ಬಿಂದುವು ಕೆಳಗಿನ ಏಳು ಲೋಕಗಳನ್ನು ಸೀಳಿ ಸಪ್ತಸಾಗರವನ್ನೆಲ್ಲ ಒಣಗಿಸಿತು. ಆಗ ಬೆಂಕಿಯಂತೆ ಭಯಂಕರವಾದ ಸಾವಿರಾರು ಕೈಕಾಲು, ಕಣ್ಣು, ಮುಖಗಳುಳ್ಳ ವೀರಭದ್ರನು ಉದ್ಭವಿಸಿದನು. ಅವನು ದಕ್ಷಯಜ್ಞವನ್ನು ನಾಶಗೈದು, ಅಲ್ಲಿರುವ ಪ್ರಾಣಿಗಳನ್ನೆಲ್ಲ ಕೊಂದು, ಪ್ರಪಂಚವನ್ನೆಲ್ಲ ಸುಡತೊಡಗಿದನು. ಆಗ ಹರನು ಅವನನ್ನು ಕರೆದು ನುಡಿದನು.

ಶಿವ:- ವೀರಭದ್ರನೆ, ಸಾಕು ಮಾಡು ಈ ನಿನ್ನ ಸಂಹಾರ ಕಾರ್ಯವನ್ನು, ದಕ್ಷ ಯಜ್ಞವನ್ನು ನೀನು ಈಗಾಗಲೇ ವಿನಾಶಗೈದಿರುವೆ. ಲೋಕಧ್ವಂಸನ ಕಾರ್ಯವನ್ನು ಇನ್ನು ಮುಂದುವರಿಸದೆ, ಇಲ್ಲಿಗೇ ಬಿಟ್ಟುಬಿಡು. ಇನ್ನು ಮುಂದೆ ನೀನು ಗ್ರಹ ಗಣನೆಗಳಲ್ಲಿ ಮೊದಲನೆಯವನಾಗು. ಜನರಿಗೆ ಶಾಂತಿ ನೀಡು. ಅಂಗಾರಕ ಎಂಬ ಹೆಸರಿನಿಂದ ನೀನು ಜನರಿಂದ ಪೂಜೆಗೊಳ್ಳುವಿ. ಚತುರ್ಥಿಯದಿನ ನಿನ್ನನ್ನು ಪೂಜೆಮಾಡಿದವರಿಗೆ ಸೌಂದರ್ಯ, ಆರೋಗ್ಯ, ಐಶ್ವರ್ಯಗಳು ಪ್ರಾಪ್ತವಾಗುತ್ತವೆ. ಶಂಕರನ ಆದೇಶದಂತೆ ವೀರಭದ್ರನು ಶಾಂತನಾಗಿ ಗ್ರಹರೂಪವನ್ನು ತಾಳಿದನು. ಓರ್ವ ಶೂದ್ರನು, ಈ ಅಂಗಾರಕನ ಪೂಜೆ ಮಾಡುತ್ತಿದ್ದನು. ಅದನ್ನು ನೀನು ಕಣ್ತುಂಬ ನೋಡಿದೆ. ಆದುದರಿಂದ ನಿನಗೆ ಇಂತಹ ಸುಂದರವಾದ ರೂಪ ಬಂದಿತು. ವೈರಿಗಳ ಗುಂಪಿಗೆ ನೀನೊಂದು ಬರಸಿಡಿಲಾದೆ. ಆದರಿಂದ ನಿನಗೆ ವಿರೋಚನ ಎಂಬ ಹೆಸರನ್ನು ಇಟ್ಟಿದ್ದಾರೆ. ನಿನ್ನ ಈ ಅಪೂರ್ವ ಸೌಂದರ್ಯಕ್ಕೆ ಅಂಗಾರಕನ ಪೂಜೆಯನ್ನು ನೀನು ಕಣ್ಣಿಂದ ನೋಡಿದ್ದೇ ಕಾರಣ ಆಗಿದೆ. ಅಂಗಾರಕನ ಪೂಜೆಯನ್ನು ನೋಡಿದವರಿಗೆ ಇಂತಹ ಫಲ, ಸೌಂದರ್ಯ ಪ್ರಾಪ್ತವಾದ ಬಳಿಕ ಸ್ವಯಂ ಅಂಗಾರಕನ ಪೂಜೆ ಮಾಡಿದವನಿಗೆ ಎಂತಹ ಫಲ ಬರಬೇಡ ಎಂದು ನನಗೆ ಆಶ್ಚರ್ಯ ವಾಯಿತು. ಆದುದರಿಂದಲೇ ನಾನು ಭಲೆ, ಭಲೆ ಎಂದು ನಿನ್ನನ್ನು ಕಂಡ ಕೂಡಲೇ ನುಡಿದೆನು.

**ಶಂಕರ :-** ಮಹಾತ್ಮರಾದ ಶುಕ್ರಾಚಾರ್ಯರ ಈ ಮಾತನ್ನು ಕೇಳಿ, ಪ್ರಲ್ಹಾದ ಪುತ್ರ ವಿರೋಚನನು ಮತ್ತೆ ಪ್ರಶ್ನೆ ಮಾಡಿದನು.

**ವಿರೋಚನ :-** ಪೂಜ್ಯ ಆಚಾರ್ಯರೆ, ಆ ವ್ರತವನ್ನು ಸರಿಯಾಗಿ ಕೇಳಿ ತಿಳಿದು ಕೊಳ್ಳುವ ಇಚ್ಛೆಯಾಗಿದೆ. ನಾನು ಹಿಂದೆ, ಒಬ್ಬ ಶೂದ್ರನು ಆ ವ್ರತ ಮಾಡುವದನ್ನು, ದಾನ ನೀಡುವದನ್ನು ಕಣ್ಣಿಂದ ನೋಡಿದನೇನೋ ನಿಜ. ಆದರೆ ಆ ವ್ರತದ ಶಾಸ್ತ್ರೋಕ್ತವಾದ ವಿಧಿಯನ್ನು, ಮಹಿಮೆಯನ್ನು, ಸರಿಯಾಗಿ ತಮ್ಮ ಬಾಯಿಂದ ಈಗ ಕೇಳಬೇಕೆಂದಿದ್ದೇನೆ. ವಿಸ್ತಾರವಾಗಿ ತಾವು ನಿರೂಪಿಸಿರಿ.

**ಶುಕ್ರ :-** ಮಂಗಳವಾರ ಚತುರ್ಥಿ ದಿನ ಬಂದಾಗ ಈ ವ್ರತವನ್ನು ಮಾಡಬೇಕು. ಮೃತ್ತಿಕಾಸ್ನಾನಆಡಿ, ಪದ್ಮರಾಗ ಮಣಿಯಿಂದ ಅಲಂಕಾರಮಾಡಿ ಕೊಳ್ಳಬೇಕು. ವ್ರತ ಮಾಡುವವನು ಬ್ರಾಹ್ಮಣನಾಗಿದ್ದರೆ 'ಅಗ್ನಿರ್ಮೂರ್ದಾದಿವಃ' ಎಂಬ ವೇದ ಮಂತ್ರವನ್ನು

ಜಪಿಸಬೇಕು. ಆಗ ಮುಖ ಮಾತ್ರ ಉತ್ತರಕ್ಕಿರಬೇಕು. ಶೂದ್ರನಾಗಿದ್ದರೆ ಅಂಗಾರಕನನ್ನು ಸ್ಮರಿಸಬೇಕು. ಭೋಗ ವಿಲಾಸಗಳನ್ನು ತ್ಯಜಿಸಬೇಕು. ಸೂರ್ಯನು ಅಸ್ತನಾದ ಕೂಡಲೇ, ಮನೆಯ ಅಂಗಳವನ್ನು ಗೋಮಯದಿಂದ ಸಾರಿಸಿ, ಹೂ, ಚಿಗುರು, ಅಕ್ಷತೆಗಳಿಂದ ಅಲಂಕರಿಸಬೇಕು. ಕುಂಕುಮದಿಂದ ಎಂಟು ದಳದ ಪದ್ಮ ಬರೆಯಬೇಕು. ಕುಂಕುಮ ಇಲ್ಲದಿದ್ದರೆ ರಕ್ತಚಂದನದಿಂದ, ನಾಲ್ಕು ಕಲಶಗಳನ್ನು ಭಕ್ಷ್ಯ, ಭೋಜ್ಯಗಳೊಂದಿಗೆ ಇರಿಸಬೇಕು. ನಾಲ್ಕು ಮೂಲೆಗಳಲ್ಲಿ ಮಂತ್ರಾಕ್ಷತೆ, ಫಲಗಳೊಂದಿಗೆ ಆ ಕಲಶಗಳನ್ನು ಇರಿಸಿ, ಗಂಧ ಹೂವುಗಳನ್ನು ಏರಿಸಬೇಕು. ಒಂದು ಅಂಗುಷ್ಠ ಪ್ರಮಾಣದ ನಾಲ್ಕು ತೋಳಿನ ಅಂಗಾರಕ ಪ್ರತಿಮೆಯನ್ನು ತುಪ್ಪ ಸವರಿದ ತಾಮ್ರ ಪಾತ್ರೆಯಲ್ಲಿ ಬೆಲ್ಲದ ಪೆಂಟೆಯ ಮೇಲೆ ಇಡಬೇಕು. ಹಾಲು ಹಿಂಡುವ ಕಪಿಲಗೋ, ಕರೆಯುವ ಪಾತ್ರೆ, ಏಳು ಜತೆ ಬಟ್ಟೆ, ಬಗೆ ಬಗೆಯ ಧಾನ್ಯ ಮುಂತಾದವುಗಳನ್ನು ವೇದಶಾಸ್ತ್ರ ಪಂಡಿತನಾದ ಕುಟುಂಬಿ ದ್ವಿಜನಿಗೆ ದಾನ ಕೊಡಬೇಕು.

**ಭೂಮಿಪುತ್ರ ಮಹಾಭಾಗ ದೇಹೋದ್ಭವ ಪಿನಾಕಿನಃ**
**ರೂಪಾರ್ಥೀತ್ವಾಂ ಪ್ರಪನ್ನೋऽಹಂ ಗೃಹಣಾರ್ಘ್ಯಂ ನಮೋऽಸ್ತುತೇ ॥**

ಮಹಾಭಾಗನಾದ ಭೂಮಿಪುತ್ರನೇ, ಪಿನಾಕಿಯ ದೇಹದಿಂದ ಹುಟ್ಟಿದವನೆ, ನಾನು ರೂಪಾರ್ಥಿಯಾಗಿ ನಿನಗೆ ಶರಣು ಹೊಕ್ಕಿದ್ದೇನೆ. ಅರ್ಘ್ಯವನ್ನು ತೆಗೆದುಕೊ. ನಿನಗೆ ನಮಸ್ಕಾರ.

**ಕುಜಾಯ ಲೋಹಿತಾಂಗಾಯ ಗ್ರಹಮಧ್ಯಸ್ಥಿತಾಯ ಚ ।**
**ಕಾರ್ತಿಕೇಯಾನುರೂಪಾಯ ಸುರೂಪಾಯ ನಮೋ ನಮಃ ॥**

ಕುಜನಿಗೆ, ಕೆಂಪು ಮೈಯುಳ್ಳವನಿಗೆ, ಗ್ರಹಗಳ ಮಧ್ಯದಲ್ಲಿರುವವನಿಗೆ, ಕುಮಾರ ಸ್ವಾಮಿಗೆ ಅನುರೂಪವಾದವನಿಗೆ ಸುರೂಪ ಉಳ್ಳವನಿಗೆ ನಮಸ್ಕಾರವು.

**ಶಿವಲಲಾಟಸಂಭೂತ ಧರಣೀಗರ್ಭಸಂಭವ ।**
**ರೂಪಾರ್ಥೀತ್ವಾಂ ಪ್ರಪನ್ನೋऽಸ್ಮಿ ಗೃಹಾಣಾರ್ಘ್ಯಂ ನಮೋऽಸ್ತುತೇ ॥**

ಶಿವನ ಹಣೆಯಿಂದ ಹುಟ್ಟಿದವನೆ, ಭೂಮಿಯ ಗರ್ಭದಲ್ಲಿ ಹುಟ್ಟಿದವನೆ, ನಾನು ರೂಪವನ್ನು ಅಪೇಕ್ಷಿಸಿ ನಿನಗೆ ಶರಣು ಬಂದಿದ್ದೇನೆ. ಅರ್ಘ್ಯವನ್ನು ತೆಗೆದುಕೊ, ನಿನಗೆ ನಮಸ್ಕಾರವು. ಈ ಮಂತ್ರಗಳಿಂದ ಅಂಗಾರಕನಿಗೆ ಅರ್ಘ್ಯಕೊಟ್ಟು, ದ್ವಿಜನನ್ನು ಕೆಂಪು ಹೂ, ಕೆಂಬಟ್ಟೆಗಳಿಂದ ಅಲಂಕರಿಸಿ ಪೂಜಿಸಬೇಕು. ಬಂಗಾರದ ಅಂಗಾರಕ ಪ್ರತಿಮೆಯನ್ನು ಎರಡು ಹಸುಗಳನ್ನು, ಉಪಕರಣಗಳಿಂದ ಕೂಡಿದ ಹಾಸಿಗೆಯನ್ನು ಆ ದ್ವಿಜನಿಗೆ ದಾನಕೊಡಬೇಕು. ಅಂದು ರಾತ್ರಿ ಉಪ್ಪು, ಕಾರಗಳಿಲ್ಲದೆ ಬಾಂಧವ ರೊಂದಿಗೆ ಭೋಜನ ಮಾಡಬೇಕು. ಹೀಗೆ ಎಂಟು ಅಂಗಾರ ಚತುರ್ಥಿ ದಿನಗಳಂದು ಈ ವ್ರತವನ್ನು ಮಾಡಿದವನು ಏಳು ಕಲ್ಪಕಾಲ ರುದ್ರಲೋಕದಲ್ಲಿ ಸುಖದಿಂದ ಇರುತ್ತಾನೆ. ಆದುದರಿಂದ ದೈತ್ಯರಾಜನೆ ನೀನೂ ಕೂಡ ಈ ವ್ರತವನ್ನು ಮಾಡು.

**ಪುಲಸ್ತ್ಯ** :- ಹೀಗೆ ಹೇಳಿ ಶುಕ್ರಾಚಾರ್ಯರು ಹೊರಟು ಹೋದರು. ಅನಂತರ ವಿರೋಚನನು ಅದರಂತೆ ಮಾಡಿದನು. ಈ ವ್ರತವನ್ನು ಒಮ್ಮನಸ್ಸಿನಿಂದ ಕೇಳಿದವರು ಸರ್ವಸಿದ್ಧಿ ಪಡೆಯುವರು.

## ಆದಿತ್ಯಶಯನ ವ್ರತ

**ಭೀಷ್ಮ :-** ಉಪವಾಸ ಮಾಡಲು ಶಕ್ತಿ ಇಲ್ಲದವರು; ಅಥವಾ ಅಭ್ಯಾಸ ಇಲ್ಲದವರು ಹಾಗೂ ರೋಗಿಗಳು ಇಂತಹದೇ ಫಲವನ್ನು ಹೊಂದಬೇಕಾದರೆ ಎಂತಹ ವ್ರತ ಮಾಡಬೇಕು ? ತಿಳಿಸಿರಿ.

**ಪುಲಸ್ತ್ಯ :-** ಉಪೋಷಣಮಾಡಲು ಆಗದವರು ರಾತ್ರಿ ಫಲಾಹಾರವನ್ನು ಮಾಡಬಹುದೆಂದು ಹೇಳಿದ್ದಾರೆ. ಇಂತಹ ಒಂದು ಮಹತ್ತರವಾದ ವ್ರತವಿದೆ ಅದಕ್ಕೆ ಆದಿತ್ಯಶಯನವ್ರತವೆಂದು ಹೆಸರು. ಶಂಕರನ ಪೂಜೆಯೇ ಅದರಲ್ಲಿ ಮುಖ್ಯ. ಭಾನುವಾರ ಸಪ್ತಮಿ ದಿನ ಹಸ್ತಾನಕ್ಷತ್ರ ಕೂಡಿದಾಗ ಇಲ್ಲವೆ, ಸೂರ್ಯನಿಗೆ ಸಂಕ್ರಾಂತಿ ಕಾಲ ವಿದ್ದಾಗ, ಈ ವ್ರತವನ್ನು ಮಾಡಬೇಕು. ಸೂರ್ಯನ ಹೆಸರುಗಳಿಂದ ಪಾರ್ವತೀ ಪರಮೇಶ್ವರರನ್ನು ಶಿವಲಿಂಗದಲ್ಲಿ ಭಕ್ತಿಯಿಂದ ಪೂಜಿಸಬೇಕು. ಶಿವನಿಗೂ ಸೂರ್ಯನಿಗೂ ಭೇದವೇ ಇಲ್ಲ. ಅದುದರಿಂದ ಮನೆಯಲ್ಲಿಯೇ ಸೂರ್ಯನನ್ನು ಅಂದು ಪೂಜಿಸಬೇಕು. ಹಸ್ತಾನಕ್ಷತ್ರದ ದಿನ ಸೂರ್ಯಾಯ ನಮಃ ಎಂದು ಪಾದಗಳನ್ನು ಚಿತ್ರಾ ನಕ್ಷತ್ರದ ದಿನ ಅರ್ಕಾಯನಮಃ ಎಂದು ಪೂಜಿಸಬೇಕು.

| ನಕ್ಷತ್ರ | ಸೂರ್ಯನ ಹೆಸರುಗಳು | | ಅವಯವ | |
|---|---|---|---|---|
| ಚಿತ್ರಾ | ಅರ್ಕಾಯ ನಮಃ | | ಹಿಮ್ಮಡಗಳನ್ನು | ಪೂಜಿಸಬೇಕು |
| ಸ್ವಾತಿ | ಪುರುಷೋತ್ತಮಾಯ ನಮಃ | | ಮಂಡೆ | " |
| ವಿಶಾಖಾ | ಧಾತ್ರೆ | " | ಮೊಳಕಾಲು | " |
| ಅನುರಾಧಾ | ಸಹಸ್ರಭಾನವೇ | " | ತೊಡೆ | " |
| ಜ್ಯೇಷ್ಠಾ | ಅನಂಗಾಯ | " | ಗುಹ್ಯ | " |
| ಮೂಲಾ | ಇಂದ್ರಾಯ | " | ಸೊಂಟ | " |
| ಪೂ. ಆಷಾಡ | | | | |
| ಉ. ಆಷಾಡ | ಭೀಮಾಯ | " | ನಾಭಿ | " |
| ಶ್ರವಣಾ | ತಿಕ್ಷ್ಣಾಂಶವೇ | " | ಕುಕ್ಷಿ | " |
| ಧನಿಷ್ಠಾ | ವಿಕರ್ತನಾಯ | " | ಎರಡೂ ಪಾರ್ಶ್ವ | " |
| ಶತಭಿಷ್ಠಾ | ಧ್ವಾಂತನಾಶನಾಯ | " | ಎದೆ | " |
| ಪೊರ್ವೋತ್ತರಾಭಾದ್ರ | ಚಂಡಕಾಯಾಯ | " | ಬಾಹು | " |
| ರೇವತೀ | ಸಾಮ್ನಾಮಧೀಶಾಯ | " | ಕೈಗಳು | " |
| ಅಶ್ವಿನೀ | ಸಪ್ತಾಶ್ವಧುರಂಧರಾಯ | " | ನಖ (ಉಗುರು) | " |
| ಭರಣೀ | ದಿವಾಕರಾಯ | " | ಕೊರಳು | " |
| ಕೃತ್ತಿಕಾ | ಕೃತ್ತಿವಾಸಾಯ | " | ಕುತ್ತಿಗೆ | " |
| ರೋಹಿಣೀ | ರುದ್ರಾಯ | " | ತುಟಿ | " |
| ಮೃಗಶಿರಾ | ಮೃಗಾಂಕಶೀರ್ಷಾಯ | " | ನಾಲಿಗೆ | " |
| ಆರ್ದ್ರಾ | ಹರಯೇ | " | ಹಲ್ಲು | " |
| ಪುನರ್ವಸು | ಸವಿತ್ರೆ | " | ಮೂಗು | " |

| | | | |
|---|---|---|---|
| ಪುಷ್ಯ | ಅಂಬೋಜವಲ್ಲಭಾಯ " | ಹಣೆ | " |
| ಆಶ್ಲೇಷಾ | ಮೇಷಶರೀರಧಾರಿಣೇ " | ಮುಂಗುರುಳು | " |
| ಮಘಾ | ವಿಬುಧಪ್ರಿಯಾಯ " | ತಲೆ | " |
| ಪೂರ್ವಾ | ಗೋಬ್ರಾಹ್ಮಣನಂದಾಯ" | ಕಿವಿ | " |
| ಉತ್ತರ ಫಾಲ್ಗುಣಿ | ವಿಶ್ವೇಶ್ವರಾಯ " | ಹುಬ್ಬು | " |

ಹೀಗೆ ಆವಾಹನೆಮಾಡಿ ಶಂಕರನನ್ನು ಪೂಜೆ ಮಾಡಬೇಕು. ಕೊನೆಗೆ -

**ನಮೋಽಸ್ತು ಪಾಶಾಂಕುಶ ಪದ್ಮಶೂಲ ।**
**ಕಪಾಲಸರ್ಪೇಂದು ಧನುರ್ಧರಾಯ ॥**
**ಗಯಾಸುರಾನಂಗಪುರಾಂಧಕಾದಿ ।**
**ವಿನಾಶಮೂಲಾಯ ನಮಃಶಿವಾಯ ॥**

ಹೀಗೆ ಪ್ರಾರ್ಥನೆ ಗೈದು, ಎಣ್ಣೆ, ಮಾಂಸ, ಉಪ್ಪು, ಖಾರಗಳನ್ನು ಬಿಟ್ಟು ಊಟ ಮಾಡಬೇಕು. ಪುನರ್ವಸು ನಕ್ಷತ್ರದಂದು ದ್ವಿಜರನ್ನು ಕರೆದು ಒಂದು ಕೊಳಗ ಅಕ್ಕಿಯನ್ನು, ತುಪ್ಪದ ಪಾತ್ರೆಯೊಂದಿಗೆ ದಾನ ಕೊಟ್ಟ ಮೇಲೆ ದಕ್ಷಿಣೆಯನ್ನು ನೀಡಬೇಕು. ಈ ವ್ರತವನ್ನು ಮಾಡುವವನು ವರ್ಷದ ಮಧ್ಯದಲ್ಲಿ ಜೋಡುವಸ್ತ್ರ, ಕೊನೆಯಲ್ಲಿ ದ್ವಿಜರಿಗೆ ಅನ್ನಸಂತರ್ಪಣೆಯನ್ನು ವಿಶೇಷವಾಗಿ ಮಾಡಿಸಬೇಕು. ಮತ್ತು ಶುದ್ಧ ಚಿನ್ನದಿಂದ ಎಂಟು ಅಂಗುಲದ ಎಂಟು ದಳಗಳುಳ್ಳ ಪದ್ಮವನ್ನುಮಾಡಿ ಹಾಸಿಗೆಯೊಂದಿಗೆ ದಾನ ಕೊಡಬೇಕು. ಅದರೊಡನೆ ಆಸನ, ಕೊಡೆ, ಕನ್ನಡಿಗಳನ್ನು, ಹಿಂಡುವ ಪಾತ್ರೆ, ಬೆಳ್ಳಿಯ ಗೊರಸು, ಚಿನ್ನದ ಗೊಣಸುಗಳಿಂದ ಕೂಡಿದ ಹಿಂಡುವ ಹಸುವನ್ನು ಮಂತ್ರಪೂರ್ವಕವಾಗಿ ದ್ವಿಜನಿಗೆ ದಾನ ನೀಡಬೇಕು. ಆದಿತ್ಯ ಶಯನವು ಅಶೂನ್ಯವಾಗಿರುವಂತೆ, ಕಾಂತಿ ಧೈರ್ಯ ಶ್ರೀ ಪುಷ್ಟಿಗಳಿಂದ ನನ್ನ ಜೀವನವು ಅಶೂನ್ಯವಾಗಿರಲಿ - ಅಂದರೆ ಇವುಗಳಿಂದ ಸದಾ ತುಂಬಿರಲಿ ಎಂದು ಪ್ರಾರ್ಥಿಸಬೇಕು. ಪ್ರದಕ್ಷಿಣೆಮಾಡಿ, ನಮಸ್ಕರಿಸಿ, ದ್ವಿಜರನ್ನು ಬೀಳ್ಕೊಟ್ಟು, ಅವರಿಗೆ ಕೊಟ್ಟ ಹಸು, ಹಾಸಿಗೆಗಳನ್ನು ಅವರ ಮನೆಯವರೆಗೆ ತಾನೇ ಮುಟ್ಟಿಸುವ ಏರ್ಪಾಟು ಮಾಡಬೇಕು. ಸ್ತ್ರೀಯರು ಇದನ್ನು ಭಕ್ತಿಯಿಂದ ಮಾಡಿದರೆ, ಅವರಿಗೆ ಗಂಡನಿಂದಾಗಲಿ, ಮಕ್ಕಳಿಂದಾಗಲಿ, ಬಂಧುಗಳಿಂದಾಗಲಿ ವಿಯೋಗವಾಗುವುದಿಲ್ಲ. ಪುರುಷರು ಮಾಡಿದರೆ ಪತ್ನೀ-ಪುತ್ರರಿಂದ ವಿಯೋಗವಾಗುವದಿಲ್ಲ. ವಶಿಷ್ಠ, ಕಾರ್ತಿವೀರ್ಯ, ಕುಬೇರ, ಇಂದ್ರಾದಿಗಳು ಹಿಂದೆ ಈ ವ್ರತವನ್ನು ಮಾಡಿ ಶ್ರೇಯೋಭಾಗಿಗಳಾಗಿದ್ದಾರೆ. ಈ ಸೂರ್ಯ ವ್ರತವನ್ನು ಮಾಡಿದವರು, ಓದಿದವರು ಕೇಳಿದವರು ನರಕದಲ್ಲಿ ಬಿದ್ದಿರುವ ತಮ್ಮ ಪಿತೃಗಳನ್ನು ಉದ್ಧರಿಸಿ, ತಾವು ಕೂಡ ಸ್ವರ್ಗ ಪದವಿಯನ್ನು ಹೊಂದುತ್ತಾರೆ.

## ರೋಹಿಣೀಚಂದ್ರಶಯನ ವ್ರತ

**ಭೀಷ್ಮ :-** ದೀರ್ಘಾಯುಷ್ಯ, ಆರೋಗ್ಯ, ಕುಲವೃದ್ಧಿ, ರೂಪ, ಕುಲಸದ್ಬುದ್ಧಿ ಮುಂತಾದವುಗಳು ದೊರಕಬೇಕಾದರೆ, ಯಾವ ವ್ರತವನ್ನು ಮಾಡಬೇಕು ತಿಳಿಸಿರಿ.

**ಪುಲಸ್ತ್ಯ :-** ನೀನು ಚೆನ್ನಾಗಿ ಪ್ರಶ್ನೆ ಮಾಡಿದೆ. ಅಕ್ಷಯ ಸ್ವರ್ಗ ಪ್ರಾಪ್ತಿಗೆ ಕಾರಣವಾದ ರೋಹಿಣೀ ಚಂದ್ರಶಯನ ವ್ರತವನ್ನು ನಿನಗೆ ಹೇಳುತ್ತೇನೆ ಕೇಳು. ಅಂದು ಚಂದ್ರನ

ನಾಮಗಳಿಂದ ಚಂದ್ರಾಂತರ್ಯಾಮಿಯಾದ ನಾರಾಯಣದೇವರನ್ನು ಪೂಜಿಸಬೇಕು. ಶುಕ್ಲಪಕ್ಷ ಸೋಮವಾರ ಹುಣ್ಣಿಮೆ ತಿಥಿ ಬಂದರೆ ಅಥವಾ ಹುಣ್ಣಿಮೆ ದಿನ ರೋಹಿಣೀ ನಕ್ಷತ್ರ ಬಂದರೆ ಅಂದು ಈ ವ್ರತಮಾಡಬೇಕು. ಪಂಚಗವ್ಯದಿಂದ ಸ್ನಾನಮಾಡಿ ''ಅಪ್ಯಾಯಸ್ವ'' ಎಂಬ ಮಂತ್ರವನ್ನು ನೂರೆಂಟು ಸಲ ಜಪಿಸಬೇಕು. ಶೂದ್ರನಾಗಿದ್ದರೆ ದೇವರ ನಾಮಸ್ಮರಣೆ ಮಾಡುತ್ತ ಸ್ನಾನಮಾಡಬೇಕು. ನಾಸ್ತಿಕರೊಡನೆ ಮಾತನಾಡಬಾರದು. ''ವಿಷ್ಣುವೇ ನಮಃ, ಸೋಮಾಯ ನಮಃ, ವರದಾಯ ನಮಃ, ಎಂದು ನಮಸ್ಕರಿಸಿ, ಸ್ನಾನ ಮಾಡಿ ಶ್ರೀ ಹರಿಯನ್ನು ಚಂದ್ರನಾಮಗಳಿಂದ ಫಲಗಳನ್ನು ನಿವೇದಿಸಿ ಹೂಗಳಿಂದ ಪೂಜಿಸಬೇಕು.

| ಚಂದ್ರನ ಹೆಸರುಗಳು | | ಅವಯವ | |
|---|---|---|---|
| ಸೋಮಾಯ | ನಮಃ | ಪಾದ | ಪೂಜಿಸಬೇಕು. |
| ಅನಂತಧಾಮ್ನೇ | " | ಮೊಳಕಾಲು ಮಂಡಿ | ಪೂಜಿಸಬೇಕು |
| ಜಲೋದರಾಯ | " | ಎರಡು ತೊಡೆ | " |
| ಅನಂತಬಾಹವೇ | " | ಗುಹ್ಯ | " |
| ಕಾಮಸುಖದಾಯ | " | ಸೊಂಟ | " |
| ಅಮೃತೋದರಾಯ | " | ಹೊಟ್ಟೆ | " |
| ಶಶಾಂಕಾಯ | " | ಹೊಕ್ಕಳು | " |
| ಚಂದ್ರಾಯ | " | ಮುಖ | " |
| ದ್ವಿಜಾಧಿಪಾಯ | " | ಹಲ್ಲು | " |
| ಚಂದ್ರಮಸೇ | " | ಬಾಯಿ | " |
| ಕುಮುದವನ ಪ್ರಿಯಾಯ | " | ತುಟಿ | " |
| ವನೌಷಧಿನಾಥಾಯ | " | ಮೂಗು | " |
| ಆನಂದ ಬೀಜಾಯ | " | ಹುಬ್ಬು | " |
| ಇಂದೀವರ ವಿಕಾಸಕರಾಯ | " | ಕಣ್ಣು | " |
| ಸುರಾಸುರ ವಂದ್ಯಾಯ | " | ಕಿವಿ | " |
| ದೈತ್ಯನಿಷೂದನಾಯ | " | ಹಣೆ | " |
| ಉದಧಿಪ್ರಿಯಾಯ | " | ಕೂದಲು | " |
| ಶಶಾಂಕಾಯ | " | ತಲೆ | " |
| ವಿಶ್ವೇಶ್ವರಾಯ | " | ಕಿರೀಟ | " |

ರೋಹಿಣೀನಾಮ ಲಕ್ಷ್ಮೀ ಸೌಭಾಗ್ಯಪ್ರದಾಯ ನಮಃ ಸರ್ವಾಂಗಗಳನ್ನು''

ಸುಗಂಧಿ ಹೂಗಳಿಂದ, ಧೂಪ, ದೀಪಗಳಿಂದಲೂ ಚಂದ್ರಪತ್ನಿ ರೋಹಿಣಿಯನ್ನು ಪೂಜಿಸಬೇಕು. ಮರುದಿನ ಬೆಳಿಗ್ಗೆ ಎದ್ದು ಸ್ನಾನಮಾಡಿ, ಹೋಮ-ಹವನಾದಿಗಳನ್ನು ಮಾಡಿ ''ನಮಃಪಾಪವಿನಾಶನಾಯ'' ಎಂದು ಹೇಳಿ ದ್ವಿಜರಿಗೆ ಕಲಶ ದಕ್ಷಿಣೆಗಳನ್ನು ಕೊಡಬೇಕು. ಗೋಮೂತ್ರ ಪ್ರಾಶನಮಾಡಿ, ಮದ್ಯ, ಮಾಂಸ, ಉಪ್ಪು, ಖಾರಗಳನ್ನು ವರ್ಜಿಸಿ, ಮಿತಾಹಾರವನ್ನು ಮಾಡಬೇಕು. ಎಂಟು ದೊಡ್ಡ ದೊಡ್ಡ ಅಥವಾ ಇಪ್ಪತ್ತು ಚಿಕ್ಕ

ತುತ್ತುಗಳನ್ನು ತುಪ್ಪ ಬೆರೆಸಿ ಊಟ ಮಾಡಬೇಕು. ಭೋಜನಾನಂತರ ಸತ್ಕಥಾ ಶ್ರವಣ ಮಾಡಬೇಕು. ಸಂಪಿಗೆ, ಮಲ್ಲಿಗೆ, ಜಾಜಿ ಮುಂತಾದ ಹೂಗಳನ್ನು ಏರಿಸಿ, ಚಂದ್ರನ ಪೂಜೆ ಮಾಡಬೇಕು. ಶ್ರಾವಣಮಾಸದಿಂದ ಆರಂಭಿಸಿ ಒಂದು ವರ್ಷದವರೆಗೆ ಪೂರ್ವೋಕ್ತ ತಿಥಿ, ನಕ್ಷತ್ರಗಳಲ್ಲಿ ಈ ವ್ರತವನ್ನು ಮಾಡಬೇಕು. ವ್ರತ ಸಮಾಪ್ತಿಯ ನಂತರ ಆರುಅಂಗುಲ ಚಿನ್ನದ ಚಂದ್ರನಮೂರ್ತಿಯನ್ನೂ ನಾಲ್ಕು ಅಂಗುಲ ರೋಹಿಣೀ ಪ್ರತಿಮೆಯನ್ನೂ ಮಾಡಿಸಿ, ಎಂಟು ಮುತ್ತುಗಳನ್ನು ತೊಡಿಸಿ, ಶುಭ್ರವಸ್ತ್ರ ಧರಿಸಿ, ಹಾಲಿನ ಕಲಶದ ಮೇಲಿಟ್ಟು, ಅಕ್ಕಿ ತುಂಬಿದ ಕಂಚಿನಪಾತ್ರೆ, ಅಕ್ಷತೆಯ ಪಾತ್ರೆ, ಕಬ್ಬು, ಹಣ್ಣುಗಳೊಂದಿಗೆ ಪೂರ್ವಾಹ್ನದಲ್ಲಿ ದಾನಕೊಡಬೇಕು. ಅಲಂಕೃತವಾದ ಬಿಳಿ ಹಸುವನ್ನು, ಶಂಖ, ಹಿಂಡುವ ಪಾತ್ರೆ ಸಹಿತವಾಗಿ ದ್ವಿಜ ದಂಪತಿಗಳಿಗೆ ದಾನಕೊಡಬೇಕು. ಚಂದ್ರನೇ ದ್ವಿಜರೂಪದಿಂದ ಬಂದಿದ್ದಾನೆ ಎಂದು ಭಾವಿಸಬೇಕು. 'ಚಂದ್ರಾಂತ ರ್ಗತನಾದ ಕೃಷ್ಣನೆ, ರೋಹಿಣಿಯು ನಿನ್ನ ಹಾಸಿಗೆಯನ್ನು ಬಿಟ್ಟು ಹೇಗೆ ಹೋಗುವದಿಲ್ಲವೋ ನೀನು ಹೇಗೆ ಆನಂದ, ಮುಕ್ತಿಯನ್ನು ಎಲ್ಲರಿಗೂ ಕೊಡುವಿಯೊ ಹಾಗೆ ನನಗೂ ಆನಂದವನ್ನು ದಯಪಾಲಿಸು. ಐಶ್ವರ್ಯವನ್ನು ನೀಡು. ಇಷ್ಟ ಜನರಿಂದ ವಿಯೋಗ ಆಗದಂತೆ ಮಾಡು. ನಿನ್ನಲ್ಲಿ ದೃಢವಾದ ಭಕ್ತಿ ಉಂಟಾಗುವಂತೆ ಅನುಗ್ರಹಿಸು'' ಎಂದು ಪ್ರಾರ್ಥಿಸಬೇಕು. ಈ ವ್ರತವನ್ನು ಮಾಡಿದವನು ಪಿತೃಗಳಿಗೆ ಸಂತೋಷವನ್ನುಂಟು ಮಾಡಿ ಅನೇಕ ಕಲ್ಪ ಕಾಲ ತ್ರಿಲೋಕಾಧಿಪತಿಯಾಗಿ ಕೊನೆಗೆ ಚಂದ್ರಲೋಕವನ್ನು ಹೊಂದಿ ಅಲ್ಲಿ ಮಿಂಚಾಗಿ ಇರುತ್ತಾನೆ. ಅನಂತರ ಮುಕ್ತಿ ಪಡೆಯುತ್ತಾನೆ.

**ಭೀಷ್ಮ** :- ದ್ವಿಜೋತ್ತಮನೆ, ನೀರಿರುವ ಬಾವಿ, ಕೆರೆ,ಕೊಳ್ಳ, ಸರೋವರ ಮುಂತಾದವುಗಳಲ್ಲಿ ವಿಷ್ಣು ಹೇಗೆ ಇರುವನು ? ಪಾರ್ವತಿ ಹೇಗೆ ನೆಲೆಸಿರುವಳು ? ಅವಳು ಹೇಗೆ ಪೂಜೆಮಾಡುವಳು ಎಂಬುದನ್ನು ತಿಳಿಸಿರಿ. ಮತ್ತು ದೇವಾಲಯಗಳು ಹೇಗೆ ಇರಬೇಕು ? ದೇವಸ್ಥಾನಗಳು ವಿಧಿ ವಿಧಾನಗಳು ಏನು ? ಅಲ್ಲಿ ಅರ್ಚಕರು ಎಂಥವರು ಇರಬೇಕು ? ವೇದಿಕೆ ಪ್ರಮಾಣ ಏನು ? ಅದರ ಸ್ಥಾನವು ಯಾವುದು ? ಆಚಾರ್ಯನು ಎಂಥವನಿರಬೇಕು ? ಅವನ ಲಕ್ಷಣವೇನು ? ಅದರ ದ್ರವ್ಯಗಳು ಯಾವವು ? ಎಲ್ಲವನ್ನೂ ದಯವಿಟ್ಟು ನನಗೆ ತಿಳಿಸಬೇಕು.

**ಪುಲಸ್ತ್ಯ** :- ಕೆರೆ, ದೇವಾಲಯ, ಸರೋವರ ಮುಂತಾದವುಗಳನ್ನು ನಿರ್ಮಿಸುವ ವಿಧಿವಿಧಾನಗಳನ್ನು, ಶಾಸ್ತ್ರ, ಪುರಾಣಗಳಲ್ಲಿ ಹೇಳಿದಂತೆ ನಿರೂಪಿಸುತ್ತೇನೆ, ಕೇಳು. ಉತ್ತರಾಯಣವು ಬಂದ ಬಳಿಕ, ಶುಭಕರವಾದ ಶುಕ್ಲಪಕ್ಷದಲ್ಲಿ ದ್ವಿಜರು ಹೇಳಿದ ಶುಭ ತಿಥಿಯಂದು ಯಾಜ್ಞಿಕರನ್ನು ಕರೆಸಿ, ಪುಣ್ಯಾಹವಾಚನಮಾಡಿಸಬೇಕು. ಕೆರೆಯ ಬಳಿ ಒಳ್ಳೆಯದಾಗಿರುವ ಜಾಗದಲ್ಲಿ ಗಟ್ಟಿಯಾಗಿರುವ ನಾಲ್ಕು ಮೊಳದ ನಾಲ್ಕು ಮೂಲೆಗಳುಳ್ಳ ನಾಲ್ಕು ಕಡೆಗೂ ಮುಖವುಳ್ಳ ವೇದಿಕೆಯನ್ನು ಮಾಡಬೇಕು. ಮಂಟಪವನ್ನು ಹದಿನಾರು ಮೊಳಗಳಷ್ಟು ಹಾಕಿ ನಾಲ್ಕು ಕಡೆಗೂ ಮುಖಗಳನ್ನು ಮಾಡಿಸಬೇಕು. ಆ ವೇದಿಕೆಯ ಸುತ್ತಲೂ ಒಂದು ಮೊಳದಷ್ಟಿರುವ ಹಳ್ಳಗಳನ್ನು ಮಾಡಿರಬೇಕು. ಅದಕ್ಕೆ ಮೂರು ಜಗಲಿಯ ಕಟ್ಟೆಗಳಿರಬೇಕು. ಈ ಹಳ್ಳಗಳು ಒಂಬತ್ತಾಗಲಿ ಅಥವಾ ಐದಾಗಲಿ ಇರಬೇಕು. ಇವು ಯೋನಿ ಮುಖವುಳ್ಳವಾಗಿರಬೇಕು. ಹನ್ನೆರಡು ಅಂಗುಲಕ್ಕೆ **ವಿತಸ್ತಿ** ಎಂದು ಹೆಸರು. ಆರು ಅಥವಾ ಏಳು ಅಂಗುಲ ವಿಸ್ತಾರವುಳ್ಳದ್ದಾಗಿರಬೇಕು. ಹನ್ನೆರಡು ಅಂಗಲು

ಅಳವಿರಬೇಕು. ಎಲ್ಲವೂ ಕೂಡಿ ಹೀಗೆ ಒಂದು ಮೊಳದುದ್ದವಿದ್ದು ಮೂರು ರೀತಿಯಲ್ಲಿ ಕೆಳಗೆ ಸಣ್ಣವಾಗಿ ಅದಕ್ಕೆ ಮೇಲಕ್ಕೆ ಬರುತ್ತ ದೊಡ್ಡದಾಗಿರುವಂತೆ ಮೂರು ಅಂತಸ್ತುಗಳುಳ್ಳವಾಗಿರಬೇಕು. ಎಲ್ಲಕ್ಕೂ ಬಗೆ ಬಗೆಯ ಬಟ್ಟೆಗಳನ್ನು ಹಾಕಿರಬೇಕು. ಪತಾಕೆ, ಧ್ವಜಗಳನ್ನು ಹಾಕಿ ಸಿಂಗರಿಸಬೇಕು. ಮುಖ್ಯವಾಗಿ ಯಜಮಾನ ಹಾಗೂ ಋತ್ವಿಜರು ಶುದ್ಧಮನಸ್ಸಿನಿಂದ ಈ ಎಲ್ಲ ತಯಾರಿಯನ್ನು ಮಾಡಬೇಕು. ಸಿಟ್ಟುಮಾಡಬಾರದು. ಸುಳ್ಳಾಡಬಾರದು. ಯಜ್ಞ ನಡೆದಾಗ ಯಾರು ಏನೇ ಕೇಳಿದರೂ ಇಲ್ಲ ಎನ್ನಬಾರದು. ಪ್ರತಿಷ್ಠೆಗಾಗಿ ಇದನ್ನು ಮಾಡಬಾರದು.

ಅರಳಿ, ಅತ್ತಿ, ಬಸರಿ, ಆಲ ಇವುಗಳ ಕೊಂಬೆಗಳಿಂದ ಆ ಮಂಟಪದ ಎಲ್ಲಾ ಕಡೆಗಳಲ್ಲೂ ಬಾಗಿಲುಗಳನ್ನು ಮಾಡಬೇಕು. ಅಲ್ಲಿ ಎಂಟು ಜನ ಹೋಮಮಾಡುವವರೂ ಇರಬೇಕು. ಇವರೆಲ್ಲರೂ ವೇದಪಾರಂಗತರಾಗಿರಬೇಕು. ಅವರು ಎಲ್ಲ ಲಕ್ಷಣದಿಂದ ಕೂಡಿರಬೇಕು. ಮಂತ್ರಗಳನ್ನು ಬಲ್ಲವರಾಗಿರಬೇಕು. ಜಿತೇಂದ್ರಿಯರಾಗಿರಬೇಕು. ಕುಲಶೀಲವುಳ್ಳ ವರಾಗಿರಬೇಕು. ಇಂತಹ ದ್ವಿಜರನ್ನು ಇಟ್ಟಿರಬೇಕು. ಎಲ್ಲ ಹಳ್ಳಗಳಲ್ಲಿಯೂ ಯಾಗದ ಸಾಮಾನುಗಳು, ಆಸನಗಳು, ತಾಮ್ರದ ಪಾತ್ರೆಗಳೂ ಇರಬೇಕು. ಅನಂತರ ಪ್ರತಿ ದೇವರಿಗೂ ಅನೇಕ ಬಣ್ಣದ ಬಲಿಗಳನ್ನು ಹಾಕಬೇಕು. ಆಚಾರ್ಯನು ಬುದ್ಧಿವಂತಿಕೆಯಿಂದ ಮಂತ್ರಿಸಿ ಭೂಮಿಯಲ್ಲಿ ಆ ಬಲಿಯನ್ನು ಹಾಕಬೇಕು. ಯೂಪದ ಕಂಬವು ಮೂರು ಮೊಳದಷ್ಟು ಇರಬೇಕು. ಇಲ್ಲವೆ ಯಜಮಾನನು ಇರುವಷ್ಟು ಉದ್ದವಿರಬೇಕು. ಅದನ್ನು ಹಾಲು ಬರುವ ಮರದಿಂದ ಮಾಡಿರಬೇಕು. ಇಂತಹದನ್ನು ನೆಟ್ಟಿರಬೇಕು.

ಆ ಇಪ್ಪತ್ತೈದು ಜನ ಋತ್ವಿಜರುಗಳಿಗೂ ಚಿನ್ನದ ಕುಂಡಲ, ಕೇಯೂರ, ಕಟಕಗಳನ್ನು ಕೊಡಬೇಕು. ಅಲ್ಲದೆ ಪವಿತ್ರದ ಉಂಗುರಗಳನ್ನು, ಬಗೆ ಬಗೆಯ ಪಂಚೆಗಳನ್ನು ಕೊಡಬೇಕು. ಎಲ್ಲರಿಗೂ ಒಂದೇ ಸಮನಾಗಿ ಎಲ್ಲವನ್ನು ಕೊಡಬೇಕು. ಆಚಾರ್ಯನಿಗೆ ಎರಡರಷ್ಟು ಕೊಡಬೇಕು. ಅಲ್ಲದೆ ಹಾಸಿಗೆಗಳನ್ನು, ತಮಗೆ ಪ್ರಿಯವಾದುದನ್ನು ಕೊಡಬೇಕು. ಚಿನ್ನದ ಆಮೆ, ಮೊಸಳೆ, ಬೆಳ್ಳಿಯ ಮೀನು, ದೊಡ್ಡ ಮೀನು, ತಾಮ್ರದ ಏಡಿ, ಕಪ್ಪೆ, ಕಬ್ಬಿಣದ ಶಿಂಶುಮಾರಕವೆಂಬ ಜಲಜಂತುಗಳನ್ನು ಮಾಡಿಸಿ, ಅವನ್ನು ಚಿನ್ನದ ಪಾತ್ರೆಯಲ್ಲಿಟ್ಟುಕೊಂಡು ಸಿದ್ಧವಾಗಬೇಕು. ಎಲ್ಲ ಔಷಧಿಗಳನ್ನು ನೀರಿನಲ್ಲಿ ಹಾಕಿದ್ದು ಆ ನೀರಿನಿಂದ ಸ್ನಾನಮಾಡಿ, ಅನಂತರ ವೇದ ಪಾರಂಗತರಿಂದಲೂ ಸ್ನಾನಮಾಡಿಸಿಕೊಂಡು ಯಜಮಾನನು ಹೆಂಡತಿ ಮಕ್ಕಳೊಡನೆ ಪಶ್ಚಿಮ ದ್ವಾರದಿಂದ ಪೂರ್ವಮುಖವಾಗಿ ಮಂಟಪದೊಳಕ್ಕೆ ಬರಬೇಕು.

ಅನಂತರ ಭೇರಿ ಮುಂತಾದವುಗಳ ಶಬ್ದದೊಡನೆ ಪುಡಿಮಣ್ಣನ್ನು ಮತ್ತು ಬಗೆ ಬಗೆಯ ಪುಡಿಗಳನ್ನು ತಂದು, ಐದು ವರ್ಣದಿಂದ ಕೂಡಿರುವ ಮಂಡಲವನ್ನು ಮಾಡಬೇಕು. ಹದಿನಾರು ಹಾರಯಕಾಲುಗಳುಳ್ಳ ಚಕ್ರವನ್ನುಮಾಡಬೇಕು. ಮಧ್ಯದಲ್ಲಿ ಪದ್ಮವಿರಬೇಕು. ಅದರ ಸುತ್ತಲೂ ನಾಲ್ಕು ಮೂಲೆಗಳಿರುವಂತೆ ವೇದಿಕೆಯನ್ನು ಮಾಡಬೇಕು. ಆ ವೇದಿಕೆಯ ಮೇಲೆ ಎಲ್ಲವನ್ನು ಮಾಡಿ ನವಗ್ರಹಗಳನ್ನು, ಇಂದ್ರಾದಿ ಲೋಕಪಾಲಕರನ್ನು ಆಯಾ ಹಳ್ಳಗಳಲ್ಲಿ ಆವಾಹನೆ ಮಾಡಬೇಕು. ಅದರ ಮಧ್ಯದಲ್ಲಿ ಕಲಶವನ್ನಿಟ್ಟು ವರುಣನ ಮಂತ್ರದಿಂದ ವರುಣನನ್ನು, ಬ್ರಹ್ಮನ ಮಂತ್ರದಿಂದ ಬ್ರಹ್ಮನನ್ನು

ಮಹೇಶ ವಿಷ್ಣುಗಳನ್ನು ಅವರವರ ಮಂತ್ರಗಳಿಂದ ಆ ಕಲಶದಲ್ಲಿ ಆವಾಹಿಸಬೇಕು. ವಿನಾಯಕ, ಲಕ್ಷ್ಮೀ ಅಂಬಿಕೆಯರನ್ನು ಅವರವರ ಮಂತ್ರಗಳಿಂದ ಆಹ್ವಾನಿಸಬೇಕು. ಎಲ್ಲಾ ಲೋಕಗಳ ಶಾಂತಿಗೋಸುಗ ಇವರೆಲ್ಲರನ್ನು ಈ ರೀತಿ ಇಡಬೇಕು. ಆ ಕಲಶಗಳೆಲ್ಲವನ್ನು ಗಂಧ, ಪುಷ್ಪಾದಿಗಳಿಂದ ಪೂಜಿಸಿ, ಕುಂಭಕ್ಕೆ ಸುವಾಸನೆಯ ಹೊಗೆಯನ್ನು ಕೊಟ್ಟು, ರತ್ನಗಳನ್ನು ಹಾಕಿ ಬಟ್ಟೆಗಳನ್ನು ಹೊದಿಸಿ ಹೂಗಂಧಗಳಿಂದ ಅಲಂಕರಿಸಿ, ದ್ವಾರಪಾಲಕರನ್ನೂ ಅಲಂಕರಿಸಿ ಆಚಾರ್ಯನನ್ನು ಪೂಜಿಸಿ, ಪಾಠಕರನ್ನು ಮಂತ್ರ ಪಠನ ಮಾಡಲುಹೇಳಬೇಕು. ಋಗ್ವೇದಿಗಳನ್ನು ಪೂರ್ವದಿಕ್ಕಿನಲ್ಲಿಯೂ, ಯಜುರ್ವೇದಿಗಳನ್ನು ದಕ್ಷಿಣದಿಕ್ಕಿನಲ್ಲಿಯೂ, ಸಾಮವೇದಿಗಳನ್ನು ಪಶ್ಚಿಮದಿಕ್ಕಿನಲ್ಲಿಯೂ, ಅಥರ್ವಣಿಕರನ್ನು ಉತ್ತರದಿಕ್ಕಿನಲ್ಲಿಯೂ ಕೂಡಿಸಿ ಯಜಮಾನನು ಉತ್ತರಾಭಿಮುಖವಾಗಿ ದಕ್ಷಿಣದಿಕ್ಕಿನಲ್ಲಿ ಕುಳಿತುಕೊಳ್ಳಬೇಕು. ಪಾಠಕರನ್ನು ಪಾರಾಯಣಮಾಡಿದರೆಂದು ಯಾಜ್ಞಿಕರನ್ನು ಯಾಗಮಾಡಿರೆಂದು ಹೇಳಬೇಕು. ಪಠನಮಾಡುವವರನ್ನು, ಒಳ್ಳೆಯಮಂತ್ರಗಳನ್ನು ಹೇಳಿರಿ ಎಂದು ಹೇಳಬೇಕು. ಆ ಮೇಲೆ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ತಾನು ಋತ್ವಿಕ್ಕುಗಳೊಡನೆ ಆಯಾಮಂತ್ರಗಳಿಂದಲೂ ವರುಣಮಂತ್ರಗಳಿಂದಲೂ ಹೋಮಮಾಡಬೇಕು. ಗ್ರಹಗಳಿಗೂ, ಇಂದ್ರಾದಿ ದೇವತೆಗಳಿಗೂ, ಈಶ್ವರನಿಗೂ ಮರುತ್ತುಗಳಿಗೂ, ಲೋಕಪಾಲಕರಿಗೂ, ವಿಧಿವತ್ತಾಗಿ ಹೋಮಮಾಡಬೇಕು. ಪೂರ್ವ ದಿಕ್ಕಿನಲ್ಲಿರುವ ಋಗ್ವೇದಿಗಳು ಶಾಂತಿಸೂಕ್ತವನ್ನು, ರಾತ್ರಿಸೂಕ್ತವನ್ನು, ಪವಮಾನವನ್ನು, ಪುರುಷಸೂಕ್ತವನ್ನು ಜಪಿಸಬೇಕು. ಇಂದ್ರಸೂಕ್ತ, ರುದ್ರ, ಸೋಮ, ಕೂಷ್ಮಾಂಡಸೂಕ್ತ, ಅಗ್ನೇಯ ಸೂಕ್ತ, ಸೌರಸೂಕ್ತ ಇವುಗಳ್ನ ದಕ್ಷಿಣ ದಿಕ್ಕಿನಲ್ಲಿ ಯಜುರ್ವೇದಿಗಳು ಪಠನ ಮಾಡಬೇಕು. ವೈರಾಜಸೂಕ್ತ, ಪುರುಷಸೂಕ್ತ, ಸೌಪರ್ಣ, ರುದ್ರ ಸಂಹಿತ, ಶೈಶವ, ಪಂಚಧನ ಮುಂತಾದ ಸಾಮಗಳನ್ನು ಸಾಮಗರು ಪಶ್ಚಿಮ ದ್ವಾರದಲ್ಲಿ ಗಾನ ಮಾಡಬೇಕು. ಅಥರ್ವಣವೇದದವರು ಉತ್ತರ ದಿಕ್ಕಿನಲ್ಲಿದ್ದುಕೊಂಡು ಶಾಂತಿ, ಪುಷ್ಟಿ ಕರ್ಮಗಳನ್ನು ನಾರಾಯಣನನ್ನು ಉದ್ದೇಶಿಸಿ ಮನಸ್ಸಿನಿಂದ ಮಾಡಬೇಕು. ಈ ರೀತಿ ಹಿಂದಿನಂತೆ ತಂತ್ರ ಮಂತ್ರಗಳಿಂದ ಅಧಿವಾಸಮಾಡಬೇಕು. ಅದಕ್ಕಾಗಿ ಕುದುರೆಲಾಯದ ಮಣ್ಣು, ನಾಲ್ಕು ಬೀದಿಗಳು ಕೂಡಿರುವ ಚೌಕದ ಮಣ್ಣು ಹಾವಿನ ಹುತ್ತದ ಮಣ್ಣು, ಗೋವಿನ ಕೊಟ್ಟಿಗೆಯ ಮಣ್ಣು, ಇವುಗಳನ್ನು ತಂದು ಆ ಕಟ್ಟೆಯನ್ನು ಹಾಕಬೇಕು. ಮತ್ತು ಮೂಲಿಕೆಗಳನ್ನು ಹಾಕಬೇಕು. ಗೋರೋಚನ, ಬಿಳಿಯ ಸಾಸಿವೆ, ಗಂಧ, ಗುಗ್ಗುಳ ಇವೆಲ್ಲವನ್ನು ಹಾಕಬೇಕು. ಪಂಚಗವ್ಯದಿಂದ ಸ್ನಾನಮಾಡಬೇಕು. ಈ ರೀತಿ ಮಾಡಿದ ಕಲಶೋದಕದಿಂದ ಮೊದಲು ವಿಧಿವತ್ತಾಗಿ ಮಹಾಮಂತ್ರಗಳಿಂದ ಯಜಮಾನನಿಗೆ ಸ್ನಾನಮಾಡಿಸಬೇಕು. ಈ ರೀತಿ ವಿಧ್ಯುಕ್ತವಾಗಿ ಕರ್ಮಗಳಿಂದ ಆ ರಾತ್ರೆಯನ್ನು ಕಳೆಯಬೇಕು.

ಬೆಳಗಾಗುತ್ತಲೂ ಜ್ಞಾನಿಗಳಿಗೆ ನೂರು ಹಸುಗಳನ್ನಾಗಲಿ, ಐವತ್ತನ್ನಾಗಲಿ ಕೊನೆಗೆ ಇಪ್ಪತ್ತನ್ನಾಗಲಿ ದಾನ ಮಾಡಬೇಕು. ಹೋಮವಾದ ಮೇಲೆ ಬೇಕಾದರೂ ಮಾಡಬಹುದು. ಒಂದು ವರ್ಷ ಪೂರ್ತಿಯಾಗಲು ಶುದ್ಧವಾದ ದಿನದಲ್ಲಿ ಒಳ್ಳೆಯ ಲಗ್ನದಲ್ಲಿ ವೇದಘೋಷದಿಂದ, ವಾದ್ಯನೃತ್ಯಗಳಿಂದ ಕೂಡಿಕೊಂಡು, ಒಂದು ಮೂರ್ತಿಯನ್ನು ಚಿನ್ನದ ಒಡವೆಗಳಿಂದ ಅಲಂಕರಿಸಿ ನೀರಿನಲ್ಲಿ ಇಳಿಸಬೇಕು. ಅನಂತರ ಅದನ್ನು ಸಾಮವೇದದ ಋತ್ವಿಜನಿಗೆ ದಾನಮಾಡಬೇಕು. ಒಂದು ಚಿನ್ನದ ಪಾತ್ರೆಯನ್ನು ತೆಗೆದುಕೊಂಡು ಅದರಲ್ಲಿ

ಪಂಚರತ್ನಗಳನ್ನು ಹಾಕಿ ಅದರೊಳಗೆ ಆ ಮೀನು, ಮೊಸಳೆ, ಮುಂತಾದವುಗಳನ್ನು ಹಾಕಿ ಆ ಪಾತ್ರೆಯನ್ನು ವೇದಪಾರಂಗತರಾದ ನಾಲ್ಕು ಜನ ಋತ್ವಿಜರು ಹಿಡಿದುಕೊಂಡು, ಆ ಪಾತ್ರೆಯಲ್ಲಿ ಮಹಾನದಿಯ ನೀರು, ಮೊಸರು, ಅಕ್ಷತೆಹಾಕಿ, ನೀರಿಗೆ ಹೋಗಿ, ಅಲ್ಲಿ ಉತ್ತರಾಭಿಮುಖವಾಗಿ ನಿಂತು ನೀರಿನ ಮಧ್ಯ ಬಗ್ಗಿಕೊಂಡು ಹಳ್ಳಕ್ಕೆ ಬಿಡಬೇಕು. ಅಥರ್ವಣಿಕ ಮಂತ್ರಗಳಿಂದ. ಅವುಗಳಲ್ಲಿ ಯಾವುದಾದರೂ ಈಚೆಗೆ ಬಿದ್ದರೆ ಅವುಗಳನ್ನು ಎತ್ತಿ ಹಿಡಿದು 'ಅಪೋಹಿಷ್ಠ' ಎಂಬ ಮಂತ್ರದಿಂದ ಪ್ರೋಕ್ಷಣೆಮಾಡಿ ಮತ್ತೆ ನೀರಿನಲ್ಲಿ ಬಿಡಬೇಕು. ಅನಂತರ ಮಂಟಪಕ್ಕೆ ಬಂದು ಪೂಜೆಮಾಡಿ ವೈಶ್ವದೇವ ಮುಗಿಸಿ ಭೂತಬಲಿಯನ್ನು ಹಾಕಬೇಕು. ನಾಲ್ಕನೆಯ ದಿನ ಅವಭೃಥಸ್ನಾನದ ಕರ್ಮಮಾಡಬೇಕು. ಆಗಲೂ ಶಕ್ತ್ಯಾನುಸಾರ ದಾನಮಾಡಬೇಕು. ಯಜ್ಞಪಾತ್ರೆ, ಯಜ್ಞೋಪಕರಣಗಳನ್ನು ಋತ್ವಿಜರಿಗೆ ಕೊಡಬೇಕು. ಮಂಟಪವನ್ನು ಎಲ್ಲರಿಗೂ ಭಾಗಮಾಡಬೇಕು. ಚಿನ್ನದ ಪಾತ್ರೆಗಳನ್ನು, ಹಾಸಿಗೆಗಳನ್ನು ಒಬ್ಬ ಜ್ಞಾನಿ ಮನುಷ್ಯನಿಗೆ ಕೊಡಬೇಕು. ಅನಂತರ ಸಾವಿರ ಜನ ದ್ವಿಜರಿಗೆ, ಇಲ್ಲವೆ ಎಂಟನೂರು ಜನಕ್ಕೆ, ಅದಕ್ಕೂ ಶಕ್ತಿ ಇಲ್ಲದಿದ್ದರೆ ಐವತ್ತು ಜನರಿಗೆ, ಅದೂ ಆಗದಿದ್ದರೆ ಇಪ್ಪತ್ತು ಜನರಿಗೆ ಊಟ ಹಾಕಬೇಕು.

ಕೆರೆಯನ್ನು ಕಟ್ಟುವದಕ್ಕೆ ಪುರಾಣಗಳಲ್ಲಿ ಇದೇ ವಿಧಿಯು ಹೇಳಲ್ಪಟ್ಟಿದೆ. ಭಾವಿ, ಕೊಳ, ಕೆರೆ, ಯಾವದನ್ನು ನಿರ್ಮಿಸಿದರೂ ಇವುಗಳ ವಿಧಿ ಇದೇ. ಆದರೂ ಮಂತ್ರಗಳಲ್ಲಿ ವ್ಯತ್ಯಾಸ ಇರುತ್ತದೆ. ಶಕ್ತಿ ಇಲ್ಲದಿದ್ದರೆ ಇದರಲ್ಲಿ ಅರ್ಧವನ್ನಾದರೂ ಮಾಡಬೇಕೆಂದು ಬ್ರಹ್ಮನು ಹೇಳಿದ್ದಾನೆ. ಮಿಕ್ಕ ವಿಷಯಗಳಲ್ಲಿ ಏಕಾಗ್ನಿಕಾಂಡದಲ್ಲಿ ಹೇಳಿರುವಂತೆ ಮಾಡಬೇಕು. ಲೋಭಿತನ ಮಾಡಬಾರದು.

ಮಳೆಗಾಲದಲ್ಲಿ ಮಾತ್ರ ನೀರಿರುವ ಕೆರೆ ಕಟ್ಟಿಸಿರುವ ಮೂರು ಅಗ್ನಿಷ್ಟೋಮಗಳ ಫಲ ಬರುತ್ತದೆ. ಶರದೃತುವಿನಲ್ಲಿ ನೀರಿರುವಂತಿದ್ದರೆ ಅವನಿಗೂ ಮೂರು ಅಗ್ನಿಷ್ಟೋಮಗಳ ಫಲಬರುತ್ತದೆ. ಹೇಮಂತ ಋತುವಿನಲ್ಲಿ ನೀರು ಇಲ್ಲವದಾದರೆ ವಾಜಸನೇಯ ಅತಿರಾತ್ರಗಳ ಫಲ ಕೊಡುತ್ತದೆ. ವಸಂತದಲ್ಲಿ ನೀರಿರುವದಾದರೆ ಅಶ್ವಮೇಧಯಾಗದ ಫಲ ಕೊಡುತ್ತದೆ. ಗ್ರೀಷ್ಮಕಾಲದಲ್ಲಿ ನೀರಿರುವದಾದರೆ ರಾಜಸೂಯಯಾಗದಫಲ ಕೊಡುತ್ತದೆ. ಎಲ್ಲೆ ದೊರೆಯೆ, ಶುದ್ಧ ಮನಸ್ಸುಳ್ಳ ಯಾವನು ಈ ವಿಶೇಷ ಧರ್ಮಗಳನ್ನು ಮಾಡುತ್ತಾನೆಯೋ ಅವನು ಸಿದ್ಧನಾಗಿ ಬ್ರಹ್ಮಲೋಕವನ್ನು ಹೊಂದುತ್ತಾನೆ. ಅನೇಕ ಕಲ್ಪಗಳವರೆಗೆ ಅಲ್ಲಿ ಸಖಿಯಾಗಿರುತ್ತಾನೆ. ಸ್ವರ್ಗವೇ ಮುಂತಾದ ಅನೇಕ ಲೋಕಗಳಲ್ಲಿ ಕಾಮಿನಿಯರೊಡನೆ ಸಂಚರಿಸುತ್ತ ಪರಾರ್ಧ ಸಂಜ್ಞೆಯ ಕಾಲಗಳವರೆಗೂ ಇದ್ದು ತನ್ನ ಯೋಗಬಲದಿಂದ ಮತ್ತೆ ವಿಷ್ಣುಪಾದವನ್ನು ಹೊಂದುತ್ತಾನೆ.

**ಭೀಷ್ಮ** :- ಬ್ರಹ್ಮಜ್ಞಾನಿಗಳೆ, ಮರಗಳನ್ನು ನೆಡುವುದಾದರೆ, ಯಾವ ವಿಧಿಯಿಂದ ನೆಡಬೇಕು ? ಸರಿಯಾಗಿ ಗಿಡ ಹಚ್ಚಿದವರಿಗೆ ಯಾವ ಪುಣ್ಯ ಲೋಕಗಳು ದೊರಕುವವು ? ಅದನ್ನೆಲ್ಲ ಹೇಳಿರಿ.

**ಪುಲಸ್ತ್ಯ** :- ಉದ್ಯಾನ ಉಪವನಗಳಲ್ಲಿ ಮರಗಳನ್ನು ನೆಡುವ ವಿಧಿ, ವಿಧಾನಗಳನ್ನು ಹೇಳುತ್ತೇನೆ. ಸರೋವರ, ಕೆರೆ, ತಟಾಕಗಳ ವಿಧಿಯಲ್ಲಿ ಹೇಳಿದಂತೆಯೇ ಎಲ್ಲ ಕಾರ್ಯಗಳನ್ನು ಮಾಡಬೇಕು. ಋತ್ವಿಜರು, ಮಂಟಪ, ಸಲಕರಣೆ ಸಜ್ಜುಗೊಳಿಸಿಕೊಂಡು,

ಆಚಾರ್ಯನನ್ನು ಮತ್ತು ಋತ್ವಿಜರು ಆಚಾರ್ಯನನ್ನು ಮತ್ತು ಋತ್ವಿಜರಾದ ದ್ವಿಜರನ್ನು ಬಟ್ಟೆ, ಬಂಗಾರ, ಗಂಧ, ಹೂ, ಹಾರಗಳನ್ನು ಕೊಟ್ಟು ಪೂಜಿಸಬೇಕು. ಔಷಧಿ ಮಿಶ್ರಿತವಾದ ನೀರುಗಳಿಂದ ತಾವು ನೆಡಲಿರುವ ಮರಗಳಿಗೆ ಪ್ರೋಕ್ಷಣೆ ಮಾಡಬೇಕು. ಅಕ್ಷತೆಗಳನ್ನು ಹಾಕಬೇಕು. ಬಟ್ಟೆಗಳನ್ನು ಸುತ್ತಬೇಕು. ಹೂವಿನ ಹಾರಗಳನ್ನು ತೂಗ ಬಿಡಬೇಕು. ಬಂಗಾರದ ಸೂಜಿಯಿಂದ ಕಿವಿ ಚುಚ್ಚಿ, ಕಾಡಿಗೆ ಹಚ್ಚಿ, ಚಿನ್ನದ ಏಳೆಂಟು ಹಣ್ಣುಗಳನ್ನುಮಾಡಿ, ವೃಕ್ಷದ ಕೆಳಗೆ ವೇದಿಕೆಯ ಮೇಲೆ ಇಡಬೇಕು. ಪಾತ್ರೆಗಳಲ್ಲಿ ಧಾನ್ಯಗಳನ್ನು ತುಂಬಿ, ಧೂಪ ಹಾಕಿ ಪತ್ರೆ, ಗಂಧಗಳಿಂದ ಪೂಜಿಸಬೇಕು. ಎಲ್ಲ ಗಿಡಗಳಲ್ಲಿ ಕೊಡಗಳನ್ನು ಸ್ಥಾಪಿಸಿ, ಸಾಯಂಕಾಲದಲ್ಲಿ ಪೂಜೆಮಾಡಿ ಬಲಿ ಕೊಡಬೇಕು. ಇಂದ್ರಾದಿ ದೇವತೆಗಳನ್ನು ಆಹ್ವಾನಿಸಬೇಕು. ಆ ವೃಕ್ಷಗಳಿಗೆಲ್ಲ ಅಧಿವಾಸವನ್ನು ಮಾಡಬೇಕು. ಅನಂತರ ಒಂದು ಹಿಂಡುವ ಹಸುವಿಗೆ ಬಿಳಿ ಬಟ್ಟೆ ಹೊದಿಸಿ, ಚಿನ್ನದ ಒಡವೆಯನ್ನು ತಲೆಯ ಮೇಲೆ ಮಂಡಿಸಿ, ಬಂಗಾರದ ಎರಡು ಕೋಡು, ಕವಚಮಾಡಿಸಿ, ಕಂಚಿನ ಹಿಂಡುವ ಪಾತ್ರೆ ಸಹಿತವಾಗಿ ಅದನ್ನು ಉತ್ತರಾಭಿಮುಖವಾಗಿ, ಗಿಡಗಳ ನಡುವೆ ಹಾಯ್ದು ಹೋಗುವಂತೆ ಮಾಡಬೇಕು. ಅನಂತರ ಅನೇಕ ಮಂಗಳ ವಾದ್ಯಗಳನ್ನು ಮೊಳಗಿಸಬೇಕು. ಅಭಿಷೇಕ ಮಂತ್ರ, ವರುಣ ಸೂಕ್ತ ಹಾಗೂ ಮೂರು ವೇದ ಮಂತ್ರಗಳಿಂದ ಆ ಕುಂಭಗಳಲ್ಲಿರುವ ನೀರಿನಿಂದಲೇ ದ್ವಿಜರು ಸ್ನಾನಮಾಡಬೇಕು. ಯಜಮಾನನು ಕೂಡ ಸ್ನಾನ ಮಾಡಿ, ಬಿಳಿ ಬಟ್ಟೆ ಧರಿಸಿ, ಅಲ್ಲಿ ನೆರೆದ ಋತ್ವಿಜರನ್ನೆಲ್ಲ ತನ್ನ ಶಕ್ತ್ಯಾನುಸಾರ ಗೋವುಗಳನ್ನು ದಾನ ಕೊಟ್ಟು ಪೂಜಿಸಬೇಕು. ಚಿನ್ನದ ಜನಿವಾರ, ಬಂಗಾರದ ಬಳೆ, ಪವಿತ್ರದ ಉಂಗುರ, ಬಟ್ಟೆ, ಹಾಸಿಗೆ ಮುಂತಾದವುಗಳನ್ನು ಕೊಟ್ಟು ಪೂಜಿಸಬೇಕು. ನಾಲ್ಕು ದಿನ ಮರಗಳಿಗೆ ಹಾಲು ಎರೆಯಬೇಕು. ತುಪ್ಪ, ಯವ, ಮುತ್ತುಗದ ಕಡ್ಡಿ ಇವುಗಳಿಂದ ಹೋಮ ಮಾಡಬೇಕು. ಮಾರನೆಯ ದಿನ ಉತ್ಸವಮಾಡಿ ತನ್ನ ಯೋಗ್ಯತೆಗೆ ತಕ್ಕಂತೆ ದಕ್ಷಿಣೆ ಕೊಡಬೇಕು. ತನಗೆ ಇಷ್ಟವಾದುದನ್ನು ದಾನಕೊಡಬೇಕು. ಆಚಾರ್ಯರಿಗೆ ಎರಡು ಪಟ್ಟುದಾನ. ಹೀಗೆ ವೃಕ್ಷಾಪರೋಪಣ ಮಾಡಿದವನು ಅರ್ಥಾತ್ ಗಿಡ ಹಚ್ಚಿದವನು ತನ್ನ ಪಿತೃಗಳನ್ನು ಉದ್ಧರಿಸುವದಲ್ಲದೆ ಒಂದು ಸಾವಿರ ಇಂದ್ರರ ಶಾಸನ ಕಾಲದ ಸ್ವರ್ಗದಲ್ಲಿರುವನು.

**ಅಪುತ್ರಸ್ಯ ಚ ಪುತ್ರತ್ವಂ ಪಾದಪಾ ಇಹ ಕುರ್ವತೇ ।**
**ತೀರ್ಥೇಷು ಪಿಂಡದಾನಾದೀನ್ರೋಪಕಾಣಾಂ ದದಂತಿ ತೇ ॥**

ಮಕ್ಕಳಿಲ್ಲದವರಿಗೆ ಮಕ್ಕಳ ಫಲವನ್ನು ಮರಗಳು ಕೊಡುತ್ತವೆ. ಅವು ಮರಗಳನ್ನು ನೆಟ್ಟು ಬೆಳೆಸಿದವರಿಗೆ ಪಿಂಡದಾನವನ್ನು ಕೊಡುತ್ತವೆ.

**ಯತ್ನೇನಾಪಿ ಚ ರಾಜೇಂದ್ರ ಅಶ್ವತ್ಥಾ ರೋಪಣಂ ಕುರು ।**
**ಸ ತೇ ಪುತ್ರ ಸಹಸ್ರಾಣಾಮೇಷ ಏಕಃ ಕರಿಷ್ಯತಿ ॥**

ಎಲೈ ದೊರೆಯೆ, ಪ್ರಯತ್ನ ಪಟ್ಟು ಅರಳಿಯ ಮರವನ್ನು ನೆಟ್ಟು ಬೆಳೆಸು. ಆ ಮರವು ನಿನಗೆ ಸಾವಿರ ಮಕ್ಕಳು ಮಾಡುವ ಕೆಲಸವನ್ನು ಮಾಡುವದು.

**ಧನೀ ಚಾಶ್ವತ್ಥ ವೃಕ್ಷೇಣ ಅಶೋಕಃ ಶೋಕನಾಶನಃ ।**
**ಪ್ಲಕ್ಷೋ ಯಜ್ಞಪದಃ ಪ್ರೋಕ್ತೋ ನಿಂಬ ಆಯುಷ್ಪ್ರದಃ ಸ್ಮೃತಃ ॥**

**ಜಂಬುಕೀ ಕನ್ಯದಾ ಪ್ರೋಕ್ತಾ ಭಾರ್ಯಾದಾ ದಾಡಿಮೀ ತಥಾ ।**
**ಅಶ್ವತ್ಥೋ ರೋಗನಾಶಾಯ ಪಲಾಶೋ ಬ್ರಹ್ಮದಸ್ತಥಾ ॥**

ಅರಳಿಮರವನ್ನು ಬೆಳೆಸುವದರಿಂದ ಧನಉಳ್ಳವನೂ, ಅಶೋಕ ಮರ ಬೆಳೆಸುವದರಿಂದ ಶೋಕರಹಿತನೂ ಆಗುತ್ತಾನೆ. ಬಸರಿಯ ಮರವು ಯಜ್ಞದ ಫಲವನ್ನು ಕೊಡುತ್ತದೆ. ಬೇವಿನಮರವು ಆಯುಷ್ಯವನ್ನು ಕೊಡುತ್ತದೆ. ದಾಳಿಂಬೆಯು ಹೆಂಡತಿಯನ್ನು ಕೊಡುತ್ತದೆ. ಅಶ್ವತ್ಥವು ರೋಗವನ್ನು ನಾಶ ಮಾಡುತ್ತದೆ. ಮುತ್ತುಗವು ಬ್ರಹ್ಮವರ್ಚಸ್ಸನ್ನು ಕೊಡುತ್ತದೆ.

**ಪ್ರೇತತ್ವಂ ಜಾಯತೇ ಪುಂಸೋ ರೋಪಯೇದ್ಯೋ ವಿಧೀತಕಂ ।**
**ಅಂಕೋಲೇ ಕುಲವೃದ್ಧಿಸ್ತು ಖಾದಿರೇ ಚಾಪ್ಯರೋಗತಾ ॥**

ಗೇರಲಮರವನ್ನು ಬೆಳೆಸಿದರೆ ಅವನಿಗೆ ಪ್ರೇತತ್ವವು ಬರುತ್ತದೆ. ಅಂಕೋಲೆಯು ಕುಲವನ್ನು ಬೆಳೆಸುತ್ತದೆ. ಕಗ್ಗಲಿಯು ರೋಗನಾಶಕವು.

**ನಿಂಬ ಪ್ರರೋಹಕಾಣಾಂ ತು ತೇಷಾಂ ತುಷ್ಯೇದ್ದಿವಾಕರಃ ।**
**ಶ್ರೀ ವೃಕ್ಷೇ ಶಂಕರೋ ದೇವಃ ಪಾಟಲಾಯಾಂ ತು ಪಾರ್ವತೀ ॥**

ಬೇವಿನ ಮರವನ್ನು ಬೆಳೆಸುವದರಿಂದ ಸೂರ್ಯನೂ, ಬಿಲ್ವಪತ್ರವನ್ನು ಬೆಳೆಸಿದರೆ ಶಂಕರನೂ, ಪಾದರಿಯನ್ನು ಹಬ್ಬಿಸಿದರೆ ಪಾರ್ವತಿಯೂ ಪ್ರಸನ್ನರಾಗುತ್ತಾರೆ.

**ಶಿಂಶುಪಾಯಾಮಪ್ಸರಸಃ ಕುಂದೇ ಗಂಧರ್ವಸತ್ತಮಾಃ ।**
**ತಿಂತಿಣೀಕೇ ದಾಸವರ್ಗಾ ವಂಜುಲೋ ದಸ್ಯುದಸ್ತಥಾ ॥**

ಅಶೋಕದಿಂದ ಅಪ್ಸರೆ ಸ್ತ್ರೀಯರೂ, ಮಲ್ಲಿಗೆ ಗಿಡವನ್ನು ಹಬ್ಬಿಸುವದರಿಂದ ಗಂಧರ್ವರೂ, ಹುಣಸೇಮರವನ್ನು ನೆಡುವದರಿಂದ ಹರಿದಾಸರಗುಂಪೂ, ತೃಪ್ತರಾಗುತ್ತಾರೆ.

**ಪುಣ್ಯಪ್ರದಃ ಶ್ರೀಪ್ರದಶ್ಚ ಚಂದನಃ ಪನಸಸ್ತಥಾ ।**
**ಸೌಭಾಗ್ಯದಶ್ಚಂಪಕಸ್ತು ಕರೀರಃ ಪಾರದಾರಿಕಃ ॥**

ಹಿಪ್ಪೆಗಿಡವು ಕಳ್ಳತನವನ್ನು, ಚಂದನವು ಪುಣ್ಯವನ್ನು, ಹಲಸು ಸಂಪತ್ತನ್ನೂ, ಸಂಪಿಗೆಯು ಸೌಭಾಗ್ಯವನ್ನು, ಕರೀರವು ದಾಂಪತ್ಯ ಸುಖವನ್ನು ಉಂಟು ಮಾಡುತ್ತದೆ.

**ಅಪತ್ಯದಾಯಕಸ್ತಾಲೋ ಬಕುಲಃ ಕುಲವರ್ಧನಃ ।**
**ಬಹುಭಾರ್ಯಾ ನಾರಿಕೇಲೀ ದ್ರಾಕ್ಷಾ ಸರ್ವಾಂಗಸುಂದರೀ ॥**

ತಾಳೆಯ ಮರವು ಮಕ್ಕಳ ಭಾಗ್ಯವನ್ನುಂಟುಮಾಡುತ್ತದೆ. ಪಗಡೆಯ ಮರವು ಕುಲವನ್ನು ವರ್ಧಿಸುತ್ತದೆ. ತೆಂಗಿನ ಮರವು ಭಾರ್ಯೆಯನ್ನು ಕೊಡುತ್ತದೆ. ದ್ರಾಕ್ಷೆಯು ಸರ್ವಾಂಗಸುಂದರಿಯರನ್ನು ಕೊಡುತ್ತದೆ.

**ರತಿಪ್ರದಾ ತಥಾ ಕೋಲೀ ಕೇತಕೀ ಶತ್ರುನಾಶಿನೀ ।**
**ಏವಮಾದಿನಗಾಶ್ಚಾನ್ಯೇ ಯೇ ನೋಕ್ತಾಸ್ತೇಽಪಿ ದಾಯಕಾಃ ।**
**ಪ್ರತಿಷ್ಠಾಂ ತೇ ಗಮಿಷ್ಯಂತಿ ಯೇ ನರಾ ವೃಕ್ಷರೋಪಕಾಃ ॥**

ಯುಗಚೇಗಿಡವು ರತಿಯನ್ನುಂಟುಮಾಡುತ್ತದೆ. ಕೇದಿಗೆಯು ಶತ್ರು ನಾಶ

ಮಾಡುತ್ತದೆ. ಈ ರೀತಿ; ಗಿಡಗಳನ್ನು ಬೆಳೆಸಿದವರು ಆ ಆ ವಿಶಿಷ್ಟ ಫಲಗಳನ್ನು ಹೊಂದುತ್ತಾರೆ. ನಾವು ಹೇಳದಿರುವ ಉಳಿದ ಗಿಡಗಳೂ ಕೂಡ ಹಚ್ಚಿದವರಿಗೆ ಪುಣ್ಯ ಫಲಗಳನ್ನು ಕೊಡುತ್ತವೆ.

## ಸೌಭಾಗ್ಯಶಯನ ವ್ರತ

**ಪುಲಸ್ತ್ಯ :-** ಎಲ್ಲ ಇಷ್ಟಾರ್ಥಗಳನ್ನು ಕೊಡುವ ಬೇರೆ ಒಂದು ವ್ರತವನ್ನು ಹೇಳುತ್ತೇನೆ. ಪುರಾಣ ಪ್ರವೀಣರು ಸೌಭಾಗ್ಯಶಯನ ವ್ರತ ಎಂದು ಕರೆಯುತ್ತಾರೆ ಇದನ್ನು.

ಹಿಂದೆ ಭೂ, ಭುವ, ಸ್ವ-ಮಹಾಲೋಕಗಳಲ್ಲಿಯ ಎಲ್ಲ ಪ್ರಾಣಿಗಳ ಸೌಭಾಗ್ಯಗಳು ಒಂದೆಡೆ ನೆರೆದವು. ಏಕೀಕೃತವಾದ ಆ ಸೌಭಾಗ್ಯರಾಶಿಯು ವೈಕುಂಠಕ್ಕೆ ಹೋಗಿ ವಿಷ್ಣುವಿನ ವಕ್ಷಸ್ಥಳದಲ್ಲಿ ಆಶ್ರಯಪಡೆಯಿತು. ಪ್ರಕೃತಿ ಪುರುಷರಲೀಲೆಯಿಂದ ಪ್ರಪಂಚವು ಸೃಷ್ಟವಾಯಿತು. ಆಗ ಬ್ರಹ್ಮ-ವಿಷ್ಣುಗಳಲ್ಲಿ ಸ್ಪರ್ಧೆ ಉಂಟಾಯಿತು. ಆದರಿಂದ ಒಂದು ಬೆಂಕಿಯಜ್ವಾಲೆ ಮೇಲೆದ್ದಿತು. ಆ ಅಗ್ನಿಯತಾಪದಿಂದ ಹರಿಯ ವಕ್ಷಸ್ಥಳವನ್ನು ಆಶ್ರಯಿಸಿದ ಸೌಭಾಗ್ಯವು ಅಲ್ಲಿಂದ ಹೊರಬಿದ್ದಿತು. ಆ ಸೌಭಾಗ್ಯವನ್ನು ದಕ್ಷನು ಕುಡಿದುಬಿಟ್ಟನು. ಆದರಿಂದ ದಕ್ಷನಬಲವು ಅಧಿಕಗೊಂಡಿತು. ತೇಜಸ್ಸು ಉಕ್ಕತೊಡಗಿತು. ದಕ್ಷನು ಕುಡಿದುಬಿಟ್ಟ ಸೌಭಾಗ್ಯವು ಮಿಕ್ಕಿ ನೆಲದ ಮೇಲೆ ಬಿದ್ದು ಎಂಟು ಭಾಗವಾಯಿತು. ಅವುಗಳಲ್ಲಿ ಏಳು ಸೌಭಾಗ್ಯ ನೀಡುವ ಔಷಧಿಗಳಾದವು. ಕಬ್ಬು, ಅಶ್ವತ್ಥ, ಅವರೆ, ಕೊತ್ತಂಬರಿ, ಗೋಕ್ಷೀರ, ಕುಸುಂಭ, ಲವಂಗ ಎಂಟನೆಯ ಭಾಗವು ಉಪ್ಪಾಗಿ ಜನಿಸಿತು. ಇವೇ ನೆಲದ ಮೇಲೆ ಬಿದ್ದ, ಸೌಭಾಗ್ಯದ ಎಂಟು ತುಣುಕುಗಳು. ದಕ್ಷನು ಕುಡಿದ ಸೌಭಾಗ್ಯವು ಅವನ ಮಗಳ ರೂಪದಿಂದ ಭೂಮಿಯ ಮೇಲೆ ಮೈದಾಳಿತು. ಅವಳೇ 'ಸತೀ', ಎಂದು ಹೆಸರಿನಿಂದ ಪ್ರಸಿದ್ಧಳಾದಳು. ಕನ್ನೈದಿಲೆಯಂತಿದೆ ಅವಳ ಕಾಯಕಾಂತಿ. ಆದುದರಿಂದಲೇ ಇವಳಿಗೆ ಲಲಿತೆ ಎಂದು ಹೆಸರು. ಆ ತ್ರಿಲೋಕಸುಂದರಿಯನ್ನು ಪರಮೇಶ್ವರನು ಮದುವೆಯಾದನು. ಮೂರು ಲೋಕಗಳಲ್ಲೆಲ್ಲ ಅವಳು ಅತ್ಯಂತ ಚೆಲುವೆ ಜನರಿಗೆ ಭಕ್ತಿಯನ್ನೂ, ಮುಕ್ತಿಯನ್ನೂ ಕೊಡಲು ಅವಳು ಸಮರ್ಥಳು, ಅವಳನ್ನು ಆರಾಧಿಸಿದ ಗಂಡು-ಹೆಣ್ಣು ಇಷ್ಟಾರ್ಥಗಳನ್ನು ಹೊಂದಿದ್ದಾನೆ.

**ಭೀಷ್ಮ :-** ಆ ಜಗನ್ಮಾತೆಯನ್ನು ಪೂಜಿಸುವದು ಹೇಗೆ ? ಆದರಿಂದ ಜಗತ್ತಿಗೆ ಶಾಂತಿಯು ಹೇಗೆ ದೊರಕುವದು ? ಇದನ್ನು ಹೇಳು - ನನಗೆ.

**ಪುಲಸ್ತ್ಯ :-** ಚೈತ್ರ, ಶುಕ್ಲ ತದಿಗೆಯ ದಿನ ಎಳ್ಳು ಹಚ್ಚಿಕೊಂಡು ಸ್ನಾನ ಮಾಡಬೇಕು. ಆ ದಿನವೇ ಪರಮೇಶ್ವರನು ಮಂತ್ರಪೂರ್ವಕವಾಗಿ ಸತೀದೇವಿಯನ್ನು ಕೈಹಿಡಿದಿದ್ದಾನೆ. ಆದುದರಿಂದ ಪಾರ್ವತಿಯೊಡನೆ ಪರಮೇಶ್ವರನನ್ನೂ ಆ ತೃತೀಯಾ ದಿನದಂದು ಧೂಪದೀಪ, ನೈವೇದ್ಯಗಳಿಂದ ಪೂಜಿಸಬೇಕು. ಶಿವ-ಪಾರ್ವತಿಯರ ಮೂರ್ತಿಗಳಿಗೆ ಪಂಚಾಮೃತ ಗಂಧೋದಕಗಳಿಂದ ಸ್ನಾನಮಾಡಿಸಿ, ಅನಂತರ ಎರಡೂ ಮೂರ್ತಿಗಳನ್ನು ಕೆಳಗೆ ಹೇಳಿದಂತೆ ಆವಾಹಿಸಿ, ಪೂಜೆ ಮಾಡಬೇಕು.

## ಪಾರ್ವತೀ ಪರಮೇಶ್ವರರರ ಆಹ್ವಾನ ಮತ್ತು ಪೂಜಾವಿಧಾನ

| | | | | | | |
|---|---|---|---|---|---|---|
| ನಮೋಸ್ತು ಪಾರ್ವತೀದೇವ್ಯೈ | ನಮಃ | ಶಿವಾಯ | ನಮಃ | ಎಂದು ಇಬ್ಬರ | ಪಾದಗಳನ್ನು | ಪೂಜಿಸಬೇಕು |
| ಜಯಾಯೈ | " | ಜಗದೀಶ್ವರಾಯ | " | " | ಹಿಮ್ಮಡಗಳನ್ನು | " |
| ಭವಾನ್ಯೈ | " | ತ್ರ್ಯಂಬಕಾಯ | " | " | ಮಂಡೆಗಳನ್ನು | " |
| ವಿಜಯಾಯೈ | " | ಭದ್ರೇಶ್ವರಾಯ | " | " | ತಲೆಗಳನ್ನು | " |
| ವರದಾಯೈ | " | ಹರಿಕೇಶಾಯ | " | " | ಮುಡಿಗಳನ್ನು | " |
| ರತ್ಯೈ | " | ಈಶಾಯ | " | " | ಸೊಂಟಗಳನ್ನು | " |
| ಶಂಕರ್ಯೈ | " | ಶಂಕರಾಯ | " | " | ಹೊಟ್ಟೆಯ ಎಡಬಲಬದಿ | " |
| ಕೌಟಿಲ್ಯೈ | " | ಶೂಲಿನೇ | " | " | ಹೊಟ್ಟೆಗಳನ್ನು | " |
| ಮಂಗಳಾಯೈ | " | ಶೂಲಪಾಣಯೇ | " | " | ಎದೆಯ ಕೆಳಭಾಗಗಳನ್ನು | " |
| ಈಶಾನ್ಯೈ | " | ಸರ್ವಾತ್ಮನೇ | " | " | ಸ್ತನಗಳನ್ನು | " |
| ರುದ್ರಾಣ್ಯೈ | " | ಚಿರಾತ್ಮನೇ | " | " | ಕೊರಳುಗಳನ್ನು | " |
| ಅನಂತಾಯೈ | " | ತ್ರಿಪುರನಾಶನಾಯ | " | " | ಎರಡೂ ಕೈಗಳನ್ನು | " |
| ಕಾಲಾನಲಪ್ರಿಯಾಯೈ | " | ತ್ರಿಲೋಚನಾಯ | " | " | ತೋಳುಗಳನ್ನು | " |
| ಸೌಭಾಗ್ಯದಾಯಿನ್ಯೈ | " | ಸೌಭಾಗ್ಯಭವನಾಯ | " | " | ಆಭರಣಗಳನ್ನು | " |
| ಸ್ವಾಹಾಸ್ವಧಾಯೈ | " | ಈಶ್ವರಾಯ | " | " | ಮುಖಗಳನ್ನು | " |
| ಅಶೋಕವನವಾಸಿನ್ಯೈ | " | ವಿಭೂತಿದಾಯಿನೇ | " | " | ತುಟಿಗಳನ್ನು | " |

| | | | | | | |
|---|---|---|---|---|---|---|
| ಚಂದ್ರಚೂಡ ಪ್ರಿಯಾಯೈ | " | ಸ್ಥಾಣವೇ | " | " | ಬಾಯಿಗಳನ್ನು | " |
| ಅಸಿತಾಂಗ್ಯೈ | " | ಅರ್ಧನಾರೀಶ್ವರಾಯ | " | " | ಮೂಗುಗಳನ್ನು | " |
| ಲಲಿತಾಯೈ | " | ಉಗ್ರಾಯ | " | " | ಹುಬ್ಬುಗಳನ್ನು | " |
| ವಾಸುದೇವ್ಯೈ | " | ಶರ್ವಾಯ | " | " | ಮುಂಗುರುಳನ್ನು | " |
| ಶ್ರೀಕಂಠಪ್ರಿಯಾಯೈ | " | ಶ್ರೀಕಂಠನಾಥಾಯ | " | " | ಕೂದಲುಗಳನ್ನು | " |
| ಉಗ್ರರೂಪಿಣ್ಯೈ | " | ಸರ್ವಾತ್ಮನೇ | " | " | ತಲೆಗಳನ್ನು | " |

ಹೀಗೆ ಪೂಜೆ ಮಾಡಿ, ಅವರೆ ಕುಸುಬೆ, ಹಾಲು, ಜೀರಿಗೆ, ಅರಳೆ, ಕಬ್ಬು, ಉಪ್ಪು, ಕೊತ್ತುಂಬರಿ ಈ ಎಂಟು ಸೌಭಾಗ್ಯ ಅಷ್ಟಕಗಳನ್ನು ಮುಂದೆ ಇರಿಸಬೇಕು.

ಇನ್ನು ಪ್ರಾಶನ, ದಾನಮಂತ್ರಗಳಲ್ಲಿ ತುಸು ವಿಶೇಷ ಉಂಟು. ಅದನ್ನು ಹೇಳುತ್ತೇನೆ ಕೇಳು. ಚೈತ್ರದಲ್ಲಿ ಗೋಶೃಂಗದ ನೀರನ್ನು ವೈಶಾಖದಲ್ಲಿ ಗೋಮಯವನ್ನು ಪ್ರಾಶನಮಾಡಬೇಕು. ಜ್ಯೇಷ್ಠದಲ್ಲಿ ಮಂದಾರ ಕುಸುಮ, ಆಷಾಢದಲ್ಲಿ ಬಿಲ್ವಪತ್ರೆ, ಶ್ರಾವಣದಲ್ಲಿ ಮೊಸರು, ಭಾದ್ರಪದಲ್ಲಿ ಕುಶೋದಕ, ಅಶ್ವಯುಜದಲ್ಲಿ ಹಾಲು, ಕಾರ್ತೀಕದಲ್ಲಿ ತುಪ್ಪ, ಮಾರ್ಗಶೀರ್ಷದಲ್ಲಿ ಗೋಮೂತ್ರ, ಪುಷ್ಯದಲ್ಲಿ ತುಪ್ಪ, ಮಾಘದಲ್ಲಿ ಕರಿ ಎಳ್ಳು, ಫಾಲ್ಗುಣದಲ್ಲಿ ಪಂಚಗವ್ಯವನ್ನು ಪ್ರಾಶನ ಮಾಡಬೇಕು.

ಇನ್ನು ದಾನ ಕೊಡುವಾಗಲೂ ಚೈತ್ರದಲ್ಲಿ 'ಲಲಿತಾ ಪ್ರೀಯತಾಂ' ಎಂದು ಹೇಳಬೇಕು. ವೈಶಾಖದಲ್ಲಿ 'ವಿಜಯಾ ಪ್ರೀಯತಾಂ' ಜ್ಯೇಷ್ಠಾದಲ್ಲಿ 'ಭದ್ರಾ...', ಆಷಾಢದಲ್ಲಿ 'ಭವಾನೀ....' ಶ್ರಾವಣದಲ್ಲಿ 'ಕುಮುದಾ...', ಭಾದ್ರಪದದಲ್ಲಿ 'ಶಿವಾ...', ಅಶ್ವೀನದಲ್ಲಿ 'ವಾಸುದೇವ...', ಕಾರ್ತೀಕದಲ್ಲಿ 'ಗೌರೀ....', ಮಾರ್ಗಶೀರ್ಷದಲ್ಲಿ 'ಮಂಗಳಾ....', ಪುಷ್ಯದಲ್ಲಿ 'ಕಮಲಾ....', ಮಾಘದಲ್ಲಿ 'ಸತೀ....' ಫಾಲ್ಗುಣದಲ್ಲಿ 'ಉಮಾ ಪ್ರೀಯತಾಂ' ಎಂದು ಹೇಳಿ ದಾನ ನೀಡಬೇಕು. ಹನ್ನೆರಡನೆಯ ತಿಂಗಳಲ್ಲಿ ದ್ವಾದಶಿಯ ದಿನ ಲಕ್ಷ್ಮೀಸಹಿತನಾದ ನಾರಾಯಣನ ಪೂಜೆಯನ್ನು ಮಾಡಬೇಕು. ಹುಣ್ಣಿಮೆಯ ದಿನ ಸರಸ್ವತೀ ಸಹಿತನಾದ ಬ್ರಹ್ಮದೇವರನ್ನು ಪೂಜಿಸಬೇಕು. ಮತ್ತು ಸೌಭಾಗ್ಯ ಅಷ್ಟಕಗಳನ್ನು ದಾನ ಕೊಡಬೇಕು. ಅನಂತರ ಆಯಾ ಮಾಸಗಳಲ್ಲಿ ಆಯಾ ಮಾಸ ಕುಸುಮಗಳನ್ನು ದಾನ ನೀಡಬೇಕು. ಚೈತ್ರದಲ್ಲಿ ಮಲ್ಲಿಗೆ, ವೈಶಾಖದಲ್ಲಿ ಅಶೋಕ, ಜ್ಯೇಷ್ಠದಲ್ಲಿ ಕಮಲ, ಆಷಾಢದಲ್ಲಿ ಕದಂಬ, ಶ್ರಾವಣದಲ್ಲಿ ಕನ್ನೈದಿಲೆ, ಭಾದ್ರಪದದಲ್ಲಿ ಸಂಪಿಗೆ, ಅಶ್ವಯುಜದಲ್ಲಿ, ಕಬ್ಬು, ಕಾರ್ತಿಕದಲ್ಲಿ ಕಣಗಲೆ, ಮಾರ್ಗಶೀಷದಲ್ಲಿ ಗೋರಂಟಿ, ಪುಷ್ಯದಲ್ಲಿ

ಹೆಗ್ಗೋರಂಟೆ, ಮಾಘದಲ್ಲಿ ತಾವರೆ, ಫಾಲ್ಗುಣದಲ್ಲಿ ಲಕ್ಕಿಹೂ ಇವು ಆಯಾ ಮಾಸದ ಕುಸುಮಗಳು. ಇವುಗಳನ್ನು ಆಯಾ ತಿಂಗಳಲ್ಲಿ ದೇವರಿಗೆ ಏರಿಸಬೇಕು. ದಾಸವಾಳ ಹೂ, ಕುಸಂಭ, ಕಮಲ ಇವು ಯಾವಾಗ ದೊರೆತರೂ ಪೂಜೆಗೆ ಪ್ರಶಸ್ತ. ಕಣಗಲಹೂವಂತೂ ಯಾವಾಗಲೂ ದೇವರಪೂಜೆಗೆ ಪ್ರಶಸ್ತವಾಗಿವೆ. ಈ ಎಲ್ಲ ಮಾಸಗಳಲ್ಲಿ ಏಕಾದಶಿ ಉಪವಾಸ ಮಾಡಿ ಭಕ್ತಿಯಿಂದ ದೇವರನ್ನು ಪೂಜೆಮಾಡಬೇಕು. ನರನಾಗಲಿ, ನಾರಿಯಾಗಲಿ, ಕುಮಾರಿಯಾಗಲಿ ಏಕಾದಶಿ ಉಪವಾಸ ಬಿಡಬಾರದು. ಮರುದಿನ ದ್ವಾದಶಿ ಲಕ್ಷ್ಮೀನಾರಾಯಣರನ್ನು ಪೂಜೆ ಮಾಡಿ, ಅವರ ಚಿನ್ನದ ಪ್ರತಿಮೆ ಮಾಡಿಸಿ ದ್ವಿಜರಿಗೆ ದಾನಕೊಡಬೇಕು. ಇದರಂತೆ ಉಮಾಮಹೇಶ್ವರರನ್ನು ತದಿಗೆ ಉಪವಾಸಮಾಡಿ, (ಶಕ್ತಿಯಿಲ್ಲದಿದ್ದರೆ ಉಪಹಾರಮಾಡಿ) ಪೂಜಿಸಬೇಕು. ಒಂದು ವರ್ಷದವರೆಗೆ ಹಿಂದೆ ಹೇಳಿದಂತೆ ಪೂಜೆಮಾಡಿ ವ್ರತಮುಗಿದ ಬಳಿಕ ಉಮಾಮಹೇಶ್ವರರ ಚಿನ್ನದ ಮೂರ್ತಿಗಳನ್ನು ಮಾಡಿಸಿ ಸುಸಜ್ಜಿತವಾದ ಹಾಸಿಗೆಯ ಮೇಲಿಟ್ಟು ದ್ವಿಜರಿಗೆ ಒಂದು ಆಕಳು, ಹಾಗೂ ಎತ್ತುಗಳ ಜೊತೆಗೆ ದಾನ ಕೊಡಬೇಕು. ಇದೇ ರೀತಿ ಬ್ರಹ್ಮ, ಸಾವಿತ್ರಿ, ಶಶಿ, ಪುರಂದರರನ್ನು ಒಂದು ವರ್ಷ ಪೂಜೆ ಮಾಡಿ, ವ್ರತ ಸಮಾಪ್ತಿಮಾಡಿ, ಯಥಾಶಕ್ತಿ ದಂಪತಿ ಪೂಜೆಮಾಡಿ, ಧಾನ್ಯ, ಅಲಂಕಾರ, ಗೋದಾನ ದಕ್ಷಿಣೆಗಳೊಂದಿಗೆ ದಾನ ಕೊಡಬೇಕು. ಈ ಸೌಭಾಗ್ಯಶಯನ ವ್ರತಮಾಡಿದ ಹೆಣ್ಣು ಮಗಳು ಇಷ್ಟಾರ್ಥ ಹೊಂದಿ ಉತ್ತಮ ಗತಿಯನ್ನು ಪಡೆಯುವಳು. ಈ ವ್ರತವನ್ನು ಫಲಾಪೇಕ್ಷೆಯಿಂದ ಬಿಡಬಾರದು. ಭಗವತ್ಪ್ರೀತಿಯೇ ಅದರ ಫಲವೆಂದು ತಿಳಿದು, ಅದರಿಂದ ಬರುವ ಪುಣ್ಯಫಲವನ್ನು ಕೂಡ ಪರಮಾತ್ಮನಿಗೆ ಅರ್ಪಿಸಬೇಕು. ಹೀಗೆ ಪ್ರತಿ ತಿಂಗಳೂ ಮಾಡುತ್ತಹೋದರೆ ನರನಿಗೆ ಸೌಂದರ್ಯ, ಸೌಭಾಗ್ಯ, ಆರೋಗ್ಯ, ವಸ್ತ್ರ, ಅಲಂಕಾರ, ಐಶ್ವರ್ಯಗಳು ಯಾವಾಗಲೂ ಸಮೃದ್ಧವಾಗಿರುವವು. ಎಂಟು ಅಥವಾ ಹನ್ನೆರಡು ವರ್ಷ ಈ ಸೌಭಾಗ್ಯಶಯನವ್ರತ ಮಾಡಿದವನು ಬ್ರಹ್ಮಲೋಕದಲ್ಲಿ ಸಾವಿರ ಕಲ್ಪ ಇದ್ದು, ಮುಂದೆ ಶಿವ, ವಿಷ್ಣು ಲೋಕಗಳಿಗೆ ತೆರಳುವನು. ಇದನ್ನು ಪೂರ್ವಕಾಲದಲ್ಲಿ ಕಾಮ, ಸತಧನು, ವರುಣ, ಸೂರ್ಯ, ಕುಬೇರ ಮುಂತಾದವರು ಆಚರಿಸಿ ಪ್ರೇಯಸ್ಸನ್ನೂ, ಶ್ರೇಯಸ್ಸನ್ನೂ ಪಡೆದಿದ್ದಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ವ್ರತ ಕಥನ ಎಂಬ ಇಪ್ಪತ್ತನಾಲ್ಕನೇ ಅಧ್ಯಾಯ ಮುಗಿದುದು*

—o—

**ಭೀಷ್ಮ ಉವಾಚ**

**ಶ್ರುತಮೇತತ್ತ್ವತ್ಪ್ರಸಾದಾದ್ವಿಪ್ರವರ್ಯ ಪುರಾತನಂ ।**
**ಯಜ್ಜ್ಞಾತ್ವಾ ಮುಚ್ಯತೇ ಪಾಪೈಃ ಶ್ರವಣೇನ ತು ಪುಣ್ಯಭಾಕ್ ॥**

ಯಾವದನ್ನು ತಿಳಿದರೆ, ಪಾಪಗಳೆಲ್ಲವೂ ಪರಿಹಾರವಾಗುತ್ತವೆಯೋ ಕೇಳಿದರೆ ಪುಣ್ಯ ಬರುತ್ತದೆಯೊ ಅಂತಹ ಮಂಗಳಕರವಾದ ವ್ರತಗಳ ವಿಧಾನವನ್ನು ನಾನು ನಿಮ್ಮ ಅನುಗ್ರಹದಿಂದ, ದ್ವಿಜೋತ್ತಮರೆ, ಕೇಳಿದ್ದೇನೆ. ಈಗ ಅತ್ಯದ್ಭುತವಾದ ತೀರ್ಥ ಮಹಿಮೆಯನ್ನು ಕೇಳಬೇಕೆಂದು ನನಗೆ ಅಪೇಕ್ಷೆ ಆಗಿದೆ. ಪೂಜ್ಯರಾದ ತಾವು ಅದನ್ನು ಬಿತ್ತರಿಸಬೇಕು.

**ಪುಲಸ್ತ್ಯ:**- ತೀರ್ಥಗಳು ಅನೇಕಾನೇಕ ಇರುತ್ತವೆ. ಅವುಗಳ ನಾಮೋಚ್ಚಾರ ದಿಂದಲೇ ಪಾಪನಾಶವಾಗುವದು.

**ತೀರ್ಥಾನಾಂ ದರ್ಶನಂ ಸ್ನಾನಂ ಪುನಸ್ತತ್ರಾವಗಾಹನಂ ।**
**ಸ್ಮರಣಂ ಸರ್ವತೀರ್ಥಾನಾಂ ವಾಂಛಿತಾರ್ಥಫಲಪ್ರದಂ ॥**

ತೀರ್ಥಗಳ ದರ್ಶನಮಾಡುವದು ಎಂದರೆ ನೋಡುವದು, ಸ್ನಾನಮಾಡುವದು, ಮತ್ತು ಅವುಗಳಲ್ಲಿ ಮುಳುಗು ಹಾಕುವದು, ಹಾಗೂ ಎಲ್ಲ ತೀರ್ಥಗಳ ಸ್ಮರಣ ಮಾಡುವದು. ಇವು ಒಂದೊಂದೂ ಇಷ್ಟಾರ್ಥಗಳನ್ನು ಕೊಡುತ್ತವೆ. ತೀರ್ಥ ಯಾತ್ರೆಯ ಉದ್ದೇಶದಿಂದ ಪ್ರಯಣಮಾಡುವ ಮನುಷ್ಯನಿಗೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧಯಾಗದ ಫಲವು ದೊರಕುವದು. ಇದರಲ್ಲಿ ಸಂದೇಹವಿಲ್ಲ. ಅವುಗಳಲ್ಲಿ, ನೀನು ಯಾವುದನ್ನು ಕೇಳಬೇಕೆಂದು ಬಯಸುವಿ ಹೇಳು.

**ಭೀಷ್ಮ:**- ದ್ವಿಜಶ್ರೇಷ್ಠರೆ, ಈಗ ಮೊದಲು ನಾನು ನಿಮ್ಮ ಮುಖದಿಂದ ವಿಷ್ಣುವಿನ ಚರಿತ್ರವನ್ನು ಕೇಳಲು ಇಚ್ಛಿಸುತ್ತೇನೆ. ಸರ್ವಸಮರ್ಥನಾದ ಆ ಶ್ರೀಹರಿಯು ಯಜ್ಞ ಪರ್ವತಕ್ಕೆ ಬಂದು ಹೆಜ್ಜೆಗಳನ್ನು ಇಟ್ಟನಷ್ಟೇ! ದೇವತೆಗಳಿಗೂ ದೇವನಾದ ಅವನು ಹೀಗೇಕೆ ಹೆಜ್ಜೆಗಳನ್ನು ಇರಿಸಿದನು? ಯಾವ ದೈತ್ಯನನ್ನು ನಿಗ್ರಹಿಸಲಿಕ್ಕಾಗಿ ಅವನು ಈ ಪಾದವಿನ್ಯಾಸ ಪದ್ಧತಿಯನ್ನು ಅವಲಂಬಿಸಿದನು? ವೈಕುಂಠದಲ್ಲಿ ಸ್ವರ್ಗದಲ್ಲಿ ಇರುವ ಹರಿಯು ಮನುಷ್ಯಲೋಕದಲ್ಲಿ ಬಂದು ಆ ರೀತಿಯಾಗಿ ಪರಿಮಿತ ಪಾದನ್ಯಾಸ ಮಾಡಲು ಕಾರಣವೇನು? ದೇವಲೋಕಗಳಲ್ಲಿ ಕೂಡ ಇಂದ್ರಾದಿ ದೇವತೆಗಳು ಮಹತ್ತರವಾದ ತಪಸ್ಸಿನಿಂದಲೂ ಅತ್ಯಂತ ಭಕ್ತಿಯಿಂದಲೂ ಆ ಪರಮಾತ್ಮನನ್ನು ನೋಡುತ್ತಾರೆ. ಭಕ್ತಿಯಿಲ್ಲದೆ ಅವನನ್ನು ಯಾರೂ ಕಾಣಲಾರರು. ವರಾಹ ದೇವರು ಮಹರ್ಲೋಕದಲ್ಲಿ ನೆಲೆಸಿದ್ದನಂತೆ. ನರಸಿಂಹ ದೇವರು ಜನಲೋಕದಲ್ಲಿ, ತ್ರಿವಿಕ್ರಮನು ತಪೋಲೋಕದಲ್ಲಿ ಇರುತ್ತಾನೆಂದು ದೊಡ್ಡವರ ಹೇಳಿಕೆ. ಆ ಎಲ್ಲ ಪುಣ್ಯ ಲೋಕಗಳನ್ನು ಬಿಟ್ಟು ಈ ಭೂಲೋಕಕ್ಕೆ ಬಂದು, ಬ್ರಹ್ಮ ದೇವರು ಯಜ್ಞಮಾಡಿದ ಈ ಪುಷ್ಕರ ಕ್ಷೇತ್ರದಲ್ಲಿಯ ಯಜ್ಞ ಪರ್ವತಕ್ಕೆ ಆಗಮಿಸಿ ಇಲ್ಲಿ ಎಣಿಕೆಯ ಮೇಲೆ ಹೆಜ್ಜೆ ಇಟ್ಟದ್ದು ಹೇಗೆ? ಮತ್ತು ಏಕೆ? ಇದೆಲ್ಲವನ್ನು ಬಿತ್ತರಿಸಿ ಹೇಳಿರಿ. ಇದರ ಶ್ರವಣ ಮಾತ್ರದಿಂದಲೇ ಪಾಪಲೋಪವಾಗುವದು ಮಾತ್ರ ನಿಶ್ಚಿತ.

**ಪುಲಸ್ತ್ಯ:-** ವತ್ಸ, ನಿನ್ನ ಪ್ರಶ್ನೆ ಸಮರ್ಪಕವಾಗಿದೆ. ಹಿಂದೆ, ವಿಷ್ಣುವು ಪಾದ ವಿನ್ಯಾಸ ಮಾಡಿದ್ದರ ಕಾರಣವನ್ನು ಹೇಳುತ್ತೇನೆ. ಚಿತ್ತವಿರಿಸಿ, ಕೇಳು.

ಪೂರ್ವಕಾಲದಲ್ಲಿ ದೇವಕಾರ್ಯಸಿದ್ಧಿಗಾಗಿ ಶ್ರೀಹರಿಯು ಶಿವಪರ್ವತದ ಕೆಳಗಡೆ ಇರುವ ಯಜ್ಞ ಪರ್ವತಕ್ಕೆ ಬಂದು, ಪಾದಕ್ಷೇಪ ಮಾಡಿದನು. ದಾನವರಿಂದ ಆಕ್ರಮಿಸಲ್ಪಟ್ಟ ಭೂಮಿಯನ್ನು ತಿರುಗಿ ತೆಗೆದುಕೊಳ್ಳುವುದೇ ಅವನ ಉದ್ದೇಶವಾಗಿತ್ತು. ಬಲಿಷ್ಠರಾದ ದೈತ್ಯರು ಇಂದ್ರಾದಿ ದೇವತೆಗಳನ್ನೆಲ್ಲ ಸೋಲಿಸಿ ಮೂರು ಲೋಕಗಳನ್ನೆಲ್ಲ ಆಕ್ರಮಿಸಿದ್ದರು. ಸ್ವರ್ಗವುಕೂಡ ಅವರ ಪಾದಾಕ್ರಾಂತವಾಗಿತ್ತು. ತಮ್ಮ ಬಾಹುಬಲದಿಂದ ದೇವತೆಗಳ ಯಜ್ಞಾಹುತಿಗಳನ್ನು ಕೂಡ ಕಸಿದುಕೊಂಡಿದ್ದರು. ಅತ್ಯಂತ ಪರಾಕ್ರಮಿಯಾದ ಬಾಷ್ಕಲಿಯು (ಬಲಿ) ದೈತ್ಯರೆಲ್ಲರೂ ಯಜ್ಞದಲ್ಲಿ ಭಾಗೀದಾರರಾಗುವಂತೆ ಏರ್ಪಡಿಸಿದ್ದನು. ಇದರಿಂದ ದೇವೇಂದ್ರನಿಗೆ ಬಹಳ ದುಃಖವಾಯಿತು. ಅವನಿಗೆ ಬದುಕಿನಲ್ಲಿ ಬೇಸರ. ಜೀವನದಲ್ಲಿ ಜಿಗುಪ್ಸೆ. ಆ ದುರ್ಧರ ಪ್ರಸಂಗದಲ್ಲಿ ದೇವರಾಜನು ಹೀಗೆ ಆಲೋಚಿಸಿದನು.

''ದಾನವರ ದೊರೆಯಾದ ಬಾಷ್ಕಲಿಯು ಬಲಿಷ್ಠ. ಯುದ್ಧದಲ್ಲಿ ಅವನನ್ನು ನನ್ನಿಂದ ಕೊಲ್ಲಲಿಕ್ಕೆ ಆಗುವದಿಲ್ಲ. ಬ್ರಹ್ಮದೇವರಿಂದ ಅವಧ್ಯತ್ವ ವರ ಪಡೆದಿದ್ದಾನೆ ಆತ. ನಾನೊಬ್ಬನೇ ಏಕೆ ಯಾವ ದೇವತೆಗಳೂ ಅವನನ್ನು ಗೆಲ್ಲಲಾರರು. ಕೊಲ್ಲಲಾರರು. ಅದಕ್ಕಾಗಿ ನನಗೆ ಬೇರೆ ಉಪಾಯವೇ ಇಲ್ಲ. ಆದುದರಿಂದ ಈ ಸ್ವರ್ಗವಾಸಿಗಳನ್ನೆಲ್ಲ ಕರೆದುಕೊಂಡು ಸತ್ಯಲೋಕಕ್ಕೆ ನಾನು ಹೋಗಿಬಿಡುತ್ತೇನೆ. ಬ್ರಹ್ಮನಿಗೆ ಮೊರೆ ಹೋಗಬೇಕು. ಬೇರೆ ಗತಿಯಿಲ್ಲ.''- ಹೀಗೆ ಆಲೋಚಿಸಿ, ಇಂದ್ರನು ಸುರವೃಂದದೊಂದಿಗೆ ಬ್ರಹ್ಮನ ಭವನಕ್ಕೆ ಬಂದನು. ಮತ್ತು ತನ್ನ ದುಃಖವನ್ನು ತೋಡಿಕೊಳ್ಳುತ್ತ ನುಡಿದನು.

**ಇಂದ್ರ:-** ಪ್ರಭು, ನಾವು ಬಾಳಲಾರದ ಪರಿಸ್ಥಿತಿಯು ಉಂಟಾಗಿದೆ. ಇದು ನಿನಗೆ ಗೊತ್ತಿಲ್ಲವೆ? ನಿನ್ನ ವರದಾನದ ಬಲದಿಂದಲೇ ದೈತ್ಯರು ನಮ್ಮದೆಲ್ಲವನ್ನು ಕಸಿದಿದ್ದಾರೆ. ಬಾಷ್ಕಲಿಯು ಮಹಾ ದುಷ್ಟ. ಅವನು ಮಾಡಿದ ಕರಾಳ ಕೃತ್ಯಗಳನ್ನೆಲ್ಲ ನಿನಗೆ ನಾನು ಹೇಳಿದ್ದೇನೆ. ನೀನು ನಮ್ಮ ಅಜ್ಜನಲ್ಲವೆ? ಆದುದರಿಂದ ಜಗತ್ತಿನ ಶಾಂತಿಗಾಗಿ ಬೇಗನೇ ನೀನು ಏನಾದರೂ ಉಪಾಯವನ್ನು ಮಾಡು. ನಮ್ಮ ಮೊದಲಿನ ವೈಭವವು ಮತ್ತೆ ನಮಗೆ ದೊರಕುವಂತೆ, ಕ್ಷೀಣವಾದ ತೇಜಸ್ಸು ಬೆಳಗುವಂತೆ ಉಪಾಯವನ್ನು ಹೇಳು. ಈಗ ಜಗತ್ತಿನಲ್ಲಿ ವೇದಾಧ್ಯಯನವು ಇಲ್ಲ. ಯಜ್ಞ-ಯಾಗಾದಿಗಳಿಲ್ಲ. ಧರ್ಮ ಕರ್ಮಗಳನ್ನು ಯಾರೂ ಆಚರಿಸುವುದಿಲ್ಲ. ದಂಡ ನೀತಿಯನ್ನು ಎಲ್ಲರೂ ಬಿಟ್ಟಿದ್ದಾರೆ. ಜಗತ್ತೆಲ್ಲವೂ ಅತ್ಯಂತ ಕಷ್ಟ ಪರಿಸ್ಥಿತಿಯಲ್ಲಿ ಕ್ಲೇಶ ಪಡುತ್ತಲಿದೆ.

**ಬ್ರಹ್ಮ:-** ಬಾಷ್ಕಲಿಯನ್ನು ನಾನು ಬಲ್ಲೆ. ಅವನು ಅತ್ಯಂತ ಯೋಗ್ಯ, ಆದರೆ ವರದಾನದಿಂದ ಅವನು ಕೊಬ್ಬಿದ್ದಾನೆ. ಆದುದರಿಂದ ನೀವು ಅವನನ್ನು ಗೆಲ್ಲಲಾರಿರಿ ನನ್ನ ವರವೇ ಅವನಿಗೆ ವಜ್ರ ಕವಚವಾಗಿದೆ. ಆದರೆ ವಿಷ್ಣುವು ಅವನನ್ನು ನಿಗ್ರಹಿಸಬಲ್ಲ.

**ಅಗಸ್ತ್ಯ:-** ಹೀಗೆ ಹೇಳಿ, ಬ್ರಹ್ಮದೇವರು ಒಮ್ಮೆಲೆ ಸಮಾಧಿ ಸ್ಥಿತಿಯನ್ನು ಅವಲಂಬಿಸಿದರು. ಭಕ್ತಿ ಭಾವದಿಂದ ಪರಮಸತ್ವರೂಪಿಯಾದ ಪರಮಾತ್ಮನನ್ನು ಚಿಂತಿಸಿದರು. ಬ್ರಹ್ಮನು ಧ್ಯಾನ ಮಾಡಿದ್ದೇ ತಡ. ಅರೆಗಳಿಗೆಯಲ್ಲಿ ಎಲ್ಲ ದೇವತೆಗಳು ನೋಡನೋಡುತ್ತಲೇ ವಿಷ್ಣುವು ಅಲ್ಲಿ ಪ್ರಾದುರ್ಭೂತನಾದನು. ಮತ್ತು ಬ್ರಹ್ಮ ದೇವರಿಗೆ

''ಬ್ರಹ್ಮನೆ, ನಿನ್ನ ಧ್ಯಾನವನ್ನು ಸಾಕು ಮಾಡು. ನನ್ನ ದರ್ಶನಕ್ಕಾಗಿ ಧ್ಯಾನ ಮಾಡುತ್ತಲಿರುವೆಯಷ್ಟೇ! ಆ ನಾನೇ ನಿನ್ನ ಎದುರು ಬಂದು ನಿಂತಿದ್ದೇನೆ. ಕಣ್ಣು ತೆರೆ, ನನ್ನನ್ನು ನೋಡು. ಬಯಸಿದ್ದನ್ನು ಬೇಡು.'' ಎಂದು ಹೇಳಿದನು.

**ಬ್ರಹ್ಮ** :- ಭಗವನ್, ಎಲ್ಲರಿಗೂ ಸ್ವಾಮಿಯಾದ ನೀನು ಈಗ ನನಗೆ ದರ್ಶನ ಕೊಟ್ಟದ್ದು ಮಹಾ ಪ್ರಸಾದವೇ ಸರಿ. ನಿನ್ನ ಹೊರತು ಜಗತ್ತಿನ ಕಾಳಜಿಯಾರಿಗಿದೆ? ಜಗದ ನಿರ್ಮಾಣಕ್ಕಾಗಿ ನನ್ನನ್ನು ನೀನೇ ಹುಟ್ಟಿಸಿರುವೆಯಷ್ಟೇ! ನಿನ್ನ ಆದೇಶದಂತೆ ನಾನು ಜಗತ್ತನ್ನು ಸೃಷ್ಟಿಸಿದ್ದೇನೆ.ಸೃಷ್ಟಿಯಾದ ಈ ಪ್ರಪಂಚದ ಪಾಲನವು ನಿನ್ನ ಕಾರ್ಯ. ಇದರ ಸಂಹಾರವು ರುದ್ರನ ಕಾರ್ಯ. ಇಂತಹ ಈ ಜಗತ್ತಿನಲ್ಲಿ ಮಹಾತ್ಮನಾದ ಇಂದ್ರನ ರಾಜ್ಯವನ್ನು ಬಾಷ್ಕಲಿಯು ಅಪಹರಿಸಿದ್ದಾನೆ. ಮೂರು ಲೋಕಗಳು ಆ ದಾನವನಿಂದ ಆಕ್ರಮಿಸಲ್ಪಟ್ಟಿವೆ. ಈ ಇಂದ್ರನು ನಿನ್ನ ಭಕ್ತ ಮೇಲೆ ಮಹಾತ್ಮ. ಇವನಿಗೆ ಸಹಾಯ ಮಾಡುವುದು ನಿನ್ನ ಕರ್ತವ್ಯ. ಆದಕ್ಕಾಗಿ ಸರಿಯಾದ ಉಪಾಯವನ್ನು ಹೇಳಿ ಕೊಡು.

**ವಾಸುದೇವ**:- ನೀನು ವರ ಕೊಟ್ಟದ್ದರಿಂದ ಈಗ ಆ ಬಾಷ್ಕಲಿಯನ್ನು ಕೊಲ್ಲಲು ಸಾಧ್ಯವಿಲ್ಲ. ಆದುದರಿಂದ ಉಪಾಯದಿಂದ ಹೇಗಾದರೂ ಬುದ್ಧಿ ಓಡಿಸಿ ಆ ದಾನವನನ್ನು ನಾವು ಕಟ್ಟಿಹಾಕಬೇಕು. ನಾನು ವಾಮನನಾಗುವೆನು. ನನ್ನ ಕುಳ್ಳ ರೂಪವು ದಾನವರ ವಿನಾಶವನ್ನು ಮಾಡುವುದು. ಇಂದ್ರನು ನನ್ನ ಜೊತೆಗೆ ಬಾಷ್ಕಲಿಯ ಮನೆಗೆ ಬರಲಿ. ಅಲ್ಲಿ ಹೋಗಿ ಇವನು ನನಗಾಗಿ ವರವನ್ನು ಕೇಳಲಿ. ''ರಾಜನೆ, ಈ ಬ್ರಾಹ್ಮಣ ವಟು ವಾಮನನಿಗೆ ನೀನು ಮೂರು ಹೆಜ್ಜೆ ಭೂಮಿಯನ್ನು ದಾನ ಕೊಡು. ಈ ಬ್ರಾಹ್ಮಣನು ನಿನ್ನನ್ನು ಇಷ್ಟೇ ಕೇಳುತ್ತಾನೆ. ನಾನು ಅವನಿಗಾಗಿ ನಿನ್ನಲ್ಲಿ ಯಾಚನೆ ಮಾಡುತ್ತಲಿದ್ದೇನೆ'' ಎಂದು.

ಇಂದ್ರನು ಹೋಗಿ ಕೇಳಿದ ಬಳಿಕ ಆ ದಾನವ ದೊರೆಯು ತನ್ನ ಜೀವವನ್ನೇ ಕೊಡಲು ಸಿದ್ಧನಾಗುವನು. ಮೂರು ಅಡಿ ನೆಲವನ್ನು ಕೊಡಲಿಕ್ಕಂತೂ ಅವನು ಎಂದೂ ಹಿಂಜರಿಯಲಾರನು. ಹೀಗೆ ಅವನಿಂದ ಮೂರಡಿ ನೆಲವನ್ನು ಬೇಡಿ, ಅವನನ್ನು ವಂಚಿಸಿ, ಬಂಧಿಸಬೇಕು. ಕಟ್ಟಿಹಾಕಿ ಕೊನೆಗೆ ಅವನನ್ನು ಪಾತಾಳಕ್ಕೆ ತಳ್ಳಬೇಕು. ಅನಂತರ ವರಾಹ ರೂಪವನ್ನು ತಾಳಿ, ಆ ಉಳಿದ ದುಷ್ಟರನ್ನು ನಾನು ನಿಗ್ರಹಿಸುತ್ತೇನೆ.

**ಪುಲಸ್ತ್ಯ**:- ಹೀಗೆ ಹೇಳಿ, ವಾಸುದೇವನು ಅಂತರ್ಧಾನ ಹೊಂದಿದನು. ಕೆಲವು ಕಾಲ ಕಳೆಯಿತು. ವಿಷ್ಣುವು ಭೂಲೋಕದಲ್ಲಿರುವ ಅದಿತಿಯ ಗರ್ಭದಲ್ಲಿ ಮೂಡಿದನು. ಕಶ್ಯಪ ಕುಟುಂಬಿನಿಯಾದ ಆ ದೇವಮಾತೆಯು ಭಗವಂತನನ್ನು ತನ್ನ ಉದರದಲ್ಲಿ ಧರಿಸಿದಳು. ಎಲ್ಲ ಕಡೆಗೂ ಶುಭ ಶಕುನಗಳು ಕಾಣತೊಡಗಿದವು. ಮಂದ ವಾಯುವು ಸುಗಂಧವನ್ನು ಹೊತ್ತು ಬೀಸಿತು. ದೇವತೆಗಳ ಹಿತಕ್ಕಾಗಿ ದಯಾಸಿಂಧುವಾದ ಶ್ರೀ ಹರಿಯು ತಾನು ಹೇಳಿದ ಕಾಲದಲ್ಲಿ ಅದಿತಿ ದೇವಿಯ ಮಗನಾಗಿ ಅವತರಿಸಲು, ಅವಳ ಒಡಲಿನಲ್ಲಿ ಸನ್ನಿಹಿತನಾದನು.

**ಅಥ ವಿಹಿತ ವಿಧಾನಂ ಕಾಲಮಾಸಾದ್ಯದೇವಃ ।**
**ತ್ರಿದಶಗಣಹಿತಾರ್ಥಂ ಸರ್ವಭೂತಾನುಕಂಪೀ ।**
**ವಿಮಲ ವಿರಳಕೇಶಶ್ಚಂದ್ರಖಂಡೋದಯಶ್ರೀ ।**
**ರದಿತಿ ತನಯ ಭಾವಂ ದೇವದೇವಶ್ಚಕಾರ ॥**

**ಅವತರತಿ ಚ ವಿಷ್ಣೌ ಸಿದ್ಧದೇವಾಸುರಾಣಾ-**
**ಮನಿಮಿಷನಯನಾನಾಂ ವಿಪ್ರಸೇದುರ್ಮುಖಾನಿ ।**
**ಅತಿವಿಗತರಜೋಭಿರ್ವಾಯುಭಿಸ್ಸಂವಹದ್ಭಿ**
**ರ್ದಿನಮಪಿ ಚ ತದಾಸೀಜ್ಜನ್ಮವಿಷ್ಣೋಸ್ಸ ಗರ್ಭೇ ॥**
**ಪ್ರವಿಶತಿ ಖಲು ಗರ್ಭೇಽಸಾಪಿ ದೇವೀ ಶ್ರಮಾರ್ತಾ ।**
**ನತ ಜಘನಭರಾರ್ತಾ ಮಂದಸಂಚಾರರಮ್ಯಾ ।**
**ಅಲಸವದನಖೇದಂ ಪಾಂಡುಭಾವಂ ವಹತೀ ।**
**ಗುರುತರಮವಗಾಢಂ ಗರ್ಭಮೇವೋದ್ವಹಂತೀ ॥**

ವಿಷ್ಣುವು ಅವತರಿಸಹೊರಟಾಗ ಎಲ್ಲ ದೇವತೆಗಳ ಹಾಗೂ ಸಿದ್ಧರ ಮತ್ತು ಯೋಗ್ಯರ ಅಮರರ ಮುಖಗಳು ತಾವಾಗಿ ಅರಳಿದವು. ಗಾಳಿಯಲ್ಲಿ ಹೆಚ್ಚಿನ ರಜಸ್ಸು ಇಲ್ಲದೆ ಹಿತಮಿತವಾಗಿ ವಾಯು ಲಹರಿಗಳು ಬೀಸಿದವು. ಇಂತಹ ಶುಭದಿನದಂದು ವಿಷ್ಣುವು ಅದಿತಿಯ ಗರ್ಭದಲ್ಲಿ ಅವತರಿಸಿದನು. ಹರಿಯು ಗರ್ಭದಲ್ಲಿ ಮೂಡುವದೊಂದೇ ತಡ, ಅದಿತಿದೇವಿ ಗರ್ಭಭಾರದಿಂದ ಮೆಲ್ಲಮೆಲ್ಲನೆ ಸಂಚರಿಸತೊಡಗಿದಳು. ಆಲಸ್ಯವು ತಲೆದೋರಿತು. ಮುಖವು ಬಳಲಿದಂತೆ ಎನಿಸಿತು. ದೇಹವು ಬಸವಳಿದಂತೆ ಕಂಡಿತು. ದೇಹದಲ್ಲಿ ಬಿಳಿ ಛಾಯೆ ಕಂಡುಬಂದಿತು. ಮುಖದ ಮೇಲೆ ವಿಲಕ್ಷಣ ಕಾಂತಿಯು ಸೂಸುತ್ತಲಿತ್ತು. ನಾರಾಯಣನ ಈ ಗರ್ಭಪ್ರವೇಶದಿಂದಲೇ ಪ್ರಾಣಿಗಳ ಸಂಕಷ್ಟಗಳು ದೂರವಾದವು. ದುಃಖಗಳು ಪರಿಹಾರವಾದವು. ಮನೋರಥಗಳು ಈಡೇರಿದವು. ಭಗವಂತನು ಉದರದಲ್ಲಿ ಸನ್ನಿಹಿತನಾದಾಗ ಅದಿತಿದೇವಿಗೆ ಬಗೆಬಗೆಯ ಬಯಕೆಗಳು ಚಿತ್ರ ವಿಚಿತ್ರವಾಗಿ ಆಗುತ್ತಿದ್ದವು. ''ಒಮ್ಮೆಲೆ ಆಕಾಶಕ್ಕೆ ನೆಗೆಯಬೇಕು, ಬಲಿಯನ್ನು ನಿಗ್ರಹಿಸಿ ಪಾತಾಳಕ್ಕೆ ಕಳಿಸಬೇಕು, ಇಂದ್ರನಿಗೆ ನಾನು ಕೊಟ್ಟ ಧನ, ಐಶ್ವರ್ಯ, ಸ್ಥಾನಮಾನಗಳನ್ನೆಲ್ಲ ಅಪಹರಿಸಿದ ದಾನವರನ್ನು ಸಂಹರಿಸಬೇಕು, ದೇವತೆಗಳನ್ನೆಲ್ಲ ಸ್ವರ್ಗದಲ್ಲಿ ಸ್ಥಾಪಿಸಿ, ದಾನವರನ್ನು ಪಾತಾಳಕ್ಕೆ ತಳ್ಳಬೇಕು.'' ಹೀಗೆ ಬಗೆ ಬಗೆಯ ಅಪೇಕ್ಷೆಗಳು ಅವಳಲ್ಲಿ ಮೂಡುತ್ತಿದ್ದವು. ಒಮ್ಮೊಮ್ಮೆ ಅವಳಿಗೆ ಇಂತಹ ವಿಚಾರಗಳನ್ನು ಚಿಂತಿಸಿ, 'ನನಗೆ ಇಂತಹ ಆಲೋಚನೆ ಏಕೆ ಬರುತ್ತವೆ? ನನಗೆ ಏನಾದರೂ ಗಾಳಿ ಹಾಯ್ದಿದೆಯೆ? ಬುದ್ಧಿ ಭ್ರಮಣೆಯಾಗಿದೆಯೆ? ಹೀಗೆ ನಾನು ಎಂದೂ ಯೋಚಿಸಿಲ್ಲ. ನನ್ನಲ್ಲಿ ಯಾವುದಾದರೂ ಆವೇಶ ಬಂದಿದೆಯೆ?' ಎಂದು ತನ್ನಲ್ಲಿಯೇ ವಿಮರ್ಶೆ ಮಾಡಿಕೊಳ್ಳುತ್ತಿದ್ದಳು.

ಹೀಗೆ ಒಂದು ಸಾವಿರ ದಿವ್ಯ ವರ್ಷ, ಅವಳು ದೇವನನ್ನು ಗರ್ಭದಲ್ಲಿ ಧರಿಸಿದಳು. ಅನಂತರ ಒಂದು ಶುಭ ಮುಹೂರ್ತದಲ್ಲಿ ಜಗತ್ತಿಗೆಲ್ಲ ಕ್ಷೇಮಂಕರನಾದ ವಾಮನನು ಅತಿದಿಯ ಉದರದಿಂದ ಅವತರಿಸಿದನು. ಅವನು ಹುಟ್ಟಿದ ಕೂಡಲೇ ದೈತ್ಯರ ಕಣ್ಣುಗಳು ಕುರುಡಾದಂತಾದವು. ಸುಗಂಧ ಗಾಳಿಯು ಎಲ್ಲೆಡೆಗೂ ಬೀಸಿತು ತಿಳಿನೀರು ನದಿ ನದಗಳಲ್ಲಿ ತುಳುಕಾಡಿದವು. ಪುತ್ರನ ಮುಖವನ್ನು ಕಂಡು, ತೇಜಃ ಪುಂಜವಾದ ಅವನ ದೇಹದೀಪ್ತಿಯನ್ನು ನೋಡಿ ಕಶ್ಯಪರಿಗೆ ಪರಮಾನಂದವಾಯಿತು ಮೂರು ಲೋಕದ ಎಲ್ಲ ಸಜ್ಜನರ ಮನಸ್ಸಿನಲ್ಲಿ ವಿಚಿತ್ರವಾದ ಉತ್ಸಾಹವು ಒಮ್ಮೆಲೆ ಹೊರಹೊಮ್ಮಿತು. ದೇವದುಂದುಭಿಗಳು ಸ್ವರ್ಗಲೋಕದಲ್ಲಿ ಮೊಳಗಿದವು. ಮೂರು ಲೋಕಗಳ

''ಬ್ರಹ್ಮನೆ, ನಿನ್ನ ಧ್ಯಾನವನ್ನು ಸಾಕು ಮಾಡು. ನನ್ನ ದರ್ಶನಕ್ಕಾಗಿ ಧ್ಯಾನ ಮಾಡುತ್ತಲಿರುವೆಯಷ್ಟೇ ! ಆ ನಾನೇ ನಿನ್ನ ಎದುರು ಬಂದು ನಿಂತಿದ್ದೇನೆ. ಕಣ್ಣು ತೆರೆ, ನನ್ನನ್ನು ನೋಡು. ಬಯಸಿದ್ದನ್ನು ಬೇಡು.'' ಎಂದು ಹೇಳಿದನು.

**ಬ್ರಹ್ಮ** :- ಭಗವನ್, ಎಲ್ಲರಿಗೂ ಸ್ವಾಮಿಯಾದ ನೀನು ಈಗ ನನಗೆ ದರ್ಶನ ಕೊಟ್ಟದ್ದು ಮಹಾ ಪ್ರಸಾದವೇ ಸರಿ. ನಿನ್ನ ಹೊರತು ಜಗತ್ತಿನ ಕಾಳಜಿಯಾರಿಗಿದೆ? ಜಗದ ನಿರ್ಮಾಣಕ್ಕಾಗಿ ನನ್ನನ್ನು ನೀನೇ ಹುಟ್ಟಿಸಿರುವೆಯಷ್ಟೇ! ನಿನ್ನ ಆದೇಶದಂತೆ ನಾನು ಜಗತ್ತನ್ನು ಸೃಷ್ಟಿಸಿದ್ದೇನೆ.ಸೃಷ್ಟಿಯಾದ ಈ ಪ್ರಪಂಚದ ಪಾಲನವು ನಿನ್ನ ಕಾರ್ಯ. ಇದರ ಸಂಹಾರವು ರುದ್ರನ ಕಾರ್ಯ. ಇಂತಹ ಈ ಜಗತ್ತಿನಲ್ಲಿ ಮಹಾತ್ಮನಾದ ಇಂದ್ರನ ರಾಜ್ಯವನ್ನು ಬಾಷ್ಕಲಿಯು ಅಪಹರಿಸಿದ್ದಾನೆ. ಮೂರು ಲೋಕಗಳು ಆ ದಾನವನಿಂದ ಆಕ್ರಮಿಸಲ್ಪಟ್ಟಿವೆ. ಈ ಇಂದ್ರನು ನಿನ್ನ ಭಕ್ತ ಮೇಲೆ ಮಹಾತ್ಮ. ಇವನಿಗೆ ಸಹಾಯ ಮಾಡುವುದು ನಿನ್ನ ಕರ್ತವ್ಯ. ಅದಕ್ಕಾಗಿ ಸರಿಯಾದ ಉಪಾಯವನ್ನು ಹೇಳಿ ಕೊಡು.

**ವಾಸುದೇವ**:- ನೀನು ವರ ಕೊಟ್ಟದ್ದರಿಂದ ಈಗ ಆ ಬಾಷ್ಕಲಿಯನ್ನು ಕೊಲ್ಲಲು ಸಾಧ್ಯವಿಲ್ಲ. ಆದುದರಿಂದ ಉಪಾಯದಿಂದ ಹೇಗಾದರೂ ಬುದ್ಧಿ ಓಡಿಸಿ ಆ ದಾನವನನ್ನು ನಾವು ಕಟ್ಟಿಹಾಕಬೇಕು. ನಾನು ವಾಮನನಾಗುವೆನು. ನನ್ನ ಕುಳ್ಳ ರೂಪವು ದಾನವರ ವಿನಾಶವನ್ನು ಮಾಡುವುದು. ಇಂದ್ರನು ನನ್ನ ಜೊತೆಗೆ ಬಾಷ್ಕಲಿಯ ಮನೆಗೆ ಬರಲಿ. ಅಲ್ಲಿ ಹೋಗಿ ಇವನು ನನಗಾಗಿ ವರವನ್ನು ಕೇಳಲಿ. ''ರಾಜನೆ, ಈ ಬ್ರಾಹ್ಮಣ ವಟು ವಾಮನನಿಗೆ ನೀನು ಮೂರು ಹೆಜ್ಜೆ ಭೂಮಿಯನ್ನು ದಾನ ಕೊಡು. ಈ ಬ್ರಾಹ್ಮಣನು ನಿನ್ನನ್ನು ಇಷ್ಟೇ ಕೇಳುತ್ತಾನೆ. ನಾನು ಅವನಿಗಾಗಿ ನಿನ್ನಲ್ಲಿ ಯಾಚನೆ ಮಾಡುತ್ತಲಿದ್ದೇನೆ'' ಎಂದು.

ಇಂದ್ರನು ಹೋಗಿ ಕೇಳಿದ ಬಳಿಕ ಆ ದಾನವ ದೊರೆಯು ತನ್ನ ಜೀವವನ್ನೇ ಕೊಡಲು ಸಿದ್ಧನಾಗವನು. ಮೂರು ಅಡಿ ನೆಲವನ್ನು ಕೊಡಲಿಕ್ಕಂತೂ ಅವನು ಎಂದೂ ಹಿಂಜರಿಯಲಾರನು. ಹೀಗೆ ಅವನಿಂದ ಮೂರಡಿ ನೆಲವನ್ನು ಬೇಡಿ, ಅವನನ್ನು ವಂಚಿಸಿ, ಬಂಧಿಸಬೇಕು. ಕಟ್ಟಿಹಾಕಿ ಕೊನೆಗೆ ಅವನನ್ನು ಪಾತಾಳಕ್ಕೆ ತಳ್ಳಬೇಕು. ಅನಂತರ ವರಾಹ ರೂಪವನ್ನು ತಾಳಿ, ಆ ಉಳಿದ ದುಷ್ಟರನ್ನು ನಾನು ನಿಗ್ರಹಿಸುತ್ತೇನೆ.

**ಪುಲಸ್ತ್ಯ**:- ಹೀಗೆ ಹೇಳಿ, ವಾಸುದೇವನು ಅಂತರ್ಧಾನ ಹೊಂದಿದನು. ಕೆಲವು ಕಾಲ ಕಳೆಯಿತು. ವಿಷ್ಣುವು ಭೂಲೋಕದಲ್ಲಿರುವ ಅದಿತಿಯ ಗರ್ಭದಲ್ಲಿ ಮೂಡಿದನು. ಕಶ್ಯಪ ಕುಟುಂಬಿನಿಯಾದ ಆ ದೇವಮಾತೆಯು ಭಗವಂತನನ್ನು ತನ್ನ ಉದರದಲ್ಲಿ ಧರಿಸಿದಳು. ಎಲ್ಲ ಕಡೆಗೂ ಶುಭ ಶಕುನಗಳು ಕಾಣತೊಡಗಿದವು. ಮಂದ ವಾಯುವು ಸುಗಂಧವನ್ನು ಹೊತ್ತು ಬೀಸಿತು. ದೇವತೆಗಳ ಹಿತಕ್ಕಾಗಿ ದಯಾಸಿಂಧುವಾದ ಶ್ರೀ ಹರಿಯು ತಾನು ಹೇಳಿದ ಕಾಲದಲ್ಲಿ ಅದಿತಿ ದೇವಿಯ ಮಗನಾಗಿ ಅವತರಿಸಲು, ಅವಳ ಒಡಲಿನಲ್ಲಿ ಸನ್ನಿಹಿತನಾದನು.

ಅಥ ವಿಹಿತ ವಿಧಾನಂ ಕಾಲಮಾಸಾದ್ಯದೇವಃ ।
ತ್ರಿದಶಗಣಹಿತಾರ್ಥಂ ಸರ್ವಭೂತಾನುಕಂಪೀ ।
ವಿಮಲ ವಿರಳಕೇಶಶ್ಚಂದ್ರಖಂಡೋದಯಶ್ರೀ ।
ರದಿತಿ ತನಯ ಭಾವಂ ದೇವದೇವಶ್ಚಕಾರ ॥

**ಅವತರತಿ ಚ ವಿಷ್ಣೌ ಸಿದ್ಧದೇವಾಸುರಾಣಾ-**
**ಮನಿಮಿಷನಯನಾನಾಂ ವಿಪ್ರಸೇದುರ್ಮುಖಾನಿ ।**
**ಅತಿವಿಗತರಜೋಭಿರ್ವಾಯುಭಿಸ್ಸಂವಹದ್ಭಿ**
**ರ್ದಿನಮಪಿ ಚ ತದಾಸೀಜ್ಜನ್ಮ ವಿಷ್ಣೋಸ್ಸ ಗರ್ಭೇ ॥**
**ಪ್ರವಿಶತಿ ಖಲು ಗರ್ಭೇऽಸಾಪಿ ದೇವೀ ಶ್ರಮಾರ್ತಾ ।**
**ನತ ಜಘನಭರಾರ್ತಾ ಮಂದಸಂಚಾರರಮ್ಯಾ ।**
**ಅಲಸವದನಖೇದಂ ಪಾಂಡುಭಾವಂ ವಹತೀ ।**
**ಗುರುತರಮವಗಾಢಂ ಗರ್ಭಮೇವೋದ್ವಹಂತೀ ॥**

ವಿಷ್ಣುವು ಅವತರಿಸಹೊರಟಾಗ ಎಲ್ಲ ದೇವತೆಗಳ ಹಾಗೂ ಸಿದ್ಧರ ಮತ್ತು ಯೋಗ್ಯರ ಅಮರರ ಮುಖಗಳು ತಾವಾಗಿ ಅರಳಿದವು. ಗಾಳಿಯಲ್ಲಿ ಹೆಚ್ಚಿನ ರಜಸ್ಸು ಇಲ್ಲದೆ ಹಿತಮಿತವಾಗಿ ವಾಯು ಲಹರಿಗಳು ಬೀಸಿದವು. ಇಂತಹ ಶುಭದಿನದಂದು ವಿಷ್ಣುವು ಅದಿತಿಯ ಗರ್ಭದಲ್ಲಿ ಅವತರಿಸಿದನು. ಹರಿಯು ಗರ್ಭದಲ್ಲಿ ಮೂಡುವದೊಂದೇ ತಡ, ಅದಿತಿದೇವಿ ಗರ್ಭಭಾರದಿಂದ ಮೆಲ್ಲಮೆಲ್ಲನೆ ಸಂಚರಿಸತೊಡಗಿದಳು. ಆಲಸ್ಯವು ತಲೆದೋರಿತು. ಮುಖವು ಬಳಲಿದಂತೆ ಎನಿಸಿತು. ದೇಹವು ಬಸವಳಿದಂತೆ ಕಂಡಿತು. ದೇಹದಲ್ಲಿ ಬಿಳಿ ಛಾಯೆ ಕಂಡುಬಂದಿತು. ಮುಖದ ಮೇಲೆ ವಿಲಕ್ಷಣ ಕಾಂತಿಯು ಸೂಸುತ್ತಲಿತ್ತು. ನಾರಾಯಣನ ಈ ಗರ್ಭಪ್ರವೇಶದಿಂದಲೇ ಪ್ರಾಣಿಗಳ ಸಂಕಷ್ಟಗಳು ದೂರವಾದವು. ದುಃಖಗಳು ಪರಿಹಾರವಾದವು. ಮನೋರಥಗಳು ಈಡೇರಿದವು. ಭಗವಂತನು ಉದರದಲ್ಲಿ ಸನ್ನಿಹಿತನಾದಾಗ ಅದಿತಿದೇವಿಗೆ ಬಗೆಬಗೆಯ ಬಯಕೆಗಳು ಚಿತ್ರ ವಿಚಿತ್ರವಾಗಿ ಆಗುತ್ತಿದ್ದವು. ''ಒಮ್ಮೆಲೆ ಆಕಾಶಕ್ಕೆ ನೆಗೆಯಬೇಕು, ಬಲಿಯನ್ನು ನಿಗ್ರಹಿಸಿ ಪಾತಾಳಕ್ಕೆ ಕಳಿಸಬೇಕು, ಇಂದ್ರನಿಗೆ ನಾನು ಕೊಟ್ಟ ಧನ, ಐಶ್ವರ್ಯ, ಸ್ಥಾನಮಾನಗಳನ್ನೆಲ್ಲ ಅಪಹರಿಸಿದ ದಾನವರನ್ನು ಸಂಹರಿಸಬೇಕು, ದೇವತೆಗಳನ್ನೆಲ್ಲ ಸ್ವರ್ಗದಲ್ಲಿ ಸ್ಥಾಪಿಸಿ, ದಾನವರನ್ನು ಪಾತಾಳಕ್ಕೆ ತಳ್ಳಬೇಕು.'' ಹೀಗೆ ಬಗೆ ಬಗೆಯ ಅಪೇಕ್ಷೆಗಳು ಅವಳಲ್ಲಿ ಮೂಡುತ್ತಿದ್ದವು. ಒಮ್ಮೊಮ್ಮೆ ಅವಳಿಗೆ ಇಂತಹ ವಿಚಾರಗಳನ್ನು ಚಿಂತಿಸಿ, 'ನನಗೆ ಇಂತಹ ಆಲೋಚನೆ ಏಕೆ ಬರುತ್ತವೆ? ನನಗೆ ಏನಾದರೂ ಗಾಳಿ ಹಾಯ್ದಿದೆಯೆ? ಬುದ್ಧಿ ಭ್ರಮಣೆಯಾಗಿದೆಯೆ? ಹೀಗೆ ನಾನು ಎಂದೂ ಯೋಚಿಸಿಲ್ಲ. ನನ್ನಲ್ಲಿ ಯಾವುದಾದರೂ ಆವೇಶ ಬಂದಿದೆಯೆ?' ಎಂದು ತನ್ನಲ್ಲಿಯೇ ವಿಮರ್ಶೆ ಮಾಡಿಕೊಳ್ಳುತ್ತಿದ್ದಳು.

ಹೀಗೆ ಒಂದು ಸಾವಿರ ದಿವ್ಯ ವರ್ಷ, ಅವಳು ದೇವನನ್ನು ಗರ್ಭದಲ್ಲಿ ಧರಿಸಿದಳು. ಅನಂತರ ಒಂದು ಶುಭ ಮುಹೂರ್ತದಲ್ಲಿ ಜಗತ್ತಿಗೆಲ್ಲ ಕ್ಷೇಮಂಕರನಾದ ವಾಮನನು ಅತಿದಿಯ ಉದರದಿಂದ ಅವತರಿಸಿದನು. ಅವನು ಹುಟ್ಟಿದ ಕೂಡಲೇ ದೈತ್ಯರ ಕಣ್ಣುಗಳು ಕುರುಡಾದಂತಾದವು. ಸುಗಂಧ ಗಾಳಿಯು ಎಲ್ಲೆಡೆಗೂ ಬೀಸಿತು ತಿಳಿನೀರು ನದಿ ನದಗಳಲ್ಲಿ ತುಳುಕಾಡಿದವು. ಪುತ್ರನ ಮುಖವನ್ನು ಕಂಡು, ತೇಜಃ ಪುಂಜವಾದ ಅವನ ದೇಹದೀಪ್ತಿಯನ್ನು ನೋಡಿ ಕಶ್ಯಪರಿಗೆ ಪರಮಾನಂದವಾಯಿತು ಮೂರು ಲೋಕದ ಎಲ್ಲ ಸಜ್ಜನರ ಮನಸ್ಸಿನಲ್ಲಿ ವಿಚಿತ್ರವಾದ ಉತ್ಸಾಹವು ಒಮ್ಮೆಲೆ ಹೊರಹೊಮ್ಮಿತು. ದೇವದುಂದುಭಿಗಳು ಸ್ವರ್ಗಲೋಕದಲ್ಲಿ ಮೊಳಗಿದವು. ಮೂರು ಲೋಕಗಳ

ಕಷ್ಟಾನಿಷ್ಟಗಳೆಲ್ಲ ಒಡನೆ ಪರಿಹೃತವಾದವು ಗಂಧರ್ವರ ಗುಂಪು ಉಚ್ಚ ಧ್ವನಿಯಲ್ಲಿ ಹಾಡಿತು. ಸುರಸುಂದರಿಯರು ಮತ್ತು ಅಪ್ಸರಾಂಗನೆಯರು ತಮ್ಮ ತಮ್ಮ ಪತಿ ಹಾಗೂ ಪ್ರಿಯಕರರೊಂದಿಗೆ ಆನಂದದಿಂದ ಕುಣಿದರು, ವಿದ್ಯಾಧರರು ಸಿದ್ಧರು, ಆನಂದದಿಂದ ವಿಮಾನಾರೂಢರಾಗಿ ಕಶ್ಯಪರ ಆಶ್ರಮದ ಬಳಿಗೆ ಬಂದಿಳಿದು ಪರಮಾತ್ಮನನ್ನು ಹೊಗಳಿ ಹಾಡಿ ಸ್ತುತಿಸಿದರು. ಹೀಗೆ ಜೀವಲೋಕವೆಲ್ಲವೂ ವಿಷಾದವಿಮುಕ್ತವಾಗಿ ಸಂತಸಗೊಂಡಿತು. ಮುನಿಮಹರ್ಷಿಗಳು ಪರಮಾತ್ಮನ ಅವತಾರದಿಂದ ಪ್ರಹೃಷ್ಟರಾಗಿ "ಜಯ ಜಯ, ಭಗವನ್ ಪರಮಾತ್ಮನೇ, ನಿನಗೆ ಗೆಲುವಾಗಲಿ" ಎಂದು ಘೋಷಿಸಿದರು. ಹಲವು ಭಕ್ತರು ತಮ್ಮ ಜನನ ಮರಣದ ಭಯವೆಲ್ಲ ಪರಿಹಾರವಾಗಲಿ ಎಂದು ಅವನ ಧ್ಯಾನಮಾಡಿದರು. ಚರಾಚರ ಪ್ರಪಂಚವೆಲ್ಲ ವಿಷ್ಣುವಿನ ಅವತಾರದಿಂದ ಸಂತೋಷಭರಿತವಾಯಿತು. "ಪರಬ್ರಹ್ಮನಾದ ವಿಷ್ಣುವು ಲೋಕಕ್ಷೇಮಕ್ಕಾಗಿ ಬ್ರಹ್ಮದೇವರಿಂದ ಪ್ರಾರ್ಥಿತನಾಗಿ ವಾಮನ ರೂಪದಿಂದ ಅವತರಿಸಿದ್ದಾನೆ. ಈ ವಾಮನನೇ ವಿಷ್ಣುವು, ಇವನೇ ಬ್ರಹ್ಮಾಂತರ್ಯಾಮಿಯಾಗಿ 'ಬ್ರಹ್ಮ' ಎಂದು ಕರೆಯಲ್ಪಡುತ್ತಾನೆ. ಸರ್ವ ದೇವತೆಗಳಿಗೂ ಪ್ರಬಲನಾದ ಇವನೇ ಮಹೇಶ್ವರ. ಎಲ್ಲ ದೇವತೆಗಳು ಇವನ ಭೃತ್ಯರು. ಯಜ್ಞಗಳು ಇವನ ಉದ್ದೇಶದಿಂದಲೇ ಮಾಡಲ್ಪಡುತ್ತವೆ. ಅವುಗಳಿಗೆ ಫಲಪ್ರದ ಇವನೇ. ಒಂದೇ ಗಾರ್ಹಪತ್ಯಾಗ್ನಿಯು ಸ್ಥಾನಭೇದದಿಂದ ದಕ್ಷಿಣಾಗ್ನಿ, ಆಹವನೀಯಾಗ್ನಿ ಎಂದು ಹೆಸರುಗಳನ್ನು ಹೊಂದುವಂತೆ ಸರ್ವಕರ್ತನಾದ, ಸರ್ವತಂತ್ರ ಸ್ವತಂತ್ರ ವಿಷ್ಣುವು ಬ್ರಹ್ಮರುದ್ರಾದಿಗಳಲ್ಲಿ ಇದ್ದು, ಅವರ ಕಡೆಯಿಂದ ಸೃಷ್ಟಿ ಸಂಹಾರಾದಿ ಕಾರ್ಯ ಮಾಡಿಸಿ, ಬ್ರಹ್ಮ, ರುದ್ರರೆಂಬ ಹೆಸರು ಪಡೆಯುತ್ತಾನೆ.

**ಯಥಾಸೌ ಗಾರ್ಹಪತ್ಯೋಗ್ನಿರನ್ಯ ಸಂಜ್ಞಾಂ ಪುನರ್ವ್ರಜೇತ್ ।**
**ದಕ್ಷಿಣಾಹವನೀಯಾದಿ ಬ್ರಹ್ಮಾದಿಷು ತಥಾಹ್ಯಸೌ ॥**

ಈ ಬ್ರಹ್ಮದೇವನು ಮುಖ್ಯವಾಗಿ ದೇವತಾ ಕಾರ್ಯವನ್ನು ಮಾಡಲಿಕ್ಕೆ ಅವತರಿಸಿದ್ದಾನೆ," ಹೀಗೆ ದೇವತೆಗಳು ವಿಚಾರ ಮಾಡುತ್ತಿರುವಾಗಲೇ ಆ ವಾಮನನು ದೇವೇಂದ್ರನಿಂದ ಒಡಗೂಡಿ, ಬಲಿಚಕ್ರವರ್ತಿಯ ಪಟ್ಟಣಕ್ಕೆ ನಡೆದನು. ದೂರದಿಂದಲೇ ಬಲಿಪುರವು ರತ್ನ ಖಚಿತವಾದ ಗಗನಚುಂಬಿ ಭವನಗಳಿಂದ ಭವ್ಯ ದಿವ್ಯವಾಗಿ ಕಾಣುತ್ತಿತ್ತು. ಅಲ್ಲಿಯ ಬೀದಿಗಳಲ್ಲಿ ಚಲಿಸುವ ಕರ್ಪೂರದ ಬೆಟ್ಟದಂತಿದ್ದ, ಐರಾವತ ವಂಶದಲ್ಲಿ ಜನಿಸಿದ ಆನೆಗಳು ಸಂಚರಿಸುತ್ತಿದ್ದವು. ಮನೋವೇಗದ ಉದ್ದಕೊರಳಿನ ಸುಂದರವಾದ ಕುದುರೆಗಳು ಅಲ್ಲಲ್ಲಿ ಓಡಾಡುತ್ತಿದ್ದವು. ಬಂಗಾರದ ಬಣ್ಣದ ಬೆಲೆವೆಣ್ಣುಗಳು ಮಿಂಚಿನ ಮೂರುತಿಯಂತೆ ಎಲ್ಲೆಡೆ ಸಂಚರಿಸುತ್ತಿದ್ದರು. ಆ ಬಲಿಪುರದಲ್ಲಿ ನೂರಾರು ಸುಂದರವಾದ ಉದ್ಯಾನಗಳು. ಎಲ್ಲೆಡೆಗೂ ಕೊಳಲು, ತಂಬೂರಿ, ತಬಲ ಮುಂತಾದ ವಾದ್ಯಗಳ ಮಧುರ ಧ್ವನಿ, ದ್ವಿಜರ ವೇದ ಘೋಷ, ಯಜ್ಞ ಕುಂಡದಲ್ಲಿ ಹೊತ್ತಿಸಿದ ಹೋಮಧೂಮಗಳು, ಸುಗಂಧ ವಾತಾವರಣವು ವಾಮನನನ್ನು ಸ್ವಾಗತಿಸುತ್ತಿತ್ತು.

ಆ ನಗರದಲ್ಲಿಯೇ ನೆಲೆಸಿರುವ ಬಲಿರಾಜನು ಮೂರು ಲೋಕವನ್ನೇ ಅರ್ಥಾತ್ ಚರಾಚರ ಪ್ರಪಂಚವನ್ನೆಲ್ಲ ಆಳುತ್ತಲಿದ್ದಾನೆ. ಅವನು ದಾನವನಾದರೂ ದೇವತೆಗಳಂತೆ ಧರ್ಮಜ್ಞ, ಕೃತಜ್ಞ, ಸತ್ಯವಾದಿ, ಜಿತೇಂದ್ರಿಯ, ನೀತಿವಿಶಾರದ, ದ್ವಿಜರ ಮೇಲೆ ತುಂಬ

ಪ್ರೀತಿ. ಅವನಿಗೆ ದೀನರ ಮೇಲೆ ದಯೆ, ವೇದ ವೇದಾಂತಗಳ ತತ್ವವನ್ನು ಆ ಬಲಿರಾಜನು ಚೆನ್ನಾಗಿ ಅರಿತಿದ್ದ. ಯಾವ ಪ್ರಾಣಿಯನ್ನೂ ಅವನು ಹಿಂಸಿಸುತ್ತಿರಲಿಲ್ಲ. ಅವನು ಅನೇಕ ಯಜ್ಞಗಳನ್ನು ಗೈಯುತ್ತಿದ್ದ. ತಪಸ್ಸಿನಲ್ಲಿ ಅವನಿಗೆ ತೀವ್ರ ಆಸಕ್ತಿ. ಕ್ಷುಲ್ಲಕ ವಿಚಾರ ಅವನು ಇದ್ದೆಡೆ ಸುಳಿಯದು, ಶೀಲ ಸಂಯಮ ವಿಷಯದಲ್ಲಿ ಅವನು ಭಾರೀ ಕಟ್ಟುನಿಟ್ಟು. ಮಾನ್ಯರನ್ನು ಮನ್ನಿಸುವಲ್ಲಿ ಅವನು ಅಗ್ರೇಸರ. ಚಾರಿತ್ರ್ಯದಿಂದ ಪರಿಶುದ್ಧ. ಯಾವ ಕಾಲದಲ್ಲಿ ಏನನ್ನು ಮಾಡಬೇಕೆನ್ನುವುದು ತಿಳಿದವ. ನೋಡಲು ಸುಂದರ. ನಿಜವಾಗಿಯೂ ಅವನು ಧನ್ಯ. ಜಗತ್ತಿನಲ್ಲಿ ಅವನೊಬ್ಬ ಮಹಾಧನಿ. ಧನಿಯಾಗಿದ್ದಷ್ಟೇ ಮಹಾದಾನಿಯೂ ಆಗಿದ್ದನೆನ್ನುವದೇ ಅವನ ವಿಶೇಷ. ಧರ್ಮಾರ್ಥ ಕಾಮಗಳನ್ನು ಸುಲಭವಾಗಿ ಸಾಧಿಸಿ ಕೊಂಡ ಆ ಬಲಿರಾಜನು ತನ್ನ ಪಟ್ಟಣದಲ್ಲಿದ್ದು ಕೊಂಡೇ ಮೂರು ಲೋಕ ಗೆದ್ದಿದ್ದ. ತನಗೆ ವಿರೋಧವಾಗಿ ನಿಂತ ದೇವ-ದೈತ್ಯರ ದರ್ಪವನ್ನೆಲ್ಲ ದಮನ ಮಾಡಿದ್ದ. ಸಾರ್ವಭೌಮ ಸಿಂಹಾಸನದ ಮೇಲೆ ಆಸೀನನಾಗಿ ಆ ಬಲಿರಾಜನು ರಾಜ್ಯವಾಳುತ್ತಿರುವಾಗ ಎಲ್ಲಿಯೂ ಅಧರ್ಮವು ತಲೆ ಎತ್ತಲಿಲ್ಲ. ಪ್ರಜೆಗಳಲ್ಲಿ ಒಬ್ಬನೂ ದೀನನಿಲ್ಲ. ದರಿದ್ರನಿಲ್ಲ, ಯಾರಿಗೂ ಬೇನೆ ಬರುತ್ತಿರಲಿಲ್ಲ. ಎಳೆ ವಯಸ್ಸಿನಲ್ಲಿ ಯಾರೂ ಸಾಯುತ್ತಿರಲಿಲ್ಲ. ಇನ್ನೊಂದು ವಿಶೇಷವೆಂದರೆ - ಬಲಿರಾಜನ ಸಮಗ್ರ ಸಾಮ್ರಾಜ್ಯದಲ್ಲಿ ಹುಡುಕಿದರೂ ಒಬ್ಬ ಮೂರ್ಖನೂ, ಕುರೂಪಿಯೂ, ದುರ್ವ್ಯಯಿಯೂ ಸಿಗುತ್ತಿರಲಿಲ್ಲ. ಯಾವನೂ ಎಲ್ಲಿಯೂ ತಿರಸ್ಕೃತನಾಗಿರಲಿಲ್ಲ.

ಒಂದೇ ಮಾನವ ದೇಹದಲ್ಲಿ ಇಷ್ಟೆಲ್ಲ ರಾಶಿ ರಾಶಿ ಗುಣಗಳು ಚಮತ್ಕಾರಿಕವಾಗಿ ಮೇಳವಿಸಿದ್ದು ಬ್ರಹ್ಮ ಸೃಷ್ಟಿಯ ಒಂದು ವೈಚಿತ್ರವೇ ಆಗಿದ್ದಿತು. ಇದನ್ನೆಲ್ಲ ಬಲಿಚಕ್ರವರ್ತಿಯ ವೈಶಿಷ್ಟ್ಯವನ್ನು ತಿಳಿದು ಅವನ ವೈರಿಯಾದ ದೇವೇಂದ್ರನು ಅವನನ್ನು ಒಲಿಸಲಿಕ್ಕಾಗಿ ಅವನ ಮನೆಗೆ ಬಂದನು. ಗುಣಲುಬ್ಧನಾಗಿ ಶತ್ರುವಿನ ಮನೆಗೆ ಬರಬೇಕಾದರೆ ದೇವೇಂದ್ರನೂ ಕೂಡ ಮಹಾತ್ಮನೇ ತಾನೇ! ಬಲಿ ಚಕ್ರವರ್ತಿಯ ಮನೆಗೆ ಬಂದು ಇಂದ್ರನು ಸಾಕ್ಷಾತ್ತಾಗಿ ಆ ಬಲಿರಾಜನನ್ನು ದೂರದಿಂದಲೇ ನೋಡಿದನು. ಮಧ್ಯಾಹ್ನ ಸೂರ್ಯನೇ ಈ ಮನೆಯಲ್ಲಿ ಕುಳಿತಂತಿತ್ತು ಅವನ ದಿವ್ಯ ದೀಪ್ತಿ. ಮೂರು ಲೋಕದ ಒಡೆಯನಾದ ದೇವೇಂದ್ರನು ಕೂಡ ಬೆರಗಾಗಿ ನಿಂತ- ಬಲಿರಾಜನ ಆ ತೇಜಃಪುಂಜವಾದ ಮುಖ ಮಂಡಲವನ್ನು ಕಂಡು.

ಸುರರಾಜನ ಈ ಆಕಸ್ಮಿಕ ಆಗಮನವನ್ನು ಕಂಡು, ಸಂಶಯ ಬಂದಿತು- ದೈತ್ಯ ಧುರೀಣರಿಗೆಲ್ಲ. ಅವರು ಮುಂಬಾಗಿಲದಿಂದ ಬಾರದೆ ಅಂತಃಪುರದ ಒಳದಾರಿಯಿಂದ ಓಡುತ್ತ ಬಂದು, ಪಿಸುಮಾತಿನಲ್ಲಿ ಬಲಿರಾಜನನ್ನು ಕುರಿತು ಇಂತೆಂದರು.

**ದಾನವ :-** ದೈತ್ಯರಾಜ, ನಿನ್ನ ರಾಜಧಾನಿಗೆ ಸ್ವತಃ ಸುರಪತಿಯು ನಡೆದು ಬರುತ್ತಿದ್ದಾನೆ. ಇದೊಂದು ಆಶ್ಚರ್ಯವಲ್ಲವೇ? ಪ್ರಭುವೆ, ಆ ಇಂದ್ರನ ಜೊತೆಗೆ ಒಬ್ಬ ತೇಜಸ್ವಿ ದ್ವಿಜನೂ ನಡೆದು ಬರುತ್ತಿದ್ದಾನೆ. ನೋಡಲಿಕ್ಕೆ ಅವನು ಬಹಳ ಕುಳ್ಳನಾಗಿದ್ದಾನೆ. ನಾವು ಈಗ ಏನು ಮಾಡಬೇಕು. ಕೂಡಲೇ ಹೇಳು.

**ಬಲಿರಾಜ :-** ಪಟ್ಟಣವನ್ನೆಲ್ಲ ಅಲಂಕರಿಸಿರಿ. ದೇವರಾಜನನ್ನು ವೈಭವದಿಂದ ರಾಜಧಾನಿಯಲ್ಲಿ ಬರಮಾಡಿಕೊಳ್ಳಿರಿ. ನಮ್ಮ ನಗರಕ್ಕೆ ಬಂದ ಬಳಿಕ ಅವನು ನನಗೆ ಪೂಜ್ಯನೇ ಸರಿ.

**ಪುಲಸ್ತ್ಯ:-** ತನ್ನ ಪರಿವಾರ ವರ್ಗಕ್ಕೆಲ್ಲ ಹಾಗೆ ಆದೇಶವಿತ್ತ ಆ ಬಲಿರಾಜ. ಆದರೂ ಕೆಲವರು ಶಕ್ರನ ಸ್ವಾಗತಕ್ಕೆ ನಿಷೇಧ ವ್ಯಕ್ತ ಪಡಿಸಿದರು. ಅವರನ್ನೆಲ್ಲ ದೂರ ಸರಿಸಿ ಬಲಿರಾಜನು ತಾನೇ ಸುರಸಾಮ್ರಾಟನನ್ನು ಎದುರುಗೊಳ್ಳಲು ತನ್ನ ಆಸನದಿಂದ ಎದ್ದು ಹೊರಟನು. ಏಳನೆಯ ಪ್ರಾಕಾರದ ತಮ್ಮ ಅರಮನೆಯ ಆವರಣದಲ್ಲಿ ದೈತ್ಯ ಸಾರ್ವಭೌಮನು ವಾಮನ-ವಾಸವ ಇಬ್ಬರನ್ನೂ ಸಂದರ್ಶಿಸಿದನು. ಅವರಿಬ್ಬರನ್ನು ಕಂಡು, ಬಲಿರಾಜನು ಸಾಷ್ಟಾಂಗ ನಮಸ್ಕಾರ ಮಾಡಿ, ''ಜನ್ಮವೇ ಧನ್ಯವಾಯಿತು.'' ಎಂದುಕೊಂಡನು. ದೈತ್ಯ ಧುರಂಧರನಾದ ಬಲಿಯು ತನ್ನ ಮನಸ್ಸಿನಲ್ಲಿಯೇ ಯೋಚಿಸಿದನು :- 'ನನಗೆ ಸಮಾನನಾದ ಧನ್ಯ ವ್ಯಕ್ತಿಯು ಯಾರು? ದೇವರಾಜನಾದ ಇಂದ್ರನು ತಾನಾಗಿ, ಯಾಚಕನಾಗಿ ಭಿಕ್ಷೆ ಬೇಡಲು ನನ್ನ ಮನೆಯವರೆಗೆ ಬಂದಿದ್ದಾನೆ. ಅರ್ಥಿಯಾಗಿ ನನ್ನ ಮನೆಯ ಬಾಗಿಲಿಗೆ ಬಂದ ಈ ಸುರಪತಿಗೆ ನಾನು ಬೇಡಿದ್ದನ್ನೆಲ್ಲ ಕೊಡಬಲ್ಲೆ- ಮಡದಿ, ಮಕ್ಕಳು, ಮನೆ, ಬೇಕೆಂದರೆ ನನ್ನ ಪಂಚಪ್ರಾಣ ಕೇಳಿದರೂ ಕೊಡಲು ಸಿದ್ಧನಿದ್ದೇನೆ. ನನ್ನ ಪ್ರಾಣವನ್ನೇ ಕೊಡುವಾಗ ಮೂರು ಲೋಕಗಳನ್ನು ಕೊಡುವುದು ಯಾವ ದೊಡ್ಡ ಕಾರ್ಯ? '

ಹೀಗೆ ವಿಚಾರಿಸಿ, ದೇವೇಂದ್ರನನ್ನು ಅತ್ಯಾದರದಿಂದ ಎದುರುಗೊಂಡು, ಪ್ರೀತಿಯಿಂದ ಆಲಿಂಗಿಸಿದನು. ಆನಂದದಿಂದ ಅಭಿನಂದಿಸಿದನು. ಕೈ ಹಿಡಿದು ತನ್ನ ಮನೆಯಲ್ಲಿ ಕರೆತಂದನು. ಆಸನದಲ್ಲಿ ಕೂಡಿಸಿ ಅರ್ಘ್ಯ ನೀಡಿದನು. ಆಚಮನವನ್ನು ಕೊಟ್ಟನು. ಪಾದಗಳನ್ನು ತೊಳೆದು ಪೂಜೆ ಮಾಡಿದನು. ಅನಂತರ ವಿನಯದಿಂದ ನುಡಿದನು.

**ಬಲಿರಾಜ :-** 'ಇಂದು ನನ್ನ ಜನ್ಮ ಸಫಲವಾಯಿತು. ನನ್ನ ಮನೋರಥಗಳು ಪೂರ್ಣವಾದವು. ಇಂದು ನೀನಾಗಿ ಬಂದದ್ದರಿಂದ ನಾನು ದಾನವರಲ್ಲಿ ಒಳ್ಳೇ ಹೆಸರುವಾಸಿ ಆದಂತಾಯಿತು. ಇಂದು ನಾನು ಮಹಾ ಪುಣ್ಯಶಾಲಿ. ಯಜ್ಞ ಯಾಗಗಳನ್ನು ನಾನು ಇದುವರೆಗೆ ಮಾಡಿದ್ದು ನಿನ್ನ ಆಗಮನದಿಂದ ಸಫಲವಾಯಿತು. ಭೂದಾನ, ಗೋದಾನ ಮತ್ತು ರಾಜಸೂಯ ಯಾಗದಿಂದ ಬರುವ ಫಲಗಳು ನಿನ್ನ ದರ್ಶನದಿಂದ ಪ್ರಾಪ್ತವಾಗಿವೆ. ಇದು ಸ್ವಲ್ಪ ತಪಸ್ಸಿನ ಪುಣ್ಯ ಫಲವಲ್ಲ. ನನ್ನ ಮನೆಯವರೆಗೆ ಬರಲು ಉದ್ದೇಶವೇನು ಹೇಳು? ನನ್ನಿಂದ ಆಗ ಬೇಕಾದುದೇನು ತಿಳಿಸು. ನಿನಗೆ ಪ್ರಿಯವಾದ ಯಾವ ಕಾರ್ಯವನ್ನಾದರೂ ಮಾಡಲು ಸಿದ್ಧ. ನೀನು ಸಂದೇಹ ಪಡುವುದೇ ಬೇಡ. ನಿನ್ನ ಮನಸ್ಸಿನಲ್ಲಿ ನೀನು ಯಾವುದಕ್ಕೂ ಯೋಚಿಸಬೇಡ. ನೀನು ಹೇಳಿದ್ದು ಎಷ್ಟೇ ಕಷ್ಟವಾದರೂ ನಾನು ಅದನ್ನು ಮಾಡಿಯೇ ತೀರುತ್ತೇನೆ. ದೇವಗಣದ ಧುರೀಣರೆಲ್ಲರೂ ನಮಿಸುವ ನಿನ್ನ ಚರಣಗಳನ್ನು ವಂದಿಸುವ ಸೌಭಾಗ್ಯವು ಇಂದು ನನಗೆ ಬಂದದ್ದು ನನ್ನ ಮಹಾಪುಣ್ಯವೇ ಸರಿ. ಆದುದರಿಂದ ನೀನು ಬಂದ ಕಾರ್ಯವನ್ನು ಹೇಳು.

**ಇಂದ್ರ :-** ಬಾಷ್ಕಲಿಯೆ, ದೈತ್ಯಸಮಾಜದ ಮುಖ್ಯ ಜನರಿಗೆಲ್ಲರಿಗೂ ನೀನು ಪ್ರಧಾನನು. ನಿನ್ನನ್ನೇ ನಾನು ದಾನವಶ್ರೇಷ್ಠನೆಂದು ತಿಳಿದಿದ್ದೇನೆ. ಇಂತಹ ನೀನು ನಮ್ಮ ಆಗಮನದಿಂದ ಹಿಗ್ಗಿ ಹೂವಾದದ್ದು ಆಶ್ಚರ್ಯವೇನಲ್ಲ. ನಿನ್ನ ಮನೆಗೆ ಬಂದ ಯಾವ ಯಾಚಕರೂ ಇಂದಿನವರೆಗೆ ವಿಮುಖರಾಗಿ ಹೋಗಿಲ್ಲ. ವಾಸ್ತವಿಕವಾಗಿ ನೀನೊಂದು ಕಲ್ಪವೃಕ್ಷವೇ ಆಗಿರುವಿ. ನಿನ್ನಂತಹ ದಾನಿಯು ಬೇರೆ ಯಾರಿದ್ದಾರೆ ! ಕಾಂತಿಯಲ್ಲಿ

ನೀನೊಬ್ಬ ಸೂರ್ಯ, ಗಾಂಭೀರ್ಯದಲ್ಲಿ ಸಾಗರ, ಕ್ಷಮೆಯಲ್ಲಿ ಭೂಮಿ, ಐಶ್ವರ್ಯದಲ್ಲಿ ಸಾಕ್ಷಾತ್ ಶ್ರೀಪತಿಯಾದ ನಾರಾಯಣನಿಗೆ ಸಮಾನನಾಗಿರುವಿ. ಈಗ ನನ್ನ ಜೊತೆಗೆ ಬಂದ ಈ ದ್ವಿಜನು ಕಶ್ಯಪಕುಲದಲ್ಲಿ ಹುಟ್ಟಿದ್ದಾನೆ. ಇವನು ಆಕಾರದಿಂದ ಕುಳ್ಳನಿದ್ದಂತೆ ಹೆಸರಿನಿಂದಲೂ ವಾಮನ. ಈ ದ್ವಿಜನು ನನ್ನ ಬಳಿಗೆ ಬಂದು ಯಜ್ಞ ಮಾಡಲಿಕ್ಕಾಗಿ ಯಜ್ಞ ಪ್ರತಿಷ್ಠೆಗೋಸ್ಕರ ಮೂರು ಹೆಜ್ಜೆ ಭೂಮಿಯನ್ನು ಕೇಳಿದನು. ಆ ಕಾರಣಕ್ಕಾಗಿ ನಾನು ನಿನ್ನ ಬಳಿಗೆ ಯಾಚಕನಾಗಿ ಈಗ ಇಲ್ಲಿಗೆ ಬಂದಿದ್ದೇನೆ. ಈ ದ್ವಿಜನು ಬೇಡಿದ ಮೂರು ಪಾದ ಭೂಮಿಯನ್ನು ನಾನು ಎಲ್ಲಿಂದ ಕೊಡಲಿ ! ನನ್ನ ಒಡೆತನದ ಮೂರು ಲೋಕಗಳನ್ನು ನನ್ನನ್ನು ಸೋಲಿಸಿ ನೀನೇ ಗೆದ್ದು ಕೊಂಡಿರುವಿ. ನಾನೀಗ ನಿರ್ಗತಿಕ. ನನ್ನದೆನ್ನುವ ಭೂಮಿಯಾಗಲಿ, ಸ್ಥಳ, ಹೊಲವಾಗಲಿ ಯಾವುದೂ ಇಲ್ಲ. ನಾನು ಎಲ್ಲಿಂದ ಇವನಿಗೆ ಮೂರುಪಾದ ಭೂಮಿಯನ್ನು ಕೊಡಲಿ ? ನನ್ನ ಬಳಿ ಹಣ, ಹೊಲ, ಯಾವದೂ ಇಲ್ಲದ್ದರಿಂದ ನಾನು ನಿನ್ನ ಬಳಿಗೆ ಯಾಚಕನಾಗಿ ಬಂದಿದ್ದೇನೆ. ಈ ದ್ವಿಜನಿಗೋಸ್ಕರ ನಾನು ನಿನ್ನನ್ನು ಯಾಚಿಸುತ್ತೇನೆ. ನಾನು ನನಗಾಗಿ ಏನನ್ನೂ ಕೇಳುವುದಿಲ್ಲ. ಪರರಿಗೋಸ್ಕರ ನಿನ್ನೆದುರು ಕೈಚಾಚಿದ್ದೇನೆ. ಈ ವಿಷಯದಲ್ಲಿ ನಿನಗೆ ಹೇಗೆ ಮಾಡಿದರೆ ಯೋಗ್ಯವೆನಿಸುವದೋ ಹಾಗೆ ಮಾಡು. ಬಲಿರಾಜ, ನೀನೂ ಕೂಡ ಕಶ್ಯಪವಂಶದಲ್ಲಿ ಹುಟ್ಟಿರುವೆಯಲ್ಲವೆ? ಕಶ್ಯಪ ಕುಟುಂಬಿನಿಯಾದ ದಿತಿದೇವಿಯ ವಂಶದಲ್ಲಿ ಹುಟ್ಟಿದ ನೀನು ದೈತ್ಯಕುಲ ಭೂಷಣನಾಗಿರುವಿ. ಮೂರು ಲೋಕವೇ ನಿನ್ನನ್ನು ಪೂಜಿಸುವುದು. ನಿನ್ನ ಈ ಸತ್ಕುಲ ಪ್ರಸೂತಿ ಮತ್ತು ಸದ್ಗುಣಗಳನ್ನು ಕೇಳಿ ತಿಳಿದೇ ನಾನು ನಿನ್ನ ಬಳಿಗೆ ಇಂದು ಭಿಕ್ಷುಕನಾಗಿ ಬಂದಿದ್ದೇನೆ. ಆದುದರಿಂದ ಈ ದ್ವಿಜನಿಗೆ ಯಜ್ಞ ಪ್ರತಿಷ್ಠೆಗೆ ಇವನ ಪಾದ ಪರಿಮಿತವಾದ ಮೂರು ಪಾದ ಭೂಮಿಯನ್ನು ದಾನ ಕೊಡು. ಈ ವಾಮನ ವಟುವನ್ನು ನೀನು ನೋಡುತ್ತಿರುವೆಯಷ್ಟೆ? ಇವನ ಪಾದಗಳೂ ಬಹಳ ಮಾಟಾಗಿವೆ. ಈ ವಾಮನ ವಟುವಿನ ಕಿರಿದಾದ ಪಾದಗಳ ಪುಟ್ಟ ಪುಟ್ಟ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ನೀನು ದಾನ ಕೊಡಲಾರೆಯಾ? ಮೂರು ಲೋಕಗಳೆಲ್ಲವೂ ಈಗ ನಿನ್ನದಾಗಿರುವದರಿಂದ ಪರರ ಸೊತ್ತನ್ನು ನಾನು ಹೇಗೆ ದಾನ ಕೊಡಲಿ? ಅದಕ್ಕಾಗಿ ಮೂರು ಲೋಕಗಳಿಗೆ ಒಡೆಯನಾದ ನಿನ್ನನ್ನೇ ಬಂದು ಕೇಳಿದ್ದೇವೆ. ನಿನ್ನ ಗುರುಗಳು ಸಮ್ಮತಿಸಿದರೆ, ಮಂತ್ರಿಗಳು ಒಪ್ಪಿದರೆ, ಸೋದರರು ಅನುಮತಿಯಿತ್ತರೆ, ಬಾಂಧವರು 'ಆಗಲಿ' ಎಂದರೆ, ಉಳಿದವರೆಲ್ಲರೂ ಅನುಮೋದಿಸಿದರೆ ಮೂರು ಪಾದ ಭೂಮಿಯನ್ನು ಈ ವಟುವಿಗೆ ದಾನ ನೀಡು. ನಿನ್ನ ಕುಲ ಎಂತಹದು ವಿಚಾರಿಸು, ಬೇಡ ಬಂದವನು ಯಾರು ಎಂಬುದನ್ನು ಆಲೋಚಿಸು, ನನ್ನಂತಹವನು ಮನೆಗೆ ಬಂದು ಬಾಯಿ ತೆರದಾಗ, ನಿನ್ನಂತಹ ಅತ್ಯುಚ್ಚಸ್ಥಾನದಲ್ಲಿರುವ, ಸತ್ಕುಲ ಪ್ರಸೂತನಾದ ಮಹಾವ್ಯಕ್ತಿಗೆ ಹೇಗಾದರೆ ಯೋಗ್ಯವಾಗುವದೋ, ಏನುಮಾಡಿದರೆ ಉಚಿತವೆನಿಸುವದೋ ಆದರಂತೆ ಮಾಡು.

**ಬಲಿ :-** ದೇವೇಂದ್ರನೆ, ನಿನಗೆ ಸುಸ್ವಾಗತ. ನಿನಗೆ ಒಳ್ಳೆಯದಾಗಲಿ, ನೀನು ಕೂಡಲೇ ಕ್ಷೇಮವನ್ನು ಹೊಂದು. ನೀನು ನಿನ್ನ ಸ್ಥಾನವನ್ನು ಮತ್ತೊಮ್ಮೆ ಪರೀಕ್ಷಿಸಿ ನೋಡು. ಎಲ್ಲರಿಗೂ ಆಶ್ರಯ ಭೂತನಾದ ನಿನ್ನ ಸ್ವರೂಪವನ್ನು ತಿಳಿದುಕೊಂಡು, ಮತ್ತೊಮ್ಮೆ ಆತ್ಮ ನಿರೀಕ್ಷೆ ಮಾಡಿಕೋ. ಬ್ರಹ್ಮದೇವನು ನಿನ್ನಲ್ಲಿ ಎಲ್ಲ ಭಾರವನ್ನು ಇಟ್ಟು, ಧ್ಯಾನಲೀನನಾಗಿದ್ದಾನೆ. ದೈತ್ಯರೊಡನೆ ಅನೇಕ ಯುದ್ಧ ಮಾಡಿ ಖಿನ್ನನಾದ ನಾರಾಯಣನು

ಜನತ್ಪಾಲನದ ಭಾರವನ್ನು ನಿನ್ನ ತಲೆಯ ಮೇಲೆ ಹೊರಿಸಿ ಹಾಲಿನ ಕಡಲಿನಲ್ಲಿ ಹಾಯಾಗಿ ಪವಡಿಸಿದ್ದಾನೆ - ಲಕ್ಷ್ಮೀಲಲನೆಯೊಂದಿಗೆ. ಇದರಂತೆ ಹುಲಿದೊಗಲನ್ನು ಉಟ್ಟ ಉಮಾಪತಿಯೂ ಕೂಡ ತನ್ನ ಕಾರ್ಯದ ಭಾರವನ್ನು ಸಹ ನಿನ್ನ ಮೇಲೆ ಇಳುಹಿ ಕೈಲಾಸಪರ್ವತದಲ್ಲಿ ರಮಣಿಯೊಂದಿಗೆ ರಮಿಸುತ್ತಲಿದ್ದಾನೆ. ದೇವರಾಜನೆ, ಹನ್ನೆರಡು ಜನ ಆದಿತ್ಯರು. ಹನ್ನೊಂದು ಜನ ರುದ್ರರು, ಇಬ್ಬರು ಅಶ್ವಿನಿಗಳು, ಎಂಟು ವಸುಗಳು, ನಲವತ್ತೊಂಭತ್ತು ಮರುದ್ಗಣ ಹಾಗೂ ಸನಾತನ ಧರ್ಮನು ನಿನ್ನ ಬಾಹುಗಳ ಆಧಾರದಿಂದಲೇ ಯಜ್ಞದಲ್ಲಿ ಭಾಗಗಳನ್ನು ಹೊಂದಿದ್ದಾರೆ. ನೂರು ಯಜ್ಞಗಳನ್ನು ನೀನು ನೆರವೇರಿಸಿರುವಿ. ವೃತ್ರ, ನಮುಚಿ, ಪಾಕ, ಮುಂತಾದ ದಾನವರನ್ನು ಸಂಹರಿಸಿದವನು ನೀನೇ ಅಲ್ಲವೆ? ನಿನ್ನ ಆಜ್ಞೆಯಿಂದಲೇ ಸರ್ವಸಮರ್ಥನಾದ ವಿಷ್ಣುವು ಹಿರಣ್ಯ ಕಶಿಪುವನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ಕೊಂದು ಹಾಕಿದನು. ನೀನು ಐರಾವತವನ್ನು ಏರಿ ಕೈಯಲ್ಲಿ ವಜ್ರ ಹಿಡಿದು ಬಂದರೆ ತೀರಿತು. ಆಗ ರಣರಂಗದಲ್ಲಿದ್ದ ದಾನವರೆಲ್ಲರೂ ನಿನ್ನ ಆ ಭೈರವರೂಪವನ್ನು ಕಂಡೆ ಸತ್ತು ಹೋಗಿರುತ್ತಾರೆ. ಹಿಂದೆ ನೀನು ಬಲಿಷ್ಠರಾದ ಎಷ್ಟೋ ದಾನವರನ್ನು ಸಂಹರಿಸಿರುವಿಯಲ್ಲವೆ? ಆ ಮಹಾವೀರರ ಮುಂದೆ ನಾನು ಏನೂ ಅಲ್ಲ. ಅವರ ಶಕ್ತಿಯ ಸಾವಿರದಲ್ಲಿಯ ಒಂದು ಅಂಶವೂ ನನ್ನಲ್ಲಿ ಇಲ್ಲ. ಇಂತಹ ಸರ್ವಸಮರ್ಥನಾದ ನಿನ್ನ ಮುಂದೆ ನನ್ನಂತಹ ಅಲ್ಪನು ಯಾವ ಲೆಕ್ಕ? ಇಂದ್ರನೆ, ನೀನು ನಿಜವಾಗಿ ನನ್ನನ್ನು ಉದ್ಧರಿಸಲೆಂದೇ ನನ್ನ ಮನೆಯವರೆಗೆ ಬಂದಿರುವಿ. ನೀನು ಹೇಳಿದ್ದನ್ನು ಕೊಡುವೆನು. ನಿನ್ನ ಮನೋರಥವನ್ನು ಪೂರ್ಣಮಾಡುವೆ. ಬೇಕೆಂದರೆ ನನ್ನ ಪ್ರಾಣವನ್ನೂ ಕೊಡಲು ಸಿದ್ಧ, ದೇವದೇವನೆ, ಬರಿ ಮೂರು ಪಾದ ಭೂಮಿ ಏಕೆ! ನನ್ನ ಈ ಮಡದಿ ಮಕ್ಕಳು, ಭೂಮಿ, ಐಶ್ವರ್ಯ, ಮೂರು ಲೋಕದ ರಾಜ್ಯ, ಇಷ್ಟೇ ಏಕೆ ನನ್ನದೆನ್ನುವ ಎಲ್ಲವನ್ನು ನೀನು ಹೇಳಿದರೆ ಈ ಬ್ರಾಹ್ಮಣನಿಗೆ ಕೊಟ್ಟುಬಿಡುತ್ತೇನೆ. ನನ್ನ ಪರವಾಗಿ ನೀನೇ ಇವನಿಗೆ ನನ್ನ ಸರ್ವಸ್ವವನ್ನೂ ನೀಡಿಬಿಡು. ನಾನು ಸರ್ವಾರ್ಪಣ ಮಾಡಿದರೆ ಅದನ್ನು ಇವನು ಅಂಗೀಕರಿಸಿದರೆ ನನ್ನ ಮೇಲೆ ಈ ಭೂಸುರನು ದೊಡ್ಡ ಕೃಪೆ ಮಾಡಿದಂತೆ, ನಮ್ಮ ಪೂರ್ವ ಪುರುಷರ ಮೇಲೆಯೂ ಇದೊಂದು ಮಹದುಪಕಾರವೆಂದು ಭಾವಿಸುತ್ತೇನೆ. ನನ್ನ ಮನೆಯವರೆಗೆ ಬಂದ ಯಾವದೇ ಯಾಚಕನಿಗೂ ನಾನು ಬೇಡಿದ್ದನ್ನೆಲ್ಲ ಕೊಟ್ಟಿದ್ದೇನೆ. ಬಂದ ಭಿಕ್ಷುಕರೆಲ್ಲ ನನಗೆ ಅತ್ಯಂತ ಪ್ರಿಯತರರೇ. ಅದರಲ್ಲೂ ನೀನಂತೂ ನನಗೆ ಪ್ರಿಯತಮನೇ ಸರಿ. ನೀನು ಬಂದದ್ದು, ಭೂದಾನವನ್ನು ಬೇಡಿದ್ದು, ನನ್ನ ಭಾಗ್ಯ, ಅದರಲ್ಲಿ ವಿಚಾರವೇ ಇಲ್ಲ. ಆದರೆ ಶಚೀಪತಿಯೆ, ಒಂದು ವಿಷಯದಲ್ಲಿ ನನಗೆ ಬಹಳ ನಾಚಿಕೆಯಾಗಿದೆ. ಅದೇನೆಂದರೆ- ನೀನು ಮೂರು ಪಾದ ಭೂಮಿಯನ್ನು ಮಾತ್ರ ಈ ದ್ವಿಜನಿಗೆ ಕೇಳುತ್ತಿರುವಿ. ಇಷ್ಟು ಅಲ್ಪ ಭೂಮಿ ಕೊಡಲು ನನಗೆ ನಾಚಿಕೆ ಅನಿಸುವದು. ಅದರಲ್ಲಿ ಇಂತಹ ಒಳ್ಳೇ ದ್ವಿಜನಿಗಾಗಿ ದಾನ ಕೇಳುತ್ತಿರುವಿ. ಇಂತಹ ಒಳ್ಳೇ ದ್ವಿಜನಿಗೆ ನಾನು ಒಳ್ಳೊಳ್ಳೆ ಗ್ರಾಮಗಳನ್ನೂ ರಾಜ್ಯಗಳನ್ನೂ ಕೊಡುತ್ತೇನೆ. ನಿನಗೆ ಸ್ವರ್ಗಲೋಕವನ್ನೇ ದಾನಕೊಡುತ್ತೇನೆ. ಇದರ ಮೇಲೆ ನಿನಗೆ ಕುದುರೆಗಳನ್ನು, ಆನೆಗಳನ್ನು ಭೂಮಿ, ಧನ, ಬಂಗಾರ, ರತ್ನ, ಪ್ರಾಯದ ತರುಣಿಯರನ್ನು ದಾನ ಕೊಡುತ್ತೇನೆ. ನೋಡಿದ ಮಾತ್ರಕ್ಕೆ ಮುದುಕನೂ ಕೂಡ ಹರೆಯದವನಾಗುವಂತಹ ಸುಂದರ ತರುಣಿಯರನ್ನೇ ನಿನಗೆ ದಾನ ನೀಡುತ್ತೇನೆ. ಹೀಗೆ ನಿನಗೂ ಈ ಬ್ರಾಹ್ಮಣನಿಗೂ

ನಾನು ದಾನ ಕೊಡಲು ಉತ್ಸುಕನಾಗಿದ್ದೇನೆ, ನೀವಿಬ್ಬರೂ ನನ್ನ ಮೇಲೆ ಅನುಗ್ರಹ ಮಾಡಿ ನಾನು ಕೊಡುವ ದಾನ ಸ್ವೀಕರಿಸಿರಿ.

**ಪುಲಸ್ಯ:-** ಬಲಿರಾಜನು ಇಷ್ಟು ಮಾತನಾಡಿದ್ದನ್ನು ಕೇಳಿ, ಅವನ ಪುರೋಹಿತರಾದ ಶುಕ್ರಾಚಾರ್ಯರು ಮುಂದೆ ಬಂದರು. ತಮ್ಮ ಶಿಷ್ಯ ಬಲಿರಾಜನನ್ನು ಕುರಿತು ಮಾತನಾಡಿದರು.

**ಶುಕ್ರಾಚಾರ್ಯ :-** 'ರಾಜನೆ, ನೀನು ಸರ್ವತಂತ್ರ ಸ್ವತಂತ್ರನಾದ ಸಾರ್ವಭೌಮ ಅಷ್ಟವಿಧ ಐಶ್ವರ್ಯವೆಲ್ಲವೂ ನಿನ್ನಲ್ಲಿ ತುಂಬಿ ತುಳುಕಾಡುತ್ತಿದೆ ಇದರಲ್ಲಿ ಸಂದೇಹವಿಲ್ಲ. ಆದರೆ ಯಾರಿಗೆ, ಏನನ್ನು ಕೊಡಬೇಕು. ಎಷ್ಟು ಕೊಡಬೇಕೆಂಬುದು ನಿನಗೆ ಯುಕ್ತಾಯುಕ್ತ ವಿಚಾರವಿಲ್ಲ. ಮಂತ್ರಿ ಮಂಡಲದೊಡನೆ ವಿಚಾರ ಮಾಡಿ, ಯೋಗ್ಯಾಯೋಗ್ಯ ಪರೀಕ್ಷಿಸಿ, ದಾನ ನೀಡು. ನಿನಗೆ ಈಗ ಪ್ರಾಪ್ತವಾದ ಮೂರು ಲೋಕದ ಆಧಿಪತ್ಯವು ಹಾಗೆಯೇ ಅನಾಯಾಸವಾಗಿ ಬಂದುದಲ್ಲ. ಇಂದ್ರಾದಿ ಎಲ್ಲ ದೇವತೆಗಳನ್ನು ಗೆದ್ದು ಈ ತ್ರಿಲೋಕ ಸಾಮ್ರಾಜ್ಯ ಪಡೆದಿದ್ದಿ. ಇವೆಲ್ಲವನ್ನು ಯಾವ ವಿಚಾರವಿಲ್ಲದೆ ದಾನ ನೀಡುವದು ಆತ್ಮ ಘಾತಕ. 'ಮೂರು ಪಾದ ಭೂಮಿಯನ್ನು ಕೊಟ್ಟೆ' ಎಂಬ ವಾಕ್ಯವು ಮುಗಿದ ಕೂಡಲೇ ನೀನು ಬಂಧನವನ್ನು ಹೊಂದ ಬೇಕಾಗುವುದು. ನಿನ್ನೆದುರು ನಿಂತಿರುವ ಈ ದ್ವಿಜನು ಬರಿ ದ್ವಿಜನಲ್ಲ. ಇವನು ಸಾಕ್ಷಾತ್ ವಿಷ್ಣುವೇ. ಇವನಿಗೆ ನೀನು ಏನನ್ನೂ ಕೊಡಕೂಡದು. ಇವನು ನಿನ್ನ ತಂದೆಯನ್ನು ಕೊಂದಿದ್ದಾನೆ. ನಿನ್ನ ತಂದೆಯ ತಂದೆಯನ್ನು ಘಾತ ಮಾಡಿದವನು ನಿನ್ನ ತಾಯಿಯನ್ನು ನಾಶಮಾಡಿದವನು, ನಿನ್ನ ಬಂಧುಗಳನ್ನು ಧ್ವಂಸಗೈದವನು ಇಂದು ಇಲ್ಲಿ ಬಂದು ನಿಂತಿದ್ದಾನೆ. ಮುಂದೆ ಇವನು ನಿನ್ನ ವಂಶ ಧ್ವಂಸ ಮಾಡುವುದರಲ್ಲಿ ಸಂದೇಹವಿಲ್ಲ. ಇವನು ಧರ್ಮಾಧರ್ಮ ವಿಚಾರಿಸುವವನೇ ಇಲ್ಲ. ಕೇವಲ ದೇವತೆಗಳ ಹಿತ ಮಾಡುವದೊಂದೇ ಇವನ ಗುರಿ. ಹಿಂದೆ ಮಾಯಾವಿಯಾದ ಈ ವಿಷ್ಣುವು ಮಾಯೆ ಮೋಸಗಳಿಂದಲೇ ದಾನವರನ್ನೆಲ್ಲ ಸಂಹರಿಸಿದ್ದಾನೆ. ಅದೇ ವಿಷ್ಣುವು ಮತ್ತೆ ಮಾಯೆಯಿಂದ ದ್ವಿಜರೂಪವನ್ನು ಹೊಂದಿ ವಾಮನನಾಗಿ ಕುಳ್ಳ ರೂಪವನ್ನು ನಿನ್ನ ಎದುರು ಪ್ರದರ್ಶನ ಮಾಡಿದ್ದಾನೆ. ಈ ವಿಷಯದಲ್ಲಿ ನಾನು ಎಷ್ಟು ಹೇಳಿದರೂ ಅಷ್ಟೆ. ಒಟ್ಟಾರೆ ನೀನು ಅವನಿಗೆ ಏನೂ ಕೊಡಬೇಡ. ಇವನ ಮೂರು ಅಡಿಯಷ್ಟು ನೆಲದ ಮಾತು ಹಾಗಿರಲಿ. ಒಂದು ನೊಣದ ಹೆಜ್ಜೆಯಷ್ಟು ಕೂಡ ಭೂಮಿಯನ್ನು ಇವನಿಗೆ ಕೊಟ್ಟಿದ್ದಾದರೆ ನೀನು ಸರ್ವ ನಾಶವನ್ನೇ ಹೊಂದುವಿ. ನಿನ್ನ ಸತ್ಯನಾಶಕ್ಕಾಗಿಯೇ ಕಪಟ ವಿಷ್ಣುವು ಈ ನಾಟಕ ವೇಷದಿಂದ ಇಲ್ಲಿಗೆ ಬಂದಿದ್ದಾನೆ. ಕೊಟ್ಟರೆ ಕೆಡುವಿ. 'ಹೂಂ' ಎಂದರೆ ಹಾಳಾಗುವೆ. ನಾನು ಹೇಳುವ ಮಾತು ಅಕ್ಷರಶಃ ಸತ್ಯ ಸತ್ಯ.

**ಪುಲಸ್ಯ :-** ಶುಕ್ರಾಚಾರ್ಯರು ಇಷ್ಟೆಲ್ಲ ಹೇಳಿದರೂ ಬಲಿರಾಜ ಕೇಳಲಿಲ್ಲ.

**ಬಲಿ :-**ಗುರುಗಳೆ, ನಾನು ಪುಣ್ಯ ಬರಲಿ ಎಂಬ ಉದ್ದೇಶದಿಂದ ಈಗ 'ಕೊಡುತ್ತೇನೆ'. ಎಂದು ವಚನ ಕೊಟ್ಟಿದ್ದಾಗಿದೆ. ಕೊಟ್ಟವಚನವನ್ನು ಪಾಲಿಸುವುದು ಸಜ್ಜನರ ಕರ್ತವ್ಯವಲ್ಲವೆ? ನೀವು ಹೇಳಿದಂತೆ ಒಂದು ವೇಳೆ ಇವನು ಭಗವಾನ್ ವಿಷ್ಣುವೇ ಆಗಿದ್ದರೆ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ವಿಷ್ಣು ಬಂದು ನನ್ನಿಂದ ದಾನ ಕೊಂಡರೆ ನನಗಿಂತ ಧನ್ಯರು ಯಾರು ಈ ಜಗತ್ತಿನಲ್ಲಿ? ನನ್ನಿಂದ ದಾನವನ್ನು ತೆಗೆದುಕೊಂಡು ಆ ಭಗವಂತನು ದೇವತೆಗಳನ್ನು ರಕ್ಷಿಸಿದರೆ ನಾನು ಇನ್ನೂ ಧನ್ಯ. ಯಾವ ಭಗವಂತನನ್ನು ಯೋಗಿಗಳು

ನಿರಂತರ ಧ್ಯಾನ ಸಮಾಧಿಯಿಂದ ಭಜಿಸುತ್ತಿದ್ದರೂ ಯಾವನ ದರ್ಶನವನ್ನು ಹೊಂದಲಾರರೊ ಅಂತಹ ಮಹಾ ಪ್ರಭುವು ಇವತ್ತು ನನ್ನ ಕಣ್ಣೆದುರು ಮೂರ್ತಿಮಂತನಾಗಿ ಸಾಕ್ಷಾತ್ಕೃತನಾಗಿದ್ದಾನೆ. ಇದಕ್ಕಿಂತ ಧನ್ಯತೆಯ ಅಳತೆಗೋಲು ಬೇರೇನು ಬೇಕು? ದಾನ ಮಾಡುವಾಗ ಕೈಯಲ್ಲಿ ನೀರು, ದರ್ಭೆ ಹಿಡಿದುಕೊಂಡು **'ಪ್ರೀಯತಾಂ ಭಗವಾನ್ ವಿಷ್ಣುಃ'** ಎಂದು ನುಡಿದು ಭಗವಂತನಾದ ವಿಷ್ಣುವು ಪ್ರೀತನಾಗಲಿ' ಎಂದು ನೀರು ಬಿಟ್ಟವರು ಮೋಕ್ಷವನ್ನೇ ಹೊಂದುತ್ತಾರೆ. ಅಂತಹ ಮಹಾಸ್ವಾಮಿಗೆ ಸಾಕ್ಷಾತ್ತಾಗಿ ಅವನ ಕೈಯಲ್ಲಿಯೇ **'ವಿಷ್ಣುಃ ಪ್ರೀಯತಾಂ'** ಎಂದು ನಾನು ಸಂಕಲ್ಪಮಾಡಿ ನೀರು ಬಿಟ್ಟರೆ, ಸಂತೋಷದಿಂದ ದಾನ ಕೊಟ್ಟರೆ ನನ್ನ ಜನ್ಮ ಉದ್ಧಾರವಾಗಲಾರದೆ? ಗುರುಗಳೆ, ನಾನು ಬಾಲಕನಾಗಿದ್ದಾಗ ನಿಮ್ಮ ಪಾಠಶಾಲೆಗೆ ಬರುವಾಗ ನೀವು ಉಪದೇಶ ಮಾಡಿದ ಒಂದು ಮಾತು ನನಗೆ ಇನ್ನೂ ನೆನಪಿದೆ. ನನ್ನ ಹೃದಯದಲ್ಲಿ ನೆಟ್ಟಿದೆ. 'ಶತ್ರಾವಪಿ ಗೃಹಾಯಾತೆ ನಾಸ್ತ್ಯದೇಯಂತು ಕಿಂಚನ।' ವೈರಿಯು ಮನೆಗೆ ಬಂದರೂ ಕೂಡ ದಾನ ಕೊಡುವವನಿಗೆ ಕೊಡಬಾರದು ಎನ್ನುವದೇ ಇಲ್ಲ. ಬೇಡ ಬಂದವರಿಗೆ ಬಯಸಿದ್ದನ್ನೆಲ್ಲ ಕೊಟ್ಟು ಕೃತಾರ್ಥನಾಗಬೇಕು.' ಆಚಾರ್ಯರೆ, ಬಾಲ್ಯದಲ್ಲಿ ನೀವು ಅಂದು ಹೇಳಿದ ಮಾತು ನನಗೆ ಚೆನ್ನಾಗಿ ಮನದಟ್ಟಾಗಿದೆ. ಆ ಗುರೂಪದೇಶವನ್ನು ಈಗ ಹೇಗೆ ಮೀರಲಿ? ಅದೇ ಮಾತನ್ನು ಅನುಸರಿಸಿ ನಮ್ಮ ಮನೆ ಬಾಗಿಲಿಗೆ ಬೇಡ ಬಂದ ಭಗವಾನ್ ವಿಷ್ಣುವಿಗೆ ನನ್ನ ಪ್ರಾಣಗಳನ್ನೂ ಸಂತೋಷದಿಂದ ನೀಡುತ್ತೇನೆ. ದೇಹಿ ಎಂದು ಯಾಚಕನಾಗಿ ಕೈ ಒಡ್ಡಿದ ದೇವೇಂದ್ರನಿಗೆ ಸ್ವರ್ಗಾಧಿಪತ್ಯವನ್ನು ಕೂಡ ಕೊಟ್ಟುಬಿಡುತ್ತೇನೆ. ಗುರುಗಳೆ, ದಾನದಲ್ಲಿ ಕೆಟ್ಟದ್ದಿಲ್ಲ. ಹೆರವರಿಗೆ ಪೀಡೆಯನ್ನುಂಟುಮಾಡದ ದಾನವು ಮಂಗಳಕರ ದಾನ ನಮ್ಮ ದಾನದಿಂದ ಮತ್ತೊಬ್ಬರಿಗೆ ತೊಂದರೆಯಾಗುವಂತಿದ್ದರೆ ಅಂತಹ ದಾನವು ಅಮಂಗಳಕರ ವೆನಿಸುತ್ತದೆ.

**ಪುಲಸ್ತ್ಯ:-** ಬಲಿಚಕ್ರವರ್ತಿಯು ಗುರುವಿಗೆ ತಿರುಗು ಮಂತ್ರ ಹೇಳಿದಂತೆ ಮಾತನಾಡಿದ ಈ ವಚನ ಕೇಳಿ ಶುಕ್ರಾಚಾರ್ಯರಿಗೆ ನಾಚಿಕೆ ಆಯಿತು. ಅವರು ಹಿಂದೆ ಕೊಟ್ಟ ಉಪದೇಶ ವಚನವನ್ನೇ ಶಿಷ್ಯನು ಅವರ ಕೊರಳಿಗೆ ಕಟ್ಟಿದ್ದರಿಂದ ನಾಚಿಕೆಯಾಗಿ ತಲೆ ತಗ್ಗಿಸಿದರು.

**ಬಲಿ :-** ದೇವತೆಗಳ ದೊರೆಯೇ, ನೀನು ನನ್ನ ಮೇಲೆ ಅನುಗ್ರಹ ಮಾಡು. ಎಲ್ಲ ಭೂಮಿಯನ್ನು ದಾನ ಕೊಡು ಎಂದು ಕೇಳು. ನನ್ನ ಅಧೀನದಲ್ಲಿರುವ ಸಮಸ್ತ ಭೂತಲವೆಲ್ಲವನ್ನು ದಾನ ಕೊಟ್ಟು ಬಿಡುತ್ತೇನೆ. ನೀನು ಕೇಳಿದ ಮೂರುಪಾದ ಭೂಮಿಯನ್ನು ದಾನ ಕೊಡಲು ನನಗೇಕೋ ನಾಚಿಕೆ ಆಗುತ್ತದೆ.

**ಇಂದ್ರ:-** ದಾನವ ಸಾರ್ವಭೌಮನೆ, ನೀನು ಆಡಿದ ಮಾತೇನೋ ನಿಜ. ನಿನ್ನಂತಹ ದೊಡ್ಡ ಮನುಷ್ಯನಿಗೆ ಮೂರು ಅಡಿ ನೆಲ ಕೊಡುವದೆಂದರೆ ನಾಚಿಕೆಯೇ ಸರಿ. ಆದರೆ ಮಾಡುವುದೇನು! ಈ ದ್ವಿಜನು ನನ್ನ ಬಳಿಗೆ ಬಂದು ಅಗ್ನಿ ಪ್ರತಿಷ್ಠೆಗೆಂದು ಮೂರು ಅಡಿ ನೆಲವನ್ನು ಮಾತ್ರ ಬೇಡಿದ್ದಾನೆ. ಅವನಿಗಾಗಿ ನಾನು ಕೂಡ ನಿನ್ನಲ್ಲಿ ಪಾದತ್ರಯ ಪರಿಮಿತ ಪೃಥ್ವಿಯನ್ನು ಮಾತ್ರ ಬೇಡಿದ್ದೇನೆ. ಈ ವಿಷಯದಲ್ಲಿ ನನಗೂ ಏನೂ ಮಾಡಲು ಬರುವಂತಿಲ್ಲ. ಆದುದರಿಂದ ಈ ದ್ವಿಜನು ಕೇಳಿದಷ್ಟೇ ಕೊಟ್ಟು ಕೃತಕೃತ್ಯನಾಗು.

**ಬಲಿ :-** ದೇವರಾಜನೆ, ನೀನು ಹೇಳಿದಂತೆಯೇ ಆಗಲಿ. ಈ ದ್ವಿಜನು ತನ್ನ ಮೂರು ಪುಟ್ಟ ಪಾದಗಳನ್ನು ಇಟ್ಟಷ್ಟು ಭೂಮಿಯನ್ನು ಅವನಿಗೆ ಕೊಡುತ್ತೇನೆ. ನೀನು ಕೂಡ ಅಲ್ಲಿ

ಚಿರಕಾಲ ಸುಖದಿಂದ ಇರು. ಹೀಗೆ ಹೇಳಿ, ಬಲಿರಾಜನು ವಟು ವಾಮನನಿಗೆ ಮೂರು ಪಾದ ಭೂಮಿಯನ್ನು ದಾನ ಕೊಡುತ್ತೇನೆಂದು ಸಂಕಲ್ಪ ಪೂರ್ವಕವಾಗಿ ಹೇಳಿ **'ಪ್ರೀಯತಾಂ ಮೇ ಹರಿಃ ಸ್ವಯಂ'** ಎಂದು ಮೂರಡಿ ಭೂಮಿಯನ್ನು ದಾನ ಕೊಟ್ಟು ನೀರು ಬಿಟ್ಟನು. ಬಲಿಚಕ್ರವರ್ತಿಯು ದಾನ ಸಂಕಲ್ಪ ಮಾಡಿದ್ದೊಂದೇ ತಡ, ಶ್ರೀ ಹರಿಯು ತನ್ನ ವಾಮನ ರೂಪ ಬಿಟ್ಟು, ವಿರಾಟ್‌ರೂಪದಿಂದ ಎಲ್ಲ ಲೋಕಗಳನ್ನು ಆಕ್ರಮಿಸಿದನು ಯಜ್ಞ ಪರ್ವತಕ್ಕೆ ಹೋಗಿ ಉತ್ತರದಿಕ್ಕಿಗೆ ಮುಖಮಾಡಿ ನಿಂತು, ತನ್ನ ಎಡಗಾಲನ್ನು ಎತ್ತಿ ದಾನವರ ಪಟ್ಟಣದ ಮೇಲೆ ಮೊದಲ ಹೆಜ್ಜೆ ಇಟ್ಟನು, ಅವನ ಆ ಹೆಜ್ಜೆಯು ಸೂರ್ಯಮಂಡಲವನ್ನೆಲ್ಲ ಆಕ್ರಮಿಸಿ ತುಂಬಿತು. ಎರಡನೇಯ ಹೆಜ್ಜೆಯಿಂದ ಎಲ್ಲ ಬ್ರಹ್ಮಾಂಡವನ್ನು ಅಳೆದುಕೊಂಡ ಅದೂಸಾಲದೆ, ಮೂರನೇಯ ಪಾದದ ಹೆಬ್ಬೆರಳಿನ ತುದಿ ತಾಕಿ ಬ್ರಹ್ಮಾಂಡದ ಮೇಲ್ಭಾಗವು ಒಡೆದು ಹೋಯಿತು. ಬ್ರಹ್ಮಾಂಡದ ವಿಭಾಗದಲ್ಲಿ ವಾಮನ ಚರಣ ತುದಿಯಿಂದ ತಾಡಿತವಾದ ಮೇಲ್ಭಾಗದಲ್ಲಿ ಬಿರುಕು ಬಿಟ್ಟು ಹೊರಗಿನ ಜಲವು ಒಳಗೆ ನುಗ್ಗಿತು, ಅದರಿಂದ ಬ್ರಹ್ಮಲೋಕವೆಲ್ಲವೂ ತೋಯ್ದು ಹೋಯಿತು. ಅದರಂತೆ ಸೂರ್ಯಲೋಕ ಹಾಗೂ ಉಳಿದ ಲೋಕಗಳನ್ನು ನೆನೆಸಿ ಆ ನೀರು ಯಜ್ಞಪರ್ವತವನ್ನು ತೋಯಿಸಿ ಪುಷ್ಕರಕ್ಕೆ ಬಂದು ಸೇರಿತು. ಆ ಯಜ್ಞ ಪರ್ವತದ ಮೇಲೆ ನಿಂತ ವಿಷ್ಣುವಿನ ಪಾದಗಳ ಮೇಲೆ ಬ್ರಹ್ಮಾಂಡದ ಛಿದ್ರದಿಂದ ಒಳಗೆ ತೂರಿಬಂದ ನೀರು ಹರಿದು ಬಿದ್ದು, ಆ ವಿಷ್ಣುಪಾದವನ್ನು ತೊಳೆದು ತೀರ್ಥವಾಯಿತು. ಅದೇ ಭಾಗೀರಥಿ, ಎಂದು ಜಗತ್ತಿನಲ್ಲಿ ಹೆಸರಾಯಿತು. ಅಂದು ವಾಮನರೂಪ ವಿಷ್ಣುವು ಬಲಿರಾಜನಿಂದ ಭೂಮಿಯನ್ನು ಅಳೆದುಕೊಳ್ಳಲು ಯಜ್ಞಪರ್ವತದ ಮೇಲೆ ಇರಿಸಿದ ಹೆಜ್ಜೆಯೇ ಭೂಮಂಡಲದಲ್ಲಿ ಇಂದಿಗೂ ವಿಷ್ಣುಪಾದವೆಂದು ಪ್ರಸಿದ್ಧವಾಗಿದೆ. ಆ ಆಶ್ರಮಕ್ಕೆ ಹೋಗಿ ಅಲ್ಲಿರುವ ಕೊಳ್ಳದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲವು ಲಭಿಸುವದು, ಅದರ ದರ್ಶನದಿಂದ ಅರ್ಥಾತ್ ಆ ವಿಷ್ಣುಪಾದದ ದರ್ಶನದಿಂದ ದರ್ಶಕನ ಇಪತ್ತೊಂದು ತಲೆಮಾರಿನವರು ಉದ್ಧೃತರಾಗಿ ವೈಕುಂಠದಲ್ಲಿ ವಾಸಮಾಡುತ್ತಾರೆ. ವಾಮನರೂಪಿ ಭಗವಂತನ ಅಂಗುಷ್ಠದ ತುದಿಯು ಬ್ರಹ್ಮಾಂಡದ ಮೇಲಿನ ಕವಚಕ್ಕೆ ತಾಕಿ ಅದು ಶೀಳಿ, ಒಳಗೆ ಹರಿದುಬಂದು ವಿಷ್ಣುವಿನ ಪಾದವನ್ನೆಲ್ಲ ತೋಯಿಸಿ ತೀರ್ಥವಾದ ಆ ನೀರೇ ಗಂಗಾ ಎಂದು ಕರೆಯಲ್ಪಡುತ್ತದೆ. ಅದೇ ನದಿಗೆ, ಭಾಗೀರಥೀ ಜಾಹ್ನವೀ, ತ್ರಿಪಥಗಾ ದೇವನದೀ ಮುಂತಾಗಿ ಬೇರೆ ಬೇರೆ ಹೆಸರುಗಳು, ಬೇರೆ ಬೇರೆ ಕಾರಣಗಳಿಂದ ಬಂದಿರುತ್ತವೆ. ಮುಖ್ಯವಾಗಿ ವಿಷ್ಣುಪಾದದಿಂದ ಉದ್ಭವಿಸಿದ್ದರಿಂದಲೇ ವಿಷ್ಣುಪದೀ ಎಂಬುದೇ ಗಂಗೆಗೆ ಮೂಲ ಹೆಸರು. ದೇವತೆಗಳಿಗಾಗಿ ದೇವೋತ್ತಮನಿಂದ ಜನಿಸಿ, ಎಲ್ಲ ದೇವತೆಗಳಿಗೂ ದೇವಪದವನ್ನು ತಂದು ಕೊಡುವದರಿಂದ ಆ ನದಿಗೆ ದೇವನದಿ ಎಂತಲೂ ಹೆಸರುಬಂದಿದೆ, ಆ ದೇವ ನದಿಯು ಚರಾಚರ ಪ್ರಪಂಚದಿಂದ ಒಡಗೂಡಿದ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದೆ. ತನ್ನ ವಿಭೂತಿ ರೂಪಗಳಿಂದ ಎಲ್ಲ ಜನರಿಗೆ ಅನುಗ್ರಹಮಾಡಲು ವಿಷ್ಣುವು ಹೀಗೆ ಮಾಡಿದನು.

ಎರಡು ಪಾದಗಳಿಂದ ಭೂಮ್ಯಾಕಾಶಗಳನ್ನು ವ್ಯಾಪಿಸಿ, ಮೂರನೇಯ ಪಾದಕ್ಕೆ ಬ್ರಹ್ಮಾಂಡವೇ ಸಾಲದೆ ಒಡೆದು ಹೋಗುವ ಪರಿಸ್ಥಿತಿ ಬಂದಾಗ ಭಗವಂತನು ಬಲಿರಾಜನಿಗೆ ಹೇಳಿದನು. 'ರಾಜನೆ, ಮೂರು ಪಾದ ಭೂಮಿಯನ್ನು ಕೊಡುವುದಾಗಿ ಹೇಳಿದ್ದಿ. ಈ ನನ್ನ ಮೂರನೇಯ ಪಾದಕ್ಕೆ ಬ್ರಹ್ಮಾಂಡವು ಸಾಲದಂತಾಗಿದೆ. ಆದುದರಿಂದ ಈ ಕಾಲನ್ನು ಎಲ್ಲಿ

ಇರಿಸಲಿ.? ನೀನು ಮೂರು ಪಾದ ಭೂಮಿ ದಾನ ನೀಡುವನೆಂದು ಹೇಳಿದ್ದಿ. ನನ್ನ ಈ ಮೂರನೇಯ ಪಾದಕ್ಕೆ ಸ್ಥಳ ತೋರಿಸು.'

ಆಗ ಬಲಿರಾಜನಿಗೆ ಏನು ಉತ್ತರಕೊಡಬೇಕೆಂಬುದು ತೋಚಲಿಲ್ಲ. ಅವನು ಮುಖಕೆಳಗೆ ಹಾಕಿಕೊಂಡು ನಿಂತನು. ಅವನಿಂದ ಯಾವ ಉತ್ತರವೂ ಬರಲಿಲ್ಲ. ಆಗ ಶುಕ್ರಾಚಾರ್ಯರು ಮಾತನಾಡಿದರು. 'ಮಹಾಪ್ರಭುವೆ, ಈ ಬಲಿರಾಜನು, ತನ್ನ ಸ್ವಭಾವಕ್ಕನುಸರಿಸಿ ತನ್ನ ಅಧೀನದಲ್ಲಿರುವ ಭೂಮಿಯನ್ನು ದಾನ ಕೊಡುವುದಾಗಿ ವಚನ ಕೊಟ್ಟಿದ್ದಾನೆ. ತನ್ನ ವಶದಲ್ಲಿ ಎಷ್ಟು ಭೂಮಿ ಇದ್ದಿತೊ ಅದೆಲ್ಲವನ್ನು ನಿನಗೆ ಈಗಲೇ ಕೊಟ್ಟುಬಿಟ್ಟಿದ್ದಾನೆ. ಹೊಸ ಭೂಮಿಯನ್ನು ಸೃಷ್ಟಿಮಾಡಲು ಅವನಿಗೆಲ್ಲಿ ಶಕ್ತಿಯಿದೆ?' ಆಗ ಬಲಿರಾಜನೆದ್ದು ''ಭಗವನ್ ನೀನು ಪೂರ್ವಕಾಲದಲ್ಲಿ ಈ ವಸುಂಧರೆಯನ್ನು ಎಷ್ಟು ಸೃಷ್ಟಿಮಾಡಿರುವೆಯೋ ಅಷ್ಟೆಲ್ಲವನ್ನು ದಾನ ಕೊಟ್ಟಿದ್ದೇನೆ. ಅದರಲ್ಲಿ ಯಾವ ಭಾಗವನ್ನು ನಾನು ಮುಚ್ಚಿಟ್ಟು ಕೊಂಡಿಲ್ಲ. ಸ್ವಾಮಿ, ಈ ಭೂಮಿಯು ಅಲ್ಪವಾದುದು. ನೀನು ದೊಡ್ಡವನಾದೆ. ಈ ಪೃಥ್ವಿಯು ಪರಿಮಿತ. ನೀನು ಅಪರಿಮಿತ. ನನಗಂತೂ ಸೃಷ್ಟಿಮಾಡುವ ಸಾಮರ್ಥ್ಯವಿಲ್ಲ. ನಿನ್ನ ಇಚ್ಛೆಯೇ ಸರ್ವತಂತ್ರ ಸ್ವತಂತ್ರವಾದುದು.''

ಆಗ ವಿಷ್ಣುವಿಗೆ ಬಲಿರಾಜನ ಸತ್ಯನಿಷ್ಠೆಯು ಮನವರಿಕೆ ಆಯಿತು. ಪ್ರೀತಿಯಿಂದ ಹರಿಯು ನುಡಿದನು. ''ದಾನವ ಶ್ರೇಷ್ಠನೆ, ನಿನಗೆ ಏನು ಬೇಕು? ನಿನ್ನ ಯಾವ ಅಪೇಕ್ಷೆಯನ್ನು ನಾನು ಪೂರೈಸಲಿ? ನೀನು ಸರ್ವಸ್ವವನ್ನು ದಾನ ಕೊಡುತ್ತೇನೆ ಎಂದು ನನ್ನ ಕೈಯಲ್ಲಿ ಬಿಟ್ಟ ನೀರು ಇಲ್ಲಿಯೇ ಇರುತ್ತದೆ. ಆದುದರಿಂದ ನಿನಗೆ ಶ್ರೇಷ್ಠವಾದ ವರಗಳನ್ನು ಕೊಡಲು ಯೋಗ್ಯನಾಗಿರುತ್ತಿ. ಬೇಕಾದ ವರಕೇಳು, ಕೊಟ್ಟುಬಿಡುತ್ತೇನೆ.

**ಬಲಿ :-** ದೇವತೆಗಳಿಗೆಲ್ಲ ಒಡೆಯನಾದ ವಾಮನನೆ, ನಾನು ನಿನ್ನಲ್ಲಿ ಮುಖ್ಯವಾಗಿ ಕೇಳಿ ಕೊಳ್ಳುವದೆಂದರೆ ನಿನ್ನಲ್ಲಿ ಅವಿಚ್ಛನ್ನ ಭಕ್ತಿ. ಮತ್ತು ನಿನ್ನ ಕೈಯಿಂದಲೇ ನನಗೆ ಮರಣ ವಾಗಬೇಕು. ಮತ್ತು ತಪಸ್ವಿಗಳಿಗೂ, ದುರ್ಲಭವಾದ ಶ್ವೇತ ದ್ವೀಪವನ್ನು ನಾನು ಪಡೆಯಬೇಕು.

**ಪುಲಸ್ತ್ಯ:-** ಬಲಿರಾಜನ ಈ ವಚನ ಕೇಳಿ ವಿಷ್ಣುವು ಹೇಳಿದನು- ಬಲಿಯೇ, ನೀನು ಇನ್ನೂ ಒಂದು ಯುಗದಷ್ಟು ಕಾಲ ಇದೇ ದೇಹದಿಂದ ಭೋಗೈಶ್ವರ್ಯಗಳನ್ನು ಅನುಭವಿಸುತ್ತ ಬದುಕಿರು. ಯುಗಾಂತರದಲ್ಲಿ ನಾನು ವರಾಹರೂಪದಿಂದ ಭೂಮಿಯನ್ನು ಬಗೆದು ಪಾತಾಳದಲ್ಲಿ ಪ್ರವೇಶ ಮಾಡುವೆನು. ಆಗ ನಿನ್ನ ಅಪೇಕ್ಷೆಯಂತೆ ನಿನ್ನನ್ನು ಸಂಹರಿಸುವೆನು. ಆಗ ನೀನು ನನ್ನ ದೇಹದಲ್ಲಿಯೇ ಲಯವನ್ನು ಹೊಂದುವಿ.''

ದೇವೇಶನ ಈ ಉಕ್ತಿಯನ್ನು ಕೇಳಿ ದೈತ್ಯೇಂದ್ರನಾದ ಬಲಿರಾಜನು ಸಂತೋಷದಿಂದ ಅಲ್ಲಿಂದ ಹೊರಟು ಹೋದನು. ಅವನ ಬೆಂಬಲಿಗರಾದ ದೈತ್ಯರೆಲ್ಲರೂ ತಾವು ಆಕ್ರಮಿಸಿದ ಎಲ್ಲ ಲೋಕಗಳನ್ನು ಬಿಟ್ಟು, ಸ್ವರ್ಗ, ಭೂಲೋಕಗಳನ್ನು ತೊರೆದು ಪಾತಾಳ ಲೋಕವನ್ನು ಸೇರಿದರು. ಮೂರು ಲೋಕಗಳನ್ನು ವಾಮನನು ಆಕ್ರಮಿಸಿ ತ್ರಿಲೋಕಾಧಿಪತ್ಯವನ್ನು ಮತ್ತೆ ದೇವೇಂದ್ರನಿಗೆ ದಯಪಾಲಿಸಿದನು. ಬಲಿಚಕ್ರವರ್ತಿಯು ಹರಿಮೇಧ ಮುಂತಾದ ತನ್ನ ಹತ್ತು ಜನ ಅಸುರ ಅನುಚರರು ಮತ್ತು ಉಳಿದೆಲ್ಲ ತನ್ನ ಪರಿವಾರದವರಿಂದ ಒಡಗೂಡಿ ಪಾತಾಳ ಲೋಕವನ್ನು ಆಶ್ರಯಿಸಿದನು. ಭಗವಂತನ ಆದೇಶದಂತೆ ಈಗಲೂ ಅವನು ಆ ಅಧೋಲೋಕದಲ್ಲಿ ಸುಖದಿಂದ ವಾಸ ಮಾಡಿದ್ದಾನೆ.

ದೇವೇಂದ್ರನಾದರೂ ಕೂಡ ದೇವದೇವನಿಂದ ದತ್ತವಾದ ತ್ರಿಲೋಕ ಸಾಮ್ರಾಜ್ಯವನ್ನು ಭಕ್ತಿಯಿಂದ ಪಾಲಿಸುತ್ತಿದ್ದನು. ಗಂಗಾವತರಣಕ್ಕೆ ಮೂಲಕಾರಣನಾದ ಜಗದ್ಗುರು ಶ್ರೀಹರಿಯ ತ್ರೈವಿಕ್ರಮ ಪ್ರಾದುರ್ಭಾವ ಎಂಬ ಈ ವಾಮನಾವತಾರ ಚರಿತ್ರವು ಸರ್ವಪಾಪ ಪರಿಹಾರಕವಾಗಿದೆ. ವಿಷ್ಣುವಿಗೆ ಪಾದಗಳು ಮೂಡಿದ ಬಗೆ ಹೇಗೆ ಎಂಬ ಕ್ರಮವನ್ನು ನಿನಗೆ ತಿಳಿಸಿ ಹೇಳಿದ್ದೇನೆ. ಈ ಚರಿತ್ರವನ್ನು ಕೇಳಿದವರು ವಾಸನೆಗಳಿಂದ ಮುಕ್ತರಾಗುತ್ತಾರೆ. ದುಷ್ಟ ವಿಚಾರ, ಕೆಟ್ಟ ಕನಸು, ಘೋರ ಅಪತ್ತುಗಳೆಲ್ಲವೂ ಈ ವಾಮನ ಚರಿತ್ರ, ಶ್ರವಣದಿಂದ ದೂರವಾಗುತ್ತವೆ. ಪುಷ್ಕರ ಕ್ಷೇತ್ರದ ಅಗ್ನಿ ಪರ್ವತದಲ್ಲಿ ಮೂಡಿದ ವಿಷ್ಣುವಿನ ಪಾದಗಳನ್ನು ದರ್ಶನ ಮಾಡಿಕೊಂಡು ಪುಷ್ಕರಯಾತ್ರೆ ಮಾಡಿದವರು ಅಶ್ವಮೇಧ ಫಲವನ್ನು ಹೊಂದಿ ಕೊನೆಗೆ ವಿಷ್ಣು ಪದವನ್ನು ಪಡೆಯುತ್ತಾರೆ

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ವಾಮನಾವತಾರ ಎಂಬ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—o—

## ಶ್ರಾವಣ ಪಂಚಮಿ

**ಅಧ್ಯಾಯ - ೨೬**

**॥ಬ್ರಹ್ಮೋವಾಚ॥**

**ಭಗವನ್ಮಹದಾಶ್ಚರ್ಯಂ ಬಾಷ್ಕಲೇರ್ಬಂಧನಂ ಹಿ ಯತ್ ।**
**ಕೃತಂತ್ರೈವಿಕ್ರಮಂ ರೂಪಂ ಯದಾ ಸಂಯಮಿತೋ ಬಲಿಃ ॥**

**ಭೀಷ್ಮ:-** ಪೂಜರೆ ಬಾಷ್ಕಲಿಯಾದ ಬಲಿರಾಜನನ್ನು ಶ್ರೀಹರಿಯು ಬಂಧನಗೊಳಿಸಿದ್ದು ಮತ್ತು ತ್ರಿವಿಕ್ರಮ ರೂಪ ಧರಿಸಿದ್ದು ಅತ್ಯಂತ ಆಶ್ಚರ್ಯಕರವಾಗಿದೆ. ದ್ವಿಜೋತ್ತಮರಾದ ತಾವು ಇದೆಲ್ಲ ಹೇಳುವುದನ್ನು ನಾನು ಕೇಳಿದೆ ಈ ಪುಷ್ಕರ ಕ್ಷೇತ್ರದಲ್ಲಿ **'ನಾಗತೀರ್ಥ'**ವು ಹೇಗೆ ಉಂಟಾಯಿತು? ಶಾಖೆಗಳ ಉತ್ಪತ್ತಿ ಹೇಗಾಯಿತು? ಶಿವದೂತಿಯು ಇಲ್ಲಿ ಕ್ಷೇಮಂಕರಿಯು ಹೇಗಾದಳು? ಯಾರಿಂದ ಮಾಡಲ್ಪಟ್ಟಳು? ಪುಷ್ಕರವು ಅಂತರಿಕ್ಷಕ್ಕೆ ಯಾರಿಂದ ಒಯ್ಯಲ್ಪಟ್ಟಿತು? ಇದೆಲ್ಲವನ್ನು ತಾವು ನಿರೂಪಿಸಿರಿ.

**ಪುಲಸ್ತ್ಯ:-** ಭೀಷ್ಮನೆ, ವಿಷ್ಣುವಿನ ಪಾದನ್ಯಾಸದ ಪ್ರಸಂಗದಿಂದ ಬಲಿ ಬಂಧನದ ವೃತ್ತಾಂತವನ್ನು ನಾನು ನಿನಗೆ ಹೇಳಿದೆ.ಈಗ ನಾಗತೀರ್ಥದ ವಿಷಯವನ್ನು ಹೇಳುತ್ತೇನೆ ಕೇಳು

ಕಶ್ಯಪ ಮಹರ್ಷಿಗೆ ಅನಂತ, ವಾಸುಕಿ. ತಕ್ಷಕ, ಕರ್ಕೋಟಕಾದಿ ಸರ್ಪಗಳು ಹುಟ್ಟಿದರು. ಇದರ ಪೀಳಿಗೆಯಿಂದ ಪ್ರಪಂಚವೇ ತುಂಬಿದೆ. ಇವರ ವಂಶದಲ್ಲಿ ಜನಿಸಿದ ಸರ್ಪಗಳೆಲ್ಲ ಅತ್ಯಂತ ತೀಕ್ಷ್ಣ ವಿಷದವೂ ಕ್ರೂರವೂ ಆಗಿರುತ್ತವೆ. ಈ ಉಲ್ಬಣ ಹಾವುಗಳು ನೋಡಿದರೂ ಸಾವು, ಕಚ್ಚಿದರೆ ಅರೆಕ್ಷಣದಲ್ಲಿ ಪ್ರಾಣಿಗಳು ಸತ್ತು ಬೀಳುತ್ತವೆ. ಇವುಗಳ ಫೂತ್ಕಾರದಿಂದಲೂ ವಿಷವಾಯು ತಾಕಿ ಮಾನವರು ಸುಟ್ಟು ಬೂದಿಯಾಗುವದುಂಟು. ಈ ಸರ್ಪಕುಲ ದಿಂದ ಕ್ಷಣಕ್ಷಣದಲ್ಲಿ ಅನೇಕ ಜೀವಿಗಳು ಮರಣಕ್ಕೆ ತುತ್ತಾಗುತ್ತಿದ್ದವು. ಈ ಭಯಂಕರವಾದ ಪ್ರಾಣಿ ಪ್ರಣಾಶವನ್ನು ಕಂಡು ಎಲ್ಲ ಜನರು ಬ್ರಹ್ಮದೇವರ ಬಳಿಯಲ್ಲಿ ರಕ್ಷಣೆಗಾಗಿ ಮೊರೆಯಿಟ್ಟರು.

**ಪ್ರಜೆಗಳು :-** ದೇವದೇವನೆ, ನಮ್ಮನ್ನೆಲ್ಲ ಈ ಪ್ರಪಂಚವನ್ನೆಲ್ಲ ನೀನೇ ಹುಟ್ಟಿಸಿರುವೆ. ಆದರೆ ನೀನು ಸೃಷ್ಟಿಸಿದ ಜೀವಿಗಳನ್ನೆಲ್ಲ ತೀಕ್ಷ್ಣ ವಿಷದ ಹಲ್ಲುಗಳುಳ್ಳ ಈ ಹಾವುಗಳು ಕಚ್ಚಿ ಹಾಕುತ್ತವೆ; ಮತ್ತು ಕೊಂದುಬಿಡುತ್ತವೆ ಇದರಿಂದ ನೀನೇ ರಕ್ಷಣೆ ಮಾಡಬೇಕು. ಪ್ರತಿನಿತ್ಯವೂ ಈ ಸರ್ಪಗಳು ಮಾನವರನ್ನು ಪಶು ಪಕ್ಷಿಗಳನ್ನು ಕಚ್ಚುತ್ತವೆ. ತಿಂದು ಹಾಕುತ್ತವೆ. ದಿನದಿನವೂ ಈ ಉರಗಗಳಿಂದ ಜೀವ ಕೋಟಿಗೆ ಭಯವು ತಪ್ಪಿದ್ದಲ್ಲ. ಇವುಗಳು ಮುಟ್ಟಿದ ಮಾತ್ರಕ್ಕೆ ಪ್ರಾಣಿಗಳು ಸುಟ್ಟು ಬೂದಿ ಆಗುವವು. ನೀನು ಹುಟ್ಟಿಸಿ ದವರನ್ನೆಲ್ಲ ಈ ಹಾವುಗಳು ಕೊಂದು ಹಾಕಿ ನಿನ್ನ ಸೃಷ್ಟಿಯನ್ನೇ ವ್ಯರ್ಥಗೈಯುತ್ತಿವೆ. ಅದಕ್ಕಾಗಿ ನಿನಗೆ ಹೇಗೆ ಸರಿಕಾಣುತ್ತದೆಯೋ ಹಾಗೆ ಮಾಡಿರಿ.

**ಬ್ರಹ್ಮ:-** ನಿಮ್ಮನ್ನೆಲ್ಲ ನಾನು ರಕ್ಷಣೆ ಮಾಡುತ್ತೇನೆ. ನನ್ನ ಮಾತಿನಲ್ಲಿ ಸಂಶಯಬೇಡ. ನೀವೆಲ್ಲ ಚಿಂತೆಬಿಡಿರಿ ಹೆದರಬೇಡಿರಿ ನಿಮ್ಮ ನಿಮ್ಮ ಮನೆಗೆ ಹೋಗಿರಿ.

**ಪುಲಸ್ತ್ಯ:-** ಬ್ರಹ್ಮದೇವರ ಆಶ್ವಾಸನೆಯಿಂದ ನೆಮ್ಮದಿಗೊಂಡು ಪ್ರಜೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು. ಅನಂತರ ಸರ್ಪಕುಲದ ಮುಂದಾಳುಗಳನ್ನು ಕರೆಸಿದನು. ಬ್ರಹ್ಮದೇವ, ವಾಸುಕಿಯೇ ಮುಂದಾಳು ಆ ಹಾವುಗಳಿಗೆ ಅವರನ್ನೆಲ್ಲ ಕರೆಸಿ ಶಾಪಕೊಟ್ಟನು. ಬಹಳ ಸಿಟ್ಟು ಬಂದಿತ್ತು ಬ್ರಹ್ಮನಿಗೆ.

**ಬ್ರಹ್ಮ:-** ನಾನು ಅಸಂಖ್ಯ ಪ್ರಾಣಿಗಳನ್ನು ಸೃಷ್ಟಿಮಾಡುತ್ತೇನೆ. ಅವರೆಲ್ಲರನ್ನು ನೀವು ಕೊಂದು ಬಿಡುತ್ತೀರಿ. ಮಾನವರನ್ನು ಕೂಡ ನೀವು ಕಚ್ಚದೇ ಬಿಡುವುದಿಲ್ಲ. ಕೊಲ್ಲದೆ ಇರುವುದಿಲ್ಲ, ಆದುದರಿಂದ ಮುಂದಿನ ವೈವಸ್ವತ ಮನ್ವಂತರದಲ್ಲಿ ನಿಮ್ಮೆಲ್ಲರ ಸಾಮೂಹಿಕ ಕಗ್ಗೊಲೆಯಾಗಲಿ. ಚಂದ್ರವಂಶದಲ್ಲಿ ಜನಮೇಜಯನೆಂಬ ದೊರೆ ಜನಿಸುವನು. ಅವನು ಸರ್ಪಸತ್ರವನ್ನು ಮಾಡಿ ನಿಮ್ಮೆಲ್ಲರನ್ನು ಉರಿಯುವ ಹೋಮಕುಂಡದಲ್ಲಿ ಹಾಕಿ ನಿಮ್ಮನ್ನೆಲ್ಲ ಸುಟ್ಟು ಹಾಕುವನು. ಗರುಡನು ಕೂಡ ಆ ಹಾವುಗಳ ಚಿಕ್ಕಮ್ಮ ವಿನತಾದೇವಿಯ ಮಾತಿನಂತೆ ತಿಂದು ಬಿಡುವನು. ದುಷ್ಟ ಮನಸ್ಸಿನ ನಿಮ್ಮೆಲ್ಲ ಸರ್ಪಗಳ ಪೀಳಿಗೆಗಳು ನಾಶವಾಗುವವು. ಒಂದು ಸಾವಿರ ಸಂಖ್ಯೆಯ ಈಗಿರುವ ನಿಮ್ಮ ಹಾವಿನ ವಂಶಗಳಲ್ಲಿ ಒಂದು ಕುಲಮಾತ್ರ ಉಳಿದು ಉಳಿದವರೆಲ್ಲರೂ ಅಳಿದುಹೋಗುವಿರಿ.

**ಪುಲಸ್ತ್ಯ:-** ಬ್ರಹ್ಮದೇವರ ಆ ಮಾತನ್ನು ಕೇಳಿ ನಡುಗಿಹೋದವು- ಆ ಹಾವಿನ ಬಳಗದ ಹಿರಿಯರು ಅಡಿದಾವರೆಯ ಮೇಲೆ ಉರುಳಿದವು. ಅಳುತ್ತ ನುಡಿದವು- ಪೂಜ್ಯನೇ ಈ ನಮ್ಮ ಸರ್ಪಗಳ ದುಷ್ಟ ಜಾತಿಯನ್ನು ನೀನೇ ನಿರ್ಮಾಣ ಮಾಡಿಲ್ಲವೆ? ನಮಗೆಲ್ಲರಿಗೂ ಹಲ್ಲು ಕೊಟ್ಟವ ನೀನು. ಅವುಗಳಲ್ಲಿ ವಿಷ ಇಟ್ಟವ ನೀನು ಕಡಿಯಲು ಹಚ್ಚಿದವ ನೀನು, ಕ್ರೂರತನವನ್ನು ನಮಗೆ ನೀಡಿದವನೂ ನೀನೇ ನಮ್ಮನ್ನು ಇಷ್ಟು ದುಷ್ಟರನ್ನಾಗಿ ನಿರ್ಮಿಸಿ ಈಗ ಶಾಪ ಕೊಟ್ಟರೆ ಏನು ಗತಿ?

**ಬ್ರಹ್ಮ :-** ನಾನು ನಿಮಗೆ ವಿಷದ ಹಲ್ಲು ಕೊಟ್ಟ ಮಾತ್ರಕ್ಕೆ ನೀವು ನಿತ್ಯವೂ ಕಂಡ ವರನ್ನೆಲ್ಲ ಕಚ್ಚುತ್ತ ಹೋಗುವುದೆ ? ಕಚ್ಚಿದ್ದನ್ನೆಲ್ಲ ತಿನ್ನುತ್ತ ಹೋಗುವದೆ ? ಪ್ರಾಣಿಗಳು ಮರಣ ಹೊಂದುವದನ್ನು ನೋಡಿ ನಿಮಗೆ ಸ್ವಲ್ಪವೂ ದುಃಖವೂ ಆಗುವುದಿಲ್ಲವಲ್ಲ!

**ಸರ್ಪಗಳು :-** ದಿನೇಶ್ವರ, ಹಾಗಾದರೆ ಮಾನವರಿಗೂ ಸರ್ಪಗಳಿಗೂ ಬೇರೆ ಬೇರೆ ಗಡಿ ಅಥವಾ ಎಲ್ಲೆಗಳನ್ನು ನಿರ್ಮಿಸು ಬೇರೆ ಬೇರೆ ನಿಯಮಗಳನ್ನು ಮಾಡು. ಸ್ಥಳಗಳನ್ನು

ಗುರುತುಪಡಿಸು, ಮನುಷ್ಯ ಕುಲದಲ್ಲಿ ಹುಟ್ಟಿದ ಜನಮೇಜಯನು ಸರ್ಪಯಾಗ ಮಾಡಿ ನಮ್ಮನ್ನೆಲ್ಲ ಕೊಂದು ಹಾಕುವನೆಂದು ನೀನು ಶಪಿಸಿರುವೆ ಅಷ್ಟೆ! ಇದನ್ನು ಕೇಳಿ ನಮಗೆ ಬಹಳ ದುಃಖವಾಗಿದೆ. ಹೇಗಾದರೂ ಮಾಡಿ ಆ ಸಂಹಾರ ಸತ್ರದಿಂದ ನಮ್ಮನ್ನು ರಕ್ಷಿಸು.

**ಬ್ರಹ್ಮ:-** ಜರತ್ಕಾರು ಎಂಬ ದ್ವಿಜನು ಹುಟ್ಟುವನು. ಬ್ರಹ್ಮ ಬಲ್ಲವರಲ್ಲಿ ಅತ್ಯಂತ ಶ್ರೇಷ್ಠ ಆ ವಿಪ್ರ. ಅವನಿಗೆ ಜರತ್ಕಾರು ಎಂಬ ಕುಮಾರಿಯನ್ನು ಕೊಟ್ಟು ಮದುವೆ ಯಾಗುವುದು. ಅವರಿಂದ ಒಬ್ಬ ಮಗನು ಜನಿಸುವನು. ಆ ದ್ವಿಜನು ನಿಮ್ಮ ಕುಲವನ್ನೆಲ್ಲ ರಕ್ಷಿಸುವನು. ನಿಮ್ಮ ರಕ್ಷಣೆಗಾಗಿ ನಾನು ಎಲ್ಲ ಏರ್ಪಾಡು ಮಾಡುತ್ತೇನೆ. ನಿಮಗೂ ಮನುಷ್ಯರಿಗೂ ಸ್ಥಳಗಳನ್ನು ಕೂಡ ಬೇರೆ ಬೇರೆಯಾಗಿಯೇ ಮಾಡುತ್ತೇನೆ. ಸುತಳ, ವಿತಳ, ತಳಾತಳ- ಎಂಬ ಮೂರು ಲೋಕಗಳನ್ನು ನಿಮಗಾಗಿ ಕೊಟ್ಟಿದ್ದೇನೆ. ನೀವು ಈ ಲೋಕಗಳಲ್ಲಿ ಮನೆಮಾಡಿ ಕೊಂಡಿದ್ದು ನನ್ನ ಆದೇಶದಂತೆ ಬೇಕು ಬೇಕಾದ ಸುಖಗಳನ್ನು ಅನುಭವಿಸಿರಿ. ಏಳನೆಯ ಮನ್ವಂತರ-ವೈವಸ್ವತ ಮನ್ವಂತರದವರೆಗೂ ನೀವು ಅಲ್ಲಿ ನೆಲೆಸಿರಿ. ವೈವಸ್ವತ ಮನ್ವಂತರದ ಆದಿ ಭಾಗದಲ್ಲಿ ಜನಿಸಿದ ಕಶ್ಯಪರಿಗೆ ಒಬ್ಬ ಮಗ ಹುಟ್ಟುವನು. ಅವನು ದೇವತೆಗಳಿಗೆಲ್ಲ ಬಂಧು. ಪಕ್ಷಿಗಳಿಗೆಲ್ಲ ಅಧೀಶ್ವರ. ಆ ಕಾಲದಲ್ಲಿ ನಿಮ್ಮ ಎಲ್ಲ ಸರ್ಪಕುಲಗಳು ಹೋಮಾಗ್ನಿಯಿಂದ ದಗ್ಧವಾಗುವವು. ಕ್ರೂರರೂ, ಅವಿವೇಕಿ ಗಳೂ, ಹಿಂಸಕರೂ ಆದ ಹಾವುಗಳೆಲ್ಲವೂ ಸಾಯಲೇಬೇಕು. ಇದು ವಿಧಿಯ ಶಾಸನ. ಯಾರಾದರೂ ಮನುಷ್ಯರು ನಿಮಗೆ ಅಪಕಾರ ಮಾಡಿದರೆ ಅದೇ ನಿಮಗೆ ಕಾಲಪ್ರಾಪ್ತ ಭಕ್ಷ್ಯವೆಂದು ಕೊಲ್ಲಲು ಅಡ್ಡಿಯಿಲ್ಲ. ನಿರಪರಾಧಿಗಳನ್ನು ಕಚ್ಚಬೇಡಿರಿ. ಮಂತ್ರ, ಔಷಧ, ಗರುಡ ವಿದ್ಯೆ, ಬಂಧ ಮುಂತಾದವುಗಳನ್ನು ಬಲ್ಲ ಮಾನವರಿಗೆಲ್ಲ ಸ್ವಲ್ಪ ಹೆದರಿ ನಡೆಯಿರಿ. ಇದಕ್ಕೆ ವಿರುದ್ಧವಾಗಿ ಉನ್ಮಾದ ದಿಂದ ನಡೆದರೆ ನೀವು ನಾಶ ಹೊಂದುವಿರಿ.

**ಪುಲಸ್ತ್ಯ:-** ಬ್ರಹ್ಮದೇವರ ಈ ನುಡಿಯನ್ನು ಕೇಳಿ ಹಾವುಗಳೆಲ್ಲ ಪಾತಾಳಕ್ಕೆ ಹೊರಟು ಹೋದವು. ಬ್ರಹ್ಮದೇವರಿಂದ ಶಾಪವನ್ನೂ ಅದಕ್ಕೆ ಪ್ರತಿ ಉಪಾಯವನ್ನೂ ಕೇಳಿಕೊಂಡು, ಪಾತಾಳಲೋಕದಲ್ಲಿ ವಿವಿಧ ಭೋಗಗಳನ್ನು ಅನುಭವಿಸುತ್ತ ಲೀಲೆಯಿಂದ ವಾಸಮಾಡಿದವು.

ಮುಂದೆ ದೀರ್ಘ ಕಾಲದ ನಂತರ ಬ್ರಹ್ಮದೇವರು ಪುಷ್ಕರ ಕ್ಷೇತ್ರದಲ್ಲಿ ಯಜ್ಞಮಾಡುವ ವಿಚಾರವು ನಾಗ ಧುರೀಣರಿಗೆಲ್ಲ ತಿಳಿದು ಬಂದಿತು. ಬ್ರಹ್ಮದೇವನು ಶಾಪ ಕೊಟ್ಟರೂ, ಅವನ ಹೊರತು ನಮಗೆ ಬೇರೆ ಗತಿಯಿಲ್ಲ. ಆದುದರಿಂದ ಪುಷ್ಕರ ಕ್ಷೇತ್ರಕ್ಕೆ ಹೋಗಿ ಅವನ ಸೇವೆ ಮಾಡಿ ಅನುಗ್ರಹವನ್ನು ಪಡೆಯಬೇಕು. ಎಂದು ಯೋಚಿಸಿ, ಆ ಸರ್ಪಗಳೆಲ್ಲ ಯಜ್ಞ ಪರ್ವತಕ್ಕೆ ಬಂದವು. ಆ ಪರ್ವತದ ಬೆನ್ನು ಗೋಡೆಗಳಲ್ಲಿ ಸೇರಿಕೊಂಡವು. ಅಲ್ಲಿ ಹರಿಯುವ ಜಲಧಾರೆಗಳಿಂದ ಆ ಕ್ರೂರ ಹಾವುಗಳೆಲ್ಲವೂ ತಣ್ಣಗಾಗಿ ಶಾಂತವಾದವು. ಅಲ್ಲಿಂದ ಉತ್ತರಾಭಿಮುಖವಾಗಿ ಹರಿಯುವ ಒಂದು ನದಿಗುಂಟ ಎಲ್ಲ ಹಾವುಗಳು ಪರ್ವತದ ಪೃಷ್ಠ ಭಾಗದಿಂದ ಹರಿದು ಬಂದು ಒಂದು ದೊಡ್ಡ ಮಡುವಿನಲ್ಲಿ ಒಂದುಗೂಡಿದವು. ಅದೇ ನಾಗತೀರ್ಥವಾಯಿತು. ಅದನ್ನು ನಾಗಕುಂಡ, ನಾಗನದಿ ನಾಗತೀರ್ಥವೆಂದು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಎಲ್ಲ ತೀರ್ಥಗಳಲ್ಲಿ ಮುಖ್ಯತಮವಾದ ಈ ನಾಗತೀರ್ಥವು ಹಾವುಗಳ ವಿಷವನ್ನು ನಾಶ ಮಾಡುತ್ತದೆ. ಶ್ರಾವಣ ಪಂಚಮಿ ದಿನ ಇಲ್ಲಿ ಸ್ನಾನ ಮಾಡುವವರ ಎಲ್ಲ ಕುಟುಂಬಿಗಳಿಗೆ

ಹಾವು ಕಚ್ಚುವುದಿಲ್ಲ ವಿಷ ಬಾಧಿಸುವುದಿಲ್ಲ. ಈ ನಾಗಕುಂಡದಲ್ಲಿ ಸೇರಿಕೊಂಡು ಕುಳಿತ ಅವುಗಳ ಬಳಗಕ್ಕೆ ಬ್ರಹ್ಮದೇವರು ಹಿಂದೆ ಹೇಳಿದ ಮಾತನ್ನೇ ಹೇಳಿದನು. ''ನಿಮ್ಮನ್ನು ಹೊಡೆಯದಿದ್ದವರನ್ನು ಕಡಿಯಬೇಡಿರಿ. ಮುಟ್ಟದಿದ್ದವರನ್ನು ಕಚ್ಚಬೇಡಿರಿ.

**'ಯಸ್ತು ಶ್ರಾವಣ ಪಂಚಮ್ಯಾಂ ಕಟ್ವಮ್ಲಂ ಪರಿವರ್ಜಯೇತ್ ।**
**ಕ್ಷೀರೇಣ ತರ್ಪಯೇನ್ನಾಗಾಂಸ್ತಸ್ಯ ಯಾಸ್ಯಂತು ಮಿತ್ರಾತಾಂ ॥**

ಶ್ರಾವಣ ಶುದ್ಧ ಪಂಚಮಿ ನಾಗಪಂಚಮಿ ಎಂದು ಪ್ರಸಿದ್ಧವಾಗಿದೆ. ಅಂದು ಕಾರ, ಹುಳಿಯನ್ನು ಬಿಟ್ಟು ಬಿಡಬೇಕು. ಹಾಲು ಹಾಕಿ ನಾಗಗಳಿಗೆ ಪ್ರೀತಿ ಪಡಿಸಿದವರು, ಅವುಗಳಿಗೆ ಮಿತ್ರರಾಗುವರು.''

**ಭೀಷ್ಮ:-** ಶಿವದೂತಿಯು ಹೇಗೆ ಹುಟ್ಟಿದಳು ? ಯಾರು ಅವಳನ್ನು ಸೃಷ್ಟಿಸಿದರು! ಇದೆಲ್ಲವನ್ನು ನನಗೆ ಹೇಳಿರಿ.

**ಪುಲಸ್ತ್ಯ:-** ಪಾರ್ವತಿಯು ತಪಸ್ಸನ್ನು ಮಾಡಬೇಕೆಂದು ಮನಸ್ಸು ಮಾಡಿದಳು. ಅದಕ್ಕಾಗಿ ಅವಳು ಬಂದದ್ದು ನೀಲಗಿರಿಯ ಬೆಟ್ಟಕ್ಕೆ. ತಪೋನಿರತಳಾದ ಆ ಶಂಕರಿಯ ಜಡೆಯಿಂದ ರೌದ್ರೀ ಶಕ್ತಿಯು ಉತ್ಪನ್ನವಾಯಿತು. ಅದರ ವ್ರತವನ್ನು ಹೇಳುತ್ತೇನೆ ಕೇಳು. ಬಹುಕಾಲ ತಪಸ್ಸು ಮಾಡಿ, ಜಗತ್ತನ್ನು ರಕ್ಷಿಸಬೇಕೆಂದು ಭವಾನಿಯು ತಪ ಕೈಕೊಂಡಿದ್ದಳು. ಬೇಸಿಗೆಯಲ್ಲಿ ಐದು ಬೆಂಕಿಗಳ ನಡುವೆ ನಿಂತು ಸಾಗಿತ್ತು ಅವಳ ಉಗ್ರ ತಪಸ್ಸು. ಹೀಗೆ ನೀಲಗಿರಿ ಬೆಟ್ಟದಲ್ಲಿ ಮಹಾದೇವಿಯು ತಪಸ್ಸನ್ನು ಮಾಡುತ್ತಲಿರುವಾಗ ರುರು ಎಂಬ ದೊಡ್ಡ ದೈತ್ಯನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಅವನ ಅಪೇಕ್ಷೆಯಂತೆ ವರ ನೀಡಿದ ಬ್ರಹ್ಮ. ಸಮುದ್ರದ ನಡುಮಧ್ಯೆ ರಕ್ತಪುರ ಎಂಬ ಒಂದು ಪಟ್ಟಣ. ಅಲ್ಲಿ ಕೋಟಿ ಕೋಟಿ ದೈತ್ಯರೊಂದಿಗೆ ನೆಲೆಸಿದ್ದಾನೆ ಆ ದೈತ್ಯರ ದೊರೆ. ಅವನನ್ನು ಕಂಡರೆ ದೇವತೆಗಳಿಗೆ ನಡುಗು. ಅವನೊಬ್ಬ ಎರಡನೆಯ ನಮುಚಿ ಎನಿಸಿದ್ದ ದೇವತೆಗಳಿಗೆ ಹೀಗೆ ಎಷ್ಟೋ ಕಾಲ ಉರುಳಿತು. ಲೋಕಪಾಲಕರ ಪಟ್ಟಣಕ್ಕೆ ನುಗ್ಗಿದ ಆ ರುರು ರಾಕ್ಷಸ. ದೇವತೆಗಳನ್ನೆಲ್ಲ ಗೆಲ್ಲುವ ಹಂಬಲವು ಅವನ ಮೇಲೆ ಸವಾರಿ ಮಾಡಿತ್ತು. ಅವನು ಸಾಗರದ ಮಧ್ಯದಿಂದ ದೇವತಾ ದಿಗ್ವಿಜಯಕ್ಕಾಗಿ ದಿಗ್ಗನೆ ಎದ್ದಾಗ, ಮೀನು, ಮೊಸಳೆ ತುಂಬಿದ ಸಮುದ್ರದ ನೀರೆಲ್ಲ ಉಕ್ಕಿ ಮೇಲೆ ಬಂದು ಬೆಟ್ಟ ಬಯಲುಗಳನ್ನೆಲ್ಲ ತೋಯಿಸಿತು. ರುರು ರಕ್ಕಸರ ಆ ಸಮರ ಸನ್ನಾಹ ಕಂಡೇ ಭಯಭ್ರಾಂತರಾದರು ಸುರೋತ್ತಮರು. ಹೆದರಿ ಶರಣು ಬಂದರು ತಾಯಿಯ ಚರಣ ಸನ್ನಿಧಿಗೆ ''ಅಮ್ಮಾ ನೀನೇ ನಮ್ಮನ್ನು ಈ ದುರುಳ ದಾನವನಿಂದ ರಕ್ಷಿಸಬೇಕು ಎಂದು ಮೊರೆಯಿಟ್ಟರು.''

**ಪುಲಸ್ತ್ಯ:-** ದೇವತೆಗಳ ಈ ಬಿನ್ನಹವನ್ನು ಕೇಳಿ, ಆ ರೌದ್ರೀ ಶಕ್ತಿಯು ಗಟ್ಟಿಯಾಗಿ ನಕ್ಕಳು. ಅವಳ ಮುಖದಿಂದ ಪಾಶಾಂಕುಶಗಳನ್ನು ಧರಿಸಿದ ಶೂಲ ಧಾರಿಣಿಯರಾದ ಕೆಲವು ಘೋರ ನಾರಿಯರು ಹೊರಬಂದರು. ಸಿಟ್ಟಿನಿಂದ ದವಡೆ ಕಚ್ಚಿ, ಘೂತ್ಕರಿಸುತ್ತ, ಬಣ್ಣ ಬಣ್ಣದ ಬಟ್ಟೆ ಧರಿಸಿ, ಯಥೇಚ್ಛವಾಗಿ ಪಾನ ಮಾಡುತ್ತ ಆ ನಾರಿ ರೂಪಗಳು ''ದೇವತೆಗಳೆ, ಹೆದರಬೇಡಿರಿ. ನಿಮ್ಮ ಶತ್ರುವಾದ ಆ ರುರು ರಕ್ಕಸನು ಎಲ್ಲಿ ಇರುವನು?'' ಎಂದು ಕೇಳಿದರು. ಅಷ್ಟರಲ್ಲಿ ರುರು ದೈತ್ಯನು ತನ್ನ ಚತುರಂಗ ಸೇನೆಯೊಂದಿಗೆ ಅಲ್ಲಿಗೆ ಬಂದನು. ಮಹಾಕಾಳಿಯ ಸೇನೆಗೂ ರುರುವಿನ ಸೇನೆಗೂ ಭಯಂಕರವಾದ ಯುದ್ಧವು ನಡೆಯಿತು.

ರೌದ್ರೀ ಶಕ್ತಿಯ ಅನುಚರಿಯರು ಭೀಕರ ಗರ್ಜನೆ ಮಾಡುತ್ತ ದೈತ್ಯರ ದೇಹಗಳನ್ನು ಬಾಣಗಳಿಂದ ಕತ್ತರಿಸದರು. ಶಕ್ತ್ಯಾಯುಧಗಳಿಂದ ಹೊಡೆದರು. ಗದೆಗಳಿಂದ ಜಜ್ಜಿದರು ವನಕೆಗಳಿಂದ ಥಳಿಸಿದರು. ತ್ರಿಶೂಲದಿಂದ ಇರಿದರು. ಖಡ್ಗಗಳಿಂದ ದೈತ್ಯರ ತಲೆಗಳನ್ನು ತರಿದರು. ರುರುವಿನ ಆನೆ, ಕುದುರೆ, ರಥ ಕಾಲಾಳುಗಳೆಲ್ಲವೂ ದೇವಿಯ ಪ್ರಭಾವದಿಂದ ನಷ್ಟವಾಗಿ ನೆಲದ ಮೇಲೆ ಶವಸಮೂಹವಾಗಿ ಬಿದ್ದಿತು. ರುರು ಒಬ್ಬನು ಮಾತ್ರ ಉಳಿದುಕೊಂಡನು. ರೌದ್ರೀ ಶಕ್ತಿಯಿಂದ ತನ್ನ ಸೈನ್ಯವೆಲ್ಲವೂ ಪುಡಿಪುಡಿಯಾದುದನ್ನು ನೋಡಿ ಆ ದೈತ್ಯನು ಮಾಯೆಯನ್ನು ಅವಲಂಬಿಸಿದನು. ದೈತ್ಯನ ಮಾಯೆಯಿಂದ ದೇವ ಸೈನ್ಯವೂ ರೌದ್ರೀ ಶಕ್ತಿಯು ನಿರ್ಮಿಸಿದ ಸ್ತ್ರೀ ಸೈನ್ಯವೂ ಮೋಹಗೊಂಡಿತು. ಆಗ ಮಹಾದೇವಿಯೂ ತನ್ನ ಮಹಾಶಕ್ತಿಯಿಂದ ರುರುವನ್ನು ಹೊಡೆದಳು. ಯುದ್ಧರಂಗದಲ್ಲಿಯ ರಾಕ್ಷಸ ಮಾಯೆಯಲ್ಲವೂ ತಾನಾಗಿಯೇ ಕರಗಿಹೋಯಿತು. ಆಗ ದುಷ್ಟ ರಕ್ಕಸನಾದ ರುರುವು ಹೆದರಿ ಓಡಿ ಹೋಗಿ ಪಾತಾಳವನ್ನು ಸೇರಿದನು. ಮಹಾ ದೇವಿಯು ಅಲ್ಲಿಯೂ ಅವನನ್ನು ಬೆನ್ನಟ್ಟಿ ಎದುರಿದಳು. ಭಯದಿಂದ ನಡುಗುವ ಆ ರುರು ದೈತ್ಯನನ್ನು ತನ್ನ ಉಗುರಿನ ತುದಿಯಿಂದ ಸೀಳಿ ಹಾಕಿದಳು. ಅವನ ತಲೆಯನ್ನು ಕತ್ತರಿಸಿ ಒಗೆದು ರುರುವಿನ ಚರ್ಮವನ್ನು ತೆಗೆದುಕೊಂಡು ಪಾತಾಳದಿಂದ ಪುಷ್ಕರ ಪರ್ವತಕ್ಕೆ ಎದ್ದು ಬಂದಳು. ಅವಳು ಸೃಷ್ಟಿಮಾಡಿದ ಕನ್ಯಾ ಸೈನ್ಯವೆಲ್ಲವೂ ತಮ್ಮ ಬಗೆ ಬಗೆಯ ಬಟ್ಟೆಗಳಿಂದ ಒಡಗೂಡಿಕೊಂಡು ಕುಣಿಯುತ್ತ ಆಕೆಯನ್ನು ಸುತ್ತುವರಿಯಿತು. ಸುತ್ತುಮುತ್ತಲೂ ಭಿನ್ನಭಿನ್ನ ರೂಪ, ಬೇರೆ ಬೇರೆ ಬಣ್ಣ, ವಿಚಿತ್ರವಾದ ವೇಷಗಳುಳ್ಳ ಘೋರ ರೂಪಿಣಿ ಯರಾದ ಕನ್ಯೆಯರ ಕುಣಿತ, ನಟ್ಟ ನಡುವೆ ರುರು ರಕ್ಕಸನ ರುಂಡವನ್ನು ಹಿಡಿದುಕೊಂಡು ಮಾದೇವಿ. ಉಳಿದ ಅನೇಕ ದೇವಿಯರ ಅವಳನ್ನು ಬಳಸಿಕೊಂಡು ಎಡಬಲಗಳಲ್ಲಿ ನಿಂತುಕೊಂಡಿದ್ದರು. ಆ ಎಲ್ಲ ಉಪದೇವಿಯರು ''ವರನೀಡುವ ಮಹಾದೇವಿಯೆ, ನಮಗೆಲ್ಲ ಹಸಿವೆಯಾಗಿದೆ ಏನಾದರೂ ಆಹಾರವನ್ನು ನೀಡು,'' ಎಂದು ಕೇಳಿಕೊಂಡರು.

**ಪುಲಸ್ತ್ಯ:-** ಹಸಿದು ನಿಂತ ಆ ಕುಮಾರಿಯರಿಗೆಲ್ಲ ಏನು ಆಹಾರ ಕೊಡಬೇಕೆಂಬುದೇ ದೇವಿಗೆ ಸಮಸ್ಯೆ ಆಯಿತು. ಆಗ ಪತಿ ಪರಮೇಶ್ವರನ ಧ್ಯಾನ ಮಾಡಿದಳು. ಆಗ ಆ ರೌದ್ರೀ ಶಕ್ತಿಯ (ಶಿವದೂತಿಯ) ಧ್ಯಾನದಿಂದ ಪ್ರಸನ್ನನಾದ ಪರಮೇಶ್ವರನು ಅಲ್ಲಿಗೆ ಬಂದನು. ಮತ್ತು ದೇವಿಯನ್ನು ಕುರಿತು ನುಡಿದನು.

**ರುದ್ರ:-** ಸುಂದರಿ, ನಿನ್ನ ಮನಸ್ಸಿನಲ್ಲಿ ಏನಿದೆ? ಯಾವ ಕಾರ್ಯವನ್ನು ಮಾಡಬೇಕೆಂದಿರುವಿ? ಅದನ್ನು ಹೇಳು.

**ರೌದ್ರಿಶಕ್ತಿ:-**ದೇವದೊರೆಯೇ, ಇವರೆಲ್ಲರೂ ಹಸಿದು ನಿಂತಿದ್ದಾರೆ. ನಿನ್ನ ಮೈಯಿಂದ ಆಡಿನ ವಾಸನೆ ಬರುತ್ತದೆ. ಆಡಿನಂತೆಯೆ ನಿನ್ನ ರೂಪವೂ ಕೂಡ ತೋರು ತ್ತಲಿದೆ. ಹಸಿವೆಯಿಂದ ಕಂಗಾಲಾದ ಇವರು ನಿನ್ನನ್ನೇ ಭಕ್ಷಿಸಿಬಿಡಬಹುದು ಆದುದರಿಂದ ಇವರಿಗೆ ತಿನ್ನಲು ಏನಾದರೂ ಮಾಂಸ ಕೊಡು ಅಥವಾ ಮತ್ತೆ ಬೇರೆ ಏನಾದರೂ ತಿಂಡಿಯನ್ನು ನೀಡು. ಇಲ್ಲದಿದ್ದರೆ, ಕ್ಷುಧೆಯಿಂದ ಬಳಲಿದ ಇವರು ನನ್ನನ್ನು ಬಹಳ ಪೀಡಿಸು ತ್ತಾರೆ. ಅವರಿಗೆ ಏನೂ ಕೊಡದಿದ್ದರೆ ನನ್ನನ್ನೇ ಇವರು ತಿಂದು ಬಿಡಬಹುದು. ಅಷ್ಟು ಬಲಿಷ್ಠರೂ ಆಗಿದ್ದಾರೆ- ಈ ಕುಮಾರಿಯರು. ನನ್ನ ಈ ಅಸಹಾಯ ಪರಿಸ್ಥಿತಿಯನ್ನು ನೋಡಿ ಯಾದರೂ ಅವರಿಗೆ ಈಗಲೇ ತಿನ್ನಲು ಏನಾದರೂ ಆಹಾರದ ವ್ಯವಸ್ಥೆಯನ್ನು ಮಾಡು

**ರುದ್ರ** :- ಶಿವರೂಪಿಯಾದ ರುದ್ರಶಕ್ತಿಗೆ ಯುಗಾಂತರದಯೆ, ನಡೆದ ಒಂದು ಘಟನೆಯನ್ನು ಹೇಳುತ್ತೇನೆ, ಕೇಳು. ಹಿಂದೆ ಗಂಗಾ ತಟಾಕದಲ್ಲಿ ದಕ್ಷ ಪ್ರಜಾಪತಿಯು ಒಂದು ಯಜ್ಞ ಕೈ ಕೊಂಡಿದ್ದ. ಅದನ್ನು ನಾನು ಗಣಾಧೀಶರಿಗೆ ಹೇಳಿ ಹಾಳು ಮಾಡಿಸಿದೆ. ಆಗ ಆ ದಕ್ಷನ ಯಜ್ಞವು ಜಿಂಕೆಯ ರೂಪದಿಂದ ಓಡಿತು. ಹೊರಗಿನಿಂದ ಓಡುವ ಆ ಯಜ್ಞಮೃಗನನ್ನು ನಾನು ಬಾಣದಿಂದ ಹೊಡೆದೆ. ಅದರ ಮೈಯಿಂದ ನೆತ್ತರು ಚಿಮ್ಮಿತು. ಅದು ನನ್ನ ಮೈಗೆ ಸಿಡಿದು, ನನ್ನ ಮೈಗೆ ಆಡಿನ ಗಂಧ ಬಂದಿತು. ಅಂದಿನಿಂದ ದೇವತೆಗಳು ನನಗೆ **ಅಜಗಂಧ** ಎಂದು ಹೆಸರಿಟ್ಟರು. ಇದು ನನ್ನ ಮೈಗೆ ಆಡಿನ ವಾಸನೆ ಬರುವದರ ರಹಸ್ಯವಾಗಿದೆ. ಅದಿರಲಿ, ಈ ನಿನ್ನ ಪರಿವಾರ ವರ್ಗಕ್ಕೆಲ್ಲ ನಾನು ಬೇರೆ ಒಂದು ಭೋಜನವನ್ನು ಏರ್ಪಡಿಸುತ್ತೇನೆ.

ಕಾಳರಾತ್ರಿಯಾದ ರೌದ್ರೀ ಶಕ್ತಿಯೆ. ನಿನ್ನ ಬಳಗಕ್ಕೆ ಆಹಾರವನ್ನು ಹೇಳುತ್ತೇನೆ ಕೇಳು. ಗರ್ಭಿಣಿಯಾಗಿರುವ ಹೆಣ್ಣುಮಗಳು ಬೇರೆ ನಾರಿಯ ಬಟ್ಟೆಯನ್ನು ಉಟ್ಟುಕೊಂಡರೆ ಅಥವಾ ತೊಟ್ಟುಕೊಂಡರೆ ಅಥವಾ ಮುಟ್ಟಿದರೆ ಅದರಲ್ಲಿ ವಿಶೇಷವಾಗಿ ಪರಪುರುಷರ ಬಟ್ಟೆಯನ್ನು ಮುಟ್ಟಿದರೆ ನಿನ್ನ ಅನುಚರಿಯರಿಗೆ ಆಹಾರವಾಗಲಿ, ಮತ್ತೆ ಕೆಲವರಿಗೆ ಚಿಕ್ಕ ಚಿಕ್ಕ ಮಕ್ಕಳು. ಆಯುಷ್ಯ ತೀರಿದ್ದರೆ ಇವರಿಗೆ ಆಹಾರವಾಗಲಿ. ಉಳಿದ ಹಲವರು ಹೆರಿಗೆಮನೆಯ ಛಿದ್ರವನ್ನು ಹುಡುಕುತ್ತ ಆಯುಷ್ಯ ತುಂಬಿಯೇ ಹುಟ್ಟಿರುವ ಎಳೆ ಮಗುವನ್ನು ಅಪಹರಿಸಿ ಅಲ್ಲಲ್ಲಿ ನೆಲೆಸಲಿ. ಮನೆ, ಬಯಲು, ಕೆರೆ, ಬಾವಿ, ಉದ್ಯಾನ ಮುಂತಾದ ಸ್ಥಳಗಳಲ್ಲಿ ಯಾವ ಹೆಂಗಸು ಪ್ರತಿ ದಿನವೂ ಅಳುತ್ತ ಕುಳಿತುಕೊಳ್ಳುವಳೋ ಅಂತವರ ಶರೀರದಲ್ಲಿ ಈ ನಿನ್ನ ಪರಿವಾರದ ಕನ್ನಿಕೆಯರು ಪ್ರವೇಶಿಸಿ, ತೃಪ್ತಿಯನ್ನು ಹೊಂದಲಿ.

**ರೌದ್ರಿಶಕ್ತಿ** :- ಶಂಕರನೆ, ನಿನಗೆ ಬುದ್ಧಿಯೇ ಇದ್ದಂತೆ ಕಾಣುವದಿಲ್ಲ. ನನ್ನ ಪರಿಚಾರಿಕೆಯರಿಗೆ ನೀನೆ ಆಹಾರವನ್ನೇನೊ ಕೊಟ್ಟೆ, ಆದರೆ ಅದರಿಂದ ಪ್ರಜೆಗಳಿಗೆ ಎಷ್ಟು ಪೀಡೆ ಆಗುವದೆಂಬುದನ್ನು ನೀನು ಆಲೋಚಿಸಿಲ್ಲ. ಜನರಿಗೆ ಕಷ್ಟ ಕೊಡುವ ಪೀಡಾಕಾರಕವಾದ ಇಂತಹ ಆಹಾರವನ್ನು ಈ ಕ್ರೂರ ನಾರಿಯರಿಗೆ ಕೊಡಲು ನಿನಗೆ ನಾಚಿಕೆ ಬರುವದಿಲ್ಲವೆ? ಛೀ! ಇಂತಹ ಆಹಾರವನ್ನು ಸರ್ವಥಾ ಕೊಡತಕ್ಕದ್ದಲ್ಲ.

**ರುದ್ರ** :- ಅವಂತೀ ನಗರದಲ್ಲಿ ಹಿಂದೆ ನಾನು ನನ್ನ ಮಗನಾದ ಸ್ಕಂದನ ಚಾವಳ-ಚೂಡಾಕರ್ಮವನ್ನು ಮಾಡಿದೆನು. ಆಗ ಸಪ್ತ ಮಾತೆಯರು ಬಂದು ದಿವ್ಯವಾದ ಅಡಿಗೆಯನ್ನು ಮಾಡಿದರು. ಮಾತೆಯರ ಕೈಯಿಂದ ಸಿದ್ಧವಾದ ಆ ರಸ ಸಾರವನ್ನು ಉಣ್ಣಲು ದೇವತೆಗಳ ಗುಂಪೇ ಬಂದಿತು. ಅದರಂತೆ ಉಳಿದ ಮಾತೆಯರು, ಗಂಧರ್ವ, ಅಪ್ಸರ, ಯಕ್ಷರು, ಮೇರು ಮುಂತಾದ ಗಿರಿಗಳು ಗಂಗೆಯೇ ಮೊದಲಾದ ನದಿಗಳು ಸೌರ, ಸಿದ್ಧ, ಡಾಕಿನಿ, ಭೂತ, ಪ್ರೇತ, ಪಿಶಾಚ ಗ್ರಹಗಳೂ ಉಳಿದೆಲ್ಲರೂ ಬಂದಿದ್ದರು. ಒಟ್ಟಾರೆ ಬ್ರಹ್ಮದೇವರು ಸೃಷ್ಟಿಮಾಡಿದ ಜೀವಿಗಳೆಲರೂ ಅಲ್ಲಿ ಸಪ್ತಮಾತೆಯರ ಕರಕಮಲದಿಂದ ಪಾಚಿತವಾದ ಅನ್ನವನ್ನು ಊಟ ಮಾಡಲು ಆಗಮಿಸಿದ್ದರು ಅವರೆಲ್ಲರೂ ತಾಯಂದಿರ ಸ್ವತಃ ತಮ್ಮ ಕೈಯಿಂದ ಬೇಯಿಸಿದ ಅಡಿಗೆಯನ್ನು ಯಥೇಚ್ಛ ಊಟಮಾಡಿ ಹೆಚ್ಚಾದುದನ್ನು ತಮ್ಮ ತಮ್ಮ ಊಟ ಮಾಡಿದ ಜಾಗಗಳಲ್ಲಿ ಬಿಟ್ಟು ಹೋಗಿರುವರು. ಅದನ್ನು ಈ ನಿನ್ನ ಅನುಚರಿಯರಾದ ದೇವಿಯರು ತಿನ್ನಲಿ.

**ರೌದ್ರೀ ಶಕ್ತಿ:-** ಪರಮೇಶ್ವರನೆ. ಇವರಿಗೆ ಉಳಿದವರು ತಿಂದು ಬಿಟ್ಟು ಆಹಾರವನ್ನು ಕೊಡುವದು ಬೇಡ. ಯಾರೂ ತಿನ್ನದ, ತಂಗಳಾಗದ ಮೀಸಲು ಮುರಿಯದ ಆಹಾರವನ್ನು ಕೊಡು. ಬೆಲ್ಲ ತುಪ್ಪ ಹಾಕಿ ಚೆನ್ನಾಗಿ ಪಕ್ವವಾದ ರುಚಿ ಕರವಾದ ಆಹಾರವನ್ನು ಇವರಿಗೆ ನೀಡು. ಸ್ವರ್ಗಲೋಕದಲ್ಲಿಯೂ ದುರ್ಲಭವಾದ ರಸಪಾಕವನ್ನು ಇವರಿಗೆ ಒದಗಿಸು.

**ಪುಲಸ್ತ್ಯ:-** ರೌದ್ರೀಶಕ್ತಿಯ ಈ ನುಡಿಯನ್ನು ಕೇಳಿ, ಶಿವನು ಪಾರ್ವತಿಯ ಎದುರು ಧರ್ಮದಿಂದ ಈ ಮಾತನ್ನು ಹೇಳಿದನು.

**ಮಹಾದೇವ:-** ನಾನು ಕೂಡ, ಬಗೆಬಗೆಯ ಅನ್ನವನ್ನು ಮಾಡಿದ್ದೆ. ಅದೆಲ್ಲವೂ ಕೂಡ ವ್ಯಯವಾಗಿದೆ. ಈಗ ಏನೂ ಉಳಿದಿಲ್ಲ. ಈಗ ನೀವೆಲ್ಲರೂ ಇಲ್ಲಿಗೆ ಬಂದಿರುವಾಗ ನಾನು ನಿಮಗೆ ಏನು ಕೊಡಲಿ? ಏನು ಮಾಡಲಿ? ನಿಮ್ಮ ತೃಪ್ತಿಗಾಗಿ ನಾನು ನಿಮಗೆ ಏನನ್ನಾದರೂ ಕೊಡುತ್ತೇನೆ. ನನ್ನ ದೇಹದ ಕೆಳಗೆ ದುಂಡಾಗಿ ಹಣ್ಣುಗಳಂತೆ ತುಸು ಉದ್ದವಾದ ಬೀಜಗಳನ್ನು ನೀವು ಭಕ್ಷಿಸಿರಿ. ಇದರಿಂದ ನಿಮಗೆ ಅತ್ಯಂತ ತೃಪ್ತಿಯಾಗುವದು.

**ಪುಲಸ್ತ್ಯ:-** ಮಹಾದೇವರು ಕೊಡಮಾಡಿದ ಈ ಮಹಾ ಪ್ರಸಾದದಿಂದ ಆ ದೇವಿಯರಿಗೆಲ್ಲ ಬಹಳ ಸಂತೋಷವಾಯಿತು. ಅವರು ಹರನನ್ನು ಹಾಡಿ ಹೊಗಳಿ ನಮಸ್ಕರ ಮಾಡಿ ನಿಂತುಕೊಂಡರು. ಅವರನ್ನು ಕುರಿತು ಶಿವನು ಈ ಮಾತನ್ನು ಹೇಳಿದನು.

**ರುದ್ರ:-** ಯಾರು ಇನ್ನೊಬ್ಬರನ್ನು ಹಾಸ್ಯ ಮಾಡದೆ ಸದಾಚಾರವನ್ನು ಅನುಷ್ಠಾನ ಮಾಡುತ್ತ ತಮ್ಮ ತಮ್ಮ ವರ್ಣಾಶ್ರಮ ಉಚಿತ ಕರ್ಮಗಳನ್ನು ಮಾಡುವರೋ ಅವರಿಗೆ ನಾನು ಹಣವನ್ನು ಕೊಡುತ್ತೇನೆ, ಮಡದಿ. ಮನೆ, ಮಕ್ಕಳು ಪಶು ಸಂಪತ್ತು ಎಲ್ಲವನ್ನು ನೀಡುತ್ತೇನೆ. ಅವರ ಮನೋಭೀಷ್ಟಗಳನ್ನೆಲ್ಲ ಪೂರೈಸುತ್ತೇನೆ. ಅಂತಹ ಸಜ್ಜನರನ್ನು ಹಲ್ಲು ತೆಗೆದು ಹಾಸ್ಯಮಾಡುವವರು ಅಣಕಿಸುವವರು ನಿಂದೆ ಮಾಡುವವರು ದರಿದ್ರರಾಗುತ್ತಾರೆ.

'ಹಾಸ್ಯೇನ ದೀರ್ಘದಶನಾ ದರಿದ್ರಾಶ್ಚಾಪಿ ನಿಂದಿತಾಃ ।
ತಸ್ಮಾತ್‌ನ ನಿಂದಾ ಹಾಸ್ಯಂ ಚ ಕರ್ತವ್ಯಂತು ವಿಜಾನತಾ ॥'

ಹಲ್ಲು ತೋರಿಸಿ, ಪರರ ಉಪಹಾಸ ಮಾಡುವವರು ದರಿದ್ರರೂ, ನಿಂದಿತರೂ ಆಗುವದರಿಂದ ಬುದ್ಧಿವಂತ ಮನುಷ್ಯನು ಇನ್ನೊಬ್ಬರ ನಿಂದೆ, ಉಪಹಾಸ ಮಾಡಬಾರದು. ನೀವೆಲ್ಲರೂ ಮಾತೆಯರೆಂದು ಹೆಸರುವಾಸಿಗಳಾಗಿ ಈ ಲೋಕದಲ್ಲಿರಿ. ಪರನಿಂದೆ ಪರಹಾಸ್ಯ ಮಾಡುವವರನ್ನು ನೀವು ಭಕ್ಷಿಸಿರಿ ನಿಮ್ಮನ್ನು ಪೂಜಿಸಿ ನೈವೇದ್ಯ ಮಾಡಿ ಬೆಳದಿಂಗಳಲ್ಲಿ ಪೂರಿ ಚಪಾತಿ ಹಾಗೂ ಭಕ್ಷ್ಯಭೋಜನಗಳನ್ನು ಮಾಡಿಸಿ ಇಷ್ಟ ಮಿತ್ರರಿಗೂ, ದ್ವಿಜ ಬಾಂಧವರಿಗೂ ಯಥೇಷ್ಟ ಭೋಜನ ಮಾಡಿಸುವವನು ಸಂತಾನ ಸಂಪತ್ತು ಸೌಂದರ್ಯಗಳನ್ನು ಹೊಂದುತ್ತಾನೆ. ರೌದ್ರಿಶಕ್ತಿಯೇ, ಶಿವದೂತಿಯಾದ ನಿನ್ನ ಪರಿವಾರಕ್ಕೆಲ್ಲ ನಾನು ಇಂತಹ ಒಳ್ಳೇ ಆಹಾರ ಕೊಟ್ಟಿದ್ದೇನೆ. ಇದರಲ್ಲಿ ನಾಚಿಕೆ ಬರುವಂತಹದು ಏನಿದೆ ?

ದೇವಿಯೆ, ನಾನು ಈಗ ಹೇಳಲಿರುವ ನಿನ್ನ ಸ್ತೋತ್ರವನ್ನು ಯಾರು ಪಠಿಸುವರೋ ಅವರಿಗೆಲ್ಲ ನೀನು ಬೇಡಿದ ವರವನ್ನು ಕೊಟ್ಟ ಅನುಗ್ರಹಿಸು.

## ದೇವಿ ಸ್ತೋತ್ರ

ಜಯಸ್ವ ದೇವಿ ಚಾಮುಂಡೇ ಜಯ ಭೂತಾಪಹಾರಿಣಿ ।
ಜಯ ಸರ್ವಗತೇ ದೇವಿ ಕಾಳರಾತ್ರಿ ನಮೋಸ್ತುತೇ ॥

ವಿಶ್ವಮೂರ್ತೇ ಶುಭೇ ಶುದ್ಧೇ ವಿರೂಪಾಕ್ಷಿ ತ್ರಿಲೋಚನೇ ।
ಭೀಮರೂಪೇ ಶಿವೇ ವಿದ್ಯೆ ಮಹಾಮಾಹೇ ಮಹೋದಯೆ ॥

ಮನೋಜಯೇ ಜಯೇ ಜಂಭೇ ಭೀಮಾಕ್ಷಿ ಕ್ಷುಭಿತ ಕ್ಷಯೆ ।
ಮಹಾಮಾರಿ ವಿಚಿತ್ರಾಂಗಿ ಗೇಯೇ ನೃತ್ಯ ಪ್ರಿಯೇ ಶುಭೆ ॥

ವಿಕರಾಳಿ ಮಹಾಕಾಳಿ ಕಾಳಿಕೇ ಪಾಪಹಾರಿಣಿ ।
ಪಾಶಹಸ್ತೇ ದಂಡಹಸ್ತೇ ಭೀಮರೂಪೇ ಭಯಾನಕೆ ॥

ಚಾಮುಂಡೇ ಜ್ವಲಮಾನಾಸ್ಯೇ ತೀಕ್ಷ್ಣದಂಷ್ಟ್ರಿ ಮಹಾಬಲೆ ।
ಸರ್ವಯಾನ ಸ್ಥಿತೇ ದೇವೀ ಪ್ರೇತಾಸನಗತೇ ಶಿವೇ ॥

ಭೀಮಾಕ್ಷಿ ಭೀಷಣೇ ದೇವಿ ಸರ್ವಭೂತ ಭಯಂಕರಿ ।
ಕರಾಳಿ ವಿಕರಾಳಿ ಚ ಮಹಾಕಾಳಿ ಕರಾಳಿನಿ ॥

ಕಾಳಿ ಕರಾಳವಕ್ತ್ರಾಸ್ತ್ರೀ ಕಾಳರಾತ್ರಿ ನಮೋಸ್ತುತೇ ।
ಸರ್ವ ಶಸ್ತ್ರ ಭೃತೇ ದೇವಿ ಸರ್ವದೇವಿ ನಮೋಸ್ತು ತೇ ॥

ಈ ಸ್ತೋತ್ರದಿಂದ ನಿಮ್ಮನ್ನು ಸುತ್ತಿಸಿದವರಿಗೆ ನೀನು ವರಪ್ರದಳಾಗು. ಈ ಪರ್ವತದ ಮೇಲೆ ಏರಿ ನಿನ್ನನ್ನು ಭಕ್ತಿಯಿಂದ ಪೂಜೆ ಮಾಡುವವನು ಪುತ್ರ, ಪೌತ್ರ, ಸಮೃದ್ಧಿ ಹೊಂದಿ, ಭಾಗ್ಯವಂತನಾಗಿ ಬಾಳಲಿ. ರಾಜ್ಯ ಭ್ರಷ್ಟನಾದ ಅರಸನು ಅಷ್ಟಮಿ ನವಮಿ, ಚತುರ್ದಶಿ ದಿನಗಳಂದು ಉಪವಾಸ ಮಾಡಿ, ಈ ದೇವೀಸ್ತುತಿಯನ್ನು ಪಾರಾಯಣ ಮಾಡಿದರೆ ಒಂದು ವರ್ಷದೊಳಗೆ ತಾನು ಕಳೆದು ಕೊಂಡ ರಾಜ್ಯವನ್ನು ಮರಳಿ ಪಡೆಯುತ್ತಾನೆ. ಪುಷ್ಕರ ಜಲದಲ್ಲಿ ಸ್ನಾನ ಮಾಡಿ. ಈ ಸ್ತೋತ್ರವನ್ನು ಪಠಿಸಿದವನು ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ. ಈ ಸ್ತೋತ್ರವನ್ನು ಬರೆದು ಪುಸ್ತಕವನ್ನು ಮನೆಯಲ್ಲಿಟ್ಟರೆ, ಆ ಮನೆಗೆ ಬೆಂಕಿ, ಹಾವು ಹಾಗೂ ಕಳ್ಳರ ಭಯ ವಿರುವದಿಲ್ಲ. ಈ ಸ್ತೋತ್ರವನ್ನು ಯಾವ ಮನೆಯಲ್ಲಿ ಕುಳಿತು ಬರೆಯುವನೋ ಆ ಮನೆಯಲ್ಲಿ ಧನ, ಧಾನ್ಯ, ಸಂತಾನ ಸಂಪತ್ತು ಒಳ್ಳೇ ಸ್ತ್ರೀಯರು, ರತ್ನ, ಆನೆ, ಕುದುರೆ ವೈಭವ, ಸಿದ್ಧಿ, ಸಮೃದ್ಧಿ ಎಲ್ಲವೂ ಸಂಪನ್ನವಾಗುತ್ತದೆ. ಇದು ನಿಶ್ಚಯ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಶ್ರಾವಣ ಪಂಚಮಿ ಎಂಬ ಇಪ್ಪತ್ತಾರನೇಯ ಒಂದನೇ ಅಧ್ಯಾಯ ಮುಗಿದುದು*

—೦—

**॥ಭೀಷ್ಮ ಉವಾಚ॥**

**ಕೇನ ಕರ್ಮವಿಪಾಕೇನ ಪ್ರೇತತ್ವಮುಪಜಾಯತೇ ।**
**ಕೇನ ಚಾತ್ರ ಪ್ರಮುಚ್ಯೇತ ತನ್ಮೇ ಶಂಸಿತುಮರ್ಹಸಿ ॥**

**ಭೀಷ್ಮ:-** ಮನುಷ್ಯರಿಗೆ ಯಾವ ಕರ್ಮದಿಂದ ಪ್ರೇತತ್ವ ಬರುತ್ತದೆ? ಏನು ಮಾಡಿದರೆ ಆ ಪ್ರೇತತ್ವವು ತೊಲಗುತ್ತದೆ? ಇದನ್ನು ನನಗೆ ತಿಳಿಸಿರಿ.

**ಪುಲಸ್ತ್ಯ:-** ನಿನಗೆ ಮತ್ತೆ ಈ ವಿಷಯದಲ್ಲಿ ಸಂಶಯ ಬಾರದಂತೆ ಸ್ಪಷ್ಟವಾಗಿ ತಿಳಿಸುತ್ತೇನೆ ಕೇಳು. ಯಾವದರಿಂದ ಮಾನವನು ಪ್ರೇತನಾಗುವನು ಮತ್ತು ಯಾವುದರಿಂದ ಮುಕ್ತನಾಗುವನು ಎಂಬುದನ್ನು ನಿನಗೆ ಈಗ ತಿಳಿಸುತ್ತೇನೆ. ಯಾಕೆಂದರೆ ಪ್ರೇತಭಾವವೆಂದರೆ ಅದೊಂದು ನರಕವೇ ಸರಿ. ಸಾಮಾನ್ಯರಾದ ಸುರರು ಕೂಡ ಅದರಿಂದ ಪಾರಾಗಲಾರರು. ಅದಕ್ಕೆ ಒಳ್ಳೇ ಉಪಾಯವೆಂದರೆ ಸಜ್ಜನರ ಸಹವಾಸ. ಸತ್ಪುರುಷರ ಸಂಪರ್ಕ. ದೊಡ್ಡವರೊಂದಿಗೆ ಮಾತನಾಡಿದರೆ ಹಾಗೂ ಪುಣ್ಯಕರ ತೀರ್ಥ ಕ್ಷೇತ್ರಗಳ ನಾಮೋಚ್ಚಾರ ಮಾಡಿದರೆ, ಪ್ರೇತ ಯೋನಿಯಿಂದ ಮಾನವರು ಬಿಡಗಡೆಯನ್ನು ಹೊಂದುವರು.

ಪೂರ್ವಕಾಲದಲ್ಲಿ ಪೃಥು ಎಂಬ ಬ್ರಾಹ್ಮಣನು ಇದ್ದನು, ಅವನು ಒಳ್ಳೇ ನಿಯಮ ನಿಷ್ಠ. ಸರ್ವದಾ ಸಂತೃಪ್ತ. ವೇದಾಧ್ಯಯನ, ಹೋಮ, ಜಪ, ಮುಂತಾದ ಯಾವ ವಿಧಿಯನ್ನೂ ಅವನು ಬಿಡುತ್ತಿರಲಿಲ್ಲ. ಶಮ, ದಮ, ಶಾಂತಿ ಕ್ಷಾಂತಿಗಳು, ಅವನಲ್ಲಿ ಹುಟ್ಟು ಗುಣಗಳಾಗಿ ಹುಟ್ಟಿ ಬಂದಿದ್ದವು. ಅಹಿಂಸೆ ಅವನ ಸ್ವಭಾವವೇ ಆಗಿತ್ತು. ಬ್ರಹ್ಮಚರ್ಯ ವ್ರತವನ್ನು ಅನೂಚಾನವಾಗಿ ಪಾಲಿಸುತ್ತಿದ್ದ. ದೇವ ಹಾಗೂ ಪಿತೃ ಕಾರ್ಯಗಳನ್ನು ಸಕಾಲದಲ್ಲಿ ಆಚರಿಸುತ್ತಿದ್ದ. ಬಂದ ಅತಿಥಿಗಳನ್ನು ಪೂಜಿಸುವದು, ಸತ್ಯ ನುಡಿಯುವದು, ಮೃದು ಮಧುರವಾಗಿ ಮಾತನಾಡುವದು, ವಿಹಿತ ಕರ್ಮಗಳನ್ನು ಆಚರಿಸುವದು, ಅವನ ನಿತ್ಯ ಚರ್ಯೆ. ಅವನೊಬ್ಬ ಮನೆಯಲ್ಲಿಯೇ ಮಹಾತಪಸ್ವಿಯಾಗಿದ್ದ ಮುನಿ ಎನಿಸಿದ್ದ.

ಈ ದ್ವಿಜನಿಗೆ ತೀರ್ಥಯಾತ್ರೆ ಮಾಡಬೇಕೆಂಬ ಬುದ್ಧಿ ಉಂಟಾಯಿತು. ಪುಣ್ಯ ತೀರ್ಥಗಳಲ್ಲಿ ಮುಳುಗುಹಾಕಿ ತನ್ನ ದೇಹವನ್ನು ಪಾವನಮಾಡಬೇಕೆಂಬ ಹಿರಿಯಾಶೆ ಮೂಡಿತು. ಪುಷ್ಕರ ತೀರ್ಥದಲ್ಲಿ ಸ್ನಾನಮಾಡಿ, ಸೂರ್ಯೋದಯ ಸಮಯಕ್ಕೆ ಸರಿಯಾಗಿ ಸಂಧ್ಯಾವಂದನೆ, ಜಪ, ಸೂರ್ಯ ನಮಸ್ಕಾರ, ಪೂಜೆ ಮುಂತಾದ ತನ್ನ ಆಹ್ನಿಕವನ್ನೆಲ್ಲ ಮುಗಿಸಿಕೊಂಡು, ಪ್ರಯಾಣ ಬೆಳೆಸಿದನು. ಅವನು ಒಂದು ಅರಣ್ಯದಲ್ಲಿ ಹೋಗುವಾಗ ನೀರು, ನೆರಳಿಲ್ಲದ ಭಯಂಕರ ಕಾಡಿನ ಮಧ್ಯದಲ್ಲಿ ಬಂದನು. ಎಲ್ಲೆಡೆಗೂ ಬರೀ ಮುಳ್ಳಿನ ಗಿಡಗಳೇ ತುಂಬಿದ್ದವು. ಅಂತಹ ನಿರ್ಜನ ಗೊಂಡಾರಣ್ಯದಲ್ಲಿ ಅವನಿಗೆ ಐದು ಭೀಕರಾಕಾರದ ಮನುಷ್ಯರು ಕಣ್ಣಿಗೆ ಬಿದ್ದರು. ವಿಕಾರವಾದ ಅವರ ಆಕಾರ ಹಾಗೂ ಘೋರ ರೂಪಗಳನ್ನು ಕಂಡು ಆ ಬ್ರಾಹ್ಮಣನಿಗೆ ತುಸು ಹೆದರಿಕೆ ಆಯಿತು. ಆದರೂ ಅಲುಗಾಡದೆ ನಿಂತಲ್ಲಿಯೇ ನಿಂತು ಕೊಂಡನು ಅವನು. ಅನಂತರ ತುಸು ಧೈರ್ಯ ತೆಗೆದುಕೊಂಡು ಸವಿನುಡಿಯಲ್ಲಿ ಅವರನ್ನು ಕೇಳಿದನು.

**ದ್ವಿಜ :-** ಅಯ್ಯಾ ನೀವು ಯಾರು? ನಿಮ್ಮ ಮುಖಗಳು ಇಷ್ಟೇಕೆ ವಿಕಾರಗೊಂಡಿವೆ? ಇಂತಹ ಕೆಟ್ಟ ರೂಪವು ಬರಬೇಕಾದರೆ ಎಲ್ಲಿಗೆ ಹೊರಟಿರುವಿ?

**ಪ್ರೇತಗಳು:-** ನಾವೆಲ್ಲರೂ ಹಸಿವೆಯಿಂದ ಕಂಗಾಲಾಗಿದ್ದೇವೆ. ಭಯಂಕರ ದುಃಖದಲ್ಲಿ ಮುಳುಗಿದ್ದೇವೆ. ನಮಗೆ ಜ್ಞಾನವೆಂಬುದೇ ಇಲ್ಲ. ಮನಸ್ಸು ಸ್ಥಿರವಾಗಿರುವದಿಲ್ಲ. ಆಗಾಗ ಎಚ್ಚರವೂ ತಪ್ಪುವದುಂಟು. ದಿಕ್ಕು, ದೇಶಗಳನ್ನು ನಾವು ಅರಿಯಲಾರೆವು. ನೆಲವಾವುದು ಮುಗಿಲು ಯಾವುದು ಎಂಬುದನ್ನು ಕೂಡ ನಾವು ತಿಳಿಯಲಾರೆವು. ನಮ್ಮ ದುಃಖವನ್ನು ಈಗ ನಿನ್ನೆದುರು ತೋಡಿಕೊಂಡದ್ದೇ ಸುಖವೆನಿಸುತ್ತದೆ. ಸೂರ್ಯನು ಉದಯ ವಾಗಿರುವದರಿಂದ ಬೆಳಗಾದಂತೆ ತೋರುತ್ತದೆ. ಐವರಲ್ಲಿ ನಾನು ಪ್ರತ್ಯುಷಿತ, ಇವನು ಸೂಚಿಮುಖ ಅವನು ಶೀಘ್ರಗ ನಾಲ್ಕನೆಯವನು ರೋಹಕ, ಐದನೆಯವನೇ ಲೇಖಕ.

**ಪೃಥು ದ್ವಿಜ :-** ದುಷ್ಕರ್ಮದಿಂದ ಪ್ರೇತಗಳಾಗಿ ಹುಟ್ಟಿದವರ ಹೆಸರುಗಳೇ ನಿಮಗಿರುತ್ತವೆ. ನಿಮಗೆ ಇಂತಹ ಹೆಸರು ಬರಲು ಕಾರಣವೇನು?

**ಪ್ರೇತಗಳು :-** ನಾನು ಮೊದಲು ಬದುಕಿದ್ದಾಗ ರುಚಿಕರವಾದ ಬಿಸಿ ಅನ್ನವನ್ನು ಊಟ ಮಾಡುತ್ತಿದ್ದೆ. ದ್ವಿಜರಿಗೆ ತಂಗಳು, ಹಳಸಿದ ಅನ್ನ ಹಾಕುತ್ತಿದ್ದೆ. ಈ ಕಾರಣದಿಂದಾಗಿ ನನ್ನ ಹೆಸರು ಪ್ರತ್ಯುಷಿತ ಎಂದಾಗಿದೆ. ಈ ನನ್ನ ಜೊತೆಗಾರನು ಅನ್ನ ಬಯಸಿ ಬಂದ ದ್ವಿಜರನ್ನು ವ್ಯಂಗ್ಯ ಮಾತುಗಳಿಂದ ಚುಚ್ಚುತ್ತಿದ್ದನು. ಬಿರುನುಡಿಗಳಿಂದ ಅವಮಾನ ಮಾಡಿ ತಿವಿಯುತ್ತಿದ್ದನು. ಆದರಿಂದಾಗಿ ಇವನಿಗೆ ಸೂಚೀಮುಖನೆಂದು ಹೆಸರು ಬಂದಿದೆ. ಮತ್ತೊಬ್ಬ ಮಿತ್ರನು ಹಸಿದು ಬಂದ ದ್ವಿಜರು ಅನ್ನ ಕೇಳಿದ ಕೂಡಲೇ ಅಲ್ಲಿಂದ ವೇಗದಿಂದ ಓಡಿಹೋಗುತ್ತಿದ್ದನು. ಬೇಕಾದಷ್ಟು ಅನ್ನ ಸಮೃದ್ಧಿಯಿದ್ದರೂ ಯಾರಿಗೂ ಕೊಡದೆ, ಓಡಿಹೋದದ್ದರಿಂದ ಇವನಿಗೆ ಶೀಘ್ರಗ ಎಂದು ಹೆಸರು ಬಂದಿದೆ. ನಮ್ಮ ಈ ನಾಲ್ಕನೆಯ ಸಹಚರನ್ನು ಮನಗೆ ಬಂದ ಅತಿಥಿಗಳ ಕಣ್ಣು ತಪ್ಪಿಸಿ, ಮನೆಯ ಅಟ್ಟದ ಮೇಲೆ ಕುಳಿತು ಬಗೆ ಬಗೆಯ ಪಕ್ವಾನ್ನ ಊಟ ಮಾಡುತ್ತಿದ್ದನು. ಆದರಿಂದ ಇವನಿಗೆ ರೋಹಕ ಎಂದು ಹೆಸರು ಬಂದಿತು. ಈ ಐದನೇಯವನಿಗೆ ಲೇಖಕ ಎಂಬ ಹೆಸರು ಬಂದಿದೆ. ಕ್ಷುಧಿತ ದ್ವಿಜರು ಮನೆಗೆ ಬಂದು ಅನ್ನವನ್ನು ಬೇಡಿದಾಗ ಇವನ ಮನೆಯಲ್ಲಿ ಸಾಕಷ್ಟು ಅನ್ನವಿದ್ದರೂ ಕೆಳಗೆ ಮುಖಮಾಡಿ ಏಕಾಕಿಯಾಗಿ ನೆಲ ಕೆದರುತ್ತ ಕುಳಿತುಕೊಳ್ಳುತ್ತಿದ್ದನು. ಆದುದರಿಂದ ಇವನಿಗೆ ಲೇಖಕ ಎಂಬ ಹೆಸರು ಬಂದಿದೆ. ನಾವು ಐವರಲ್ಲಿ ಲೇಖಕನಿಗೆ ನಡೆಯಬೇಕಾದರೆ ಬಹಳ ಕಷ್ಟವಾಗುವದು. ಎಡವುತ್ತ, ಬೀಳುತ್ತ ಇವನು ತೆವಳಿಕೊಂಡೇ ಹೋಗುವನು. ರೋಹಕನು ಯಾವಾಗಲೂ ತಲೆಕೆಳಗಾಗಿಯೇ ನಡೆಯಬೇಕಾಗುವದು. ಅನ್ನ ಕೊಡದೆ ಓಡಿಹೋದ ಶೀಘ್ರಗನು ಈಗ ಕುಂಟನಾಗಿದ್ದಾನೆ. ಸೂಚೀಮುಖನ ಬಾಯಿ ತುಂಬ ಸೂಜಿ ಚುಚ್ಚಿದಂತಾಗಿದೆ ಪುರ್ಯುಷಿತನು ಒಂಟೆಯಂತೆ ಉದ್ದಗೋಣು, ಜೋತಾಡುವ ಹೊಟ್ಟೆ, ಭಾರವಾದ ವೃಷಣ ವುಳ್ಳವನು ಆಗಿದ್ದಾನೆ ಆ ಮಹಾಪಾಪದಿಂದ.

**ದ್ವಿಜ :-** ಈ ಭೂಲೋಕದಲ್ಲಿ ಮಾನವ ಜೀವಿಗಳು ಬದುಕುವದು ಆಹಾರದಿಂದ ತಾನೆ? ಈಗ ನಿಮ್ಮ ಆಹಾರವು ಯಾವದು? ನೀವು ಏನನ್ನು ತಿನ್ನುವಿರಿ ?

**ಪ್ರೇತಗಳು :-** ಬ್ರಾಹ್ಮಣನೆ, ನಮ್ಮ ಆಹಾರವನ್ನು ಕೇಳುವಿಯಾ, ಕೇಳಿದರೆ ನೀನು ಅದನ್ನು ಮತ್ತೆ ಮತ್ತೆ ನಿಂದಿಸದೆ ಇರಲಾರಿ. ನಮ್ಮ ಆ ಹೊಲಸು ಆಹಾರದಲ್ಲಿ ಸತ್ವ ಎನ್ನುವದೇ ಇರುವದಿಲ್ಲ. ಶ್ಲೇಷ್ಮ, ಮಲ, ಮೂತ್ರ ಹಾಗೂ ಹೆಣ್ಣು ಮಕ್ಕಳ ಅವಯವದ ಹೊಲಸು,

ಮನೆಯಲ್ಲಿ ಕಸಕಡ್ಡಿ ಹಾಗೂ ಶೌಚ ಕೂಪಗಳಲ್ಲಿ ನಾವು ವಾಸ ಮಾಡುತ್ತೇವೆ. ಹೆಣ್ಣು ಮಕ್ಕಳು ತಿಂದು ಎಸೆದ ಹೊತ್ತಿ ಕರಕಾದ ಕಸಕಡ್ಡಿ ಕೊಳೆತು ನಾರುವ ಅಮೇಧ್ಯಕ್ಕಿಂತ ಅಸಹ್ಯವಾದ ಪದಾರ್ಥಗಳನ್ನು ಪ್ರೇತಗಳು ತಿನ್ನುತ್ತವೆ. ನೈವೇದ್ಯ, ವೈಶ್ವದೇವ ಇಲ್ಲದ, ವ್ರತಗಳನ್ನು ಆಚರಿಸದ, ಮಂತ್ರಗಳನ್ನು ಪಠಿಸದ, ಗುರುಗಳನ್ನು ಪೂಜಿಸದ, ಕೋಪ, ಲೋಭಗಳಿಗೆ ವಶರಾದ ಹಾಗೂ ಮನೆಯಲ್ಲಿ ಗಂಡಸು ಹೆಂಗಸಿನ ವಶವರ್ತಿಯಾಗಿ ನಡೆಯುವ ಸ್ತ್ರೀಪ್ರಧಾನ ಮನೆಯಲ್ಲಿ ನಮ್ಮಂತಹ ಪ್ರೇತಗಳಿಗೆ ಆಹಾರವು ಇರುತ್ತದೆ. ನಮ್ಮ ಭೋಜನ ಹೇಳಿಕೊಳ್ಳಲು ನಮಗೇ ನಾಚಿಕೆ ಆಗುವದು. ಇದಕ್ಕೂ ಹೆಚ್ಚಿಗೆ ನಾವು ಹೇಳಲಾರೆವು, ಮನುಷ್ಯನು ಪ್ರೇತನಾಗದಂತೆ ಇರಬೇಕಾದರೆ. ಏನು ಮಾಡಬೇಕು ಎನ್ನುವದನ್ನು ಹೇಳು ?

**ದ್ವಿಜ:-** ಕೃಚ್ಛ್ರ ಚಾಂದ್ರಾಯಣ, ಮುಂತಾದ ವ್ರತಗಳನ್ನು ಹಾಗೂ ತನ್ನ ವರ್ಣಾಶ್ರಮಕ್ಕೆ ವಿಹಿತವಾದ ನಿತ್ಯಾಚಾರವನ್ನು ಮಾಡುವವನು ಪ್ರೇತನಾಗುವದಿಲ್ಲ.

**'ತುಲ್ಯೋ ಮಾನಾಪಮಾನೇ ಚ ತುಲ್ಯಃ ಕಾಂಚನಲೋಷ್ಠಯೋಃ ।**
**ತುಲ್ಯಶ್ಶತ್ರೌಚ ಮಿತ್ರೇ ಚ ನ ಪ್ರೇತೋ ಜಾಯತೇ ನರಃ ॥**

ಮಾನಾಪಮಾನಗಳು ಸಮನಾಗಿ ಮಣ್ಣು, ಹೊನ್ನು, ಸಮನಾಗಿ ಶತ್ರುಮಿತ್ರರು ಸಮನಾಗಿ ಯಾರಿಗೆ ಇರುವದೋ ಅವರು ಪ್ರೇತರಾಗುವದಿಲ್ಲ.

**'ದೇವತಾತಿಥಿ ಪೂಜಾಸು ಗುರು ಪೂಜಾಸು ನಿತ್ಯಶಃ ।**
**ರತೋ ವೈ ಪಿತೃ ಪೂಜಾಸು ನ ಪ್ರೇತೋ ಜಾಯತೇ ನರಃ ॥**

ದೇವತೆಗಳು, ಅತಿಥಿಗಳು, ಗುರುಗಳು, ಪಿತೃಗಳು ಇವರ ಪೂಜೆಯಲ್ಲಿ ಆಸಕ್ತನಾದವನು ಪ್ರೇತನಾಗುವದಿಲ್ಲ

**ಶುಕ್ಲಾಂಗಾರಕ ಸಂಯುಕ್ತಾ ಚತುರ್ಥೀ ಜಾಯತೇ ಯದಾ ।**
**ಶ್ರದ್ಧಯಾ ಶ್ರಾದ್ಧಕೃತ್ಯಃನ ಪ್ರೇತೋ ಜಾಯತೇ ನರಃ ॥**

ಶುಕ್ಲ ಪಕ್ಷದ ಚತುರ್ಥಿಯು ಮಂಗಳವಾರ ಬಂದರೆ ಆ ದಿನ ಶ್ರದ್ಧೆಯಿಂದ ಶ್ರಾದ್ಧ ಮಾಡಿದವನು ಪ್ರೇತನಾಗುವದಿಲ್ಲ

**ಜಿತ ಕ್ರೋಧೋ ನ ಮಾತ್ಸರೋ ತೃಷ್ಣಾ ಸಂಗವಿವರ್ಜಿತಃ ॥**
**ಕ್ಷಮಾವಾನ್ದಾನಶೀಲಶ್ಚ ನ ಪ್ರೇತೋ ಜಾಯತೇ ನರಃ ॥**

ಕ್ರೋಧ, ಮತ್ಸರಗಳಿಲ್ಲದ, ಆಶೆ, ಸ್ನೇಹಗಳಿಲ್ಲದ ಕ್ಷಮಾವಂತನೂ, ದಾನಶೀಲನೂ ಆದವನು ಪ್ರೇತನಾಗುವದಿಲ್ಲ.

**ಗೋಬ್ರಾಹ್ಮಣಾಂಶ್ಚ ತೀರ್ಥಾನಿ ಪರ್ವತಾಂಶ್ಚ ನದೀಂಸ್ತಥಾ ।**
**ದೇವಾಂಶ್ಚೈವತು ಯೋ ವನ್ದ್ಯಾನ್ನ ಪ್ರೇತೋ ಜಾಯತೇ ನರಃ ॥**

ಗೋ-ದ್ವಿಜರು, ತೀರ್ಥಗಳು, ಪರ್ವತಗಳು, ನದಿಗಳು, ದೇವತೆಗಳು ಇವರನ್ನು ಸ್ಮರಿಸುವವನು ನಮಸ್ಕರಿಸುವವನು ಪ್ರೇತವಾಗುವದಿಲ್ಲ.

॥ಪ್ರೇತಾ ಊವಾಚಃ॥

**ಶ್ರುತಾಶ್ಚ ವಿವಿಧಾ ಧರ್ಮಾಃ ಪೃಚ್ಛಾಮೋ ದುಃಖಿತಾ ಮುನೇ ।**
**ಯೇನ ವೈ ಜಾಯತೇ ಪ್ರೇತಸ್ತನ್ಮೇ ವದ ಮಹಾ ಮುನೇ ॥**

**ಪ್ರೇತಗಳು :-** ಎಲೆ ಋಷಿಯೇ, ನಾನಾ ವಿಧವಾದ ಧರ್ಮಗಳನ್ನು ಹೇಳಿದ್ದೀಯೆ, ಕೇಳಿದೆವು. ಪ್ರೇತವಾಗುವದಕ್ಕೆ ಕಾರಣವೇನು? ಅದನ್ನು ಹೇಳು.

॥ ಬ್ರಾಹ್ಮಣ ಉವಾಚಃ॥

**ಪಾಪಾನ್ನೇನ ತು ಭುಕ್ತೇನ ಬ್ರಾಹ್ಮಣಸ್ತು ವಿಶೇಷತಃ ॥**
**ಮ್ರಿಯತೇ ಹ್ಮುದರಸ್ಥೇನ ಸ ವೈ ಪ್ರೇತೋ ಭವೇನ್ನರಃ ॥**

**ದ್ವಿಜ :-** ಪಾಪಾನ್ನವನ್ನು ತಿಂದು ಅದರಲ್ಲಿಯೂ ದ್ವಿಜನಾಗಿ ಅತಿಶಯವಾಗಿ ಆ ಅನ್ನವು ಹೊಟ್ಟೆಯಲ್ಲಿರುವಾಗ ಸತ್ತರೆ ಅವನು ಪ್ರೇತನಾಗುವನು.

**ಅಯಾಜ್ಯಯಾಜನಾಚ್ಚೈವ ಯಾಜ್ಯಾನಾಂ ಚ ವಿಸರ್ಜನಾತ್ ।**
**ರತೋ ವೈ ಪಾಪಿಸೇವಾಸು ಪ ಪ್ರೇತೋ ಜಾಯತೇ ನರಃ ॥**

ಭಕ್ತಿಯಿಲ್ಲದವರಿಂದ ಯಾಗ ಮಾಡಿಸುವದು, ತಾನು ಯಾಗ ಮಾಡಿಸುತ್ತಿದ್ದವರನ್ನು ಬಿಡಿಸುವದು, ಪಾಪಿಗಳ ಸೇವೆಯಲ್ಲಿ ಆಸಕ್ತನಾಗಿರುವದು, ಇವುಗಳಿಂದ ಪ್ರೇತತ್ವವು ಬರುತ್ತದೆ.

**ಧರ್ಮಾನಾಶ್ರಮಿಣಾಂ ತ್ಯಕ್ತ್ವಾ ಮಧ್ಯಪಸ್ತ್ರೀನಿಷೇವಣಂ ।**
**ವೃಥಾ ಮಾಂಸರತೋ ನಿತ್ಯಂ ಸ ವೈ ಪ್ರೇತೋ ಭವೇನ್ನರಃ ॥**

ತಮ್ಮ ತಮ್ಮ ಆಶ್ರಮದ ಧರ್ಮವನ್ನು ಬಿಟ್ಟು ಮದ್ಯ ಕುಡಿಯುತ್ತಾ ಸ್ತ್ರೀಲೋಲ ನಾಗಿದ್ದರೂ ಮತ್ತೊಂದು ಪ್ರಯೋಜನಕ್ಕಲ್ಲದೆ ತನಗೋಸ್ಕರ ಮಾಂಸವನ್ನು ತಿನ್ನುವದರಿಂದ ಪ್ರೇತತ್ವ ಬರುತ್ತದೆ.

**ನ್ಯಾಸಾಪಹರ್ತಾ ಮಿತ್ರಸ್ಯ ಪಾಪಿಪಾಕರತಸ್ಸದಾ ।**
**ವಿಸ್ರಂಭಘಾತೀ ಕೂಟಸ್ಥಃ ಸ ವೈ ಪ್ರೇತೋ ಭವೇನ್ನರಃ ॥**

ಮಿತ್ರನು ಕಾಪಾಡಲು ಇಟ್ಟದ್ದನ್ನು ಕದಿಯುವವನು, ಶೂದ್ರನ ಅನ್ನವನ್ನು ಯಾವಗಲೂ ತಿನ್ನುವವನು ನಂಬಿದವರಿಗೆ ದ್ರೋಹಮಾಡುವವನು, ಸುಳ್ಳು ಸಾಕ್ಷಿಹೇಳುವವನು ಪ್ರೇತಗಳಾಗುತ್ತಾರೆ.

**ಬ್ರಹ್ಮಹಾ ಗೋಘ್ನಕಸ್ತೇನಃ ಸುರಾಪೋ ಗುರುತಲ್ಪಗಃ ।**
**ಭೂಮಿಕನ್ಯಾಪಹಾರೀ ಚ ಸ ವೈ ಪ್ರೇತೋ ಭವೇನ್ನರಃ ॥**

ದ್ವಿಜನನ್ನು ಕೊಂದವನು ಗೋವನ್ನು ಕೊಂದವನು, ಕಳ್ಳ, ಹೆಂಡಗುಡುಕ ಗುರುವಿನ ಹೆಂಡತಿಯನ್ನು ರಮಿಸುವವನು, ಭೂಮಿಯನ್ನು ಅಪಹರಿಸುವವನು, ಕನ್ಯೆಯನ್ನು ಅಪಹರಿಸುವವನು ಇಂತಹವರು ಪ್ರೇತರಾಗುತ್ತಾರೆ.

**ಸಾಮಾನ್ಯಾನಾಂ ದಕ್ಷಿಣಾಂ ಲಬ್ಧ್ವಾ ಗೃಹ್ಣೀತೇ ಏಕ ಏವತು ।**
**ನಾಸ್ತಿಕ್ಯಭಾವೇ ನಿರತಃ ಸ ವೈ ಪ್ರೇತೋಭಿಜಾಯತೇ ॥**

ಅನೇಕ ಜನರಿಗೆ ಸೇರಬೇಕಾದ ದಕ್ಷಿಣೆಯನ್ನು ಒಬ್ಬನೇ ತೆಗೆದುಕೊಂಡವನು, ನಾಸ್ತಿಕ ನಾಗಿರುವವನು ಪ್ರೇತರಾಗುತ್ತಾರೆ.''

ಆ ದ್ವಿಜನು ಹೀಗೆ ನುಡಿಯುತ್ತಿರುವಾಗಲೆ. ಆಕಾಶದಿಂದ ನೆಲದಮೇಲೆ ಪುಷ್ಪವೃಷ್ಟಿ ಆಯಿತು. ಸ್ವರ್ಗವಾಸಿ ದೇವತೆಗಳು ಸಹಸ್ರಾರು ಜನರು, ಆ ದ್ವಿಜನ ಮೇಲೆ ಹೂವುಗಳನ್ನು ಎರಚಿದರು. ದೇವದುಂಧುಭಿಗಳು ಮೊಳಗಿದವು. ದೇವ ವಿಮಾನಗಳು ಸುರರನ್ನು ಹೊತ್ತು ಆ ಕಾಡಿನ ಮೇಲೆ ಹಾರಾಡಿದವು. ಬ್ರಹ್ಮಜ್ಞಾನಿಯಾದ ಆ ದ್ವಿಜನ ಜೊತೆಗೆ ಮಾತನಾಡಿದ್ದರಿಂದ ಮತ್ತು ಅವನ ಮುಖದಿಂದ ತತ್ವಾರ್ಥ ಶ್ರವಣಮಾಡಿದ್ದರಿಂದ ಆ ಪ್ರೇತಗಳನ್ನು ಕರೆಯಲು ದೇವಲೋಕದಿಂದ ವಿಮಾನಗಳು ಬಂದವು ಅವೆಲ್ಲ ಪ್ರೇತಜನ್ಮದಿಂದ ಮುಕ್ತವಾಗಿ, ದೇವದೂತರು ತಂದ ವಿಮಾನ ಆರೋಹಣಮಾಡಿ ಸ್ವರ್ಗಲೋಕಕ್ಕೆ ಪ್ರಯಾಣ ಬೆಳಸಿದರು.

ಆದುದರಿಂದ ಏನಾದರೂ ಪ್ರಯತ್ನಮಾಡಿ, ದೊಡ್ಡವರ ಜೊತೆಗೆ ಸಂಭಾಷಣ ಮಾಡಬೇಕು. ಶ್ರೇಯಸ್ಸನ್ನು ಬಯಸುವವರು, ಜ್ಞಾನಿ ಪುರುಷರೊಡನೆ ಮಾತನಾಡಲು ಬೇಸರಿಯಬಾರದು. ಈ ಪಂಚಪ್ರೇತಗಳ ಕಥೆಯು ಅತ್ಯಂತ ಪುಣ್ಯಕರ, ಇದನ್ನು ಪಠಿಸಿದವನ ಕುಲದಲ್ಲಿ ಯಾರೂ ಪ್ರೇತರಾಗುವದಿಲ್ಲ. ಇದನ್ನು ಮೇಲೆ ಮೇಲೆ ಶ್ರದ್ಧೆಯಿಂದ ಕೇಳಿದವನು ಇದರ ವಿಷಯದಲ್ಲಿ ಶ್ರದ್ಧೆ ಇರಿಸದವನು ಪ್ರೇತನಾಗುವದಿಲ್ಲ

**ಭೀಷ್ಮ:-** ದ್ವಿಜೋತ್ತಮರೆ, ಅಂತರಿಕ್ಷದಲ್ಲಿ ಪುಷ್ಕರವು ಬರಲು ಕಾರಣವೇನು? ಧರ್ಮಶೀಲರಾದವರು ಅದನ್ನು ಹೊಂದುವದು ಹೇಗೆ? ಅದು ಯಾವುದರಿಂದ ದೊರಕುವದು. ಅದು ದೊರೆತಬಳಿಕ ಆದರಿಂದ ಉಂಟಾಗುವ ಫಲವೇನು? ಇದೆಲ್ಲವನ್ನು ಕೇಳಲು ನನಗೆ ಕುತೂಹಲ. ಅದನ್ನು ದಯಮಾಡಿ ತಿಳಿಸಿರಿ.

**ಪುಲಸ್ತ್ಯ :-** ಹಿಂದೆ ದಕ್ಷಿಣಾಪಥದಲ್ಲಿರುವ ಋಷಿಗಳ ಒಂದು ಗುಂಪು ಪುಷ್ಕರತೀರ್ಥದಲ್ಲಿ ಸ್ನಾನಕ್ಕಾಗಿ ಬಂದಿತು. ಆಗ ಪುಷ್ಕರವು ಅಂತರಿಕ್ಷಕ್ಕೆ ಹೋಯಿತು. ಆಗ ಆ ಮುನಿಗಳೆಲ್ಲರೂ ಅಲ್ಲಿಯೇ ಪ್ರಾಣಾಯಾಮ ನಿಷ್ಠರಾಗಿ ಹನ್ನೆರಡು ವರ್ಷಗಳವರೆಗೆ ಬ್ರಹ್ಮಧ್ಯಾನ ಮಾಡುತ್ತ ಕುಳಿತರು. ಆಗ ಬ್ರಹ್ಮದೇವರು, ಮಹರ್ಷಿಗಳು, ಇಂದ್ರಾದಿ ದೇವತೆಗಳು ಮರೆಯಲ್ಲಿ ನಿಂತುಕೊಂಡು ಕಠೋರವಾದ ನಿಯಮುಗಳನ್ನು ಹೇಳಿದರು. ''ದ್ವಿಜರೆ, ಮಂತ್ರದಿಂದ ಪುಷ್ಕರ ತೀರ್ಥವನ್ನು ನೀವು ಅವಾಹನ ಮಾಡಿರಿ, ಅಪೋಹಿಷ್ಠಾ ಮುಂತಾದ ಮೂರ ಋಕ್ಕಿನ ಮಂತ್ರದಿಂದ ಅದು ಸನ್ನಿಹಿತವಾಗುತ್ತದೆ. ಅಘಮರ್ಷಣ ಮಂತ್ರ ಜಪಿಸುವದರಿಂದ ಫಲವು ಬರುವದು. ಅದನ್ನು ಕೇಳಿ ಆ ದ್ವಿಜರು ಅದರಂತೆಯೇ ಮಾಡಿದರು. ದಕ್ಷಿಣದೇಶದಿಂದ ಬಂದ ಆ ದ್ವಿಜರ ಗುಂಪಿನಲ್ಲಿ ಕೆಲವರು ನಿಜವಾಗಿಯೂ ಮಹಾತಪಸ್ವಿಗಳಾಗಿದ್ದರು. ಅವರ ಆವಾಹನೆ ಮಾಡಿದ್ದರಿಂದ ಪುಷ್ಕರ ತೀರ್ಥವು ಮತ್ತೆ ಆ ಪುಷ್ಕರ ಕ್ಷೇತ್ರದಲ್ಲಿ ಸನ್ನಿಹಿತವಾಯಿತು. ಅವರ ತಪೋಬಲದಿಂದ ಅಲ್ಲಿ ಪೂರ್ಣ ಸಾನ್ನಿಧ್ಯಪ್ರಾಪ್ತವಾಗಿ ಅವರೆಲ್ಲರೂ ಪುನೀತರಾದರು ಸ್ನಾನ ಪಾನಾದಿಗಳಿಂದ.

ದಕ್ಷಿಣಾಪಥದಿಂದ ಪುಷ್ಕರ ಸ್ನಾನಕ್ಕಾಗಿ ಬಂದ ದ್ವಿಜರಲ್ಲಿ ಕೆಲವು ಕಾಡು ಜನಾಂಗದವರೂ ಇದ್ದರು. ಅವರು ಶ್ರಾದ್ಧಾದಿ ಕಾರ್ಯಗಳಿಗಾಗಲಿ, ದೇವತಾ ಕಾರ್ಯಗಳಿಗಾಗಲಿ ಅರ್ಹರಾಗಿರಲಿಲ್ಲ. ಅಂಥವರು ದ್ವಿಜವೃಂದದಲ್ಲಿ ಸೇರಿಕೊಂಡು ಸ್ನಾನ, ಶ್ರಾದ್ಧಕಾರ್ಯ ಮಾಡಲು ಬಂದದ್ದು ನೋಡಿ ಪುಷ್ಕರ ತೀರ್ಥವು ಒಮ್ಮೆಲೆ ಅಂತರಿಕ್ಷಗಾಮಿ ಆಯಿತು. ಸತ್ವಶಾಲಿಗಳಾದ ದ್ವಿಜರು ವೇದ ಮಂತ್ರಗಳಿಂದ ಆವಾಹನ ಮಾಡಿದ ಕೂಡಲೇ ಅದು ಬ್ರಹ್ಮಾದಿ ದೇವತೆಗಳ ವಚನದಂತೆ ಮತ್ತೆ ಮೊದಲಿನಂತೆ

ಸನ್ನಿಹಿತವಾಗುತ್ತದೆ. ದುಷ್ಟರು, ಪಾಪಿಗಳು, ಭ್ರಷ್ಟರು ಸ್ನಾನ, ಶ್ರಾದ್ಧಾದಿ ಕಾರ್ಯಗಳಿಗಾಗಿ ಬಂದರೆ ಅಲ್ಲಿಯ ತೀರ್ಥಾಭಿಮಾನಿ ದೇವತೆಗಳೆಲ್ಲರೂ ಊರ್ಧ್ವಗಾಮಿಗಳಾಗುವರು. ಯೋಗ್ಯರು ಆವಾಹನೆ ಮಾಡಿದಾಗ ಸನ್ನಿಹಿತರಾಗುವರು.

ಕಾರ್ತೀಕ ಮಾಸದಲ್ಲಿ ಪುಷ್ಕರದಲ್ಲಿ ಸ್ನಾನ ಮಾಡುವದರಿಂದ ಎಲ್ಲ ಜಾತಿಯವರು ಪುಣ್ಯ ಪಡೆಯುವರು ಕಾರ್ತೀಕ ಮಾಸದಲ್ಲಿ ಕೃತ್ತಿಕಾ, ಭರಣಿ ರೋಹಿಣಿ ನಕ್ಷತ್ರದಲ್ಲಿ ಚರ್ತುರ್ಥೀ ತಿಥಿಯು ಪುಷ್ಕರ ಸ್ನಾನಕ್ಕೆ ಯೋಗ್ಯವಾಗಿದೆ. ಕಾರ್ತೀಕ ಮಾಸದ ಶನಿವಾರ ಕೃತಿಕಾ ನಕ್ಷತ್ರ, ಭಾನುವಾರ ಭರಣಿ ನಕ್ಷತ್ರ, ಗುರುವಾರ ರೋಹಿಣಿ ನಕ್ಷತ್ರ ಬಂದಾಗ ಸ್ನಾನ, ಪಿತೃತರ್ಪಣದಿಂದ ಅಶ್ವಮೇಧ ಪುಣ್ಯವಿದೆ. ಭಾನುವಾರ ವಿಶಾಖಾ ನಕ್ಷತ್ರ ಸೋಮವಾರ ಕೃತ್ತಿಕಾ ನಕ್ಷತ್ರ ಬಂದರೆ 'ಪದ್ಮಕ ರೋದಯ' ಎನ್ನುವರು. ಅಂದು ಪುಷ್ಕರ ಸ್ನಾನದಿಂದ ಪುಷ್ಕಳ ಪುಣ್ಯ ಪ್ರಾಪ್ತವಾಗುವದು. ಆಕಾಶದಿಂದ ಇಳಿದು ಹರಿದು ಬಂದ ಪುಷ್ಕರ ಕ್ಷೇತ್ರದ ಪಿತಾಮಹತೀರ್ಥದಲ್ಲಿ ಸ್ನಾನ ಮಾಡಿದವರು ಪಾಪಿಗಳೇ ಇರಲಿ, ಪುಣ್ಯವಂತರೇ ಇರಲಿ ಅವರೆಲ್ಲರೂ ದಿವ್ಯ ಲೋಕಗಳನ್ನು ಹೊಂದುತ್ತಾರೆ. ಔದುಂಬರ ವನದಿಂದ ಹರಿದು ಬಂದು ಸರಸ್ವತೀ ನದಿಯು ಈ ಪುಷ್ಕರ ತೀರ್ಥಕ್ಕೆ ರಸಪೂರಣವನ್ನು ಮಾಡುತ್ತಲಿದೆ. ಬ್ರಹ್ಮಕುಮಾರಿಯಾದ ಈ ಸರಸ್ವತಿಯ ಉತ್ತರಾಭಿಮುಖವಾಗಿ ಸ್ವಲ್ಪ ದೂರ ಹೋಗಿ ಮತ್ತೆ ಹಿಂದಿರುಗಿ ಬಂದು, ಎಲ್ಲರಿಗೂ ಗೋಚರಿಸುತ್ತದೆ. ಕನಕಾ ಸುಪ್ರಭಾ, ನಂದಾ, ಪ್ರಾಚೀ, ಸರಸ್ವತಿ ಎಂದು ಐದು ಉಪನದಿಯಾಗಿ ಹರಿದು ಪುಷ್ಕರದಲ್ಲಿ ಅವೆಲ್ಲವೂ ಮೇಳವಿಸುತ್ತವೆ. ಈ ನದಿಗಳ ತೀರಗಳಲ್ಲಿ ಮುನಿ ಮಹರ್ಷಿಗಳು ತಪಂಗೈಯುತ್ತಿರುವರು. ಹೀಗೆ ಪಂಚ ಪುಣ್ಯ ನದಿ ಸಂಗಮದ ರಂಗಸ್ಥಳವಾದ ಈ ಪುಷ್ಕರ ತೀರ್ಥದಲ್ಲಿ ಸ್ನಾನಮಾಡುವದು, ಧ್ಯಾನ, ವಸ್ತ್ರ, ಸುವರ್ಣ, ಭೂಮಿ, ಧೇನು, ಮುಂತಾದವುಗಳನ್ನು ದಾನ ಮಾಡುವದು ಮತ್ತು ಶ್ರಾದ್ಧಾದಿಕರ್ಮ ಮಾಡುವದು ಅಕ್ಷಯ ಫಲಪ್ರದವಾಗಿರುತ್ತದೆ. ಉಪವಾಸ ಮಾಡುವದರಿಂದ ಪುಂಡರೀಕ ಯಜ್ಞ ಮಾಡಿದ ಫಲ.

ಅಲ್ಲಿ ಗಂಗೋದ್ಭೇದ ಎಂಬ ಸ್ಥಾನವಿದೆ. ಅಲ್ಲಿ ಗಂಗಾದೇವಿ ಸರಸ್ವತಿಯ ದರ್ಶನಕ್ಕಾಗಿ ಬಂದಿರುತ್ತಾಳೆ. ಗಂಗಾ-ಸರಸ್ವತಿಯರ ಸಂಗಮದ ಹಿನ್ನೆಲೆಯಲ್ಲಿ ಒಂದು ಇತಿಹಾಸ ಉಂಟು. ಸರಸ್ವತಿಯು ಪೂರ್ವಕ್ಕೆ ತಿರುಗಿ ನೋಡಿ, ಹಾ! ಗಂಗೆಯೇ, ಗೆಳತಿ, ನೀನು ನನ್ನೊಬ್ಬಳನ್ನೇ ಬಿಟ್ಟು ಹೊರಟಿರುವೆ. ಒಂಟಿಯಾಗಿ ನಾನು ಎಲ್ಲಿಗೆ ಹೋಗಲಿ. ನಿನ್ನ ಹೊರತು ನನಗಾರು ಬಾಂಧವರು?' ಎಂದು ರೋದಿಸಿದಳು. ಅದನ್ನು ತಿಳಿದು ಗಂಗಾದೇವಿಗೆ ಬಹಳ ದುಃಖವಾಯಿತು. ಸೋದರಿ ಸ್ನೇಹದಿಂದ ಅವಳು ಪೂರ್ವದೇಶದಿಂದ ದೀನ ದುಃಖಿತಳಾದ ಸರಸ್ವತಿ ನದಿಯನ್ನು ನೋಡಲು ಧಾವಿಸಿ ಬಂದಳು. ಅಪ್ಪಿಕೊಂಡಳು ಅವಳ ಕಣ್ಣೀರು ಬರೆಸಿದಳು.

**ಗಂಗಾ:-** ಮಹಾನುಭಾವಳಾದ ಸರಸ್ವತೀಯೇ ನೀನು ಅಳಬೇಡ, ಗೆಳತಿ, ನೀನು ಮಾಡಿದ ಕಾರ್ಯವು ಅತ್ಯಂತ ಕಠಿಣವು. ಇದೊಂದು ದೊಡ್ಡ ದೇವಕಾರ್ಯ, ನಿನ್ನ ಹೊರತು ಬೇರೆ ಯಾರು ಮಾಡಲಾರರು. ಅದಕ್ಕಾಗಿ ನಿನ್ನನ್ನು ನೋಡಲು ದೇವತೆಗಳೆಲ್ಲರೂ ಬಂದಿರುವರು. ತ್ರಿಕರಣ ಶುದ್ಧಿಪೂರ್ವಕವಾಗಿ ನೀನು ಅವರನ್ನು ಪೂಜೆ ಮಾಡು.

**ಪುಲಸ್ತ್ಯ:-** ಗಂಗೆಯ ಮಾತಿನಿಂದ ಸರಸ್ವತಿಗೆ ಸಮಾಧಾನವಾಯಿತು. ಅವಳು ಭಕ್ತಿಯಿಂದ ತನ್ನನ್ನು ಕಾಣಬಂದ ದೇವತೆಗಳನ್ನು ಸರಿಯಾಗಿ ಪೂಜೆ ಮಾಡಿದಳು.

ಅನಂತರ ತನ್ನ ಸಖಿಯರನ್ನು ಕೂಡಿಕೊಂಡಳು. ತನ್ನನ್ನು ಕಾಣಲು ಬಂದ ಗಂಗಾದೇವಿಯೊಂದಿಗೆ ಹೊಂದಿಕೊಂಡು, ಕೆಲವು ಮಾರ್ಗವನ್ನು ಕ್ರಮಿಸಿದಳು. ಜ್ಯೇಷ್ಠ ಪುಷ್ಕರಿಣಿ, ಮಾಧ್ಯಮ ಪುಷ್ಕರಿಣಿ ತೀರ್ಥಗಳ ಮಧ್ಯದಲ್ಲಿ ಈ ಗಂಗಾ ಸರಸ್ವತಿಯರ ಸಂಗಮ ಆದದ್ದು ಪ್ರಸಿದ್ಧವಾಗಿದೆ. ಅನಂತರ ಸರಸ್ವತಿಯು ಪಶ್ಚಿಮಕ್ಕೂ ಗಂಗೆಯು ಉತ್ತರಕ್ಕೂ ಬೇರೆ ಬೇರೆ ದಾರಿಹಿಡಿದು ನಡೆದರು. ನೀರಿನ ಪಥದಲ್ಲಿ ಹರಿದರು. ಅನಂತರ ಪುಷ್ಕರ ತೀರ್ಥಕ್ಕೆ ಸರಸ್ವತಿಯನ್ನು ಕಾಣಬಂದ ದೇವತೆಗಳೆಲ್ಲರೂ ಅವಳು ಮಾಡಿದ ಪೂಜೆ ಸತ್ಕಾರಗಳಿಂದ ಸಂತುಷ್ಟವಾಗಿ ಆ ಸರಸ್ವತಿ ನದಿಯನ್ನು ಸ್ತೋತ್ರಮಾಡಿದನು.

**ದೇವತೆಗಳು: 'ನಮೋಸ್ತುತೇ ಪುಣ್ಯಜಲೇ ನಮಸ್ಸಾಗರಗಾಮಿನಿ ।**
**ನಮಸ್ತೇ ಪಾಪನಿರ್ಮೋಕೇ ನಮೋ ದೇವಿ ವರಾಂಗನೇ ॥**

ಈ ರೀತಿಯಾಗಿ ದೇವತೆಗಳು ಪೂರ್ವವಾಹಿನಿಯಾದ ಸರಸ್ವತಿಯನ್ನು ಸ್ತೋತ್ರ ಮಾಡಿದರು. ಅನಂತರ ಬ್ರಹ್ಮದೇವರ ವಚನದಂತೆ ಈ ಸರಸ್ವತಿ ನದಿಯು ಪಶ್ಚಿಮಕ್ಕೆ ತಿರುಗಿದ್ದಾಳೆ. ಸರಸ್ವತಿಯು ಪಶ್ಚಿಮಾಭಿಮುಖವಾಗಿ ಹರಿದಾಗ ಅನೇಕ ತೀರ್ಥಗಳು ಅವಳಲ್ಲಿ ಸಮಾವೇಶಗೊಂಡಿವೆ. ಶುದ್ಧಾವಟವೆಂಬ ಒಂದು ಪಿತಾಮಹ ತೀರ್ಥವಿದೆ. ಆ ಪಶ್ಚಿಮವಾಹಿನಿ ಸರಸ್ವತಿಯಲ್ಲಿ ಅಲ್ಲಿ ಮಾಡಿದ ಅಲ್ಪ ದಾನದಿಂದ ಮೂರು ಜನ್ಮ ಫಲವು ದೊರಕುವದು, ರಾಮನು ಹಿಂದೆ ಅಲ್ಲಿಗೆ ಬಂದಾಗ, ಮಾರ್ಕಂಡೇಯ ಮುನಿಗಳ ಮಾತಿನಂತೆ ಶ್ರಾದ್ಧ ಮಾಡಿ, ತಂದೆ ದಶರಥನಿಗಾಗಿ ಪಿಂಡಪ್ರದಾನ ಮಾಡಿದನು. ಅದರ ಬಳಿಯಲ್ಲಿ ನಾಲ್ಕು ಮೂಲೆಯ ಒಂದು ಬಾವಿ ಇದೆ. ಅಲ್ಲಿ ಪಿಂಡಪ್ರದಾನ ಮಾಡಿದವರು ಹಂಸಯಾನದಿಂದ ಸ್ವರ್ಗಕ್ಕೇರುತ್ತಾರೆ. ಆ ಬಾವಿಯ ಮೇಲ್ಗಡೆ ಬ್ರಹ್ಮದೇವರು ಪಿತೃಮೇಧ ಎಂಬ ಯಜ್ಞ ಮಾಡಿದನು. ವಸುಗಳೇ ಪಿತೃಗಳು, ರುದ್ರರೇ ಪಿತಾಮಹರು ಆದಿತ್ಯರೇ ಪ್ರಪಿತಾಮಹರು ಹೀಗೆ ಕಲ್ಪನೆ. ಆ ಮೂವರನ್ನು ಆಹ್ವಾನ ಮಾಡಿ 'ನೀವಿಲ್ಲಿದ್ದುಕೊಂಡು, ಜನರು ಕೊಟ್ಟ ಪಿಂಡವನ್ನು ಸ್ವೀಕರಿಸಬೇಕು' ಎಂದು ಅಪ್ಪಣೆ ಮಾಡಿದರು. ಇಲ್ಲಿ ಮಾಡಿದ ಪಿತೃಕಾರ್ಯಗಳು, ತರ್ಪಣ, ಪಿಂಡಪ್ರದಾನ, ಮುಂತಾದವುಗಳಿಂದ ಮಾಡಿದವರು ಸ್ವರ್ಗವನ್ನು ಹೊಂದುತ್ತಾರೆ. ಅದರ ಮುಂದೆ ಪ್ರಾಚೀನೇಶ್ವರ ದೇವಸ್ಥಾನವಿದೆ. ಆ ದೇವಸ್ಥಾನದ ಮುಂಭಾಗದಲ್ಲಿರುವ ಆದಿತೀರ್ಥದಲ್ಲಿ ಸ್ನಾನ ಮಾಡಿದರೆ, ಬ್ರಹ್ಮದೇವರ ಸೇವಕನಾಗುವ ಭಾಗ್ಯವು ದೊರೆಯುವದು. ಇದೇ ರೀತಿಯಾಗಿ ಸರಸ್ವತಿಯಲ್ಲಿ ಸ್ನಾನಮಾಡಿದರೂ ಪುಣ್ಯಫಲ ಉಂಟು. ಮೂಡಣ ನಿಟ್ಟಿನಲ್ಲಿ ಹರಿಯುವ ಈ ಪುಣ್ಯ ಪಯಸ್ವಿನಿಯ ಪಯಃಪಾನ ಮಾಡಿದ ಮಾನವರೆಲ್ಲರೂ ದೇವತೆಗಳಾಗುವರೆಂದು ಮಾರ್ಕಂಡೇಯ ಮುನಿ ಹೇಳಿದ್ದಾನೆ. ಇಲ್ಲಿಗೆ ಬಂದವರು ಹಗಲಾಗಲಿ, ರಾತ್ರಿಯಾಗಲಿ, ಊಟಮಾಡಿರಲಿ, ಉಪವಾಸವಿರಲಿ ಸ್ನಾನ ಮಾಡಬಹುದು. ಬೇರೆ ಕಡೆ ಸ್ನಾನ ವಿಧಿಗಳಿಗಿದ್ದ ನಿಯಮ ನಿಷೇಧಗಳು ಪೂರ್ವವಾಹಿನಿ ಸರಸ್ವತಿ ನದಿಗೆ ಇಲ್ಲ. ಸರಸ್ವತಿಯು ಪೂರ್ವವಾಹಿನಿ ಇದ್ದಾಗಲೇ, ಗಂಗೆಯೊಡನೆ ಸಂಗಮ ಹೊಂದುವದರಿಂದ ಇದು ಪರ್ವತತೀರ್ಥಗಳಲ್ಲಿ ಅತ್ಯುತ್ತಮ ಎಂದು ಸ್ವಾಯಂಭವಮನು ಹೇಳಿದ್ದಾನೆ. ಈ ಮಹಾನದಿಗಳೆರಡರ ಸ್ನೇಹದ ಅಪ್ಪುಗೆಯನ್ನು ಕಂಡೇ ಹರಿಯು ರೋಹಿಣೆ ಎಂಬ ನದಿಯನ್ನು ಇಂದ್ರನು ವಜ್ರಣೀ ತರಂಗಿಣಿಯನ್ನು ಈಶ್ವರನು ವ್ಯಂಕು ನದಿಯನ್ನು ಅಲ್ಲಿಗೆ

ಬರಮಾಡಿಕೊಂಡು ಸರಸ್ವತಿಗೆ ಗೆಳತಿಯರನ್ನಾಗಿ ಮಾಡಿದರು. ಅದನ್ನು ಕಂಡು ಸರಸ್ವತಿಗೆ ಅನೇಕ ಸಖಿಯರ ಲಾಭದಿಂದ ಪರಮಾನಂದವಾಗಿ ಅವರನ್ನೆಲ್ಲ ಕೂಡಿಕೊಂಡು ಮುಂದೆ ಹೊರಟಳು, ಅನೇಕ ನದೀ ಸಂಗಮದಿಂದ ಪಾವನವಾದ ಪೂರ್ವವಾಹಿನಿಯಾದ ಸರಸ್ವತಿ ನದಿ ನೀರನ್ನು ಕುಡಿದ ಮೃಗಗಳೂ ಕೂಡ ಯಜ್ಞ ಮಾಡಿದ ದ್ವಿಜರಂತೆ ಸ್ವರ್ಗವನ್ನು ಹೊಂದುವವು. ಪೂರ್ವಾಭಿಮುಖ ಸರಸ್ವತಿ ಎಂದರೆ ಒಂದು ಚಿಂತಾಮಣಿ. ಕೇಳಿದ ಕಾಮಿತಾರ್ಥಗಳನ್ನು ಕೊಡಲು ಸಮರ್ಥವಾಗಿದೆ ಈ ಪುಣ್ಯವಾಹಿನಿ. ಇಲ್ಲಿಂದ ಆ ಸರಸ್ವತಿ ನದಿಯು ದಕ್ಷಿಣಕ್ಕೆ ಅನಂತರ ಪಶ್ಚಿಮಕ್ಕೆ ಹರಿದಿದ್ದಾಳೆ. ಗಂಗಾನದಿಗೂ ಕೂಡ 'ನೀನು ಬಂದ ಮಾರ್ಗದಂದಲೇ ಮತ್ತೆ ಪೂರ್ವಕ್ಕೆ ತಿರುಗಿ ಹೋಗು, ನನ್ನನ್ನು ಎಂದು ಮರೆಯಬೇಡ' ಎಂದು ಹೇಳಿ ಬೀಳ್ಕೊಟ್ಟಳು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಇಪ್ಪತ್ತೇಳನೇಯ ಪ್ರೇತನಾಗಲು ನಿಮಿತ್ತವೇನು ? ಅಧ್ಯಾಯ ಮುಗಿದುದು*



## ಚಿರಂಜೀವಿಯಾದ ಮಾರ್ಕಂಡೇಯ | ಅಧ್ಯಾಯ - ೨೮

**॥ಭೀಷ್ಮ ಉವಾಚ॥**

**ಮಾರ್ಕಂಡೇಯೇನ ವೈ ರಾಮಃ ಕಥಮತ್ರ ಪ್ರಬೋಧಿತಃ ।**
**ಕಥಂ ಸಮಾಗಮೋ ಭೂತಃ ಕಸ್ಮಿನ್ಕಾಲೇ ಕದಾ ಮುನೇ ॥**

**ಭೀಷ್ಮ:-** ಮಾರ್ಕಂಡೇಯರು ಶ್ರೀ ರಾಮಚಂದ್ರನಿಗೆ ಉಪದೇಶ ಮಾಡಿದರಂತೆ ಅದು ಹೇಗೆ? ಯಾವಕಾಲದಲ್ಲಿ ಅವರಿಬ್ಬರ ಸಮಾಗಮವು ಆಯಿತು? ಹೇಗೆ ಆಯಿತು? ಇದನ್ನೆಲ್ಲ ಮುನಿಗಳಾದ ತಾವು ನನಗೆ ಹೇಳಿರಿ? ಮತ್ತು ಮಹಾತಪಸ್ವಿಯಾದ ಮಾರ್ಕಂಡೇಯನು ಯಾರ ಮಗ? ಮತ್ತು ಮಾರ್ಕಂಡೇಯನೆಂಬ ಹೆಸರು ಹೇಗೆ ಬಂದಿತು! ಇದೆಲ್ಲವನ್ನೂ ನನಗೆ ತಿಳಿಯಬೇಕು?

**ಪುಲಸ್ತ್ಯ :-** ಪೂರ್ವಕಲ್ಪದಲ್ಲಿ ಮೃಕಂಡು ಎಂಬ ಒಬ್ಬ ಮುನಿಯು ಇದ್ದನು ಅವನು ಭೃಗುಋಷಿಯ ಚಿರಂಜೀವ. ಆ ಮೃಕಂಡುವಿನ ಮಡದಿಯೂ ಮಹಾ ತಪಸ್ವಿನಿ, ಇಬ್ಬರೂ ಕೂಡಿಯೇ ಉಗ್ರ ತಪೋನುಷ್ಠಾನ ಕೈಕೊಂಡರು. ಆಶ್ರಮದಲ್ಲಿದ್ದಾಗಲೆ. ಪುತ್ರೋತ್ಪತ್ತಿ ಆಯಿತು ಆ ದಂಪತಿಗಳಿಗೆ, ಅವರ ಪುತ್ರನಿಗೆ ಐದು ವರ್ಷ ತುಂಬಿದಾಗ ಅವರ ಮನೆಗೆ ಓರ್ವ ಜ್ಞಾನಿ ಪುರುಷರ ಶುಭಾಗಮನವಾಯಿತು. ಅಲ್ಲಿಯೇ ಅಂಗಳದಲ್ಲಿ ಆಡುತ್ತಿದ್ದ ಮೃಕಂಡುಕುಮಾರನು ಆ ಯೋಗಿಯ ಕಣ್ಣಿಗೆ ಬಿದ್ದ. ಅವನನ್ನು ನೋಡಿದಕೂಡಲೇ ಆ ಜ್ಞಾನಿಯು ಅಂತರ್ಮುಖಿಯಾಗಿ ಏನೋ ವಿಚಾರಿಸಿದ. ಆ ಮಗುವಿನ ಭವಿಷ್ಯ ಜೀವನವನ್ನೆಲ್ಲ ದಿವ್ಯ ದೃಷ್ಟಿಯಿಂದ ಪರಕಿ ನೋಡಿದ ಅಲ್ಲಿಯೇ ನಿಂತ ಮೃಕಂಡು ಋಷಿಯು 'ಈ ನನ್ನ ಚಿರಂಜೀವನ ಆಯುಷ್ಯವು ಎಷ್ಟಿದೆ ನನಗೆ ತಿಳಿಸು' ಎಂದು ಕೇಳಿದನು. ಆ ಸಿದ್ಧ ಪುರುಷನು 'ಈ ನಿನ್ನ ಮಗುವಿಗೆ ಇನ್ನು ಆರುತಿಂಗಳು ಮಾತ್ರ ಆಯಸ್ಸು, ಹೇಳಿದಕ್ಕಾಗಿ ದುಃಖ ಪಡಬೇಡ. ಬ್ರಹ್ಮನು ನಿನ್ನ ಮಗುವಿಗೆ ಇಷ್ಟು ಆಯಸ್ಸು ಹಾಕಿದ್ದಾನೆ.

**ಪುಲಸ್ತ್ಯ :-** ಜ್ಞಾನಿಯಾದ ಸಿದ್ಧ ಪುರುಷನ ವಚನವನ್ನು ಕೇಳಿ ಮೃಕಂಡು ಮುನಿಯು ಆ ಮಗುವಿನ ಉಪನಯನವನ್ನು ಮಾಡಿದನು. ಮುಂಜಿ ಆದ ಬಳಿಕ ತಂದೆಯು ಆ ವಟುವಿಗೆ, 'ನೀನು ಋಷಿಗಳಿಗೆಲ್ಲ ನಮಸ್ಕಾರ ಮಾಡು' ಎಂದು ಹೇಳಿದನು. ತಂದೆಯ ಅಪ್ಪಣೆಯಂತೆ ಆ ಋಷಿ ಕುಮಾರನು ಕಂಡ ಕಂಡ ಮುನಿಗಳಿಗೆಲ್ಲ ಕೈ ಮುಗಿಯುತ್ತಿದ್ದ. ತನಗೆ ಕಂಡ ಮಹಾತ್ಮರ ಪಾದ ಹಿಡಿದು ವಂದಿಸುತ್ತಿದ್ದನು. ದೊಡ್ಡವರನ್ನು ಕಂಡ ಕೂಡಲೇ ಅವರ ಮುಂದೆ ಅಡ್ಡ ಬೀಳುವದು ಅವನ ಸ್ವಭಾವವೇ ಆಯಿತು. ಹೀಗೆ ಐದು ತಿಂಗಳ ಇಪ್ಪತ್ತೈದು ದಿನ ಕಳೆದವು. ಇನ್ನು ಐದು ದಿನಗಳು ಮಾತ್ರ ಅವನ ಜೀವಿತದ ಅವಧಿ. ಈ ಪ್ರಸಂಗದಲ್ಲಿ ಪೂತಾತ್ಮರಾದ ಸಪ್ತರ್ಷಿಗಳು ಆ ದಾರಿಯಿಂದ ಬರುವಾಗ ಆ ವಟುವಿನ ಕಣ್ಣಿಗೆ ಕಂಡರು. ಅವರನ್ನು ನೋಡಿದ ಕೂಡಲೇ ಆ ಮೃಕಂಡು ಕುಮಾರನು ಸಪ್ತರ್ಷಿಗಳ ಬಳಿಗೆ ಓಡಿ ಹೋಗಿ, ಚರಣಗಳಿಗೆ ಬಾಗಿ ದೀರ್ಘದಂಡ ನಮಸ್ಕಾರ ಹಾಕಿದನು. ದಂಡ ಕಮಂಡಲು, ಮೌಂಜಿಗಳನ್ನು ಧರಿಸಿದ ಆ ಮುಂಜಿವೆ ಮಣಿ ಮೃಕಂಡು ಕುಮಾರನನ್ನು ಕಂಡು ಹಾಗೂ ಆ ಚಿಕ್ಕ ಮಗುವಿನ ವಿನಯಪೂರ್ವಕ ವಂದನೆ ನೋಡಿ ಆ ಸಪ್ತರ್ಷಿಗಳು 'ಆಯುಷ್ಮಾನ್ ಭವ' ಆಯುಷ್ಯವಂತನಾಗು ಎಂದು ಆಶೀರ್ವಾದ ಮಾಡಿದರು. ಹೀಗೆ ಬಾಯಿತುಂಬ ಹರಸಿ, ನುಡಿದ ಬಳಿಕ ಅವರಿಗೆ ತಿಳಿದು ಬಂದಿತು- ಆ ಕೂಸಿನ ಆಯುಷ್ಯ ಮುಗಿದು ಹೋಗಿದೆ ಎಂದು. ಅವರು ಮತ್ತೆ ಆಯುಷ್ಯವೆಲ್ಲ ಕ್ಷೀಣವಾದ ಆ ಮಗುವನ್ನು ಮತ್ತೊಮ್ಮೆ ನೋಡಿದರು. ಇನ್ನು ಐದು ದಿನ ಮಾತ್ರ ಈ ಭೂಲೋಕದಲ್ಲಿ ಅವನು ಇರಬಲ್ಲ ಎಂಬುದನ್ನು ನಿಶ್ಚಿತವಾಗಿ ಅರಿತರು. ಅದನ್ನು ತಿಳಿದು ಆ ಸಪ್ತರ್ಷಿಗಳಿಗೂ ಭಯವಾಯಿತು. ಆಗ ಆ ಏಳೂ ಋಷಿಗಳೂ ಆ ಮೃಕಂಡು ಪುತ್ರನನ್ನು ಕರೆದುಕೊಂಡೇ ಬ್ರಹ್ಮಲೋಕಕ್ಕೆ ಹೋದರು. ಅಲ್ಲಿ ಬ್ರಹ್ಮದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆ ಹುಡುಗನೂ ಕೂಡ ಸಪ್ತರ್ಷಿಗಳ ಆದೇಶದಂತೆ ಬ್ರಹ್ಮದೇವರಿಗೆ ನಮಸ್ಕರಿಸಿದನು. ಆಗ ಬ್ರಹ್ಮದೇವರು ಆ ಮಗುವಿಗೆ 'ದೀರ್ಘಾಯುಃ ಭವ' ಎಂದು ಆಶೀರ್ವಾದ ಮಾಡಿದರು. ಆ ಬ್ರಹ್ಮವಚನವನ್ನು ಕೇಳಿ ಸಪ್ತರ್ಷಿಗಳಿಗೆಲ್ಲ ಹಿಗ್ಗಾಯಿತು. ಆನಂದದಿಂದ ಅವರ ಮುಖ ಕಮಲಗಳು ಅರಳಿದವು. ಇದನ್ನು ನೋಡಿ ಬ್ರಹ್ಮದೇವರಿಗೆ ಅಚ್ಚರಿ ಎನಿಸಿತು. ಅವರು ಪ್ರಶ್ನೆ ಮಾಡಿದರು.

**ಬ್ರಹ್ಮ :-** ಈ ಬಾಲಕನು ಯಾರು? ಯಾವ ಕೆಲಸಕ್ಕಾಗಿ ಇಲ್ಲಿಗೆ ಬಂದಿದ್ದಾನೆ?

**ಋಷಿಗಳು :-** ಪಿತಾಮಹನೆ, ಇವನು ಮೃಕಂಡು ಋಷಿಯ ಮಗ. ಇವನ ಆಯುಷ್ಯವೆಲ್ಲವೂ ಕ್ಷೀಣವಾಗಿದೆ. ಹೇಗಾದರೂ ಮಾಡಿ ಇವನನ್ನು ಆಯುಷ್ಮಂತ ನನ್ನಾಗಿ ಮಾಡು. ಈ ಪುತ್ರನು ಅಲ್ಪಾಯುಷಿ ಎಂದು ಇವನ ತಂದೆಗೆ ಮೊದಲೇ ತಿಳಿದು ಬಂದಿತು. ಕೂಡಲೇ ಆ ಮುನಿಯು ಇವನಿಗೆ ಮೇಖಲೆಯನ್ನು ಕಟ್ಟಿಬಿಟ್ಟ. ಕೊರಳಲ್ಲಿ ಜನಿವಾರ ಹಾಕಿದ. ಕೈಯಲ್ಲಿ ದಂಡ ಕಮಂಡಲ ಕೊಟ್ಟ. ಮಗನಿಗೆ ಹೇಳಿದ.

'ವತ್ಸ, ಈ ಭೂಲೋಕದಲ್ಲಿ ಯಾರೇ ದೊಡ್ಡವರು ಬರಲಿ. ದ್ವಿಜರು ಬರಲಿ, ನೀನು ಅವರೆಲ್ಲರಿಗೂ ನಮಸ್ಕಾರ ಮಾಡು.' ತಂದೆಯ ಆಜ್ಞೆಯನ್ನು ಈ ಕೂಸು ಅಕ್ಷರಶಃ ಪಾಲಿಸಿತು. ದೇಶ ದೇಶ ಸುತ್ತಾಡಿ ದೊಡ್ಡವರು ಇದ್ದಲ್ಲಿ ಹೋಗಿ ಈ ಮಗು ನಮಸ್ಕರಿಸಿತು. ನಾವು ತೀರ್ಥಯಾತ್ರೆಗೆ ಹೊರಟಾಗ ದೈವಯೋಗದಿಂದ ನಮ್ಮನ್ನು ನೋಡಿತು. ನಮ್ಮ ಮುಂದೆ ಅಡ್ಡ ಬಿದ್ದು ನಮಸ್ಕಾರ ಹಾಕಿತು. ಆಗ ನಾವು ನಿಮ್ಮಂತೆ ಹರಿಸಿದೆವು. 'ಚಿರಾಯುರ್ಭವ ಪುತ್ರ,' ಮುಂದೆ ದೀರ್ಘಾಯುಷಿಯಾಗು ಎಂದು ಆಶೀರ್ವಾದ ಮಾಡಿದೆವು. ಆದರೆ ಈ ಮಗುವಿನ ಆಯುಷ್ಯ ಪೂರ್ತಿ ತೀರಿಹೋಗಿದೆ.

ಅದಕ್ಕಾಗಿ ಈ ಕಂದನನ್ನು ನಿಮ್ಮ ಬಳಿಗೆ ಕರೆ ತಂದಿದ್ದೇವೆ. ಅವನು ನಿಮಗೆ ವಂದನೆ ಗೈದ. ತಾವು ಕೂಡ ಅವನಿಗೆ 'ಚಿರಾಯುಷಿಯಾಗು' ಎಂದು ಆಶೀರ್ವದಿಸಿದಿರಿ. ಸ್ವಾಮಿ, ನಮ್ಮ ಮಾತು ಸುಳ್ಳಾಗದಂತೆ ಮಾಡಿರಿ. ತಮ್ಮ ಮಾತು ಸತ್ಯವಾಗುವಂತೆ ಮಾಡಿರಿ.''

**ಬ್ರಹ್ಮ** :- ಬ್ರಹ್ಮಜ್ಞಾನಿಗಳಾದ ಸಪ್ತರ್ಷಿಗಳ ಬಾಯಿಮಾತಿನ ಬಿನ್ನಹವನ್ನು ಬ್ರಹ್ಮದೇವರು ಕೇಳಿಕೊಂಡರು. ಅಕ್ಕರೆದುಂಬಿ ಇಂತು ನುಡಿದರು. ''ಮಹರ್ಷಿಗಳೆ, ಈ ಭೂಮಿಯು ನಿರ್ಭಯವಾಗಿ ನಿಂತದ್ದು ಸತ್ಯದ ಮೇಲೆ ಅಲ್ಲವೆ?'' ಪ್ರಪಂಚವೆಲ್ಲ ಸತ್ಯದಲ್ಲಿಯೇ ಪ್ರತಿಷ್ಠಿತವಾಗಿದೆ. ನೀವು ಹೆದರಬೇಡಿರಿ ಈ ಬಾಲಕನು ನನಗೆ ಸಮಾನವಾದ ಆಯುಷ್ಯ ಪಡೆಯುತ್ತಾನೆ. ನನ್ನಂತೆಯೇ ಕಲ್ಪಜೀವಿ ಆಗುತ್ತಾನೆ. ಋಷಿಗಳಲ್ಲಿ ಮುಖ್ಯನೆನಿಸುತ್ತಾನೆ. ಕಲ್ಪದ ಆರಂಭ, ಅಂತ್ಯದಲ್ಲಿ, ಮುನಿಗಳಿಂದ ಕೂಡಿಕೊಂಡು ನನಗೆ ಸಹಾಯಕನಾಗುತ್ತಾನೆ. ಮತ್ತು ಮಾರ್ಕಂಡೇಯ ಎಂಬ ಹೆಸರಿನಿಂದ ಖ್ಯಾತಿ ಕೀರ್ತಿಗಳನ್ನು ಪಡೆಯುತ್ತಾನೆ.

**ಪುಲಸ್ತ್ಯ** :- ಹೀಗೆ ಋಷಿಗಳು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮದೇವರನ್ನು ಒಲಿಸಿ ತಮ್ಮ ನುಡಿಯನ್ನು ನಿಜವನ್ನಾಗಿಮಾಡಿ, ಆಯುಷ್ಯ ಸವೆದುಹೋದ ಆ ಬಾಲಕನನ್ನು ಚಿರಂಜೀವಿ ಯನ್ನಾಗಿ ಮಾಡಿಕೊಂಡು ಬಂದರು ಮತ್ತು ಮೃತ್ಯು ಮುಖದಲ್ಲಿ ಕಾಲಿರಿಸಿದ ಮಗುವನ್ನು ಮೃತ್ಯುಂಜಯನನ್ನಾಗಿ ಮಾಡಿಕೊಂಡು ಬಂದ ಮೃಕಂಡು ಮುನಿಯ ಆಶ್ರಮದಲ್ಲಿ ಇಳಿಸಿದರು. ಮತ್ತು ತಾವು ತಮ್ಮ ತೀರ್ಥಯಾತ್ರೆಗೆ ತೆರಳಿದರು. ಮಾರ್ಕಂಡೇಯನು ತನ್ನ ಮನೆಯ ಒಳಗೆ ಬಂದ ತಂದೆಗೆ ವಂದಿಸಿ, ಪ್ರೀತಿಯಿಂದ ನುಡಿದನು.

**ಮಾರ್ಕಂಡೇಯ** :- ಅಪ್ಪಾ ನನ್ನ ವಿಷಯವಾಗಿ ನೀನು ಬಹಳಷ್ಟು ಚಿಂತೆಮಾಡುತ್ತಿದ್ದೆ ಅಲ್ಲವೆ? ದೇವರೆ, ಇಂದು ಆ ನಿನ್ನ ಚಿಂತೆಯನ್ನು ಪರಿಹಾರ ಮಾಡಿದ್ದಾನೆ. ನನಗೆ ದಾರಿಯಲ್ಲಿ ಬ್ರಹ್ಮಜ್ಞಾನಿಗಳಾದ ಸಪ್ತರ್ಷಿಗಳ ದರ್ಶನವಾಯಿತು. ಅವರಿಗೆ ನಿನ್ನ ಆದೇಶದಂತೆ ನಮಸ್ಕರಿಸಿದೆ. ಅವರು ನನ್ನನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದರು. ಬ್ರಹ್ಮದೇವರಿಂದ ಆಶೀರ್ವಾದಮಾಡಿಸಿ 'ದೀರ್ಘಾಯುಷಿ ಆಗು' ಎಂದು ವರ ಕೊಡಿಸಿ, ನಮ್ಮ ಆಶ್ರಮದವರೆಗೆ 'ತಂದು ಬಿಟ್ಟುಹೋದರು. ಇದಲ್ಲದೆ ನನಗೆ ಇನ್ನೂ ಬೇರೆ ವರಗಳನ್ನು ಬ್ರಹ್ಮದೇವನು ದಯಪಾಲಿಸಿದ್ದಾನೆ. ಪ್ರಪಂಚದ ಕರ್ತಾರನಾದ ಬ್ರಹ್ಮನ ಅನುಗ್ರಹ ನನ್ನ ಮೇಲೆ ಸಂಪೂರ್ಣವಾಗಿದೆ. ಕಲ್ಪದ ಆರಂಭದಲ್ಲಿಯೂ ನಾನು ಇರುತ್ತೇನೆ. ಕೊನೆಯಲ್ಲಿಯೂ ನಾನಿರುತ್ತೇನೆ. ಇದೆಲ್ಲವೂ ಬ್ರಹ್ಮಪ್ರಸಾದ. ತಂದೆ ಈಗ ನಾನು ಪುಷ್ಕರ ಕ್ಷೇತ್ರಕ್ಕೆ ಹೋಗುತ್ತೇನೆ. ಭೂಲೋಕದಲ್ಲಿ ಆ ಪುಷ್ಕರ ಕ್ಷೇತ್ರವು ಬ್ರಹ್ಮಲೋಕಕ್ಕೆ ಸಮಾನವೆಂದು ಹೇಳಿದ್ದಾರೆ. ಅಲ್ಲಿ ಹೋಗಿ ನಾನು ಬ್ರಹ್ಮದೇವರ ಸೇವೆ ಮಾಡುತ್ತೇನೆ. ಅಪ್ಪಾ, ಆ ಪಿತಾಮಹನು ಇಂದ್ರಾದಿ ದೇವತೆಗಳಿಗೂ ಆಶ್ರಯನಾಗಿದ್ದು ಸರ್ವರಿಗೂ ಸೌಖ್ಯಪ್ರದನಷ್ಟೇ.! ಎಲ್ಲ ಅಭೀಷ್ಟಗಳನ್ನು ಪೂರ್ಣಮಾಡುವ ಎಲ್ಲ ಲೋಕ ಪಿತಾಮಹನಾದ ಆ ಚತುರ್ಮುಖ ಬ್ರಹ್ಮನನ್ನು ನಾನು ಪುಷ್ಕರದಲ್ಲಿದ್ದು ಕೊಂಡು ಉಪಾಸನೆಮಾಡಿ; ಪೂಜಿಸುವೆನು.'

**ಪುಲಸ್ತ್ಯ**:- ಮಗನ ಮಾತನ್ನು ಕೇಳಿ, ಮೃಕಂಡುಮುನಿಗೆ ಅತ್ಯಂತ ಆನಂದವಾಯಿತು. ಅದರ ಜೊತೆಗೆ ಈಗಲೇ ತನ್ನನ್ನು ಬಿಟ್ಟು ಹೋಗುವನಲ್ಲ ಎಂದು ದುಃಖವೂ ಆಯಿತು. ಒಂದು ಕ್ಷಣ ನಿಟ್ಟುಸಿರು ಬಿಟ್ಟು ಧೈರ್ಯ ತಂದು ಕೊಂಡು ಇಂತು ನುಡಿದನು.

**ಮೃಕಂಡಮುನಿ :-** 'ವತ್ಸ ಇಂದು ನನ್ನ ಜನ್ಮವು ಸಫಲವಾಯಿತು, ನಾನು ಬದುಕಿದ್ದು ಸಾರ್ಥಕ ವಾಯಿತು. ನನ್ನ ಮಗನಾದ ನೀನು ಸರ್ವಜಗತ್ತನ್ನು ರೂಪಿಸಿದ ಪಿತಾಮಹನನ್ನೇ ಕಂಡುಬಂದಿರುವಿ. ಇಂದು ನಾನು ಪುತ್ರವಂತರಲ್ಲಿ ಧನ್ಯನಾಗಿದ್ದೇನೆ. ನೀನು ಅವಶ್ಯವಾಗಿ ಪುಷ್ಕರ ಕ್ಷೇತ್ರಕ್ಕೆ ಹೋಗು, ಅಲ್ಲಿ ನಿಂತು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡು. ಬ್ರಹ್ಮದೇವರ ಸಾಕ್ಷಾತ್ಕಾರ ಮಾಡಿಕೊ. ಜಗತ್ತಿನ ಸೃಷ್ಟಿಕರ್ತನಾದ ಆ ಚತುರ್ಮುಖನನ್ನು ಕಂಡಬಳಿಕ, ಮುಪ್ಪು, ಸಾವು ಯಾವುದರ ಭಯವೂ ಇಲ್ಲ. ಜನರಿಗೆ ಸೌಖ್ಯಗಳು ಪ್ರಾಪ್ತವಾಗುವವು, ತಪಸ್ಸಿನ ಫಲವಾದ ಐಶ್ವರ್ಯ, ಆಯುಷ್ಯ, ಸೌಖ್ಯ ಮೂರು ಅಪ್ರಾರ್ಥಿತವಾಗಿಯೇ ಲಭಿಸುವವು. ಬ್ರಹ್ಮ, ವಿಷ್ಣು, ರುದ್ರ- ಈ ತ್ರಿಮೂರ್ತಿಗಳು ಪುಷ್ಕರ ಕ್ಷೇತ್ರದಲ್ಲಿ ನಿತ್ಯವೂ ಸನ್ನಿಹಿತರಾಗಿರುತ್ತಾರೆ. ಇದಕ್ಕಿಂತ ಪಾವನತರ ಕ್ಷೇತ್ರವು ಭೂಮಂಡಲದಲ್ಲಿ ಬೇರೊಂದಿಲ್ಲ. ಮೂರು ವರ್ಷ ಅಗ್ನಿ ಹೋತ್ರ ಮಾಡುವವದೂ ಪುಷ್ಕರ ಕ್ಷೇತ್ರದಲ್ಲಿ ಕಾರ್ತೀಕ ಮಾಸದಲ್ಲಿ ಒಂದು ದಿನ ಸ್ನಾನ ಮಾಡುವವದೂ ಒಂದೇ. ಯಾವುದು ನನಗೆ ಎಷ್ಟು ಕರ್ಮಾನುಷ್ಠಾನದಿಂದಲೂ ಸಾಧ್ಯವಿರಲಿಲ್ಲವೊ ಅಂತಹ ಮೃತ್ಯುವಿನ ಮೇಲೆ ವಿಜಯ ಸಂಪಾದನೆ ಮಾಡಿರುವಿ. ಬ್ರಹ್ಮದೇವನನ್ನು ಅವನ ಮನೆಯವರೆಗೆ ಹೋಗಿ ಇದೇ ಚರ್ಮಚಕ್ಷುವಿನಿಂದ ನೋಡಿರುವಿ. ಆದುದರಿಂದ ಈ ಜಗತ್ತಿನಲ್ಲಿ ನಿನಗೆ ಸಮಾನನಾದ ಮಾನವನೇ ಇಲ್ಲ. ಪುತ್ರನೆ, ನೀನು ನನ್ನ ಮನೆಯಲ್ಲಿ ಐದು ವರ್ಷ ಮಾತ್ರ ಇದ್ದರೂ, ನನಗೆ ಬದುಕಿ ಇರುವವರೆಗೂ ಶಾಶ್ವತ ಆನಂದವಾಗುವಂತೆ ಮಾಡಿರುವಿ. ಆದುದರಿಂದ ನೀನು ಚಿರಂಜೀವಿಗಳಿಗೆ ಸಮಾನನಾಗಿ ಇರು' ಎಂದು ಆಶೀರ್ವಾದ ಮಾಡುತ್ತಾನೆ. ಇನ್ನು ನೀನು ನಿನ್ನ ಇಷ್ಟ ಬಂದ ಲೋಕಗಳಿಗೆ ಹೋಗು.

**ಪುಲಸ್ಯ :-** ಹೀಗೆ ತಂದೆಯ ಆಶೀರ್ವಾದವನ್ನು ಪಡೆದು ಮಾರ್ಕಂಡೇಯ ಋಷಿಯು ಪುಷ್ಕರ ಕ್ಷೇತ್ರಕ್ಕೆ ಬಂದು ತನ್ನದೇ ಆದ ಮಾರ್ಕಂಡೇಯಾಶ್ರಮ ಕಟ್ಟಿಕೊಂಡು ಇದ್ದು ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿದನು. ಈ ಮಾರ್ಕಂಡೇಯಾಶ್ರಮದ ಮುಂದಿನ ತೀರ್ಥಸ್ನಾನ ಮಾಡಿದರೆ ಎಲ್ಲ ಪಾಪಗಳು ಪರಿಹಾರವಾಗಿ ಮಾನವನು ದೀರ್ಘಾಯುಷಿ ಆಗುವನು ಮತ್ತು ಅಶ್ವಮೇಧ ಮಾಡಿದ ಪುಣ್ಯವನ್ನು ಪಡೆಯುವನು. ಇನ್ನು ಮೇಲೆ ರಾಮನು ಈ ಪುಷ್ಕರ ತೀರ್ಥಕ್ಕೆ ಬಂದ ಬಗೆಯನ್ನು ಹೇಳುತ್ತೇನೆ, ಕೇಳು. ಹಿಂದೆ ತ್ರೇತ್ರಾಯುಗದಲ್ಲಿ ರಾಮನು ತಂದೆಯ ಮಾತಿನಂತೆ ಹದಿನಾಲ್ಕು ವರ್ಷ ವನವಾಸಕ್ಕಾಗಿ ಹೊರಟ್ಟಿದ್ದನು. ಲಕ್ಷ್ಮಣನೂ, ಸೀತೆಯೂ ಅವನನ್ನು ಹಿಂಬಾಲಿಸಿದ್ದರು. ಚಿತ್ರಕೂಟ ಪರ್ವತದಿಂದ ಮೂವರು ಅತ್ರಿಮುನಿಗಳ ಆಶ್ರಮಕ್ಕೆ ಬಂದರು. ಅಲ್ಲಿ ಆ ಮುನಿಪುಂಗವನನ್ನು ಕೇಳಿದರು.

**ರಾಮ :-** ಮುನಿವರ್ಯರೆ, ಪುಣ್ಯ ತೀರ್ಥಗಳು ಯಾವುವು? ಮತ್ತು ಪುಣ್ಯ ಕ್ಷೇತ್ರಗಳು ಯಾವವು? ಯಾವ ತೀರ್ಥ ಕ್ಷೇತ್ರಗಳಿಗೆ ಹೋಗುವದರಿಂದ ಮನುಷ್ಯನಿಗೆ ಬಂಧುಗಳೊಂದಿಗೆ ವಿಯೋಗ ಉಂಟಾಗುವುದಿಲ್ಲ? ಅದನ್ನು ತಿಳಿಸಿರಿ. ನನಗೋ ಆಕಸ್ಮಿಕವಾಗಿ ಅಡವಿಗೆ ಹೋಗುವ ಪ್ರಸಂಗ ಬಂದಿತು. ನಾನು ಇತ್ತ ಬಂದಾಗ ನನ್ನ ತಂದೆ ದಶರಥರು ಮರಣಹೊಂದಿದರು. ನನ್ನ ನೆಚ್ಚಿನ ಬಂಧುವಾದ ಭರತನಿಂದ ನಾನು ಬಹುಕಾಲ ಅಗಲಿ ಮನಸ್ಸಿನಲ್ಲಿ ಕುದಿಯುತ್ತಿದ್ದೇನೆ. ಹೀಗೆ ಆಪ್ತೇಷ್ಟರ ವಿಯೋಗವು ಆಗಬಾರದಂತಿದ್ದರೆ ಯಾವ ತೀರ್ಥ ಕ್ಷೇತ್ರದ ಯಾತ್ರೆ ಮಾಡಬೇಕು?

**ಪುಲಸ್ತ್ಯ:-** ರಾಮನ ಈ ಪ್ರಶ್ನೆಯನ್ನು ಕೇಳಿ ಅತ್ರಿ ಮಹರ್ಷಿ ತುಸು ಹೊತ್ತು ಕಣ್ಣು ಮುಚ್ಚಿ ಕುಳಿತರು. ಮನಸ್ಸಿನಲ್ಲಿ ಆಲೋಚನೆಗೈದರು ಅನಂತರ ಹೀಗೆ ನುಡಿದರು.

**ಅತ್ರಿ :-** ವತ್ಸರಾಮ, ರಘುಕುಲದ ಅಲಂಕಾರನಾದ ನೀನು ಒಳ್ಳೇ ಪ್ರಶ್ನೆ ಕೇಳಿದೆ. ನನ್ನ ತಂದೆಯಾದ ಬ್ರಹ್ಮದೇವರು ಒಂದು ದಿವ್ಯವಾದ ತೀರ್ಥಮಾಡಿದ್ದಾರೆ. ಪುಷ್ಕರ ಎಂಬ ಹೆಸರಿನಿಂದ ಅದು ಪ್ರಸಿದ್ಧವಾಗಿದೆ. ಅಲ್ಲಿ ಮರ್ಯಾದಾ ಪರ್ವತ, ಅಗ್ನಿಪರ್ವತಗಳೆಂಬ ಎರಡು ಗುಡ್ಡಗಳಿವೆ. ಅವುಗಳ ನಡುವೆ ಜ್ಯೇಷ್ಠ ಪುಷ್ಕರ, ಮಧ್ಯ ಪುಷ್ಕರ, ಕನಿಷ್ಠ ಪುಷ್ಕರಗಳೆಂದು ಮೂರು ತೀರ್ಥಗಳಿವೆ. ಅಲ್ಲಿಗೆ ಹೋಗಿ ನೀನು ನಿನ್ನ ತಂದೆ ದಶರಥನನ್ನು ಉದ್ದೇಶಿಸಿ ಪಿಂಡದಾನ ಮಾಡು, ತಿಲತರ್ಪಣ ಕೊಡು. ಸುರಾಸುರರಲ್ಲಿ, ಲೋಕಪಿತಾಮಹನಾದ ಬ್ರಹ್ಮದೇವನು ಶ್ರೇಷ್ಠನಷ್ಟೇ! ಅಂತಹ ಬ್ರಹ್ಮದೇವರು ನಿರ್ಮಿಸಿದ ಆ ತೀರ್ಥಕ್ಕೆ, ಬಂದು ಅಲ್ಲಿ ಸ್ನಾನಮಾಡಿ, ದೇವಕಾರ್ಯ ಪಿತೃಕಾರ್ಯ ಮಾಡಿದ ಮಾನವರು ಬ್ರಹ್ಮಲೋಕವನ್ನು ಹೊಂದುತ್ತಾರೆ. ಆ ಎರಡು ಪರ್ವತಗಳ ಮಧ್ಯವಿರುವ ಜೇಷ್ಠ ಮಧ್ಯ ಕನಿಷ್ಠ ಕುಂಡಗಳಲ್ಲಿ ಪಿಂಡದಾನದಿಂದ ಪಿತೃಗಳಿಗೆ ಮೊಕ್ಷಲಾಭವಾಗುವದೆಂದು ಬ್ರಹ್ಮನೇ ಹೇಳಿದ್ದಾನೆ, ಆದುದರಿಂದ ರಾಮ ನೀನು ಅಲ್ಲಿಗೆ ಹೋಗು, ಪಿತೃಕಾರ್ಯನೆರವೇರಿಸು ಮತ್ತೆ ಮರಳಿ ಇಲ್ಲಿಗೆ ಬಾ.

**ಪುಲಸ್ತ್ಯ:-** ಅತ್ರಿ ಋಷಿಯ ಆದೇಶದಂತೆ ರಾಮನು, ಪುಷ್ಕರ ಕ್ಷೇತ್ರಕ್ಕೆ ಹೊರಟನು. ಋಷ್ಯವಂತ ಪರ್ವತವನ್ನು ದಾಟಿ ವೈದಿಶಪಟ್ಟಣಕ್ಕೆ ಬಂದನು. ಅಲ್ಲಿಂದ ದಾರಿಯಲ್ಲಿ ಬರುವ ಚರ್ಮಣ್ವತೀನದಿಯನ್ನು ದಾಟಿ ಯಜ್ಞಪರ್ವತಕ್ಕೆ ಬಂದನು. ಅದನ್ನು ಬಳಸಿ ಕೊಂಡು ಬಂದು, ವೇಗದಿಂದ ಮಧ್ಯ ಪುಷ್ಕರಣಿಗೆ ಬಂದು ತಲುಪಿದನು. ಅಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣಕೊಟ್ಟನು. ದೇವತೆಗಳಿಗೆ ಪೂಜೆ ಮಾಡಿದನು. ಹೀಗೆ ಸ್ನಾನಾಹ್ನಿಕ ಗಳನ್ನೆಲ್ಲ ರಾಮಚಂದ್ರನು ಮುಗಿಸಿ ನಿಂತಾಗ ಮಾರ್ಕಂಡೇಯ ಮುನಿಗಳು ಶಿಷ್ಯರೊಂದಿಗೆ ಬರುವದು ಅವನ ಕಣ್ಣಿಗೆ ಬಿದ್ದಿತು. ಲೋಕಾಚಾರವನ್ನೆಲ್ಲ ಬಲ್ಲ ದಶರಥ ಕುಮಾರನು ಅವರನ್ನು ಎದುರುಗೊಂಡು ಆದರದಿಂದ ನಮಸ್ಕಾರ ಮಾಡಿದನು, ಮತ್ತು ಪ್ರಶ್ನಿಸಿದನು.

**ರಾಮ :-** ಪೂಜ್ಯರೆ, ನಾನು ದಶರಥರಾಜನ ಮಗ, ರಾಮ ಎಂದು ಜನರು ನನ್ನನ್ನು ಕರೆಯುತ್ತಾರೆ. ಇಲ್ಲಿ 'ಅವಿಯೋಗ ಕೂಪವು' ಯಾವ ದಿಕ್ಕಿನಲ್ಲಿದೆ ? ಸೌಭಾಗ್ಯವಾಪಿ ಎಲ್ಲಿದೆ? ಅತ್ರಿಋಷಿಗಳ ಆದೇಶದ ಮೇರೆಗೆ ಅವುಗಳನ್ನು ನೋಡಿ ಸ್ನಾನಮಾಡಿ ಹೋಗಲು ನಾನು ಇಲ್ಲಿಗೆ ಬಂದಿದ್ದೇನೆ. ಆ ಸ್ಥಳವನ್ನು ತಾವು ದಯಮಾಡಿ ನನಗೆ ತೋರಿಸಬೇಕು. ರಾಮ ದೇವರ ಈ ಪ್ರಶ್ನೆಯನ್ನು ಕೇಳಿ ಮಾರ್ಕಂಡೇಯ ಮುನಿಗಳು ಉತ್ತರಕೊಟ್ಟರು.

**ಮಾರ್ಕಂಡೇಯ :-** ರಘುಕುಲ ಲಲಾಮನೆ ನಿನಗೆ ಒಳ್ಳೆಯದಾಗಲಿ ನೀನು ಬಹಳ ಪುಣ್ಯವನ್ನು ಮಾಡಿರುವೆ. ನೀನು ತೀರ್ಥಯಾತ್ರೆ ಪ್ರಸಂಗದಿಂದ ನೀನು ಇಲ್ಲಿಗೆ ಬಂದದ್ದು ಬಹಳ ಒಳ್ಳೆಯದಾಯಿತು. ನೀನು ಹೀಗೇ ಕಾಲುನಡಿಗೆಯಿಂದ ಹೋದರೆ ಅವಿಯೋಗ ವಾಪಿಯು ಬರುವದು. ಅದರಲ್ಲಿ ಸ್ನಾನ ಮಾಡಿದರೆ. ಎಲ್ಲರದೂ ಅವಿಯೋಗವಾಗುವದು, ಬದುಕಿರಲಿ ಸತ್ತಿರಲಿ ಇಲ್ಲಿಯ ಸ್ನಾನ ಮಾತ್ರದಿಂದ ಮತ್ತೆ ಎಲ್ಲರ ಬೇಟಿಯಾಗುವದು.

**ಪುಲಸ್ತ್ಯ:-** ಮುನಿ ಪುಂಗವರಾದ ಮಾರ್ಕಂಡೇಯರ ಈ ಮಾತನ್ನು ಕೇಳಿ ಲಕ್ಷ್ಮಣನ ಅಣ್ಣನಾದ ರಾಮನಿಗೆ ಸತ್ತ ತಂದೆಯ ನೆನಪಾಯಿತು. ಇದ್ದ ಭರತನ ನೆನಪಾಯಿತು.

ಅದರಂತೆ ಶತ್ರುಘ್ನ, ಕೈಕೇಯಿ, ಕೌಸಲ್ಯ, ಸುಮಿತ್ರರ ಹಾಗೂ ಅಯೋಧ್ಯಾ ಪಟ್ಟಣದ ಇತರ ನಾಗರಿಕರ ನೆನಹು ಮನಸ್ಸಿನಲ್ಲಿ ಉದ್ಬುದ್ಧವಾಯಿತು. ಹೀಗೆ ರಾಮನು ತನ್ನ ಇಷ್ಟಬಂಧುಗಳನ್ನು ನೆನೆಯುತ್ತಿರುವಂತೆ ಸಂಜೆ ಆಯಿತು. ಅವನು ಸಾಯಂ ಸಂಧ್ಯಾವಂದನೆಯನ್ನು ಮುನಿಗಳೊಂದಿಗೆ ಮಾಡಿ ಸೀತೆ ಲಕ್ಷ್ಮಣರೊಂದಿಗೆ ಅಲ್ಲಿಯೇ ಮಾರ್ಕಂಡೇಯ ಮುನಿಗಳ ಆಶ್ರಮದಲ್ಲಿ ಮಲಗಿಕೊಂಡನು.

ರಾತ್ರಿಯ ಕೊನೆಯ ಯಾಮದಲ್ಲಿ ರಾಮನಿಗೆ ಒಂದು ಕನಸು ಬಿದ್ದಿತು. ಕನಸಿನಲ್ಲಿ ತನ್ನ ತಂದೆ ದಶರಥ ಹಾಗೂ ವಶಿಷ್ಠರಿಂದ ಕೂಡಿಕೊಂಡು ರಾಮನು ತನ್ನ ಮದುವೆಯ ಮಂಗಳ ಸಂದರ್ಭದಲ್ಲಿ ವಿವಾಹ ಸನ್ನದ್ಧನಾಗಿ ನಿಂತುಕೊಂಡಿದ್ದನು. ಎಲ್ಲ ಬಾಂಧವರೂ ಅವನ ಸುತ್ತು ನಿಂತಿದ್ದರು. ನವ ವಧುವಾದ ಸೀತೆಯ ತನ್ನೊಡನೆ ಹಸೆಯ ಮಣೆಯ ಮೇಲೆ ಕುಳಿತಿದ್ದಳು. ಎಲ್ಲ ಕಡೆಗೂ ಬ್ರಹ್ಮರ್ಷಿಗಳು ನಿಂತುಕೊಂಡಿದ್ದರು. ಇದರಂತೆ ಲಕ್ಷ್ಮಣನಿಗಾದರೂ ಸ್ವಪ್ನದಲ್ಲಿ ತಾನು ಅಗಲಿದ ಎಲ್ಲ ಬಂಧು ಬಾಂಧವರ ದರ್ಶನವಾಯಿತು. ವಿವಾಹದ ಶುಭ ಸಂದರ್ಭವು ಕಣ್ಣಿಗೆ ಕಟ್ಟಿದಂತಾಗಿತ್ತು. ಸೀತಾದೇವಿಗಾದರೂ ಅಂದು ರಾತ್ರಿ ಶುಭ ಸ್ವಪ್ನ ವಿಶ್ವಾಮಿತ್ರಮುನಿಯೊಂದಿಗೆ, ಶ್ರೀ ರಾಮನು ತಂದೆಯ ಆಸ್ಥಾನಕ್ಕೆ ಬಂದಿದ್ದಾನೆ. ಮಹರ್ಷಿಯ ಆದೇಶದಂತೆ ಆ ತರುಣ ರಾಜಕುಮಾರನು ಶಿವಧನುಸ್ಸನ್ನು ಲೀಲಾ ಜಾಲವಾಗಿ ಎತ್ತಿ, ಮುರಿದು ಇಟ್ಟಿದ್ದಾನೆ. ತನ್ನೆಡೆಗೆ ಕುಡಿನೋಟ ಬೀರುತ್ತಲಿದ್ದಾನೆ. ತಾನು ನಾಚುತ್ತ ಹೋಗಿ ಅವನ ಕೊರಳಲ್ಲಿ ಸ್ವಯಂವರ ಮಾಲೆಯನ್ನು ಹಾಕಿದಳು. ಮಂಗಳ ವಾದ್ಯಗಳು ಮೊಳಗಿದವು. ರಾಜರೂ, ಋಷಿಗಳೂ ತಮ್ಮಿಬ್ಬರ ತಲೆಯ ಮೇಲೆ ಮಂತ್ರಾಕ್ಷತೆ ಹಾಕಿದರು. ತನ್ನ ತಂದೆ ಜನಕರಾಜನು ತನ್ನ ಕೈಯನ್ನು ರಾಮನ ಕೈಯಲ್ಲಿ ಇರಿಸಿದ್ದಾನೆ. ರಾಮನು ತನ್ನ ಕೊರಳಲ್ಲಿ ಮಂಗಳಸೂತ್ರವನ್ನು ಕಟ್ಟಿದ್ದಾನೆ. ಆ ಸ್ವಾಮಿಯೊಂದಿಗೆ ತಾನು ನಸು ನಾಚುತ್ತ ಸಪ್ತಪದಿಯನ್ನು ಇರಿಸುತ್ತಿದ್ದಾಳೆ. ತನ್ನ ಜೀವನದ ಈ ಸುವರ್ಣ ಸಂದರ್ಭವನ್ನು ಮತ್ತೊಮ್ಮೆ ಕನಸ್ಸಿನಲ್ಲಿ ಕಂಡು ಹಾಗೂ ತನ್ನ ತಂದೆ, ಬಂಧು ಬಳಗದವರನ್ನೆಲ್ಲ ಪುನರಪಿ ಸ್ವಪ್ನದಲ್ಲಿ ನೋಡಿ ಸೀತೆಗೆ ಮೈಯೆಲ್ಲ ರೋಮಾಂಚನವಾಯಿತು. ಆಶ್ರಮ ವಟುಗಳ ವೇದಘೋಷದಿಂದ ಮೂವರಿಗೂ ಎಚ್ಚರವಾಯಿತು. ಮೂವರು ಮಹರ್ಷಿಗಳಿಗೆ ತಮ್ಮ ತಮ್ಮ ಕನಸುಗಳನ್ನು ಹೇಳಿದರು. ಆಗ ಅತ್ರಿಋಷಿಗಳು ನುಡಿದರು.

## ಶ್ರೀರಾಮ ಮಾಡಿದ ಶ್ರಾದ್ಧ

ಅತ್ರಿ:-

**ಋಷಿಭಿಶ್ಚ ತಥೇತ್ಯುಕ್ತಃ ಸತ್ಯಮೇತದ್ರಘೂತ್ತಮ ।**
**ಮೃತಸ್ಯದರ್ಶನೇ ಶ್ರಾದ್ಧಂ ಕಾರ್ಯಮಾವಶ್ಯಕಂ ಸ್ಮೃತಂ ।**
**ವೃದ್ಧಿಕಾಮಾಸ್ತು ಪಿತರಸ್ತಥಾಚೈವಾನ್ನಕಾಂಕ್ಷಿಣಃ ।**
**ದದಂತಿ ದರ್ಶನಂ ಸ್ವಪ್ನೇ ಭಕ್ತಿಯುಕ್ತಸ್ಯ ರಾಘವ ॥**

ಋಷಿಗಳು ಅದು ಹಾಗೆಯೇ ಸರಿ, ಸತ್ತವರನ್ನು ಸ್ವಪ್ನದಲ್ಲಿ ಕಂಡರೆ ಖಂಡಿತ ಶ್ರಾದ್ಧವನ್ನು ಮಾಡಬೇಕು ಎಂದು ಶಾಸ್ತ್ರದಲ್ಲಿ ಹೇಳಿದೆ. ವೃದ್ಧಿಯನ್ನು ಅಪೇಕ್ಷಿಸುವ ಪಿತೃಗಳು, ಅನ್ನವನ್ನು ಅಪೇಕ್ಷಿಸಿ, ಭಕ್ತಿಯುಕ್ತನಾದವನಿಗೆ ಸ್ವಪ್ನದಲ್ಲಿ ದರ್ಶನ ಕೊಡುತ್ತಾರೆ.

ರಾಮನೆ, ನಿನಗೆ ತಾಯಿ, ತಂದೆ ಹಾಗೂ ಭರತನಿಂದ ಹದಿನಾಲ್ಕು ವರ್ಷ ವಿಯೋಗವು ನಿಶ್ಚಿತವಾಗಿ ಆಗುವದು. ದಶರಥ ರಾಜನನ್ನು ಉದ್ದೇಶಿಸಿ, ಇಲ್ಲಿ ಶ್ರಾದ್ಧ ಮಾಡು. ಇಲ್ಲಿ ಇರುವ ನಾನು, ಜಮದಗ್ನಿ, ಭರದ್ವಾಜ, ಲೋಮಶ ಶಮೀಕ ಎಂಬ ಆರು ಜನ ದ್ವಿಜ-ಶ್ರೇಷ್ಠರು ಇಲ್ಲಿ ಇರುತ್ತೇವೆ. ನಾವೆಲ್ಲರೂ ನಿನ್ನ ಭಕ್ತರು. ನಿನ್ನ ಸೇವೆಯನ್ನು ಮಾಡಲು ನಮಗೆಲ್ಲರಿಗೂ ಅತ್ಯಂತ ಉತ್ಸಾಹ, ಶ್ರಾದ್ಧಕ್ಕಾಗಿ ಬೇಕಾಗುವ ಪದಾರ್ಥಗಳನ್ನೆಲ್ಲ ನೀನು ತೆಗೆದುಕೊಂಡು ಬಾ. ಮುಖ್ಯ ವಸ್ತುಗಳೆಂದರೆ- ನೆಲ್ಲಿ, ಬೋರೆ, ಯುಗಚಿ, ಇಂಗಳದ ಹಿಂಡಿ, ಇದಲ್ಲದೆ ಬಗೆ ಬಗೆಯ ತರಕಾರಿ, ಗೆಡ್ಡೆ-ಗೆಣಸು ಮತ್ತು ಹಲವಾರು ತರಹದ ಧಾನ್ಯಗಳನ್ನು ನೀನು ತೆಗೆದುಕೊಂಡು ಬಾ. ಶ್ರಾದ್ಧ ಮಾಡಿ ದಾನ ದಕ್ಷಿಣೆಯಿತ್ತು ದ್ವಿಜರನ್ನು ತೃಪ್ತಿ ಪಡಿಸು. ಪುಷ್ಕರ ವನಕ್ಕೆ ಬಂದು ನಿಯತಾಹಾರರಾಗಿ, ನಿಯಮಬದ್ಧವಾಗಿ ಪಿತೃಗಳ ಶ್ರಾದ್ಧ ಮಾಡಿದವನು ಅಶ್ವಮೇಧಯಾಗದ ಪುಣ್ಯ ಹೊಂದುತ್ತಾನೆ, ನಾವೆಲ್ಲರೂ ಸ್ನಾನಕ್ಕಾಗಿ ಜ್ಯೇಷ್ಠ ಪುಷ್ಕರಕ್ಕೆ ಹೋಗುತ್ತೇವೆ'' ಹೀಗೆ ಹೇಳಿ ಋಷಿಗಳೆಲ್ಲರೂ ಸ್ನಾನಕ್ಕೆ ಹೋದರು. ಆಗ ರಾಮನು ಲಕ್ಷ್ಮಣನಿಗೆ ಎಲ್ಲ ವಿಧವಾದ ಶ್ರಾದ್ಧಕ್ಕೆ ಉಪಯುಕ್ತ ಪದಾರ್ಥಗಳನ್ನು ತರಲು ಆದೇಶವಿತ್ತನು. ಲಕ್ಷ್ಮಣನು ಪದಾರ್ಥಗಳನ್ನೆಲ್ಲ ತಂದು ಕೊಟ್ಟ ಬಳಿಕ ಸೀತೆಯು ಸ್ನಾನ ಮಾಡಿ ಅಡಿಗೆಯನ್ನು ಸಿದ್ಧಪಡಿಸಿದಳು. ರಾಮನು ಅಯೋಗವಾಪಿಯಲ್ಲಿ ಸ್ನಾನಮಾಡಿ ಋಷಿಗಳ ದಾರಿ ಕಾಯುತ್ತ ಕುಳಿತನು. ಸೂರ್ಯನು ಮಧ್ಯಾಹ್ನದ ಬಳಿಕ ಪಡುವಣ ದಿಕ್ಕಿಗೆ ಹೊರಳಿದಾಗ ಕುತುಪ ಕಾಲವು ಬಂದಿತು. ಎಲ್ಲ ಋಷಿಗಳು ತಮ್ಮ ಆಹ್ನಿಕ ಮುಗಿಸಿಕೊಂಡು ಅಲ್ಲಿಗೆ ದಯಮಾಡಿದರು. ರಾಮಚಂದ್ರನು ಅವರೆಲ್ಲರನ್ನು ಆದರದಿಂದ ಬರಮಾಡಿಕೊಂಡನು. ಋಷಿಗಳು ಆಗಮಿಸಿದ್ದನ್ನು ನೋಡಿ ಒಮ್ಮೆಲೆ ಸೀತೆಯು ಅಲ್ಲಿಂದ ದೂರ ಸರಿದಳು. ಆಶ್ರಮದ ಹತ್ತಿರದಲ್ಲಿರುವ ಗಿಡ ಬಳ್ಳಿಗಳ ಮರೆಯಲ್ಲಿ ಹೋಗಿ ನಿಂತುಕೊಂಡಳು. ಹೀಗೆ ಒಮ್ಮೆಲೆ ಜಾನಕಿಯು ಹೊರಟು ಹೋದದ್ದು ನೋಡಿ ರಾಮನಿಗೆ ದಿಗಿಲಾಯಿತು. ಸೀತೆಯು ಒಮ್ಮೆಲೆ ಇಲ್ಲಿಂದ ಏಕೆ ಎದ್ದು ಹೋದಳು ? ಅಪರಿಚಿತರಾದ ಮುನಿಗಳನ್ನು ಕಂಡು ಬಹುಶಃ ಅವಳಿಗೆ ನಾಚಿಕೆ ಯಾಗಿರಬಹುದೆ? ಆದರೆ ಈಗ ದ್ವಿಜರಿಗೆ ಭೋಜನವನ್ನು ನಾನೊಬ್ಬನೆ ಹೇಗೆ ಬಡಿಸಲಿ ? ಈಗ ಸೀತೆಯನ್ನು ಹುಡುಕಲೆ ? ಅಥವಾ ನಾನೇ ಇವರಿಗೆ ಬಡಿಸಲೆ? ಹೀಗೆಲ್ಲ ವಿಚಾರ ಮಾಡುತ್ತ ಒಂದು ಕ್ಷಣ ದಿಗ್ಭ್ರಾಂತನಾಗಿ ನಿಂತುಕೊಂಡನು. ಮುನಿಗಳು ರಾಮನ ಕಡೆಯಿಂದ ವಿಧಿಪೂರ್ವಕವಾಗಿ ಶ್ರಾದ್ಧವನ್ನು ಮಾಡಿಸಿದರು. ಅನಂತರ ಎಲ್ಲ ದ್ವಿಜರು ಭೋಜನಕ್ಕೆ ಕುಳಿತರು. ಲಕ್ಷ್ಮಣನು ಎಲ್ಲ ದ್ವಿಜರಿಗೆ ಮಣೆಯಿಟ್ಟು, ನೀರು ಕೊಟ್ಟು, ಎಲೆ ಹಾಕಿ ಗಂಧ ಅಕ್ಷತೆ, ತೀರ್ಥ, ಫಲಮಾಲ್ಯ ಕೊಟ್ಟು ಸತ್ಕರಿಸಿ ಎಲೆಯ ಮೇಲೆ ಕೂಡಿಸಿದನು. ಸ್ವಯಂ ರಾಮನೇ ದ್ವಿಜರಿಗೆಲ್ಲ ಬಡಿಸಿದನು ನೈವೇದ್ಯ, ವೈಶ್ವದೇವ, ದ್ವಿಜರ ಭೋಜನ ಮುಂತಾದ ಶ್ರುತಿ, ಸ್ಮೃತಿ ಪುರಾಣೋಕ್ತ ವಿಧಿಪೂರ್ವಕವಾಗಿ ಶ್ರಾದ್ಧ ಕಾರ್ಯವೆಲ್ಲ ಯಥಾಸಾಂಗ ನೆರವೇರಿತು. ಪಿಂಡ ಪ್ರದಾನಾದಿ ವಿಧಿಗಳನ್ನೆಲ್ಲ ವಿದ್ಯುಕ್ತವಾಗಿ ನೆರವೇರಿಸಿ, ದ್ವಿಜ ಭೋಜನವಾದ ಬಳಿಕ ಯಥಾಶಕ್ತಿ ಎಲ್ಲರಿಗೂ ದಾನ-ದಕ್ಷಿಣೆ ಕೊಡಲಾಯಿತು. ಅವರೆಲ್ಲರನ್ನು ರಾಮನು ಆದರದಿಂದ ಬೀಳ್ಕೊಟ್ಟನು ಎಲ್ಲ ದ್ವಿಜರು ಹೊರಟು ಹೋದ ಬಳಿಕ ಸೀತೆಯು ಒಳಗೆ ಬಂದಳು. ಆಗ ರಾಮನು ಅವಳನ್ನು ಕೇಳಿದನು.

**ರಾಮ :-** ಪ್ರಿಯೆ, ಮುನಿಗಳು ಇಲ್ಲಿ ಬಂದದ್ದನ್ನು ನೋಡಿದ ಕೂಡಲೇ ನೀನು ಒಮ್ಮೆಲೆ ಎಲ್ಲಿ ಕಣ್ಮರೆಯಾದೆ, ಅದಕ್ಕೇನು ಕಾರಣ ಬೇಗ ಹೇಳು? ಇದಕ್ಕೆ ಏನಾದರೂ ಕಾರಣ ಇರಲೇಬೇಕು, ದೊಡ್ಡವರು ಮನೆಗೆ ಬಂದಾಗ ನೀನು ಕೂಡಲೇ ದೂರ ಹೋಗಲು ಅಂತಹದೇನು ಕಾರಣವಿದ್ದಿತು. ಇದನ್ನು ಮುಚ್ಚಿಡಬೇಡ ನನ್ನ ಆಣೆ ಆಗಿದೆ ಹಾಗೂ ಲಕ್ಷ್ಮಣನ ಆಣೆ.

**ಪುಲಸ್ತ್ಯ:-** ರಾಮನ ಈ ನುಡಿಗಳನ್ನು ಕೇಳಿ ಸೀತೆ ನಾಚಿ ಮುಖವನ್ನು ಕೆಳಗೆ ಮಾಡಿದಳು. ಅವಳ ಕಣ್ಣಿಂದ ಕಂಬನಿಗಳು ಹರಿಯುತ್ತಿದ್ದವು. ಅವಳು ರಾಮನನ್ನು ಕುರಿತು ಇಂತೆಂದಳು.

**ಸೀತೆ :-** ನಾಥ, ಇಲ್ಲಿ ನಾನು ನೋಡಿದ್ದನ್ನೇ ಹೇಳುತ್ತೇನೆ. ಕೇಳು, ಇದೊಂದು ಅತ್ಯಾಶ್ಚರ್ಯ ಸಂಗತಿ. ಶ್ರಾದ್ಧದಲ್ಲಿ ದಶರಥರಾಜರ ಹೆಸರನ್ನು ತೆಗೆದು ಕೊಂಡಿರಷ್ಟೇ! ನೀವು ಹೆಸರು ಹೇಳಿದ ಕೂಡಲೆ ನಮ್ಮ ಮಾವಂದಿರಾದ ಮಹಾರಾಜರು ಬಂದುಬಿಟ್ಟರು. ಅವರಂತೆ ಇವರು ಇನ್ನೂ ಇಬ್ಬರು ಪುರುಷರು ಆಗಮಿಸಿದರು. ಅವರು ಬಂಗಾರದ ಆಭರಣಗಳನ್ನು ಹಾಕಿಕೊಂಡು. ಇಲ್ಲಿ ಬಂದ ದ್ವಿಜರ ದೇಹದಲ್ಲಿಯೇ ಕಂಡುಬಂದರು. ದ್ವಿಜರ ಸ್ಥಾನದಲ್ಲಿ ಕುಳಿತುಕೊಂಡ ಮಾವ, ಅವರ ತಂದೆ ಹಾಗೂ ಅವರ ತಂದೆ ಈ ಎಲ್ಲ ಪಿತೃಗಳನ್ನು ಕಂಡು ನನಗೆ ನಾಚಿಕೆ ಆಯಿತು. ಆ ಹಿರಿಯರ ಮುಂದೆ ನಿಲ್ಲುವದು ಹೇಗೆ ಎಂದು ನಾನು ಅಲ್ಲಿಂದ ಮರೆಯಾದೆನು. ನಾನು ಹೋದದ್ದರಿಂದ ದ್ವಿಜರಿಗೆಲ್ಲ ನೀವೇ ಬಡಿಸಬೇಕಾಯಿತು. ಶ್ರಾದ್ಧ ಕಾರ್ಯವೇನೋ ಯಥಾಸಾಂಗವಾಗಿ ಮುಗಿಯಿತು. ಆದರೆ ಎಂದಾದರೂ ಒಂದು ದಿನ ಬಂದ ಮಾವಂದಿರ ಎದುರು ಹಾಗೂ ತಾತಮುತ್ತಾರ ಎದುರು ನಾನು ಈ ತುಂಡು ನಾರು ಬಟ್ಟೆ ಉಟ್ಟು ನಿಲ್ಲುವದು ಹೇಗೆ? ಆ ರಾಜಶ್ರೇಷ್ಠರ ಎದುರು ಓಡಾಡುವದು ಹೇಗೆ ಎಂದು ಸಂಕೋಚವಾಗಿ ಇಲ್ಲಿಂದ ಕಾಲ್ದೆಗೆದೆ. ನಾನು ಇದನ್ನು ನಿಮ್ಮೆದುರು ನಿಜವನ್ನೇ ಹೇಳುತ್ತಿದ್ದೇನೆ. ನನ್ನ ರೇಶಿಮೆಯ ಬಟ್ಟೆಗಳನ್ನೆಲ್ಲ ಕೈಕೇಯಿಯು ಕಿತ್ತುಕೊಂಡಳು. ಅಂದಿನಿಂದ ನಾನು ಈ ರಾಜೈಶ್ವರ್ಯಕ್ಕೆ ಧಿಕ್ಕಾರವಿರಲಿ. ಭಾಗ್ಯಲಕ್ಷ್ಮಿಯು ಅತ್ಯಂತ ಚಂಚಲವೆಂದು ತಿಳಿದಿದ್ದೇನೆ. ಆದರೆ ನಿಮ್ಮ ಮುಂದೆ ಒಂದು ಮಾತನ್ನು ಆಡುವದಿಲ್ಲ. ಅದರಿಂದ ನಿಮಗೆ ದುಃಖವಾಗುವದೆಂದು ಬಗೆದು ನನ್ನ ದುಃಖವನ್ನು ನೆನೆದು ಮೌನದಿಂದ ಇರುತ್ತೇನೆ.

ನಾನು ನಿನ್ನ ಪಾದಗಳ ಆಣೆಮಾಡಿ ಹೇಳುತ್ತೇನೆ. ನಾನು ತಾಯಿಯನ್ನಾಗಲಿ, ತಂದೆಯನ್ನಾಗಿ ನೆನೆಸುವುದಿಲ್ಲ. ಆದರೆ ಈ ವನವಾಸವು ಎಂದು ಮುಗಿದೀತು ಎಂದು ಹಗಲಿರುಳೂ ಚಿಂತೆ ಮಾಡುತ್ತಿದ್ದೇನೆ. ಯಾರ ದಾಸರ ದಾಸರೂ ಕೂಡ ಉಣ್ಣಲಿಕ್ಕಿಲ್ಲವೊ ಅಂತಹ ಕೆಟ್ಟ ಆಹಾರವನ್ನು ನಾನು ನನ್ನ ಕೈಯಿಂದ ನಿನಗೆ ಹೇಗೆ ಕೊಡಲಿ ? ಸ್ವರ್ಗವಾಸಿಗಳಾದ ದಶರಥ ಮಹಾರಾಜರ ವಚನವನ್ನು ಪರಿಪಾಲನಮಾಡಿ, ನೀನು ಅವರನ್ನು ಅಸತ್ಯದಿಂದ ಪಾರುಮಾಡಿರುವೆ. ಇಂತಹ ಪುಣ್ಯ ಕ್ಷೇತ್ರದಲ್ಲಿ ಯೋಗ್ಯರಾದ ಬ್ರಹ್ಮರ್ಷಿಗಳಿಗೆ ಊಟಕ್ಕೆ ಹಾಕಿ ಅವರನ್ನು ಉದ್ಧಾರ ಮಾಡಿರುವೆ. ದಿವ್ಯ ಲೋಕದಲ್ಲಿರುವ ಅವರಿಗೆ ಸರ್ವಾಲಂಕಾರಭೂಷಿತಗಳಾಗಿ ಅರಮನೆಯಲ್ಲಿರ ಬೇಕಾದ ಸೊಸೆಯು ಇಂದು ಬೆವರು ಹತ್ತಿ ಕೊಳಕಾದ, ನಾರುಬಟ್ಟೆ ಉಟ್ಟುಕೊಂಡು, ದರಿದ್ರ ಅವಸ್ಥೆಯಲ್ಲಿ ನಿಂತದ್ದನ್ನು ನೋಡಿ ಬಹಳ ದುಃಖವಾಗುಬಹುದು. ಒಂದು ದಿನ ಮಾತ್ರ ಅವರು ಭೂಲೋಕಕ್ಕೆ

ಬಂದಾಗ, ನನ್ನ ದೇಹವನ್ನು ಪೂರ್ತಿ ಮುಚ್ಚಲಾಗದ, ಮೈಯನ್ನು ಚುಚ್ಚುವ ಈ ನಾರು ಬಟ್ಟೆ ಉಟ್ಟು ದರಿದ್ರ ವೇಷದಲ್ಲಿ ಇದೊಂದು ಸಲ ಅವರ ಕಣ್ಣಿಗೆ ಬಿದ್ದು ವನವಾಸದಿಂದ ಬಾಡಿ ಕಂಗಾಲಾದ ನನ್ನ ಮುಖವನ್ನು ತೋರಿಸಿ, ಅವರೆಲ್ಲರೂ ಇದನ್ನು ನೆನೆದು, ದುಃಖಪಡುವಂತಾಗಬಾರದೆಂದು ವಿಚಾರಿಸಿ ನಾನು ಇಲ್ಲಿಂದ ಕಣ್ಮರೆಯಾಗಿ ದೂರ ಹೋಗಿದ್ದೆ. ಇದು ಸತ್ಯ, ನಾನು ನಿನ್ನ ಪ್ರಾಣಕ್ಕಿಂತ ಪ್ರಿಯನಾದ ನಾಥ. ನಿನ್ನ ಮುಂದೆ ನಾನು ಯಾವುದನ್ನೂ ಬಚ್ಚಿಡುವುದಿಲ್ಲ. ನಿನ್ನೆದುರು ನಾನು ನಿಜವನ್ನೇ ನುಡಿದಿದ್ದೇನೆ.

**ಪುಲಸ್ತ್ಯ:-** ಸೀತೆಯ ಈ ಮಾತುಗಳನ್ನು ಕೇಳಿ, ರಾಮನಿಗೆ ಅವಳ ಮೇಲೆ ಪ್ರೀತಿಯೇ ಉಂಟಾಯಿತು. ಅವಳು ಹೇಳಿದ್ದೆಲ್ಲ ನಿಜವೆಂದು ಅನಿಸಿತು. ಅವನು ಅವಳನ್ನು ಆಲಿಂಗಿಸಿ ಸಂತೈಸಿದನು. ಬ್ರಾಹ್ಮಣಶೇಷವನ್ನು ಲಕ್ಷ್ಮಣನೂ ತಾನೂ ಇಬ್ಬರೂ ಕೂಡಿ ಊಟ ಮಾಡಿದರು. ಅವರಿಬ್ಬರೂ ಅಣ್ಣತಮ್ಮಂದಿರಿಗೆ ಬಡಿಸಿ ಊಟ ಹಾಕಿದನಂತರ ಸೀತೆಯೂ ತಾನೂ ಭೋಜನ ಮಾಡಿದಳು. ಅಂದು ರಾತ್ರಿ ಅಲ್ಲಿಯೇ ತಂಗಿದ್ದರು. ಮರುದಿನ ಬೆಳಗಾಯಿತು, ಅಲ್ಲಿಂದ ಹೊರಡ ಬೇಕೆಂದು ಅವರೆಲ್ಲರೂ ನಿಶ್ಚಯ ಮಾಡಿದರು. ಪಶ್ಚಿಮಾಭಿಮುಖರಾಗಿ ಎಂಟು ಕ್ರೋಶ ನಡೆದರು. ಪುಷ್ಕರ ತೀರ್ಥದ ಪೂರ್ವಭಾಗದಲ್ಲಿ ರಾಮನಿದ್ದನು. ಆಗ ದೇವದೂತ ಒಂದು ಮಾತನ್ನು ಹೇಳಿದನು.

**ದೇವದೂತ:-** ರಾಮನೆ, ನಿನಗೆ ಕಲ್ಯಾಣವಾಗಲಿ, ಈ ತೀರ್ಥವು ಅತ್ಯಂತ ದುರ್ಲಭ. ನೀನು ಇಲ್ಲಿದ್ದು ಪುಣ್ಯಕಾರ್ಯ ಮಾಡು, ದೇವಕಾರ್ಯ ನೆರವೇರಿಸು ದೇವತೆಗಳ ವೈರಿಗಳನ್ನು ಸಂಹರಿಸು' ಅದನ್ನು ಕೇಳಿ ರಾಮನಿಗೆ ಸಂತೋಷವಾಯಿತು ಲಕ್ಷ್ಮಣನಿಗೆ ನುಡಿದನು

**ರಾಮ:-** ಲಕ್ಷ್ಮಣ, ದೇವತೆಗಳಲ್ಲಿ ಹಿರಿಯನಾದ ಬ್ರಹ್ಮದೇವರು ಇಂದು ನನ್ನ ಮೇಲೆ ಅನುಗ್ರಹಿಸಿದ್ದಾರೆ. ಆದ್ದರಿಂದ ನಾವು ಇಲ್ಲಿಯೇ ಆಶ್ರಮ ಕಟ್ಟಿಕೊಂಡು ಇರೋಣ. ಇಲ್ಲಿ ಇದ್ದು ಕಾಯ ಶೋಧನ ವ್ರತವನ್ನು ಆಚರಿಸಲು ನನಗೆ ಅಪೇಕ್ಷೆ ಆಗಿದೆ.

**ಪುಲಸ್ತ್ಯ:-** ರಾಮನ ಈ ಸೂಚನೆಗೆ ಲಕ್ಷ್ಮಣನು ಒಪ್ಪಿಗೆ ಇತ್ತನು. ಅದರಂತೆ ಅವರು ಒಂದು ತಿಂಗಳ ಕಾಲವಿದ್ದರು.ಪಿಂಡಪ್ರದಾನ, ಶ್ರಾದ್ಧಾದಿಗಳನ್ನು ಮಾಡಿ ದಾನ ದಕ್ಷಿಣೆಗಳನ್ನಿತ್ತು, ಮೂರು ಪುಷ್ಕರ ತೀರ್ಥಗಳಲ್ಲಿ ಪಿತೃಗಳನ್ನು ಕುರಿತು ವಿಧಿಪೂರ್ವಕವಾಗಿ ತರ್ಪಣ ಮಾಡಿದರು. ಕನಕಾ, ಸುಪ್ರಭಾ ನಂದಾ, ಪ್ರಾಚೀ, ಸರಸ್ವತಿ- ಈ ಐದು ಉಪನದಿಗಳಿಂದ ಒಡಗೂಡಿದ ಸರಸ್ವತಿಯ ಪಿತೃಗಳಿಗೆಲ್ಲ ತೃಪ್ತಿಯನ್ನು ಉಂಟು ಮಾಡುವಳು. ದೈನಂದಿನ ತರ್ಪಣ ಹಾಗೂ ಪಿತೃ ತರ್ಪಣಗಳನ್ನು ದೇವತರ್ಪಣ ಪೂರ್ವಕವಾಗಿ ಮಾಡಿ, ಸಂತೋಷಪಡಿಸಿ ರಾಮನು ಲಕ್ಷ್ಮಣನನ್ನು ಕುರಿತು ಇಂತು ನುಡಿದನು.

**ರಾಮ:-** ಲಕ್ಷ್ಮಣ ಬೇಗ ಬಾ. ಪುಷ್ಕರ ತೀರ್ಥದಿಂದ ನೀರನ್ನು ತೆಗೆದುಕೊಂಡು ಬಾ. ಕಾಲು ತೊಳೆದುಕೊಂಡು ಬೇಗನೇ ಮಲಗಿಕೊ ಬೆಳಗಾದ ಕೂಡಲೇ ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡೋಣ.

**ಲಕ್ಷ್ಮಣ :-** ರಾಮನೆ ನಾನು ನೀರು ತರುವದಿಲ್ಲ. ಬೇಕಾದರೆ ನಿನ್ನ ಹೆಂಡತಿಯಾದ ಸೀತೆಯು ನೀರನ್ನು ತರಲಿ. ನಾನು ಸರ್ವಕಾಲವು ನಿನ್ನ ದಾಸನಾಗಿ ಸೇವೆಯನ್ನು ಮಾಡಿರುವೆ. ಈ ನಿನ್ನ ಹೆಂಡತಿಗೆ ಏನಾಗಿದೆ? ಅವಳು ನನಗಿಂತಲೂ ಅತ್ಯಂತ ಪುಷ್ಟಳಾಗಿದ್ದಾಳೆ. ಇಷ್ಟು ಕೆಲಸಮಾಡದಿದ್ದರೆ, ನೀನು ಅವಳನ್ನು ಕಟ್ಟಿಕೊಂಡದ್ದೇಕೆ? ನೀನು

ಸತ್ತ ಬಳಿಕ ಇವಳೇನ ನಿನ್ನ ಜೊತೆಗೆ ಬರುವಳೇ? ನೀನು ಯಾವಾಗಲು ಪತ್ನೀ ಪಕ್ಷಪಾತಿ. ಅವಳಿಗೆ ಸಂತೋಷವಾಗುವಂತೆ ಅವಳನ್ನು ರಕ್ಷಣೆ ಮಾಡುವೆ. ಕಷ್ಟದ ಕೆಲಸ ಬಂದಾಗ ಮಾತ್ರ ನನ್ನನ್ನು ದುಡಿಸುವೆ. ನನ್ನನ್ನು ಹೀಗೆ ಒಂದೇ ಸಮನೆ ದುಃಖ ಪಡಿಸಿದರೆ ನಿನಗೆ ಪರಲೋಕದಲ್ಲಿ ಸುಖವಾಗಲಾರದು. ನಿನ್ನ ಸಲುವಾಗಿ ನಾನು ಯಾವಾಗಲೂ ಹಸಿವೆ ನೀರಡಿಕೆಗಳನ್ನು ಸಹನ ಮಾಡುತ್ತೇನೆ. ಅಣ್ಣ, ನಿನಗೆ ಇನ್ನೊಂದು ವಿಷಯ ಹೇಳುತ್ತೇನೆ ಕೇಳು. ಮರಣ ಹೊಂದಿದವರನ್ನು ಅನುಸರಿಸಿ ಯಾರೂ ಹೋಗುವದಿಲ್ಲ. ಮಡದಿ, ಮಕ್ಕಳು ಐಶ್ವರ್ಯ ಎಲ್ಲವೂ ಇಲ್ಲೇ ಉಳಿಯುವದು. ನಿನ್ನ ತಂದೆಯಾದ ದಶರಥನು ಕೈಕೇಯಿಯನ್ನು ಸಂತೋಷಪಡಿಸಲು ನನ್ನನ್ನು ನಿನ್ನನ್ನು ವನಕ್ಕೆ ಅಟ್ಟಿ ಸತ್ತುಹೋದನು. ಆದರೆ ನೆಚ್ಚಿನ ಮಡದಿ ಕೈಕೇಯಿ ಅಥವಾ ಆ ರಾಜೈಶ್ವರ್ಯವು ಅವನ ಸಂಗಡ ಹೋಯಿತೆ? ಪರಲೋಕಕ್ಕೆ ಹೋದವನು ಅವನೊಬ್ಬನೇ, ಆ ಕೈಕೇಯಿಯು ಉಳಿದ ಬಾಂಧವರು. ರಾಜ್ಯವು ಎಲ್ಲವೂ ಇಲ್ಲಿಯೇ ಉಳಿದಿದೆ. ನೀನು ಸಾಯುವಾಗ ನನ್ನನ್ನೂ ಕೂಡ ಸೆಳೆದೊಯ್ಯುವ ಲಕ್ಷಣ ಕಾಣುತ್ತದೆ. ಯಾರೂ ಸಂಗಡ ಬರುವದಿಲ್ಲ ಎನ್ನುವದನ್ನು ತಿಳಿದುಕೊ ಈ ಹೆಂಡತಿಯನ್ನು ತೆಗೆದುಕೊಂಡು ಏನು ಮಾಡುವೆ?''

ಲಕ್ಷ್ಮಣನ ಈ ಮಾತನ್ನು ಕೇಳಿ ರಾಮನಿಗೆ ಆಶ್ಚರ್ಯವಾಯಿತು ಅವನು ಹೀಗೆ ಎಂದೂ ವರಟಾಗಿ ಮಾತನಾಡಿದ್ದನ್ನು ಕೇಳಿರಲಿಲ್ಲ. ಇದರಿಂದ ರಾಮನಿಗೆ ಬಹಳ ದುಃಖವಾಯಿತು. ಸೀತೆಯ ಮನಸ್ಸಿಗೆ ತುಂಬ ನೋವಾಯಿತು. ಸೀತೆ ಅಂದು ಲಕ್ಷ್ಮಣ ಹೇಳಿದ್ದೆಲ್ಲವನ್ನು ಕೇಳಿದಳು, ಎಲ್ಲರೂ ಸ್ನಾನಮಾಡಿ ಪುಷ್ಕರ ತೀರ್ಥದಲ್ಲಿ ಆಹ್ನಿಕಮುಗಿಸಿ, ಭೋಜನ ಮಾಡಿದರು. ರಾತ್ರಿ ಅಲ್ಲಿಯೇ ಮಲಗಿ ಮರುದಿನ ಅಲ್ಲಿಂದ ಹೊರಡಬೇಕೆಂದು ನಿಶ್ಚಯಿಸಿದರು. ಮರುದಿನ ಬೆಳಗಾಯಿತು ರುಮನು ಲಕ್ಷ್ಮಣನನ್ನು ಎಬ್ಬಿಸಿದನು.

**ರಾಮ:-** ಸುಮಿತ್ರೆಯ ಪುತ್ರನೆ,ಏಳು, ಇತ್ತ ಬಾ, ಇಲ್ಲಿಂದ ನಾವು ದಕ್ಷಿಣದಿಕ್ಕಿಗೆ ಪ್ರಯಾಣ ಮಾಡೋಣ.

**ಲಕ್ಷ್ಮಣ:-** ನಾನು ನಿಮ್ಮೊಡನೆ ಏನಾದರೂ ಬರುವದಿಲ್ಲ. ನೀನು ಈ ನಿನ್ನ ಹೆಂಡತಿಯೊಂದಿಗೆ ಬೇಕಾದಲ್ಲಿಹೋಗು ನಾನು ಬೇರೆ ಒಂದು ವನಕ್ಕೆ ಹೋಗುತ್ತೇನೆ ಅಯೋಧ್ಯೆಗೂ ಬರುವದಿಲ್ಲ. ಹದಿನಾಲ್ಕು ವರ್ಷ ಇಲ್ಲಿಯೇ ವನದಲ್ಲಿಯೇ ನಾನು ಇರುತ್ತೇನೆ. ವನವಾಸದ ಅವಧಿ ಮುಗಿದಬಳಿದ ನನ್ನನ್ನು ಬಿಟ್ಟು ಅಯೋಧ್ಯೆಯನ್ನು ಪ್ರವೇಶಿಸಬಾರದು ಎಂದು ನಿನ್ನ ಇಚ್ಛೆ ಇದ್ದರೆ. ನೀನು ಮತ್ತೇ ಇದೆ ದಾರಿಯಿಂದ ಬಾ. ನಾನು ಅಲ್ಲಿಯವರೆಗೆ ಬದುಕಿ ಇದ್ದರೆ. ತಂದೆಯ ರಾಜಧಾನಿಗೆ ಮರಳಿ ಬರುವೆನು. ಇಲ್ಲದಿದ್ದರೆ ತಪಸ್ವಿಯಾಗಿಯಾದರೂ ಇರುತ್ತೇನೆ. ನನ್ನನ್ನು ಕಟ್ಟಿಕೊಂಡು ನಿನಗೇನಾಗಬೇಕಾಗಿದೆ? ನೀನು ಮುಂದೆ ಪ್ರಯಾಣಮಾಡು. ನಿನ್ನ ಮಾರ್ಗವು ಸುಗಮ ವಾಗಲಿ. ದಾರಿಯಲ್ಲಿ ಯಾವ ಎದುರಾಳಿಗಳಿಗೂ ನಿನಗೆ ಎದುರಾಗದಿರಲಿ. ನೀನು ಮಡದಿ ಯೊಂದಿಗೆ ಮರಳಿ ಬಂದದ್ದನ್ನು ನಾನು ನೋಡುವಂತಾಗಲಿ. ನೀನು ತಿರುಗಿ ಹೋದಬಳಿಕ ಹೇಗೂ ಭರತ ಶತ್ರುಘ್ನರು ಅಯೋಧ್ಯೆಯಲ್ಲಿ ನಿನ್ನ ಆಜ್ಞಾಪಾಲನೆಗೆ ಸಿದ್ಧರಾಗಿ ಇದ್ದಾರೆ. ಅವರ ಸಹಾಯದಿಂದ ವಂಶ ಪರಂಪರೆಯಿಂದ ಬಂದ ಸಾಮ್ರಾಜ್ಯವಾಳು. ನಾನು ಮಾತ್ರ ನಿನಗೆ ಪ್ರತಿಕೂಲನಾಗಿದ್ದೇನೆ. ನೀನು ಹೇಳಿದಂತೆ ನಾನು ಕೇಳಲಾರೆ, ಆದರಲ್ಲೂ

ಈ ವನವಾಸದಲ್ಲಿ ಹಗಲಿರುಳು ನಿನ್ನ ಚಾಕರಿಮಾಡಲು ನನ್ನಿಂದಾಗದು. ನಿನ್ನ ಸೇವೆಯನ್ನು ನಾನು ಮಾಡಲಾರೆ. ನಿಮ್ಮ ಇಷ್ಟಬಂದಂತೆ ಪ್ರಯಾಣಮಾಡಿರಿ

**ರಾಮ:-** ಲಕ್ಷ್ಮಣ, ನೀನು ಒಮ್ಮೆಲೇ ಹೀಗೆ ಏಕೆ ಬದಲಿಸಿರುವೆ? ಅಯೋಧ್ಯೆಯಲ್ಲಿ ನನ್ನ ಜೊತೆಗೆ ಹದಿನಾಲ್ಕುವರ್ಷ ವನವಾಸ ಅನುಭವಿಸುತ್ತೇನೆ ಎಂದು ಸ್ವಸಂತೋಷದಿಂದ ಹೊರಟು ಬಂದಿರುವೆಯಷ್ಟೇ? ನೀನು ಕಾಡಿಗೆ ಬರುವದು ಬೇಡವೆಂದು ನಾನು ಹೇಳಿದಾಗ ನೀನು ಎಷ್ಟು ಚಂಡಿಹಿಡಿದು ಬಂದೆಯಲ್ಲ! ಅಂದು ನೀನು ಆಡಿದ ಮಾತು ನಿನಗೆ ನೆನಪಿದೆಯೆ? ಪುರುಷ ಶ್ರೇಷ್ಠ ಅಣ್ಣ, ನಿನ್ನನ್ನು ಬಿಟ್ಟು, ನಾನು ಸ್ವರ್ಗದಲ್ಲಿಯೂ ಇರಲಾರೆ, ನಿನಗಾದ ಗತಿಯೇ ನನಗೂ ಆಗಲಿ. ನನ್ನ ಮೇಲೆ ಅನುಗ್ರಹಮಾಡು. ಹೇಗಾದರೂಮಾಡಿ ನನ್ನನ್ನು ನಿನ್ನ ಜೊತೆಗೆ ಕಾಡಿಗೆ ಕರೆದುಕೊಂಡು ಹೋಗು. ನನ್ನನ್ನು ಬಿಟ್ಟು ಹೋಗಬೇಡ? ಎಂದು ಮುಂತಾಗಿ ಹೇಳಿಕೊಂಡು, ಬೇಡವೆಂದರೂ ಕೇಳದೆ, ನನ್ನೊಡನೆ ಕಾಡಿಗೆ ಬಂದಿರುವಿ ಈಗ ಅರ್ಧ ದಾರಿಯಲ್ಲಿ ನಾನು ಮುಂದೆ ಬರುವದಿಲ್ಲವೆಂದು ಹಟಹಿಡಿದು ಇಲ್ಲಿಯೇ ಏಕೆ ಉಳಿದುಕೊಳ್ಳುವಿ? ಒಬ್ಬನೇ ಕಾಡಿನಲ್ಲಿ ಹೇಗಿರುವೆ?

**ಲಕ್ಷ್ಮಣ :-** ಏನಾದರೂ ನಾನು ಇನ್ನು ಮುಂದೆ ನಿನ್ನ ಜೊತೆಗೆ ವನ ವನ ತಿರುಗಲಾರೆ.

**ರಾಮ:-** ಲಕ್ಷ್ಮಣ, ಕಾಡಿನಲ್ಲಿ ನಾನು ಒಬ್ಬನೆ ಹೇಗೆ ಹೋಗಲಿ? ಮೇಲೆ ಹೆಂಗಸಾದ ಈ ಸೀತೆಯೊಬ್ಬಳು ನನ್ನ ಜೊತೆಗೆ ಇರುವಳು ಆದ್ದರಿಂದ ನೀನೂ ಹಿಂಬಾಲಿಸಿ ಬಾರಪ್ಪಾ.

ರಾಮನ ಈ ದೀನ ವಚನವನ್ನು ಕೇಳಿ ಲಕ್ಷ್ಮಣನು ಒಪ್ಪಿ ಅವನನ್ನು ಹಿಂಬಾಲಿಸಿದನು. ಅವರು ಮೂರು ಮರ್ಯಾದಾ ಪರ್ವತದವರೆಗೆ ಬಂದರು. ಅಲ್ಲಿ ಅಜಗಂಧ ಎಂಬ ಹೆಸರಿನ ಮಹಾದೇವರ ಮೂರ್ತಿಯನ್ನು ನೋಡಿದನು, ಭಕ್ತಿಯಿಂದ ಕೈಮುಗಿದು, ಮಹಾದೇವನನ್ನು ಭಕ್ತಿಯಿಂದ ಸ್ತೋತ್ರ ಮಾಡಿದನು.

॥ ಶ್ರೀ ರಾಮ ಉವಾಚ ॥

ಯಂ ಯೋಗಿನೋ ವಿಗತ ಮೋಹ ತಮೋರಜಸ್ಕಾ
ಭಕ್ತ್ಯೈಕತಾನ ಮನಸೋ ವಿನವೃತ್ತಕಾಮಾಃ ।
ಧ್ಯಾಯಂತಿ ನಿಶ್ಚಲಧೀಯೋಽಮಿತ ದಿವ್ಯ ಭಾವಂ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥

ತಮಸ್ಸು ಮೋಹ ರಜಸ್ಸುಗಳನ್ನು ಬಿಟ್ಟಿರುವ ಯೋಗಿಗಳು ಭಕ್ತಿಯಿಂದ ಕೂಡಿ ಆಸೆಯನ್ನು ಬಿಟ್ಟು ನಿಶ್ಚಲ ಮನಸ್ಸಿನಿಂದ ಯಾವ ಉತ್ತಮವಾದ ಪ್ರಭುವನ್ನು ನಮಸ್ಕರಿಸುತ್ತಾರೋ ಅಂತಹ ಶಂಕರನನ್ನು ಮೊರೆಹೋಗುತ್ತೇನೆ

ಯಶ್ಚೇಂದು ಖಂಡಮಮಲಂ ವಿಲಸನ್ಮಯೂಖಂ
ಬುಧ್ವಾ ಸದಾ ಪ್ರಿಯತಮಂ ಶಿರಸಾ ಬಿಭರ್ತಿ ।
ಯಶ್ಚಾರ್ಧ ದೇಹಮದದಾದ್ಗಿರಿರಾಜ ಪುತ್ರ್ಯೈ
ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥

ಕೊಳೆಯಿಲ್ಲದ ಕಾಂತಿಮತ್ತಾದ ಚಂದ್ರನ ಕಲೆಯನ್ನು ತಲೆಯಲ್ಲಿ ಧರಿಸಿರುವ ಅರ್ಧ ದೇಹವನ್ನೇ ಗೌರಿಗೆ ಕೊಟ್ಟಿರುವ ಆ ಶಂಕರನನ್ನು ಶರಣು ಹೊಂದುತ್ತೇನೆ.

**ಯೋಽಯಂ ಸಕೃದ್ವಿಮಲಚಾರುವಿಲೋಲತೋಯಾಂ ।**
**ಗಂಗಾ ಮಹೋರ್ಮಿವಿಷಮಾಂ ಗಗನಾತ್ಪತಂತೀಂ ।**
**ಮೂರ್ಧ್ನಾಽಽದದೇ ಸ್ರಜಮಿವ ಪ್ರತಿಲೋಲ ಪುಷ್ಪಾಂ**
**ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥**

ಮನೋಹರವಾಗಿಯೂ, ನಿರ್ಮಲವಾಗಿಯೂ, ಚಂಚಲವಾದ ನೀರುಳ್ಳದ್ದಾಗಿಯೂ ದೊಡ್ಡ ದೊಡ್ಡ ಅಲೆಗಳಿಂದ ಕೂಡಿಯೂ ಇರುವ ಆಕಾಶದಿಂದ ಕೆಳಕ್ಕೆ ಬೀಳುತ್ತಿರುವ ಗಂಗೆಯನ್ನು ಯಾವ ಸ್ವಾಮಿಯು ಚಂಚಲವಾದ ಹೂವುಳ್ಳ ಮಾಲೆಯಂತೆ ತಲೆಯಲ್ಲಿ ಧರಿಸಿದನೋ ಅಂತಹ ಸ್ವಾಮಿಯನ್ನು ಶರಣು ಹೊಂದುತ್ತೇನೆ.

**ಕೈಲಾಸ ಶೈಲ ಶಿಖರಂ ಪ್ರತಿಕಂಪಮಾನಂ**
**ಕೈಲಾಸ ಶೃಂಗಸದೃಶೇನ ದಶಾನನೇನ ।**
**ಯಃ ಪಾದಪದ್ಮ ಪರಿವಾದನ ಮಾದಧಾನ**
**ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥**

ಕೈಲಾಸ ಪರ್ವತದ ಶಿಖರದಂತೆ ಇರುವ ದಶಾನನಾದ ರಾವಣನು ಕೈಲಾಸ ಪರ್ವತದ ಶಿಖರವನ್ನು ಅಲ್ಲಾಡಿಸುತ್ತಿರಲು ಆ ಶಿಖರವನ್ನು ಹಾಗೆಯೇ ತುಳಿದು ಕೊಂಡಿದ್ದ ಶಂಕರನನ್ನು ಶರಣು ಹೊಂದುತ್ತೇನೆ.

**ಯೇನಾಸಕೃದ್ದಿತಿ ಸುತಾಃ ಸಮರೇ ನಿರಸ್ತಾ**
**ವಿದ್ಯಾಧರೋರಗಗಣಾಶ್ಚ ವರೈಸ್ಸಮಗ್ರಾಃ**
**ಸಂಯೋಜಿತಾ ಮುನಿವರಾಃ ಫಲ ಮೂಲ ಭಕ್ಷಾ**
**ಸ್ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥**

ದೈತ್ಯರೆಲ್ಲರನ್ನು ಯುದ್ಧದಲ್ಲಿ ಬಡಿದೋಡಿಸಿ, ವಿದ್ಯಾಧರರು, ಉರಗುರು, ಮುನಿಗಳು ಇವರಿಗೆ ವರವನ್ನು ಕೊಟ್ಟ ಸ್ವಾಮಿಯಾದ ಶಂಕರನನ್ನು ಶರಣು ಹೊಂದುತ್ತೇನೆ

**ದಗ್ಧ್ವಾಧ್ವರಂ ಚ ನಯನೇ ಚ ತಥಾ ಭಗಸ್ಯ**
**ಪೂಷ್ಣಸ್ತಥಾ ದಶನಪಙ್ತ್ ಮಪಾತಯಚ್ಚ ।**
**ತಸ್ತಂಭ ಯಃ ಕುಲಿಶಯುಕ್ತಮಹೇಂದ್ರ ಹಸ್ತಂ**
**ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥**

ಯಾಗವನ್ನು ನಾಶಮಾಡಿ ಭಗನ ಕಣ್ಣುಗಳನ್ನು, ಪೂಷ್ಣನ ಹಲ್ಲುಗಳನ್ನು ನಾಶಮಾಡಿ, ಮಹೇಂದ್ರನು ವಜ್ರಾಯುಧವನ್ನು ಎತ್ತಿಕೊಂಡು ಹೊಡೆಯುವದಕ್ಕೆ ಬರಲು ಆ ಕೈಯನ್ನು ಹಾಗೆಯೇ ನಿಲ್ಲಿಸಿದ ಶಂಕರನನ್ನು ನಾನು ಶರಣು ಹೊಂದುತ್ತೇನೆ.

**ಏನಸ್ಕೃತೋಽಪಿ ವಿಷಯೇಷ್ವಪಿ ಸಕ್ತಭಾವಾ**
**ಜ್ಞಾನಾನ್ವಯ ಶ್ರುತ ಗುಣೈರಪಿ ನೈವ ಯುಕ್ತಾಃ ।**
**ಯಂ ಸಂಶ್ರಿತಾಃ ಸುಖಭುಜಃ ಪುರುಷಾ ಭವಂತಿ**
**ತಂ ಶಂಕರಂ ಶರಣದಂ ಶರಣಂ ವ್ರಜಾಮಿ ।**

ಪಾಪಿಗಳಾದರೂ, ವಿಷಯ ಸುಖದಲ್ಲಿ ಆಸಕ್ತರಾಗಿದ್ದರೂ, ಜ್ಞಾನ, ವಂಶ ಪ್ರಸಿದ್ಧಿ, ಗುಣ, ಇಲ್ಲದಿದ್ದರೂ, ಯಾವ ಸ್ವಾಮಿಯನ್ನಾಶ್ರಯಿಸಿ ಮನುಷ್ಯರು ಸುಖವನ್ನು ಹೊಂದುತ್ತಾರೆಯೋ ಆ ಸ್ವಾಮಿಯನ್ನು ಶರಣು ಹೊಂದುತ್ತೇನೆ.

**ಅತ್ರಿ ಪ್ರಸೂತಿ ರವಿ ಕೋಟಿ ಸಮಾನ ತೇಜಾಃ**
**ಸಂತ್ರಾಸನಂ ವಿಬುಧ ದಾನವ ಸತ್ತ ಮಾನಾಂ ।**
**ಯಃ ಕಾಲಕೂಟಮಪಿಬತ್ಸಮುದೀರ್ಣವೇಗಂ**
**ತಂ ಶಂಕರಂ ಶರಣದಂ ಶರಣಂ ವ್ರಜಾಮಿ ॥**

ಚಂದ್ರ ಮತ್ತು ಸೂರ್ಯರ ತೇಜಸ್ಸುಳ್ಳ, ದೇವ ದೇವನಾದ ಯಾವ ಈಶ್ವರನು ದೇವದಾನವರಿಗೆ ಹೆದರಿಕೆಯನ್ನುಂಟು ಮಾಡಿದ ಬಹು ವೇಗವುಳ್ಳ ಕಾಲಕೂಟ ವಿಷವನ್ನು ಕುಡಿದನಷ್ಟೆ? ಅಂತಹ ಸ್ವಾಮಿಯಾದ, ಮೊರೆ ಹೊಕ್ಕವರನ್ನು ರಕ್ಷಿಸುವ ಶಂಕರನನ್ನು ಶರಣು ಹೋಗುತ್ತೇನೆ.

**ಬ್ರಹ್ಮೇಂದ್ರ ರುದ್ರಮರುತಾಂ ಚ ಸ ಷಣ್ಮುಖಾನಾಂ**
**ಯೋಽದಾದ್ವರಾಂಶ್ಚ ಬಹುಶೋ ಭಗವಾನ್ಮಹೇಶಃ**
**ನಂದಿಂ ಚ ಮೃತ್ಯುವದನಾತ್ಪುನರುಜ್ಜಹಾರ**
**ತಂ ಶಂಕರಂ ಶರಣದಂ ಶರಣಂ ವ್ರಜಾಮಿ**

ಬ್ರಹ್ಮ, ಇಂದ್ರ, ರುದ್ರ, ದೇವತೆಗಳು ಇವರಿಗೆ ಅನೇಕ ವರಗಳನ್ನು ಕೊಟ್ಟ ನಂದಿಯನ್ನು ಮೃತ್ಯುವಿನಿಂದ ಪಾರುಮಾಡಿದ ಶಂಕರನನ್ನು ಶರಣುಹೋಗುತ್ತೇನೆ.

**ಆರಾಧಿತಸ್ಸುತಪಸಾ ಹಿಮವನ್ನಿಕುಂಜೇ ।**
**ಧೂಮವ್ರತೇನ ಮನಸಾಪಿ ಪರೈರಗಮ್ಯಃ**
**ಸಂಜೀವಿನೀಂ ಸಮದದಾದ್ಭೃಗವೇ ಮಹಾತ್ಮಾ**
**ತಂ ಶಂಕರಂ ಶರಣದಂ ಶರಣಂ ವ್ರಜಾಮಿ**

ಇತರರು ಮನಸ್ಸಿನಿಂದಲೂ ಯೋಚಿಸಲಸಾಧ್ಯವಾದ ಧೂಮವ್ರತದ ತಪಸ್ಸಿನಿಂದ ಹಿಮತ್ಪರ್ವತದ ತಪ್ಪಲಿನಲ್ಲಿ ತಪಸ್ಸು ಮಾಡಿದ, ಶುಕ್ರನಿಗೆ ಸಂಜೀವಿನೀ ಮಂತ್ರವನ್ನುಉಪದೇಶಿಸಿದ. ಶಂಕರನನ್ನು ಶರಣುಹೊಂದುತ್ತೇನೆ. ಈ ರೀತಿಯಾಗಿ ರಾಘವನು ಸೋತ್ರಮಾಡಲು ಶಿವನು ಸಂತುಷ್ಟನಾಗಿ ನುಡಿದನು.

**ಶಿವ :-** ರಾಮನೆ, ನಾನು ಸಂತುಷ್ಟನಾಗಿದ್ದೇನೆ. ನಿನಗೆ ಒಳ್ಳೆಯದಾಗಲಿ. ನೀವು ದೇವೋತ್ತಮನಾಗಿದ್ದರೂ ಮಾನವನಾಗಿ ಜನಿಸಿರುವಿ. ದೊಡ್ಡ ವಂಶದಲ್ಲಿ ಉತ್ಪನ್ನನಾದ ನೀನು ಜಗದ್ವಂದ್ಯನಾಗಿರುವಿ. ನೀನು ದೇವತೆಗಳಿಗೆಲ್ಲ ಅಧಿದೇವನಾಗಿ, ನಾಥನಾಗಿ, ಇದ್ದುದರಿಂದಲೇ ಅವರೆಲ್ಲರು ಶಾಶ್ವತ ಸುಖವನ್ನು ಹೊಂದುತ್ತಾರೆ. ನೀನು ಹದಿನಾಲ್ಕು ವರ್ಷ ವನವಾಸ ಮುಗಿಸು ಅಯೋಧ್ಯೆಗೇ ಆಗಮಿಸಿದ ಬಳಿಕ ನಿನ್ನನ್ನು ಕಣ್ತುಂಬ ಕಾಣುವ ಮನುಜರು ಭಾಗ್ಯಶಾಲಿಗಳು, ಅವರಿಗೆ ಸ್ವರ್ಗದಲ್ಲಿ ಸತ್ಕಾರ ಮುಕ್ತಿ ಮಂದಿರದಲ್ಲಿ ಸುಸ್ವಾಗತ. ನೀನು ಅರಣ್ಯಕ್ಕೆ ಹೋಗಿ ಮಹತ್ತರವಾದ ದೇವಕಾರ್ಯ ಸಾಧಿಸಿ ಪುನಃ ಅಯೋಧ್ಯೆಗೆ ಆಗಮಿಸು.''

ರಾಮನು ಮಹಾದೇವನಿಗೆ ನಮಸ್ಕರಿಸಿ, ಅಲ್ಲಿಂದ ಹೊರಟನು. ದಾರಿಯಲ್ಲಿ ಇಂದ್ರಮಾರ್ಗ ಎಂಬ ನದಿಯು ಬಂದಿತು. ಅಲ್ಲಿ ಜಡೆಯನ್ನು ಮೇಲಕ್ಕೆ ಎತ್ತಿಕೊಂಡು ಲಕ್ಷ್ಮಣನನ್ನು ನೋಡಿ, 'ಲಕ್ಷ್ಮಣ' ನನಗೆ ಧನುಸ್ಸನ್ನು ಕೊಡು ಎಂದು ನುಡಿದನು. ರಾಮನ ಈ ವಚನವನ್ನು ಕೇಳಿ ಲಕ್ಷ್ಮಣನು ಸೀತೆಯ ಬಳಿಗೆ ಬಂದು ಪ್ರಶ್ನಿಸಿದನು.

'ದೇವಿ ರಾಮನು ಕಾರಣವಿಲ್ಲದೆ ನನ್ನನ್ನು ಏಕೆ ಬಿಟ್ಟಿದ್ದಾನೆ? ನನ್ನಿಂದ ಏನು ಅಪರಾಧವಾಗಿದೆ? ನನಗಂತೂ ಯಾವದೂ ನೆನಪಿಲ್ಲ. ರಾಮನು ನನ್ನ ಮೇಲೆ ಕೋಪಗೊಳ್ಳಬೇಕಾದರೆ ನಾನು ಏನಾದರೂ ತಪ್ಪು ಮಾಡಿರಲೇಬೇಕು. ಅದಕ್ಕಾಗಿ ರಾಮನು ನನ್ನನ್ನು ತ್ಯಜಿಸಿದ್ದಾನೆ. ನಮ್ಮ ಅಣ್ಣನಿಗೆ ಕೋಪಬರುವಂತಹ ಕುಕೃತ್ಯಮಾಡಿದ ನನಗೆ ಧಿಕ್ಕಾರವಿರಲಿ. ಕುಲಕಂಟಕನಾದ ನಾನು ಇನ್ನು ಬದುಕಿ ಮಾಡುವದೇನು? ಅಣ್ಣನ ಕ್ರೋಧಕ್ಕೆ ಈಡಾದ ಈ ಪಾಪಿ ದೇಹವನ್ನು ಬಿಟ್ಟುಬಿಡುತ್ತೇನೆ. ರಾಮನು ನನ್ನನ್ನು ತಿರಸ್ಕರಿಸಿದರೆ ನಾನು ಎಂತಹ ನರಕಕ್ಕೆ ಹೋಗುವೆನೊ!'

ಹೀಗೆ ನುಡಿದು ತನ್ನ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಅಳತೊಡಗಿದನು ಮತ್ತು ಸೀತಾದೇವಿಯನ್ನು ಅಂಗಲಾಚಿ ಬೇಡಿಕೊಂಡನು.

''ಅಮ್ಮಾ ನಿನ್ನ ಪಾದಮುಟ್ಟಿ ಹೇಳುತ್ತೇನೆ. ಕೃತಿಯಿಂದಾಗಲಿ ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ, ನಾನು ರಾಮನ ವಿಷಯದಲ್ಲಿ ಅಪರಾಧವನ್ನು ಬುದ್ಧಿಪೂರ್ವಕವಾಗಿ ಮಾಡಲಾರೆ. ಅವನು ನನ್ನ ಕೈಬಿಟ್ಟರೆ ನನಗೆ ಗತಿಯಾರು? ಈ ದೀನ ಲಕ್ಷ್ಮಣನಿಗೆ ಗತಿ ಯಾರು ಸೀತೆಗೆ ಲಕ್ಷ್ಮಣನ ನುಡಿಯನ್ನು ಆಲಿಸಿ ಕರುಳು ಕರಗಿತು. ರಾಮನನ್ನು ನೇರವಾಗಿ ಕೇಳಿದಳು. 'ನೀವು ಈ ನಿರಪರಾಧಿ ಸೋದರನನ್ನು ತ್ಯಜಿಸಿದ್ದೇಕೆ? ಅವನ ವಿಷಯದಲ್ಲಿ ನಿಮಗೆ ಅನ್ಯಥಾ ಭಾವನೆ ಇದ್ದೆ ಬಿಟ್ಟುಬಿಡಿರಿ. ಈ ಲಕ್ಷ್ಮಣನು ಚಿಕ್ಕವನಲ್ಲವೆ?

**ರಾಮ :-** ಸೀತೆ, ಲಕ್ಷ್ಮಣನೆಂದರೆ ನನಗೆ ಬಹಳ ಪ್ರೀತಿ. ಕನಸ್ಸಿನಲ್ಲಿ ಕೂಡ ಅವನನ್ನು ತೊರೆಯಲಾರೆ. ಆದರೆ, ಅವನೇ ಈ ಮೊದಲು ಏನೇನೋ ಒರಟಾಗಿ ಮಾತನಾಡಿದ್ದು. ಇದು ಅವನ ಬುದ್ಧಿಪೂರ್ವಕವಾಗಿ ಬಂದ ಮಾತಲ್ಲ. ಅದೆಲ್ಲವೂ ಈ ಕ್ಷೇತ್ರದ ಚೇಷ್ಟೆ. ಈ ನೆಲದಲ್ಲಿ ನಿಂತರೆ, ಸೋದರರಲ್ಲಿ ಸ್ನೇಹ ಉಳಿಯುವುದಿಲ್ಲ. ಪ್ರೀತಿ ಬೆಳೆಯುವುದಿಲ್ಲ, ಈ ನೆಲದ ಗುಣವೇ ಅಂತಹದು. ಈ ಕ್ಷೇತ್ರದಲ್ಲಿರುವ ಪ್ರಾಣಿಗಳೆಲ್ಲರೂ, ಕೇವಲ ಸ್ವಾರ್ಥ ತತ್ಪರರು. ಮಕ್ಕಳು ತಂದೆಯ ಮಾತು, ತಂದೆ ಮಕ್ಕಳ ಮಾತು ಕೇಳುವದಿಲ್ಲ. ಶಿಷ್ಯ ಗುರುವಿನ ವಚನ ನಡೆಸುವದಿಲ್ಲ, ಶಿಷ್ಯನಿಗೆ ಹಿತವಾಗುವಂತೆ ಗುರು ನುಡಿಯುವದಿಲ್ಲ. ಈ ಸ್ಥಳದಲ್ಲಿ ಯಾರಿಗೂ ಯಾರೂ ಮಿತ್ರರಲ್ಲ ಯಾರಿಗೂ ಯಾರ ಮೇಲೂ ಪ್ರೀತಿ ಇರುವದಿಲ್ಲ. ಪ್ರಯೋಜನವಿದ್ದರೆ ಮಾತ್ರ ಪ್ರೀತಿ ಪ್ರದರ್ಶನವಾಗುವದು.

**ಪುಲಸ್ತ್ಯ:-** ಹೀಗೆ ಮಾತನಾಡುತ್ತ ರಾಮನು ರೇವಾ ನದಿಗೆ ಬಂದನು. ಅಲ್ಲಿ ಲಕ್ಷ್ಮಣ ಹಾಗೂ ಸೀತೆಯರೊಂದಿಗೆ ರಾಘವನು ಸ್ನಾನ ಮಾಡಿದನು. ಅಲ್ಲಿಯ ನೀರಿನಿಂದ ದೇವ, ಪಿತೃತರ್ಪಣಗಳನ್ನು ಕೊಟ್ಟು, ಸೂರ್ಯನಮಸ್ಕಾರ ಹಾಕಿದನು. ದೇವತೆಗಳು ಪೂಜೆಮಾಡಿದರು. ಈ ನದಿಯಲ್ಲಿ ಸ್ನಾನಮಾಡಿ ಶ್ರೀರಾಮನು ಸೀತೆ. ಲಕ್ಷ್ಮಣರೊಂದಿಗೆ ಶೋಭಿಸಿದನು. ಪರಮೇಶ್ವರನು ಗುಹ ಹಾಗೂ ಪಾರ್ವತಿಯೊಂದಿಗೆ ಸ್ನಾನ ಮಾಡುತ್ತ ಕುಳಿತಂತೆ ಕಾಣುತ್ತಿತ್ತು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಚಿರಂಜೀವಿಯಾದ ಮಾರ್ಕಂಡೇಯ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ಬ್ರಹ್ಮದೇವರು ಆಚರಿಸಿದ ಯಜ್ಞ

ಅಧ್ಯಾಯ - ೨೯

**॥ ಭೀಷ್ಮ ಉವಾಚ ॥**

**ಕಸ್ಮಿನಾಲ್ಕೇ ಭಗವತಾ ಬ್ರಹ್ಮಣಾ ಲೋಕಕರ್ತೃಣಾ ।**
**ಯಜ್ಞೈಶ್ಚಯಷ್ಟುಮಾರಬ್ಧಂ ತದ್ಭವಾನ್ವಕ್ತುಮರ್ಹತಿ ॥**

**ಭೀಷ್ಮ :-** ಬ್ರಹ್ಮದೇವರು ಯಾವ ಕಾಲದಲ್ಲಿ ಯಜ್ಞ ಮಾಡಲು ಪ್ರಾರಂಭಿಸಿದನು? ಅದನ್ನು ತಿಳಿಸಿರಿ ಆ ಯಜ್ಞದಲ್ಲಿ ಯಾರು ಯಾರನ್ನು ಋತ್ವಿಜರನ್ನಾಗಿ ಮಾಡಿದ? ಆ ದ್ವಿಜರ ಹೆಸರೇನು? ಅವರಿಗೆ ಬ್ರಹ್ಮದೇವರು ಎಷ್ಟು ದಕ್ಷಿಣೆ ಕೊಟ್ಟರು? ಆ ಯಜ್ಞವು ಹೇಗೆ ನಡೆಯಿತು? ಆಗ ನಡೆದ ಘಟನೆಗಳೇನು? ಇವೆಲ್ಲವುಗಳನ್ನು ನನಗೆ ತಿಳಿಸಿರಿ. ಪಿತಾಮಹನ ಯಜ್ಞದ ಸಮಾಚಾರ ತಿಳಿಯಲು ನನಗೆ ಕುತೂಹಲವಾಗಿದೆ.

**ಪುಲಸ್ತ್ಯ:-** ಈ ಬ್ರಹ್ಮ ಯಜ್ಞವು ಸ್ವಾಯಂಭುವ ಮನ್ವಂತರದಲ್ಲಿ ನೆರವೇರಿ ಸಲ್ಪಟ್ಟಿತೆಂದು ಈ ಮೊದಲೇ ನಾನು ತಿಳಿಸಿದ್ದೇನೆ. ಅವನು ಪ್ರಜಾಪತಿಗಳನ್ನು ಸೃಷ್ಟಿಸಿ 'ಸೃಷ್ಟಿಯನ್ನು ಬೆಳೆಸಿರಿ' ಎಂದು ಅಪ್ಪಣೆಯಿತ್ತನು. ಸ್ವಯಂ ತಾನು ಪುಷ್ಕರ ಕ್ಷೇತ್ರಕ್ಕೆ ಹೋಗಿ, ಯಜ್ಞ ಕಾರ್ಯಕ್ಕೆ ಬೇಕಾಗುವ ಸಾಧನ ಸಲಕರಣೆಗಳನ್ನೆಲ್ಲ ಹೊಂದಿಸಿ ಕೊಂಡು, ಅಲ್ಲಿಯ ಒಂದು ವನ್ಯಗೃಹದಲ್ಲಿ ಉಳಿದುಕೊಂಡನು. ಅಲ್ಲಿಗೆ ದೇವತೆಗಳನ್ನು, ಅಪ್ಸರೆಯರನ್ನು, ಗಂಧರ್ವರನ್ನು ಕರೆಯಿಸಿ, ಬ್ರಹ್ಮಾ,, ಉದ್ಗಾತಾ, ಹೋತಾ, ಅಧ್ವರ್ಯ ಎಂಬ ಯಜ್ಞದ ನಾಲ್ವರು ನಿರ್ವಾಹಕರನ್ನು ಗೊತ್ತು ಪಡಿಸಿದನು. ಇದರಲ್ಲಿ ನಾರದನನ್ನು ಬ್ರಹ್ಮಾನನ್ನಾಗಿ ಮಾಡಿದನು. ಅಂಗಿರಸನು ಉದ್ಗಾತಾ, ಪುಲಹ ಪ್ರತ್ಯುದ್ಗಾತಾ, ನಾರಾಯಣ ಪ್ರತಿಹರ್ತಾ, ಪುಲಸ್ತ್ಯರು ಅಧ್ವರ್ಯು, ಬ್ರಹ್ಮಾ ಆದವನಿಗೆ ಬ್ರಹ್ಮಣಾಶಂಸಿ, ಪ್ರೋತಾ ಅಗ್ನೀಧ್ರ ಎಂದು ಮೂರು ಸಹಾಯಕ ಪರಿವಾರದವರನ್ನು ಗೊತ್ತುಪಡಿಸಿದನು. ಬ್ರಹ್ಮನ ಸ್ಥಾನದಲ್ಲಿ ಕುಳಿತ ನಾರದನಿಗೆ ಗೌತುಮನಮನಿಯು ಬ್ರಾಹ್ಮಣಾಚ್ಛಂಸಿ. ದೇವರಾತನೇ ಪೋತಾ. ದೇವಲನು ಅಗ್ನಿಧ್ರ ಆಗಿ ಸಹಾಯಕರಾಗಿ ನಿಂತುಕೊಂಡರು. ಉದ್ಗಾತಾನಿಗೆ ಪ್ರತ್ಯುದ್ಗಾತಾ, ಪ್ರತಿಹರ್ತಾ, ಸುಬ್ರಹ್ಮಣ್ಯ ಎಂದು ಮೂವರು ಸಹಾಯಕ ಪರಿವಾರದವರು. ಇವರಲ್ಲಿ ಉದ್ಗಾತನಾದ ಅಂಗಿರಸನಿಗೆ ಪುಲಹಮುನಿಯು ಪ್ರತ್ಯುದ್ಗಾತ, ನಾರಾಯಣ ಪ್ರತಿಹರ್ತ, ಅತ್ರಿಮುನಿ ಸುಬ್ರಹ್ಮಣ್ಯರೆಂದು ಸಹಾಯಕರಾಗಿ ನಿಂತುಕೊಂಡರು. ಹೋತಾನಿಗೆ ಸಹಾಯಕರಾದ ಮೈತ್ರಾವರುಣಿ ಸ್ಥಾನಕ್ಕೆ ವಶಿಷ್ಠ ಹಾಗೂ ಮೈತ್ರರನ್ನೂ, ಅಚ್ಛಾವಾಕನ ಸ್ಥಾನಕ್ಕೆ ಕ್ರತು ಮುನಿಯನ್ನೂ ಕಾರ್ವಸ್ತು ಕಾರ್ಯಕ್ಕೆ ಚ್ಯವನಮುನಿಗಳನ್ನೂ ನಿಯಮಿಸಲಾಯಿತು. ಅಧ್ವರ್ಯುವಾದ ಪುಲಸ್ತ್ಯಮುನಿಗೂ, ಪ್ರತಿಪ್ರಸ್ಥಾತಾ, ನೇಷ್ಠಾ, ಪುಣ್ಯೇತಾ ಎಂದು ಮೂವರು ಸಾಹಾಯಕರನ್ನಾಗಿ ಶಿಬಿ, ಬೃಹಸ್ಪತಿ ಸಾಂಶಪಾಯರನ್ನು ನಿಯಮಿಸಲಾಯಿತು. ಧರ್ಮಮುನಿಯು ತನ್ನ ಮಕ್ಕಳು, ಮೊಮ್ಮಕ್ಕಳೊಂದಿಗೆ ಸದಸ್ಯನಾದನು ಯಜ್ಞದಲ್ಲಿ ಹತ್ತು ಜನ ಚಮಸಾಧ್ವರ್ಯುಗಳು ಇರಬೇಕಷ್ಟೆ? ಆ ಸ್ಥಾನಕ್ಕೆ ಭಾರದ್ವಾಜ, ಶಮೀಕ, ಪುರುಕುತ್ಸ, ಯುಗಂಧರ, ಏಣಕ, ತಾಂಡಿಕ, ಕೋಣ, ಕುತಪ, ಗಾರ್ಗ್ಯ, ವೇದಶಿರ ಇವರನ್ನು ನಿಯಮಿಸಲಾಯ್ತು. ಕಣ್ವ, ಮಾರ್ಕಂಡೇಯ, ಇಧ್ಮವಾಹ ಹಾಗೂ ಅವರ ಮಕ್ಕಳು, ಶಿಷ್ಯರೆಲ್ಲರೂ ಹಗಲಿರುಳೂ ಬೇಸರವಿಲ್ಲದೆ ದುಡಿದರು. ಒಟ್ಟು ಆ ಯಜ್ಞದಲ್ಲಿ ಉದ್ಗಾತ ಹೋತಾ ಅಧ್ವರ್ಯ ಈ ನಾಲ್ಕು ಮುಖ್ಯ ಯಜ್ಞ ನಿರ್ವಾಹಕರು. ಈ ನಾಲ್ವರಿಗೂ ಮೂರು

ಮೂರು ಪರಿಚಾರಕರು ಸೇರಿ ಒಟ್ಟು ಹದಿನಾರು ಜನ ಋತ್ವಿಜರು, ಹತ್ತು ಚಮಸಾಧ್ವರ್ಯುಗಳು ಹಾಗೂ ಸಹಾಯಕರು, ಎಲ್ಲರೂ ಕೂಡಿ ದೊಡ್ಡದಾದ ಒಂದು ಋಷಿಗಳ ಗುಂಪೇ ಆ ಯಜ್ಞವನ್ನು ಯಶಸ್ವಿಯಾಗಿ ಮಾಡಲಿಕ್ಕೆ ಅಹೋ ರಾತ್ರಿ ನಿರ್ಲಿಪ್ತರಾಗಿ ಕೆಲಸ ಮಾಡಿದರು. ಸ್ವಾಯಂಭುವ ಮನ್ವಂತರವು ಪೂರ್ತಿಯಾದ ನಂತರ ಆ ಯಜ್ಞವೂ ಪೂರ್ತಿಯಾಯಿತು. ಅದರ ಅವಭೃಥ ಸ್ನಾನ ಮಾಡಿ ಬ್ರಹ್ಮಾ ಆದ ನಾರದನಿಗೆ ಪೂರ್ವ ದಿಕ್ಕನ್ನು ದಕ್ಷಿಣೆಯಾಗಿ ಬ್ರಹ್ಮದೇವನು ನೀಡಿದನು, ಹೋತಾ ಆದ ಭೃಗುವಿಗೆ ದಕ್ಷಿಣ ದಿಕ್ಕನ್ನು ಉದ್ಗಾತೃವಾದ ಅಂಗಿರಸನಿಗೆ ಉತ್ತರ ದಿಕ್ಕನ್ನು ದಕ್ಷಿಣೆಯಾಗಿ ನೀಡಿದನು. ಇದರಂತೆ ಬ್ರಹ್ಮನ ಸ್ಥಾನದಲ್ಲಿದ್ದವರಿಗೆ ನಲವತ್ತೆಂಟು ಗೋವುಗಳನ್ನು ದಾನ ಕೊಡಲಾಯಿತು. ಉದ್ಗಾತನಿಗೆ ಇಪ್ಪತ್ನಾಲ್ಕು ಹೊತ್ರವಿಗೆ ಹದಿನಾರು, ಅಧ್ವರ್ಯವಿಗೆ ಹದಿನೈದು ಗೋವುಗಳನ್ನು ಬ್ರಹ್ಮನು ದಾನ ನೀಡಿದನು. ಇದರಂತೆ ಗ್ರಾಮ, ದಾಸಿ, ಪಶು ಭತ್ಯರನ್ನು ಆಯಾ ವರ್ಗದವರಿಗೆ ಕೊಡಲಾಯಿತು. ಅವಭೃಥ ಸ್ನಾನಾನಂತರ ಎಲ್ಲರಿಗೂ ಮೃಷ್ಟಾನ್ನ ಭೋಜನ ಹಾಕಲಾಯಿತು. ಉಳಿದ ಸದಸ್ಯರಿಗೂ ಕೂಡ ವಿಪುಲವಾಗಿ ದಾನವನ್ನು ಕೊಟ್ಟನು. ಯಜ್ಞವೆಲ್ಲ ಪೂರ್ತಿ ಮುಗಿದ ಬಳಿಕ ಬ್ರಹ್ಮದೇವರು ವಿಷ್ಣುವನ್ನು ಕರೆದು ನುಡಿದರು.

**ಬ್ರಹ್ಮ:-** ಕೇಶವನೆ, ಯಜ್ಞವೆಲ್ಲವು ಯಶಸ್ವಿಯಾಗಿ ನೆರವೇರಿತು, ಸಂತೋಷ ಆದರೆ ನನ್ನ ಪ್ರೀತಿಯ ಪತ್ನಿಯಾದ ಸಾವಿತ್ರಿ ಮಾತ್ರ ಕುಪಿತಳಾಗಿ ಹೋದದ್ದು ನನಗೆ ವ್ಯಥೆ ಆಗಿದೆ. ನೀನು ಹೋಗಿ ಅವಳನ್ನು ಕರೆದುಕೊಂಡು ಬಾ. ನಿನ್ನನ್ನು ನೋಡಿದ ಕೂಡಲೇ ಅವಳ ಸಿಟ್ಟೆಲ್ಲವೂ ಕರಗಿ ಹೋಗುವದು. ಯಾಕೆಂದರೆ ನೀನು ಸವಿ ನುಡಿಗಳನ್ನು ಆಡಿ ಮನಸ್ಸಿನ ಕಿಲಬನ್ನೆಲ್ಲ ಕಳೆದುಬಿಡುವಿ ನಿನ್ನ ಮಾತು ಮಧುರ, ಸಕಾರಣ, ನಿನ್ನ ಮಾತಿನ ಪ್ರತಿಯೊಂದು ಅಕ್ಷರದಲ್ಲಿಯೂ ಜೇನು ತಟ್ಟಿಕ್ಕುತ್ತದೆ. ಆದರಿಂದ ಕೇಳಲು ಇಂಪು, ಹೃದಯಕ್ಕೆ ತಂಪು, ಕೇಳುಗರಿಗೆ ಹಿತ. ಆದುದರಿಂದ ನಿನ್ನ ಮಾತನ್ನು ಕೇಳದವರು ಮೂರು ಲೋಕದಲ್ಲಿಯೇ ಯಾರೂ ಇಲ್ಲ. ನೀನು ನನ್ನ ಪ್ರಿಯೆಯ ಬಳಿಗೆ ಹೋಗಿ ಹೇಗಾದರೂ ಮಾಡಿ, ಏನಾದರೂ ಮಾತನಾಡಿ, ಅವಳ ಮನಸ್ಸನ್ನು ಪ್ರಸನ್ನಗೊಳಿಸು. ಬೇಕಾದರೆ ಜೊತೆಗೆ ಗಂಧರ್ವರನ್ನು ಕರೆದುಕೊಂಡು ಹೋಗು, ನೀನು ಹೋಗಿ ಅವಳನ್ನು ಸಂತಯಿಸಿದರೆ ಅವಳು ನಿಶ್ಚಿತವಾಗಿ ಸಂತುಷ್ಟಳಾಗುವಳು. ಎಷ್ಟಾದರೂ ಸಾಧ್ವೀಮಣಿ ಅಲ್ಲವೆ ನನ್ನ ಆ ಸಾವಿತ್ರಿ? ನಿನ್ನ ಮಾತಿನಿಂದ ಪ್ರಸನ್ನಳಾಗುವಳು. ನೀನು ತಡ ಮಾಡಬೇಡ. ಬೇಗ ಹೊರಡು. ನಿನಗಿಂತ ಮುಂದಾಗಿ ಸಾವಿತ್ರಿಯ ಮಂದಿರಕ್ಕೆ ನಿನ್ನ ಮಡದಿ ಇಂದಿರೆಯು ಹೋಗಲಿ ಅವಳ ಬೆನ್ನ ಹಿಂದೆ ನೀನೂ ಹೋಗು. ನನ್ನ ಪ್ರಿಯತಮೆಯನ್ನು ಸವಿನುಡಿಗಳಿಂದ ಸಂತಯಿಸು. ಅವಳಿಗೆ ಚೆನ್ನಾಗಿ ತಿಳಿಹೇಳು. 'ನಿನ್ನ ಪತಿಯು ನಿನಗೆ ಬೇಡವಾದುದನ್ನು ಎಂದೂ ಮಾಡಬಯಸುವದಿಲ್ಲ. ನಿನ್ನಿಂದ ಅವನೆಂದೂ ಅಗಲಿರಲಾರ ಅವನು ಯಾವಾಗಲೂ ನಿನ್ನ ಮುಖ ನೋಡುತ್ತ ಕುಳಿತಿದ್ದಾನೆ. ನಿನ್ನ ಮಾತಿಗಾಗಿ ಕಾದಿರುತ್ತಾನೆ.' ಇವೇ ಮೊದಲಾದ ಬಗೆಬಗೆಯ ಬಹಳ ಮಧುರ ನುಡಿಗಳನ್ನಾಡು, ಒಟ್ಟಾರೆ ಹೆಚ್ಚಿಗೆ ಹೇಳಲಾರೆ. ಹೇಗಾದರೆ ಅವಳು ನನ್ನ ಮೇಲೆ ಪ್ರಸನ್ನಳಾಗುವಳೋ ಹಾಗೆ ನುಡಿ, ಅದರಂತೆ ಮಾಡು.

**ಪುಲಸ್ತ್ಯ:-** ಲೋಕಕರ್ತಾರನಾದ ಬ್ರಹ್ಮನು ಹೇಳಿದ ಮಾತನ್ನು ಕೇಳಿ, ಹರಿಯು ತ್ವರೆಯಿಂದ ಹೊರಟನು- ಸಾವಿತ್ರಿಯಿದ್ದ ಸ್ಥಾನಕ್ಕೆ. ಸತಿ ಸಾವಿತ್ರಿಯು ದೂರದಿಂದಲೇ

ನೋಡಿದಳು. ಕಾಂತೆಯೊಂದಿಗೆ ಬರುತ್ತಿದ್ದಾನೆ ಕೇಶವ. ಕೂಡಲೇ ಎದ್ದು ನಿಂತಳು ಆಸನದಿಂದ ವಿಷ್ಣು ಬಂದವನೇ ಅಭಿನಂದಿಸಿದ. ಮತ್ತು ಹೃತ್ಪೂರ್ವಕವಾಗಿ ಅವಳನ್ನು ಸ್ತುತಿಸಿದ. "ಬ್ರಹ್ಮನ ಪತ್ನಿಗೆ ನಮಸ್ಕಾರ. ದೇವಾಧಿದೇವತೆಗಳಿಗೆ ಒಡತಿಯಾದ ಸಾವಿತ್ರಿಗೆ ನಮಸ್ಕಾರ. ಅಮ್ಮಾ ನಿನಗೆ ನಮಸ್ಕರಿಸಿದರೆ, ಜನರ ಪಾಪಗಳೆಲ್ಲ ಬಿಟ್ಟು ಹೋಗುತ್ತವೆ ನೀನು ಮಹಾ ಪತಿವ್ರತೆ. ಬ್ರಹ್ಮನ ಹೃದಯದಲ್ಲಿ ನೆಲೆಸಿರುವಿ. ಹಗಲಿರುಳು ಬ್ರಹ್ಮನು ನಿನ್ನನ್ನು ಚಿಂತಿಸುತ್ತಿದ್ದಾನೆ. ನಿನ್ನ ಪ್ರಸಾದಕ್ಕಾಗಿ ಕಾತರಿಸಿದ್ದಾನೆ. ದುಃಖದಿಂದ ಸಂತಪ್ತನಾದ ಆ ನಿನ್ನ ಪತಿಯ ಮೇಲೆ ಪ್ರಸನ್ನಳಾಗು. ದುಃಖಿತ ಪತಿಯನ್ನು ಸಂತೈಯಿಸುವದು ಪತಿವ್ರತೆಯರ ಕರ್ತವ್ಯವಲ್ಲವೆ? ನಿನ್ನ ಭರ್ತಾರನಾದ ಬ್ರಹ್ಮನು ನಿನ್ನ ವಿಯೋಗದಿಂದ ಎಷ್ಟು ವ್ಯಥಿತನಾಗಿದ್ದಾನೆ ಎಂಬುದು ಭೃಗು ಕುಮಾರಿಯಾದ ಈ ಲಕ್ಷ್ಮಿಯನ್ನು ಕೇಳು. ಇವಳು ನಿನ್ನ ಪ್ರೀತಿಯ ಗೆಳತಿಯಲ್ಲವೆ? ನನ್ನ ಹಾಗೂ ಲಕ್ಷ್ಮಿಯ ಮಾತನ್ನು ನೀನು ನಂಬು." ಹೀಗೆ ಹೇಳಿ ವಿಷ್ಣುವು ತನ್ನ ಎರಡೂ ಕೈಗಳಿಂದ ಸಾವಿತ್ರಿಯ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದು "ತಾಯಿ, ನಿನಗೆ ನಮಸ್ಕಾರ ಮಾಡುತ್ತೇನೆ. ಕ್ಷಮಿಸು. ನೀನು ಜಗನ್ಮಾತೆ ಅಲ್ಲವೆ?" ಎಂದು ವಿನಯದಿಂದ ಹಣೆ ಮಣಿದು ನಿಂತನು. ಆಗ ಸಾವಿತ್ರಿಯು ತನ್ನೆರಡೂ ಕಾಲುಗಳನ್ನು ಹಿಂತೆಗೆದುಕೊಂಡು, ತನ್ನ ಕೈಗಳಿಂದ ಶ್ರೀ ಹರಿಯ ಕೈಗಳನ್ನು ಹಿಡಿದು ನುಡಿದಳು.

**ಸಾವಿತ್ರಿ:-** ವತ್ಸ, ನಾನು ಎಲ್ಲವನ್ನೂ ಕ್ಷಮಿಸಿದ್ದೇನೆ. ಈ ಮಹಾಲಕ್ಷ್ಮಿಯಾದರೂ ಯಾವಾಗಲೂ ನಿನ್ನ ಎದೆಯಲ್ಲಿ ನೆಲೆಸಿದ್ದಾಳೆ. ನಿನ್ನ ಹೊರತು ಇವಳಿಗೆ ಬೇರೆ ಎಲ್ಲಿಯೂ ಆಸಕ್ತಿಯಿಲ್ಲ. ಭೃಗುಮುನಿಯಿಂದ ಖ್ಯಾತಿಯಲ್ಲಿ ನೆಲೆಸಿದ ಈ ಇಂದಿರೆಯು ದೇವ ದಾನವರು ಕೂಡಿ, ಹೆಗ್ಗಡಲನ್ನು ಕಡೆದಾಗ ಶ್ರೀದೇವಿಯಾಗಿ ಮತ್ತೆ ಉದಿಸಿ ಬಂದು, ನಿನ್ನ ಕೊರಳಿಗೆ ಮಾಲೆ ಹಾಕಿದಳು. ನೀನು ಎಲ್ಲಿ ಅವತಾರ ಮಾಡಿರುವೆಯೋ ಅಲ್ಲಿ ಇವಳು ಅವತರಿಸಿ ನಿನ್ನ ಸೇವೆಗೆ ಸಿದ್ಧಳಾಗಿರುವಳು. ನೀನು ದೇವನಾಗಿ ಅವತರಿಸಿದರೆ ಇವಳು ಕೂಡ ದೇವೀ ದೇಹವನ್ನು ತಳೆಯುವಳು ನೀನು ಮಾನವನಾಗಿ ಮರ್ತ್ಯಲೋಕಕ್ಕೆ ಇಳಿದರೆ. ಇವಳು ಮಾನವಿಯಾಗಿ ಮೈತಳೆದು ನಿಲ್ಲುವಳು. ಏನೇ ಆಗಲಿ, ನೀನು ಎಲ್ಲಿಯೇ ಇರಲಿ, ಅಲ್ಲಿ ಇವಳು ನಿನ್ನ ನೆರಳಾಗಿ ನಿನಗೆ ಸಹಾಯಕಳಾಗಿ ನಿಂತುಕೊಳ್ಳುವಳು. ಇದರಲ್ಲಿ ಸಂದೇಹವಿಲ್ಲ. ನಿನ್ನೊಡನೆ ಇಂತು ಅವಿಚ್ಛಿನ್ನ ದಾಂಪತ್ಯವ್ರತವನ್ನು ಅನುಸರಿಸುವ ಮಹಾತಾಯಿಯು ಇಲ್ಲಿಗೆ ಬಂದದ್ದು ನನ್ನ ಭಾಗ್ಯವೇ ಸರಿ ಮಹಾಪ್ರಭುವೇ ನೀವಿಬ್ಬರೂ ದಂಪತಿಗಳು ಹೇಳಿರಿ. ನಾನು ಈ ಕಾಲದಲ್ಲಿ ಏನು ಮಾಡಬೇಕು. ನನ್ನ ಕರ್ತವ್ಯವೇನು?

**ವಿಷ್ಣು:-** ದೇವಿ, ಬ್ರಹ್ಮದೇವರು ಕೈಕೊಂಡ ಯಜ್ಞವು ಪೂರ್ಣವಾಗಿದೆ. ಅದಕ್ಕಾಗಿ ನನ್ನನ್ನು ನಿನ್ನ ಬಳಿಗೆ ಕಳಿಸಿದ್ದಾನೆ. 'ಬೇಗನೆ ಸಾವಿತ್ರಿಯನ್ನು ಕರೆದುಕೊಂಡು ಬಾ. ಅವಳು ನನ್ನೊಡನೆ ಸ್ನಾನಮಾಡಲಿ' ಎಂದುಹೇಳಿದ. ಆದುದರಿಂದ ನೀನು ಸಂತೋಷದಿಂದ ಬೇಗ ನನ್ನೊಡನೆ ಬಂದುಬಿಡು. ಎಲ್ಲ ದೇವತೆಗಳಿಂದ ಒಡಗೂಡಿದ ನಿನ್ನ ಪತಿಯನ್ನು ಹೋಗಿ ನೋಡು.

**ಲಕ್ಷ್ಮೀ:-** ಆರ್ಯಳೇ, ಬೇಗ ಏಳು. ಬ್ರಹ್ಮದೇವನಿದ್ದಲ್ಲಿಗೆ ನಡೆ, ನಾನು ನಿನ್ನನ್ನು ಬಿಟ್ಟು ಹೋಗುವದಿಲ್ಲ. ನಿನ್ನ ಕಾಲಿಗೆ ಬೀಳುವೆನು." ಆಗ ಸಾವಿತ್ರಿಯು ಲಕ್ಷ್ಮಿಯ ಎರಡೂ ಕೈಗಳನ್ನು ಹಿಡಿದು ಮೇಲೆತ್ತಿ ತನ್ನ ಹತ್ತಿರ ಕೂಡಿಸಿಕೊಂಡಳು. ಹಾಗೆ ತನ್ನೆಡೆ ಬರಲು ಇನ್ನು ತಡ ಮಾಡುತ್ತಿದ್ದಾಳೆ ಸಾವಿತ್ರಿ ಎಂದು ತಿಳಿದ ಬ್ರಹ್ಮದೇವನು ತನ್ನ ಬಳಿಯಲ್ಲಿದ್ದ ಶಿವನನ್ನು ಕರೆದು ಹೇಳಿದನು.

**ಬ್ರಹ್ಮ:-** ಚಂದ್ರಭೂಷನೆ, ನೀನು ಗೌರಿಯೊಂದಿಗೆ ಸಾವಿತ್ರಿಯ ಬಳಿಗೆ ಹೋಗು. ಅವಳಿಗೆ ತಿಳಿಸಿಹೇಳು ಅವಳನ್ನು ಕರೆದುಕೊಂಡು ಬಾ.

**ಪುಲಸ್ತ್ಯ:-** ಬ್ರಹ್ಮದೇವರ ಆದೇಶದಂತೆ ಶಿವಪಾರ್ವತಿಯರು ಸಾವಿತ್ರಿಯ ಸದನಕ್ಕೆ ಹೋದರು. ಇವರಿಬ್ಬರೂ ಬರುವದನ್ನು ಕಂಡು, ಸಾವಿತ್ರಿಯು ಸಂಭ್ರಮದಿಂದ ಬಂದು ಎದುರುಗೊಂಡಳು. ರುದ್ರನು ಆ ಬ್ರಹ್ಮಾಣಿಯನ್ನು ದೂರದಿಂದ ನಮಸ್ಕರಿಸಿ ನುಡಿದನು.

**ಶಿವ:-** ತಾಯಿ, ಬ್ರಹ್ಮನು ನಿನ್ನ ದಾರಿ ಕಾಯುತ್ತಿದ್ದಾನೆ ಶುಭಾಂಗಿಯೇ ಇನ್ನು ತಡಮಾಡಬೇಡ. ಪತಿವ್ರತೆಯೆ, ನೀನು ಅಲ್ಲಿ ಮಾಡತಕ್ಕ ಕಾರ್ಯ ಬಹಳವಿದೆ. ಬೇಕಾದರೆ ಪರ್ವತ ಪುತ್ರಿಯಾದ ಈ ಗೌರಿಯನ್ನು ಕೇಳು ಅಥವಾ ಲಕ್ಷ್ಮೀಯನ್ನು ಕೇಳು. ಇಲ್ಲವೆ ಶಚಿಯನ್ನಾದರೂ ಆಲೋಚಿಸು. ಇವರು ಮೂವರೂ ಬೇಡವಾದರೆ ನಿನಗೆ ವಿಶ್ವಾಸವಿದ್ದವರನ್ನು ಕೇಳಿನೋಡು.

**ಸಾವಿತ್ರಿ:-** ಶಂಕರನೆ, ಈ ಗೌರಿಯು ನಿನ್ನ ಅರ್ಧ ಶರೀರವನ್ನೇ ಬಳಸಿಕೊಂಡಿದ್ದಾಳೆ. ಈ ಅರ್ಧನಾರೀ ದೇವಿಯಿಂದ ಚೆನ್ನಾಗಿ ಒಪ್ಪುತ್ತೀ, ಮೂರು ಲೋಕದಲ್ಲಿಯೇ ಗೌರಿಯೊಂದಿಗೆ ಒಂದಾಗಿ ನಿಂತಿರುವ ನಿನ್ನಂತಹ ಸುಂದರ ಪುರುಷನನ್ನು ನಾನು ಕಾಣೆ. ನೀನು ಒಡೆಯನಾಗಿದ್ದುದರಿಂದಲೇ ಈ ಜಗತ್ತೆಲ್ಲ ಸುಖವಾಗಿದೆ.''- ಹೀಗೆ ಸಾವಿತ್ರಿಯು ನುಡಿದ ಬಳಿಕ ಪಾರ್ವತಿಯು ಬಂದು ಅವಳ ಎಡಗೈಹಿಡಿದಳು. ಲಕ್ಷ್ಮೀಯ ಬಲಗೈ ಹಿಡಿದಳು. ಆಗ ಶಂಕರನು ಅಭಿವಂದನಗೈದು ಸಾವಿತ್ರಿಗೆ ಇಂತು ನುಡಿದನು.

**ಶಂಕರ :-** ಮಹಾನುಭಾವಳೆ, ನಡೆ ಹೋಗೋಣ, ನಿನ್ನ ಪತಿ ಇದ್ದಲ್ಲಿ ನೀನು ಈಗ ಬರಲೇಬೇಕು. ಸ್ತ್ರೀಯರಿಗೆ ಪತಿಯೇ ಪರಗತಿ ಅಲ್ಲವೇ? ನಿನ್ನ ಸೋದರನ ಮಡದಿಯಾದ ಗೌರಿಯು, ವಿಷ್ಣುಪತ್ನಿಯಾದ ಲಕ್ಷ್ಮೀಯು ನಿನ್ನ ಎದುರು ನಿಂತಿದ್ದಾರೆ. ಇವರಿಬ್ಬರ ಮಾತನ್ನು ಕೇಳಿಯಾದರೂ ಬಾ. ಇವರಿಬ್ಬರ ಗಂಡಂದಿರಾದ ನಮ್ಮಿಬ್ಬರ ಪ್ರಾರ್ಥನೆ ಮನ್ನಿಸಿ ಬಾ.

**ಗೌರಿ :-** ಸಾವಿತ್ರಿಯೆ, ನೀನು ನನ್ನನ್ನು ಕಂಡಾಗಲೆಲ್ಲ ''ನನ್ನ ಅತ್ಯಂತ ಪ್ರೀತಿಯ ಸಖಿ ಎಂದರೆ ನೀನೆ'' ಎಂದು ಹೇಳುತ್ತಿದ್ದೆ ಅಲ್ಲವೆ? ಆ ಮಾತು ನಿಜವಾದರೆ ಈಗ ನನ್ನೊಡನೆ ನಿನ್ನ ಪತಿಯ ಬಳಿಗೆ ಬಾ. ಮಂಗಳದೇವತೆಯಾದ ಲಕ್ಷ್ಮೀಯು ನಿನ್ನ ಕೈ ಹಿಡಿದು ಕರೆಯುತ್ತಿದ್ದಾಳೆ. ನಾನು ಅಗ್ರಹ ಪಡಿಸುತ್ತಿದ್ದೇನೆ, ನಮ್ಮಿಬ್ಬರ ಕೈ ಹಿಡಿದುಕೊಂಡು ನೀನು ನಿನ್ನ ಪತಿಯ ಬಳಿಗೆ ಬಾ'' ಹೀಗೆ ಹೇಳಿ ಲಕ್ಷ್ಮೀ ಪಾರ್ವತಿಯರು ಕೈಹಿಡಿದು ಸಾವಿತ್ರಿಯನ್ನು ಮೆಲ್ಲನೆ ನಡೆಸುತ್ತ ಬ್ರಹ್ಮದೇವರ ಬಳಿಗೆ ನಡೆದರು ಅವರ ಮನೆಗೆ. ಶಿವ ಮತ್ತು ವಿಷ್ಣು ಹಾಗೂ ಇಂದ್ರಾದಿ ದೇವತೆಗಳೂ, ಅವರ ಮುಂದೆ ಗಂಧರ್ವ ಅಪ್ಸರೆಯರೂ ನಡೆದಿದ್ದರು.

ಹೀಗೆ ಮೆರವಣಿಗೆಯಿಂದ ಬರುವ ಸಾವಿತ್ರಿಯನ್ನು ಕಂಡು ಸರ್ವಲೋಕ ಪಿತಾಮಹನಾದ ಬ್ರಹ್ಮನು ಗಾಯತ್ರಿ ದೇವಿಯೊಂದಿಗೆ ನಡೆದನು ಮತ್ತು ಅಂದನು.

**ಬ್ರಹ್ಮ:-** ಸುಂದರಿ ಈ ಗಾಯತ್ರಿಯು ನಿನ್ನ ಸೇವೆಮಾಡುವ ಕಿಂಕರಿ. ಸೇವಿಕೆ ಎಂದು ತಿಳಿ. ನಾನಂತೂ ನಿನ್ನ ಆಜ್ಞಾಧಾರಕನಾಗಿದ್ದೇನೆ. ನಾನು ಏನು ಮಾಡಬೇಕು, ಅಪ್ಪಣೆಕೊಡು

ಬ್ರಹ್ಮದೇವರ ಈ ಮಾತನ್ನು ಕೇಳಿ ಸಾವಿತ್ರಿಗೇ ನಾಚಿಕೆ ಆಯಿತು. ಅವಳು, ಮುಖ ಕೆಳಗೆ ಹಾಕಿದಳು, ಬಾಯಿಂದ ಮಾತೇ ಹೊರಡಲಿಲ್ಲ. ಆಗ ಬ್ರಹ್ಮನು ಗಾಯತ್ರಿಗೆ

ಸನ್ನೆಗೈದನು. ಅವಳು ಹೋಗಿ ಸಾವಿತ್ರಿಯ ಅಡಿದಾವರೆಗಳ ಮೇಲೆ ಬಿದ್ದಳು. ಅವಳ ಎರಡೂ ಚರಣಗಳನ್ನು ಹಿಡಿದು ದೈನ್ಯಳಾಗಿ ಬೇಡಿಕೊಂಡಳು.

**ಗಾಯತ್ರಿಕೃತವತ್ಕಪರಾಧಂ ತೇ ಕ್ಷಮಾಂ ದೇಹಿ ನಮೋಽಸ್ತು ತೇ ॥**

ತಾಯಿ, ನಾನು ನಿನ್ನ ವಿಷಯದಲ್ಲಿ ತಪ್ಪು ಮಾಡಿದ್ದೇನೆ. ನನ್ನ ಅಪರಾಧವನ್ನು ಕ್ಷಮಿಸು, ನಿನಗೆ ನಮಸ್ಕಾರ ಮಾಡುತ್ತೇನೆ. ಗಾಯತ್ರಿಯು ಹೀಗೆ ನುಡಿದಕೂಡಲೇ ಸಾವಿತ್ರಿಯ ದುಃಖ ಉಕ್ಕಿಬಂದು, ಅವಳನ್ನು ಗಟ್ಟಿಯಾಗಿ ಆಲಿಂಗಿಸಿದಳು. ಕಂಠವನ್ನು ಹಿಡಿದು ತಬ್ಬಿಕೊಂಡು ಅವಳನ್ನು ಸಂತೈಸಿದಳು.

**ಸಾವಿತ್ರಿ :-** ಈ ನನ್ನ ಪತಿಯು ನನಗೆ ಪರಮ ಮಾನನೀಯನೇ ಆಗಿದ್ದಾನೆ. ಸ್ತ್ರೀಯರಿಗೆ ಪತಿ ಎಂದರೆ ಪ್ರಾಣಿಗಳಿಗೆಲ್ಲ ಈಶ್ವರ, ಅವನ ವಚನವನ್ನು ಅವಶ್ಯವಾಗಿ ಪಾಲಿಸಲೇ ಬೇಕು.

**ಉಕ್ತಂ ಭಗವತಾ ಪೂರ್ವಂ ಸೃಷ್ಟಿಕಾಲೇ ವಿರಿಂಚಿನಾ ।**
**ನ ಚ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಣಂ ॥**

**ಭರ್ತಾ ಯದ್ವದತೇ ವಾಕ್ಯಂ ತತ್ತತ್ಕುರ್ಯಾದಕುತ್ಸಯಾ ।**
**ಭರ್ತೃನಿಂದಾಂ ಯಾ ಕುರುತೇ ಶ್ವಶ್ರೂನಿಂದಾಂ ತಥೈವ ಚ ॥**

**ಪರಿವಾದಂ ಪ್ರಲಾಪಂ ವಾ ನರಕಂ ಸಾ ತು ಗಚ್ಛತಿ ।**
**ಪತೌ ಜೀವತಿ ಯಾ ನಾರೀ ಉಪವಾಸವ್ರತಂ ಚರೇತ್ ॥**

**ಆಯುಷ್ಯಂ ಹರತೇ ಭರ್ತುರ್ಮೃತಾ ನರಕಮೃಚ್ಛತಿ ।**
**ಏವಂ ಜ್ಞಾತ್ವಾ ತಯಾ ಭದ್ರೇ ನ ಕಾರ್ಯಂ ವಿಪ್ರಿಯಂ ಪತೌ ॥**

ಪೂರ್ವಕಾಲದಲ್ಲಿ ಸೃಷ್ಟಿಕಾಲದಲ್ಲಿ ಪೂಜ್ಯನಾದ ಬ್ರಹ್ಮನೇ ಹೇಳಿದ್ದಾನೆ. ಸ್ತ್ರೀಯರಿಗೆ ಬೇರೆ ಯಜ್ಞವಿಲ್ಲ, ವ್ರತವಿಲ್ಲ, ಉಪವಾಸವೂ ಇಲ್ಲ. ಗಂಡನು ಹೇಳಿದುದನ್ನು ಬೇಸರ ಪಟ್ಟುಕೊಳ್ಳದೆ ಮಾಡಬೇಕು. ಗಂಡನನ್ನು ಅತ್ತೆಯನ್ನು ನಿಂದಿಸುವವಳು, ತನ್ನನ್ನು ತಾನು ಬೈದುಕೊಳ್ಳುವಳು. ದುಃಖಪಡುವಳು, ಅವುಗಳನ್ನು ಮಾಡುವವಳು ನರಕವನ್ನು ಹೊಂದುತ್ತಾಳೆ. ಗಂಡನು ಬದುಕಿರುವಾಗ ಹೆಂಡತಿಯು ಉಪವಾಸ ವ್ರತವನ್ನು ಮಾಡಿದರೆ ಆಕೆಯು ಗಂಡನ ಆಯುಷ್ಯವನ್ನು ನಾಶ ಮಾಡುವವದಲ್ಲದೆ ನರಕವನ್ನು ಹೊಂದುತ್ತಾಳೆ, ಎಲೈ ಮಂಗಳೆಯೇ, ಇದನ್ನು ತಿಳಿದು ಗಂಡನ ವಿಷಯದಲ್ಲಿ ವಿರೋಧವನ್ನು ಎಣಿಸಬೇಡ.

ಈ ಬ್ರಹ್ಮದೇವರ ಬಲ ಪಾರ್ಶ್ವವು ನನ್ನ ಸರ್ವಸ್ವ, ಆ ಭಾಗವನ್ನು ನೀನು ಮುಟ್ಟಬೇಡ, ನಾನು ಎಲ್ಲ ಕಾರ್ಯಗಳಲ್ಲಿ ಅವನ ಬಲಬದಿಯಲ್ಲಿ ಕುಳಿತು ಅವನ ಧರ್ಮಕಾರ್ಯಗಳಲ್ಲಿ ಸಹಭಾಗಿನಿ ಆಗಿದ್ದೇನೆ. ಎಡ ಭಾಗವನ್ನು ನೀನು ಅಲಂಕರಿಸು, ನಾರದ ಪುಷ್ಕರರು ಉಳಿದ ಬ್ರಹ್ಮಸ್ಥಾನದಲ್ಲಿ ನಿಂತುಕೊಂಡು ಕೈಕಟ್ಟಿಕೊಂಡು ಸೇನೆಗಾಗಿ ಸಿದ್ಧರಾಗಿರುತ್ತಾರೆ. ಈ ಬ್ರಹ್ಮಸೃಷ್ಟಿ ಇರುವವರೆಗೂ ನಾವಿಬ್ಬರೂ ಬ್ರಹ್ಮದೇವರ ಅಕ್ಕ ಪಕ್ಕದಲ್ಲಿ ನಿಂತುಕೊಂಡು ನಮ್ಮ ಪತಿಯ ಇರುವಿಕೆಗೆ ಶೋಭೆಯನ್ನು ತರೋಣ. ನಾವಿಬ್ಬರೂ ನಮ್ಮ ಪತಿಯಾದ ಪ್ರಜಾಪತಿಯ ಎಡಗೈ ಬಲಗೈಯಂತಿದ್ದು, ಅವರ ಮಹಾಕಾರ್ಯಗಳಲ್ಲಿ ಅನುಕೂಲರಾಗಿ ಇರತಕ್ಕದ್ದು. ಈ ಪುಷ್ಕರ ಕ್ಷೇತ್ರದಲ್ಲಿ ಬ್ರಹ್ಮ ದೇವರ

ಬಲಬದಿಗೆ ನಾನು ಎಡಬದಿಗೆ ನೀನು ಇರು. ನಾನು ಹೇಳಿದ ಈ ಉಪದೇಶದಂತೆ ನೀನು ನಡೆದು ನನ್ನ ಜೊತೆಗೆ ಸುಖವಾಗಿ ಇರು.

**ಗಾಯತ್ರಿ :-** ಸಾವಿತ್ರಿ, ನೀನು ನನ್ನ ಹಿರಿಯ ಅಕ್ಕ, ನನ್ನ ಪ್ರಾಣದ ಒಡತಿ, ಪ್ರೀತಿಗೆಳತಿ ನೀನು ಹೇಳಿದಂತೆ ಮಾಡುತ್ತೇನೆ. ನಾನು ನಿನ್ನ ಅಜ್ಞಾದಾರಿಣಿ, ನೀನು ಎಲ್ಲಿ ಇರು ಎನ್ನುವಿಯೋ ಅಲ್ಲಿ ಇರುತ್ತೇನೆ. ಎಷ್ಟಾದರೂ ನಾನು ನಿನ್ನ ತಂಗಿ ಅಲ್ಲವೆ? ಯಾವಾಗಲೂ ನನ್ನನ್ನು ರಕ್ಷಿಸುವದು ನಿನ್ನ ಕರ್ತವ್ಯವಾಗಿದೆ. ಗಾಯತ್ರಿಯ ಮಾತುಕೇಳಿ ಸಾವಿತ್ರಿಗೆ ಸಂತೋಷವಾಯಿತು. ಅವರಿಬ್ಬರೂ ಬ್ರಹ್ಮದೇವರ ಎಡ ಬಲಗಳನ್ನು ಅಲಂಕರಿಸಿದರು, ಅದರಿಂದ ಎಲ್ಲ ದೇವತೆಗಳಿಗೂ ಹರ್ಷವಾಯಿತು. ಅನಂತರ ಬ್ರಹ್ಮದೇವನು ವಿಷ್ಣುವಿನ ಜೊತೆಗೆ ಪುಷ್ಕರ ತೀರ್ಥದಲ್ಲಿ ಯಜ್ಞದ ಸಮಾಪ್ತಿ ಕಾಲದಲ್ಲಿ ಮಾಡಬೇಕಾದ ಅವಭೃತ ಸ್ನಾನಮಾಡಿದನು. ಎಲ್ಲ ದೇವತೆಗಳಿಗೂ ಸ್ನಾನಾನಂತರ ಬ್ರಹ್ಮನು ವರಗಳನ್ನು ನೀಡಿದನು. ಒಂದೊಂದು ದೇವತೆಗೆ ಒಂದೊಂದು ವಿಶಿಷ್ಟಸ್ಥಾನ ಕೊಟ್ಟನು. ದೇವತೆಗಳಿಗೆಲ್ಲ ದೇವೇಂದ್ರನನ್ನು ದೊರೆಯನ್ನಾಗಿ ಮಾಡಿದನು. ಜ್ಯೋತಿರ್ಮಂಡಲಕ್ಕೆ ಸೂರ್ಯ, ನಕ್ಷತ್ರಗಳಿಗೆ ಚಂದ್ರ, ರಸಗಳಿಗೆ ವರುಣ, ಪ್ರಜಾಪತಿಗಳಿಗೆ ಯಕ್ಷ, ನದಿಗಳಿಗೆ ಸಮುದ್ರ, ಯಕ್ಷ, ರಾಕ್ಷಸರಿಗೂ, ಐಶ್ವರ್ಯಕ್ಕೂ ಕುಬೇರ. ಎಲ್ಲ ಪ್ರಾಣಿ ಪ್ರಮಥಗಣಗಳಿಗೆ ಪರಮೇಶ್ವರ, ಮನುಷ್ಯರಿಗೆಲ್ಲ ಮನುರಾಜ, ಪಕ್ಷಿಗಳಿಗೆ ಗರುಡ, ಋಷಿಗಳಿಗೆ ವಶಿಷ್ಠ, ಗ್ರಹ ಗಣಕ್ಕೆ ರವಿಯನ್ನು ಅಧಿಪತಿಯೆಂದು ಬ್ರಹ್ಮದೇವರು ನಿಯಮಿಸಿದರು. ಹೀಗೆ ಎಲ್ಲರಿಗೂ ಪಿತಾಮಹನು ಒಂದೊಂದು ವಿಶಿಷ್ಟ ಸ್ಥಾನಗಳ ಅಧಿಪತ್ಯ ದಯಪಾಲಿಸಿ ಹರಿಹರರನ್ನು ಕುರಿತು ನುಡಿದನು.

''ಈ ಪೃಥ್ವಿಯಲ್ಲಿ ಎಲ್ಲ ತೀರ್ಥಗಳಲ್ಲಿಯೂ ನೀವಿಬ್ಬರೂ ಹರಿಹರರು ಪೂಜೆ ಹೊಂದಿರಿ. ನೀವಿಲ್ಲದಿದ್ದರೆ ಯಾವ ತೀರ್ಥವೂ ಪುಣ್ಯತೀರ್ಥವಾಗುವದಿಲ್ಲ. ಎಲ್ಲಿಯೇ ಆಗಲಿ ಶಿವನ ಲಿಂಗ ಹರಿಯ ಮೂರ್ತಿ ಇದ್ದರೆ ಅದು ತೀರ್ಥವೆನಿಸುತ್ತದೆ. ಯಾರು ಹೂಗಳನ್ನು ಏರಿಸಿ, ಧೂಪ ದೀಪ ನೈವೇದ್ಯ ತೋರಿಸಿ, ನನ್ನನ್ನು, ನಿಮ್ಮಿಬ್ಬರನ್ನು ಪೂಜೆಮಾಡುವರೋ ಅವರಿಗೆ ರೋಗದ ಭಯವಿಲ್ಲ. ಹರಿಹರ, ಬ್ರಹ್ಮ ಈ ತ್ರಿಮೂರ್ತಿಗಳನ್ನು ಪೂಜಿಸಿದವರಿಗೆ ಅಥವಾ ಯಾವ ರಾಜ್ಯದಲ್ಲಿ ಪೂಜಿಸುವರೋ ಆ ರಾಷ್ಟ್ರದಲ್ಲಿ ಬೇನೆ. ಬೇಸರಿಕೆ, ಚಿಂತೆ, ರೋಗ, ಪಿಡುಗು, ಹಸಿವೆ, ವಿಯೋಗ, ಕಣ್ಣುಬೇನೆ, ತಲೆಶೂಲಿ, ಹೊಟ್ಟೆಶೂಲಿ, ಅತಿಸಾರ, ಹುಣ್ಣು, ಕಾಮಣಿ, ಮೂತ್ರಾಶ್ಮ ಪ್ಲೇಗು, ಕಾಲರಾ, ಮಂತಾದ ರೋಗಗಳು ಬರುವುದೇ ಇಲ್ಲ. ಎಲ್ಲ ಜನರಿಗೂ ಆಯುಷ್ಯ ಅಭಿವೃದ್ಧಿ ಆಗುವದು. ಅಕಾಲ ಮೃತ್ಯು, ಅಕಾಲಫಲ, ನೈಸರ್ಗಿಕ ಅನಾಹುತ ಅತಿವೃಷ್ಟಿ, ಉಲ್ಕಾಪಾತ, ಭೂಕಂಪ, ಮುಂತಾದ ಉಪದ್ರವಗಳು ಎಂದೂ ಉಂಟಾಗುವದಿಲ್ಲ. ಹೀಗೆ ಹೇಳಿದ ಬಳಿಕ, ವಿಷ್ಣುವು ಬ್ರಹ್ಮದೇವನನ್ನು ಸ್ತೋತ್ರಮಾಡಿದನು. ಆಗ ಬ್ರಹ್ಮದೇವರು ಕೂಡ ವಿಷ್ಣುವನ್ನು ಸ್ತೋತ್ರಮಾಡಿದರು.

ಬ್ರಹ್ಮ:- ''ಸರ್ವಜ್ಞಸ್ತ್ವಂನ ಸಂದೇಹಃ ಜ್ಞಾನರಾಶಿಶ್ಚ ಕೇಶವ ।
ದೇವಾನಾಂ ಪ್ರಥಮಃ ಪೂಜ್ಯಃ ಸರ್ವದಾ ತ್ವಂ ಭವಿಷ್ಯಸಿ ॥

ಕೇಶವ, ಜ್ಞಾನರಾಶಿಯಾದ ನೀನು ಸರ್ವಜ್ಞ. ಇದರಲ್ಲಿ ಸಂದೇಹವಿಲ್ಲ. ಆದುದರಿಂದ ನೀನು ಎಲ್ಲ ದೇವತೆಗಳಿಗೂ ಮೊಟ್ಟಮೊದಲು ಪೂಜೆಗೆ

ಯೋಗ್ಯನಾಗಿರುತ್ತಿ. ಅನಂತರ ಭಗವಾನ್ ನಾರಾಯಣನು ಕೂಡ ವಿಡಂಬನಾರ್ಥ ಬ್ರಹ್ಮದೇವನನ್ನು ಸ್ತುತಿಸಿದ್ದನ್ನು ಕಂಡು ರುದ್ರನೂ ಕೂಡ ಸ್ತೋತ್ರ ಮಾಡಿದನು.

**ನಮಸ್ತೇ ಸರ್ವ ದೇವೇಶ ನಮಸ್ತೇ ಸರ್ವನಾಶನ ।**
**ವಿಷ್ಣುನಾಭ್ಯುತ್ತಿತವತೇ ಕಮಲಾಸನ ಜನ್ಮನೇ ॥**

ಎಲ್ಲ ದೇವತೆಗಳಿಗೆ ಒಡೆಯನಾದ ಬ್ರಹ್ಮನೇ ನಿನಗೆ ನಮಸ್ಕಾರ. ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಕಮಲದಲ್ಲಿ ಉದ್ಭವಿಸಿದ, ಮೋಹವನ್ನು ನಾಶಪಡಿಸುವ ನಿನಗೆ ನಮಸ್ಕಾರ, ಜಗದ್ವಂದ್ಯನೆ, ನಿನಗೆ ನಮಸ್ಕಾರ. ನಿನ್ನನ್ನು ಬಿಟ್ಟು ನನಗೆ ಬೇರೆ ರಕ್ಷಕರು ಇಲ್ಲ. ಸಾವಿತ್ರಿಯ ಶಾಪದಿಂದ ನಾನು ಕಂಗೆಟ್ಟಿದ್ದೇನೆ. ನನ್ನ ಲಿಂಗವು ಭೂಮಿಯಲ್ಲಿ ಬಿದ್ದಿದೆ. ನನಗೆ ಶಾಂತಿಯನ್ನು ನೀಡು, ನನ್ನ ಪತ್ನಿ ಪಾರ್ವತಿಯೊಂದಿಗೆ ರಕ್ಷಿಸು.

ಶಿವನ ಸ್ತೋತ್ರವನ್ನು ಕೇಳಿ ಬ್ರಹ್ಮನು ಸಂತುಷ್ಟನಾಗಿ ಹೇಳಿದನು. 'ನಿನಗೆ ಏನು ಬೇಕು? ನಿನ್ನ ಯಾವ ಇಷ್ಟಾರ್ಥ ಪೂರ್ತಿ ಮಾಡಲಿ ಹೇಳು? ಬಯಸಿದ ವರವನ್ನು ಕೇಳು.

**ರುದ್ರ :-** ಬ್ರಹ್ಮನೇ ನೀನು ನಿಜವಾಗಿಯೂ ನನ್ನ ಮೇಲೆ ಪ್ರಸನ್ನನಾಗಿದ್ದರೆ ನೀನು ಇರುವದು ಎಲ್ಲಿ? ಬ್ರಹ್ಮನನ್ನು ಯಾವ ಯಾವ ಸ್ಥಾನಗಳಲ್ಲಿ ನೋಡಬಹುದು? ಭೂಮಂಡಲದಲ್ಲಿ ಸನ್ನಿಹಿತವಾದ ಸ್ಥಾನವು ಯಾವ ಹೆಸರಿನಿಂದ ಶೋಭಿಸುತ್ತಲಿದೆ? ಇದನ್ನೆಲ್ಲ ಹೇಳು. ಆಗ ಬ್ರಹ್ಮನು ರುದ್ರನ ಪ್ರಾರ್ಥನೆಯನ್ನು ಅನುಸರಿಸಿ ಭೂಲೋಕದಲ್ಲಿ ತಾನಿರುವ ಸ್ಥಾನಗಳನ್ನೆಲ್ಲ ಹೇಳಿದನು. ಅವುಗಳಲ್ಲಿ ಮುಖ್ಯವಾಗಿ.

**ಪುಷ್ಕರೇಽಹಂ ಸುರಶ್ರೇಷ್ಠಃ ಗಯಾಯಾಂ ಚ ಚತುರ್ಮುಖ ।**

ಪುಷ್ಕರ ಕ್ಷೇತ್ರದಲ್ಲಿ ನಾನು ಸುರಶ್ರೇಷ್ಠನಾಗಿ ನೆಲೆಸಿರುವೆನು, ಗಯಾದಲ್ಲಿ ಚತುರ್ಮುಖನಾಗಿ ಇರುವೆನು. ಇದಲ್ಲದೆ, ಕಾನ್ಯಕುಬ್ಜ, ಭೃಗುಕ್ಷೇತ್ರ, ಕಾವೇರಿ, ಪ್ರಭಾಸ, ವಾರಣಾಸಿ, ಉಜ್ಜಯಿನಿ ಅಯೋಧ್ಯಾ, ಗಂಗಾದ್ವಾರ, ನೈಮಿಷ, ವೃಂದಾವನ, ಮುಂತಾದ ಸ್ಥಳಗಳಲ್ಲಿ ಸನ್ನಿಹಿತನಾಗಿದ್ದೇನೆ. ಈ ಸ್ಥಾನಗಳಲ್ಲಿ ನನ್ನನ್ನು ಭಕ್ತಿಯಿಂದ ಪೂಜಿಸಿದವರು ಸತ್ಯಲೋಕವನ್ನು ಹೊಂದುತ್ತಾರೆ. ಅದರಲ್ಲಿಯೂ ಪುಷ್ಕರ ಕ್ಷೇತ್ರದಲ್ಲಿರುವ ನನ್ನ ದರ್ಶನ ತೆಗೆದುಕೊಂಡು ವಿಧಿಪೂರ್ವಕಯಾತ್ರೆ ಮಾಡಿದವರು ಮತ್ತು ಯೋಗ್ಯರಿಗೆ ಯಾತ್ರೆ ಮಾಡಿಸಿದವನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಈ ಪುಷ್ಕರದಲ್ಲಿ ಒಂದು ದಿನ ಸಂಧ್ಯಾವಂದನೆ, ಗಾಯತ್ರಿ ಜಪ ಮಾಡಿದರೆ ಹನ್ನೆರಡು ವರ್ಷ ಸಂಧ್ಯಾವಂದನೆ ಮಾಡಿದ ಫಲ. ಸ್ನಾನದಿಂದ ಅಶ್ವಮೇದದ ಫಲ, ಉಪವಾಸದಿಂದ ಅನಂತ ಫಲ. ದಂಪತ್ತು ಭೋಜನದಿಂದ ಕೇಶವನಿಗೆ ಭೋಜನ ಮಾಡಿಸಿದ ಫಲ ತದಿಗೆಯ ದಿನದ ದಂಪತ್ತು ಭೋಜನದಿಂದ ಪಾರ್ವತೀ ಪರಮೇಶ್ವರರಿಗೆ ಭೋಜನ ಮಾಡಿದ ಫಲಪ್ರಾಪ್ತವಾಗುವದು ಇಲ್ಲಿ. ಲಗ್ನವಾಗದ ಕನ್ಯೆಯರಿಗೆ ಊಟಕ್ಕೆ ಹಾಕಿದರೆ ಅವರ ವಂಶದಲ್ಲಿ ಬಂಜೆಯರೇ ಆಗುವದಿಲ್ಲ ಗಂಡು ಮಕ್ಕಳನ್ನೇ ಹೆರುತ್ತಾರೆ. ಗಂಡನಿಗೆ ಪ್ರೀತ್ಯಾಸ್ಪದರಾಗುತ್ತಾರೆ. ಸಾವಿತ್ರಿಯ ಮುಂದೆ ಕುಮಾರಿಯರಿಗೆ ಹುಳಿ, ಖಾರ, ಹಾಕದೆ ಐದು ಬಗೆಯ ಸಿಹಿ ಪಕ್ವಾನ್ನ ಮಾಡಿಸಿ ತುಪ್ಪದಲ್ಲಿ ಬೇಯಿಸಿ ಅಥವಾ ಹಾಲಿನಲ್ಲಿ ಹಾಕಿದ ಪೂರಿ ಅಥವಾ ಬೆಲ್ಲ ತುಪ್ಪಮಿಶ್ರಿತ ಪಕ್ವಾನ್ನ ಇಲ್ಲವೆ, ಮೊಸರು ಹಾಲು ಕೂಡಿ ಸೀಕರಣೆ ಇವುಗಳನ್ನು ಮಾಡಿಸಿ

ಹಾಕಿದರೆ, ಹೋಳಿಗೆ, ಚಕ್ಕುಲಿ ಬಡಿಸಿದರೆ, ನಿರಂತರ ಐಶ್ವರ್ಯ ಪ್ರಾಪ್ತಿ, ಮಕ್ಕಳು, ಮೊಮ್ಮಕ್ಕಳು, ಬಂಧು, ಬಾಂಧವರಿಂದ ಕುಲವು ಅಭಿವೃದ್ಧಿ ಹೊಂದುವದು. ಕಡಬುಗಳಿಂದ ಪೂಜಿಸುವದರಿಂದ ಸರ್ವಸಮೃದ್ಧಿ ಆಗುವದು ಚಿಕ್ಕ ಹೆಣ್ಣು ಮಕ್ಕಳಿಗೆ ಗೌರಿ ಎಂದು ಕರೆಯುವರು. ಈ ಗೌರಿಯರ ಬಳಗ ಕರೆತಂದು ಊಟಕ್ಕೆ ಹಾಕಿದರೆ ಹೆಣ್ಣುಮಗಳು ಚಲುವೆ, ಪತಿವ್ರತೆಯಾಗಿ, ಜನ್ಮಾಂತರದಲ್ಲಿ ಸಹಸ್ರಾರು ಜನರಿಗೆ ಊಟಮಾಡಿಸುವಷ್ಟು ಭಾಗ್ಯವಂತಳಾಗಿ ಜನಿಸುವಳು.

ಈ ಪುಷ್ಕರ ಕ್ಷೇತ್ರದಲ್ಲಿಯ ಸರಸ್ವತಿ ನದಿಯ ನೀರಿನಿಂದ ಕಲ್ಲು ಸಕ್ಕರೆ ಹಾಕಿ ಪಾನಕಮಾಡಿ ಸುವಾಸಿನಿಯರಿಗೆ ಕುಡಿಯಲು ಕೊಡಬೇಕು. ಮತ್ತೈದೆಯರಿಗೆ ಸೀರೆ, ಬಳೆ, ಕುಂಕುಮ, ಹೂವಿನಹಾರ, ತೆಂಗಿನಕಾಯಿ, ಕಾಡಿಗೆ, ಮುಂತಾದವುಗಳನ್ನು ಕೊಟ್ಟು, ಕಣ್ಣಿಗೆ ಕಾಡಿಗೆ ಹಚ್ಚಿ, ಹಣೆಗೆ ತಿಲಕವಿಟ್ಟು, ಒಂದು ತಟ್ಟೆಯಲ್ಲಿ ತಾಂಬೂಲವನ್ನು ಕೊಡಬೇಕು. ಇದರಿಂದ ಬ್ರಹ್ಮದೇವರು ಪ್ರೀತನಾಗಿ ಇಷ್ಟಾರ್ಥ ನೀಡುವನು.

ತೀರ್ಥ ಕ್ಷೇತ್ರಗಳಲ್ಲಿ ಜನರಿಗೆ ಊಟಕ್ಕೆ ಹಾಕುವ ಶಕ್ತಿ ಇಲ್ಲದಿದ್ದರೆ, 'ಮನೆಗೆ ಹೋಗಿ ಭೋಜನ ಮಾಡಿಸುತ್ತೇನೆ' ಎಂದು ಪ್ರಾರ್ಥಿಸಬೇಕು. ಮನೆಗೆ ಬಂದು, ವಿಧಿಪೂರ್ವಕವಾಗಿ, ಉತ್ಸವ ಮಾಡಬೇಕು. ತೀರ್ಥಕ್ಕೆ ಹೋಗಿ ಬಂದು ಅಲ್ಲಿ ಸಂಕಲ್ಪಮಾಡಿ, ಮನೆಯಲ್ಲಿ ಶ್ರಾದ್ಧಮಾಡಿದರೆ ತೀರ್ಥದಲ್ಲಿ ಮಾಡಿದಕ್ಕಿಂತ ಎಂಟು ಪಟ್ಟು ಪುಣ್ಯ ಬರುವದು. **'ತೀರ್ಥಾದಷ್ಟಗುಣಂ ಪುಣ್ಯಂ ಸ್ವಗೃಹೇ ದದತಾಂ ಶಿವ'**

**ನ ಚ ಪಶ್ಯಂತಿ ವೈ ನೀಚಾಃ ಶ್ರಾದ್ಧದತ್ತಂ ದ್ವಿಜಾತಿಭಿಃ ।**
**ಏಕಾಂತೇ ತು ಗೃಹೇ ಗುಪ್ತೇ ಪಿತೄಣಾಂ ಶ್ರಾದ್ಧಮಿಷ್ಯತೇ ॥**
**ನೀಚದೃಷ್ಟ್ಯಾಹಂತ ತಚ್ಚ ಪಿತೃಣಾಂ ನೋಪತಿಷ್ಠತೇ।**
**ತಸ್ಮಾತ್ಸರ್ವ ಪ್ರಯತ್ನೇನ ಶ್ರಾದ್ಧಂ ಗುಪ್ತಂ ಚ ಕಾರಯೇತ್ ॥**

ಶ್ರಾದ್ಧವನ್ನು ಗುಪ್ತವಾಗಿ ಏಕಾಂತದಲ್ಲಿಯೇ ಮಾಡಬೇಕು. ನೀಚರ ದೃಷ್ಟಿಬಿದ್ದರೆ, ಪಿತೃಗಳು ಪಿಂಡವನ್ನು ಸ್ವೀಕರಿಸಲು ಅಲ್ಲಿಗೆ ಬರುವದೇ ಇಲ್ಲ ಆದುದರಿಂದ ಶಕ್ಯವಿದ್ದಷ್ಟು ಶ್ರಾದ್ಧವನ್ನು ಗುಪ್ತವಾಗಿಯೇ ಮಾಡಬೇಕು. ಈ ವಿಷಯದಲ್ಲಿ ಪ್ರಮಾಣ

**ರಾಜಸೀ ಸಾ ಸಮಾಖ್ಯಾತಾ ಜನಾನಾಂ ಕೀರ್ತಿದಾಯಿನೀ ।**
**ಗುಪ್ತದಾನಂ ಸದಾ ದೇಯಮಾತ್ಮನೋ ಹಿತಮಿಚ್ಛತಾ ॥**

ಪಿತೃಗಳಿಗೆ ಹೀಗೆ ಗುಟ್ಟಾಗಿ ಮಾಡಿದ ಶ್ರಾದ್ಧ ಕರ್ಮದಿಂದಲೇ ಪ್ರೀತಿಯಾಗುವದೆಂದು ಬ್ರಹ್ಮದೇವನೇ ಹೇಳಿದ್ದಾನೆ, ಗುಪ್ತದಾನವು ಸಾತ್ವಿಕದಾನ. ಕೀರ್ತಿ ಕಾಮನೆಯಿಂದ ಜನರೆದುರು ಮಾಡುವದು ರಾಜಸ ದಾನವೆಂದು.

ಪ್ರಾಚೀನರ ವಚನದಿಂದ ಹೇಳಲ್ಪಟ್ಟಿದೆ.

**ಏಕಸ್ಮಿನ್ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ।**
**ಭವನೇ ನಾತ್ರ ಸಂದೇಹೋ ಸತ್ಯಂ ಪೌರಾಣಿಕಂ ವಚಃ ॥**

ಮನೆಯಲ್ಲಿ ಒಬ್ಬನೇ ದ್ವಿಜನಿಗೆ ಭಕ್ತಿಯಿಂದ ಭೋಜನ ಮಾಡಿಸಿದರೆ ( ಆ ದ್ವಿಜನು ಅಂತಹ ಯೋಗ್ಯತೆಯವನಿದ್ದರೆ) ಕೋಟಿ ಜನ ಭೋಜನ ಮಾಡಿಸಿದ ಪುಣ್ಯ ಬರುವದು ಎಂದು ಪುರಾಣದ ಮಾತು ಸತ್ಯವೇಸರಿ.

**ತೀರ್ಥೇಷು ಬ್ರಾಹ್ಮಣಂ ನೈವ ಪರೀಕ್ಷೇತ ಕಥಂಚನ।**
**ಅನ್ನಾರ್ಥಿನಮನುಪ್ರಾಪ್ತಂ ಭೋಜ್ಯಂ ತಂ ಮನುರಬ್ರವೀತ್ ॥**

ತೀರ್ಥ ಕ್ಷೇತ್ರಗಳಲ್ಲಿ ದ್ವಿಜರನ್ನು ಹೇಗಿದ್ದಾನೆ ಎಂದು ಸರ್ವಥಾ ಪರೀಕ್ಷೆ ಮಾಡಬಾರದು. ಹಸಿದು ಅನ್ನ ಬೇಕೆಂದು ಬಂದವನಿಗೆ ಊಟಕ್ಕೆ ಹಾಕಬೇಕು, ಎಂದು ಮನುಮಹರ್ಷಿ ಹೇಳಿದ್ದಾನೆ. ಶ್ರಾದ್ಧವನ್ನು ಹಿಟ್ಟಿನ ಉಂಡೆಯಿಂದ ಮಾಡಿದ ಪಿಂಡಗಳನ್ನು ಅರ್ಪಿಸಿ ಅಥವಾ ಅನ್ನದ ಪಿಂಡಮಾಡಿ ಇಲ್ಲವೆ. ಇಂಗಳದ, ಎಳ್ಳಿನ ಹಿಂಡಿಯ ಪಿಂಡಮಾಡಿ ಮಾಡಬಹುದು. ತೀರ್ಥಗಳಲ್ಲಿ

ಶ್ರಾದ್ಧ ಮಾಡುವವರು ಅರ್ಘ್ಯ ಕೊಡಬೇಕಾಗಿಲ್ಲ ಆವಾಹನೆ ಮಾಡಬೇಕಾಗಿಲ್ಲ. ನಾಯಿ, ಹದ್ದು, ಕಾಗೆಗಳ ಕಣ್ಣಿಗೆ ಬೀಳುವಂತೆ ಮಾಡಬಾರದು. ತೀರ್ಥದಲ್ಲಿ ಶ್ರಾದ್ಧಮಾಡಲು ಪಿತೃಗಳು ಮರಣ ಹೊಂದಿದ ತಿಥಿಯೇ ಆಗಬೇಕೆಂಬ ನಿಯಮವಿಲ್ಲ. ತೀರ್ಥಕ್ಕೆ ಬಂದಕೂಡಲೇ ಸ್ನಾನ, ಪಿತೃ ತರ್ಪಣ ಮಾಡಬೇಕು. ವಿಲಂಬ ಮಾಡಬಾರದು. ಪಿತೃಗಳು ತಮ್ಮ ವಂಶದವರಿಂದ ತರ್ಪಣ ಪಿಂಡ ಪ್ರದಾನಗಳನ್ನು ಸರ್ವದಾ ಅಪೇಕ್ಷಿಸುತ್ತಲೇ ಇರುತ್ತಾರೆ. ತೀರ್ಥಗಳಲ್ಲಿ ಶ್ರಾದ್ಧಮಾಡಿದರೆ, ಆಧಿವ್ಯಾಧಿಗಳು ಪರಿಹಾರವಾಗಿ, ಪಾಪಗಳು ದೂರವಾಗಿ ಪರಲೋಕದಲ್ಲಿ ಸದ್ಗತಿ ಪ್ರಾಪ್ತವಾಗುತ್ತದೆ. ಇವೆಲ್ಲವನ್ನು ಬ್ರಹ್ಮದೇವನೇ ಹೇಳಿದ್ದಾನೆ. ಕೃತಯುಗದಲ್ಲಿ ಪುಷ್ಕರವನ್ನು, ತ್ರೇತಾಯುಗದಲ್ಲಿ ನೈಮಿಷ ಕ್ಷೇತ್ರವನ್ನು, ದ್ವಾಪರದಲ್ಲಿ ಕುರುಕ್ಷೇತ್ರ ಕಲಿಯುಗದಲ್ಲಿ ಗಂಗೆಯನ್ನು ಆಶ್ರಯಿಸಬೇಕು.

**'ಕಲೌ ಗಂಗಾಂ ಸಮಾಶ್ರಯೇತ್'**
**ದುಷ್ಕರಃ ಪುಷ್ಕರೇ ವಾಸೋ ದುಷ್ಕರಂ ಪುಷ್ಕರೇ ತಪಃ**
**ದುಷ್ಕರಂ ಪುಷ್ಕರೇ ದಾನಂ ದುಷ್ಕರಃ ಪುಷ್ಕರೇ ಜಪಃ ॥**

ಪುಷ್ಕರ ಕ್ಷೇತ್ರದಲ್ಲಿ ದಾನ ಮಾಡುವ ಅವಕಾಶ ಸಿಗುವದು ಕಷ್ಟ. ಅಲ್ಲಿ ವಾಸ ಮಾಡುವ ಹಾಗೂ ತಪಸ್ಸು ಮಾಡುವ ಮತ್ತು ಜಪ ಮಾಡುವ ಸುಸಂಧಿ ದೊರಕುವದು ಅಪರೂಪ.

**ಯದನ್ಯತ್ರ ಕೃತಂ ಪಾಪಂ ತೀರ್ಥೇ ತದ್ಯಾತಿ ಲಾಘವಂ ।**
**ನ ತೀರ್ಥಕೃತಮನ್ಯತ್ರ ಕ್ವಚಿತ್ಪಾಪಂ ವ್ಯಪೋಹತಿ ॥**

ಬೇರೆ ಕಡೆ ಮಾಡಿದ ಪಾಪವು ತೀರ್ಥದಲ್ಲಿ ಸ್ನಾನ ಮಾಡುವದರಿಂದ ಹೋಗುವದು. ಆದರೆ ತೀರ್ಥ ಕ್ಷೇತ್ರಗಳಲ್ಲಿ ಗೈದ ಪಾಪವು ಮಾತ್ರ ಎಲ್ಲಿ ಹೋದರೂ ಏನು ಮಾಡಿದರೂ ಹೋಗಲಾರದು. ಕುರುಕ್ಷೇತ್ರದಲ್ಲಿ ಏಕ ಹಂಸವನ್ನು, ನೈಮಿಷದಲ್ಲಿ ಗಂಗಾಧರನನ್ನು ಪುಷ್ಕರದಲ್ಲಿ ಬ್ರಹ್ಮದೇವರನ್ನು ದರ್ಶನ ಮಾಡಿಕೊಂಡರೆ ವಿಶಿಷ್ಟವಾದ ಮುಕ್ತಿಯು ದೊರಕುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಬ್ರಹ್ಮದೇವರು ಆಚರಿಸಿದ ಯಜ್ಞ ಇಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

॥ ಭೀಷ್ಮ ಉವಾಚ ॥

ಕ್ಷೇಮಂಕರೀ ತು ಯಾ ದೇವೀ ಸ್ಥಿತಾ ಪುಷ್ಕರಪರ್ವತೇ ।
ತಸ್ಯ ಉತ್ಪತ್ತಿಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥

**ಭೀಷ್ಮ:-** ಪುಷ್ಕರ ಪರ್ವತದಲ್ಲಿ ಕ್ಷೇಮಂಕರೀ ದೇವಿಯು ಇರುವಳಷ್ಟೇ! ಅವಳ ಉತ್ಪತ್ತಿಯನ್ನು ವಿವರಿಸಿರಿ. ಅದನ್ನು ಕೇಳಲು ನನಗೆ ಬಹಳ ಕುತೂಹಲ.

**ಪುಲಸ್ತ್ಯ:-** ಸರ್ವ ಪ್ರಾಣಿಗಳಲ್ಲಿ ಅತ್ಯಂತ ಬಲಿಷ್ಠಳಾದ ಕ್ಷೇಮಂಕರೀ ದೇವಿಯು ಸಾತ್ವಿಕ ಸ್ವರೂಪದ ಪರಾಶಕ್ತಿ. ಯುದ್ಧ ಸಾಂದರ್ಭಿಕ ಕಾರಣ ಅವಳು ಪುಷ್ಕರಕ್ಕೆ ಬಂದಳು. ಆ ದೇವಿಯು ಬಹು ಕಾಲ ತಪಸ್ಸು ಮಾಡಿದಳು. ಅದಕ್ಕೆ ಬೇಗ ಫಲ ದೊರಕಲಿಲ್ಲ. ಅದರಿಂದ ಅವಳಿಗೆ ಕೋಪ ಬಂದಿತು. ಅವಳ ಕೋಪದಿಂದ ಕಪ್ಪು ಕುರುಳಿನ, ತೊಂಡೆ ತುಟಿಯ, ತಾವರೆ ಕಣ್ಣಿನ, ಶಾಂತ ದೃಷ್ಟಿಯ, ತೇಜಸ್ವಿನಿಯರಾದ ಕುಮಾರಿಯರು ಉದ್ಭವಿಸಿದರು. ಅನಂತರ ಅವಳ ಮನಸ್ಸು ಕೋಪದಿಂದ ಕಲಕಿದಂತಾಗಲು ಮತ್ತೆ ಸಾವಿರಾರು, ಕೋಟ್ಯಾವಧಿ ಕುಮಾರಿಯರು ಅವಳು ತಪಗೈಯುವ ಬೆಟ್ಟದ ಮೇಲೆಯೇ ಹುಟ್ಟಿನಿಂತರು. ಹೀಗೆ ಈ ಪುಷ್ಕರ ಪರ್ವತದಲ್ಲಿ ಕೋಟಿ, ಕೋಟಿ ಕನ್ಯೆಯರನ್ನು ನಿರ್ಮಿಸಿ ಕ್ಷೇಮಂಕರಿ ದೇವಿಯು ತನ್ನ ತಪೋಬಲದಿಂದ ಗಗನಚಾರಿಯಾದ ಒಂದು ದೊಡ್ಡ ಪಟ್ಟಣವನ್ನೇ ನಿರ್ಮಿಸಿದಳು. ಆ ಆಕಾಶನಗರವು ಅನೇಕ ಭವ್ಯ ಭವನ. ಕೋಟೆ, ಸರೋವರ, ಕೈ ತೋಟವುಳ್ಳದ್ದು ಮತ್ತು ರಥಗಳು ಓಡಾಡುವಷ್ಟು ವಿಶಾಲ ಬೀದಿಗಳುಳ್ಳದ್ದಾಗಿತ್ತು. ಆ ನಗರದಲ್ಲಿ ವಿದ್ಯುತ್ಪ್ರಭೆ, ಚಂದ್ರಕಾಂತಿ, ಚಾರುಕೇಶಿ, ಊರ್ವಶಿ, ವಿಶಾಲಾಕ್ಷಿ, ಸ್ವಯಂಪ್ರಭಾ, ವಿಭಾವರಿ, ಜಯಾ, ವಿಜಯಾ, ಅಪರಾಜಿತಾ ಎಂದು ಹೆಸರುಳ್ಳ ಆ ಕನ್ಯಾಮಣಿಗಳು ಸರ್ವಾಲಂಕಾರಭೂಷಿತರಾಗಿ ಆ ದೇವಿಯನ್ನು ಹಿಂಬಾಲಿಸುತ್ತಿದ್ದರು. ಅವಳು ಸಿಂಹಾಸನದಲ್ಲಿ ಕುಳಿತಾಗ ಛತ್ರ-ಚಾಮರಗಳ ಸೇವೆ ಗೈಯುತ್ತಿದ್ದರು. ಒಂದು ದಿನ ಬ್ರಹ್ಮಪುತ್ರನಾದ ನಾರದನು ಅಲ್ಲಿಗೆ ಬಂದನು. ಅವನಿಗೆ ತನ್ನ ಪರಿಚಾರಿಕೆಯರಿಂದ ಅರ್ಘ್ಯ, ಪಾದ್ಯ, ಆಸನಗಳನ್ನು ಕೊಟ್ಟು ಸತ್ಕರಿಸಿ, ದೇವಿಯು ಕುಶಲ ಪ್ರಶ್ನೆ ಮಾಡಿದಳು.

**ದೇವಿ :-** ಮುನಿಶ್ರೇಷ್ಠನೆ, ನಿನಗೆ ಸ್ವಾಗತ. ನೀನು ಯಾವ ಲೋಕದಿಂದ ಬಂದೆ, ನಮ್ಮಲ್ಲಿ ಏನು ಕೆಲಸ? ಹೇಳು, ವ್ಯರ್ಥ ಕಾಲಹರಣ ಬೇಡ ಬೇಗ ಹೇಳು.

**ನಾರದ :-** ದೇವೀ, ನಾನು ಬ್ರಹ್ಮಲೋಕದಿಂದ, ಇಂದ್ರಲೋಕ ಅಲ್ಲಿಂದ ರುದ್ರಲೋಕಗಳಿಗೆ ಹೋಗಿ ಇಲ್ಲಿರುವ ನಿನ್ನನ್ನು ಕಂಡು ಹೋಗಲು ಬಂದಿದ್ದೆ.

**ಪುಲಸ್ತ್ಯ :-** ಹೀಗೆ ನುಡಿದು ಮುನಿಶ್ರೇಷ್ಠನಾದ ನಾರದನು ಆ ಕ್ಷೇಮಂಕರಿ ದೇವಿಯನ್ನು ಅಡಿಯಿಂದ ಮುಡಿಯವರೆಗೆ ನೋಡಿ ತನ್ನಲ್ಲಿಯೇ ನುಡಿದನು.

**ನಾರದ :-** ಅಬ್ಬಾ! ಏನಿದು ಕಾಂತಿ! ಎಂತಹ ಸೌಂದರ್ಯ! ಎಷ್ಟು ಧೈರ್ಯ! ಎಂತಹ ನಿರ್ಭಯತೆ! ಇದೇನು ನವ ತಾರುಣ್ಯ! ಅಪೂರ್ವ ಲಾವಣ್ಯ! ಇಷ್ಟಿದ್ದರೂ ಈ ದೇವಿಗೆ ಕಾಮವೇ ಇಲ್ಲ. ಇವಳ ಸೌಂದರ್ಯವೆಲ್ಲವೂ ವ್ಯರ್ಥವೇ.

ಹೀಗೆ ನುಡಿದು ಖಿನ್ನನಾದನು. ದೇವ, ಗಂಧರ್ವ, ಸಿದ್ಧ, ಯಕ್ಷ, ಕಿನ್ನರ, ರಾಕ್ಷಸ ಯಾವ ಜಾತಿಯಲ್ಲಿಯೂ, ಯಾವ ಸ್ತ್ರೀಯರಲ್ಲಿಯೂ ಇಂತಹ ರೂಪ ಸಿರಿಯು ಇರುವದಿಲ್ಲ. ನಾನು

ಎಲ್ಲಿಯೂ ಇಂತಹ ಚಲುವಿಕೆಯನ್ನು ಕಂಡಿಲ್ಲ ಎಂದು ತನ್ನ ಮನಸ್ಸಿನಲ್ಲಿಯೇ ನಾರದನು ಆಶ್ಚರ್ಯಚಕಿತನಾದನು. ಮತ್ತು ಆ ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಮುಗಿಲಿಗೆ ಹಾರಿದನು. ಅಲ್ಲಿಂದ ಅತ್ಯಂತ ತ್ವರಿತ ಗತಿಯಿಂದ ಮಹಿಷಾಸುರನ ಪಟ್ಟಣಕ್ಕೆ ಆಗಮಿಸಿದನು. ಸಮುದ್ರದ ಮಧ್ಯದಲ್ಲಿ ಮಹಿಷಾದಾನವನು ಆ ಪಟ್ಟಣವನ್ನು ಕಟ್ಟಿಕೊಂಡು ಆಳುತ್ತಿದ್ದನು. ಅಸಾಧಾರಣ ವರಗಳನ್ನು ಪಡೆದ ದೇವ ಸೇನೆಗೆ ಅಂತಕನಂತಾದ ಆ ದಾನವೇಂದ್ರನು ನಾರದ ಮುನಿಯನ್ನು ಭಕ್ತಿಯಿಂದ ಪೂಜಿಸಿದನು. ಆಗ ನಾರದನು ಅವನು ಮಾಡಿದ ಆದರೋಪಚಾರಗಳಿಂದ ಸಂತುಷ್ಟನಾಗಿ ಅವನಿಗೆ ತಿಳಿಸಿದನು.

'ದೈತ್ಯ ದೊರೆಯೆ, ನಾನು ಬ್ರಹ್ಮಲೋಕದಿಂದ ಪುಷ್ಕರಾರಣ್ಯಕ್ಕೆ ಹೋಗಿದ್ದೆ. ಅಲ್ಲಿ ಒಂದು ದೇವಿಪುರ. ಆದರೆ ತುಂಬ ಲಕ್ಷಾವಧಿ ಸುಂದರಿಯರಾದ ಕನ್ಯೆಯರು. ಅವರ ಮಧ್ಯದಲ್ಲಿ ಕನಕಕಾಂತಿಯಿಂದ ಮಿಂಚುವ ಒಂದು ಕನ್ಯಾರತ್ನವಿದೆ. ಅವಳು ತಾಪಸ ವ್ರತವನ್ನು ಕೈಕೊಂಡಿದ್ದಾಳೆ. ಆ ತಪಸ್ವಿನಿ ವೇಷದಲ್ಲಿಯೂ ಆ ಕನ್ಯೆಯ ಸೌಂದರ್ಯವು ನೋಡಿದವರ ಕಣ್ಣು ಕುಕ್ಕುವಂತಹದಿದೆ. ನಾನು ಸಮಗ್ರ ಬ್ರಹ್ಮಾಂಡದಲ್ಲಿ ಸಂಚರಿಸಿರುವೆನು. ಆದರೆ ಅಂತಹ ಸುಂದರ ಕನ್ಯೆಯನ್ನು ಕಾಣಲಿಲ್ಲ. ಅನೇಕಾನೇಕ ದೇವ, ಗಂಧರ್ವ ಕಿನ್ನರ ನಾಯಕರು ಅವಳ ಸೇವೆಗೆ ಕೈಕಟ್ಟಿಕೊಂಡು ನಿಂತಿರುತ್ತಾರೆ. ಅವಳನ್ನು ನೋಡಿದ ಸಮಾಚಾರವನ್ನು ನಿನಗೆ ತಿಳಿಸಬೇಕೆಂದು ಮನಸ್ಸಾಯಿತು. ಆದರೆ ನೀನು ಎಲ್ಲ ದೇವತೆಗಳನ್ನು ಗೆಲ್ಲದ ಹೊರತೂ ಆ ಕನ್ಯೆ ನಿನ್ನ ಕೈಗೆ ಹತ್ತಲಾರಳು.

**ಪುಲಸ್ತ್ಯ** :- ಹೀಗೆ ಹೇಳಿ, ಅಲ್ಲಿ ಒಂದುಗಳಿಗೆ ಕುಳಿತು, ಅನಂತರ ನಾರದರು ಹಿಂತಿರುಗಿದರು. ಅರೆ ಕ್ಷಣದಲ್ಲಿ ಆ ದೈತ್ಯ ವೀರನ ಕಣ್ಣಿಗೆ ಕಾಣದಂತಾದರು. ನಾರದರು ಹೋದ ಬಳಿಕ ಆ ದಾನವೇಶ್ವರನಿಗೆ ಆ ಕನ್ಯಾಮಣಿಯ ಚಿಂತೆ ಪ್ರಾರಂಭವಾಯಿತು. ಅವನ ಮನಸ್ಸಿಗೆ ಸಮಾಧಾನವೇ ಉಳಿಯಲಿಲ್ಲ. ಅನೇಕ ಉಪಾಯ ಹಾಗೂ ತಂತ್ರಗಳನ್ನು ಬಲ್ಲ ತನ್ನ ಮಂತ್ರಿ ಮುಖ್ಯಸ್ತರನ್ನೆಲ್ಲ ಕರೆಸಿದನು. ಪ್ರಘಸ, ವಿಘಸ, ವಿಭಾವಸು, ವಿದ್ಯುನ್ಮಾಲಿ ಸುಮಾಲಿ, ಪರ್ಜನ್ಯ, ಅಕ್ರೂರ ಎಂಬ ಹೆಸರಿನ ಅವನ ಅಷ್ಟಪ್ರಧಾನರು ಆ ರಾಕ್ಷಸೇಂದ್ರನ ಹತ್ತಿರ ಬಂದು ತಮ್ಮನ್ನು ಕರೆಸಿದ ಕಾರಣ ಕೇಳಿದರು. ಆಗ ಮಹಿಷಾಸುರನು ಅವರಿಗೆ ಹೇಳಿದನು.

**ಮಹಿಷಾಸುರ** :- ಸಚಿವರೆ, ನಾರದನು ನನಗೆ ಓರ್ವ ಸರ್ವಾಂಗ ಸುಂದರಿಯಾದ ಕನ್ಯೆಯ ವಿಷಯವನ್ನು ತಿಳಿಸಿ ಹೋಗಿದ್ದಾರೆ. ನಾರದರ ಹೇಳಿಕೆಯಂತೆ ಅವಳ ಅಂಗಾಗಗಳಲ್ಲಿ ತುಂಬು ತಾರುಣ್ಯ, ಲಲಿತ ಲಾವಣ್ಯ ಉಕ್ಕುತ್ತಲಿವೆ. ಇಂತಹ ಆ ಸರ್ವಾಂಗ ಸುಂದರಿಯು ನೆಲದ ಮೇಲೆ ಇಳಿದು ಬಂದ ಅಪ್ಸರೆಯಂತೆ ಇರುವಳಂತೆ. ನಿಜವಾಗಿಯೂ ನಾರದರು ಪರೋಪಕಾರಿಯಾದ ಪುಣ್ಯಾತ್ಮ ಅವಳನ್ನು ಕಂಡ ಕೂಡಲೆ ಇಲ್ಲಿಗೆ ಧಾವಿಸಿ ಬಂದು ನನಗೆ ಆ ಚೆಲುವೆಯ ಸಮಾಚಾರ ತಿಳಿಸಿ ಹೋಗಿದ್ದಾರೆ. ಆದರೆ ಅವಳನ್ನು ಹಾಗೆಯೇ ಹಾರಿಸಿಕೊಂಡು ಬರಲು ಸಾಧ್ಯವಿಲ್ಲ. ದೇವಾಧಿ ದೇವತೆಗಳನ್ನು ಯುದ್ಧದಲ್ಲಿ ಗೆದ್ದು ಅವಳನ್ನು ನಾನು ದೊರಕಿಸಕೊಳ್ಳಬೇಕಾಗಿದೆ. ಅದಕ್ಕಾಗಿ ನಿಮ್ಮನ್ನು ಕರೆಸಿದ್ದೇನೆ. ಈ ವಿಷಯದಲ್ಲಿ ನನಗೆ ಸಲಹೆ ಕೊಡಿರಿ. ಆ ಕನ್ಯಾಮಣಿಯನ್ನು ನಾನು ಪಡೆಯುವ ಬಗೆ ಹೇಗೆ? ಏನು ಮಾಡಿದರೆ ನಾವು ದೇವತೆಗಳನ್ನು ಸೋಲಿಸಬಹುದು. ಇದೆಲ್ಲವನ್ನು ನೀವು ವಿಚಾರ ಮಾಡಿರಿ ಹೇಳಿರಿ. ಆಗ ಅವನ ಎಂಟು ಮಂತ್ರಿಮಂಡಲದಲ್ಲಿ ಒಬ್ಬನಾದ ಪ್ರಘಸನು ದಾನವೇಶ್ವರನು ಕುರಿತು ನುಡಿದನು.

**ಗುರುಪತ್ನೀಂ ಭೃತ್ಯಪತ್ನೀಂ ತಥಾ ಸಾಮಸ್ತಯೋಷಿತಃ ।**
**ಜಿಘೃಕ್ಷನ್ಮ್ರಿಯತೇ ರಾಜನ್ನಗಮ್ಯಾಗಮನೇನ ಚ ॥**

**ಪ್ರಘಸ :-** ಗುರುವಿನ ಹೆಂಡತಿ, ಸೇವಕನ ಪತ್ನಿ ಮತ್ತು ಸಾಮಂತರಾಜರ ಮಡದಿಯರು ಇವರನ್ನೂ ಮತ್ತು ಬೇರೆ ಅಗಮ್ಯ ಸ್ತ್ರೀಯರನ್ನೂ ಬಯಸಿದರೆ ಹಾಗೂ ಭೋಗ ಮಾಡಿದರೆ ಮನುಷ್ಯನು ಮರಣ ಹೊಂದುತ್ತಾನೆ.

**ಯಾ ಸಾ ತೇ ಕಥಿತಾ ದೈತ್ಯ ನಾರದೇನ ಮಹಾಸತಿ ।**
**ಸಾ ಶಕ್ತಿಃ ಪರಮಾ ದೇವೀ ವೈಷ್ಣವೀ ಲೋಕಧಾರಿಣೀ ॥**
**ಸಾಗ್ನಿ ಜ್ವಾಲಾ ತೃಣಂ ತ್ವಂ ಚ ಸಾ ಚ ತ್ವಾಂ ನಿರ್ದಕ್ಷ್ಯತಿ ।**
**ಏವಂ ಜ್ಞಾತ್ವಾನ ಭಾವಂ ತ್ವಂಕರ್ತುಮರ್ಹಸಿ ದಾನವ ॥**
**ಸುರರ್ಷಿಣಾ ಸುರಕಾರ್ಯಂ ಕರ್ತುಕಾಮನೇ ಕೀರ್ತಿತಾ ॥**

ಮಹಾಪ್ರಭುವೆ ನಾರದರು ನಿಮ್ಮ ಮುಂದೆ ಹೇಳಿದ ಆ ಕನ್ಯಾಮಣಿಯು ಸಾಮಾನ್ಯಳಲ್ಲ ಮಹಾಸತಿಯೂ ಲೋಕಧಾರಣಿಯೂ ಆದ ಸಾಕ್ಷಾತ್ ವೈಷ್ಣವೀ ಶಕ್ತಿಯೇ ಅವಳು. ನೀನು ಬಯಸಿದ ಪರಾಶಕ್ತಿ ರೂಪಳಾದ ಆ ದೇವಿಯು ಬೆಂಕಿಯ ಉರಿ. ನೀನು ಅವಳ ಮುಂದೆ ಒಂದು ಹುಲ್ಲು ಕಡ್ಡಿ. ಅವಳ ಹತ್ತಿರ ಹೋದರೆ ನಿನ್ನನ್ನು ಸುಡುವಳು ಇದನ್ನೆಲ್ಲ ವಿಚಾರಿಸಿ ಅವಳನ್ನು ನೀನು ಕಾಮುಕ ದೃಷ್ಟಿಯಿಂದ ನೋಡದಿರುವುದೇ ಕ್ಷೇಮ. ಅವಳ ವಿಷಯವನ್ನು ನಾರದರು ಬಂದು ಹೇಳಿದ್ದು. ನಿನ್ನ ಹಿತಕ್ಕಾಗಿ ಅಲ್ಲ. ನಾರದರಿಗೆ ದೇವಕಾರ್ಯ ಸಾಧಿಸಬೇಕಾಗಿರುತ್ತದೆ. ಅದಕ್ಕಾಗಿ ಅವರು ಬಂದು ನಿನ್ನ ಬುದ್ಧಿ ಭೇದ ಮಾಡಿ ಹೋಗಿದ್ದಾರೆ.

**ಪುಲಸ್ತ್ಯ :-** ಆ ದೇವಿಯ ವಿಷಯದಲ್ಲಿ ಪ್ರಧಾನಿಯಾದ ಪ್ರಘಸನು ಹೀಗೆ ನುಡಿದ ಬಳಿಕ ವಿಘಸ ಎಂಬ ನೀತಿ ಶಾಸ್ತ್ರ ವಿಶಾರದ ಮಂತ್ರಿಯು ನುಡಿದನು ಆ ದೈತ್ಯ ರಾಜನನ್ನು ಕುರಿತು.

**ಪ್ರಘಸ :-** ವಿಜಯಗಳನ್ನು ಅಪೇಕ್ಷಿಸುವ ರಾಜರು ಕನ್ಯಾಪಹರಣವನ್ನು ತಾವಾಗಿ ಮಾಡಬಾರದು ಯಾವುದಾದರೂ ಕನ್ಯೆಯ ಮೇಲೆ ಮನಸ್ಸಾದರೆ ಮತ್ತೊಬ್ಬರ ಮುಖಾಂತರ ಉಪಾಯವಾಗಿ ಸೆಳೆದುಕೊಳ್ಳಬೇಕು. ನನ್ನ ಮಾತು ನಿಮಗೆ ಸರಿಬಂದರೆ ನಾನೊಂದು ಸಲಹೆ ನೀಡುತ್ತೇನೆ. ನಮ್ಮ ರಾಕ್ಷಸ ಕುಲದಲ್ಲಿಯ ಯಾರಾದರೂ ಒಬ್ಬರು ಆ ದೇವಿಯ ಬಳಿಗೆ ಹೋಗಿ ನಿನಗಾಗಿ ಅವಳನ್ನು ಯಾಚನೆ ಮಾಡಲಿ. ಇಲ್ಲವೆ ಆ ದೇವಿಯ ಬಂಧುಗಳಲ್ಲಿ ಯಾವನು ಮಹಾತ್ಮನು ಇರುವನೊ ಅವನ ಬಳಿಗೆ ಹೋಗಿ, ಮೊದಲು ಕೇಳೋಣ. ಒಳ್ಳೇ ಮಾತಿನಿಂದ ''ಆ ಕನ್ಯೆಯನ್ನು ನಮಗೆ ಕೊಡಬೇಕೆಂದು'' ಯಾಚಿಸೋಣ. ಅದಕ್ಕೆ ಕೊಡದಿದ್ದರೆ ಅವರಿಗೆ ನಮಸ್ಕಾರ ಮಾಡಿ ಕೇಳೋಣ. ಅದಕ್ಕೂ ಅವರು ಒಪ್ಪದಿದ್ದರೆ. ಭೇದೋಪಾಯದಿಂದ ಪ್ರಯತ್ನಿಸೋಣ. ಅದೂ ಸಾಧ್ಯವಾಗದಿದ್ದರೆ ದಂಡೋಪಾಯ ಇದ್ದೇ ಇದೆ. ಈ ನಾಲ್ಕು ಉಪಾಯ ಫಲಿಸದಿದ್ದರೆ ಕೊನೆಗೆ ಎಲ್ಲರೂ ಕೂಡಿ, ಏರಿ ಹೋಗಿ ಯುದ್ಧ ಮಾಡಿ ಹೊಡೆದು ಬಡಿದು, ಬಲಾತ್ಕಾರದಿಂದ ಆ ಕನ್ಯೆಯನ್ನು ಎಳೆದು ತರೋಣ.

**ಮಹಿಷಾಸುರ :-** ನೀತಿಶಾಸ್ತ್ರದಲ್ಲಿ ಪರಿಣತನೂ, ಸದಾಚಾರಿಯೂ ಸ್ವಯಂ ಪರಿಶುದ್ಧನೂ ಆದ ನಮ್ಮ ವಿಘಸ ಮಂತ್ರಿಯು ಹೇಳಿದ ಮಾತು ಸೂಕ್ತವಾಗಿದೆ. ಅವನು

ಎಲ್ಲಿಯೂ ಇಂತಹ ಚಲುವಿಕೆಯನ್ನು ಕಂಡಿಲ್ಲ ಎಂದು ತನ್ನ ಮನಸ್ಸಿನಲ್ಲಿಯೇ ನಾರದನು ಆಶ್ಚರ್ಯಚಕಿತನಾದನು. ಮತ್ತು ಆ ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಮುಗಿಲಿಗೆ ಹಾರಿದನು. ಅಲ್ಲಿಂದ ಅತ್ಯಂತ ತ್ವರಿತ ಗತಿಯಿಂದ ಮಹಿಷಾಸುರನ ಪಟ್ಟಣಕ್ಕೆ ಆಗಮಿಸಿದನು. ಸಮುದ್ರದ ಮಧ್ಯದಲ್ಲಿ ಮಹಿಷಾದಾನವನು ಆ ಪಟ್ಟಣವನ್ನು ಕಟ್ಟಿಕೊಂಡು ಆಳುತ್ತಿದ್ದನು. ಅಸಾಧಾರಣ ವರಗಳನ್ನು ಪಡೆದ ದೇವ ಸೇನೆಗೆ ಅಂತಕನಂತಾದ ಆ ದಾನವೇಂದ್ರನು ನಾರದ ಮುನಿಯನ್ನು ಭಕ್ತಿಯಿಂದ ಪೂಜಿಸಿದನು. ಆಗ ನಾರದನು ಅವನು ಮಾಡಿದ ಆದರೋಪಚಾರಗಳಿಂದ ಸಂತುಷ್ಟನಾಗಿ ಅವನಿಗೆ ತಿಳಿಸಿದನು.

'ದೈತ್ಯ ದೊರೆಯೆ, ನಾನು ಬ್ರಹ್ಮಲೋಕದಿಂದ ಪುಷ್ಕರಾರಣ್ಯಕ್ಕೆ ಹೋಗಿದ್ದೆ. ಅಲ್ಲಿ ಒಂದು ದೇವಿಪುರ. ಆದರೆ ತುಂಬ ಲಕ್ಷಾವಧಿ ಸುಂದರಿಯರಾದ ಕನ್ಯೆಯರು. ಅವರ ಮಧ್ಯದಲ್ಲಿ ಕನಕಕಾಂತಿಯಿಂದ ಮಿಂಚುವ ಒಂದು ಕನ್ಯಾರತ್ನವಿದೆ. ಅವಳು ತಾಪಸ ವ್ರತವನ್ನು ಕೈಕೊಂಡಿದ್ದಾಳೆ. ಆ ತಪಸ್ವಿನಿ ವೇಷದಲ್ಲಿಯೂ ಆ ಕನ್ಯೆಯ ಸೌಂದರ್ಯವು ನೋಡಿದವರ ಕಣ್ಣು ಕುಕ್ಕುವಂತಹದಿದೆ. ನಾನು ಸಮಗ್ರ ಬ್ರಹ್ಮಾಂಡದಲ್ಲಿ ಸಂಚರಿಸಿರುವೆನು. ಆದರೆ ಅಂತಹ ಸುಂದರ ಕನ್ಯೆಯನ್ನು ಕಾಣಲಿಲ್ಲ. ಅನೇಕಾನೇಕ ದೇವ, ಗಂಧರ್ವ ಕಿನ್ನರ ನಾಯಕರು ಅವಳ ಸೇವೆಗೆ ಕೈಕಟ್ಟಿಕೊಂಡು ನಿಂತಿರುತ್ತಾರೆ. ಅವಳನ್ನು ನೋಡಿದ ಸಮಾಚಾರವನ್ನು ನಿನಗೆ ತಿಳಿಸಬೇಕೆಂದು ಮನಸ್ಸಾಯಿತು. ಆದರೆ ನೀನು ಎಲ್ಲ ದೇವತೆಗಳನ್ನು ಗೆಲ್ಲದ ಹೊರತೂ ಆ ಕನ್ಯೆ ನಿನ್ನ ಕೈಗೆ ಹತ್ತಲಾರಳು.

**ಪುಲಸ್ತ್ಯ** :- ಹೀಗೆ ಹೇಳಿ, ಅಲ್ಲಿ ಒಂದುಗಳಿಗೆ ಕುಳಿತು, ಅನಂತರ ನಾರದರು ಹಿಂತಿರುಗಿದರು. ಅರೆ ಕ್ಷಣದಲ್ಲಿ ಆ ದೈತ್ಯ ವೀರನ ಕಣ್ಣಿಗೆ ಕಾಣದಂತಾದರು. ನಾರದರು ಹೋದ ಬಳಿಕ ಆ ದಾನವೇಶ್ವರನಿಗೆ ಆ ಕನ್ಯಾಮಣಿಯ ಚಿಂತೆ ಪ್ರಾರಂಭವಾಯಿತು. ಅವನ ಮನಸ್ಸಿಗೆ ಸಮಾಧಾನವೇ ಉಳಿಯಲಿಲ್ಲ. ಅನೇಕ ಉಪಾಯ ಹಾಗೂ ತಂತ್ರಗಳನ್ನು ಬಲ್ಲ ತನ್ನ ಮಂತ್ರಿ ಮುಖ್ಯಸ್ತರನ್ನೆಲ್ಲ ಕರೆಸಿದನು. ಪ್ರಘಸ, ವಿಘಸ, ವಿಭಾವಸು, ವಿದ್ಯುನ್ಮಾಲಿ ಸುಮಾಲಿ, ಪರ್ಜನ್ಯ, ಅಕ್ರೂರ ಎಂಬ ಹೆಸರಿನ ಅವನ ಅಷ್ಟಪ್ರಧಾನರು ಆ ರಾಕ್ಷಸೇಂದ್ರನ ಹತ್ತಿರ ಬಂದು ತಮ್ಮನ್ನು ಕರೆಸಿದ ಕಾರಣ ಕೇಳಿದರು. ಆಗ ಮಹಿಷಾಸುರನು ಅವರಿಗೆ ಹೇಳಿದನು.

**ಮಹಿಷಾಸುರ** :- ಸಚಿವರೆ, ನಾರದನು ನನಗೆ ಓರ್ವ ಸರ್ವಾಂಗ ಸುಂದರಿಯಾದ ಕನ್ಯೆಯ ವಿಷಯವನ್ನು ತಿಳಿಸಿ ಹೋಗಿದ್ದಾರೆ. ನಾರದರ ಹೇಳಿಕೆಯಂತೆ ಅವಳ ಅಂಗಾಗಗಳಲ್ಲಿ ತುಂಬು ತಾರುಣ್ಯ, ಲಲಿತ ಲಾವಣ್ಯ ಉಕ್ಕುತ್ತಲಿವೆ. ಇಂತಹ ಆ ಸರ್ವಾಂಗ ಸುಂದರಿಯು ನೆಲದ ಮೇಲೆ ಇಳಿದು ಬಂದ ಅಪ್ಸರೆಯಂತೆ ಇರುವಳಂತೆ. ನಿಜವಾಗಿಯೂ ನಾರದರು ಪರೋಪಕಾರಿಯಾದ ಪುಣ್ಯಾತ್ಮ ಅವಳನ್ನು ಕಂಡ ಕೂಡಲೆ ಇಲ್ಲಿಗೆ ಧಾವಿಸಿ ಬಂದು ನನಗೆ ಆ ಚೆಲುವೆಯ ಸಮಾಚಾರ ತಿಳಿಸಿ ಹೋಗಿದ್ದಾರೆ. ಆದರೆ ಅವಳನ್ನು ಹಾಗೆಯೇ ಹಾರಿಸಿಕೊಂಡು ಬರಲು ಸಾಧ್ಯವಿಲ್ಲ. ದೇವಾಧಿ ದೇವತೆಗಳನ್ನು ಯುದ್ಧದಲ್ಲಿ ಗೆದ್ದು ಅವಳನ್ನು ನಾನು ದೊರಕಿಸಕೊಳ್ಳಬೇಕಾಗಿದೆ. ಅದಕ್ಕಾಗಿ ನಿಮ್ಮನ್ನು ಕರೆಸಿದ್ದೇನೆ. ಈ ವಿಷಯದಲ್ಲಿ ನನಗೆ ಸಲಹೆ ಕೊಡಿರಿ. ಆ ಕನ್ಯಾಮಣಿಯನ್ನು ನಾನು ಪಡೆಯುವ ಬಗೆ ಹೇಗೆ? ಏನು ಮಾಡಿದರೆ ನಾವು ದೇವತೆಗಳನ್ನು ಸೋಲಿಸಬಹುದು. ಇದೆಲ್ಲವನ್ನು ನೀವು ವಿಚಾರ ಮಾಡಿರಿ ಹೇಳಿರಿ. ಆಗ ಅವನ ಎಂಟು ಮಂತ್ರಿಮಂಡಲದಲ್ಲಿ ಒಬ್ಬನಾದ ಪ್ರಘಸನು ದಾನವೇಶ್ವರನು ಕುರಿತು ನುಡಿದನು.

**ಗುರುಪತ್ನೀಂ ಭೃತ್ಯಪತ್ನೀಂ ತಥಾ ಸಾಮಸ್ತಯೋಷಿತಃ ।**
**ಜಿಘೃಕ್ಷನ್ಮ್ರಿಯತೇ ರಾಜನ್ನಗಮ್ಯಾಗಮನೇನ ಚ ॥**

**ಪ್ರಘಸ :-** ಗುರುವಿನ ಹೆಂಡತಿ, ಸೇವಕನ ಪತ್ನಿ ಮತ್ತು ಸಾಮಂತರಾಜರ ಮಡದಿಯರು ಇವರನ್ನೂ ಮತ್ತು ಬೇರೆ ಅಗಮ್ಯ ಸ್ತ್ರೀಯರನ್ನೂ ಬಯಸಿದರೆ ಹಾಗೂ ಭೋಗ ಮಾಡಿದರೆ ಮನುಷ್ಯನು ಮರಣ ಹೊಂದುತ್ತಾನೆ.

**ಯಾ ಸಾ ತೇ ಕಥಿತಾ ದೈತ್ಯ ನಾರದೇನ ಮಹಾಸತಿ ।**
**ಸಾ ಶಕ್ತಿಃ ಪರಮಾ ದೇವೀ ವೈಷ್ಣವೀ ಲೋಕಧಾರಿಣೀ ॥**
**ಸಾಗ್ನಿ ಜ್ವಾಲಾ ತೃಣಂ ತ್ವಂ ಚ ಸಾ ಚ ತ್ವಾಂ ನಿರ್ದಷ್ಯತಿ ।**
**ಏವಂ ಜ್ಞಾತ್ವಾನ ಭಾವಂ ತ್ವಂಕರ್ತುಮರ್ಹಸಿ ದಾನವ ॥**
**ಸುರರ್ಷಿಣಾ ಸುರಕಾರ್ಯಂ ಕರ್ತುಕಾಮನೇ ಕೀರ್ತಿತಾ ॥**

ಮಹಾಪ್ರಭುವೆ ನಾರದರು ನಿಮ್ಮ ಮುಂದೆ ಹೇಳಿದ ಆ ಕನ್ಯಾಮಣಿಯು ಸಾಮಾನ್ಯಳಲ್ಲ ಮಹಾಸತಿಯೂ ಲೋಕಧಾರಣೆಯೂ ಆದ ಸಾಕ್ಷಾತ್ ವೈಷ್ಣವೀ ಶಕ್ತಿಯೇ ಅವಳು. ನೀನು ಬಯಸಿದ ಪರಾಶಕ್ತಿ ರೂಪಳಾದ ಆ ದೇವಿಯು ಬೆಂಕಿಯ ಉರಿ. ನೀನು ಅವಳ ಮುಂದೆ ಒಂದು ಹುಲ್ಲು ಕಡ್ಡಿ. ಅವಳ ಹತ್ತಿರ ಹೋದರೆ ನಿನ್ನನ್ನು ಸುಡುವಳು ಇದನ್ನೆಲ್ಲ ವಿಚಾರಿಸಿ ಅವಳನ್ನು ನೀನು ಕಾಮುಕ ದೃಷ್ಟಿಯಿಂದ ನೋಡದಿರುವುದೇ ಕ್ಷೇಮ. ಅವಳ ವಿಷಯವನ್ನು ನಾರದರು ಬಂದು ಹೇಳಿದ್ದು. ನಿನ್ನ ಹಿತಕ್ಕಾಗಿ ಅಲ್ಲ. ನಾರದರಿಗೆ ದೇವಕಾರ್ಯ ಸಾಧಿಸಬೇಕಾಗಿರುತ್ತದೆ. ಅದಕ್ಕಾಗಿ ಅವರು ಬಂದು ನಿನ್ನ ಬುದ್ಧಿ ಭೇದ ಮಾಡಿ ಹೋಗಿದ್ದಾರೆ.

**ಪುಲಸ್ತ್ಯ :-** ಆ ದೇವಿಯ ವಿಷಯದಲ್ಲಿ ಪ್ರಧಾನಿಯಾದ ಪ್ರಘಸನು ಹೀಗೆ ನುಡಿದ ಬಳಿಕ ವಿಘಸ ಎಂಬ ನೀತಿ ಶಾಸ್ತ್ರ ವಿಶಾರದ ಮಂತ್ರಿಯು ನುಡಿದನು ಆ ದೈತ್ಯ ರಾಜನನ್ನು ಕುರಿತು.

**ಪ್ರಘಸ :-** ವಿಜಯಗಳನ್ನು ಅಪೇಕ್ಷಿಸುವ ರಾಜರು ಕನ್ಯಾಪಹರಣವನ್ನು ತಾವಾಗಿ ಮಾಡಬಾರದು ಯಾವುದಾದರೂ ಕನ್ಯೆಯ ಮೇಲೆ ಮನಸ್ಸಾದರೆ ಮತ್ತೊಬ್ಬರ ಮುಖಾಂತರ ಉಪಾಯವಾಗಿ ಸೆಳೆದುಕೊಳ್ಳಬೇಕು. ನನ್ನ ಮಾತು ನಿಮಗೆ ಸರಿಬಂದರೆ ನಾನೊಂದು ಸಲಹೆ ನೀಡುತ್ತೇನೆ. ನಮ್ಮ ರಾಕ್ಷಸ ಕುಲದಲ್ಲಿಯ ಯಾರಾದರೂ ಒಬ್ಬರು ಆ ದೇವಿಯ ಬಳಿಗೆ ಹೋಗಿ ನಿನಗಾಗಿ ಅವಳನ್ನು ಯಾಚನೆ ಮಾಡಲಿ. ಇಲ್ಲವೆ ಆ ದೇವಿಯ ಬಂಧುಗಳಲ್ಲಿ ಯಾವನು ಮಹಾತ್ಮನು ಇರುವನೊ ಅವನ ಬಳಿಗೆ ಹೋಗಿ, ಮೊದಲು ಕೇಳೋಣ. ಒಳ್ಳೇ ಮಾತಿನಿಂದ ''ಆ ಕನ್ಯೆಯನ್ನು ನಮಗೆ ಕೊಡಬೇಕೆಂದು'' ಯಾಚಿಸೋಣ. ಅದಕ್ಕೆ ಕೊಡದಿದ್ದರೆ ಅವರಿಗೆ ನಮಸ್ಕಾರ ಮಾಡಿ ಕೇಳೋಣ. ಅದಕ್ಕೂ ಅವರು ಒಪ್ಪದಿದ್ದರೆ. ಭೇದೋಪಾಯದಿಂದ ಪ್ರಯತ್ನಿಸೋಣ. ಅದೂ ಸಾಧ್ಯವಾಗದಿದ್ದರೆ ದಂಡೋಪಾಯ ಇದ್ದೇ ಇದೆ. ಈ ನಾಲ್ಕು ಉಪಾಯ ಫಲಿಸದಿದ್ದರೆ ಕೊನೆಗೆ ಎಲ್ಲರೂ ಕೂಡಿ, ಏರಿ ಹೋಗಿ ಯುದ್ಧ ಮಾಡಿ ಹೊಡೆದು ಬಡಿದು, ಬಲಾತ್ಕಾರದಿಂದ ಆ ಕನ್ಯೆಯನ್ನು ಎಳೆದು ತರೋಣ.

**ಮಹಿಷಾಸುರ :-** ನೀತಿಶಾಸ್ತ್ರದಲ್ಲಿ ಪರಿಣತನೂ, ಸದಾಚಾರಿಯೂ ಸ್ವಯಂ ಪರಿಶುದ್ಧನೂ ಆದ ನಮ್ಮ ವಿಘಸ ಮಂತ್ರಿಯು ಹೇಳಿದ ಮಾತು ಸೂಕ್ತವಾಗಿದೆ. ಅವನು

ಹೇಳಿದಂತೆ ಮಾಡಿರಿ. ಆ ದೇವಿಯ ಬಳಿಗೆ ಒಬ್ಬ ದೂತನನ್ನು ಕಳಿಸಿಕೊಡಿರಿ. ಅವನು ಹೋಗಿ, ಆ ದೇವಿಯು ಬಣ್ಣ, ರೂಪ, ಗುಣ ಹೇಗಿವೆ? ಎಂತಿವೆ? ಎಂಬುದನ್ನು ತಿಳಿದು ಬರಲಿ, ಮತ್ತು ಅವಳ ಶೌರ್ಯವೆಷ್ಟು? ಯಾವ ವಯಸ್ಸು ಅವಳದು? ಅವಳಿಗೆ ಸಹಾಯಕರಾದ ಬಂಧು ವರ್ಗದವರು ಯಾರು? ಯುದ್ಧದ ಸಲಕರಣೆಗಳು ಎಷ್ಟಿವೆ? ಎಂಬುದನ್ನೆಲ್ಲ ಅರಿತುಕೊಂಡು ಮುಂದಿನ ಕಾರ್ಯ ಮಾಡೋಣ.

**ಪುಲಸ್ತ್ಯ**:- ದಾನವೇಂದ್ರನ ಮಾತಿನಂತೆ, ಅವರೆಲ್ಲರೂ, ಯೋಗ್ಯ ಸಲಹೆ ನೀಡಿದ್ದಕ್ಕಾಗಿ ವಿಘಸ ಮಂತ್ರಿಯನ್ನು ಪ್ರಶಂಸಿಸಿದರು ಹಾಗೂ ವಿದ್ಯುತ್ಪ್ರಭ ಎಂಬ ಮಂತ್ರಿಯನ್ನು ದೂತನನ್ನಾಗಿ ಗೊತ್ತುಪಡಿಸಿದರು. ಬಹುವಿಧ ಮಾಯೆ, ಯಂತ್ರಗಳನ್ನು ಅರಿತಿದ್ದ- ದೂತನಾದ ಆ ವಿದ್ಯುತ್ಪ್ರಭ ಅವನನ್ನು ದೇವಿಯ ಬಳಿಗೆ ಕಳಿಸಿ ವಿಘಸನು ಮಾತನಾಡಿದನು.

**ವಿಘಸ** :- ದಾನವರ ದೊರೆಯೆ, ನಿನ್ನ ಚತುರಂಗ ಸೈನ್ಯವನ್ನು ಸಜ್ಜುಗೊಳಿಸು. ಮೊದಲು ದೇವತೆಗಳ ಸೇನೆಯನ್ನು ಸೋಲಿಸು. ನಿನ್ನ ಪರಾಕ್ರಮದಿಂದ ಭಯಭ್ರಾಂತರಾಗಿ ದೇವತೆಗಳು ಸೋತು ಓಡಿಹೋದ ಬಳಿಕ ನೀನು ಇಂದ್ರ ಸಿಂಹಾಸನ ಆರೋಹಣ ಮಾಡು. ನೀನೇ ಸುರಪತಿಯಾಗಿ ಸ್ವರ್ಗ ಸಾಮ್ರಾಜ್ಯ ಸಿಂಹಾಸನ ಏರಿದ ಬಳಿಕ ಆ ಕನ್ಯಾಮಣಿಯು ಸಂತೋಷದಿಂದ ನಿನ್ನ ವಶಳಾಗುತ್ತಾಳೆ. ಎಲ್ಲ ಲೋಕಪಾಲಕರು, ಗಂಧರ್ವರು, ಮರುದ್ಗಣಗಳು ನಿನಗೆ ಸೋತು ಶರಣಾಗತರಾಗಿ ಸೇವೆಯನ್ನು ಮಾಡತೊಡಗಿದಾಗ, ಅಷ್ಟ ವಸುಗಳು. ದ್ವಾದಶಾದಿತ್ಯರು, ಇಂದ್ರಪದಾಧಿಷ್ಠಿತನಾದ ನಿನ್ನ ಕೈಂಕರ್ಯಕ್ಕೆ ನಿಂತಾಗ ಎಲ್ಲ ಸುರಸುಂದರಿಯರು, ಗಂಧರ್ವ ಕನ್ಯೆಯರು ತಾವಾಗಿ ನಿನ್ನ ವಶದಲ್ಲಿ ಬರುವರು. ಅವರೊಡನೆ ಈ ಕನ್ಯೆಯು ಸ್ವಸಂತೋಷದಿಂದ ನಿನ್ನನ್ನು ವರಿಸುವಳು. ಇಲ್ಲವೆ ಭಯದಿಂದಲಾದರೂ ನಿನ್ನ ಕೈವಶಳಾಗುವಳು.

**ಪುಲಸ್ತ್ಯ**:- ವಿಘಸನ ಈ ಮಾತುಗಳನ್ನು ಕೇಳಿ, ಮಹಿಷಾಸುರನು ತನ್ನ ಸೇನಾಪತಿಯಾದ ವಿರೂಪಾಕ್ಷನಿಗೆ ಹೇಳಿದನು.

**ಮಹಿಷಾಸುರ** :- ಸೇನಾಪತಿಯೆ, ಆನೆ, ಕುದುರೆ, ರಥ, ಕಾಲಾಳು ಈ ಎಲ್ಲ ಚತುರಂಗ ಸೇನೆಯನ್ನು ಅಣಿಗೊಳಿಸು. ದೇವ ಗಂಧರ್ವರ ಮೇಲೆ ಯುದ್ಧಕ್ಕೆ ಹೊರಡಬೇಕು. ಮಹಿಷಾಸುರನ ಆಜ್ಞೆಯನ್ನು ಕೇಳಿ ವಿರೂಪಾಕ್ಷನು ಅವನಿಗೆ ನಮಸ್ಕಾರ ಮಾಡಿ, ಅವನ ಅಪ್ಪಣೆಯನ್ನು ಹೊತ್ತು, ಈ ರೀತಿಯಾಗಿ ಮಾತನಾಡಿದನು.

**ವಿರೂಪಾಕ್ಷ**:- ರಾಜನೇ, ದೇವತೆಗಳ ವಿರೋಧ ಮಾಡಬೇಡ, ನೀನು. ದೇವತೆಗಳಿಗೆ ಎದುರು ಬೀಳದಿದ್ದರೆ ನೂರು ವರ್ಷ ಸುಖವಾಗಿ ಜೀವಿಸುವಿ, ಮನುಷ್ಯನು ಬದುಕಿ ಇದ್ದರೆ, ಬೇಕಾದಷ್ಟು ಭೋಗ, ಸುಖಗಳನ್ನು ಹೊಂದಬಹುದು. ಬ್ರಹ್ಮದೇವರು ಹೇಗೋ ನಿಮಗೆ ವರ ಕೊಟ್ಟಿದ್ದಾನೆ- 'ಯಾವ ದೇವತೆಯೂ ನಿನ್ನನ್ನು ಗೆಲ್ಲಲಾರ' ಎಂದು ಈ ವರದಿಂದ ನೀನು ನಿನ್ನ ಸ್ಥಾನದಲ್ಲಿ ಸುಖವಾಗಿ ಇದ್ದುಬಿಡು. ಈಗ ನೀನಾಗಿ ಆ ಸುರೋತ್ತಮರನ್ನು ಕೆಣಕುವದು ಬೇಡ. ದಾನವೇಂದ್ರನೆ, ಈಗ ನಿನ್ನ ಅಂತಃಪುರದಲ್ಲಿರುವ ಚಲುವೆಯರು ಯಾವ ದೇವ, ದಾನವ ಕನ್ಯೆಯರಿಗೆ ಕಡಿಮೆ ಆಗಿದ್ದಾರೆ. ಅತ್ಯಂತ ರೂಪವತಿಯರಾದ ನಾರಿಯರಿಗೆ ನೀನು ಪತಿಯಾಗಿದ್ದು. ಬೇರೆ ಕನ್ಯೆಯರನ್ನು ಏಕೆ ಆಶಿಸುವಿ ? ನಾರದನು ಹೇಳಿದ ಆ ಕನ್ಯೆಯಿಂದ ನಿನಗೇನು

ಪ್ರಯೋಜನ ? ತನ್ನಲ್ಲಿ ಇದ್ದುದನ್ನು ಬಿಟ್ಟು ಇಲ್ಲದುದನ್ನು ಬಯಸಿ ಹೊರಾಡುವವು ಜನರ ಸ್ವಭಾವವಾಗಿದೆ. ಇದರಿಂದ ಇಲ್ಲದ ದುಃಖವನ್ನು ನಾವಾಗಿ ಕರೆದಂತಾಗುವದು. ಮಹಾಪ್ರಭುವೆ, ನೀನು ನಮಗೆಲ್ಲ ಒಡೆಯ. ನಾನು ನಿಮ್ಮ ಸೇವಕ. ನಿನ್ನ ಮಾತಿನಂತೆ ನಡೆಯಲು ನಾನು ಸದಾ ಸಿದ್ದ. ಈಗ ನಿನ್ನ ವಿಚಾರವೇನು ತಿಳಿಸು.

ಆಗ ಮಹಿಷಾಸುರನು 'ಈಗ ನೀವೆಲ್ಲರೂ, ದೇವತೆಗಳ ಮೇಲೆ ಯುದ್ಧಕ್ಕೆ ಹೊರಡಬೇಕು' ಎಂದು ಅಪ್ಪಣೆಯಿತ್ತನು. ಆಗ ಅವನ ಸೇನಾಪತಿ ವಿರೂಪಾಕ್ಷನು ಮಹಾಮೇಘನೆಂಬ ದಂಡನಾಯಕನೊಂದಿಗೆ ಒಡಗೂಡಿ ಹೋರಾಟಕ್ಕಾಗಿ ಸೈನ್ಯವನ್ನೆಲ್ಲ ಸಜ್ಜುಗೊಳಿಸಿದನು. ಕೋಟಿ, ಕೋಟಿ ಜನ ಯುದ್ಧದ ಸಿದ್ಧತೆಯಲ್ಲಿ ಹೊರಟರು. ಮಹಿಷಾಸುರನು ಮೇರು ಪರ್ವತದ ಮೇಲೆ ದೇವ ಸೇನೆಯನ್ನು ಎದುರಿಸಲು ತನ್ನ ಚತುರಂಗ ಸೇನೆಯೊಂದಿಗೆ ಐರಾವತದಂತಹ ಆನೆಯನ್ನು ಏರಿಕೊಂಡು ಹೊರಟನು. ಅಸುರ ವೀರರ ಈ ಸಮರ ಸನ್ನಾಹವನ್ನು ಕಂಡು, ಅಮರ ವೀರರಿಗೂ ಕೋಪ ಕೆರಳಿತು. ಅವರು ಕೂಡ ಯುದ್ಧ ಸನ್ನದ್ಧರಾಗಿ ಮೇರು ಗಿರಿಯ ಶೃಂಗಾಂಗಣದಲ್ಲಿ ನಿಶಿತವಾದ ಆಯುಧಗಳನ್ನು ತೆಗೆದುಕೊಂಡು ದಾನವ ಸೇನೆಗೆ ನುಗಿದರು. ಹುಲಿ ಸಿಂಹಗಳಂತೆ ಪರಸ್ಪರ ಗುಡುಗಿ, ಗರ್ಜಿಸಿ, ಆರ್ಭಟಿಸುತ್ತಿರುವ ಆ ಉಭಯ ವೀರರ ತಂಡಗಳ ನಡುವೆ ನಿಕರದ ಹೋರಾಟ ಮೊದಲಾಯಿತು. ಅಂಜನ, ನೀಲಪಕ್ಷಿ, ಮೇಘವರ್ಣ, ಬಲಾಹಕ, ಉದರಾಕ್ಷ, ಲಲಾಟಕ್ಷ, ಮಹಾಕ್ಷ, ಭೀಮವಿಕ್ರಮ, ಸ್ವರ್ಭಾನು, ವಸು, ಅಷ್ಟೌಘ ಮುಂತಾದ ವೀರರು ದೇವಪಕ್ಷದಲ್ಲಿ ತಮ್ಮ ಕದನಕೌಶಲದಿಂದ ಕೋಲಾಹಲ ಉಂಟುಮಾಡಿದರು. ದೇವತೆಗಳ ಸೇನಾ ದಳದಲ್ಲಿ ಪ್ರಸಿದ್ಧರಾದ, ಸಿದ್ಧರೂ, ಪ್ರಮುಖರೂ ಆದ ದ್ವಾದಶ ಆದಿತ್ಯರೂ ಗಜಕರ್ಣ, ಶುಂಭುಕರ್ಣ, ರಕ್ತಾಕ್ಷ, ಭೀಮದೌಂಷ್ಟ್ರ, ವಿದ್ಯುದ್ವ್ಯೂಹ ಅತಿಕಾಯ, ದೀರ್ಘಬಾಹು. ಕೃತಾಂತಕೃತ್, ಮಹಾಕಾಯ ಎಂಬ ಹನ್ನೆರಡು ಜನ ದೇವ ವೀರರು ಎದುರಿಸಿದರು. ಮತ್ತೆ ಕೆಲವು ದೈತ್ಯವೀರರು ತಮ್ಮ ಸೈನ್ಯಪಡೆಯೊಂದಿಗೆ ಹನ್ನೆರಡು ಜನ ರುದ್ರರನ್ನು ಹೊಡೆದು. ತಡೆದು ನಿಲ್ಲಿಸಿದರು. ಉಳಿದ ದೈತ್ಯರು, ಮಿಕ್ಕ ದೇವತೆಗಳನ್ನು ಸಂಧಿಸಿ. ಕಲಿತನದಿಂದ ಹೋರಾಡಿದರು. ಮಹಿಷಾಸುರನು ಸ್ವಯಂ ತಾನೇ ದೇವೇಂದ್ರನೊಡನೆ ಹೋರಾಡಿದನು. ಬ್ರಹ್ಮ ದೇವರ ವರದ ಬಲದಿಂದ ಆ ದೈತ್ಯನು ಅಜೇಯನೂ, ಅವಧ್ಯನೂ ಆಗಿದ್ದನು. ಅವನು ಹುರಿದುಂಬಿಸಿ ಕೂಡಲೆ, ದೈತ್ಯ ಸೈನಿಕರಿಗೆ ಪರಮ ಉತ್ಸಾಹವಾಯಿತು. ಒಳ್ಳೇ ಶೌರ್ಯದಿಂದ ಹೋರಾಡಿದರು ಆ ದಾನವ ಧುರೀಣರು.ಆದರಿಂದ ಗೆಲುವು ದೈತ್ಯರದಾಯಿತು. ದೇವತೆಗಳೆಲ್ಲರೂ ರಾಕ್ಷಸರ ರಣರಭಸವನ್ನು ತಾಳಲಾರದೆ, ಸಮರಾಂಗಣದಿಂದ ಕಾಲ್ದೆಗೆದರು. ದೇವೇಂದ್ರನು ದೂರ ಓಡಿದನು. ಶೂಲ, ಪಟ್ಟಸ, ಮುದ್ಗರಗಳಿಂದ ಪ್ರಹರಿಸಲ್ಪಟ್ಟ ದೇವತೆಗಳು ಬ್ರಹ್ಮಪುರಿಯವರೆಗೆ ಹೋದರು. ಅನಂತರ, ದೈತ್ಯರೆಲ್ಲರೂ ಸೇರಿ, ವಿದ್ಯುತ್ಪ್ರಭು ಎಂಬ ದಾನವನನ್ನು ವೈಷ್ಣವೀಶಕ್ತಿ ಎನಿಸಿದ ಕ್ಷೇಮಂಕರಿಯ ಬಳಿಗೆ ಕಳಿಸಿಕೊಟ್ಟರು. ಅನೇಕ ಕುಮಾರಿಯರಿಂದ ಒಡಗೂಡಿ ತನ್ನ ಆಸ್ಥಾನದಲ್ಲಿ ಮಂಡಿಸಿದ್ದಳು. ಆ ಮಹಾದೇವಿ. ಅವಳಿಗೆ ನಮ್ರತೆಯಿಂದ ನಮಸ್ಕರಿಸಿ ನುಡಿದ ದೈತ್ಯದೂತನಾದ ವಿದ್ಯುತ್ಪ್ರಭು.

**ವಿದ್ಯುತ್ಪ್ರಭ :-** ದೇವಿ, ಬ್ರಹ್ಮದೇವರ ಆದಿ ಸೃಷ್ಟಿಯು ಪ್ರಾರಂಭವಾದ ನೂರು ವರ್ಷದ ಬಳಿಕ ಸುಪಾರ್ಶ್ವ ಎಂಬ ಮಹಾಮುನಿ ಹುಟ್ಟಿದ. ಆ ಮಹಾಮುನಿಗೆ ಸಿಂಧುದ್ವೀಪ ಎಂಬ ಮಗನು ಜನಿಸಿದನು. ಅವನು ಮಹಾಬಲಿಷ್ಠ. ಸಿಂಧುದ್ವೀಪನು ಮಹೇಶ್ವರಿ ನಗರದಲ್ಲಿ ಇದ್ದು, ಉಗ್ರವಾದ ತಪಸ್ಸನ್ನು ಮಾಡಿದನು. ಆಹಾರವನ್ನು ತೊರೆದನು, ಹೀಗೆ ಅವನು ಉಗ್ರ ತಪಸ್ಸನ್ನು ಆಚರಿಸುತ್ತಲಿರುವಾಗ ದೈತ್ಯ ರಾಜನಾದ ವಿಪ್ರಚಿತ್ತಿಯ ಮಗಳಾದ ಮಾಹಿಷ್ಮತಿ ಎಂಬ ಕನ್ಯೆಯು ಗೆಳತಿಯರೊಂದಿಗೆ ಅಲ್ಲಿಗೆ ಬಂದಳು. ಅವಳ ರೂಪವು ದೇವಕನ್ನಿಕೆಯರಿಗೆ ಸದೃಶವಾಗಿತ್ತು. ವನವಿಹಾರಕ್ಕಾಗಿ ಸಖಿಯರೊಂದಿಗೆ ಮಂದರ ಕೊಳ್ಳಕ್ಕೆ ಬಂದ ಆ ಸುಂದರಿಯು ಸಿಂಧುದ್ವೀಪನು ತಪಂಗೈಯುತ್ತಿರುವ ತಪೋವನವನ್ನು ನೋಡಿದಳು. ಬಕುಲ, ಮಾವು, ಚಂದನ, ಬೋರೆ, ಸಾಲ, ಸರಳ ಮೊದಲಾದ ಮರಗಳು ಮುಗಿಲು ಮುಟ್ಟುವಷ್ಟು ಎತ್ತರವಾಗಿ ಬೆಳೆದಿದ್ದವು. ಅಲ್ಲಿ ಗುತ್ತಾಗಿ ಬೆಳೆದ ಬಳ್ಳಿವಾಡಗಳ ಮೇಲೆ ಹೂವಿನ ಹಂದರ ಹಾಕಿದಂತಿತ್ತು. ಬಗೆ ಬಗೆಯ ಮರ, ಬಳ್ಳಿಗಳಿಂದ ನಿಬಿಡವಾಗಿ ಬೆಳೆದು, ಹಸಿರು ಹೂ ಹೂ, ಹುಲ್ಲುಗಳಿಂದ ಕಣ್ಣಿಗೆ ಎಸೆದು ಪರಮ ರಮಣೀಯವಾಗಿ ತೋರಿತು. ತರುಣ ವಯಸ್ಸಿನ ರಾಜಕುಮಾರಿಗೆ. ಆ ಅರಣ್ಯದಲ್ಲಿ ತಪೋನುಷ್ಠಾನ ಕೈಕೊಂಡಿರುವ ತಪಸ್ವಿಗಳನ್ನೆಲ್ಲ ಅಲ್ಲಿಂದ ಹೆದರಿಸಿ, ಓಡಿಸಿ, ತಾನೇ ಗೆಳತಿಯರಿಂದ ಸೇವೆಗೊಳ್ಳುತ್ತ ಆ ತಪೋವನದಲ್ಲಿ ವಿಹರಿಸಬೇಕೆಂದು ಅವಳು ಬಯಸಿದಳು. ಅದಕ್ಕಾಗಿ ಅವಳು ಒಂದು ಘೋರವಾದ ವಿಸ್ಮಯ ರೂಪವನ್ನು ಹೊಂದಿದಳು. ಅವಳ ಸಖಿಯರು ಅದಕ್ಕೆ ತಕ್ಕಂತೆ ಮಹಿಷಿಯರ ಆಕಾರವನ್ನು ತಾಳಿದರು. ಈ ಎಮ್ಮೆಗಳ ಹಿಂಡು ಅಲ್ಲಲ್ಲಿ ಅಂಡಲೆದು, ಕಂಡ ಕಂಡ ಋಷಿಗಳನ್ನೆಲ್ಲ ತಿವಿದು ಓಡಿಸಿತು. ಆ ಎಲ್ಲ ಎಮ್ಮೆಗಳೂ ಬಹಳ ಚೂಪಾದ ಇರಿಯು ಕೊಂಬುಗಳಿಂದ ಕೂಡಿದ್ದವು. ಅನೇಕ ಮಿಕ್ಕ ಎಮ್ಮೆಗಳಿಂದ ಕೂಡಿ ಕೊಂಡ ಮಾಹಿಷ್ಮತಿ ಎಂಬ ರಾಜಕುಮಾರಿಯು ಹಿರಿಯ ಎಮ್ಮೆಯ ರೂಪ ಧರಿಸಿ, ತಪಸ್ಸನ್ನು ಆಚರಿಸುತ್ತಿರುವ ಸಿಂಧುದ್ವೀಪ ಮಹರ್ಷಿಯ ಬಳಿಗೆ ಹೋದವು. ಅವನನ್ನು ಹೆದರಿಸಿದವು. ಆ ತಪಸ್ವಿಯು ತನ್ನ ಜ್ಞಾನ ದೃಷ್ಟಿಯಿಂದ ಆ ರಾಜಕುಮಾರಿಯ ಚೇಷ್ಟೆಯನ್ನೆಲ್ಲ ತಿಳಿದು ಅವನಿಗೆ ಕೋಪ ಬಂದಿತು. ಅದು ರಾಕ್ಷಸರಿಗೆ ಬರುವಂತಹ ಉಗ್ರಕೋಪ. ಅದರಿಂದ ಅವನು ಶಪಿಸಿದನು. ಸಿಂಧುದ್ವೀಪನು ಅಂದನು- 'ನೀನು ಎಮ್ಮೆಯ ರೂಪ ತಳೆದು ನನ್ನನ್ನು ಹೆದರಿಸುವಿಯಷ್ಟೇ? ನಿನಗೆ ಈ ಮಹಿಷೀ ರೂಪವೇ ಚಿರಕಾಲವಿರಲಿ. ಒಂದು ನೂರು ವರ್ಷ ನೀನು ಎಮ್ಮೆಯಾಗಿಯೇ ಇರು' ಈ ಶಾಪವನ್ನು ಕೇಳಿ, ರಾಜಕುಮಾರಿ ಮಾಹಿಷ್ಮತಿ ನಡುಗಿದಳು. ಗೆಳತಿಯರೊಂದಿಗೆ ವಂದಿಸಿದಳು ಆ ಮುನಿಪುಂಗವನ ಪಾದಯುಗಳಕ್ಕೆ.

''ದಯೆದೋರಿ, ಈ ಶಾಪಕ್ಕೆ ಬೇಗನೆ ಕೊನೆಗಾಣಿಸಿರಿ''. ರಾಜಕುಮಾರಿಯ ಬಿನ್ನಹ ಕೇಳಿ ಮುನಿಯ ಹೃದಯದಲ್ಲಿ ಕರುಣೆಯ ಸೆಲೆ ಒಡೆಯಿತು. ಅವನು ಹೀಗೆ ಹೇಳಿದನು.

''ನೀನು ಇದೇ ಎಮ್ಮೆಯ ರೂಪದಿಂದ ಒಂದು ಗಂಡು ಮಗುವನ್ನು ಹಡೆಯುವೆ. ಅಲ್ಲಿಗೆ ನಿನ್ನ ಶಾಪದ ಕೊನೆ ಆಗುವದು ನನ್ನ ಮಾತು ಸುಳ್ಳಾಗುವದಿಲ್ಲ.

**ಪುಲಸ್ತ್ಯ :-** ತಪೋಧನನು ಹೀಗೆ ನುಡಿದ ಬಳಿಕ ಆ ರಾಜಕುಮಾರಿಯು ಸಿಂಧುದ್ವೀಪನು ತಪೋನುಷ್ಠಾನ ಮಾಡುತ್ತಿದ್ದ ನರ್ಮದಾ ನದಿ ತೀರಕ್ಕೆ ಹೋದಳು. ಅಲ್ಲಿ

ವಿದ್ಯುನ್ಮತಿ ಎಂಬ ಓರ್ವ ದೈತ್ಯಕುಮಾರಿಯಾಗಿ. ಹುಟ್ಟಿದ ಮಹರ್ದೆಶೆಯಲ್ಲಿಯೇ ನದಿಯ ನೀರಿನಲ್ಲಿ ಮೈತೊಳೆಯುತ್ತಿದ್ದಳು. ಅವಳ ಚೆಲುವಿನ ದೇಹವನ್ನು ಕಂಡು ಸಿಂಧುದ್ವೀಪನು ಮೋಹಗೊಂಡನು. ಅವನ ಶಕ್ತಿಪಾತವಾಯಿತು. ಅದನ್ನು ಒಂದು ಕಲ್ಲಿನ ದೋಣಿಯಲ್ಲಿ ಬಿಟ್ಟನು. ಎಮ್ಮೆಯ ರೂಪದಿಂದ ಅಲ್ಲಿಗೆ ಬಂದ ಮಹಿಷ್ಮತಿಯು ಅದನ್ನು ಪಾನ ಮಾಡಿದಳು. ಸಿಂಧುದ್ವೀಪ ಮುನಿಯ ವೀರ್ಯಪಾನಮಾಡಿದ್ದರಿಂದ ಅವಳು ಗರ್ಭ ಧರಿಸಿದಳು. ಒಂದು ವರ್ಷದವರೆಗೆ ಗರ್ಭ ಬೆಳೆದು ಒಂದು ಗಂಡು ಮಗು ಜನಿಸಿತು. ಅವನೇ ಪರಾಕ್ರಮಶಾಲಿಯಾದ ಮಹಿಷ. ಸಿಂಧುದ್ವೀಪನ ವಂಶವು ಹೀಗೆ ಬೆಳೆಯಿತು. ಯುದ್ಧದಲ್ಲಿ ಅವನು ದೇವತೆಗಳನ್ನು ಗೆಲ್ಲುವನು, ಈಗ ನಡೆಯುವ ದೇವಾಸುರ ಯುದ್ಧದಲ್ಲಿ ದೇವತೆಗಳನ್ನೆಲ್ಲ ಗೆದ್ದು, ಮೂರು ಲೋಕಗಳನ್ನು ಗೆದ್ದು ತಂದು ನಿನಗೆ ಒಪ್ಪಿಸುವನು. ಆ ಅಸುರೋತ್ತಮನು ಸರ್ವ ಸಮರ್ಥನಾಗಿದ್ದಾನೆ. ಅವನಿಗೆ ನೀನು ಪ್ರೇಮ ಪ್ರಸಾದವನ್ನು ಕೊಡು ಅವನ ಕೈ ಹಿಡಿ, ಅಂತಹ ಸರ್ವಾಂಗ ಸುಂದರನೂ, ಅತ್ಯಂತ ಬಲಿಷ್ಠನೂ ಆದ ವೀರ ಪುರುಷನನ್ನು ವರಿಸದಿದ್ದರೆ ನಿನ್ನ ಯೌವನವೆಲ್ಲ ವ್ಯರ್ಥ. ಇಂದು ನಿನ್ನ ಮೈಯಲ್ಲಿ ಉಕ್ಕುವ ಪ್ರಾಯ, ಸೂಸಿ ಹರಿಯುವ ಲಾವಣ್ಯ, ಕಾಂತಿ ಎಲ್ಲವೂ ಅಂತಹ ಬಲಿಷ್ಠ ಪುರುಷನ ಅಂಗ ಸಂಗವಾದರೆ ಸಾರ್ಥಕವಾಗುವವು. ಹಾಳು ಮಾಡಬೇಡ. ಈ ಲಾವಣ್ಯವನ್ನು ನಿರರ್ಥಕಗೊಳಿಸಬೇಡ. ಆ ದೈತ್ಯನನ್ನು ಪತಿಯನ್ನಾಗಿ ಹೊಂದಿ ನಿಜವಾದ ಸೌಭಾಗ್ಯವತಿಯಾಗು. ಅವನು, ಮುಖಕ್ಕೆ ನಿನ್ನ ಮುಖವನ್ನು ಅರ್ಪಿಸದಿದ್ದರೆ ಪೂರ್ಣಚಂದ್ರನಂತಿರುವ ನಿನ್ನ ಮುಖದಿಂದೇನು ಪ್ರಯೋಜನ? ಸುಧಾ ರಸಕ್ಕಿಂತಲೂ ರುಚಿಯಾದ ರಸಾಸ್ವಾದನೆ ಆ ದೈತ್ಯನಿಂದ ಪಡೆ.'

ಮಹಿಷಾಸುರನ ದೂತನಾದ ವಿದ್ಯುತ್ಪ್ರಭನು ನುಡಿದ ಮಾತುಗಳನ್ನು ಕೇಳಿ. ದೇವಿ ಬರಿ ನಕ್ಕುಬಿಟ್ಟಳು. ಉತ್ತರವನ್ನೇ ಕೊಡಲಿಲ್ಲ. ಅವಳು ಬಾಯಿ ತೆರೆದಾಗ, ಆ ದೂತನು ಚರಾಚರ ಪ್ರಪಂಚವನ್ನೆಲ್ಲ ನೋಡಿದನು ಆ ಮಹಾ ತಾಯಿಯ ವಿಶಾಲ ಉದರಾಂತರದಲ್ಲಿ. ಅನಂತರ ಅವಳ ದ್ವಾರಪಾಲಕೆಯಾದ ಜಯಾ ಎಂಬ ಸಖಿಯು ನುಡಿದಳು. ದೇವಿಯ ಅಂತರಂಗ ಮಾತು ಜಯಾಳ ಮುಖದಿಂದ ಹೊರಬಿದ್ದಿತು

**ಜಯಾ :-** ದೂತನೆ, ಕನ್ಯಾರ್ಥಿಯಾಗಿ ನೀನು ಇಷ್ಟೆಲ್ಲ ಮಾತನಾಡಿರುವಿಯಷ್ಟೆ? ಆದರೆ, ನಮ್ಮ ಈ ದೇವಿಯು ಚಿರಂತನ ಕೌಮಾರ್ಯ ವ್ರತವನ್ನು ಅಂಗೀಕರಿಸಿದ್ದಾಳೆ. ಇವಳು ಕೊನೆಯವರೆಗೆ ಕನ್ಯೆಯಾಗಿಯೇ ಇರುವಳು. ಅವಳ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ನಡೆಯುವ ಉಳಿದ ಎಲ್ಲ ಕನ್ನಿಕೆಯರೂ ಚಿರ ಕುಮಾರಿಯಾಗಿಯೇ ಇರುವರು. ಈ ಕುಮಾರಿಯ ಬಳಗದ ಒಬ್ಬಳೂ ಕೂಡ ನಿಮಗೆ ದೊರಕಲಾರಳು. ಸಾಕ್ಷಾತ್ ದೇವಿಯ ವಿಷಯವನ್ನಂತೂ ಕೇಳಲಿಕ್ಕೇ ಬೇಡ. ದೂತನೆ, ಈಗ ನೀನು ಇಲ್ಲಿಂದ ಜಾಗ್ರತೆಯಾಗಿ ಹೊರಟುಹೋಗು. ಇಲ್ಲದಿದ್ದರೆ ನಿನಗೆ ಏನಾದರೂ ಅನರ್ಥವಾದೀತು.'

ದಾನವ ದೂತನಿಗೆ ದೇವಿಯ ದ್ವಾರಪಾಲಿಕೆಯು ಇಷ್ಟು ಮಾತನ್ನು ಹೇಳುವಷ್ಟರಲ್ಲಿಯೇ ಆಕಾಶದಿಂದ ನಾರದ ಮುನಿಯ ಸವಾರಿಯು ಅಲ್ಲಿಗೆ ಚಿತ್ತೈಯಿಸಿತು. ನಾರದರು ಅವಸರದಿಂದ ಬಂದು ಹೇಳಿದರು.

**ನಾರದ :-** ''ದೇವಿಯೇ, ಮಹಿಷಾಸುರನು ದೇವತೆಗಳನ್ನೆಲ್ಲ ಗೆದ್ದಿದ್ದಾನೆ ಸೋತು ಹೋದ ಸುರರೆಲ್ಲರೂ ಮೇರುಗಿರಿಯನ್ನು ತ್ಯಜಿಸಿ, ಬ್ರಹ್ಮದೇವರ ಬಳಿಗೆ ಹೋಗಿದ್ದಾರೆ.

ಆ ಎಲ್ಲ ಅಮರರು ಪ್ರೀತಿಯಿಂದ ನನ್ನನ್ನು ನಿನ್ನ ಬಳಿಗೆ ಕಳಿಸಿದ್ದಾರೆ. ಆ ದೈತ್ಯಾಧಮನು ನಿನ್ನನ್ನು ಹಿಡಿಯಬೇಕೆಂದು ಪ್ರಯತ್ನ ಮಾಡುತ್ತಲಿದ್ದಾನೆ. ಸುಂದರಿ, ನೀನು ಆ ದುಷ್ಟ ದೈತ್ಯನ ಜೊತೆಗೆ ಯುದ್ಧಮಾಡು. ಸ್ಥಿರವಾಗಿ ನಿಂತುಕೊಂಡು, ಕಲಿತನದಿಂದ ಕಾದಾಡಿ, ಆ ದಾನವನನ್ನು ಸಂಹರಿಸು.''

ಹೀಗೆ ನುಡಿದ, ನಾರದರು ಯದೃಚ್ಛೆಯಿಂದ ಅಲ್ಲಿಯೇ ಮಾಯವಾದರು. ಆಗ ಆ ದೇವಿಯು ಕೋಟಿ ಜನ ಕನ್ಯೆಯರೊಂದಿಗೆ, ಯುದ್ಧಕ್ಕೆ ಸನ್ನದ್ಧಳಾದಳು. ಆ ಎಲ್ಲ ಕುಮಾರಿಯರಿಗೆ ದೇವಿಯು, ಹೋರಾಡಲು ಅಪ್ಪಣೆ ನೀಡಿದಳು. ದೇವಿಯ ಆದೇಶದಂತೆ ಕೋಟಿ, ಕೋಟಿ ಕನ್ಯೆಯರು, ಬಿಲ್ಲು, ಬಾಣ, ಖಡ್ಗಗಳನ್ನು ಧರಿಸಿ, ಅಸುರ ಸೇನೆಯನ್ನು ಎದುರಿಸಲು ಅಣಿಯಾಗಿ ನಿಂತುಕೊಂಡರು ರಾಕ್ಷಸರ ಸೇನೆಯೆಲ್ಲವೂ ದೇವತೆಗಳನ್ನು ಬಿಟ್ಟು, ಯುದ್ಧಕ್ಕೆ ಸಿದ್ಧರಾಗಿ ನಿಂತುಕೊಂಡ ಕುಮಾರಿಯರ ದಂಡಿನ ಬಳಿಗೆ ಬಂದಿತು. ಆಗ ಎಲ್ಲ ಕುಮಾರಿಯರು ನಿಕರದಿಂದ ಹೋರಾಡಿದರು. ಚತುರಂಗ ಬಲ ಸಹಿತವಾದ ದೈತ್ಯ ಸೇನೆಯನ್ನೆಲ್ಲ ಒಂದು ಕ್ಷಣದಲ್ಲಿ ವಿಧ್ವಸ್ತಗೊಳಿಸಿದರು. ಕಂಡ ಕಂಡ ದೈತ್ಯರ ರುಂಡಗಳನ್ನೆಲ್ಲ ಚಂಡಾಡಿದರು. ದೇಹಗಳನ್ನು ಸೀಳಿದರು. ಅಂಗಾಗಗಳನ್ನು ಖಡ್ಗಗಳಿಂದ ಕತ್ತರಿಸಿ ಒಗೆದರು. ಕುಮಾರಿಯರು ಕಡಿದ ದಂಡ ರುಂಡಗಳು ರಣರಂಗದ ತುಂಬ ಹರಿಡಿದವು. ಕುಮಾರಿ ಬಳಗದ ಘೋರಾಸ್ತ್ರಗಳಿಂದ ಅಳಿದುಳಿದ ದೈತ್ಯರು ಮಹಿಷಾಸುರನ ಬಳಿಗೆ ಬಂದರು. ಅವರನ್ನು ಕಂಡು ಮಹಿಷಾಸುರನು ನುಡಿದನು.

**ಮಹಿಷಾಸುರ :-** ಸೇನಾಪತಿಯೇ ಇದೇನು ಅನರ್ಥ? ನನ್ನ ಕಣ್ಣೆದುರೇ ನನ್ನ ಸೇನೆಯೆಲ್ಲ ನಷ್ಟವಾಗಿ ಹೋಯಿತಲ್ಲ? ಅನಂತರ ಆನೆಯ ರೂಪ ಧರಿಸಿದ ಯಜ್ಞಹತನೆಂಬ ದೈತ್ಯನು ತನ್ನ ದೊರೆಗೆ ನುಡಿದನು.

**ಯಜ್ಞಹತ :-** ಮಹಾರಾಜನೆ ಆ ಕುಮಾರಿ ಗಣವು ಲೀಲಾಜಾಲವಾಗಿ ನಮ್ಮ ಸರ್ವ ಸೈನಿಕರನ್ನು ತರಿಯಿತು. ನಾರದನ ಮಾತು ಕೇಳಿ ನೀನು ಆ ಅಪೂರ್ವ ಕನ್ಯೆಯನ್ನು ಕಾಮಿಸುತ್ತಲಿರುವಿ. ಆದರಿಂದಲೇ ಇಂತಹ ಸರ್ವನಾಶವನ್ನು ನಾವು ಹೊಂದಬೇಕಾಯಿತು. ಇನ್ನು ಕೆಲವೇ ಸಮಯದಲ್ಲಿ ನಿನ್ನನ್ನು ಕೂಡ ಆ ದೇವಿಯು ಸಂಹರಿಸುವಳು.'' ಸೇನಾಪತಿಯ ಈ ವಚನವನ್ನು ಕೇಳಿ, ಮಹಿಷಾಸುರನಿಗೆ ಕೋಪವು ಕೆರಳಿತು. ಕೂಡಲೇ ಅವನು ಗದೆ ಹಾಗೂ ಒನಕೆಗಳನ್ನು ಹಿಡಿದುಕೊಂಡು ಯುದ್ಧಕ್ಕಾಗಿ ಆ ಕನ್ಯಾಮಣಿ ಇರುವಲ್ಲಿಗೆ ಓಡಿ ಬಂದನು. ದೇವ ಗಂಧರ್ವರಿಂದ ಪೂಜಿತಳಾದ ಮಹಾದೇವಿಯನ್ನು ಎದುರಿಸಿದನು. ತನ್ನ ಮೇಲೆ ಏರಿ ಬರುವ ಆ ದೈತ್ಯನನ್ನು ಕಂಡು ದೇವಿಯು ಇಪ್ಪತ್ತು ಕೈವುಳ್ಳವಳಾದಳು. ಒಂದೊಂದು ಕೈಯಲ್ಲಿ ಒಂದೊಂದು ಆಯುಧ-ಬಿಲ್ಲು, ಖಡ್ಗ, ಶಕ್ತಿ, ಬಾಣ, ಶೂಲ, ಗದಾ, ಚಕ್ರ, ಒನಕೆ, ಭಿಂಡಿವಾಳ, ಕೊಡಲಿ, ಡಮರು, ಗಂಟೆ, ಶತಘ್ನಿ, ಮುದ್ಗರ, ಭುಶುಂಡಿ, ಕುಂತ, ದಂಡ, ಪಾಶ, ಧ್ವಜ, ಪದ್ಮ ಮುಂತಾದ ಇಪ್ಪತ್ತು ಅಸ್ತ್ರಗಳು ಅವಳ ಕೈಗಳಲ್ಲಿ ಹೊಳೆಯುತ್ತಿದ್ದವು. ಒಂದು ಭಯಂಕರ ಸಿಂಹದ ಬೆನ್ನ ಮೇಲೆ ಆ ರುದ್ರಮೂರ್ತಿಯು ಆರೋಹಣ ಮಾಡಿದಳು. ಋಷಭಾರೂಢನಾಗಿ ಅಲ್ಲಿಗೆ ಆಗಮಿಸಿದನು. ಆಗ ಕ್ಷೇಮಂಕರಿಯು ನಮಸ್ಕರಿಸಿ ''ನಾನು ಈ ದೈತ್ಯರನ್ನೆಲ್ಲ ಗೆಲ್ಲುತ್ತೇನೆ. ನೀನೂ ವಿಷ್ಣುವೂ ಇಲ್ಲಿಯೇ ಇದ್ದುಕೊಂಡು ನಾನು ಮಾಡುವ ದಾನವ-ದಮನ

ನೋಡಿರಿ. ನೀವು ಇಲ್ಲಿ ಇದ್ದರೆ ಸಾಕು.'' ಎಂದು ಹೇಳಿ ಯುದ್ಧಕ್ಕೆ ಹೊರಟಳು. ಉಳಿಗ ಎಲ್ಲ ದೈತ್ಯರನ್ನು ಬಿಟ್ಟು, ಮೊದಲು ಅವಳು ಮಹಿಷಾಸುರನನ್ನೇ ಎದುರಿಸಿದಳು. ದೇವಿಗೂ ಆ ದಾನವ ದೊರೆಗೂ ಭಯಂಕರವಾದ ಯುದ್ಧವು ನಡೆಯಿತು. ಇಬ್ಬರೂ ಒಳ್ಳೇ ಕಲಿತನದಿಂದ ಕಾದಿದರು. ಒಂದು ಸಾವಿರ ವರ್ಷಗಳು ಕಳೆದವು. ಹತ್ತುಸಾವಿರ ವರ್ಷ ಹೀಗೆಯೇ, ದರ್ಪಿಷ್ಠ, ಬಲಿಷ್ಠನಾದ ಆ ದುಷ್ಟ ದೈತ್ಯನೊಂದಿಗೆ ಕಾದಡುತ್ತ ಬ್ರಹ್ಮಾಂಡವನ್ನೆಲ್ಲ ಸುತ್ತಿದಳು ಆ ಮಹಾದೇವಿ. ಒಂದು ದಿನ ಶತಶೃಂಗ ಪರ್ವತದಲ್ಲಿ ಆ ದೇವಿಯ ದೈತ್ಯೇಂದ್ರನನ್ನು ಕುರಿತು ನುಡಿದಳು-

ದೇವಿ :- ದಾನವಾಧಮನೆ, ಸೌಂದರ್ಯದ ಆಶೆಯಿಂದ ನೀನು ನನ್ನ ಬಳಿಗೆ ಒಬ್ಬ ದೂತನನ್ನು ಕಳಿಸಿದ್ದೆಯಷ್ಟೇ? ಅವನ ಜೊತೆಗೆ ನೀನು ಏನು ಹೇಳಿಕಳಿಸಿದ್ದೆ. ಆಗ ನಾನು ಅವನು ಹೇಳಿದ ಮಾತುಗಳನ್ನು ಸರಿಯಾಗಿ ಕೇಳಲಿಲ್ಲ. ಈಗ ನಿನ್ನ ಬಾಯಿಂದ ಹೇಳು. ಅದರ ಫಲವನ್ನು ಈಗಲೇ ಅನುಭವಿಸುವಿಯಂತೆ.''

ಹೀಗೆ ನುಡಿದು, ದೇವಿಯು ಅಟ್ಟಹಾಸ ಮಾಡಿದಳು. ಆ ದೈತ್ಯನನ್ನು ಹಿಡಿದು, ಕೆಳಗೆ ಒಗೆದು ಕಾಲಿನಿಂದ ಒದ್ದಳು. ಕೈಯಲ್ಲಿಯ ಶೂಲದಿಂದ ಇರಿದಳು. ಮತ್ತು ತನ್ನ ಶಕ್ತ್ಯಾಯುಧದಿಂದ ತಾನು ಅವನು ತಲೆಯನ್ನು ಕಡಿದಳು. ಆ ಕಾಲದಲ್ಲಿ ಓರ್ವ ರೌದ್ರಾಕಾರದ ಮನುಷ್ಯನು ಮಹಿಷಾಸುರನ ದೇಹದಿಂದ ಹೊರಬಿದ್ದ ದೇವಿಯ ಶಸ್ತ್ರಾಘಾತದ ಮಹಿಮೆಯಿಂದ ಸ್ವರ್ಗಕ್ಕೆ ಏರಿದನು. ಅನಂತರ ದೇವತೆಗಳು ಮಹಿಷಾಸುರನು ಪರಾಜಿತನಾದದ್ದು ಕಂಡು ಮಹಾದೇವಿಯನ್ನು ಹೀಗೆ ಸ್ತೋತ್ರ ಮಾಡಿದರು.

### ದೇವತೆಗಳು ಮಾಡಿದ ದೇವೀಸ್ತೋತ್ರ

ನಮೋದೇವಿ ಮಹಾಭಾಗೇ ಗಂಭೀರೇ ಭೀಮದರ್ಶನೇ ।
ನಮಸ್ತೇ ಸ್ಥಿತಿಸಿದ್ಧಾಂತೇ ತ್ರಿನೇತ್ರೇ ವಿಶ್ವತೋಮುಖಿ ॥
ವಿದ್ಯಾವಿದ್ಯೇ ಜಪೇ ಜಾಪ್ಯೇ ಮಹಿಷಾಸುರಮರ್ದಿನಿ ।
ಸರ್ವಗೇ ಸರ್ವವಿದ್ಯೇಶಿ ವಿಶ್ವರೂಪಿಣಿ ವೈಷ್ಣವಿ ॥
ವೀತಶೋಕೆ ಧ್ರುವೇ ದೇವಿ ಪದ್ಮೇ ಪದ್ಮಾಯತೇಕ್ಷಣೇ ।
ಶುದ್ಧಸತ್ವವ್ರತಸ್ಥೇ ಚ ಚಂಡರೂಪೇ ವಿಭಾವರಿ ॥
ಋದ್ಧಿ ಸಿದ್ಧಿಪ್ರದೇ ದೇವಿ ಸರ್ವ ಸತ್ವಮಯೀ ಧ್ರುವೆ ।
ವಿದ್ಯಾಪುರಾಣ ಶಿಲ್ಪಾನಾಂ ಜನನಿ ಭೂತಧಾರಿಣಿ ॥
ಸರ್ವದೇವರಹಸ್ಯಾನಾಂ ಸರ್ವಸತ್ವವತಾಂ ಶುಭೆ ।
ನಮೋಸ್ತುತೇ ಮಹಾದೇವಿ ನಮೋಸ್ತು ಪರಮೇಶ್ವರಿ ॥
ನಮೋಸ್ತು ಸರ್ವಭೂತಾನಾಂ ಮಾತರ್ನಿತ್ಯೆಽಕ್ಷಯೆಽವ್ಯಯೆ ।
ನ ತೇಷಾಂ ಜಾಯತೇ ಕಿಂಚಿದಶುಭಂ ರಣಸಂಕಟೇ ॥
ಯೇ ತು ವ್ಯಾಘ್ರಭಯೇ ಘೋರೇ ಚೌರರಾಜಭಯೇ ತದಾ ।
ಸರ್ವಭೂತಾಭಯೇ ದೇವಿ ಕ್ಷೇಮ್ಯಾ ಕ್ಷೇಮಂಕರೀತಿ ಚ ॥

**ವಿಭಾವರೀ ಭಾವರೀ ಚ ಸರ್ವಸ್ಥಿತಿಕರೀ ತಥಾ ।**
**ಸರ್ವಾಸಾಂ ಭಗವಾನ್ರುದ್ರಃ ಸರ್ವಗತ್ವಾತ್ಪತಿ ಸ್ಸ್ಮೃತಃ ॥**

**ಯಾವತ್ಯಸ್ತು ಮಹಾಶಕ್ತ್ಯಃ ತಾವದ್ರೂಪಸ್ತು ಶಂಕರಃ ।**
**ನಿಗಡಸ್ಥೋಽಪಿ ಯೋ ದೇವಿ ತ್ವಾಂ ಸ್ಮರಿಷ್ಯತಿ ಮಾನವಃ ।**
**ಸೋಽಪಿ ಬಂಧಾತ್ಪ್ರಮುಚ್ಯೇತ ಸ ಸುಖಂ ವಸತೇ ಸುಖೀ ॥**

ಇಂದ್ರಾದಿ ದೇವತೆಗಳು ಕೂಡಿಮಾಡಿದ ಈ ಸ್ತೋತ್ರವನ್ನು ಕೇಳಿ. ಆ ಮಹಾದೇವಿಯು ಅತ್ಯಂತ ಸಂತುಷ್ಟಳಾಗಿ ದೇವತೆಗಳಿಗೆ ಬೇಕಾದ ವರ ಬೇಡಿರಿ ಎಂದಳು.

**ದೇವತೆಗಳು** :- ಮಹಾದೇವಿ, ಪುಷ್ಕರ ಕ್ಷೇತ್ರದಲ್ಲಿ ನೆಲೆಸಿದ ನಿನ್ನನ್ನು ಈ ಸ್ತೋತ್ರದಿಂದ ಸ್ತುತಿಸಿದವರ ಸರ್ವ ಕಾಮನೆಗಳು ಪೂರ್ತಿಯಾಗಲಿ. ಇದೇ ನಾವು ಕೇಳಿಕೊಳ್ಳುವ ವರ.''

**ಪುಲಸ್ತ್ಯ** :- ದೇವತೆಗಳ ಅಪೇಕ್ಷೆಯಂತೆ ದೇವಿಯು ವರ ಅನುಗ್ರಹಿಸಿ ಅವರನ್ನೆಲ್ಲ ಬೀಳ್ಕೊಟ್ಟಳು. ತಾನು ಅಲ್ಲಿ (ಪುಷ್ಕರ ಕ್ಷೇತ್ರದಲ್ಲಿ) ನೆಲೆ ನಿಂತಳು. ಕ್ಷೇಮಂಕರೀ ದೇವಿಯು ಬ್ರಹ್ಮ ಶಕ್ತಿಯಿಂದ ಉದ್ಭವಿಸಿದ್ದಾಳೆ. ಅವಳ ಪಾವನ ಚರಿತೆಯನ್ನು ಪಠಿಸುವವನು ಪುತ್ರ, ಪೌತ್ರ, ಪಶು, ಸೌಭಾಗ್ಯ ಸಂಪದಗಳನ್ನು ಪಡೆದು, ಸರ್ವಸಂಕಟ ದಾಟಿ, ಕೊನೆಗೆ ಮೋಕ್ಷವನ್ನು ಹೊಂದುತ್ತಾನೆ. ಒಬ್ಬನೇ ಪರಬ್ರಹ್ಮನು, ಬ್ರಹ್ಮ, ವಿಷ್ಣು, ಮಹೇಶ ಎಂಬ ಮೂರು ರೂಪ ತಾಳುವಂತೆ, ಒಬ್ಬಳೇ ಆದ ಈ ಪರಾಶಕ್ತಿಯು ಸಾತ್ವಿಕಿ, ರೌದ್ರಿ, ವೈಷ್ಣವೀ, ತಾಮಸಿ ಎಂದು ಕರೆಯಲ್ಪಡುತ್ತಾಳೆ ಸಾತ್ವಿಕ, ಶಕ್ತಿಗೆ ಬ್ರಾಹ್ಮೀಶಕ್ತಿ ಎಂದು ಹೆಸರು ವೈಷ್ಣವೀ ರಾಜಸೀ ಶಕ್ತಿ, ತಾಮಸೀ ಶಕ್ತಿಯು ರುದ್ರಶಕ್ತಿ ಎನಿಸುತ್ತದೆ. ಬ್ರಾಹ್ಮೀಶಕ್ತಿಯು ಅಪರಾ, ವೈಷ್ಣವೀ ಶಕ್ತಿ ಪರಾ, ರೌದ್ರಿಶಕ್ತಿ ಪರಾವರಾ ಎನಿಸುತ್ತದೆ. ಜಗತ್ತಿಗೆಲ್ಲ ಕ್ಷೇಮವನ್ನುಂಟು ಮಾಡುವದರಿಂದ ಇವಳಿಗೆ ಕ್ಷೇಮಂಕರೀ ಎಂದು ಹೆಸರು ಬಂದಿದೆ. ರುದ್ರದೇವರ ತಾಮಸಶಕ್ತಿ, ಚಾಮುಂಡಿ ಎನಿಸುತ್ತದೆ. ಬ್ರಹ್ಮೀಶಕ್ತಿಯು ಜಗತ್ತಿನಲ್ಲಿಯ ಚರಾಚರ ವಸ್ತುಗಳನ್ನು ಸೃಷ್ಟಿಮಾಡುತ್ತಿದ್ದು ಬ್ರಹ್ಮಾಣಿ ಎನಿಸುತ್ತದೆ. ರಾಜಸೀ ಶಕ್ತಿಯು ವಿಷ್ಣುವಿನ ಸನ್ನಿಧಾನದಿಂದ ಪ್ರಪಂಚವನ್ನೆಲ್ಲ ಪಾಲಿಸುತ್ತದೆ. ರುದ್ರಶಕ್ತಿಯ ಚಾಮುಂಡಿ ರೂಪಗಳು ಒಂಭತ್ತು ಕೋಟಿ ಸಂಖ್ಯೆಯಲ್ಲಿರುತ್ತವೆ, ದೇವಿಯ ಈ ವಿವಿಧ ರೂಪಗಳನ್ನು ಪೂಜಿಸುವವರಿಗೆ ತ್ರಿಮೂರ್ತಿ ದೇವತೆಗಳು ಪ್ರಸನ್ನರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಕ್ಷೇಮಂಕರಿಯ ಚರಿತೆ ಎಂಬ ಮೂವತ್ತನೇ ಅಧ್ಯಾಯ ಮುಗಿದುದು*

—o—

**॥ಬ್ರಹ್ಮ ಉವಾಚ॥**

**ಯಾ ಸಂಭೂತಾ ಶರೀರಾತ್ತು ಬ್ರಹ್ಮಣೋಽವ್ಯಕ್ತ ಜನ್ಮನಃ ।**
**ಗಾಯತ್ರ್ಯಷ್ಟ ಭುಜಾ ಭೂತ್ವಾ ಖ್ಯಾತಾ ವಿಂಶ ಭುಜಾ ತಥಾ ॥**

**ಭೀಷ್ಮ :-** ಬ್ರಹ್ಮದೇವರ ಶರೀರದಿಂದ ಜನಿಸಿದ ಅಷ್ಟಭುಜ ಗಾಯತ್ರಿಯು ಮಹಿಷಾಸುರನ ಸಂಹಾರ ಕಾಲದಲ್ಲಿ ಇಪ್ಪತ್ತು ಭುಜಗಳನ್ನು ಹೊಂದಿದಳು. ಪ್ರಸಿದ್ಧಳಾದ ಆ ದೇವಿಯು ಮಹಿಷಾಸುರನನ್ನು ಕೊಂದು ದೇವಕಾರ್ಯವನ್ನು ಸಾಧಿಸಿ ಸರ್ವ ಸುರಪೂಜಿತಳಾದಳು. ಇದರಂತೆ ವೈಷ್ಣವೀ ಶಕ್ತಿಯು ಯಾವ ದೈತ್ಯನನ್ನು ಸಂಹರಿಸಿದಳು. ಅದರಂತೆ ಚಾಮುಂಡಿಯು ಯಾವ ದಾನವನನ್ನು ಕೊಂದಳು?

**ಪುಲಸ್ತ್ಯ:-** ಸ್ವಾಯಂಭುವ ಮನ್ವಂತರದಲ್ಲಿ ವೈಷ್ಣವೀ ಶಕ್ತಿಯು ಮಂದರ ಪರ್ವತದಲ್ಲಿ ಮಹಿಷಾಸುರನನ್ನು ಸಂಹರಿಸಿದಳು. ಅದೇ ಮಹಿಷಾಸುರನು ವೈವಸ್ವತ ಮನ್ವಂತರದಲ್ಲಿ ಮತ್ತೆ ಹುಟ್ಟಿದಾಗ ನಂದಾ ಎಂಬ ಶಕ್ತಿಯಿಂದ ವಧಿಸಲ್ಪಟ್ಟನು. ಅಥವಾ ಇದೆಲ್ಲವು ಒಂದು ಸಾಂಕೇತಿಕ ರೂಪಕ ಎಂದು ತಿಳಿಯಬೇಕು. ಮಹಿಷ ಎಂದರೆ ಮೂರ್ತಿಮಂತ ಅಜ್ಞಾನ. ಆ ಅಜ್ಞಾನವನ್ನು ನಾಶ ಪಡಿಸಿದ ದೈವೀ ಶಕ್ತಿಗಳು ದಿವ್ಯವಾದ ಜ್ಞಾನ ಶಕ್ತಿಯ ಸಂಕೇತ ಅಜ್ಞಾನವು ಎಂದೇ ಆದರೂ ಜ್ಞಾನದಿಂದಲೇ ನಾಶವಾಗುವದು. ಇದರಲ್ಲಿ ಸಂದೇಹವಿಲ್ಲ. ಭಾರತೀಯರು ಜ್ಞಾನದ ಉಪಾಸಕರು.

**'ಅಥವಾ ಜ್ಞಾನಶಕ್ತಿಶ್ಚ ಮಹಿಷೋಽಜ್ಞಾನಮೂರ್ತಿಮಾನ್ ।**
**ಅಜ್ಞಾನಂ ಜ್ಞಾನ ಬಾಧ್ಯಂತು 'ಭವತೀಹ ನ ಸಂಶಯಃ ॥**

**ಮೂರ್ತಿ ಪಕ್ಷೇ ಚೇತಿಹಾಸಃ ಮೃಣ್ಮೂರ್ತಿಃ ಸ್ವೇನ ಪದ್ಯತೇ ।**
**ಖ್ಯಾಪ್ಯತೇ ವೇದ ವಾದ್ಯೈಸ್ತು ಜ್ಞಾನಂ ತೈರ್ವೇದವಾದಿಭಿಃ ॥**

ಈ ಅಜ್ಞಾನದ ಹ್ರಾಸ ಮತ್ತು ಜ್ಞಾನದ ವಿಕಾಸದ ಕ್ರಮಬದ್ಧವಾದ ವೃತ್ತಾಂತವೇ ಇತಿಹಾಸವೆನಿಸುವದು. ಮೂರ್ತಿ ಅಥವಾ ದೇವತಾ ಪ್ರತಿಮೆಗಳ, ಚರಿತ್ರೆಗಳ ಹಿಂದೆ ಈ ಜ್ಞಾನಾಜ್ಞಾನಗಳ ಹೋರಾಟವೇ ಜ್ಞಾನದ ಗೆಲುವಿನಲ್ಲಿ ಪರ್ಯವಸಾನವಾಗಿ ಹಿನ್ನೆಲೆಯ ರೂಪದಲ್ಲಿ ಸಾಂಕೇತಿಕ ಅರ್ಥವಾಗಿ ಅಡಗಿರುತ್ತದೆ. ಮಣ್ಣು-ಕಲ್ಲು ಧಾತುವಿನಿಂದ ಮಾಡಿದ ಮೂರ್ತಿಗಳು, ಕಾಲಾಂತರದಿಂದ ತಾವಾಗಿ ನಶಿಸಿ ಹೋಗಬಹುದು. ಆ ಮೂರ್ತಿಗಳು ಹೋದರೂ ವೇದ ಪಂಡಿತರು ಜ್ಞಾನದ ಇತಿಹಾಸವನ್ನು ಬೇರೆ ಬೇರೆ ಪ್ರತಿಮೆಗಳಿಂದ ಸಾಂಕೇತಿಕ ಅರ್ಥವನ್ನು ಉಳಿಸಿಕೊಂಡು ಜಗತ್ತಿನಲ್ಲಿ ಪ್ರಚುರ ಪಡಿಸುತ್ತಲಿರುತ್ತಾರೆ.

ಈಗ ಪಂಚಮಹಾಪಾತಕಗಳನ್ನು ನಾಶಪಡಿಸುವ ಬ್ರಹ್ಮದೇವರ ಪೂಜಾ ವಿಧಾನವನ್ನು ಹೇಳುತ್ತೇನೆ; ಅದನ್ನು ಕೇಳು. ಒಂಭತ್ತು ದಳವುಳ್ಳ ಪದ್ಮ ಬರೆದು ಮುಂದೆ ಹೇಳಿದ ರೀತಿಯಲ್ಲಿ ದೇವತೆಗಳನ್ನು ಅವಾಹನೆ ಮಾಡಿ ಶಾಸ್ತ್ರೋಕ್ತವಾಗಿ ಪೂಜಿಸಬೇಕು.

| | | | |
|---|---|---|---|
| ಪೂರ್ವದಿಕ್ಕಿನಲ್ಲಿ | - | ಇಂದ್ರನನ್ನು | ಪೂಜಿಸಬೇಕು |
| ಆಗ್ನೇಯ ದಿಕ್ಕಿನಲ್ಲಿ | - | ಅಗ್ನಿಯನ್ನು | ಪೂಜಿಸಬೇಕು |

| | | | |
|---|---|---|---|
| ದಕ್ಷಿಣ ದಿಕ್ಕಿನಲ್ಲಿ | - | ಯಮನನ್ನು | ಪೂಜಿಸಬೇಕು |
| ನೈಋತ್ಯ ದಿಕ್ಕಿನಲ್ಲಿ | - | ನಿರರತಿಯನ್ನು | ಪೂಜಿಸಬೇಕು |
| ಪಶ್ಚಿಮ ದಿಕ್ಕಿನಲ್ಲಿ | - | ವರುಣನನ್ನು | ಪೂಜಿಸಬೇಕು |
| ವಾಯುವ್ಯ ದಿಕ್ಕಿನಲ್ಲಿ | - | ವಾಯುವನ್ನು | ಪೂಜಿಸಬೇಕು |
| ಉತ್ತರ ದಿಕ್ಕಿನಲ್ಲಿ | - | ಕುಬೇರನನ್ನು | ಪೂಜಿಸಬೇಕು |
| ಈಶಾನ್ಯ ದಿಕ್ಕಿನಲ್ಲಿ | - | ರುದ್ರನನ್ನು | ಪೂಜಿಸಬೇಕು |
| ಇದರಂತೆ ಪೂರ್ವ ದಿಕ್ಕಿನಲ್ಲಿ | - | ವಿಷ್ಣುವನ್ನು | ಪೂಜಿಸಬೇಕು |
| ದಕ್ಷಿಣದಲ್ಲಿ | - | ಶಿವನನ್ನು | ಪೂಜಿಸಬೇಕು |
| ಪಶ್ಚಿಮದಲ್ಲಿ | - | ರವಿಯನ್ನು | ಪೂಜಿಸಬೇಕು |
| ಉತ್ತರದಲ್ಲಿ | - | ನಕ್ಷತ್ರಗಳನ್ನು | ಪೂಜಿಸಬೇಕು |
| ಮಧ್ಯದಲ್ಲಿ | - | ಬ್ರಹ್ಮನನ್ನು | ಪೂಜಿಸಬೇಕು |

ಅವನ ಬಲ ಬದಿಯಲ್ಲಿ ಸಾವಿತ್ರಿ, ಎಡದಲ್ಲಿ ಗಾಯತ್ರಿಯನ್ನು ಆಹ್ವಾನಿಸಬೇಕು. ನಾಲ್ಕುವೇದಗಳನ್ನು ನಾಲ್ಕು ದಿಕ್ಕಿನಲ್ಲಿ-ಋಗ್ವೇದ ಇತಿಹಾಸ ಪುರಾಣಗಳನ್ನು ಪೂರ್ವದಲ್ಲಿ, ಯಜುರ್ವೇದ ಛಂದಸ್ಸು ದಕ್ಷಿಣಕ್ಕೆ, ಸಾಮವೇದ ಪಶ್ಚಿಮದಲ್ಲಿ, ಅಥರ್ವಣವೇದ ಧರ್ಮಶಾಸ್ತ್ರಗಳನ್ನು ಉತ್ತರದಲ್ಲಿ ಆಹ್ವಾನಿಸಬೇಕು. ಇದರಂತೆ ಪೂರ್ವದಳದಲ್ಲಿ ಬಲನನ್ನು ದಕ್ಷಿಣದಳದಲ್ಲಿ ಪ್ರದ್ಯುಮ್ನ, ಪಶ್ಚಿಮದಳದಲ್ಲಿ ಅನಿರುದ್ಧ, ಉತ್ತರದಳದಲ್ಲಿ ವಾಸುದೇವನನ್ನು ಆಹ್ವಾನಿಸಬೇಕು. ಇದರಂತೆ ಪೂರ್ವದಲ್ಲಿ ವಾಸುದೇವ, ದಕ್ಷಿಣದಲ್ಲಿ ಸದ್ಯೋಜಾತ, ಪಶ್ಚಿಮದಲ್ಲಿ ಈಶಾನ, ಉತ್ತರದಲ್ಲಿ ತತ್ಪುರುಷರನ್ನು ಆಹ್ವಾನಿಸಿ, ಅಘೋರ ಮೂರ್ತಿಯನ್ನು ಎಲ್ಲ ಕಡೆಗೂ ಆವಾಹಿಸಬೇಕು. ಹೀಗೆ ಬ್ರಹ್ಮನನ್ನು ಪೂಜಿಸಿ, ಎಂಟು ಕುಂಭಗಳನ್ನು ಎಂಟು ದಿಕ್ಕುಗಳಲ್ಲಿ ಇಟ್ಟು, ಅವುಗಳಲ್ಲಿ ಕ್ರಮವಾಗಿ ಅಷ್ಟದಿಕ್ಪಾಲಕರನ್ನು ಪೂಜಿಸಬೇಕು. ಮಧ್ಯಭಾಗದಲ್ಲಿ ಬ್ರಹ್ಮನಿಗೋಸ್ಕರ, ಒಂಬತ್ತನೆಯ ಬ್ರಹ್ಮಕಲಶವಿಡಬೇಕು. 'ಓಂ ಭೂರ್ಭವಸ್ವಃ' ಎಂಬ ವ್ಯಾಹೃತಿ ಮಂತ್ರದಿಂದ ಹೋಮ ಮಾಡಬೇಕು. ಕೊನೆಯಲ್ಲಿ ದೀಕ್ಷೆ ತೊಟ್ಟ ಯಜಮಾನನು ಧನ, ಧಾನ್ಯ, ಬಂಗಾರ, ವಾಹನ, ಐಶ್ವರ್ಯ ಮುಂತಾದವುಗಳನ್ನು ದಾನ ಮಾಡಬೇಕು. ದೀಕ್ಷಿತನಾದವನು ಪದ್ಮಪುರಾಣವನ್ನು ಕೇಳಿದರೆ ಅವನಿಗೆ ಸರ್ವಕ್ಷೇತ್ರ ಯಾತ್ರೆ ಮಾಡಿದ ಫಲವು, ಸರ್ವತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ಬರುವದು.

ಇನ್ನು ಮೇಲೆ ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಎಂದರೆ ಐಶ್ವರ್ಯ, ಧೈರ್ಯ ಸಂತೋಷದ, ಅಭಿವೃದ್ಧಿಗಳು-ಉಂಟಾಗುವಂತಹ ಕೆಲವು ವಾರ ವ್ರತಗಳನ್ನು ಹೇಳುತ್ತೇನೆ ಕೇಳು.

ಪ್ರತಿದಿನ ಒಂದೊಂದು ಹೆಚ್ಚಿನ ಮುಷ್ಟಿ ಅಕ್ಕಿಯನ್ನು ಹಾಕುತ್ತಹೋಗಿ ಒಂದು ವರ್ಷವಾದ ಬಳಿಕ ಅದನ್ನೆಲ್ಲ ಸೇರಿಸಿ ಬ್ರಾಹ್ಮಣರ ಭೋಜನ ಮಾಡಿಸುವದು. ಇದು ವಾರವ್ರತ ಎನಿಸುವದು. ಈ ವ್ರತವನ್ನು ಆದಿತ್ಯವಾರ ಆರಂಭಿಸಿ, ಅಂದು ಒಂದು ಮುಷ್ಟಿ ಅಕ್ಕಿ, ಸೋಮವಾರ ಎರಡು ಮುಷ್ಟಿ. ಮಂಗಳವಾರ ಮೂರು ಬುಧವಾರ ನಾಲ್ಕು, ಗುರುವಾರ ಐದು, ಶುಕ್ರವಾರ ಆರು, ಶನಿವಾರ ಏಳು ಮುಷ್ಟಿ ಅಕ್ಕಿ ಇಲ್ಲವೆ ಬೇರೆ ಧಾನ್ಯಗಳನ್ನು ಒಂದು ಸ್ಥಳ ಅಥವಾ ಪಾತ್ರೆಯಲ್ಲಿ ಕೂಡಿಹಾಕಿ ಮುಂದಿನ ರವಿವಾರದಿಂದ

ಮತ್ತೆ ಒಂದರಿಂದ ಮುಷ್ಟಿ ಧಾನ್ಯವನ್ನು ಶನಿವಾರದವರೆಗೆ ಒಂದೊಂದು ಮುಷ್ಟಿ ಬೆಳೆಸುತ್ತಹೋಗಿ ಒಂದು ವಾರವಾದ ಕೂಡಲೆ, ಕೂಡಿ ಬಿದ್ದ ಧಾನ್ಯದಿಂದ ದ್ವಿಜರ ಭೋಜನ ಮಾಡಿಸಬೇಕು. ವಾರವಾರವು ಕೂಡಿಬಿದ್ದ ಧಾನ್ಯದಿಂದ ದ್ವಿಜ ಭೋಜನ ಮಾಡಿಸುತ್ತ ಒಂದು ವರ್ಷ ಪರ್ಯಂತ ಅನ್ನಸಂತರ್ಪಣೆ ಮಾಡಬೇಕು. ಒಂದು ವರ್ಷದ ಬಳಿಕ ಬಂಗಾರದ ಸೂರ್ಯನ ಪ್ರತಿಮೆ ಮಾಡಿಸಿ ಕೆಂಪು ಬಟ್ಟೆ ಎರಡು ಹೊದಿಸಿ ಕೊಡೆ ಪಾದರಕ್ಷೆಗಳ ಜೊತೆಗೆ ತಾಮ್ರದ ಪಾತ್ರೆಯಲ್ಲಿಟ್ಟು ಯೋಗ್ಯನಾದ ವಿಪ್ರನಿಗೆ ದಾನ ಕೊಡಬೇಕು. ಹೀಗೆ ಮಾಡುವದರಿಂದ ಎಲ್ಲ ಗ್ರಹಗಳು ಶುಭಫಲವನ್ನು ನೀಡುವವು. ಮನುಷ್ಯನಿಗೆ ಇದರಿಂದ ದ್ರವ್ಯಪ್ರಾಪ್ತಿ. ಆರೋಗ್ಯಪ್ರಾಪ್ತಿಗಳಾಗುತ್ತವೆ. ಚಿತ್ರಾನಕ್ಷತ್ರ ಸೋಮವಾರ ರಾತ್ರಿ ಊಟಮಾಡಿ ಒಂದು ಮುಷ್ಟಿ ಅಕ್ಕಿ ತೆಗೆದಿಟ್ಟು ಹೀಗೆ ಪ್ರತಿಸೋಮವಾರ ಒಂದೊಂದು ಮುಷ್ಟಿ ಹೆಚ್ಚು ಮಾಡಿ ಎಂಟು ಸೋಮವಾರ ಅಕ್ಕಿ ಶೇಖರಿಸಬೇಕು. ಒಂಭತ್ತನೇವಾರ ದ್ವಿಜ ಸಂತರ್ಪಣೆ ಮಾಡಿಸಬೇಕು. ಅಂದು ಜೋಡು ವಸ್ತ್ರ, ಹಾಲು ತುಂಬಿದ ಕಂಚಿನ ಪಾತ್ರೆ, ಕೊಡೆ, ಪಾದರಕ್ಷೆಗಳನ್ನು ದಾನ ಮಾಡಬೇಕು.

ಸ್ವಾತಿ ನಕ್ಷತ್ರದ ಮಂಗಳವಾರದಲ್ಲಿ ಹಗಲು ಉಪವಾಸಮಾಡಿ ರಾತ್ರಿ ಅಂಗಾರಕ ಪ್ರತಿಮೆ ಮಾಡಿಸಿ ಪೂಜಿಸಿ ಊಟಮಾಡಬೇಕು. ಅಂದು ಒಂದು ಮುಷ್ಟಿ ಅಕ್ಕಿ ತೆಗೆದಿಡಬೇಕು ಮುಂದಿನ ಮಂಗಳವಾರದ ವರೆಗೆ ಪ್ರತಿ ಮಂಗಳವಾರ ಭೋಜನ ಮಾಡಿಸುತ್ತ ಎಂಟುವಾರ ಭೂರಿ ಭೋಜನ ಮಾಡಿಸಬೇಕು. ಆ ಅಂಗಾರಕ ಪ್ರತಿಮೆಯನ್ನು ತಾಮ್ರದ ಪಾತ್ರೆಯಲಿಟ್ಟು ಕೊಡೆ, ಕಾಲುಜೋಡುಗಳೊಂದಿಗೆ ವಿಪ್ರನಿಗೆ ದಾನಕೊಡಬೇಕು. ಹೀಗೆ ನಕ್ಷತ್ರಗಳ ಅನುಕ್ರಮದಿಂದ ಉಪವಾಸ ಮಾಡಿ ಆಯಾ ಗ್ರಹಗಳಿಗೆ ಉಕ್ತವಾದ ಧಾತುಗಳಿಂದ ಪ್ರತಿಮೆ ಮಾಡಿಸಿ ಅಕ್ಕಿಯ ನಿಧಿಯನ್ನು ಶೇಖರಿಸಿ. ಎಂಟುವಾರ ಪೂಜೆಮಾಡಿ. ಕೊನೆಗೆ ಆಪ್ರತಿಮೆಗಳನ್ನು ದಾನಕೊಟ್ಟು ಬ್ರಹ್ಮ ಭೋಜನ ಮಾಡಿಸಬೇಕು. ಹೋಮಹವನಾದಿ ವಿಧಿಗಳನ್ನು ಶಾಸ್ತ್ರೋಕ್ತವಾಗಿ ಮಾಡಬೇಕು. ಇದರಿಂದ ಗ್ರಹಗಳು ವಕ್ರವಾಗಿದ್ದರೂ ಅನುಕೂಲವಾಗುತ್ತವೆ. ರೋಗ ಪರಿಹಾರ, ದೇವತಾತೃಪ್ತಿ, ಪಿತೃತೃಪ್ತಿ, ದುಃಸ್ವಪ್ನ ಪರಿಹಾರ, ಸರ್ಪಾದಿ ಪೀಡಾ ಪರಿಹಾರವಾಗಿ ಸರ್ವಗ್ರಹಗಳು ಅನುಕೂಲವಾಗಿ, ವಿಶೇಷ ಪುಣ್ಯ ಪ್ರಾಪ್ತಿ ಆಗುತ್ತದೆ. ವರ್ಷದ ಕೊನೆಯಲ್ಲಿ ನವಗ್ರಹಗಳ ಸುವರ್ಣ ಪ್ರತಿಮೆ ಮಾಡಿಸಿ ದಾನ ಕೊಡಬೇಕು. ಅನ್ನಸಂತರ್ಪಣೆ, ದಕ್ಷಿಣೆದಾನ ಮಾಡಿದಷ್ಟು ಪುಣ್ಯ ವಿಶೇಷ ಬರುವದು. ದೇವತಾರಾಧನೆಯನ್ನು ಎಲ್ಲ ವ್ರತಗಳಲ್ಲಿ ಅವಶ್ಯ ಮಾಡಬೇಕು.

**ಶಂಕರಾದ್ ಜ್ಞಾನಮನ್ವಿಚ್ಛೇದಾರೋಗ್ಯಂ ಭಾಸ್ಕರಾತ್ತಥಾ ।**
**ಹುತಾಶನಾದ್ಧನಂ ಹೀಚ್ಛೇನ್ಮೋಕ್ಷಮಿಚ್ಛೇಜ್ಜನಾರ್ದನಾತ್ ॥**

ಜ್ಞಾನಬೇಕಾದರೆ ಶಿವನನ್ನು, ಆರೋಗ್ಯಕ್ಕಾಗಿ ಸೂರ್ಯನನ್ನು ಐಶ್ವರ್ಯಕ್ಕೆ ಅಗ್ನಿಯನ್ನು ಮೋಕ್ಷಬೇಕಾಗಿದ್ದರೆ ವಿಷ್ಣುವನ್ನು ಪೂಜಿಸಬೇಕು. ಬ್ರಹ್ಮವರ್ಚಸ್ಸು ಬರಬೇಕೆಂದಿದ್ದರೆ ಹಾಗೂ ಎಲ್ಲ ಪ್ರಾಣಿಗಳಿಗೆ ಶಾಂತಿ, ತುಷ್ಟಿ ಪ್ರಾಪ್ತವಾಗಬೇಕೆಂದು ಬಯಸಿದರೆ ಬ್ರಹ್ಮನನ್ನು ಪೂಜಿಸಬೇಕು.

**ಭೀಷ್ಮ :-** ಮಹರ್ಷಿಯೆ, ನೀವು ಹೇಳಿದ ಯಜ್ಞಗಳೆಲ್ಲವೂ ಬಹು ಫಲ ಪ್ರದವಾಗಿರುತ್ತವೆ. ಆದರೆ ಕಲಿಯುಗದ ಮಾನವರು ಅಲ್ಪಾಯುಷಿಗಳು, ಅವರಿಂದ ಇವೆಲ್ಲ

ಮಾಡಲು ಸಾಧ್ಯವಾಗುವದಿಲ್ಲ. ಆದುದರಿಂದ ಅಲ್ಪ ಆಯಾಸದಿಂದ ಹೆಚ್ಚಿನ ಫಲ ಬರುವ ವ್ರತ ಉಪವಾಸವಿದ್ದರೆ ನನಗೆ ತಿಳಿಸಿರಿ.

**ಪುಲಸ್ತ್ಯ :-** ಹಿಂದೆ ಶ್ವೇತ ಎಂಬ ಹೆಸರಿನ ಮಹಾರಾಜನು ವಶಿಷ್ಠ ಮಹರ್ಷಿಗಳಿಗೆ ಇದೇ ಪ್ರಶ್ನೆ ಕೇಳಿದ್ದನು. ಇಲಾವೃತ ಖಂಡದಲ್ಲಿ ಶ್ವೇತಮಹಾ ರಾಜನು ಆ ಕಾಲದಲ್ಲಿ ಅತ್ಯಂತ ಬಲಿಷ್ಠನಾಗಿದ್ದನು. ಅವನು ತನ್ನ ಬಾಹು ಪರಾಕ್ರಮದಿಂದ ಸಪ್ತದ್ವೀಪ ವತಿಯಾದ ಪೃಥ್ವಿಯನ್ನೆಲ್ಲ ಗೆದ್ದುಕೊಂಡನು. ಅವನ ಕುಲ ಪುರೋಹಿತರು ವಶಿಷ್ಠರು. ವಿಶ್ವವನ್ನೆಲ್ಲ ಗೆದ್ದು, ಧರ್ಮಕರ್ಮಗಳನ್ನು ಆಚರಿಸುತ್ತಲಿದ್ದ ಆ ಮಹಾರಾಜನು ಒಂದು ದಿನ ವಶಿಷ್ಠರಿಗೆ ಪ್ರಶ್ನೆ ಕೇಳಿದನು.

**ಶ್ವೇತರಾಜ :-** ಮುನಿ ಪುಂಗವರೆ, ನಾನು ಸಾವಿರಾರು ಅಶ್ವಮೇಧ ಯಜ್ಞಮಾಡಿ ಮುತ್ತು ರತ್ನ ಬಂಗಾರ ಮುಂತಾದ ಬಹಳ ಬೆಲೆ ಬಾಳುವ ವಸ್ತುಗಳನ್ನು ದಾನ ನೀಡಲು ಬಯಸುತ್ತೇನೆ, ಕಡಿಮೇ ಬೆಲೆಯುಳ್ಳ ಅಗ್ಗದ ಕಾಳುಗಳಿಂದ ಸಿದ್ಧಪಡಿಸ ಬಹುದಾದ ಅನ್ನದಾನ ಮಾಡುವದು ಯಾವ ದೊಡ್ಡ ಕೆಲಸ ! ನಾನು ಇಂತಹ ದೊಡ್ಡ ಸಾಮ್ರಾಟನಾಗಿ ಸಾಮಾನ್ಯವಾದ ಅನ್ನದಾನ ಮಾಡುವದು ನನಗೆ ಸೇರುವದಿಲ್ಲ. ಪಕ್ವಾನ ಮೃಷ್ಟಾನ್ನ ಮಾಡಿಸಿ, ಹೊಟ್ಟೆತುಂಬ ಊಟಕ್ಕೆ ಹಾಕಿದರೂ ಆಗುವ ತೃಪ್ತಿ ತಾತ್ಕಾಲಿಕ. ಅನ್ನದಾನದಿಂದ ಶಾಶ್ವತ ತೃಪ್ತಿ ಆಗದು. ಆದರೆ ಬಂಗಾರವನ್ನು ದಾನಕೊಟ್ಟರೆ ಬಹುದಿನಗಳವರೆಗೆ ಮನುಷ್ಯನಿಗೆ ಸಂತೋಷವೆನಿಸುವದು.

**ಪುಲಸ್ತ್ಯ :-** ವಶಿಷ್ಠರು ಮಹಾರಾಜನಿಗೆ ಅನ್ನದಾನ ಮಹಿಮೆಯನ್ನು ಪರಿಪರಿಯಾಗಿ ತಿಳಿಸಿದರು. ಆದರೂ ಕೇಳಲಿಲ್ಲ. ಯಾರಿಗೂ ಊಟಕ್ಕೆ ಹಾಕಲಿಲ್ಲ. ಅದು ಕ್ಷುದ್ರ ದಾನವೆಂದು ತಿಳಿದು, ಅನ್ನದಾನ ಬಿಟ್ಟು ಉಳಿದೆಲ್ಲ ಬೆಲೆಯುಳ್ಳ ವಸ್ತುಗಳನ್ನು ದಾನಕೊಟ್ಟನು. ಬೆಳ್ಳಿ, ಬಂಗಾರ, ರತ್ನ, ಗ್ರಾಮ ನಗರಗಳನ್ನು ದ್ವಿಜರಿಗೆ ಬೇಕಾದಷ್ಟು ದಾನ ನೀಡಿದನು. ಆದರೆ ಒಮ್ಮೆಯೂ ಕೂಡ ಅವನು ಅನ್ನಹಾಕಲಿಲ್ಲ. ಕುಡಿಯಲು ನೀರನ್ನು ಕೊಡಲಿಲ್ಲ. ನದಿಯಲ್ಲಿ ಹರಿಯುವ, ಅಥವಾ ಬಾವಿಯ ನೀರನ್ನು ತಂದು ಕೊಟ್ಟರೆ ಏನು ಪುಣ್ಯ? ಎಂದು ಜಲದಾನದಲ್ಲಿ ಅವನಿಗೆ ಅಸಡ್ಡೆ. ಹೀಗೆ ಆ ರಾಜನು ಅನೇಕ ವರ್ಷಕಾಲ ಪುಣ್ಯ ಕರ್ಮಮಾಡುತ್ತ ಭೂಮಿಯಲ್ಲಿ ಬಾಳಿದನು. ಅನೇಕಾನೇಕ ಅಶ್ವಮೇಧ ಯಜ್ಞಮಾಡಿ ಆ ಪುಣ್ಯದ ಮಹಿಮೆಯಿಂದ ಸ್ವರ್ಗಲೋಕ ಹೊಂದಿದನು.

ಸತ್ಯಲೋಕದಲ್ಲಿ ಬ್ರಹ್ಮದೇವರ ಸಭೆ, ಅಪ್ಸರೆಯರ ಕುಣಿತ, ಗಂಧರ್ವರ ಹಾಡು, ಸಿದ್ಧರ ಗಾನ, ತುಂಬರು, ನಾರದರ ಭಜನೆ, ತಪಸ್ವಿಮುನಿಗಳ ವೇದಘೋಷ. ಎಲ್ಲ ಜನರು ಅದನ್ನು ಕೇಳಿ ಆನಂದ ಪಡುತ್ತಿದ್ದಾರೆ. ಆದರೆ ಶ್ವೇತರಾಜನಿಗೆ ಈ ಎಲ್ಲ ಮಧುರ ಪ್ರಸಂಗಗಳಿಂದ ಆನಂದವಿಲ್ಲ. ನೀರಡಿಕೆ ಹಸಿವೆಗಳಿಂದ ಕಸಿವಿಸಿ ಹೊಟ್ಟೆಯಲ್ಲಿ. ಹೀಗೆ ಕ್ಷುಧಾ, ತೃಷೆಗಳಿಂದ ಅವನ ದೇಹವು ಕಂಗಾಲಾಗಿದೆ. ಹೊಟ್ಟೆಯಲ್ಲಿ ಹಸಿವೆಯ ರುದ್ರ ತಾಂಡವ ನಡೆದಾಗ ಗಂಧರ್ವಗಾನವಾಗಲಿ, ಅಪ್ಸರೆಯರ ನೃತ್ಯ ಅವನ ಮನಸ್ಸಿಗೆ ಸೊಗಯಿಸಲಿಲ್ಲ. ಸಭೆ ಬಿಟ್ಟು ಎದ್ದನು. ಋಕ್ಷ ಪರ್ವತಕ್ಕೆ ವಿಮಾನದಿಂದ ಬಂದಿಳಿದನು. ಅವನು ಮರಣ ಹೊಂದಿದಾಗ ಅವನ ಪಾರ್ಥಿವ ಶರೀರವನ್ನು ಅದೇ ಪರ್ವತದ ತಪ್ಪಲಿನಲ್ಲಿ ದಹನಮಾಡಿದ್ದರು. ಅವನ ದೇಹದ ಮೂಳೆಗಳು ಅಲ್ಲಿಯೇ ಬಿದ್ದಿದ್ದವು.

ವಿಮಾನದಿಂದ ಬಂದಿಳಿದ ಶ್ವೇತರಾಜನು ತನ್ನ ಎಲುವುಗಳನ್ನು ಆಯ್ದು ನೆಕ್ಕತೊಡಗಿದನು, ಹೀಗೆ ಮೂಳೆಗಳನ್ನು ನಾಲಿಗೆ ಚಾಚಿ ಚೀಪಿ, ಆಮೇಲೆ ಮತ್ತೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋದನು. ಹೀಗೆ ಅನುದಿನವೂ ಭೂಮಿಗೆ ಬಂದು ತನ್ನ ಅಸ್ತಿಗಳನ್ನು ನೆಕ್ಕುತ್ತಿದ್ದನು. ಒಂದು ದಿನ ಈ ದೃಶ್ಯವು ವಶಿಷ್ಠರ ಕಣ್ಣಿಗೆ ಬಿದ್ದಿತು. ಅವರು 'ಹೀಗೇಕೆ ?' ಎಂದು ಕಾರಣ ಕೇಳಿದರು. ಅದಕ್ಕೆ ಆ ಮಹಾರಾಜನು ಉತ್ತರಿಸಿದನು.

**ಶ್ವೇತರಾಜ :-** ಸ್ವಾಮಿ, ತಾವು ಹಿಂದೆ ಹೇಳಿದ ಮಾತನ್ನು ಕೇಳಲಿಲ್ಲ. ಮಹಾ ಅಪರಾಧವಾಯಿತು. ಅಲ್ಪವೆಂದು ಅನ್ನವನ್ನು ಊಟಕ್ಕೆ ಹಾಕಲಿಲ್ಲ, ಕುಡಿಯಲು ನೀರು ಕೊಡಲಿಲ್ಲ. ಬರಿ ಸುವರ್ಣ, ರತ್ನಗಳನ್ನು ದಾನ ಕೊಟ್ಟೆ. ಅನ್ನ ದಾನವನ್ನು ಲಘುವಾಗಿ ಕಂಡು ಅನ್ನದಾನ ಮಾಡದೇ ಇದ್ದುದರಿಂದ ಈಗ ನನಗೆ ಬ್ರಹ್ಮಲೋಕ ಪ್ರಾಪ್ತಿಯಾದರೂ ಹಸಿವೆಯ ಕಾಟ ತಪ್ಪಿಲ್ಲ. ನಾನು ಕಂಗಾಲಾಗಿದ್ದೇನೆ. ಈ ಮೂಳೆಗಳನ್ನೇ ನೆಕ್ಕುವ ಪ್ರಸಂಗವು ನನಗೆ ಬಂದಿದೆ. ಆದುದರಿಂದ ಪೂಜ್ಯರಾದ ಗುರುಗಳೆ, ನಾನು ಅನ್ನದಾನ ಮಾಡದಿದ್ದರೂ ನನಗೆ ಈ ಅನ್ನವು ದೊರೆಯುವಂತೆ ಉಪಾಯ ನೀವು ಮಾಡಬೇಕು. ನಾವು ಹಿಂದೆ ಕೊಡದೆ ಇದ್ದುದು ಈಗ ದೊರಕಲು ಏನಾದರೂ ವ್ರತ, ಉಪವಾಸಗಳು ಉಂಟೆ ? ಇದ್ದರೆ ತಿಳಿಸಿರಿ.

**ವಶಿಷ್ಠ:-** ಪೂರ್ವ ಕಾಲದಲ್ಲಿ ವಿನತಾಶ್ವ ಎಂಬ ರಾಜನು ಅಶ್ವಮೇಧ ಯಜ್ಞ ಮಾಡಿದನು. ನಿನ್ನಂತೆ ಅವನಾದರೂ ಅಲ್ಪವಾದುದೆಂದು ಅನ್ನದಾನವೊಂದು ಬಿಟ್ಟು ಉಳಿದೆಲ್ಲ ದಾನಗಳನ್ನು ಬೆಲೆಯುಳ್ಳ ಪದಾರ್ಥಗಳನ್ನು ನೀಡಿದನು. ಮಾಯಾಪುರಿಯಲ್ಲಿ ಅರಸನಾಗಿ ಆಳಿದ ಆ ದೊರೆಯು ಕೊನೆಗೆ ಗಂಗಾ ನದಿಯಲ್ಲಿ ಮರಣ ಹೊಂದಿದನು. ಸ್ವರ್ಗಲೋಕ ಪ್ರಾಪ್ತಿಯು ಅವನಿಗಾಯಿತು. ಅಲ್ಲಿಯೂ ಅವನಿಗೆ ಸ್ವರ್ಗದಲ್ಲಿ ಕ್ಷುಧೆಯ ಉಪದ್ರವ. ನಿನ್ನಂತೆ ತಾಳಲಾರದೆ ತಾನು ದೇಹಬಿಟ್ಟು ಗಂಗಾತೀರಕ್ಕೆ ಬಂದನು. ಅಲ್ಲಿ ಅವನ ಪುರೋಹಿತರು ಹೋಮ ಮಾಡುತ್ತಿದ್ದರು. ಅವರನ್ನು ತನ್ನ ಕ್ಷುಧೆಯ ಪರಿಹಾರಕ್ಕಾಗಿ ಉಪಾಯವೇನೆಂದು ಕೇಳಿದನು. ಅದಕ್ಕೆ ಅವನ ಪುರೋಹಿತರು ಆ ರಾಜನಿಗೆ ಹೇಳಿದರು.

**ಪುರೋಹಿತ :-** ರಾಜನೆ, ತಿಲಧೇನು, ಘೃತಧೇನು, ಜಲಧೇನು, ರಸಧೇನು, ಇವುಗಳನ್ನು ದಾನ ನೀಡಿದರೆ ನಿನಗೆ ಸೂರ್ಯ ಚಂದ್ರರು ಇರುವವರೆಗೂ ಹಸಿವೆಯ ಬಾಧೆ ಆಗುವದಿಲ್ಲ. ನೀನು ಶಾಶ್ವತವಾಗಿ ಸ್ವರ್ಗದಲ್ಲಿ ದಿವ್ಯ ಭೋಗಗಳನ್ನು ಅನುಭವಿಸಬಹುದು. ಅದರಲ್ಲಿ ಅವುಗಳನ್ನೆಲ್ಲ ಈಗ ನಿನಗೆ ನಿರೂಪಿಸುತ್ತೇನೆ ಕೇಳು.

**ತಿಲಧೇನು ದಾನ :-** ಎಳ್ಳಿನಿಂದ ಒಂದು ಹಸುವಿನ ಆಕಾರ ಮಾಡಿ ಅದನ್ನು ಹೀಗೆ ದಾನ ಮಾಡುವದಕ್ಕೆ ತಿಲಧೇನು ದಾನ ವಿಧಿ ಅನ್ನುವರು. ಹದಿನಾರು ಕೊಳಗ ಎಳ್ಳಿನಿಂದ ತಿಲಧೇನುವನ್ನು, ನಾಲ್ಕು ಕೊಳಗದಿಂದ ತಿಲವತ್ಸವನ್ನು ಮಾಡಬೇಕು. ಅದಕ್ಕೆ ಕಬ್ಬಿನ ಗಣ್ಣಿನಿಂದ ಕಾಲು, ಹೂವಿನಿಂದ ಹಲ್ಲು, ಗಂಧದಿಂದ ಮೂಗು, ಬೆಲ್ಲದ ನಾಲಿಗೆ, ಹೂಮಾಲೆಯ ಬಾಲ, ಗಂಟೆಯ ಆಭರಣ ಮಾಡಿಸಬೇಕು. ಚಿನ್ನದ ಕೊಂಬು, ಬೆಳ್ಳಿಯ ಗೊರಸು, ಕಂಚಿನ ದೇಹಗಳನ್ನು ಕಲ್ಪಿಸಿ, ಕೃಷ್ಣಾಜಿನದಲ್ಲಿ ಇಟ್ಟು ಬಟ್ಟೆ ಹೊದಿಸಿ ನೂಲಿನಿಂದ ಕಟ್ಟಿ, ಅದರ ಹೊಟ್ಟೆಯಲ್ಲಿ ಐದು ರತ್ನಗಳನ್ನು ಇಟ್ಟು, ಮಂತ್ರಪೂರ್ವಕವಾಗಿ ಬ್ರಹ್ಮಜ್ಞಾನಿಗಳಿಗೆ ದಾನ ಕೊಡಬೇಕು.

**'ಅನ್ನಂ ಮೇ ಜಾಯತಾಂ ಸದ್ಯಃ ಪಾನಂ ಸರ್ವಂ ರಸಸ್ತಥಾ ।**
**ಕಾಮಾನ್ ಸಂಪಾದಯಾಸ್ಮಾಕಂ ತಿಲಧೇನೋ ದ್ವಿಜೇರ್ಪಿತಾ ॥**

'ನನಗೆ ಸದ್ಯದಲ್ಲಿಯೇ ಅನ್ನವು ದೊರಕಲಿ, ಕುಡಿಯಲು ನೀರು ಹಾಗೂ ಎಲ್ಲ ರಸಗಳೂ ಲಭಿಸಲಿ, ತಿಲಧೇನುವೆ, ಈ ದ್ವಿಜನಿಗೆ ನಾನು ದಾನಕೊಟ್ಟಿರುವೆ ನಿನ್ನನ್ನು ನನ್ನ ಎಲ್ಲ ಮನೋ ರಥಗಳನ್ನು ಈಡೇರಿಸು' ಎಂದು ಪ್ರಾರ್ಥಿಸಿ ದಾನ ಕೊಡಬೇಕು. ದಾನ ತೆಗೆದುಕೊಳ್ಳುವವ-

**ಗೃಹ್ಣಾಮಿ ತ್ವಾಂ ಭಕ್ತ್ಯಾ, ದೇವಿ, ಕುಟುಂಬಾರ್ಥೇ ವಿಶೇಷತಃ ।**
**ದೇಹಿ ಕಾಮಾನ್ ಸರ್ವಾನ್ ಹಿತಾನ್ ತಿಲಧೇನೋ ನಮೋಸ್ತು ತೇ ॥**

ದೇವಿ, ತಿಲಧೇನುವೇ, ನಿನ್ನನ್ನು ಭಕ್ತಿಯಿಂದ ನನ್ನ ಕುಟುಂಬದ ಉಪಯೋಗಕ್ಕಾಗಿ ದಾನ ತೆಗೆದುಕೊಳ್ಳುತ್ತೇನೆ. ನನ್ನ ಹಿತಕರವಾದ ಕಾಮನೆಗಳನ್ನು ಪೂರ್ಣಮಾಡು, ಧೇನುವೇ ನಿನಗೆ ನನ್ನ ನಮಸ್ಕಾರವಿರಲಿ' ಎಂದು ಮಂತ್ರ ಹೇಳಿ, ದಾನವನ್ನು ಕೊಳ್ಳಬೇಕು. ಈ ವಿಧಿಯಿಂದ ಆಚರಿಸಿದ ತಿಲಧೇನುವಿನ ದಾನದಿಂದ ಮಾನವರ ಮನೋರಥಗಳೆಲ್ಲ ಸಿದ್ಧಿಸುವವು. ಇದೇ ವಿಧಾನದಿಂದ ನೀರಿನ ಕಲಶಗಳಿಂದ ಜಲಧೇನುವನ್ನು ಕಲ್ಪಿಸಿ, ದಾನ ಕೊಡಬೇಕು. ಇದರಂತೆ ಘೃತಧೇನುವನ್ನು ಕೊಟ್ಟರೆ ಮಾನವ ದೇಹದ ಕಾಂತಿ ಇಮ್ಮಡಿಸುವದು. ಕಾರ್ತೀಕದಲ್ಲಿ ರಸಧೇನುದಾನ ನೀಡಿದರೆ ಸರ್ವಾರ್ಥ ಸಿದ್ಧಿ ಆಗುವದು. ಈ ದಾನಗಳನ್ನು ಕಾರ್ತಿಕ ಮಾಸದಲ್ಲಿ ಮಾಡಿದರೆ ಶಾಶ್ವತವಾಗಿ ಹಸಿವು ಬಾಯಾರಿಕೆಗಳ ಪರಿಹಾರವಾಗುವದು.

**ರಾಜ :-** ಬ್ರಹ್ಮಾಂಡದಾನದ ವಿಧಿಯನ್ನು ಹೇಳಿರಿ.

**ವಶಿಷ್ಠ :-** ಎಲ್ಲ ಧಾತುಗಳ ಜೊತೆಗೆ ಸಾವಿರ ಬಂಗಾರದ ನಾಣ್ಯಗಳನ್ನು ಸೇರಿಸಿ, ಬ್ರಹ್ಮಾಂಡವನ್ನು ರಚಿಸಬೇಕು. ಅದರ ಮಧ್ಯದಲ್ಲಿ ಒಂದು ಪದ್ಮವನ್ನು ಕಲ್ಪಿಸಿ, ಅದರ ನಡುವೆ ಸಾವಿತ್ರಿ, ಗಾಯತ್ರಿಯರೊಂದಿಗೆ ಬ್ರಹ್ಮನ ಮೂರ್ತಿಯನ್ನು ಚಿನ್ನದಿಂದ ಮಾಡಿಸಿ ಇಡಬೇಕು. ನೀಲಮರಕತ ಮಣಿಗಳಿಂದ ಲಕ್ಷ್ಮೀವರಾಹ ದೇವರ ಮೂರ್ತಿಗಳನ್ನು ಮಾಡಿಬೇಕು. ನವಗ್ರಹಗಳನ್ನು ಬಂಗಾರದಿಂದ ಮಾಡಿಸಬೇಕು. ಚಿನ್ನದ ಏಳು ಪಟ್ಟು ಬೆಳ್ಳಿ, ಅದರ ಏಳು ಪಟ್ಟು ತಾಮ್ರ, ತಾಮ್ರದ ಏಳು ಪಟ್ಟು ಕಂಚು, ಅದರ ಏಳು ಪಟ್ಟು ತವರು, ಅದರ ಏಳು ಪಟ್ಟು ಸೀಸ, ಸೀಸದ ಏಳು ಪಟ್ಟು ಕಬ್ಬಿಣಗಳನ್ನು ತೆಗೆದುಕೊಂಡು ಬ್ರಹ್ಮಾಂಡವನ್ನು ನಿರ್ಮಿಸಬೇಕು. ಅದರಲ್ಲಿ ಯಾವುದಾದರೂ ಒಂದು ಧಾತು ಸಿಗದಿದ್ದರೆ. ಅದರ ಬದಲಾಗಿ ಅಷ್ಟೇ ಇನ್ನೊಂದು ಧಾತು ತೆಗೆದುಕೊಳ್ಳಬೇಕು. ಅದರಲ್ಲಿ ಸಪ್ತದ್ವೀಪ. ಸಪ್ತಸಮುದ್ರ, ಸಪ್ತಪರ್ವತ ಆ ಪರ್ವತದಲ್ಲಿ ಪ್ರಾಣಿಗಳು, ವೃಕ್ಷ, ವನಸ್ಪತಿ, ಹುಲ್ಲು ಕಲ್ಲು ಬಳ್ಳಿಗಳನ್ನು ಚಿನ್ನದಿಂದ ಮಾಡಿಸಬೇಕು. ಕುರುಕ್ಷೇತ್ರ, ಗಯಾ, ಪ್ರಯಾಗ, ದ್ವಾರಾವತಿ ಪ್ರಭಾಸ, ಪುಷ್ಕರ ಮುಂತಾದವುಗಳನ್ನು ರಚಿಸಬೇಕು. ಇದಕ್ಕಾಗಿ ಹೋಮ ಶಾಲೆಯನ್ನು ಮಾಡಿ, ಸದಾಚಾರ ಸಂಪನ್ನವಾದ ವೇದಾಧ್ಯಾಯ ಪರಿಣಿತ ವಿಪ್ರನನ್ನು ಪತ್ನೀಸಹಿತನಾಗಿ ಪೂಜೆ ಮಾಡಿ, ಬಂಗಾರ ಕರ್ಣಾಭರಣಗಳನ್ನು ಕೊಟ್ಟು ಪೂಜೆ ಮಾಡಿ, ಪೌರೋಹಿತ್ಯವನ್ನು ವಹಿಸಿಕೊಡಬೇಕು. ಆ ಪುರೋಹಿತನ ಮುಖಾಂತರ ಹೋಮ ಹವನ ಮಾಡಿಸಿ, ಮುಂದೆ ಹೇಳುವ ಮಂತ್ರದಿಂದ ಆ ಬ್ರಹ್ಮಾಂಡವನ್ನು ದಾನ ಕೊಡಬೇಕು.

**ಬ್ರಹ್ಮಾಂಡೇನ ತು ದತ್ತೇನ ತೋಷಂ ಯಾತು ಜನಾರ್ದನಃ ।**
**ಪಿನಾಕಪಾಣಿಃ ಭಗವಾನ್ ಶಕ್ರಚ್ಚ ತ್ರಿದಶೇಶ್ವರಃ ॥**

ಈ ಬ್ರಹ್ಮಾಂಡದಾನದಿಂದ ವಿಷ್ಣುವು ಪ್ರೀತನಾಗಲಿ, ಶಿವನು ಸಂತುಷ್ಟನಾಗಲಿ, ಸ್ವರ್ಗಾಧಿಪತಿ ಇಂದ್ರನು ಪ್ರಸನ್ನನಾಗಲಿ. ಹೀಗೆ ಪ್ರಾರ್ಥನೆ ಮಾಡಿ ಗುರುವಿಗೆ ಬ್ರಹ್ಮಾಂಡವನ್ನು ದಾನ ಕೊಡಬೇಕು. ವಿನೀತಾಶ್ವರಾಜನ ಪ್ರಾರ್ಥನೆಯ ಮೇರೆಗೆ ಅವನ ಕುಲಪುರೋಹಿತನು ರಾಜನಿಂದ ಬ್ರಹ್ಮಾಂಡವನ್ನು ಮೇಲೆ ಹೇಳಿದ ಉಪಕರಣಗಳಿಂದ ರಚಿಸಿ ದಾನ ಕೊಡಿಸಿದನು- ಗುರುವಿಗೆ. ಗುರುವು ಕೂಡ ಅದನ್ನು ಭಾಗಮಾಡಿ ಬೇರೆ ಬೇರೆ ಯೋಗ್ಯರಾದವರಿಗೆ ದಾನ ಮಾಡಿದನು.

**ಬ್ರಹ್ಮಾಂಡೇ ಭೂಮಿದಾನೇ ಚ ಗ್ರಾಹೇ ಚೈಕೋ ನ ವೈ ಭವೇತ್ ।**
**ಗೃಹ್ಣನ್ ದೋಷಮವಾಪ್ನೋತಿ ಬ್ರಹ್ಮಹತ್ಯಾನ ಸಂಶಯಃ ॥**

ಬ್ರಹ್ಮಾಂಡದಾನ ಭೂಮಿದಾನಗಳ ಸಂದರ್ಭದಲ್ಲಿ ಒಬ್ಬನೇ ಆ ದಾನವನ್ನು ಸ್ವೀಕರಿಸಬಾರದು. ಅದರಲ್ಲಿ ಹಂಚಿ ಅನೇಕರಿಗೆ ದಾನ ಕೊಡಬೇಕು. ಇಂತಹ ದೊಡ್ಡ ದಾನವನ್ನು ಒಬ್ಬನೇ ತೆಗೆದುಕೊಂಡರೆ ಬ್ರಹ್ಮಹತ್ಯಾ ಪಾಪವು ಬರುತ್ತದೆ. ಇಂತಹ ದಾನವನ್ನು ಎಲ್ಲರ ಎದುರು ಹೇಳಿ ಕೊಡಬೇಕು. ಇಂತಹ ಮಹಾದಾನವನ್ನು ಕಣ್ಣಿನಿಂದ ನೋಡಿದರೂ ವಿಶೇಷ ಪುಣ್ಯ ಉಂಟು.

ಬೀಮದ್ವಾದಶಿಯ ದಿನ ಚಿನ್ನದ ಕೃಷ್ಣಾಜಿನ ಮಾಡಿಸಿ, ದಾನ ಮಾಡಿದರೆ ವಿಶೇಷ ಪುಣ್ಯ ಪ್ರಾಪ್ತಿ. ಈ ಎಲ್ಲ ದಾನಗಳನ್ನು ಕಾರ್ತೀಕ ಮಾಸದಲ್ಲಿ ಮಾಡಿದರೆ ಹೆಚ್ಚಿನ ಫಲ ಬರುತ್ತದೆ. ಬಡವರು ಪುಷ್ಕರ ಕ್ಷೇತ್ರಕ್ಕೆ ಬಂದು ಕಾರ್ತೀಕ ಮಾಸದಲ್ಲಿ 'ನಮೋ ಗೋಭ್ಯಃ' ಎಂದು ಆಕಳನ್ನು ನೆನೆದು ನಮಸ್ಕರಿಸಬೇಕು. ಅದರಿಂದ ಗೋದಾನದ ಫಲವು ಬರುವದು. ಭೂಮಿಯಲ್ಲಿರುವ ಎಲ್ಲ ಕ್ಷೇತ್ರಗಳು ಪುಷ್ಕರ ಕ್ಷೇತ್ರದಲ್ಲಿ ಸನ್ನಿಹಿತ, ಗಂಡಸಾಗಲಿ, ಹೆಂಗಸಾಗಲಿ ಕಾರ್ತೀಕ ಮಾಸದಲ್ಲಿ ಇಲ್ಲಿ ಬಂದು ಸ್ನಾನ ಮಾಡಿದರೆ ಸರ್ವಪಾಪಗಳು ಪರಿಹಾರವಾಗುತ್ತವೆ. ವಿಶೇಷ ಪುಣ್ಯ ಪ್ರಾಪ್ತಿಯಾಗುವದು. ಈ ರೀತಿಯಾಗಿ ಧೇನುದಾನ, ಬ್ರಹ್ಮಾಂಡ ದಾನಗಳ ವಿಧಿ ವಿಧಾನಗಳನ್ನು ತಿಳಿದು, ಕ್ಷೇತ್ರ ರಾಜನೂ ಕೂಡ ಬ್ರಹ್ಮಾಂಡವನ್ನು ಮಾಡಿಸಿ, ವಶಿಷ್ಠರಿಗೆ ದಾನ ಮಾಡಿದನು. ಅದರಿಂದ ಅವನು ಹಸಿವು, ನೀರಡಿಕೆ ನೀಗಿ ಸುರಲೋಕದಲ್ಲಿ ಸುಖದಿಂದ ಇದ್ದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಶ್ವೇತರಾಜ ಮಾಡದ ಅನ್ನದಾನ ಎಂಬ ಮೂವತ್ತೊಂದನೇಯ ಅಧ್ಯಾಯ ಮುಗಿದುದು*

—o—

**॥ಭೀಷ್ಮ ಉವಾಚ॥**

**ಉಕ್ತಂ ಭಗವತಾ ಸರ್ವಂ ಪುರಾಣಾಶ್ರಯ ಸಂಯುತಂ ।**
**ತಥಾ ಶ್ವೇತೇನ ಬ್ರಹ್ಮಾಂಡಂ ಗುರುವೇ ಪ್ರತಿಪಾದಿತಂ ॥**

**ಭೀಷ್ಮ:-** ಪೂಜ್ಯರೆ, ತಾವು ಪುರಾಣಾಧಾರ ಸಹಿತವಾದ ಶ್ವೇತರಾಜನ ಕಥೆಯನ್ನು ಅವನು ಗುರುವಿಗೆ ಬ್ರಹ್ಮಾಂಡದಾನ ಮಾಡಿದ ವಿಷಯವನ್ನು ತಿಳಿಸಿದಿರಿ. ಅನ್ನದಾನ ಮಾಡದಿದ್ದರಿಂದ ಹಸಿವೆಯಿಂದ ಕಸಿವಿಸಿಗೊಂಡು ಆ ರಾಜನು ತನ್ನ ಎಲುವುಗಳನ್ನು ತಾನೇ ನೆಕ್ಕುವ ಪರಿಸ್ಥಿತಿ ಬಂದ ವಿಷಯದಲ್ಲಿ ನನಗೆ ಬಹಳೇ ಕೌತುಕವಾಗಿದೆ. ಆದುದರಿಂದ ಭೂಲೋಕದಲ್ಲಿ ಅನ್ನದಾನದಿಂದ ಯಾವ ರಾಜರು ಸ್ವರ್ಗವನ್ನು ಪಡೆದರು. ಮತ್ತು ಅವರು ಮಾಡಿದ ಅನ್ನ ಮೂಲಕವಾದ ಯಜ್ಞಗಳು ಯಾವವು? ಶ್ವೇತರಾಜನಿಗೆ ಅಂತಹ ಬುದ್ಧಿ ಏಕೆ ಹುಟ್ಟಲಿಲ್ಲ? ಇದೆಲ್ಲವನ್ನು ನನಗೆ ಹೇಳಿರಿ. ಅನ್ನದಾನದ ಮಹಿಮೆಯು ಅದ್ಭುತವಾಗಿದೆ. ಇಲ್ಲಿ ಅನ್ನವನ್ನು ನೀಡಿದರೆ ಸ್ವರ್ಗದಲ್ಲಿ ಆದರ ಫಲ ದೊರಕುತ್ತದೆ. ಅನ್ನದಾನದಿಂದ ದೇವೇಂದ್ರನು ಮೂರು ಲೋಕಗಳನ್ನು ಅನುಭವಿಸುತ್ತಿದ್ದಾನೆ. ಅನ್ನದಾನದಿಂದಲೇ ಅವನಿಗೆ ಶತಕ್ರತು ಎಂಬ ಹೆಸರು ಬಂದಿದೆ. ಇದಲ್ಲದೆ ಅನ್ನದಾನದ ಬೇರೆ ಇತಿಹಾಸವಿದ್ದರೆ ನನಗೆ ನಿರೂಪಣೆ ಮಾಡಬೇಕು.

**ಪುಲಸ್ತ್ಯ:-** ಹಿಂದೆ ಅಗಸ್ತ್ಯರು ರಾಮಚಂದ್ರನಿಗೆ ಹೇಳಿದ ಇತಿಹಾಸವನ್ನು ನಿನಗೆ ಹೇಳುತ್ತೇನೆ.

**ಭೀಷ್ಮ:-** ಅಗಸ್ತ್ಯ ಋಷಿಗಳು ಉಪದೇಶ ಮಾಡಿದ ಆ ರಾಮನು ಯಾವ ವಂಶದಲ್ಲಿ ಜನಿಸಿದನು? ಆ ರಾಮಚರಿತ್ರವನ್ನು ನನಗೆ ಬಿತ್ತರಿಸಿರಿ.

**ಪುಲಸ್ತ್ಯ:-** ಮಹಾ ಬಲಿಷ್ಠನಾದ ರಾಮನು ರಘುವಂಶದಲ್ಲಿ ಜನಿಸಿದನು. ದೇವತೆಗಳ ಕಾರ್ಯ ಮಾಡಿದನು, ಲಂಕೆಯಲ್ಲಿರುವ ರಾವಣನನ್ನು ಕೊಂದನು. ಅವನು ಅಯೋಧ್ಯೆಗೆ ಮರಳಿ ಬಂದು, ರಾಜ್ಯಾಧಿಕಾರವನ್ನು ವಹಿಸಿಕೊಂಡಾಗ ಅವನ ಮನೆಗೆ ಋಷಿಗಳು ಬಂದರು. ಮಹಾನುಭಾವರಾಗಿದ್ದರು ಆ ಮುನಿಗಳೆಲ್ಲರು. ಬಾಗಿಲು ಕಾಯುವವ ಓಡುತ್ತ ಒಳಗೆ ಹೋದ. ರಾಮನಿಗೆ ತಿಳಿಸಿದ- ಮಹರ್ಷಿಗಳು ಬಂದಿದ್ದಾರೆ, ಬೇಗನೆ ತಮ್ಮನ್ನು ಕಾಣಬೇಕಂತೆ.' ರಘನಂದನನೇ ಇವತ್ತು ಸುದಿನ, ಮಹರ್ಷಿ ಅಗಸ್ತ್ಯರು ಋಷಿಗಳೊಂದಿಗೆ ಬಂದು ನಿಮ್ಮನ್ನು ಕಾಣಲು ಬಾಗಿಲಲ್ಲಿ ನಿಂತಿದ್ದಾರೆ.

**ರಾಮ :-** ಅವರನ್ನು ಬೇಗ ಒಳಗೆ ಬಿಡು. ಬಾಗಿಲಲ್ಲಿ ಏಕೆ ನಿಲ್ಲಿಸಿದೆ- ಆ ಮುನಿಗಳನ್ನು ಅಂತಹ ಮಹಾನುಭಾವರನ್ನು ತಡೆಯಬೇಕೇ? ಬೇಗ ಒಳಗೆ ಕರೆದುಕೊಂಡು ಬಾ. ರಾಮನ ಆಜ್ಞೆಯಿಂದ ದ್ವಾರಪಾಲಕನು ಅವರನ್ನೆಲ್ಲ ಒಳಗೆ ಕರೆದುಕೊಂಡು ಬಂದನು. ರಾಮನು ಎದ್ದು ಅವರಿಗೆ ಕೈಮುಗಿದು ನಮಸ್ಕಾರ ಮಾಡಿ ಆಸನಗಳ ಮೇಲೆ ಕೂಡಿಸಿದನು. ಅವರಿಗೆ ಅರ್ಘ್ಯ ಪಾದ್ಯಗಳನ್ನು ಕೊಟ್ಟು ಸತ್ಕಾರ ಮಾಡಿ, ರಾಮನು ಕುಶಲ ಪ್ರಶ್ನೆ ಮಾಡಿದನು. ಆಗ ಋಷಿಗಳು ರಾಮನನ್ನು ಕುರಿತು ಮಾತನಾಡಿದರು.

**ಋಷಿಗಳು:-** ರಾಮನೆ, ನಿನ್ನ ರಾಜ್ಯದಲ್ಲಿ ಎಲ್ಲರೂ, ಎಲ್ಲ ಕಡೆಗೂ ಕುಶಲವಷ್ಟೆ, ಸುದೈವದಿಂದ ನೀನು ವೈರಿಗಳನ್ನು ಕೊಂದು ಮರಳಿ ಅಯೋಧ್ಯೆಗೆ ಬಂದುದನ್ನು ನಾವು

ಕಾಣುತ್ತಲಿದ್ದೇವೆ. ಕುಲಕಂಟಕನಾದ ರಾವಣನು ನಿನ್ನ ಪತ್ನಿ ಸೀತೆಯನ್ನು ಅಪಹರಿಸಿದ್ದನು. ಅವಳ ಪಾತಿವ್ರತ್ಯ ಪ್ರಭಾವದಿಂದಲೇ ಆ ದುಷ್ಟನು ಸ್ವಯಂ ನಷ್ಟನಾದನು. ನೀನು ಏಕಾಕಿಯಾಗಿ ದುಷ್ಟ ದೈತ್ಯರನ್ನೆಲ್ಲ ಸಂಗ್ರಾಮಾಂಗಣದಲ್ಲಿ ಸಂಹರಿಸಿದೆ. ಇಂತಹ ಅದ್ವಿತೀಯ ಕಾರ್ಯವನ್ನು ಬೇರೆ ಯಾರೂ ಮಾಡಲಾರರು. ಇಂತಹ ಮಹಾಕಾರ್ಯ ಮಾಡಿದ ನಿನ್ನನ್ನು ನೋಡಿ ನಾವೆಲ್ಲರೂ ಪವಿತ್ರರಾದೆವು. ನಿನ್ನ ದರ್ಶನದಿಂದ ನಾವು ಇಂದು ನಿಜವಾದ ತಪಸ್ವಿಗಳು ಎನಿಸಿದ್ದೇವೆ. ನಿನ್ನೊಡನೆ ಮಾತನಾಡಲು ಈಗ ಬಂದಿದ್ದೇವೆ, ಎಲ್ಲರ ವೈರಿಯಾದ ರಾವಣನನ್ನು ಕೊಂದು ನೀನು ಪ್ರಪಂಚದ ಕಣ್ಣೀರನ್ನು ಒರೆಸಿರುವೆ. ಎಲ್ಲರಿಗೂ ಅಭಯವನ್ನು ನೀಡಿರುವೆ. ನಿನ್ನ ವಿಜಯಕ್ಕಾಗಿ ಅಭಿನಂದನೆ ಮಾಡಿ, ನಿನ್ನ ದರ್ಶನ ತೆಗೆದುಕೊಂಡು ನಾವು ನಮ್ಮ ಆಶ್ರಮಕ್ಕೆ ಹೋಗುತ್ತೇವೆ. ರಾಮನೆ, ನೀನು ಅರಣ್ಯಕ್ಕೆ ಬಂದಾಗ ನಾನು ನಿನಗೆ ಇಂದ್ರ ಧನುಸ್ಸನ್ನೂ, ಅಕ್ಷಯ ಬತ್ತಳಿಕೆ, ಕವಚ ಕೊಟ್ಟಿದ್ದೆ. ನೀನು ಇನ್ನೊಮ್ಮೆ ನಮ್ಮ ಆಶ್ರಮಕ್ಕೆ ಬರಬೇಕು.''

ಹೀಗೆ ರಾಮನಿಗೆ ಬಿನ್ನಹ ಮಾಡಿ ಎಲ್ಲ ಮುನಿಗಳು ತಮ್ಮ ತಮ್ಮ ಆಶ್ರಮಕ್ಕೆ ಹೋದರು. ಅವರು ಹೋದ ಬಳಿಕ ರಾಮಚಂದ್ರನು ವಿಚಾರಿಸಿದನು. 'ಈ ಋಷಿಗಳು ನನ್ನನ್ನು ಸ್ತೋತ್ರ ಮಾಡಿ, ಮತ್ತೊಮ್ಮೆ ಆಶ್ರಮಕ್ಕೆ ಬರ ಹೇಳಿದರಲ್ಲ? ಇದರಲ್ಲಿ ಏನಿರಬಹುದು. ನಾನು ಅವಶ್ಯವಾಗಿ ಅಗಸ್ತ್ಯರ ಆಶ್ರಮಕ್ಕೆ ಹೋಗುವೆನು. ಅಲ್ಲಿ ಹೋದರೆ ದೇವತೆಗಳ ಗುಟ್ಟು ತಿಳಿಯುವದು. ಹಾಗೂ ಅವರ ಅಭಿಪ್ರಾಯ ಏನಿದೆ ಎಂಬುವದು ಗೊತ್ತಾಗುವದು. ಏನೇ ಆಗಲಿ, ನಾನು ಭೂಲೋಕದಲ್ಲಿ ಇರುವವರೆಗೆ ಧರ್ಮಾಚರಣೆಯನ್ನು ನಿಯಮನಿಷ್ಠನಾಗಿ ಮಾಡುವೆನು. ಎಲ್ಲರಿಗೂ ಧರ್ಮವೇ ಪರಮಗತಿ.'' ತನ್ನ ಸಂಕಲ್ಪದಂತೆ, ರಾಮನು ಯಜ್ಞಯಾಗಗಳನ್ನು ಮಾಡುತ್ತ. ಧರ್ಮಕಾರ್ಯ ನೆರವೇರಿಸುತ್ತ ಹತ್ತು ಸಾವಿರ ವರ್ಷ ರಾಜ್ಯಶಾಸನ ಮಾಡಿದನು.

ಒಂದು ದಿನ ಒಬ್ಬ ವಯಸ್ಸಾದ ಹಳ್ಳಿಯ ದ್ವಿಜನು ಸತ್ತ ಮಗುವನ್ನು ಹೊತ್ತು ಕೊಂಡು ಅರಮನೆಯ ಬಾಗಿಲಿಗೆ ಹೋದನು, ಸ್ನೇಹಪೂರ್ಣವಾದ ಮಾತುಗಳನ್ನು ಹೇಳಿದನು.

**ದ್ವಿಜ :-** ಮಗನೆ, ನಾನು ಜನ್ಮಾಂತರದಲ್ಲಿ ಯಾವ ಪಾಪ ಕಾರ್ಯವನ್ನು ಮಾಡಿದ್ದೆನು. ನನಗೆ ನೀನೊಬ್ಬನೇ ಮಗನಿದ್ದೆ. ನೀನು ಮರಣ ಹೊಂದಿದ್ದನ್ನು ನಾನು ನನ್ನ ಕಣ್ಣಿಂದ ನೋಡಬೇಕಾಗಿದೆ. ನಿನಗೆ ಯೌವ್ವನ ಬಾರದೆ, ಐದು ವರ್ಷದ ಎಳೆಯದರಲ್ಲಿಯೇ ನಿನ್ನ ಆಯುಷ್ಯ ತೀರಿಹೋಯಿತೆ ? ನಿನ್ನ ಈ ಅಕಾಲ ಮರಣದಿಂದ ನನಗೆ ದುಃಖವಾಗುವದು. ಈ ಚಿಕ್ಕ ವಯಸ್ಸಿನಲ್ಲಿ ನೀನು ಸತ್ತದ್ದರಿಂದ ರಾಮನೇ ಪಾಪ ಮಾಡಿದ್ದಾನೆಂದು ಇದರಿಂದ ವ್ಯಕ್ತವಾಗುವದು. ಪುತ್ರ ಮರಣದ ಘೋರ ದುಃಖ ತಾಳಲಾರದೆ, ನಾನು ನನ್ನ ಹೆಂಡತಿಯು ಸಾಯುತ್ತೇವೆ. ಆಗ ರಾಮನಿಗೆ ಬಾಲಹತ್ಯೆ, ಬ್ರಹ್ಮಹತ್ಯೆ, ಸ್ತ್ರೀಹತ್ಯೆಗಳ ಪಾಪ ಬರುವದು.

**ಪುಲಸ್ತ್ಯ:-** ದುಃಖದಿಂದ ಗೋಳಾಡುವ ಆ ದ್ವಿಜನ ವಿಲಾಪವನ್ನು ರಾಜನು ಕೇಳಿದನು. ಅವನನ್ನು ಸಂತೈಸಿದನು. ಮತ್ತು ವಶಿಷ್ಠರನ್ನು ಪ್ರಶ್ನಿಸಿದನು.

**ರಾಮ :-** ಗುರುಗಳೆ, ನಾನು ಈಗ ಏನು ಮಾಡಲಿ ? ಬೆಂಕಿಯಲ್ಲಿ ಬಿದ್ದು ಪ್ರಾಣ ನೀಗಲೇ? ಈ ವೃದ್ಧನ ಮಾತು ಕೇಳಿ ನಾನು ಹೇಗೆ ಪರಿಶುದ್ಧನಾಗಲಿ ? ಆಗ ವಶಿಷ್ಠರ ಎದುರು ನಿಂತುಕೊಂಡ ನಾರದರೂ ರಾಮನಿಗೆ ನುಡಿದರು, ಅಲ್ಲಿರುವ ಋಷಿಗಳೆಲ್ಲರೂ ಕಿವಿತೆರೆದು ನಾರದರ ಮಾತನ್ನು ಆಲಿಸಿದರು.

**ನಾರದ :-** ರಾಮನೆ, ಹಿಂದೆ ಕೃತಯುಗದಲ್ಲಿ ದ್ವಿಜರು ಮಾತ್ರ ತಪಸ್ಸು ಮಾಡುತ್ತಿದ್ದರು. ದ್ವಿಜೇತರರಾರೂ ತಪಸ್ಸು ಮಾಡುತ್ತಿರಲಿಲ್ಲ. ಆದ್ದರಿಂದ ಆಗ ಅಕಾಲ ಮರಣವನ್ನು ಹೊಂದದೆ ಚಿರಂಜೀವಿಗಳಾಗಿ ಇರುತ್ತಿದ್ದರು. ತ್ರೇತಾಯುಗದಲ್ಲಿ ದ್ವಿಜ ಕ್ಷತ್ರಿಯ, ತಪಸ್ಸು ಮಾಡುತ್ತಿದ್ದಾರೆ. ಮಿಕ್ಕವರಿಗೆ ಅಂತಹ ತಪಸ್ಸು ನಿಷಿದ್ಧವಿದೆ. ಈಗ ನಿನ್ನ ರಾಜ್ಯದಲ್ಲಿ ಒಬ್ಬ ಶೂದ್ರನು ಉಗ್ರವಾದ ತಪಸ್ಸನ್ನು ಮಾಡುತ್ತಿದ್ದಾನೆ. ಆ ಪಾಪವು ನಿನಗೆ ತಟ್ಟಿ, ಅದರಿಂದ ನಿನ್ನ ಪ್ರಜೆಯಾದ ಇವನ ಮಗನು ಮರಣಹೊಂದಿದ್ದಾನೆ. ಯಾವ ರಾಜ್ಯದಲ್ಲಿ ಅಧರ್ಮಕಾರ್ಯಗಳು ನಡೆಯುವವೋ ಅದರ ಕಾಲಭಾಗ ರಾಜನಿಗೆಸಿಗುವದು. ಆದುದರಿಂದ ನೀನು ದೇಶದಲ್ಲಿ ಹೋಗಿ ಎಲ್ಲಿ ಅಧರ್ಮಕಾರ್ಯ ನಡೆಯುವದೆಂಬುದನ್ನು ತಿಳಿದು ಆ ಕಾರ್ಯಮಾಡಿದರೆ ದ್ವಿಜನ ಮಗನೂ ಉಳಿಯುತ್ತಾನೆ, ನಿನ್ನ ಧರ್ಮವೂ ಉಳಿಯುತ್ತದೆ.

ಆಗ ರಾಮನು ಸಂತೋಷಗೊಂಡು ಲಕ್ಷ್ಮಣನಿಗೆ ಹೇಳಿದನು.

**ರಾಮ :-** ಲಕ್ಷ್ಮಣನೆ ಹೋಗು ಈ ದ್ವಿಜನನ್ನು ಸಮಾಧಾನಪಡಿಸು, ಆ ಮಗುವಿನ ಶರೀರವನ್ನು ಎಣ್ಣೆಯ ದೋಣಿಯಲ್ಲಿ ಇರಿಸು. ಗಂಧ, ತೈಲಗಳಿಂದ ಆ ಮಗುವಿನ ಶರೀರವು ಕೊಳೆಯದಂತೆ ನೋಡಿಕೊ. ಈ ವಿಷಯವನ್ನು ರಹಸ್ಯವಾಗಿ ಹೀಗೆ ಹೇಳಿ ರಾಮನು ಪುಷ್ಪಕ ವಿಮಾನವನ್ನು ನೆನೆದ. ಕೂಡಲೇ ಅದು ಆಗಮಿಸಿತು. ಅನಂತರ ರಾಮಚಂದ್ರನು ನಾರದ ಋಷಿಗೆ ನಮಸ್ಕರಿಸಿ. ಧನುರ್ಬಾಣಗಳನ್ನು ತೆಗೆದುಕೊಂಡು ವಿಮಾನವನ್ನು ಆರೋಹಣ ಮಾಡಿದನು. ಲಕ್ಷ್ಮಣ ಭರತರನ್ನು ರಾಜ್ಯ ರಕ್ಷಣೆಗಾಗಿ ನಿಯಮಿಸಿ, ವಿಮಾನರೂಢನಾಗಿ ಹಿಮಾಲಯ ಪರ್ವತಕ್ಕೆ ಹೋದನು. ಆ ಹಿಮವತಪರ್ವತದ ಬದಿಯ ಸರೋವರದ ತೀರದಲ್ಲಿ ತಲೆ ಕೆಳಗುಮಾಡಿ, ತಪಸ್ಸನ್ನು ಆಚರಿಸುವ ಓರ್ವ ತಾಪಸನು ಅವನ ಕಣ್ಣಿಗೆ ಬಿದ್ದನು ಅವನ ಬಳಿಗೆ ಹೋಗಿ ಕೇಳಿದನು.

'ತಾಪಸನೇ ನೀನು ಧನ್ಯ ತಪಸ್ಸನ್ನು ಯಾವ ಜಾತಿಯವರು ಮಾಡಿದರು ವೃದ್ಧಿಯಾಗುವದು ನಿನಗೆ ಗೊತ್ತು? ನಾನು ದಶರಥನ ಮಗ ರಾಮ ಕುತೂಹಲದಿಂದ ಕೇಳುತ್ತಿದ್ದೇನೆ ನೀನು ದ್ವಿಜನಾದರೆ ನಿನಗೆ ಕಲ್ಯಾಣವಾಗಲಿ ನೀನು ದ್ವಿಜನೋ ಕ್ಷತ್ರಿಯನೋ, ವೈಶ್ಯನೋ, ಶೂದ್ರನೋ, ನಿಜಹೇಳು. ತಪಸ್ಸು ಕೂಡ, ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಿದೆ, ಸತ್ಯಾತ್ಮಕವಾದ ತಪಸ್ಸುಕೂಡ, ಸಾತ್ವಿಕ, ರಾಜ, ತಾಮಸ ಎಂದು ಮೂರು ಬಗೆಯಿದೆ, ಸತ್ಯಾತ್ಮಕವಾದ ತಪಸ್ಸು ಸಾತ್ವಿಕ ಎನಿಸುತ್ತದೆ.ಶಕ್ತ್ಯಾತ್ಮಕವಾದುದು ರಾಜಸ, ಇವುಗಳಲ್ಲಿ ಒಂದು ಆತ್ಮೋದ್ಧಾರಕ್ಕಾಗಿ ಇನ್ನೊಂದು ಲೋಕೋದ್ಧಾರಕ್ಕಾಗಿ ಇರುತ್ತವೆ. ಮೊದಲನೆಯದನ್ನು ದ್ವಿಜರು ಆಚರಿಸುತ್ತಾರೆ ಇದರಿಂದ ಮೋಕ್ಷಾದಿಪುರುಷಾರ್ಥಗಳು ಲಭಿಸುತ್ತವೆ. ಎರಡನೆಯದು ಕ್ಷತ್ರಿಯರು ಆಚರಿಸುತ್ತಾರೆ ಅದರಿಂದ ಲೋಕೋಪಕಾರ. ಪರರ ನಾಶಕ್ಕಾಗಿ ಮಾಡುವ ತಾಮಸ ತಪಸ್ಸು, ಅದಕ್ಕೆ ಅಸುರ ತಪಸ್ಸು ಎಂದು ಕರೆಯುವರು. ಅದರಲ್ಲಿ ತಮ್ಮ ಅವಯವಗಳನ್ನೇ ಕತ್ತರಿಸಿ ನೆತ್ತರು ಮೆತ್ತಿದಂತೆಯೇ ಅಗ್ನಿಯಲ್ಲಿ ಆಹುತಿ ನೀಡುವದೋ, ಮೊದಲಾದ ಕ್ರೂರವ್ಯಾಪಾರಗಳಿರುತ್ತವೆ. ಸಿದ್ಧಿಯನ್ನಾದರೂ ಹೊಂದಬೇಕು. ಮರಣವನ್ನಾದರೂ ಅಪ್ಪಬೇಕು ಎಂಬ ಛಲದಿಂದ ಮಾಡುವದು ಅಸುರ ತಪಸ್ಸು

ಎನಿಸುತ್ತದೆ. ನೀನು ಮಾಡುವ ತಪಸ್ಸಿನ ರೀತಿಯನ್ನು ನೋಡಿದರೆ ನಿನ್ನದು ಅಸುರ ತಪಸ್ಸು ಎನಿಸುತ್ತದೆ. ನೀನು ದ್ವಿಜನಾಗಿರಲಿಕ್ಕಿಲ್ಲ. ನೀನು ಸತ್ಯವನ್ನು ನುಡಿದರೆ ನಿನ್ನ ತಪಸ್ಸು ಸಿದ್ಧಿಸುತ್ತದೆ. ಸುಳ್ಳುಹೇಳಿದರೆ ಬದುಕಲಾರೆ.'

**ತಪಸ್ವಿ :-** ರಾಜಶ್ರೇಷ್ಠನೆ, ನಿನಗೆ ಸ್ವಾಗತ. ಬಹಳ ಕಾಲದ ಮೇಲೆ,ನಾನು ನಿನ್ನನ್ನು ನೋಡಿದೆ. ನೀನು ನನ್ನ ತಂದೆ ಇದ್ದಂತೆ, ಎಲ್ಲ ಪ್ರಜೆಗಳಿಗೂ ರಾಜನೆಂದರೆ ತಂದೆ ಇದ್ದಂತೆ ತಾನೆ? ನಾನು ದೇವಲೋಕವನ್ನು ಹೊಂದಬೇಕೆಂದು ತಪಸ್ಸು ಮಾಡುತ್ತಿದ್ದೇನೆ. ಶಂಬೂಕ ಎಂದು ನನ್ನ ಹೆಸರು.

**ಪುಲಸ್ತ್ಯ :-** ದೇವಲೋಕವನ್ನು ಗೆಲ್ಲುವ ಆಸೆಯಿಂದ ತಪಸ್ವಿ ಮಾತನ್ನು ಕೇಳಿದ ಕೂಡಲೇ ರಾಮನಿಗೆ ಕೋಪ ಬಂದು, ಅವನು ಒರೆಯಿಂದ ಖಡ್ಗವನ್ನು ಹಿರಿದು ಶಂಬೂಕನ ತಲೆಯನ್ನು ಕತ್ತರಿಸಿದನು. ಆಕಾಶದಿಂದ ಪುಷ್ಪವೃಷ್ಟಿ ಆಯಿತು. ಇಂದ್ರಾದಿ ದೇವತೆಗಳು ಬಂದು, ರಾಮನ ಕಾರ್ಯವನ್ನು ಪ್ರಶಂಸಿಸಿದರು. 'ನಿನಗೆ ಬೇಕಾದ ವರಗಳನ್ನು ಕೇಳು' ಎಂದು ಹೇಳಿದರು.

**ರಾಮ :-** ದೇವತೆಗಳೆ, ನೀವು ನನ್ನ ಮೇಲೆ ಪ್ರಸನ್ನರಾಗಿದ್ದರೆ ಈ ದ್ವಿಜನ ಮಗನು ಬದುಕಲಿ, ನನ್ನ ತಪ್ಪಿನಿಂದ ಈ ದ್ವಿಜನ ಏಕಮಾತ್ರ ಪುತ್ರನಾದ ಈ ಬಾಲಕನು ಮರಣಹೊಂದಿದ್ದಾನೆ. ಅವನನ್ನು ನನ್ನ ಆಯುಷ್ಯದ ಕಾಲು ಭಾಗ ಕೊಟ್ಟಾದರೂ ಬದುಕಿಸಿಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದೇನೆ. ನಿಮ್ಮ ವರದಿಂದ ಅವನು ಬದುಕಿದರೆ ನನಗೆ ಕೋಟಿ ವರಗಳನ್ನು ಕೊಟ್ಟದ್ದಕ್ಕಿಂತ ಅಧಿಕವಾಗುವದು.

**ದೇವತೆಗಳು :-** ರಾಮನೆ, ನೀನು ದೇವಲೋಕವನ್ನು ಗೆಲ್ಲುವ ದುರಾಶೆಯಿಂದ ತಪಸ್ಸನ್ನು ಕೈಕೊಂಡ ಈ ಪಾಪಿಯನ್ನು ಕೊಂದ ಮರುಕ್ಷಣದಲ್ಲಿಯೇ ಆ ದ್ವಿಜಕುಮಾರನು ಬದುಕಿದ್ದಾನೆ. ಅವನಿಗೆ ಪ್ರಾಣ ಬಂದು ಬಂಧುಗಳಲ್ಲಿ ಸೇರಿ ಕೊಂಡಿದ್ದಾನೆ. ನಿನಗೆ ಒಳ್ಳೆಯದಾಗಲಿ, ನಾವು ಅಗಸ್ತ್ಯನ ಆಶ್ರಮಕ್ಕೆ ಹೋಗಿ ಅಲ್ಲಿ ಆ ಮಹಾಮುನಿಯನ್ನು ಕಾಣುತ್ತೇವೆ.' ಹಾಗೆ ಆಗಲಿ, ಎಂದು ದೇವತೆಗಳಿಗೆ ಹೇಳಿ ರಾಮನು ಪುಷ್ಪಕ ವಿಮಾನವನ್ನು ಆರೋಹಣ ಮಾಡಿದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದುರುದ್ದೇಶದ ತಪಸ್ಸು ಮೂವತ್ತೆರಡನೇಯ ಅಧ್ಯಾಯ ಮುಗಿದುದು*

—೦—

॥ಪುಲಸ್ತ್ಯ ಉವಾಚ॥

**ತತೋ ದೇವಾಃ ಪ್ರಯಾತಾಸ್ತೇ ವಿಮಾನೈರ್ಬಹುಭಿಸ್ತದಾ ।**
**ರಾಮೋಽಪ್ಯನುಜಗಾಮಾಶು ಕುಂಭಯೋನೇಸ್ತಪೋವನಂ ॥**

**ಪುಲಸ್ತ್ಯ:-** ಅನಂತರ ದೇವತೆಗಳು ಅನೇಕ ವಿಮಾನಗಳಲ್ಲಿ ಕುಳಿತು ಅಗಸ್ತ್ಯನ ಆಶ್ರಮಕ್ಕೆ ತೆರಳಿದರು. ರಾಮನು ಕೂಡ ಪುಷ್ಪಕ ವಿಮಾನದಲ್ಲಿ ಕುಳಿತು ಅವರನ್ನು ಆ ತಪೋವನಕ್ಕೆ ಹಿಂಬಾಲಿಸಿದನು. ಆ ಕಾಲದಲ್ಲಿ ರಾಮನು ಲೋಕರಾಧನೆಗಾಗಿ ಸೀತೆಯನ್ನು ಕಾಡಿನಲ್ಲಿ ಬಿಟ್ಟಿದ್ದನು. ಅದರಿಂದ ಅವನ ಮನಸ್ಸಿನಲ್ಲಿ ಬಹಳ ವ್ಯಥೆ ತುಂಬಿತ್ತು. ಲೋಕಕಲ್ಯಾಣಕ್ಕಾಗಿ ತಪಾನುಷ್ಠಾನಗೈಯುವ ಅಗಸ್ತ್ಯನನ್ನು ನೋಡಿದರೆ ಸೂರ್ಯನ ಉದಯವಾಗುವಾಗ ಹಿಮವು ಕರಗುವಂತೆ ತನ್ನ ದುಃಖವು ಕರಗಬಹುದೆಂದು ಅವನು ಭಾವಿಸಿದ್ದನು. ರಾಮನು ಬರುವಷ್ಟರಲ್ಲಿ ದೇವತೆಗಳು ಅಗಸ್ತ್ಯಾಶ್ರಮಕ್ಕೆ ಹೊರಟು ಹೋಗಿದ್ದವರು. ದೇವತೆಗಳು ಅತ್ತ ಹೋದ ಬಳಿಕ ಇತ್ತ ರಾಮನು ಪುಷ್ಪಕ ವಿಮಾನದಿಂದ ಇಳಿದು ಅಗಸ್ತ್ಯ ಮುನಿಗೆ ವಂದಿಸಿದನು. ಮಹರ್ಷಿ ಅಗಸ್ತ್ಯನು ರಾಮಭದ್ರನಿಗೆ ಸ್ವಾಗತಮಾಡಿ ಆದರದಿಂದ ನುಡಿದನು.

**ಅಗಸ್ತ್ಯ :-** ಜಗದ್ವಂದ್ಯನಾದ ರಾಮರಾಜನೆ, ನಿನಗೆ ವಂದನೆ. ನಿನ್ನ ದರ್ಶನದಿಂದ ನಾನು ಹಾಗೂ ಇಲ್ಲಿಇರುವ ಎಲ್ಲ ಮುನಿಗಳು ಪವಿತ್ರರಾಗಿದ್ದೇವೆ. ನಾವು ನೀಡುವ ಈ ಅರ್ಘ್ಯ ಪಾದ್ಯಾದಿಗಳನ್ನು ಸ್ವೀಕರಿಸು. ನಿನ್ನನ್ನು ನಾನು ನಿತ್ಯವೂ ಹೃದಯದಲ್ಲಿ ಪೂಜಿಸುತ್ತೇನೆ, ನೀನು ಅನಂತಗುಣ ಪರಿಪೂರ್ಣನೆಂದು ತಿಳಿದಿದ್ದೇನೆ. ದೇವಲೋಕದ ದುರಾಶೆಯಿಂದ ತಪಸ್ಸನ್ನು ಆಚರಿಸುತ್ತಿದ್ದ ಶಂಬೂಕನನ್ನು ನೀನು ಸಂಹರಿಸಿದೆ ಎಂದು ದೇವತೆಗಳು ನನಗೆ ತಿಳಿಸಿದ್ದಾರೆ. ಪೂಜ್ಯನೆ ಇಂದು ಈ ನನ್ನ ಆಶ್ರಮದಲ್ಲಿಯೇ ಇರು.

**ರಾಮ :-** ಪೂಜ್ಯರೆ, ನಾನು ಕ್ಷತ್ರಿಯನಷ್ಟೇ ! ಕ್ಷತ್ರಿಯರು ದಾನ ತೆಗೆದು ಕೊಳ್ಳಬಾರದು, ಮೇಲಾಗಿ ನಾನು ಈಗ ಕುಟುಂಬಿಯೂ ಅಲ್ಲ ಸೀತೆಯನ್ನು ತೊರೆದುಬಿಟ್ಟಿದ್ದೇನೆ. ಮಕ್ಕಳೊಂದಿಗನೂ ಅಲ್ಲ. ಆದುದರಿಂದ ದಾನ ತೆಗೆದು ಕೊಳ್ಳಲು ಯಾವ ಅರ್ಹತೆಯೂ ನನ್ನಲ್ಲಿಲ್ಲ ಈಗ ನನಗೆ ಆಪತ್ಕಾಲವೂ ಇಲ್ಲ. ಇಂತಹ ಕಾಲದಲ್ಲಿ ನಾನು ದಾನ ಸ್ವೀಕರಿಸಿದರೆ ಪಾಪ ಬರುವದು.

**ಕೇವಲಂ ದೋಷಭಾಗೀ ಚ ಭವಾಮೀಹ ನ ಸಂಶಯಃ।**
**ಕಷ್ಟಾಂ ಚೈವ ದಶಾಂ ಪ್ರಾಪ್ಯ ಕ್ಷತ್ರಿಯೋಽಪಿ ಪ್ರತಿಗ್ರಹಂऽ**
**ಕುರ್ವನ್ ದೋಷಮಾಪ್ನೋತಿ ಮನುರೇವಾತ್ರ ಕಾರಣಂ।**
**ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ ಶಿಶುಃ ಸುತಃ।**

ಸಂಕಟಕಾಲಬಂದಾಗ ಕಠಿಣ ಪರಿಸ್ಥಿತಿಯಲ್ಲಿ ಕ್ಷತ್ರಿಯನು ಕೂಡ ದಾನವನ್ನು ಸ್ವೀಕರಿಸಿದರೆ ಪಾಪ ಬರುವದಿಲ್ಲವೆಂದು ಮನು ಹೇಳಿದ್ದಾನೆ. ಮುದುಕರಾದ ತಾಯಿ ತಂದೆ, ಒಳ್ಳೇ ಹೆಂಡತಿ, ಚಿಕ್ಕ ಮಕ್ಕಳು ಇವರ ರಕ್ಷಣೆಗಾಗಿ ನೂರಾರು ಸಲ್ಲದ ಕೆಲಸ ಮಾಡಿದರೂ ಪರವಾಯಿಲ್ಲ, ಅವರನ್ನು ಉಪವಾಸ ಮಾತ್ರ ಹಾಕಬಾರದು. ತಾಯಿ ತಂದೆ ಮಡದಿ ಮಕ್ಕಳ

ರಕ್ಷಣೆಗಾಗಿ ದುಷ್ಟಕಾರ್ಯ ಮಾಡಿದರೂ ಅವರನ್ನುಪೋಷಿಸಬೇಕು. ಹೀಗೆ ಮನುವಿನ ವಚನವಿದ್ದರೂ, ನಾನು ಈಗ ಕಷ್ಟದಲ್ಲಿ ಇಲ್ಲ. ನನಗೆ ಮಡದಿ ಮಕ್ಕಳೂ ಇಲ್ಲ. ಆದುದರಿಂದ ನಾನು ತಮ್ಮ ದಾನವನ್ನು ಸ್ವೀಕರಿಸಲಾರೆ.

**ಅಗಸ್ತ್ಯ** :- ರಾಘವನೆ, ನೀನು ಮೂರು ಲೋಕವನ್ನು ಉದ್ಧರಿಸಲು ಸಮರ್ಥವಾಗಿರುವಿ, ಈಗ ನನ್ನ ಉದ್ಧಾರಕ್ಕಾಗಿ ಈ ದಾನವನ್ನು ಸ್ವೀಕರಿಸು, ತಪಸ್ವಿಯಾದ ನನ್ನನ್ನು ನೀನು ಈ ಆಭರಣದ ಪ್ರತಿಗ್ರಹಣದಿಂದ ಉದ್ಧರಿಸಲು ಸಮರ್ಥನಾಗಿರುವೆ.

**ರಾಮ** :- ದ್ವಿಜನು ಕೊಟ್ಟಿದ್ದನ್ನು ಕ್ಷತ್ರಿಯನು ತನ್ನ ಸ್ವಧರ್ಮವನ್ನು ಬಿಟ್ಟು ಹೇಗೆ ಸ್ವೀಕರಿಸಬೇಕು ಹೇಗೆ ಹೇಳು?

**ಅಗಸ್ತ್ಯ** :- ಪೂರ್ವಕಾಲದಲ್ಲಿ ಕೃತಯುಗದಲ್ಲಿ ರಾಜನೇ ಇರಲಿಲ್ಲ. ಆಗ ಅಸಾಯಕರಾದ ಪ್ರಜೆಗಳು ಬ್ರಹ್ಮದೇವರ ಬಳಿಗೆ ಹೋಗಿ ಕೇಳಿಕೊಂಡರು.

**ಪ್ರಜೆಗಳು** :- ದೇವ, ದೇವತೆಗಳಿಗೆಲ್ಲ ಇಂದ್ರನು ರಾಜನಾಗಿದ್ದಾನೆ ಅದರಂತೆ ನಮ್ಮೆಲ್ಲ ಮಾನವರಿಗೂ ಒಬ್ಬ ರಾಜನನ್ನು ಕರುಣಿಸು. ಪ್ರಜೆಗಳ ಈ ಪ್ರಾರ್ಥನೆಯನ್ನು ಮನ್ನಿಸಿ ಬ್ರಹ್ಮದೇವನು ಇಂದ್ರನೇ ಮೊದಲಾದ ಎಲ್ಲ ಲೋಕಪಾಲಕರನ್ನು ಕರೆದು ಒಂದೊಂದು ತೇಜೋಭಾಗವನ್ನು ರಾಜನಿಗಾಗಿ ಕೊಡಲು ಹೇಳಿದನು. ಆಗ ಎಂಟೂ ಲೋಕಪಾಲಕರು ತಮ್ಮ ತಮ್ಮ ತೇಜಸ್ಸಿನಿಂದ ಕಾಲು ಭಾಗವನ್ನು ತೆಗೆದುಕೊಟ್ಟರು. ಅದರಿಂದ ಬ್ರಹ್ಮದೇವರು ರಾಜನನ್ನು ನಿರ್ಮಿಸಿದನು. ತಮ್ಮ ಅಂಶವನ್ನು ಅದರಲ್ಲಿ ಸೇರಿಸಿ, ಪ್ರಜೆಗಳ ಕ್ಷೇಮಂಕರನನ್ನಾಗಿ ರಾಜನನ್ನು ಏರ್ಪಡಿಸಿದರು.

ಆ ರಾಜನು ತನ್ನಲ್ಲಿರುವ ಇಂದ್ರನ ಭಾಗದಿಂದ ಎಲ್ಲರಿಗೂ ಅಪ್ಪಣೆ ನೀಡುತ್ತಾನೆ. ವರುಣನ ಅಂಶದಿಂದ ರಕ್ಷಿಸುತ್ತಾನೆ. ಕುಬೇರಾಂಶದಿಂದ ಬೇಡಿದ್ದನ್ನು ಕೊಡುತ್ತಾನೆ. ಯಮನ ಅಂಶದಿಂದ ಶಿಕ್ಷಿಸುತ್ತಾನೆ. ನೀನು ಕೂಡ ಎಲ್ಲ ಲೋಕಪಾಲಕರ ಅಂಶದಿಂದ ಒಡಗೂಡಿರುವೆ. ನಾನು ಕೊಡುವ ಈ ಆಭರಣವು ಅನರ್ಘ್ಯವಾದುದು. ಇದು ರಾಜ ಶ್ರೇಷ್ಠರಲ್ಲಿ ಇರಲು ಅರ್ಹವಾಗಿದೆ. ಆದುದರಿಂದ ನೀನು ಇದನ್ನು ಸ್ವೀಕರಿಸು.

**ಪುಲಸ್ತ್ಯ** :- ಋಷಿಯ ಮಾತನ್ನು ಕೇಳಿ ರಾಮನು ಆ ಆಭರಣವನ್ನು, ಜ್ವಲಿಸುವ ಸೂರ್ಯನನ್ನು ತೆಗೆದುಕೊಳ್ಳುವಂತೆ ತೆಗೆದುಕೊಂಡನು. ಅದನ್ನು ತೆಗೆದುಕೊಂಡ ಬಹಳ ಹೊತ್ತು ರಾಮನು ಈಕ್ಷಿಸಿದನು. ಅದರಲ್ಲಿ ವಿಚಿತ್ರವಾದ ನೆಲ್ಲಿಕಾಯಿಯಷ್ಟು ದೊಡ್ಡದಾದ ಮುತ್ತು ವಜ್ರ, ನೀಲ, ಹವಳ, ಪದ್ಮರಾಗ, ಗೋಮೇಧಕ, ವೈಡೂರ್ಯ, ಪುಷ್ಯರಾಗ ಮುಂತಾದ ಮಣಿಗಳನ್ನು, ಬಿಡಿ ಬಿಡಿಯಾಗಿ ಚಿನ್ನದಿಂದ ಕಟ್ಟಿದರು. ಅದನ್ನು ನೋಡಿ ರಾಮನ ಮನಸ್ಸಿನಲ್ಲಿ ವಿಚಾರ ಬಂದಿತು. ಇಂತಹ ರತ್ನವನ್ನು ನಾನು ಎಂದೂ ನೋಡಿಲ್ಲ. ಇದರಲ್ಲಿ ಕೆತ್ತಿದ ಒಂದೊಂದು ರತ್ನವು ಭೂಮಿಯ ಬೆಲೆಗೆ ಸಮನಾಗಿದೆ. ಆಯೋಧ್ಯೆಯಲ್ಲಾಗಲಿ. ವಿಭೀಷಣನ ಲಂಕೆಯಲ್ಲಾಗಲಿ ನಾನು ಇಂತಹ ಅಮೂಲ್ಯ ಕಲ್ಲುಗಳನ್ನು ಕಂಡಿಲ್ಲ. ಹೀಗೆ ಯೋಚಿಸಿ, ರಾಮನು ಅಗಸ್ತ್ಯರನ್ನು ಪ್ರಶ್ನೆ ಮಾಡಿದನು.

**ರಾಮ** :- ಮಹರ್ಷಿಗಳೆ, ಈ ಅನರ್ಘ್ಯವಾದ ರತ್ನವು ನಿಮಗೆ ಎಲ್ಲಿ ಹೇಗೆ ಸಿಕ್ಕಿತು ಯಾರು ಮಾಡಿದರು? ಯಾವ ರತ್ನದ ಕಾಂತಿಯು ಕೆಳಗಡೆ ಬೀಳುವದೋ ಅದು ಅಧಮ. ಕೈಯಲ್ಲಿ ಹಿಡಿದಾಗ ಸುತ್ತಲಿನ ದಿಕ್ಕುಗಳು ಪ್ರಕಾಶಿತವಾದರೆ ಅದು ಮಧ್ಯಮ ಕೆಳಗೆ, ಮೇಲೆ,

ಸುತ್ತಲೂ, ಬೆಳಕು ಹರಡಿದಂತೆ ಯಾವುದರಿಂದ ಪ್ರಕಾಶವು ಹಬ್ಬುವದೊ ಅದು ಉತ್ತಮ. ಅಂತಹ ಉತ್ತಮ ರತ್ನಗಳಲ್ಲಿ ಉತ್ತಮವೆನಿಸಿದ ಈ ರಾಜ ರತ್ನಗಳಿಂದ ಒಡಗೂಡಿದ ಈ ಆಭರಣವು ತಮ್ಮಲ್ಲಿ ಹೇಗೆಬಂದಿತು?

**ಅಗಸ್ತ್ಯ:-** ಇದೊಂದು ದೊಡ್ಡ ಕತೆ. ನಿನಗೆ ಕುತೂಹಲವಿದ್ದರೆ ರಾಮ, ಕೇಳು. ಹಿಂದೆ ಇದೇ ತ್ರೇತಾಯುಗದಲ್ಲಿ ನೂರು ಯೋಜನ ವಿಸ್ತೀರ್ಣವಾದ ಅರಣ್ಯವಿದ್ದಿತು. ಜನರ ಗಲಾಟೆ ಇಲ್ಲದೆ, ಏಕಾಂತರಮಣೀಯವಾಗಿತ್ತು-ಆ ವನ ಪ್ರಾಂತ. ತಪಸ್ಸು ಮಾಡ ಬೇಕೆಂದು ನಾನು ಅಲ್ಲಿಗೆ ಹೋದೆ. ನಿಸರ್ಗ ಸೌಂದರ್ಯದ ನೆಲೆ ಬೀಡಾಗಿತ್ತು ಆ ಕಾಡು.

ಬಗೆ ಬಗೆಯ ಮರ, ಬಳ್ಳಿ, ಹಣ್ಣು, ಹಂಪಲ, ಗೆಡ್ಡೆ ಗೆಣಸು, ಸಸ್ಯ ಸಮೃದ್ಧಿ ಅಲ್ಲಿ. ಆ ಕಾಡಿನ ನಡುವೆ ಒಂದು ಸರೋವರ, ವಿಸ್ತಾರದಲ್ಲಿ ಅದು ಒಂದು ಯೋಜನ ಪರಿಮಿತ. ಹಂಸ ಬಕ, ಕಾರಂಡವ ಮುಂತಾದ ಪಕ್ಷಿಗಳು ಅಲ್ಲಿ ವಿಹರಿಸುತ್ತಿದ್ದವು. ಅಲ್ಲಿ ನನಗೆ ಒಂದು ಆಶ್ಚರ್ಯವು ಕಂಡಿತು. ಪ್ರಾಣವಿಲ್ಲದ ದೇಹವು ಅಲ್ಲಿ ಬಿದ್ದಿತ್ತು ಆ ಸರೋವರದ ದಡದಲ್ಲಿಯೇ ಒಂದು ಆಶ್ರಮವಿದ್ದಿತು. ಜೀರ್ಣವಾದ ಆ ಎಲೆ ಮನೆಯ ಆಶ್ರಮದಲ್ಲಿ ಒಬ್ಬ ತಪಸ್ವಿಯೂ ಇರಲಿಲ್ಲ. ಅಂದು ರಾತ್ರಿ ನಾನು ಅಲ್ಲಿಯೇ ಶೂನ್ಯಾಶ್ರಮದಲ್ಲಿ ಉಳಿದುಕೊಂಡೆ.

ಬೆಳಿಗ್ಗೆ ಎದ್ದು, ನಾನು ಆ ಸರೋವರದ ದಂಡೆಯ ಮೇಲೆ ತಿರುಗಾಡುವಾಗ ಒಂದು ದೊಡ್ಡ ಶವವು ನನ್ನ ಕಣ್ಣಿಗೆ ಬಿತ್ತು. ಅದರ ಆಕಾರ ಮತ್ತು ದಿವ್ಯಕಾಂತಿಗಳನ್ನು ಕಂಡು ಇದು ಯಾವುದಾದರೂ ರಾಜನ ಶವ ಇರಬೇಕೆಂದು ಎನಿಸಿತು. ಇದು ಯಾರ ದೇಹ ? ಈ ರಾಜನು ಇಲ್ಲಿಗೆ ಹೇಗೆ ಬಂದನು? ಮರಣಹೊಂದುವ ಕಾರಣವೇನಿರಬಹುದು ? ಎಂದು ನಾನು ಯೋಚಿಸುತ್ತ ನಿಂತೆ. ಅಷ್ಟರಲ್ಲಿ ಹಂಸ ಹೂಡಿದ ಒಂದು ದಿವ್ಯ ವಿಮಾನವು ಅಲ್ಲಿಗೆ ಬಂದಿತು. ಆ ವಿಮಾನದಿಂದ ಒಬ್ಬ ಮನುಷ್ಯನು ಕೆಳಗೆ ಇಳಿದನು. ಆ ಸರೋವರದಲ್ಲಿ ಸ್ನಾನ ಮಾಡಿದನು. ಅನಂತರ ಆ ಕೊಬ್ಬಿದ ದೇಹದ ಹೆಣ ಬಿದ್ದ ಕಡೆಗೆ ಬಂದನು. ಆ ಶವದ ಮಾಂಸವನ್ನು ಯಥೇಚ್ಛವಾಗಿ ತಿಂದನು. ಮತ್ತೆ ಸರೋವರ ದಲ್ಲಿಳಿದು ಸ್ನಾನ ಮಾಡಿ ವಿಮಾನವನ್ನು ಏರಿದನು. ಅದನ್ನು ನೋಡಿ ನಾನು ಆಶ್ಚರ್ಯದಿಂದ ಅವನನ್ನು ಕೇಳಿದೆನು.

''ಪುಣ್ಯವಂತ, ನೀನು ಸ್ವರ್ಗಲೋಕದ ವಿಮಾನದಿಂದ ಬಂದಿರುವದರಿಂದ ಮಹಾಭಾಗ್ಯಶಾಲಿ ಎಂದು ತಿಳಿದೆ. ಆದರೆ ನಿನ್ನ ಆಹಾರವನ್ನು ನೋಡಿದರೆ ಅಸಹ್ಯ ಬರುವದು ಇದು ಹೀಗೇಕೆ ? ದೇವಸಮಾನನಾದ ನೀನು ಯಾರು? ಇಂತಹ ಕೆಟ್ಟ ಆಹಾರವನ್ನು ನೀನು ಏಕೆ ತಿನ್ನುತ್ತಿ? ನೀನು ಈಗ ಇರುವದು ಎಲ್ಲಿ? ನಿನಗೆ ಈ ಶವವನ್ನು ತಿನ್ನುವ ಪ್ರಸಂಗ ಬರಲು ಕಾರಣವೇನು? ಎಲ್ಲವನ್ನು ಹೇಳು'' ಆಗ ಆ ಸ್ವರ್ಗೀಯ ಮನುಷ್ಯನು ಕೈಮುಗಿದು ನುಡಿದನು.

**ಶ್ವೇತರಾಜ :-** ಮಹರ್ಷಿಯೆ, ಪೂರ್ವಕಾಲದಲ್ಲಿ ವಿದರ್ಭದೇಶದಲ್ಲಿ ವಸುದೇವ ಎಂಬ ರಾಜನಿದ್ದ. ಅವನೇ ನನ್ನ ತಂದೆ. ಅವನಿಗೆ ಇಬ್ಬರು ಹೆಂಡಿರು. ಹಿರಿಯ ಹೆಂಡತಿಯ ಮಗನೇ ನಾನು. ನನ್ನ ಹೆಸರು ಶ್ವೇತ, ಕಿರಿಯ ಹೆಂಡತಿಯ ಮಗ ಸುರಥ. ತಂದೆಯ ಮರಣಾನಂತರ ಪ್ರಜೆಗಳು ನನಗೆ ಪಟ್ಟಾಭಿಷೇಕ ಮಾಡಿದರು. ಧರ್ಮದಿಂದಲೇ ನಾನು ತಂದೆಯಂತೆ ರಾಜ್ಯಶಾಸನ ಮಾಡುತ್ತಿದ್ದೆ.

ಬಹುಕಾಲ ರಾಜ್ಯವಾಳಿದ ಬಳಿಕ ವೈರಾಗ್ಯ ಹುಟ್ಟಿತು ನನ್ನ ಮನಸ್ಸಿನಲ್ಲಿ. ಮರಣ ಸಿದ್ಧತೆ ಮಾಡಿಕೊಂಡೆ. ತಪೋವನಕ್ಕೆ ಹೊರಟೆ. ಈ ವನಕ್ಕೆ ಬಂದು, ಈ ಸರೋವರದ ದಂಡೆಯ ಮೇಲೆ ತಪವನ್ನು ಕೈಕೊಳ್ಳಲು ನಿರ್ಧರಿಸಿದೆ. ನನ್ನ ತಮ್ಮನಾದ ಸುರಥನನ್ನು ನನ್ನ ಉತ್ತರಾಧಿಕಾರಿಯನ್ನಾಗಿ ಮಾಡಿ, ಇದೇ ಸರೋವರದಲ್ಲಿ ನಾನು ಎಂಬತ್ತು ಸಾವಿರ ವರ್ಷ ತಪಸ್ಸು ಮಾಡಿದೆ. ಅದರಿಂದ ನನಗೆ ಬ್ರಹ್ಮಲೋಕ ಪ್ರಾಪ್ತಿ ಆಯಿತು. ಆದರೆ ಅಲ್ಲಿಯೂ ನನಗೆ ಹಸಿವೆ ಬಾಯಾರಿಕೆಗಳ ಉಪದ್ರವವು ಬಹಳವಾಯಿತು. ತಾಳ ದಾಯಿತು, ಅದರಿಂದ ದುಃಖವಾಗಿ ಬ್ರಹ್ಮದೇವರನ್ನು ಕೇಳಿದೆ. ''ಪಿತಾಮಹನೆ, ನಾನು ಸ್ವರ್ಗಲೋಕ, ಬ್ರಹ್ಮಲೋಕ ದಲ್ಲಿದ್ದರೂ ಹಸಿವು ಬಾಯಾರಿಕೆಗಳು ಬಾಧಿಸುತ್ತಲಿವೆ ಇದು ಯಾವ ಕರ್ಮದ ಫಲ?

**ಬ್ರಹ್ಮ** :- ನಿನ್ನ ದೇಹದ ಮಾಂಸದ ಹೊರತೂ ನಿನಗೆ ಬೇರೆ ಆಹಾರವು ಇಲ್ಲಿ ಸಿಗ ಲಾರದು. ನೀನು ಘೋರ ತಪಸ್ಸು ಮಾಡುತ್ತಿರುವಾಗ ನಿನ್ನ ದೇಹದಲ್ಲಿ ಕೊಬ್ಬು ಬೆಳೆದಿತ್ತು. ಅದನ್ನೇ ಈಗ ನೀನು ತಿನ್ನಬೇಕು. ನೀನು ಭೂಮಿಯಲ್ಲಿ ಕೊಡದಿದ್ದುದು ಸ್ವರ್ಗದಲ್ಲಿ ದೊರಕಲಾರದು, ನೀನು ರಾಜನಾಗಿದ್ದಾಗಲೂ ಮನೆಗೆ ಬಂದ ಭಿಕ್ಷುಕರಿಗೆ ಒಂದು ಹಿಡಿ ಭಿಕ್ಷೆಯನ್ನು ಹಾಕಲಿಲ್ಲ. ಅದರಿಂದ ನಿನಗೆ ಸ್ವರ್ಗಕ್ಕೆ ಬಂದರೂ ಹಸಿವು ನೀರಡಿಕೆ ತಪ್ಪಲಲ್ಲಿ.

**ಶ್ವೇತ** :- ಬ್ರಹ್ಮದೇವ, ನನ್ನ ಶರೀರವನ್ನು ನಾನು ಒಮ್ಮೆ ತಿಂದು ಮುಗಿಸಿ ಬಿಟ್ಟರೆ ನನಗೆ ಬೇರೆ ಆಹಾರವಿಲ್ಲ. ನನಗೆ ದೇಹವನ್ನು ನೋಡಿದರೆ ಹಸಿವು ಹಿಂಗಿ ಅಕ್ಷಯ ತೃಪ್ತಿ ಆಗುವಂತೆ ಮಾಡು.

**ಬ್ರಹ್ಮ** :- ಶ್ವೇತರಾಜನೆ, ನೀನು ತಿಂದಷ್ಟು ನಿನ್ನ ದೇಹವು ಕೊಬ್ಬುವಂತೆ ಮಾಡಿದ್ದೇನೆ. ಅನುದಿನವೂ ನೀನು ಶರೀರದ ಮಾಂಸ ತಿಂದರೂ ಅದು ಕರಗುವದಿಲ್ಲ ಸೊರಗುವದಿಲ್ಲ. ನಿನಗೆ ಸ್ವಮಾಂಸ ಭಕ್ಷಣದಿಂದ ಅಮೃತಪ್ರಾಶನದ ತೃಪ್ತಿ ಆಗುವದು. ಹೀಗೆ ನೀನು ನೂರು ವರ್ಷ ಮಾಂಸ ಭಕ್ಷಣ ಮಾಡುವ ಹೊತ್ತಿಗೆ ಈ ವನಕ್ಕೆ ಅಗಸ್ತ್ಯ ಮುನಿ ಬರುವನು. ಇಂದ್ರಾದಿ ದೇವತೆಗಳನ್ನು ಕೂಡ ಉದ್ಧರಿಸ ಬಲ್ಲ ಆತ ನಿನ್ನನ್ನೂ ಉದ್ಧರಿಸುವನು. ನಿನ್ನ ಈ ಅಸಹ್ಯವಾದ ಆಹಾರವನ್ನು ತಪ್ಪಿಸುವನು.

ಆ ಅಗಸ್ತ್ಯ ಮುನಿಯು ಪುಷ್ಕರ ಕ್ಷೇತ್ರದಲ್ಲಿ ಇದ್ದಾಗ ಬಹಳಷ್ಟು ದೇವಕಾರ್ಯ ಮಾಡಿದ್ದಾನೆ. ಪ್ರಜೆಗಳನ್ನು ಹಿಂಸಿಸಿ ದುಷ್ಟ ದಾನವರು ಸಮುದ್ರದಲ್ಲಿ ಅಡುಗುತ್ತಿದ್ದರು. ಆ ಸಾಗರದ ನೀರನ್ನು ಕುಡಿದು ಅಗಸ್ತ್ಯನು ಆ ದುರುಳ ದಾನವರು ಬಯಲಿಗೆ ಬೀಳುವಂತೆ ಮಾಡಿದನು. ಆ ಅಗಸ್ತ್ಯನಿಂದ ನೀನು ಗತಿಗಾಣುವೆ' ಎಂದು ಬ್ರಹ್ಮದೇವನು ನನಗೆ ಹೇಳಿದ್ದಾನೆ. ನಾನು ಆ ಅಗಸ್ತ್ಯ ಮುನಿಯ ಆಗಮನವನ್ನು ಎದುರು ನೋಡುತ್ತಿದ್ದೇನೆ. ನಾನು ನನ್ನ ದೇಹದ ಮಾಂಸವನ್ನು ತಿನ್ನತೊಡಗಿ ನೂರು ವರ್ಷಗಳಾದವು. ಇನ್ನೂ ಆ ಮುನಿಯು ಎಂದು ಬರುವನೊ...'

**ಅಗಸ್ತ್ಯ** :- ಶ್ವೇತರಾಜ ನೀನು ನಿರೀಕ್ಷಿಸುವ ಆ ಅಗಸ್ತ್ಯನು- ನಾನೇ. ನಿನ್ನ ಭಾಗ್ಯದಿಂದ ಬಂದಿದ್ದೇನೆ. ನಿನ್ನನ್ನು ಉದ್ಧಾರ ಮಾಡುತ್ತೇನೆ. ನನ್ನ ಈ ನುಡಿಗಳನ್ನು ಕೇಳಿ, ಸತ್ಯಲೋಕದ ವಿಮಾನವನ್ನು ಏರಲು ಹೊರಟ ಆ ರಾಜನು ನನ್ನ ಮುಂದೆ ಬಂದು ಅಡ್ಡ ಬಿದ್ದನು. ಕೈ ಮುಗಿದು, 'ಪೂಜ್ಯರೆ, ದುರಾಹಾರದಿಂದ ನನ್ನನ್ನು ರಕ್ಷಿಸಿರಿ. ಇದು ನನಗೆ ತಪ್ಪುವಂತೆ ಮಾಡಿರಿ. ನಿಮ್ಮ ದಯೆಯಿಂದ ನನಗೆ ಅಕ್ಷಯ ಸ್ವರ್ಗ ಪ್ರಾಪ್ತಿಯಾಗಲಿ' ಎಂದು

ಬೇಡಿಕೊಂಡು, ಆ ಮಹಾರಾಜನು ತನ್ನ ಬಳಿಯಲ್ಲಿದ್ದ ಈ ದಿವ್ಯ ಆಭರಣವನ್ನು ನನಗೆ ಕೊಟ್ಟನು ಮತ್ತು ಹೇಳಿದನು.

''ಮಹಾನುಭಾವರಾದ ಪೂಜ್ಯರೆ, ತಾವು ನನ್ನನ್ನು ಉದ್ಧರಿಸಿದ ಸವಿನೆನಪಿಗಾಗಿ ಇದನ್ನು ಕೊಡುತ್ತಿದ್ದೇನೆ. ಇದೇ ನನ್ನ ಹಸು, ಹಣ, ಬಟ್ಟೆ, ಭಕ್ಷ್ಯ, ಭೋಜ್ಯ, ಎಲ್ಲವೂ ಇದೆ. ನನ್ನ ಸರ್ವಸ್ವವೇ ಈ ಆಭರಣ. ಇದನ್ನು ತೆಗೆದುಕೊಂಡು ತಾವು ನನ್ನನ್ನು ಅನುಗ್ರಹಿಸಬೇಕು.'' ಅವನ ಬಿನ್ನಹ ಮನ್ನಿಸಿ ಅವನನ್ನು ಉದ್ಧರಿಸುವದಕ್ಕಾಗಿ ನಾನು ಈ ಆಭರಣವನ್ನು ಸ್ವೀಕರಿಸಿದೆನು. ಆಶೆಯಿಂದಲ್ಲ, ರಾಮನೆ, ನಾನು ಆ ಆಭರಣವನ್ನು ನನ್ನ ಕೈಯಲ್ಲಿ ತೆಗೆದುಕೊಂಡ ಕೂಡಲೆ ಅವನ ಆ ಹಿಂದಿನ ದೇಹವು ಅಲ್ಲಿಯೇ ನಾಶವಾಯಿತು. ಅನಂತರ ಅವನು ನನ್ನ ಆಜ್ಞೆ ಪಡೆದು ವಿಮಾನವೇರಿ ಸ್ವರ್ಗಕ್ಕೆ ತೆರಳಿದನು. ಆ ಶ್ವೇತರಾಜನು ಈ ಆಭರಣವನ್ನು ನನಗೆ ಕೊಟ್ಟಿದ್ದರಿಂದ ಅವನ ಪಾಪವೆಲ್ಲವೂ ಪರಿಹೃತವಾಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಶ್ವೇತರಾಜನ ಉದ್ಧಾರ ಮೂವತ್ತಮೂರನೇಯ ಅಧ್ಯಾಯ ಮುಗಿದುದು*



## ದಂಡ್ಯನಾದ ದಂಡರಾಜ

**ಅಧ್ಯಾಯ - ೩೪**

**॥ಪುಲಸ್ತ್ಯ ಉವಾಚ॥**

**ತದದ್ಭುತತಮಂ ವಾಕ್ಯಂ ಶ್ರುತ್ವಾಗಸ್ತ್ಯಸ್ಯ ರಾಘವಃ ।**
**ಗೌರವಾದ್ವಿಸ್ಮಯಾಚ್ಚಾಪಿ ಭೂಯಃ ಪ್ರಷ್ಟುಂ ಪ್ರಚಕ್ರಮೇ ॥**

**ಪುಲಸ್ತ್ಯ :-** ಅಗಸ್ತ್ಯ ಮುನಿಯು ಹೇಳಿದ ಮಾತು ಅತ್ಯಾಶ್ಚರ್ಯಕರವಾಗಿತ್ತು. ಅದನ್ನು ಕೇಳಿ, ರಾಮನಿಗೆ ಆಶ್ಚರ್ಯವೂ ಆಯಿತು. ಅದರಬಗ್ಗೆ ಗೌರವಭಾವವೂ ಉದಿಸಿತು, ಆದಕ್ಕಾಗಿ ಅವನು ಪ್ರಶ್ನಿಸಿದನು.

**ರಾಮ :-** ವೈದರ್ಭರಾಜನು ತಪಸ್ಸುಮಾಡಲು ಆ ಘೋರ ಗೊಂಡಾರಣ್ಯಕ್ಕೆ ಬಂದ ಕಾರಣವೇನು? ವಿದರ್ಭದೇಶದ ದೊರೆಯಾದ ಆ ಶ್ವೇತರಾಜನು ತಪೋನುಷ್ಠಾನಗೈಯುವ ಆ ಗಹನವನಕ್ಕೆ ನೀವು ಯಾವ ಕೆಲಸಕ್ಕಾಗಿ ಹೋಗಿದ್ದಿರಿ? ಆ ವನದ ಸುತ್ತಲೂ ನೂರುಯೋಜನ ಪ್ರದೇಶದಲ್ಲಿ ಮನುಷ್ಯ ಸಂಚಾರವಿಲ್ಲದಂತಾಗಲು ಕಾರಣವೇನು?

**ಅಗಸ್ತ್ಯ :-** ರಾಜನೆ, ಹಿಂದೆ, ಮನುರಾಜನು ತನ್ನ ಹಿರಿಯ ಮಗನಾದ ಇಕ್ಷ್ವಾಕುವಿಗೆ ಪಟ್ಟಗಟ್ಟಿ, 'ಪೃಥ್ವಿಯಲ್ಲಿ ಮುಂಬರುವ ರಾಜಕುಲಗಳಿಗೆಲ್ಲ ನೀನು ರಾಜನಾಗು' ಎಂದು ಹೇಳಿದನು. ಅದಕ್ಕೆ ಇಕ್ಷ್ವಾಕುವು ತಮ್ಮ ಅಜ್ಞೆಯಂತೆ ನಡೆಯುತ್ತೇನೆ ಎಂದನು. ಅದರಿಂದ ಮನುರಾಜನಿಗೆ ಸಂತೋಷವಾಯಿತು. ಅವನು ಮಗನನ್ನು ಕುರಿತು ಮಾತನಾಡಿದನು.

**ಮನು :-** ನನಗೆ ಸಂತೋಷವಾಯಿತು. ಈ ನನ್ನ ದೊಡ್ಡ ಕೃತಿಯಾದ ದಂಡನೀತಿಯಿಂದ ನೀನು ಪ್ರಜೆಗಳನ್ನು ರಕ್ಷಿಸು ಆದರೆ ಕಾರಣವಿದ್ದರೇ ದಂಡವನ್ನು ಪ್ರಯೋಗಿಸಬೇಕು.

**'ಅಪರಾಧಿಷು ಯೋ ದಂಡಃ ಪಾತ್ಯತೇ ಮಾನವೈರಿಹ ।**
**ಸ ದಂಡೋ ವಿಧಿವನ್ಮುಕ್ತಃ ಸ್ವರ್ಗಂ ನಯತಿ ಪಾರ್ಥಿವಂ' ॥**

ನಿಜವಾದ ಅಪರಾಧಿಗೆ ಕ್ರಮ ಪ್ರಕಾರವಾಗಿ ದಂಡ ಶಿಕ್ಷೆ ವಿಧಿಸಿದರೆ ಆದರಿಂದ ರಾಜರು ಸ್ವರ್ಗಕ್ಕೆ ಹೋಗುತ್ತಾರೆ. ಆದುದರಿಂದ ದಂಡ ವಿಷಯದಲ್ಲಿ ಬಹಳ ಜಾಗರೂಕವಾಗಿರು. ವಿಚಾರ ಮಾಡಿ ಶಿಕ್ಷೆಯನ್ನು ನೀಡು.

**ಅಗಸ್ತ್ಯ:-** ಹೀಗೆ ಮಗನಿಗೆ ಸಂದೇಶವನ್ನು ಕೊಟ್ಟು ಮನುರಾಜನು ಬ್ರಹ್ಮ ಲೋಕವನ್ನು ಹೊಂದಿದನು. ಅನಂತರ ಮನುಪುತ್ರನಾದ ಇಕ್ಷ್ವಾಕು ರಾಜನು ಒಳ್ಳೇ ಮಕ್ಕಳನ್ನು ಹಡೆಯಬೇಕೆಂದು ವಿಚಾರಿಸಿ, ಅನೇಕ ಪುಣ್ಯ ಕರ್ಮಗಳನ್ನು ಆಚರಿಸಿದನು.

ವ್ರತೋಪವಾಸ, ಕೆರೆ, ಕಾಲುವೆ ನಿರ್ಮಾಣ, ಯಜ್ಞ, ಯಾಗ, ಹರಿಗುರು ಸೇವೆ ಮುಂತಾದ ಬಗೆಬಗೆಯ ಪುಣ್ಯ ಕಾರ್ಯಗಳಿಂದ ಆ ಇಕ್ಷ್ವಾಕುವಿನ ಸಂತತಿಯು ಸಮೃದ್ಧವಾಗಿ ಬೆಳೆಯಿತು. ಅವರಲ್ಲಿ ಕೊನೆಯವನು ಒಳ್ಳೇ ಶೂರನಾಗಿದ್ದನು. ವಿದ್ಯೆಯಲ್ಲಿಯೂ ಸಾಕಷ್ಟು ಪರಿಶ್ರಮವಿದ್ದಿತು. ಪ್ರಜೆಗಳು ಅವನನ್ನು ಪೂಜಿಸುತ್ತಿದ್ದರು. ದಂಡ ಎಂದೇ ಹೆಸರಿಟ್ಟನು ಅವನಿಗೆ ಅವನ ತಂದೆ, ಭವಿಷ್ಯದ ವಿಷಯದಲ್ಲಿ ದಂಡವನ್ನು ಜೀವನದಲ್ಲಿ ಮುಂಬರುವ ಅನರ್ಥವನ್ನು ಯೋಚಿಸಿ ತಂದೆಗೆ ದುಃಖವಾಯಿತು.

ವಿಂಧ್ಯ ಪರ್ವತದ ಎರಡು ಶಿಖರಗಳ ನಡುವೆ ಆ ತನ್ನ ದಂಡ ಕುಮಾರನಿಗಾಗಿ ತಂದೆಯು ಒಂದು ನಗರವನ್ನು ಕಟ್ಟಿಸಿಕೊಟ್ಟು ಅದಕ್ಕೆ ಮಧುಮತ್ತ ಎಂದು ಹೆಸರಿಟ್ಟನು. ದಂಡನು ಆ ಪರ್ವತ ಪ್ರಾಂತಕ್ಕೆಲ್ಲ ದೊರೆಯಾಗಿ ತನ್ನ ಪುರೋಹಿತರೊಡನೆ ಆ ನಗರದಲ್ಲಿ ನೆಲೆಸಿ ರಾಜ್ಯವಾಳಿದನು. ಇಂದ್ರನೇ,ರಾಜ್ಯ ಶಾಸನ ನಡೆಸಿದಂತಿತ್ತು ದಂಡನ ಆ ರಾಜ್ಯದ ಆಡಳಿತ. ಹೀಗೆ ಅನೇಕ ವರ್ಷಕಾಲ ದಂಡ ದೊರೆಯು ರಾಜ್ಯವನ್ನು ನಿರ್ವಿಘ್ನವಾಗಿ, ನಿಷ್ಕಂಟಕವಾಗಿ ಶಾಸನ ಮಾಡಿದನು.

ಒಂದು ವಸಂತಕಾಲ ವನೋಪವನಗಳಲ್ಲೆಲ್ಲ ಚೈತ್ರ ಚುಂಬನದಿಂದ ಚೆಲುವು ಸೂಸುತ್ತಿತ್ತು. ಆ ಅರಸನು ಶುಕ್ರಾಚಾರ್ಯರ ಆಶ್ರಮಕ್ಕೆ ಆಗಮಿಸಿದನು. ಆ ಆಶ್ರಮದಲ್ಲಿ ಸಮೀಪದ ಉಪವನದಲ್ಲಿ ಆಚಾರ್ಯಪುತ್ರಿಯು ತಿರುಗಾಡುತ್ತಿದ್ದಳು. ಹದಿನಾರು ವರ್ಷ ಪ್ರಾಯದ ಕನ್ನೆಯನ್ನು ಕಂಡು ರಾಜನ ಮನಸ್ಸು ಮಾರು ಹೋಯಿತು ಚಂದ್ರನಂತೆ ಚೆಲುವು, ತುಂಬಿದ ಮುಖ, ಲಾವಣ್ಯ ಉಕ್ಕುವ ಅಂಗಾಂಗಗಳು, ಮಿಂಚುವ ಮೈ, ಎತ್ತರ ನಿಲುವು, ಸ್ವರ್ಗೀಯ ಚಾರರಂತೆ ಮಹಾರಾಜನ ಮನಸ್ಸನ್ನು ಮೋಹಗೊಳಿಸಿದವು. ಇಂತಹ ನಿರ್ಜನ ಅರಣ್ಯದಲ್ಲಿ ಪರಪುರುಷರಾರು ಬರುವದಿಲ್ಲವೆಂದು ಭಾವಿಸಿ. ಆ ಅಬಲೆಯು ಒಂದೇ ಬಟ್ಟೆಯನ್ನು ಧರಿಸಿ, ಮಿಂಚಿನ ಮೂರುತಿಯಂತೆ ಆ ವನಾಂತರದಲ್ಲಿ ಸಂಚರಿಸುತ್ತಿದ್ದಳು. ಅವಳನ್ನು ಕಂಡು ಮುಗ್ಧನಾದ ಮಹಾರಾಜನು ಅವಳ ಬಳಿ ಹೋಗಿ ಕೇಳಿದನು.

''ನೀನು ಯಾರು ಸುಂದರಿ? ನಿನ್ನ ಈ ಸೌಂದರ್ಯ ಕಂಡು ನಾನು ಮರುಳಾಗಿದ್ದೇನೆ. ನಿನ್ನ ದರ್ಶನದಿಂದಲೇ ನನ್ನ ಮನಸ್ಸು ಮುಗ್ಧವಾಗಿದೆ. ನಿನ್ನ ತಾರುಣ್ಯ ಹಾಗೂ ಲಾವಣ್ಯಗಳು ಮುನಿಗಳ ಮನಸ್ಸನ್ನು ಕೂಡ ಸೆಳೆಯಲು ಸಾಕು. ನೀನು ದೊರಕದಿದ್ದರೆ ನಾನು ಮರಣ ಹೊಂದುತ್ತೇನೆ. ನಾನು ಬದುಕುವದು ಸಾಯುವದು ನಿನ್ನ ಕೈಯಲ್ಲಿದೆ. ನಾನು ನಿನಗೆ ಭಕ್ತ, ದಾಸ. ನನ್ನನ್ನು ಬದುಕಿಸು ನನ್ನ ಪ್ರೇಮ ಭಿಕ್ಷೆ ಸ್ವೀಕರಿಸಿ, ನನ್ನನ್ನು ಸಂತೋಷಪಡಿಸು.'' ಕಾಮುಕನಾದ ದಂಡರಾಜನ ಉನ್ಮತ್ತ ನುಡಿಗಳನ್ನು ಕೇಳಿ ಆ ಶುಕ್ರಾಚಾರ್ಯರ ಮಗಳು ಮಾತನಾಡಿದಳು. ವಿನಯ ರಸವು ಒಸರುತ್ತಿತ್ತು ಅವಳ ನುಡಿಗಳಿಂದ.

**ಅರಜಾ :-** ರಾಜಶ್ರೇಷ್ಠನೆ, ನಾನು ಮಹಾತಪಸ್ವಿ ಶುಕ್ರಾಚಾರ್ಯನ ಮಗಳು. ಹಿರಿಯ ಮಗಳು ಅರಜಾ ಎಂದು ನನ್ನ ಹೆಸರು. ನಾನು ಶುಕ್ರಾಚಾರ್ಯರಿಗೆ ಮಗಳು ಆದರೆ ನೀನು ಅವರ ಶಿಷ್ಯ. ಅಂದ ಬಳಿಕ ಧರ್ಮದೃಷ್ಟಿಯಿಂದ ನಾನು ನಿನಗೆ ತಂಗಿಯಾಗಬೇಕು. ಅಲ್ಲವೆ ರಾಜೇಂದ್ರ? ತಂಗಿಯ ಬಳಿಗೆ ಬಂದು ಪ್ರಣಯ ಭಿಕ್ಷೆ ಬೇಡುವದು ಯೋಗ್ಯವೇ? ನೀನೇ ಯೋಚಿಸು. ಬೇರೆ ದುಷ್ಟರು ನನ್ನನ್ನು ಬಲಾತ್ಕರಿಸಿ ಬಂದರೆ ಅವರಿಂದ ನನ್ನನ್ನು ಕಾಪಾಡುವದು ನಿನ್ನ ಕರ್ತವ್ಯ. ನನ್ನ ತಂದೆ ಬಹಳ ಕೋಪಿಷ್ಠ. ನಿನ್ನ ಈ ಅಪರಾಧವನ್ನು ತಿಳಿದರೆ ಕ್ಷಣದಲ್ಲಿ ನಿನ್ನನ್ನು ಬೂದಿಮಾಡಿಬಿಟ್ಟಾನು. ಮನಬಂದ ಕನ್ಯೆಯನ್ನು ಮದುವೆಯಾಗುವದು ರಾಜರ ಧರ್ಮವೇ ಆಗಿದ್ದರೆ ಧರ್ಮಮಾರ್ಗದಿಂದ ನನ್ನ ತಂದೆಯನ್ನೇ ಕೇಳು. ನನ್ನನ್ನು ನಿನಗೆ ಮದುವೆ ಮಾಡಿಕೊಡಲು ಹೇಳು.

ಹಾಗಾದರೆ ನನ್ನ ಹಾಗೂ ನಿನ್ನಲ್ಲಿ ಮಧುರ ಸಂಬಂಧ ಆಗುವದು. ಇಲ್ಲದಿದ್ದರೆ ಯಾವ ದುಃಖಕ್ಕೆ 'ಘೋರ' ಎಂಬ ಸಂಜ್ಞೆ ಇದೆಯೋ ಅಂತಹ ದಾರುಣದುಃಖವನ್ನು ಮಿತಿ ಇಲ್ಲದಷ್ಟು ನೀನು ಅನುಭವಿಸಬೇಕಾಗುವದು ನನ್ನ ತಂದೆ ಸಿಟ್ಟಿಗೆದ್ದರೆ ಮೂರು ಲೋಕಗಳನ್ನೇ ಸುಟ್ಟುಬಿಡುವರು.

**ಅಗಸ್ತ್ಯ :-** ಶುಕ್ರ ಕುಮಾರಿಯಾದ ಅರಜೆಯು ಇಷ್ಟೆಲ್ಲ ಹೆದರಿಕೆ ಹಾಕಿದರೂ ದಂಡನು ತಲೆ ಹಾಕಿ, ಮತ್ತೆ ಮದೋನ್ಮತ್ತನಂತೆ ನುಡಿದನು.

**ದಂಡ :-** ಚೆಲುವೆ, ನನ್ನ ಕಾಮ ಕೆರಳಿದೆ, ಹುಚ್ಚು ತಲೆಗೆ ಅಡರಿದೆ, ನನ್ನ ಮೇಲೆ ಪ್ರೇಮ ಪ್ರಸಾದ ಕರುಣಿಸು. ನನ್ನ ಪ್ರಾಣಗಳನ್ನು ನೀನೇ ಈಗ ಬಂಧಿಸಿರುವಿ, ನೀನು ನನ್ನನ್ನು ಅಂಗೀಕರಿಸದಿದ್ದರೆ. ನಾನು ಮರಣಹೊಂದುವದೇ ಖಂಡಿತ ಹಾಗೇ ಮರಣ ಹೊಂದುವದಕ್ಕಿಂತ ನಿನ್ನ ಸಂಗಮಾಡಿ ಸಾಯುವದೇ ಲೇಸು. ಸುಂದರಿ ನಾನು ನಿನ್ನ ಭಕ್ತನಾಗಿದ್ದೇನೆ. ಭಕ್ತನ ಬಳಿಗೆ ಬರಲು ಬೆದರಿಕೆ ಏಕೆ?

**ಅಗಸ್ತ್ಯ :-** ಹೀಗೆ ನುಡಿದು ದಂಡದೊರೆಯು ಹರೆಯದ ಸಿರಿ ಉಕ್ಕುವ ಆ ಅರಜೆಯನ್ನು ಬಲಾತ್ಕಾರದಿಂದ ಸೆಳೆದು ಅವಗೆಡಿಸಿದನು, ಇಂತಹ ಘೋರ ಕೃತ್ಯವನ್ನು ಮಾಡಿ, ಮದೋನ್ಮತ್ತನಾದ ಆ ದಂಡರಾಜನು ತನ್ನ ರಾಜಧಾನಿಗೆ ತೆರಳಿದನು. ಶುಕ್ರಚಾರ್ಯರ ಮಗಳಾದ ಅರಜೆಯು ವನಪ್ರಾಂತದಿಂದ ಆಶ್ರಮದ ಒಳಗೆ ಬಂದಳು. ಅವಳ ದೇಹವೆಲ್ಲವೂ ಹೆದರಿಕೆಯಿಂದ ನಡುಗುತ್ತಿತ್ತು. ಅದೇ ವೇಳೆಯಲ್ಲಿ ಶುಕ್ರಾಚಾರ್ಯರು ಸ್ನಾನ ಮಾಡಿಕೊಂಡು ಹಸಿದ ಹೊಟ್ಟೆಯಿಂದ ಆಶ್ರಮಕ್ಕೆ ಬರುತ್ತಿದ್ದರು. ಅವರಿಗೆ ಧೂಳಿ ಧೂಸರಳಾದ ಮಗಳ ಮೈ, ಕೆದರಿದ ಮುಡಿ, ಬೆದರಿದ ಕಣ್ಣು ದೀನ ಮುಖಗಳನ್ನು ನೋಡಿ, ಅವಳ ಮೇಲೆ ಬಲಾತ್ಕಾರ ನಡೆದಿದೆ, ಎಂದು ಗೊತ್ತಾಯಿತು. ದಂಡರಾಜನದೇ ಈ ದುಷ್ಕೃತ್ಯ ಎಂಬುದೂ ಅವರಿಗೆ ತಿಳಿದು ಹೋಯಿತು. ಕೂಡಲೇ ಅವರಿಗೆ ಕೋಪವು ನೆತ್ತಿಗೇರಿತು. ಮೂರು ಲೋಕಗಳನ್ನೇ ಸುಡುವಂತಹ ಕೋಪದಲ್ಲಿ ನುಡಿದರು.

**ಶುಕ್ರಾಚಾರ್ಯ:-** ಶಿಷ್ಯರೆ, ದಂಡರಾಜನ ಈ ಅನ್ಯಾಯದ ಕೃತ್ಯವನ್ನು ನೋಡಿದಿರಾ! ಉರಿಯುವ ದೀಪದ ಸುಡುವ ಜ್ವಾಲೆಯನ್ನೇ ಅವನು ಇಂದು ಮುಟ್ಟಿದ್ದಾನೆ. ಅವನು ಇದರಿಂದ ಬರುವ ಪಾತಕದಿಂದ ಸಪರಿವಾರವಾಗಿ ನಾಶವಾಗುವದರಲ್ಲಿ ಸಂದೇಹವಿಲ್ಲ. ಇಂತಹ ಘೋರ ಪಾಪವನ್ನು ಎಸಗಿದ್ದಕ್ಕಾಗಿ ಆ ದುರುಳ ದೊರೆಯು ತನ್ನ ದೇಶ, ಸೇನ,

ಆಳು, ವಾಹನ, ಕುಟುಂಬ ಪರಿವಾರದೊಂದಿಗೆ ಘೋರ ಮೃತ್ಯುವನ್ನು ಬೇಗನೇ ಹೊಂದಲಿ, ಅವನ ರಾಜ್ಯದ ಸುತ್ತಲೂ ನೂರು ಯೋಜನೆ ಸುತ್ತಳತೆಯಲ್ಲಿ ಇಂದ್ರನು ಧೂಳಿಯ ಮಳೆಯನ್ನು ಸುರಿಸುತ್ತಾನೆ. ನಿರಂತರವಾದ ಈ ಧೂಳಿ ದಾಳಿಯಿಂದ ಹಾಗೂ ಹುಡಿಪುಡಿಗಳ ಜಡಿಮಳೆಯಿಂದ ಎಲ್ಲ ಸ್ಥಾವರ ಜಂಗಮ ಪ್ರಾಣಿಗಳೂ ಕೂಡಲೇ ಕ್ಷಯವನ್ನು ಹೊಂದುತ್ತವೆ. ದಂಡರಾಜನ ರಾಜ್ಯವು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ಎಲ್ಲ ಬೆಟ್ಟ ಬಯಲು, ಉಪವನ ಆಶ್ರಮ, ಮನೆ ಮಠಗಳ ಮೇಲೆ ಅನಿರೀಕ್ಷಿತವಾಗಿ ಏಳು ದಿನ(ಪಾಂಸು ವೃಷ್ಟಿ;) ಧೂಳಿನ ಮಳೆ ಸಂತತವಾಗಿ ಸುರಿಯುವದು.

ಆದುದರಿಂದ ಬದುಕುವ ಇಚ್ಛೆ ಉಳ್ಳವರು ಈ ಏಳು ದಿನಗಳ ಒಳಗಾಗಿ, ಈ ದಂಡರಾಜ್ಯವನ್ನು ಬಿಟ್ಟು ನೂರು ಯೋಜನದಾಚೆ ಓಡಿಹೋಗಿ ಬದುಕಿಕೊಳ್ಳಿರಿ. ನಮ್ಮ ಆಶ್ರಮದ ಜನರು ಕೂಡ ಇಲ್ಲಿಂದ ಬೇಗನೇ ಹೊರಟು ದಂಡನ ಸಾಮ್ರಾಜ್ಯದ ಗಡಿ ಸೀಮೆ ದಾಟಿ ಆಚೆಗೆ ಹೋಗಿ ನೆಲೆಸಿರಿ.

**ಅಗಸ್ತ್ಯ :-** ಶುಕ್ರಾಚಾರ್ಯರ ಈ ಭಯಂಕರ ಶಾಪವಚನ ಕೇಳಿ ಅವರ ಶಿಷ್ಯರು ಕೂಡಲೆ ಅಲ್ಲಿಂದ ಸ್ಥಳಾಂತರ ಮಾಡಿದರು. ಜನ-ದನಗಳನ್ನೆಲ್ಲ ಕರೆದು ಕೊಂಡು ದಂಡನ ರಾಜ್ಯದಿಂದ ಗಡಿ ದಾಟಿ ಹೊರಟು ಹೋದರು. ಅನಂತರ ಶುಕ್ರಾಚಾರ್ಯರು ತಮ್ಮ ಮಗಳಾದ ಅರಜೆಗೆ ಹೀಗೆ ಹೇಳಿದರು.

'ದುಷ್ಟ ದೊರೆಯ ಬಲಾತ್ಕಾರಕ್ಕೆ ಬಲಿಯಾದ ಭಾಗ್ಯಹೀನಳೆ, ನೀನೂ ಈ ದುಸ್ಸಂಗದ ದುಷ್ಪರಿಣಾಮ ಅನುಭವಿಸಲೇಬೇಕು. ಒಂದು ಯೋಜನ ವಿಸ್ತಾರವಾದ ಈ ಸುಂದರ ಸರೋವರವು ಇಲ್ಲಿ ಇರುವದಷ್ಟೇ! ಇದರ ದಂಡೆಯ ಮೇಲೆ ನೀನು ತಪಸ್ಸು ಮಾಡುತ್ತ ನೂರು ವರ್ಷ ನಿಲ್ಲು. ನಿನ್ನ ಪಾಪವನ್ನೆಲ್ಲ ಕಳೆದುಕೊ,' 'ತಂದೆಯ ಆದೇಶವನ್ನು ಕೇಳಿ, ಅರಜೆಯು ದುಃಖತಪ್ತಳಾಗಿ 'ಹಾಗೆಯೇ ಆಗಲಿ' ಎಂದು ಹೇಳಿದಳು. ಶುಕ್ರಾಚಾರ್ಯರು ಅನಂತರ ಅಲ್ಲಿಂದ ಬೇರೆ ಕಡೆಗೆ ಹೊರಟುಹೋದರು. ಆ ಬ್ರಹ್ಮವಾದಿಯು ಕೊಟ್ಟ ಶಾಪವು ನಿಜವಾಯಿತು.ಏಳು ದಿನಗಳ ನಂತರ ಪಾಂಸುವೃಷ್ಟಿ ಶುರುವಾಯಿತು. ನೋಡಿದಲ್ಲೆಲ್ಲ ಧೂಳಿದಾಳಿ, ಹುಡಿಯ ಹಾವಳಿ. ವಿಂಧ್ಯ ಪ್ರದೇಶದ ತಪ್ಪಲು ಭೂಮಿಯಲ್ಲಿ, ದಂಡನ ಸಾಮ್ರಾಜ್ಯದಲ್ಲೆಲ್ಲ ರಾಶಿ ರಾಶಿಯಾಗಿ ಧೂಳು ಬಿದ್ದಿತು. ಜನರೆಲ್ಲರೂ ಅಲ್ಲಿಂದ ಹೊರಟು ಹೋಗಿದ್ದರು. ಇದ್ದವರೆಲ್ಲ ನಾಶವಾಗಿದ್ದರು.

ಅಂದಿನಿಂದ ಅದೊಂದ ಭೀಕರ ಬೆಂಗಾಡು ಆಗಿ ಮಾರ್ಪಟ್ಟಿತು. ಧೂಳಿ ಮಳೆಗೆ ಈಡಾಗಿ ಕೆಟ್ಟ ಕಾಡಾಗಿ ಪರಿವರ್ತಿತಗೊಂಡ ಆ ಅರಣ್ಯಕ್ಕೆ ಆ ರಾಜನ ಹೆಸರೇ ಬಿದ್ದಿತು. ದಂಡಕಾರಣ್ಯ ಎಂದು ಪ್ರಸಿದ್ಧವಾಯಿತು. ಇದೇ ಆ ಅರಜೆಯು ತಪಸ್ಸು ಮಾಡುತ್ತಿದ್ದ ಸರೋವರ, ಶುಕ್ರರ ಶಾಪದಿಂದ ಈ ಸರೋವರದ ಸುತ್ತಮುತ್ತಲಿನ ನೂರು ಯೋಜನ ಪ್ರದೇಶವೆಲ್ಲವೂ ನಿರ್ಮಾನುಷವಾಗಿದೆ. ನೀನು ಕೇಳಿದ್ದರಿಂದ ಹಿಂದಿನ ಕತೆಯಾದ ದಂಡಕಾರಣ್ಯದ ಈ ವೃತ್ತಾಂತ ಹೇಳಿದ್ದೇನೆ. ರಾಮನೆ, ಈಗ ಸಂಧ್ಯಾವಂದನೆಯ ಸಮಯವು ಮೀರಲು ಬಂದಿತು. ಈ ಋಷಿಗಳು ಕೈಯಲ್ಲಿ ಪೂರ್ಣಕುಂಭಗಳನ್ನು ಹಿಡಿದುಕೊಂಡು ಸೂರ್ಯನಿಗೆ ಅರ್ಘ್ಯ ಪ್ರದಾನವನ್ನು ಮಾಡುತ್ತಿದ್ದಾರೆ. ದಿವಾಕರನನ್ನು ಪೂಜಿಸುತ್ತಿದ್ದಾರೆ. ಬ್ರಹ್ಮಾದಿ ದೇವತೆಗಳು ಮಾಡಿದ ಸ್ತೋತ್ರವನ್ನು ಋಷಿಗಳಿಂದ ಕಲಿತು

ಈಗ ಪಾರಾಯಣ ಮಾಡುತ್ತಿದ್ದಾರೆ. ರವಿಯು ಅಸ್ತಂಗತನಾದನು. ರಾಮನೇ ನೀನೂ ಹೋಗಿ ಸಂಧ್ಯಾವಂದನೆ ಮಾಡು'

**ಪುಲಸ್ತ್ಯ:-** ಋಷಿಯ ಮಾತನ್ನು ಕೇಳಿ ರಾಮನೂ ಕೂಡ ಆ ಸರೋವರಕ್ಕೆ ಹೋಗಿ ತನ್ನ ಸಂಧ್ಯಾವಂದನೆ ಮಾಡಿ ಪೂರೈಸಿದನು. ಅನಂತರ ರಮಣೀಯವಾದ ಮರ ಬಳ್ಳಿಗಳಿಂದ ಶೋಭಿಸುವ ಆ ನದೀತೀರದ ವನ ಪ್ರಾಂತದಲ್ಲಿ ಒಂದು ಹದ್ದು ಹಾಗೂ ಒಂದು ಗೂಬೆ ಅನೇಕ ವರ್ಷಗಳಿಂದ ವಾಸಿಸುತ್ತಿದ್ದವು. ಆ ಹದ್ದಿನ ಮನಸ್ಸಿನಲ್ಲಿ ಒಂದು ದಿನ ಸ್ವಾರ್ಥವು ತಲೆಗೇರಿತು. ಗೂಬೆಯ ಮನೆಯು ತನ್ನದೆಂದು ಹೇಳಿ ಜಗಳ ತೆಗೆಯಿತು. ಆ ಎರಡೂ ಹಕ್ಕಿಗಳ ನಡುವೆ ನಡೆದ ಕಲಹವು ಶಾಂತವಾಗಲಿಲ್ಲ. ರಾಮನು ಅಲ್ಲಿಗೆ ಬಂದದ್ದನ್ನು ನೋಡಿ ಅವೆರಡೂ ಪಕ್ಷಿಗಳು ನ್ಯಾಯ ನಿರ್ಣಯಕ್ಕಾಗಿ ರಾಮನ ಬಳಿಗೆ ಬಂದವು. ಎರಡೂ ಹಕ್ಕಿಗಳ ಹೃದಯದಲ್ಲಿ ಕಲಹಾಗ್ನಿಯ ಕಿಚ್ಚು ಉರಿಯುತ್ತಿತ್ತು. ರಾಮನ ಬಳಿ ಎರಡೂ ಹಕ್ಕಿಗಳು ಬಂದು ನಮಸ್ಕರಿಸಿದವು. ಗೃಧ್ರವು ರಾಮನನ್ನು ಕುರಿತು ಹೇಳಿತು

**ಗೃಧ್ರವು :-** 'ಕಾಂತಿಯುತನಾದ ರಾಮನೆ, ದೇವ ದೈತ್ಯರಿಗೆಲ್ಲ ನೀನೆ ಮುಖ್ಯನೆಂದು ನಾನು ತಿಳಿದಿದ್ದೇನೆ. ಅಷ್ಟೇ ಏಕೆ ದೇವಗುರು ಬೃಹಸ್ಪತಿಗಿಂತಲೂ ನೀನು ಮಿಗಿಲಾದ ಮಹಾಪುರುಷ. ಪ್ರಜೆಗಳ ಹಿಂದುಮುಂದುಗಳನ್ನು ನೀನು ಚನ್ನಾಗಿ ಬಲ್ಲೆ. ಮನುಷ್ಯ ಕುಲದಲ್ಲಿ ನೀನೊಬ್ಬ ಚಲುವಿನ ಚಂದ್ರಾಮ. ರಾಮಚಂದ್ರನೆಂದೇ ನಿನ್ನ ಹೆಸರು. ತೇಜಸ್ಸಿನಲ್ಲಿ ನೀನು ರವಿ. ಗೌರವದಲ್ಲಿ ಹಿಮಾಚಲ, ಗಾಂಭೀರ್ಯದಲ್ಲಿ ಸಮುದ್ರ. ವೇಗದಲ್ಲಿ ವಾಯು ಕ್ಷಮೆಯಲ್ಲಿ ಭೂಮಿ. ಯುದ್ಧದಲ್ಲಿ ಇಂದ್ರ, ಹೆಚ್ಚೇನು.

**'ಗುರುಸ್ತ್ವಂ ಸರ್ವ ಸಂಪನ್ನೋ ವಿಷ್ಣು ರೂಪೋಸಿ ರಾಘವ ।**

ನೀನೇ ಜಗದ್ಗುರು ಸರ್ವಗುಣ ಸಂಪನ್ನನಾದ ನೀನು ಸಾಕ್ಷಾತ್ ವಿಷ್ಣು ರೂಪವೇ ಆಗಿರುವೆ. ದೇವತೆಗಳಿಗೆಲ್ಲ ಒಡೆಯನಾದ ನೀನು ನನ್ನ ವಿಜ್ಞಾಪನೆಯನ್ನು ಕೇಳು.

ನಾನು ನನ್ನ ಬಾಹು ಪರಾಕ್ರಮದಿಂದ ಒಂದು ಮನೆ ಮಾಡಿಕೊಂಡಿದ್ದು ಅದನ್ನು ಈ ಗೂಗೆಯು ತನ್ನದೆಂದು ಹೇಳಿ ಆಕ್ರಮಿಸುತ್ತಲಿದೆ. ನೀನು ಹತ್ತಿರವಿದ್ದರೂ ಇವನು ಇಂತಹ ದುರಾಚಾರನ್ನು ನಡೆಸುವದೆಂದರೆ, ರಾಜನಾದ ನನ್ನ ಆಜ್ಞೆ ಉಲ್ಲಂಘಿಸುವದೆಂದೇ ಅರ್ಥ. ಇದಕ್ಕೆ ಶಾಸನಮಾಡಲು ನೀನೊಬ್ಬನೇ ಸಮರ್ಥ.

**ಪುಲಸ್ತ್ಯ :-** ಹದ್ದು ತನ್ನ ಹೇಳಿಕೆಯನ್ನು ಮುಗಿಸಿದ ಬಳಿಕ ಗೂಬೆಯು ನುಡಿಯಿತು.

**ಗೂಬೆ :-** ರಾಜಶ್ರೇಷ್ಠನಾದ ರಾಮನೆ. ನನ್ನ ಬಿನ್ನಹವನ್ನು ಲಾಲಿಸಬೇಕು. ಇಂದ್ರ, ಚಂದ್ರ, ಸೂರ್ಯ, ಕುಬೇರ, ಯಮ ಮುಂತಾದ ಅಷ್ಟ ದಿಕ್ಪಾಲಕರ ಒಂದೊಂದು ಭಾಗದಿಂದ ರಾಜನು ಆಗಿರುತ್ತಾನೆ. ಅವನಲ್ಲಿ ಮಾನವೀಯತೆಯ ಅಂಶ ಬಹಳ ಕಡಿಮೆ. ನೀನಂತೂ ಸಾಕ್ಷಾತ್ ನಾರಾಯಣನೇ ಸರಿ.

ದುರ್ಬಲರಿಗೆ ಅನಾಥರಿಗೆ ರಾಜನೇ ಬಲ. ಕಣ್ಣು ಇಲ್ಲದವರಿಗೆ ರಾಜನೇ ಕಣ್ಣು. ನಿರ್ಗತಿಕರಿಗೆ ಗತಿ ರಾಜ, ನಮಗೆ ಕೂಡ ನೀನೇ ಗತಿ. ನಮ್ಮ ಪಕ್ಷಿ ಕುಲದ ನಾಯಕನಾದ ಗರುಡನು ಕೂಡ ನಿನ್ನ ಸೇವಕನೇ ಸರಿ. ನೀನು ಎದುರಿದ್ದಾಗ ನಾವು ಅನಾಥರಲ್ಲ. ನಾಲ್ಕು ವಿಧವಾದ ಪ್ರಾಣಿಗಳನ್ನೂ ಕೂಡ ಹಿಂದೆ ನೀನೆ ನಿರ್ಮಾಣ ಮಾಡಿರುವೆ. ಈ ಹದ್ದು

ನೀತಿಯ 'ಹದ್ದು' ಮೀರಿ ನನ್ನ ಮನೆಯಲ್ಲಿ ಹೊಕ್ಕು ನನ್ನನ್ನು ಪೀಡಿಸುತ್ತದೆ ಅದಕ್ಕೆ ದೇವತೆಗಳ ಹಾಗೂ ಮಾನವರ ಶಾಸಕನಾದ ನೀನೇ ಶಾಸನ ಮಾಡಬೇಕು.

**ಪುಲಸ್ತ್ಯ :-** ಎರಡೂ ಹಕ್ಕಿಗಳ ವಾದವೈಖರಿಯನ್ನು ಕೇಳಿ ರಾಮನು ತನ್ನ ಜಯಂತ, ಸಿದ್ಧಾರ್ಥ, ರಾಷ್ಟ್ರವರ್ಧನ, ಅಶೋಕ, ಧರ್ಮಪಾಲ, ಸುಮಂತ ಎಂಬ ಅಷ್ಟಪ್ರಧಾನರನ್ನು ಕರೆಸಿದನು. ಸರ್ವಶಾಸ್ತ್ರಗಳನ್ನು ಚೆನ್ನಾಗಿ ಅರಿತವರೂ ನೀತಿ ವಂತರೂ ಆದ ಆತನ ಮಂತ್ರಿಮಂಡಲದೊಂದಿಗೆ ರಾಮನು ಪುಷ್ಪಕ ವಿಮಾನದಿಂದ ಇಳಿದು ಆ ಗೃಧ್ರವನ್ನು ಪ್ರಶ್ನಿಸಿದನು.

**ರಾಮ :-** ಗೃಧ್ರನೇ ಎಷ್ಟು ವರ್ಷಗಳಿಂದ ನೀನು ಈ ಮನೆಯನ್ನು ಮಾಡಿಕೊಂಡಿದ್ದೆ.

**ಗೃಧ್ರ :-** ರಾಜನೆ, ಈ ಭೂಮಿಯಲ್ಲಿ ಕೈ ಮೇಲೆ ಮಾಡಿಕೊಂಡು ಮಾನವರು ಹುಟ್ಟಲು ಪ್ರಾರಂಭವಾದಾಗ ನಾನು ಈ ಮನೆಯನ್ನು ಮಾಡಿದ್ದೆ. ಅಂದಿನಿಂದಲೂ ಈ ನನ್ನ ಮನೆ ಇರುತ್ತದೆ.

**ಗೂಬೆ :-** ಪ್ರಭು, ಭೂಲೋಕದಲ್ಲಿ ಬರಿ ಮರಗಳು ವನಸ್ಪತಿಗಳು, ಹುಟ್ಟಿದ ಕಾಲದಿಂದಲೂ ಈ ನನ್ನ ಮನೆ ಇರುತ್ತದೆ.

**ಪುಲಸ್ತ್ಯ :-** ಎರಡೂ ಹಕ್ಕಿಗಳ ವಚನವನ್ನು ಕೇಳಿ ರಾಮನು ತನ್ನ ಸಭಾಸದಸ್ಯರಿಗೇ ಹೇಳಿದನು.

**ರಾಮ:-** ನ ಸಾ ಸಭಾ ಯತ್ರ ನ ಸಂತಿ ವೃದ್ಧಾ
ವೃದ್ಧಾನ ತೇ ಯೇ ನ ವದಂತಿ ಧರ್ಮಂ ।
ನ ಸೌ ಹಿ ಧರ್ಮೋ ಯತ್ರ ನ ಸತ್ಯಮಸ್ತಿ ॥
ನ ತತ್ಸತ್ಯಂ ಯಚ್ಛಲೇನೋಪಪನ್ನಮ್॥

ಧರ್ಮಾಧರ್ಮಗಳನ್ನು ಕೇಳಬೇಕಾದರೆ ಸಭೆಯನ್ನು ಕೇಳಬೇಕು. ಮುದುಕರಿಲ್ಲದಿದ್ದರೆ ಅದು ಸಭೆ ಎನಿಸುವದಿಲ್ಲ. ಧರ್ಮ ಹೇಳದವರು (ಮುದುಕ) ವೃದ್ಧರಲ್ಲ. ಸತ್ಯದಿಂದ ಕೂಡಿಲ್ಲದಿರುವದು ಧರ್ಮವೆನಿಸುವದಿಲ್ಲ. ಆ ಸತ್ಯವು ವಂಚನೆಯಿಂದ ಕೂಡಿದ್ದರೆ ಅದು ಸತ್ಯವೇ ಅಲ್ಲ.

ಯೇ ತು ಸಭ್ಯಾ ಸ್ಸಭಾಂ ಗತ್ವಾ ತೂಷ್ಣೀಂ ಧ್ಯಾಯಂತ ಆಸತೇ ।
ಯಥಾ ಪ್ರಾಪ್ತಂ ನ ಬ್ರುವತೇ ಸರ್ವೇ ತೇಽನೃತವಾದಿನಃ ॥

ಯೋಗ್ಯರಾದವರು ಸಭೆಗೆ ಹೋಗಿ ನೋಡುತ್ತ. ಯೋಚಿಸುತ್ತ, ಕುಳಿತುಕೊಂಡು ಬಂದ ವಿಷಯವನ್ನು ಸತ್ಯಕ್ಕೆ ಅನುಸಾರವಾಗಿ ವಿಚಾರಿಸಿ ಹೇಳದಿದ್ದರೆ ಅವರೆಲ್ಲರೂ ಸುಳ್ಳುಗಾರರು

ಜಾನನ್ನ ವಿಬ್ರುವನ್ ಪೃಷ್ಟಃ ಕಾಮಾತ್ಕ್ರೋಧಾತ್ತಥಾ ಭಯಾತ್ ।
ಸಹಸಾ ವಾರುಣಾನ್ ಪಾಶಾನಾತ್ಮನಿ ಪ್ರತಿಮುಂಚತಿ ॥

ವಿಷಯ ಗೊತ್ತಿದ್ದು ಅವರನ್ನು ಕೇಳಿದಾಗ ಹೇಳದಿದ್ದರೂ ಪಕ್ಷಪಾತದಿಂದಲೋ. ಕೋಪದಿಂದಲೋ, ಭಯದಿಂದಲೋ, ಹೇಳದಿದ್ದರೂ ಅವರ ಮೇಲೆ ವರುಣ ಪಾಶ ಒಡನೆಯೇ ಬೀಳುತ್ತದೆ.

**ತೇಷಾಂ ಸಂವತ್ಸರೇ ಪೂರ್ಣೇ ಪಾಶ ಏಕಃ ಪ್ರಮುಚ್ಯತೇ ।**
**ತಸ್ಮಾತ್ತ್ವಂ ಪ್ರವಕ್ತವ್ಯಂ ಜಾನತಾ ಸತ್ಯಮಂಜಸಾ ॥**

ಒಂದು ವರ್ಷಕಾಲ ಕಳೆದ ಮೇಲೆ ಅವುಗಳಲ್ಲಿ ಒಂದು ಕಟ್ಟನ್ನು ಕಳೆದು ಕೊಳ್ಳುತ್ತಾನೆ. ಆದ್ದರಿಂದ ಶೀಘ್ರವಾಗಿ ಸತ್ಯವನ್ನು ಹೇಳಬೇಕು. ರಾಮನ ಈ ಮಾತುಗಳ್ನು ಕೇಳಿ ಮಂತ್ರಿಗಳು ಹೇಳಿದರು.

**ಮಂತ್ರಿಗಳು:-** ರಾಜನೆ, ಗೂಬೆಯ ಮಾತು ನ್ಯಾಯವಾಗಿ ಕಾಣುತ್ತದೆ. ಹದ್ದಿನ ನುಡಿಯು ಪ್ರಾಮಾಣಿಕವೆನಿಸುವದಿಲ್ಲ. ಈ ವಿಷಯದಲ್ಲಿ ತಮ್ಮ ಮಾತೇ ಕೊನೆಯದು. ರಾಜರೆ, ಪರಮ ಪ್ರಮಾಣ.

ಸಚಿವರ ಮಾತು ಕೇಳಿ ರಾಮನು ಇಂತು ನುಡಿದನು.

**ರಾಮ :-** ವಿಷ್ಣುವಿನ ಅಪ್ಪಣೆಯಿಂದ ಅವನ ನಾಭಿಯಲ್ಲಿ ಉತ್ಪನ್ನನಾದ ಬ್ರಹ್ಮದೇವರು ಸೃಷ್ಟಿಯ ಆದಿಕಾಲದಲ್ಲಿ ಸುವರ್ಣ ಕಮಲದಿಂದ ಹೊರಬಿದ್ದು ಸೃಷ್ಟಿ ಮಾಡಲು ಆರಂಭಿಸಿದನು. ಪೃಥ್ವಿ, ವಾಯು, ಪರ್ವತ, ವನಸ್ಪತಿ, ಮನುಷ್ಯ ಮೊದಲು ಎಲ್ಲ ಪ್ರಜೆಗಳನ್ನೂ ಹಾವು, ಮುಂತಾದ ಸರ್ಪಪ್ರಪಂಚವನ್ನೂ ಸೃಷ್ಟಿಸಿದನು.

ಅದೇ ವೇಳೆಯಲ್ಲಿ ಬ್ರಹ್ಮದೇವರನ್ನು ಹೊಡೆಯ ಹೊರಟ ಮಧು, ಕೈಟಭ, ಎಂಬ ದಾನವರನ್ನು ಬ್ರಹ್ಮದೇವರಿಂದ ಪ್ರಾರ್ಥಿತನಾದ ವಿಷ್ಣು ಸಂಹರಿಸಿದನು. ಆ ದೈತ್ಯರ ಮೇದಸ್ಸಿನಿಂದ ದೂಷಿತವಾದ ಈ ಭೂಮಿಗೆ ಮೇದಿನೀ ಎಂದು ಹೆಸರು ಬಂದಿತು. ಆದುದರಿಂದ ಇದು ಹದ್ದಿನ ಮನೆಯಲ್ಲ. ಗೂಬೆಯ ಮನೆಯೇ ಆಗಿದೆ. ಈ ಗೃಧ್ರವು ಸುಳ್ಳು ಮಾತನಾಡಿದೆ. ಇನ್ನೊಬ್ಬರ ಮನೆಯನ್ನು ಆಕ್ರಮಿಸಿಕೊಂಡಿದೆ. ಮತ್ತೊಬ್ಬರ ಮನೆಯನ್ನು ತನ್ನದನ್ನಾಗಿ ಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿದೆ. ಇದಕ್ಕೆ ಶಿಕ್ಷೆ ಆಗಲೇಬೇಕು, ಇದಕ್ಕೆ ಸಂಶಯವಿಲ್ಲ. ಆಗ ಒಮ್ಮೆಲೆ, ಆಕಾಶವಾಣಿ ಆಯಿತು

'ರಾಮನೆ, ನೀನು ಈ ಗೃಧ್ರವನ್ನು ಕೊಲ್ಲಬೇಡ, ಇದು ಈಗಾಗಲೇ ಗೌತಮನ ತಪೋಬಲದಿಂದ ದಗ್ಧವಾಗಿದೆ, ಇದು ಹಿಂದೆ ಬ್ರಹ್ಮದತ್ತವೆಂಬ ಶೂರನಾಗಿದ್ದಿತು. ಒಂದು ಸಲ ಒಬ್ಬ ದ್ವಿಜನು ಬಂದು ಬ್ರಹ್ಮದತ್ತನನ್ನು ಭೋಜನ ಯಾಚಿಸಿದನು.

ಆಗ ಋಷಿಯು ಊಟಮಾಡಿ ಒಂದು ಸಾವಿರ ವರ್ಷಗಳಾಗಿದ್ದವು. ಸಾವಿರ ವರ್ಷ ತಪಸ್ಸು ಮಾಡಿ ಅಸಂಪ್ರಜ್ಞಾತ ಸಮಾಧಿಯಲ್ಲಿ ಇದ್ದು, ಅನಂತರ ಎದ್ದು ಭೋಜನ ಬಯಸಿ ಬಂದ ಆ ಮಹರ್ಷಿಗೆ ಬ್ರಹ್ಮದತ್ತನು ತಾನೇ ಅರ್ಘ್ಯ ಪಾದ್ಯಗಳನ್ನು ನೀಡಿದನು. ಮತ್ತು ಮುನಿಗೆ ಬೇಕಾಗುವ ಅಡಿಗೆಯನ್ನೆಲ್ಲ ತನ್ನ ಕೈಯಿಂದಲೇ ಮಾಡಿದನು. ಮುನಿಯನ್ನು ಎಲೆಯ ಮುಂದೆ ಕೂಡಿಸಿ ತಾನೇ ಬಡಿಸುತ್ತಿದ್ದನು. ಆಗ ಪಕ್ಕದ ಕೋಣೆಯಲ್ಲಿ ಬ್ರಹ್ಮದತ್ತನ ಮಡದಿಯು ಆಗಮಿಸಿದಳು. ಆಗ ಮಹಾರಾಜನು ಅಲ್ಲಿಗೆ ಹೋಗಿ ಅವಳ ಮೈ ಕೈ ಮುಟ್ಟಿ ಪ್ರೀತಿಯಿಂದ ಲಲ್ಲೆಗರೆದು ಮತ್ತೆ ಬಂದು ಬಡಿಸತೊಡಗಿದನು. ಅದನ್ನು ತಿಳಿದು ತಪಸ್ವಿಗೆ ಕೋಪ ಬಂದಿತು. ಕೂಡಲೇ ಅವನು ಶಾಪಕೊಟ್ಟನು ನೀನು ಹದ್ದು ಆಗು ಎಂದು ಆಗ ಮಹಾರಾಜನು ಮುನಿಗೆ ಬೇಡಿಕೊಂಡನು.

**ಬ್ರಹ್ಮದತ್ತ:-** ಮಹಾನುಭಾವನೆ, ನನ್ನ ಮೇಲೆ ದಯೆದೋರು. ನನ್ನ ಉದ್ಧಾರವು ಎಂದಿಗಾಗುವದು?

**ತಪಸ್ವಿ** :- ರಾಜನೆ, ಮುಂದೆ ಇಕ್ಷ್ವಾಕು ವಂಶದ ರಘುಕುಲದಲ್ಲಿ ರಾಮಚಂದ್ರನು ಜನಿಸುವನು. ಆ ತಾವರೆಗಣ್ಣಿನ ಮಹಾನುಭಾವನನ್ನು ನಿನ್ನನ್ನು ನೋಡಿದ ಕೂಡಲೇ ಶಾಪವು ದೂರವಾಗವದು?''

ರಾಮನು ಈ ಆಕಾಶವಾಣಿ ಕೇಳಿ ದಯಾಪೂರ್ಣವಾದ ದೃಷ್ಟಿಯಿಂದ ಆ ಗೃಧ್ರವನ್ನು ನೋಡಿದನು. ಕೂಡಲೇ ಆ ಹದ್ದಿನ ದೇಹವು ಬಿದ್ದುಹೋಯಿತು. ಗಂಧ ಬಳಿದು, ಮಾಲೆ ಮುಡಿದು, ದಿವ್ಯರೂಪ ಧರಿಸಿದ ಮಹಾಪುರುಷನೊಬ್ಬ ಎದ್ದು ಬಂದು ರಾಮನಿಗೆ ನಮಸ್ಕರಿಸಿ ''ಪ್ರಭು, ಇಂದು ನಿನ್ನ ಸಂದರ್ಶನವಾದದ್ದು ನನ್ನ ಭಾಗ್ಯ, ನಿನ್ನ ಸಂದರ್ಶನದಿಂದ ಈ ಘೋರವಾದ ನರಕದಂತಿರುವ ಗೃಧ್ರಯೋನಿಯಿಂದ ಮುಕ್ತನಾಗಿ ನಾನು ಧನ್ಯನಾದೆ.'' ಹೀಗೆ ಹೇಳಿ. ಆ ದಿವ್ಯ ಪುರುಷನು ರಾಮನಿಂದ ಬೀಳ್ಕೊಂಡನು. ಇತ್ತ ಶ್ರೀರಾಮಪ್ರಭುವು ಧರ್ಮವನ್ನು ತಿಳಿದ ನ್ಯಾಯನಿಷ್ಠವಾದ ಗೂಬೆಗೆ 'ನೀನು ನಿನ್ನ ಮನೆಯನ್ನು ಪ್ರವೇಶಿಸು. ನಾನು ಸಂಧ್ಯಾವಂದನೆ ಮಾಡಿಕೊಂಡು ಅಗಸ್ತ್ಯಾಶ್ರಮಕ್ಕೆ ಹೋಗುವೆನು' ಎಂದು ಹೇಳಿದನು. ತನ್ನ ಸಾಯಂ ಸಂಧ್ಯೆಯನ್ನು ಮಾಡಿ ಮುಗಿಸಿದನು.

ಬಳಿಕ ಅಗಸ್ತ್ಯರ ಆಶ್ರಮವನ್ನು ಪ್ರವೇಶಿಸಿದನು. ರಾಮನು ಬರುವಷ್ಟರಲ್ಲಿ ಅಗಸ್ತ್ಯರು ರಸಭರಿತವಾದ ಹಣ್ಣುಗಳನ್ನು, ಕಂದಮೂಲಗಳನ್ನು ತಂದು ಇರಿಸಿದ್ದರು. ಬಗೆ ಬಗೆಯ ತರಕಾರಿ, ಭಕ್ಷ್ಯ, ಭೋಜ್ಯಗಳನ್ನು ಸಿದ್ಧಪಡಿಸಿದ್ದರು. ಅಮೃತ ಸಮಾನವಾಗಿದ್ದಿತು ಅಗಸ್ತ್ಯರ ಅಂದಿನ ಆ ಆತಿಥ್ಯ. ಪ್ರೀತಿಯಿಂದ ನೀಡಿದ ಮುನಿಗಳ ಆ ಆತಿಥ್ಯವನ್ನು ಪ್ರಸನ್ನ ಮನಸ್ಸಿನಿಂದ ರಾಮನು ಸ್ವೀಕರಿಸಿದನು. ಆ ರಾತ್ರಿ ಅಲ್ಲಿಯೇ ವಿಶ್ರಾಂತಿ ಪಡೆದನು. ಮಾರನೇಯ ದಿನ ನಸುಕಿನಲ್ಲಿಯೇ ಎದ್ದು ಆಹ್ನಿಕವನ್ನೆಲ್ಲ ಮುಗಿಸಿದನು. ಶತ್ರುಗಳ ದಮನ ಮಾಡುವ ಶ್ರೀರಾಮ. ಋಷಿಗಳ ಬಳಿಗೆ ಹೋಗಿ ನಮಸ್ಕರಿಸಿ, ''ಪೂಜರೆ ತಮ್ಮ ದರ್ಶನ ಹಾಗೂ ಸಹವಾಸ, ಸಂಭಾಷಣೆಗಳಿಂದ ನಾನು ಧನ್ಯನಾದೆ. ನನಗೆ ಇನ್ನು ಹೋಗಲು ಅಪ್ಪಣೆ ಕೊಡಿರಿ. ತಮ್ಮನ್ನು ಕಾಣಲು ಮತ್ತೆ ನಾನು ಬರುತ್ತೇನೆ.''

**ಅಗಸ್ತ್ಯ** :- ರಾಮನೆ, ನೀನು ನುಡಿದ ಒಂದೊಂದು ಅಕ್ಷರವು ಭಾವ ಅರ್ಥದ ದೃಷ್ಟಿಯಿಂದ ಅತ್ಯದ್ಭತವಾಗಿವೆ. ನಿನ್ನ ನುಡಿ ಪರಮ ಪಾವನ. ನಿನ್ನನ್ನು ಪ್ರೀತಿಯಿಂದ ಒಂದು ಗಳಿಗೆ ನೋಡಿದರೂ ಸಾಕು. ಅವರು ಪವಿತ್ರರಾಗಿ ದೇವ ಲೋಕದಲ್ಲಿ ಗೌರವ ಪಡೆಯುತ್ತಾರೆ. ನಿನ್ನನ್ನು ಕ್ರೂರದೃಷ್ಟಿಯಿಂದ ಕಂಡವರು ಕೂಡಲೇ ನರಕದಲ್ಲಿ ಬೀಳುತ್ತಾರೆ. ನೀನೊಬ್ಬ ಲೋಕಪಾವನನಾದ ಪುಣ್ಯಪುರುಷ. ನಿನ್ನ ಚರಿತ್ರೆಯನ್ನು ಗಾನ ಮಾಡಿದರೆ ಮಾನವರಿಗೆ ಪರಮಸಿದ್ಧಿಯು ದೊರಕುವದು. ನೀನು ಹೋಗಿ ಬಾ. ರಾಜ್ಯವನ್ನು ಧರ್ಮದಿಂದ ಪರಿಪಾಲಿಸು''

ಅನಂತರ ರಾಮನು ಅಲ್ಲಿರುವ ಎಲ್ಲ ತಪೋಧನರಿಗೂ, ಮುನಿಶ್ರೇಷ್ಠರಿಗೂ ಋಷಿಪುಂಗವ ಅಗಸ್ತ್ಯರಿಗೂ ನಮಸ್ಕರಿಸಿ, ಪುಷ್ಪಕ ವಿಮಾನ ಆರೋಹಣ ಮಾಡಿದನು. ಅಂದು ಮಧ್ಯಾಹ್ನದ ವೇಳೆಗೆ ಶ್ರೀರಾಮನು ಅಯೋಧ್ಯೆಗೆ ಆಗಮಿಸಿದನು. ಅರಮನೆಯ ಏಳನೇ ಕಕ್ಷೆಯ ಮೇಲ್ಗಡೆಗೆ ಇಳಿದು ಪುಷ್ಪಕ ವಿಮಾನವನ್ನು ತಿರುಗಿ ಕಳಿಸಿದನು.

ಬೇರೆ ಕಕ್ಷೆಯಿಂದ ಹೊರಬಿದ್ದು ದ್ವಾರಪಾಲಕರಿಗೆ ಲಕ್ಷ್ಮಣ-ಭರತರಿಗೆ 'ನಾನು ಬಂದ ಸಮಾಚಾರ ತಿಳಿಸಿ, ಕರೆತನ್ನಿರಿ' ಎಂದು ಹೇಳಿದನು. ದ್ವಾರಪಾಲಕರು ಹೋಗಿ

ಲಕ್ಷ್ಮಣ-ಭರತರಿಗೆ ಸಮಾಚಾರ ತಿಳಿಸಿದರು. ಇಬ್ಬರೂ ಕೂಡಲೇ ಹಿರಿಯ ಸೋದರನ ಬಳಿಗೆ ಬಂದರು. ರಾಮನು ಇಬ್ಬರು ತಮ್ಮಂದಿರನ್ನು ಪ್ರೀತಿಯಿಂದ ಬಿಗಿದಪ್ಪಿ 'ನಾನು ಜ್ಞಾನಿಗಳ ಕಾರ್ಯವನ್ನು ಒಳ್ಳೇ ರೀತಿಯಿಂದ ಮಾಡಿಕೊಂಡು ಬಂದೆ' ಎಂದು ಹೇಳಿ ಪ್ರೀತಿಯಿಂದ ಕುಳಿತುಕೊಂಡು ಮಾತನಾಡಿದನು.

**ರಾಮ :-** ಪ್ರೀತಿಯ ಸೋದರರೆ, ನೀವಿಬ್ಬರೂ ನನ್ನ ಆತ್ಮವಿದ್ದಂತೆ. ನಾನು ನಿಮ್ಮಿಬ್ಬರ ಸಹಾಯದಿಂದ ಪುಷ್ಕರ ಕ್ಷೇತ್ರದಲ್ಲಿ ನಿಂತುಕೊಂಡು ರಾಜಸೂಯ ಯಾಗವನ್ನು ಮಾಡಬೇಕೆಂದು ಬಯಸಿದ್ದೇನೆ. ಪುಷ್ಕರದಲ್ಲಿ ಮಾಡಿದ ಧರ್ಮಕಾರ್ಯಗಳು ಶಾಶ್ವತ ಪುಣ್ಯದಾಯಕವಾಗಿರುತ್ತವೆ.

ಹಿಂದೆ ಬ್ರಹ್ಮನು ಮುನ್ನೂರ ಅರವತ್ತು ಯಜ್ಞಗಳನ್ನು ಇಲ್ಲಿಯೇ ಮಾಡಿದನು. ಚಂದ್ರನು ಇಲ್ಲಿ ರಾಜಸೂಯಯಾಗ ಮಾಡಿ ಕೀರ್ತಿಯನ್ನು, ಉಚ್ಚಸ್ಥಾನವನ್ನು ಪಡೆದನು. ಇದರಂತೆ ಸೂರ್ಯ, ವರುಣರು ಇಲ್ಲಿ ಯಜ್ಞಗೈದು ಲೋಕಪಾಲರಾದರು. ಅದಕ್ಕಾಗಿ ನಾನೂ ಇಲ್ಲಿ ಯಜ್ಞ ಮಾಡಬೇಕೆಂದು ಬಯಸಿದ್ದೇನೆ.

**ಭರತ :-** ಅಣ್ಣಾ ನೀನೇ ನಮಗೆ ಪರಮಧರ್ಮ. ಈ ಭೂಮಿ ಎಲ್ಲವೂ ನಿನ್ನನ್ನು ಆಧರಿಸಿ ಪ್ರತಿಷ್ಠಿತವಾಗಿದೆ. ಎಲ್ಲ ರಾಜರು. ದೇವತೆಗಳೆಲ್ಲರೂ ಬ್ರಹ್ಮನನ್ನು ಓಲೈಸುವಂತೆ ನಿನ್ನನ್ನು ಸೇವಿಸುತ್ತಾರೆ. ಅದರಂತೆ ನಾವು ಕೂಡ ನಿನ್ನ ಸೇವೆಯಲ್ಲಿ ಜೀವನದ ಸ್ವಾರ್ಥಕ್ಕೆ ಕಂಡಿದ್ದೇವೆ. ಇಂತಹ ಅನೇಕ ಯಜ್ಞಗಳನ್ನು ನೀನು ಈಗಾಗಲೇ ಮಾಡಿರುವೆ. ಆದರೆ ರಾಜಸೂಯಯಾಗದಿಂದ ಪ್ರಾಣಿಗಳ ವಿನಾಶವಾಗುವದು ಕಂಡು ಬಂದಿದೆ. ಹಿಂದೆ ಚಂದ್ರನು ರಾಜಸೂಯಯಾಗ ಮಾಡಿದಾಗ, ಬೃಹಸ್ಪತಿಯ ಮಡದಿ ತಾರೆಯನ್ನು ಅಪಹರಿಸಿದ್ದರಿಂದ ದೇವ ದಾನವರ ನಡುವೆ ಯುದ್ಧವಾಯಿತು ಎಂದು ಕೇಳಿದ್ದೇನೆ. ತಾರೆಯ ಮೂಲಕ ನಡೆದದ್ದರಿಂದ ಅದಕ್ಕೆ ತಾರಕಾಮಯ ಸಂಗ್ರಾಮವೆಂದು ಹೆಸರು ಬಂದಿತು. ವರುಣನು ಯಜ್ಞ ಮಾಡಿದಾಗ ಯುದ್ಧವಾಗಿ ಜಲಚರಗಳೆಲ್ಲ ಧ್ವಂಸವಾದವು.

ಹರಿಶ್ಚಂದ್ರ ಮಾಡಿದ ರಾಜಸೂಯಯಾಗದ ಕೊನೆಯಲ್ಲಿ ಬಕಪಕ್ಷಿ ಹಾಗೂ ಮರಕುಟಕ ಹಕ್ಕಿಗೆ ಯುದ್ಧ ನಡೆದು ಲೋಕಕ್ಷಯವಾಯಿತು. ಆದುದರಿಂದ ರಾಜಸೂಯಯಾಗ ಮಾಡಿದಾಗಲೆಲ್ಲ ಸಣ್ಣ ಪ್ರಾಣಿಗಳಿಂದ ಆರಂಭವಾಗಿ ರಾಜ, ದೇವತೆಗಳವರೆಗೆ ವಿನಾಶವಾಗುವದು ನಿಶ್ಚಿತವಾದ ವಿಷಯ. ಆದುದರಿಂದ ಪ್ರಭು, ನೀನು ರಾಜಸೂಯ ಯಾಗ ಕೈಕೊಳ್ಳುವ ಮೊದಲು ಪೂರ್ಣ ವಿಚಾರ ಮಾಡು. ಪ್ರಾಣಿಗಳು ನಾಶವಾಗದಂತೆ ಏರ್ಪಡಿಸು. ಪೂರ್ವ ಕಾಲದಿಂದಲು ನಡೆದು ಬಂದ ಧರ್ಮವನ್ನು ಆಚರಿಸು.

**ರಾಮ :-** ಧರ್ಮದ ಮರ್ಮ ಅರಿತ ಭರತನೇ, ನಿನ್ನ ಈ ವಾಕ್ಯದಿಂದ ನನಗೆ ಸಂತೋಷವಾಯಿತು. ಧರ್ಮವತ್ಸಲನಾದ ಸೋದರ, ನಾನು ರಾಜಸೂಯಯಾಗ ಮಾಡುವುದನ್ನು ಬಿಟ್ಟುಬಿಡುವೆ.

ಪ್ರಾಣಿಗಳ ವಿನಾಶಕ್ಕೆ ಕಾರಣವಾದ ಧರ್ಮಕಾರ್ಯ ಮಾಡುವದಕ್ಕಿಂತ ಪ್ರಾಣಿ ಹಾಗೂ ಪ್ರಜಾಕೋಟಿಗೆ ಉಪಯೋಗ ಬೀಳುವಂತಹ ಧರ್ಮಕಾರ್ಯ ಮಾಡುವದು

ಉಚಿತವಾಗಿದೆ. ಆದುದರಿಂದ ನಾನು ಕೆರೆ, ಕಾಲುವೆಗಳನ್ನು ಕಟ್ಟಿಸಿ, ಅನ್ನ ಛತ್ರ ಅರವಟ್ಟಿಗೆ, ಇರಿಸುವದು ಮುಂತಾದ ಲೋಕೋಪಕಾರ ಧರ್ಮಕಾರ್ಯಗಳನ್ನು ಮಾಡುವೆನು

ಕನ್ಯಾಕುಬ್ಜದಲ್ಲಿ ವಾಮನ ದೇವರನ್ನು ಪ್ರತಿಷ್ಠೆಗೈಯುವೆನು. ಇದರಿಂದ ಭಗೀರಥನ ಕೀರ್ತಿ ಹರಡಿದಂತೆ ನನ್ನ ಕೀರ್ತಿಯೂ ಕೂಡ ಭೂಲೋಕ, ದೇವಲೋಕಗಳಲ್ಲಿ ಪಸರಿಸುವದು. ಇದರಲ್ಲಿ ಸಂಹೇವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದಂಡ್ಯನಾದ ದಂಡರಾಜ ಎಂಬ ಮೂವತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ರಾಮಮಾಡಿದ ವಾಮನ ಸ್ಥಾಪನೆ

ಅಧ್ಯಾಯ - ೩೫

**॥ಭೀಷ್ಮ ಉವಾಚ॥**

**ಕಥಂ ರಾಮೇಣ ಬ್ರಹ್ಮರ್ಷೇ ಕನ್ಯಾಕುಬ್ಜೇಥ ವಾಮನಃ ।**
**ಸ್ಥಾಪಿತಃ ಕ್ವ ಚ ಲಬ್ಧೋಽಸೌ ವಿಸ್ತರಾತ್ ಮಮ ಕೀರ್ತಯ ॥**

**ಭೀಷ್ಮ :-** ಬ್ರಹ್ಮರ್ಷಿಯೆ, ರಾಮನು ಕನ್ಯಾಕುಬ್ಜದಲ್ಲಿ ವಾಮನನನ್ನು ಹೇಗೆ ಪ್ರತಿಷ್ಠೆ ಮಾಡಿದನು ವಾಮನದೇವರ ಮೂರ್ತಿಯು ಎಲ್ಲಿ ದೊರಕಿತು ಅವನಿಗೆ ಇದೆಲ್ಲವನ್ನು ಹೇಳು.

ರಾಮನ ಕಥೆಯಲ್ಲಿ ಬರುವ ಈ ವಾಮನ ವೃತ್ತಾಂತವು ಮಧುರವೂ ಮನೋಹರವೂ ಪವಿತ್ರವೂ ಆಗಿದೆ. ಇದನ್ನು ಕೇಳಿದರೆ ಕಿವಿಗೆ ಇಂಪು. ಹೃದಯಕ್ಕೆ ಆನಂದ. ರಾಮನನ್ನು ಜನರೆಲ್ಲರೂ ಪ್ರೀತಿಯಿಂದಲೇ ನೋಡುತ್ತಿದ್ದರೂ. ಧರ್ಮದ ಮರ್ಮವನ್ನು ಅರಿತ ಬುದ್ಧಿವಂತನಾದ ಆ ಶ್ರೀರಾಮನು ಪೃಥ್ವಿಯನ್ನೆಲ್ಲ ಧರ್ಮದಿಂದ ಆಳುತ್ತಿದ್ದನು. ಆ ರಾಮನು ರಾಜನಾಗಿ ರಾಜ್ಯವನ್ನು ಧರ್ಮದಿಂದ ಪರಿ ಪಾಲಿಸುತ್ತಿರುವಾಗ ಎಲ್ಲ ಗಿಡಗಳು ಹಣ್ಣುಗಳಿಂದ ತುಂಬಿರುತ್ತಿದ್ದವು. ಹೆಚ್ಚು ಕೃಷಿ ಮಾಡದೆ ಭೂಮಿಯು ಬೆಳೆಯುತ್ತಿತ್ತು. ಅಂತಹ ರಾಮನ ಚರಿತ್ರವನ್ನು ಪೂರ್ಣವಾಗಿ ಕೇಳಬೇಕೆಂದು ಬಯಸಿರುವೆ, ತಿಳಿಸು.

**ಪುಲಸ್ತ್ಯ :-** ಧರ್ಮನಿಷ್ಠನಾದ ರಾಮನು ಮಾಡಿದ ಮಹಾಕಾರ್ಯಗಳನ್ನು ಚಿತ್ತವಿಟ್ಟು ಆಲಿಸು. ಅಯೋಧ್ಯೆಯಲ್ಲಿ ರಾಮನ ಪಟ್ಟಾಭಿಷಿಕ್ತನಾಗಿ ಸಾಮ್ರಾಜ್ಯ ಶಾಸನವನ್ನು ನ್ಯಾಯ, ನೀತಿ, ಸತ್ಯ, ಧರ್ಮಗಳಿಗೆ ಅನುಸರಿಸಿ ನಡೆಸುತ್ತಿರುವಾಗ ಒಂದು ದಿನ ಅವನಿಗೆ ವಿಭೀಷಣನ ನೆನಪಾಯಿತು. ರಾವಣನನ್ನು ಕೊಂದು ಲಂಕಾ ಪಟ್ಟಣದಲ್ಲಿ ಅವನಿಗೆ ಪಟ್ಟಾಭಿಷೇಕ ಮಾಡಿದ್ದನು. ವಿಭೀಷಣನ ಮುಖಾಂತರ ಆ ರಾಮ ದೇವಕಾರ್ಯಾರ್ಥವಾಗಿ ರಾವಣನನ್ನು ಸಂಹರಿಸಿದುದ್ದಾಗಿತ್ತು.

ಈಗ ದೈತ್ಯರ ದೊರೆಯಾದ ವಿಭೀಷಣನು ದೇವತೆಗಳಿಗೆ ಎಷ್ಟರ ಮಟ್ಟಿಗೆ ಅನುಕೂಲವಾಗಿದ್ದಾನೆ- ಇದನ್ನು ನಾನೇ ಸ್ವಂತ ಹೋಗಿ ನೋಡಿಕೊಂಡು ಬರಬೇಕು. ಅವನು ಕೊನೆಯವರೆಗೂ ಸುಖದಿಂದಿರುವಂತೆ ಹಿತೋಪದೇಶ ಮಾಡಿಬರಬೇಕು! ಎಂದು ವಿಚಾರ ಮಾಡಿದನು ಅಷ್ಟರಲ್ಲಿ ಅವನ ಸೋದರನಾದ ಭರತನು ಇಲ್ಲಿಗೆ ಬಂದನು. ಅವನ ಮುಖದ ಮೇಲೆ ಚಿಂತೆಯ ಲಕ್ಷಣ ಕಂಡು ಕೇಳಿದನು.

**ಭರತ :-** ಅಣ್ಣಾ, ಎಷ್ಟು ಗಹನ ವಿಚಾರಮಾಡುತ್ತಿದ್ದೀ. ಅಂತಹ ರಹಸ್ಯವೇನು ನನಗೆ ಹೇಳು. ನೀನೀಗ ಚಿಂತಿಸುವದು ದೇವಕಾರ್ಯವೋ ಸ್ವಕೀಯವೋ ಪರಕೀಯವೋ?

**ರಾಮ :-** ಭರತ, ನೀನು ನನ್ನ ಪ್ರಾಣ ಲಕ್ಷ್ಮಣನೂ ಹಾಗೆಯೇ ನಿಮ್ಮಿಬ್ಬರನ್ನು ಬಿಟ್ಟರೆ ನನ್ನದೇನಿದೆ? ನಾನು ರಾವಣನನ್ನು ಕೊಂದದ್ದು ಏಕೆ ಎಂಬುದನ್ನು ನೀನು ಬಲ್ಲೆಯಷ್ಟೆ? ದೇವತೆಗಳಿಗೆ ಹಿತವಾಗಲಿ ಎಂದು ಆ ದೇವತೆಗಳ ಜೊತೆಗೆ ಈಗ ಲಂಕಾಧೀಶನಾದ ವಿಭೀಷನ ವರ್ತನೆ ಹೇಗಿದೆ ಎನ್ನುವದನ್ನು ನನಗೆ ಹೋಗಿ ನೋಡಬೇಕಾಗಿದೆ. ಮೇಲೆ ಸುಗ್ರೀವನ ಭೇಟಿಯಾಗಿ ಬಹಳ ದಿನಗಳಾದವು. ಅವನನ್ನು ಕಾಣಬೇಕಾಗಿದೆ. ಅವರಿಬ್ಬರನ್ನು ಕಂಡು ಯೋಗಕ್ಷೇಮ ವಿಚಾರಿಸಿ ಎಲ್ಲ ಲೋಕವನ್ನು ಇನ್ನೊಮ್ಮೆ ಸುತ್ತಿ ಬರಬೇಕೆಂದಿದ್ದೇನೆ. ಮತ್ತು ನಮ್ಮ ಕಿರಿಯ ತಮ್ಮನಾದ ಶತ್ರುಘ್ನನನ್ನು ಕಾಣಬೇಕೆಂದೆನಿಸಿದೆ. ನಿಮ್ಮ ಮಕ್ಕಳು ಅಲ್ಲಲ್ಲಿ ರಾಜ್ಯವಾಳುತ್ತಿದ್ದಾರೆ. ಅವರನ್ನು ನೋಡಬೇಕಾಗಿದೆ. ಅದಕ್ಕಾಗಿ ನಾನು ಹೊರಡುತ್ತೇನೆ. ಆಗ ಭರತನು ಕೈಮುಗಿದು ಹೇಳಿದನು.

**ಭರತ :-** ಅಣ್ಣ ನಿನ್ನ ಜೊತೆಗೆ ನಾನೂ ಬರುತ್ತೇನೆ.

ಅವನು ಮಾತಿಗೆ ರಾಮನು ಸಮ್ಮತಿಸಿದನು. ಮತ್ತು ಲಕ್ಷ್ಮಣನನ್ನು ಕರೆದು. 'ನಾವು ಲಂಕೆ, ಕ್ಷಿಷ್ಕಿಂಧೆ, ಮುಂತಾದ ಕಡೆಗಳಲ್ಲಿ ಸಂಚರಿಸಿ, ಮರಳಿ ಬರುವವರೆಗೆ ನೀನು ಸಾಮ್ರಾಜ್ಯ ಪಾಲನೆ ಮಾಡು' ಎಂದು ಆದೇಶವಿತ್ತನು. ಪುಷ್ಪಕ ವಿಮಾನವನ್ನು ನೆನೆದಕೂಡಲೇ ಅಲ್ಲಿಗೆ ಬಂದಿತು. ರಾಮ ಭರತರಿಬ್ಬರು ಆ ವಿಮಾನವನ್ನು ಆರೋಹಣ ಮಾಡಿ ಗಾಂಧಾರ ದೇಶಕ್ಕೆ ಬಂದರು. ಅಲ್ಲಿ ಭರತನ ಇಬ್ಬರು ಮಕ್ಕಳು ರಾಜ್ಯ ವಾಳುತ್ತಿದ್ದರು. ಅವರ ಕ್ಷೇಮ ಹಾಗೂ ರಾಜನೀತಿ ವಿಚಕ್ಷಣತೆ ಕಂಡು ಸಂತೋಷಪಟ್ಟರು

ಅನಂತರ ಪೂರ್ವಕ್ಕೆ ಹೋಗಿ ಅಲ್ಲಿ ರಾಜ್ಯವಾಳುವ ಇಬ್ಬರು ಲಕ್ಷ್ಮಣ ಕುಮಾರರನ್ನು ನೋಡಿಕೊಂಡು, ಅಲ್ಲಿ ಆರುದಿನ ವಾಸಮಾಡಿದರು. ಅವರ ರಾಜ್ಯಶಾಸನ ಪದ್ಧತಿ ಕಂಡು ರಾಮನ ಮನಸ್ಸಿಗೆ ತೃಪ್ತಿಯಾಯಿತು. ಅನಂತರ ಅಲ್ಲಿಂದ ಹೊರಟು ತ್ರಿವೇಣೀ ಸಂಗಮಕ್ಕೆ ಹೋಗಿ ಭರದ್ವಾಜಮುನಿಗೆ ನಮಸ್ಕರಿಸಿ, ಅಲ್ಲಿಂದ ಆತ್ರೇಯ ಆಶ್ರಮಕ್ಕೆ ಹೋಗಿ ಮುಂದೆ ಪ್ರಯಾಣ ಬೆಳೆಸಿದರು. ತಾನು ಹಿಂದೆ ವನವಾಸದಲ್ಲಿ ಸಂಚರಿಸಿದ ಸ್ಥಳಗಳನ್ನು ಒಂದೊಂದಾಗಿ ಅಲ್ಲಲ್ಲಿ ನಡೆದ ಘಟನೆಗಳ ಹಿಂದಿನ ಇತಿಹಾಸದೊಂದಿಗೆ ವಿವರಿಸಿದನು ಶ್ರೀರಾಮ ತನ್ನ ಸೋದರ ಭರತನಿಗೆ.

''ಇದೇ ಸ್ಥಳದಲ್ಲಿ ರಾವಣನು ನಮ್ಮ ತಂದೆಯ ಮಿತ್ರನಾದ ಜಟಾಯು (ಪಕ್ಷಿ)ಯನ್ನು ಕೊಂದ. ಇಲ್ಲಿ ಕಬಂಧ ರಾಕ್ಷಸನಿಗೂ ನನಗೂ ಯುದ್ಧ ನಡೆಯಿತು. ನಾನು ಅವನನ್ನು ಸುಟ್ಟ ಬಳಿಕ ಅವನಿಂದ ಒಂದು ದಿವ್ಯರೂಪ ಹೊರಟಿತು. 'ಸೀತೆಯು ರಾವಣನ ಮನೆಯಲ್ಲಿಯೇ ಇದ್ದಾಳೆ. ವಾನರರಿಗೆ ಅರಸನಾಗಿ ಸುಗ್ರೀವನು ಗಿರಿಯಲ್ಲಿ ನೆಲೆಸಿದ್ದಾನೆ. ಅವನು ನಿನಗೆ ಮಿತ್ರನಾಗಿ ಸಹಾಯ ಮಾಡುತ್ತಾನೆ. ನೀನು ಪಂಪಾಸರೋವರಕ್ಕೆ ಈಗ ಹೋಗು' ಎಂದು ನನಗೆ ಹೇಳಿದನು ಆ ಕಬಂಧ.

ಅದರಂತೆ ನಾನು ಪಂಪಾಸರೋವರಕ್ಕೆ ಹೋಗಿ ಶಬರಿ ಎಂಬ ತಪಸ್ವಿಯನ್ನು ಅನುಗ್ರಹಿಸಿದೆ. ಈ ಸರೋವರದ ದಂಡೆಯ ಮೇಲೆ ದುಃಖಿತನಾದ ನನ್ನನ್ನು ಲಕ್ಷ್ಮಣನು ಸಂತೈಯಿಸಿದ. ನಾನು ಇಲ್ಲಿಯೇ ನನ್ನ ಮಿತ್ರ ಸುಗ್ರೀವನ ಸಲುವಾಗಿ ಅವನ

ಅಣ್ಣ ವಾಲಿಯನ್ನು ವಧಿಸಿದೆ. ಇದೇ ಆ ವಾಲಿಯು ಆಳುತ್ತಿದ್ದ ಕಿಷ್ಕಿಂಧೆ ಅಲ್ಲಿ ಈಗ ಸುಗ್ರೀವನು ರಾಜ್ಯವಾಳುತ್ತಿದ್ದಾನೆ.''

ಹೀಗೆ ಹಿಂದೆ ನಡೆದ ಸಮಾಚಾರವನ್ನು ತಿಳಿಸಿ, ರಾಮನು ಅಲ್ಲಿ ಇಳಿದು ಸುಗ್ರೀವನ ಆಸ್ಥಾನಕ್ಕೆ ಬಂದನು. ರಾಮನನ್ನು ಕಂಡು ಸುಗ್ರೀವನು ನಮಸ್ಕರಿಸಿದನು. ರಾಮನನ್ನು ಉಚ್ಚ ಸಿಂಹಾಸನದ ಮೇಲೆ ಕೂಡಿಸಿದನು. ಆಗ ಅಂಗದ ಹನುಮಂತ ನಳ, ನೀಲ, ಪಾಟಲ, ಗವ, ಗವಾಕ್ಷ ಮುಂತಾದ ಮಂತ್ರಿಗಳೂ ಪುರೋಹಿತ ಧಧಿಮುಖನೂ, ಶತಬಲಿ, ಮೈಂದ, ಕುಮುದ, ಸುಷೇಣ, ವೃಷಭ, ಮುಂತಾದ ಕಪಿವೀರರೂ ಅಲ್ಲಿಗೆ ಬಂದು ರಾಮನಿಗೆ ನಮಸ್ಕಾರ ಮಾಡಿದರು. ರಾಮಾ, ತಾರಾ ಮೊದಲಾದ ಅಂತಃಪುರದ ಅಬಲೆಯರೂ ಬಂದು ರಾಮ, ಭರತರನ್ನು ಕಂಡರು ಮತ್ತು ಎಲ್ಲರೂ ರಾಮನ ದರ್ಶನದಿಂದ ಆನಂದಭರಿತರಾಗಿ, ಹರ್ಷಾಶ್ರುಗಳನ್ನು ಉದುರಿಸುತ್ತ ನುಡಿದರು.

**ವಾನರರು :-** ಪ್ರಭು, ರಾವಣನನ್ನು ಗೆದ್ದು, ನೀನು ಅಯೋಧ್ಯೆಗೆ ಕರೆದುಕೊಂಡು ಹೋದ ಸೀತಾದೇವಿಯು ಎಲ್ಲಿ? ರುದ್ರನೇ ಮೊದಲಾದ ಎಲ್ಲ ಜನರ ಎದುರಿಗೆ ಅಗ್ನಿಯಲ್ಲಿ ಪ್ರವೇಶಿಸಿ, ಆ ಸೀತೆ ಪರಿಶುದ್ಧಳಾಗಿದ್ದಳಲ್ಲವೆ? ಅಂತಹ ಚಾರಿತ್ರ್ಯ ಸಂಪನ್ನಳಾದ ಆ ಮಹಾರಾಣಿಯು ನಮ್ಮ ಕಣ್ಣಿಗೆ ಕಾಣಿಸುವದಿಲ್ಲವೇಕೆ? ಅವಳನ್ನು ಬಿಟ್ಟರೆ ನಿನಗೆ ಶೋಭೆ ಇಲ್ಲ. ನಿನ್ನನ್ನು ಬಿಟ್ಟರೆ ಅವಳಿಗೆ ಶೋಭೆಯಿಲ್ಲ.

ಅನಂತರ ಸುಗ್ರೀವನ ಅರಸಿಯಾದ ತಾರೆಯು ರಾಮನನ್ನು ಕುರಿತು ಹೇಳಿದಳು.

**ತಾರೆ :-** ರಾಮನೆ, ಸಾಧ್ವೀಮಣಿಯಾದ ಸೀತೆಯು ನಿನ್ನನ್ನು ಬಿಟ್ಟು ಈಗ ಎಲ್ಲಿರುವಳು ? ನೀನು ಬೇರೆ ಮದುವೆಯಾಗಿಲ್ಲ. ಇದ್ದ ಹೆಂಡತಿಯನ್ನು ಬಿಟ್ಟು ನೀನು ಒಬ್ಬೊಂಟಿಗನಾಗಿ ತಿರುಗುವದು ನಿನಗೆ ಭೂಷಣವಲ್ಲ. ಕ್ರೌಂಚ ಪಕ್ಷಿಗಳಂತೆ, ಚಕ್ರವಾಕಗಳಂತೆ, ನೀವಿಬ್ಬರೂ ಎಂದು ಅಗಲದೆ ಅನ್ಯೋನ್ಯವಾಗಿದ್ದಿರಿ. ಹಿಂದೆ ಪುಷ್ಪಕ ವಿಮಾನದಲ್ಲಿ ಗರುಡಾರೂಢರಾದ ಲಕ್ಷ್ಮೀನಾರಾಯಣರಂತೆ ನಿಮ್ಮಿಬ್ಬರನ್ನು ಜೋಡಿಯಾಗಿ ನೋಡಿದ್ದೆನು. ಈಗ ಅದೇ ಪುಷ್ಪಕದಲ್ಲಿ ಏಕಾಕಿಯಾಗಿ ಬಂದುದೇಕೆ'' ಎಂದು ಕೇಳಿ ತಾರಾ ದೇವಿಯು ಕಣ್ಣೀರು ಸುರಿಸಿದಳು.

**ರಾಮ :-** ವಿಶಾಲಾಕ್ಷಿ, ನೀನು ಅಳಬೇಡ. ಕಾಲವು ದುರ್ಲಂಘ್ಯವಾಗಿದೆ. ಯಾರೂ ನಿಯತಿಯನ್ನು ಮೀರಲಾರರು. ಈ ಚರಾಚರ ಪ್ರಪಂಚವೆಲ್ಲವೂ ಕಾಲಾಧೀನವಾಗಿದೆ. ಹೀಗೆ ಹೇಳಿ ಅವಳನ್ನು ಸಂತೈಸಿ ಕಳಿಸಿದನು.''

ಆಗ ಸುಗ್ರೀವನು ರಾಮನ ಬಳಿಗೆ ಬಂದು. 'ನೀವಿಬ್ಬರೂ ಸೋದರರು ಇಲ್ಲಿಗೆ ಯಾವ ಕಾರ್ಯಕ್ಕಾಗಿ ಬಂದಿರುವಿರಿ- ನಿಮ್ಮ ಕಾರ್ಯವನ್ನು ನಾನು ಈಗಲೇ ಮಾಡಿ ಕೊಡುತ್ತೇನೆ ಅಪ್ಪಣೆ ಮಾಡಿರಿ.'' ಎಂದು ಕೇಳಿದನು.

ಆಗ ರಾಮನು ಆದೇಶದಂತೆ ಭರತನು ತಮ್ಮ ಲಂಕಾಗಮನದ ಉದ್ದೇಶವನ್ನು ತಿಳಿಸಿದನು. ಆಗ ಸುಗ್ರೀವನು ತಾನು ಅವರ ಜೊತೆಗೆ ಲಂಕೆಗೆ ಬರುತ್ತೇನೆಂದು ಹೇಳಿದನು. ಮೂವರು ಕೂಡಿ ಪುಷ್ಪಕ ವಿಮಾನವನ್ನು ಹತ್ತಿ ಪ್ರಯಾಣವನ್ನು ಮುಂದುವರಿಸಿದರು. ವಿಮಾನವು ಸಮುದ್ರದ ಉತ್ತರ ತೀರಕ್ಕೆ ಬಂದಿತು. ಆಗ ರಾಮನು ಮತ್ತೆ ಹಿಂದೆ ತಾನು ಆ ಸ್ಥಳಗಳಿಗೆ ಬಂದಾಗ ನಡೆದ ಘಟನೆಗಳನ್ನೆಲ್ಲ ಭರತನಿಗೆ ವಿವರಿಸಿದನು. ''ವಿಭೀಷಣನು

ತನ್ನ ನಾಲ್ಕು ಜನ ಮಂತ್ರಿಗಳೊಡನೆ ನನಗೆ ಇಲ್ಲಿ ಶರಣು ಬಂದನು. ನಾನು ಇದೇ ಸಾಗರದ ತೀರದಲ್ಲಿ ಪ್ರಾಯೋಪವೇಶಕ್ಕೆ ಕುಳಿತಿದ್ದೆನು. ಕುಪಿತನಾಗಿ, ನಮಗೆ ದಾರಿ ಕೊಡದ ಆ ಶರಧಿಯನ್ನೆಲ್ಲ ಶೋಷಿಸಿ ಬಿಡಬೇಕೆಂದಾಗ ನನಗೆ ಶರಣು ಬಂದ ಆ ನದೀನಾಥ.

ಅನಂತರ ನನ್ನ ಆದೇಶದಿಂದ ಕಪಿವೀರರು ಈ ಸಮುದ್ರದಲ್ಲಿ ದೊಡ್ಡ ಸೇತುವೆ ಕಟ್ಟಿದರು. ಮೂರು ದಿನಗಳಲ್ಲಿ ಮುಗಿಸಿಬಿಟ್ಟರು ಆ ಮಹತ್ತರ ಸೇತು ಪ್ರಬಂಧವನ್ನು ಮೊದಲನೆಯ ದಿನ ಹದಿನಾಲ್ಕು ಯೋಜನ, ಎರಡನೆಯ ದಿನ ಮೂವತ್ತಾರು ಯೋಜನ, ಉಳಿದ ಭಾಗವನ್ನು ಮೂರು ದಿನಗಳಲ್ಲಿ ಕಟ್ಟಿಸೇತುವೆಯನ್ನು ಸಿದ್ಧಪಡಿಸಿದರು.

ಆ ಸೇತುವೆಯಿಂದ ಸಮುದ್ರವನ್ನು ದಾಟಿ ವಾನರ ವೀರರು ಚೈತ್ರ ತ್ರಯೋದಶಿಯ ದಿನ ಲಂಕಾಪಟ್ಟಣದ ಮೇಲೆ ದಾಳಿ ಮಾಡಿದರು. ನಲವತ್ತೆಂಟು ದಿನ ಯುದ್ಧ ನಡೆದು ಅದರಲ್ಲಿ ನೀಲನು ಪ್ರಹತನನ್ನು, ಹನುಮಂತನು ಧೂಮ್ರಾಕ್ಷನನ್ನು ಸುಗ್ರೀವನು ಮಹೋದರನನ್ನು, ಲಕ್ಷ್ಮಣನು ಇಂದ್ರಜಿತುವನ್ನು ನಾನು ರಾವಣ ಕುಂಭಕರ್ಣರನ್ನು ಕೊಂದೆವು. ರಾವಣನ ವಧವಾದ ಬಳಿಕ ಈ ಸ್ಥಳದಲ್ಲಿ ಬ್ರಹ್ಮ, ಶಿವ, ಇಂದ್ರಾದಿ ದೇವತೆಗಳು ನಮ್ಮ ದರ್ಶನಕ್ಕೆ ಬಂದು ಅಭಿನಂದಿಸಿ ಹೋದರು. ತಂದೆ ದಶರಥನೂ ಕೂಡ ಜೀವಂತನಾಗಿ ಬಂದು ನನ್ನನ್ನು ಮಾತನಾಡಿಸಿ ಹೋದನು. ಇಲ್ಲಿಯೇ ಸೀತೆಯು ಅಗ್ನಿಪ್ರವೇಶಮಾಡಿ, ಪರಿಶುದ್ಧ ಮೂರ್ತಿಯಾಗಿ ಎದ್ದುಬಂದಳು.

ಅನಂತರ ದಶರಥ ಮಹಾರಾಜನು ಈ ಸ್ಥಳದಲ್ಲಿ ಲಕ್ಷ್ಮಣನಿಗೂ ಸೀತೆಗೂ ಅನುಗ್ರಹ ಮಾಡಿ, ನನ್ನ ಸೇವೆಯನ್ನು ಮಾಡಲು ಉಪದೇಶ ನೀಡಿದನು. ಮತ್ತು ಸೀತೆಯನ್ನು ಕುರಿತು ಹೇಳಿದನು, 'ನಿನ್ನನ್ನು ಬೆಂಕಿಯಲ್ಲಿ ಹಾಕಿದ್ದಕ್ಕಾಗಿ ನೀನು ರಾಮನ ಮೇಲೆ ಕೋಪಗೊಳ್ಳಬೇಡ. ನಿನ್ನ ಪಾತಿವ್ರತ್ಯದ ಕೀರ್ತಿಯು ಇದರಿಂದ ಜಗತ್ಪ್ರಸಿದ್ಧವಾಯಿತು. ನೀವು ಸತಿಪತಿಗಳೀರ್ವರಿಗೂ ಇದರಿಂದ ಶಾಶ್ವತವಾಗಿ ಕೀರ್ತಿಯು ಲಭಿಸುವದು.

ಹೀಗೆ ರಾಮನು ಭರತನಿಗೆ ತನ್ನ ಆತ್ಮಚರಿತ್ರೆಯ ಉಳಿದ ಅಧ್ಯಾಯ ವಿವರಿಸುತ್ತಿರುವಾಗಲೇ ವಿಮಾನವು ಲಂಕಾ ಪಟ್ಟಣಕ್ಕೆ ಬಂದಿಳಿಯಿತು. ವಿಭೀಷಣನು ಪ್ರಭುವನ್ನು ಸ್ವಾಗತಿಸಲು ಬಂದನು. ಸಾಷ್ಟಾಂಗ ನಮಸ್ಕಾರ ಮಾಡಿದನು. ''ನಿನ್ನ ದರ್ಶನದಿಂದ ನಾನು ಧನ್ಯನಾದೆ'' ಎಂದು ರಾಮನಿಗೆ ಮತ್ತೊಮ್ಮೆ ನಮಸ್ಕರಿಸಿ, ಭರತ, ಸುಗ್ರೀವರನ್ನು ಆಲಿಂಗಿಸಿದನು. ಅವರನ್ನು ಅರಮನೆಗೆ ಕರೆದೊಯ್ದು, ಉಚ್ಚ ಆಸನದ ಮೇಲೆ ಕೂಡಿಸಿ ಅರ್ಘ್ಯ ಪಾದ್ಯಗಳಿಂದ ಪೂಜಿಸಿ ಕೈಮುಗಿದು ನುಡಿದನು.

**ವಿಭೀಷಣ :-** ಮಹಾಪ್ರಭು, ನನಗೆ ದೊರೆತಿರುವ ಈ ಲಂಕಾರಾಜ್ಯ ಅಧಿಕಾರ, ಐಶ್ವರ್ಯ ಎಲ್ಲವೂ ನಿನ್ನ ಪ್ರಸಾದದ ಫಲ. ಈ ಪಟ್ಟಣ ಮಡದಿ, ಮಕ್ಕಳು, ಮನೆ, ರಾಜ್ಯ ಎಲ್ಲವನ್ನು ನಿನ್ನ ಅಡಿದಾವರೆಗಳಿಗೆ ಅರ್ಪಿಸಿದ್ದೇನೆ. ಸ್ವೀಕರಿಸಿ ಅನುಗ್ರಹಿಸು. ನಿನಗೆ ನನ್ನ ನಮಸ್ಕಾರ' ಎಂದು ನುಡಿದು ಆ ಭಗವಂತನಿಗೆ ಆತ್ಮಾರ್ಪಣೆ ಮಾಡಿದನು.

ಅಷ್ಟರಲ್ಲಿ ಶ್ರೀ ರಾಮನು ದಯಮಾಡಿಸಿದ ಸಮಾಚಾರವು ಲಂಕೆಯ ಜನರಿಗೆಲ್ಲ ತಿಳಿಯಿತು. ಮಂತ್ರಿಗಳು, ಪ್ರಜೆಗಳು ಅರಮನೆಯ ಬಳಿಗೆ ಬಂದು, 'ಶ್ರೀರಾಮನ ಸಂದರ್ಶನ ಮಾಡಿಸಬೇಕು' ಎಂದು ವಿಭೀಷಣನಿಗೆ-

'ರಾಮ ದರ್ಶಯ ನಃ ಪ್ರಭೊ' ಎಂದು ಕೈ ಮುಗಿದು ಕೇಳಿದರು. ಇದು ಲಂಕಾಪಟ್ಟಣದ ಪ್ರತಿಯೊಬ್ಬ ನಾಗರಿಕನ ಕೋರಿಕೆಯಾಗಿತ್ತು. ವಿಭೀಷಣನು ರಾಮನ ಬಳಿಗೆ ಬಂದು, ತನ್ನ ಪ್ರಜೆಗಳ ಅಪೇಕ್ಷೆಯನ್ನು ತಿಳಿಸಿದನು. ಅದಕ್ಕೆ ರಾಮನು ಸಂತೋಷದಿಂದ ಆಗಲಿ ಎಂದು ಹೇಳಿ, ಈ ಎಲ್ಲ ಲಂಕೆಯ ವಾಸಿಗಳಿಗೆ ದರ್ಶನ-ವಿತ್ತನು.

ರಾಮನನ್ನು ಕಾಣಲು ಬಂದ ದೈತ್ಯರೆಲ್ಲರೂ ಮುತ್ತು, ರತ್ನ, ಮತ್ತು ಹಣದ ರಾಶಿಯನ್ನು ಹೇರಳವಾಗಿ ಕಾಣಿಕೆಯಿತ್ತರು. ಎಲ್ಲರೂ ರಾಮ ದರ್ಶನದಿಂದ ಪರಮಾನಂದಭರಿತರಾದರು, ಶಾಮಸುಂದರ ವಿಗ್ರಹನಾದ ರಾಮನ ದರ್ಶನದಿಂದ ಪ್ರತಿಯೊಬ್ಬ ಲಂಕಾನಿವಾಸಿ ದೈತ್ಯರ ಹೃದಯದಲ್ಲಿ ಮೂಡಿನಿಂತಿತ್ತು.- ಧನ್ಯಂ ಮನ್ಯತೆಯ ಭಾವ. ಹೀಗೆ ಮೂರು ದಿನಗಳವರೆಗೆ ರಾಮನು ವಿಭೀಷಣನ ಮನೆಯಲ್ಲಿ ಇದ್ದನು.

ನಾಲ್ಕನೆಯ ದಿನ ರಾಮನು ಆ ರಾಕ್ಷಸ ಸಭೆಯಲ್ಲಿ ಆಸೀನನಾದಾಗ ವಿಭೀಷಣನ ತಾಯಿಯಾದ ಕೈಕಸಿಯು 'ರಾಮನನ್ನು ನನ್ನ ಸೊಸೆಯಂದಿರೊಡನೆ ನೋಡಬೇಕೆಂದು ವಿಭೀಷಣನ ಮುಖಾಂತರ ಹೇಳಿಕಳಿಸಿದಳು. ಅದರಂತೆ ವಿಭೀಷಣನು ರಾಮನ ಬಳಿಗೆ ಬಂದು ನುಡಿದನು.

**ವಿಭೀಷಣ :-** ಸ್ವಾಮಿ ನನ್ನದೊಂದು ವಿಜ್ಞಾಪನೆ ರಾವಣ, ಕುಂಭಕರ್ಣ ಹಾಗೂ ನನ್ನನ್ನು ಹಡೆದ ತಾಯಿಯು ತಮ್ಮ ಪಾದ ಸಂದರ್ಶನ ಮಾಡಲು ಬಯಸುತ್ತಿದ್ದಾಳೆ. ದಯಮಾಡಿ ಅವಳಿಗೆ ದರ್ಶನ ನೀಡಬೇಕು.

**ರಾಮ :-** ವಿಭೀಷಣ, ನಿನ್ನ ತಾಯಿ ನನ್ನ ತಾಯಿ ಇದ್ದಂತೆ. ಅವಳು ನಾನು ಇದ್ದಲ್ಲಿ ಬರುವದು ಬೇಡ. ನಾನೇ ಅವಳು ಇದ್ದಲ್ಲಿಗೆ ಬರುತ್ತೇನೆ. ನಡೆ ಅವಳೆಲ್ಲಿ ಇರುವಳು? ನಡೆ, ದಾರಿ ತೋರಿಸು' ಎಂದು ರಾಮನು ಸಿಂಹಾಸನದಿಂದೆದ್ದು ವಿಭೀಷಣನನ್ನು ಹಿಂಬಾಲಿಸಿದನು. ಹೋಗುವಾಗಲೂ ಕೂಡ ತಲೆಯ ಮೇಲೆ ಕೈ ಇಟ್ಟುಕೊಂಡು ನಮಸ್ಕಾರ ಮುದ್ರೆಯಿಂದಲೇ ಕೈಕಸಿಯ ಅಂತಃಪುರಕ್ಕೆ ಬಂದನು. ಅಲ್ಲಿಗೆ ಹೋಗಿ ಮಹಾಸ್ವಾಮಿ ಶ್ರೀರಾಮ ಅವಳಿಗೆ ನಮಸ್ಕಾರ ಮಾಡಿ ನುಡಿದನು.

''ತಾಯಿ, ನಿನಗೆ ನಮಸ್ಕಾರ ಮಾಡುತ್ತೇನೆ. ಇಂದು ನಿನ್ನ ಈ ಪವಿತ್ರ ಚರಣಗಳನ್ನು ನೋಡಿ ನಾನು ಧನ್ಯನಾದೆ. ನನಗೆ ನೀನು ನನ್ನ ಹಡೆದ ತಾಯಿ ಕೌಸಲ್ಯೆ ಇದ್ದಂತೆ. ನನ್ನ ಹಿಂದಿನ ಪುಣ್ಯ ಹಾಗೂ ಇಂದಿನ ತಪಸ್ಸಿನಿಂದ ನಾನು ಇಂದು ನಿನ್ನ ಚರಣ ದರ್ಶನ ಪಡೆದಿದ್ದೇನೆ.

**ಕೈಕಸಿ :-** ರಾಮ, ನೀನು ಚಿರಂಜೀವಿಯಾಗು ಹಾಗೂ ವಿಜಯಶಾಲಿ ಆಗು ನನಗೆ ಬಹು ದಿನಗಳ ಹಿಂದೆಯೆ ನನ್ನ ಪತಿಯೆ ಹೇಳಿದ್ದರು- 'ಸಾಕ್ಷಾತ್ ನಾರಾಯಣನು ರಘುಕುಲದಲ್ಲಿ ಅವತರಿಸುತ್ತಾನೆ. ದೇವತೆಗಳಿಗೆ ಹಿತ ಮಾಡುವದೇ ಅವನ ಉದ್ದೇಶ. ರಾವಣನನ್ನು ಸಂಹರಿಸಿ, ವಿಭೀಷಣನಿಗೆ ಅವನು ರಾಜ್ಯ ಕೊಡುವನು. ವಾಲಿಯನ್ನು ಸಂಹರಿಸುವನು. ಸಮುದ್ರಕ್ಕೆ ಸೇತುವೆ ಕಟ್ಟುವನು' ಎಂದು ಈ ದಿನ ನನ್ನ ಪತಿಯ ಮಾತುಗಳು ನೆನಪಾಗುವವು.

**'ಸೀತಾ ಲಕ್ಷ್ಮೀರ್ಭವಾನ್ ವಿಷ್ಣುಃ ದೇವಾ ವೈ ವಾನರಾಸ್ತಥಾ ।'**

ಸೀತಾದೇವಿಯು ಸಾಕ್ಷಾತ್ ಲಕ್ಷ್ಮೀ, ನೀನೇ ವಿಷ್ಣು, ಈ ವಾನರರೆಲ್ಲರೂ ದೇವತೆಗಳೇ, ಅನಂತರ ವಿಭೀಷಣನ ಪಟ್ಟದರಸಿಯಾದ ಸರಮೆಯು ನಮಸ್ಕರಿಸಿ ನುಡಿದಳು

**ಸರಮಾ :-** ಸ್ವಾಮಿ, ರಾಮ ಜನಕರಾಜ ಕುಮಾರಿಯಾದ ಸೀತಾ ದೇವಿಯು ಈ ನಮ್ಮ ಲಂಕೆಯ ಅಶೋಕವನದಲ್ಲಿ ಒಂದು ವರ್ಷದವರೆಗೆ ವಾಸವಾಗಿದ್ದಳು ಆ ನಿನ್ನ ಪ್ರೇಯಸಿಯು ಸುಖವಾಗಿರುವಳಷ್ಟೇ! ಆ ಮಹಾತಾಯಿಯನ್ನು ಈಗ ನೀನು ಬರುವಾಗ ಏಕೆ ಕರೆದುಕೊಂಡು ಬರಲಿಲ್ಲ? ಆ ದೇವಿಯನ್ನು ನಾನು ಪ್ರತಿದಿನವೂ ನೆನೆಯುವೆನು. ಪುನಃ ಮತ್ತೆ ಆ ದೇವಿಯನ್ನು ನಾನು ಎಂದು ಕಾಂಬೆನು. ಎಂದು ಚಿಂತಿಸುತ್ತಲಿರುವೆನು, ಸ್ವಾಮಿ ನೀನು, ಸೀತೆಯೊಡನಿದ್ದರೆ ಚಂದ. ಸೀತೆ ನಿನ್ನೊಡನಿದ್ದರೆ ಚಂದ.'

ರಾಮನೊಡನೆ ಇಷ್ಟು ಸಲಿಗೆಯಿಂದ ಮಾತನಾಡುವ ಈ ಹೆಣ್ಣು ಮಗಳು ಯಾರು? ಎಂದು ಭರತನಿಗೆ ಆಶ್ಚರ್ಯವಾಯಿತು ಅದನ್ನು ತಿಳಿದು ರಾಮನು ಭರತನಿಗೆ ಅವಳ ಪರಿಚಯ ಮಾಡಿಕೊಟ್ಟನು.

**ರಾಮ :-** ಇವಳ ವಿಭೀಷಣನ ಹೆಂಡತಿ ಸರಮೆ. ಇವಳು ಸೀತೆಗೆ ಒಳ್ಳೇ ಅಚ್ಚುಮೆಚ್ಚಿನ ಗೆಳತಿ. ಮಹಾನುಭಾವಳು ಸೀತೆ ಇಲ್ಲಿ ರಾವಣನ ಬಂದಿಯಾಗಿ ಇದ್ದಾಗ ಈ ಸರಮೆಯು ಮಾಡಿದ ಉಪಕಾರ ಅಷ್ಟಿಷ್ಟಲ್ಲ. ಆದುದರಿಂದಲೇ ಇವಳು ಅವಳಿಗೆ ಬಹಳ ಬೇಕಾದವಳು.

ಈಗ ನೋಡಿ ಎಂತಹ ಕಾಲ ಬಂತು. ಭಾಗ್ಯಹೀನನಾದ ಮನುಷ್ಯನನ್ನು ಸಂಪತ್ತಿನ ನಿಧಿಯು ತೊರೆಯುವದಿಲ್ಲವೆ? ಅದರಂತೆ ಸೀತೆಯು ನನ್ನನ್ನು ತೊರೆದಿದ್ದಾಳೆ. ಮುಂದೆ ಏನು ಮಾಡುವಳೋ ತಿಳಿಯದು. ಇದೆಲ್ಲಕ್ಕೂ ಮೂಲ ಕಾರಣ ಕಾಲ.

ಸರಮೆ, ನೀನು ಭಾಗ್ಯವತಿ, ಪತಿಯ ಮನೆಯನ್ನು ಕಾಯುತ್ತ ನೀನು ಸುಖವಾಗಿರು, ಶುಭಾಂಗಿಯೇ, ಸೀತೆಯನ್ನು ಅಗಲಿದ ಬಳಿಕ ನನಗೆ ಎಲ್ಲಿ ಹೋದರು ಸುಖ, ಸಮಾಧಾನಗಳಿಲ್ಲ. ಎಲ್ಲ ದಿಕ್ಕುಗಳು ಎನಿಸುತ್ತವೆ. ನನಗೆ ಏಕೋ ಬುದ್ಧಿಯೇ ಸರಿಯಿಲ್ಲ ಎಂದು ಶೋಕಿಸಿದನು ಶ್ರೀ ರಾಮ. ಕಂಬನಿದುಂಬಿ ಸೀತೆಯ ಪ್ರೀತಿಯ ಗೆಳತಿಯನ್ನು ಬೀಳ್ಕೊಟ್ಟನು ಅವಳೊಡನೆ ಕೈಕಸಿಯು ಹೊರಟು ಹೋದಳು. ಅನಂತರ ರಾಮನು ವಿಭೀಷಣನನ್ನು ಕರೆದು ಹೇಳಿದನು.

''ವಿಭೀಷಣ, ನೀನು ದೇವತೆಗಳಿಗೆ ಯಾವಾಗಲೂ ಪ್ರಿಯವಾದುದನ್ನೇ ಮಾಡು. ಅವರ ವಿಷಯದಲ್ಲಿ ಅಪರಾಧ ಎಸಗಬೇಡ. ಇಂದ್ರನ ಆಜ್ಞೆಯಂತೆ ನಡೆ, ಲಂಕಾಪಟ್ಟಣಕ್ಕೆ ಯಾರಾದರೂ ಮನುಷ್ಯರು ಬಂದರೆ ಅವರನ್ನು ಯಾರೂ ಕೊಲ್ಲಬಾರದು ಎಂದು ರಾಕ್ಷಸರಿಗೆಲ್ಲ ಆದೇಶ ನೀಡು. ಎಲ್ಲ ಮಾನವರನ್ನು ರಾಮನೆಂದು ಗೌರವದಿಂದ ನಡೆಸಿಕೊಳ್ಳಲು ತಿಳಿಸು.'' ಇವರಿಬ್ಬರ ಮಾತುಕಥೆ ನಡೆದಾಗ ವಾಯುದೇವ ಅಲ್ಲಿಗೆ ಬಂದ. ಅವನು ರಾಮನಿಗೆ ತಿಳಿಸಿದ.

**ವಾಯು :-** ಮಹಾನುಭಾವನೆ, ಹಿಂದೆ ವಾಮನ ಮೂರ್ತಿಯು ಬಲಿಚಕ್ರವರ್ತಿಯನ್ನು ಬಂಧಿಸಿದನಷ್ಟೇ! ಆ ವಿಷ್ಣುವಿನ ಮೂರ್ತಿಯು ಇಲ್ಲಿಯೇ ಇರುತ್ತದೆ. ಅದನ್ನು ನೀನು ತೆಗೆದುಕೊಂಡುಹೋಗು. ಕಾನ್ಯಕುಬ್ಜದಲ್ಲಿ ಪ್ರತಿಷ್ಠೆಮಾಡು.

ವಾಯುವಿನ ವಚನವು ರಾಮನಿಗೆ ಸಮ್ಮತವಾಯಿತು. ಆಗ ವಿಭೀಷಣನು ಅನೇಕ ರತ್ನಾಭರಣಗಳಿಂದ ಆ ಮೂರ್ತಿಯನ್ನು ಅಲಂಕರಿಸಿದನು. ಶ್ರೀರಾಮನಿಗೆ ತಂದು ಅರ್ಪಿಸಿದನು ಮತ್ತು ಬಿನ್ನವಿಸಿದನು.

**ವಿಭೀಷಣ :-** ರಘುಕುಲ ಚಂದ್ರನೆ, ಹಿಂದೆ ರಾವಣ ಕುಮಾರನಾದ ಮೇಘನಾದನು ದೇವೇಂದ್ರನನ್ನು ಕೂಡ ಸೋಲಿಸಿದನು. ಆ ಕಾಲದಲ್ಲಿ ಸ್ವರ್ಗದಲ್ಲಿರುವ ಈ ಸುಂದರ ಪ್ರತಿಮೆಯನ್ನು ಅವನೇ ಇಲ್ಲಿಗೆ ತಂದಿದ್ದನು. ಅದನ್ನು ನೀನು ತೆಗೆದುಕೊಂಡು ಹೋಗು.

ಅವನ ಪ್ರಾರ್ಥನೆಯಂತೆ ಶ್ರೀರಾಮನು ಆ ವಾಮನ ಮೂರ್ತಿಯನ್ನು ಮತ್ತು ಲಂಕೆಯಲ್ಲಿ ತನಗೆ ಬಂದ ಅಸಂಖ್ಯ ರತ್ನಾದಿ ಕಾಣಿಕೆಗಳನ್ನು ತೆಗೆದುಕೊಂಡು, ಸುಗ್ರೀವ ಭರತ ರೊಂದಿಗೆ ಪುಷ್ಪಕ ವಿಮಾನವನ್ನು ಏರಿದನು. ವಿಮಾನವು ನೆಲ ಬಿಟ್ಟಿತು. ಮುಗಿಲಿಗೆ ನೆಗೆಯಿತು. ಆಗ ರಾಮನು ಕೈಮಾಡಿ ವಿಭೀಷಣನಿಗೆ 'ವಿಭೀಷಣಾ ನಾನು ಹೋಗಿ ಬರುವೆ, ನೀನು ನಿಲ್ಲು' ಎಂದು ಹೇಳಿದನು ಆಗ ವಿಭೀಷಣನು ನಿಂತಲ್ಲಿಂದಲೇ ನಮಸ್ಕರಿಸುತ್ತ ನುಡಿದನು.

**ವಿಭೀಷಣ :-** ಪ್ರಭೋ; ನಿನ್ನ ಅಪ್ಪಣೆಯನ್ನು ನಾನು ಅಕ್ಷರಶಃ ಪಾಲಿಸುವೆನು ಆದರೆ ಒಂದು ಆತಂಕ ಉಂಟು, ಸಮುದ್ರದಲ್ಲಿ ನೀನು ರಚಿಸಿದ ಸೇತುವೆಯಿಂದ ಮಾನವರೆಲ್ಲರೂ ಇಲ್ಲಿಗೆ ಆಗಮಿಸುವರು ನಮ್ಮನ್ನು ಪೀಡಿಸುವರು, ನಿನ್ನ ಆಜ್ಞೆ ಇದ್ದುದರಿಂದ ನಮಗೆ ಅವರನ್ನು ಹಿಂಸಿಸಲಿಕ್ಕೂ, ಹೆದರಿಸಲಿಕ್ಕೂ ಬರುವದಿಲ್ಲ. ಇದರಿಂದ ಲಂಕೆಯ ದಾನವರ ಮೇಲೆ ಭೂಲೋಕದ ಮಾನವರ ದಾಳಿ, ಉಪದ್ರವಗಳಿಗೆ ಕೊನೆ ಎಂಬುದೇ ಇಲ್ಲದಂತಾಗುವದು. ಇದಕ್ಕಾಗಿ ನೀನೇ ಒಂದು ನಿರ್ಧಾರ ಮಾಡು. ನಾನು ಏನುಮಾಡಬೇಕು ಹೇಳು.

ವಿಭೀಷಣನ ಈ ಮಾತನ್ನು ಕೇಳಿದಕೂಡಲೆ ಪ್ರಭು ಶ್ರೀ ರಾಮನುಕೂಡಲೇ ಕೈಯಲ್ಲಿ ಬಾಣ ತೆಗೆದುಕೊಂಡು ಆ ಸೇತುವೆಯನ್ನು ಬಾಣದಿಂದ ಮೂರು ತುಂಡುಗಳನ್ನಾಗಿ ಮಾಡಿದನು ಅದರಿಂದ ನಡುವೆ ಒಂದು ಯೋಜನೆ ಅಗಲವಾಗಿ ಹತ್ತು ಯೋಜನ ಪ್ರದೇಶದಲ್ಲಿ ಸೇತುವೆ ಭಿನ್ನವಾಗಿ ಮಾನವರಿಗೆ ನಡೆಯಲು ಬಾರದಂತಾಯಿತು. ಅನಂತರ ರಾಮನು ಸಮುದ್ರದ ಈಚೆಯ ದಂಡೆಗೆ ಬಂದು ಅಲ್ಲಿರುವ ರಾಮೇಶ್ವರನನ್ನು ಪೂಜಿಸಿದನು. ಮತ್ತು ಆ ಸಮುದ್ರಕ್ಕೆ 'ನೀನು ಹೆಚ್ಚಿನ ಗರ್ಜನೆ ಮಾಡಕೂಡದು, ಮತ್ತು ಪ್ರವಾಹವನ್ನು ಹರಿಸಕೂಡದು' ಎಂದು ನಿಷೇಧ ಮಾಡಿದನು. ಕೂಡಲೆ ಅಂತರಿಕ್ಷದಿಂದ ಅಶರೀರವಾಣಿ ಕೇಳಿಬಂದಿತು. ಅದು ಶಿವನದೇ ಧ್ವನಿಯಾಗಿತ್ತು.

**ರುದ್ರ :-** ರಾಮನೇ, ನಿನಗೆ ಕಲ್ಯಾಣವಾಗಲಿ, ಈ ಎಲ್ಲ ಜಗತ್ತು ಹಾಗೂ ಈ ಭೂಲೋಕವು, ಹಾಗೂ ನೀನು ರಚಿಸಿರುವ ಈ ಸೇತುವೆ ಇರುವವರೆಗೆ ನಾನು ಇದೇ ಸ್ಥಳದಲ್ಲಿ ಇರುವೆನು.

ಮಹಾದೇವನ ಈ ವಚನವನ್ನು ಕೇಳಿ ಶ್ರೀರಾಮನು ಸಂತುಷ್ಟನಾಗಿ ಶಿವನನ್ನು ಸ್ತೋತ್ರಮಾಡಿದನು.

**॥ರಾಮ ಉವಾಚ॥**

**ನಮಸ್ತೇ ದೇವ ದೇವೇಶ ಭಕ್ತಾನಾಂ ಅಭಯಂಕರ ।**
**ಗೌರೀಕಾಂತ ನಮಸ್ತುಭ್ಯಂ ದಕ್ಷಯಜ್ಞ ವಿನಾಶನ ॥**

**ನಮಃ ಶರ್ವಾಯ ರುದ್ರಾಯ ಭವಾಯ ವರದಾಯಚ ।**
**ಪಶೂನಾಂ ಪತಯೇ ನಿತ್ಯಮುಗ್ರಾಯ ಚ ಕಪರ್ದಿನೇ ॥**

**ಮಹಾದೇವಾಯ ಭೀಮಾಯ ತ್ರಂಬಕಾಯ ವಿಶಾಂಪತೇ ।**
**ಈಶಾನಾಯ ಭಗಘ್ನಾಯ ನಮೋऽಸ್ತ್ವಂಧಕ ಘಾತಿನೇ ॥**

**ನೀಲಗ್ರೀವಾಯ ಭೀಮಾಯ ವೇದಸೇ ವೇಧಸಾ ಸ್ತುತ ।**
**ಕುಮಾರಶತ್ರುವಿಘ್ನಾಯ ಕುಮಾರ ಜನನಾಯ ಚ ॥**

**ವಿಲೋಹಿತಾಯ ಧೂಮ್ರಾಯ ಶಿವಾಯ ಕ್ರಥನಾಯಚ ।**
**ನಿತ್ಯಂ ಶಶ್ಯಿಖಂಡಾಯ ಶೂಲಿನೇ ದಿವ್ಯತೇಜಸೇ ॥**

**ಪುಲಸ್ತ್ಯ:-** ಈ ದಿವ್ಯ ಸ್ತೋತ್ರವನ್ನು ಕೇಳಿ ಶಿವನಿಗೆ ಸಂತೋಷವಾಯ್ತು. ಅವನು ರಾಮನನ್ನು ಕುರಿತು ಹೇಳಿದನು. 'ರಾಮನೆ, ನಿನಗೆ ಕಲ್ಯಾಣವಾಗಲಿ. ನೀನು

**''ಭವಾನ್ ನಾರಾಯಣೋ ನೂನಂ ಗೂಢೋ ಮಾನುಷಯೋನಿಷು'**

ನೀನು ನಿಜವಾಗಿಯೂ ಸಾಕ್ಷಾತ್ ನಾರಾಯಣ ದೇವರೇ. ಮನುಷ್ಯ ಜಾತಿಯಲ್ಲಿ ಗುಪ್ತವಾಗಿ ದೇವಕಾರ್ಯ ಮಾಡಲು ಅವತಾರ ತಳೆದಿರುವಿ. ಆ ನಿನ್ನ ಅವತಾರದ ಕಾರ್ಯವು ನಿನ್ನಿಂದ ಪೂರ್ತಿ ನೆರವೇರಿಸಲ್ಪಟ್ಟಿದೆ. ಈಗ ನೀನು ನಿನ್ನ ಸ್ಥಾನವಾದ ವೈಕುಂಠಕ್ಕೆ ತೆರಳು. ಈ ಸಮುದ್ರದಲ್ಲಿ ನೀನು ಸ್ಥಾಪಿಸಿದ ನನ್ನ ಈ ರಾಮೇಶ್ವರ ಲಿಂಗವನ್ನು ದರ್ಶನ ಮಾಡಿದವರ ಪಾಪಗಳೆಲ್ಲವೂ ಪರಿಹಾರವಾಗುವವು. ಬ್ರಹ್ಮಹತ್ಯೆಯಂತಹ ಘೋರ ಪಾಪವಿದ್ದರೂ ಸರಿ ಎಂತಹ ದಾರುಣದುರಿತವಿದ್ದರೂ ನೀನು ಸ್ಥಾಪಿಸಿದ ಈ ರಾಮೇಶ್ವರನ ದರ್ಶನದಿಂದಲೇ ನಷ್ಟವಾಗುವವು.

ರಾಮನೇ ನೀನು ಮುಂದೆ ನಡೆ. ಗಂಗಾತೀರದಲ್ಲಿ ವಾಮನ ಮೂರ್ತಿಯನ್ನು ಸ್ಥಾಪನೆ ಮಾಡು. ಭೂಮಿಯಲ್ಲಿ ನಿನ್ನ ಎಂಟು ಸ್ಥಾನಗಳಲ್ಲಿ ನೀನು ಸನ್ನಿಹಿತನಾಗಿ ನಿನ್ನ ಮೂಲ ಸ್ಥಾನವಾದ ಶ್ವೇತದ್ವೀಪಕ್ಕೆ ಪ್ರಯಾಣ ಮಾಡು. 'ದೇವ ನಮೋಸ್ತುತೇ ಜಗಜ್ಜನ್ಮಾದಿ ಕಾರಣನೂ, ಕ್ರೀಡಾದಿಗುಣ ವಿಶಿಷ್ಟನೂ ಆದ ನಾರಾಯಣನೇ ನಿನಗೆ ನನ್ನ ನಮಸ್ಕಾರವಿರಲಿ. ಅನಂತರ ರಾಮನು ಪುಷ್ಕರ ಕ್ಷೇತ್ರಕ್ಕೆ ಬಂದನು. ಆ ತೀರ್ಥದ ಮೇಲ್ಗಡೆ ಅಂತರಿಕ್ಷದಲ್ಲಿ ಪುಷ್ಪಕ ವಿಮಾನವು ಬಂದಾಗ ಅದರ ಗತಿ ಕುಂಠಿತವಾಯಿತು. ಪುಷ್ಕರ ತೀರ್ಥದ ಮೇಲೆ ಚಲಿಸಲಿಕ್ಕಾಗದೆ ಆ ರಾಮನ ವಿಮಾನವು ನಿಂತುಬಿಟ್ಟಿತು. ಯಾರೋ ಕಟ್ಟಿಹಾಕಿದಂತೆ ಒಮ್ಮೆಲೇ, ಮುಗಿಲಿನ ಮಾರ್ಗದಲ್ಲಿ ಆಚೀಚೆ ಚಲಿಸದೆ ಮುನ್ನಡೆಯದೆ ಗಮನವು ಅವಿರುದ್ಧವಾಗಿ ವಿಮಾನವು ನಿಂತಿದ್ದನ್ನು ಕಂಡು ರಾಮನು ಸುಗ್ರೀವನನ್ನು ಕುರಿತು ಹೇಳಿದನು.

**ರಾಮ :-** ಸುಗ್ರೀವ ನಮ್ಮ ಆಕಾಶಯಾನವು ಒಮ್ಮೆಲೆ ತಡೆದು ನಿಲ್ಲ ಬೇಕಾದರೆ ಏನಾದರೂ ಕಾರಣವಿರಲೇಬೇಕು. ಅದನ್ನು ನೀನು ಕಂಡುಹಿಡಿ.

ಸುಗ್ರೀವನು ರಾಮನ ಆದೇಶದಿಂದ ಪುಷ್ಪಕ ವಿಮಾನದಿಂದ ಕೆಳಗಿಳಿದು ಬಂದನು. ಅಲ್ಲಿ ದೇವತೆಗಳಿಂದಲೂ ಸಿದ್ಧರಿಂದಲೂ ಒಡಗೂಡಿದ ನಾಲ್ಕು ಮೊಗದ ಬ್ರಹ್ಮ ದೇವರನ್ನು ಕಂಡನು. ಲೋಕಪಿತಾಮಹನಾದ ಬ್ರಹ್ಮನು ದೇವ, ಸಿದ್ಧ, ಬ್ರಹ್ಮರ್ಷಿ ಮುಂತಾದವರಿಂದ ಕೂಡಿಕೊಂಡು ಪುಷ್ಕರ ಕ್ಷೇತ್ರದಲ್ಲಿ ಕುಳಿತು ಕೊಂಡಿದ್ದನು. ಸುತ್ತಲೂ ಬ್ರಹ್ಮರ್ಷಿಗಳ ವೃಂದವು, ವೇದ ಪಾರಾಯಣ ಮಾಡುತ್ತಲಿತ್ತು. ಅದನ್ನು ನೋಡಿ ಸುಗ್ರೀವ ನಿಗೆ ವಿಮಾನ ಸ್ಥಗಿತವಾದುದರ ಕಾರಣ ತಿಳಿಯಿತು. ಅವನು ಪ್ರಭುವಿಗೆ ವಿಜ್ಞಾಪಿಸಿದನು.

**ಸುಗ್ರೀವ :-** ರಾಮ, ನಮ್ಮ ಪುಷ್ಪಕ ವಿಮಾನವು ಹೋಗುವ ದಾರಿಯ ಕೆಳಗಡೆ ಭೂಲೋಕದಲ್ಲಿ ನಾಲ್ಕು ವೇದಗಳ ಪಾರಾಯಣ ಮಾಡುವ ಬ್ರಹ್ಮ ಹಾಗೂ ಬ್ರಹ್ಮರ್ಷಿಗಳು ಕುಳಿತುಕೊಂಡಿದ್ದಾರೆ. ಅವರ ಮೇಲೆ ಅಂತರಿಕ್ಷದಲ್ಲಿಯೂ ಅವರನ್ನು ಉಲ್ಲಂಘಿಸಿ, ನಿನ್ನ ವಾಹನವು ಮುಂದುವರಿಯಲಾರದು'' ಎಂದನು. ಅದನ್ನು ಕೇಳಿ ರಾಮನು ಆಗಲೆ, ಗಾಯತ್ರಿ ಸಹಿತನಾದ ಬ್ರಹ್ಮದೇವರನ್ನು ನಮಸ್ಕರಿಸಿ, ಸ್ತೋತ್ರ ಮಾಡಿದನು.

**'ನಮಾಮಿ ಲೋಕಕರ್ತಾರಂ ಪ್ರಜಾಪತಿಸುರಾರ್ಚಿತಂ ।**
**ದೇವನಾಥಂ ಲೋಕನಾಥಂ ಪ್ರಜಾನಾಥಂ ಜಗತ್ಪತಿಂ ॥**
**ನಮಸ್ತೇ ದೇವದೇವೇಶ ಸುರಾಸುರ ನಮಸ್ಕೃತ ।**
**ಭೂತಭವ್ಯಭವನ್ನಾಥ ಹರ ಪಿಂಗಲಲೋಚನ ॥**

ರಾಮನು ಈ ರೀತಿಯಾಗಿ ಸ್ತೋತ್ರ ಮಾಡಿದ್ದನ್ನು ಕೇಳಿ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಅರ್ಥಾತ್ ರಾಮಜ್ಞಾನಿಗಳಲ್ಲಿ ಶ್ರೇಷ್ಠರಾದ ಚತುರ್ಮುಖ ಬ್ರಹ್ಮನು ಲೋಕ ದೃಷ್ಟಿಯಿಂದ ನಮಸ್ಕರಿಸಿ ನಿಂತು ರಾಮನೊಂದಿಗೆ ಮಾತನಾಡಿದನು.

**ಬ್ರಹ್ಮ :-** ರಾಮ, ನೀನು ಸಾಕ್ಷಾತ್ ವಿಷ್ಣುವು. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಮಾನವರ ದೇಹವನ್ನು ತಳೆದಿರುವೆ. ದೇವಕಾರ್ಯ ಸಾಧಿಸಲು ಭೂತಾಳದಲ್ಲಿ ಅವತರಿಸಿರುವೆ. ದೇವತಾಕಾರ್ಯ ನಿನ್ನಿಂದ ಸಮಗ್ರವಾಗಿ ಮಾಡಿ ಮುಗಿಸಲ್ಪಟ್ಟಿದೆ. ಭಾಗೀರಥೀ ನದಿಯ ದಕ್ಷಿಣ ತಟಾಕದಲ್ಲಿ ವಾಮನದೇವರನ್ನು ಸ್ಥಾಪನೆ ಮಾಡು. ಅಲ್ಲಿಂದ ಅಯೋಧ್ಯೆಗೆ ಹೋಗು. ಅನಂತರ ನೀನು ಸ್ವಸ್ಥಾನವನ್ನು ಕುರಿತು ಮಹಾ ಪ್ರಯಾಣವನ್ನು ಬೆಳೆಸು. ಬ್ರಹ್ಮದೇವರ ಈ ವಚನವನ್ನು ಕೇಳಿ ರಾಮನು ತನ್ನ ಸಮ್ಮತಿಯನ್ನು ಸೂಚಿಸಿದನು. ಬ್ರಹ್ಮನಿಂದ ನಿರೂಪ ತೆಗೆದುಕೊಂಡು ಪುಷ್ಪಕ ವಿಮಾನವನ್ನು ಆರೂಢನಾದನು ಶ್ರೀರಾಮಚಂದ್ರ.

ಅಲ್ಲಿಂದ ಮಥರಾ ಪಟ್ಟಣಕ್ಕೆ ತೆರಳಿದನು ಮಡದಿ ಮಕ್ಕಳೊಂದಿಗೆ ಶತ್ರುಘ್ನನು ಮಥುರಾಪುರಿಯಲ್ಲಿಯೇ ನೆಲೆಸಿದ್ದನು. ರಾಮ ಹಾಗೂ ಭರತ ಇಬ್ಬರೂ ಕೂಡಿ ಸುಗ್ರೀವನೊಂದಿಗೆ ತನ್ನ ಮನೆಗೆ ಬಂದುದನ್ನು ಕಂಡು, ಶತ್ರುಘ್ನನಿಗೆ ಪರಮಾನಂದವಾಯಿತು ಇಂದ್ರ, ಉಪೇಂದ್ರರು ಕೂಡಿ ಬಂದಿರುವರೆಂಬ ಭಾವನೆಯಿಂದ ಅವನು ಸಂತಸ ಸಂಭ್ರಮದ ಸ್ವಾಗತ ನೀಡಿದನು. ನೆಲದುದ್ದ ಅಡ್ಡ ಬಿದ್ದು ಅವರ ಅಡಿದಾವರೆಗಳಿಗೆ ತನ್ನ ತಲೆ ಚಾಚಿದನು. ರಾಮನು ಪ್ರೀತಿಯಿಂದ ಬಂಧು ಶತ್ರುಘ್ನನನ್ನು ಎಬ್ಬಿಸಿ ಮೈದಡವಿದನು. ತೊಡೆಯ ಮೇಲೆ ಕೂಡಿಸಿಕೊಂಡು ಮೈಮೇಲೆ ಕೈಯಾಡಿಸಿದನು.

ಅನಂತರ ಶತ್ರುಘ್ನನು ಭರತನನ್ನು ಬಳಿಕ ಸುಗ್ರೀವನನ್ನು ಪ್ರೀತಿಯಿಂದ ಬಿಗಿದಪ್ಪಿ ಆಸನ ಕೊಟ್ಟು ಕೂಡಿಸಿದನು. ಅರ್ಘ್ಯ, ಪಾದ್ಯಾದಿಗಳಿಂದ ರಾಮನ ಪೂಜೆಮಾಡಿದನು. ಸಮಾಚಾರ ಕೇಳಿ ಮಥುರಾ ನಗರ ನಿವಾಸಿಗಳಾದ ನಾಗರಿಕರೆಲ್ಲರೂ ಹಿಂಡು ಹಿಂಡಾಗಿ ಬಂದರು ರಾಮನನ್ನು ನೋಡುವ ತವಕದಿಂದ. ದ್ವಿಜರೇ ಮೊದಲಾದ ಎಲ್ಲ ಜಾತಿ ಜನಾಂಗದ ಜನರೆಲ್ಲರೂ ಜಗದೀಶ್ವರನನ್ನು ಕಾಣಲು ಭಕ್ತಿಯುಕ್ತರಾಗಿ ಅಲ್ಲಿಗೆ ಆಗಮಿಸಿದರು. ಬಂದ ಜನರನ್ನೆಲ್ಲ ರಾಮನು ಅಂತಃಕರಣದಿಂದ ಮಾತನಾಡಿಸಿದನು. ದ್ವಿಜರೊಡನೆ ಶಾಸ್ತ್ರಾರ್ಥಗಳನ್ನು ವಿಚಾರಿಸಿದನು. ಹೀಗೆ ಐದು ದಿನ ಮಥುರಾ ನಗರಿಯಲ್ಲಿ

ಉಳಿದು ಅನಂತರ ಅಲ್ಲಿಂದ ಹೊರಡಲು ನಿರ್ಧರಿಸಿದನು ಶ್ರೀ ರಾಮ. ಆಗ ಶತ್ರುಘ್ನನು ತನ್ನ ಬಳಿಯಲ್ಲಿರುವ ಆನೆ, ಕುದುರೆ ಮತ್ತು ವಜ್ರ, ವೈಢೂರ್ಯ, ಬಂಗಾರ ಮಂತಾದ ಬೆಲೆ ಬಾಳುವ ವಸ್ತುಗಳನ್ನು ರಾಮನಿಗೆ ಅರ್ಪಿಸಿದನು. ಅದನ್ನು ಕಂಡು ಸಂತೋಷಗೊಂಡು ರಾಮನು ನುಡಿದನು.

**ರಾಮ :-** ತಮ್ಮಾ ಶತ್ರುಘ್ನ, ನಿನ್ನ ಔದಾರ್ಯದಿಂದ ಪ್ರೀತನಾಗಿದ್ದೇನೆ. ನಿನ್ನ ಭಕ್ತಿಯಂದ ನಾನು ಅತ್ಯಂತ ಸಂತೋಷಗೊಂಡಿದ್ದೇನೆ. ಅದಕ್ಕಾಗಿಯೇ ನೀನು ಕೊಟ್ಟ ಸಂತೋಷದ ಕಾಣಿಕೆ ಅಂಗೀಕರಿಸಿದ್ದೇನೆ. ಆದುದರಿಂದ ಇನ್ನು ಮೇಲೆ ನಾನು ಕೊಡಲಿರುವ ಪ್ರೀತಿಯಕಾಣಿಕೆಯನ್ನು ಬೇಡವೆನ್ನಕೂಡದು.

''ಇದೀಗ ನೀನು ನನಗೆ ಕೊಟ್ಟ ಧನ, ಕನಕ, ರಾಜ್ಯ, ಅಧಿಕಾರ ಐಶ್ವರ್ಯ ಮೊದಲಾದುದನ್ನೆಲ್ಲ ನಾನು ನಿನಗೆ ಮರಳಿಕೊಡುತ್ತಲಿದ್ದೇನೆ. ಇದನ್ನು ನೀನು ಸ್ವೀಕರಿಸು ಈ ನಿನ್ನ ಇಬ್ಬರೂ ಮಕ್ಕಳನ್ನು ಮಥುರಾ ಪಟ್ಟಣದಲ್ಲಿ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡು.'' ಹೀಗೆ ಹೇಳಿ, ರಾಮನು ಗಂಗಾ ತೀರಕ್ಕೆ ದಯಮಾಡಿಸಿದನು. ಭಾಗೀರಥಿ ತಟಾಕದಲ್ಲಿರುವ ಮಹೋದ ಎಂಬಲ್ಲಿ ವಿಧಿ ಪೂರ್ವಕವಾಗಿ ವಾಮನದೇವರ ಪ್ರತಿಷ್ಠಾಪನೆ ನೆರವೇರಿಸಿದನು. ಅಲ್ಲಿ ನೆರೆದ ಬ್ರಹ್ಮಜ್ಞರು ಹಾಗೂ ರಾಜರನ್ನು ಕುರಿತು ಶ್ರೀರಾಮನು ಸಂದೇಶ ನೀಡಿದನು.

**ರಾಮ :-** ನಾನು ಒಂದು ಧರ್ಮಸೇತುವನ್ನು ನಿರ್ಮಿಸಿದ್ದೇನೆ. ಇದು ಜನರ ಉತ್ತರೋತ್ತರ ಕಲ್ಯಾಣವನ್ನುಂಟು ಮಾಡುವದು. ಎಂತಹ ಕಾಲ ಬಂದರೂ ಈ ಧರ್ಮಸೇತುವನ್ನು ಎಲ್ಲರೂ ಪಾಲಿಸಲೇಬೇಕು. ಧರ್ಮಕ್ಕೆ ಲೋಪ ಬಾರದಂತೆ ಎಲ್ಲರೂ ನೋಡಿಕೊಳ್ಳಬೇಕು. ಎಲ್ಲ ಜನರಿಗೂ ನಾನು ಕೈಯೆತ್ತಿ ಕೇಳಿಕೊಳ್ಳುತ್ತೇನೆ. ಧರ್ಮಕ್ಕೆ ಕುಂದು ಬರುವಂತೆ ಯಾರು ನಡೆಯಬೇಡಿರಿ. ವಿಹಿತ ಧರ್ಮವನ್ನು ಎಲ್ಲರೂ ಆಚರಿಸಿರಿ. ಯಜ್ಞಗಳನ್ನು ಆಚರಿಸಿ. ಬೇಸರಿಯದೆ ಅನುದಿನವೂ ದೇವರ ಪೂಜೆ ಮಾಡಿರಿ.

ಹೀಗೆ ಹೇಳಿ, ರಾಮನು ಅಲ್ಲಿರುವ ವಿದ್ವಾಂಸರಿಗೆ ಅನೇಕ ಗ್ರಾಮಗಳನ್ನು ಉಂಬಳಿ ಹಾಕಿ ಕೊಟ್ಟನು ಮತ್ತು ಲಂಕಾ ಪಟ್ಟಣದಿಂದ ತಾನು ತಂದ ಹಣವನ್ನೆಲ್ಲ ಅಲ್ಲಿರುವ ಜನರಿಗೆ ಹಂಚಿಬಿಟ್ಟನು. ಹೀಗೆ ವಾಮನ ಪ್ರತಿಷ್ಠೆಗೆ ದಾನ ದಕ್ಷಿಣೆಯಿತ್ತು ರಘುಪತಿಯು ಕಪಿಗಳ ಅರಸನಾದ ಸುಗ್ರೀವನನ್ನು ಕಿಷ್ಕಿಂಧಾ ಪಟ್ಟಣಕ್ಕೆ ಕಳಿಸಿಕೊಟ್ಟನು. ಅನಂತರ ಅಯೋಧ್ಯಾ ಪಟ್ಟಣಕ್ಕೆ ಆಗಮಿಸಿದನು. ಅಲ್ಲಿಗೆ ಬಂದ ಬಳಿಕ ಪುಷ್ಪಕ ವಿಮಾನಕ್ಕೆ ಅದರ ಒಡೆಯನಾದ ಕುಬೇರನ ಬಳಿಗೆ ಹೋಗಲು ಆದೇಶವಿತ್ತನು. ''ಇನ್ನು ಮೇಲೆ ನನ್ನಕಡೆಗೆ ಬರುವದು ಬೇಡವೆಂದು'' ತಿಳಿಸಿದನು. ಹೀಗೆ ಪ್ರಭು ರಾಮಚಂದ್ರನು ತಾನು ಮಾಡಬೇಕಾದ ಕಾರ್ಯಗಳನ್ನು ಮಾಡಿ, ಕೃತಕೃತ್ಯನಾಗಿ ಅಯೋಧ್ಯೆಯಲ್ಲಿ ನೆಲೆಸಿದನು.

**ಪುಲಸ್ತ್ಯ:-** ಭೀಷ್ಮನೆ, ಶ್ರೀರಾಮ ಕಥಾ ನಿರೂಪಣೆಯ ಸಂದರ್ಭದಿಂದ ವಾಮನ ದೇವರ ಉತ್ಪತ್ತಿಯ ವಿಷಯವಾಗಿ ನಾನು ನಿನಗೆ ಹೇಳಿದೆನು. ಮತ್ತೆ ನೀನು ಏನು ಕೇಳ ಬಯಸುವೆ? ನಿನಗೆ ಯಾವ ವಿಷಯ ತಿಳಿಯುವ ಕುತೂಹಲವಿದೆ ಹೇಳು? ಅದೆಲ್ಲವನ್ನು ಅರಹುತ್ತೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ ರಾಮಮಾಡಿದ ವಾಮನ ಸ್ಥಾಪನೆ ೩೮ನೇ ಅಧ್ಯಾಯ ಮುಗಿದುದು*

—o—

**॥ ಭೀಷ್ಮ ಉವಾಚ ॥**

**ಕಥಿತಂ ರಾಮದೇವಸ್ಯ ಮಾಹಾತ್ಮ್ಯಂ ವಿಸ್ತರೇಣ ವೈ ।**
**ಪುನಸ್ತಸ್ಯೈವ ಮಾಹಾತ್ಮ್ಯಂ ವಿಷ್ಣೋರೇವ ವದಸ್ವ ಮೇ ॥**

**ಭೀಷ್ಮ:-** ಪೂಜ್ಯರೆ, ನೀವು ವಿಷ್ಣುವಿನ ಅವತಾರವಾದ ರಾಮದೇವರ ಮಹಿಮೆಯನ್ನು ಬಿತ್ತರಿಸಿ ಹೇಳಿದಿರಿ. ಈಗ ಅದೇ ವಿಷ್ಣುವಿನ ಮಹಾಮಹಿಮೆಯನ್ನು ನನಗೆ ಮತ್ತೆ ಹೇಳಿರಿ.

ಈ ಪ್ರಪಂಚವೆಲ್ಲವೂ ಬಂಗಾರದ ಕಮಲರೂಪದಿಂದ ನಿರ್ಮಾಣಗೊಂಡಿದ್ದು ಎಂದು ? ಹೇಗೆ? ಆ ಹೇಮಪದ್ಮದಲ್ಲಿ ವೈಷ್ಣವೀ ಸೃಷ್ಟಿಯು ಆದುದು, ಎಂತು ? ಪದ್ಮಕಲ್ಪದಲ್ಲಿ ಏಕಾರ್ಣವ ಸಾಗರದಲ್ಲಿ ಪವಡಿಸಿದ ಶ್ರೀಹರಿಯ ನಾಭಿಯಿಂದ ಈ ಪ್ರಪಂಚರೂಪವಾದ ಪದ್ಮವು ಉದ್ಭವಿಸಿದುದು ಹೇಗೆ? ಆ ಪದ್ಮಗರ್ಭದಲ್ಲಿ ದೇವತೆಗಳು ಋಷಿಗಳು ಹಾಗೂ ಚರಾಚರ ಜಗತ್ತು ಜನಿಸಿದ ಬಗೆ ಹೇಗೆ?

ಈ ಎಲ್ಲ ಭಗವಂತನ ಮಹಿಮೆಯನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಿಲ್ಲ. ಸರ್ವೇಶ್ವರನಾದ ಶ್ರೀಹರಿಯು ಎಷ್ಟುಕಾಲ ಮಲಗುತ್ತಾನೆ. ಯಾವಾಗ ಏಳುತ್ತಾನೆ. ಎದ್ದ ಬಳಿಕ ಈ ವಿಶ್ವವನ್ನೆಲ್ಲ ಹೇಗೆ ನಿರ್ಮಿಸುತ್ತಾನೆ? ಮೊದಲು ಪ್ರಜಾಪತಿಗಳು ಯಾರಾರು, ಇದ್ದರು? ಇವೆಲ್ಲ ನಾರಾಯಣನ ಯಶೋಗಾನ ರೂಪವಾದ ವಿಶ್ವದ ಸೃಷ್ಟಿಸ್ಥಿತ್ಯಾದಿ ಇತಿಹಾಸವನ್ನು ಶ್ರದ್ಧೆಯಿಂದ ಕೇಳ ಬಯಸುವೆ ನನಗೆ ತಿಳಿಸಿ ಹೇಳಿರಿ.

**ಪುಲಸ್ತ್ಯ:-** ಕುರುಕುಲ ಭೀಷಣನಾದ ಭೀಷ್ಮನೆ ಒಳ್ಳೇ ವಂಶದಲ್ಲಿ ಜನಿಸಿದ ನಿನಗೆ ಶ್ರೀ ನಾರಾಯಣನ ಕೀರ್ತಿಯ ಮಹಿಮೆಯನ್ನು ಕೇಳಬೇಕೆಂಬ ಕುತೂಹಲ ಹುಟ್ಟಿದ್ದು ಯೋಗ್ಯವೇ. ಆದಿಪುರಾಣಗಳಲ್ಲಿ ಓದಿ, ದೇವತೆಗಳಿಂದ ಕೇಳಿ ಹಾಗೂ ಪುರಾಣ ಪ್ರವಚನಕಾರರ ಮುಖದಿಂದ ಶ್ರವಣಮಾಡಿ, ತಮ್ಮ ತಪಃಶಕ್ತಿಯಿಂದ ದರ್ಶನ ಮಾಡಿಕೊಂಡು, ಜಗದ್ಗುರು ವೇದವ್ಯಾಸರು ಈ ಎಲ್ಲ ಇತಿಹಾಸವನ್ನು ಬರೆದಿಟ್ಟಿದ್ದಾರೆ. ಈ ವಿಷಯವನ್ನು ನಾನು. ಅದೇ ಶ್ರೀ ವ್ಯಾಸರ ಮುಖದಿಂದ ಕೇಳಿ ನನಗೆ ತಿಳಿದಂತೆ ನಿನಗೆ ಹೇಳುತ್ತೇನೆ. ನಾನೊಬ್ಬ ಸಾಮಾನ್ಯ ಋಷಿ, ನಾನು ಆ ನಾರಾಯಣ ಮಹಿಮೆಯನ್ನು ಪೂರ್ಣ ತಿಳಿಯಲು ಹೇಗೆ ಸಮರ್ಥನಾದೇನು? ಅವನ ಮಹಿಮೆಯನ್ನು ಸಾಕಲ್ಯವಾಗಿ ತಿಳಿಯಲು ನನ್ನ ಅಪ್ಪ ಬ್ರಹ್ಮನಿಗೂ ಸಾಧ್ಯವಿಲ್ಲ.

**ಕಸ್ತಮತ್ಸಹತೇ ಜ್ಞಾತುಂ ಪರಂ ನಾರಾಯಣಾತ್ಮಕಂ**

ನನ್ನ ತಂದೆಯಾದ ಬ್ರಹ್ಮದೇವನು ಕೂಡ, ನಾರಾಯಣ ರೂಪಿಯಾದ ಪರತತ್ತ್ವವನ್ನು ಸಮಗ್ರವಾಗಿ ತಿಳಿಯಲಾರನು. ಎಲ್ಲ ದೇವತೆಗಳ ಧರ್ಮಕರ್ಮಗಳಿಗೆಲ್ಲ ಗುರಿ ಶ್ರೀ ಹರಿ. ಋಷಿಗಳ ರಹಸ್ಯವೇ ಅದು. ಸರ್ವ ಯಜ್ಞಗಳಲ್ಲಿ ನೀಡಲಾಗುವ ಆಹುತಿ, ಆಹ್ವಾನಗಳಿಗೆಲ್ಲ ಏಕಮಾತ್ರ ರಕ್ಷಕನೆಂದರೆ ಶ್ರೀ ಹರಿ. ಅವನು ಸರ್ವಕಾರಕ ಓಂಕಾರ ಪ್ರತಿಪಾದ್ಯ. ಸರ್ವಕಾರಣ ಮೂರ್ತಿ ಎಲ್ಲ ಜೀವದಿಂದ ಕರ್ಮ ಮಾಡಿಸುವವನು ಅವನೇ, ಅವನಿಗೆ ಮಾತ್ರ ಬೇರೆ ಮಾಡಿಸುವವನು ಅಥವಾ ಶಾಸಕನು ಯಾರು ಇಲ್ಲ ಎಲ್ಲ ಯಜ್ಞ ಯಾಗಾದಿಗಳ ಪುಣ್ಯ ಉದ್ದೇಶ ಆ ವಿಷ್ಣುವೇ ಆಗಿದ್ದಾನೆ.

ಕೃತ, ತ್ರೇತಾ, ದ್ವಾಪರ, ಕಲಿಯುಗ ಎಂದು ನಾಲ್ಕು ಯುಗಗಳು. ದೇವಮಾನದಿಂದ ಸಾವಿರ ವರ್ಷ ಉಳ್ಳದ್ದಾಗಿದೆ ಕೃತಯುಗ. ಈ ಕೃತಯುಗದ ಆದಿ ಹಾಗೂ ಅಂತ್ಯ ಭಾಗಗಳಲ್ಲಿ ಇನ್ನೂರು ವರ್ಷಗಳಷ್ಟು ಸಂಧ್ಯಾಕಾಲವಿರುತ್ತದೆ. ಕೃತಯುಗ ಮುಗಿದ ಬಳಿಕ ಮತ್ತೆ ಎರಡನೂರು ವರ್ಷ ಸಂಧಿಕಾಲ. ಹೀಗೆ ಕೃತಯುಗದ ಆದಿ ಅಂತ್ಯಗಳ ಭಾಗದ ಸಂಧ್ಯಾಂಶ ಸೇರಿಸಿ ಒಟ್ಟು ಕೃತಯುಗದ ಸಂಧ್ಯಾಕಾಲವು ನಾಲ್ಕುನೂರು ವರ್ಷಗಳ ಅವಧಿ ಇರುತ್ತದೆ. ಕೃತಯುಗದಲ್ಲಿ ಧರ್ಮವು ಪರಿಪೂರ್ಣ ರೂಪದಲ್ಲಿದ್ದು ನಾಲ್ಕು ಪಾದಗಳಿಂದಾಗುತ್ತದೆ. ಜನರು ಧರ್ಮಾಸಕ್ತರಾಗಿ, ಶಾಂತಿಯಿಂದ ಇರುವರು. ಬ್ರಾಹ್ಮಣರು ಧರ್ಮ ಕರ್ಮಗಳಲ್ಲಿ ಕ್ಷತ್ರಿಯರು ಲೋಕ ರಕ್ಷಣೆ ಕಾರ್ಯದಲ್ಲಿ, ವೈಶ್ಯರು ವ್ಯಾಪಾರ ಉದ್ಯೋಗಗಳಲ್ಲಿ ಶೂದ್ರರು ಬೇಸಾಯದಲ್ಲಿ ಹಾಗೂ ಉಚ್ಚವರ್ಣದವರ ಸೇವೆಗಳಲ್ಲಿ ಆಸಕ್ತರಾಗಿರುತ್ತಾರೆ. ಸತ್ಯ, ಶಾಂತಿ ಧರ್ಮ, ಶೌಚ ಇದೆಲ್ಲವೂ ಈ ಪ್ರಥಮ ಯುಗದಲ್ಲಿ ವಿಪುಲವಾಗಿರುತ್ತದೆ. ಧರ್ಮಾಭಿವೃದ್ಧಿಯು ಆ ಕಾಲದಲ್ಲಿ ಆಗುತ್ತಲೇ ಇರುವದು. ಜನರೆಲ್ಲರೂ ಧರ್ಮನಿಷ್ಠರಾಗಿ ನಡೆಯುವರು. ಆ ಕಾಲದ ಜನರೆಲ್ಲರೂ ಧರ್ಮ ಶೀಲರು ಕೀಳು ಕುಲದಲ್ಲಿ ಹುಟ್ಟಿದವರೂ ಆ ಧರ್ಮಶೀಲರೇ.

ದೇವಮಾನವ ಮೂರು ಸಾವಿರ ವರ್ಷಗಳು ತ್ರೇತ್ರಾಯುಗವೆಂದು ಕರೆಯಲ್ಪಡುತ್ತವೆ. ಆ ಯುಗಕ್ಕೂ ನೂರು ನೂರು ವರ್ಷಗಳ ಪೂರ್ವಾಪರ ಸಂಧ್ಯಾಕಾಲಗಳುಂಟು. ಆಗ ಅಧರ್ಮವು ಎರಡು ಪಾಲು, ಧರ್ಮವು ಮೂರು ಪಾಲು ಇರುತ್ತದೆ. ಸತ್ಯ, ಧರ್ಮ, ಶೌಚ ಇರುತ್ತದೆ. ತ್ರೇತಾಯುಗದಲ್ಲಿ ಲೋಭದಿಂದ ಉಚ್ಚವರ್ಣದವರು ವಿಕಾರಹೊಂದಿ, ದುರ್ಬಲರಾಗುತ್ತಾರೆ. ವರ್ಣಾಶ್ರಮಗಳು ಕ್ಷೀಣವಾಗುತ್ತವೆ. ವರ್ಣಾಶ್ರಮ ಧರ್ಮಗಳು, ಪುಣ್ಯಕರ್ಮಗಳು ದುರ್ಬಲವಾಗುತ್ತವೆ. ಇದು ತ್ರೇತಾಯುಗದ ದೇವಸಂಕಲ್ಪದ ಗತಿ. ದ್ವಾಪರ ಯುಗದ ಅವಧಿ ಎರಡು ಸಾವಿರ ವರ್ಷ, ಪೂರ್ವಾಪರ ಭಾಗಗಳಲ್ಲಿ ನೂರು ನೂರು ವರ್ಷಗಳ ಸಂಧ್ಯಾಕಾಲವು ಇರುತ್ತದೆ. ಆ ಸಂಧ್ಯಾಕಾಲದಲ್ಲಿ ಜನರು ದ್ರವ್ಯದ ಆಶೆಯಿಂದ ರಾಜಸ ಸ್ವಭಾವದವರಾಗಿರುತ್ತಾರೆ. ಈ ಕಾಲದಲ್ಲಿ ಜನರು ಕರುಣಾಶೂನ್ಯರು! ಕ್ಷುದ್ರವಿಚಾರದವರು, ಮೂರ್ಖರು ಆಗಿರುತ್ತಾರೆ. ಆಗ ಧರ್ಮ ಎರಡು ಪಾಲಿರುವದು, ಅಧರ್ಮ ಮೂರು ಪಾಲಿನಷ್ಟು.

ಕಲಿಯುಗದಲ್ಲಿ ಬಹುವಿಧವಾಗಿ ಧರ್ಮನಾಶ. ಬ್ರಾಹ್ಮಣ್ಯದ ಕ್ಷಯ. ಜನರೋ ನಾಸ್ತಿಕರು. ಜನರಲ್ಲಿ ಅಸ್ತಿಕ್ಯವು ಇರುವದಿಲ್ಲ. ವ್ರತೋಪವಾಸಗಳನ್ನು ಆಚರಿಸುವುದಿಲ್ಲ. ಇದರ ಅವಧಿ ಒಂದು ಸಾವಿರ ವರ್ಷ. ಸಂಧ್ಯಾಕಾಲದ ಎರಡು ನೂರು ಸೇರಿ ಒಟ್ಟು ಹನ್ನೆರಡು ನೂರು ವರ್ಷ. ಈ ಕಾಲದಲ್ಲಿ ಕಲಿಯು ಬಹಳ ಕ್ರೂರನಾಗಿ ವರ್ತಿಸುವನು. ಅಧರ್ಮವು ನಾಲ್ಕು ಪಾಲು. ಧರ್ಮವು ಒಂದು ಪಾಲು ಇರುತ್ತದೆ.

**ಕಾಮಿನಸ್ತಾಮಸಾಃ ಕ್ಷುದ್ರಾಃ ಜಾಯಂತೇ ಯತ್ರ ಮಾನವಾಃ ।**
**ನೈವಾತ್ರ ಸಾಧಕಃ ಕಶ್ಚಿನ್ನ ಸಾಧುರ್ನ ಚ ಸತ್ಯವಾಕ್ ॥**

ಮನುಷ್ಯರು ಕಾಮಿಗಳಾಗಿಯೂ, ತಮೋಗುಣವಂತರಾಗಿಯೂ ಕ್ಷುದ್ರರಾಗಿಯೂ ಆಗುತ್ತಾರೆ. ಯೋಗಾಭ್ಯಾಸ ಸಾಧಕನು ಒಬ್ಬನೂ ಇರುವುದೇ ಇಲ್ಲ. ಸಾಧುವಾದು ವಾಗಲಿ. ಸತ್ಯವಂತನಾಗಲಿ ಇರುವದೇ ಇಲ್ಲ.

**ನಾಸ್ತಿಕಾ ಬ್ರಾಹ್ಮಣಾ ಭಕ್ತಾ ಜಾಯಂತೇ ಯತ್ರ ಮಾನವಾಃ ।**
**ಅಹಂಕಾರಗೃಹೀತಾಶ್ಚ ಪ್ರಕ್ಷೀಣಸ್ನೇಹಬಂಧನಾಃ ॥**

ಮತ್ತು ನಾಸ್ತಿಕರೂ, ಧರ್ಮ ದ್ವಿಜರಲ್ಲಿ ಭಕ್ತಿಯಿಲ್ಲದವರೂ ಆಗುತ್ತಾರೆ. ಅಹಂಕಾರಿಗಳೂ, ಸ್ನೇಹವಿಲ್ಲದವರೂ ಕೂಡ ಆಗುತ್ತಾರೆ.

**ವಿಪ್ರಾಃಶೂದ್ರ ಸಮಾಚಾರಾ ಸಂತಿ ಸರ್ವೇ ಕಲೌ ಯುಗೇ ।**
**ಆಶ್ರಮಾಣಾಂ ವಿಪರ್ಯಾಸಃ ಕಲೌ ಸಂಪ್ರತಿ ವರ್ತತೇ ॥**

ದ್ವಿಜರೆಲ್ಲರೂ ಶೂದ್ರರ ಆಚಾರವುಳ್ಳವರಾಗುತ್ತಾರೆ. ಕಲಿಯುಗದಲ್ಲಿ ಆಶ್ರಮಗಳು ಬಹು ವ್ಯತ್ಯಯದಿಂದ ಇರುತ್ತವೆ.

**ವರ್ಣಾನಾಂ ಚೈವ ಸಂದೇಹೋ ಯುಗಾಂತೇ ಕುರುನಂದನ ।**
**ಏಷಾ ದ್ವಾದಶಸಾಹಸ್ರೀ ಯುಗಾಖ್ಯಾಂ ಪೂರ್ವವನ್ನಿರ್ಮಿತಾ ॥**

ಯುಗಾಂತ್ಯದಲ್ಲಿಯಂತೂ ವರ್ಣನೆಗಳು ತಿಳಿಯದಂತೆ ಆಗುತ್ತವೆ. ಈ ರೀತಿಯಾಗಿ ಹನ್ನೆರಡು ಸಾವಿರ ವರ್ಷಗಳ ನಾಲ್ಕು ಯುಗಗಳು ದೇವರಿಂದ ನಿರ್ಮಿತವಾಗಿವೆ.

ಹೀಗೆ ಹನ್ನೆರಡು ಸಾವಿರ ವರ್ಷಗಳ ನಾಲ್ಕು ಯುಗಗಳು ಪರಮಾತ್ಮನಿಂದ ನಿರ್ಮಿತವಾಗಿವೆ. ಇಂತಹ ನಾಲ್ಕು ಯುಗಗಳು ಕೂಡಿದರೆ ಮಹಾಯುಗವಾಗುವದು. ಇಂತಹ ಸಾವಿರ ಮಹಾಯುಗಗಳು ಕೂಡಿದಾಗ ಬ್ರಹ್ಮದೇವರಿಗೆ ಒಂದು ಹಗಲು ಆಗುತ್ತದೆ. ಆ ಹಗಲಿನ ಅವಧಿಯು ಪೂರ್ತಿ ಆದಾಗ ನಂತರದಲ್ಲಿ ಕಾಲರೂಪಿಯಾದ ಪರಮಾತ್ಮನು ತನ್ನಿಂದ ಸೃಷ್ಟಿಯಾದ ಪ್ರಪಂಚದ ಸಂಹಾರಕ್ಕಾಗಿ ಮನಸ್ಸು ಮಾಡುತ್ತಾನೆ. ದೇವ, ದೈತ್ಯ, ದ್ವಿಜ. ಯಕ್ಷ, ರಾಕ್ಷಸ, ಪಶು. ಪಕ್ಷಿ, ಕ್ರಿಮಿ, ಕೀಟ, ಪರ್ವತ, ನದಿ ಮುಂತಾದವುಗಳನ್ನೆಲ್ಲ ಮತ್ಯುಭೂತನಾಗಿ ಸಂಹರಿಸಲು ಉಪಕ್ರಮಿಸತ್ತಾನೆ. ಆದೇ ಕಾಲರೂಪಿ ಪರಮಾತ್ಮನು ಸೂರ್ಯನಾಗಿ ಕಿಡಿ ಕಿರಣಗಳನ್ನು ತೂರಾಡಿ ಅಗ್ನಿಯಾಗಿ ಲೋಕಗಳನ್ನೆಲ್ಲ ದಹಿಸುತ್ತಾನೆ ಮೇಘವಾಗಿ ಭಯಂಕರ ವೃಷ್ಟಿಗರೆದು ಎಲ್ಲವನ್ನೂ ಮುಳುಗಿಸಿ ಬಿಡುತ್ತಾನೆ. ನಾರಾಯಣನ ಸನ್ನಿಧಾನದಿಂದ ಸೂರ್ಯನು ಬಾವಿ, ಕೆರೆ, ನದಿ ಹಾಗೂ ಸರ್ವ ಸಮುದ್ರ ನೀರುಗಳನ್ನೆಲ್ಲ ಶೋಷಿಸಿ, ಸೆಲೆಗಳನ್ನೆಲ್ಲ ಶೋಷಿಸಿ, ರಸಗಳನ್ನೆಲ್ಲ ಹೀರಿ, ವಿಶ್ವವನ್ನೆಲ್ಲ ಒಣಗಿಸಿಬಿಡುತ್ತಾನೆ. ಪ್ರಾಣಿಗಳ ದೇಹದಲ್ಲಿ ಮೂತ್ರ, ಬೆವರು, ವೀರ್ಯ ಎಲ್ಲವನ್ನೂ ಹೀರಿ, ಪಾತಾಳದವರೆಗೂ ಬ್ರಹ್ಮಾಂಡವನ್ನೇ ಶೋಷಿಸುತ್ತಾನೆ. ಅನಂತರ ವಾಯುವಿನಲ್ಲಿ ಅಂತರ್ಗತನಾಗಿ, ಪ್ರಾಣ ಆಪಾನ, ವ್ಯಾನ, ಉದಾನ, ಸಮಾನ, ಮುಂತಾದ ವಾಯುಗಳೆಲ್ಲ ಸೆಳೆದುಕೊಳ್ಳುತ್ತಾನೆ. ಆ ವಾಯು ಮತ್ತು ಅಗ್ನಿ ಇವೆರಡರ ಜೊತೆಗೆ ಸೂರ್ಯರಶ್ಮಿಗಳೂ ಸೇರಿಕೊಂಡು ಮರ, ಗಿರಿ, ದರಿ, ಪೊದರು, ಬಳ್ಳಿ ಹುಲ್ಲುಗಾವಲು, ಮನೆ ಮಠ, ಗ್ರಾಮ, ನಗರ ಎಲ್ಲವೂ ಸುಟ್ಟು ಬೂದಿಯಾಗುವವು.

ಅನಂತರ ಸಹಸ್ರಾಕ್ಷನಾದ ಅ ನಾರಾಯಣನು ಮೇಘ ರೂಪದಿಂದ ಮಳೆಗರೆದು, ಉರಿಯನ್ನು ಶಾಂತಪಡಿಸಿ ಪ್ರಪಂಚವನ್ನೆಲ್ಲ ತೋಯಿಸುವನು. ಧಾರಾಕಾರವಾಗಿ ಸುರಿಯುವ ಆ ವೃಷ್ಟಿಯಿಂದ ಜಗತ್ತೆಲ್ಲವೂ ಆ ನೀರಿನಲ್ಲಿ ಮುಳುಗಿ ಎಲ್ಲ ಕಡೆಗೂ ನೀರೇ ನೀರಾಗುವದು.

ಹೀಗೆ ಪ್ರಪಂಚವೆಲ್ಲವೂ ಏಕಾರ್ಣವ ಸಾಗರವಾಗಿ ನೋಡಿದಲ್ಲೆಲ್ಲ ನೀರಿನ ಅಪಾರ ಸಾಗರವೇ ಘೂರ್ಮಿಸುವುದು. ಇಂತಹ ಪ್ರಳಯೋದಕದಲ್ಲಿ ಶ್ರೀ ಹರಿಯು ತನ್ನ ಯೋಗಿನಾರಾಯಣ ರೂಪದಿಂದ ಶಯನ ಮಾಡುವನು, ಆ ಪರಮಾತ್ಮನನ್ನು ಪರಿಪೂರ್ಣವಾಗಿ ಯಾರೂ ತಿಳಿಯಲಾರರು.

ಆ ಸ್ವಾಮಿಯು ಹಾಗೆ ಪ್ರಳಯೋದದಧಿಯಲ್ಲಿ ಎಷ್ಟು ದಿನ ಶಯನ ಮಾಡುವನೆಂಬುದನ್ನು ತಿಳಿಯಲಿಕ್ಕಾಗಲೀ, ಕಾಣಲಿಕ್ಕಾಗಲೀ, ಅವನ ಹಿಂದೆ, ಮುಂದೆ ಮೇಲೆ ಕೆಳಗೆ ನಿಂತು ನೋಡಲು ಶಕ್ಯವಿಲ್ಲ, ಇಂತಹ ಪರಮಾತ್ಮನನ್ನು ತಿಳಿಯಲು ಸಾಕಲ್ಯೇನ ಅರಿಯಲು ಒಬ್ಬನೇ ಸಮರ್ಥ ಎಂದರೆ ಆ ಪರಮಾತ್ಮನೇ.

'ಏವಮೇಕಾರ್ಣವೇ ಭೂತೇ ಶೇತೇ ಲೋಕೇ ಮಹಾದ್ಯುತಿಃ ।
ಪ್ರಚ್ಛಾದ್ಯ ಸಲಿಲೇನೋರ್ವೀಂ ನಮೋ ನಾರಾಯಣಾಯ ತೇ ॥

ಲೋಕಗಳೆಲ್ಲವೂ ಏಕಾಕಾರ ಸಮುದ್ರವಾಗಿ ಜಲರಾಶಿಯಾಗಿ ಮೊರೆಯುತ್ತಿರುವಾಗ ಮಹಾತೇಜಸ್ವಿಯಾದ ಶ್ರೀಹರಿಯು ನೀರಿನಿಂದ ಪ್ರಪಂಚವನ್ನೆಲ್ಲ ಆಚ್ಛಾದನಗೊಳಿಸಿ ಅದರ ಮೇಲೆ ಹಂಸದಂತೆ ತೇಲಾಡುತ್ತ ಇರುವ ನಾರಾಯಣನಿಗೆ ಹಂಸನೆಂದೇ ಹೆಸರು. ನಾರಾಯಣನೇ ಆ ಪರಮಹಂಸ. ಅವನೇ ಯಜ್ಞಪುರುಷ ಪುರುಷೋತ್ತಮ.

ಆ ಪುರುಷೋತ್ತಮನು ಯಜ್ಞಕ್ಕೋಸ್ಕರ ಋತ್ವಿಜರನ್ನು, ದ್ವಿಜರನ್ನು ತನ್ನ ಮುಖದಿಂದ ನಿರ್ಮಿಸಿದನು. ಸಹಾಯ ಮಾಡುವ ಉದ್ಗಾತರನ್ನು ಅದರಿಂದಲೇ ಸೃಷ್ಟಿಸಿದನು. ಹೋತಾ, ಅಧ್ವರ್ಯುಗಳನ್ನು ಬಾಹುಗಳಿಂದ, ಬ್ರಹ್ಮ ಬ್ರಾಹ್ಮಣಾಚ್ಛಂಶಿ. ಪ್ರಸ್ತೋತಾ ಇವರನ್ನು ದೇಹದಿಂದ ನಿರ್ಮಿಸಿದನು. ಮೈತ್ರಾವರುಣ ಪ್ರತಿಷ್ಠಾತ ಇವರನ್ನು ಮೇಢ್ರ ಎಂಬ ತನ್ನ ಅವಯವದಿಂದ, ಪ್ರತಿಹರ್ತಾ ಹೋತಾರನ್ನು ಹೊಟ್ಟೆಯಿಂದ, ಅಗ್ನೀಧ್ರ, ಉನ್ನೇಧ್ರರನ್ನು ಕೈಗಳಿಂದ, ಅಚ್ಛಾವಾಕನನ್ನು ತೊಡೆಯಿಂದ ಹುಟ್ಟಿಸಿದನು. ಹೀಗೆ ಹದಿನಾರು ಜನ ಋತ್ವಿಜರನ್ನು ನಾರಾಯಣನು ತನ್ನ ದೇಹದಿಂದ ಹುಟ್ಟಿಸಿದನು.

ಮೇದಮಯನು, ಯಜ್ಞ ಪುರುಷನೆಂದು ಹೆಸರಾದ ಆ ನಾರಾಯಣನು ವೇದರಾಶಿಯನ್ನು ಮೊದಲಿದ್ದಂತೆ ಅಭಿವ್ಯಕ್ತಗೊಳಿಸಿ, ವೇದಾಂಗ, ಉಪನಿಷತ್ತು ಮುಂತಾದ ವಾಙ್ಮಯ ರಾಶಿಯನ್ನೆಲ್ಲ ಅದರೊಡನೆಯೇ ಅಭಿವ್ಯಂಜಿಸಿ, ಏಕಾರ್ಣವ ಸಾಗರದಲ್ಲಿ ಆಶ್ಚರ್ಯಕರ ರೀತಿಯಲ್ಲಿ ಶಯನ ಮಾಡಿದ್ದನು. ಪರಮಾತ್ಮನ ಆ ದಿವ್ಯ ರೂಪವನ್ನು ಮಾರ್ಕಂಡೇಯನೆಂಬ ದ್ವಿಜನು ಕುತೂಹಲದಿಂದ, ಅವನ ಅನುಗ್ರಹ ದಿಂದಲೇ ಯತ್ಕಿಂಚಿದ್ ದರ್ಶನ ಮಾಡಿಕೊಂಡು ಬಂದನು.

ಆ ನಾರಾಯಣನ ಬಲದಿಂದಲೇ ಮಾರ್ಕಂಡೇಯನಿಗೆ ಅನೇಕ ಸಾವಿರ ವರ್ಷಗಳ ಆಯುಷ್ಯಲಭಿಸಿತ್ತು. ಒಮ್ಮೆ ನಾರಾಯಣನು ಜಲಶಾಯಿಯಾದಾಗ ತೆರೆಗಳ ತೂರಾಟದಲ್ಲಿ ತೇಲುತ್ತಿರುವ ಈ ಮಾರ್ಕಂಡೇಯನನ್ನು ನುಂಗಿ ಬಿಟ್ಟನು. ಅವನ ಹೊಟ್ಟೆಯಲ್ಲಿ ಮುನಿಯು ಪ್ರವೇಶಿಸಿ, ಅಲ್ಲಿಯೇ ಸಹಸ್ರಾರು ವರ್ಷ ತಪಸ್ಸು ಮಾಡಿದನು. ಆ ವಿಷ್ಣುವಿನ ಹೊಟ್ಟೆಯಲ್ಲಿರುವ ಬೇರೊಂದು ಪ್ರಪಂಚದಲ್ಲಿ ತೀರ್ಥಯಾತ್ರೆ ಕೈಕೊಂಡನು.

ಅವನ ಉದರಾಂತರ್ಗತವಾದ ಬ್ರಹ್ಮಾಂಡದೊಳಗಿನ ಭೂಮಂಡಲದ ತುಂಬ ಅನೇಕ ತೀರ್ಥಕ್ಷೇತ್ರಗಳು, ಮನೆ, ಮಠಗಳು, ರಾಜ್ಯ, ರಾಷ್ಟ್ರಗಳು ದೇಶ, ಕೋಶಗಳು, ಬಗೆಬಗೆಯ ಪಟ್ಟಣಗಳು ತರತರಹದ ದೇವಾಲಯದ, ನದಿ, ಸಮುದ್ರ, ಬೆಟ್ಟ, ಬಯಲು, ಬಾನು, ಕಾನನಗಳು,ಅದೆಲ್ಲವನ್ನು ಕಂಡು ವಿಸ್ಮಯಗೊಂಡನು- ಆ ಮಾರ್ಕಂಡೇಯ ಮುನಿ. ಅಲ್ಲಿಯೇ ನಡೆಯಿತು ಆ ಮೃಕಂಡು ಕುಮಾರನ ಜಪ, ತಪ, ಹೋಮ, ಹವನ, ಸಂಚಾರ, ಪ್ರಚಾರ, ಭೋಧನ, ಸಾಧನ ಎಲ್ಲವೂ. ಹೀಗೆ ಸಹಸ್ರ ಸಹಸ್ರ ವರ್ಷ ತೀರ್ಥಯಾತ್ರೆ, ಜಪ ತಪಗಳನ್ನು ಮಾಡುತ್ತಿರುವಾಗ ಒಂದು ದಿನ ಆ ಹರಿಯ ಇಚ್ಛೆಯಿಂದಲೇ ಆ ಮುನಿಯು ಅವನ ಮುಖ ಮಾರ್ಗದಿಂದಲೇ ಹೊರಗೆ ಬಂದನು.

ಹೊರಗೆ ಬಂದ ಕೂಡಲೇ ಸುತ್ತಲೆಲ್ಲ ಬರೀ ನೀರೇ ನೀರು. ಅಪರಂಪಾರವಾದ ವಾರಧಿ ವಿಸ್ತಾರ. ನೋಡಿದಲ್ಲೆಲ್ಲ ಜಲ. ಎಲ್ಲ ಕಡೆಗೂ ಹೆಪ್ಪುಗಟ್ಟಿದ ಕತ್ತಲೆ. ಅತ್ಯಂತ ಘೋರವಾದ ಆ ಪ್ರಳಯ ಜಲಧಿಯ ದೃಶ್ಯ ಕಂಡ ಕೂಡಲೇ ಮಾರ್ಕಂಡೇಯ ಭಯದಿಂದ ನಡುಗಿದನು. ತಾನು ಇನ್ನು ಮುಂದೆ ಇಂತಹ ಸಾಗರದಲ್ಲಿ ಬದುಕಿ ಉಳಿಯುವುದೇ ಸಂದೇಹವೆನಿಸಿತು ಅವನಿಗೆ. ಆ ಕಾಲದಲ್ಲಿ ಅವನಿಗೆ ಪರಮಾತ್ಮನ ದರ್ಶನವಾಗಿ ಆಶ್ಚರ್ಯ ವಾಯಿತು. ಇದು ಸತ್ಯವೊ, ಸ್ವಪ್ನವೊ, ಮಾಯೆಯೋ ಏನೆಂಬುದೇ ತಿಳಿಯದಂತಾಯಿತು ಹೀಗೆ ಚಿಂತಾಕ್ರಾಂತನಾದಾಗ ಸಮುದ್ರದ ಎದೆ ಮೇಲೆ ಬೆಳಕಿನಂತೆ ಉರಿಯುವ, ಸೂರ್ಯನಂತೆ ಹೊಳೆಯುವ, ಚಂದ್ರನಂತೆ ಪವಡಿಸಿರುವ ಪರಮಾತ್ಮನನ್ನು ಕಂಡನು.

ಸಾವಿರ ಸೂರ್ಯರು ಒಮ್ಮೆಲೆ ಉದಿಸಿದಂತಿತ್ತು ಆ ಪರಮಪುರುಷನ ದಿವ್ಯ ದೇಹದ ದೀಪ್ತಿ, 'ನೀನು ಯಾರು?' ಎಂದು ಆ ಮುನಿಯು ನಿಬ್ಬೆರಗಿನಿಂದ ಕೇಳುವಷ್ಟರಲ್ಲಿ ಮತ್ತೆ ಆ ಪರಬ್ರಹ್ಮನು ಇವನನ್ನು ತನ್ನಲ್ಲಿ ಸೆಳೆದುಕೊಂಡನು. ಆಗ ಶ್ರೀ ಹರಿಯ ಕುಕ್ಷಿಯಲ್ಲಿ ಮಾರ್ಕಂಡೇಯನ ಮರು ಪ್ರವೇಶ.

ಅಲ್ಲಿ ಮತ್ತೊಂದು ಬ್ರಹ್ಮಾಂಡ, ಬೇರೊಂದು ಭೂಮಿ, ಹೊಸದೊಂದು ಸೃಷ್ಟಿ, ಬಗೆ ಬಗೆಯ ಬೆಟ್ಟ, ಬಯಲುಗಳು, ತೀರ್ಥಕ್ಷೇತ್ರಗಳು, ಗ್ರಾಮ, ಧಾಮಗಳು, ಅಲ್ಲಿ ಮತ್ತೆ ಪ್ರಾರಂಭ ಮಾರ್ಕಂಡೇಯನ ತೀರ್ಥಯಾತ್ರೆ. ಭ್ರಮಣ, ಕ್ರಮಣ.ಆ ಉದರ ವಿಶ್ವದಲ್ಲಿ ಅನೇಕಾನೇಕ ಆಶ್ರಮಗಳನ್ನು ವನೋಪವನಗಳನ್ನು ಸುತ್ತಾಡಿದನು, ಹಲವಾರು ಪುಣ್ಯತೀರ್ಥಗಳಲ್ಲಿ ಮಿಂದನು. ಅಲ್ಲಿ ನೂರಾರು ಜನ ದ್ವಿಜರು ಯಜ್ಞಗಳನ್ನು ಮಾಡುತ್ತ ಕುಳಿತ್ತಿದ್ದರು. ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಶೂದ್ರ ಜಾತಿಯ ಜನಾಂಗದವರು ತಮ್ಮ ತಮ್ಮ ಕಾರ್ಯಮಾಡುವವರಲ್ಲಿ ನಿರತರಾಗಿದ್ದರು. ಅಲ್ಲಿಯ ಭೂಮಂಡಲವನ್ನೆಲ್ಲ ಒಂದು ನೂರು ವರ್ಷಕಾಲ ಮಾರ್ಕಂಡೇಯ ಮುನಿಯು ಸುತ್ತಾಡಿದ್ದರು.

ತದನಂತರ ಒಂದು ದಿನ ಆ ಪರಮಪುರುಷನ ಮುಖದಿಂದ ಮಾರ್ಕಂಡೇಯನು ಹೊರಬಂದನು. ಆಗ ಒಂದು ಆಲದೆಲೆಯ ಮೇಲೆ ಸಾಗರದ ತೆರೆಯ ತೊಟ್ಟಿಲಲ್ಲಿ ಒಂದು ಪುಟ್ಟ ಮಗು ಪವಡಿಸಿತ್ತು. ಸಾಗರದ ಘೋರ ತರಲತರಂಗದಲ್ಲಿ ಸೂರ್ಯನ ಪ್ರತಿಬಿಂಬವೇ ಮಲಗಿದಂತೆ ತೋರುತ್ತಲಿತ್ತು.

ತನ್ನ ಕಣ್ಣುಗಳಿಂದ ಆ ಮಗುವನ್ನು ಕಾಣಲು ಅವನಿಗೆ ಸಾಧ್ಯವಾಗಲಿಲ್ಲ. ಆಗ ಆ ಮುನಿಯು ಆ ನೀರಿನಲ್ಲಿಯೇ ನಿಂತು. ತನ್ನ ಮನಸ್ಸಿನಲ್ಲಿ ವಿಚಾರಿಸಿದನು. 'ನಾನು

ಮೊದಲು ಕಂಡ ಭಗವನ್ ಮೂರ್ತಿ ಇದೇ ಇರಬಹುದಲ್ಲವೆ?' ಹೀಗೆ ಬೆದರಿಬೆಂಡಾದ ಆ ಮುನಿಯನ್ನು ಕಂಡು ಬಾಲರೂಪಿ ಭಗವಂತನು ನುಡಿದನು.

**ಶಿಶು :-** ಮಾರ್ಕಂಡೇಯನೆ, 'ಹೆದರಬೇಡ, ನನ್ನ ಬಳಿಗೆ ಬಾ' ಅದನ್ನು ಕೇಳಿ, ನನ್ನನ್ನು ಮಾರ್ಕಂಡೇಯಾ ಎಂದು ಹೆಸರು ಹಿಡಿದು ಯಾವನು ಕರೆಯುವನು? ದೇವಮಾನದಿಂದ ನನಗೀಗ ಸಾವಿರವರ್ಷ, ಬ್ರಹ್ಮನು ಕೂಡ ನನ್ನನ್ನು ದೀರ್ಘಾಯುವೇ ಎಂದು ಯೋಚಿಸತೊಡಗಿದನು ತನ್ನನ್ನು ಹಾಗೆ ಕರೆದವನನ್ನು ಕೊಂದುಬಿಡಬೇಕೆಂಬ ಕ್ರೋಧವು ಬಂದಿತ್ತು. ಅದನ್ನು ಕಂಡು ಪರಮಾತ್ಮನು ಹೇಳಿದನು.

**ಶಿಶು :-** ವತ್ಸ, ನಾನು ನಿನಗೆ ತಂದೆ, ಜಗತ್ತಿಗೆಲ್ಲ ಪಿತಾಮಹ, ನಿನಗೆ ಇಷ್ಟು ದೀರ್ಘಾಯುಷ್ಯ ಕೊಟ್ಟವನು ನಾನೇ, ನಿನಗೆ ಜೀವದಾನ ಮಾಡಿದ ನನ್ನ ಬಳಿಗೆ ನೀನೇಕೆ ಬರಲೊಲ್ಲೆ? ನಿನ್ನ ತಂದೆ ಮೃಕಂಡ ಮುನಿಯು ಪುತ್ರಾಕಾಂಕ್ಷೆಯಿಂದ ಉಗ್ರ ತಪಸ್ಸನ್ನು ಮಾಡಿ ನನ್ನ ಅನುಗ್ರಹದಿಂದ ನಿನ್ನನ್ನು ಪಡೆದನು, ನನ್ನ ಈ ವಿಶ್ವವಿರೂಢ್ರೂಪವನ್ನು ಕಾಣುವ ಮಗನನ್ನು ಕೊಡುತ್ತೇನೆಂದು ನಾನು ವರ ಕೊಟ್ಟಿದ್ದೆನು. ಅದುದರಿಂದ ನಿನಗೆ ಇದೆಲ್ಲವನ್ನು ತೋರಿಸಿದ್ದೇನೆ. ಆದುದರಿಂದಲೇ ನಾನು ನಿನ್ನನ್ನು ಹೆಸರು ಹಿಡಿದು ಏಕವಚನದಿಂದ ಕರೆದೆನು, ನನ್ನನ್ನು ಬಿಟ್ಟು ಬೇರೆ ಯಾರಿಗೆ ತಾನೇ ಆ ಧೈರ್ಯ ಬಂದೀತು ಪ್ರಳಯೋದಕದಲ್ಲಿ ವಿಹರಿಸುವ ನಿನ್ನನ್ನು ಹೆಸರು ಹಿಡಿದು ಕರೆಯಲು! ಭಗವಂತನ ಈ ಮಾತು ! ಕೇಳಿ ಅತ್ಯಾನಂದದಿಂದ ಉಬ್ಬಿ ಮಾರ್ಕಂಡೇಯನು ಕೈ ಮುಗಿದು, ತನ್ನ ಕುಲ, ಗೋತ್ರ, ಹೆಸರು ಹೇಳಿ ನಮಸ್ಕಾರ ಮಾಡಿದನು ಮತ್ತು ಭಕ್ತಿಯಿಂದ ನುಡಿದನು.

**ಮಾರ್ಕಂಡೇಯ :-** ಭಗವನ್, ನಿನ್ನ ಮಾಯೆಯನ್ನು ನಾನು ತಿಳಿಯಲು ಬಯಸುತ್ತೇನೆ. ಈ ಏಕಾರ್ಣವ ಸಾಗರ ಮಧ್ಯದಲ್ಲಿ ಬಾಲ ರೂಪದಿಂದ ನೀನು ಮಲಗಿರುವೆ ಅಷ್ಟೇ! ಈ ರೂಪದಲ್ಲಿ ನಿನ್ನ ಹೆಸರೇನು? ಜನರು ನಿನ್ನನ್ನು ತಿಳಿಯುವ ಬಗೆ ಹೇಗೆ? ನಾನಂತೂ ನೀನೇ ಪರಮಪುರುಷನೆಂದು ತಿಳಿದಿದ್ದೇನೆ. ಆದರೂ ನೀನೆ ನಿನ್ನ ಸ್ವರೂಪವನ್ನು ತಿಳಿಸಿಕೊಡು.

**ಶ್ರೀ ಭಗವಾನ್ ಉವಾಚ :**

**ಅಹಂ ನಾರಾಯಣೋ ಬ್ರಹ್ಮನ್ ಸರ್ವಭೂತವಿನಾಶನಃ ।**
**ಅಹಂ ಸಹಸ್ರಶೀರ್ಷೋ ಯಃ ಪಾದಸಾಹಸ್ರ ಸಂಜ್ಞಿತಃ ।**

''ದ್ವಿಜನೆ, ನಾನು ನಾರಾಯಣ, ಸರ್ವ ಪ್ರಾಣಿಗಳನ್ನು ಹುಟ್ಟಿಸಿ ಸಂಹರಿಸುವನು ನಾನೇ. ಸಹಸ್ರಶೀರ್ಷ. ಸಹಸ್ರಪಾದನೆಂದೂ ನನ್ನನ್ನು ಕರೆಯುತ್ತಾರೆ. ಇಂದ್ರನಿಗೆ ಇಂದ್ರ ಪದವಿಯನ್ನು, ಸೂರ್ಯನಿಗೆ ರವಿಸ್ಥಾನವನ್ನು ನಾನೇ ಕೊಟ್ಟಿದ್ದೇನೆ. ಸ್ಥಾವರ ಜಂಗಮಾತ್ಮಕ ಪ್ರಪಂಚವೆಲ್ಲ ನನ್ನಿಂದಲೇ ವ್ಯಾಪ್ತವಾಗಿದೆ. ಈ ಚರಾಚರ ವಿಶ್ವವನ್ನೆಲ್ಲ ನಾನೇ ಸೃಷ್ಟಿಸಿದೆನು. ಈಗಲೂ ಸೃಷ್ಟಿಸುವವನು ನಾನೇ ಮತ್ತು ಮುಂದಾದರೂ ಸಹ ನಾನೇ ಸೃಷ್ಟಿಕರ್ತ.

ಯುಗಾನುಯುಗಗಳಲ್ಲಿ ಎಲ್ಲ ಪ್ರಾಣಿಗಳನ್ನು ನಾನೇ ರಕ್ಷಿಸುತ್ತೇನೆ. ಬ್ರಹ್ಮಾದಿ ದೇವತೆಗಳೆಲ್ಲ ನನ್ನ ಶರೀರದಲ್ಲಿಯೇ ಇರುತ್ತಾರೆ. ಏಕಾಕ್ಷರ, ತ್ರ್ಯಕ್ಷರ, ಪಂಚಾಕ್ಷರ, ಅಷ್ಟಾಕ್ಷರಗಳಿಂದ ಪ್ರತಿಪಾದ್ಯನಾದ ಪರದೈವತ ನಾನೇ. ನೀನಾದರೂ ನನ್ನ ಉದರ ಪ್ರದೇಶದಲ್ಲಿ ಯಥೇಷ್ಟವಾಗಿ ಸಂಚರಿಸು. ಅಲ್ಲಿ ಅನೇಕ ದೇವತೆಗಳಿರುವರು.''

ಹೀಗೆ ಹೇಳಿ ಆ ಪರಮಾತ್ಮನು ಬಾಯಿ ತೆರೆದು ಮತ್ತೆ ಮಾರ್ಕಾಂಡೇಯನನ್ನು ತನ್ನ ಕುಕ್ಷಿಗತವಾದ ಪ್ರಪಂಚದಲ್ಲಿ ಪ್ರವೇಶ ಮಾಡಿಸಿದನು. ಆ ಮುನಿಯು ಅಲ್ಲಿ ನಿಂತುಕೊಂಡು ಜಗದೀಶ್ವರನ ವಿಚಿತ್ರವಾದ ಸೃಷ್ಟಿ, ಸ್ಥಿತಿ, ಸಂಹಾರಾದಿ ಲೀಲೆಗಳನ್ನು ಚೆನ್ನಾಗಿ ಕಾಣುವಂತೆ ಮಾಡಿದನು. ಸೂರ್ಯಚಂದ್ರರಿಲ್ಲದ ಆ ಪ್ರಳಯೋದಕದಲ್ಲಿ ಹಂಸನಾಮಕ ಪರಮಾತ್ಮನು ವಿಹರಿಸುತ್ತಿದ್ದನು.

ಆ ಭಗವಂತನ ನಾಭಿಯಲ್ಲಿ ಸೂರ್ಯಬಿಂಬದಂತೆ ಹೊಳೆಯುವ, ಬಗೆಬಗೆಯ ಬಣ್ಣಗಳಿಂದ ಕಾಣುವ ಸುಂದರವಾದ ಹೊಂದಾವರೆಯು ಕಾಣಿಸಿತು. ಬೆಂಕಿಯ ಜ್ವಾಲೆಯಂತೆ ಉಜ್ವಲವಾದ ಕಾಂತಿಯಿತ್ತು - ಆ ಪರಮಾತ್ಮನ ನಾಭಿ ಕಮಲಕ್ಕೆ. ಶರತ್ಕಾಲದ ತಿಳಿ ಮುಗಿಲಲ್ಲಿ ಹೊಳೆಯುವ ಸೂರ್ಯನಂತೆ ತೇಜಃಪುಂಜವಾಗಿ ಹೊಳೆಯುವ ಆ ನಾರಾಯಣನ ನಾಭೀ ಕಮಲವು ಅವನ ಮೈಗೂದಲಿನ ರಮ್ಯ ಪಚ್ಚೆಗಳ ನಡುವೆ ಅತ್ಯಂತ ಮನೋಹರವಾಗಿ ಶೋಭಿಸುತ್ತಿತ್ತು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಕಾಲಗಣನೆ - ಮಾರ್ಕಂಡೇಯ ಮೂವತ್ತಾರನೇಯ ಅಧ್ಯಾಯ ಮುಗಿದುದು*



## ಬ್ರಹ್ಮ ಸೃಷ್ಟಿ

**ಅಧ್ಯಾಯ - ೩೭**

**॥ಪುಲಸ್ತ್ಯ ಉವಾಚ॥**

**ಅಥ ಯೋಗವತಾಂ ಶ್ರೇಷ್ಠಮಸೃಜದ್ಭೂರಿವರ್ಚಸಂ ।**
**ಸೃಷ್ಟಾರಂ ಸರ್ವಲೋಕಾನಾಂ ಬ್ರಹ್ಮಾಣಂ ಸರ್ವತೋಮುಖ ॥**

**ಪುಲಸ್ತ್ಯ** :- ಅನಂತರ ಪರಮಾತ್ಮನ ನಾಭಿ ಕಮಲದಿಂದ ಉದಿಸಿದ ಆ ಹಿರಣ್ಮಯ ಪದ್ಮದಲ್ಲಿ ನಾರಾಯಣನು ಯೋಗಿ ಶ್ರೇಷ್ಠನಾದ ಬ್ರಹ್ಮದೇವರನ್ನು ಸೃಷ್ಟಿಮಾಡಿದನು. ಎಲ್ಲಕಡೆಗೂ ಮುಖಗಳಿದ್ದವು ಬ್ರಹ್ಮನಿಗೆ. ಕಾಂತಿಯೋ ಅಭೂತ ಪೂರ್ವವಾದದ್ದು. ಹಂಸನಾಮಕ ಪರಮಾತ್ಮನ ಚಚ್ಚೊಲು ಮಗನಾದ ಈ ಬ್ರಹ್ಮನೇ ಸರ್ವಲೋಕಗಳ ಸೃಷ್ಟಾರ. ಬ್ರಹ್ಮದೇವರ ಉತ್ಪತ್ತಿಸ್ಥಾನವಾದ ಈ ಪದ್ಮವು ಪೃಥ್ವೀರೂಪ. ಹಾಗೂ ಪರಮಾತ್ಮಸಮುದ್ಭೂತ ಎಂದು ಪುರಾಣವೇತ್ತರ ಹೇಳಿಕೆ.

ಆ ಕನಕಮಯವಾದ ಕಮಲದಲ್ಲಿಯ ಸಾರಭಾಗವೇ ಪೃಥ್ವಿ. ಬಿರುಸು ಭಾಗವೇ ಬೆಟ್ಟಗಳು. ಹಿಮಾಲಯ, ಮೇರು, ನೀಲ, ನಿಷಧ, ಕೈಲಾಸ, ನೀಲಗಿರಿ, ಗಂಧಮಾದನ, ತ್ರಿಶಿಖರ, ಮಂದರ, ಉದರ, ಪಿಂಜರ, ವಿಂಧ್ಯ, ಅಷ್ಟಾಚಲ ಮುಂತಾದ ಗುರುಗಿರಿಗಳೆಲ್ಲವೂ ಆ ಪದ್ಮದ ಒಳಗಿನ ಗಟ್ಟಿಭಾಗಗಳೇ. ಇವುಗಳ ನಡುವಿನ ದೇಶವೇ ಜಂಬೂದ್ವೀಪ ಈ ಬೆಟ್ಟ ಬಯಲುಗಳಿಂದ ಸುರಿದು ಹರಿದು ಹೋಗುವ ನೀರು, ನದಿ ಸರೋವರಗಳಾಗಿ ಪ್ರಸಿದ್ಧವಾಗಿದೆ. ಆ ಕಮಲದ ಒಳಗಿರುವ ದಳಗಳು ಮ್ಲೇಂಛ ದೇಶಗಳು. ಆ ಕಮಲದ ಕೆಳಭಾಗದ ದಳಗಳು ಅಸುರ ದೈತ್ಯರಿಗೂ, ಸರ್ಪಗಳಿಗೂ ವಾಸಸ್ಥಾನವಾಗಿವೆ, ಅಹಸ್ಯ ಎಂಬ ಅವಗಳ ಮಧ್ಯಭಾಗದಲ್ಲಿ ಪಾಪಿಮಾನವರ ವಸತಿ

ಇರುತ್ತದೆ. ಆ ಜಗತ್ಪದ್ಮದ ಒಳಗಡೆ ಅಂತಸ್ತುಗಳ ನಡುವೆ ನೀರು ತುಂಬಿದೆ. ಅವೇ ನಾಲ್ಕು ಸಮುದ್ರ, ಹೀಗೆ ನಾರಾಯಣನ ಇಚ್ಛೆಯಂತೆ ಅವನ ನಾಭಿ ಪುಷ್ಕರದಿಂದ ಈ ಪೃಥ್ವಿ ಹುಟ್ಟಿತು. ಅದೇ ಕಾರಣದಿಂದಾಗಿ ಈ ಭೂಮಿಗೂ ಪುಷ್ಕರವೆಂಬ ಹೆಸರು ಬಂದಿದೆ.

ನಾರಾಯಣನು ಪ್ರಳಯೋದಧಿಯಲ್ಲಿ ಪದ್ಮವನ್ನು, ಬ್ರಹ್ಮನನ್ನು ಉತ್ಪತ್ತಿ ಮಾಡಿದ ನಂತರ ಮಧು, ಕೈಟಭರೆಂಬ ದೈತ್ಯರನ್ನು ರಜಸ್ಸು, ತಮಸ್ಸುಗಳಿಂದ ನಿರ್ಮಿಸಿದನು. ದುರ್ಗುಣ ಮೂರ್ತಿಗಳಾದ ಅವರು ಆಜಾನು ಬಾಹು ಶರೀರ, ಕೆಂಪಾದ ಕಣ್ಣು, ಹರವು ಎದೆ, ನೀಳ್ದೋಳು, ರತ್ನಕಿರೀಟ. ಎತ್ತರ ನಿಲುವು, ಕಾಡಿಗೆ ವರ್ಣಗಳಿಂದ ಸಂಚರಿಸುವ ಬೆಟ್ಟಗಳಂತೆ ತುಂಬಿದ ಮೇಘಗಳಂತಿದ್ದರು. ಕೈಯಲ್ಲಿ ಗದೆಯನ್ನು ಹಿಡಿದು, ಸಮುದ್ರವನ್ನೇ ಕಲಕುತ್ತ ನಡೆದ ಆ ದಾನವರು ವಿಶ್ವಸೃಷ್ಟಾರನಾದ ನಾರಾಯಣನನ್ನು ನೋಡಿದರು. ಅವನ ಹೊಕ್ಕಳದ ಹೊಕ್ಕರಣೆಯಲ್ಲಿ ನಳನಳಿಸುವ ಕಮಲದಲ್ಲಿ ಬ್ರಹ್ಮದೇವನು ಕುಳಿತುಕೊಂಡಿದ್ದನು. ಋಷಿದೇವತಾ, ಮನುಷ್ಯರಾದಿಯಾಗಿ ಎಲ್ಲ ಪ್ರಪಂಚವನ್ನು ಸೃಷ್ಟಿಸುವ ಆ ಬ್ರಹ್ಮನನ್ನು ಕಂಡು ಕಣ್ಣು ಕೆಂಪಗೆ ಮಾಡಿ ಆ ದೈತ್ಯರು ಇಂತು ನುಡಿದರು.

**ರಾಕ್ಷಸರು :-** ಕಮಲದ ಮಧ್ಯ ಭಾಗದಲ್ಲಿ ಕುಳಿತ ನಾಲ್ಕು ಕೈಗಳುಳ್ಳ ನೀನು ಯಾರು? ನೀನು ನಮ್ಮೊಂದಿಗೆ ಯುದ್ಧ ಮಾಡು. ನಿನ್ನನ್ನು ಇಲ್ಲಿ ಕೂಡಿಸಿದವರು ಯಾರು ? ಸೃಷ್ಟಿ ಮಾಡಲು ನಿನಗೆ ಯಾರು ಹೇಳಿದರು ? ನಿನ್ನನ್ನು ಹುಟ್ಟಿಸಿದವರಾರು ? ನಿನ್ನ ರಕ್ಷಕರಾರು ? ಅವರ ಹೆಸರೇನು ?

**ಬ್ರಹ್ಮ :-** ಈ ಲೋಕದಲ್ಲಿ ಏಕಮೇವವಾದ್ವಿತೀಯ ಎಂಬ ಹೆಸರಿನಿಂದ ಕರೆಯಲ್ಪಡುವ ಭಗವಂತನೇ ನನ್ನನ್ನು ನಿರ್ಮಿಸಿ, ಸೃಷ್ಟಿ ಮಾಡಲು ಆದೇಶವಿತ್ತಿದ್ದಾನೆ. ಅವನೊಬ್ಬ ಬೇರೆ ಸೂರ್ಯ.

**ಮಧು, ಕೈಟಭರು :-** ಮುನಿಯೆ, ಈ ಪ್ರಪಂಚದಲ್ಲಿ ನಮ್ಮಿಬ್ಬರಿಗಿಂತ ಶ್ರೇಷ್ಠವಾದದ್ದು ಬೇರೆ ಇಲ್ಲ. ರಜಸ್ತಮೋ ಗುಣಗಳಿಂದ ಕೂಡಿದ ನಾವು ಋಷಿಗಳ ಧರ್ಮ-ಶೀಲಗಳನ್ನೆಲ್ಲ ಜಾಗೃತೆಯಾಗಿ ಮುಚ್ಚಿಬಿಡುತ್ತೇವೆ. ಯಾವ ಪ್ರಾಣಿಯೂ ನಮ್ಮನ್ನು ಮೀರಿ ಹೋಗಲಾರದು. ಋಷಿಗಳ ಧರ್ಮಕರ್ಮಗಳನ್ನು ನಾಶ ಮಾಡುವದೇ ನಮ್ಮ ಸ್ವಭಾವ.

**ಬ್ರಹ್ಮ :-** ಯೋಗಿಗಳಿಗೂ ಅಗಮ್ಯನಾದ, ವಿಶ್ವಸೃಷ್ಟಿಕರ್ತನಾದ ವಾಸುದೇವನೇ ನಿಮ್ಮಿಬ್ಬರ ನಾಶ ಮಾಡುವವನು.

ಬ್ರಹ್ಮನು ಹೀಗೆ ನುಡಿದ ಬಳಿಕ ನಾರಾಯಣನು ಬಹುಯೋಜನ ವಿಸ್ತಾರವಾದ ತನ್ನ ತೋಳುಗಳನ್ನು ಚಾಚಿ,ಇಬ್ಬರು ದೈತ್ಯರನ್ನು ಸೆಳೆದುಕೊಂಡನು. ಬಲೆಯಲ್ಲಿ ಸಿಕ್ಕ ಹಕ್ಕಿಗಳಂತೆ, ಅವರಿಬ್ಬರೂ ಭಗವಂತನಿಗೆ ನಮಸ್ಕರಿಸಿ ನುಡಿದರು.

**ಮಧು, ಕೈಭಟ್ಟರು :-** ಭಗವನ್, ನೀನು ಪುರುಷೋತ್ತಮ. ಏಕಮೇವಾ ದ್ವಿತೀಯ ಜಗತ್ಕಾರಣ ಎಂಬುದನ್ನು ನಾವು ಬಲ್ಲೆವು. ನಿನ್ನನ್ನು ನಾವು ದರ್ಶನ ಮಾಡಿದ್ದೇವೆ. ನೀನು ನಮಗೆ ಹಿತವನ್ನು ಮಾಡು. ನಿನ್ನ ದರ್ಶನವು ಎಂದೂ ವ್ಯರ್ಥವಾಗಲಾರದು, ಆದುದರಿಂದಲೇ ದೇವಾಧಿದೇವತೆಗಳು ನಿನ್ನನ್ನು ಕಾಣಲು ಬಯಸುತ್ತಿರುವರು. ಆದುದರಿಂದ ನಮಗೆ ಹಿತಕರವಾದ ವರಗಳನ್ನು ಕೊಡು.

**ನಾರಾಯಣ :-** ನಿಮ್ಮ ಇಷ್ಟದಂತೆ ಆಗಲಿ. ನೀವಿಬ್ಬರೂ ಕಲಿಕಾಲದಲ್ಲಿ ಅದಕ್ಕಾಗಿ ಹುಟ್ಟಿರುವಿರಿ. ಹೀಗೆ ಆ ಇಬ್ಬರೂ ದೈತ್ಯರಿಗೆ ವರವಿತ್ತನು- ಶ್ರೀಹರಿ. ಅನಂತರ ಕಾಡಿಗೆಯಂತೆ ಕಪ್ಪಾದ ಆ ದೈತ್ಯರಿಬ್ಬರೂ ಭಗವಂತನ ಜೊತೆಗೆ ಯುದ್ಧಕ್ಕೆ ಬಂದರು. ಆಗ ವಿಷ್ಣುವು ರಜಸ್ತಮೋರೂಪರಾದ ಆ ದೈತ್ಯರಿಬ್ಬರೊಡನೆ ಯುದ್ಧಮಾಡಿ ತೊಡೆಗೆ ಹೊಡೆದು ಸಂಹರಿಸಿದನು. ಜಗಜಟ್ಟಿಗಳಾದ ಆ ದೈತ್ಯೇಂದ್ರರನ್ನು ಸಂಹರಿಸಿ, ನಾರಾಯಣನು ಸೂರ್ಯನಂತೆ ಕಾಂತಿಯಿಂದ ಕಂಗೊಳಿಸಿದನು. ಅನಂತರ ನಾಶರಹಿತನಾದ ನಾರಾಯಣನು ಯೋಗಾಚಾರ್ಯ ಎನಿಸಿದ ಕಪಿಲರೂಪದಿಂದ ಅಲ್ಲಿಗೆ ಬಂದನು. ಬ್ರಹ್ಮದೇವರು ಸೃಷ್ಟಿಸಿದ ಸಾಂಖ್ಯಾಚಾರ್ಯರೂ ಬಂದರು. ಅವರಿಬ್ಬರೂ ಬ್ರಹ್ಮದೇವರ ಬಳಿಗೆ ಬಂದರು. ಅವರು ಪರಮಾತ್ಮನನ್ನು ಅರಿತ ಬ್ರಹ್ಮಜ್ಞಾನಿಗಳು ಎಂದು ಎಲ್ಲರೂ ಪೂಜಿಸಿದರು. ಅನಂತರ ಬ್ರಹ್ಮದೇವರು ಸ್ವಾಯಂಭುವ ಎಂಬ ಮನುವನ್ನು ಮನಸ್ಸಿನಿಂದ ಸೃಷ್ಟಿಸಿದರು. ಅವನು ತಂದೆಯ ಬಳಿಗೆ ಬಾಗಿ ಕೇಳಿದನು.

**ಸ್ವಾಯಂಭು :-** ಪೂಜ್ಯನೆ, ನಾನು ನಿಮಗೆ ಏನು ಸಹಾಯ ಮಾಡಬೇಕು?

**ಬ್ರಹ್ಮ:-** ಈ ಕಪಿಲನು ನಾರಾಯಣ ರೂಪಿಯಾದ ಪರಬ್ರಹ್ಮನೇ ಸರಿ. ಇವನು ಹೇಳಿದಂತೆ ಕೇಳು.

ಆಗ ಸ್ವಾಯಭುವನು ಎದ್ದು ನಿಂತು ಕೈ ಮುಗಿದು ಕಪಿಲ ಹಾಗೂ ನಾರಾಯಣರನ್ನು ಕುರಿತು 'ನಾನು ನಿಮ್ಮ ಯಾವ ಸೇವೆಮಾಡಲಿ?' ಎಂದನು.

**ನಾರಾಯಣ :-** ಸತ್ಯವೂ, ನಾಶರಹಿತವೂ ಆದ ಬ್ರಹ್ಮವು ಹದಿನೆಂಟು ಬಗೆಯಾಗಿರುತ್ತದೆ. ಅದನ್ನು ನೀನು ಧ್ಯಾನ ಮಾಡು.

ಇದನ್ನು ತಿಳಿದು ಸ್ವಾಯಂಭುವನು ಉತ್ತರ ದಿಕ್ಕಿಗೆ ಹೋಗಿ ತಪಸ್ಸು ಮಾಡಿ ಬ್ರಹ್ಮ ಸಾರೂಪ್ಯ ಹೊಂದಿದನು. ಅನಂತರ 'ಭುವಃ' ಎಂಬ ಹೆಸರಿನ ಮತ್ತೊಬ್ಬ ಮಗನನ್ನು ಸೃಷ್ಟಿಸಿದ- ಬ್ರಹ್ಮದೇವ. ಇದೂ ಅವನ ಮಾನಸಸೃಷ್ಟಿಯೇ. ಆ ಪುತ್ರನೂ ಕೂಡ ಕೈ ಮುಗಿದು, 'ಪಿತಾಮಹನೇ, ನಾನೇನು ಮಾಡಲಿ!' ಎಂದು ಕೇಳಿದನು.

**ಬ್ರಹ್ಮ :-** ''ಬ್ರಹ್ಮಜ್ಞಾನ ರೂಪವಾದ ಅಮೃತರಸವನ್ನು ಅನುಭವಿಸು. ಆ ಪರಬ್ರಹ್ಮನೇ ನಿನಗೆ ಗತಿ.'' ತಂದೆಯ ಈ ಮಾತು ಕೇಳಿ ಭುವನು ತಪಸ್ಸಿಗೆ ಹೋದನು. ಉಗ್ರ ತಪಸ್ಸು ಮಾಡಿ, ಭಗವಂತನ ಬಳಿ ಸೇರಿದನು. ಎರಡನೆಯ ಮಗನು ಹೋದ ಬಳಿಕ ಬ್ರಹ್ಮ 'ಭೂರ್ಭುವ' ಎಂದು ಹೆಸರಿನ ತೃತೀಯ ಪುತ್ರನನ್ನು ಉತ್ಪಾದಿಸಿದನು. ಇವನಿಗೆ ಮೋಕ್ಷ ಮಾರ್ಗದಲ್ಲಿಯೇ ಪ್ರವೃತ್ತಿ. ಭೂರ್ಭುವನಾದರೂ ತನ್ನ ಅಣ್ಣಂದಿರಂತೆ ಹುಟ್ಟಿದ ಕೂಡಲೇ ಭಗವದ್ಭಕ್ತನಾಗಿ ಮುಂದೆ ತಪಸ್ಸು ಮಾಡಿ ದಿವ್ಯಗತಿಯನ್ನು ಹೊಂದಿದನು. ಹೀಗೆ ಬ್ರಹ್ಮದೇವರ ಮೂವರೂ ಮಕ್ಕಳು ಸದ್ಗತಿಯನ್ನು ಐದಿದರು.

ಅನಂತರ ಬ್ರಹ್ಮದೇವರು ಒಬ್ಬನೇ ಕುಳಿತು ಬಹುಕಾಲ ತಪಸ್ಸು ಮಾಡಿದನು. ಜೀವನದಲ್ಲಿ ಅವನಿಗೆ ಬೇಸರ ಬಂದಿತು. ತನ್ನ ಅರ್ಧ ಶರೀರದಿಂದ ಅವನು ಹೆಂಡತಿಯನ್ನು ಉತ್ಪಾದಿಸಿದನು. ಅದರಂತೆ ತನ್ನ ಸಂಕಲ್ಪ ಶಕ್ತಿಯಿಂದ ಯೋಗ್ಯರಾದ ಮಕ್ಕಳನ್ನು ಪಡೆದನು. ಅವರೆ ಜಗತ್ಪ್ರಸಿದ್ಧರಾದ ಪ್ರಜಾಪತಿಗಳು. ಪುಣ್ಯ ಲೋಭಿಗಳೂ ಆಗಿದ್ದರು

ಇರುತ್ತದೆ. ಆ ಜಗತ್ಪದ್ಮದ ಒಳಗಡೆ ಅಂತಸ್ತುಗಳ ನಡುವೆ ನೀರು ತುಂಬಿದೆ. ಅವೇ ನಾಲ್ಕು ಸಮುದ್ರ, ಹೀಗೆ ನಾರಾಯಣನ ಇಚ್ಛೆಯಂತೆ ಅವನ ನಾಭಿ ಪುಷ್ಕರದಿಂದ ಈ ಪೃಥ್ವಿ ಹುಟ್ಟಿತು. ಅದೇ ಕಾರಣದಿಂದಾಗಿ ಈ ಭೂಮಿಗೂ ಪುಷ್ಕರವೆಂಬ ಹೆಸರು ಬಂದಿದೆ.

ನಾರಾಯಣನು ಪ್ರಳಯೋದಧಿಯಲ್ಲಿ ಪದ್ಮವನ್ನು, ಬ್ರಹ್ಮನನ್ನು ಉತ್ಪತ್ತಿ ಮಾಡಿದ ನಂತರ ಮಧು, ಕೈಟಭರೆಂಬ ದೈತ್ಯರನ್ನು ರಜಸ್ಸು, ತಮಸ್ಸುಗಳಿಂದ ನಿರ್ಮಿಸಿದನು. ದುರ್ಗುಣ ಮೂರ್ತಿಗಳಾದ ಅವರು ಆಜಾನು ಬಾಹು ಶರೀರ, ಕೆಂಪಾದ ಕಣ್ಣು, ಹರವು ಎದೆ, ನೀಳ್ದೋಳು, ರತ್ನಕಿರೀಟ. ಎತ್ತರ ನಿಲುವು, ಕಾಡಿಗೆ ವರ್ಣಗಳಿಂದ ಸಂಚರಿಸುವ ಬೆಟ್ಟಗಳಂತೆ ತುಂಬಿದ ಮೇಘಗಳಂತಿದ್ದರು. ಕೈಯಲ್ಲಿ ಗದೆಯನ್ನು ಹಿಡಿದು, ಸಮುದ್ರವನ್ನೇ ಕಲಕುತ್ತ ನಡೆದ ಆ ದಾನವರು ವಿಶ್ವಸೃಷ್ಟಾರನಾದ ನಾರಾಯಣನನ್ನು ನೋಡಿದರು. ಅವನ ಹೊಕ್ಕಳದ ಹೊಕ್ಕರಣಿಯಲ್ಲಿ ನಳನಳಿಸುವ ಕಮಲದಲ್ಲಿ ಬ್ರಹ್ಮದೇವನು ಕುಳಿತುಕೊಂಡಿದ್ದನು. ಋಷಿದೇವತಾ, ಮನುಷ್ಯರಾದಿಯಾಗಿ ಎಲ್ಲ ಪ್ರಪಂಚವನ್ನು ಸೃಷ್ಟಿಸುವ ಆ ಬ್ರಹ್ಮನನ್ನು ಕಂಡು ಕಣ್ಣು ಕೆಂಪಗೆ ಮಾಡಿ ಆ ದೈತ್ಯರು ಇಂತು ನುಡಿದರು.

**ರಾಕ್ಷಸರು :-** ಕಮಲದ ಮಧ್ಯ ಭಾಗದಲ್ಲಿ ಕುಳಿತ ನಾಲ್ಕು ಕೈಗಳುಳ್ಳ ನೀನು ಯಾರು? ನೀನು ನಮ್ಮೊಂದಿಗೆ ಯುದ್ಧ ಮಾಡು. ನಿನ್ನನ್ನು ಇಲ್ಲಿ ಕೂಡಿಸಿದವರು ಯಾರು ? ಸೃಷ್ಟಿ ಮಾಡಲು ನಿನಗೆ ಯಾರು ಹೇಳಿದರು ? ನಿನ್ನನ್ನು ಹುಟ್ಟಿಸಿದವರಾರು ? ನಿನ್ನ ರಕ್ಷಕರಾರು ? ಅವರ ಹೆಸರೇನು ?

**ಬ್ರಹ್ಮ :-** ಈ ಲೋಕದಲ್ಲಿ ಏಕಮೇವವಾದ್ವಿತೀಯ ಎಂಬ ಹೆಸರಿನಿಂದ ಕರೆಯಲ್ಪಡುವ ಭಗವಂತನೇ ನನ್ನನ್ನು ನಿರ್ಮಿಸಿ, ಸೃಷ್ಟಿ ಮಾಡಲು ಆದೇಶವಿತ್ತಿದ್ದಾನೆ. ಅವನೊಬ್ಬ ಬೇರೆ ಸೂರ್ಯ.

**ಮಧು, ಕೈಟಭರು :-** ಮುನಿಯೆ, ಈ ಪ್ರಪಂಚದಲ್ಲಿ ನಮ್ಮಿಬ್ಬರಿಗಿಂತ ಶ್ರೇಷ್ಠವಾದದ್ದು ಬೇರೆ ಇಲ್ಲ. ರಜಸ್ತಮೋ ಗುಣಗಳಿಂದ ಕೂಡಿದ ನಾವು ಋಷಿಗಳ ಧರ್ಮ-ಶೀಲಗಳನ್ನೆಲ್ಲ ಜಾಗ್ರತೆಯಾಗಿ ಮುಚ್ಚಿಬಿಡುತ್ತೇವೆ. ಯಾವ ಪ್ರಾಣಿಯೂ ನಮ್ಮನ್ನು ಮೀರಿ ಹೋಗಲಾರದು. ಋಷಿಗಳ ಧರ್ಮಕರ್ಮಗಳನ್ನು ನಾಶ ಮಾಡುವದೇ ನಮ್ಮ ಸ್ವಭಾವ.

**ಬ್ರಹ್ಮ :-** ಯೋಗಿಗಳಿಗೂ ಅಗಮ್ಯನಾದ, ವಿಶ್ವಸೃಷ್ಟಿಕರ್ತನಾದ ವಾಸುದೇವನೇ ನಿಮ್ಮಿಬ್ಬರ ನಾಶ ಮಾಡುವವನು.

ಬ್ರಹ್ಮನು ಹೀಗೆ ನುಡಿದ ಬಳಿಕ ನಾರಾಯಣನು ಬಹುಯೋಜನ ವಿಸ್ತಾರವಾದ ತನ್ನ ತೋಳುಗಳನ್ನು ಚಾಚಿ,ಇಬ್ಬರು ದೈತ್ಯರನ್ನು ಸೆಳೆದುಕೊಂಡನು. ಬಲೆಯಲ್ಲಿ ಸಿಕ್ಕ ಹಕ್ಕಿಗಳಂತೆ, ಅವರಿಬ್ಬರೂ ಭಗವಂತನಿಗೆ ನಮಸ್ಕರಿಸಿ ನುಡಿದರು.

**ಮಧು, ಕೈಭಟ್ಟರು :-** ಭಗವನ್, ನೀನು ಪುರುಷೋತ್ತಮ. ಏಕಮೇವಾ ದ್ವಿತೀಯ ಜಗತ್ಕಾರಣ ಎಂಬುದನ್ನು ನಾವು ಬಲ್ಲೆವು. ನಿನ್ನನ್ನು ನಾವು ದರ್ಶನ ಮಾಡಿದ್ದೇವೆ. ನೀನು ನಮಗೆ ಹಿತವನ್ನು ಮಾಡು. ನಿನ್ನ ದರ್ಶನವು ಎಂದೂ ವ್ಯರ್ಥವಾಗಲಾರದು, ಆದುದರಿಂದಲೇ ದೇವಾಧಿದೇವತೆಗಳು ನಿನ್ನನ್ನು ಕಾಣಲು ಬಯಸುತ್ತಿರುವರು. ಆದುದರಿಂದ ನಮಗೆ ಹಿತಕರವಾದ ವರಗಳನ್ನು ಕೊಡು.

**ನಾರಾಯಣ :-** ನಿಮ್ಮ ಇಷ್ಟದಂತೆ ಆಗಲಿ. ನೀವಿಬ್ಬರೂ ಕಲಿಕಾಲದಲ್ಲಿ ಅದಕ್ಕಾಗಿ ಹುಟ್ಟಿರುವಿರಿ. ಹೀಗೆ ಆ ಇಬ್ಬರೂ ದೈತ್ಯರಿಗೆ ವರವಿತ್ತನು- ಶ್ರೀಹರಿ. ಅನಂತರ ಕಾಡಿಗೆಯಂತೆ ಕಪ್ಪಾದ ಆ ದೈತ್ಯರಿಬ್ಬರೂ ಭಗವಂತನ ಜೊತೆಗೆ ಯುದ್ಧಕ್ಕೆ ಬಂದರು. ಆಗ ವಿಷ್ಣುವು ರಜಸ್ತಮೋರೂಪರಾದ ಆ ದೈತ್ಯರಿಬ್ಬರೊಡನೆ ಯುದ್ಧಮಾಡಿ ತೊಡೆಗೆ ಹೊಡೆದು ಸಂಹರಿಸಿದನು. ಜಗಜಟ್ಟಿಗಳಾದ ಆ ದೈತ್ಯೇಂದ್ರರನ್ನು ಸಂಹರಿಸಿ, ನಾರಾಯಣನು ಸೂರ್ಯನಂತೆ ಕಾಂತಿಯಿಂದ ಕಂಗೊಳಿಸಿದನು. ಅನಂತರ ನಾಶರಹಿತನಾದ ನಾರಾಯಣನು ಯೋಗಾಚಾರ್ಯ ಎನಿಸಿದ ಕಪಿಲರೂಪದಿಂದ ಅಲ್ಲಿಗೆ ಬಂದನು. ಬ್ರಹ್ಮದೇವರು ಸೃಷ್ಟಿಸಿದ ಸಾಂಖ್ಯಾಚಾರ್ಯರೂ ಬಂದರು. ಅವರಿಬ್ಬರೂ ಬ್ರಹ್ಮದೇವರ ಬಳಿಗೆ ಬಂದರು. ಅವರು ಪರಮಾತ್ಮನನ್ನು ಅರಿತ ಬ್ರಹ್ಮಜ್ಞಾನಿಗಳು ಎಂದು ಎಲ್ಲರೂ ಪೂಜಿಸಿದರು. ಅನಂತರ ಬ್ರಹ್ಮದೇವರು ಸ್ವಾಯಂಭುವ ಎಂಬ ಮನುವನ್ನು ಮನಸ್ಸಿನಿಂದ ಸೃಷ್ಟಿಸಿದರು. ಅವನು ತಂದೆಯ ಬಳಿಗೆ ಬಾಗಿ ಕೇಳಿದನು.

**ಸ್ವಾಯಂಭು :-** ಪೂಜ್ಯನೆ, ನಾನು ನಿಮಗೆ ಏನು ಸಹಾಯ ಮಾಡಬೇಕು?

**ಬ್ರಹ್ಮ:-** ಈ ಕಪಿಲನು ನಾರಾಯಣ ರೂಪಿಯಾದ ಪರಬ್ರಹ್ಮನೇ ಸರಿ. ಇವನು ಹೇಳಿದಂತೆ ಕೇಳು.

ಆಗ ಸ್ವಾಯಭುವನು ಎದ್ದು ನಿಂತು ಕೈ ಮುಗಿದು ಕಪಿಲ ಹಾಗೂ ನಾರಾಯಣರನ್ನು ಕುರಿತು 'ನಾನು ನಿಮ್ಮ ಯಾವ ಸೇವೆಮಾಡಲಿ?' ಎಂದನು.

**ನಾರಾಯಣ :-** ಸತ್ಯವೂ, ನಾಶರಹಿತವೂ ಆದ ಬ್ರಹ್ಮವು ಹದಿನೆಂಟು ಬಗೆಯಾಗಿರುತ್ತದೆ. ಅದನ್ನು ನೀನು ಧ್ಯಾನ ಮಾಡು.

ಇದನ್ನು ತಿಳಿದು ಸ್ವಾಯಂಭುವನು ಉತ್ತರ ದಿಕ್ಕಿಗೆ ಹೋಗಿ ತಪಸ್ಸು ಮಾಡಿ ಬ್ರಹ್ಮ ಸಾರೂಪ್ಯ ಹೊಂದಿದನು. ಅನಂತರ 'ಭುವಃ' ಎಂಬ ಹೆಸರಿನ ಮತ್ತೊಬ್ಬ ಮಗನನ್ನು ಸೃಷ್ಟಿಸಿದ- ಬ್ರಹ್ಮದೇವ. ಇದೂ ಅವನ ಮಾನಸಸೃಷ್ಟಿಯೇ. ಆ ಪುತ್ರನೂ ಕೂಡ ಕೈ ಮುಗಿದು, 'ಪಿತಾಮಹನೇ, ನಾನೇನು ಮಾಡಲಿ!' ಎಂದು ಕೇಳಿದನು.

**ಬ್ರಹ್ಮ :-** ''ಬ್ರಹ್ಮಜ್ಞಾನ ರೂಪವಾದ ಅಮೃತರಸವನ್ನು ಅನುಭವಿಸು. ಆ ಪರಬ್ರಹ್ಮನೇ ನಿನಗೆ ಗತಿ.'' ತಂದೆಯ ಈ ಮಾತು ಕೇಳಿ ಭುವನು ತಪಸ್ಸಿಗೆ ಹೋದನು. ಉಗ್ರ ತಪಸ್ಸು ಮಾಡಿ, ಭಗವಂತನ ಬಳಿ ಸೇರಿದನು. ಎರಡನೆಯ ಮಗನು ಹೋದ ಬಳಿಕ ಬ್ರಹ್ಮ 'ಭೂರ್ಭುವ' ಎಂದು ಹೆಸರಿನ ತೃತೀಯ ಪುತ್ರನನ್ನು ಉತ್ಪಾದಿಸಿದನು. ಇವನಿಗೆ ಮೋಕ್ಷ ಮಾರ್ಗದಲ್ಲಿಯೇ ಪ್ರವೃತ್ತಿ. ಭೂರ್ಭುವನಾದರೂ ತನ್ನ ಅಣ್ಣಂದಿರಂತೆ ಹುಟ್ಟಿದ ಕೂಡಲೇ ಭಗವದ್ಭಕ್ತನಾಗಿ ಮುಂದೆ ತಪಸ್ಸು ಮಾಡಿ ದಿವ್ಯಗತಿಯನ್ನು ಹೊಂದಿದನು. ಹೀಗೆ ಬ್ರಹ್ಮದೇವರ ಮೂವರೂ ಮಕ್ಕಳು ಸದ್ಗತಿಯನ್ನು ಐದಿದರು.

ಅನಂತರ ಬ್ರಹ್ಮದೇವರು ಒಬ್ಬನೇ ಕುಳಿತು ಬಹುಕಾಲ ತಪಸ್ಸು ಮಾಡಿದನು. ಜೀವನದಲ್ಲಿ ಅವನಿಗೆ ಬೇಸರ ಬಂದಿತು. ತನ್ನ ಅರ್ಧ ಶರೀರದಿಂದ ಅವನು ಹೆಂಡತಿಯನ್ನು ಉತ್ಪಾದಿಸಿದನು. ಅದರಂತೆ ತನ್ನ ಸಂಕಲ್ಪ ಶಕ್ತಿಯಿಂದ ಯೋಗ್ಯರಾದ ಮಕ್ಕಳನ್ನು ಪಡೆದನು. ಅವರೆ ಜಗತ್ಪ್ರಸಿದ್ಧರಾದ ಪ್ರಜಾಪತಿಗಳು. ಪುಣ್ಯ ಲೋಭಿಗಳೂ ಆಗಿದ್ದರು

ಆ ಬ್ರಹ್ಮಕುಮಾರರು. ಅವರಲ್ಲಿ ಮೊದಲಿನವ ಧರ್ಮ, ದಕ್ಷ ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕೃತು, ವಶಿಷ್ಠ, ಗೌತಮ, ಭೃಗು ಅಂಗಿರಸ ಮುಂತಾದ ಮುನಿಗಳೂ ಬ್ರಹ್ಮದೇವರ ಮಾನಸ ಪುತ್ರರೇ, ಅವರು ಮುಂದೆ ನಾರಾಯಣನನ್ನು ಉದ್ದೇಶಿಸಿ, ಅವ್ಯಗ್ರ ಮನಸ್ಸಿನಿಂದ ಉಗ್ರತಪಸ್ಸು ಆಚರಿಸಿದ್ದರಿಂದ ಮಹರ್ಷಿಗಳೆಂದು ಪ್ರಸಿದ್ಧಿಪಡೆದರು.

ಬ್ರಹ್ಮದೇವರ ಮಾನಸಪುತ್ರನಾದ ದಕ್ಷಪ್ರಜಾಪತಿಗೆ ಅದಿತಿ, ದಿತಿ, ದನು, ಕಲಾ, ಅನಾಯು, ಸಿಂಹಿಕಾ, ಮುನಿ, ಪ್ರಾಚೀ, ಕ್ರೋಧಾ, ಪರಮಾ, ವಿನತಾ, ಕದ್ರು ಎಂದು ಹನ್ನೆರಡು ಜನ ಹೆಣ್ಣುಮಕ್ಕಳು ಜನಿಸಿದರು. ಈ ಹನ್ನೆರಡು ಜನ ತನ್ನ ಕನ್ಯಾಮಣಿಗಳನ್ನು ದಕ್ಷಪ್ರಜಾಪತಿಯು ಬ್ರಹ್ಮದೇವರ ಮತ್ತೊಬ್ಬ ಮಾನಸ ಪುತ್ರನಾದ ಕಶ್ಯಪ ಎಂಬ ಪ್ರಜಾಪತಿಗೆ ಮದುವೆ ಮಾಡಿಕೊಟ್ಟನು.

ಈ ಹನ್ನೆರಡು ಜನರಲ್ಲದೆ ದಕ್ಷನಿಗೆ ಇಪ್ಪತ್ತೇಳು ಜನ ರೋಹಿಣಿ ಮೊದಲಾದ ಹೆಣ್ಣು ಮಕ್ಕಳಿದ್ದರು. ಆ ನಕ್ಷತ್ರ ನಾರಿಯರನ್ನು ಚಂದ್ರನಿಗೆ ಧಾರೆ ಎರೆದು ಕೊಟ್ಟನು. ಆ ಹನ್ನೆರಡು ಈ ಇಪ್ಪತ್ತೇಳು ಅಲ್ಲದೆ ಇನ್ನೂ ಹತ್ತು ಜನ ಹೆಣ್ಣು ಹುಡುಗಿಯರು- ಆ ದಕ್ಷಪ್ರಜಾಪತಿಗೆ ಅವರಲ್ಲಿ ಲಕ್ಷ್ಮೀ, ಸರಸ್ವತಿ, ವಿಶೇಷಾ, ಶುಭಾ, ಸಂಧ್ಯಾ ಮುಂತಾದವರು.

ಬ್ರಹ್ಮದೇವರ ತನ್ನ ಇಚ್ಛಾ ಸೃಷ್ಟಿಯಾದ ಸರಸ್ವತಿಯನ್ನು ಮದುವೆಯಾಗಿದ್ದನು. ಆ ಬ್ರಹ್ಮ ಭಾರ್ಯೆಯು ಸುರಭಿ ಎಂಬ ಹೆಸರಿನ ಕಾಮಧೇನುವಿನ ರೂಪ ತೆಗೆದುಕೊಂಡು ಪಿತಾಮಹನೊಡನೆ ಸರಸವಾಡಿದಳು. ಆದ್ದರಿಂದ ಹನ್ನೊಂದು ಜನ ಧರ್ಮ ಸಂಜ್ಞೆಯುಳ್ಳ ಮಕ್ಕಳು ಜನಿಸಿದರು. ಅವರೆಲ್ಲರೂ ಅಳುತ್ತ ಓಡತೊಡಗಿದ್ದರಿಂದ ರುದ್ರ ಎಂಬ ಹೆಸರನ್ನು ಪಡೆದರು. ಆ ಹನ್ನೊಂದು ಜನ ರುದ್ರರಿಗೆ ನಿಋತಿ, ಸಂಘ, ಅಯೋನಿಜ, ಮೃಗವ್ಯಾದ, ಕಪರ್ದಿ, ಮಹಾವಿಶ್ವೇಶ್ವರ, ಅಹಿರ್ ಬುಧ್ನ್ಯ, ಕಪಾಲಿ, ಪಿಂಗಳ, ಸೇನಾನಿ, ಮಹಾತೇಜ ಎಂದು ಹೆಸರು ಬಂದಿತು. ಇವರೆಲ್ಲರೂ ಬ್ರಹ್ಮ ಪತ್ನಿಯಾದ ಸುರಭಿಯ ಸಂತಾನ. ಇದರಂತೆ ಹಸುಗಳು, ಯಜ್ಞಗಳು, ದೇವತೆಗಳು, ಬೇರೆ ಪಶುಗಳು ಸುರಭಿಯಿಂದ ಉತ್ಪನ್ನವಾದವು ಉದ್ದು, ಕಮಲ, ಆಡು, ಹಂಸಗಳು, ಉತ್ತಮ ಔಷಧಿಗಳು ಕೂಡ ಆ ಸುರಭಿ ಸಂತತಿಯೇ.

ಧರ್ಮ, ಲಕ್ಷ್ಮೀ, ಸೋಮ, ಸಂಜ್ಞಾ ಎಂಬ ನಾಲ್ವರು ಮಕ್ಕಳನ್ನು ದಕ್ಷಪ್ರಜಾಪತಿಯ ಸಂಧ್ಯಾ ಎಂಬ ಹೆಣ್ಣು ಮಗಳು ಹೆತ್ತಳು. ಕಶ್ಯಪರಿಗೆ ಮದುವೆ ಮಾಡಿಕೊಟ್ಟಅದಿತಿ ಎಂಬ ದಕ್ಷಕುಮಾರಿಯು ಭವ, ಪ್ರಭವ. ಕ್ರಶಾಶ್ವ, ಸುವಹ, ಅರುಣ, ವರುಣ, ವಿಶ್ವಾಮಿತ್ರ, ಚಲಧ್ರುವ, ಹವಿಷ್ಮಂತ, ವಿಧಾನ, ಅಭಿಮತ ಮತ್ಸರ, ಭೂತಿ, ಸುಪರ್ವಾಣ, ಬೃಹತ್ಕಾಂತ ಮುಂತಾದ ಮಕ್ಕಳನ್ನೂ ದೇವೇಂದ್ರನನ್ನೂ ಹೆತ್ತಳು. ಇಂದ್ರನಲ್ಲದ ಅತಿದಿದೇವಿಗೆ, ವಿಷ್ಣು, ಭಗ, ತ್ವಷ್ಟಾ, ವರುಣ, ಅಂಶ, ಆರ್ಯಮ, ರವಿ, ಪೂಷಾ, ಮಿತ್ರ, ಧಾತು, ಪರ್ಜನ್ಯ ಎಂಬ ಹನ್ನೊಂದು ಜನ ಆದಿತ್ಯರೆಂದು ಪ್ರಸಿದ್ಧ ಪುತ್ರರು ಜನಿಸಿದರು.

ಇದರಂತೆ ದಕ್ಷಪ್ರಜಾಪತಿಯ ಹೆಣ್ಣುಮಗಳಾದ ದನುವಿನಿಂದ ದಾನವರೂ ದಿತಿಯಿಂದ ದೈತ್ಯರೂ, ಕಾಲೆಯಿಂದ ಕಾಲೆಯರೂ, ಅನಾಯುಪೆಯಿಂದ ಮಯನೂ ಜನಿಸಿದರು. ಸಿಂಹಿಕಾ ಎಂಬ ಕಶ್ಯಪ ಕುಟುಂಬಿನಿಯಾದ ದಾಕ್ಷಾಯಣಿಗೆ ಗ್ರಹಗಳೆಲ್ಲವೂ ಮಕ್ಕಳಾಗಿ ಹುಟ್ಟಿದರು. ಶುನಿಯಿಂದ ಗಂಧರ್ವರೂ, ಪ್ರಾಚಿಯಿಂದ ಅಪ್ಸರೆಯರೂ,

ಕ್ರೋಧೆಯಿಂದ ಪ್ರಾಣಿಗಳೂ, ವಿರಾಚೆಯಿಂದ ಯಕ್ಷ, ರಾಕ್ಷಸರೂ, ಸುರಭಿಯಿಂದ ನಾಕು ಕಾಲಿನ ಪ್ರಾಣಿಗಳೂ ಹುಟ್ಟಿದವು. ಹೀಗೆ ದಕ್ಷಪ್ರಜಾಪತಿಯ ದೌಹಿತ್ರ ಸಂತಾನದಿಂದ ಜಗತ್ತೇ ತುಂಬಿಹೋಯಿತು. ಪುರಾಣ ಪ್ರೋಕ್ತವಾದ ಈ ಪೈತಾಮಹ ಸೃಷ್ಟಿಯನ್ನು ಕೇಳಿದವನು ಶ್ರೀ ಕೃಷ್ಣನ ಅನುಗ್ರಹಕ್ಕೆ ಪಾತ್ರನಾಗುವನು. ಕೃಷ್ಣನ ಸೇವೆಯನ್ನು ಕಣ್ಣು, ಮನಸ್ಸು, ಮಾತು ಮತ್ತು ಕೃತಿ ಹೀಗೆ ನಾಲ್ಕು ಬಗೆಯಾಗಿ ಮಾಡಬೇಕು. ಈ ಚತುರ್ವಿಧವಾದ ಸೇವೆಯಿಂದ ಶ್ರೀ ಕೃಷ್ಣ ಪರಮಾತ್ಮನು ಪ್ರಸನ್ನನಾಗುತ್ತಾನೆಂದು ಈ ಕೆಳಗಿನ ಪದ್ಯದಲ್ಲಿ ಹೇಳಿದನು.

''ಚಕ್ಷುಷಾ ಮನಸಾ ವಾಚಾ ಕರ್ಮಣಾ ಚ ಚತುರ್ವಿಧಂ ।
ಪ್ರಸಾದಯತಿ ಯಃ ಕೃಷ್ಣಂ ತಸ್ಯ ಕೃಷ್ಣಃ ಪ್ರಸೀದತಿ ॥

ನಾನು ಈ ವರೆಗೆ ವ್ಯಾಸರಿಂದ ಕೇಳಿದಂತೆ ಪುಷ್ಕರ ಪ್ರಾದುರ್ಭಾವದ ಸಮಾಚಾರ ನಿನಗೆ ತಿಳಿಸಿದೆನು. ಮೂಲ ರೂಪದಲ್ಲಿ ವಿಷ್ಣು ಎಂದು ಪ್ರಸಿದ್ಧನಾದ ಆ ಭಗವಂತನೇ ಕೃತಯುಗದಲ್ಲಿ ಹರಿ ಎಂದು, ದೇವತೆಗಳಲ್ಲಿ ವೈಕುಂಠನೆಂದು, ಮಾನವರಲ್ಲಿ ಕೃಷ್ಣನೆಂದು ಪೂಜಿಸಲ್ಪಡುತ್ತಾನೆ, ಅವನ ಸ್ಥಿತಿಗತಿಗಳನ್ನು ಪಾಮರರು ತಿಳಿಯಲಾರರು. ಅವನು ಸರ್ವೇಶ್ವರನಲ್ಲವೆ? ಅವನ ಗೈಮೆಮೈಮೆಗಳೆಲ್ಲವೂ ಗಹನ ಗೂಢ, ಗುಹ್ಯ, ದುರೂಹ್ಯ. ಆ ಸ್ವಾಮಿಯ ಗಹನತರವಾದ ಹಿಂದು ಮುಂದುಗಳ ಯತ್ಕಿಂಚಿತ್ ಪರಿಚಯವನ್ನು ಯಥಾಶಕ್ತಿ ಮಾಡಿಕೊಡುತ್ತೇನೆ ಕೇಳು.

ಸರ್ವಗುಣ ಸಂಪನ್ನನಾದ ಸಾಕ್ಷಾತ್ ನಾರಾಯಣನು ಹರಿ ಎಂದು ಅವತಾರ ಮಾಡಿ ಬ್ರಹ್ಮ, ಕಾಮ, ಯಮ, ವಾಯು, ಬ್ರಹಸ್ಪತಿ ಮುಂತಾದವರಲ್ಲಿ ನಿಂತು ಅವರಿಂದ ಕಾರ್ಯ ಮಾಡಿಸಿ ಆಯಾ ಹೆಸರುಗಳಿಂದ ಕರೆಯಲ್ಪಡುತ್ತಾನೆ. ಸರ್ವಾಂತರ್ಯಾಮಿ ಯಾದ ಅದೇ ಭಗವಂತನು ಇಂದ್ರನ ತಮ್ಮನಾಗಿ ಅದಿತಿ ದೇವಿಯ ಹೊಟ್ಟೆಯಿಂದ ಹುಟ್ಟಿಬರುವನು. ಸರ್ವಜೀವ ಪ್ರಧಾನನಾದ ಈ ವಿಷ್ಣುವೇ ಇಂದ್ರನ ತಮ್ಮನಾಗಿ ಮುಂದೆ ಯಾದವ ನಂದನನಾಗಿ ಅವತರಿಸಿದನು.

''ಅದಿತೇರಪಿ ಪುತ್ರತ್ವ ಮೇತ್ಯ ಯಾದವನಂದನಃ ।
ಏಷ ವಿಷ್ಣುರಿತಿ ಖ್ಯಾತಃ ಇಂದ್ರಸ್ಯಾವರಜಃ ಪ್ರಭುಃ ॥

ಅದಿತಿ ಕುಮಾರ, ಯದುನಂದನ, ಉಪೇಂದ್ರ, ಎಂದು ಪ್ರಖ್ಯಾತಿ ಪಡೆದ ಈ ಪ್ರಧಾನ ವಿಷ್ಣುವೇ ಪೂರ್ವ ಕಾಲದಲ್ಲಿ ಬ್ರಹ್ಮದೇವರನ್ನು ಮೊಟ್ಟ ಮೊದಲು ನಿರ್ಮಿಸಿದನು. ಅನಂತರ ಈ ವಿಷ್ಣುವಿನಿಂದ ಸೃಷ್ಟನಾದ ಬ್ರಹ್ಮನು ಉಳಿದ ಪ್ರಜಾಪತಿಗಳನ್ನು ಪ್ರತಿ ಕಲ್ಪದಲ್ಲಿ ಸೃಷ್ಟಿ ಮಾಡಿದನು.

''ಪ್ರಧಾನಾತ್ಮಾ ಪುರಾಪ್ಯೇಕಃ ಬ್ರಹ್ಮಾಣಮಸೃಜತ್ ಪ್ರಭುಃ ।
ಸಸರ್ಜಾಥ ಸುರಾನ್ ಕಲ್ಪೇ ಬ್ರಹ್ಮಾ ಚೈವ ಪ್ರಜಾಪತೀನ್ ॥

ಈ ಬ್ರಹ್ಮನು ಶ್ರೇಷ್ಠರಾದ ಬ್ರಹ್ಮಜ್ಞಾನಿಗಳನ್ನು ನಿರ್ಮಿಸಿ ಅವರ ಜ್ಞಾನ ಪರಂಪರೆಯು ವಂಶಾನುಕ್ರಮದಿಂದ ಮುಂದುವರಿಯುವಂತೆ ಮಾಡಿದನು. ಚತುರ್ಮುಖ ಬ್ರಹ್ಮದೇವರು ಸೃಷ್ಟಿಮಾಡಿದ ಈ ಬ್ರಹ್ಮವೃಂದದವರು ಪರಬ್ರಹ್ಮ ಸ್ವರೂಪವನ್ನು ಬೆಳಕಿಗೆ

ತಂದು ಜಗತ್ತಿನಲ್ಲೆಲ್ಲ ಭಗವತ್ತತ್ತ್ವವನ್ನೆಲ್ಲ ಪ್ರಸಾರ ಮಾಡಿದರು. ಆ ಪರಬ್ರಹ್ಮನನ್ನು ಅರಿಯುವದು, ಭೋಧಿಸುವದು, ಅವನ ಮಹಿಮೆಯನ್ನು ಪ್ರಸಾರ ಮಾಡುವದು ಬ್ರಹ್ಮಜ್ಞಾನಿಗಳ ಮುಖ್ಯ ಧ್ಯೇಯ. ವಿಷ್ಣುವಿನ ಕಾರ್ಯಕೌಶಲವು ಅತ್ಯಂತ ಆಶ್ಚರ್ಯಕರ. ಅದನ್ನು ಎಲ್ಲ ಲೋಕಗಳಲ್ಲಿ ಬಲ್ಲವರು ಹೊಗಳಿ, ಹಾಡುತ್ತಾರೆ. ಆ ಭಗವಂತನ ಮಹಿಮೆಯನ್ನು ಹೇಳುತ್ತೇನೆ ಕೇಳು.

ಭೀಷ್ಮನೇ ಹಿಂದೆ ವೃತ್ರಾಸುರನ ಸಂಹಾರವಾಯಿತಷ್ಟೇ! ಅನಂತರ ಕೃತಯುಗವು ನಡೆದಾಗ ಸಂಭವಿಸಿದ ಘಟನೆ. ಆ ಕಾಲದಲ್ಲಿ ಸುರಾಸುರರ ನಡುವೆ ಲೋಕಪ್ರಸಿದ್ಧವಾದ ತಾರಕಾಮಯ ಸಂಗ್ರಾಮವು ನಡೆಯಿತು. ಆಗ ಕ್ರೂರರಾದ ದೈತ್ಯದಾನವರ ದರ್ಪದಾಳಿಗಳನ್ನು ತಾಳಲಾರದೆ ದೇವತೆಗಳು ನಾರಾಯಣನನ್ನು ಮೊರೆಹೊಕ್ಕರು. ತಮಗೆ ಬಂದ ಭಯವನ್ನು ಅವನಲ್ಲಿ ನಿವೇದಿಸಿದರು. ಆಗ ಭಗವಂತನು ದೇವತೆಗಳಿಗೆ 'ಹೆದರಬೇಡಿರಿ, ನಿಮಗೆ ನಾನು ಗೆಲುವನ್ನು ತಂದು ಕೊಡುತ್ತೇನೆ. ದಾನವರನ್ನು ದಮನ ಮಾಡುತ್ತೇನೆ' ಎಂದು ಅಭಯ ನೀಡಿದನು.

ತಾನು ಕೊಟ್ಟ ಆಶ್ವಾಸನೆಯಂತೆ ಶ್ರೀ ಹರಿಯು ದೇವತಾಪಕ್ಷದಲ್ಲಿ ಯುದ್ಧ ಸನ್ನದ್ಧನಾಗಿ ಬಂದು ನಿಂತುಕೊಂಡನು. ಇದನ್ನು ನೋಡಿ, ದೈತ್ಯವೀರರೂ ಕೂಡ ತಮ್ಮ ಸೇನಾಸನ್ನಾಹದೊಂದಿಗೆ ರಣೋತ್ಸಾಹ ತುಂಬಿ ನಿಂತರು. ಮಯ, ತಾರಕಾಸುರ, ವಿರೋಚನ, ಹಯಗ್ರೀವ, ಶ್ವೇತ, ವರಾಹ, ಲಂಬ, ಅರಿಷ್ಟ, ಕಂಸ ಮುಂತಾದ ದಾನವ ಧುರೀಣರು ಬಿಲ್ಲು, ಬಾಣ, ಗದಾ, ಪರಿಘ, ಮುಸಲ ಮುದ್ಗರ ಮುಂತಾದ ಭೀಕರ ಶಸ್ತ್ರಾಸ್ತ್ರ ಹಿಡಿದು, ವಾಹನಾರೂಢರಾಗಿ ಯುದ್ಧಕ್ಕೆ ಅಣಿಯಾಗಿ ನಿಂತುಕೊಂಡರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಬ್ರಹ್ಮ ಸೃಷ್ಟಿ ಎಂಬ ಮೂವತ್ತೇಳನೇಯ ಅಧ್ಯಾಯ ಮುಗಿದುದು*



## ಔರ್ವ ಋಷಿಯ ಸೃಷ್ಟಿ

**ಅಧ್ಯಾಯ - ೩೯**

**ಪುಲಸ್ತ್ಯ ಉವಾಚ:**

**ಶ್ರುತಸ್ತೇ ದೈತ್ಯ ಸೈನ್ಯಸ್ಯ ವಿಸ್ತರಃ ಕುರುನಂದನ ।**
**ಸುರಾಣಾಮಪಿ ಸೈನ್ಯಸ್ಯ ವಿಸ್ತರಂ ವೈಷ್ಣವಂ ಶೃಣು ॥**

**ಪುಲಸ್ತ್ಯ:-** ಕುರುನಂದನನಾದ ಭೀಷ್ಮ, ದೈತ್ಯ ಸೇನೆಯ ವಿಸ್ತಾರವನ್ನು ನೀನು ಕೇಳಿದೆ. ಶ್ರೀ ವಿಷ್ಣುವು ಅಗ್ರೇಸರನಾಗಿ ನಿಂತುಕೊಂಡ ದೇವತಾ ಸೈನ್ಯದ ವಿಸ್ತಾರವನ್ನು ಕೇಳು. ಹನ್ನೆರಡು ಆದಿತ್ಯರು. ಎಂಟು ವಸುಗಳು, ಹನ್ನೊಂದು ರುದ್ರರು ಹಾಗೂ ಲೋಕಪಾಲಕರು. ಅಶ್ವಿನೀ ಕುಮಾರರು ವಾಹನಾರೂಢರಾಗಿ ಸಮರ ಸನ್ನಹದಲ್ಲಿ ಬಂದು ನಿಂತರು. ಗರುಡಾರೂಢನಾಗಿ ಶ್ರೀಹರಿಯು ಆ ಸುರ ಸೇನೆಗೆ ಮಾರ್ಗದರ್ಶಕನಾಗಿದ್ದ. ಯಮದಂಡವನ್ನು ಹಿಡಿದು ಯಮನು, ವಜ್ರದಂಡ ಧರಿಸಿ ಮೋಡ ಪಡೆಯೊಂದಿಗೆ ಇಂದ್ರ, ಕಾಲಪಾಶಗಳೊಂದಿಗೆ ವರುಣನು, ಗದಾಪಾಣಿಯಾಗಿ ಕುಬೇರನು, ಸೂರ್ಯ, ಚಂದ್ರ, ವಾಯು ಮುಂತಾದ ಸುರಸತ್ತಮರೆಲ್ಲರೂ ಮುಂಚೂಣಿಯಲ್ಲಿ ನಡೆದರು. ಜಯಘೋಷ ಪುರಸ್ಸರವಾಗಿ. ದೇವ ದಾನವರಲ್ಲಿ ಘೋರಯುದ್ಧವು ನಡೆಯಿತು. ನೆತ್ತರಿನ ಕಾಲುವೆ ಹರಿಯಿತು.

ಆ ಭೀಕರ ಸಮರದಲ್ಲಿ ದೈತ್ಯರು ತಮ್ಮ ಮಾಯಾ ಯುದ್ಧ ಆರಂಭಿಸಿದಾಗ ದೇವತೆಗಳು ತತ್ತರಿಸಿದರು. ಆಗ ದೇವೇಂದ್ರನು ಕಂಪಿತನಾಗಿ ದೈತ್ಯ ಸೇನೆಯಲ್ಲಿ ಹೊಕ್ಕು ವಜ್ರಾಯುಧದಿಂದ ಅಸಂಖ್ಯ ದಾನವರನ್ನು ಕೊಂದು ತಿಮಿರಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಕಂಡು ಕುಪಿತನಾದ ಮಯಾಸುರನು ಬಡಬಾಗ್ನಿಯನ್ನು ನಿರ್ಮಿಸಿ ಅದನ್ನು ನಾಶಮಾಡಿದನು. ದೇವೇಂದ್ರನ ತಿಮಿರಾಸ್ತ್ರದಿಂದ ಕತ್ತಲೆಯಲ್ಲಿ ಕಂಗೆಟ್ಟ ದೈತ್ಯರು ಚೇತರಿಸಿಕೊಂಡು ಎದ್ದು ಕುಳಿತರು. ಮಯನು ಪ್ರಯೋಗಿಸಿದ ಬಡಬಾಗ್ನಿಯು ದೇವಸೇನೆಯನ್ನು ಸುಡತೊಡಗಿತು. ಆಗ ದೇವತೆಗಳೆಲ್ಲರೂ ಗಾಬರಿಯಾಗಿ ಗೋಳಾಡತೊಡಗಿದರು. ಸುರಸೇನೆಯ ಈ ಸಮರ ಸಂಕಟವನ್ನು ಕಂಡು ಇಂದ್ರನು ವರುಣನು ಕರೆದು 'ಇದಕ್ಕೇನು ಉಪಾಯ?' ಎಂದು ಕೇಳಿದನು. ಆಗ ವರುಣನು. ನುಡಿದನು.

**ವರುಣ :-** ಸುರರಾಜ, ಮಯಾಸುರನು ಪ್ರಯೋಗಿಸಿದ ಬಡಬಾಗ್ನಿ ರೂಪವಾದ ಈ ತಾಮಸೀ ಮಾಯೆಯ ಹಿನ್ನೆಲೆಯಲ್ಲಿ ಒಂದು ಇತಿಹಾಸವಿದೆ ಕೇಳು. ಪೂರ್ವಕಾಲದಲ್ಲಿ ಬ್ರಹ್ಮರ್ಷಿ ಕುಮಾರನಾದ 'ಊರ್ವ' ಎಂಬ ತಪಸ್ವಿಯು ಅದ್ಭುತ ತಪಸ್ಸು ಮಾಡಿದನು. ಸೂರ್ಯನೆ ತಪೋನುಷ್ಠಾನಕ್ಕೆ ಕುಳಿತಂತೆ ತೋರುತ್ತಿತ್ತು. ಅಷ್ಟು ಉಜ್ವಲವಾಗಿತ್ತು ಅವನ ತಪೋದೀಪ್ತಿ, ಇಂತಹ ತೇಜಸ್ವಿ ತಪಸ್ವಿಯನ್ನು ಸೇವಿಸಲು ಅನೇಕ ಮುನಿಗಳು ಋಷಿಗಳು ಬಂದರು. ಅವರೊಡನೆ ದಾನವರ ದೊರೆಯಾದ ಹಿರಣ್ಯಕಶಿಪುವೂ ಇದ್ದ. ಆಗ 'ಅವನೂ ವಿಜ್ಞಾಪಿಸಿಕೊಂಡ ಆ ಊರ್ವ ಮುನಿಗೆ-

ಊರ್ವ ಋಷಿಯೆ, ನಿಮ್ಮ ಕುಲದಲ್ಲಿ ನೀನು ಒಬ್ಬನೇ ಮಗ-ನಿಮ್ಮ ತಂದೆಗೆ ನೀನು ನೈಷ್ಠಿಕ ಬ್ರಹ್ಮಚಾರಿಯಾಗಿ ತಪಸ್ಸಿಗೆ ನಿಂತುಕೊಂಡೆ ಎಳೆತನದಲ್ಲಿಯೇ ನಿಮ್ಮದು ಬ್ರಹ್ಮಜ್ಞಾನಿಗಳ ಮನೆತನ ನಾನೂ ಕೂಡ ಮಹಾಬ್ರಹ್ಮಜ್ಞಾನಿ. ನೀನು ಮದುವೆಯಾಗದೆ

ಒಂಟಿಯಾಗಿ ಉಳಿದರೆ ನಿಮ್ಮಂತಹ ಬ್ರಹ್ಮಜ್ಞಾನಿಗಳ ವಂಶ ಬೆಳೆಯುವದೆಂತು? ನಿನ್ನಂತಹ ಬ್ರಹ್ಮ ವರ್ಚಸ್ವಿ ದ್ವಿಜರು ದೊರಕುವ ಬಗೆ ಹೇಗೆ? ನಮ್ಮಂತಹ ಅಲ್ಪಜ್ಞಾನಿ, ಅಲ್ಪತೇಜಸ್ವಿ, ಅಲ್ಪ ಮುನಿಗಳ ವಂಶ ಬೇಕಾದಷ್ಟು ಬೆಳೆದರೂ ದೇಶಕ್ಕೇನು ಲಾಭ? ಆದುದರಿಂದ ನೀನು ವಂಶವೃದ್ಧಿಮಾಡು. ನಿನಗೆ ಸರಿಸಮಾನ ತೇಜಸ್ಸುಳ್ಳ, ತಪಸ್ಸುಳ್ಳ ಓರ್ವ ಪ್ರಭಾವಶಾಲಿ ವ್ಯಕ್ತಿಯನ್ನು ಜಗತ್ತಿಗೆ ನೀಡು. ನಿನ್ನಂಥ ಮಂತ್ರಸಿದ್ಧ ಜ್ಞಾನಿ ದ್ವಿಜರ ಅನೇಕ ಕುಟುಂಬಗಳು ಬ್ರಹ್ಮಚರ್ಯ ವ್ರತದಿಂದ, ಬೆಳೆಯದೆ ನಿಂತುಬಿಟ್ಟಿವೆ. ಪ್ರಪಂಚಕ್ಕೆ ಇದೊಂದು ದೊಡ್ಡಹಾನಿ. ಆದುದರಿಂದ ನೀನು ಮದುವೆ ಮಾಡಿಕೋ. ನಿನ್ನ ಮಹಾಶಕ್ತಿಯ ಬ್ರಹ್ಮವರ್ಚಸ್ಸಿನ ಮತ್ತೊಂದು ಅವತಾರ ಭೂಮಂಡಲದಲ್ಲಿ ನಿನ್ನ ಸಂತತಿ ರೂಪವಾಗಿ ಆಗುವಂತೆ ಮಾಡು.'' ಮಹರ್ಷಿಗಳ ಈ ಸಲಹೆಯನ್ನು ಕೇಳಿ, ಊರ್ವ ಋಷಿಯ ಮನ ನೊಂದಿತು. ಆ ಎಲ್ಲ ಮುನಿಗಳನ್ನು ಜರಿದು ನುಡಿದನು- ಆ ಉಗ್ರ ತಪಸ್ವಿ.

**ಊರ್ವ :-** ಹಿಂದೆ ಮುನಿಗಳಿಗೆ ಯಾವ ವೃತ್ತಿ ಧರ್ಮ ಹೇಳಿದ್ದಾರೆ ಎಂಬುದನ್ನು ಬಲ್ಲಿರಾ? ಜಿತೇಂದ್ರಿಯನಾಗಿ ದ್ವಿಜ ವಂಶದಲ್ಲಿ ಹುಟ್ಟಿದ ಮನುಷ್ಯನಿಗೆ ಬ್ರಹ್ಮಚರ್ಯ ಮುಖ್ಯಧರ್ಮ. ಸ್ವರ್ಗಕ್ಕೆ ಹೋದರೂ ಬ್ರಹ್ಮಜ್ಞಾನಿಯು ತನ್ನ ಬ್ರಹ್ಮಚರ್ಯವನ್ನು ಬಿಡಲಾರ ತಪಸ್ವಿಗಳಲ್ಲಿ ಬರಿ ನೀರು ಕುಡಿದಿರುವವರು, ಗಾಳಿ ಕುಡಿದಿರುವವರೂ, ಹಲ್ಲಿನಿಂದ ಕಡಿದು ತಿನ್ನುವವರು, ಕಲ್ಲಿನಲ್ಲಿ ಜಜ್ಜಿದ್ದನ್ನು ಮಾತ್ರ ಭಕ್ಷಿಸುವವರು. ಒರಳಿಗೆ ಹೆಚ್ಚಿದ್ದನ್ನು ತಿನ್ನುವವವರು ಎಂದು ಐದು ಬಗೆಯವರು ಇರುತ್ತಾರೆ. ಈ ಎಲ್ಲ ಬಗೆಯ ತಪೋನಿಧಿಗಳು ಬ್ರಹ್ಮಚರ್ಯ ವ್ರತವನ್ನು ಮಾತ್ರ ಪಾಲಿಸಲೇ ಬೇಕು. ದ್ವಿಜನು ದ್ವಿಜನಾಗುವದು ಬ್ರಹ್ಮಚರ್ಯ ವ್ರತದಿಂದಲೇ.

**ಬ್ರಹ್ಮಚರ್ಯಾದ್ ಬ್ರಾಹ್ಮಣಸ್ಯ ಬ್ರಾಹ್ಮಣತ್ವಂ ವಿಧೀಯತೇ**
**ಬ್ರಹ್ಮಚರ್ಯಂ ಪುರಸ್ಕೃತ್ಯ ಪ್ರಾರ್ಥಯಂತೇ ಪರಾಂಗತಿಂ ॥**

ದ್ವಿಜನಿಗೆ ದ್ವಿಜತ್ವವು ಬ್ರಹ್ಮಚರ್ಯದಿಂದಲೇ ಬರುತ್ತದೆ. ಆ ಬ್ರಹ್ಮಚರ್ಯದಿಂದಲೇ ಬ್ರಾಹ್ಮಣರಿಗೆ ಸದ್ಗತಿಯು.

**''ಬ್ರಹ್ಮಚರ್ಯೇ ಸ್ಥಿತೋ ಧರ್ಮಃ ಬ್ರಹ್ಮಚರ್ಯೇ ಸ್ಥಿತಂ ಮನಃ**
**ಯೇ ಸ್ಥಿತಾ ಬ್ರಹ್ಮಚರ್ಯೇನ ಬ್ರಾಹ್ಮಣಾದಿವ್ರತೇ ಸ್ಥಿತಾಃ ॥**

ಧರ್ಮವು ಬ್ರಹ್ಮಚರ್ಯ ವ್ರತದ ಮೇಲೆ ಪ್ರತಿಷ್ಠಿತವಾಗಿದೆ. ಬ್ರಹ್ಮಚರ್ಯದಲ್ಲಿ ಮನವು ಸ್ಥಿರವಾಗಿ ಇರುವದು. ಬ್ರಹ್ಮಚರ್ಯ ವ್ರತವನ್ನು ಸರಿಯಾಗಿ ಆಚರಿಸಿದ ದ್ವಿಜರು ಸ್ವರ್ಗಾದಿ ಲೋಕಗಳನ್ನು ಪಡೆದಿರುತ್ತಾರೆ.

**''ಯೋ ನಿಗೃಹ್ಯೇಂದ್ರಿಯ ಗ್ರಾಮಂ ಭೂತಗ್ರಾಮಂಚ ಪಂಚಕಮ್ ।**
**ಬ್ರಹ್ಮಚರ್ಯಂ ಸಮಾಧತ್ತೇ ಕಿಮತಃ ಪರಮಂ ತಪಃ ।**

ಯಾರು ತನ್ನ ಐದು ಜ್ಞಾನೇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡು ಪಂಚಮಹಾ ಭೂತಗಳನ್ನು ಜಯಸಿ ಬ್ರಹ್ಮಚರ್ಯ ವ್ರತವನ್ನು ಪಾಲಿಸುವರೋ ಅದೇ ದೊಡ್ಡ ತಪಸ್ಸು. ಇದಕ್ಕಿಂತ ಹೆಚ್ಚಿನ ತಪವು ಯಾವುದಿದೆ!

ಬ್ರಹ್ಮಜ್ಞಾನಿಗಳು ವಂಶವನ್ನು ಬೆಳೆಸಬೇಕೆಂದು ನಿಮ್ಮ ಅಪೇಕ್ಷೆಯಷ್ಟೇ! ಅಗಕ್ಕಾಗಿ ಬ್ರಹ್ಮಚರ್ಯವನ್ನು ಏಕೆ ಬಿಡಬೇಕು! ಮದುವೆಯನ್ನೇಕೆ ಮಾಡಿಕೊಳ್ಳಬೇಕು? ಮಕ್ಕಳನ್ನು ಪಡೆಯ ಬೇಕಾದರೆ ಮಡದಿಯೇ ಬೇಕು ಎಂಬ ಅಗ್ರಹವೇಕೆ? ನಿಮ್ಮಲ್ಲಿ ತಪಃಶಕ್ತಿ ಇದ್ದರೆ, ನಿಜವಾಗಿಯೂ ಜಿತೇಂದ್ರಿಯರಾಗಿದ್ದರೆ, ನಿಮ್ಮ ಸಂಕಲ್ಪ ಶಕ್ತಿಯಿಂದಲೇ ಮಾನಸ ಪುತ್ರರನ್ನು ಸೃಷ್ಟಿಮಾಡಿರಿ. ಹಿಂದೆ ಬ್ರಹ್ಮದೇವರು ಸನಕ, ಸನಾತನ ಮೊದಲಾದ ಋಷಿ, ಪ್ರಜಾಪತಿಗಳನ್ನು ಮನಸ್ಸಿನಿಂದಲೇ ಸೃಷ್ಟಿಸಲಿಲ್ಲವೆ? ತಪಸ್ವಿಗಳಿಗೆ ಮಾನಸ ಸೃಷ್ಟಿಯೇ ವಿಹಿತವಾದದ್ದು, ಮದುವೆ ಮಾಡಿಕೊಂಡು ಮಡದಿಯ ಮುಖಾಂತರ ಮಕ್ಕಳನ್ನು ಹಡೆಯುವದು ಯೋಗಿಗಳ ಧರ್ಮವಲ್ಲ. ಭೋಗಿಗಳ ಕರ್ಮ. ಸ್ತ್ರೀ ಸಂಪರ್ಕವಿಲ್ಲದೆ ಪುತ್ರ ಸೃಷ್ಟಿಯನ್ನು ನಾನು ನನ್ನ ತಪೋಬಲದಿಂದ ಈಗಲೇ ಮಾಡಿತೋರಿಸುತ್ತೇನೆ.

ಹೀಗೆ ನುಡಿದು, ಆ ಊರ್ವ ಮುನಿಯು ತನ್ನ ತೊಡೆಯನ್ನು ಹೋಮಾಗ್ನಿಯಲ್ಲಿಟ್ಟು ದರ್ಭದಿಂದ ಕಡೆದನು. ಅದರಿಂದ ಒಮ್ಮೆಲೆ ಅವನ ತೊಡೆ ಒಡೆದು ಒಬ್ಬ ಪುತ್ರನು ಸಿಡಿಲಿನಂತೆ ಸಿಡಿದು ಹೊರಬಂದನು. ಊರ್ವ ಪುತ್ರನಾದ ಆ ಔರ್ವನು ಕಾಲಾಗ್ನಿಯಂತೆ ಮೂರು ಲೋಕಗಳನ್ನೇ ಸುಡಲು ಹೊರಟ ಭಯಂಕರವಾದ ಹಸಿವೆಯಿಂದ ಕಂಗಾಲಾದ ಆ ಔರ್ವನು ತನ್ನ ತಂದೆಗೆ ದೀನಧ್ವನಿಯಲ್ಲಿ ನುಡಿದನು. ''ಅಪ್ಪಾ. ನನಗೆ ಭಯಂಕರ ಹಸಿವು ಈ ಜಗತ್ತನ್ನೇ ತಿಂದುಬಿಡುತ್ತೇನೆ, ಅಪ್ಪಣೆ ಕೊಡು.'' ಹೀಗೆ ನುಡಿದವನೇ ಅಗ್ನಿ ಜ್ವಾಲೆಯಂತೆ ಉರಿಯತೊಡಗಿದನು. ದಶದಿಕ್ಕು ಹಾಗೂ ಎಲ್ಲ ಪ್ರಾಣಿಗಳು ಊರ್ವಕುಮಾರನು ಸೃಷ್ಟಿಸಿದ ಉರಿಯಿಂದ ಸುಡತೊಡಗಿದವು. ಅದನ್ನು ಕಂಡು ಬ್ರಹ್ಮದೇವರು ಅಲ್ಲಿಗೆ ಬಂದು ಊರ್ವಮುನಿಗೆ ಹೇಳಿದನು.

**ಬ್ರಹ್ಮ** :- ಮುನಿಯೆ, ನಿನ್ನ ಮಗನನ್ನು ಸಮಾಧಾನ ಪಡಿಸಿ ಹಿಂತಿರುಗಿಸು. ಇವನಿಗೆ ದಿವ್ಯ ಸ್ಥಾನವನ್ನು ನಾನು ಕೊಡುವೆನು. ಸಮುದ್ರದಲ್ಲಿರುವ ವಡವಾಮುಖದಲ್ಲಿ ಇವನು ನೆಲೆಸಲಿ. ಸಾಗರದ ಅಪಾರವಾದ ನೀರನ್ನು ಕುಡಿಯುತ್ತ ನನ್ನ ಯೋನಿಯಾದ ಆ ಜಲಗರ್ಭದಲ್ಲಿಯೇ ವಾಸಮಾಡಲಿ. ಪ್ರಳಯ ಕಾಲದಲ್ಲಿ ಇವನು ಎಲ್ಲ ದೇವ, ದಾನವ, ಮಾನವರಾದಿಯಾಗಿ ಸಮಸ್ತ ಪ್ರಾಣಿಗಳನ್ನು ಸುಟ್ಟು ತಿಂದು ತೇಗಲಿ. ಈಗ ಸಾಗರದ ತಳಕ್ಕೆ ಹೋಗಲಿ''.

ಬ್ರಹ್ಮದೇವರ ಆಜ್ಞೆಯಂತೆ, ಆ ಔರ್ವಾಗ್ನಿಕುಮಾರನು ಬ್ರಹ್ಮನಿಗೂ ತನ್ನ ತಂದೆಗೂ ನಮಸ್ಕರಿಸಿ ಸಾಗರದ ಆಳಕ್ಕೆ ಇಳಿದು ವಡವಾಮುಖದಲ್ಲಿ ಹೋಗಿ ಕುಳಿತನು. ಅನಂತರ ಬ್ರಹ್ಮನೂ ಮಹರ್ಷಿಗಳು ತಮ್ಮ ಸ್ಥಾನಕ್ಕೆ ಹಿಂತಿರುಗಿದರು. ಆದರೆ ಹಿರಣ್ಯಕಶಿಪು ಅಲ್ಲಿಯೇ ಕುಳಿತಿದ್ದ. ಎಲ್ಲರೂ ಹೋದಬಳಿಕ ಅವನು ಊರ್ವ ಋಷಿಗೆ ನಮಸ್ಕರಿಸಿ ನುಡಿದನು.

**ಹಿರಣ್ಯಕಶಿಪು** :- ತಪೋನಿಧಿಯೇ, ನಾನು ನಿನ್ನ ಶಿಷ್ಯ, ನಿನ್ನ ಮಗನ ಊಳಿಗದ ಆಳು. ನಿನ್ನನ್ನು ಸೇವೆ ಮಾಡಲು ಬಂದಿದ್ದೇನೆ. ನನ್ನ ಸೇವೆಯನ್ನು ಪರಿಗ್ರಹಿಸು.

ಹಿರಣ್ಯಕಶಿಪುವಿನ ಸ್ತೋತ್ರದಿಂದ ಊರ್ವ ಮುನಿಗೆ ಸಂತೋಷವಾಯಿತು. ಅವನು ತನ್ನ ಮಗನಾದ ಅಗ್ನಿಕುಮಾರನು ನಿರ್ಮಿಸಿದ ಮಾಯೆಯನ್ನು ಆ ದೈತ್ಯನಿಗೆ ದಯಪಾಲಿಸಿದನು. ವಂಶ ಪರಂಪರೆಯಿಂದ ಬಂದ ಆ ಔರ್ವಮಾಯೆಯನ್ನು ಈಗ ಮಯಾಸುರನು ಪ್ರಯೋಗಿಸಿದ್ದಾನೆ. ಅದನ್ನು ಬೇರೆ ಯಾರಿಂದಲೂ ಶಾಂತ ಗೊಳಿಸುವದು

ಸಾಧ್ಯವಿಲ್ಲ. ಆದಕ್ಕಾಗಿ ನೀನು ನನ್ನ ಜೊತೆಗೆ ಸಹಾಯಕನಾಗಿ ನೀರಿನಲ್ಲಿ ಜನಿಸಿದ ಚಂದ್ರನನ್ನು ಕಳಿಸು. ನಾನು ನೀರಿನ ಅಧಿದೇವತೆ ಆಗಿದ್ದು. ಚಂದ್ರ ಹಾಗೂ ಜಲಜಂತುಗಳೊಡನೆ ಕೂಡಿ ಆ ಮಾಯೆಯನ್ನು ನಾಶಮಾಡುತ್ತೇನೆ''

ವರುಣನ ಸಲಹೆಯಂತೆ ಇಂದ್ರನು ಸಹಾಯಕ್ಕಾಗಿ ಚಂದ್ರನನ್ನು ಕಳಿಸಿದನು. ಈ ಸಂದರ್ಭದಲ್ಲಿ ಇಂದ್ರನು ಮಾಡಿದ ಸ್ತೋತ್ರದಿಂದ ಚಂದ್ರನು ಉತ್ಸಾಹಿತನಾಗಿ ವರುಣನೊಡನೆ ಯುದ್ಧಕ್ಕೆ ಹೊರಟನು. ಚಂದ್ರ ವರುಣರಿಬ್ಬರೂ ಕೂಡಿ, ದೈತ್ಯ ಸೇನೆಯಲ್ಲಿ ಚಳಿ, ಗಾಳಿಗಳಿಂದ ದಾಳಿ ಮಾಡಿದರು. ಚಂದ್ರನ ತಂಪಿಡಿದ ಕಿರಣಗಳಿಂದ ದೈತ್ಯರ ದೇಹಗಳೆಲ್ಲವೂ ಗಡ್ಡೆಗಟ್ಟಿದವು ಮೇಲೆ ವರುಣನು ಪಾಶಗಳಿಂದ ಬಿಗಿದುಬಿಟ್ಟನು. ಇದರಿಂದ ದೈತ್ಯರು ನಿರ್ವೀರ್ಯರಾಗಿ ರಣರಂಗದಲ್ಲಿ ಕಲ್ಲುಕಟ್ಟಿಗೆಗಳಂತೆ ಕಟ್ಟಿ ಒಗೆದಂತೆ ನಿಶ್ಚೇಷ್ಟರಾಗಿ ನಿಂತುಕೊಂಡರು.

ದೈತ್ಯ ಸೇನೆಯ ಈ ದುರವಸ್ಥೆಯನ್ನು ನೋಡಿದ ಮಯಾಸುರನು ಕೂಡಲೇ ಪಾರ್ವತಿ ಮಾಯೆಯನ್ನು ಸೃಷ್ಟಿಮಾಡಿ ಕಲ್ಲು, ಮರ, ಟೊಂಗೆ, ರಂಬೆಗಳನ್ನು ದೇವಸೇನೆಯ ಮೇಲೆ ಸುರಿಸಿದನು. ಆದರಿಂದ ಚಂದ್ರ ವರುಣರ ಮಾಯೆಯು ಮಾಯವಾಯಿತು. ಬಂಡೆ, ಬೆಟ್ಟಗಳ ಪೆಟ್ಟುಗಳಿಂದ ದೇವತೆಗಳ ಕೈಯಲ್ಲಿಯ ಶಸ್ತ್ರಾಸ್ತ್ರಗಳು ಪುಡಿ ಪುಡಿ ಆದವು. ಆಗ ಶ್ರೀ ಹರಿಯು ನಿರ್ವಿಕಾರವಾಗಿ ನಿಂತುಕೊಂಡು ಅಗ್ನಿ, ವಾಯುಗಳಿಗೆ ಆದೇಶ ನೀಡಿದನು. ಆಗ ಅವರಿಬ್ಬರೂ ಪಾರ್ವತಿ ಮಾಯೆಯನ್ನು ನಾಶಮಾಡಿ, ಗಾಳಿಯ ಅಲೆಗುಂಟ ಉರಿಯ ತೆರೆಗಳನ್ನೇ ಹಬ್ಬಿಸಿ ದಾನವರನ್ನೆಲ್ಲ ಸುಡತೊಡಗಿದರು. ಅದರಿಂದ ಪಾರ್ವತಿ ಮಾಯೆಯು ನಷ್ಟವಾಗಿ ದೇವಸೇನೆಗೆ ಗೆಲವು ಶಾಂತಿ, ತುಷ್ಟಿ, ಪುಷ್ಟಿಗಳು ಪ್ರಾಪ್ತವಾದವು.

ಇದನ್ನು ಕಂಡು ಕಾಲನೇಮಿ ಎಂಬ ದೈತ್ಯನು ತನ್ನ ನೂರು ತೋಳುಗಳಲ್ಲಿ ನೂರು ಆಯುಧಗಳನ್ನು ಹಿಡಿದುಕೊಂಡು, ದೇವತೆಗಳ ಮೇಲೆ ಕಾಲಭೈರವನಂತೆ ಎರಿಬಂದನು. ಅವನನ್ನು ನೋಡಿ ಇಂದ್ರಾದಿ ದೇವತೆಗಳೆಲ್ಲರೂ ಹೆದರಿ ಹೌಹಾರಿದರು. ದೈತ್ಯರು ಮಾತ್ರ ಹುರುಪುಗೊಂಡು, ಎಲ್ಲ ರಾಕ್ಷಸ ಸೇನಾಪತಿಗಳೊಂದಿಗೆ ದೇವ ಸೇನೆಯ ಮೇಲೆ ಎರಗಿದರು. ಅವನ ಮುಷ್ಟಿ ಪ್ರಹಾರದಿಂದ ದೇವತೆಗಳು ಗುಂಪು ಗುಂಪಾಗಿ ಉರುಳಿ ಬಿದ್ದರು. ಅವನ ಶಸ್ತ್ರಾಸ್ತ್ರಗಳಿಂದ ಅನೇಕ ಸುರ ಸೈನಿಕರು ರಣರಂಗದಲ್ಲಿ ಹೊರಳಿಬಿದ್ದರು.

ಆ ಕಾಲನೇಮಿಯು ಯಮ, ವರುಣ, ಕುಬೇರ ಮುಂತಾದ ದಿಕ್ಪಾಲಕರನ್ನು ಹೊಡೆದೋಡಿಸಿದನು. ಸೂರ್ಯ ಚಂದ್ರರನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿದನು. ಅಗ್ನಿ, ವಾಯುಗಳನ್ನು ಗೆದ್ದು, ಸಮುದ್ರವನ್ನು ತಂಗುವ ತಾಣವನ್ನಾಗಿ ಮಾಡಿಕೊಂಡನು. ಮಹಾಭೂತಿಗಳೆಲ್ಲವೂ ಅವನ ಅಧೀನವಾದವು. ಎಲ್ಲರೂ ಕಾಲನೇಮಿಯ ವಶರಾದರು.

ಆದರೆ ದುಷ್ಕಾರ್ಯಗಳಲ್ಲಿ ಪ್ರವೃತ್ತನಾದ ಆ ದುಷ್ಟ ದೈತ್ಯನಿಗೆ ವೇದ, ಧರ್ಮ, ಕ್ಷಮೆ, ಸತ್ಯ, ಲಕ್ಷ್ಮೀ ಐದು ವಸ್ತುಗಳು ಮಾತ್ರ ವಶವಾಗಲಿಲ್ಲ. ಸತ್ಯ, ಶ್ರೀ, ತನ್ನ ಬಳಿ ಸುಳಿಯದೆ ಇದ್ದುದನ್ನು ಹಾಗೂ ವೇದಗಳು ತನ್ನನ್ನು ಹೊಗಳದಿದ್ದದನ್ನು ಗಮನಿಸಿದ ಆ ದೈತ್ಯನಿಗೆ ಕೋಪಬಂದು, ಗರುಡಾರೂಢನಾದ ಶ್ರೀಹರಿಯನ್ನು ನೋಡಿದನು. ಕಪ್ಪು ಮೋಡ ಪಡೆಯಂತೆ ನೀಲವರ್ಣದಿಂದ ಮೈತುಂಬ ಮಿಂಚಿನ ಕಾಂತಿಯು ಬೆಳಗುತ್ತಲಿರುವ ಶ್ರೀ ಹರಿಯನ್ನು ನೋಡಿ, ಕಾಲನೇಮಿಯು ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸಿದನು;

ದೈತ್ಯ ಕುಲಕ್ಕೆಲ್ಲ ಈ ಶ್ರೀಹರಿಯೇ ಯಮ. ಇವನಿಗೂ ನಾನು ಈಗ ಯಮನಾಗಿ ನಾಶಮಾಡುತ್ತೇನೆ. ಹಿರಣ್ಯಕಶಿಪು ಮೊದಲಾದ ದೈತ್ಯರನ್ನು ಕೊಂದದ್ದಕ್ಕೆ ಈ ವಿಷ್ಣುವಿಗೆ ಪ್ರಾಯಶ್ಚಿತ್ತವನ್ನು ಅನುಭವಿಸ ಹಚ್ಚುತ್ತೇನೆ. ಇವನ ಅನುಯಾಯಿಗಳನ್ನು ಬೇಗನೇ ನಾನು ಸಂಹರಿಸಿ ಬಿಡುತ್ತೇನೆ.

ಋಷಿಮುನಿಗಳು ಅನಂತ, ಪದ್ಮನಾಭ ಎಂಬ ಹೆಸರುಗಳಿಂದ ಕರೆಯುವದು ಈ ದಾನವಾಂತಕನನ್ನೇ, ಮಧು ಕೈಟಭರನ್ನು ಕೊಂದವನು ಈತನೇ. ನನ್ನ ತಂದೆ ಹಿರಣ್ಯ ಕಶಿಪುವನ್ನು ಇದೇ ವಿಷ್ಣುವು ಅರ್ಧನರ ಅರ್ಧಸಿಂಹದ ದೇಹದಿಂದ ಕೂಡಿದ ನರಸಿಂಹ ಎಂಬ ರೂಪದಿಂದ ಬಂದು ಸಂಹರಿಸಿದನು.

ವಂಚಕ ವಟುವೇಷದಿಂದ ಬಲಿಚಕ್ರವರ್ತಿಯನ್ನು ಮೋಸಗೊಳಿಸಿ ಮೂರು ಲೋಕಗಳನ್ನು ಅವನಿಂದ ಕಿತ್ತುಕೊಂಡು ಕಪಟಿ ವಾಮನನು ಇವನೇ. ಈಗ ಈ ತಾರಕಾಮಯ ಯುದ್ಧದಲ್ಲಿ ನನ್ನೊಡನೆ ಹೋರಾಡಿ ಸಾವನ್ನಪ್ಪಲು ಇಲ್ಲಿ ಬಂದು ನಿಂತಿದ್ದಾನೆ. ಎಂದು ಯೋಚಿಸಿ ಆ ಜಗದೀಶ್ವರನನ್ನು ಧಿಕ್ಕರಿಸಿ ಮನಬಂದಂತೆ ನಿಂದಿಸಿ ಹರಿದು ಜರಿದು ಮಾತನಾಡಿದನು. ಕ್ಷಮಾನಿಧಿಯಲ್ಲವೆ ಆ ವಾಸುದೇವ! ಕಾಲನೇಮಿಯು ಎಷ್ಟೇ ಕೀಳಾಗಿ ಭಾವಿಸಿ ಹೀಗಳೆದು ನಿರ್ಭರ್ತ್ಸನೆಗೈದು ನುಡಿದರೂ ಇನಿತಾದರೂ ಕುಪಿತನಾಗಲಿಲ್ಲ. ಆ ಕೃಪಾಸಾಗರ ಶಾಂತ ಸ್ವರದಲ್ಲಿಯೇ ಶ್ರೀಹರಿ ಇಂತು ನುಡಿದನು.

**ವಿಷ್ಣು** :- ದೈತ್ಯನೆ, ಗರ್ವಾಂಧರಲ್ಲಿ ಎಷ್ಟೇ ಶಕ್ತಿಯಿದ್ದರೂ ವ್ಯರ್ಥ. ಕ್ಷಮಾಗುಣ ಉಳ್ಳವರಲ್ಲಿ ಇದ್ದ ಶಕ್ತಿಯು ಸ್ಥಿರವಾಗಿ ಸಾರ್ಥಕವಾಗುತ್ತದೆ. ನಿನಗೂ ಕ್ಷಮಾಗುಣಕ್ಕೂ ಬಹುದೂರ. ನಿನ್ನ ಮೈಸೊಕ್ಕಿನಿಂದಲೇ ನೀನು ಸತ್ತುಹೋಗುವಿ. ನಿನ್ನ ಈ ವಾಚಾಳಿತನಕ್ಕೆ ಧಿಕ್ಕಾರವಿರಲಿ ಹೆಣ್ಣುಮಕ್ಕಳಂತೆ ಬಾಯಿಂದ ಬೈದಾಟ ಗೈಯುವ ನೀನು ಗಂಡಸೆ? ನೀನೂ ಹಿಂದಿನ ದೈತ್ಯರಂತೆ ವಿನಾಶದ ದಾರಿಯನ್ನೇ ಹಿಡಿದಿರುವಿ. ನಿನ್ನನ್ನು ಇಂದೇ ಕೊಂದು ದೇವತೆಗಳನ್ನೆಲ್ಲ ಅವರವರ ಸ್ಥಾನದಲ್ಲಿ ಮರಳಿ ಕೂಡಿಸುವೆನು.''

ಶ್ರೀಕೃಷ್ಣನ ಈ ನುಡಿಗಳನ್ನು ಕೇಳಿ ಕಾಲನೇಮಿಗೆ ಕೋಪ ಕೆರಳಿತು. ಕಣ್ಣು ಕೆಂಪಡರಿದವು. ನೂರು ತೋಳುಗಳನ್ನು ಮೇಲೆತ್ತಿ ವಿಷ್ಣುವಿನ ಎದೆಯ ಮೇಲೆ ಹೊಡೆತ ಹಾಕಿದನು, ಗದೆಯಿಂದ ಗರುಡನನ್ನು ಪ್ರಹರಿಸಿದನು. ಆದರಿಂದ ಗರುಡನಿಗೆ ತುಸು ಪೆಟ್ಟುಹತ್ತಿತು. ಆಗ ಭಗವಾನ್ ಶ್ರೀಹರಿಯು ಗರುಡನೊಂದಿಗೆ ಬೃಹದಾಕಾರ ತಾಳಿ ಅನಂತ ಭುಜಗಳಿಂದ ಭೂಮ್ಯಾಕಾಶಗಳಲ್ಲಿ ವಿರಾಡ್ರೂಪದಿಂದ ಬೆಳೆದು ನಿಂತುಕೊಂಡನು. ದೇವತೆಗಳು, ಋಷಿಗಳು 'ಜಯ ಜಯ' ಘೋಷ ಮಾಡಿದರು. ಮುನಿಗಳು ವೇದಮಂತ್ರಗಳಿಂದ ಹೊಗಳಿದರು.

ಆ ಭಗವಂತನು ಸೂರ್ಯನಂತೆ ಹೊಳೆಯುವ ಸಾವಿರ ಹಲ್ಲಿನ ಸುದರ್ಶನ ಚಕ್ರ ಹಿಡಿದು ಕಾಲನೇಮಿಯ ತೋಳುಗಳನ್ನೆಲ್ಲ ಕತ್ತರಿಸಿ ಹಾಕಿದನು. ಅನಂತರ ಬೆಂಕಿಯನ್ನು ಉಗುಳುವ ಆ ಕಾಲನೇಮಿಯ, ದೇವತೆಗಳನ್ನು ಅಟ್ಟ ಹಾಸಗೈಯುವ ನೂರು ಮುಖಗಳನ್ನೂ ಕತ್ತರಿಸಿಹಾಕಿದನು. ಶಿರಗಳೆಲ್ಲ ಉರುಳಿಬಿದ್ದ ಆ ಕ್ರೂರ ರಕ್ಕಸನ ಧಡೂತಿ-ದೇಹವು ಕೊಂಬೆಗಳಿಲ್ಲದ ಮೋಟುಮರದಂತೆ ರಣಾಂಗಣದಲ್ಲಿ

ಅಮಂಗಳರೂಪದಲ್ಲಿ ನಿಂತುಕೊಂಡಿತು. ಆಗ ಗರುಡನು ಬಂದು ಆ ದಾನವನ ದೇಹದ ಧಡವನ್ನು ಎದೆಗೆ ಹೊಡೆದು ಕೆಡವಿದನು.

ಆದರಿಂದ ಭೂಮ್ಯಾಕಾಶಗಳು ನಡುಗಿದವು. ಋಷಿ ಮುನಿಗಳು 'ಭಲೆ, ಭಾಪು' ಎಂದು ಶ್ರೀಹರಿಯನ್ನು ಹೊಗಳಿ ಪೂಜೆಗೈದರು, ಕಾಲನೇಮಿಯು ಹತನಾದ ಬಳಿಕ ಉಳಿದೆಲ್ಲ ದೈತ್ಯವೀರರನ್ನು ಮಹಾವಿಷ್ಣುವು ತನ್ನ ಗದಾ ಚಕ್ರಗಳಿಂದ ಹೊಡೆದು ಹತಪತಿತರನ್ನಾಗಿ ಮಾಡಿದನು. ಹೀಗೆ ದೈತ್ಯ ದಾನವ ಸೈನಿಕರೆಲ್ಲರೂ ನೆಲಕ್ಕೆ ಉರುಳಿಬಿದ್ದ ಬಳಿಕ ಈ ತಾರಕಾಮಯ ಯುದ್ಧದಲ್ಲಿ ಗೆಲುವನ್ನು ತಂದುಕೊಟ್ಟ ಶ್ರೀಹರಿಯನ್ನು ಬ್ರಹ್ಮಾದಿ ದೇವತೆಗಳು ಮತ್ತು ಬ್ರಹ್ಮರ್ಷಿ, ದೇವರ್ಷಿಗಳು ಮುಕ್ತಕಂಠದಿಂದ ಪ್ರಶಂಸಿಸಿ ಪೂಜೆಮಾಡಿದರು. ಆಗ ಶ್ರೀ ಹರಿಯು ಅಲ್ಲಿ ಕೈಮುಗಿದು ನಿಂತುಕೊಂಡ ಇಂದ್ರಾದಿ ದೇವತೆಗಳನ್ನು ಕುರಿತು ನುಡಿದನು

**ಶ್ರೀಹರಿ :-** "ನಿಮ್ಮೆಲ್ಲರಿಗೂ ಅಜೇಯನಾಗಿ ನಿಂತ ಕಾಲನೇಮಿಯನ್ನು ನಿಮಗಾಗಿ ನಾನು ವಧಿಸಿದ್ದೇನೆ. ಇಂದ್ರಾದಿ ದಿಕ್ಪಾಲಕರೆಲ್ಲರೂ ತಮ್ಮ ತಮ್ಮ ಸ್ಥಾನ ಮಾನಗಳನ್ನು ಮರಳಿ ಪಡೆಯಲಿ. ಯಜ್ಞ, ಯಾಗಾದಿ ವೈದಿಕ ಕಾರ್ಯಗಳೆಲ್ಲವೂ ಮೊದಲಿನಂತೆ ಎಲ್ಲ ಕಡೆಗೂ ನಡೆಯಲಿ. ವೇದಾಧ್ಯಯನದಿಂದ ಋಷಿಗಳು, ಯಜ್ಞಗಳಿಂದ ದೇವತೆಗಳು, ಶ್ರಾದ್ಧಾದಿಗಳಿಂದ ಪಿತೃಗಳು ತೃಪ್ತರಾಗಲಿ. ಎಲ್ಲ ಜನರೂ ಧರ್ಮಮಾರ್ಗದಲ್ಲಿ ನಡೆದು ಸುಖದಿಂದ ಜೀವಿಸಲಿ. ದೈತ್ಯರೆಲ್ಲರೂ ನಾಶ ಹೊಂದಿದ್ದಾರೆ. ನನ್ನಿಂದ ಭಯಗ್ರಸ್ತರಾದ ಅವರಿಬ್ಬರೂ ನಿಮಗೆ ಮುಂದೆ ಉಪದ್ರವ ಮಾಡಲಾರರು. ನೀವು ಇನ್ನು ಮೇಲೆ ಶಾಂತಿಯುತ ಜೀವನ ಸಾಗಿಸಿರಿ. ನಿಮ್ಮೆಲ್ಲರಿಗೂ ಕಲ್ಯಾಣವಾಗಲಿ." ಹೀಗೆ ಹೇಳಿ ಭಗವಾನ್ ಶ್ರೀ ವಿಷ್ಣುವು ಬ್ರಹ್ಮ ದೇವರ ಪ್ರಾರ್ಥನೆಯಂತೆ ಅವನೊಡನೆ ಸತ್ಯಲೋಕಕ್ಕೆ ತೆರಳಿದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಔರ್ವ ಋಷಿಯ ಸೃಷ್ಟಿ ಎಂಬ ಮೂವತ್ತೆಂಟನೇ ಅಧ್ಯಾಯ ಮುಗಿದುದು*



## ಷಣ್ಮುಖನ ಉತ್ಪತ್ತಿ



**॥ಭೀಷ್ಮ ಉವಾಚ॥**

**ಶ್ರುತಃ ಪದ್ಮೋದ್ಭವೋ ಬ್ರಹ್ಮನ್ವಿಸ್ತರೇಣ ತ್ವಯೇರಿತಃ ।**
**ಸಮಾಸಾದ್ಭವ ಮಾಹಾತ್ಮ್ಯಂ ಉತ್ಪತ್ತಿಂಚ ಗುಹಸ್ಯ ಚ ॥**

**ಭೀಷ್ಮ :-** ಪೂಜರಾದ ಪುಲಸ್ತ್ಯ ಮುನಿಗಳೆ. ನೀವು ಈ ವರೆಗೆ ಪದ್ಮ ಪ್ರಾದುರ್ಭಾವದ ವೃತ್ತಾಂತವನ್ನು ನನಗೆ ವಿಸ್ತರಿಸಿ ಹೇಳಿದಿರಿ. ಈಗ ನಿಮ್ಮ ಮುಖದಿಂದ ಶಿವನ ಮಹಿಮೆ, ಸ್ಕಂದನ, ಉತ್ಪತ್ತಿಗಳನ್ನು ಕೇಳ ಬಯಸುವೆನು. ತಾರಕಾಸುರನು ಹೇಗೆ ಬಲಿಷ್ಠನಾದ? ಅಂತಹ ಪ್ರಬಲ ಪರಾಕ್ರಮಿಯನ್ನು ಕಾರ್ತಿಕೇಯನು ಕೊಂದ ಬಗೆಯೆಂತು? ಪಾರ್ವತಿಯನ್ನು ಪರಮೇಶ್ವರನು ಹೇಗೆ ಹೊಂದಿದನು? ಇದೆಲ್ಲ ವೃತ್ತಾಂತವನ್ನು ನನಗೆ ಅರುಹಿರಿ.

**ಪುಲಸ್ತ್ಯ:-** ಪೂರ್ವ ಕಾಲದಲ್ಲಿ ದೈತ್ಯಮಾತೆಯಾದ ದಿತಿಯು ತನ್ನ ಪತಿ ಕಶ್ಯಪರ ಸೇವೆ ಮಾಡಿದಳು. ಈ ಸೇವೆಯಿಂದ ಕಶ್ಯಪನಿಗೆ ಸಂತೋಷವಾಯಿತು. ಆಗ ಸಂತಸದ ಭರದಲ್ಲಿ ಅವರು ದತಿದೇವಿಗೆ 'ವಜ್ರದೇಹಿ ಮಗನನ್ನು ಪಡೆ' ಎಂದು ವರ ವಿತ್ತರು. ವರ ವ್ಯರ್ಥವಾದೀತೇ? ಆ ದೇವಿಯು ವಜ್ರಕಾಯಾನಾದ ಮಗನನ್ನೇ ಹೆತ್ತಳು. ವಜ್ರಾಂಗನೆಂದೇ ಅವನ ಹೆಸರು. ಹುಟ್ಟಿದ ಕೂಡಲೇ ಸರ್ವಶಾಸ್ತ್ರಗಳಲ್ಲಿ ಅವನಿಗೆ ಪರಿಣಿತಿ ಹಾಗೂ ಪಾರಂಗತಿ. ಕೈ ಮುಗಿದು ಕೇಳಿದ ತನ್ನ ತಾಯಿಗೆ-

'ಅಮ್ಮಾ ನಾನು ಏನು ಮಾಡಲಿ ?'

ದಿತಿಗೆ ಮಗನ ಮುಖ ನೋಡಿಯೇ ಹಿಡಿಸಲಾರದಷ್ಟು ಹಿಗ್ಗು, ಹರ್ಷೋದ್ರೇಕದಿಂದ ನುಡಿದಳು.

**ದಿತಿ :-** ಮಗನೇ, ಏನು ಹೇಳಲಿ ನನ್ನ ದುಃಖ ! ಇಂದ್ರನು ಕೊಂದ ನನ್ನ ಮಕ್ಕಳಿಗೆ ಲೆಕ್ಕವಿಲ್ಲ. ನೀನು ನಿಜವಾಗಿ ವಜ್ರದೇಹಿ ಆಗಿದ್ದರೆ ಆ ಸೇಡನ್ನು ತೀರಿಸು. ನನ್ನ ಸವತಿಯ ಮಗನಾದ ಆ ಸುರಪತಿಯನ್ನು ಸಂಹರಿಸು.''

ತಾಯಿ ಅಪ್ಪಣೆಯನ್ನು ತಲೆಯ ಮೇಲೆ ಧರಿಸಿ ಸ್ವರ್ಗಕ್ಕೆ ನಡೆದ ಆ ಶೂರಕುಮಾರ. ಅಲ್ಲಿ ಹೋಗಿ ತನ್ನ ಬಾಹು ಪರಾಕ್ರಮದಿಂದ ಬಿಗಿದು ತಂದ-ಆ ಸ್ವರ್ಗ ಪತಿಯನ್ನು, ಬೇಡನು ಚಿಗರೆ ಮರಿಯನ್ನು ಹಿಡಿದು ತರುವಂತೆ ಶಚೀಪತಿಯನ್ನು ಸೆರೆ ಹಿಡಿದು ತಾಯಿಯ ಬಳಿಯಲ್ಲಿ ಎಳೆದು ತಂದು ನಿಲ್ಲಿಸಿದ. ಕಶ್ಯಪರು,ಬ್ರಹ್ಮದೇವರು ಆ ತಾಯಿ ಮಕ್ಕಳಿರುವ ಸ್ಥಳಕ್ಕೆ ಬಂದರು. ಬ್ರಹ್ಮನಿಗೆ ಬಹಳ ವ್ಯಸನವಾಯಿತು. ಅವರು ವಜ್ರಾಂಗನಿಗೆ ಹೇಳಿದರು.

**ಬ್ರಹ್ಮ:-** ವತ್ಸ, ಈ ಇಂದ್ರನನ್ನು ಬಿಟ್ಟುಬಿಡು. ಇವನನ್ನು ಕಟ್ಟಿಹಾಕುವದರಿಂದ ನಿನಗೇನು ಪ್ರಯೋಜನ? ದೊಡ್ಡ ಮನುಷ್ಯರಿಗೆ ಅವಮಾನವೇ ಮರಣ ಈಗ ಈ ಇಂದ್ರನು ಇದ್ದರೂ ಸತ್ತಂತೆ. ನನ್ನ ವಾಕ್ಯದಿಂದ ಇವನು ಇನ್ನು ಜೀವಿಸಿದರೂ ಜೀವನ್ಮೃತನೇ ಸರಿ. ಇದಂತೂ ದೇವೇಂದ್ರನಿಗೆ ನಿತ್ಯ ಮರಣವಿದ್ದಂತೆ.

**ವಜ್ರಾಂಗ :-** ಪಿತಾಮಹ, ಈ ಸ್ವರ್ಗಪತಿಯನ್ನು ಬಂಧಿಸಿಡುವದರಿಂದ ನನಗೇನು ಪ್ರಯೋಜನವಿಲ್ಲ. ತಾಯಿ ಆಜ್ಞೆ ಇತ್ತದ್ದರಿಂದ ಈ ಸ್ವರ್ಗಸಾಮ್ರಾಟನನ್ನು ನಾನು ಸೆರೆಹಿಡಿದು ಇಲ್ಲಿ ಕಟ್ಟಿಹಾಕಿದ್ದೇನೆ. ಆದರೆ ನೀನು ಸುರಾಸುರರಿಗೆಲ್ಲ ಒಡೆಯನಲ್ಲವೆ?

ನಿನ್ನ ಮಾತನ್ನು ಗೌರವಿಸುವುದು ನನ್ನ ಕರ್ತವ್ಯ ಆದುದರಿಂದ ಈ ಶಚೀಪತಿಯನ್ನು ಮುಕ್ತನನ್ನಾಗಿ ಮಾಡುತ್ತೇನೆ, ಇದೋ ನಾನು ಕಟ್ಟಿದ ಬಂಧನವನ್ನು ಬಿಡಿಸಿದೆ. ಇವನಿನ್ನು ಮನಬಂದತ್ತ ಹೋಗಲಿ. ಆದರೆ, ದೇವೋತ್ತಮನೆ, ನನಗೆ ಒಂದೇ ಒಂದು ಆಶೆ. ತಪಸ್ಸು ಮಾಡಬೇಕು ನಿನ್ನ ಅನುಗ್ರಹ ಪಡೆಯಬೇಕು. ಅದು ನಿರ್ವಿಘ್ನವಾಗಿ ನಡೆಯಬೇಕು. ನೀನು ನನ್ನ ಮೇಲೆ ದಯದೋರಿದರೆ ಸಾಕು.

ವಜ್ರಾಂಗನ ಈ ಬೇಡಿಕೆಯನ್ನು ಮನ್ನಿಸಿ ವರವಿತ್ತ ಬ್ರಹ್ಮದೇವರು ನಿರ್ವಿಘ್ನವಾಗಿ ತಪಸ್ಸುಮಾಡಲು ಅವನಿಗೆ ಆಶೀರ್ವದಿಸಿದರು. ಮತ್ತು ಸರ್ವಾಂಗ ಸುಂದರಿಯಾದ ಓರ್ವ ಅಂಗನೆಯನ್ನು ಸೃಷ್ಟಿಸಿ ಅವನಿಗೆ ಮಡದಿಯನ್ನಾಗಿ ಮಾಡಿದರು. ವರಾಂಗಿ ಎಂದು ಅವಳಿಗೆ ಹೆಸರಿಟ್ಟು ವಜ್ರಾಂಗನಿಗೆ ಅವಳನ್ನು ಕೊಟ್ಟು, ಆ ನವದಂಪತಿಗಳನ್ನು ಆಶೀರ್ವದಿಸಿ ಸತ್ಯಲೋಕಕ್ಕೆ ತೆರಳಿದ ಆ ಬ್ರಹ್ಮ.

ಇತ್ತ ಆ ವಜ್ರಾಂಗ ದಂಪತಿಗಳು ತಪೋನುಷ್ಠಾನಕ್ಕಾಗಿ ತಪೋವನಕ್ಕಾಗಿ ತೆರಳಿದರು. ವಜ್ರಾಂಗನು ಅತ್ಯುಗ್ರವಾದ ತಪಸ್ಸು ಕೈಕೊಂಡನು. ಸಾವಿರವರ್ಷಗಳವರೆಗೆ ತಲೆಕೆಳಗೆ ಮಾಡಿ ತಪಸ್ಸು ಮಾಡಿದನು. ಮತ್ತೆ ಸಾವಿರವರ್ಷ ತಲೆ ಮೇಲೆ ಮಾಡಿ ತೋಳುಗಳನ್ನು ಮುಗಿಲಿಗೆ ಚಾಚಿ ಶುದ್ಧ ಬುದ್ಧಿಯಿಂದ ಘೋರ ತಪಸ್ಸು ಐದು ಉರಿಗಳನ್ನು ಹೊತ್ತಿಸಿ ಪಂಚಾಗ್ನಿಮಧ್ಯ ಸಾವಿರ ವರ್ಷ ತಪಸ್ಸು. ಮತ್ತೆ ಸಾವಿರವರ್ಷ ಅನ್ನಾಹಾರವಿಲ್ಲದೆ ತಪಸ್ಸು ಕೊನೆಗೆ ನೀರಿನಲ್ಲಿ ಮುಳುಗಿ ಸಾವಿರವರ್ಷ. ಹೀಗೆ ಸಾವಿರ ಸಂಖ್ಯೆಯಲ್ಲಿ ವಜ್ರಾಂಗನ ತಪಸ್ಸು ಸಾಗಿದಾಗ ಅವನ ಮಡದಿ ವರಾಂಗಿಯೂ ಕೂಡಿ ಅದೇ ತಪೋವನದ ಸರೋವರದ ದಂಡೆಯಲ್ಲಿ ಮೌನಿ ಮುನಿ ಮಾನಿನಿಯಾಗಿ ಆಹಾರ ತೊರೆದು ನಿದ್ರೆ ತ್ಯಜಿಸಿ ಭಗವಂತನನ್ನು ಭಜಿಸಿ ಘೋರ ತಪವನ್ನು ನಡೆಸಿದಳು. ಒಂಟಿಯಾಗಿ ತೀಕ್ಷ್ಣ ತಪಂಗೈಯುವ ಆ ವರಾಂಗಿಯನ್ನು ದೇವೇಂದ್ರನು ಬಗೆ ಬಗೆಯ ರೀತಿಯಿಂದ ಹೆದರಿಸಿದನು. ತಪಸ್ಸಿನಿಂದ ಅವಳನ್ನು ಹಿಂದಿರುಗಿಸಲು ಪ್ರಯತ್ನಿಸಿದನು.

ಒಂದು ಸಲ ಕೆಟ್ಟ ಕಾಡು ಕೋತಿಯ ರೂಪದಿಂದ ಅವಳ ಆಶ್ರಮಕ್ಕೆ ಬಂದ ಆ ಪುರಂದರ. ವರಾಂಗಿ ಕುಳಿತು ಆಸನವನ್ನು ಹಿಡಿದೆಳೆಯಿತು ಆ ಕಪಿ. ಅವಳ ಕೈಯಲ್ಲಿಯ ಜಪಮಾಲೆ ಕಸಿಯಿತು. ಕೃಷ್ಣಾಜಿನ ಹರಿಯಿತು. ದೇವರ ಪೂಜೆಯ ಪಾತ್ರೆಗಳನ್ನು ಬೀಸಾಡಿತು. ಏನಾದರೂ ವರಾಂಗಿಯು ಮಿಸುಕಾಡಲಿಲ್ಲ. ತನ್ನ ತಪವನ್ನು ಬಿಡಲಿಲ್ಲ.

ಆಗ ಆ ಸುರರ ದೊರೆಯು ಅತ್ಯುಗ್ರವಾದ ಸಿಂಹ ವೇಷದಿಂದ ಬಂದು ಗುಡುಗಿದನು. ಹಾವಾಗಿ ಬಂದು ಕಾಲಿಗೆ ಕಟ್ಟಿದನು. ಏನಾದರೂ ಅವಳು ಸಾಯಲಿಲ್ಲ. ಈ ಚೇಷ್ಟೆಗಳಿಂದ ಹೆದರಲಿಲ್ಲ; ತನ್ನ ತಪಸ್ಸು ಬಿಡಲಿಲ್ಲ. ಇಂದ್ರನ ಕೀಟಲೆ ಆದರೂ ತಪವು ಮುಂದುವರಿದಿತ್ತು. ತರತರಹದ ಕಾಟ ಕೋಟಲೆಗಳಿಂದ ಕಾಡುತ್ತಲೇ ಇದ್ದ ವಜ್ರಪಾಣಿ ಆ ವರಾಂಗಿಯನ್ನು ನಾಕನಾಥನ ಈ ಉಪದ್ರವದಿಂದ ಕೊನೆಗೂ ಬೇಸತ್ತಳು ಆ ನಾರೀಮಣಿ. ಅವಳಿಗೆ ಗೊತ್ತಿಲ್ಲ ತನ್ನನ್ನು ಕಾಡುವವ ದೇವೇಂದ್ರನೆಂಬುದು. ಈ ಪರ್ವತವೇ ಬಗೆಬಗೆಯ ರೂಪತಳೆದು ತನ್ನನ್ನು ಈ ರೀತಿ ಹಿಂಸಿಸುತ್ತಿರಬೇಕು ಎಂದು ಅವಳು ಬಗೆದಳು. ಆ ಪರ್ವತಕ್ಕೆ ಶಾಪಕೊಡಲು ಹೊರಟಳು. ಅವಳ ಬಗೆಯನ್ನು ತಿಳಿದು ಭಯ ಭ್ರಾಂತವಾಯಿತು ಆ ಬೆಟ್ಟ. ಹೆದರಿ ಹೇಳಿತು ಆ ಶೈಲ ವಾರಾಂಗಿಗೆ.

**ಶೈಲ :-** ತಪಸ್ವಿನಿಯೆ, ನಿನ್ನನ್ನು ಹಿಂಸೆ ಪಡಿಸುವ ಕಾರ್ಯ ಮಾಡಿದವನಾನಲ್ಲ. ನಾನು ಅಂತಹ ದುಷ್ಟನೂ ಅಲ್ಲ. ನನ್ನ ಆಶ್ರಯ ಪಡೆದ ಈ ಬೆಟ್ಟದ ಬೆನ್ನ ಮೇಲೆ ಬಾಳಿ ಬದುಕುವ ಜೀವಿಗಳೆಲ್ಲರೂ ಸುಖದಿಂದ ಇರಬೇಕೆಂಬುದೇ ನನ್ನ ಹೆಬ್ಬಯಕೆ. ನಿನ್ನನ್ನು ಇಷ್ಟು ದಿನ ಗೋಳಾಡಿಸಿದವನು ದೇವೇಂದ್ರ ನಾನಲ್ಲ.

ಇದನ್ನು ತಿಳಿದು ವರಾಂಗಿಯು ತಾನು ಎಲೆನಿಂತ ಪರ್ವತಾಭಿಮಾನಿ ದೇವತೆಗೆ ಶಾಪ ಕೊಡಲಿಲ್ಲ. ಅಷ್ಟರಲ್ಲಿ ಸಹಸ್ರಾರು ವರ್ಷಗಳು ಉರುಳಿದ್ದವು. ಈ ವಜ್ರಾಂಗ ದಂಪತಿಗಳ ಪರಿಶುದ್ಧ ತಪಸ್ಸಿಗೆ ಬ್ರಹ್ಮದೇವರು ಮೆಚ್ಚಿ ಪ್ರತ್ಯಕ್ಷರಾದರು ವಜ್ರಾಂಗನನ್ನು ಕುರಿತು ಅನುಗ್ರಹಗೈಯುತ್ತ ಹೀಗೆ ನುಡಿದರು.

**ಬ್ರಹ್ಮ:-** ವತ್ಸ ವಜ್ರಾಂಗ, ನಿನ್ನ ತಪಸ್ಸು ಸಿದ್ಧಿಸಿದೆ. ನಿನ್ನ ಈ ಅನುಷ್ಠಾನದಿಂದ ನನಗೆ ಸಂತಸವಾಗಿದೆ. ನಿನಗೆ ಬೇಕಾದುದನ್ನು ಕೊಡುತ್ತೇನೆ. ಏನು ಬೇಕು ಕೇಳು?''

**ವಜ್ರಾಂಗ :-** ಭಗವನ್, ನನಗೆ ಈ ಕ್ರೂರವಾದ ರಕ್ಕಸ ಭಾವವು ಬೇಡವಾಗಿದೆ. ನನ್ನ ಈ ಅಸುರೀರೂಪವು ಹೋಗಬೇಕು. ನನಗೆ ಯಾವಾಗಲೂ ತಪಸ್ಸಿನಲ್ಲಿ ಅಭಿರುಚಿ ಇರಲಿ. ನಾನು ಬದುಕಿರುವವರೆಗೆ ನನ್ನ ತಪೋನಿಷ್ಠೆಗೆ ಚ್ಯುತಿ ಬರಬಾರದು. ಮುಂದೆ ನನಗೆ ಅಕ್ಷಯಲೋಕ ಪ್ರಾಪ್ತವಾಗಲಿ.''

ಬ್ರಹ್ಮದೇವರು ವಜ್ರಾಂಗನ ಈ ವರಗಳನ್ನು ಒಪ್ಪಿ ಸಂತೋಷದಿಂದ ಅವನಿಗೆ ತಪೋನಿಷ್ಠೆ ಹಾಗೂ ಶಾಶ್ವತ ಲೋಕಗಳನ್ನು ಕರುಣಿಸಿದರು. ಬ್ರಹ್ಮದೇವರು ವರವಿತ್ತ ಸತ್ಯಲೋಕಕ್ಕೆ ಪಯಣ ಬೆಳಸಿದ ಬಳಿಕ ವಜ್ರಾಂಗನಿಗೆ ತನ್ನ ಅರ್ಧಾಂಗಿಯಾದ ವರಾಂಗಿಯ ನೆನಪಾಯಿತು. ಕೂಡಲೆ ತನ್ನ ಆಶ್ರಮಕ್ಕೆ ಧಾವಿಸಿ ಬಂದ. ಹೊಟ್ಟೆಯಲ್ಲಿ ಹಸಿವೆಯ ಕಸಿವಿಸಿ. ಕಂಗಳಲ್ಲಿ ಕಾಂತೆಯನ್ನು ಕಾಣುವ ಕಾತರ. ಮನಸ್ಸಿನಲ್ಲಿ ಆತುರ. ಆದರೆ ಆಶ್ರಮದಲ್ಲಿ ಹೆಂಡತಿಯೇ ಇಲ್ಲ.

ಆ ಶೂನ್ಯಾಶ್ರಮ ಕಂಡಕೂಡಲೆ, ಆಘಾತವಾಯಿತು. ಅವನಿಗೆ ಹೊಟ್ಟೆಯಲ್ಲಿ ಹಸಿವೆಯ ತಾಂಡವ-ತಾಳಲಾರದಷ್ಟು ಉಗ್ರವಾಗಿ ನಡೆದಿತ್ತು. ಹೆಂಡತಿಯನ್ನು ಹುಡುಕಲೆ? ಹಸಿವೆಯನ್ನು ಹಿಂಗಿಸಲೆ? ಎಂದು ಹೊಯ್ದಾಡಿತು ಮನಸ್ಸು. ಏನೇ ಆಗಲಿ ಹಣ್ಣು ಹಂಪಲ ಹುಡುಕಿ ತಂದು, ಅನಂತರ ತನ್ನ ಪತ್ನಿ ಸಂಶೋಧನೆ ಮಾಡುವದಾಗಿ ಅವನು ನಿರ್ಧರಿಸಿದ.

ಹಣ್ಣಿನ ತೋಪುಗಳಿದ್ದ ಕಾಡಿನಲ್ಲಿ ನುಗ್ಗಿದ. ಇದೇನು ಆಶ್ಚರ್ಯ! ಅಲ್ಲಿಯೇ ನಿಬಿಡವಾದ ಕಾಡುಗಿಡಗಳ ಝೂಡಿನ ಮರೆಯಲ್ಲಿ ಅವನ ಮಡದಿ-ವಜ್ರಾಂಗಿ. ಅವಳ ಕಣ್ಣಿಂದ ಧಾರಾಕಾರ ನೀರು. ದುಃಖತಪ್ತಳಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ತನ್ನ ಮನದನ್ನೆ. ಅವನು ಓಡಿಹೋಗಿ ಅವಳನ್ನು ಸಂತಯಿಸಿ ನುಡಿದ.

**ವಜ್ರಾಂಗ :-** ಪ್ರಿಯೆ, ನಿನ್ನನ್ನು ಅಳಿಸಿದವರು ಯಾರು ? ಯಾವ ನೀಚನು ಯಮಲೋಕಕ್ಕೆ ಹೋಗಲು ಬಯಸಿದ್ದಾನೆ ! ನಿನ್ನ ಯಾವ ಮನೋರಥವನ್ನು ಪೂರ್ಣಮಾಡಲಿ ಹೇಳು.

**ವರಾಂಗಿ :-** ಪ್ರಿಯಕರ, ನನ್ನನ್ನು ಈ ದುಃಖ ದುರವಸ್ಥೆಗೆ ಈಡುಮಾಡಿದವ ಆ ಇಂದ್ರ. ಅವನು ನನ್ನನ್ನು ಬಹುವಿಧವಾಗಿ ಬಡೆದಿದ್ದಾನೆ. ಹೆದರಿಸಿ ಹೊಡೆದಿದ್ದಾನೆ.

ಪರಿಪರಿಯಿಂದ ಹಿಂಸಿಸಿದ್ದಾನೆ. ಅನಾಥಳಂತೆ ನನ್ನನ್ನು ಪರಿಪರಿಯಿಂದ ಕಾಡಿದ್ದಾನೆ. ಆ ದೇವೇಂದ್ರನ ಉಪದ್ರವ ತಾಳಲಾರದೆ ಸತ್ತು ಹೋಗಲು ನಾನು ಇಲ್ಲಿ ನಿಂತಿದ್ದೇನೆ. ದುಸ್ಸಹವಾದ ನನ್ನ ಈ ದುಃಖ ಒಂದು ದುಸ್ತರ ಸಾಗರವಿದ್ದಂತೆ. ಇದರಿಂದ ನನ್ನನ್ನು ಪಾರುಮಾಡುವ ಒಬ್ಬ ಸತ್ಪುತ್ರನನ್ನು ಕರುಣಿಸು.''

ಮಡದಿಯ ಮಾತು ಕೇಳಿ ಮಹಾಕೋಪಬಂದಿತು- ದೈತ್ಯ ದೊರೆ ಆ ವಜ್ರಾಂಗನಿಗೆ ಕಣ್ಣು ಕೆಂಪೇರಿದವು. ಸುರರಾಜನ ಮೇಲೆ ಸೇಡು ತೀರಿಸಿಕೊಳ್ಳುವಷ್ಟು ಶಕ್ತಿಯೂ ಇದ್ದಿತು. ಆದರೆ ಅವನಿಗೆ ಏಕೋ ಈ ಬಲ ಪ್ರಯೋಗದ ದಾರಿ ಬೇಡವೆನಿಸಿತು. ಮತ್ತೆ ತಪಸ್ಸಿಗೆ ಕುಳಿತನು. ವಜ್ರಾಂಗ ತಪೋನುಷ್ಠಾನದ ಈ ಪುನಃ ಪ್ರಯತ್ನ ಕಂಡು ಬ್ರಹ್ಮದೇವರಿಗೂ ದಿಗಿಲಾಗಿ ಅವರು ಧಾವಿಸಿ ಬಂದರು. ''ಮತ್ತೇಕೆ ಈ ತಪಸ್ಸು!'' ಎಂದು ಕೇಳಿದರು.

**ವಜ್ರಾಂಗ :-** ಪಿತಾಮಹ, ನೀನು ವರವಿತ್ತು ಹೋದ ಬಳಿಕ ನಾನು ಆಶ್ರಮಕ್ಕೆ ಬಂದೆ. ಅಲ್ಲಿ ನನ್ನ ಪತ್ನಿ ಇರಲಿಲ್ಲ. ಇಂದ್ರನು ಅವಳನ್ನು ಹೊಡೆದು, ಬೆದರಿಸಿ ಹೀಗಳೆದು ಪರಿಪರಿಯಿಂದ ಪೀಡಿಸಿದ್ದ. ಅವನ ತಾಪವನ್ನು ತಾಳಲಾರದೆ ನನ್ನ ಮಡದಿಯು ಪ್ರಾಣಾರ್ಪಣೆ ಮಾಡಲು ಸಿದ್ಧಳಾಗಿದ್ದಳು. ಅಷ್ಟರಲ್ಲಿ ನಾನು ಅಲ್ಲಿಗೆ ಹೋದೆ. ಅವಳಿಗೆ ನನ್ನಿಂದ ದುಃಖಗಳನ್ನು ಕಳೆಯುವ ಮಗನನ್ನು ಕರುಣಿಸು. ಅವನು ನಮ್ಮಿಬ್ಬರನ್ನು ದುಃಖ ಸಾಗರದಿಂದ ಪಾರುಮಾಡುವ ತಾರಕ ನಾಗಬೇಕು. ದೇವತೆಗಳಿಗೆ ಮಾರಕನಾಗಬೇಕು.

**ಬ್ರಹ್ಮ:-** ''ವಜ್ರಾಂಗ, ಇನ್ನು ನೀನು ತಪಸ್ಸು ಮಾಡಬೇಡ. ವ್ಯರ್ಥ ದುಃಖ ಪಡಬೇಡ. ನೀನು ಬಯಸಿದಂತೆ ತಾರಕನೆಂಬ ಮಗನು ಹುಟ್ಟುವನು ಅವನು ನಿಮ್ಮ ದುಃಖದ ಹೊರೆಯನ್ನು ಇಳಿಸುವನು. ಹಾಗೂ ನಿನ್ನ ಮಡದಿಯ ಅಪೇಕ್ಷೆಯಂತೆ ದೇವಸ್ತ್ರೀಯರ ಹೆರಳಿನ ಸಿರಿಯನ್ನು ಅಳಿಸುವನು.''

ಬ್ರಹ್ಮದೇವರ ಈ ಮಾತುಗಳಿಂದ ಆ ದೈತ್ಯನಿಗೆ ಸಮಾಧಾನವಾಯಿತು. ಅವನು ಓಡಿಹೋಗಿ ತನ್ನ ನೆಚ್ಚಿನ ನಲ್ಲೆಗೆ ಈ ಬ್ರಹ್ಮನ ವರದ ಸಮಾಚಾರ ತಿಳಿಸಿದನು.ಅವಳಿಗೂ ಪರಮಾನಂದವಾಯಿತು. ತಾವು ತಪಸ್ಸು ಮಾಡಿದ್ದು ಸಾರ್ಥಕ ಎನಿಸಿತು. ಮುಂದೆ ಕೆಲವು ದಿನಗಳಲ್ಲಿ ವರಾಂಗಿಯು ಬಸಿರಾದಳು. ಒಂದು ವರ್ಷದವರೆಗೆ ಆ ಗರ್ಭ ಬೆಳೆಯಿತು. ಅನಂತರ ಲೋಕ ಭಯಂಕರ ದೈತ್ಯನನ್ನು ಅವಳು ಹೆತ್ತಳು. ಆ ಉಗ್ರ ರಾಕ್ಷಸನ ಹುಟ್ಟು ಭೂಮಿ ಬೆಟ್ಟಗಳನ್ನು ನಡುಗಿಸಿತು. ಸಮುದ್ರಗಳು ಉಕ್ಕೇರಿ ಭೋರ್ಗರೆದವು. ದೆವ್ವಗಾಳಿ ಬೀಸಿತು. ಕ್ರೂರ ಪ್ರಾಣಿಗಳು ಕೂಗಿದವು. ದೈತ್ಯರೆಲ್ಲರೂ ತಮ್ಮ ಪತ್ನಿಯರೊಂದಿಗೆ ಸಂತೋಷದಿಂದ ಅಲ್ಲಿಗೆ ಬಂದು, ಮಗುವನ್ನು ಹರಸಿದರು. ಅಸುರಾಂಗನೆಯರು ಹಾಡಿದರು. ಕುಣಿದರು, ದೇವತೆಗಳು ದುಃಖ ಪಟ್ಟರು.

ಅನಂತರ ವಜ್ರಾಂಗಕುಮಾರ ಆ ತಾರಕಾಸುರನು ಹುಟ್ಟಿದೊಡನೆ ಮಹಾ ಬಲಿಷ್ಠನಾಗಿ ಕಂಗೊಳಿಸಿದನು. ಆ ಎಳೆ ಮಗುವನ್ನು ಆದರದಿಂದ ಕರೆ ತಂದು, ಕುಜಂಭ, ಮಹಿಷ ಮೊದಲಾದ ದೈತ್ಯರು ಸಿಂಹಾಸನದ ಮೇಲೆ ಕೂಡಿಸಿ ದೈತ್ಯ ಸಾರ್ವಭೌಮ ಪಟ್ಟದಲ್ಲಿ ಅಭಿಷೇಕ ಮಾಡಿದರು. ರಾಕ್ಷಸ ಸಾಮ್ರಾಜ್ಯ ಸಿಂಹಾಸನದಲ್ಲಿ ಅಧಿಷ್ಠಿತನಾದ ತಾರಕಾಸುರನು ದಾನವ ವೀರರನ್ನೆಲ್ಲ ಮುಂದೆ ಕರೆದು ಹೇಳಿದನು.

**ತಾರಕಾಸುರ :-** ಅಸುರಾಗ್ರ ವೀರರೆ, ದೇವತೆಗಳು ನಮ್ಮ ಜನ್ಮ ಶತ್ರುಗಳು. ನಮ್ಮ ವಂಶವನ್ನು ಧ್ವಂಸ ಮಾಡುವದೇ ಅವರ ಮುಖ್ಯ ಉದ್ದೇಶ ಅದಕ್ಕಾಗಿ ನಾವು ಕೂಡ ದೇವತಾ ನಿಗ್ರಹಕ್ಕಾಗಿ ತಪಸ್ಸು ಮಾಡಿ ಶಕ್ತಿ ಪಡೆಯೋಣ ನಮ್ಮ ಬಾಹುಬಲದಿಂದ ಆ ಸುರ ಸಂಘವನ್ನೆಲ್ಲ ಸಂಹರಿಸೋಣ.

ತಾರಾಕಾಸುನು ಹೀಗೆ ದೈತ್ಯ ವೀರರಿಗೆಲ್ಲ ಹೇಳಿ, ಪಾರಿಯಾತ್ರ ಪರ್ವತಕ್ಕೆ ತಪಸ್ಸಿಗಾಗಿ ತೆರಳಿದನು. ಅಲ್ಲಿ ಆಟ, ಊಟ, ನೋಟ, ತಿರುಗಾಟ ಬಿಟ್ಟು ಉಗ್ರ ತಪಸ್ಚರ್ಯೆಯನ್ನು ಕೈಕೊಂಡನು. ನೀರು ಕುಡಿಯುವದು, ಎಲೆ ತಿನ್ನುವದು, ಪಂಚಾಗ್ನಿ ಮಧ್ಯ ನಿಲ್ಲುವದು, ಹಗಲಿರುಳೂ ತಪಸ್ಸು ಮಾಡುವದು, ಹೀಗೆ ಸಾವಿರಾರು ವರ್ಷ ನಿರಂತರ ನಡೆಯಿತು ತಪಸ್ಸು. ಅವನ ದೇಹವೆಲ್ಲ ಸೊರಗಿ ಕಟ್ಟಿಗೆಯಾಯಿತು. ಬ್ರಹ್ಮ ಬಂದ. 'ವರಕೇಳು' ಎಂದ.

**ತಾರಕಾಸುರ :-** ಯಾವ ಪ್ರಾಣಿಯಿಂದಲೂ ನನಗೆ ಸಾವು ಬರಬಾರದು ಇಂತಹ ವರ ಕೊಡು

**ಬ್ರಹ್ಮ:-** ಹುಟ್ಟಿದವರಿಗೆ ಸಾಯುವದು ಕಟ್ಟಿಟ್ಟದ್ದು. ಜನನವಾದವನಿಗೆ ಮರಣ ಅನಿವಾರ್ಯ. ಆದರೆ ನಿನಗೆ ಯಾರಿಂದ ಮರಣ ಬರಬಾರದು ಎನ್ನುವದನ್ನು ಹೇಳು.

ಬ್ರಹ್ಮದೇವರ ಈ ಸವಾಲನ್ನು ಎದುರಿಸುವ ಬುದ್ಧಿ ಇರಲಿಲ್ಲ- ಆ ತಾರಕನಿಗೆ. ಅವನು ಯೋಚಿಸಿಯೇ ಯೋಚಿಸಿದ. ತಲೆ ಚಚ್ಚಿಕೊಂಡು ವಿಚಾರಿಸಿದ. ಏನೂ ಹೊಳೆಯಲಿಲ್ಲ. ಹೆಮ್ಮೆಯಿಂದ ಅವನು ಬುದ್ಧಿ ಹಾಳಾಗಿ ಹೋಗಿತ್ತು. ಕೊನೆಗೆ ದಿಙ್ಮೂಢನಾಗಿ ಕೇಳಿಕೊಂಡ.

**ತಾರಕಾಸುರ :-** ಹುಟ್ಟಿ ಏಳು ದಿನಗಳಾಗಿರುವ ಎಳೆಯ ಮಗುವಿನಿಂದ ನನಗೆ ಮರಣ ಬರಬೇಕು.

ಬ್ರಹ್ಮ ಏನು ಬಾಧಕ! 'ಹಾಗೇ ಆಗಲಿ' ಎಂದರು. ಅವನು ಕೇಳಿದ ವರಕೊಟ್ಟು ಪಿತಾಮಹ ತನ್ನ ಲೋಕಕ್ಕೆ ನಡೆದ. ಅನಂತರ ತಾರಕನು ಮನೆಗೆ ಮರಳಿ ಮಂತ್ರಿಗಳನ್ನು ಕರೆಸಿದ ಅವರಿಗೆ ಅಪ್ಪಣೆ ನೀಡಿದ. ''ನಿಮಗೆಲ್ಲ ನನಗೆ ಸಂತೋಷವನ್ನುಂಟು ಮಾಡಬೇಕೇಂದಿದೆಯಲ್ಲವೆ ! ಹಾಗಿದ್ದರೆ ಈಗಲೇ ಹೊರಡಿರಿ. ಸ್ವರ್ಗಕ್ಕೆ ಲಗ್ಗೆ ಇಡಿರಿ. ದೇವತೆಗಳನ್ನು ಹಿಡಿಯಿರಿ. ಸುರರನ್ನೆಲ್ಲ ಸೆರೆಯಾಳುಗಳನ್ನಾಗಿ ಹಿಡಿದು ತನ್ನಿರಿ. ಇದರಿಂದಲೇ ನನಗೆ ಪ್ರೀತಿ.''

ತಾರಕನ ಈ ಮಾತು ಕೋತಿಗಳಿಗೆ ಸೆರೆ ಕುಡಿಸಿದಂತಾಯಿತು. ಹೊರಟೇ ಬಿಟ್ಟ ಗ್ರಸನ ಎಂಬ ದುಷ್ಟ ದಾನವ. ಸೈನ್ಯ ಸಜ್ಜಗೊಳಿಸಿದ. ನಗಾರಿ ಹೊಡೆಸಿದ. ತಮ್ಮಟೆ ಬಾರಿಸಿದ. ಹತ್ತು ಕೋಟಿ ದಾನವರನ್ನು ಕೂಡಿಸಿದ. ಒಬ್ಬೊಬ್ಬರೂ ಚಂಡ ಪ್ರಚಂಡರು. ಅವರಲ್ಲಿ ಜಂಭ ಮುಂದಾಳು-ಅವರಿಗೆಲ್ಲ. ಕುಜಂಭ ಅವನು ಹಿಂದಾಳು.

ಅವರಿಗೆ ಬೆಂಬಲರಾಗಿ ಮಹಿಷ, ಕುಂಜರ, ಮೇಘ, ಶಂಭು, ಮಂಥನ, ನಿಮಿ ಕಾಲನೇಮಿ, ಕುಜಂಭ ಈ ಹತ್ತು ದೈತ್ಯ ಕುಲದ ಹಿರಿ ಹುದ್ದರಿಗಳು. ಇವರಲ್ಲದೆ ಇವರ ಅನುಯಾಯಿಗಳಾಗಿ ಸಹಸ್ರಾರು ದೈತ್ಯ ದಾನವ ಧುರೀಣರು. ಭೂಮಿಯನ್ನೇ ಎತ್ತಿ ತೂರುವಷ್ಟು ಬಲ ಒಬ್ಬೊಬ್ಬರಲ್ಲಿ. ಒಬ್ಬೊಬ್ಬರೂ ಚಿತ್ರ ವಿಚಿತ್ರ ವಾಹನಗಳನ್ನೇರಿ ಹೊರಟರು. ಸಿಂಹಗಳ ಮೇಲೆ ಕೆಲವರು, ಹುಲಿಗಳ ಮೇಲೆ ಹಲವರು, ಕತ್ತೆಗಳ ಮೇಲೆ ಕೆಲವರು, ಒಂಟೆಗಳ ಮೇಲೆ

ಅದೆಷ್ಟೋ ಜನರು, ಆಡುಗಳ ಮೇಲೆ ಹತ್ತಿದವರು ಎಷ್ಟೋ ದೈತ್ಯರು. ದೈತ್ಯರ ಸಮರ ಸನ್ನಾಹ ತಿಳಿದದ್ದು ಮೊದಲು ವಾಯುದೇವನಿಗೆ. ಅವನು ಸುರಸಭೆಗೆ ಬಂದು ಈ ಸಮಾಚಾರ ತಿಳಿಸಿದ. ಅದನ್ನು ಕೇಳಿದ ಕೂಡಲೇ ಇಂದ್ರನ ಕಣ್ಣು ಕತ್ತಲೆಗೂಡಿದವು. 'ಮುಂದೇನು? ಎಂದು ಬೃಹಸ್ಪತಿಯನ್ನು ಕೇಳಿದ ಸುರಪತಿ. ಆತ ಹೇಳಿದ್ದು ಇಷ್ಟು:

**ಬೃಹಸ್ಪತಿ :-** ಉಪಾಯಗಳು ನಾಲ್ಕು- ಸಾಮ, ದಾನ, ಭೇದ, ದಂಡ ಎಂದು. ಈಗ ದೈತ್ಯರ ಮೇಲೆ ಮೊದಲಿನ ಮೂರು ಉಪಾಯಾಗಳು ಸಾಗಲಾರವು. ಉಳಿದದ್ದು ಕೊನೆಯದೊಂದೇ. ದಂಡೋಪಾಯವೇ ನಮಗೆ ಈಗ ತಾರಕ. ಆ ತಾರಕನನ್ನು ತುಳಿಯಲು ಅದಕ್ಕಾಗಿ ದಂಡಯಾತ್ರೆ ಹೊರಡಬೇಕು'.

ಆಚಾರ್ಯನ ಆದೇಶದಂತೆ ಸುರರಾಜನು ಶೀಘ್ರವೇ ಯುದ್ಧ ಸಿದ್ಧತೆಗಾಗಿ ಅಪ್ಪಣೆ ನೀಡಿದ. ಸೇನಾಪತಿ ಪಟ್ಟದಲ್ಲಿ ಕಾಲಾಂತಕನಾದ ಯಮನನ್ನೇ ಕೂಡಿಸಿ ಪಟ್ಟಾಭಿಷೇಕ ಗೈದ. ಸುರಸೇನೆಯ ಪ್ರಚಂಡ ಸನ್ನಾಹದೊಂದಿಗೆ ರಣಾರಂಗಕ್ಕೆ ಇಳಿಯಿತು. ತನ್ನ ಕೋಣವನ್ನು ಆರೋಹಣಮಾಡಿ ಕಾಲನು ಮುಂಚೂಣಿಯಲ್ಲಿ ನಿಂತು ಕೊಂಡ. ಮೇಕೆಯ ಮೇಲೆ ಹತ್ತಿ ಶಕ್ತಿಯನ್ನು ಕೈಯಲ್ಲಿ ಹಿಡಿದು ಅಗ್ನಿಯು ಅವನನ್ನು ಹಿಂಬಾಲಿಸಿದ. ಹಾವಿನ ಹೆಗಲ ಮೇಲೆ ಹತ್ತಿ ವರುಣನು ರಣರಂಗಕ್ಕೆ ಧಾವಿಸಿದ. ಸಿಂಹ ಮೂಡಿದ ರಥದಲ್ಲಿ ಕುಬೇರನೂ, ಐರಾವತಾರೂಢನಾಗಿ ದೇವೇಂದ್ರನೂ ಮತ್ತು ಬೇರೆ ಬೇರೆ ವಾಹನಾರೂಢರಾದ ದೇವತೆಗಳೂ ಸಂಗ್ರಾಮಾಂಗಣಕ್ಕೆ ಬಂದು ಹೋರಾಟಕ್ಕೆ ಅಣಿಯಾಗಿ ನಿಂತುಕೊಂಡರು ತಮ್ಮ ಪ್ರಚಂಡ ಸೈನಿಕ ಬಲದೊಂದಿಗೆ.

ಆರಂಭವಾಯಿತು ಸುರಾಸುರರ ಸಂಗ್ರಾಮ. ಒಳ್ಳೇ ಕಲಿತನದಿಂದ ಎರಡೂ ಪಂಗಡಗಳ ಸೈನಿಕರು ಹೋರಾಡಿದರು. ದೇವ ಸೈನಿಕರು ಅಸಂಖ್ಯ ಶಸ್ತ್ರಾಸ್ತ್ರಗಳನ್ನು ಗುರಿಯಿಟ್ಟು ತಾರಕಾಸುರನ ಮೇಲೆ ಬೀಸಿದರು. ಅವು ಯಾವವೂ ವಜ್ರ ಪರ್ವತದಂತೆ ಅಚಲನಾಗಿ ನಿಂತಿದ್ದ ಆ ದೈತ್ಯರಾಜನಿಗೆ ಅಪಾಯ ಮಾಡಲಿಲ್ಲ. ಅವನ ಮೈಗೆ ನಾಟಲಿಲ್ಲ. ಅನಂತರ ಆ ದೈತ್ಯೇಂದ್ರನು ತಾನೇ ರಭಸದಿಂದ ಕೆಳಗೆ ಧುಮುಕಿ ದೇವತೆಗಳ ಗುಂಪಿನಲ್ಲಿ ಸಿಂಹದಂತೆ ಹೊಕ್ಕನು. ಕೈಗೆ ಸಿಕ್ಕವರನ್ನೆಲ್ಲ ಹೊಡೆದನು, ಮಣ್ಣು ಗೂಡಿಸಿದನು. ತಾರಕಾಸುರನ ಈ ರೌದ್ರ ರೋಷಾವೇಶಕ್ಕೆ ಸತ್ತು ಹೋದ ದೇವತೆಗಳಲ್ಲಿ ಲೆಕ್ಕವಿಲ್ಲ. ಉಳಿದವರು ತಮ್ಮ ಶಸ್ತ್ರಾಸ್ತ್ರ ಬಿಟ್ಟು ಓಡಿ ಹೋದರು. ಆಗ ತಾರಕನು ದೈತ್ಯರಿಗೆ ಹೇಳಿದನು.

**ತಾರಕ :-** ದೈತ್ಯವೀರರೆ, ದೇವತೆಗಳನ್ನು ಕೊಲ್ಲಬೇಡಿರಿ, ಅವರನ್ನೆಲ್ಲ ಸೆರೆ ಹಿಡಿದು ಎಳೆದುಕೊಂಡು ನಡೆಯಿರಿ'.

ಅವನ ಆದೇಶದಂತೆ ದಾನವವೀರರು ದೇವೇಂದ್ರನನ್ನೂ, ಶ್ರೀ ಹರಿಯನ್ನು ಹಗ್ಗಗಳಿಂದ ಬಿಗಿದು ಕಟ್ಟಿದರು. ದನಗಳನ್ನು ಎಳೆದೊಯ್ಯುವಂತೆ ಅವರನ್ನು ಎಳೆದು ತಂದರು. ಆಗ ತಾರಕಾಸುರನು ರಥದಲ್ಲಿ ಕುಳಿತು ವಜ್ರಾಂಗನು ತಪಸ್ಸು ಮಾಡುವ ಬೆಟ್ಟದ ಮೇಲ್ಭಾಗಕ್ಕೆ ಬಂದನು. ದೈತ್ಯ ಗಂಧರ್ವರು ಅವನ ಶೌರ್ಯವನ್ನು ಹೊಗಳಿ ಹಾಡಿದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಷಣ್ಮುಖನ ಉತ್ಪತ್ತಿ ಎಂಬ ಮೂವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

**॥ಪುಲಸ್ತ್ಯ ಉವಾಚ॥**

**ಪ್ರಾದುರಾಸೀತ್ಪ್ರತೀಹಾರಃ ಶುಭ್ರ ಚೀನಾಂಶುಕಾಂಬರಃ ।**
**ಸ ಜಾನುಭ್ಯಾಂ ಮಹೀಂ ಗತ್ವಾ ಪಿಹಿತಾಸ್ಯಶ್ಚ ಪಾಣಿನಾ ॥**

**ಪುಲಸ್ತ್ಯ**:- ತಾರಕಾಸುರನು ತನ್ನ ಆಸ್ಥಾನದಲ್ಲಿ ಕುಳಿತುಕೊಂಡಾಗ ಬೆಳ್ಳಗಾದ ಚೀನಾ ದೇಶದ ಬಟ್ಟೆ ಉಟ್ಟುಕೊಂಡು ಪ್ರತೀಹಾರಿ ಒಳಗೆ ಪ್ರವೇಶಿಸಿದನು. ಮೊಣಕಾಲು ಮಂಡೆ ನೆಲಕ್ಕೆ ಊರಿ ನಮಸ್ಕಾರಮಾಡಿ, ತನ್ನ ಬಾಯಿ ಮುಂದೆ ಕೈ ಹಿಡಿದುಕೊಂಡು ಆ ದೈತ್ಯರಾಜನನ್ನು ಕುರಿತು ನುಡಿದನು.

**ಪ್ರತೀಹಾರಿ** :- ಮಹಾಪ್ರಭು, ಕಾಲನೇಮಿಯು ಎಲ್ಲ ದೇವತೆಗಳನ್ನು ಬಿಗಿದು ತಂದು, ಬಾಗಿಲಲ್ಲಿ ನಿಂತುಕೊಂಡಿದ್ದಾನೆ. 'ಸೆರೆಹಿಡಿದುಕೊಂಡು ಬಂದ ಸುರರನ್ನೆಲ್ಲ ಎಲ್ಲಿ ಇಡಲಿ?' ಎಂದು ತಮ್ಮಲ್ಲಿ ವಿಜ್ಞಾಪಿಸಿಕೊಳ್ಳುತ್ತಿದಾನೆ.

**ತಾರಕಾಸುರ** :- ಅವರು ಬೇಕಾದಲ್ಲಿ ಇರಲಿ, ಬಿಟ್ಟುಬಿಡಿರಿ. ಮೂರು ಲೋಕವೆಲ್ಲವೂ ನನ್ನದೇ ಮನೆ. ಆದರೆ ದೇವೇಂದ್ರನಿಗೆ ಮಾತ್ರ ಚೆನ್ನಾಗಿ ತಲೆ ಬೋಳಿಸಿ ಬಿಡಿರಿ. ಇಷ್ಟೇ ಅಲ್ಲ. ಅವನ ಮೈಗೆ ನಾಯಿಯ ಕಾಲಿನಿಂದ ಬರೆ ಹಾಕಿರಿ, ಕತ್ತೆಯ ಕಾಲಿನಿಂದ ಕುತ್ತಿಗೆಯಲ್ಲಿ ಗುರುತು ಮಾಡಿರಿ. ಬಿಳಿ ಬಟ್ಟೆ ಹೊದಿಸಿರಿ, ಇಷ್ಟು ಮಾಡಿ ಅವನು ಬೇಕಾದಲ್ಲಿ ಹೋಗಲಿ ಬಿಟ್ಟು ಬಿಡಿರಿ.

**ಪುಲಸ್ತ್ಯ** :- ತಾರಾಕಾಸುರನ ಆಜ್ಞೆಯಂತೆ ದೈತ್ಯರು ದೇವೇಂದ್ರನಿಗೆ ಅತ್ಯಂತ ಅವಮಾನವಾಗುವಂತೆ ಮಾಡಿದರು. ಆದರಿಂದ ದೇವತೆಗಳಿಗೆಲ್ಲ ಮುಕ್ತರಾಗಿದ್ದರೂ ಕಡು ದುಃಖವಾಯಿತು. ಅವರೆಲ್ಲರೂ ಜಗದ್ಗುರುವಾದ ಬ್ರಹ್ಮದೇವರಿಗೆ ಶರಣು ಹೋದರು. ನೆಲಕ್ಕೆ ತಲೆ ಹಚ್ಚಿ ನಮಸ್ಕರಿಸಿ, ಖಿನ್ನ ಮನಸ್ಸಿನಿಂದ ಆ ಕಮಲಾಸನನ್ನು ಸ್ತೋತ್ರಗೈದರು.

ದೇವತೆಗಳ ಪ್ರಾರ್ಥನೆಯಿಂದ ಸಂತುಷ್ಟನಾದ ಬ್ರಹ್ಮದೇವನು ದೇವತೆಗಳನ್ನು ಬೆರಳು ಮಾಡಿ ತೋರಿಸಿ ಕೇಳಿದನು ಒಬ್ಬೊಬ್ಬರನ್ನಾಗಿ.

**ಬ್ರಹ್ಮ** :- ದೇವೇಂದ್ರನೆ, ಗಂಡ ಸತ್ತ ಗರತಿಯಂತೆ ನೀನೇಕೆ ಕಳೆಗೆಟ್ಟು ಹೋಗಿರುವಿ ? ನಿನ್ನ ಮುಖವೇಕೆ ಬಾಡಿದೆ ? ಮೈಮೇಲಿನ ಆಭರಣಗಳನ್ನು ಏಕೆ ತೆಗೆದಿಟ್ಟಿರುವೆ?

ಅಗ್ನಿಯೆ, ಹೊಗೆ ಇಲ್ಲದಿದ್ದರೂ ನೀನು ಎಷ್ಟು ನಿಸ್ತೇಜನಾಗಿರುವೆ? ಯಮನೆ, ನಿನಗೆ ಏನಾದರೂ ರೋಗ ಬಂದಿದೆಯೆ? ಆ ಯಮದಂಡವನ್ನೇ ಊರುಗೋಲಿನಂತೆ ಇಟ್ಟು ಕುಂಟುತ್ತ ನಡೆಯುತ್ತಿರವೆಯಲ್ಲ? ಚಂದ್ರನೆ, ಇಷ್ಟೇಕೆ ಹೆದರಿಹೋಗಿರುವೆ? ದೈತ್ಯರಿಂದೇನಾದರೂ ನೀನು ಏಟು ತಿಂದಿರುವೆಯಾ? ವರುಣನೆ ನಿನ್ನ ದೇಹವೆಲ್ಲವೂ ಬೆಂಕಿಯಲ್ಲಿ ಬೆಂದಂತೆ ಬಸವಳಿದು ಹೋಗಿದೆಯಲ್ಲ? ನಿನ್ನ ಕಾಲಲ್ಲಿ ರಕ್ತವೇ ಇಲ್ಲವೆ?

ವಾಯುವೆ, ಖಡ್ಗದಿಂದ ಕತ್ತರಿಸಲ್ಪಟ್ಟಂತೆ ನೀನೇಕೆ ಪ್ರಜ್ಞಾಶೂನ್ಯನಾಗಿರುವೆ? ಕುಬೇರ, ನೀನು ಐಶ್ವರ್ಯ ಕಳೆದುಕೊಂಡು ನತದೃಷ್ಟನಂತೆ ಏಕೆ ಬಳಲುತ್ತಿರುವಿ? ಮಧುಸೂದನನೆ, ನೀನೇಕೆ ಇಷ್ಟು ಉದಾಸೀನಾಗಿರುವಿ? ನಿನ್ನ ಕೈಯಲ್ಲಿಯ ಈ ಚಕ್ರವು ಇಷ್ಟು ನಿರ್ವೀರ್ಯವೇಕಾಗಿದೆ? ಈ ನಿನ್ನ ತೇಜಶ್ಶಕ್ತಿಯನ್ನು ಅಪಹರಿಸಿದವರು ಯಾರು?

ಬ್ರಹ್ಮದೇವರ ಈ ಮಾತನ್ನು ಕೇಳಿ, ಸುರರೆಲ್ಲರೂ ತಮ್ಮ ಕಷ್ಟವನ್ನು ಆ ಪಿತಾಮಹನಿಗೆ ನಿವೇದಿಸಲು ವಾಯುದೇವನಿಗೆ ವಿಜ್ಞಾಪಿಸಿಕೊಂಡರು. ಶ್ರೀ ಹರಿಯ ಆಜ್ಞೆಯೂ ಆಯಿತು ಆ ಮಾರುತನಿಗೆ. ಆಗ ಆ ಪವನದೇವನು ಚತುರ್ಮುಖನನ್ನು ಕುರಿತು ಅಂದನು.

**ವಾಯು :-** ಬಲಿಷ್ಠರಾದ ದೈತ್ಯರು ಇಂದ್ರಾದಿ ದೇವತೆಗಳನ್ನೆಲ್ಲ ಬಲಾತ್ಕಾರದಿಂದ ಗೆದ್ದಿದ್ದಾರೆ. ದೇವತೆಗಳ ವಿಮಾನಗಳನ್ನೆಲ್ಲ ಅಪಹರಿಸಿದ್ದಾರೆ. ಸ್ವರ್ಗವನ್ನು ಆಕ್ರಮಿಸಿದ್ದಾರೆ. ದೇವತೆಗಳ ವಾಸಸ್ಥಳವಾದ ಮೇರು ಪರ್ವತವನ್ನು ತಮ್ಮ ವಿಹಾರ ಭೂಮಿಯನ್ನಾಗಿ ಮಾಡಿಕೊಂಡಿದ್ದಾರೆ.

ಇಷ್ಟೆಲ್ಲ ಅನಾಹುತಗಳನ್ನು ಮಾಡುತ್ತಿರುವ ರಾಕ್ಷಸರಿಗೆಲ್ಲ ನಿನ್ನಿಂದ ಭುವನ ರಾಜನಾಗಿ ಮಾಡಲ್ಪಟ್ಟ ಆ ತಾರಕಾಸುರನೇ ಪ್ರೇರಕ ಶಕ್ತಿಯಾಗಿದ್ದಾನೆ. ಪ್ರಭುವಾಗಿ ನಿಂತುಕೊಂಡಿದ್ದಾನೆ. ಮೇರು, ಮಂದರ ಮುಂತಾದ ಸುವರ್ಣ ಪರ್ವತಗಳೆಲ್ಲವೂ ಆ ದೈತ್ಯರಾಜನ ಭೋಗ ಭೂಮಿಗಳಾಗಿವೆ. ಅವನಿಗೆ ಪ್ರತೀಕಾರ ಮಾಡ ಹೊರಟ ನಮ್ಮ ಆಯುಧಗಳೆಲ್ಲವೂ ನಿಷ್ಕ್ರಿಯವಾದವು.

ಅವನ ಮೇಲೆ ಪ್ರಯೋಗಿಸಿದ ವಜ್ರಾಯುಧವೂ ಕೂಡ ನೂರು ಚೂರಾಗಿ ಮುರಿದು ಬಿದ್ದಿತು. ನಮ್ಮೆಲ್ಲ ದೇವತೆಗಳನ್ನು ದೈತ್ಯ ಸೈನಿಕರು ಸೆರೆಹಿಡಿದು ತಾರಕಾಸುರನ ಆಸ್ಥಾನಕ್ಕೆ ಸೆಳೆದೊಯ್ದರು. ಅಲ್ಲಿ ನಮ್ಮನ್ನೆಲ್ಲ ಹಾಸ್ಯ ಮಾಡಿದರು ಹೀಗಳೆದರು. ಸಿದ್ಧ ಗಂಧರ್ವರು ಈಗ ಅವನನ್ನೇ ಎಷ್ಟು ತಪ್ಪು ಮಾಡಿದರೂ ಹಾಡಿ ಹೊಗಳುತ್ತಿದ್ದಾರೆ. ಅವನಿಗೆ ವಿಧಿ ನಿಷೇಧಗಳೇ ಇಲ್ಲ, ಗುರು ಹಿರಿಯರನ್ನು ಧಿಕ್ಕರಿಸುತ್ತಾನೆ ಮಿಥ್ಯಭಾಷಣ, ಉನ್ಮತ್ತ ನಡತೆ, ಉಚ್ಛೃಂಖಲ ವೃತ್ತಿ, ಸ್ವಚ್ಛಂದ ಪ್ರವೃತ್ತಿ, ಪ್ರತಿಜ್ಞಾ ಉಲ್ಲಂಘನ ಒಂದೇ ಎರಡೇ ಆ ದೈತ್ಯನ ದುರ್ಗುಣ! ಅವನ ಅವಿವೇಕ ಹಾಗೂ ಅನುಗುಣಗಳನ್ನು ಹೇಳಲು ಯಾರಿಗೂ ಶಕ್ಯ? ಅವನನ್ನು ಹುಟ್ಟಿಸಿದ ಬ್ರಹ್ಮನೇ ಬರಬೇಕು ಆ ದುರುಳ ದೈತ್ಯ ದೊರೆಯ ದುರ್ಗುಣಗಳನ್ನು ಪೂರ್ಣವಾಗಿ ಹೇಳಲು.

ವಾಯು ವಿವರಿಸಿದ ದೈತ್ಯಾಧಮನ ಈ ವ್ಯಕ್ತಿ ಚಿತ್ರ ಹಾಗೂ ವ್ಯವಹಾರಗಳನ್ನು ಕೇಳಿ ಬ್ರಹ್ಮದೇವನಿಗೆ ನಗೆ ಬಂದಿತು. ನಸು ನಕ್ಕು ನುಡಿದನು- ಆ ಪಿತಾಮಹ.

**ಬ್ರಹ್ಮ :-** ಸುರರಾಗಲಿ, ಅಸುರರಾಗಲಿ, ಆ ದೈತ್ಯನನ್ನು ಕೊಲ್ಲಲಾರರು. ಆ ದುಷ್ಟ ರಕ್ಕಸನನ್ನು ಕೊಲ್ಲುವ ಗಂಡಸು ಇನ್ನೂ ಹುಟ್ಟಿಲ್ಲ. ಮೂರು ಲೋಕಗಳನ್ನೆಲ್ಲ ಸುಡುತ್ತ ಸುತ್ತಾಡುತ್ತಿದ್ದ ಆ ಅಸುರರನ್ನು ನಾನೇ ವರಕೊಟ್ಟು ಜಗತ್ತು ದಗ್ಧವಾಗದಂತೆ ತಡೆದಿದ್ದೇನೆ. ಏಳು ದಿನದ ಹಸುಗೂಸಿನಿಂದ ತನಗೆ ವರವನ್ನು ಬೇಡಿಕೊಂಡಿದ್ದಾನೆ- ಆ ದೈತ್ಯ. ಆ ಹಸುಗೂಸು ಮಹಾದೇವನಿಂದಲೇ ಹುಟ್ಟಿ ಬರಲಿದೆ. ಬರಲಿರುವ ಆ ಭವ ಕುಮಾರ ಪ್ರತಿ ಸೂರ್ಯನಂತೆ ಕಂಗೊಳಿಸಿ, ಬೆಳಕಿನ ಬೆಟ್ಟದಂತೆ ಬೆಳಗಿ, ತಾರಕನನ್ನು ಮುಗಿಸುವನು.

ಆದರೆ ಇವೆಲ್ಲವೂ ಮುಂದಿನ ಮಾತು. ಇನ್ನು ಶಿವ ಮದುವೆಯಿಲ್ಲದೆ ಇರುತ್ತಾನೆ. ಅವನ ಹೆಂಡತಿಯು ಇನ್ನೂ ಹುಟ್ಟಿಲ್ಲ. ಹಿಮಗಿರಿಯ ಮಗಳಾಗಿ ಜನಿಸಲಿರುವಳು- ಭವನ ಭಾವಿ ಪತ್ನಿ ಭವಾನಿ ಅವಳು ಹುಟ್ಟಿ ಶಿವನನ್ನು ಮದುವೆಯಾಗಿ ಮಗನನ್ನು ಹಡೆಯುವಳು. ಶಿವಸತಿಯರ ಕುಮಾರನು ಆ ತಾರಕನಿಗೆ ಮಾರಕನಾಗುವನು. ಅನಂತರ ನೀವು ಅವನ ಅಧಿಕಾರ ಐಶ್ವರ್ಯವನ್ನೆಲ್ಲ ಹಂಚಿಕೊಳ್ಳುವಿರಂತೆ. ಅಲ್ಲಿಯವರೆಗೆ ತುಸು ಕಾಯಿರಿ. ಹೀಗೆ

ಹೇಳಿ ಬ್ರಹ್ಮದೇವನು ದೇವತೆಗಳನ್ನೆಲ್ಲ ಸಂತಯಿಸಿ ಕಳಿಸಿಕೊಟ್ಟನು. ನಂತರ ಈ ಮೊದಲೇ ಜನಿಸಿದ ನಿಶಾದೇವಿಯನ್ನು ಸ್ಮರಿಸಿದನು. ಅವಳನ್ನು ಕುರಿತು ಆಜ್ಞೆ ಮಾಡಿದನು.

**ಬ್ರಹ್ಮ:-** ವಿಭಾವರಿ, ಮಹತ್ತರವಾದ ದೇವತಾಕಾರ್ಯವನ್ನು ನೀನು ಮಾಡಬೇಕು. ನೀನು ಈಗ ನಿನ್ನ ಕರ್ತವ್ಯಕ್ಕಾಗಿ ಸಿದ್ಧಳಾಗು. ತಾರಕ ಎಂಬ ದೈತ್ಯರಾಜನು ಸುರಸಮೂಹಕ್ಕೆ ಧೂಮಕೇತುವಿನಂತೆ ಬೆಳೆದು,ಬಲಿಷ್ಠನಾಗಿ ನಿಂತು ಕೊಂಡಿದ್ದಾನೆ. ಅವನ ಸಂಹಾರಕ್ಕಾಗಿ ಮಹಾದೇವನು ಮಗನನ್ನು ಪಡೆಯಲಿರುವನು.

ಹಿಂದೆ ದಾಕ್ಷಾಯಣಿಯ ಶಂಕರನ ಪತ್ನಿ ಆಗಿದ್ದಳಷ್ಟೇ! ಅವಳು ಕಾರಣಾಂತರದಿಂದ ತಂದೆಯ ಮೇಲೆ ಕೋಪ ಬಂದು ಆ ದೇಹ ಬಿಟ್ಟು ಹಿಮಗಿರಿಯ ಕನ್ಯೆಯಾಗಿ ಜನಿಸಲಿರುವಳು. ಮೆಚ್ಚಿನ ಮಡದಿಯಾದ ಆ ಸತೀದೇವಿಯ ವಿರಹ ವೇದನೆಯಿಂದ ಶಿವನಿಗೆ ಭುವನ ಮಂಡಲವೆಲ್ಲವೂ ಬರಿದೋ ಬರಿದು ಶೂನ್ಯಪ್ರಾಯ. ಆದುದರಿಂದ ಹಿಮಾಚಲದ ಒಂದು ಕಂದರದಲ್ಲಿ ಆ ಮಹಾದೇವಿಯ ಮರು ಹುಟ್ಟನ್ನು ಎದುರು ನೋಡುತ್ತ ಕೆಲ ದಿನ ವಾಸ ಮಾಡಲಿರುವನು.

ಆ ಪಾರ್ವತೀ ಪರಮೇಶ್ವರರ ತಪಸ್ಸಿನ ಫಲವಾಗಿ ತಾರಕಾಂತಕನು ಹುಟ್ಟಿ ಬರುವನು. ಇದೆಲ್ಲ ಮುಂದಿನ ಘಟನೆ ನಡೆಯುವದಕ್ಕಿಂತ ಮೊದಲು ನೀನೊಂದು ಕಾರ್ಯ ಮಾಡಬೇಕಾಗಿದೆ ದಾಕ್ಷಾಯಣಿಯು ಸತೀ ಜನ್ಮವನ್ನು ತೊರೆದು ಪಾರ್ವತಿಯಾಗಿ ಹಿಮಗಿರಿಯ ಹೊಟ್ಟೆಯಿಂದ ಹುಟ್ಟಿ ಬರುವಳಷ್ಟೆ! ಆ ಕಾಲದಲ್ಲಿ ಬೆಟ್ಟದ ಹೊಟ್ಟೆಯಿಂದ ಹುಟ್ಟಿದ ಆ ಭವಾನಿಗೆ ಸ್ವಲ್ಪ ಜ್ಞಾನವು ಕಡಿಮೆ ಆದಂತೆ ತೋರುವದು. ವಿವೇಕಕ್ಕೆ ತುಸು ಕೊರತೆ. ಯಾವಾಗಲೂ ಅವಳಿಗೆ ವಿರಹ ಕಾತರ. ಶಿವನೊಡನೆ ಸೇರಲು ಹಂಬಲ ಅದಕ್ಕಾಗಿ ಉಗ್ರ ತಪಸ್ಸು ಅತ್ತ ಶಿವನ ತಪಸ್ಸು.

ಪರಸ್ಪರ ತಪಸ್ಸಿನ ಫಲವಾಗಿ ಸರ್ವಲೋಕ ಶುಭಕರವಾದ ಪಾರ್ವತೀ ಪರಮೇಶ್ವರರ ಮಧುರ ಮಿಲನ. ಅವರಿಬ್ಬರೂ ದಂಪತಿಗಳ ಪುನರ್‌ಮಿಲನದಲ್ಲಿ ಮಧ್ಯೆ ಕಿಂಚಿತ್ ಪ್ರಣಯ ಕಲಹ, ಬಿರು ನುಡಿ, ಸರಸದಲ್ಲಿ ವಿರಸ ಆದರಿಂದ ತಾರಕಾಸುರನಿಗೆ ಸಂದೇಹ.

ಅವರಿಬ್ಬರಿಗೂ ರತಿ ಕ್ರೀಡೆಯಲ್ಲಿ ಆಸಕ್ತಿ ಹೆಚ್ಚಿದಾಗ ನೀನು ಅವರಿಗೆ ವಿಘ್ನವನ್ನುಂಟು ಮಾಡು. ಗರ್ಭಿಣಿಯಾಗಿದ್ದಾಗ ಶಿವನು ಕೆಲವು ವಿನೋದದ ನುಡಿಗಳನ್ನು ಆಡುವನು ಅದರಿಂದ ಪಾರ್ವತಿಯು ಕುಪಿತಳಾಗಿ ತಪಸ್ಸಿಗೆ ಹೊರಟು ಹೋಗುವಳು.

ತಪೋಬಲದಿಂದ ಅಧಿಕ ಕಾಂತಿಮತಿಯಾಗಿ ಅನಂತರ ಆ ಮಹಾದೇವಿಯು ಮಹಾದೇವನಿಂದ ಮಹಾತೇಜಸ್ವಿಯಾದ ಮಗನನ್ನು ಹಡೆಯುವಳು. ಅವನೇ ಸುರ ಶತ್ರುಗಳನ್ನು ಸಂಹರಿಸುವನು.

ದೇವಿಯೇ, ಯಾರಿಂದಲೂ ಗೆಲ್ಲಲಾಗದ ದೈತ್ಯರನ್ನು ನೀನು ನಾಶ ಮಾಡಬೇಕಾಗಿದೆ. ಇಂತಹ ಅದ್ಭುತ ಶಕ್ತಿಯು ನಿನ್ನಲ್ಲಿ ಬರಬೇಕಾದರೆ ಪಾರ್ವತಿಯ ದೇಹ ಸಹವಾಸದಿಂದ ಮಾತ್ರ ಸಾಧ್ಯ. ನೀನು ಆ ಮಾತೆಯ ದೇಹದಲ್ಲಿ ಸೇರಿಕೊಂಡು ತಪಸ್ಸು ಮಾಡು. ಅವಳು ನಿನಗೆ ತನ್ನ ಸಹವಾಸದಿಂದ ಶಕ್ತಿಯನ್ನು ದಯಪಾಲಿಸುವಳು.

ನಿನ್ನೊಡನೆ ಒಂದು ದೇಹಲೆಲ್ಲಿ ಇದ್ದ ವ್ರತಾನುಷ್ಠಾನ ಮಾಡಿದ ಬಳಿಕ ಅವಳು ಸ್ವಂತ ಸ್ಥಿತಿಯನ್ನು. ಸ್ವರೂಪ ಸೌಂದರ್ಯಗಳನ್ನು ಮರಳಿ ಪಡೆಯುವಳು. ಆ ತಪಸ್ಸು

ಮುಗಿಯುವವರೆಗೆ ನೀನು ಆ ದೇವಿಯ ದೇಹದಲ್ಲಿಯೇ ಇದ್ದುಕೊಂಡು ತಪಸ್ಸನ್ನು ಮಾಡು. ನೀವಿಬ್ಬರೂ ಒಂದೇ ಎಂದು ಪೂಜಿಸುತ್ತಾರೆ ಭಕ್ತರು.

ದ್ವಿಜರು ನಿನ್ನನ್ನು ಓಂಕಾರರೂಪ-ಗಾಯತ್ರಿ ಎಂದೂ, ಕ್ಷತ್ರಿಯರು ಕಾಳಿ ಎಂದೂ ವೈಶ್ಯರು ಭೂದೇವಿ ಎಂದೂ ನಿನ್ನನ್ನು ಪೂಜಿಸುತ್ತಾರೆ. ನೀನು ಸರ್ವದೇವತಾ ಸ್ವರೂಪಿಣಿಯಾಗಿ ಪಾರ್ವತಿ ದೇವಿಯ ದೇಹೈಕ್ಯದಿಂದ ವಿಶ್ವವಂದ್ಯಳಾಗಿ ಕಂಗೊಳಿಸುವಿ''

ಬ್ರಹ್ಮದೇವರ ಈ ಅಪ್ಪಣೆಯನ್ನು ನಿಶಾದೇವಿಯು ಅಂಗೀಕರಿಸಿ, ಬ್ರಹ್ಮನಿಗೆ ನಮಸ್ಕರಿಸಿ ಹಿಮಗಿರಿಯ ಮನೆಗೆ ನಡೆದಳು.

ಗಿರಿರಾಜ ಭವ್ಯ ಭವನ. ಅಲ್ಲಿಯ ರತ್ನದ ಗೋಡೆಗೆ ಆತುಕೊಂಡು ಕುಳಿತ್ತಿದ್ದಳೆ- ಓರ್ವ ಗರ್ಭಿಣಿ. ತೇಜಃಪುಂಜ ಮುಖ. ಸಣಕಲು ದೇಹ. ಕಡ್ಡಿಯಂತಹ ಕೈಕಾಲು, ಉಬ್ಬಿದ ಎದೆ, ಎರಡೂ ತೋಳುಗಳಿಗೆ ಬಿಗಿದ ತಾಯಿತ. ಕೊರಳಲ್ಲಿಯೂ ಒಂದು ಚಿನ್ನದ ತಾಯತ.

ಅವಳ ಅಕ್ಕ ಪಕ್ಕಗಳಲ್ಲಿ ದೀಪಗಳು ಉರಿಯುತ್ತಿವೆ. ಆದರೆ ಅವುಗಳಿಗೆ ಎಣ್ಣೆ ಬತ್ತಿಗಳಿಲ್ಲ. ಆದರೂ ಅವು ಪ್ರಕಾಶಪುಂಜವನ್ನೇ ಚೆಲ್ಲುತ್ತವೆ. ಅವು ರತ್ನದೀಪ ಎಂದು ವಿಭಾವರಿಗೆ ಹೊಳೆಯಿತು.

ಆ ಬಸಿರು ಹೆಣ್ಣು ಮಗಳು ಲಕ್ಷಣ, ದಾಸ-ದಾಸಿಯರು ಅವಳಿಗೆ ಗೈಯುವ ಸೇವೆ ಹಾಗೂ ಮುಖಲಕ್ಷಣಗಳನ್ನು ಕಂಡು ಇವಳೇ ಹಿಮಾಲಯದ ಮಹಾರಾಣಿ ಮೇನಾ ದೇವಿ ಎಂದು ವಿಭಾವರಿಯು ತಿಳಿದುಕೊಂಡಳು. ಆಕಸ್ಮಿಕವಾಗಿ ಆಗಮಿಸಿ ಮೇನೆಯ ಮನೆಯಲ್ಲಿ ಕೆಲವು ದಿನ ನಿಶಾದೇವಿಯು ಕಾದುಕೊಂಡು ಕುಳಿತಳು.

ಒಂದು ದಿನ ಎಲ್ಲರೂ ಮಲಗಿಕೊಂಡಿದ್ದಾರೆ. ಮನೆಯ ಹೊರಗೆ ಹಿಟ್ಟು ಚೆಲ್ಲಿದಂತೆ ಬೆಳದಿಂಗಳು. ರಾಜಧಾನಿಯ ರಾಜ ಬೀದಿಗಳಲ್ಲಿ ತಿರುಗುವ ರಾಕ್ಷಸರ ಕೂಗು. ಅಂತಃಪುರದಲ್ಲಿ ನವದಂಪತಿಗಳು ಗಾಢಾಲಿಂಗನದಲ್ಲಿದ್ದಾರೆ. ಮುಖ್ಯವಾಗಿ ಮೇನಾ ದೇವಿಯೂ ಕೂಡ ನಿದ್ರೆಯಿಂದ ಕಣ್ಣು ಮುಚ್ಚಿ ಮಲಗಿದ್ದಾಳೆ. ಎಲ್ಲೆಡೆ ಮೌನ.

ಪ್ರಶಾಂತ ನಿಶಾಂತ ಇಂತಹ ಏಕಾಂತ ಸಮಯದಲ್ಲಿ ಮೇನಾದೇವಿಯು ಮುಖ ದ್ವಾರದಿಂದ ವಿಭಾವರೀ ದೇವಿಯು ಅವಳ ದೇಹದಲ್ಲಿ ಪ್ರವೇಶಿಸಿದಳು. ಅವಳ ಗರ್ಭಗುಹೆಯಲ್ಲಿ ಮೌನದಿಂದ ಮುದುಡಿಕೊಂಡು ಕುಳಿತು ಸತೀದೇವಿಯ ದೇಹ ದಲ್ಲಿಯೂ ಪ್ರವೇಶಿಸಿದಳು. ಸ್ವಾಭಾವಿಕ ಸುವರ್ಣ ಕಾಂತಿಯಿಂದ ಬೆಳಗುವ ಪಾರ್ವತಿಯ ಹೊಂಬಣ್ಣದ ದೇಹವು ನಿಶಾದೇವಿಯು ಸನ್ನಿಧಾನದಿಂದ ನೀಲಮೇಘ ಶ್ಯಾಮ ಸುಂದರವಾಗಿ ವಿಜೃಂಭಿಸಿತು. ಮೇನಾದೇವಿಯು ಬ್ರಾಹ್ಮೀ ಮುಹೂರ್ತದಲ್ಲಿ ಜಗತ್ಕಲ್ಯಾಣ ಕಾರಣಳಾದ ಮಹಾತಾಯಿಯನ್ನು ಹೆತ್ತಳು. ಪಾರ್ವತಿ ದೇವಿಯ ಜನ್ಮದಿಂದ ಪ್ರಪಂಚಕ್ಕೆಲ್ಲ ಕ್ಷೇಮ ಉಂಟಾಯಿತು. ನರಕ ನಿವಾಸಿಗಳಿಗೂ ಅಂದು ಸ್ವರ್ಗ ಸುಖ.

ಎಲ್ಲ ಜ್ಯೋತಿರ್ಮಂಡಲಗಳಲ್ಲಿ ಕಾಂತಿಯ ತಳುಕು. ಔಷಧಿಗಳಲ್ಲಿ ರಸ, ಫಲಗಳಲ್ಲಿ ರುಚಿ, ಹೂಗಳಲ್ಲಿ ಕೆಂಪು, ಗಾಳಿಯಲ್ಲಿ ಪರಿಮಳ. ದಿಕ್ಕುಗಳಲ್ಲಿ ಪ್ರಸನ್ನತೆ, ಭೂಮಿಯಲ್ಲಿ ಸಮೃದ್ಧಿ, ತೀರ್ಥಗಳಲ್ಲಿ ಪಾವಿತ್ರ್ಯ, ಎಲ್ಲಿ ನೋಡಿದಲ್ಲಿ ಶಾಂತಿ ಸಂತಸಗಳು ಉಕ್ಕಿ ಹರಿದವು. ಹಿಮಗಿರಿಯ ತುಂಬ ದೇವತೆಗಳು ಪುಷ್ಪವೃಷ್ಟಿಗರೆದರು. ಗಂಧರ್ವರು

ಹಾಡಿದರು. ಅಪ್ಸರೆಯರು ಕುಣಿದರು. ಹದಿನಾಲ್ಕು ಲೋಕಗಳಿಗೆಲ್ಲ ದೊಡ್ಡ ಹಬ್ಬವಾಯಿತು-ಜಗನ್ಮಾತೆಯ ಹುಟ್ಟು.

ಪರ್ವತ ಪುತ್ರಿಯಾಗಿ ಬೆಳೆದಳು ಮಹಾಸತಿ, ಕೆಲವೇ ದಿನಗಳಲ್ಲಿ ಅವಳ ದೇಹದಲ್ಲಿ ಕಾಂತಿಯ ಮಹಾಪೂರ ಕಂಗೊಳಿಸಿತು. ಉಪಾಧ್ಯಾಯರು ನೆಪ ಮಾತ್ರ, ಎಲ್ಲ ವಿದ್ಯೆಗಳು ಅವಳ ನಾಲಿಗೆಯ ಮೇಲೆ ನಲಿದಾಡಿದವು. ಅವಳು ಪ್ರಾಯಕ್ಕೆ ಬಂದಾಗ ಸೌಂದರ್ಯ. ಸೌಭಾಗ್ಯ ಹಾಗೂ ದಿವ್ಯ ಜ್ಞಾನಗಳು ಪೂರ್ಣರೂಪದಲ್ಲಿ ಅವಳು ಅವಕಾಶ ಪಡೆದಿದ್ದವು.

ಸ್ವರ್ಗ ಸಮ್ರಾಟ ಇಂದ್ರನು ನಾರದರನ್ನು ನೆನೆದು. ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ ಅವರಿಗೆ ತನ್ನ ಮನೋಗತವನ್ನು ತಿಳಿಸಿದ. ಹಿಮಚಲ ಹಾಗೂ ಮೇನಾ ದೇವಿಯರ ಮಗಳು ಪಾರ್ವತಿಯು ಪರಮೇಶ್ವರನೊಡನೆ ಬೇಗನೇ ಹೊಂದಿಕೊಳ್ಳುವಂತೆ ತೀವ್ರ ಪ್ರಯತ್ನ ಮಾಡಿರಿ ಎಂದು ಬಿನ್ನವಿಸಿದ. ದೇವರಾಜನ ಸೂಚನೆಯನ್ನು ಮನ್ನಿಸಿ ನಾರದ ಸವಾರಿ ಪರ್ವತ ಸಾರ್ವಭೌಮನಲ್ಲಿ ಚಿತ್ತೈಸಿತು. ಕುಶಲ ಪ್ರಶ್ನೆಗಳಾದ ಬಳಿಕ ನಾರದರು ಗಿರಿರಾಜನನ್ನು ಹೊಗಳಿ, ಅವರ ಮನೆತನವನ್ನು ಕೊಂಡಾಡಿ ಸಂತೋಷ ಪಡಿಸಿದರು.

ಅಷ್ಟರಲ್ಲಿ ದೇವರ್ಷಿಗಳು ತಮ್ಮ ಮನೆಗೆ ಬಂದ ಸಮಾಚಾರ ತಿಳಿದು ಪಟ್ಟದರಾಣಿ ಮೇನಾದೇವಿಯು ಅವರ ದರ್ಶನಕ್ಕೆ ಆಗಮಿಸಿದಳು. ತಾಯಿಯನ್ನು ಅನುಸರಿಸಿ ಆ ಪರ್ವತೇಶ್ವರ ದಂಪತಿಗಳ ಮೆಚ್ಚಿನ ಮಗಳಾದ ಪಾರ್ವತಿಯೂ ಬಂದಳು. ತಾಯಿಯ ಹಿಂದೆ ಹಿಂದೆ ಲಜ್ಜೆಯಿಂದ ತಲೆತಗ್ಗಿಸಿ ಬರುತ್ತಲಿರುವ ಆ ತೇಜೋರಾಶಿಯನ್ನು ಕಂಡು ನಾರದರು ಚಕಿತರಾದರು. ಆ ಹಿಮರಾಜ ಕುಮಾರಿಯನ್ನು ಕುರಿತು.

'ಮಗಳೆ ದಯಮಾಡಿಸು ಇತ್ತ ಬಾ' ಎಂದು ಪ್ರೀತಿಯಿಂದ ನುಡಿದರು. ಆದರೆ ಅವಳು ನಾಚಿಕೆಯಿಂದ ಅತ್ತ ಹೋಗದೇ ತಂದೆಯ ಪಕ್ಕದಲ್ಲಿ ಕುಳಿತಳು. ಆಗ ಗಿರಿರಾಜನು ಮಗಳನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡನು. ಆಗ ತಾಯಿ ಮೇನಾದೇವಿಯು ಪಾರ್ವತಿಗೆ-

'ವತ್ಸೆ, ತಪೋಧನರಾದ ಈ ದೇವತೆಗಳಿಗೆ ನಮಸ್ಕರಿಸು. ಇವರ ಆಶೀರ್ವಾದದಿಂದ ನೀನು ಮನಮೆಚ್ಚಿದ ಗಂಡನನ್ನು ಬೇಗ ಹೊಂದುವಿ. ಇವರಿಗೆ ನೀನು ನಮಸ್ಕರಿಸಿದ ಬಳಿಕ ನಿನಗೆ ನಾನು ಆಡಲು ರತ್ನದ ಬೊಂಬೆಯನ್ನು ಕೊಡುತ್ತೇನೆ.'' ತಾಯಿಯ ಮಾತು ಕೇಳಿ ಪಾರ್ವತಿಯು ತಟ್ಟನೆ ತಂದೆಯ ತೊಡೆಯಿಂದೆದ್ದು ನಾರದರ ಪಾದ ಮುಟ್ಟಿ ನಮಸ್ಕರಿಸಿದಳು. ಎರಡೂ ಕೈ ಜೋಡಿಸಿ ಭಕ್ತಿಯಿಂದ ಮುನಿಗೆ ವಂದಿಸಿದ ಬಳಿಕ ಮೇನಾ ದೇವಿಯು ಗೆಳತಿಯ ಮುಖಾಂತರ ಮಗಳ ಭವಿಷ್ಯ ವಿಚಾರವಾಗಿ ಪ್ರಸ್ತಾಪಮಾಡಿದಳು

ರಾಜಕುಮಾರಿಯ, ಸಾಮುದ್ರಿಕ ಲಕ್ಷಣ ನೋಡಿ ಭವಿಷ್ಯ ಹೇಳಲು ವಿಜ್ಞಾಪಿಸಿ ಕೊಂಡಳು. ಆಗ ನಾರದರು. ತಾವು ಬಂದ ಉದ್ದೇಶವು ನೆರವೇರುವ ಸಂದರ್ಭ ಒದಗಿ ಬಂದಿತೆಂದು ತಿಳಿದು ಮಂದಹಾಸದಿಂದ ನುಡಿದರು.

**ನಾರದ :-** ಶುಭಾಂಗಿಯೆ

**'ನ ಜಾತೋಽಸ್ಯಾಃ ಪತಿರ್ಭದ್ರೇ ಲಕ್ಷಣೈಶ್ಚ ವಿವರ್ಜಿತಃ ।**
**ಉತ್ತಾನಹಸ್ತಾ ಸತತಂ ಚರಣೈರ್ವ್ಯಭಿಚಾರಿಭಿಃ' ॥**

ಈ ನಿನ್ನ ಮಗಳಿಗೆ ಗಂಡನೂ ಹುಟ್ಟಲೇ ಇಲ್ಲ. ಒಳ್ಳೆಯ ಲಕ್ಷಣಗಳೂ ಇಲ್ಲ. ಇವಳ ಕೈಗಳು ಯಾವಾಗಲೂ ಮೇಲೆ ಎತ್ತಿಕೊಂಡಿವೆ. ಪಾದಗಳಲ್ಲಿಯಂತೂ ವ್ಯಭಿಚಾರ ಲಕ್ಷಣ ಇದೇ ಭವಿಷ್ಯ ಇನ್ನೇನು ಹೇಳಲಿ?

ಮುಗಿಯುವವರೆಗೆ ನೀನು ಆ ದೇವಿಯ ದೇಹದಲ್ಲಿಯೇ ಇದ್ದುಕೊಂಡು ತಪಸ್ಸನ್ನು ಮಾಡು. ನೀವಿಬ್ಬರೂ ಒಂದೇ ಎಂದು ಪೂಜಿಸುತ್ತಾರೆ ಭಕ್ತರು.

ದ್ವಿಜರು ನಿನ್ನನ್ನು ಓಂಕಾರರೂಪ-ಗಾಯತ್ರಿ ಎಂದೂ, ಕ್ಷತ್ರಿಯರು ಕಾಳಿ ಎಂದೂ ವೈಶ್ಯರು ಭೂದೇವಿ ಎಂದೂ ನಿನ್ನನ್ನು ಪೂಜಿಸುತ್ತಾರೆ. ನೀನು ಸರ್ವದೇವತಾ ಸ್ವರೂಪಿಣಿಯಾಗಿ ಪಾರ್ವತಿ ದೇವಿಯ ದೇಹೈಕ್ಯದಿಂದ ವಿಶ್ವವಂದ್ಯಳಾಗಿ ಕಂಗೊಳಿಸುವಿ''

ಬ್ರಹ್ಮದೇವರ ಈ ಅಪ್ಪಣೆಯನ್ನು ನಿಶಾದೇವಿಯು ಅಂಗೀಕರಿಸಿ, ಬ್ರಹ್ಮನಿಗೆ ನಮಸ್ಕರಿಸಿ ಹಿಮಗಿರಿಯ ಮನೆಗೆ ನಡೆದಳು.

ಗಿರಿರಾಜ ಭವ್ಯ ಭವನ. ಅಲ್ಲಿಯ ರತ್ನದ ಗೋಡೆಗೆ ಆತುಕೊಂಡು ಕುಳಿತ್ತಿದ್ದಳೆ-ಓರ್ವ ಗರ್ಭಿಣಿ. ತೇಜಃಪುಂಜ ಮುಖ. ಸಣಕಲು ದೇಹ. ಕಡ್ಡಿಯಂತಹ ಕೈಕಾಲು, ಉಬ್ಬಿದ ಎದೆ, ಎರಡೂ ತೋಳುಗಳಿಗೆ ಬಿಗಿದ ತಾಯಿತ. ಕೊರಳಲ್ಲಿಯೂ ಒಂದು ಚಿನ್ನದ ತಾಯತ.

ಅವಳ ಅಕ್ಕ ಪಕ್ಕಗಳಲ್ಲಿ ದೀಪಗಳು ಉರಿಯುತ್ತಿವೆ. ಆದರೆ ಅವುಗಳಿಗೆ ಎಣ್ಣೆ ಬತ್ತಿಗಳಿಲ್ಲ. ಆದರೂ ಅವು ಪ್ರಕಾಶಪುಂಜವನ್ನೇ ಚೆಲ್ಲುತ್ತವೆ. ಅವು ರತ್ನದೀಪ ಎಂದು ವಿಭಾವರಿಗೆ ಹೊಳೆಯಿತು.

ಆ ಬಸಿರು ಹೆಣ್ಣು ಮಗಳು ಲಕ್ಷಣ, ದಾಸ-ದಾಸಿಯರು ಅವಳಿಗೆ ಗೈಯುವ ಸೇವೆ ಹಾಗೂ ಮುಖಲಕ್ಷಣಗಳನ್ನು ಕಂಡು ಇವಳೇ ಹಿಮಾಲಯದ ಮಹಾರಾಣಿ ಮೇನಾ ದೇವಿ ಎಂದು ವಿಭಾವರಿಯು ತಿಳಿದುಕೊಂಡಳು. ಆಕಸ್ಮಿಕವಾಗಿ ಆಗಮಿಸಿ ಮೇನೆಯ ಮನೆಯಲ್ಲಿ ಕೆಲವು ದಿನ ನಿಶಾದೇವಿಯು ಕಾದುಕೊಂಡು ಕುಳಿತಳು.

ಒಂದು ದಿನ ಎಲ್ಲರೂ ಮಲಗಿಕೊಂಡಿದ್ದಾರೆ. ಮನೆಯ ಹೊರಗೆ ಹಿಟ್ಟು ಚೆಲ್ಲಿದಂತೆ ಬೆಳದಿಂಗಳು. ರಾಜಧಾನಿಯ ರಾಜ ಬೀದಿಗಳಲ್ಲಿ ತಿರುಗುವ ರಾಕ್ಷಸರ ಕೂಗು. ಅಂತಃಪುರದಲ್ಲಿ ನವದಂಪತಿಗಳು ಗಾಢಾಲಿಂಗನದಲ್ಲಿದ್ದಾರೆ. ಮುಖ್ಯವಾಗಿ ಮೇನಾ ದೇವಿಯೂ ಕೂಡ ನಿದ್ರೆಯಿಂದ ಕಣ್ಣು ಮುಚ್ಚಿ ಮಲಗಿದ್ದಾಳೆ. ಎಲ್ಲೆಡೆ ಮೌನ.

ಪ್ರಶಾಂತ ನಿಶಾಂತ ಇಂತಹ ಏಕಾಂತ ಸಮಯದಲ್ಲಿ ಮೇನಾದೇವಿಯು ಮುಖ ದ್ವಾರದಿಂದ ವಿಭಾವರೀ ದೇವಿಯು ಅವಳ ದೇಹದಲ್ಲಿ ಪ್ರವೇಶಿಸಿದಳು. ಅವಳ ಗರ್ಭಗುಹೆಯಲ್ಲಿ ಮೌನದಿಂದ ಮುದುಡಿಕೊಂಡು ಕುಳಿತು ಸತೀದೇವಿಯ ದೇಹ ದಲ್ಲಿಯೂ ಪ್ರವೇಶಿಸಿದಳು. ಸ್ವಾಭಾವಿಕ ಸುವರ್ಣ ಕಾಂತಿಯಿಂದ ಬೆಳಗುವ ಪಾರ್ವತಿಯ ಹೊಂಬಣ್ಣದ ದೇಹವು ನಿಶಾದೇವಿಯು ಸನ್ನಿಧಾನದಿಂದ ನೀಲಮೇಘ ಶ್ಯಾಮ ಸುಂದರವಾಗಿ ವಿಜೃಂಭಿಸಿತು. ಮೇನಾದೇವಿಯು ಬ್ರಾಹ್ಮೀ ಮುಹೂರ್ತದಲ್ಲಿ ಜಗತ್ಕಲ್ಯಾಣ ಕಾರಣಳಾದ ಮಹಾತಾಯಿಯನ್ನು ಹೆತ್ತಳು. ಪಾರ್ವತಿ ದೇವಿಯ ಜನ್ಮದಿಂದ ಪ್ರಪಂಚಕ್ಕೆಲ್ಲ ಕ್ಷೇಮ ಉಂಟಾಯಿತು. ನರಕ ನಿವಾಸಿಗಳಿಗೂ ಅಂದು ಸ್ವರ್ಗ ಸುಖ.

ಎಲ್ಲ ಜ್ಯೋತಿರ್ಮಂಡಲಗಳಲ್ಲಿ ಕಾಂತಿಯ ತಳುಕು. ಔಷಧಿಗಳಲ್ಲಿ ರಸ, ಫಲಗಳಲ್ಲಿ ರುಚಿ, ಹೂಗಳಲ್ಲಿ ಕೆಂಪು, ಗಾಳಿಯಲ್ಲಿ ಪರಿಮಳ. ದಿಕ್ಕುಗಳಲ್ಲಿ ಪ್ರಸನ್ನತೆ, ಭೂಮಿಯಲ್ಲಿ ಸಮೃದ್ಧಿ, ತೀರ್ಥಗಳಲ್ಲಿ ಪಾವಿತ್ರ್ಯ, ಎಲ್ಲಿ ನೋಡಿದಲ್ಲಿ ಶಾಂತಿ ಸಂತಸಗಳು ಉಕ್ಕಿ ಹರಿದವು. ಹಿಮಗಿರಿಯ ತುಂಬ ದೇವತೆಗಳು ಪುಷ್ಪವೃಷ್ಟಿಗರೆದರು. ಗಂಧರ್ವರು

ಹಾಡಿದರು. ಅಪ್ಸರೆಯರು ಕುಣಿದರು. ಹದಿನಾಲ್ಕು ಲೋಕಗಳಿಗೆಲ್ಲ ದೊಡ್ಡ ಹಬ್ಬವಾಯಿತು-ಜಗನ್ಮಾತೆಯ ಹುಟ್ಟು.

ಪರ್ವತ ಪುತ್ರಿಯಾಗಿ ಬೆಳೆದಳು ಮಹಾಸತಿ, ಕೆಲವೇ ದಿನಗಳಲ್ಲಿ ಅವಳ ದೇಹದಲ್ಲಿ ಕಾಂತಿಯ ಮಹಾಪೂರ ಕಂಗೊಳಿಸಿತು. ಉಪಾಧ್ಯಾಯರು ನೆಪ ಮಾತ್ರ, ಎಲ್ಲ ವಿದ್ಯೆಗಳು ಅವಳ ನಾಲಿಗೆಯ ಮೇಲೆ ನಲಿದಾಡಿದವು. ಅವಳು ಪ್ರಾಯಕ್ಕೆ ಬಂದಾಗ ಸೌಂದರ್ಯ. ಸೌಭಾಗ್ಯ ಹಾಗೂ ದಿವ್ಯ ಜ್ಞಾನಗಳು ಪೂರ್ಣರೂಪದಲ್ಲಿ ಅವಳು ಅವಕಾಶ ಪಡೆದಿದ್ದವು.

ಸ್ವರ್ಗ ಸಮ್ರಾಟ ಇಂದ್ರನು ನಾರದರನ್ನು ನೆನೆದು. ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ ಅವರಿಗೆ ತನ್ನ ಮನೋಗತವನ್ನು ತಿಳಿಸಿದ. ಹಿಮಚಲ ಹಾಗೂ ಮೇನಾ ದೇವಿಯರ ಮಗಳು ಪಾರ್ವತಿಯು ಪರಮೇಶ್ವರನೊಡನೆ ಬೇಗನೇ ಹೊಂದಿಕೊಳ್ಳುವಂತೆ ತೀವ್ರ ಪ್ರಯತ್ನ ಮಾಡಿರಿ ಎಂದು ಬಿನ್ನವಿಸಿದ. ದೇವರಾಜನ ಸೂಚನೆಯನ್ನು ಮನ್ನಿಸಿ ನಾರದ ಸವಾರಿ ಪರ್ವತ ಸಾರ್ವಭೌಮನಲ್ಲಿ ಚಿತ್ತೈಸಿತು. ಕುಶಲ ಪ್ರಶ್ನೆಗಳಾದ ಬಳಿಕ ನಾರದರು ಗಿರಿರಾಜನನ್ನು ಹೊಗಳಿ, ಅವರ ಮನೆತನವನ್ನು ಕೊಂಡಾಡಿ ಸಂತೋಷ ಪಡಿಸಿದರು.

ಅಷ್ಟರಲ್ಲಿ ದೇವರ್ಷಿಗಳು ತಮ್ಮ ಮನೆಗೆ ಬಂದ ಸಮಾಚಾರ ತಿಳಿದು ಪಟ್ಟದರಾಣಿ ಮೇನಾದೇವಿಯು ಅವರ ದರ್ಶನಕ್ಕೆ ಆಗಮಿಸಿದಳು. ತಾಯಿಯನ್ನು ಅನುಸರಿಸಿ ಆ ಪರ್ವತೇಶ್ವರ ದಂಪತಿಗಳ ಮೆಚ್ಚಿನ ಮಗಳಾದ ಪಾರ್ವತಿಯೂ ಬಂದಳು. ತಾಯಿಯ ಹಿಂದೆ ಹಿಂದೆ ಲಜ್ಜೆಯಿಂದ ತಲೆತಗ್ಗಿಸಿ ಬರುತ್ತಲಿರುವ ಆ ತೇಜೋರಾಶಿಯನ್ನು ಕಂಡು ನಾರದರು ಚಕಿತರಾದರು. ಆ ಹಿಮರಾಜ ಕುಮಾರಿಯನ್ನು ಕುರಿತು.

'ಮಗಳೆ ದಯಮಾಡಿಸು ಇತ್ತ ಬಾ' ಎಂದು ಪ್ರೀತಿಯಿಂದ ನುಡಿದರು. ಆದರೆ ಅವಳು ನಾಚಿಕೆಯಿಂದ ಅತ್ತ ಹೋಗದೇ ತಂದೆಯ ಪಕ್ಕದಲ್ಲಿ ಕುಳಿತಳು. ಆಗ ಗಿರಿರಾಜನು ಮಗಳನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡನು. ಆಗ ತಾಯಿ ಮೇನಾದೇವಿಯು ಪಾರ್ವತಿಗೆ-

'ವತ್ಸೆ, ತಪೋಧನರಾದ ಈ ದೇವತೆಗಳಿಗೆ ನಮಸ್ಕರಿಸು. ಇವರ ಆಶೀರ್ವಾದದಿಂದ ನೀನು ಮನಮೆಚ್ಚಿದ ಗಂಡನನ್ನು ಬೇಗ ಹೊಂದುವಿ. ಇವರಿಗೆ ನೀನು ನಮಸ್ಕರಿಸಿದ ಬಳಿಕ ನಿನಗೆ ನಾನು ಆಡಲು ರತ್ನದ ಬೊಂಬೆಯನ್ನು ಕೊಡುತ್ತೇನೆ.'' ತಾಯಿಯ ಮಾತು ಕೇಳಿ ಪಾರ್ವತಿಯು ತಟ್ಟನೆ ತಂದೆಯ ತೊಡೆಯಿಂದೆದ್ದು ನಾರದರ ಪಾದ ಮುಟ್ಟಿ ನಮಸ್ಕರಿಸಿದಳು. ಎರಡೂ ಕೈ ಜೋಡಿಸಿ ಭಕ್ತಿಯಿಂದ ಮುನಿಗೆ ವಂದಿಸಿದ ಬಳಿಕ ಮೇನಾ ದೇವಿಯು ಗೆಳತಿಯ ಮುಖಾಂತರ ಮಗಳ ಭವಿಷ್ಯ ವಿಚಾರವಾಗಿ ಪ್ರಸ್ತಾಪಮಾಡಿದಳು

ರಾಜಕುಮಾರಿಯ, ಸಾಮುದ್ರಿಕ ಲಕ್ಷಣ ನೋಡಿ ಭವಿಷ್ಯ ಹೇಳಲು ವಿಜ್ಞಾಪಿಸಿ ಕೊಂಡಳು. ಆಗ ನಾರದರು. ತಾವು ಬಂದ ಉದ್ದೇಶವು ನೆರವೇರುವ ಸಂದರ್ಭ ಒದಗಿ ಬಂದಿತೆಂದು ತಿಳಿದು ಮಂದಹಾಸದಿಂದ ನುಡಿದರು.

**ನಾರದ :-** ಶುಭಾಂಗಿಯೆ

**'ನ ಜಾತೋಽಸ್ಯಾಃ ಪತಿರ್ಭದ್ರೇ ಲಕ್ಷಣೈಶ್ಚ ವಿವರ್ಜಿತಃ ।**
**ಉತ್ತಾನಹಸ್ತಾ ಸತತಂ ಚರಣೈರ್ವ್ಯಭಿಚಾರಿಭಿಃ' ॥**

ಈ ನಿನ್ನ ಮಗಳಿಗೆ ಗಂಡನೂ ಹುಟ್ಟಲೇ ಇಲ್ಲ. ಒಳ್ಳೆಯ ಲಕ್ಷಣಗಳೂ ಇಲ್ಲ. ಇವಳ ಕೈಗಳು ಯಾವಾಗಲೂ ಮೇಲೆ ಎತ್ತಿಕೊಂಡಿವೆ. ಪಾದಗಳಲ್ಲಿಯಂತೂ ವ್ಯಭಿಚಾರ ಲಕ್ಷಣ ಇದೇ ಭವಿಷ್ಯ ಇನ್ನೇನು ಹೇಳಲಿ?

ನಾರದರ ನುಡಿ ಕೇಳಿ, ಹಿಮಗಿರಿಯ ಧೈರ್ಯವೇ ಉಡುಗಿ ಕಣ್ಣಲ್ಲಿ ನೀರುತುಂಬಿತು. ಎದೆ ನಡುಗಿತು, ಗದ್ಗದ ಕಂಠದಿಂದ ನುಡಿದ ಆ ನಗರಾಜ.

**ಪರ್ವತರಾಜ :-** ನಾರದರೆ, ಇದೇನು ಹೇಳಿದಿರಿ ! ನನ್ನ ಮಗಳು ಸಲ್ಲಕ್ಷಣಗಳಿಂದ ಕೂಡಿಲ್ಲ ಎಂಬುದನ್ನು ಕೇಳಿ ನನಗೆ ವ್ಯಸನವಾಗಿದೆ ವಾಸ್ತವಿಕವಾಗಿ ವಿಚಾರಿಸಿದರೆ ತಂದೆ ಮಕ್ಕಳಿಗೂ ಏನೂ ಸಂಬಂಧವೇ ಇರುವದಿಲ್ಲ.

'ಸ್ವಕರ್ಮಣೈವ ಜಾಯಂತೆ ವಿವಿಧಾಃ ಭೂತಜಾತಯಃ ।
ಕ್ರಮೇಣಾಽ ಶ್ರಮಸಂಪ್ರಾಪ್ತಿರ್ಬ್ರಹ್ಮಚಾರಿವ್ರತಾದಯಃ' ॥

ಆ ಪ್ರಾಣಿಗಳಲ್ಲಿ ಮಾನವರು ಅತ್ಯಂತ ಶ್ರೇಷ್ಠರಾಗಿದ್ದಾರೆ. ಅದಕ್ಕೆ ಮುಖ್ಯ ಕಾರಣ ನ್ಯಾಯ, ನೀತಿ ಪರಿಪಾಲನೆ ಮಾಡಿ ಧರ್ಮವಂತರಾಗಿ ಬಾಳಲು ಅವರಿಗೆ ಅವಕಾಶವಿರುತ್ತದೆ. ಬ್ರಹ್ಮಚರ್ಯವ್ರತವನ್ನು ಮೊದಲು ಪಾಲಿಸಿ ಅನಂತರ ಗ್ರಹಸ್ಥಾಶ್ರಮ ಸನ್ಯಾಸಾಶ್ರಮ ಸ್ವೀಕರಿಸಿ ಆತ್ಮಸಾಧನೆ ಮಾಡಿಕೊಳ್ಳಲು ಸಕಲ ಸೌಕರ್ಯಗಳು ಈ ಮಾನವ ಜನ್ಮದಲ್ಲಿ ಉಂಟು.

ಶಾಸ್ತ್ರಕಾರರು ಬ್ರಹ್ಮಚರ್ಯ, ಸನ್ಯಾಸಗಳಂತೆ ಗ್ರಹಸ್ಥಾಶ್ರಮ ಸ್ವೀಕರಿಸಿ ಸಂಸಾರ ಮಾಡುವದೂ ಒಂದು ಪುಣ್ಯ ಕಾರ್ಯವೆಂದು ಹೇಳಿದ್ದಾರೆ. ಅದಿಲ್ಲದೆ ಎಲ್ಲರೂ ಬ್ರಹ್ಮಚಾರಿ ಅಥವಾ ಸನ್ಯಾಸಿಯಾಗಿ ಉಳಿದರೆ ಪ್ರಪಂಚವೇ ನಡೆಯದು. ಮುಂದೆ ಸೃಷ್ಟಿಯೇ ನಿಂತು ಹೋದೀತು.

ಅದಕ್ಕಾಗಿ ಗ್ರಹಸ್ಥಾಶ್ರಮ ಧರ್ಮವನ್ನು ಸ್ವೀಕರಿಸಿ ಧರ್ಮಪರಿಪಾಲನೆ ಮಾಡಲು ಶಾಸ್ತ್ರಕಾರರು ಹೇಳಿದ್ದಾರೆ. ಅದೇ ಶಾಸ್ತ್ರಕಾರರು ಗ್ರಹಸ್ಥಾಶ್ರಮ ಜೀವನದಲ್ಲಿ ಪುತ್ರಲಾಭವನ್ನು ಪ್ರಶಂಸಿದ್ದಾರೆ.

ಕರ್ತ್ರಾತು ಶಾಸ್ತ್ರೇಷು ಸದಾ ಸುತಲಾಭಃ ಪ್ರಶಂಸಿತಃ
ಪ್ರಾಣಿನಾಂ ಮೋಹನಾರ್ಥಾಯ ನರಕತ್ರಾಣಕಾರಣಾತ್ ॥

ಶಾಸ್ತ್ರಗಳಲ್ಲಿ ಧರ್ಮಶಾಸ್ತ್ರಕಾರರು ನರಕದಿಂದ ಉದ್ಧಾರ ಮಾಡುವನು ಎಂಬ ದೃಷ್ಟಿಯಿಂದ ಪುತ್ರಲಾಭ ಪ್ರಶಂಸಿಸಿದ್ದು ಪ್ರಾಣಿಗಳ ಮೋಹನಾರ್ಥವಾಗಿಯೇ. ವಾಸ್ತವಿಕವಾಗಿ ಅನೇಕ ಶಾಸ್ತ್ರಾಧಾರಗಳನ್ನು ನೋಡಿದರೆ ಹತ್ತು ಗಂಡು ಮಕ್ಕಳಿಗೆ ಒಬ್ಬ ಹೆಣ್ಣುಮಗಳು ಸಮವೆಂದು ಹೇಳಿದ್ದಾರೆ.

''ಶಾಸ್ತ್ರೇಷೂಕ್ತಮಸಂದಿಗ್ಧಂ ಬಹುವಾರಂ ಮಹಾಫಲಂ
ದಶಪುತ್ರಸಮಾ ಕನ್ಯಾ ಯಾ ಸ್ಯಾಚ್ಛೀಲವತೀ ಶುಭಾ''

ಈ ವಿಷಯದಲ್ಲಿ ಯಾರಿಗೂ ಸಂದೇಹಕ್ಕೆ ಎಡೆಯಾಗದಂತೆ ಅನೇಕ ಕಡೆಗಳಲ್ಲಿ ಶೀಲವತಿಯಾದ ಒಬ್ಬ ಕನ್ಯೆಯು ಹತ್ತು ಪುತ್ರರಿಗೆ ಸಮ. ಮತ್ತು ಹತ್ತು ಪಟ್ಟು ಪುಣ್ಯಕ್ಕೆ ಕಾರಣಳೆಂದು ಹೇಳಲಾಗಿದೆ.

''ಸ್ತ್ರಿಯಾ ವಿರಹಿತಾ ಸೃಷ್ಟಿರ್ಜಂತೂನಾಂ ನೋಪಪದ್ಯತೇ ।
ಸ್ತ್ರೀಜಾತಿಸ್ತು ಪ್ರಕೃತ್ಯೈವ ಕೃಪಣಾ ದೈನ್ಯಭಾಗಿನೀ'' ॥

ಸ್ತ್ರೀ ಇಲ್ಲದೆ ಪ್ರಾಣಿಗಳ ಸೃಷ್ಟಿಯೇ ಇಲ್ಲ. ಆದರೆ ಆ ಸ್ತ್ರೀ ಜಾತಿಯು ಸ್ವಾಭಾವಿಕವಾಗಿಯೇ ದುಃಖಭಾಗಿನಿ ಹಾಗೂ ದೀನಳು ಆಗಿರುತ್ತಾಳೆ.

ಇದನ್ನು ನೋಡಿದರೆ ಒಂದು ಕನ್ಯೆ ಹತ್ತು ಗಂಡಿಗೆ ಸಮಾನ ಎಂಬ ಮಾತು ವ್ಯರ್ಥವೆನಿಸುತ್ತದೆ. ಯಾಕೆಂದರೆ ಕನ್ಯೆ ಹುಟ್ಟಿದ ಕೂಡಲೇ ತಂದೆಗೆ ಚಿಂತೆ ಅವಳು ಬೆಳೆದಂತೆ ತಂದೆಯ ದುಃಖವೂ ಬೆಳೆಯುತ್ತದೆ.

ಇದನ್ನು ನೋಡಿದರೆ 'ದಶಪುತ್ರಸಮಾ ಕನ್ಯಾ' ಎಂಬ ಮಾತು ನಿರರ್ಥಕ ಎನಿಸುವದು, ಒಳ್ಳೆಯ ಶೀಲವತಿಯೂ ಭಾಗ್ಯವತಿಯೂ ಆದ ಮಗಳಿದ್ದರೂ ತಂದೆಗೆ ದುಃಖ ತಪ್ಪಿದ್ದಲ್ಲ. ಅಂದ ಬಳಿಕ ದೌರ್ಭಾಗ್ಯಯುಕ್ತಳಾದ, ಪತಿಪುತ್ರಹೀನಳಾದ ಮಗಳು ಹುಟ್ಟಿದರೆ ತಂದೆತಾಯಿಗಳ ಗತಿ ಏನು!

ನೀವಂತೂ ನನ್ನ ಮಗಳಿಗೆ ಪತಿಯೇ ಹುಟ್ಟಿಲ್ಲವೆಂದೂ ಹಾಗೂ ಅವಳಲ್ಲಿ ದುರ್ಲಕ್ಷಣವಿರುವುದಾಗಿಯೂ ಹೇಳಿದಿರಿ. ಇದನ್ನು ಕೇಳಿ ನನಗೆ ಮೂರ್ಛೆ ಬರುವಂತೆ ಆಗಿದೆ.

''ಸ್ತ್ರೀಣಾಂ ಹಿ ಪರಮಂ ಜನ್ಮ ಕುಲಾನಾಮುಭಯಾತ್ಮನಾಂ ।
ಇಹಾಮುತ್ರ ಸುಖಾಯೋಕ್ತಂ ಸತ್ಪತಿ ಪ್ರಾಪ್ತಿಸಂಜ್ಞಿತಂ ॥

ಹೆಣ್ಣು ಮಕ್ಕಳಿಗೆ ಒಳ್ಳೆಯ ಗಂಡ ದೊರೆತರೆ ಕೊಟ್ಟ ಕುಲ ಹುಟ್ಟಿದ ಕುಲ ಎರಡಕ್ಕೂ ಕ್ಷೇಮ. ಈ ಲೋಕ ಹಾಗೂ ಪರಲೋಕದಲ್ಲಿ ಹೆಣ್ಣುಮಕ್ಕಳಿಂದ ಸುಖ ಉಂಟು. ಸ್ತ್ರೀಯರ ಜನ್ಮವು ಉಭಯಕುಲ ಉದ್ಧಾರಕ್ಕೆ ಕಾರಣವೆಂದು ಶಾಸ್ತ್ರಕಾರರು ಹೇಳಿದ್ದಾರೆ. ಆದುದರಿಂದ ಎಂಥವನೇ ಇದ್ದರೂ ಸತಿಗೆ ಪತಿಯೇ ಪರದೈವವೆಂದು ಹೇಳಿದ್ದಾರೆ.

'ನಿರ್ಧನೋ ದುರ್ಮುಖೋ ಮೂರ್ಖಃ ಸರ್ವಲಕ್ಷಣವರ್ಜಿತಃ ।
ದೈವತಂ ಪರಮಂ ನಾರ್ಯಾಃ ಪುತಿರುಕ್ತಃ ಸದೈವ ಹಿ ॥

ದರಿದ್ರನಾಗಲಿ ಕುರೂಪಿಯಾಗಲಿ, ಮೂರ್ಖನಾಗಲಿ, ದುರ್ಲಕ್ಷಣವುಳ್ಳವನಾಗಲಿ ಪತಿ ಹೇಗೇ ಇರಲಿ, ನಾರಿಗೆ ಅವನೇ ದೈವ, ಅವನೇ ಸರ್ವದಾ ಪರದೈವತ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ನಾರದರೆ, ನನ್ನ ಮಗಳಿಗೆ ಪತಿಯೇ ಹುಟ್ಟಿಲ್ಲ ಎಂದರೆ ಎಂತಹ ದೌರ್ಭಾಗ್ಯ! ಚರಾಚರ ಪ್ರಪಂಚದಲ್ಲಿ ಒಬ್ಬನೂ ನನ್ನ ಮಗಳಿಗೆ ಪತಿಯಾಗುವವನಿಲ್ಲ ಎಂಬುದನ್ನು ಕೇಳಿ ನನಗೆ ಆಘಾತವಾಗಿದೆ. ಈ ನನ್ನ ಮಗಳ ಕೈಗಳೆರಡೂ ಮೇಲಕ್ಕೆ ಎದ್ದಿವೆ ಎಂದು ಹೇಳಿದಿರಿ, ಕೈ ಮೇಲೆ ಎತ್ತುವದು ಯಾಚಕರ ಲಕ್ಷಣವಲ್ಲವೆ? ದಾನ ಮಾಡುವವನ ಕೈಗಳು ಹಾಗಿರುವದಿಲ್ಲ. ಇವಳ ಕಾಲುಗಳಂತೂ ವ್ಯಭಿಚಾರಿಣಿಯ ಲಕ್ಷಣಗಳಿಂದ ಕೂಡಿವೆ ಎಂದಿರಿ ಇದು ಅವಲಕ್ಷಣವೇ. ಇವಳ ಮಿಕ್ಕ ಅವಯವಗಳನ್ನು ಪರೀಕ್ಷಿಸಿ ಅವುಗಳ ಫಲವನ್ನು ನನಗೆ ತಿಳಿಸಿರಿ.

**ನಾರದ :-** ರಾಜನೆ, ನಾನು ಸಂತೋಷಪಡುತ್ತಿರುವಾಗ ನೀನು ದುಃಖ ಪಡುತ್ತಿರುವೆಯಲ್ಲ! ನಾನು ವಿನೋದವಾಗಿ ಆಡಿದ ಮಾತಿನ ಮರ್ಮ ನಿನಗೆ ತಿಳಿಯಲಿಲ್ಲವೆಂದು ತೋರುತ್ತದೆ. ನನ್ನ ಮಾತಿನ ರಹಸ್ಯ ಹೇಳುತ್ತೇನೆ ಕೇಳು. ಇವಳ ಪತಿಯು ಇನ್ನೂ ಹುಟ್ಟಿಯೇ ಇಲ್ಲ ಎಂದರೆ ಹುಟ್ಟು ಸಾವುಗಳನ್ನು ಮೀರಿ ನಿಂತ ಮಹಾದೇವನೇ ಇವಳ ಪತಿ ಆಗುವನೆಂದರ್ಥ. ಬ್ರಹ್ಮ ಇಂದ್ರ ಮೊದಲಾದ ದೇವತೆಗಳು ಜನನ, ಮರಣ ದುಃಖಗಳಿಂದ ಪೀಡಿತರಾಗಿದ್ದಾರೆ.

ಸಾಕ್ಷಾತ್ ವಿಷ್ಣು ಕೂಡ ಯುಗ ಯುಗಗಳಲ್ಲಿ ತನ್ನಿಚ್ಛೆಯಿಂದಲೇ ಬೇರೆ ಬೇರೆ ರೂಪಗಳಿಂದ ಅವತರಿಸಿದ್ದನ್ನು ಕಾಣುವಿ. ಆದರೆ ಮಹಾದೇವನು ಮಾತ್ರ ಸ್ಥಾಣುವಾಗಿ ಹುಟ್ಟಿನ ಕಟ್ಟಿಗೆ ಒಳಪಡದೆ ಮೃತ್ಯುಂಜಯವಾಗಿ ಮೆರೆದಿದ್ದಾನೆ. ಅಂತಹ ಜಗನ್ನಾಥನೇ ಇವಳಿಗೆ ನಾಥನಾಗಿದ್ದಾನೆ. ಅವನಿಗೆ ಹುಟ್ಟು ಇಲ್ಲ ಎಂಬ ಅರ್ಥದಲ್ಲಿ ಇವಳ ಪತಿ ಹುಟ್ಟಿಯೇ ಇಲ್ಲ ಎಂದು ಹೇಳಿದೆ.

ಇವಳ ಕೈಗಳು ಮೇಲಕ್ಕೆ ಎದ್ದಿವೆ ಎಂಬ ನನ್ನ ಮಾತಿನ ಅಭಿಪ್ರಾಯ ಇವಳು ಸುರಾಸುರ ಮುನಿ ಮನುಜರಿಗೆಲ್ಲ ವರ ಕೊಡುವ ಮಹಾನುಭಾವಳು ಎಂಬ ಅಭಿಪ್ರಾಯ ಗರ್ಭಿತವಾಗಿದೆ. ಭಕ್ತರಿಗೆ ವರ ನೀಡಲು ಇವಳು ಯಾವಾಗಲೂ ಕೈ ಮೇಲೆ ಮಾಡಿರುತ್ತಾಳೆ.

ಇವಳ ಕೋಮಲ ಕಾಂತಿಯುಳ್ಳ ಕಾಲುಗಳು ಕಮಲದ ಕಾಂತಿಯಿಂದ ಕಂಗೊಳಿಸುತ್ತವೆ. ಆ ಪಾದದ ಬೆರಳುಗಳು ಇನ್ನೂ ಹೆಚ್ಚಿನ ಕಾಂತಿ ಕಿರಣಗಳಿಂದ ಹೊಳೆಯುತ್ತವೆ. ಈ ಚಿಗುರುಗಾಲಿನ ಉಗುರು ಬಣ್ಣಕ್ಕೆ ಆ ಪಾದಗಳಿಗೆ ನಮಸ್ಕರಿಸುವ ಸುರಾಸುರ ಸಾರ್ವಭೌಮರ ವಿವಿಧ ರಾಗ ರಂಗಿತವಾದ ಕಿರೀಟ ರತ್ನಗಳ ಕಾಂತಿಯೂ ಸೇರಿ ಬಣ್ಣಗಳ ಜಾತ್ರೆಯೇ ಈ ನಿನ್ನ ಮಗಳ ಅರುಣ ಚರಣಗಳ ಕಿರಣ ಕುಂಜದಲ್ಲಿ ನೆರವೇರುವದು. ಬಗೆ ಬಗೆಯ ಪ್ರಕಾಶ ಪುಂಜಗಳ ಈ ವರ್ಣಸಂಕರಕ್ಕೆ ಸಾಹಿತ್ಯ ರೀತಿಯಲ್ಲಿ ವ್ಯಭಿಚಾರವೆಂದು ನಾನು ಹೇಳಿದ್ದು.

ಹಾಗೂ ಈ ನಿನ್ನ ಮಗಳು ಭಕ್ತರ ಮನೋಭೀಷ್ಟಗಳನ್ನು ಪೂರೈಸಲು ಎಲ್ಲ ಕಡೆಗೂ ಸಂಚರಿಸಬೇಕಾದದ್ದರಿಂದ ಅವಳ ಪಾದಗಳು ಭಕ್ತರ ಹೃದಯ ಮಂದಿರಗಳಲ್ಲಿ (ವಿ+ಅಭಿ+ಚರ) ವಿಶೇಷವಾಗಿ ಎಲ್ಲ ಕಡೆಗೆ ಸಂಚರಿಸಲಿರುವುದರಿಂದ ವ್ಯಭಿಚಾರಿ ಯಂತಿವೆ ಎಂದು ಹೇಳಿದ್ದೇ ಹೊರತೂ ಹೀನಾರ್ಥದಲ್ಲಿ ಅಲ್ಲ.

ಇವಳ ದೇಹದಲ್ಲಿ ಒಳ್ಳೇ ಲಕ್ಷಣಗಳಿಲ್ಲ ಎಂಬ ನನ್ನ ಮಾತೂ ಸಹ ಇಂತಹ ಗೂಡಾರ್ಥವುಳ್ಳದ್ದು. ಸಾಮಾನ್ಯ ಮನುಷ್ಯ ದೇಹದಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ಒಂದೊಂದು ಭಾಗ್ಯ ಲಕ್ಷಣವನ್ನು ಗುರುತು ಹಾಕಿರುತ್ತಾರೆ. ಈ ಮಹಾದೇವಿಯ ಮೈಮೇಲೆ ಯಾವ ದೇವತೆಯು ಪರಿಮಿತ ಭಾಗ್ಯದ ಗುರುತನ್ನು ಹಾಕಬಲ್ಲನು! ಅಪರಿಮಿತ ಸೌಭಾಗ್ಯದ ಈ ಮಂಗಳ ಮೂರ್ತಿಗೆ ಉಳಿದ ನಾರಿಯರಂತೆ ಕ್ಷುದ್ರ ದೇವತೆಗಳು ಬರೆದ ಪರಿಮಿತ ಸೌಭಾಗ್ಯ ಲಕ್ಷಣಗಳಿಲ್ಲವೆಂದು ನನ್ನ ಮಾತಿನ ಅಭಿಪ್ರಾಯ. ಪರ್ವತರಾಜ, ನಿಜ ಹೇಳಬೇಕೆಂದರೆ ಈ ನಿನ್ನ ಮಗಳು ಸರ್ವಮಂಗಳೆ, ಪವಿತ್ರಮೂರ್ತಿ. ಈ ಶಿವೆ ಆ ಶಿವನನ್ನು ಹೇಗಾದರೆ ಬೇಗ ಹೊಂದುವಳೋ ಹಾಗೆ ಮಾಡು. ಈ ಪಾರ್ವತೀ ಪರಮೇಶ್ವರರ ಸಂಯೋಗದಲ್ಲಿ ದೇವತಾ ಕ್ಷೇಮವಿದೆ. ಶಿವ-ಶಿವೆಯರ ಮಿಲನವು ಮಹತ್ತರವಾದ ದೇವತಾಕಾರ್ಯಕ್ಕೆ ಮಂಗಳ ನಾಂದಿಯಾಗಲಿದೆ.''

ನಾರದರ ಈ ಶುಭ ನುಡಿ ಕೇಳಿ ಪರ್ವತೇಶ್ವರ ಹಿಮಾಲಯನಿಗೆ ಮರಳಿ ಹುಟ್ಟಿ ಬಂದಂತಾಯಿತು. ನಾರದರನ್ನು ಕುರಿತು ಸಂತಸದಿಂದ ನುಡಿದನು.

**ಹಿಮರಾಜ :-** ನಾರದರೆ, ಇಂದು ನೀವು ನನ್ನನ್ನು ನರಕದಿಂದ ಎತ್ತಿದಿರಿ. ಪಾತಾಳಕ್ಕೆ ಬಿದ್ದವನನ್ನು ಪಾರು ಮಾಡಿದಿರಿ. ಇಂದು ಹಿಮಗಿರಿಯ ಹತ್ತುಪಟ್ಟು ಎತ್ತರಕ್ಕೆ ಹಿಗ್ಗಿನಿಂದ ನಾನು ಬೆಳೆದು ನಿಂತಿದ್ದೇನೆ. ನನ್ನ ಮನಸ್ಸಿನ ಕಳವಳ ಕಳೆಯಿತು. ಚಿಂತೆ ಅಳಿಯಿತು. ಸಂತಸವೂ ಆಯಿತು.''

ಹೀಗೆ ಹೇಳಿ ನಾರದರನ್ನು ಸತ್ಕರಿಸಿ ಬೀಳ್ಕೊಟ್ಟು. ಹಿಮಗಿರಿಯಿಂದ ನಾರದರು ನೇರವಾಗಿ ಸ್ವರ್ಗಕ್ಕೆ ಬಂದು, ಶಚೀಪತಿಗೆ ನಡೆದ ಸಮಾಚಾರವನ್ನೆಲ್ಲ ತಿಳಿಸಿದರು. ಮುಂದಿನ ಕಾರ್ಯವನ್ನು ಅವನಿಗೆ ಹೇಳಿದರು.

**ನಾರದ :-** ಇಂದ್ರ, ಕನ್ಯೆ ಕೊಡಲು ನಾನೇನೂ ಹಿಮರಾಜನನ್ನು ಅಣಿಮಾಡಿ ಬಂದಿದ್ದೇನೆ. ಆದರೆ ಮಹಾದೇವನು ಅವಳನ್ನು ಮದುವೆಯಾಗಲು ಮನಸ್ಸು ಮಾಡಬೇಕಲ್ಲ!

ಮದುವೆಯಾಗಲು ಮನಸ್ಸಾಗಬೇಕಾದರೆ ಮೊದಲು ಅವನ ಮನಸ್ಸಿನಲ್ಲಿ ಕಾಮವಿಕಾರ ಉಂಟಾಗಬೇಕು. ಕಾಮವೇ ಇಲ್ಲದಿದ್ದರೆ ಪ್ರೇಮವೆಲ್ಲಿ ಬಂತು? ಪ್ರೇಮವಿಲ್ಲದಿದ್ದರೆ ಪತ್ನಿ ಏಕೆ! ಆದುದರಿಂದ ಮಹಾದೇವನ ಮನಸ್ಸಿನಲ್ಲಿ ಕಾಮ ಪ್ರೇಮಗಳ ಸುಳಿವು ಹೊಳವು ಹಾಕುವಂತೆ ಮಾಡುವದು ನಿನ್ನ ಕೆಲಸ.''

ನಾರದನ ಈ ನುಡಿ ಕೇಳಿ ದೇವೇಂದ್ರನು ಕೂಡಲೇ ನೆನೆದನು-ಕಾಮದೇವನನ್ನು. ಆ ಕ್ಷಣದಲ್ಲಿಯೇ ಮಾಮರದ ತಳಿರನ್ನೇ ವಸ್ತ್ರವನ್ನಾಗಿ ಧರಿಸಿ ಅಲ್ಲಿಗೆ ಬಂದು ನಿಂತ ಕಾಮ, ಕಾಮಿನಿ-ರತಿಯೊಡನೆ. ಅವನ ವಿಲಾಸವೇನು! ವಿಭ್ರಮವೇನು! ನೋಡಿದವರಿಗೆಲ್ಲ ಅನಿಸುತ್ತಿತ್ತು. ಇವನೊಬ್ಬ ವಿಲಾಸ ಲಾಲಸನಾದ ಶೃಂಗಾರ ದೇವನೆಂದು ಅವನಿಗೆ ಇಂದ್ರ ಹೇಳಿದ.

**ಇಂದ್ರ :-** ರತಿಕಾಂತ, ಈ ವಿಷಯದಲ್ಲಿ ನಿನಗೆ ಸಂಶಯಬೇಡ. ಅದಕ್ಕೆಲ್ಲ ನಾವಿದ್ದೇವೆ. ಸೂಜಿ ಇದ್ದರಷ್ಟೆ ಲೋಹ ಚುಂಬಕದ ಶಕ್ತಿ ತಿಳಿಯುವದು. ಒಬ್ಬೊಬ್ಬರಿಗೆ ಒಂದೊಂದರಲ್ಲಿ ಶಕ್ತಿ. ಎಲ್ಲರಿಗೂ ಎಲ್ಲ ವಿಷಯದಲ್ಲಿ ಸಾಮರ್ಥ್ಯವಿರುವದಿಲ್ಲ. ಇದನ್ನು ತಿಳಿದೇ ನಾನು ನಿನಗೆ ಆದೇಶವಿತ್ತಿದ್ದೇನೆ.

ದೇವೇಂದ್ರನ ಈ ಆದೇಶ ವಚನವನ್ನು ಕೇಳಿ, ಕಾಮನು ಒಪ್ಪಿಕೊಂಡು ನಡೆದ. ಅವನ ಜೊತೆಗೆ ಗೆಳೆಯ ವಸಂತ, ಗೆಳತಿ ರತಿದೇವಿ ಅವನನ್ನು ಹಿಂಬಾಲಿಸಿ ಹಿಮಗಿರಿಯ ಶಿಖರ ಸೀಮೆಯಲ್ಲಿ ಬಂದಿಳಿದರು. ಅಲ್ಲಿ ಆರಂಭವಾಯಿತು ಕಾಮ ಉಪಾಯ ಚಿಂತನೆ.

**''ಮಹಾತ್ಮಾನೋ ಹಿ ನಿಷ್ಕಂಪಾ ಮನಸ್ತೇಷಾಂ ಸುನಿಶ್ಚಲಂ''।**

ದೊಡ್ಡವರ ಮನಸ್ಸು ನಿಶ್ಚಲ. ಕ್ಷುಲಕ ಜನರ ಹೃದಯದಂತೆ ಅದು ಅಲ್ಲಾಡದು. ಮಹಾತ್ಮರ ಮನಸ್ಸನ್ನು ಗೆಲ್ಲುವುದೇ ಕಠಿಣ. ಆದುದರಿಂದ ನಾನು ಆ ಶಿವನ ಮನಸ್ಸಿನಲ್ಲಿ ಮೊದಲು ಉದ್ವೇಗವನ್ನು ಮೂಡಿಸಬೇಕು.

ಅಂತರಂಗವನ್ನು ಒಮ್ಮೆ ಕದಡಿಬಿಟ್ಟರೆ ಬಹುಶಃ ಮುಂದಿನ ಸಿದ್ಧಿ ಸುಲಭ. ಆದರೆ ಇಂತಹ ಮಹಾಪುರುಷರ ಮನ ಕದಡುವ ಬಗೆ ಹೇಗೆ? ಇದೇ ನನಗೆ ಸಮಸ್ಯೆ ಆಗಿದೆ. ಹೇಗಾದರೂ ಪ್ರಯತ್ನಮಾಡಿ ಮೊದಲು ಆ ಶಿವನ ಚಿತ್ತದಲ್ಲಿ ಚಾಂಚಲ್ಯದ ಹೊಳವು ಹಾಕಬೇಕು. ಆದರಿಂದ ಧೈರ್ಯ ಸ್ಥೈರ್ಯಗಳು ಗಟ್ಟಿಯಾದ ನೆಲಗಟ್ಟು ಹೊಯ್ದಾಡುವದು. ಇಂಥ ಚಂಚಲ ಮನೋಭೂಮಿಕೆಯಲ್ಲಿ ದ್ವೇಷ, ರೋಷ, ಈರ್ಷೆ ಮುಂತಾದದುರ್ಗುಣಗಳ ಬೀಜ ಬಿತ್ತುವದು ಬಹು ಸುಲಭ. ಒಮ್ಮೆ ಇಂತಹ ದುರ್ಗುಣಗಳ ದುರ್ಬೀಜ ಬಿತ್ತಿ ಬಿಟ್ಟರೆ ಮುಂದೆ ಈ ಕಾಮನ ಕೆಲಸ ಬಹು ಸುಲಭ.

ಆದುದರಿಂದ ನಾನೀಗ ಈ ಶಿವನ ಧೈರ್ಯದ ಬಾಗಿಲುಗಳನ್ನೆಲ್ಲ ಮುಚ್ಚಿ ಅವನ ಅಂತರಂಗದ ಶಾಂತಿ ಸಂತಸಗಳ ಭದ್ರ ಬುನಾದಿಯನ್ನು ಶಿಥಿಲಗೊಳಿಸಿ ಮನೋ

ವಿಕಾರವನ್ನು ಸಾಧಿಸಬೇಕು. ಈ ಎಲ್ಲ ಗುಪ್ತಕಾರ್ಯಚರಣೆಯನ್ನು ನಾನು ಕೈ ಕೊಂಡರೂ ಈ ವಿಜನ ವನದೇಕಾಂತದಲ್ಲಿ ನನ್ನನ್ನು ಗುರುತಿಸುವವರು ಯಾರೂ ಇಲ್ಲ.' ಹೀಗೆ ಆಲೋಚನೆ ಗೈದು ಆ ರತೀಪತಿಯು ಭೂತಪತಿ ಪರಮೇಶ್ವರನ ಆಶ್ರಮ ಪ್ರವೇಶಿಸಿದನು.

ಭೂತಲದ ಸಾರಸರ್ವಸ್ವದಂತಿತ್ತು ಆ ಶಿವಾಯತನ. ಅಲ್ಲಲ್ಲಿ ಸರಳ ಮರಗಳ ಕಟ್ಟೆಗಳು , ಹೂಗಳ ಹೊರೆ ಹೊತ್ತು ಬಾಗಿನಿಂತ ಬಳ್ಳಿವಾಡಗಳು. ಸಂದಿ ಸಂದಿಗಳಲ್ಲೂ ಆತು ಕುಳಿತು ಅನೇಕ ಗಣೇಶ್ವರರು. ಜಾತಿವೈರ ತೊರೆದು ಸ್ನೇಹ ಸಲುಗೆಯಿಂದಿರುವ ಕ್ರೂರಮೃಗಗಳು. ನೋಡಿದಲ್ಲೆಲ್ಲ ಹಚ್ಚ ಹಸಿರು ಮುರಿಯುವ ಹುಲ್ಲುಗದ್ದೆಗಳು. ಆಶ್ರಮದ ಅಂಗಳದಲ್ಲಿಗುಟುರು ಹಾಕುವ ಅಚ್ಚ ಬಿಳಿ ಬಣ್ಣದ ಶಿವನ ಅಚ್ಚುಮೆಚ್ಚಿನ ಎತ್ತು ಈ ಆಶ್ರಮದ ತುಂಬ ಪ್ರಶಾಂತಿ.

ಇಂತಹ ಈ ರಮ್ಯ ಪುಣ್ಯಾಶ್ರಮದಲ್ಲಿ ಕೈಯಲ್ಲಿ ಬೆತ್ತ ಹಿಡಿದು ಮುಂಭಾಗದಲ್ಲಿ ಶಿವನಂತೆಯೇ ಆಕಾರವುಳ್ಳ ವೀರಕನೆಂಬ ಗಣಾಧಿಪನು ಕುಳಿತಿದ್ದನು. ಅಲ್ಲಿಂದ ಮುಂದೆ ಹೋದರೆ ಒಳಗೆ ತಪೋನಿರತನಾದ ಶಿವ.

ಅರ್ಧ ಮುಚ್ಚಿದ ಕಣ್ಣು, ಸರಳ ಮೂಗಿನ ಕೊನೆಯಲ್ಲಿ ನೆಟ್ಟ ದೃಷ್ಟಿ. ಮೈ ಮೇಲೆ ಸಿಂಹದ ತೊಗಲು. ಕಿವಿಯ ಹಿಂಬದಿಯಲ್ಲಿ ಹೆಡೆ ಎತ್ತಿ ಹಗುರಾಗಿ, ಉಸಿರಾಡುವ ಹಾವುಗಳ ಹೊಂಬಣ್ಣದ ಹೊಳವು. ಕಪೋಲ ಮೇಲೆ ಜೋತಾಡುವ ಕೆಂಬಣ್ಣದ ಜಡೆ. ವಾಸುಕಿಯ ಹಗ್ಗದಂತಹ ಹಾವಿನ ಮೈಯಿಂದ ಗಟ್ಟಿಯಾಗಿ ಕಟ್ಟಿಕೊಂಡ ಯೋಗಪಟ್ಟ. ಎರಡೂ ಭುಜಗಳ ಮೇಲೆ ಹೆಡೆ ತೆರೆದು ಆಟವಾಡುವ ಹಾವುಗಳು. ಉಗ್ರಾವ್ಯಗ್ರವಾದ ಭೀಷಣ ಸುಂದರ ಕಾಂತ ಕಳೆ.

ಇಂತಹ ರುದ್ರ ರಮಣೀಯವಾದ ಶಿವನ ಗಂಭೀರ ಆಕಾರ ಹಾಗೂ ತಪಃ ಪ್ರಕಾರಗಳನ್ನು ನೋಡಿ ಕಾಮನ ಮಿದುವಾಗಿ ಮೆಲ್ಲಮೆಲ್ಲನೆ ಅವನ ಬಳಿ ಸಾರಿದನು. ಸುತ್ತ ಮುತ್ತ ಗುತ್ತಾಗಿ ಬೆಳೆದ ಹೆಮ್ಮರಗಳ ಕುಸುಮ ಕೋಶಗಳಲ್ಲಿ ಝೇಂಕರಿಸುವ ದುಂಬಿಗಳ ಗುಂಜಾರವವನ್ನು ನೆಪಮಾಡಿಕೊಂಡು ಕಾಮನು ಶಿವನ ಕಿವಿಯಲ್ಲಿ ಪ್ರವೇಶ ಮಾಡಿದನು. ಕರ್ಣರಂಧ್ರದ ಮೂಲಕ ಆ ಗಂಗಾಧರನ ಅಂತರಂಗದ ಆಳಕ್ಕೆ ಇಳಿದು ಬಿಟ್ಟ ಮನ್ಮಥ. ಹೃದಯದಲ್ಲಿ ಕಾಮನ ಪ್ರವೇಶವಾದ ಕೂಡಲೇ, ಶಿವನ ಹೃದಯವು ಸಾನುರಾಗವಾಯಿತು. ಚಿತ್ತಭಿತ್ತಿಯಲ್ಲಿ ದಾಕ್ಷಾಯಣಿಯ ಮಧುರ ಸ್ಮರಣೆಯು ಎದ್ದು ಬಂದಿತು. ಆ ಸರ್ವಾಂಗ ಸುಂದರಿಯನ್ನು ಪ್ರೇಮಪೂರ್ವಕವಾಗಿ ಜ್ಞಾಪಕಕ್ಕೆ ತಂದು ಕೊಂಡ ಚಂದ್ರಶೇಖರ. ಇದೇ ವೇಳೆಯಲ್ಲಿ ಆ ಗಿರಿರಾಜ ಕುಮಾರಿಯು ಶಿವ ಸ್ಮರಿಸಿದ ಕೂಡಲೇ ಮೊದಲು ಅಂತರಂಗ ಗೋಚರಳಾಗಿ ಅನಂತರ ಪ್ರತ್ಯಕ್ಷವಾಗಿ ಕಣ್ಣೆದುರು ಕಾಣಿಸಿಕೊಂಡಳು. ಪ್ರೇಯಸಿ ಪಾರ್ವತಿಯ ದರ್ಶನದಿಂದ ಶಿವನಿಗೆ ಚಿತ್ತ ಚಂಚಲ ವಾಯಿತು. ಮನಸ್ಸು ಆ ಮೋಹಿನಿಗೆ ಮಾರು ಹೋಯಿತು. ಕಾಮನ ಕೆಲಸವು ಆಯಿತು.

ಆದರೆ ಇದೆಲ್ಲವೂ ಒಂದು ಕ್ಷಣಮಾತ್ರ, ಮರುಕ್ಷಣದಲ್ಲಿ ಶಿವ ತನ್ನ ಚಿತ್ತದ ಹೊಯ್ದಾಟವನ್ನು ಗುರುತಿಸಿದ. ತನ್ನ ಈ ಆಕಸ್ಮಿಕ ಚಿತ್ತ ಚಾಂಚಲ್ಯದ ಕಾರಣವನ್ನು ಪರೀಕ್ಷಿಸಿದ. ಕಾಮನೇ ತನ್ನ ಈ ಮನೋವಿಭ್ರಮಕ್ಕೆ ಕಾರಣನೆಂದು ತಿಳಿಯಿತು ಆ ಸರ್ವಜ್ಞ ಶಿವನಿಗೆ. ಕೂಡಲೇ ಅವನು ತನ್ನ ಸಂಯಮದ ಕಟ್ಟನ್ನು ಬಲಪಡಿಸಿಕೊಂಡು. ಹತ್ತೋಟಿ

ಮೀರಿ ಹರಿದಾಡುತ್ತಿರುವ ಮನಸ್ಸನ್ನು ಗಟ್ಟಿಮಾಡಿದ. ಆಗ ಕಾಮನಿಗೆ ಆವನ ಹೃದಯದಲ್ಲಿ ನಿಲ್ಲಲ್ಲು ಅವಕಾಶವೇ ಇಲ್ಲದಂತಾಯಿತು. ಕೂಡಲೇ ಹರನ ಹೃದಯಾಂತರಾಳದಿಂದ ಹೊರಬಿದ್ದು ಬಹಿರಂಗದಲ್ಲಿ ಬಂದು ನಿಂತ ಆ ಮೀನಕೇತನ. ಅವನ ಪಕ್ಕದಲ್ಲಿ ಮಿತ್ರ ವಸಂತನೂ ನಿಂತಿದ್ದ. ಅಲ್ಲಿಯೇ ಪಕ್ಕದಲ್ಲಿ ಒಂದು ಮಾಮರ ಕಾತು ಹೂತು ನಿಂತಿತ್ತು. ಮೆಲುಗಾಳಿ ಆ ಮಾಮರದ ಮಂಜರಿಯನ್ನು ತನ್ನ ತಂಗಾಳಿಯ ತಂಪಿಗೆ ಅಳೆಗಳಿಂದ ತೂಗಾಡಿಸುತ್ತಲಿತ್ತು ಅದನ್ನೇ ತನ್ನ ಬಾಣವನ್ನಾಗಿ ಮಾಡಿಕೊಂಡು ಶಿವನ ಎದೆಗೆ ಗುರಿಯಿಟ್ಟು ಹೊಡೆದ ಕಾಮಭೂಪ, ಮೋಹನಾಸ್ತ್ರ ಎಂದು ಅದಕ್ಕೆ ಹೆಸರು. ಆ ಪುಷ್ಪಾಂಜರಿಯ ಪ್ರಹಾರದಿಂದ ಧೈರ್ಯಮೇರುವಾದ ಶಿವನ ಹೃದಯಲ್ಲಿ ಶೃಂಗಾರ ಭಾವನೆಯ ಅಂಕುರಾರ್ಪಣೆ ಆಯಿತು.

ರುಕ್ಷ ಹೃದಯದಲ್ಲಿ ಅನುರಾಗದ ರಸಕಾರಂಜಿ ಪುಟಿಯಿತು. ಈ ಪ್ರಣಯ ಪೀಠಿಕೆ ಶಿವನಿಗೆ ತಿಳಿಯದಿದ್ದೀತೆ? ಕಾಮನ ಈ ಕಾರಸ್ಥಾನ ಕಂಡು ಬ್ರಹ್ಮಾಂಡ ಕೋಪ ಬಂದಿತು ಆ ಭವನಿಗೆ. ಹುಬ್ಬು ಗಂಟಿಕ್ಕಿತು. ಕಂಠ ಹೊಂಕರಿಸಿತು. ಕೋಪಾಟೋಪದಿಂದ ಹಣೆಯ ನಡುವೆ ಮೂರನೆಯ ಕಣ್ಣು ಒಮ್ಮೇಲೆ ಸ್ಫೂಟಗೊಂಡಿತು.

ಸಂಹಾರಮೂರ್ತಿಯಾದ ಶಿವನ ಆ ರುದ್ರ ಶರೀರದ ಹಣೆಗಣ್ಣು ಒಂದು ಉರಿಯುತ್ತಿರುವ ಕೆಂಡದ ಹೊಂಡವಾದಿ ದಹಿಸಿತು. ಕಿಚ್ಚು ಕೆದರಿದಂತಹ ತನ್ನ ಮೂರನೆಯ ಕಣ್ಣಿನಿಂದ ಶಿವನ ಕಾಮನೆಡೆ ನೋಡಿದ. ನೋಡಿದ್ದೊಂದೇ ತಡ. ಹಣೆಗಣ್ಣಿನ ಕಿಡಿ ಸಿಡಿಲಾಗಿ ಉರಿಯಿತು. ಅದೊಂದು ಬೆಂಕಿಯ ಬಣವೆ. ಕ್ಷಣಾರ್ಧದಲ್ಲಿ ಕಾಮನನ್ನು ಸುಟ್ಟು ಹಾಕಿತು. ಬೂದಿಯಾಗಿ ಬಿದ್ದು ದರ್ಪಿಷ್ಠನಾದ ಕಾಮ.

ಹೀಗೆ ಹರನ ಉರಿಗಣ್ಣಿನಿಂದ ಹೊರಟ ಒಂದು ಕಿಡಿ ಕಿಚ್ಚಾಗಿ ಕಾಮನನ್ನು ಬೂದಿಗೈದು ಜಗತ್ತನ್ನೆಲ್ಲ ಸುಟ್ಟು ಹಾಕಲು ಛಿಟ್‌ಛಿಟಲ್ ಧ್ವನಿಗೈಯುತ್ತ ಬೆಳೆದುನಿಂತಿತು. ಅದನ್ನು ನೋಡಿ ಮಹಾದೇವನು ಜಗತ್ತಿನ ಕಲ್ಯಾಣಕ್ಕಾಗಿ ಆ ಅಗ್ನಿಯನ್ನು ಮಾವಿನಮರ, ವಸಂತ, ಚಂದ್ರ, ಹೂ, ತುಂಬಿ ಕೋಕಿಲೆಗಳ ಕುಕಿಲುಗಳಲ್ಲಿ ಹಂಚಿದನು. ಕಾಮನನ್ನು ಸುಟ್ಟುಹಾಕಿದರೂ ಮಹೇಶ್ವರನ ಹೃದಯವು ಶಾಂತವಾಗಲಿಲ್ಲ. ದಾಕ್ಷಾಯಣಿಯ ಸ್ನೇಹವು ಅವಳ ವಿರಹವನ್ನು ಅಸಹ್ಯವಾಗಿ ಮಾಡಿತು. ವಿರಹಾಗ್ನಿಯು ಅವನ ಹೃದಯದಲ್ಲಿ ಹೊತ್ತು ಉರಿಯತೊಡಗಿತು. ಮಡದಿಯ ಮೋಹವು ಅವನ ಹೃದಯದಲ್ಲಿ ಹೊತ್ತಿ ಉರಿಯತೊಡಗಿತು.. ಮಡದಿಯ ಮೋಹವು ಅವನ ಹೃದಯದಲ್ಲಿ ಕಾಮನ ಮೂಲಕ ವ್ಯಾಪಿಸಿಬಿಟ್ಟಿದ್ದರಿಂದ ಕಾಮನು ದಗ್ಧನಾದ ಬಳಿಕವೂ ಅವನ ಅಂತರಂಗವು ಮಾತ್ರ ತಾಪಕೋಪಗಳಿಂದ ದಗ್ಧವಾಗಿ ದುಃಖ ದಲಿತವಾಯಿತು.

ಇತ್ತ ಪತಿಯ ಈ ಆಕಸ್ಮಿಕ ದುರಂತದಿಂದ ದುಃಖ ಸಂತಪ್ತಳಾದ ರತಿಯು ಕ್ಷಣಾರ್ಧದಲ್ಲಿ ಕಣ್ಣೆದುರೇ ಸುಟ್ಟು ಬೂದಿಯಾದ ಮನ್ಮಥನ ಸುಂದರ ಶರೀರ ಕಂಡು ದುಃಖಪಟ್ಟಳು. ಕಾಮನ ಮಿತ್ರನಾದ ವಸಂತನು ಅವಳನ್ನು ಸಂತೈಸಿದನು ಆದರೂ ಅವಳ ದುಃಖ ಶಮನ ವಾಗಲಿಲ್ಲ. ಕೊನೆಗೆ ಅವಳು ಜಡೆಯಲ್ಲಿ ಚಂದ್ರನನ್ನು ಮುಡಿದುಕೊಂಡ ಆ ಮಹೇಶ್ವರನಿಗೆ ಶರಣು ಹೋದಳು. ಪತಿಯ ಕಳೆದುಕೊಂಡು ವಿಧವೆಯಾದ ಆ ರತಿದೇವಿಯು ಗುಂಗಿ ಹುಳುಗಳ ಝೇಂಕರಿಸುತ್ತಿರುವ ಮಾವಿನ ಮರದ ಹೂಗಿಡಗಳ

ಬಳ್ಳಿಯನ್ನೇ ದಾರವನ್ನಾಗಿ ಮಾಡಿ ತನ್ನ ಜಡೆಗಟ್ಟಿದ ಕೂದಲಗಳನ್ನು ಎತ್ತಿಕಟ್ಟಿ, ಮೈಗೆಲ್ಲ ಕಾಮನ ಬೂದಿಯನ್ನೇ ಬಳಿದುಕೊಂಡು, ಮಹಾದೇವರ ಎದುರು ಮಂಡೆಯೂರಿ ಕುಳಿತು ಸ್ತೋತ್ರಮಾಡಿದಳು.

**ಅಸಹ್ಯಕೋಪಾಯ ಸುದೇವ ತುಭ್ಯಂ**
**ಶಶಾಂಕ ಚಿಹ್ನಾ ನಮೋಽಸ್ತು ತುಭ್ಯಂ ॥**
**ಅಸೀಮಲೀಲಾ ಪರಮಸ್ತುತಾಯ**
**ವೃಷೇಂದ್ರಯಾನಾಯ ಪುರಾಂತಕಾಯ ॥**

ಕ್ರೂರವಾದ ಕೋಪವುಳ್ಳ ನಿನಗೆ ನಮಸ್ಕಾರವು. ಚಂದ್ರಮೌಳಿಯಾದ ನಿನಗೆ ನಮಸ್ಕಾರವು. ಬಹು ವಿಧವಾದ ಲೀಲೆಗಳುಳ್ಳ ನಿನಗೆ ನಮಸ್ಕಾರವು. ಎತ್ತಿನ ಮೇಲೆ ಕುಳಿತುಕೊಳ್ಳುವ ಪುರಾಂತಕನಾದ ನಿನಗೆ ನಮಸ್ಕಾರ.

**ನಮಃ ಪ್ರಸಿದ್ಧಾಯ ಮಹೌಷಧಾಯ ।**
**ನಮೋಽಸ್ತು ನಾನಾ ವಿಧ ರೂಪಕಾಯ ।**
**ನಮೋಸ್ತು ಕಾಲಾಯ ನಮಃ ಕಲಾಯ ।**
**ನಮೋಽಸ್ತು ತೇ ಕಾಲಕಲಾತಿಗಾಯ ॥**

ಪ್ರಸಿದ್ಧನಾದ, ಔಷಧಿರೂಪನಾದ ನಿನಗೆ ನಮಸ್ಕಾರವು. ನಾನಾ ಬಗೆಯ ರೂಪವುಳ್ಳ ನಿನಗೆ ನಮಸ್ಕಾರವು. ಕಾಲರೂಪನಾದ ನಿನಗೆ ನಮಸ್ಕಾರವು. ಕಲೆಯು ರೂಪವೂ ಕಾಲಕ್ಕೆ ಮೀರಿದವನೂ ಆದ ನಿನಗೆ ನಮಸ್ಕಾರವು.

**ಪ್ರಯಚ್ಛ ಮೇ ಕಾಮಯಶಃ ಸಮೃದ್ಧಿಂ ।**
**ಪತಿಂ ವಿನಾ ತಂ ಭಗವನ್ನ ಜೀವೇ ।**
**ಸ್ತ್ರಿಯಾಃ ಪ್ರಿಯಾಯಾಃ ಪುರುಷೇಷು ನಿತ್ಯ ।**
**ಸ್ತತೋಽಪರಃ ಕೋ ಭುವನೇಷ್ವಿಹಾಸ್ತಿ ॥**

ಸ್ವಾಮಿ! ಕಾಮನೆಂಬ ಯಶಸ್ಸಮೃದ್ಧಿಯನ್ನು ನನಗೆ ಕೊಡು. ಎಲೈ ಭಗವಂತನೇ, ಪತಿಯನ್ನುಳಿದು ನಾನು ಬದುಕಲಾರೆ. ಎಲೈ ಪುರುಷ ಶ್ರೇಷ್ಠನೇ! ಪ್ರಿಯೆಗೆ ಪ್ರಿಯನು ನಿತ್ಯನು. ಅದನ್ನು ಬಿಟ್ಟು ಯಾರು ತಾನೇ ಈ ಲೋಕದಲ್ಲಿರುವರು? ರತಿಯ ರೋದನ ಹಾಗೂ ಪ್ರಾರ್ಥನೆಗಳನ್ನು ಕೇಳಿ, ಶಿವನ ಸಂತುಷ್ಟನಾದನು. ಮತ್ತು ಆ ಕಾಮಕಾಂತೆಯನ್ನು ಕುರಿತು ನುಡಿದನು.

**ಪರಮೇಶ್ವರ :-** ಕಾಮಕಾಮನಿಯೆ, ನಿನ್ನ ಪತಿಯಾದ ಕಾಮನು ಬೇಗನೇ ಹುಟ್ಟಿ ಬರಲಿರುವನು. ಅವನಿಗೆ ಅನಂಗ ಎಂದು ಜಗತ್ತಿನಲ್ಲಿ ಪ್ರಖ್ಯಾತಿ ಉಂಟಾಗುವದು. ಮಹಾದೇವರ ಈ ನುಡಿಯನ್ನು ಕೇಳಿ, ಆ ಮದನ ಮಾನಿನಿಯು ಮಹಾದೇವನಿಗೆ ತಲೆಬಾಗಿ ನಮಸ್ಕರಿಸಿ ಆ ಹಿಮಗಿರಿಯ ಬೇರೊಂದು ಉಪವನಕ್ಕೆ ತೆರಳಿದಳು.

ಆ ನಿರ್ಜನ ವಿಪಿನದಲ್ಲಿ ಕುಳಿತು ರತಿಯು ದುಃಖಾತಿರೇಕದಿಂದ ಅತ್ತದ್ದೇ ಅತ್ತದ್ದು. ಹಿಮಾಚಲದ ಪರಮ ರಮಣೀಯ ನಿಸರ್ಗಸುಂದರ ಸ್ಥಾನಗಳನ್ನು ಕಂಡಾಗಲೆಲ್ಲ ಅವಳ ದುಃಖವು ಉದ್ದೀಪಿತವಾಗುತ್ತಿತ್ತು. ವಿರಹಾಗ್ನಿಯ ಕಿಚ್ಚು ಕೆದರಿದಂತಾಗಿ ಕಣ್ಣೀರು ಹರಿಯುತ್ತಿತ್ತು ಪತಿವಿರಹ ತಾಪ ತಾಳಲಾರದೆ. ಆತ್ಮಹತ್ಯೆ ಮಾಡಿಕೊಳ್ಳಲು ಅವಳಿಗೆ ಆಗಾಗ

ಅನಿಸುತ್ತಿತ್ತು. ಆದರೆ ಶಂಕರನ ಆಜ್ಞೆಯ ನೆನಪಾಗಿ ಆತ್ಮಘಾತಕ ವ್ಯಾಪಾರದಿಂದ ಅವಳು ನಿವೃತ್ತಳಾಗುತ್ತಿದ್ದಳು. ಇತ್ತ ಗಿರಿರಾಜನಾದ ಹಿಮಾಲಯನು ನಾರದ ಮುನಿಯ ವಾಕ್ಯದಿಂದ ತನ್ನ ಮಗಳಾದ ಪಾರ್ವತಿಯನ್ನು ಕರೆದುಕೊಂಡು ರತಿಯ ವಿಲಾಪಗೈಯುತ್ತ ಕುಳಿತ ಏಕಾಂತ ವನಾಂತಕ್ಕೆ ಬಂದನು. ಕಣ್ಣೀರು ಕರೆಯುವ ಆ ಮನ್ಮಥ ಕುಟುಂಬಿನಿಯ ಬಳಿಗೆ ಬಂದು, ಅವಳ ದಾರುಣ ದುಃಖವನ್ನು ಕಂಡು ಕೌತುಕದಿಂದ ಕೇಳಿದನು.

**ಹಿಮಗಿರಿ :-** ಶುಭಾಂಗಿ, ನೀನು ಯಾರು? ಇಲ್ಲಿಗೇಕೆ ಬಂದಿರುವೆ? ನೀನು ಯಾರ ಮಗಳು? ಯಾರ ಮಡದಿ? ಅಳಲು ಕಾರಣವೇನು? ನಿನ್ನಂತಹ ಲೋಕ ಸುಂದರಿಯು ಅಳಬೇಕಾದರೆ ಮಹತ್ಕಾರಣವು ಇರಲೇಬೇಕು?

**ರತಿ :-** ಪುಣ್ಯಾತ್ಮಾ, ನಾನು ಕಾಮನ ಧರ್ಮಪತ್ನಿ ರತಿ ಎಂದು ನನ್ನ ಹೆಸರು. ಈ ಬೆಟ್ಟದಲ್ಲಿ ಭಗವಾನ್ ಮಹೇಶ್ವರನು ತಪೋನುಷ್ಠಾನ ಮಾಡುತ್ತಿರುವದು ತಮಗೆ ಗೊತ್ತಿದೆ ಅಷ್ಟೆ!

ದೇವತೆಗಳ ಆಜ್ಞೆಯಿಂದ ಆ ಶುಂಭುವಿನ ತಪಸ್ಸಿಗೆ ನನ್ನ ಪತಿ ವಿಘ್ನ ಒಡ್ಡಿದ ಆದರಿಂದ ಶಿವನಿಗೆ ಕೋಪ ಬಂದು ಕಣ್ತೆರೆದ. ಅವನ ಹಣೆಗಣ್ಣಿನ ಉರಿಯು ಭುಗಿಲ್ಲೆಂದು ನನ್ನ ಪತಿಯನ್ನು ಬೂದಿಗೈದಿತು. ಪತಿಯನ್ನು ಕಳೆದುಕೊಂಡು ಅನಾಥಳಾದ ನಾನು ಆ ಪರಶಿವನಿಗೆ ಮೊರೆಹೋದೆ. ಅವನನ್ನೇ ಸ್ತೋತ್ರಗೈದೆ. ನನ್ನ ಪ್ರಾರ್ಥನೆಯಿಂದ ಪರಿತುಷ್ಟನಾದ ಆ ಪರಮೇಶ್ವರ ವರವಿತ್ತ.

''ಕಾಮಪತ್ನಿ, ನಾನು ತುಷ್ಟನಾಗಿದ್ದೇನೆ. ನಿನ್ನಪತಿ ಬೇಗ ಹುಟ್ಟಿ ಬರುವನು. ನೀನು ದೇಹ ಪರಿತ್ಯಾಗ ಮಾಡಬೇಡ. ನನ್ನ ಮಾತನ್ನು ನಂಬು. ನಿನ್ನ ಮನದನ್ನ ನಿನಗೆ ಮರಳಿ ದೊರೆಯುವನು.'' ಆ ಚಂದ್ರಚೂಡನು ನುಡಿದ ವಚನವು ನನಗೆ ಅಶಾತಂತು. ಆ ಪರಮೇಶ್ವರನ ಮಾತು ಸತ್ಯವಾಗುವ ದಿನವನ್ನೇ ನಾನು ಎದುರು ನೋಡುತ್ತ ಬದುಕಿದ್ದೇನೆ. ಪತಿಯ ಪುನರ್ಮಿಲನದ ಆಶೆಯಿಂದ ಈ ನನ್ನ ದೇಹವನ್ನು ನಾಶಗೈಯದೆ. ಅವನ ಬರವಿಗಾಗಿ ರಕ್ಷಿಸಿಕೊಂಡಿದ್ದೇನೆ. ಶಿವವಾಕ್ಯವು ಸತ್ಯವಾಗುವವರೆಗೆ ದಾರಿ ಕಾಯುತ್ತೇನೆ. ಕಾಮನ ರಮಣಿ ರತಿಯ ಈ ವ್ಯಥೆಯ ಕಥೆಯನ್ನು ಕೇಳಿ ಖಿನ್ನನಾದ ಆ ಪರ್ವತರಾಜ ಮಗಳ ಕೈಹಿಡಿದುಕೊಂಡು ಅವನು ತನ್ನ ರಾಜಧಾನಿಗೆ ಮರಳಿಬಂದ. ರತಿದೇವಿ ಸ್ಥಿತಿಗತಿ ನೋಡಿ, ಕೇಳಿ ಪಾರ್ವತಿಗೂ ಮನಸ್ಸಿನಲ್ಲಿ ನಾಚಿಕೆ ಆಯಿತು. ಕಾಮವನ್ನೇ ಸುಟ್ಟು ಹಾಕಿದ ಶಿವ ತನ್ನ ಮೇಲೆ ಪ್ರೇಮಮಾಡುವ ಬಗೆ ಎಂತು.? ಇದೇ ದೊಡ್ಡ ಚಿಂತೆ ಆಯಿತು ಅವಳಿಗೆ. ಪಾರ್ವತಿಯು ತನ್ನ ತಂದೆಯನ್ನು ಕುರಿತು ನುಡಿದಳು.

**ಪಾರ್ವತಿ :-** ಅಪ್ಪಾ, ಈ ಬೆಡಗು ಬಣ್ಣದ ಬರಿ ದೇಹದಿಂದ ಏನು ಪ್ರಯೋಜನ? ಪರಮೇಶ್ವರನಂತಹ ಪತಿಯ ದೇಹದ ಈ ಥಳಕು, ಬೆಳಕಿಗೆ ಮೋಸ ಹೋಗುವವರಲ್ಲ. ಅಂತಹ ಪತಿಯ ಸಂಗದ ಮಹಾಫಲ ದೊರಕಬೇಕಾದರೆ ಉಗ್ರತಪಸ್ಸು ಅತ್ಯವಶ್ಯ. ತಪೋನುಷ್ಠಾನವಿಲ್ಲದೆ, ಶಿವನಂತಹ ದುರ್ಲಭ ವಸ್ತು ದೊರಕಲಾರದು. ತಪಸ್ಸಿದ್ಧಿಯಲ್ಲಿ ಸಂದೇಹವಿದ್ದವರು ಯಾವ ಮಹಾಫಲವನ್ನೂ ಹೊಂದಲಾರರು. ಆದುದರಿಂದ ನಾನು ನನ್ನ ಮನೋರಥ ಪೂರ್ಣ ಮಾಡಿಕೊಳ್ಳಲು ಹಾಗೂ ನನ್ನ ಸ್ವಾರ್ಥ ಪೂರೈಸಲು ಉಗ್ರ ತಪ ಕೈಕೊಳ್ಳುತ್ತೇನೆ.

**ಹಿಮಾಲಯ :-** ಮಗಳೆ, ಬೇಡ ಬೇಡ, ತಪಸ್ಸಿನ ತಾಪವನ್ನು ವ್ರತಾನುಷ್ಠಾನ ಪರಿಶ್ರಮವನ್ನೂ ನಿನ್ನ ದೇಹವು ತಾಳಲಾರದು ನಿನ್ನ ಈ ರೂಪವು ತಪಃಕಾಠಿಣ್ಯಕ್ಕೆ ಅನುರೂಪವಾಗಿಲ್ಲ. ನಿನ್ನ ದೈವದಲ್ಲಿ ಬರೆದದ್ದು ನೀನು ತಪಸ್ಸು ಮಾಡದಿದ್ದರೂ, ಆಗಿಯೇ ತೀರುವದು. ಭವಿಷ್ಯವನ್ನು ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. ನಾವು ಬಯಸಲಿ ಬಿಡಲಿ ಆಗುವದು ಆಗಿಯೇ ತೀರುವುದು. ಅಂದ ಮೇಲೆ ಸುಮ್ಮನೇ ಈ ತಪಸ್ಸೇಕೆ? ಈ ತಪೋನುಷ್ಠಾನದ ತಾಪವೇಕೆ? ಇಷ್ಟು ಹೇಳಿದರೂ ಗಿರಿಜೆಯು ತಂದೆಯ ಮಾತನ್ನು ಕೇಳಲಿಲ್ಲ. ತಪೋನುಷ್ಠಾನದ ತನ್ನ ನಿರ್ಧಾರದಿಂದ ಹಿಂದೆಗೆಯಲಿಲ್ಲ. ಮಗಳ ಆ ದೃಢಸಂಕಲ್ಪವನ್ನು ನೋಡಿ ಕೊನೆಗೆ ಹಿಮರಾಜನೇ ಅವಳನ್ನು ಪ್ರಶಂಸಿಸಿದನು, ಆಗ ಆಕಾಶದಲ್ಲಿ ಅಂತರಿಕ್ಷವಾಣಿ ಮೊಳಗಿತು. ''ನಗನಾಥ, ನೀನು ಈ ಮಗಳನ್ನು ಕುರಿತು 'ಉ', 'ಮಾ' ಮಗಳೇ ಬೇಡ ತಪಸ್ಸು ಬೇಡ ಎಂದು ನೀನು ಅವಳಿಗೆ ಹೇಳಿದ್ದರಿಂದ ಉಮಾ ಎಂದೇ ಅವಳು ಮೂರ್ಲೋಕದಲ್ಲಿ ಪ್ರಸಿದ್ಧಿ ಪಡೆಯುವಳು. ದೃಢನಿಶ್ಚಯದಿಂದ ತಪವನ್ನು ಕೈಕೊಂಡ ಈ ನಿನ್ನ ಕನ್ಯೆಯು ತನ್ನ ಪ್ರಯತ್ನ ಪುಣ್ಯಗಳಿಂದ ತನ್ನ ಮನೋಭೀಷ್ಟವನ್ನು ಖಂಡಿತವಾಗಿಯೂ ಪಡೆಯುತ್ತಾಳೆ. ಈ ಆಕಾಶವಾಣಿಯನ್ನು ಕೇಳಿ ಪರ್ವತೇಶ್ವರನು ಮಗಳಿಗೆ ತಪಕ್ಕೆ ಅನುಮತಿ ನಿಡಿದನು.

ಶೈಲಪುತ್ರಿ ಗಿರಿಜೆಯು ಕಾಡಿಗೆ ನಡೆದಳು. ದೇವತೆಗಳೂ ಏರಲಾರದಷ್ಟು ಎತ್ತರವಾಗಿತ್ತು ಅವಳ ಆ ತಪೋಭೂಮಿ, ಜೊತೆಗೆ ಇಬ್ಬರು ಸಖಿಯರು, ಕಟ್ಟು ನಿಟ್ಟಾದ ತಪೋನಿಯಮಗಳನ್ನು ಕೈಕೊಂಡಳು ಆಗ ನಗರಾಜ ದುಹಿತೆ.

ಹಿಮಾಲಯದ ಉತ್ತುಂಗ ಶೃಂಗಾಂಗಣ. ಬಗೆಬಗೆಯ ಧಾತುಗಳು, ದಿವ್ಯ ಹೂವುಗಳು ಅರಳಿದ ಅಸಂಖ್ಯ ಬಳ್ಳಿವಾಡಗಳು. ಆ ಹೂಗಳಲ್ಲಿಯ ಜೇನು ಹೀರುತ್ತಿರುವ ದುಂಬಿಗಳ ಝೇಂಕಾರ ಅಲ್ಲಲ್ಲಿ ಗಿರಿ, ಝರಿಗಳು, ಮೊರೆಯುತ್ತಿವೆ. ಲಕ್ಷ ಲಕ್ಷ, ಪಕ್ಷಿಗಳ ಚಿಲಿಪಿಲಿ. ಅರಳಿದ ಕಮಲಗಳು. ಬಗೆಬಗೆಯ ಖಗ-ಮೃಗಗಳ ಸಂಚಾರ ಸಂಭ್ರಮ. ಎಲ್ಲ ಬಗೆಯ ಹೂಗಳ ಸುಗ್ಗಿ ಎಲ್ಲವಿಧ ಹಣ್ಣುಗಳ ಸಮೃದ್ಧಿ. ಆ ತಪೋವನದ ಕೆಲವುಕಡೆ ಸೂರ್ಯ ಕಿರಣಗಳು ಒಳಗಿಳಿಯಲು ಅವಕಾಶವಿಲ್ಲ. ಇಷ್ಟು ಗುತ್ತಾಗಿ ಹೆಣೆದುಕೊಂಡಿದ್ದವು ಮರ ಬಳ್ಳಿಗಳು. ಇಂತಹ ನಿರ್ಜನ ಕಾಡಿಗೆ ಬಂದಳು ಆ ಪರ್ವತಪುತ್ರಿ. ಬೆಲೆ ಬಾಳುವ ಪಟ್ಟೆ ಪೀತಾಂಬರಗಳನ್ನು ತೆಗೆದಿಟ್ಟಳು. ನಾರು ಬಟ್ಟೆ ಉಟ್ಟಳು. ಮತ್ತು ರತ್ನಾಭರಣಗಳನ್ನು ತೆಗೆದಳು. ದರ್ಭೆಯಿಂದ ನಡು ಪಟ್ಟಿ ಬಿಗಿದಳು. ಪ್ರಾರಂಭವಾಯಿತು ಪಾರ್ವತಿಯ ತಪಸ್ಸು, ಮೂರುಹೊತ್ತು ಸ್ನಾನ ಸರ್ವದಾ ಧ್ಯಾನ ಹಣ್ಣೊಡೆದ ಎಲೆಗಳನ್ನು ದಿನಕ್ಕೊಮ್ಮೆ ತಿನ್ನುವದು. ಹೀಗೆ ಮೂರು ವರ್ಷ ತಪಸ್ಸು, ಅನಂತರ ದಿನಕ್ಕೊಂದೇ ಎಲೆ, ಹೀಗೆ ಮೂರು ವರ್ಷ, ಅನಂತರ ಮತ್ತೆ ಮೂರು ವರ್ಷ ಅದನ್ನೂ ತೊರೆದು ನಿರಾಹಾರದಿಂದ ಉಗ್ರ ತಪೋನುಷ್ಠಾನ.

ಹೀಗೆ ಅತ್ಯುಗ್ರವಾಗಿ ಸಾಗಿತು ಆ ಸತೀದೇವೀಯ ತಪಶ್ಚರ್ಯ ತಪಸ್ಸಿನ ಜ್ವಾಲೆಯಿಂದ ಆ ಅರಣ್ಯದಲ್ಲಿ ಪ್ರಾಣಿಗಳೆಲ್ಲವೂ ಬೆಂದುಹೋದವು. ಇದನ್ನು ನೋಡಿದ ಸಾವಿರಗಣ್ಣಿನ ದೇವೇಂದ್ರ, ಏಳು ಮುನಿಗಳನ್ನು ನೆನೆದ. ಅವರು ಕೂಡಲೆ ಅಲ್ಲಿಗೆ ಬಂದರು. ದೇವೇಂದ್ರನಂತವನು ನೆನೆದದ್ದು ಮಹರ್ಷಿಗಳಿಗೆ ಪರಮಾನಂದ. ಇಂದ್ರ, ಅವರನ್ನು ಆದರಿಸಿದ, ಗೌರವಿಸಿದ, ಅವನನ್ನು ಋಷಿಗಳು ಕೇಳಿದರು.

''ಸ್ವರ್ಗದ ಒಡೆಯ, ನೀನು ನಮ್ಮನ್ನೇಕೆ ನೆನೆಸಿದೆ?''

**ಇಂದ್ರ :-** ಹೈಮಾಚಲ ಶಿಖರದಲ್ಲಿ ಆ ಬೆಟ್ಟದ ನಡುವೆ ಘೋರ ತಪಸ್ಸನ್ನು ಆಚರಿಸುತ್ತಿರುವಳಷ್ಟೇ ಸತೀದೇವಿ ! ದಯಮಾಡಿ ಆ ಪರ್ವತಕುಮಾರಿಯ ತಪಸ್ಸು ಮುಗಿಯುವಂತೆ ಮಾಡಿರಿ ಇಲ್ಲದಿದ್ದರೆ ಜಗತ್ತೆಲ್ಲವೂ ಜ್ವಲಿಸಿಹೋದೀತು. ವಿಶ್ವ ಶಾಂತಿಗಾಗಿ ಮಹಾನುಭಾವರಾದ ನೀವು ಅವಳ ಈ ತಪಸ್ಸು ಕೊನೆಗೊಳ್ಳುವಂತೆ ಮಾಡಿರಿ. ಇಂದ್ರನ ಈ ವಿಜ್ಞಪ್ತಿಗೆ ಒಪ್ಪಿಕೊಂಡು ಸಪ್ತರ್ಷಿಗಳು ಶೈಲಪುತ್ರಿ ತಪಿಸುತ್ತಿದ್ದ ಪುಣ್ಯಾರಣ್ಯಕ್ಕೆ ಆಗಮಿಸಿದರು.

**ಋಷಿಗಳು :-** ತಾವರೆಗಣ್ಣಿನ ರಾಜಪುತ್ರಿ, ನೀನು ಏತಕ್ಕಾಗಿ ಇಂತಹ ಘೋರ ತಪಸ್ಸು ಮಾಡುತ್ತಲಿರುವೆ?

**ದೇವಿ :-** ಪೂಜ್ಯರೆ, ನಾನು ಮೌನವ್ರತ ಹಿಡಿದಿದ್ದೇನೆ. ಆದರೆ ನಿಮ್ಮಂತಹ ಮಹಾಪುರುಷರು ಬಂದದ್ದರಿಂದ ನನ್ನ ಮೌನ ಮುರಿದು ನಿಮ್ಮನ್ನು ಸ್ವಾಗತಿಸಿ ವಂದಿಸಿ ಅಭಿನಂದನೆಗಳನ್ನು ಅರ್ಪಿಸುತ್ತಿದ್ದೇನೆ. ತಾವು ಮೊದಲು ಈ ಆಸನಗಳ ಮೇಲೆ ಕುಳಿತುಕೊಳ್ಳಿರಿ, ಶ್ರಮ ಪರಿಹಾರ ಮಾಡಿಕೊಂಡು ಅನಂತರ ನನ್ನನ್ನು ಪ್ರಶ್ನಿಸಿರಿ. ಗೌರಿಯ ಮಾತಿನಂತೆ ನಡೆದರು ಮಹರ್ಷಿಗಳು ಅವಳು ತೋರಿದ ಆಸನಗಳ ಮೇಲೆ ಕುಳಿತು ದಣಿವು ಆರಿಸಿಕೊಂಡರು. ಅವಳು ಭಕ್ತಿಯಿಂದ ಮಾಡಿದ ಪೂಜೆಯನ್ನು ಸ್ವೀಕರಿಸಿದರು. ಅನಂತರ ಮತ್ತೆ ಸಮಾಧಾನದಿಂದ ಅವಳಿಗೆ ಅದೇ ಪ್ರಶ್ನೆ ಮಾಡಿದರು- 'ನಿನ್ನ ತಪಸ್ಸು ಏತಕ್ಕಾಗಿ?'

ಗೌರಿಯ ಹೃದಯದಲ್ಲಿ ಗೌರವ ಭಾವ ಸಂಪೂರ್ಣ ತುಂಬಿತ್ತು ಆ ಮುನಿಗಳ ಬಗೆಗೆ. ಆದುದರಿಂದ ಅವಳು ಮಂದಹಾಸ ಬೀರಿ, ತನ್ನ ಮೌನ ವ್ರತವನ್ನು ತೊರೆದು ಪ್ರಸನ್ನ ದೃಷ್ಟಿಯಿಂದ ಅವರ ಕಡೆಗೆ ನೋಡಿ, ವಿನಯದಿಂದ ಮಾತನಾಡಿದಳು.

**ದೇವಿ :-** ಪೂಜ್ಯರಾದ ಮಹರ್ಷಿಗಳೆ, ನೀವು ಜ್ಞಾನಿಗಳು ಯಾವ ಪ್ರಾಣಿಯ ಮನಸ್ಸಿನಲ್ಲಿ ಏನು ಇದೆ ಎಂಬುದು ನಿಮಗೆ ಗೊತ್ತು. ನಾನು ಈಗ ಮುಗಿಲ ಮಲ್ಲಿಗೆಯ ಮಾಲೆಯನ್ನು ಮುಡಿಯ ಬಯಸಿದಂತಾಗಿದೆ. ನೆಲದ ಮೇಲೆ ನಿಂತುಕೊಂಡು ವಿಂಧ್ಯಾದ್ರಿಯ (ವಿಂಧ್ಯಬೆಟ್ಟದ) ತುತ್ತ ತುದಿ ಮುಟ್ಟಲು ಕೈ ಚಾಚಿದಂತಾಗಿದೆ ನನ್ನ ಪಾಡು. ಮಹಾದೇವನನ್ನು ಮದುವೆಯಾಗಲು ನಾನು ಬಯಸಿದ್ದೇನೆ. ಇದೂ ಒಂದು ಸಾಮಾನ್ಯರ ದೃಷ್ಟಿಯಲ್ಲಿ ಅಸಾಧ್ಯವಾದ ಕಾರ್ಯವೇ ಅಲ್ಲವೆ? ಶಿವನನ್ನು ಆರಾಧಿಸುವದೇ ಅಸಾಧ್ಯ. ಅದರಲ್ಲೂ ಈಗ ಅವನು ತಪೋನುಷ್ಠಾನ ಕೈಕೊಂಡಿದ್ದಾನೆ. ರಾಗಾನು ರಾಗಗಳನ್ನೆಲ್ಲ ಕಟ್ಟಿಟ್ಟಿದ್ದಾನೆ. ಪ್ರೇಮ ಕಾಮಗಳೆಲ್ಲವೂ ಅಸ್ತವಾಗಿವೆ. ಅದಕ್ಕಾಗಿ ತನ್ನ ಹೃದಯ ಕೆಣಕ ಬಂದ ಕಾಮನನ್ನು ನಡುಗಣ್ಣ ಕಿಡಿಯಿಂದ ಸುಟ್ಟುಹಾಕಿದ್ದಾನೆ. ಕಾಮನನ್ನೇ ಕಮರಿಸಿಬಿಟ್ಟ ಆ ಕೈಲಾಸ ಪತಿಯನ್ನು ನನ್ನಂತಹ ಅಬಲೆಯು ಆರಾಧಿಸುವ ಬಗೆ ಎಂತು? ಮಹಾದೇವಿಯ ಮಾತು ಕೇಳಿದರು ಆ ಮಹರ್ಷಿಗಳು. ಆ ತರಳೆಯ ಮನಸ್ಸು ಎಷ್ಟು ಗಟ್ಟಿ ಇದೆ ಎಂಬುದನ್ನು ತಿಳಿದುಕೊಳ್ಳಬೇಕಾಗಿತ್ತು ಆ ಬ್ರಹ್ಮರ್ಷಿ ಬಳಗಕ್ಕೆ. ಗಿರಿಜೆಯ ಹೃದಯವನ್ನು ಅರಿಯಲು ನುಡಿದರು ಆ ಜ್ಞಾನಿಗಳು ಸಂದರ್ಭಾನುಸಾರವಾಗಿ.

**ಮುನಿಗಳು :-** ''ಮಗಳೆ, ಈ ಜಗತ್ತಿನಲ್ಲಿ ಸುಖ ಎರಡು ವಿಧ. ದೈಹಿಕ ಮತ್ತು ಮಾನಸಿಕ ಎಂದು. ಈ ಕೈಲಾಸ ಪತಿಯನ್ನು ಕಟ್ಟಿಕೊಂಡರೆ ನಿನಗೆ ಎಂತಹ ಸುಖ

ದೊರಕೀತು? ತುಸು ವಿಚಾರಿಸು. ಹೇಳಿಕೇಳಿ ಆ ಶಂಕರ ದಿಗಂಬರ. ಮೈತುಂಬ ಬೂದಿ ಬಳಿದುಕೊಂಡಿದ್ದಾನೆ ಮೇಲೆ ಮೂಳೆಗಳ, ಮಾಲೆಗಳನ್ನು ಆಭರಣ ಬೇರೆ. ಕೈಯಲ್ಲಿ ತಲೆ ಬುರುಡೆ, ನೋಡಲು ಹುಚ್ಚನಂತೆ, ಅವನ ಕಣ್ಣು ಕೂಡ ಸಮನಿಲ್ಲ ಮುಕ್ಕಣ್ಣ. ಅದಕ್ಕಾಗಿಯೇ ವಿರೂಪಾಕ್ಷನೆಂದು ಆತನ ಹೆಸರು.

ಅವನಿರುವದು ಸುಡುಗಾಡಿನಲ್ಲಿ ಬೇಡುವದು ಭಿಕ್ಷೆ. ನೋಡಲಿಕ್ಕೆ ಅಸಹ್ಯ. ಒಟ್ಟಾರೆ ಆ ಶಿವ ಎಂದರೆ ಮೂರ್ತಿವಂತ ಅನರ್ಥ. ಮೈ ತೆಳೆದ ಅನಾಹುತ. ಇಂತಹ ಅಸಹ್ಯ ವ್ಯಕ್ತಿಯನ್ನು ಕೈ ಹಿಡಿದು ನೀನು ಯಾವ ಪುರುಷಾರ್ಥ ಹೊಂದುವಿ ? ನೀನು ನಿನ್ನ ಪತಿಯಾಗುವ ವ್ಯಕ್ತಿಯಿಂದ ಎಲ್ಲರಂತೆ ದೇಹ ಸುಖ ಬಯಸುವಿ ಅಷ್ಟೇ ! ಹಾಗಿದ್ದರೆ ಸಮರ್ಥಾ ಆ ಕೈಲಾಸ ಪತಿಯ ಕೈ ಹಿಡಿಯುವ ಹುಚ್ಚಿಗೆ ಹೋಗಬೇಡ. ಅವನ ದೇಹ ನೋಡಿದರೆ ಸಾಕು ದೈಹಿಕ ಸುಖ ದೊರೆಯಲಾರದು ಎಂಬುದು ಸ್ಪಷ್ಟ. ಅವನ ಕೊರಳಲ್ಲಿ ರುಂಡ-ಮುಂಡಗಳ ಮಾಲೆ, ಆ ತಲೆಬುರುಡೆಗಳಿಂದ ನಿರಂತರವೂ ನೆತ್ತರ ಸುರಿಯುತ್ತಿದೆ. ಹೆಣ ಉದುರುತ್ತದೆ. ಮೈತುಂಬ ಹರಿದಾಡುವ ಹಾವುಗಳು. ಸ್ಮಶಾನ ವಾಸ ಸುತ್ತಮುತ್ತಲೂ ಭೂತ-ಪ್ರೇತ ಪರಿವಾರ. ಆ ಹರನ ಹತ್ತಿರ ಹೋದವರಿಗೂ ಹೆದರಿಕೆ ಅವನ ಬಳಿ ನಿಂತರೂ ಹೇಸಿಕೆ. ಇಂತಹ ಅಸಹ್ಯ ಪುರುಷನನ್ನು ನೀನೇಕೆ ಬಯಸುತ್ತಲಿರುವೆ? ನಿನಗೆ ಮದುವೆ ಆಗಬೇಕೆಂದಿದ್ದರೆ ವೈಕುಂಠಪತಿ ನಾರಾಯಣನಿಲ್ಲವೆ? ಸ್ವರ್ಗದ ಒಡೆಯನಾದ ಇಂದ್ರನಿಲ್ಲವೆ!, ಅಗ್ನಿ, ವಾಯು, ಕುಬೇರ, ವರುಣ ಬೇಕಾದ ದೇವತೆಗಳನ್ನು ನೀನು ಮದುವೆ ಆಗಬಹುದು. ನಿನಗೆ ದೇಹದಿಂದಾಗಲಿ, ದೇಹಾಂತರದಿಂದಾಗಲಿ ಸೌಖ್ಯ ಅನುಭವಿಸ ಬೇಕಿದ್ದರೆ ನಿಮ್ಮ ತಂದೆಯ ಮನೆಯೇ ಉಂಟಲ್ಲ? ಹಿಮಗಿರಿಯ ದಿವ್ಯ ಮಂದಿರದಲ್ಲಿದೆ ದೊರಕದ ಭೋಗ ಯಾವುದಿದೆ? ಸಿಗಲಾರದ ಸುಖ ಯಾವುದಿದೆ? ವ್ಯರ್ಥವಾಗಿ ಈ ತಪವೇಕೆ? ನೀನು ಹಸಿದು ಹಂಬಲಿಸಿ, ಆಶ್ರಯಿಸಿದ ಹೆಮ್ಮರಕ್ಕೆ ಒಂದು ಹಣ್ಣಿಲ್ಲ. ಬಂಜೆ ಮರವನ್ನು ಆಶ್ರಯಿಸಿದಂತಾಗಿದೆ- 'ಸ್ಥಾಣು'ನನ್ನು ಬಯಸಿ ನೀನು ಮಾಡುವ ತಪಸ್ಸು''

ಬಹಳ ಕೋಪ ಬಂದಿತು ಗಿರಿಜೆಗೆ ಮಹರ್ಷಿಗಳ ಮಾತು ಕೇಳಿ ಕಣ್ಣು ಕಾದು ಕೆಂಪಗಾದವು. ತುಡಿ ನಡುಗಿತು. ನಿಡಿದುಸಿರು ಬಿಟ್ಟು ಅಂದಳು.

**ಪಾರ್ವತಿ :-** ಅಜ್ಞಾನವು ಹೀಗೆ ಇರಬೇಕೆಂದು ನಿಯಮವಿಲ್ಲ. ಆಶೆಗೆ ಇಂತಹದನ್ನೇ ಬಯಸಬೇಕೆಂಬ ನಿರ್ಬಂಧವಿಲ್ಲ. ಆದುದರಿಂದ ನನ್ನ ಮನಸ್ಸಿಗೆ ಬಂದುದನ್ನು ಬಯಸಿದ್ದೇನೆ. ನೀವು ಜ್ಞಾನಿಗಳಾದರೂ ಹೇಗೊ ಮಹತ್ತರವಾದ ಅಜ್ಞಾನವನ್ನಿರಿಸಿಕೊಂಡಿದ್ದೀರಿ. ಆದರೆ ಇಂತಹ ವಿಪರೀತ ಜ್ಞಾನ ಮಾಡಿಕೊಂಡು, ಅದನ್ನು ಪರರಿಗೆ ಉಪದೇಶ ಮಾಡುತ್ತ ಹೊರಟ ನಿಮ್ಮಂತಹವರನ್ನು ಜಗತ್ತಿನ ಉಪದೇಶಕರನ್ನಾಗಿ ಯಾವ ಪುಣ್ಯಾತ್ಮನು ನಿಯಮಿಸಿದ್ದಾನೆ? ನಿಮ್ಮ ದೃಷ್ಟಿಯಲ್ಲಿ ನಾನು ದಡ್ಡಳು. ದುರಾಗ್ರಹಿ, ಕೆಟ್ಟ ವಸ್ತುವನ್ನು ಪಟ್ಟು ಹಿಡಿದು ಸಾಧಿಸಲು ಹೊರಟ ಛಲದಂಕಳಾದ ಚಂಡಿ. ಏನೇ ಇರಲಿ, ನನ್ನ ವಿಷಯದಲ್ಲಿ ನೀವು ವಿಚಾರ ಮಾಡುವದು ಬೇಡ ನಾನು ಅಹಂಕಾರಿಣಿ ಎಂದು ತಾವು ಅನ್ನಬಹುದು, ಸಿಟ್ಟಿನವಳೆಂದೂ ನೀವು ಹಳಿಯಬಹುದು. ಆದರೆ ನೀವು ಪ್ರಜಾಪತಿಗೆ ಸಮರಾಗಿ ಮಹಾಜ್ಞಾನಿಗಳಾದರೂ ಆ ಜಗದೊಡೆಯನನ್ನು ಅರಿಯದೇ ಹೋದಿರಲ್ಲ ಎಂಬುದೇ ನನಗೆ ದುಃಖವಾಗಿದೆ.

ಹುಟ್ಟು ಸಾವುಗಳಿಂದ ದೂರನಾದ ಪರಶಿವನ ಅಗಮ್ಯವಾದ ಮಹಿಮೆ ಸೂಕ್ಷ್ಮವಾಗಿದೆ. ಅಂತೆಯೇ ಅದನ್ನು ತಿಳಿಯುವುದು ಕಠಿಣ. ಇಂದ್ರ, ಬ್ರಹ್ಮ ಮೊದಲಾದವರು ಸಹ ಶಿವನ ಶಕ್ತಿಯನ್ನು ತಿಳಿಯಲಾರರು. ಆದರೆ ಶಿವನ ಸೂಕ್ಷ್ಮತರವಾದ ಮಹಿಮೆ, ಶಕ್ತಿಗಳನ್ನು ನೀವು ತಿಳಿಯದಿದ್ದುದು ಅಚ್ಚರಿಯಲ್ಲ. ಆದರೆ ಎಲ್ಲರ ಕಣ್ಣಿಗೆ ಕಾಣುವ ಪಂಚಭೂತಾತ್ಮಕವಾದ ಶರೀರವುಳ್ಳ ಆ ಪರಮೇಶ್ವರನ ಪ್ರಕಟ ಪ್ರಭಾವವಾದರೂ ನಿಮಗೆ ಹೇಗೆ ತಿಳಿದಿಲ್ಲ? ಈ ಆಕಾಶ, ಅಗ್ನಿ ಪೃಥ್ವಿ, ಜಲ ವಾಯು ಇವೆಲ್ಲವೂ ಯಾವ ದೇಹ? ಸೂರ್ಯಚಂದ್ರರು ಯಾರ ಕಣ್ಣು? ದೇವ ದಾನವರು ಭಕ್ತಿಯಿಂದ ಹದಿನಾಲ್ಕು ಲೋಕಗಳಲ್ಲಿ ಯಾರ ಲಿಂಗವನ್ನು ಪೂಜಿಸುತ್ತಾರೆ. ಇಂದ್ರಾದಿ ದೇವತೆಗಳು ಯಾವ ಭಗವಂತನನ್ನು ಆರಾಧಿಸುತ್ತಾರೆ? ಅಂತಹ ಪರಶಿವನನ್ನು ನೀವು ಅರಿಯಲಾರಿರಾ ! ಇದು ಅತ್ಯಂತ ಆಶ್ಚರ್ಯ. ಇಂದ್ರೋಪೇಂದ್ರರೇ ಮೊದಲಾದ ದೇವತೆಗಳು ಅದಿತಿ ಕಶ್ಯಪರ ಸಂತಾನವಷ್ಟೇ! ಆ ಕಶ್ಯಪನ ತಂದೆ ಮರೀಚಿ ಅದಿತಿಯ ತಂದೆ ದಕ್ಷ. ಆ ಮರೀಚಿ ಹಾಗೂ ದಕ್ಷ ಇಬ್ಬರೂ ಜನಿಸಿದ್ದು ಬ್ರಹ್ಮದೇವರಿಂದ. ಆ ಬ್ರಹ್ಮನ ಉತ್ಪತ್ತಿಯೇ ಆದದ್ದು ಈ ಭವಭಗವಂತನಿಂದ. ಆ ಭಗವಂತನಿಂದ ಪ್ರೇರಿತರಾಗಿ ಹರಿ ಮೊದಲಾದ ದೇವತೆಗಳು ಜಗದ್ರಕ್ಷಣಾದಿ ಕಾರ್ಯಮಾಡುವರು. ಜನನ ಮರಣ ರಹಿತನಾದ ಅಂತಹ ಪರಮೇಶ್ವರನ ಮಹೈಶ್ವರ್ಯವನ್ನು ನೀವು ಜ್ಞಾನಿಗಳಾದರೂ ಈವರೆಗೆ ತಿಳಿಯದಿದ್ದುದು ಆಶ್ಚರ್ಯ!

**ಋಷಿಗಳು** :- ಧನ್ಯ!ಧನ್ಯ! ಪಾರ್ವತಿ ನೀನು ಧನ್ಯಳು! ನಿನ್ನನ್ನು ಪಡೆದ ಆ ಹಿಮಾಲಯನೂ ಧನ್ಯನಾಗಿದ್ದಾನೆ. ನಿನ್ನ ಹೊಟ್ಟೆಯಿಂದ ಹುಟ್ಟಲಿರುವ ಕುಮಾರನು ಧನ್ಯ! ಅವನಿಂದ ಮರಣ ಹೊಂದಲಿರುವ ತಾರಕಾಸುರನೂ ಸಹ ಧನ್ಯ!''

ಹೀಗೆ ಪಾರ್ವತಿಯ ಭಾವ ಪರೀಕ್ಷೆಮಾಡಿ ಅವಳ ಭಕ್ತಿಯನ್ನು ಮೆಚ್ಚಿ ಪ್ರಶಂಸೆಗೈದು ಆ ಸಪ್ತರ್ಷಿಗಳು ಶಂಕರನಿದ್ದಲ್ಲಿ ಆಗಮಿಸಿದರು, ಅವನಿಗೆ ನಮಸ್ಕರಿಸಿ ನುಡಿದರು. ಸ್ವರ್ಗಾಧೀಶ್ವರನಾದ ಧೂರ್ಜಟಿಯೆ, ಹಿಮಾದ್ರಿಯ ಮಗಳಾದ ಪಾರ್ವತಿಯು ತಪಸ್ಸು ಮಾಡುತ್ತಿದ್ದಾಳೆ. ನಾವು ಅವಳ ಹೃದಯ ಪರೀಕ್ಷೆ ಮಾಡಿ ಅವಳ ಬಯಕೆ ಅರಿತು ನಿನ್ನ ಬಳಿಗೆ ಬಂದಿದ್ದೇವೆ, ನಿನ್ನನ್ನು ನೋಡಿದ ನಾವೂ ಧನ್ಯರು. ನಿನ್ನ ದರ್ಶನದಿಂದ ಎಲ್ಲ ಮನೋರಥಗಳು ಪೂರ್ಣವಾಗುತ್ತವೆ. ಮನಸ್ಸು ಪಾಪ ಮುಕ್ತವಾಗುತ್ತದೆ. ಮುಂದಿನ ಮಂಗಳಕಾರ್ಯಕ್ಕಾಗಿ ನೀನು ಮನಸ್ಸು ಮಾಡು. ಹದಮಾಡಿದ ಹೊಲದಲ್ಲಿ ಒಳ್ಳೇ ಬೀಜ ಬಿತ್ತಿ ರೈತನು ಉತ್ತಮ ಫಲವನ್ನು ಅಪೇಕ್ಷಿಸುವಂತೆ ನಾವು ಕೂಡ ನಿನ್ನಿಂದ ಜಗತ್ತಿನ ಕಲ್ಯಾಣವನ್ನು ಎದುರು ನೋಡುತ್ತಿದ್ದೇವೆ ?

**ಈಶ್ವರ** :- ಲೋಕ ಕಲ್ಯಾಣದ ಆ ಕಾರ್ಯವನ್ನು ಹೇಗೆ ಮಾಡಬೇಕೆಂಬುದನ್ನು ನಾನು ಬಲ್ಲೆ. ಕಾಲಾನುಕೂಲವಾಗಿ ನಡೆಯುವ ಹಿಮಾರಾಜನು ತನ್ನ ಮಗಳನ್ನು ನನಗೆ ಕೊಡಲು ಬಯಸಿದ್ದಾನೆ ಎಂಬುದೂ ನನಗೆ ತಿಳಿದಿದೆ. ನೀವೆಲ್ಲ ಅದಕ್ಕಾಗಿ ಉತ್ಕಂಠಿತರಾಗಿದ್ದೀರಿ. ನಿಮ್ಮಂತಹ ಮಹಾತ್ಮರಿಗೆ ಲೋಕಕ್ಷೇಮಾದಿ ಮುಖ್ಯ ಉದ್ದೇಶವಷ್ಟೇ ! ನಾನು ನಿಮ್ಮ ಅಪೇಕ್ಷೆಯಂತೆ ನಡೆಯುತ್ತೇನೆ. ಶಿವನ ಈ ಹಿತನುಡಿಗಳನ್ನು ಕೇಳಿ ಮುನಿಗಳಿಗೆ ಸಂತೋಷವಾಯಿತು. ಅವರೆಲ್ಲರೂ ಆ ಭಗವಂತನ ದರ್ಶನ ಮಾಡಿಕೊಂಡು ಹಿಮವಂತನ ಕಡೆಗೆ ಬಂದರು. ಅವನಿಂದ ಪೂಜೆಗೊಂಡು ನುಡಿದರು.

**ಮಹರ್ಷಿಗಳು :-** ''ಮಹಾದೇವನು ನಿನ್ನ ಮಗಳನ್ನು ಮದುವೆಯಾಗಲು ಬಯಸಿದ್ದಾನೆ, ಆವಳನ್ನು ಅವನಿಗೆ ಧಾರೆ ಎರದು ಕೃತಕೃತ್ಯನಾಗು. ಹೋಮಾ ಹುತಿಯನ್ನು ಹೋಮಾಗ್ನಿಯಲ್ಲಿ ಹಾಕಿ ಪುಣ್ಯಪಡೆ. ಜಗದೋದ್ಧಾರಕ್ಕಾಗಿ ಜಾಗೃತಿಯಾಗಿಮಾಡು ಈ ಕಾರ್ಯವನ್ನು.'' ಋಷಿಗಳ ಈ ನುಡಿಯನ್ನು ಆಲಿಸಿ ಶೈಲರಾಜನಿಗೆ ಪರಮ ಸಂತೋಷವಾಯಿತು. ಕಂಠ ಗದ್ಗದಿತವಾಯಿತು. ಬಾಯಿಂದ ಮಾತೇ ಹೊರಡಲಿಲ್ಲ, ಆಗ ಆವನ ಮಡದಿ ಮೇನಾದೇವಿ ಮುಂದೆ ಬಂದು ಮುನಿಗಳೊಂದಿಗೆ ನುಡಿದಳು.

**ಮೇನಾ :-** ಹೆಣ್ಣು ಹಡೆದವರಿಗೆ ಯಾವ ಚಿಂತೆ ಬರಬೇಕೋ ಅದು ನಮಗೆ ಈಗ ಬಂದಿದೆ. ಕನ್ಯೆಯ ತಾಯಿ ತಂದೆಗಳು ತಮ್ಮ ಮಗಳನ್ನು ಕೊಡಬೇಕಾದರೆ, ಆ ವರನಲ್ಲಿ ಕುಲ, ರೂಪ, ಐಶ್ವರ್ಯ, ತಾರುಣ್ಯ, ಲಾವಣ್ಯ, ಮುಂತಾದ ಗುಣಗಳನ್ನು ನೋಡುತ್ತಾರೆ. ಆದರೆ ಈಗ ನನ್ನ ಮಗಳಿಗೆ ನೀವು ಸೂಚಿಸಿದ ವರನಲ್ಲಿ ಈ ಯಾವ ಗುಣಗಳೂ ಇರುವುದಿಲ್ಲ. ಹಾಗೂ ಆವನು ನಮ್ಮ ಕನ್ಯೆಯನ್ನು ಕೊಡಿ ಎಂದು ನಮ್ಮ ಬಳಿಗೆ ಬಂದು ಕೇಳಲೂ ಇಲ್ಲ.

ಮೇಲಾಗಿ ನೀವು ಹೇಳುವ ಆ ಹರನೆಂಬ ವರನಿಗೆ ಮೈಮೇಲೆ ಬಟ್ಟೆ ಇಲ್ಲ. ಊರಲ್ಲಿ ಮನೆ ಇಲ್ಲ. ಊರ ಹೊರಗೆ ಹೊಲವಿಲ್ಲ. ಸುಡಗಾಡು ಬಿಟ್ಟರೆ ಸ್ಥಳವಿಲ್ಲ. ಉಡಲು ಬಟ್ಟೆ ಇಲ್ಲ. ತೊಡಲು ಹಾವಿನ ಹೊರತೂ ಆಭರಣವಿಲ್ಲ. ಜಡೆಗಟ್ಟಿದ ತಲೆ, ಕೊರಳಲ್ಲಿ ರುಂಡ ಮಾಲೆ, ಇಷ್ಟಾಗಿ ಸಿಟ್ಟಿಗೆದ್ದು ಕಾಮನನ್ನೇ ಸುಟ್ಟು ಹಾಕಿದ ಮಹಾಪುರುಷ. ಕಾಮ ಸುಟ್ಟವನಿಗೆ ಮಗಳನ್ನು ಕೊಟ್ಟು ಮಾಡುವದೇನು! ಆಂಥವನಿಗೆ ಕನ್ಯೆ ಕೊಟ್ಟರೆ ಅವಳ ಪ್ರೇಮ ಕಾಮಗಳನ್ನು ಆವನು ಪೂರ್ತಿ ಮಾಡುವ ಬಗೆ ಹೇಗೆ ? ಇಂತಹವನಿಗೆ ನಾನು ಮಗಳನ್ನು ಕೊಡುವದೆಂತು ?

**ಮುನಿಗಳು :-** ''ಸುರಾಸುರ ವೃಂದದಲ್ಲಿಯ ಶ್ರೇಷ್ಠರೆಲ್ಲರೂ ಆ ಶಂಕರನ ಪಾದಗಳನ್ನು ಸೇವಿಸಿ ತಮ್ಮ ತಮ್ಮ ಸ್ಥಾನಮಾನಗಳನ್ನು ಹೊಂದಿ ಸುಖದಿಂದ ಇದ್ದಾರೆ. ಇದರ ಮೇಲಿಂದ ಆ ಶಿವನ ಸೌಭಾಗ್ಯ ಸಂಪದಗಳನ್ನು ನೀನೇ ಅರಿತುಕೊ. ಯಾರು ಯಾವ ರೂಪವನ್ನು ಬಯಸುತ್ತಾರೋ ಅವರಿಗೆ ಅದರಿಂದಲೇ ಆನಂದ. ನಿನ್ನ ಮಗಳಾದ ಪಾರ್ವತಿಯು ಹಾಗಿದ್ದ 'ಎಲ್ಲ ವಿಧ ರೂಪೋಪೇತ' ನಾದ ಶಿವನನ್ನೇ ಕುರಿತು ತಪಸ್ಸು ಮಾಡುತ್ತಿದ್ದಾಳೆ. ಅವಳಿಗೆ **'ಏವಾಂ ಗುಣ ವಿಶೇಷಣ ವಿಶಿಷ್ಟ'** ನಾದ ಶಿವನಿಂದಲೇ ಸಂತಸ ಹಾಗೂ ಸಮಾಧಾನ. ಅವಳೇ ಒಪ್ಪಿ ಆ ಶಿವನನ್ನು ಪಡೆಯಲು ಕಠಿಣ ವ್ರತಾನುಷ್ಠಾನ ಕೈಕೊಂಡಾಗ ನಿಮಗೇಕೆ ಬೇರೆ ಯೋಚನೆ ?'' ಹೀಗೆ ಹೇಳಿ ಸಪ್ತರ್ಷಿಗಳು ಹಿಮರಾಜನೊಂದಿಗೆ ಪಾರ್ವತಿಯು ತಪಸ್ಸು ಮಾಡುತ್ತಿರುವ ತಪೋವನಕ್ಕೆ ಬಂದರು. ಅವಳ ಮುಂದೆ ಅವಳ ತಾಯಿಯ ಭಾವವನ್ನು ತಿಳಿಸಿದರು. ಆಗ ಆ ಉಮಾದೇವಿಯು ಈ ಆರ್ಥಗರ್ಭಿತವಾದ ಈ ಮಾತನ್ನು ಹೇಳಿದಳು.

**ಉಮಾ:-** ''ದೇವತೆಗಳ ತಾರತಮ್ಯ ತಿಳಿದು ಸೇವೆ ಮಾಡಿದರೆ ಸಿದ್ಧಿ ಸಮೃದ್ಧಿ. ತಾರತಮ್ಯದ ಪ್ರಕಾರ ಶಿವನು ಮಹಾದೇವ. ಅವನ ಮುಂದೆ ಉಳಿದೆಲ್ಲ ದೇವತೆಗಳು ಅಲ್ಪರು. ನಾನು ಕ್ಷುದ್ರರನ್ನು ವರಿಸಲಾರೆ. ಯಾವನಿಗಿಂತ ಹಿರಿಯರಿಲ್ಲವೋ ಅಂತಹ ಹರನನ್ನೇ ಮೊರೆ ಹೊಕ್ಕಿದ್ದೇನೆ. ಅವನ ಐಶ್ವರ್ಯಕ್ಕೆ ಕೊನೆಯಿಲ್ಲ. ಅವನ ಶಕ್ತಿಗೆ ಸಮ ನಿಲ್ಲ. ಅಂತಹ ಮಹೇಶ್ವರನನ್ನೇ ನಾನು ಪಡೆಯ ಬಯಸಿದ್ದೇನೆ.

''ಆ ತಪಸ್ವಿನಿಯ ನಲು ನುಡಿಗಳನ್ನು ಕೇಳಿ ಮಹರ್ಷಿಗಳಿಗೆಲ್ಲ ಮಹದಾನಂದವಾಯಿತು. ಅವಳನ್ನು ಹೊಗಳಿ ಹೇಳಿದರು.

''ಅಮ್ಮ, ನೀನೊಂದು ಜ್ಞಾನದ ಮೂರ್ತಿಯೆ. ನಿನ್ನ ಭಕ್ತಿಯನ್ನು ಕಂಡು ಹಾಗೂ ನಿನ್ನ ಭಾವವನ್ನು ಅರಿತು ನಮ್ಮ ಮನಸ್ಸು ಪ್ರಸನ್ನವಾಗಿದೆ. ಆ ಶಿವಸ್ವಾಮಿಯ ಅದ್ಭುತ ಐಶ್ವರ್ಯವನ್ನು ನಾವು ಕಂಡಿದ್ದೇವೆ. ಈ ವಿಷಯದಲ್ಲಿ ನಿನ್ನ ನಿರ್ಣಯ ಅರಿಯಲು ನಾವು ಬಂದಿದ್ದೆವು. ನಿನ್ನ ಅಪೇಕ್ಷೆಯು ಬೇಗ ಕೈಗೂಡುತ್ತದೆ. ಶಬ್ದ ಬಿಟ್ಟು ಅರ್ಥವಿಲ್ಲ. ಅರ್ಥಬಿಟ್ಟು ಶಬ್ದವಿಲ್ಲ. ಹಾಗೆ ಸತಿ ಬಿಟ್ಟು ಶಿವನಿಲ್ಲ. ಶಿವನನ್ನು ಬಿಟ್ಟು ಸತಿಯಿಲ್ಲ. ಅದಕ್ಕಾಗಿ ನಾವು ಈಗಲೇ ಶಿವನ ಬಳಿ ಹೋಗುತ್ತೇವೆ. ನಿನ್ನ ಪಾಣಿ ಗ್ರಹಣಕ್ಕಾಗಿ ಅವನನ್ನೇ ಪ್ರಾರ್ಥಿಸುತ್ತೇವೆ. ಅವನ ಮನಸ್ಸಿನಲ್ಲಿ ನಿನ್ನನ್ನೇ ವರಿಸಬೇಕೆಂದಿದೆ. ನಿನಗೂ ಅವನ ಕೈ ಹಿಡಿಯುವ ಕುತೂಹಲ. ನಮಗೆ ಬೇಕಾದದ್ದೂ ಅದೇ. ಇದನ್ನೆಲ್ಲ ಅರಿತ ಸರ್ವಜ್ಞನಾದ ಶಿವನು ಬೇಗ ಬಂದು ನಿನ್ನ ಮನೋರಥ ಪೂರೈಸುವನು.'' ಹೀಗೆ ಹೇಳಿ ಪಾರ್ವತಿಯಿಂದ ಪೂಜೆಗೊಂಡು ಋಷಿಗಳು ಅಲ್ಲಿಂದ ಹೊರಟರು.

ಬಾನೆತ್ತರ ಬೆಳೆದು ನಿಂತ, ಬೃಹದಾಕಾರವಾದಾ ಹಿಮಗಿರಿಯ ತುತ್ತ ತುದಿಯಲ್ಲಿ ತಪಸ್ಸನ್ನು ತಪಿಸುತ್ತಲಿರುವ ಶಿವನ ಬಳಿಗೆ ಬಂದರು. ಹಿಮಗಿರಿಯ ಆ ಉತ್ತುಂಗ ಶೃಂಗಾಂಗಣದಲ್ಲಿ ಕಂಗೊಳಿಸುತ್ತದೆ ಶಿವನ ಪುಣ್ಯಾಶ್ರಮ. ಕ್ರೂರ ಶ್ವಾಪಪಾದಗಳೂ ಅಲ್ಲಿ ಶಾಂತ ಋಷಿಗಳಂತೆ. ವಾತಾವರಣವೂ ನಿತಾಂತ ಪ್ರಶಾಂತ. ಬದಿಯಲ್ಲಿ ಹರಿಯುವ ಝರಿಗಳ ಸದ್ದು ಇಲ್ಲ. ಗಾಳಿ ಬೀಸಿದಾಗಲೂ ಗಿಡಗಂಟಿಗಳ ಅಲುಗಾಟದ ಗದ್ದಲವಿಲ್ಲ. ಇಂತಹ ನಿರ್ಜನ, ನೀರವ ಶಿವಾಶ್ರಮದ ಬಾಗಿಲ ಬಳಿ ನಿಂತಿದ್ದಾನೆ ವೀರಕ ಶಂಕರನ ಮೆಚ್ಚಿನ ಗಣನಾಯಕ. ಅವನನ್ನು ಕೇಳಿದರು ಋಷಿಗಳು. ಆ ಸಂದರ್ಭದಲ್ಲಿ ಮುನಿಗಳ ಮಾತು ಮೃದು ಮಧುರ. ಮಾತನಾಡುವಲ್ಲಿ ಬಲ್ಲಿದರು ಆ ಬ್ರಹ್ಮರ್ಷಿಗಳು.

**ಮುನಿಗಳು:-** ದ್ವಾರಪಾಲಕ, ಮುಕ್ಕಣ್ಣನನ್ನು ಕಾಣಬೇಕೆಂದು ನಾವೆಲ್ಲ ಬಂದಿದ್ದೇವೆ. ಇದು ದೊಡ್ಡ ದೇವತಾಕಾರ್ಯ. ಬೇಗ ಆಗಬೇಕು. ಕೂಡಲೇ ಆ ದೇವನ ದರ್ಶನವಾಗುವಂತೆ ಮಾಡು. ವೀರಕ ಹಣೆಮಣಿದು ನುಡಿದ ಆ ಹಿರಿಯರಿಗೆ-

**ವೀರಕ :-** ವಿಪ್ರರೆ, ಒಂದು ನಿಮಿಷ ತಾಳಿ, ಈಗ ಸಂಜೆಯ ಸಮಯ. ಈಗ ಶಂಕರನು ಈ ಸುರನದಿಯಲ್ಲಿ ಸ್ನಾನಕ್ಕಾಗಿ ಬರುವ ಸಮಯ. ಈ ಸ್ನಾನದ ನಂತರ ನಡೆಯಬೇಕು ಅವನ ಸಂಧ್ಯಾಹೋಮ. ಈ ಸಂದರ್ಭದಲ್ಲಿ ಮಂದಾಕಿನಿಯಲ್ಲಿ ಮೀಯ ಬಂದ ಮಹೇಶ್ವರನನ್ನು ನೀವು ಸಂದರ್ಶಿಸಬಹುದು. ಚಾತಕಗಳಂತೆ ದಾರಿಕಾಯುತ್ತ ನಿಂತರು ಋಷಿಗಳು. ಶಿವನು ಈಗಿನ ಧ್ಯಾನ ಸಮಾಧಿಯಿಂದ ಎಚ್ಚರಾಗುವವರೆಗೆ ಕಾಯಲು ಅವರಿಗೆ ತಾಳ್ಮೆಯಿರಲಿಲ್ಲ. ಕೊನೆಯೇರಿ ನಿಂತಿತ್ತು ಕೈಲಾಸಪತಿಯನ್ನು ಕಾಣುವ ಕಾತರಾತುರ. 'ಈಗಲೇ ಹೋಗಿ ಶಿವನನ್ನು ಕಾಣಬೇಕಾಗಿದ್ದಿತು' ಎಂದರು. ಅದನ್ನು ಕೇಳಿ ಹರ ಹುಬ್ಬು ಹಾರಿಸಿದ. ಅದು ಪ್ರವೇಶಾಜ್ಞೆಯ ಸಂಕೇತ. ವೀರಕ ಹೊರಗೆ ಬಂದ.

ಕೈಮಾಡಿ ಮುನಿಗಳನ್ನು ಕರೆದ, ಒಳಗೆ ವೈಯ್ದು ಸಮಾಧಿಸ್ಥನಾದ ಶಿವನ ಎದುರು ಏಳೂ ಜನ ಋಷಿಗಳನ್ನೂ ನಿಲ್ಲಿಸಿದ. ನಂದನದ ಹೂಗಳನ್ನೇ ಶಿವನ ಪಾದಾರಾವಿಂದಗಳಲ್ಲಿ ಅರ್ಪಿಸಿ ಕೈ ಮುಗಿದು ನಿಂತರು ಮುನಿಗಳು. 'ನಿನ್ನ

ಸಂದರ್ಶನದಿಂದ ನಾವು ಇಂದು ಧನ್ಯರಾದೆವು. ನಮ್ಮ ಜನ್ಮ ಸಾರ್ಥಕ.' ಎಂದು ಭಕ್ತಿಯಿಂದ ಬಾಗಿ ನುಡಿದರು. ಶಿವ ಸರ್ವಜ್ಞ ತಾನೇ! ಮುನಿಗಳ ಮನೋಭಾವವನ್ನು ತಿಳಿದ. ಅದಕ್ಕೆ ಅನುಗುಣವಾಗಿಯೇ ನುಡಿದ.

**ಶಂಕರ :-** ನಿಮ್ಮ ಮನಸ್ಸಿನಲ್ಲಿ ಮಾಡಬೇಕೆಂದಿರುವ ಕಾರ್ಯವನ್ನು ಮಾಡಿರಿ, ಅದು ದೇವತಾ ಕಾರ್ಯ, ಅದರಿಂದ ಜಗತ್ತಿಗೆ ಕ್ಷೇಮ. ಪರಮೇಶ್ವರನ ಈ ವಚನ ಕೇಳಿ ಋಷಿಗಳಿಗೆ ಆನಂದವಾಯಿತು. ಉಮೆಯ ವಿವಾಹಕ್ಕೆ ಅವನ ಸಮ್ಮತಿ ಇದೆ ಎಂಬುದು ಅವರಿಗೆ ಅರ್ಥವಾಯಿತು. ಅಲ್ಲಿಂದ ಎಲ್ಲ ಮುನಿಗಳು ನೇರವಾಗಿ ಮತ್ತೆ ಆ ಶೈಲಪುತ್ರಿ ತಪಿಸುತ್ತಿರುವ ತಪೋವನಕ್ಕೆ ಬಂದರು, ಆ ಉಮಾದೇವಿಗೆ ಹೇಳಿದರು.

**ಮುನಿಗಳು :-** ಅಮ್ಮಾ, ನಿನ್ನ ರೂಪವು ಶಿವನಿಗೆ ಪ್ರಿಯವಾಗಿದೆ. ನಿನ್ನ ದೇಹವು ಅವನಿಗೆ ಇಷ್ಟವಾಗಿದೆ. ವ್ಯರ್ಥವಾಗಿ ಉಗ್ರ ತಪಸ್ಸಿನಿಂದ ಮಹೇಶ್ವರನ ಮೆಚ್ಚಿನ ಈ ದೇಹವನ್ನು ಏಕೆ ಶೋಷಿಸುವಿ? ನಾಳೆ ಬೆಳಗು ಮುಂಜಾವು ಶಿವನು ನಿನ್ನನ್ನು ವಿವಾಹ ವಾಗುವನು. ಈ ಮೊದಲು ನಾವು ಈ ವಿಷಯದಲ್ಲಿ ನಿನ್ನ ತಂದೆಗೆ ಪ್ರಾರ್ಥಿಸಿಕೊಂಡಿದ್ದೇವೆ. ಈಗ ನೀನು ತಂದೆಯೊಡನೆ ಮನೆಗೆ ಹೋಗು, ಮದುವೆಗೆ ಸಿದ್ಧಳಾಗು. ಮುನಿಗಳ ಮಾತು ಕೇಳಿ 'ತಪಸ್ಸಿಗೆ ಫಲವುಂಟು, ಅದು ಎಂದೂ ವ್ಯರ್ಥವಾಗಲಾರದು' ಎನಿಸಿತು ಶಿವೆಗೆ. ಅವಳು ಅವರಸದಿಂದ ಅಲ್ಲಿಂದೆದ್ದು ತನ್ನ ತಂದೆಯ ಮನೆಗೆ ತೆರಳಿದಳು. ಅಂದಿನ ಒಂದು ರಾತ್ರಿ ಅವಳಿಗೆ ಯುಗವೆನಿಸಿತು ಶಿವನನ್ನು ಕಾಣುವ ಆತುರತೆಯಿಂದ. ಅಂದಿನ ರಾತ್ರಿಯ ಕೊನೆಯ ಯಾಮದಲ್ಲಿ ಶೈಲರಾಜನ ಮನೆತುಂಬ ಎಲ್ಲಿಲ್ಲದ ಉತ್ಸಾಹ. ಮಂಗಳ ವಾದ್ಯಗಳು ಮೊಳಗಿದವು. ಮಂಗಳ ಕಾರ್ಯಗಳೆಲ್ಲವೂ ನಡೆದವು, ಎಲ್ಲ ಋತುಗಳು ತಮ್ಮ ತಮ್ಮ ಫಲ ಪುಷ್ಪ ಸಮೃದ್ಧಿಯೊಂದಿಗೆ ಆ ಹಿಮಗಿರಿಯಲ್ಲಿ ಸನ್ನಿಹಿತವಾದವು.

ತಂಗಾಳಿ ತಂಪಿಂಪು ಕಂಪು ಹೊತ್ತು ಮೆಲ್ಲನೆ ಬೀಸಿತು. ವಾಯು ಲಹರಿಗಳು ಆ ಬೆಟ್ಟದ ಬೆನ್ನು ಬಯಲುಗಳನ್ನೆಲ್ಲ ಗುಡಿಸಿದವು. ಚಿಂತಾಮಣಿ ಮುಂತಾದ ರತ್ನ ದೀಪಗಳು ಬೆಳಕಿನ ಬುಗ್ಗೆಯೊಡೆದಂತೆ ಪ್ರಕಾಶ ಪುಂಜವನ್ನು ಹೊರಚೆಲ್ಲಿದವು. ಕಾಮಧೇನು ಕಲ್ಪವೃಕ್ಷಗಳು ಅಲ್ಲಿಯ ಬಳ್ಳಿವಾಡಗಳಲ್ಲಿ ಸನ್ನಿಹಿತವಾಗಿ ಬೇಕಾದುದನ್ನೆಲ್ಲ ನೀಡಿದವು. ಇತ್ತ ಗಂಗಾಧರನು ಇರುವ ಗಂಧಮಾದನ ಪರ್ವತದಲ್ಲಿ ಸುರಾಸುರ ಗಂಧರ್ವ ಕಿನ್ನರರು ಅಲಂಕೃತರಾಗಿ ಮದುವೆಗೆ ಸಿದ್ಧರಾದರು. ಬ್ರಹ್ಮನು ಬಂದು ಶಂಕರನ ಜಟಾಜೂಟದಲ್ಲಿ ಚಾರುಚಂದ್ರನ ಕಾಂತಿಖಂಡವನ್ನು ಹಾಸ್ಯಗೈಯ್ಯುತ್ತ ಅಲಂಕಾರವಾಗುವಂತೆ ಕಟ್ಟಿದನು. ಚಾಮುಂಡಿಯು ಕೊರಳಲ್ಲಿ ಮಂದಾರ ಮಾಲೆಯನ್ನು ಹಾಕಿದಳು. ವಿಷ್ಣುವು ಶಿವನ ಕೊರಳಿಗೆ ರತ್ನಹಾರ ಹಾಕಿದನು. ಅವನ ಮೂರು ಕಣ್ಣುಗಳಲ್ಲಿ ಸೂರ್ಯ, ಚಂದ್ರ, ಅಗ್ನಿಯರು ಮಿಂಚಿದರು. ಕುಬೇರನು ಅನೇಕ ಬೆಲೆಯುಳ್ಳ ಆಭರಣ ತಂದು ಒಪ್ಪಿಸಿದನು. ಇಂದ್ರನು ಶ್ವೇತಛತ್ರವನ್ನು ಶಿವನ ತಲೆಯ ಮೇಲೆ ಹಿಡಿದನು. ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಕಿನ್ನರರು ವಾದ್ಯ ನುಡಿಸಿದರು, ಗಣಗಳು ಆನಂದ ತಾಂಡವ ನಡೆಸಿದರು. ದಿಬ್ಬಣವು ಹೊರಟು ವಿಶಾಲವಾದ ಹಿಮಗಿರಿಯ ಶಿಖರ ಸೀಮೆಯಲ್ಲಿ ಬಂದಿಳಿಯಿತು. ಶಿವ-ಶಕ್ತಿಯರ ವಿವಾಹವು ಅತ್ಯಂತ ವೈಭವದಿಂದ ನಡೆಯಿತು. ಹಿಮಾಲಯನು ವಿಧಿಪೂರ್ವಕವಾಗಿ ತನ್ನ ಮಗಳಾದ ಪಾರ್ವತಿಯನ್ನು ಪರಶಿವನಿಗೆ ಕೊಟ್ಟು ಧನ್ಯನಾದನು. ಅಂದು ರಾತ್ರಿ ಸತಿಯೊಡನೆ

ಚಂದ್ರಶೇಖರನು ಆನಂದದಿಂದ ಅಲ್ಲಿಯೇ ತಂಗಿದನು. ಅಂದು ಮುಂಜಾವು ದೇವತೆಗಳು ಸುಪ್ರಭಾತ ಹೇಳಿದರು. ಗಂಧರ್ವರು ಮಹೇಶ್ವರನ ಮಹಿಮೆಯನ್ನು ಕೊಂಡಾಡಿದರು.

ಮದುವೆ ಮಾಡಿಕೊಂಡು ಮರುದಿನ ಶಂಕರನು ತನ್ನ ವಾಹನವಾದ ನಂದಿಯ ಮೇಲೆ ಪತ್ನಿ ಪಾರ್ವತೀ ಸಮೇತ ಕುಳಿತುಕೊಂಡು ಮಂದರ ಪರ್ವತಕ್ಕೆ ನಡೆದನು. ಮಗಳು ಮನ ಮೆಚ್ಚಿದ ವರನೊಂದಿಗೆ ಮದುವೆಯಾದ್ದರಿಂದ ಹಿಮಾಲಯನಿಗೆ ಆನಂದವಾಗಿತ್ತು. ಯೋಗ್ಯ ವರ ದೊರೆತರೆ ಯಾವ ತಾಯಿ-ತಂದೆಗಳ ಮನಸ್ಸು ಸಂತಸದಿಂದ ನಲಿಯಲಿಕ್ಕಿಲ್ಲ!

ಅಲ್ಲಿಂದ ತೆರಳಿದ ಬಳಿಕ ಗಿರಿಪತಿಯು ರಮಣೀಯ ವನೋಪವನಗಳಲ್ಲಿ ವಿಹರಿಸಿದನು. ಏಕಾಂತ ವನಾಂತರಗಳಲ್ಲಿ ತನ್ನ ಲಲನೆಯೊಂದಿಗೆ ಲೀಲೆಗೈದನು. ರಸಿಕನಾಗಿ ಆ ರಮಣೀಮಣಿಯನ್ನು ರಮಿಸಿದನು. ಹೀಗೆ ಎಷ್ಟೋಕಾಲ ಕಳೆಯಿತು. ಆ ಸತೀ ಮಣಿಯು ತನ್ನ ಗೆಳತಿಯರೊಂದಿಗೆ ಗಂಡು ಗೊಂಬೆಗಳನ್ನಿಟ್ಟುಕೊಂಡು ಮಕ್ಕಳಾಟ ಆಡಿದಳು. ಮಕ್ಕಳಾಟದಲ್ಲಿ ಮಹಾದೇವಿಗೆ ವಿಶೇಷ ಆಸಕ್ತಿ. ಒಂದು ದಿನ ಅವಳು ಒಂದು ಅಂದವಾದ ಗಂಡುಮಗುವನ್ನು ತಾನು ಮೈ ತೊಳೆಯುವ ಸುಗಂಧಿ ದ್ರವ್ಯದಿಂದ ಸಿದ್ಧಪಡಿಸಿದಳು. ಎಣ್ಣೆ ಇಟ್ಟು ಎರೆದುಕೊಂಡು ಬಂದ ಗಿರಿಜೆಯು ಮಕ್ಕಳಾಟದಲ್ಲಿ ಒಂದು ಚಿಕ್ಕ ಮಗುವನ್ನು ಮಾಡಿ ಆದರ ಕತ್ತಿನಮೇಲೆ ಆನೆಯ ಮುಖವನ್ನು ಇಟ್ಟಳು. ಎಷ್ಟೋ ಹೊತ್ತಿನವರೆಗೆ ಗೆಳತಿಯರೊಂದಿಗೆ ಆ ಗಜಮುಖದ ಗೊಂಬೆಯನ್ನೇ ತನ್ನ ಮಗುವನ್ನಾಗಿ ಮಾಡಿಕೊಂಡು ಆಟವಾಡಿ ವಿನೋದಿಸಿದಳು. ಆಟ ಮುಗಿದ ಬಳಿಕ ಆ ತನ್ನ ಮೆಚ್ಚಿನ ಮಗುವನ್ನು ಮುದ್ದುಗರೆದು ಅಕ್ಕರೆಯಿಂದ ಲಾಲಿಸಿ ಕ್ರೀಡೆಯ ಕೊನೆಯಲ್ಲಿ ಗಂಗೆಯ ನೀರಿನಲ್ಲಿ ತೇಲಿಬಿಟ್ಟಳು. ಗಜಮುಖದ ಆ ಗೊಂಬೆಯು ಗಂಗಾಜಲದಲ್ಲಿ ಮುಳುಗದೇ ಬೆಳೆದುನಿಂತಿತು. ಬೃಹದಾಕಾರವಾಗಿ ಬೆಳೆದ ಆ ಬೊಂಬೆಯು ದೇಹದಿಂದ ಪ್ರಪಂಚವನ್ನೇ ವ್ಯಾಪಿಸಿತು. ಗಂಗೆ ಆ ಮಗು ತನ್ನದೆಂದಳು. ಗಿರಿ ತನ್ನದೆಂದಳು. ದೇವತೆಗಳು ಗಾಂಗೇಯನೆಂದು ಅವನನ್ನು ಪೂಜಿಸಿದರು. ಬ್ರಹ್ಮನು 'ವಿನಾಯಕ' ಎಂದು ಹೆಸರಿಟ್ಟು ಗಣಗಳ ಆಧಿಪತ್ಯವನ್ನು ಆ ಗಜಾನನನಿಗೆ ದಯಪಾಲಿಸಿದನು. ಮುಂದೆ ಒಂದು ದಿನ ಆ ಮಹಾದೇವಿಯು ಆಟವಾಡುತ್ತ ಒಂದು ಮರವನ್ನು ನೆಟ್ಟಳು. ಅದು ಅಶೋಕಮರ. ಅದು ಜಿಗಿಯಿತು. ಚಿಗುರು ಹೊಗರೇರಿ ಹೊಳೆಯಿತು. ಇಂದ್ರ, ಬೃಹಸ್ಪತಿ ಮುಂತಾದವರು ಬಂದು ಆದಕ್ಕೆ ಉಪನಯನ ಮಾಡಿ ಬೆಳೆಸಿದರು. ಆದರ ಮೇಲೆ ವಿಚಿತ್ರ ವಾತ್ಸಲ್ಯ ಆ ಶಿವಸತಿಗೆ. ದೇವತೆಗಳು ಕೇಳಿದರು ಆ ತಾಯಿಯನ್ನು.

**ದೇವತೆಗಳು :-** ದೇವಿ ಮರಗಳನ್ನು ಮಕ್ಕಳೆಂದು ಪೂಜಿಸಿದರೆ ಏನು ಫಲ ?

**ಪಾರ್ವತಿ :-** ''ನೀರಿಲ್ಲದ ಹಳ್ಳಿಯಲ್ಲಿ ಒಂದು ಬಾವಿ ತೋಡಿಸಿದರೆ ಆ ಬಾವಿಯಲ್ಲಿ ಇರುವ ನೀರು ಹನಿಗಳಷ್ಟು ವರ್ಷ ಸ್ವರ್ಗದಲ್ಲಿ ಸುಖಪಡುವನು ಅದನ್ನು ಕಟ್ಟಿಸಿದವ. ಹತ್ತು ಬಾವಿ ಕಟ್ಟಿಸಿದಷ್ಟು ಪುಣ್ಯ ಒಂದು ಸರೋವರ ಕಟ್ಟಿಸಿದರೆ ಬರುವದು. ಹತ್ತು ಸರೋವರ ಕಟ್ಟಿಸುದವರಿಂದ ಬರುವಷ್ಟು ಪುಣ್ಯ ಒಂದು ಕನ್ಯಾದಾನ ಮಾಡಿದರೆ ಬರುವದು.'' ಶಿವಂಕರಿಯಾದ ಆ ಶಂಕರಿಯ ಈ ವಚನವನ್ನು ಕೇಳಿ ಋಷಿ, ದೇವತೆಗಳಿಗೆ ಆನಂದವಾಯಿತು. ಅವರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಮುಂದೆ ಮಹಾದೇವನು ಲಲನಾಮಣಿಯಾದ ಆ ಶೈಲರಾಜ ಕುವರಿಯೊಡನೆ ರಮಣೀಯವಾದ ಶೈಲ

ಪ್ರದೇಶಗಳ ಸಾನು, ಕಾನು, ಕಾಡು, ಮೇಡು ಕುಂಜ, ನಿಕುಂಜ, ನೀರ, ತೀರ, ವನೋಪವನಗಳಲ್ಲಿ ಸ್ವಚ್ಛಂದ ವಿಹಾರ ಗೈದನು. ಮುಂದೆ ಒಂದು ದಿನ ಶಿವಪಾರ್ವತಿಯರು ತಮ್ಮ ಕ್ರೀಡಾಮಂದಿರದಲ್ಲಿ ಲೆತ್ತವಾಡುತ್ತ ಕುಳಿತಿದ್ದರು. ಆಗ ಒಮ್ಮೆಲೆ ಕಲಕಲ ಶಬ್ದವು ಕೇಳ ಬಂದಿತು. ' ಇದೇನು?' ಎಂದು ಪಾರ್ವತಿಯು ಕೇಳಿದಳು.

ಅದಕ್ಕೆ ಶಿವನು '' ಇವರೆಲ್ಲರೂ ನನ್ನ ಪ್ರೀತಿಯ ಗಣಾಧಿಪರು. ಪರ್ವತದಲ್ಲಿ ಆನಂದದಿಂದ ಆಟವಾಡುತ್ತಿದ್ದಾರೆ. ಇವರ ಶಕ್ತಿ ಅದ್ಭುತವಾಗಿದೆ. ಇವರು ಬೇಕಾದ ವರನ್ನು ಬೆಳೆಸಬಲ್ಲರು. ಬೇಡವಾದವರನ್ನು ಕೊಲ್ಲಬಲ್ಲರು. ಇವರು ಇಲ್ಲದಿದ್ದರೆ ನನಗೆ ದುಃಖ. ಅವರು ಬದಿಯಲ್ಲಿ ಆಡುತ್ತಿದ್ದರೆ ನನಗೆ ಆನಂದ, ಇವರೆಲ್ಲ ನನ್ನ ಆತ್ಮ. ಶಿವನ ಈ ಮಾತು ಕೇಳಿ, ದೇವಿ ಕೌತುಕಾನ್ವಿತಳಾಗಿ ಗಣಾಧೀಶ್ವರರನ್ನು ಬಂದು ನೋಡಿದಳು. ಅವರ ಚಿತ್ರ ವಿಚಿತ್ರವಾದ ಆಕಾರ. ಬಗೆಬಗೆಯ ಮುಖ ಚರ್ಯೆ, ವಿಕ್ಷಿಪ್ತಸ್ವಭಾವ ಮುಂತಾದವುಗಳನ್ನು ಕಂಡು ಕೌತುಕವೆನಿಸಿತು ಆ ಶಿವ ಕುಟುಂಬಿನಿಗೆ. ಕೆಲವರು ಬಾನಿನೆತ್ತರ. ಹಲವರು ಬಹಳ ಕುಳ್ಳರು. ದೈತ್ಯ ದೇಹದ ಧಾಂಡಿಗರು ಹಲವರು, ಸಣಕಲು ದೇಹದ ಬಡಕ ಮೈಯವರು ಹಲವರು. ಹುಲಿಯ ಮುಖ, ಆನೆಯ ತಲೆ, ಆಡಿನ ಕಣ್ಣು, ಕುರಿಯ ರೂಪ, ಕೆಂಡಗಣ್ಣು ಭೀಕರ ಆಕಾರ, ಕಪ್ಪು ಬಣ್ಣ. ಜಡೆಗಟ್ಟಿದ ಕೂದಲ, ಹಕ್ಕಿಮುಖ, ಬೆತ್ತಲೆದೇಹ. ಅನೇಕ ಕೈಕಾಲುಗಳು. ಮುಡಿಯಲ್ಲಿ ಹೂವು. ಕೊರಳಲ್ಲಿ ಹಾವು. ಕೈಗಳಲ್ಲಿ ಆಯುಧ, ನಾನಾ ಬಗೆಯ ವಾಹನಗಳು. ನೆಲದಲ್ಲಿ ಕೆಲವರ ಆಟ, ಮುಗಿಲಲ್ಲಿ ಹಲವರ ಓಟ, ತಂಬೂರಿ ಬಾರಿಸುವವರು ಹಲವರು. ತಮ್ಮಟೆ ಬಡೆಯುವರು ಹಲವರು, ಎಲ್ಲರಲ್ಲೂ ಉಲ್ಲಾಸ, ಸ್ವಚ್ಛಂದ, ಪ್ರತಿಯೊಬ್ಬರಿಗೂ ಆನಂದ ಆಗ ಮಹಾದೇವಿ ಕೇಳಿದಳು.

**ದೇವಿ :-** ಈ ಗಣೇಶರು ಎಷ್ಟು ಜನ? ಇವರಿಗೆ ಒಡೆಯರು ಯಾರು ! ಎಲ್ಲಿ ಇರುವರು ಇವರೆಲ್ಲ ?

**ಶಂಕರ :-** ಅವನೇ ನನ್ನ ಮೆಚ್ಚಿನ ಮಗ ವೀರಕ. ಗಣಗಳೆಲ್ಲವೂ ಅವನನ್ನು ಪೂಜಿಸುವವು.

**ದೇವಿ :-** ಪ್ರಿಯಕರ, ಹಾಗಾದರೆ ಅವನು ನನಗೂ ಮಗ. ನಾನು ಅವನಿಗೆ ತಾಯಿಯಾಗಿ ಲಾಲನೆ, ಪಾಲನೆ ಮಾಡುವೆನು.'' ಹೀಗೆ ಹೇಳಿ ಪಾರ್ವತಿಯು ತನ್ನ ಗೆಳತಿ-ವಿಜಯಿಗೆ ಹೇಳಿ ಆ ವೀರಕನನ್ನು ಕರೆಸಿಕೊಂಡಳು. ಅವನನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಪ್ರೀತಿಯಿಂದ ಮುದ್ದಾಡಿ ಹೇಳಿದಳು- ಪಾರ್ವತಿ-ಮಗನೇ, ಇಂದಿನಿಂದ ನೀನು ನನ್ನ ಮಗ. ಈ ಹಾಲು ಕುಡಿ.. ಮಹಾ ದೇವನು ನನಗೆ ನಿನ್ನನ್ನು ಕೊಟ್ಟಿದ್ದಾನೆ'' ಎಂದು ಹೇಳಿ ಆ ವೀರಕನ ಮೈಸವರಿದಳು. ಒಡವೆಗಳನ್ನು ಇರಿಸಿದಳು. ಕಂಕಣ ಕಟ್ಟಿ ಅಂಗರಕ್ಷೆ ಮಾಡಿದಳು. ಮತ್ತು 'ಕ್ರೂರ ಮೃಗಗಳಿರುವ ಅರಣ್ಯದಲ್ಲಿ ತಿರುಗಬೇಡ, ಆಳವಾದ ನೀರಲ್ಲಿ ಇಳಿಯಬೇಡ, ಹುಲಿ ಕರಡಿಗಳಿರುವ ಭಾಗಗಳಲ್ಲಿ ಸುತ್ತಾಡಬೇಡ' ಎಂದು ಹಿತನುಡಿಗಳನ್ನಾಡಿದಳು.

**ವೀರಕ :-** ' ಅಮ್ಮಾ, ನಿನ್ನ ಕೈಯಿಂದಲೆ ಈ ರಕ್ಷಾಮಣಿ ಕಂಕಣ ಕಟ್ಟಿದ ಬಳಿಕ ನನಗೆಲ್ಲಿಯ ಭಯ' ಎಂದು ಹರ್ಷದಿಂದ ಆಡಲು ಹೋದನು. ದೇವತೆಗಳು ಶಿವನ ದರ್ಶನಕ್ಕೆಂದು ಒಳಗೆ ಹೋದಾಗ, ಆ ವೇಳೆಯಲ್ಲಿ ಆಯುಧಗಳನ್ನು ತೆಗೆದುಕೊಂಡು

ವೀರಕನು ಆಟವಾಡುತ್ತಿದ್ದನು. ಈ ಎಲ್ಲ ಆಟ ಪಾಟ ನೋಡಿ ಪಾರ್ವತಿ ದೇವಿಯು ಆನಂದ ಪಡುತ್ತಿರುವ ಗಿರಿಜೆಯೊಂದಿಗೆ ಶಿವನೂ ಸಹ ವಿಹರಿಸಿ ಸುಖಪಡುತ್ತಿದ್ದನು.

ಒಂದು ದಿನ ಆಗಸದ ಅವಕಾಶವನ್ನೆಲ್ಲ ಬೆಳಕಿನಿಂದ ಬೆಳಗಿದ ಭಾಸ್ಕರನು ಅಸ್ತ ಹೊಂದಿದನು. ಅವನ ಹೊಂಗಿರಣಗಳು ಸಂಧ್ಯಾರಾಗದಿಂದ ರಂಜಿಸಿ, ಏರಿಬರುತ್ತಿರುವ ಕತ್ತಲೆಯಲ್ಲಿ ಕರಗಿದವು. ತಿರೆಯ ತುಂಬ ಕರಿ ತೆರೆಯನ್ನು ಎಳೆಯಿತು ರಾತ್ರಿಯ ಕತ್ತಲೆಯ ಮೊತ್ತ. ಹಂಸತೂಲಿ ಕಾತಲ್ಪದಲ್ಲಿ ಪಾರ್ವತೀ ಪರಮೇಶ್ವರರು ಪವಡಿಸಿದರು. ಆ ಏಕಾಂತದಲ್ಲಿ ಕಾಳೀ ದೇವಿಯು ತನ್ನ ಎರಡೂ ಕೈಗಳಿಂದ ಶಿವನ ಕೊರಳನ್ನು ಬಳಸಿಕೊಂಡು ಕುಳಿತಿದ್ದಳು. ಶಿವನು ಮೊದಲೇ ಬೆಳ್ಳಗೆ, ತಲೆಯ ಮೇಲೆ ಚಂದ್ರ. ಅವನ ಬೆಳದಿಂಗಳಿಂದ ಶಿವನ ಶರೀರವೆಲ್ಲ ಬೆಳ್ಳಂ ಬೆಳ್ಳಗೆ.

ಆದರೆ ಆ ಹರನ ಕತ್ತನ್ನು ಅಪ್ಪಿಕೊಂಡು ಕುಳಿತ ಕಪ್ಪು ಪಾರ್ವತಿ ಮಾತ್ರ ಕನ್ನೈದಿಲೆಯಂತೆ ಕಂಗೊಳಿಸುತ್ತಿದ್ದಳು. ಆದರಲ್ಲಿಯೂ ಆ ಕಾರಿರುಳಿನ ಕತ್ತಲೆಯು ಆ ಕಾಳೀ ದೇವಿಯ ದೇಹಕ್ಕೆ ಮತ್ತಷ್ಟೂ ಕೃಷ್ಣಕಾಂತಿಯನ್ನು ಒದಗಿಸಿತ್ತು. ಆ ಕಾಮ ಕೇಳೀ ವಿಲಾಸದಲ್ಲಿ ಕೃಷ್ಣವೇಣಿಯಾದ ಕಾಡಿಗೆಗಣ್ಣಿನ ಆ ತನ್ನ ಕಾಮಿನಿಯನ್ನು ಕಂಡು ವಿನೋದದಿಂದ ಹರನು ಇಂತು ನುಡಿದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ರತಿ ಕ್ರೀಡೆಯಲ್ಲಿ ಕಡಿ ಎಂಬ ನಲವತ್ತನೇಯ ಅಧ್ಯಾಯ ಮುಗಿದುದು*



## ಪತಿಯನ್ನೇ ಪರಿತ್ಯಜಿಸಿದ ಅರ್ಧಾಂಗಿ

**ಅಧ್ಯಾಯ - ೪೧**

**॥ಶರ್ವ ಉವಾಚ॥**

**ಶರೀರೇ ಮಮ ತನ್ವಂಗಿ ಸಿತೇ ಭಾಸ್ಯಸಿತದ್ಯುತಿಃ ।**
**ಭುಜಂಗೀವಾಸಿತಾ ಶುಭ್ರೇ ಸಂಶ್ಲಿಷ್ಟಾ ಚಂದನೇ ತರೌ ॥**

**ಶಿವ :-** ಕೋಮಲಾಂಗಿ, ನನ್ನ ದೇಹ ಬೆಳ್ಳಿಯಂತೆ ಬೆಳ್ಳಗೆ. ನಿನ್ನ ದೇಹ ಕಪ್ಪು. ಬಿಳಿ ಚಂದನ ಗಿಡವನ್ನು ಕಪ್ಪುಹಾವು ಸುತ್ತಿದಂತಾಗಿದೆ- ಈ ನಿನ್ನ ಅಪ್ಪುಗೆ ನನ್ನ ದೇಹಕ್ಕೆ. ಈ ನಿನ್ನ ಕರಿಮೈ ಹರನ ಬಿಳಿಮೈಯೊಂದಿಗೆ ನೋಡಲು ಅಷ್ಟು ಹೊಂದಿಕೆಯಾಗುವದಿಲ್ಲ.''

ಶಿವನ ಈ ಮಾತನ್ನು ಕೇಳಿದ ಕೂಡಲೆ, ಪಾರ್ವತಿಯು ಅವನ ಕೊರಳು ಬಳಸಿದ ತನ್ನ ಕೈಗಳನ್ನು ಹಿಂತೆಗೆದುಕೊಂಡು ಸರಿದು ನಿಂತಳು. ಕೋಪದಿಂದ ಕಣ್ಣು ಕೆಂಪೇರಿತು. ಹುಬ್ಬು ಗಂಟಿಕ್ಕಿದವು. ಅವಳು ಬಿರುಸಾಗಿಯೇ ನುಡಿದಳು.

**ಪಾರ್ವತಿ :-** ಶಿವನೆ, ಪ್ರತಿಯೊಬ್ಬನೂ ತನ್ನಲ್ಲಿರುವ ದೋಷದಿಂದ ಮತ್ತೊಬ್ಬನನ್ನು ತಿರಸ್ಕರಿಸುತ್ತಾನೆ. ಅವನು ಮಾಡಿದ ಆ ಖಂಡನವನ್ನು ಪಾಪ ಇನ್ನೊಬ್ಬನು ಅನುಭವಿಸಬೇಕು. ಬಹುಕಾಲ ತಪಸ್ಸು ಮಾಡಿ ನಾನು ನಿನ್ನನ್ನು ಪಡೆದೆನಲ್ಲವೆ ? ಅದಕ್ಕಾಗಿಯೇ ನನಗೆ ಈ ಫಲ. ಹೆಜ್ಜೆ ಹೆಜ್ಜೆಗೂ ಅವಮಾನ, ನನಗೆ ಯಾವ ದೋಷವೂ ಇಲ್ಲ. ಯಾವ ಕೊಂಕು ಡೊಂಕು ವಕ್ರತೆ ನನ್ನಲ್ಲಿ ಇಲ್ಲ. ಆದರೆ ನೀನು ಮಾತ್ರ ವಕ್ರವೂ

ದೋಷಪೂರ್ಣನೂ ಆದ ಚಂದ್ರನನ್ನು ತಲೆಯ ಮೇಲಿಟ್ಟುಕೊಂಡಿರುವಿ. ವಿಷ ಕಕ್ಕುವವನನ್ನು ಮೈಮೇಲೆ ಹೊತ್ತಿರುವಿ. ಭಗನ ಕಣ್ಣುಗಳನ್ನು ಕಿತ್ತಿರುವಿ. ಶೂಲ ನಿನ್ನ ಕೈಯಲ್ಲಿ ಮಾತ್ರವಿಲ್ಲ. ನಿನ್ನ ಮಾತಿನಲ್ಲಿಯೂ ಇದೆ. ಆದರಿಂದ ನನ್ನನ್ನು ಇರಿಯುತ್ತಿರುವೆ. ನಿನ್ನಿಂದಾಗಿ ನನಗೆ ಇಲ್ಲದ ತಲೆ ಶೂಲೆ. ಕಪ್ಪು, ಕರಿ, ಕಾಳಿ ಎಂದು ನನ್ನನ್ನು ಜರಿದೆಯಷ್ಟೇ! ಆದರೆ ನೀಲಕಂಠನಾದ ನೀನು ಮಹಾಕಾಲನೂ ಆಗಿರುವೆ ಎಂಬುದು ಮರೆತಂತೆ ತೋರುತ್ತದೆ. ಹೀಗೆ ನಿನ್ನಿಂದ ಅವಮಾನಿತಳಾಗಿ. ನಿನಗೆ ಬೇಡವಾಗಿ ನಾನು ಬದುಕುವದಾದರೂ ಏತಕ್ಕೆ ? ಇದೋ ಈಗಲೇ ನಾನು ನಿನ್ನನ್ನು ಬಿಟ್ಟು ಹೊರಟೆ. ಸುಡುಗಾಡಿನಲ್ಲಿ ನೆಲೆಸಿ ಭಿಕ್ಷೆಬೇಡುವ ನಿನ್ನಂತಹ ಕ್ಷುದ್ರ ಕಾಪಾಲಿಕನಿಂದ ನನಗೇನಾಗಬೇಕಾಗಿದೆ! ಮೈತುಂಬ ಬೂದಿ ಬಡಿದುಕೊಂಡು ಸ್ಮಶಾನಗಳಲ್ಲಿ ತಿರುಗಾಡುವ ಈ ಬಾವಾಜಿಯನ್ನು ಕಟ್ಟಿಕೊಂಡು ನಾನು ಕೆಟ್ಟೆ. ಸಾಕು ನಿನ್ನ ಸಹವಾಸ, ನಾನು ಹೊರಟೆ. ನಿನಗೆ ಬೇಡವಾದ ದೇಹವನ್ನು ತ್ಯಾಗಮಾಡುತ್ತೇನೆ. ಶಂಕರಿಯ ಈ ಮಾತು ಭಯಂಕರವೆನಿಸಿತು-ಆ ಕೈಲಾಸ ಪತಿಗೆ. ಅವನ ಎದೆ ತಲ್ಲಣಿಸಿತು. ಮನಸ್ಸು ಗಾಬರಿ ಆಯಿತು. ನಗೆ ಹೊಗೆ ಯಾದುದನ್ನು ಕಂಡು ಸಂಭ್ರಾಂತನಾಗಿ ನುಡಿದ.

**ಶಿವ :-** ''ಪಾರ್ವತಿ, ನಾನು ವಿನೋದಕ್ಕಾಗಿ ನುಡಿದೆ. ಆದನ್ನು ಕೇಳಿ ನೀನು ನನ್ನನ್ನು ನಿಂದಿಸಬೇಡ. ನಾನು ಆಡಿದ್ದು ಪರಿಹಾಸ ವಚನವೆಂದು ತಿಳಿ. ಹಾಗೂ ಇದನ್ನು ನುಡಿಯುವಾಗ ನನ್ನ ತಲೆ ಸರಿಯಿರಲಿಲ್ಲ. ನಿನ್ನ ಪ್ರೇಮೋನ್ಮಾದ ತಲೆಗೇರಿ ವಿನೋದಕ್ಕಾಗಿ ಈ ಮಾತಾಡಿದೆ. ಅದರಿಂದ ನಿನಗೆ ಕೋಪಾ ಬರುವಂತಿದ್ದರೆ ನಾನು ಇನ್ನೆಂದಿಗೂ ಇಂತಹ ಮಾತು ಆಡುವದಿಲ್ಲ. ನಿನಗೆ ಪ್ರಿಯವಾದುದನ್ನೇ ನುಡಿಯುತ್ತೇನೆ. ಕೋಪ ಬಿಡು. ನಿರ್ಮಲ ಹೃದಯದಿಂದ ನಗು. ನಮಸ್ಕಾರ ಮಾಡಿ ಕೈ ಮುಗಿದು ಕೇಳಿಕೊಳ್ಳುತ್ತೇನೆ.'' ಹೀಗೆ ಪರಿಪರಿಯಾಗಿ ಪರಮೇಶ್ವರನು ತಿಳಿಸಿ ಹೇಳಿದ ಪ್ರಾರ್ಥಿಸಿದ. ಆದರೂ ಪಾರ್ವತಿಯ ಸಿಟ್ಟು ಇಳಿಯಲಿಲ್ಲ. ತನ್ನ ಪಟ್ಟು ಬಿಡಲಿಲ್ಲ. ಮಹೇಶ್ವರನು ನುಡಿದ ಮಾತು ಅವಳ ಮರ್ಮಕ್ಕೆ ತಾಕಿತ್ತು. ಹೊರಟೇ ಬಿಟ್ಟಳು ಅವಳು ಶಿವನನ್ನು ಬಿಟ್ಟು. ಆಗ ಹರನು ಮೇಲೆದ್ದು ಹೊರಟುನಿಂತ ಅವಳ ಸೀರೆಯ ಸೆರಗನ್ನು ಹಿಡಿದು ತಡೆದ. ಆದರೂ ಅವಳು ಕೇಳದೆ, ಕೊಸರಿಕೊಂಡು, ಹಣೆಯತುಂಬ ಮುಂಗುರುಳು ಕೆದರಿಕೊಂಡು ಹೊರಡಲು ಸಿದ್ಧಳಾದಳು. ಅದನ್ನು ನೋಡಿ ಶಿವನಿಗೂ ಸಿಟ್ಟುಬಂದಿತು.

**ಶಿವ :-** ನಾನಿಷ್ಟು ಬೇಡವೆಂದು ಬೇಡಿಕೊಂಡರೂ ಚಂಡಿತನದಿಂದ ಹೊರಟು ನಿಂತಿರುವಿ. ನೀನು ನಿಜವಾಗಿಯೂ ಗುಡ್ಡದ ಮಗಳು. ಆ ಬೆಟ್ಟದಷ್ಟೇ ನಿನ್ನ ಹೃದಯವು ಕಲ್ಲಾಗಿದೆ. ಆ ಗೊಂಡಾರಣ್ಯದಂತೆಯೇ ನಿನ್ನ ಭಾವವು ದುರ್ಗಮವಾಗಿದೆ. ಆ ಗಿರಿಯಲ್ಲಿ ಹರಿಯುವ ನದಿಗಳಿಂದ ನಿನಗೆ ವಕ್ರತೆಯೂ, ಬೆಟ್ಟದ ಹೆಬ್ಬಂಡೆಗಳಿಂದ ನಿನ್ನ ಚಿತ್ತದಲ್ಲಿ ಕಾಠಿಣ್ಯವೂ, ಅಲ್ಲಿಯ ಮಣ್ಣಿನಿಂದ ಜಾಡ್ಯವೂ ನಿನ್ನಲ್ಲಿ ಬಂದಿರುತ್ತದೆ. ಗಿರೀಶನ ಈ ನುಡಿಗಳನ್ನು ಕೇಳಿ ಗೌರಿಗೆ ಮತ್ತಿಷ್ಟೂ ಕೋಪ ಬಂದಿತು. ಸಿಟ್ಟಿನಿಂದ ಅವಳು ತನ್ನ ತುಟಿ ಕಡಿದಳು. ಕಿಡಿ ಕಿಡಿಯಾಗಿ ಮತ್ತೆ ನುಡಿದಳು.

**ಗೌರಿ :-** ''ಸದ್ಗುಣಿಗಳನ್ನು ನಿಂದಿಸಿದರೆ ಆಗಬಾರದೆಲ್ಲವೂ ಆಗುತ್ತದೆ. ದುರ್ಜನರ ಸಹವಾಸದಿಂದ ನಿನಗೂ ಕೂಡ ಎಲ್ಲ ದುರ್ಗುಣಗಳು ಬಂದಿರುತ್ತವೆ. ನಿನ್ನ ಮೈ ಮೇಲೆ

ಹರಿದಾಡುವ ಹಾವುಗಳಿಂದ ನಿನಗೆ ಅನೇಕ ನಾಲಿಗೆಗಳು. ಬೂದಿಯಿಂದ ಸ್ನೇಹಶೂನ್ಯತೆ, ಚಂದ್ರನಿಂದ ಮನಸ್ಸಿನಲ್ಲಿ ಕಪ್ಪು. ವಿಷದಿಂದ ಉಲ್ಬಣತೆ. ಸ್ಮಶಾನವಾಸದಿಂದ ನಿರ್ಭಯತೆ. ಬೆತ್ತಲೆ ಇರುವದರಿಂದ ನಿರ್ಲಜ್ಜತೆ. ಕೈಯಲ್ಲಿ ತಲೆ ಬುರುಡೆ ಹಿಡಿದದ್ದರಿಂದ ನಿರ್ದಯತೆ ಮುಂತಾದ ಅನೇಕ ದೋಷಗಳು ನಿನ್ನಲ್ಲಿಯೂ ಮೇಳವಿಸಿರುತ್ತವೆ.'' ಹೀಗೆ ಹೇಳಿ ಆ ಹಿಮಕನ್ನಿಕೆಯು ಪರಮೇಶ್ವರನ ಮನೆಯಿಂದ ಹೊರಟು ಬಿಟ್ಟಳು. ಗಣಗಳೆಲ್ಲವೂ ಹಾಹಾಕಾರ ಮಾಡಿದವು. 'ಅಮ್ಮಾ, ನಮ್ಮನ್ನು ಬಿಟ್ಟು ಎಲ್ಲಿಗೆ ಹೋಗುವಿ?' ಎಂದು ಅಳುತ್ತ ಅವಳ ಬೆನ್ನಟ್ಟಿ ಓಡತೊಡಗಿದವು. ಆಗ ಅವಳ ಮೆಚ್ಚಿನ ಮಗನಾದ ವೀರಕನು ಧಾವಿಸಿ ಬಂದು ಅಂಬಿಕೆಯ ಚರಣಗಳಲ್ಲಿ ಉರುಳಾಡಿ -

''ಅಮ್ಮಾ, ಇದು ಏನು? ನೀನು ಸಿಟ್ಟಿನಿಂದ ಎಲ್ಲಿಗೆ ಹೊರಟಿರುವೆ? ನಾನೂ ನೀನು ಹೋಗುವಲ್ಲಿಗೆ ಬರುತ್ತೇನೆ. ನೀನು ನನ್ನನ್ನು ಕರೆದೊಯ್ಯದಿದ್ದರೆ ಇದೇ ಬೆಟ್ಟದ ತುದಿಯಿಂದ ಕೆಳಗೆ ಹಾರಿಕೊಳ್ಳುತ್ತೇನೆ.'' ಆಗ ರಭಸದಿಂದ ಹೊರಟ ಗೌರಿಯು ತುಸು ನಿಂತಳು. ತನ್ನ ಬಲಗೈಯಿಂದ ತನ್ನ ಅಡಿದಾವರೆಯ ಮೇಲೆ ಉರುಳಾಡುವ ವೀರಕನನ್ನು ಮೇಲೆತ್ತಿ ಗದ್ದ ಹಿಡಿದು, ಅವನ ಮುಖ ಮೇಲೆ ಮಾಡಿ ಹೇಳಿದಳು. ''ಮಗು, ಶೋಕ ಮಾಡಬೇಡ, ಬೆಟ್ಟದ ತುದಿಯಿಂದ ಧುಮುಕಬೇಡ. ನನ್ನನ್ನು ಬೆಂಬತ್ತಿ ಬರಬೇಡ. ನನ್ನ ಪತಿಯಾದ ಪರಮೇಶ್ವರನು ನನ್ನನ್ನು ಕಪ್ಪು, ಕೃಷ್ಣಾ ಎಂದು ಹಳಿದಿದ್ದಾನೆ; ಹೀಗಳೆದಿದ್ದಾನೆ. ಆದುದರಿಂದ ನಾನು ತಪಸ್ಸು ಮಾಡಿ ಈ ನನ್ನ ಕಪ್ಪು ಬಣ್ಣ ಕಳೆದುಕೊಂಡು ಬಿಳಿ ಬಣ್ಣ ಪಡೆದು ಬರಲು ಹೊರಟಿದ್ದೇನೆ. ನಾನು ಹೋದಾಗ ನೀನು ಇಲ್ಲಿದ್ದು ಒಂದು ಕೆಲಸ ಮಾಡಬೇಕು.

ಎಷ್ಟೇ ಆದರೂ ನಿನ್ನ ತಂದೆಯಾದ ಶಿವನು ಸ್ತ್ರೀ ಲಂಪಟ. ನಾನು ಹೋದ ಬಳಿಕ ಯಾವ ಹೆಣ್ಣು ಅವನ ಬಳಿ ಬರುವದೊ ಏನೊ. ಆದುದರಿಂದ ನೀನು ಜಾಗರೂಕನಾಗಿ ಬಾಗಿಲು ಕಾಯಬೇಕು. ಒಂದು ಹೆಣ್ಣೂ ಆ ಹರನ ಬಳಿಗೆ ಸುಳಿದಾಡದಂತೆ ನೀನು ನೋಡಿಕೊಳ್ಳಬೇಕು. ಯಾವಳಾದರೂ ಪರಸ್ತ್ರೀ ಪರಮೇಶ್ವರನ ಬಳಿ ಬಂದರೆ ನೀನು ತಕ್ಷಣ ನನಗೆ ತಿಳಿಸಬೇಕು.'' ''ಹಾಗೆ ಆಗಲಿ'' ಎಂದು ನುಡಿದ ವೀರಕ. ತಾಯಿಯ ಅಪ್ಪಣೆ ಅವನ ತಾಪವನ್ನೆಲ್ಲ ಕಳೆದಿತ್ತು. ಅವನು ಆನಂದದಿಂದ ಶಿವನ ಬಾಗಿಲು ಕಾಯಲು ಹೊರಟು ಹೋದನು. ಅಷ್ಟರಲ್ಲಿ ಅವನ ತಾಯಿಯ ಗೆಳತಿ ಕುಸುಮಾಮೋದಿನಿಯು ಅಲ್ಲಿಗೆ ಬಂದಳು. ಅವಳೇ ಆ ಹಿಮಗಿರಿಗೆ ಅಧಿದೇವತೆ. ಕುಸುಮಾಮೋದಿನಿಯು ಪಾರ್ವತಿಯನ್ನು ಪ್ರೀತಿಯಿಂದ ಆಲಿಂಗಿಸಿ-

'ಮಗಳೇ ಎಲ್ಲಿಗೆ ಹೊರಟಿರುವೆ?' ಎಂದು ಕೇಳಿದಾಗ ಪಾರ್ವತಿಯು - ಶಂಕರನಿಗೂ ತನಗೂ ನಡೆದ ವಿರಸ ಸಂದರ್ಭವನ್ನೆಲ್ಲ ನಿರೂಪಿಸಿ ಅವಳಿಗೆ ಹೇಳಿದಳು. ''ಅಮ್ಮಾ, ನೀನು ನನಗೆ ತಾಯಿ ಇದ್ದಂತೆ. ಈ ಬೆಟ್ಟಕ್ಕೆ ನೀನೇ ಅಭಿಮಾನಿ ದೇವತೆ. ಈ ಗಿರಿಯ ತುಂಬ ವ್ಯಾಪ್ತಿ ನಿನಗೆ. ಅದಕ್ಕಾಗಿಯೇ ನಾನು ನಿನಗೆ ಬಿನ್ನವಿಸುತ್ತಿದ್ದೇನೆ. ಈ ಪರ್ವತದಲ್ಲಿ ನಾನು ಹೋದ ಬಳಿಕ ಬೇರೆ ಯಾವ ನಾರಿಯೂ ಪ್ರವೇಶಿಸದಂತೆ ನೋಡಿಕೊಳ್ಳುವದು ನಿನ್ನ ಭಾರ. ಶಿವನ ಬಳಿಗೆ ಯಾವ ನಾರಿಯೂ ಸುಳಿಯಕೂಡದು. ಅವನಿಗೆ ಬೇಕಾದ ಅನುಕೂಲತೆಗಳನ್ನೆಲ್ಲ ನೀನೇ ಈ ಬೆಟ್ಟದಲ್ಲಿ ಗುಟ್ಟಾಗಿ ಮಾಡಿಕೊಡು. ಯಾವಳಾದರೂ ಯುವತಿಯು ಒಂದು ವೇಳೆ ರಹಸ್ಯವಾಗಿ ಶಿವನ ಬಳಿ ಸಾರಿದರೆ ಮಾತ್ರ ತಕ್ಷಣ ನನಗೆ ತಿಳಿಸು. ಮುಂದಿನದನ್ನೆಲ್ಲ

ನಾನು ನೋಡಿಕೊಳ್ಳುತ್ತೇನೆ. ಮಾಡಬೇಕಾದುದನ್ನು ಮಾಡುತ್ತೇನೆ.'' ಇಷ್ಟು ಹೇಳಿ ಪಾರ್ವತಿಯು ತಪಸ್ಸಿಗಾಗಿ ತನ್ನ ತಂದೆಯ ಉದ್ಯಾನಕ್ಕೆ ನಡೆದಳು. ತನ್ನ ಬೆಲೆಬಾಳುವ ಬಟ್ಟೆ, ಆಭರಣಗಳನ್ನೆಲ್ಲ ತೆಗೆದಿರಿಸಿದಳು. ನಾರು ಬಟ್ಟೆ ಧರಿಸಿದಳು.

ಬೇಸಿಗೆಯಲ್ಲಿ, ಮಳೆಗಾಲದಲ್ಲಿ ನೀರಿನ ನಡುವೆ ನಿಂತುಕೊಂಡು ನಡೆಸಿದಳು ಉಗ್ರ ತಪಸ್ಸನ್ನು. ಮೊದಮೊದಲು ಗಡ್ಡೆ ಗೆಣಸು, ಹಣ್ಣು ಹಂಪಲ ತಿಂದು ಮಾಡಿದಳು ತಪೋನುಷ್ಠಾನ. ಆನಂತರ ಅದನ್ನು ತೊರೆದು ನಿರಾಹಾರಳಾಗಿ ನಿಂತು ಕೊಂಡೇ ಉಗ್ರ ತಪ ಕೈಕೊಂಡಳು. ಪಾರ್ವತಿಯು ಪರಮೇಶ್ವರನನ್ನು ಬಿಟ್ಟು ತಪಸ್ಸಿಗೆ ಕುಳಿತಿದ್ದಾಳೆ ಎಂಬ ಸುದ್ದಿ ಬಂದಿತು. ದೈತ್ಯ ದಾನವರಿಗೆ. ಅಂಧಕಾಸುರನ ಮಗನಿಗೆ ಅತ್ಯಾನಂದವಾಯಿತು ಈ ಸಮಾಚಾರ ಕೇಳಿ. ತನ್ನ ತಂದೆ ಅಂಧಕನನ್ನು ಶಿವ ಕೊಂದಿದ್ದನಷ್ಟೆ ! ಅದಕ್ಕೆ ಪ್ರತೀಕಾರ ಮಾಡಿ ಮನಸ್ಸಿನಲ್ಲಿ ಕುದಿಯುತ್ತಿದ್ದ. ಆ ಅಂಧಕ ಕುಮಾರನಿಗೆ **'ಅಡಿ'** ಎಂದು ಹೆಸರು.

ಆ ದೈತ್ಯನು ಈ ಸಂದರ್ಭವನ್ನು ತಿಳಿದು. ನೇರವಾಗಿ ಮಹಾದೇವನು ನೆಲೆಸಿದ ಶಿವಪುರಿಗೆ ಬಂದನು. ಬಾಗಿಲಲ್ಲಿಯೇ ಕುಳಿತಿದ್ದ ಪಾರ್ವತಿಯ ಮೆಚ್ಚಿನ ಮಗ ವೀರಕ. ಅವನ ಹದ್ದಿನ ಕಣ್ಣು ತಪ್ಪಿಸಿ ಒಳಹೋಗುವದು ದುಃಸ್ಸಾಧ್ಯವೆನಿಸಿತು. ಆ ದೈತ್ಯನಿಗೆ ಕೂಡಲೇ ಒಂದು ಉಪಾಯ ಹೊಳೆಯಿತು.

ಅವನು ತಕ್ಷಣ ಒಂದು ಸಣ್ಣ ಹಾವಿನ ರೂಪ ತಳೆದ. ವೀರಕನು ಅತ್ತಿತ್ತ ನೋಡತೊಡಗಿದಾಗ ಒಂದು ಚಿಕ್ಕ ಸಂದಿನಿಂದ ಕಣ್ಣು ತಪ್ಪಿಸಿ ಒಳಗೆ ಹಾವಿನ ರೂಪದಿಂದ ಹರಿದು ಹೋದ. ಹಾಗೆ ತಲೆ ಬಾಗಿಲ ದಾಟಿ ನುಸುಳಿ ಒಳಗೆ ಹೋದ ಬಳಿಕ ಆ ದುಷ್ಟನು ತನ್ನ ಸರ್ಪರೂಪವನ್ನು ಬಿಟ್ಟು ಪಾರ್ವತಿಯ ರೂಪವನ್ನೇ ಸ್ವೀಕರಿಸಿದ. ಪಾರ್ವತಿಯ ರೂಪದಿಂದ ಹೋದರೆ ಪರಮೇಶ್ವರನಿಗೆ ಸಂಶಯ ಬರುವದಿಲ್ಲವೆಂದು ಭಾವಿಸಿ ಅವಳಂತೆ ಸರ್ವಾಂಗ ಸುಂದರ ರೂಪ ತಳೆದ.

ಆದರೆ ಕಪಟಿಯಾದ ಆ ದೈತ್ಯನು ತನ್ನ ಸ್ತ್ರೀ ಶರೀರದ ಒಳಗಡೆ ವಜ್ರದ ಹಲ್ಲುಗಳನ್ನು ಹರನನ್ನು ಕೊಲ್ಲಬೇಕೆಂದು ಇರಿಸಿಕೊಂಡಿದ್ದ. ಮೇಲೆ ನೋಡಲು ಮಾತ್ರ ಸಾಕ್ಷಾತ್ ಭವಾನಿ, ಅವಳದೇ ಹಾವ ಭಾವ, ಚೆಲುವು ನಿಲುವು ಎಲ್ಲವೂ ಅದೇ. ಭೋಲಾ ಶಂಕರನು ಆ ರಮಣಿಯ ಆಕಾರವನ್ನು ತನ್ನ ರಮಣಿಯ ಆಕಾರವೇ ಎಂದು ಬಗೆದು ಪ್ರೀತಿಯಿಂದ ಅಪ್ಪಿಕೊಂಡನು ಹಾಗೂ ಪ್ರೇಮದಿಂದ ಅವಳ ಮುಂಗುರುಳನ್ನು ನೇವರಿಸಿ ನುಡಿದನು. ''ಗಿರಿಪುತ್ರಿ, ನಿನ್ನಲ್ಲಿ ಕೃತ್ರಿಮವೆನ್ನುವದೇ ಇಲ್ಲ. ನನ್ನ ನಿಜವಾದ ಭಾವವನ್ನು ಅರಿತು ನೀನು ಬಂದದ್ದು ಒಳ್ಳೆಯದಾಯಿತು, ನೀನಿಲ್ಲದೆ ಜಗತ್ತೆಲ್ಲವೂ ನನಗೆ ಶೂನ್ಯದೆನಿಸಿತ್ತು. ನಿನ್ನಂತಹ ಪತಿವ್ರತೆಯರಿಗೆ ಪತಿ ಇದ್ದಲ್ಲಿ ಪ್ರಸನ್ನ ಮುಖದಿಂದ ಬರುವದೇ ಯೋಗ್ಯವಾದದ್ದು.''

ಶಿವನ ಆ ನಲ್‌ನುಡಿಗೆ ಪಾರ್ವತೀ ರೂಪಿಯಾದ ಅಡಿಯು ಮಂದಹಾಸಮಾಡಿ ನುಡಿದ. ''ಬಾಲೆಯಾದ ನಾನು ತಪಸ್ಸು ಮಾಡಬೇಕೆಂದು ಹೋಗಿದ್ದೇನೋ ನಿಜ, ಆದರೆ ನಿನ್ನನ್ನು ಬಿಟ್ಟು ಅಲ್ಲಿ ನನಗೆ ನಿಲ್ಲಲಿಕ್ಕಾಗಲಿಲ್ಲ. ಅದಕ್ಕಾಗಿ ಮತ್ತೆ ನಿನ್ನ ಬಳಿಗೆ ಬಂದು ಬಿಟ್ಟೆ'! ಈ ನಕಲಿ ಪಾರ್ವತಿಯ ನುಡಿಗಳನ್ನು ಕೇಳಿ ಪರಮೇಶ್ವರನಿಗೆ ಸಂದೇಹ ಬಂದಿತು. ''ಪಾರ್ವತಿಯು ಇಷ್ಟು ಸುಲಭವಾಗಿ ಮರಳಿ ಬರುವವಳಲ್ಲ. ಅವಳಿಗೆ ಕೋಪ ಬಂದ ಬಳಿಕ ಕಾರಣವಿಲ್ಲದೆ ಆ ಕೋಪ ಇಳಿಯಲಾರದು. ಬಿಗುಮಾನದ ಅವಳು ಸ್ವಭಾವದಿಂದಲೇ ಗಟ್ಟಿ ಮನಸ್ಸಿನವಳು.

ತನ್ನ ಮನೋರಥವು ಈಡೇರುವವರೆಗೂ ಕೈಕೊಂಡ ಕಾರ್ಯವನ್ನು ಅರ್ಧಕ್ಕೆ ಬಿಟ್ಟು ಎಂದೂ ಬರುವವಳಲ್ಲ. ಆದರೆ ಈಗೇಕೆ ಇಂದು ಅವಳು ಬಂದಿರಬಹುದು,''

ಹೀಗೆ ವಿಚಾರಿಸಿ, ತಾನು ಆಲಿಂಗಿಸಿದ ಆ ನಾರಿಯನ್ನು ಮತ್ತೊಮ್ಮೆ ಸಂಶಯ ದೃಷ್ಟಿಯಿಂದ ನಿರುಕಿಸಿ. ಪಾರ್ವತಿಯ ಸುಂದರ ಶರೀರದ ಸಲ್ಲಕ್ಷಣಗಳೆಲ್ಲವೂ ಗೊತ್ತು ಪರಮೇಶ್ವರನಿಗೆ. ಅವಳ ಎಡ ಪಾರ್ಶ್ವದಲ್ಲಿ ಪದ್ಮಾಕಾರದ ಕೂದಲುಗಳ ಸುಳಿ ಇದ್ದಿತು. ಆ ದಾಕ್ಷಾಯಣೀ ದೇಹದ ಗುರುತು ಈ ದೈತ್ಯ ದೇಹದಲ್ಲಿ ಕಾಣಲಿಲ್ಲ. ಆದ್ದರಿಂದ ಆಗ ಇದು ದೈತ್ಯರ ಮಾಯೆ ಎಂದು ಶಿವನಿಗೆ ತಿಳಿಯಿತು, ಕೂಡಲೇ ಆ ಮಹಾದೇವನು ಅಲ್ಲಿಯೇ ಆ ದೈತ್ಯನನ್ನು ಕೊಂದು ಹಾಕಿದನು. ಶಿವನ ಅಂತಃಪುರದ ಒಳಗೆ ನಡೆದ ಈ ಸಮಾಚಾರವು ಹೊರಗೆ ಬಾಗಿಲು ಕಾಯುತ್ತಿದ್ದ ವೀರಕನಿಗೆ ಗೊತ್ತೇ ಆಗಲಿಲ್ಲ. ಶಿವನನ್ನು ಸಂಹರಿಸ ಬಂದ ಅಡಿ ರಕ್ಷಸನು ತಾನೇ ಸಂಹೃತನಾಗಿ ನಾಶಹೊಂದಿದನು.

ಪಾರ್ವತಿಯ ತಾಯಿ ಗೆಳತಿಯಾದ ಕುಸುಮಾಮೋದಿನಿಯು ಮಾತ್ರ ಈ ಸಮಾಚಾರವನ್ನು ಕಂಡುಹಿಡಿದಳು. ಅವಳು ಆ ಪರ್ವತದ ತುಂಬ ಗುಪ್ತವಾಗಿ ಅನೇಕ ಗಾಳಿದೂತರನ್ನು ನಿಯಮಿಸಿದ್ದಳು. ಹೊಸಬರು ಯಾರು ಬಂದರೂ ವಾಸನೆಯಿಂದಲೇ ಆ ಗಾಳಿಗಳು ಕಂಡು ಹಿಡಿದು ಶೈಲದೇವತೆಯಾದ ಕುಸುಮಾಮೋದಿನಿಗೆ ನಿವೇದಿಸುತ್ತಿದ್ದವು. ಯಾವಳೋ ಒಬ್ಬ ಸ್ತ್ರೀಯು ಶಿವನ ಅಂತಃಪುರದಲ್ಲಿ ಪ್ರವೇಶಮಾಡಿದ ಸಮಾಚಾರವು ಮೊದಲು ಅವಳಿಗೆ ತಿಳಿಯಿತು. ತಕ್ಷಣ ಅವಳು ತಪಸ್ಸು ಮಾಡುತ್ತಿದ್ದ ಪಾರ್ವತಿಗೆ ಈ ಸಮಾಚಾರ ಮುಟ್ಟಿಸಿದಳು. ಇದನ್ನು ತಿಳಿದ ಕೂಡಲೇ ಆ ಶಂಕರಿಗೆ ಕೋಪ ಬಂತು ಕಾಯಲು ಕೂಡಿಸಿದ ವೀರಕನ ಮೇಲೆ. ಕುಳಿತಲ್ಲಿಯೇ ಅವಳು-

'ನಿನ್ನ ಮೇಲೆ ಅತಿ ಪ್ರೇಮದಿಂದ ತಾಯಿಯಾಗಿ ರಕ್ಷಣೆ ಮಾಡಿದ ನನ್ನನ್ನು ತಿರಸ್ಕರಿಸಿ ಶಂಕರನ ಬಳಿ ಬೇರೊಬ್ಬ ಸ್ತ್ರೀ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟೆ. ಆದ್ದರಿಂದ ನಿನಗೆ ಮನುಷ್ಯ ಲೋಕದಲ್ಲಿ ಅತ್ಯಂತ ರೂಕ್ಷಳೂ ಪ್ರೀತಿರಹಿತಳೂ, ಗಣೇಶನಂತೆ ಆಕಾರವುಳ್ಳವಳೂ ಆದ ಓರ್ವ ಕಲ್ಲು ತಾಯಿಯು ಸಿಗಲಿ.' ಹೀಗೆ ವೀರಕನನ್ನು ಶಪಿಸಿ ಕೋಪಾಟೋಪದಿಂದ ಕುದಿಯುತ್ತಲಿರುವ ಆ ಮಹಾದೇವಿಯ ಮುಖದಿಂದ ಅವಳ ಕ್ರೋಧವು ಹೊರಬಿದ್ದು ಒಂದು ಸಿಂಹ ರೂಪದಿಂದ ಎದುರು ನಿಂತುಕೊಂಡಿತು.

ತೆರೆದ ಬಾಯಿ, ಜೋಲು ನಾಲಿಗೆ, ಕ್ರೂರ ಮುಖ, ಕುತ್ತಿಗೆ ತುಂಬ ಆಯಾಲ, ಮೇಲೆತ್ತಿದ ಬಾಲ, ಚೂಪಾದ ಹಲ್ಲು, ಹದನವಾದ ಉಗುರು, ಅವನ್ನು ನೋಡಿದರೆ ಹೆದರಿಕೆ ಆಗುತ್ತಿತ್ತು - ದೇವಾಧಿದೇವತೆಗಳಿಗೂ ಕೂಡ. ಆ ಉಗ್ರವಾದ ಸಿಂಹದ ಭೀಕರ ಆಕಾರವನ್ನು ಕಂಡು ಪಾರ್ವತಿಯು ಆ ಸಿಂಹಕ್ಕೆ ತಾನೇ ಆಹಾರವಾಗಿಬಿಡಬೇಕೆಂದು ಬಯಸಿದಳು. ಅವಳ ಈ ವಿಚಾರವನ್ನು ತಿಳಿದು ಆಗಲೇ ಬ್ರಹ್ಮನು ತನ್ನ ಸತ್ಯಲೋಕದಿಂದ ಹೊರಟು ಅಲ್ಲಿಗೆ ಬಂದನು ಮತ್ತು ಅವಳನ್ನು ಕೇಳಿದನು.

''ಕಲ್ಯಾಣಿ, ನಿನಗೆ ಏನು ಬೇಕಾಗಿದೆ? ನೀನು ಬಯಸಿದ್ದನ್ನು ನಾನು ನೀಡಲು ಸಿದ್ಧನಿದ್ದೇನೆ. ನಿನ್ನ ಈ ಉಗ್ರತಪಸ್ಸನ್ನು ಇಲ್ಲಿಗೆ ಸಾಕುಮಾಡು.'' ಬ್ರಹ್ಮನ ಈ ವಚನವನ್ನು ಕೇಳಿ ಪಾರ್ವತಿ ನುಡಿದಳು. ''ದೇವಾ, ನಾನು ಅತ್ಯಂತ ಕಠಿಣವಾದ ತಪಸ್ಸು ಮಾಡಿ ಶಿವನನ್ನು ಪತಿಯನ್ನಾಗಿ ಪಡೆದೆ ಆದರೆ ಆ ಶಿವನು ಮೇಲಿಂದ ಮೇಲೆ ನಾನು 'ಕಪ್ಪು ಬಣ್ಣದವಳು'

ಎಂದು ಚುಚ್ಚಿ ಮಾತನಾಡಿ ಹೀಗಳೆದಿದ್ದಾನೆ. ಆದುದರಿಂದ ನಾನು ಆ ಕಪ್ಪು ವರ್ಣವನ್ನು ಕಳೆದುಕೊಂಡು ಬಂಗಾರದ ಬಣ್ಣ ಪಡೆದು ಕನಕಾಂಗಿ ಆಗಬೇಕು. ಮತ್ತು ನನ್ನ ಪತಿಯಾದ ಪರಮೇಶ್ವರನ ನಾನು ಒಡಗೂಡಿದ ವಾಮಾಂಗವು ವಿಷಬಾಧೆಯಿಂದ ರಹಿತವಾಗಬೇಕು.''

ಬ್ರಹ್ಮದೇವರು ಅವಳಿಗೆ ಇಷ್ಟವಾದ ವರವನ್ನು ಕೊಟ್ಟ, ಕಾಂಚನವರ್ಣವನ್ನೂ ಶಿವನ ದೇಹಾರ್ಧ ಧಾರಣರೂಪದ ಸೌಭಾಗ್ಯವನ್ನೂ ಕರುಣಿಸಿದ.

ಅನಂತರ ಪಾರ್ವತಿಯು ಕನ್ಯೆದಿಲೆಯಂತಿದ್ದ ತನ್ನ ಕಪ್ಪು ಬಣ್ಣವನ್ನು ಬಿಟ್ಟು ಬಂಗಾರದ ಬಣ್ಣವನ್ನು ತಳೆದಳು ಆ ಗಿರಿಜೆಯಿಂದ ತೊರೆಯಲ್ಪಟ್ಟ ದೇಹವು ಕಪ್ಪುದೊಗಲು, ಮೂರು ಕಣ್ಣುಗಳಿಂದ ಒಡಗೂಡಿ ಹೊರಬಂದು ನಿಂತಿತು. ಆ ಕೃಷ್ಣವರ್ಣದ ದೇವಿಯನ್ನು ಕುರಿತು ಬ್ರಹ್ಮನು ನುಡಿದನು.

''ವಿಭಾವರಿ, ನೀನು ನನ್ನ ಆಜ್ಞೆಯಿಂದ ಈ ಪಾರ್ವತೀ ದೇಹದಲ್ಲಿ ಕೂಡಿ ನಿನ್ನ ದೇಹ ಸಂಪರ್ಕದಿಂದ ಅವಳನ್ನು ಕೃಷ್ಣವರ್ಣಳನ್ನಾಗಿ ಮಾಡಿದ್ದೆ. ನಿನ್ನಿಂದ ಆಗ ಬೇಕಾದ ಕಾರ್ಯವಾಗಿದೆ. ದೇವತಾಕಾರ್ಯ ಸಾಧಿಸಿದ ನೀನೇ ಧನ್ಯಳು. ಇನ್ನು ಮೇಲೆ ನೀನು ಅವಳನ್ನು ಬಿಟ್ಟು ಸ್ವತಂತ್ರಳಾಗಿ ಇರು. ಈ ಮಹಾ ದೇವಿಯ ಕೋಪದಿಂದ ಹುಟ್ಟಿದ ಸಿಂಹವು ನಿನ್ನ ವಾಹನವಾಗಲಿ. ನೀನು ಇನ್ನು ಮೇಲೆ ವಿಂಧ್ಯಗಿರಿಯಲ್ಲಿ ನೆಲೆಸಿ. ಅಲ್ಲಿರುವ ಪಂಚಾಲ ಎಂಬ ಯಕ್ಷನು ತನ್ನ ಲಕ್ಷಾಧಿಕ ಸೇವಕರೊಂದಿಗೆ ನಿನ್ನ ಪರಿಚಾರಕನಾಗಿ ನಿಂತುಕೊಳ್ಳುವನು.''

ಬ್ರಹ್ಮದೇವರ ಈ ಮಾತು ಕೇಳಿ ಪಾರ್ವತೀ ದೇವಿಯಲ್ಲಿ ಗರ್ಭವಾಸದಿನದಲೇ ಹೊಂದಿ ಕೊಂಡು ಬಂದ ಆ ಕೌಶಿಕೀದೇವಿಯು ಅಲ್ಲಿಂದ ಹೊರಟು ವಿಂಧ್ಯಾದಿಗೆ ತೆರಳಿದಳು. ಆ ನಂತರ ಬಂಗಾರದ ಬಣ್ಣವನ್ನು ತಳೆದು, ತನ್ನ ಕಪ್ಪು ಬಣ್ಣ ಕಳೆದು, ಗೌರಿಯಾಗಿ ಮಾರ್ಪಟ್ಟ ಪಾರ್ವತಿಯು ಶಿವನ ಬಳಿಗೆ ನಡೆದಳು.

ಆ ಶಂಕರ ಭವನದ ಬಾಗಿಲ ಬಳಿಯೇ ಕುಳಿತಿದ್ದ ಪಾರ್ವತಿಯ ವೀರಕುಮಾರ ವೀರಕ. ಚಿನ್ನದ ಕಾಂತಿಯ ಚಲುವೆಯೊಬ್ಬಳು ಶಿವಸದನದಲ್ಲಿ ಪ್ರವೇಶಿಸುವದನ್ನು ಕಂಡು ವೀರಕ ಕೂಡಲೇ ಅವಳನ್ನು ತಡೆದು ನಿಲ್ಲಿಸಿದ ಮತ್ತು ಅವಳಿಗೆ ಹೇಳಿದ. ''ತಾವರೆಗಣ್ಣಿನ ತರುಣಿಯೆ, ಇಲ್ಲಿ ಒಳಗೆ ಹೋಗಬೇಡ. ಈ ಶಿವ ಮಂದಿರದಲ್ಲಿ ನಿನ್ನಂತಹ ಸುಂದರಿಗೂ ಪ್ರವೇಶವಿಲ್ಲ. ಒಬ್ಬ ದೈತ್ಯನು ಪಾರ್ವತೀರೂಪ ತೆಗೆದು ಕೊಂಡು ಶಿವನನ್ನು ವಂಚಿಸಲು ಬಂದಿದ್ದನು. ಸೂಕ್ಷ್ಮರೂಪದಿಂದ ಒಳಗೆ ಪ್ರವೇಶಮಾಡಿ ಆ ದೈತ್ಯನು ನನ್ನ ಕಣ್ಣಿಗೆ ಬೀಳಲೇ ಇಲ್ಲ. ಆ ದುಷ್ಟ ದೈತ್ಯನನ್ನು ಪರಮೇಶ್ವರನು ಆಗಲೇ ಅಲ್ಲಿಯೇ ಕೊಂದು ಹಾಕಿದನು. ಅನಂತರ ಶಂಕರನು ನನ್ನ ಮೇಲೆ ಕುಪಿತನಾಗಿ.- 'ನೀನು ಎಚ್ಚರದಿಂದ ನನ್ನ ಬಾಗಿಲು ಕಾಯಲಿಲ್ಲ. ಆದ್ದರಿಂದ ಅನೇಕ ವರ್ಷಗಳ ಕಾಲ ನೀನು ಇನ್ನು ಮೇಲೆ ನನ್ನ ದ್ವಾರಪಾಲಕನಾಗಲಾರೆ' ಎಂದು ನುಡಿದನು. ಅದುದರಿಂದ ಅಮ್ಮಾ, ನೀನು ಈ ಶಿವ ಮಂದಿರದ ಒಳಗೆ ಹೋಗಬೇಡ. ನನ್ನ ಮೇಲೆ ಪ್ರೀತಿ ಸೂಸುವ ಆ ಪಾರ್ವತಿಯ ಹೊರತಾಗಿ ಯಾವ ಹೆಂಗಸನ್ನೂ ನಾನು ಒಳಗೆ ಬಿಡಲಾರೆ. ವೀರಕನ ಈ ಮಾತನ್ನು ಕೇಳಿ, ಪಾರ್ವತಿಗೆ ಹೊಸ ಚಿಂತೆ ಹುಟ್ಟಿತು. ನನ್ನ ಪತಿಯ ಬಳಿಗೆ ಸಾರಿದವಳು ಹೆಂಗಸಲ್ಲ; ಯಾವನೋ ಒಬ್ಬ ದೈತ್ಯ. ನಾನು ವ್ಯರ್ಥವಾಗಿ ವೀರಕನಿಗೆ ಶಾಪ ಕೊಟ್ಟೆ. ಸಿಟ್ಟಿನ ಭರದಲ್ಲಿ ನಾನು ಎಂತಹ ದೊಡ್ಡ ತಪ್ಪು ಮಾಡಿದೆ!

**ಅಕಾರ್ಯಂ ಕ್ರಿಯತೇ ಮೂರ್ಢೈಃ ಪ್ರಾಯಃ ಕ್ರೋಧಸಮನ್ವಿತೈಃ ।**
**ಕ್ರೋಧೇನ ನಶ್ಯತೇ ಕೀರ್ತಿಃ ಕ್ರೋಧೋ ಹಂತಿ ಸ್ಥಿರಾಂ ಶ್ರಿಯಂ ॥**

ಕೋಪಬಂದರೆ ಮಾನವನ ಮನಸ್ಸು ಮೂಢವಾಗುತ್ತದೆ. ಆದರಿಂದ ಮಾಡಬಾರದನ್ನು ಮಾಡಿಬಿಡುತ್ತಾನೆ. ಕೋಪದಿಂದ ಮಾನವನ ಕೀರ್ತಿ ನಾಶವಾಗುತ್ತದೆ. ಐಶ್ವರ್ಯವು ಹಾಳಾಗಿ ಹೋಗುವದು'- ಹೀಗೆ ವಿಚಾರಿಸಿ ತನ್ನ ತಪ್ಪಿಗಾಗಿ ತಾನೇ ನಾಚಿ ಅವಳು ವೀರಕನನ್ನು ಕುರಿತು ನುಡಿದಳು. ವೀರಕನೆ, ನಾನು ನಿನ್ನ ತಾಯಿ ಶಂಕರನ ಪ್ರೇಯಸಿ, ಹಿಮಾಲಯನ ಮಗಳು ಪಾರ್ವತಿ. ನನ್ನ ದೇಹದ ಧವಲ ದೀಧಿತಿಯನ್ನು ಕಂಡು ನಾನೊಬ್ಬ ಬೇರೆ ನಾರಿ ಎಂದು ಭ್ರಾಂತಿ ಹೊಂದಬೇಡ.

ನಾನು ತಪಸ್ಸು ಮಾಡಿದೆನಷ್ಟೇ! ಆದರಿಂದ ಸುಪ್ರೀತನಾದ ಬ್ರಹ್ಮನು ಈ ಬಂಗಾರದಬಣ್ಣದ ದೇಹವನ್ನು ನನಗೆ ದಯಪಾಲಿಸಿದ್ದಾನೆ. ಶಂಕರನ ಶಯ್ಯಾ ಗೃಹದಲ್ಲಿ ಯಾವಳೂ ಹೆಣ್ಣು ಮಗಳು ಪ್ರವೇಶಿಸಿದಳು ಎಂದು ಗಾಳಿಯ ಸುದ್ದಿ ಕೇಳಿ ನಾನು ನಿನಗೆ ಈ ಶಾಪ ಕೊಟ್ಟೆ. ಒಮ್ಮೆ ಕೊಟ್ಟ ನನ್ನ ಶಾಪವು ಬದಲಾಗದು. ನೀನು ಬೇಗನೇ ಆ ಮನುಷ್ಯ ಜನ್ಮ ದಿಂದ ಪಾರಾಗಿ ನನ್ನ ಬಳಿಗೆ ಮರಳುವಿ.''

ಶಂಕರಿ ವಾತ್ಸಲ್ಯ ಪೂರ್ಣವಾದ ಈ ವಚನ ಕೇಳಿ ವೀರಕನು ಎದ್ದು ನಿಂತು ಅವಳ ಅಡಿಗಳ ಮೇಲೆ ತನ್ನ ತಲೆ ಇಟ್ಟುಭಕ್ತಿಯಿಂದ ನಮಸ್ಕಾರ ಮಾಡಿದನು. ಮತ್ತು ಅವಳನ್ನು ಸ್ತೋತ್ರ ಮಾಡಿದನು. ಅವನ ಸ್ತೋತ್ರದಿಂದ ಸಂತುಷ್ಟಳಾದ ಪಾರ್ವತಿಯು ಶಿವನ ಸನ್ನಿಧಾನಕ್ಕೆ ನಡೆದಳು. ದೇವ-ದೇವಿಯರು ಒಂದುಗೂಡಿದರು. ಕನಕ ಕಾಂತಿಯಿಂದ ಕಂಗೊಳಿಸುವ ಆ ಪಾರ್ವತಿಯನ್ನು ಕಂಡು ಮಹಾದೇವನು ಮೋಹಗೊಂಡನು.

## ಕಾರ್ತಿಕೇಯನ ಕಥೆ

ತನ್ನ ಮೆಚ್ಚಿನ ಮಡದಿಯಾದ ಕಾಳಿಯು ಒಮ್ಮೆಲೆ ಗೌರಿಯಾಗಿ ಮಾರ್ಪಟ್ಟು ಬಂದುದನ್ನು ಕಂಡು, ಮೊದಲಿನ ಅವಳ ಮೇಲಿನ ಪ್ರೇಮ ಪ್ರವಾಹಕ್ಕೆ ಮಹಾಪೂರ ಬಂದಂತಾಯಿತು. ಆ ಪಾರ್ವತಿಯೊಡನೆ ಪರಮೇಶ್ವರನು ಆನಂದದಿಂದ ಕ್ರೀಡೆಗೈದನು. ಆಗ ಅನೇಕ ದೇವತೆಗಳು ಮಹಾದೇವನ ದರ್ಶನಕ್ಕೆ ಬಂದರು. ಬಾಗಿಲಲ್ಲಿ ಕುಳಿತ ವೀರಕನು ಆ ಎಲ್ಲ ದೇವತೆಗಳಿಗೆ 'ಈಗ ನಿಮಗೆ ಸ್ವಾಮಿಯ ದರ್ಶನವಾಗದು. ದೇವತೆಗಳೆ ಶಂಕರನ ಸತೀಮಣಿಯೊಂದಿಗೆ ಈಗ ವಿಹಾರ ಕ್ರೀಡೆ ಮಾಡುತ್ತಲಿರುವನು' ಎಂದು ಹೇಳಿ ಎಲ್ಲರನ್ನು ತಿರುಗಿ ಕಳಿಸಿದನು. ಮುಂದೆ ದೇವತೆಗಳು ಚಂದ್ರಚೂಡನು ಆ ಚಂದ್ರ ಮುಖಿಯೊಡನೆ ಏಕಾಂತದಲ್ಲಿ ಏನು ಮಾಡುತ್ತಿದ್ದಾನೆ ಎಂದು ತಿಳಿಯುವ ತವಕದಿಂದ ಅಗ್ನಿಯನ್ನು ಕಳಿಸಿಕೊಟ್ಟರು. ಅಗ್ನಿಯು ಒಂದು ಗಿಳಿಯ ರೂಪದಿಂದ ಬೆಳಕಿಂಡಿಯಿಂದ ಒಳಗೆ ಹೋದನು. ಅಲ್ಲಿ ಪಾರ್ವತೀ ಪರಮೇಶ್ವರು ಏಕಶಯ್ಯೆಯಲ್ಲಿ ಮಲಗಿದ್ದರು. ತಮ್ಮ ಕ್ರೀಡಾಕಾಲದಲ್ಲಿ ಅಗ್ನಿಯು ಪ್ರವೇಶ ಮಾಡಿದ್ದರಿಂದ ಶಿವನಿಗೆ ಕೋಪಬಂದಿತು.

ವಿಹಾರಕ್ಕೆ ವಿಘ್ನಮಾಡಿದ ಆ ಅಗ್ನಿಗೆ ತನ್ನ ಶಕ್ತಿಯ ಪಾನ ಮಾಡಲು ಹೇಳಿದನು. ಅಗ್ನಿಯು ತಾನು ಕುಡಿದ ಶಿವ ಶಕ್ತಿಯನ್ನು ತನ್ನ ಮುಖಾಂತರ ಹವಿರ್ಭಾಗ ಸ್ವೀಕರಿಸುವ ದೇವತೆಗಳಿಗೆಲ್ಲ ಹಂಚಿಕೊಟ್ಟನು. ಅದು ದೇವತೆಗಳ ಹೊಟ್ಟೆ ಸೀಳಿ ಶಂಕರನಿರುವ

ಆಶ್ರಮದ ತಿಳಿನೀರ ಕೊಳದಲ್ಲಿ ಬಿದ್ದಿತು. ಆದರಿಂದ ಅನೇಕ ಬಂಗಾರದ ಕಮಲಗಳು ಹುಟ್ಟಿದವು. ತಮ್ಮ ಮನೆಯ ಅಂಗಳದ ಕೊಳದಲ್ಲಿ ಚಿನ್ನದ ತಾವರೆಗಳು ಹುಟ್ಟಿದ್ದು ಕೇಳಿ ಪಾರ್ವತಿಗೆ ಕೌತುಕವೆನಿಸಿತು. ಅವಳು ಅಲ್ಲಿಗೆ ಬಂದು ಆ ಹೊಂದಾವರೆಗಳನ್ನು ಮುಡಿದುಕೊಂಡು ಆ ಸರೋವರದ ತೀರದಲ್ಲಿ ಸಖಿಯರೊಂದಿಗೆ ಕುಳಿತಿದ್ದಳು. ಅದೇ ವೇಳೆಯಲ್ಲಿ ಕೃತ್ತಿಕಾ ದೇವತೆಯರು ಆ ಸರಸ್ತೀರಕ್ಕೆ ಬಂದಿದ್ದರು. ಅವರೆಲ್ಲರೂ ತಾವರೆ ಎಲೆಯಲ್ಲಿ ನೀರನ್ನು ತೆಗೆದುಕೊಂಡು ಮನೆಗೆ ಹೊರಟ್ಟಿದ್ದರು. ಆ ಕಮಲದೆಲೆಯ ದೊನ್ನೆಯಲ್ಲಿರುವ ನೀರನ್ನು ಕುಡಿಯಲು ಪಾರ್ವತಿಗೆ ಮನಸ್ಸಾಗಿ ಆ ಕೃತ್ತಿಕೆಯರನ್ನು ಕೇಳಿದಳು. ಆಗ ಆ ಕೃತ್ತಿಕಾದೇವಿಯರು ಪಾರ್ವತಿಗೆ ಹೇಳಿದರು.

''ತಾಯಿ, ಈ ಕಮಲ ಪತ್ರದಲ್ಲಿಯ ನೀರನ್ನು ನಾವು ನಿನಗೆ ಕೊಡುತ್ತೇವೆ. ಇದರಿಂದ ನಿನ್ನ ಹೊಟ್ಟೆಯಲ್ಲಿರುವ ಮಗನು ನಮಗೂ ಮಗನಾಗಬೇಕು. ಅವನು ನಮ್ಮನ್ನುರಕ್ಷಣೆ ಮಾಡುವವನು. ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗುವವನು.'' ಆಗ ಪಾರ್ವತಿಯು ಕೇಳಿದಳು.- ''ನನ್ನ ಹೊಟ್ಟೆಯಿಂದ ಹುಟ್ಟಲಿರುವ ಮಗನು ನಿಮ್ಮ ಮಗನಾಗುವ ಬಗೆ ಹೇಗೆ?'' ಪಾರ್ವತಿಯ ಪ್ರಶ್ನೆಗೆ ಆ ಆರು ಕೃತಿಕೆಯರು

''ನಾವು ನುಡಿದಂತೆ ಈ ತಾವರೆ ಎಲೆಯಲ್ಲಿರುವ ನೀರನ್ನು ಪಾನಮಾಡಿ ನೀನು ಮಗನನ್ನು ಹೆತ್ತರೆ ಅವನಿಗೆ ಅತ್ಯುತ್ತಮವಾದ ಮುಖಗಳನ್ನು ನಾವು ಕೊಡುತ್ತೇವೆ'' ಎಂದು ಹೇಳಿದರು. 'ಹಾಗೇ ಆಗಲಿ' ಎಂದು ಹೇಳಿದಳು ಆ ಹರವಲ್ಲಭೆ, ಆಗ ಸಂತೋಷದಿಂದ ಆ ಕೃತ್ತಿಕೆಯರು ತಮ್ಮ ಕೈಯಲ್ಲಿರುವ ಕಮಲದೆಲೆಯ ದೊನ್ನೆಯ ನೀರನ್ನು ಪಾರ್ವತಿಗೆ ಕುಡಿಯಲು ಕೊಟ್ಟರು. ನೀರನ್ನು ಕುಡಿದ ಮರುಕ್ಷಣದಲ್ಲಿಯೇ ಪಾರ್ವತಿಯ ಬಲಬದಿಯ ಹೊಟ್ಟೆಯನ್ನು ಸೀಳಿಕೊಂಡು ಅದ್ಭುತ ಗಂಡು ಮಗವು ಹೊರಬಂದಿತು. ರವಿಕಿರಣ ಕಾಂತಿ, ಶಕ್ತಿ, ಶೂಲ, ಅಂಕುಶ ಮೂರು ಆಯುಧಗಳು ಅಗ್ನಿಯಂತೆ ಪ್ರಕಾಶ, ಮನ್ಮಥ ಸೌಂದರ್ಯ ಆ ಮಗುವಿನ ಸೊತ್ತಾಗಿದ್ದವು. ಆದುದರಿಂದ ಅವನಿಗೆ ಕುಮಾರ ಎಂದು ಹೆಸರು. (ಮಾರ ಎಂದರೆ ಕಾಮ, ಕು ಎಂದರೆ ತುಚ್ಛ ಮಾಡುವವ). ಅನಂತರ ಪಾರ್ವತಿಯ ಎಡ ಹೊಟ್ಟೆಯಿಂದ ಮತ್ತೊಂದು ಮಗು ಹುಟ್ಟಿತು ಅಗ್ನಿಯ ಬಾಯಿಯಿಂದ ಹುಟ್ಟಿದ್ದರಿಂದ ಅದಕ್ಕೆ ಸ್ಕಂದ ಎಂದು ಹೆಸರು.

ಆರು ಕೃತ್ತಿಕೆಯರು ಕೊಟ್ಟ ನೀರಿನಿಂದ ಹುಟ್ಟಿದ್ದರಿಂದ ಅವನಿಗೆ ಆರು ಮುಖಗಳಾದವು. ಅವನಿಗೆ ಸ್ಕಂದ, ವಿಶಾಖ, ಕಾರ್ತಿಕೇಯ, ಷಣ್ಮುಖ ಮುಂತಾದ ಹೆಸರುಗಳು ಪ್ರಾಪ್ತವಾದವು. ಚೈತ್ರ ಬಹುಳ ಅಮಾವಾಸ್ಯೆಯ ಆ ದಿನ ಈ ಇಬ್ಬರೂ ಮಕ್ಕಳು ಜೊಂಡಿನ ಕಾಡಿನಲ್ಲಿ ಹುಟ್ಟಿದರು. ವೈಶಾಖ ಶುದ್ಧ ಪಂಚಮಿ ದಿನ ಅವೆರಡೂ ಮಕ್ಕಳು ಕೂಡಿ ಒಂದೇ ಶಕ್ತಿಯಾಗಿ ಹೊಂದಿಕೊಂಡು ನಿಂತರು. ಮರು ದಿನ ವೈಶಾಖ ಶುದ್ಧ ಷಷ್ಠಿಯಿಂದ ಷಣ್ಮುಖನಿಗೆ ಬ್ರಹ್ಮಾದಿ ದೇವತೆಗಳು ದೇವ ಸಾಮ್ರಾಜ್ಯದ ಸೇನಾಪತಿ ಪಟ್ಟದಲ್ಲಿ ಪಟ್ಟಾಭಿಷೇಕ ಮಾಡಿದರು. ದೇವೇಂದ್ರನು ದೇವಸೇನಾ ಎಂಬ ಮಗಳನ್ನು ಕೊಟ್ಟು ವಿವಾಹ ಮಾಡಿದನು. ವಿಷ್ಣುವು ಅವನಿಗೆ ಆಯುಧಗಳನ್ನು ವಾಯುವು ವಾಹನವನ್ನು ದೇವಬಡಿಗನು ಆಟದ ಕೋಳಿಯನ್ನು, ಕುಬೇರನು ಯಕ್ಷ ಸೇವಕರನ್ನು ಆ ಸ್ಕಂದನಿಗೆ ಕಾಣಿಕೆಯಾಗಿ ಕೊಟ್ಟರು.

ಅನಂತರ ಎಲ್ಲ ದೇವತೆಗಳು ಆ ಕಾರ್ತಿಕೇಯನ್ನು ಈ ರೀತಿಯಾಗಿ ಸ್ತೋತ್ರ ಮಾಡಿದರು.

॥ದೇವಾ ಊಚುಃ॥

ನಮಃ ಕುಮಾರಾಯ ಮಹಾಪ್ರಭಾಯ
ಸ್ಕಂದಾಯ ಚಾಸ್ಕಂದಿತ ದಾನವಾಯ ॥

ನವಾರ್ಕ ಬಿಂಬ ಪ್ರತಿಮ ಪ್ರಭಾಯ
ನಮೋಸ್ತು ತೇ ಷಣ್ಮುಖ ಕಾಮ ರೂಪ ॥

ಪಿನದ್ಧ ನಾನಾಭರಣಾಯ ತುಭ್ಯಂ
ನಮೋ ರಣೋದಾರ ಮುದಾರಸಾಯ ॥

ನಮೋಸ್ತು ತೇಽರ್ಕ ಪ್ರತಿಮ ಪ್ರಭಾಯ
ನಮೋಸ್ತು ಗುಹ್ಯಾಯ ಗುಹಾಯ ತುಭ್ಯಂ ॥

ನಮೋಸ್ತು ತೇ ಲೋಕಭಯಾಪಹಾಯ
ನಮೋಸ್ತು ತೇ ಲೋಕಕೃಪಾಪರಾಯ
ನಮೋ ವಿಶಾಲಾಮಲಲೋಚನಾಯ
ನಮೋ ವಿಶಾಖಾಯ ಮಹಾವ್ರತಾಯ ॥

ನಮೋ ನಮಸ್ತೇಽಸ್ತು ರಣೋತ್ಕಟಾಯ
ನಮೋ ಮಯೂರೋಜ್ವಲವಾಹನಾಯ ॥

ನಮೋಽಸ್ತು ಕೇಯೂರ ಧರಾಯ ತುಭ್ಯಂ
ನಮೋ ಧೃತೋದಗ್ರ ಪತಾಕಿನೇ ತೇ ॥

ನಮಃ ಪ್ರಭಾವ ಪ್ರಣತಾಯ ತೇಸ್ತು
ನಮೋಸ್ತು ಘಂಟಾದರ ಧೈರ್ಯಶಾಲಿನೇ ॥

ಈ ದೇವತಾ ಸ್ತೋತ್ರ ಕೇಳಿ ಪರಿತುಷ್ಟನಾದ ಸ್ಕಂದನು ಅವರಿಗೆ

''ನಾನು ನಿಮ್ಮ ಯಾವ ಮನೋರಥ ಪೂರ್ಣ ಮಾಡಲಿ? ನಿಮ್ಮ ಮನಸ್ಸಿನಲ್ಲಿ ಇದ್ದ ಎಂತಹ ಅಸಾಧ್ಯವಾದ ಕೆಲಸವನ್ನೂ ನಾನು ಮಾಡುತ್ತೇನೆ.'' ಎಂದು ನುಡಿದನು. ಆಗ ಎಲ್ಲ ದೇವತೆಗಳು ಸಂತೋಷದಿಂದ ಆ ಸ್ಕಂದನಿಗೆ ಹೇಳಿದರು. ''ತಾರಕನೆಂಬ ದೈತ್ಯ ರಾಜನು ಬಹಳ ಬಲಿಷ್ಠನಾಗಿದ್ದಾನೆ. ಅಷ್ಟೇ ದುರಾಚಾರಿಯೂ ಇರುತ್ತಾನೆ. ಚಂಡ ಕೋಪನಾದ ಅವನನ್ನು ಗೆಲ್ಲುವುದು ಯಾರಿಗೂ ಸಾಧ್ಯವಿಲ್ಲ ಇದರಂತೆ ಹಿರಣ್ಯಕಶಿಪು ಎಂಬ ದೈತ್ಯನು ದೇವತೆಗಳನ್ನು ಮೀರಿ ನಿಂತಿದ್ದಾನೆ ಮಹಾಪಾಪಿ! ಬ್ರಹ್ಮದೇವರನ್ನು ಕೂಡ ಅವನು ತೊಂದರೆಗೆ ಒಳಪಡಿಸಿದ್ದಾನೆ. ಅವನು ಮಹಾ ಯಜ್ಞನಾಶಕ. ಈ ಇಬ್ಬರೂ ದೇವಶತ್ರುಗಳನ್ನು ನೀನು ಸಂಹರಿಸಬೇಕು.'' ''ಹಾಗೆ ಆಗಲಿ''ಎಂದು ಹೇಳಿ ಆ ಧೀರ ವೀರ ಶಿವಕುಮಾರನಾದ ಕುಮಾರ ಜಗತ್ತಿಗೆಲ್ಲ ಮಾರಕನಾದ ತಾರಕನನ್ನು ಸಂಹರಿಸಲಿಕ್ಕಾಗಿ ನಡುಕಟ್ಟಿ ಹೊರಟ ಆ ಕಾರ್ತಿಕೇಯ.

ಇತ್ತ ದೇವೇಂದ್ರನು ತಾರಕಾಸುರನ ಕಡೆಗೆ ಒಬ್ಬ ದೈತ್ಯನನ್ನು ಕಳಿಸಿಕೊಟ್ಟನು. ಆ ದೂತನು ಹೋಗಿ ಆ ದೈತ್ಯರಾಜನಿಗೆ ಹೀಗೆ ಹೇಳಿದನು. ''ತಾರಕಾಸುರ, ನೀನು ಅನೇಕ ಪಾಪ ಕರ್ಮಗಳನ್ನು ಮಾಡಿರುವಿ. ನಿನ್ನ ಪಾಪದಿಂದ ಜಗತ್ತೆಲ್ಲವೂ ದಗ್ಧವಾಗಿ ಹೋಗಿದೆ. ಈಗ ಮೂರು ಲೋಕದಲ್ಲಿ ಕೆಟ್ಟ ಕೆಲಸ ಮಾಡಿದ ನಿನ್ನನ್ನು ಕೊಲ್ಲುವುದು ನನ್ನ ಕೆಲಸ. ಆದ್ದರಿಂದ ನಿನ್ನನ್ನು ಸಂಹರಿಸುತ್ತೇನೆ.

ಸುರೇಂದ್ರನ ಈ ಸಂದೇಶಕ್ಕೆ ತಾರಕಾಸುರ ಉತ್ತರ ಸಿದ್ಧವಾಗಿತ್ತು. ''ಶಕ್ರ ಒಂದು ಬಾರಿ ಅಲ್ಲ; ನೂರಾರು ಸಲ ನಿನ್ನ ಪೌರುಷ ಎಷ್ಟಿದೆ ಎಂಬುದನ್ನು ನಾನು ರಣಾಂಗಣದಲ್ಲಿ ಕಂಡಿದ್ದೇನೆ. ನಿನಗೆ ನಾಚಿಕೆ ಇದ್ದರಷ್ಟೇ! ಇಂತಹ ದುರ್ಬುದ್ಧಿಯ ನಿನಗೆ ಶಾಂತಿ, ಸಮಾಧಾನಗಳು ದೊರಕಲಾರವು.'' ಹೀಗೆ ಬಿರುಸಾಗಿ ದೇವದೂತನಾಗಿ ಉತ್ತರಕೊಟ್ಟು ಕಳಿಸಿದ ಬಳಿಕ ತಾರಕಾಸುರನು ತನ್ನ ಮನಸ್ಸಿನಲ್ಲಿಯೇ ವಿಚಾರ ಮಾಡಿದ.

''ಅನೇಕ ಸಲ ರಣರಂಗದಲ್ಲಿ ನನ್ನಿಂದ ಹೊಡೆತ ತಿಂದು ಹಣ್ಣಾಗಿ ಹೋದ ದೇವರಾಜನು ಇಂದೇಕೆ ಹೀಗೆ ನನಗೆ ಹೇಳಿ ಕಳಿಸಿದ? ಅವನಿಗೆ ಯಾವ ಹೊಸ ಬಲ ಬಂದಿದೆ! ಯಾರದಾದರೂ ಬಲಿಷ್ಠರ ಆಶ್ರಯವಿಲ್ಲದೆ ದೇವೇಂದ್ರನು ನನ್ನನ್ನು ಹೀಗೆ ಹೆದರಿಸುವ ಸಾಹಸ ಮಾಡಲಾರ. ನಮ್ಮ ರಾಕ್ಷಸ ರಾಜ್ಯದಲ್ಲಿ ಅನೇಕ ಅಮಂಗಳ ಶಕುನಗಳು ಕಂಡು ಬಂದಿವೆ. ನನಗೆ ವಿಘ್ನಸೂಚಕವಾಗಿ ಎಡಗಣ್ಣು ಹಾರುತ್ತಿದೆ. ಬಾಯಿ ಒಣಗಿ ಬರುತ್ತಿದೆ. ಮನಸ್ಸಿನಲ್ಲಿ ಏನೋ ಒಂದು ತರಹದ ದುಗುಡ. ಇದರ ಮೇಲಿಂದ ನನ್ನನ್ನು ಸಂಹರಿಸುವ ಸ್ಕಂದನು ಎಲ್ಲಿಯೋ ಹುಟ್ಟಿದಂತಿದೆ. ನನಗೆ ಯಾವದೋ ಆಪತ್ತು ಕಾದಿದೆ'' ಎಂದು ಅವನಿಗೆ ಅನಿಸಿತು.

ಒಂದು ದಿನ ಇದ್ದಕ್ಕಿದ್ದಂತೆ ದೇವತೆಗಳ ಸೈನ್ಯವು ತನ್ನ ಮೇಲೆ ದಾಳಿ ಮಾಡ ಬರುತ್ತಿರುವದು ಅವನಿಗೆ ಕಂಡಿತು. ತನ್ನ ಅರಮನೆಯ ಮೇಲ್ಮಾಳಿಗೆಯ ಮೇಲೆ ನಿಂತು ಕೊಂಡ ಅವನು ಸಕಲ ವಿಧ ಸಮರ ಸನ್ನಾಹದಿಂದ ನಡೆದು ಬರುವ ಆ ಸುರ ಸೈನ್ಯವನ್ನು ಕಂಡು ಚಿಂತಾಕ್ರಾಂತನಾದನು. ''ಈ ದೇವಸೇನೆಯಲ್ಲಿ ಈವರೆಗೆ ನನ್ನಿಂದ ಪರಾಜಯ ಹೊಂದದಿರುವ ವ್ಯಕ್ತಿ ಯಾವನಿರುವನು'' ಎಂದು ಆಳವಾಗಿ ಯೋಚಿಸಿದನು. ಅಷ್ಟರಲ್ಲಿ ಅವನ ಕಿವಿಗೆ ದೇವ ಸೇನಾಪತಿ ಸ್ಕಂದನ ಪ್ರಶಂಸಾ ಪರಾಕುಲಗಳು ಕಿವಿಗೆ ಕೇಳಬಂದವು.

**'ಜಯ ದಿತಿಜಕುಲಮಹೋದಧಿ ಬಡಬಾನಲ ।**
**ಮಧುರರವ ಮಧುರ ಮಯೂರ ರಥ ।**
**ಸುರ ಮುಕುಟ ಕೋಟಿ ರುಚಿರೋಚಿತ ಚರಣ ನಖಾಂಕುರ ಮಹಾಸೇನ ॥**
**ಜಯ ಚಲಿತ ಲಲಿತ ಚೂಡಾ ಕಲಾಪ ನವವಿಮಲ-**
**ಕಮಲದಳಕಾಂತ ದೈತ್ಯೇಶವಂಶದುಸ್ಸಹ ದಾವಾನಲ ॥**
**ಜಯ ವಿಶಾಲ ವಿಭೋ, ಜಯ ಬಾಲ ಸಪ್ತವಾಸರ,**
**ಭುವನಾಳಿಶೋಕಶಯನ ।**
**ಜಯ ಸಕಲ ಲೋಕ ಭಾರಿ ದಿತಿ-ಸುತ-ದುರಂಧರ ನಾಶ ಸ್ಕಂಧ ॥**

''ರಾಕ್ಷಸರ ವಂಶ ಎಂಬ ಸಮುದ್ರಕ್ಕೆ ವಡವಾಗ್ನಿಯಂತರುವ, ಮಧುರ ಸ್ವರವುಳ್ಳ ನವಿಲುಹೂಡಿದ ರಥದಲ್ಲಿ ಕುಳಿತ, ದೇವತೆಗಳ ತಲೆಯ ಮೇಲಿನ ರತ್ನ ಕಿರೀಟ

ಕಾಂತಿಯಿಂದ ಸುರುಚಿತವಾದ ಪಾದದುಗುರಿನ ಕಿರಣವುಳ್ಳ ಸೇನಾಪತಿ ಸ್ಕಂಗೆನಿಗೆ ಜಯವಾಗಲಿ. ಚಂಚಲವಾದ ಸುಂದರ ಕುರುಳುಗಳುಳ್ಳ, ಪರಿಶುದ್ಧ ಕಾಂತಿಯಿಂದ ಶೋಭಿಸುವ ತಾವರೆಯ ಎಲೆಯಂತೆ ಮೈ ಬಣ್ಣವುಳ್ಳ, ದೈತ್ಯವಂಶವನ್ನೆಲ್ಲ ಕಾಳ್ಗಿಚ್ಚಿನಂತೆ ಸುಡುವ ಕಾರ್ತಿಕೇಯನಿಗೆ ಜಯವಾಗಲಿ; ಗೆಲುವಾಗಲಿ.

ಏಳು ದಿನಗಳ ಹಸುಗೂಸಾದ ಕುಮಾರನಿಗೆ ಜಯ ಜಯ ಸಕಲ ಭೂಮಂಡಲದ ದುಃಖವನ್ನೆಲ್ಲ ಕಡಿಮೆಮಾಡಿ ಎಲ್ಲ ಭಾರಭೂತರಾದ ದೈತ್ಯರನ್ನು ಸಂಹರಿಸುವ ಸ್ಕಂದನಿಗೆ ಜಯವಾಗಲಿ.'' ಸುರಲೋಕದ ವಂದಿಮಾಗಧರು ಉಚ್ಚ ಕಂಠದಿಂದ ಉಗ್ಗಡಿಸುವ ಈ ಸ್ಕಂದನ ಜಯ ಘೋಷವನ್ನು ತಾರಕಾಸುರನು ಕೇಳಿ ಬ್ರಹ್ಮದೇವರ ವಚನವನ್ನು ನೆನೆದು ಕೊಂಡನು. 'ತಾರಕನೆ ನಿನಗೆ ಏಳು ದಿನದ ಹಸುಗೂಸಿನಿಂದ ಮರಣವು ಒದಗುವದು' ಎಂಬ ಬ್ರಹ್ಮದೇವರ ನುಡಿಯು ಅವನ ಕಿವಿಯಲ್ಲಿ ಮೊಳಗಿತು. ಧರ್ಮಧ್ವಂಸಕ್ಕಾಗಿ ಟೊಂಕ ಕಟ್ಟಿದ ಆದೈತ್ಯನು ಸ್ಕಂದನ ಹೆಸರನ್ನು ಕೇಳಿಯೇ ಭಯ ಭ್ರಾಂತನಾದನು. ಶೋಕಾಕುಲನಾಗಿ ಮನೆಯಿಂದ ಹೊರಬಿದ್ದನು.

ಕಾಲನೇಮಿ ಮೊದಲಾದ ದೈತ್ಯವೀರರು ಕೂಡ ತಾರಕನಂತೆಯೇ ಹೆದರಿ ಹೌಹಾರಿದರು. ಅವರೆಲ್ಲರೂ ತಮ್ಮ ತಮ್ಮ ಸೇನೆಯನ್ನು ಸಿದ್ಧಗೊಳಿಸಿದರು. ತಾರಕನು ಮುಂದೆ ಬಂದ ಹಿರಣ್ಯಕಶಿಪುವನ್ನು ಕುರಿತು-

**ತಾರಕ :-** ಈ ಚಿಕ್ಕ ಹುಡುಗನಿಗೆ ನಾನು ಹೆದರಿಹೋದರೆ ಎಂತಹ ನಾಚಿಕೆ ಗೇಡು! ಅವನ ಜೊತೆಗೆ ಯುದ್ಧ ಮಾಡಬೇಕೆಂದರೆ ಅದೂ ಲಜ್ಜಾಕರವೇ. ದೇವಾಧಿ ದೇವತೆಗಳು ಸೇನಾಪತಿ ಪಟ್ಟದಲ್ಲಿ ಕೂಡಿಸಿದ ಈ ಮಗು ಇನ್ನೂ ಇದೇ ಹೊಕ್ಕಳಹುರಿ ಉಚ್ಚಿದ ಚಿಕ್ಕಮಗು. ಇದರೊಡನೆ ಯುದ್ಧ ಮಾಡಿದರೂ ನನಗೆ ಅವಮಾನ. ಮಾಡದಿದ್ದರೂ ಅವಮಾನ ಅದನ್ನು ಕೊಲ್ಲಲ್ಲೂ ನಾಚಿಕೆ; ಬಿಡಲಿಕ್ಕೂ ಅವಮಾನ, ಆದುದರಿಂದ ಏನೇ ಆಗಲಿ, ನನ್ನನ್ನು ಎದುರಿಸ ಬಂದ ಈ ಎಳೆಯ ಕಂದನನ್ನು ನಾನು ಕೊಂದೇ ಬಿಡುವೆನು, ಶಿಶುಹತ್ಯಾಪಾಪವು ಬಂದರೂ ಚಿಂತೆಯಿಲ್ಲ. ಆ ಪಾಪದಿಂದ ನಾನು ಅಸ್ಪೃಶ್ಯನಾದರೂ ಚಿಂತೆಯಿಲ್ಲ. ನಾನು ಆ ಮಗುವನ್ನು ಇಂದೇ ವಧಿಸಿ ಬಿಡುವೆನು ನಡೆಯಿರಿ, ಹಿಡಿಯಿರಿ, ಓಡಿರಿ, ದೇವಸೇನೆಯ ವಿರುದ್ಧ ಯುದ್ಧ ಹೂಡಿರಿ.'' ಹೀಗೆ ಅಮರ ಸೇನೆಯನ್ನು ದೇವತೆಗಳ ಮೇಲೆ ಯುದ್ಧಕ್ಕಾಗಿ ಪ್ರಚೋದಿಸಿ ಸ್ವಯಂ ತಾರಕಾಸುರನು ಭೀಕರ ಆಕಾರವನ್ನು ಹೊಂದಿ ಆ ಎಳೆಮಗುವಾದ ಸ್ಕಂದನನ್ನು ಕುರಿತು ಮಾತನಾಡಿದನು.

**ತಾರಕ :-** ಮಗು, ನೀನು ಇನ್ನೂ ಎಳೆಯ ಕಂದ. ಈಗಲೇ ಯುದ್ಧಕ್ಕೆ ಏಕೆ ಬಂದೆ? ಚಂಡು ಆಡು ಹೋಗು, ನೀನಿನ್ನೂ ಬಿಸಿಲಿನ ಮೋರೆಯನ್ನು ಕಂಡಿಲ್ಲ. ಒಮ್ಮೆಲೆ ಈಗ ರಣರಂಗಕ್ಕೆ ತಪ್ಪು ಹೆಜ್ಜೆ ಹಾಕುತ್ತ ಇಳಿದು ಬಂದಿರುವಿ. ಎಷ್ಟೆಂದರೂ ನೀನು ಎಳೆಯ ಕೂಸಲ್ಲವೆ? ನಿನ್ನ ಬುದ್ಧಿ ಇನ್ನೂ ಪಕ್ವವಾಗಿಲ್ಲ. ವಿಚಾರಶಕ್ತಿಯೂ ಬೆಳೆದಿಲ್ಲ. ಆದುದರಿಂದ ನೀನು ಇಲ್ಲಿಂದ ನಿನ್ನ ಮನೆಗೆಹೋಗು, ಆಟಪಾಟಗಳಿಂದ ಆನಂದ ಪಡು.

**ಸ್ಕಂದ :-** ''ತಾರಕಾಸುರ ಇದು ಯುದ್ಧ ಕ್ಷೇತ್ರ. ವಾದವೇದಿಕೆಯಲ್ಲ, ಇಲ್ಲಿ ನಡೆಯುವದು ಶಾಸ್ತ್ರಾರ್ಥವಲ್ಲ, ಶಸ್ತ್ರಾರ್ಥ ನಾನು ಎಳೆ ಮಗು ಎಂದು ನೀನು ಲಘುವಾಗಿ ಪರಿಗಣಿಸಬೇಡ. ಹಾವು ಚಿಕ್ಕದಿದ್ದರೂ ಕಚ್ಚದೆ ಬಿಟ್ಟೀತೆ ? ಸೂರ್ಯನ ಉದಯ ಕಾಲದಲ್ಲಿ ಸೌಮ್ಯನಿದ್ದರೂ ಅವನನ್ನು ನೋಡಲಿಕ್ಕಾದೀತೆ ? ಮಂತ್ರದಲ್ಲಿ ಅಕ್ಷರಗಳು

ಕಡಿಮೆ ಇದ್ದ ಮಾತ್ರಕ್ಕೆ ಅದರ ಶಕ್ತಿ ಕಡಿಮೆ ಆಗುವುದೆ ? ಬಾಯಿಗೆ ಬಂದಂತೆ ಏಕೆ ಹರಟುತ್ತಿರುವೆ ? ರಣಾಂಗದಲ್ಲಿ ಬಾಯಿ ಮಾತುಗಳಿಂದ ಏನು ಪ್ರಯೋಜನವಿಲ್ಲ. ಇಲ್ಲಿ ಏನಾದರೂ ಮಾತನಾಡುವದಿದ್ದರೆ ಶಸ್ತ್ರಗಳಿಂದಲೇ ಮಾತನಾಡು. ಶಸ್ತ್ರಗಳಿಂದಲೇ ನಾನು ಉತ್ತರಕೊಡುವೆ.''

ಸ್ಕಂದನು ಚಿಕ್ಕ ಕಂದನಾದರೂ ಪ್ರೌಢ ಪರಾಕ್ರಮಿಯಂತೆ ಆ ದೈತ್ಯನನ್ನು ಧಿಕ್ಕರಿಸಿ ನುಡಿಯಲು ತಾರಕನಿಗೆ ಬಹಳ ಕೋಪ ಬಂದಿತು. ಕೂಡಲೇ ಅವನು ತನ್ನ ಮುದ್ಗರ ಅಸ್ತ್ರವನ್ನು ಆ ಮಗುವಿನ ಮೇಲೆ ಬೀಸಿದನು. ಕೂಡಲೇ ಷಣ್ಮುಖನು ತಕ್ಷಣವೇ ಚಕ್ರದಿಂದ ಆ ಮುದ್ಗರವನ್ನು ಕತ್ತರಿಸಿಹಾಕಿ ಗರ್ಜಿಸಿದನು. ''ದುರ್ಬುದ್ಧಿಯ ದುಷ್ಟ ದಾನವನೇ, ನಿಲ್ಲು, ನಿಲ್ಲು, ಕೊನೆಯ ಬಾರಿ ಒಮ್ಮೆ ಪ್ರಪಂಚ ನೋಡು. ನೀನು ಈಗಲೇ ಸತ್ತುಹೋಗುವಿ. ಈ ಜನ್ಮದಲ್ಲಿ ನೀನು ಮಾಡಿದ ದೈತ್ಯ ಚೇಷ್ಟೆಗಳನ್ನು ನೆನೆದುಕೊಳ್ಳು.''

ಅಷ್ಟರಲ್ಲಿ ಆ ಪುಟ್ಟ ಮಗುವಿನ ಧಾರ್ಷ್ಟ್ಯವನ್ನು ಕಂಡು ಹಾಗೂ ದೌಷ್ಟ್ಯವನ್ನು ನೋಡಿ, ಅತ್ಯಂತ ಕ್ರುದ್ಧರಾದ ಕಾಲನೇಮಿ ಮುಂತಾದ ದೈತ್ಯವೀರರು ಎಲ್ಲರೂ ಒಟ್ಟುಗೂಡಿ ತಮ್ಮ ನಿಶಿತವಾದ ಶಸ್ತ್ರಾಸ್ತ್ರಗಳಿಂದ ಆ ಕುಮಾರನನ್ನು ಹೊಡೆದರು. ಆ ಪ್ರಹಾರಗಳಲ್ಲಿ ಒಂದು ಏಟೂ ಕೂಡ ಕುಮಾರನಿಗೆ ತಗಲಲ್ಲಿಲ್ಲ. ಅನಂತರ ಎಲ್ಲ ದೈತ್ಯರು ಬಗೆ ಬಗೆಯ ತೀಕ್ಷ್ಣ ಬಾಣಗಳನ್ನು ಬಿಟ್ಟರು. ಅದರಿಂದ ಕಾರ್ತಿಕೇಯನಿಗೆ ಯಾವ ನೋವೂ ಉಂಟಾಗಲಿಲ್ಲ. ದೈತ್ಯರ ಈ ಅಬ್ಬರವನ್ನು ಕಂಡು ಷಣ್ಮುಖನು ಮೊದಲು ಮಿಕ್ಕ ದೈತ್ಯರನ್ನೆಲ್ಲ ಮುಗಿಸಬೇಕೆಂದು ಅವರ ಮೇಲೆ ಭೀಕರ ಶಸ್ತ್ರ ದಾಳಿಯನ್ನು ಪ್ರಾರಂಭಿಸಿದನು. ಅದರಿಂದ ಕಾಲನೇಮಿ ಮುಂತಾದ ದೈತ್ಯರೆಲ್ಲ ಅವನ ಭೀಕರ ಶಸ್ತ್ರಾಘಾತ ತಾಳಲಾರದೆ ತತ್ತರಿಸಿ ರಣರಂಗದಿಂದ ಓಡಿಹೋದರು. ಇತ್ತ ಸ್ಕಂದನು ಉಳಿದ ದೈತ್ಯ ಧುರೀಣರೊಡನೆ ಸೆಣಸುತ್ತಿದ್ದಾಗಲೇ ತಾರಕಾಸುರನು ಇದೇ ಸಮಯವೆಂದು ಕೊಂಡು. ತನ್ನ ಭೀಕರವಾದ ಗದೆಯನ್ನೆತ್ತಿ ಕುಮಾರನೆಡೆಗೆ ಬೀಸಿದನು. ಆ ಸ್ಕಂದನ ವಾಹನವಾದ ನವಿಲಿನ ನೆತ್ತಿಯ ಮೇಲೆ ಬಿದ್ದು ಅದರ ನೆತ್ತರ ಬಸಿಯತೊಡಗಿತು.

ಅದನ್ನು ನೋಡಿ ಕೋಪಾಕುಲನಾದ ಕಾರ್ತಿಕೇಯನು ಆಗಲೇ ಆ ದೈತ್ಯಾಧಮನ ಮೇಲೆ ಪ್ರಯೋಗಿಸಬಯಸಿದ ಶಕ್ತ್ಯಾಯುಧವನ್ನು ತಾರಕನ ಮೇಲೆ ಎಸೆದ. ದೇವೇಂದ್ರನ ವಜ್ರಾಯುಧಕ್ಕಿಂತ ಭೀಕರವಾಗಿತ್ತು. ಆ ಶಕ್ತ್ಯಾಯುಧ ಕುಮಾರನು ಕೈಯಿಂದ ಬೀಸಿದ್ದೊಂದೇ ತಡ, ನೇರವಾಗಿ ಆ ಉಗ್ರ ಶಕ್ತಿಯು ತಾರಕಾಸುರನ ಹರವಾದ ಎದೆಯ ಮೇಲೆ ಬಂದು ಅಪ್ಪಳಿಸಿತು. ಎದೆ ಸೀಳಿ ರಕ್ತ ಸೋರಿ ದೈತ್ಯ ನೆಲಕ್ಕುರುಳಿದ. ಪ್ರಾಣಪಕ್ಷಿ ಹಾರಿಹೋಯಿತು. ಪ್ರಳಯ ಕಾಲದಲ್ಲಿ ದೊಡ್ಡದಾದ ಬೆಟ್ಟವೇ ಉರುಳಿ ಬಿದ್ದಂತಾಯಿತು ನೆಲದ ಮೇಲೆ ಆ ತಾರಕಾಸುನ ನಿಪಾತ. ತಲೆ ಒಡೆಯಿತು, ಕಿರೀಟ ಸಿಡಿಯಿತು, ಅದರಲ್ಲಿ ಖಚಿತವಾದ ಮುತ್ತು ರತ್ನಗಳು ಚಲ್ಲಾಪಿಲ್ಲಿಯಾದವು. ಮೈಮೇಲಿನ ಎಲ್ಲ ರತ್ನಾಭರಣಗಳು ಜಜ್ಜಿ ಪುಡಿಪುಡಿ ಆದವು. ದುಷ್ಟರಲ್ಲಿ ಅಗ್ರೇಸರನಾದ ಆ ದೈತ್ಯನು ಧ್ವಂಸ ಹೊಂದಿದಾಗ ಪ್ರಪಂಚದಲ್ಲಿ ಒಬ್ಬರೂ ಕಣ್ಣೀರಿಡಲಿಲ್ಲ. ಎಲ್ಲರೂ ಹಿಗ್ಗುವವರೆ! ಎಲ್ಲರೂ ಷಣ್ಮುಖನನ್ನು ಬಾಯಿತುಂಬ ಹೊಗಳುವವರೆ. ದೇವತೆಗಳಿಗೆಲ್ಲ ಸಂತಸವಾಯಿತು ವರಗಳನ್ನು ಕೊಟ್ಟರು. ಸಿದ್ಧರೂ ತಪಸ್ವಿಗಳೂ ಆ ಸೇನಾಪತಿಯ ಪ್ರಶಂಸನೆ ಮಾಡಿದರು.

**ದೇವತೆಗಳು :-** ಸ್ಕಂದನ ಈ ಕತೆಯನ್ನು ಕೇಳಿದವರು, ಹೇಳಿದವರು ದೀರ್ಘಾಯುಷಿಗಳು ಆಗುವರು. ಕಾರ್ತಿಕೇಯನ ಈ ಚರಿತ್ರ ಕೀರ್ತನೆಯಿಂದ ಪ್ರಶಸ್ತವಾದ ಕೀರ್ತಿ, ದಿವ್ಯ ಕಾಂತಿ, ಸೌಂದರ್ಯ, ನಿರ್ಭಯತೆ, ಆರೋಗ್ಯ, ಆಯುಷ್ಯ ಎಲ್ಲವೂ ದೊರಕುವವು. ದುಃಖಗಳು ಪರಿಹಾರವಾಗುವವು. ಪ್ರತಿದಿನ ಪ್ರಾತಃಕಾಲದಲ್ಲಿ ಎದ್ದು ತಪ್ಪದೇ ಪಠಿಸಬೇಕು. ಅದರಿಂದ ಮನುಷ್ಯನಿಗೆ ಸಮೃದ್ಧವಾದ ಐಶ್ವರ್ಯ ಪ್ರಾಪ್ತಿಯಾಗುವದು. ಮಹಾದರಿದ್ರನು ಮಹಾಧನಿಕನಾಗುವನು

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪತಿಯನ್ನೇ ಪರಿತ್ಯಜಿಸಿದ ಅರ್ಧಾಂಗಿ ಎಂಬ ನಲವತ್ತೊಂದನೇಯ ಅಧ್ಯಾಯ ಮುಗಿದುದು*



## ನರಸಿಂಹರೂಪ

**ಅಧ್ಯಾಯ - ೪೨**

**॥ ಭೀಷ್ಮ ಉವಾಚ ॥**

**ಇದಾನೀಂ ಶ್ರೋತು ಮಿಚ್ಛಾಮಿ ಹಿರಣ್ಯಕಶಿಪೋರ್ವಧಂ ।**
**ನರಸಿಂಹಸ್ಯ ಮಾಹಾತ್ಮ್ಯಂ ತಥಾ ಪಾಪ ವಿನಾಶನಂ ॥**

**ಭೀಷ್ಮ :-** ಈಗ ಹಿರಣ್ಯಕಶಿಪುವಿನ ಸಂಹಾರದ ವೃತ್ತಾಂತ ಕೇಳುವ ಇಚ್ಛೆ ಆಗಿದೆ. ನರಸಿಂಹ ದೇವರ ಮಹಿಮೆ ಪಾಪನಾಶಕವಾಗಿದೆ. ಅದನ್ನು ಹೇಳಿರಿ.

**ಪುಲಸ್ತ್ಯ :-** ರಾಜನೆ, ಪೂರ್ವಕಾಲದಲ್ಲಿ- ಎಂದರೆ ಕೃತಯುಗದಲ್ಲಿ ನಡೆದ ಘಟನೆ. ದೈತ್ಯರಿಗೆಲ್ಲ ಆದಿಪುರುಷನೊಬ್ಬನಿದ್ದ. ಅವನೇ ಅಸುರಪ್ರಭು ಹಿರಣ್ಯಕಶಿಪು. ಆ ದೈತ್ಯನದು ಎಲ್ಲವೂ ದೊಡ್ಡದೆ. ಅವನ ತಪಸ್ಸು ಕೂಡ ಅಷ್ಟೇ ಮಹತ್ತರವಾಗಿತ್ತು. ಹತ್ತು ಸಾವಿರದ ಮೇಲೆ ಇನ್ನೂ ಒಂದು ಸಾವಿರ ವರ್ಷ ಆ ದೈತ್ಯ ಸಮ್ರಾಟನು ಉಗ್ರತಪಸ್ಸು ಮಾಡಿದನು. ಹಗಲಿರುಳು ನೀರಿನಲ್ಲಿ ಕುಳಿತೇ ಅವನು ತಪಸ್ಸು ಮೌನವ್ರತ. ಇವನ ಈ ಅತ್ಯುಗ್ರ ತಪಸ್ಸಿಗೆ ನಾಲ್ಕು ಮುಖದ ಬ್ರಹ್ಮಪ್ರೀತನಾದ ರವಿಯಂತಿರುವ ರಥದಲ್ಲಿ ಕುಳಿತು ಬಂದ. ಹಂಸ ಹಕ್ಕಿಗಳು ಅದನ್ನು ಆಗಸದಲ್ಲಿ ಎಳೆಯುತ್ತಿದ್ದವು. ಆಗಸದ ಅಂತರದಲ್ಲಿ ಹಕ್ಕಿಯಂತೆ ಹಾರುವ ಆ ಬ್ರಹ್ಮವಾಹನಕ್ಕೆ ರಥವೆನ್ನುವದಕ್ಕಿಂತ ವಿಮಾನ ಎನ್ನುವದೇ ಯುಕ್ತವಾದುದು. ಆ ಬ್ರಹ್ಮನೊಡನೆ ಆದಿತ್ಯರು, ವಸುಗಳು, ದೇವರ್ಷಿ, ಬ್ರಹ್ಮರ್ಷಿಗಳು. ಸಿದ್ಧರು, ಸಾಧ್ಯರು, ಸಪ್ತರ್ಷಿಗಳು, ರುದ್ರಗಣ, ಮರುದ್ಗುಣ, ದೇವಗಣ ಎಲ್ಲರೂ ಬಂದರು ಹಿರಣ್ಯಕಶಿಪು ತಪಸ್ಸು ಮಾಡುವ ಸ್ಥಳಕ್ಕೆ ಬಂದು ಬ್ರಹ್ಮದೇವರು ಹೇಳಿದರು.-

''ಭಕ್ತಾ, ನಿನ್ನ ಈ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ನಿನಗೆ ಬೇಕಾದ ವರ ಬೇಡು. ನನ್ನ ವರದಿಂದ ನಿನ್ನ ಅಭೀಷ್ಟವನ್ನು ಪಡೆದುಕೊಳ್ಳು.

**ಹಿರಣ್ಯಕಶಿಪು :-** ''ಪಿತಾಮಹ, ನೀನು ದೇವ ಶ್ರೇಷ್ಠನಷ್ಟೇ! ನನಗೆ ಈ ವರವನ್ನು ನೀಡು. ಯಾವ ದೇವತೆಗಳೂ ನನ್ನನ್ನು ಕೊಲ್ಲಬಾರದು. ಅದರಂತೆ ದಾನವರಾಗಲಿ, ಗಂಧರ್ವರಾಗಲಿ, ಯಕ್ಷ ಸರ್ಪ ಮಾನವ, ಪಿಶಾಚರು ನನ್ನನ್ನು ಸಂಹರಿಸಬಾರದು. ಋಷಿಗಳು ಶಾಪ ಕೊಟ್ಟು, ನನ್ನನ್ನು ನಾಶಗೈಯಬಾರದು, ಶಸ್ತ್ರ ಅಸ್ತ್ರಗಳಿಂದಾಗಲಿ ಗಿಡ,

ಗುಡ್ಡಗಳಿಂದಾಗಲಿ, ಹಸಿ ವಸ್ತುವಿನಿಂದಾಗಲಿ, ಒಗಿದ ಪದಾರ್ಥಗಳಿಂದಾಗಲಿ ನನಗೆ ಮರಣ ಬರಬಾರದು. ಇನ್ನು ಮುಂದೆ ಈ ಪ್ರಪಂಚದಲ್ಲಿ ನಾನೇ ಸೂರ್ಯ, ಚಂದ್ರ, ವಾಯು, ಅಗ್ನಿಯಾಗಿ ಜಗತ್ತನ್ನೆಲ್ಲ ಆಳಬೇಕು. ಪಂಚ ಮಹಾಭೂತಗಳು ನನ್ನ ಅಂಕಿತದಲ್ಲಿರಬೇಕು. ದಶದಿಕ್ಕುಗಳನ್ನು ನನ್ನ ಅಧೀನವಾಗಬೇಕು. ಇಂದ್ರ, ವರುಣ, ಕುಬೇರ ಮಂತಾದ ಎಲ್ಲ ದೇವಾಧಿ ದೇವತೆಗಳ ಹಾಗೂ ದಿಕ್ಪಾಲಕರ ಶಕ್ತಿ, ಸ್ಥಾನ, ಮಾನ, ಐಶ್ವರ್ಯ, ಅಧಿಕಾರ, ಭೋಗ, ಭಾಗ್ಯಗಳೆಲ್ಲವೂ ನನ್ನ ಅಧೀನವಾಗಬೇಕು. ನಾನೇ ಸರ್ವ ಚಾಲಕನಾಗಬೇಕು.''

**ಬ್ರಹ್ಮ** :- ''ತಥಾಸ್ತು, ಅಯ್ಯಾ ಹಿರಣ್ಯಕಶಿಪು, ನಾನು ನಿನಗೆ ನೀನು ಕೇಳಿದ ಎಲ್ಲ ವರ ಕೊಟ್ಟಿದ್ದೇನೆ. ಇವೆಲ್ಲವನ್ನೂ ನೀನು ಪಡೆಯುತ್ತಿ, ಸಂದೇಹವಿಲ್ಲ.'' ಹೀಗೆ ಹಿರಣ್ಯಕಶಿಪುವಿಗೆ ವರಕೊಟ್ಟು ಬ್ರಹ್ಮದೇವನು ತನ್ನ ಸತ್ಯಲೋಕ ಕುರಿತು ತೆರಳಿದನು ಆಕಾಶಮಾರ್ಗವಾಗಿ.

ಬ್ರಹ್ಮದೇವರು ಆ ದುಷ್ಟ ದೈತ್ಯನಿಗೆ ಇತ್ತ ಈ ಅದ್ಭುತ ವರ ಕೇಳಿ ದೇವತೆಗಳು ತಲ್ಲಣಿಸಿದರು, ಋಷಿಗಳು ಹೌಹಾರಿದರು. ಯಕ್ಷಗಂಧರ್ವರು ಗಾಬರಿಯಾದರು. ಅವರೆಲ್ಲರೂ ಬ್ರಹ್ಮನ ಬಳಿಗೆ ಧಾವಿಸಿ ಬಂದರು.

ದೇವತೆಗಳು:- ಸ್ವಾಮಿ, ಮೊದಲೇ ಆ ಹಿರಣ್ಯಕಶಿಪು ದುಷ್ಟ ದೈತ್ಯ. ಮೇಲಾಗಿ ಅವನಿಗೆ ನಿನ್ನ ಈ ಅದ್ಭುತ ವರ ಪ್ರಸಾದ. ಅದರಿಂದ ನಮಗೆ ಇನ್ನು ಮೇಲೆ ಉಳಿಗಾಲವಿಲ್ಲ. ನಮ್ಮ ಸತ್ಯನಾಶವಾಗುವದು ಖಂಡಿತ. ಆದುದರಿಂದ ಈಗಲೇ ಆ ದುಷ್ಟ ದಾನವನ ವಧಕ್ಕಾಗಿ ಯಾವುದಾದರೂ ಒಂದು ಉಪಾಯ ಹುಡುಕಿರಿ.

**ಬ್ರಹ್ಮ** :- ದೇವತೆಗಳೆ, ಹಿರಣ್ಯಕಶಿಪು ಎಂತಹ ಘೋರ ತಪಸ್ಸು ಮಾಡಿದ್ದಾನೆ. ಎಂಬುದನ್ನು ಬಲ್ಲಿರಾ! ಆ ತಪಸ್ಸಿಗೆ ಫಲಕೊಡಬೇಕಾದದ್ದು ನನ್ನ ಕರ್ತವ್ಯ. ಅದಕ್ಕಾಗಿ ಈ ವರ ಕೊಟ್ಟಿದ್ದೇನೆ. ಆದರೂ ನೀವು ಹೆದರಬೇಡಿರಿ. ನಿಮ್ಮನ್ನೆಲ್ಲ ರಕ್ಷಿಸಲು ಸಾಕ್ಷಾತ್ ಶ್ರೀಹರಿ ಇರುವನಲ್ಲವೆ? ನಾನು ಏನೇ ವರಕೊಟ್ಟರೂ ಆ ಮಹಾವಿಷ್ಣುವು ಆ ಹಿರಣ್ಯಕಶಿಪುವನ್ನು ಸಂಹರಿಸುತ್ತಾನೆ.'' ಕಮಲದಿಂದ ಉದಿಸಿದ ಬಹ್ಮನ ಈ ಮಾತು ಕೇಳಿ ದೇವತೆಗಳ ಮುಖ ಕಮಲಗಳು ಆನಂದದಿಂದ ಅರಳಿದವು. ಅವರೆಲ್ಲರೂ ಸಂತೋಷದಿಂದ ಮರಳಿದರು.

ಇತ್ತ ದೈತ್ಯರಾಜ ಹಿರಣ್ಯಕಶಿಪುವಾದರೂ ವರ ಪಡೆದ ಕೂಡಲೆ, ಪ್ರಜೆಗಳನ್ನೆಲ್ಲ ಕಾಡತೊಡಗಿದ ಮೊದಲೇ ಮತ್ತ ಚಿತ್ತ ಆ ದೈತ್ಯ. ಬ್ರಹ್ಮದೇವರ ವರಬಂದ ಮೇಲಂತೂ ಕೇಳುವದೇನು! ಮತ್ತಷ್ಟು ಉನ್ಮತ್ತನಾದ. ಆಶ್ರಮಗಳಲ್ಲಿ ಹೊಕ್ಕು ಮುನಿಗಳನ್ನೆಲ್ಲ ಹೊಡೆದ. ಧಾರ್ಮಿಕರನ್ನೆಲ್ಲ ಕಡಿದ. ವ್ರತಗಳನ್ನೆ ವಿಧ್ವಂಸಿಸಿದ. ಯಜ್ಞಗಳನ್ನು ನಾಶಪಡಿಸಿದ. ಭೂಲೋಕದ ಜನರನ್ನೆಲ್ಲ ಭಯಭ್ರಾಂತರನ್ನಾಗಿ ಮಾಡಿದ. ದೇವತೆಗಳನ್ನು ಗೆದ್ದು ಸ್ವರ್ಗದಿಂದ ಹೊಡೆದೋಡಿಸಿದ. ದೈತ್ಯರಿಗೆಲ್ಲ ಯಜ್ಞಗಳಲ್ಲಿ ಆಹುತಿ ಕೊಡಿಸಿದ. ದೇವ ದೇವತೆಗಳು, ದಿಕ್ಪಾಲಕರ ಅಧಿಕಾರಗಳನ್ನು ಕಸಿದುಕೊಂಡ. ಆಗ ಎಲ್ಲ ದೇವತೆಗಳು ಸಂತ್ರಸ್ತರಾಗಿ ವಿಷ್ಣುವಿಗೆ ಶರಣು ಹೋದರು.

**॥ದೇವಾ ಊಚುಃ॥**

ನಾರಾಯಣ ಮಹಾಭಾಗ ದೇವಾಸ್ತ್ವಾಂ ಶರಣಂ ಗತಾಃ ।
ತ್ರಾಯಸ್ವ ಜಹಿ ದೈತ್ಯೇಂದ್ರಂ ಹಿರಣ್ಯಕಶಿಪುಂ ಪ್ರಭೋ ।

**ತ್ವಂ ಹಿ ನಃ ಪರಮೋ ಧಾತಾ ತ್ವಂ ಹಿ ನಃ ಪರಮೋ ಗುರುಃ !**
**ತ್ವಂ ಹಿ ನಃ ಪರಮೋ ದೇವಃ ಬ್ರಹ್ಮಾದೀನಾಂ ಸುರೋತ್ತಮಃ ॥**

ಮಹಾತ್ಮನಾದ ನಾರಾಯಣನೇ ನಾವೆಲ್ಲ ದೇವತೆಗಳು ನಿನಗೆ ಶರಣು ಬಂದಿದ್ದೇವೆ. ನಮ್ಮನ್ನು ರಕ್ಷಿಸು, ರಾಕ್ಷಸರಿಗೆ ಇಂದ್ರನಾದ ಹಿರಣ್ಯಕಶಿಪುವನ್ನು ಸಂಹರಿಸು. ನೀನೇ ನಮಗೆ ಭಾಗ್ಯವಿಧಾತ. ನೀನೇ ನಮಗೆ ಪರಮಗುರು, ನೀನೆ ಪರದೈವ ಬ್ರಹ್ಮಾದಿ ದೇವತೆಗಳಿಗಿಂತ ನೀನು ಅತ್ಯುತ್ತಮ. ಸರ್ವ ದೇವೋತ್ತಮ.

**ವಿಷ್ಣು :-** ''ದೇವತೆಗಳೆ, ನೀವು ಹೆದರಬೇಡಿರಿ ನಾನು ಅಭಯ ನೀಡುತ್ತೇನೆ. ನೀವೆಲ್ಲ ಸ್ವರ್ಗಕ್ಕೆ ಹೋಗಿರಿ. ಬ್ರಹ್ಮನ ವರದಿಂದ ಗರ್ವಿಷ್ಠನಾಗಿರುವನಲ್ಲವೆ- ಆ ದೈತ್ಯ! ಅವನ ಪರಿವಾರ ಸಹಿತವಾಗಿ ನಾನು ಅವನನ್ನು ಕೊಂದು ಹಾಕುವೆನು. ಉಳಿದ ಯಾವ ದೇವತೆ ಗಳೂ ಅವನನ್ನು ಗೆಲ್ಲಲಾರರು, ಕೊಲ್ಲಲಾರರು. ನಾನೇ ಅವನನ್ನು ಸಂಹರಿಸುತ್ತೇನೆ.'' ಹೀಗೆ ದೇವತೆಗಳನ್ನು ಸಮಾಧಾನ ಪಡಿಸಿ ಆ ವಿಷ್ಣುವು ಹಿರಣ್ಯಕಶಿಪು ಇದ್ದಲ್ಲಿ ಬಂದನು. ವಿಷ್ಣುವಿಗಂತೂ ನಾಶವೇ ಇಲ್ಲ. ಅಂದ ಮೇಲೆ ಅವನಿಗೆ ಅಂಜಿಕೆ ಏನು! ಸೂರ್ಯನೊ.... ಚಂದ್ರನೊ ಅನ್ನುವಂತಿತ್ತು ಅವನ ಕಾಂತಿಮಂತವಾದ ಆಕಾರ. ಆಶ್ಚರ್ಯವಾಗುವಂತೆ ಹಿರಣ್ಯಕಶಿಪುವಿನ ಸಂಹಾರಕ್ಕಾಗಿ ಅರ್ಧ ಮನುಷ್ಯ ಅರ್ಧ ಸಿಂಹದ ರೂಪವನ್ನು ತಳೆದಿದ್ದನು ಆ ವಿಷ್ಣು. ಮೇಲೆ ಸಿಂಹ, ಕೆಳಗೆ ನರನ ಆಕಾರ. ಆದರಿಂದ ನರಸಿಂಹ ಎಂದು ಆ ವಿಷ್ಣುವಿನ ವಿಚಿತ್ರ ಸ್ವರೂಪಕ್ಕೆ ಹೆಸರು ಬಂದಿತು. ಅತ್ಯುಗ್ರವಾದ ಆ ನರಸಿಂಹ ರೂಪದಿಂದ ಮಹಾವಿಷ್ಣುವು ವಿಶಾಲವೂ, ಸುಂದರವೂ ಆದ ಹಿರಣ್ಯಕಶಿಪುವಿನ ಸಭಾಮಂಟಪಕ್ಕೆ ಆಗಮಿಸಿದನು. ಹಿರಣ್ಯಕಶಿಪುವಿನ ಆಸ್ಥಾನ ಮಂಟಪವೆಂದರೆ ಮತ್ತೊಂದು ಸ್ವರ್ಗವೇ ಇದ್ದಂತಿತ್ತು. ನೂರು ಯೋಜನ ಅಗಲ, ನೂರಾಐವತ್ತು ಯೋಜನ ವಿಸ್ತಾರ. ಆದರ ತುಂಬ ಬಗೆ ಬಗೆಯ ಹಣ್ಣು, ಹೂಗಳಿಂದ ಕಂಗೊಳಿಸುವ ಉಪವನಗಳು. ಸುಂದರ ಹೊಂದಾವರೆಗಳಿಂದ ಕಂಗೊಳಿಸುವ ಪುಷ್ಕರಣಿಗಳು. ಆ ಸಭಾ ಮಂಟಪದಲ್ಲಿ ಪ್ರವೇಶಿಸಿದವರಿಗೆ ಹಸಿವು ಬಾಯಾರಿಕೆಗಳು, ರೋಗರುಜಿಗಳು ಆಗುತ್ತಿರಲಿಲ್ಲ. ಇಂತಹ ರಮಣೀಯವಾದ ಸಭಾಮಂದಿರದಲ್ಲಿ ಹಿರಣ್ಯಕಶಿಪುವು ಅನೇಕ ರತ್ನೋಜ್ವಲ ಆಭರಣ ಹಾಕಿಕೊಂಡು ಹತ್ತು ಮೊಳ ಎತ್ತರದ ಸಿಂಹಾಸನದಲ್ಲಿ ಮಂಡಿಸಿದ್ದ.

ನರಕ, ಪ್ರಲ್ಹಾದ, ವಿಪ್ರಚಿತ್ತ, ಬಲಿ ಮುಂತಾದ ದೈತ್ಯರಲ್ಲದೆ ಅನೇಕ ದೇವತೆ ಗಂಧರ್ವರು ಅವನ ಸೇವೆ ಮಾಡುತ್ತಿದ್ದರು. ರಂಭೆ ಮುಂತಾದ ಅಪ್ಸರೆಯರು ಅವನ ಮುಂದೆ ಕುಣಿದು, ಹಾಡಿ ಸೇವೆ ಸಲ್ಲಿಸುತ್ತಿದ್ದರು. ಇವರೆಲ್ಲರೂ ಹಾಗೂ ಹಿರಣ್ಯ ಕಶಿಪುವಿನ ಮಗನಾದ ಪ್ರಲ್ಹಾದನೂ ಬಂಗಾರ ಬಣ್ಣ-ಯಾರೂ ನೋಡದಿರುವ ನರಸಿಂಹ ಮೂರ್ತಿಯನ್ನು ನೋಡಿದರು. ಅವನನ್ನು ಕಂಡ ಕೂಡಲೇ ಎಲ್ಲ ದೈತ್ಯದಾನವರೂ, ಹಿರಣ್ಯಕಶಿಪುವೂ ಬೆಕ್ಕಸ ಬೆರಗಾಗಿ ನಿಂತು ಕೊಂಡರು. ಪ್ರಲ್ಹಾದನು ಎದ್ದು ನಿಂತು ನುಡಿದನು.-

**ಪ್ರಲ್ಹಾದ :-** ಮಹಾರಾಜನೆ, ನಾನು ಈವರೆಗೂ ಇಂತಹ ವಿಚಿತ್ರ ಆಕಾರದ ನರಸಿಂಹ ವಿಗ್ರಹವನ್ನು ಎಂದೂ ಕಂಡಿಲ್ಲ, ಕೇಳಿಲ್ಲ, ಅವ್ಯಕ್ತ ಶಕ್ತಿಯೊಂದು ದೈತ್ಯರ ನಾಶಕ್ಕಾಗಿ ಇಲ್ಲಿಗೆ ಬಂದಿದೆ. ಈ ರೂಪದಿಂದ ಎಂದು ನನ್ನ ಒಳಮನಸ್ಸು ಹೇಳುತ್ತಲಿದೆ.

ಇಂದ್ರ, ಚಂದ್ರ, ಯಮ, ವರುಣ, ಕುಬೇರ ಮುಂತಾದ ದೇವ, ದಿಕ್ಪಾಲಕರು ಬ್ರಹ್ಮ ರುದ್ರಾದಿ ದೇವೋತ್ತಮರು. ಈ ನರಸಿಂಹ ದೇವರ ದೇಹದ ಒಂದೊಂದು ಭಾಗವನ್ನು

ಆಶ್ರಯಿಸಿರುತ್ತಾರೆ. ಎಲ್ಲ ಪ್ರಜಾಪತಿ, ಮನುಗಳು, ಹದಿನಾಲ್ಕು, ಲೋಕಗಳು, ಗ್ರಹನಕ್ಷತ್ರಾದಿಗಳು, ಸನತ್ಕುಮಾರಾದಿ ಮಹರ್ಷಿಗಳು. ಎಲ್ಲ ದೇವಾದಿದೇವತೆಗಳು ಇವನನ್ನು ಆಶ್ರಯಿಸಿದ್ದಾರೆ. ಇವನೊಬ್ಬ ವಿಶ್ವರೂಪಿಯಾದ ವಿಶ್ವಾತ್ಮನಾದ ದೇವೋತ್ತಮ.''

ಪ್ರಲ್ಹಾದನ ಈ ಮಾತುಗಳನ್ನು ಕೇಳಿ, ''ಇದೊಂದು ಸಿಂಹವಷ್ಟೇ ! ಹೊಸ ದೇಹವನ್ನು ತಳೆದು ಯಾವದೋ ಕಾಡು ಮೃಗ ಇಲ್ಲಿಗೆ ಬಂದಿದೆ. ಕಾಡಿನಲ್ಲಿರುವ ಈ ಕಾಡು ಪ್ರಾಣಿಯು ನಾಡಿನೊಳಗೆ ಬಂದರೆ ವಿಚಾರವೇನು? ಅದನ್ನು ಹಿಡಿದು ಕಟ್ಟಿ ಹಾಕಿಬಿಡಿರಿ.'' ಹಿರಣ್ಯಕಶಿಪು ಹೀಗೆ ಆಜ್ಞೆ ಮಾಡುವದೊಂದೇ ತಡ, ಎಲ್ಲ ದೈತ್ಯರು ತಮ್ಮ ಶಸ್ತ್ರಾಸ್ತ್ರಗಳನ್ನೆತ್ತಿ ನರಸಿಂಹ ಮೂರ್ತಿಯ ಕಡೆಗೆ ಬೀಸತೊಡಗಿದರು. ಘೋರವಾದ ಆಯುಧಗಳಿಂದ ಎಲ್ಲ ರಾಕ್ಷಸರು ಒಗ್ಗೂಡಿ ಅವನನ್ನು ಬಡೆಯಬೇಕೆಂದು ಬಂದರು. ಅವನನ್ನು ಕಂಡಕೂಡಲೇ, ಆ ನರಸಿಂಹನು ಭಯಂಕರ ಸಿಂಹನಾದ ಮಾಡಿದನು. ಅದರಿಂದ ಭೂಮ್ಯಾಕಾಶಗಳು ನಡುಗಿದವು. ನರಸಿಂಹನು ಯಮನಂತೆ ಬಾಯಿತೆರೆದು ಬಂದವರನ್ನೆಲ್ಲ ಬಡಿದು, ಸಿಕ್ಕವರನ್ನೆಲ್ಲ ಕಡಿದು ಹಿರಣ್ಯಕಶಿಪುವಿನ ದಿವ್ಯ ಭವ್ಯವಾದ ಆ ಸಭಾಮಂಟಪವನ್ನೆಲ್ಲ ಮುರಿದು ಮಣ್ಣುಗೂಡಿಸಿದನು.

ಆಗ ಕ್ರೋಧಾಂಧನಾದ ಹಿರಣ್ಯಕಶಿಪುವು ಕಣ್ಣು ಕೆಂಪಗೆಮಾಡಿ, ದವಡೆ ಕಚ್ಚಿ ಆ ನರಸಿಂಹನ ಮೇಲೆ ತನ್ನ ಅಸ್ತ್ರಗಳನ್ನು ಬಿಡತೊಡಗಿದನು. ಕಾಲ ಚಕ್ರ, ವಿಷ್ಣು ಚಕ್ರ, ರುದ್ರಾಸ್ತ್ರ, ಬ್ರಹ್ಮಾಸ್ತ್ರ, ನಾರಾಯಣಾಸ್ತ್ರ, ಅಗ್ನ್ಯಸ್ತ್ರ, ಶಕ್ತಿ ಮುಂತಾದ ಎಲ್ಲ ಅಸ್ತ್ರಗಳನ್ನು ಪ್ರಯೋಗಿಸಿದನು. ಆದರೆ ಈ ನರಸಿಂಹನ ಮೂಗು ಕಣ್ಣುಗಳಿಂದ ಅಗ್ನಿ ಜ್ವಾಲೆಗಳು ಹೊರಟು ದೈತ್ಯ ಮಾಯೆಯನ್ನು ನಾಶ ಮಾಡಿದವು. ಹೀಗೆ ಹಿರಣ್ಯ ಕಶಿಪು ನರಸಿಂಹ ದೇವರ ಯುದ್ಧದಿಂದ ಜಗತ್ತಿನಲ್ಲಿ ಎಲ್ಲ ಕಡೆಗೂ ಅಗ್ನಿ ತಾಂಡವ ನಡೆದಂತೆ ತೋರುತ್ತಿತ್ತು. ಹದಿನಾಲ್ಕು ಲೋಕಗಳು ಆಕುಂಚಿಸಿದವು. ಸಪ್ತಕುಲ ಪರ್ವತಗಳು ತೂಗಾಡಿದವು.

ಅನಂತರ ಹಿರಣ್ಯಕಶಿಪು ಸಿಟ್ಟಿನಿಂದ ಉರಿಯುತ್ತ ಪ್ರಪಂಚವನ್ನೆಲ್ಲ ನಡುಗಿಸುತ್ತ ಮೇಘಗಂಭೀರ ಧ್ವನಿಯಿಂದ ಗರ್ಜನೆಗೈದು ಶೂಲ ಗದೆಯನ್ನು ಎತ್ತಿ ನರಸಿಂಹನನ್ನು ಹೊಡೆಯಲು ಅವನ ಮೇಲೆ ಎರಗಿದನು. ಆಗ ಕೂಡಲೆ, ಭೀಕರ ಸಿಂಹಾಕಾರ ತಳೆದ ಆ ನರಸಿಂಹನು ಆ ದೈತ್ಯನನ್ನು ಹಾರಿ ಹಿಡಿದು ತನ್ನ ಹದನವಾದ ಉಗುರುಗಳಿಂದ ಹೊಡೆದು ಸೀಳಿ, ಯುದ್ಧದಲ್ಲಿ ಕೊಂದುಹಾಕಿದನು.

ದುಷ್ಟ ದೈತ್ಯನಾದ ಹಿರಣ್ಯಕಶಿಪುವಿನ ಸಂಹಾರದಿಂದ ಪೃಥ್ವೀ,ಸ್ವರ್ಗ, ಚಂದ್ರ, ಸೂರ್ಯದಿ ಗ್ರಹಮಂಡಲ, ದಶದಿಕ್ಕುಗಳು, ನದೀ ಸಮುದ್ರಗಳು, ಹೆಚ್ಚೇನು ಹದಿನಾಲ್ಕು ಲೋಕಗಳೂ ಪ್ರಸನ್ನವಾಗಿ ಸಂತಸಗೊಂಡವು. ದೇವತೆಗಳು ಆನಂದಪಟ್ಟರು, ಋಷಿಗಳು ಚಿಂತೆಗಳೆದು ಸಂತಸಹಿ ನಲಿದಾಡಿದರು. ಎಲ್ಲರೂ ನಿಶ್ಚಿಂತರಾಗಿ ನರಸಿಂಹದೇವರನ್ನು ಪ್ರಾರ್ಥಿಸಿದರು. ದೇವತೆಗಳೆಲ್ಲರೂ ನಾರಸಿಂಹರೂಪಿ ಭಗವಂತನನ್ನು ಸ್ತೋತ್ರಮಾಡಿದರು.

॥ದೇವ ಉಚುಃ॥

ಯತ್ತ್ವಯಾ ವಿಧೃತಂ ದೇವ ನಾರಸಿಂಹಮಿದಂ ವಪುಃ ।
ಏತದಾರ್ಚಯಿಷ್ಯಂತ ಪರಾಪರವಿದೋ ಜನಾಃ ॥
ಭವಾನ್ಬ್ರಹ್ಮಾ ರುದ್ರಶ್ಚ ಮಹೇಂದ್ರೋ ದೇವಸತ್ತಮ ।
ಭವಾನ್ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವೋಽವ್ಯಯ ॥

ಕ್ರೀಡಾದಿ ಗುಣಗಳಿಂದ ವಿಶಿಷ್ಟನಾದ ವಿಷ್ಣುವೆ, ನೀನು ಧರಿಸಿದ ಈ ನರಸಿಂಹ ರೂಪವನ್ನು ಪರಾಪರತತ್ವ ವಿಚಾರವುಳ್ಳ ಜ್ಞಾನಿಗಳು ಪರಬ್ರಹ್ಮನೆಂದು ಪೂಜಿಸುತ್ತಾರೆ. ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳಿಂದ ಸೃಷ್ಟಿ, ಸ್ಥಿತಿ, ಸಂಹಾರಾದಿ ಕಾರ್ಯ ಮಾಡಿಸಿ ಬ್ರಹ್ಮ, ರುದ್ರ, ಇಂದ್ರ ಮೊದಲಾದ ಶಬ್ದಗಳಿಗೆಲ್ಲ ಮುಖ್ಯ ವಾಚ್ಯನಾಗಿರುವ, ಜಗಜ್ಜನ್ಮಾದಿಕಾರಣನಾದ ಮಹಾ ಪ್ರಭುವೆ, ನಿನಗೆ ನಾಶವಿಲ್ಲ. ನೀನೆ ಪರಬ್ರಹ್ಮ ಎಲ್ಲ ವೇದಗಳ ಪರಮರಹಸ್ಯವೂ ನೀನೇ, ಸರ್ವ, ಶ್ರುತಿ, ಸ್ಮೃತಿ, ಪುರಾಣ ಪ್ರತಿಪಾದ್ಯನು ನೀನೇ." ಹೀಗೆ ಬ್ರಹ್ಮಾದಿ ದೇವತೆಗಳು ಆ ಪರಮಾತ್ಮನನ್ನು ಸ್ತೋತ್ರಗೈದು, ಅವನ ಅನುಗ್ರಹ ಪಡೆದು ತಮ್ಮತಮ್ಮ ಲೋಕಗಳಿಗೆ ಪ್ರಯಾಣ ಬೆಳೆಸಿದರು.

ಅನಂತರ ಮಂಗಳ ವಾದ್ಯಗಳು ಮೊಳಗುತ್ತಿರಲು ಆ ನರಸಿಂಹದೇವರು ಕ್ಷೀರ ಸಮುದ್ರದ ಉತ್ತರತೀರದತ್ತ ಹೊರಟುಹೋದರು. ಹೋಗುವಾಗ ತನ್ನ ನರಸಿಂಹ ರೂಪವನ್ನು ಬಿಟ್ಟು ತನ್ನ ಮೂಲ ರೂಪವಾದ ವಿಷ್ಣುವಿನ ಸ್ವರೂಪ ಹೊಂದಿ ಎಂಟು ಚಕ್ರಗಳುಳ್ಳ ತನ್ನ ದಿವ್ಯಯಾನದಿಂದ ಅವ್ಯಕ್ತ ರೂಪಿಯಾದ ಆ ದೇವೋತ್ತಮನು ಸ್ವಸ್ಥಾನಕ್ಕೆ ತೆರಳಿದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ನರಸಿಂಹರೂಪ ನಲವತ್ತೆರಡನೇಯ ಅಧ್ಯಾಯ ಮುಗಿದುದು*

—o—

## ಭೈರವ - ಭಯಂಕರನಾದ

**ಅಧ್ಯಾಯ - ೪೩**

**॥ಭೀಷ್ಮ ಉವಾಚ॥**

**ಅತೀವಾದ್ಭುತಮೇತದ್ಧಿ ನಾರಸಿಂಹ ಸ್ವರೂಪಿಣಃ ।**
**ಮಾಹಾತ್ಮ್ಯಂ ತ್ವನ್ಮುಖಾದ್ಬ್ರಹ್ಮನ್ ಶ್ರುತಂ ಪರಮಮದ್ಭುತಂ ॥**

**ಭೀಷ್ಮ:**- ನರಸಿಂಹ ರೂಪಿಯಾದ ಶ್ರೀಹರಿಯ ಮಹಿಮೆಯು ಅದ್ಭುತವಾಗಿದೆ. ಅದನ್ನು ನಿಮ್ಮ ಬಾಯಿಂದ ನಾನು ಇದೀಗ ಕೇಳಿದೆನು. ಈಗ ಈಶ್ವರನ ಮಹಿಮೆಯನ್ನು ಸಂಕ್ಷೇಪವಾಗಿ ಹೇಳಿರಿ. ಆ ಭೈರವ ಚರಿತ್ರೆಯನ್ನು ನಿಮ್ಮ ಮುಖದಿಂದ ಕೇಳುವ ಅಪೇಕ್ಷೆ ಆಗಿದೆ

**ಪುಲಸ್ತ್ಯ:**- ಹಿಂದೆ ಒಬ್ಬ ದುಷ್ಟ ದೈತ್ಯನಿದ್ದ. ಅಂಧಕಾಸುರನೆಂದು ಹೆಸರು. ಕಾಡಿಗೆಯನ್ನು ಒಂದೆಡೆ ಒಟ್ಟಿದಂತಿತ್ತು- ಅವನ ಮೈಬಣ್ಣ. ಯಾವ ದೇವತೆಗಳಿಗೂ ಅವನನ್ನು ಕೊಲ್ಲಲ್ಲು ಆಗುತ್ತಿರಲಿಲ್ಲ.

ಒಂದು ದಿನ ಆ ದೈತ್ಯನು ಪಾರ್ವತೀ ಪರಮೇಶ್ವರರು ಕ್ರೀಡೆ ಆಡುವದನ್ನು ನೋಡಿದ. ಜಗನ್ಮೋಹಿನಿಯಾದ ಆ ದೇವಿಯ ಮೇಲೆ ಬಿತ್ತು ಆ ಪಾಪಿಯ ಕಣ್ಣು. ಹೇಗಾದರೂ ಮಾಡಿ. ಹರನ ಹೃದಯದಂತಿರುವ ಆ ಹೆಣ್ಣನ್ನು ಹಾರಿಸ ಬೇಕೆಂದು ಹಂಚಿಕೆ ಹಾಕಿದ ಆ ದೈತ್ಯ. ಶಿವನು ಇರುವವರೆಗೆ ತನಗೆ ದಕ್ಕುವದೆಂತು? ಅದಕ್ಕಾಗಿ ಮಹಾದೇವನನ್ನುಕೊಂದುಬಿಟ್ಟರೆ ತಾನಾಗಿಯೇ ಆ ಪಾರ್ವತಿಯು ತನಗೆ ನಿರಂತರ ವಶವರ್ತಿನಿಯಾಗಿ ದೊರಕುವಳು. ಈ ಪಾರ್ವತಿಯ ಚೆಲುವು ಏನು! ನಿಲುವು ಏನು! ಇಂತಹ ತೊಂಡೆ ಹಣ್ಣಿನಂತಹ ತುಟಿ, ಸುಂದರ ಅಂಗಾಗ, ಅಪೂರ್ವ ಸೌಂದರ್ಯ,

ಈ ಹೆಣ್ಣಿನ ಹೊರತು ಬೇರೆ ಎಲ್ಲಿ ದೊರಕೀತು! ಈ ತ್ರಿಲೋಕ ಸುಂದರಿಯನ್ನು ಪಡೆಯದಿದ್ದರೆ ನಾನು ಬದುಕಿಯಾದರೂ ಪ್ರಯೋಜನವೇನು? ಹೇಗಾದರೂ ಮಾಡಿ ನಾನು ಇವಳನ್ನು ನನ್ನ ಮಡದಿಯನ್ನಾಗಿ ಮಾಡಿಕೊಳ್ಳಬೇಕು' ಎಂದು ಯೋಚಿಸಿದ. ತನ್ನ ವಿಚಾರದಂತೆ ನಡೆಯುವ ಮಂತ್ರಿಗಳೊಂದಿಗೆ ಆಪ್ತಸಮಾಲೋಚನೆ ನಡೆಸಿದ. ಅನಂತರ ತನ್ನ ಸೇನೆಯನ್ನು ಸಜ್ಜುಗೊಳಿಸಿ, ಸೇನಾಪತಿಗೆ ಅಪ್ಪಣೆ ಇತ್ತ.

'ಸೇನಾಪತಿಯೆ, ನನ್ನ ಖಡ್ಗ ತೆಗೆದುಕೊಂಡು ಬಾ, ಮೊದಲು ನಾನು ವಿಷ್ಣು, ಶಿವ ಮೊದಲಾದವರನ್ನು ಗೆಲ್ಲುವೆನು. ಅನಂತರ ಪರ್ವತರಾಜಕುಮಾರಿಯಾದ ಉಮೆಯನ್ನು ಅಪಹರಿಸುವೆನು. ಇದರಲ್ಲಿ ನನ್ನದೇನು ತಪ್ಪು? ಮೊದಲು ಅವಳೇ ನನ್ನ ಮನಸ್ಸನ್ನು ಅಪಹರಿಸಿದ್ದಾಳೆ. ಆದ್ದರಿಂದ ನಾನು ಅವಳನ್ನು ಅಪಹರಿಸುತ್ತೇನೆ. ಆ ಅಂಧಕಾಸುರನ ಒಬ್ಬ ವಿವೇಕಿ ಮಂತ್ರಿ ಅವನ ಬಳಿಗೆ ಬಂದು ಹೇಳಿದ. ''ಪ್ರಭು, ತಮ್ಮ ಚಿರಂಜೀವ ಕನಕ ರಾಜಕುಮಾರನು ಹೆರವರ ಹೆಣ್ಣನ್ನು ಹೊತ್ತು ತಂದು ಬಲಾತ್ಕರಿಸಿದ್ದ. ಅವನ ಪರಸ್ತ್ರೀ ಅಪಹರಣದಿಂದ ದೇವೇಂದ್ರನು ಸಿಟ್ಟಿಗೆದ್ದು ಅವನನ್ನು ಕೊಂದುಹಾಕಿದ್ದಾನೆ.'' ಮಂತ್ರಿಯ ಈ ಮಾತು ಕೇಳಿ, ಅಂಧಕಾಸುರನಿಗೆ ಮತ್ತಿಷ್ಟು ಕೋಪ ಕೆರಳಿತು. 'ಹಾಗಿದ್ದರೆ ಮೊದಲು ಆ ಇಂದ್ರ, ಚಂದ್ರ, ಚಂದ್ರಚೂಡ ಮೊದಲಾದವರನ್ನು ನಾನು ಸಂಹರಿಸಿಬಿಡುತ್ತೇನೆ.'

ಅಂಧಕಾಸುರನ ಈ ಭೀಷ್ಮ ಪ್ರತಿಜ್ಞೆಗೆ ಇಂದ್ರ ಹೆದರಿ ಕೈಲಾಸ ಪರ್ವತಕ್ಕೆ ಓಡಿ ಶಂಕರನ ಮುಂದೆ ಕೈ ಜೋಡಿಸಿ ಬೇಡಿಕೊಂಡ. ''ಮಹಾದೇವ, ಅಂಧಕ ದೈತ್ಯನಿಂದ ನನಗೆ ಅಭಯ ನೀಡು. ಅವನ ಮಗನಾದ ಕನಕನನ್ನು ನಾನು ಸಂಹರಿಸಿದ್ದೇನೆ. ಸ್ತ್ರೀಲೋಲುಪನಾದ ಆ ದೈತ್ಯನು ಪರಸ್ತ್ರೀಯರನ್ನು ಅಪಹರಿಸಿ ಬಲಾತ್ಕಾರದಿಂದ ಭೋಗಿಸುತ್ತಲೇ ಇದ್ದ. ಅಂತಹ ದೈತ್ಯನನ್ನು ಸಂಹರಿಸುವುದು ನಿನ್ನ ಕಾರ್ಯ, ನಿನ್ನ ಕಾರ್ಯವನ್ನೇ ನಾನು ಮಾಡಿದ್ದೇನೆ. ತನ್ನ ಮಗನನ್ನು ಕೊಂದ ಸಿಟ್ಟಿನಿಂದ ಆ ಅಂಧಕನು ನನ್ನನ್ನು ಸಂಹರಿಸಲು ಉದ್ಯುಕ್ತನಾಗಿದ್ದಾನೆ. ಆ ದುಷ್ಟನನ್ನು ನಿಗ್ರಹಿಸಿ ನನ್ನನ್ನು ಕಾಪಾಡಬೇಕು'' ದೇವೇಂದ್ರನ ಮಾತು ಕೇಳಿ ಶಂಕರನು-

''ಸುರರಾಜ, ನೀನು ಹೆದರಬೇಡ, ನಾನು ನಿನಗೆ ಅಭಯ ನೀಡಿದ್ದೇನೆ'' ಎಂದು ಆಶ್ವಾಸನವಿತ್ತು ಅಭಯ ಪ್ರದಾನ ಮಾಡಿದನು. ಅನಂತರ ಕೈಲಾಸದಿಂದ ಹೊರಟ ಆ ಮಹಾದೇವನ ಆ ದುಷ್ಟ ದೈತ್ಯನ ವಿನಾಶಕ್ಕಾಗಿ ಕುಶಸ್ಥಲಿಗೆ ಬಂದನು, ಅಲ್ಲಿ ಭಯಂಕರವಾದ ಬೃಹತ್ ಶರೀರವನ್ನು ತಾಳಿದನು. ಫೊತ್ಕರಿಸುವ ಹರಿಯುವ ಹಾವುಗಳಿಂದಲೂ, ಹಾವುಗಳ ಹೆಡೆಯ ಮೇಲಿನ ರತ್ನ ಕಾಂತಿಗಳಿಂದಲೂ ಉರಿಯುವ ಅಗ್ನಿ ಪರ್ವತದಂತೆ ಆ ಶಿವನ ಕಾಲಾಂತಕ ಸ್ವರೂಪವು ವಿಜೃಂಭಿಸಿತು. ವಕ್ರ ಚಂದ್ರನಂತೆ ಅಂಕುಡೊಂಕಾದ ಕೋರೆದಾಡೆಗಳುಳ್ಳ ಅವನ ಮುಖವು ಪಾತಾಳ ಲೋಕದಂತೆ ಭೀಕರವಾಗಿತ್ತು. ಘೋರ ಧ್ವನಿಯನ್ನು ಮಾಡುತ್ತಿತ್ತು. ಸಿಂಹದ ಚರ್ಮ ಉಟ್ಟು, ಹುಲಿದೊಗಲ ತೊಟ್ಟು, ಚಂದ್ರಕಿರೀಟವನ್ನು ಮೇಲೆಕ್ಕೆ ಕಟ್ಟಿಕೊಂಡು, ದಾನವಾಧಮನ ನಾಶಕ್ಕಾಗಿ ಭವನು ಭೂಮಿಗೆ ಇಳಿದು ಬಂದನು.

'ಅಂಜಬೇಡಿರಿ' ಎಂದು ದೇವತೆಗಳನ್ನು ತನ್ನ 'ರವ' ಎಂದರೆ ಧ್ವನಿಯಿಂದ ಆಶ್ವಾಸನಗೈಯುವ ರುದ್ರದೇವರ ಆ ಭೈರವ ರೂಪವನ್ನು ಕಂಡು ಅಂಧಕಾಸುರನು ತನ್ನ

ದೈತ್ಯ ಸೇನೆಯೊಂದಿಗೆ ಯುದ್ಧಸನ್ನದ್ಧನಾಗಿ ನಿಂತುಕೊಂಡನು ಮತ್ತು ಹಲ್ಲು ಕಡಿಗು ನಿಶಿತವಾದ ಬಾಣಗಳಿಂದ ಅಸಂಖ್ಯ ದೇವತೆಗಳನ್ನು ಪ್ರಹರಿಸತೊಡಗಿದನು.

ದೇವತೆಗಳೂ ಕೂಡ ಮಹಾದೇವನಿಗೆ ಬೆಂಬಲಿಗರಾಗಿ ನಿಂತು ದೈತ್ಯಸೇನೆಯೊಂದಿಗೆ ನಿಕರದಿಂದ ಹೋರಾಡತೊಡಗಿದರು. ಘನಘೋರವಾದ ಈ ದೇವಾಸುರ ಸಂಗ್ರಾಮ ಮಧ್ಯದಲ್ಲಿ ದೇವೇಂದ್ರ, ಮಹಾದೇವರು ಕೂಡಿ ಬೆಂಕಿ ಉಗುಳುವ ಬಾಣಗಳಿಂದ ಅಸಂಖ್ಯ ದಾನವರನ್ನು ಸೀಳಿಹಾಕಿದರು. ಅದರಿಂದ ಕ್ರೋಧೋನ್ಮತ್ತನಾದ ಅಂಧಕನು ಭೈರವರೂಪಿ ಶಿವನ ಮೇಲೆ ಏರಿಹೋಗಿ ಅವನ ಪಿನಾಕ ಧನುವನ್ನು ಕಿತ್ತುಕೊಂಡು, ಅದೇ ಆ ಭವನ ಬಿಲ್ಲಿನಿಂದ ಅವನನ್ನು ಬಲವಾಗಿ ಪ್ರಹರಿಸಿದನು.

ಪಿನಾಕ ಪ್ರಹಾರದಿಂದ ಪರಮೇಶ್ವರನು ನೆಲಕ್ಕೆ ಬಿದ್ದನು. ಕುಲಪರ್ವತಗಳು ಹೊಯ್ದಾಡಿದವು. ಸಮುದ್ರವು ಮೇರೆ ಮೀರಿ ಹರಿಯಿತು. ನಕ್ಷತ್ರಗಳು ತಾಕಲಾಡಿದವು. ನೆಲಕ್ಕೆ ಬಿದ್ದ ಶಿವನನ್ನು ಆ ದೈತ್ಯರು ಮತ್ತೆ ಗದೆಯಿಂದ ಹೊಡೆದರು. ಆದಿ ಶೇಷನಿಗೂ ಬಲವಾದ ಏಟು ಕೊಟ್ಟರು. ಆಗ ಆದಿಶೇಷನು ಹೆದರಿ ಬೇರೆ ಕಡೆಗೆ ಹರಿದು ಹೋದನು. ತುಸು ಹೊತ್ತಿನ ಮೇಲೆ ಶಿವನು ಮೇಲೆದ್ದನು. ಕೈಯಲ್ಲಿ ಕೊಡಲಿ ಹಿಡಿದು ಆಚೀಚೆ ನೋಡಿದನು. ಆದರೆ ಅಂಧಕಾಸುರನು ತನ್ನ ಮಾಯಾ ಶಕ್ತಿಯಿಂದ ಜಗತ್ತಿನಲ್ಲಿ ಎಲ್ಲೆಡೆಗೆ ಕತ್ತಲೆ ತುಂಬಿಸಿ ಎಲ್ಲಿಯೋ ಹೋಗಿದ್ದನು.

ಆ ಕಾರ್ಗತ್ತಲೆಯಲ್ಲಿ ಏನು ಕಾಣದೆ ಸ್ವ-ಪರ ಸೈನಿಕರ ಪರಿಜ್ಞಾನವಾಗದೆ ದೇವತೆಗಳು ದುಃಖ ಪಟ್ಟರು. ದೇವತಾ ದಳದ ಈ ದುರವಸ್ಥೆಯನ್ನು ಕಂಡು ಸೂರ್ಯನಾರಾಯಣನು ಒಮ್ಮೆಲೆ ನರರೂಪದಿಂದ ಅಲ್ಲಿ ಎದ್ದು ನಿಂತನು. ಅದರಿಂದ ಕತ್ತಲೆಯು ಕಳೆದು ಹೋಯಿತು. ದೇವತೆಗಳ ಕಂಗಳೆಲ್ಲವೂ ಅರಳಿ ನಿಂತವು. ಸ್ಕಂದನೇ ಮೊದಲಾದ ಸುರಕುಲದ ಧುರೀಣರೆಲ್ಲರೂ ಆ ದಿವಾಕರನನ್ನು ಸ್ತೋತ್ರ ಮಾಡಿದರು. ಸ್ವಯಂ ಶಿವನಾದರು ಅತ್ಯಂತ ಸಂತೋಷದಿಂದ ಮೈದುಂಬಿ ಸೂರ್ಯನಾರಾಯಣನನ್ನು ಭಕ್ತಿಯಿಂದ ಸ್ತೋತ್ರ ಮಾಡಿದನು.

**॥ ಮಹಾದೇವ ಉವಾಚ॥**

ಸತ್ವಾನುತ್ತಾರಯನ್ ದೇವಃ ಕರ್ಣ ಧಾರಾಯತೇ ಪ್ರಭುಃ ।
ಯಜಂತೋ ಜಂತವೋ ಭಕ್ತ್ಯಾಯಂ ದೇವಂ ವಿವಿಧಾಸ್ಸದಾ ।
ನಿಶ್ರೇಯಸಾಯ ಕಲ್ಪಂತೇ ತಂ ನತೋ ಭಾಸ್ಕರಂ ಪ್ರಭುಂ ॥

ಯಸ್ಯೋದಯಾದ್ರಿ ಶಿಖರೇ ಮುಕುಟಾಯಮಾನ
ಲೀಲಾಗಭಸ್ತಿಭಿರಲಂ ಕುಸುಮ ಪ್ರಕಾಶೈಃ ।
ವ್ಯಾಪ್ಯ ಸ್ವದೀಧಿತಿಗಣೈಃ ಪ್ರದಿಶೋ ದಿಶಶ್ಚ
ದೇದೀಪ್ಯತೇ ಸ ಸವಿತಾ ವಿಭವಾಯ ಲೋಕೇ ॥

ಬ್ರಹ್ಮೇಂದ್ರ ರುದ್ರಮರುದಚ್ಯುತವಹ್ನಿ ಪಾಥೊ
ನಾಥ ಪ್ರಯೋಗನಿಪುಣೈಶ್ಚ ಋಷೀಂದ್ರ ಸಂಘೈಃ ।
ಶ್ರೇಯೋಽರ್ಥಿಭಿಃ ಪ್ರತಿದಿನಂ ದಿವಸಾಂಗರಾಗೈಃ
ದಿವ್ಯಾಂಗರಾಗ ಪರಿಲಿಪ್ತ ಸಮಸ್ತದೇಹೈಃ ॥

ಪೂಜ್ಯಂ ವಪುಸ್ತವ ಸದಾ ಪ್ರಳಯೇ ಹಿ ವೇದ್ಯೈ
ಗೀರ್ಭಿರ್ವಿಚಿತ್ರಪದ ಮಂಡಲ ಮಂಡಿತಾಭಿಃ ।
ಯೇ ತ್ವಾಂ ಸ್ತುವಂತಿ ಪರಸದ್ಮನಿ ಸದ್ಮಹೀನಾ
ನಿತ್ಯಂ ಪ್ರಸಾರಿತಕರಾ ಭುವಿ ತೇ ಭವಂತಿ ॥

ಯೇ ದುಷ್ಟಕುಷ್ಠ ಪಿಟಕಾದಿಭಿರರ್ದಿತಾಂಗಾಃ
ಶೀರ್ಣತ್ವಚಃ ಕುನಖಿನಶ್ಚ್ಯುತಕೇನಾಸಾಃ ।
ದೇವೇಶ ತೇಽಪಿ ತವ ಪಾದನತಾ ಪಭವಂತಿ
ಸದ್ಯೋ ದ್ವಿರಷ್ಟಶರದಾಕೃತಯೋ ಮನುಷ್ಯಾಃ ॥

ಸಾಮೇತಿ ಸಾಮಗಗಣಾ ಹಿ ಮಖಾರ್ಥಕಂ ತ್ವಾ
ಮಧ್ವರ್ಯವೋ ಋಗಿತಿ ಬಹ್ವೃಚ ಮುಖ್ಯಪುಂಸಃ ।
ತ್ವಾಮೇವಮಾರ್ಯಮಿತಿ ಕಾರ್ಯವಿದೋಽಧಿಗಂತುಂ
ನಾಗಾಶ್ಚ ವೇತ್ತಿ ಪಿತರೊಽಪ್ಯಥ ಸರ್ವಗಂಧಂ ॥

ಮಾಯೇತಿ ಚೋಪನಿಷದರ್ಕ ಷದೇವ ದಾವಾ
ಮರ್ತ್ಯಾಸ್ತಥಾ ವಯಮಿವೇಹ ಉಪಾಸತೇಽಮೀ ।
ಗಂಧರ್ವ ಕಿನ್ನರ ಗಣಾಸ್ಸಹ ಚಾರಣೈಸ್ತು
ರೂಪಂ ತಥಾ ಚ ಭಗವನ್ಪ್ರತಿಪದ್ಯಸೇ ತ್ವಂ ॥

ಯೇ ನಾರ್ಚಯಂತಿ ಸತತಂ ಭವತೋರ್ಚ್ಯಮರ್ಚಿ
ಸ್ತೇರ್ಚಿಷ್ಣಂತಾಪಿತ ದಿಗಂಬರ ವಿತ್ತಹೀನಾಃ ।
ಕ್ಷುತ್ಕಾಮಕಂಠ ಜಠರಾ ಘಟಕರ್ಪರೇಣ
ಭಿಕ್ಷಾಮಟಂತಿ ಪರವೇಶ್ಮಸು ತೀರ್ಥಹೀನಾಃ ॥

ಉತ್ಫುಲ್ಲ ಕೋಶನದಕೋಶವಿಶಾಲನೇತ್ರ-
ಮೀಷದ್ವಿಲಾಸ ಲಲಿತಾಕಪೋಲತಾರಂ ।
ಕಾಮಂ ಪ್ರಶಸ್ತತರ ಸುಂದರಹಾರ ರಮ್ಯ
ಮುತ್ತುಂಗ ಪೀವರ ಪಯೋಧರಭಾರಖಿನ್ನಂ ॥

ರಂಭೋಪಮೋರು ಪೃಥುಪೀನ ನಿತಂಬಬಿಂಬಾ
ನ್ಮಧ್ಯಕ್ವಣನ್ಮಣಿ ರಣದ್ರಶನಾಕಲಾಪಂ ।
ವೃಂದಂ ಲಲಾಟತಟಕೋಟಿಪಟಾಂತಲಂಬಿ
ಹೇಮಾಂಚಲಾಂಚಿತಮುಖಂ ಕುಲಪಾಲಿಕಾನಾಂ ॥

ಕಾಂತಂ ಗೃಹೇಷು ಕಲಗದ್ಗದಭಾಷಿತಾನಾಂ
ಝೇಂಕಾರನೂಪುರರವೇಣ ವಿರಾಜಿತಾನಾಂ ।
ತೇಷಾಂ ಕೃಪಾನುಕರಮಿಂದು ಸಮಾನಕಾಂತಂ
ಯೈರರ್ಚಿತೋಽಸಿ ಭಗವನ್ಭವಮೋಚನಸ್ತ್ವಂ ॥

ಬ್ರಹ್ಮತ್ವಮೇವ ಹರಿರಸ್ಯನಿಲೋऽನಲೋऽಸಿ
ರುದ್ರೋऽಂತಕೋಸಿ ವರುಣೋऽಸ್ಯಮರಾಧಿಕೋऽಸಿ ।
ಸೋಮೋऽಸಿ ವಾಯುರಸಿ ಭೂರಸಿ ಚೇಶ್ವರೋऽಸಿ
ಯಜ್ಞೋऽಸಿ ವಿತ್ತಪತಿರಪ್ಯಪರಾಜಿತೋऽಸಿ ।

ಯೇ ಸಪ್ತಸಪ್ತಿಸುರವಾಹರಣೇನ ಮುಕ್ತಾ
ಭೂಮಾವಥೇತಿ ತರಸೋರುತರಂ ತರೀತಾಃ
ವ್ಯೋಮ್ನೈತದಂತರಹಿತಂ ಪರಿತೋ ಹಿ ಗತ್ವಾ
ಗಚ್ಛಂತಿ ನ ಶ್ರಮಪದಂ ಹಿ ಮನಾಗಪೀಮೇ ॥

ಧ್ಯಾನೈಕಯೋಗನಿರತಾಶ್ಚ ಸಮಾಧಿಭಾವಾ
ದ್ಧ್ಯಾತ್ವಾ ಪದಾಂತರ ತುರೀಯಮನಂತಮೂರ್ತೇ
ಮುಕ್ತಾಮಯಾಸ್ತನುಭೃತೋ ನ ಭಿಯಾಭಿಯುಕ್ತಾ-
ಸ್ತದ್ಬ್ರಹ್ಮಶಾಶ್ವತಮಚಿಂತ್ಯಮನಾದ್ಯನಂತಂ ॥

ಜನ್ಮಾಧಿರೋಗರಹಿತಂ ಪರಮಂ ಪುರಾಣ
ಮೀಶಂ ಜರಾಮರಣಶೋಕಭಯಾತಿರಿಕ್ತಂ ।
ಸ್ಥೂಲಾನುಭಾವನಗಣಾಗಣಿತಂ ವಿಶುದ್ಧಂ
ವೇದಾಂತವಾದಿಭಿರಲಂ ಪರಿಪಠ್ಯತೇ ಯತ್ ॥

ತ್ವಾಮಗ್ನಿ ಪುಂಜವಪುಷಂ ತಪಸಾಂ ನಿವಾಸಂ
ಯಾತಾ ದಿವಂ ಸುಚಿರಕಾಲ ಮುಪಾಸ್ಯ ಭಕ್ತಾಃ ।
ಭಾಸಸ್ಸು ರಾಸುರಸಮೂಹಶಿರೋನಿಘೃಷ್ಟ-
ಪಾದಾರವಿಂದಯುಗಳಾಮಲಚಾರುಮೂರ್ತೇ ॥

ಭೂತೇಶ ಭೂತವರದಾಸಕೃದವ್ಯಯಾತ್ಮ-
ನ್ವ್ಯೋಮಾಟ್ಟಹಾಸ ಸವಿತರ್ಭವನೈಕದೀಪ ।
ಋಕ್ಸಾಮಮಂತ್ರ ಯಜುಷಾಮಧಿವಾಸ ನಾಮ
ಸೃಷ್ಟಿಸ್ಥಿತಿ ಪ್ರಳಯಕಾರಣ ಲೋಕಪಾಲ ॥

ದೀನಸ್ಯ ದೇವಕೃಪಣಸ್ಯ ಭವೇ ಭವೇಹ
ಮಗ್ನಸ್ಯ ಚಾರುದವಿಚಾರ ಮನೋರಥಾನಿ ।
ಶಶ್ವದ್ಯತೀಶ್ವರ ಶಶೀಕರಕಂಕಘೋರೋ
ತ್ಪಾತೋ ಜರಾಮರಣಶೋಕ ರಂಗಾಂತರಸ್ಯ ॥

ಯಃ ಪ್ರಾತಸ್ಸಾಯಮಿದಂ ಮಧ್ಯಾಹ್ನೇ ವಾ ಪರೇಚ್ಚ ದೀಪ್ತಾಂಶೋಃ
ಸಾಲೋಕ್ಯಂ ಯಾತಿ ರವೇಃ ಪ್ರಾಪ್ನೋತಿ ಧರ್ಮಾರ್ಥಕಾಮಾಂಶ್ಚ ॥

ನಿತ್ಯಂ ತಸ್ಮಾಚ್ಚ ಸೂರ್ಯಾಚ್ಚ ಮನಸೋಭಿಹಿತಂ ಚ ಯತ್ ।
ನಮಸ್ತೇ ದೇವದೇವೇಶ ಭಕ್ತಾನಾಮಭಯಂಕರ ॥

**ಸುಬ್ರಹ್ಮಣ್ಯ ನಮಸ್ತೇಸ್ತು ಸರ್ವದೇವನಮಸ್ಕೃತ ।**
**ತಿಗ್ಮಾಂಶೋ ವೈ ನಮಸ್ತುಭ್ಯಂ ಜಗತಶ್ಚಕ್ಷುಷೇ ನಮಃ ॥**

ಯಾವ ದೇವನು ಸಜ್ಜನರನ್ನು ಸಂಸಾರ ಸಾಗರದಿಂದ ಕುಶಲ ಅಂಬಿಗನಂತೆ ಪಾರು ಮಾಡುವನೋ ಅಂತಹ ಸೂರ್ಯನನ್ನು ನಾನು ನಮಸ್ಕರಿಸುತ್ತೇನೆ. ಯಾವ ದೇವನನ್ನು ವಿವಿಧ ಪ್ರಾಣಿಗಳು ಭಕ್ತಿಯಿಂದ ಪೂಜೆ ಮಾಡಿ ಮೋಕ್ಷವನ್ನು ಪಡೆಯುವರೋ ಅಂತಹ ಸೂರ್ಯನನ್ನು ನಾನು ನಮಸ್ಕರಿಸುತ್ತೇನೆ. ಉದಯ ಪರ್ವತದ ಶಿಖರ ಸೀಮೆಯ ಮೇಲೆ ಮಣಿ ಮುಕುಟವನ್ನು ಇರಿಸಿದಂತೆ ಹೂಗಳ ಹೊಂಬಣ್ಣದಿಂದ ಹೊಳೆಯುವ ತನ್ನ ಕಿರಣಗಳಿಂದ ಲೀಲಾಜಾಲವಾಗಿ ದಶದಿಕ್ಕುಗಳನ್ನು ವ್ಯಾಪಿಸಿ ದೇದೀಪ್ಯಮಾನವಾಗಿ ಬೆಳಗುವ ಸೂರ್ಯನು ನಮಗೆಲ್ಲ ಕಲ್ಯಾಣ ಮಾಡಲಿ.

ಬ್ರಹ್ಮ, ಇಂದ್ರ, ರುದ್ರ, ವಿಷ್ಣು, ಅಗ್ನಿ, ವರುಣ ಮೊದಲಾದ ದೇವತೆಗಳು ಹಾಗೂ ಋಷಿಶ್ರೇಷ್ಠರು ಪ್ರತಿದಿನವೂ ಸೂರ್ಯಪಥದಲ್ಲಿ ನಿಂತುಕೊಂಡು ಕಲ್ಯಾಣ ಕಾಂಕ್ಷಿಗಳಾಗಿ ನನ್ನನ್ನು ಸ್ತೋತ್ರ ಮಾಡುತ್ತಾರೆ. ಸೂರ್ಯಾಂತರ್ಗತನಾದ ಪರಮಾತ್ಮನನ್ನು ಪ್ರಳಯ ಕಾಲದಲ್ಲಿ ವೇದಗಳು ಸುಂದರವಾಗಿ ಸ್ತೋತ್ರಮಾಡುತ್ತವೆ. ಕುಷ್ಠಾಂದಿ ರೋಗ ಪೀಡಿತರು ನಿನ್ನನ್ನು ನಮಸ್ಕರಿಸಿದರೆ ತಾರುಣ್ಯವನ್ನು ಹೊಂದುತ್ತಾರೆ. ಎಲ್ಲ ವೇದೋಪನಿಷತ್ತುಗಳು ದೇವ ಗಂಧರ್ವ, ಮಾನವರು ನಿನ್ನನ್ನು ಒಂದೊಂದು ರೂಪದಿಂದ ಪೂಜಿಸುತ್ತಾರೆ.

ನಿನ್ನನ್ನು ಪೂಜಿಸದ ನಾಸ್ತಿಕರು ಭಿಕ್ಷೆ ಬೇಡಬೇಕಾಗುವದು. ಕಳೆ, ಕಾಂತಿಹೀನ ರಾಗುವರು ಹಸಿವು ಬಾಯಾರಿಕೆಗಳಿಂದ ಬಳಲುವರು. ಭಕ್ತಿಯಿಂದ ನಿನ್ನ ಪೂಜೆ ಮಾಡಿದವರು ಮಾತ್ರ ಸುರ ಸುಂದರಿಯಂತಿರುವ ದಿವ್ಯ ಸ್ತ್ರೀಯರ ಸಹವಾಸದಿಂದ ಇಲ್ಲಿ ಸಂತೋಷಹೊಂದಿ ಸೌಭಾಗ್ಯ ಪಡೆದು ಕೊನೆಗೆ ಸಂಸಾರದಿಂದ ಮುಕ್ತರಾಗುತ್ತಾರೆ. ಬ್ರಹ್ಮಾದಿ ದೇವತೆಗಳಲ್ಲೂ ನೀನೇ ಅಂತರ್ಗತನಾಗಿ, ಭೂಮ್ಯಾಕಾಶಗಳನ್ನೆಲ್ಲ ಸಂಚರಿಸಿ, ಅಂತರಿಕ್ಷದ ತುಂಬ ಓಡಾಡಿ, ಆಯಾಸವಿಲ್ಲದೆ ಕಾಲಚಕ್ರನನ್ನು ಪರಿವರ್ತಿಸುತ್ತಿರುವಿ. ಧ್ಯಾನ ಸಮಾಧಿಯಿಂದ ನಿನ್ನನ್ನು ಕಂಡವರು ರೋಗ ಮುಕ್ತರಾಗಿ ಬ್ರಹ್ಮಾಪರೋಕ್ಷವನ್ನು ಹೊಂದುತ್ತಾರೆ. ಅನಂತರ ಜನನ ಮರಣಾದಿ ರೋಗ ರಹಿತರಾಗಿ ಪರಿಶುದ್ಧವಾದ ಆತ್ಮಾನಂದವನ್ನು ಭಗವದನುಗ್ರಹದಿಂದ ಪಡೆಯುವರು. ನಿನ್ನನ್ನು ಪೂಜಿಸಿದ ಭಕ್ತರು ದೇವವಂದ್ಯರಾಗಿ ಸ್ವರ್ಗಾಪವರ್ಗಗಳನ್ನು ಪಡೆಯುವರು. ಮೂರು ಲೋಕಗಳ ದೀಪದಂತಿರುವ ಸರ್ವವೇದ ಪ್ರತಿಪಾದ್ಯನಾದ ಜಗಜ್ಜನ್ಮಾದಿ ಕಾರಣನಾದ ಲೋಕಪಾಲನಾದ ಸೂರ್ಯದೇವನೆ, ಸಂಸಾರದಲ್ಲಿ ಮುಳುಗಿದ ದೀನನಾದ ನನ್ನ ಮನೋರಥಗಳನ್ನೆಲ್ಲ ಪೂರ್ಣಮಾಡು. ಭಕ್ತರು ನಿನ್ನನ್ನೇ ಸ್ವಾಮಿಯೆಂದು ನಂಬಿ ಸೇವೆ ಮಾಡಿ ಜನನ ಮರಣಗಳಿಂದ ಮುಕ್ತರಾಗುತ್ತಾರೆ. ಎಲ್ಲ ಪ್ರಾಣಿಗಳಿಗೂ ನೀನೇ ಸ್ವಾಮಿಯಾಗಿರುತ್ತಿ. ನೀನು ಎಲ್ಲರಿಗೂ ವರಪ್ರದನೂ ಆಗಿರುತ್ತಿ ಸರ್ವದೇವತೆಗಳಿಂದ ವಂದ್ಯನೂ, ಭಕ್ತರಿಗೆ ಅಭಯ ನೀಡುವವನೂ ದೇವ ದೇವೇಶನೂ ಜಗಚ್ಚಕ್ಷುವೂ ಆದ ಸೂರ್ಯದೇವನೇ ನಿನಗೆ ನನ್ನ ನಮಸ್ಕಾರವಿರಲಿ. ಮತ್ತೆ ನಿನಗೆ ನಮಸ್ಕಾರ''. ಮುಂಜಾನೆ, ಮಧ್ಯಾಹ್ನ, ಸಂಜೆ ಈ ಮೂರು ಕಾಲಗಳಲ್ಲಿ ಸೂರ್ಯ ಸ್ತೋತ್ರ ಪಠಿಸುವವನು ಸೂರ್ಯಲೋಕವನ್ನು ಪಡೆಯುವನು ಹಾಗೂ ಧರ್ಮ,ಅರ್ಥ ಕಾಮ ಮುಂತಾದ

ಪುರುಷಾರ್ಥ ಹೊಂದುವನು. ಸೂರ್ಯನೇ ನಿನಗೆ ಗೆಲುವಾಗಲಿ. ಈ ಅಂಧಕಾಸುರಗಿಂದ ನಾನು ಪೀಡಿತನಾಗಿದ್ದೇನೆ. ಜಗದೊಡೆಯನೇ, ನಾನು ಈಗ ಏನು ಮಾಡಲಿ? ಈ ದುಷ್ಟನನ್ನು ಹೇಗೆ ಸಂಹರಿಸಲಿ ?

**ಸೂರ್ಯ :-** ಈ ಪಾಪಿಷ್ಠನಾದ ಅಂಧಕಾಸುರನು ಮಹಾ ಮಾಯಾವಿ ಅವನನ್ನು ನೀನು ತ್ರಿಶೂಲದಿಂದಲೇ ಕೊಲ್ಲುವಿ. ನಿನಗೆ ಗೆಲುವು ನಿಶ್ಚಿತ. ಸೂರ್ಯನ ಮಾತು ಕೇಳಿ, ಶಿವ ತನ್ನ ಶೂಲಾಯುಧವನ್ನೆತ್ತಿ ಅಂಧಕಾಸುರನನ್ನು ಪ್ರಹರಿಸಿದನು. ಮಹಾಬಲಿಷ್ಠನಾದ ಅಂಧಕನು ಅದೇ ಶೂಲವನ್ನು ತಿರುಗಿ ಮಹಾದೇವನ ಮೇಲೆಯೇ ಮರುಪ್ರಯೋಗ ಮಾಡಿದ.

ಆದರಿಂದ ವ್ಯಥೆಗೊಂಡ ಶಿವನು ಪಾಶುಪತಾಸ್ತ್ರವನ್ನು ಅಂಧಕನ ಮೇಲೆ ಪ್ರಯೋಗಿಸಿದನು, ಅದರಿಂದ ಅಂಧಕಾಸುರನ ಮೈಯಿಂದ ನೆತ್ತರು ಚಿಮ್ಮ ತೊಡಗಿತ್ತು. ಆದರೆ ಪುಟಿಯುವ ಆ ಅಂಧಕನ ರಕ್ತದಿಂದ ಸಾವಿರಾರು ಅಂಧಕರು ಹುಟ್ಟಿದರು, ಆ ಸಾವಿರಾರು ಅಂಧಕರಿಂದ ಮತ್ತೆ ಸಾವಿರಾರು ಅಂಧಕರು ಹುಟ್ಟಿ ಕೋಟಿ ಕೋಟಿ ಅಂಧಕಾಸುರರು ಬೆಳೆದು ಜಗತ್ತನ್ನೆಲ್ಲ ವ್ಯಾಪಿಸಿದರು. ಹೀಗೆ ಅಂಧಕರ ಜಾಲದಿಂದ ವಿಶ್ವವೆಲ್ಲ ತುಂಬಿಹೋಗಲು ಮಹಾದೇವನು 'ಇದೊಂದು ದೈತ್ಯ ಮಾಯೆ' ಎಂದು ತಿಳಿದನು. ಈ ಅಂಧಕ ಪ್ರಪಂಚದ ರಕ್ತವನ್ನೆಲ್ಲ ಹೀರಿ ಅವರನ್ನು ನಾಶಗೊಳಿಸಲು ಪರ ಶಿವನು ಒಂದು ಮಾತೆಯರ ಗಣವನ್ನು ನಿರ್ಮಿಸಿದನು.

ಬ್ರಾಹ್ಮೀ, ಶೌರೀ, ವಾಡವೀ, ಸೌಪರಣೀ, ವಾಯವೀ, ವಾರುಣೀ, ವಾರಾಹೀ, ನಾರಸಿಂಹೀ, ವೈಷ್ಣವೀ,ವಿಭಾವರೀ, ಶತಾನಂದೀ, ಭಗಾನಂದೀ, ಭಗಮಾಲಿನೀ, ಬಲಾ, ಅತಿಬಲಾ, ರಕ್ತಾ, ಸುರಭಿ, ಮುಖಮಂಡಿತಾ, ಮಾತ್ರನಂದಾ, ಸುನಂದಾ, ಕರಾಳೀ, ತಾಕಿನೀ, ರೇವತೀ, ಶಿಖಿಪಟ್ಟಿಕಾ ಮುಂತಾದ ಸ್ಪಷ್ಟರಾದ ಮಾತೆಯರು ಅಂಧಕನ ರಕ್ತದಿಂದ ಹುಟ್ಟಿದ ಎಲ್ಲ ಅಂಧಕರ ರಕ್ತವನ್ನು ಗಟಗಟನೆ ಕುಡಿದು ಬಿಟ್ಟರು.

ಅನಂತರ ಶಿವನು ತನ್ನ ತ್ರಿಶೂಲದಿಂದ ಅಂಧಕಾಸುರನನ್ನು ಸಂಹರಿಸಿದನು. ಆ ಅಂಧಕನ ಅಂದರೆ ಮೂಲ ಅಂಧಕನ ನೆತ್ತರನ್ನು ಕೂಡ ಈ ಎಲ್ಲ ಮಾತೆಯರು ಕುಡಿದು ಒಂದು ಹನಿಯೂ ಬೀಳದಂತೆ ನೆಕ್ಕಿ ಮುಕ್ಕಿದರು. ಆದರಿಂದ ಅಂಧಕನ ರಕ್ತ ಬಿಂದುವಿನ ಹೊಸ ಅಂಧಕಾಸುರರ ಜನನವಾಗದೆ, ಮೂಲ ಅಂಧಕನು ರಕ್ತಹೀನನಾಗಿ ಕೆಳಗೆ ಉರುಳಿದನು ಶೂಲಸಹಿತವಾಗಿ. ಇಷ್ಟಾದರೂ ಆ ದೈತ್ಯನ ಪ್ರಾಣ ಹೋಗಲಿಲ್ಲ. ರುದ್ರನು ತನ್ನ ಶೂಲದ ತುದಿಗೆ ಅಂಧಕನನ್ನು ಚುಚ್ಚಿ ದೇವಮಾನವರ ಸಾವಿರ ವರ್ಷ ಹಾಗೆಯೇ ಇಟ್ಟಿದ್ದನು. ಸಾವಿರ ವರ್ಷ ರಕ್ತಸೋರಿದರೂ ಆ ದೈತ್ಯ ಸಾಯಲೇ ಇಲ್ಲ. ಆ ದೈತ್ಯನು ಮಾತ್ರ ಶೂಲಗತ ಪ್ರಾಣನಾದರೂ ಕ್ಷೀಣದನಿಯಲ್ಲಿ ತನ್ನ ಅಂತಃಪ್ರಾಣದಲ್ಲಿ ಶಿವನನ್ನು ಅಖಂಡವಾಗಿ ಧ್ಯಾನ ಮಾಡುತ್ತಲೇ ಇದ್ದನು.

**ಭವಭಯಹರ ಭವ ಹರ ಪರಮ ಉದಾರ,**
**ಮಮ ಸುಖ ಕಾರಣ ನಿಖಿಲ ಸುರಪಾರ**
**ಶ್ರಿತಮರದಭಿಮತ ವಿತರಕ ದೇವ**
**ತವ ಚರಣಕಮಲ ವಿಹಾರಣ ಮಾರ**
**ತವೇಶ ಪಾದ ಪಂಕಜಂ ಕರೋತಿ ಯೋ ನರೋ ಹೃದಿ ।**

**ಸದೇಶ ತಸ್ಯ ವಾಂಛಿತಂ ದದಾಸಿ ಭಕ್ತಿಭಾವಿತಃ**
**ಮುನೀಶ್ವರಾಃ ಪುರಾ ಹರಂ ಭವಂತಮೇವಮಾದರಾತ್**
**ಪ್ರಪೂಜ್ಯ ಲಿಂಗ ರೂಪಿಣಂ ಸಮಾಪಿತಾ ಮನೋರಥಾನ್**

ಸಂಸಾರದ ಭಯವನ್ನು ಪರಿಹರಿಸುವ ಸಕಲ ದೇವಶ್ರೇಷ್ಠನಾದ ದೇವತೆಗಳ ಅಭೀಷ್ಟವನ್ನು ಕೊಡುವ ಶಂಕರನೆ, ನಿನ್ನ ಪಾದಕಮಲವನ್ನು ಆಶ್ರಯಿಸಿದ ನನಗೆ ಸುಖ ನೀಡು. ಹೃದಯದಲ್ಲಿ ಯಾವಾಗಲೂ ನಿನ್ನ ಪಾದಕಮಲವನ್ನು ಸ್ಮರಿಸಿ ಧ್ಯಾನ ಮಾಡುವವರಿಗೆ ನೀನು ಸಕಲ ಇಷ್ಟಾರ್ಥಗಳನ್ನು ಕೊಡುವಿ. ಆದುದರಿಂದ ಪ್ರಾಚೀನ ಮುನೀಶ್ವರರು ಲಿಂಗ ರೂಪಿಯಾದ ನಿನ್ನನ್ನು ಭಕ್ತಿಯಿಂದ ಪೂಜಿಸಿ ತಮ್ಮ ಮನೋರಥಗಳನ್ನು ಪಡೆದಿದ್ದಾರೆ.

ಮೂರ್ಖನಾದ ನಾನು ನಿನ್ನನ್ನು ಹೇಗೆ ಸ್ತೋತ್ರ ಮಾಡಬೇಕೆಂದು ಅರಿಯಲಾರೆ. ನೀನು ಭಕ್ತವತ್ಸಲನಲ್ಲವೆ? ನಿನ್ನ ಜೊತೆಗೆ ಯುದ್ಧ ಮಾಡಿದ್ದರೂ ನೀನು ನನ್ನ ಮೇಲೆ ದಯದೋರು. ನೀನು ಸರ್ವಸ್ವಾಮಿ.'' ಅಂಧಕಾಸುರನ ಈ ಸ್ತೋತ್ರ ಕೇಳಿ ಪ್ರೀತನಾದ ಪರಮೇಶ್ವರ. ಅವನನ್ನು ತನ್ನ ಗಣಾಧಿಪತಿಯನ್ನಾಗಿ ಮಾಡಿಕೊಂಡ. **'ಭೃಂಗಿರಿಟಿ'** ಎಂಬ ನಾಮವನ್ನು ದಯಪಾಲಿಸಿದನು. ಭೀಷ್ಮನೆ, ಸಂಸಾರದ ಭಯವನ್ನು ಅಪಹರಿಸುವ ಮಹಾದೇವನ ಮಹಿಮೆಯನ್ನು ನಿನಗಾಗಿ ಹೇಳಿದ್ದೇನೆ. ಇದರ ಶ್ರವಣದಿಂದ ಹರಭಕ್ತರ ಸಾಂಸಾರಿಕ ವಿಘ್ನಗಳೆಲ್ಲವೂ ಪರಿಹೃತವಾಗುವವು.

**ಬೀಷ್ಮ :-** ಮಾನವನಲ್ಲಿ ದೈವೀಗುಣಗಳು ಅರಳುವ ಮಾರ್ಗ ಯಾವುದು? ಮತ್ತು ಈ ಲೋಕದಲ್ಲಿ ವಾಸಿಸುವ ಮನುಷ್ಯನಿಗೆ ಸುಖ, ರಾಜ್ಯ, ಐಶ್ವರ್ಯ, ಕೀರ್ತಿ ಗೆಲುವು, ಆರೋಗ್ಯ, ಆಯುಷ್ಯ, ಪಾಂಡಿತ್ಯ, ಸಂತಾನ ಸಂಪತ್ತು, ಒಳ್ಳೆಯ ಬಂಧು ಬಳಗ ಮುಂತಾದ ಭೋಗಗಳೆಲ್ಲವೂ ದೊರಕುವ ದಾರಿ ಯಾವದು? ಇದಕ್ಕೆ ಯಾವುದಾದರೂ ಉಪಾಯವಿದ್ದರೆ ತಿಳಿಸು.

**ಪುಲಸ್ತ್ಯ :-** ಸದ್ಗುಣಗಳಿಂದ ಕೂಡಿದವನೇ ದ್ವಿಜನು. ಭೂಲೋಕದ ದೇವರಿದ್ದಂತೆ. ಬುದ್ಧಿವಂತನಾದ ದ್ವಿಜನು ಮೂರು ಲೋಕಗಳಲ್ಲಿ ಯುಗಾನುಯುಗಗಳಲ್ಲಿ 'ವಿಪ್ರದೇವ' ಅಥವಾ 'ಭೂದೇವ' ಎಂದು ಕರೆಯಲ್ಪಡುತ್ತಾನೆ. ಇಂತಹ ಭಗವದ್ಭಕ್ತರಾದ ಬ್ರಹ್ಮಜ್ಞಾನಿ ದ್ವಿಜರನ್ನು ಪೂಜಿಸಿ ದೇವತೆಗಳು ಸ್ವರ್ಗದಲ್ಲಿ ಸುಖ ಪಡೆಯುತ್ತಾರೆ. ಇಂತಹ ಬ್ರಹ್ಮಜ್ಞಾನಿಗಳನ್ನು ಪೂಜಿಸಿ ಈ ಲೋಕದಲ್ಲಿ ರಾಜರೂ ಸಹ ಶಾಂತಿ, ಸಂಪದ ಪಡೆಯುತ್ತಾರೆ.

ದ್ವಿಜನು ಎಲ್ಲ ಜನರಿಗೂ ಗುರು, ಧರ್ಮಮೂರ್ತಿ, ಪುಣ್ಯತೀರ್ಥ, ಒಳ್ಳೇ ಬ್ರಹ್ಮಜ್ಞಾನಿ ಎಂದರೆ ಒಂದು ದೇವಾಲಯವಿದ್ದಂತೆ. ಹಿಂದೆ ಬ್ರಹ್ಮದೇವನು ಇದೇ ಮಾತನ್ನು 'ಯಸ್ಯ ವಿಪ್ರಾಃ ಪ್ರಸೀದಂತಿ ತಸ್ಯ ವಿಷ್ಣುಃ ಪ್ರಸೀದತಿ' ಯಾರ ಮೇಲೆ ದ್ವಿಜರು ಪ್ರಸನ್ನರಾಗುವರೋ ಅವರ ಮೇಲೆ ಶ್ರೀ ಹರಿಯೂ ಪ್ರಸನ್ನನಾಗುವನು. ಅವರ ಸೇವೆ ಮಾಡಿದವನು 'ಅವನ' ಅನುಗ್ರಹ ಪಡೆಯುವನು.

ಯೋಗ್ಯ ದ್ವಿಜರ ದೇಹದಲ್ಲಿ ಯಾವಾಗಲೂ ಭಗವಂತನ ಸನ್ನಿಧಾನ ಇರುವದರಿಂದ ಅಂತಹ ದ್ವಿಜರ ಪೂಜೆಯಿಂದ ಕೂಡಲೇ ಭಗವತ್ಪ್ರೀತಿ ಉಂಟಾಗುವದು. ಅರ್ಹತೆಯುಳ್ಳ ಬ್ರಹ್ಮಜ್ಞಾನಿಗೆ ದಾನದಕ್ಷಿಣೆ ಇತ್ತು ಸತ್ಕರಿಸಿದರೆ ವಿಧಿಪೂರ್ವಕವಾಗಿ ಒಂದು ಯಜ್ಞ ಮಾಡಿದಂತೆ,

'ವಿಪ್ರಾನ್ಯಃ ಪೂಜಯೇನ್ನಿತ್ಯಂ ದಾನಮಾನಾರ್ಚನಾದಿಭಿಃ ।
ಕೃತಂ ಕ್ರತುಶತಂ ತೇನ ವಿಧ್ಯುಕ್ತಂ ಪ್ರಿಯದಕ್ಷಿಣಂ ॥'

**ನಾರದ** :- ವಿಪ್ರನ ಲಕ್ಷಣವೇನು ? ಎಂತಹ ವಿಪ್ರನು ಪೂಜಿಸಲು ಅರ್ಹನು ? ವಿಪ್ರರಲ್ಲಿ ಅಪೂಜ್ಯರು ಯಾರು ?

ಬ್ರಹ್ಮ:- 'ಪೂಜ್ಯಃ ಶ್ರೋತ್ರಿಯಕೋ ನಿತ್ಯಂ ಸದಾಚಾರ ಸಮನ್ವಿತಃ ।
ಸದ್ವ್ರತಃ ಕಲುಷೈರ್ಮುಕ್ತಸ್ತೀರ್ಥ ಭೂತೋ ಜನೋಽನಘಃ ॥

ವೇದಾಧ್ಯಯನ ಮಾಡಿ, ಸದಾಚಾರ ಸಂಪನ್ನನಾಗಿರುವ ವಿಪ್ರನು ಯಾವಾಗಲೂ ಪೂಜ್ಯನು. ಏಕಾದಶಿ ಮೊದಲಾದ ವ್ರತಗಳನ್ನು ಮಾಡುವ ಪಾಪರಹಿತನಾದ ಇಂತಹ ವಿಪ್ರನೆಂದರೆ ಒಂದು ಪವಿತ್ರ ತೀರ್ಥವಿದ್ದಂತೆ.

ಆದರೆ ಪಂಡಿತರ ಕುಲದಲ್ಲಿ ಹುಟ್ಟಿದರೂ ಸದಾಚಾರವಿಲ್ಲದ ದ್ವಿಜನನ್ನು ಪೂಜಿಸಬಾರದು. ಜಾತಿಯಿಂದ ದ್ವಿಜನಾಗಿ ಹುಟ್ಟಿದ್ದರೆ ಒಳ್ಳೆಯ ಸಂಸ್ಕಾರ ಪಡೆದು ವಿದ್ಯಾವಂತನಾಗಿದ್ದರೆ ಮಾತ್ರ ಅವನು ವಿಪ್ರನೆಂದೆನ್ನಲು ಯೋಗ್ಯ.

'ವಿದ್ಯಾಪೂತೋ ಮಂತ್ರಪೂತೋ ವೇದಪೂತಸ್ತಥೈವ ಚ ।
ತೀರ್ಥ ಸ್ನಾನಾದಿಭಿರ್ಮೇಧ್ಯೋ ವಿಪ್ರಃ ಪೂಜ್ಯತಮಃ ಸ್ಮೃತಃ ॥

ಅಧ್ಯಾತ್ಮ ವಿದ್ಯೆ ಪಡೆದು ಮಂತ್ರ ಸಿದ್ಧಿ ಹೊಂದಿ ವೇದಾಧ್ಯಯನ ಸಂಪನ್ನನಾಗಿ ತೀರ್ಥ ಸ್ನಾನಾದಿಗಳನ್ನು ಮಾಡಿ ವ್ರತೋಪವಾಸಾದಿ ಪುಣ್ಯ ಕರ್ಮಗಳಿಂದ ಪವಿತ್ರ ನಾದವನೇ ದ್ವಿಜನೆಂದು ಹೇಳಲ್ಪಟ್ಟಿದ್ದಾನೆ.

ನಾರಾಯಣೇ ಸದಾ ಭಕ್ತಶ್ಶುದ್ಧಾಂತಃಕರಣಸ್ತಥಾ ।
ಜಿತೇಂದ್ರಿಯೋ ಜಿತಕ್ರೋಧಃ ಸಮಸ್ಸರ್ವಜನೇಷು ಚ ॥

ಶುದ್ಧಾಂತಃಕರಣದಿಂದ ನಾರಾಯಣನಲ್ಲಿ ಭಕ್ತಿಯನ್ನು ಮಾಡುವವನೂ ಇಂದ್ರಿಯಗಳನ್ನು ಗೆದ್ದು, ಕಾಮಕ್ರೋಧಗಳನ್ನು ಜಯಿಸಿ, ಎಲ್ಲ ಜನರಲ್ಲಿಯೂ ಪ್ರೀತಿಯಿಂದ ಇರುವವನೂ ದ್ವಿಜ.

ಗುರುವೇದಾತಿಥೇರ್ಭಕ್ತಃ ಪಿತ್ರೋಶ್ಶುಶ್ರೂಷಣೇರತಃ ।
ಪರದಾರೇ ಮನೋ ಯಸ್ಯ ಕದಾಚಿನ್ನೈವ ಮೋದತೇ ॥

ಗುರುಗಳಲ್ಲಿ ಶ್ರದ್ಧೆಯಿರಿಸಿ ವೇದಾಧ್ಯಯನಮಾಡಿ ಅತಿಥಿಗಳನ್ನು ಪೂಜಿಸುವವನೂ ತಾಯಿ ತಂದೆಗಳ ಸೇವೆಮಾಡುವವನೂ ದ್ವಿಜನೆನಿಸುತ್ತಾನೆ. ಯಾರ ಮನಸ್ಸು ಎಂದೂ ಪರಸ್ತ್ರೀಯರ ವಿಷಯದಲ್ಲಿ ಚಂಚಲವಾಗುವದಿಲ್ಲವೊ ಅವನೇ ನಿಜವಾದ ದ್ವಿಜ.

ಪುರಾಣಕಥಕೋ ನಿತ್ಯಂ ಧರ್ಮಾಖ್ಯಾಯೀ ಚ ಸಂತತಂ ।
ಅಸ್ಯೈವ ದರ್ಶನಾನ್ನಿತ್ಯಮಶ್ವಮೇಧಾಧಿಕಂ ಫಲಂ ॥

ನಿತ್ಯವೂ ಪುರಾಣ ಹಾಗೂ ಧರ್ಮಶಾಸ್ತ್ರ ಮುಂತಾದವುಗಳನ್ನು ಹೇಳುತ್ತಲೇ ಇರಬೇಕು. ಈ ಎಲ್ಲ ಗುಣಗಳಿಂದ ಒಡಗೂಡಿದ ಧಾರ್ಮಿಕರ ಕುಲದಲ್ಲಿ ಜನಿಸಿದ ದ್ವಿಜನ ದರ್ಶನದಿಂದ ಅಶ್ವಮೇಧ ಯಾಗದ ಫಲವು ಬರುತ್ತದೆ. ನಿಜವಾದ ದ್ವಿಜನು -

**ಪರಸ್ಯ ನ ಹರೇದ್ಯಸ್ತು ತೃಣಮಪ್ಯಟವೀಗತಂ ।**
**ಮಿತ್ರಾ ಮಿತ್ರೇ ದಯಾಳುಸ್ಸ್ಯಾತ್ ಗಾಯತ್ರೀಂ ನಿತ್ಯಶೋ ಜಪೇತ್ ॥**

ಪರರ ಸೊತ್ತನ್ನು ಎಂದೂ ಅಪಹರಿಸಕೂಡದು, ಕಾಡಿನಲ್ಲಿರುವ ಹುಲ್ಲುಕಡ್ಡಿಕೂಡ ಸಂಬಂಧಿಸಿದ ಅಧಿಕಾರಿಗಳ ಆಜ್ಞೆಯಿಲ್ಲದೇ ಕೊಳ್ಳಬಾರದು, ಮಿತ್ರರಲ್ಲಿ, ಶತ್ರುಗಳಲ್ಲಿ ಕರುಣೆ ತೋರಿಸಬೇಕು. ನಿತ್ಯವೂ ಗಾಯತ್ರಿಯ ಮಂತ್ರವನ್ನು ಪಠಿಸಬೇಕು. ಇಂತಹವನಿಗೆ ಮಾತ್ರ ದ್ವಿಜನೆಂದು ಹೇಳಬೇಕು.

**ನಾರದ** :- ಗಾಯತ್ರಿಯ ಲಕ್ಷಣವೇನು? ಗಾಯತ್ರೀಮಂತ್ರದಲ್ಲಿರುವ ಪ್ರತಿಯೊಂದು ಅಕ್ಷರದ ಗುಣವೇನು! ಆ ಮಂತ್ರದ ಅಂತರ್ಗತ ಚರಣ ಗೋತ್ರ ಮುಂತಾದವುಗಳನ್ನೆಲ್ಲ ವಿವರಿಸಿರಿ.

**ಬ್ರಹ್ಮ** :- ಗಾಯತ್ರೀ ಮಂತ್ರಕ್ಕೆ 'ಗಾಯತ್ರಿ' ಎಂಬುದೇ ಒಂದು ಛಂದಸ್ಸು. ಸೂರ್ಯನೇ ಅದಕ್ಕೆ ದೇವತೆ. ವಿಶ್ವಾಮಿತ್ರ ಅದರ ಋಷಿ, ಬ್ರಹ್ಮ ಶಿರ, ವಿಷ್ಣು ಹೃದಯ, ಉಪನಯನದಲ್ಲಿ ಇದರ ವಿನಿಯೋಗ ಉಂಟು. ಇದರ ಗೋತ್ರ- ಸಾಂಖ್ಯಾಯನಸ ಗೋತ್ರ. ಮೂರು ಲೋಕಗಳೇ ಇದರ ಚರಣಗಳು. ಪೃಥ್ವೀ ಇದರ ಕುಕ್ಷಿ. ಪಾದದಿಂದ ಮಸ್ತಕದವರೆಗೆ ಇಪ್ಪತ್ತುನಾಲ್ಕು ಸ್ಥಾನಗಳು. ಇಪ್ಪತ್ತುನಾಲ್ಕು ಅಕ್ಷರ. ನ್ಯಾಸ ಪೂರ್ವಕವಾಗಿ ಈ ಬ್ರಹ್ಮ-ಗಾಯತ್ರೀ ಮಂತ್ರ ಜಪಿಸಿದರೆ ಮನುಷ್ಯನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಇದರಂತೆ ವಿಷ್ಣು ಮಂತ್ರ, ಶಿವ ಮಂತ್ರ, ದೇವೀ ಮಂತ್ರ, ಸೂರ್ಯ ಮಂತ್ರ, ಗಣೇಶ ಮಂತ್ರಗಳನ್ನು ಜಪಮಾಡಿದರೆ ದ್ವಿಜನು ಬ್ರಹ್ಮವರ್ಚಸ್ಸು ಪಡೆದು ಪೂಜ್ಯನಾಗುವನು. ದ್ವಿಜನಿಗೆ ಮುಖ್ಯವಾಗಿ ಪಾಠ, ಪ್ರವಚನ, ಮತ್ತು ಧರ್ಮಬೋಧೆ ಹಾಗೂ ಸದಾಚಾರ ಹಾಗೂ ಪುರಾಣ ಪ್ರವಚನ ಇವು ಮುಖ್ಯ ಕರ್ಮಗಳು.

**ಸ್ವಾಧ್ಯಾಯನಿರತೋ ವಿಪ್ರೋ ಯಃ ಪಠೇತ್ಪಾಠಯೇತ್ತ್ವರಾನ್ ।**
**ಧರ್ಮಂಚ ಶ್ರಾವಯೇಲ್ಲೋಕೇ ಸದಾಚಾರಂ ಶ್ರುತಿಂ ಸ್ಮೃತಿಂ**

**ಪುರಾಣಸಂಹಿತಾಂ ನೂನಂ ತಥೈವ ಧರ್ಮಸಂಹಿತಾಂ ।**
**ಶ್ರಾವಯಿತ್ವಾ ತು ಲೋಕೇಷು ಶ್ರಾವಯಿತ್ವಾ ದ್ವಿಜಾತಿಷು ॥**

**ಊರ್ವ್ಯಾಂ ವಿಷ್ಣು ಸಮಸ್ಸೋಪಿ ಪೂಜನೀಯೋ ನರೈಸ್ಸುರೈಃ**
**ಯದ್ದತ್ತಂ ಚಾಕ್ಷಯಂ ತಸ್ಯ ತೀರ್ಥ ಭೂತಾನಘಸ್ಯ ಚ ॥**

ಸ್ವಾಧ್ಯಾಯ ವ್ರತನಾಗಿ ವೇದ ಶಾಸ್ತ್ರ ಪುರಾಣ ಹಾಗೂ ಧರ್ಮಶಾಸ್ತ್ರಗಳ ಪಾಠ ಪ್ರವಚನ ಮಾಡುವ ದ್ವಿಜನು ವಿಷ್ಣುವಿಗೆ ಸಮಾನ. ಅವನಂತೆ ಯಥಾಯೋಗ್ಯವಾಗಿ ಮಾನವರಿಂದ ಪೂಜನೀಯ.

ಅವನೇ ಪವಿತ್ರ ತೀರ್ಥ. ಅವನಿಗೆ ಕೊಟ್ಟದ್ದೆಲ್ಲವೂ ಅಕ್ಷಯವಾಗುವದು. (ಇಲ್ಲಿ ಸಾಮ್ಯ ಎಂದರೆ ವಿಷ್ಣುವಿನ ಸನ್ನಿಧಾನೋಪೇತನಾದುದರಿಂದ ವಿಷ್ಣುವಿನಂತೆ ಯಥಾ ಯೋಗ್ಯ ಪೂಜ್ಯ ಎಂದು ಮಾತ್ರ ಇಟ್ಟುಕೊಳ್ಳಬೇಕು.) ಇಂತಹ ಅತ್ಯಂತ ಯೋಗ್ಯನೂ ಸ್ವಾಧ್ಯಾಯ ಪ್ರವಚನ ನಿರತನೂ ಆದ ದ್ವಿಜನು -

**ಚಾಂಡಾಲಸ್ಯ ಗೃಹೇ ತಿಷ್ಠನ್ ಭಾಸ್ಕರೋ ಜ್ವಲನೋ ಯಥಾ ।**
**ಯಾಜನಾಧ್ಯಾಪನಾಚ್ಚೈವ ತಥೈವಾಸ್ಯಪ್ರತಿಗ್ರಹಾತ್ ॥**

**ವಿಪ್ರಾಣಾಂ ನ ಭವೇದ್ದೋಷೋ ಜ್ವಲದರ್ಕಸಮಾಃದ್ವಿಜಾಃ ।**
**ತಾನ್ಪ್ರತಿಗ್ರಹಜಾನ್ ದೋಷಾನ್ ಪ್ರಾಣಾಯಾಮವ್ಯವಸ್ಥಿತಾಃ ।**
**ನಾಶಯಂತೀ ಹಪಾಪಾನಿ ವಾಯುರ್ಮೇಘಮಿವಾಂಬರೇ**
**ಗಾಯತ್ರೀಂ ಯೋ ಜಪೇನ್ನಿತ್ಯಂ ಪ್ರಾಣಾಯಾಮಸಮನ್ವಿತಾಂ ॥**

ಇಂತಹ ಜ್ಞಾನಿಯಾದ ಸದಾಚಾರಿ ದ್ವಿಜನು ಚಂಡಾಲನ ಮನೆಯಲ್ಲಿ ನಿಂತರೂ ಅಪವಿತ್ರನಾಗುವದಿಲ್ಲ. ಬಿಸಿಲು, ಬೆಂಕಿ, ಹೊಲೆಯರ ಮನೆಯಲ್ಲಿ ಹೊಕ್ಕದ್ದರಿಂದ ಮೈಲಿಗೆಯಾಗುವವೆ? ಜ್ಞಾನೋಪದೇಶವನ್ನೇ ಜೀವನದ ವ್ರತವಾಗಿ ಇಟ್ಟುಕೊಂಡ ಜ್ಞಾನಿಯು ಪಾಠ ಹೇಳಿ ಯಜ್ಞಮಾಡಿಸಿ, ಮದುವೆ ಮುಂಜಿವೆ ಮಾಡಿಸಿ ದುಷ್ಟಜನರ ಕಡೆಯಿಂದ ದಕ್ಷಿಣೆ ತೆಗೆದುಕೊಂಡರೂ ಅವನಿಗೆ ಪಾಪವಿಲ್ಲ. ಮುಗಿಲಲ್ಲಿಯ ಮೋಡಗಳನ್ನು ಗಾಳಿಯು ಚದುರಿಸುವಂತೆ ಪ್ರಾಣಾಯಾಮ ಹಾಗೂ ಗಾಯತ್ರೀ ಜಪಗಳಿಂದ ದ್ವಿಜರ ಪಾಪಗಳೆಲ್ಲವೂ ಹಾರಿ ಹೋಗುತ್ತವೆ. ಪಾಪಿ ಜನರಿಂದ ದಾನ ತೆಗೆದು ಕೊಂಡ ದೋಷವು ಗಾಯತ್ರೀ ಮಂತ್ರದ ಪ್ರಭಾವದಿಂದ ಅವರಿಗೆ ಬರುವದಿಲ್ಲ. ಆದುದರಿಂದ-

**'ಪ್ರಾಣಾಯಾಮೇನ ತಸ್ಮಾದ್ ಗಾಯತ್ರೀಂ ಜಪ ನಾರದ'**

ನಾರದನೆ, ಆದುದರಿಂದ ಪ್ರಾಣಾಯಾಮದಿಂದ ಒಡಗೂಡಿದ ಗಾಯತ್ರೀ ಮಂತ್ರ ಜಪಿಸು.

**ನಾರದ :-** ಪ್ರಾಣಾಯಾಮವನ್ನು ಹೇಗೆ ಮಾಡಬೇಕು? ಗಾಯತ್ರಿ ಮಂತ್ರದ ನ್ಯಾಸ ಕ್ರಮವೇನು?

**ಬ್ರಹ್ಮ :-** ಗುದ ಪ್ರದೇಶದಲ್ಲಿ 'ಅಪಾನ' ವಾಯು, ಹೃದಯದಲ್ಲಿ 'ಪ್ರಾಣ' ವಾಯು ಇರುವದು ಎಲ್ಲ ಪ್ರಾಣಿಗಳಿಗೂ ಸರ್ವ ಸಾಮಾನ್ಯ. ಆ ಅಪಾನ ಪ್ರದೇಶವನ್ನು ಆಕುಂಚನಗೊಳಿಸಿ ಪ್ರಾಣವಾಯುವಿನೊಡನೆ ಯೋಜಿಸಬೇಕು. ಪೂರಕದಿಂದ ಉಸಿರು ಎಳೆದು ಕುಂಭಕದಿಂದ ಸ್ತಂಭನಮಾಡಿ ರೇಚಕದಿಂದ ಹೊರಗೆ ಬಿಡಬೇಕು. ಹೀಗೆ ಪ್ರಾಣಾಯಾಮ ಮಾಡಿ ಅನಂತರ ಗಾಯತ್ರಿ ಜಪ ಮಾಡಬೇಕು. ಈ ಗಾಯತ್ರಿ ಮಂತ್ರದ ಪ್ರತಿ ಅಕ್ಷರಕ್ಕೂ ಒಂದೊಂದು ಅಧಿದೇವತೆ ಇದೆ. ಇದರ ಮೊದಲನೆಯ ವರ್ಣಕ್ಕೆ ಅಗ್ನಿ, ಎರಡನೆಯದಕ್ಕೆ ವಾಯು, ಮೂರನೆಯದಕ್ಕೆ ಸೂರ್ಯ, ನಾಲ್ಕನೆಯದಕ್ಕೆ ಅಂತರಿಕ್ಷ, ಐದಕ್ಕೆ ಯಮ, ಆರಕ್ಕೆ ವರುಣ, ಏಳಕ್ಕೆ ಬೃಹಸ್ಪತಿ, ಎಂಟಕ್ಕೆ ಪರ್ಜನ್ಯ, ಒಂಭತ್ತಕ್ಕೆ ಇಂದ್ರ, ಹತ್ತಕ್ಕೆ ಗಂಧರ್ವ, ಹನ್ನೊಂದಕ್ಕೆ ಪೂಷ, ಹನ್ನೆರಡಕ್ಕೆ ಮಿತ್ರ, ಹದಿಮೂರಕ್ಕೆ ತ್ವಷ್ಟಾ, ಹದಿನಾಲ್ಕಕ್ಕೆ ವಾಸವ, ಹದಿನೈದಕ್ಕೆ ಮರುತ್ತು, ಹದಿನಾರಕ್ಕೆ ಸೋಮ, ಹದಿನೇಳಕ್ಕೆ ಅಂಗಿರಸ, ಹದಿನೆಂಟಕ್ಕೆ ವಿಶ್ವೇದೇವ, ಹತ್ತೊಂಬತ್ತಕ್ಕೆ ಅಶ್ವಿನೀ ದೇವತೆಗಳು, ಇಪ್ಪತ್ತಕ್ಕೆ ಪ್ರಜಾಪತಿ, ಇಪ್ಪತ್ತೊಂದಕ್ಕೆ ಎಲ್ಲ ದೇವತೆಗಳು, ಇಪ್ಪತ್ತೆರಡಕ್ಕೆ ರುದ್ರ, ಇಪ್ಪತ್ತಮೂರಕ್ಕೆ ಬ್ರಹ್ಮ, ಇಪ್ಪತ್ತನಾಲ್ಕನೆಯ ಅಕ್ಷರಕ್ಕೆ ವಿಷ್ಣು, ಅಕ್ಷರಾಧಿ ದೇವತೆಗಳು ಆಗಿದ್ದಾರೆ.

ಅಗ್ನಿಯಿಂದ ಆರಂಭಿಸಿ, ಶ್ರೀ ವಿಷ್ಣುವಿನವರೆಗೆ ಎಲ್ಲ ಅಕ್ಷರಾಧಿಪತಿ ದೇವತೆಗಳನ್ನು ಧ್ಯಾನ ಮಾಡಿ, ಈ ಸರ್ವಾಂತರ್ಯಾಮಿಯಾದ ವಿಷ್ಣುವೂ ಗಾಯತ್ರಿ ಪ್ರತಿಪಾದ್ಯನಾದ ವಿಷ್ಣುವೂ ಒಂದೇ ಆಗಿದ್ದಾರೆ ಎಂಬ ಐಕ್ಯ ಚಿಂತನ ಮಾಡಿ ಶ್ರೀಹರಿಯು ಸರ್ವಾಂತರ್ಯಾಮಿ, ಸರ್ವದೇವೋತ್ತಮ ಎಂದು ತಿಳಿದರೆ ವೇದಾದಿ ಸಮಸ್ತವಾಙ್ಮಯವನ್ನು ಆ ಮನುಷ್ಯನು ತಿಳಿದಂತಾಗುವದು. ಇಂತಹ ಗಾಯತ್ರಿ ಮಂತ್ರ ಜಪ ಹಾಗೂ ಅರ್ಥಪರಿಜ್ಞಾನದಿಂದ ಬ್ರಹ್ಮ ಪದವಿಯನ್ನು ಯೋಗ್ಯತೆ ಇದ್ದ ಮನುಷ್ಯನು ಹೊಂದುತ್ತಾನೆ.

**'ತತ್ ಸವಿತುಃ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್'**

ಈ ಮಂತ್ರದಲ್ಲಿಯ ಇಪ್ಪತ್ತನಾಲ್ಕು ಅಕ್ಷರಗಳಲ್ಲಿಯ ಒಂದೊಂದು ಅಕ್ಷರವನ್ನು ತನ್ನ ದೇಹಾಂತರ್ಯಾಮಿಯಾದ ಪರಮಾತ್ಮನಲ್ಲಿ ನ್ಯಾಸಮಾಡಬೇಕು.

**'ತತ್'** ಎಂಬುದನ್ನು ಪಾದಗಳ ಅಂಗುಷ್ಠದಲ್ಲಿ, 'ಸಕಾರವನ್ನು ಹಿಂಬಡದಲ್ಲಿ, **'ವಿ'** ಯನ್ನು ಕಣಕಾಲುಗಳಲ್ಲಿ, **'ತು'** ಕಾರವನ್ನು ಮಂಡೆಗಳಲ್ಲಿ, **'ರೇ'** ಕಾರವನ್ನು ಗುಹ್ಯ ಸ್ಥಾನದಲ್ಲಿ, **'ಣ್ಯ'** ಕಾರವನ್ನು ವೃಷಣದಲ್ಲಿ, **'ಮ'** ಕಾರವನ್ನು ನಡುವಿನಲ್ಲಿ, **'ಭ'** ಕಾರವನ್ನು ಹೊಕ್ಕಳದಲ್ಲಿ **'ಗೋರ್'** ಹೊಟ್ಟೆಯಲ್ಲಿ **'ದೇ'** ಕಾರವನ್ನು ಎರಡೂ ಸ್ತನಗಳ ಮೇಲೆ, **'ವ'**ಕಾರವನ್ನು ಹೃದಯದಲ್ಲಿ, **'ಸ್ಯ'** ಕಾರವನ್ನು ಕಂಠದಲ್ಲಿ, **'ಧೀ'** ಕಾರವನ್ನು ಮುಖದಲ್ಲಿ, **'ಮ'** ಕಾರವನ್ನು ನಾಲಿಗೆಯ ಮೇಲಿನ ಅಂಗಳದಲ್ಲಿ, **'ಹಿ'** ಕಾರವನ್ನು ಮೂಗಿನ ತುದಿಯಲ್ಲಿ **'ಧಿ'** ಕಾರವನ್ನು ಕಣ್ಣುಗಳಲ್ಲಿ, **'ಯೋ'** ಕಾರವನ್ನು ಹುಬ್ಬುಗಳ ಮಧ್ಯದಲ್ಲಿ, **'ಯೋ'**ಕಾರವನ್ನು ನೆತ್ತಿಯಲ್ಲಿ, **'ನಃ'** ಕಾರವನ್ನು ಮುಖದ ಮೇಲೆ, **'ಪ್ರ'** ಕಾರವನ್ನು ಮುಖದ ಹಿಂದೆ, **'ಚೋ'**ಕಾರವನ್ನು ಮುಖದ ಪಶ್ಚಿಮ ಭಾಗದಲ್ಲಿ, **'ದ'** ಕಾರವನ್ನು ತಲೆಯ ಉತ್ತರ ಭಾಗದಲ್ಲಿ, **'ಯಾತ್'** ಎಂಬುದನ್ನು ತಲೆಯ ಮೇಲೆಯೂ ನ್ಯಾಸಮಾಡಿ ಬ್ರಹ್ಮ, ವಿಷ್ಣು, ಶಿವ ಮೂರು ದೇವತೆಗಳ ಸನ್ನಿಧಾನವು ನನ್ನಲ್ಲಿ ಇದೆ ಎಂದು ಭಾವಿಸಬೇಕು. ಸಾಯಂಕಾಲದಲ್ಲಿ ಮಾಡತಕ್ಕ ನ್ಯಾಸವನ್ನು ಹೇಳುತ್ತೇನೆ ಕೇಳು.

**'ಓಂ ಭೂಃ'** ಎಂಬ ಪದದಿಂದ ಹೃದಯ **'ಓಂ ಭುವಃ'** ಎಂಬ ಪದದಿಂದ ತಲೆಯಲ್ಲಿಯೂ, **'ಓಂ ಸ್ವಃ'** ಎಂಬ ಪದದಿಂದ ಚಂಡಿಕೆಯಲ್ಲಿ **'ಓಂ ತತ್ಸವಿತುರ್ವರೇಣ್ಯಂ'** ಎಂದು ದೇಹದಲ್ಲಿ **'ಓಂ ಭರ್ಗೋದೇವಸ್ಯಧೀಮಹಿ'** ಎಂದು ನೇತ್ರಗಳಲ್ಲಿ **'ಓಂ ಧಿಯೋಯೋನಃ ಪ್ರಚೋದಯಾತ್'** ಎಂದು ಎರಡೂ ಕೈಗಳಲ್ಲಿ ನ್ಯಾಸ ಮಾಡಬೇಕು. **ಓಂ ಆಪೋಜ್ಯೋತಿ ರಸೋಽಮೃತಂ ॥ ಬ್ರಹ್ಮ ಭೂರ್ಭುವಸ್ಸ್ವರೋಮ್** ಎಂಬ ಮಂತ್ರದಿಂದ ನೀರನ್ನು ಕುಡಿದ ಮಾತ್ರದಿಂದ ಎಲ್ಲ ಪಾಪಗಳು ಪರಿಹಾರವಾಗುವವು.

**ಓಂ ಭೂಃ ಓಂ ಭುವಃ ಓಂ ಸ್ವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತುಃ ವರೇಣ್ಯಂ, ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್.'** ಹೀಗೆ ವ್ಯಾಹೃತಿ ಸಹಿತವಾಗಿ ಹನ್ನೆರಡು 'ಓಂ' ಕಾರಗಳಿಂದ ಯುಕ್ತವಾದ ಈ ಗಾಯತ್ರೀ ಮಂತ್ರವನ್ನು ಪ್ರಾತಃ ಸಂಧ್ಯೆ ಹಾಗೂ ಸಾಯಂ ಸಂಧ್ಯಾವಂದನೆಗಳಲ್ಲಿ ಹತ್ತಕ್ಕೆ ಕಡಿಮೆಯಿಲ್ಲದಷ್ಟು ಸಲ ಜಪಿಸಿ, ಸೂರ್ಯ ಪ್ರಾರ್ಥನೆಯನ್ನು ಮಾಡಬೇಕು.

ಓಂ ತತ್ಸವಿತುಃ ವರೇಣ್ಯಂ, ಭರ್ಗೋದೇವಸ್ಯ ಧೀಮಹಿ ।
ಧಿಯೋಯೋನಃ ಪ್ರಚೋದಯಾತ್॥

ಈ ಷಟ್ಕುಕ್ಷಿ ಲಕ್ಷಣವಾದ ವ್ಯಾಹೃತಿ ಸಹಿತವಾದ ಗಾಯತ್ರಿಯನ್ನು ಓಂ ಭೂಃ ಪಾದಾಭ್ಯಾಂ, ಓಂ ಭುವಃ ಜಾನುಭ್ಯಾಂ, ಓಂ ಸ್ವಹಃ ಕಟ್ಯಾಂ, ಓಂ ಮಹಃ ನಾಭೌ, ಓಂ ಜನಃ ಹೃದಯ, ಓಂ ತಪಃ ಕರಯೋಃ, ಓಂ ಸತ್ಯಂ ಲಲಾಟೇ ಓಂ ತತ್ಸವಿತುಃ ವರೇಣ್ಯಂ, ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್ ಇತಿ ಶಿಖಾಯಾಮ್' ಎಂದು ಅಡಿ, ಮೊಳಕಾಲು, ನಡು, ಹೊಕ್ಕಳ, ಹೃದಯ, ಹಣೆ ಮತ್ತು ಚಂಡಿಕೆಗಳಲ್ಲಿ ನ್ಯಾಸ ಮಾಡಿ ಗಾಯತ್ರೀಮಂತ್ರವನ್ನು ಜಪಿಸುವದು.

ಈ ಗಾಯತ್ರಿಮಂತ್ರ, ಜಪ ವಿಧಾನ ತಿಳಿಯದಿದ್ದವ ದ್ವಿಜನಾಗಿದ್ದರೂ ಅವನು ಅಧಮಾಧಮ, 'ಓಂ' ಎಂಬ ಬೀಜಾಕ್ಷರ ಸಹಿತವಾದ ಗಾಯತ್ರೀ ಮಂತ್ರದ ಅರ್ಥ ತಿಳಿದವನು ನಾಲ್ಕು ವೇದಗಳನ್ನು ತಿಳಿದಂತೆ. ಗಾಯತ್ರೀ ಜಪ ಮಾಡದ ದ್ವಿಜನು ಪಾಪಿಗಿಂತ ಕಡೆ. ಅವನಿಗೆ ಶ್ರಾದ್ಧದಲ್ಲಿ ಊಟಕ್ಕೆ ಹೇಳಬಾರದು. ಗಾಯತ್ರೀ ಜಪ ಮಾಡದ ದ್ವಿಜನು ಯಾವದೇ ಧರ್ಮ, ಕರ್ಮ ಮಾಡಿದರೂ ವ್ಯರ್ಥ, ಸ್ಮಶಾನದಲ್ಲಿಯ ಹೂವಿನಂತೆ ಆ ದ್ವಿಜನ ಜನ್ಮವೇ ನಿಷ್ಫಲ. ಹಿಂದೆ ನಾಲ್ಕು ವೇದಗಳನ್ನು ಹಾಗೂ ಗಾಯತ್ರಿ ಮಂತ್ರವನ್ನು ತೂಗಿ ನೋಡಲು, ಗಾಯತ್ರೀ ಮಂತ್ರವು ಗುರುತ್ವವುಳ್ಳದ್ದೆಂದು ಸಿದ್ಧವಾಯಿತು.

**'ದಶಭಿರ್ಜನ್ಮನಿ ಕೃತಂ ಶತೇನ ಚ ಪುರಾಕೃತಂ ।**
**ತ್ರಿಯುಗಂ ತು ಸಹಸ್ರೇಣ ಗಾಯತ್ರೀ ಹಂತಿ ಕಿಲ್ಬಿಷಂ ।'**

ಹತ್ತು ಗಾಯತ್ರಿ ಜಪ ಮಾಡಿದ ದ್ವಿಜನ ಈ ಜನ್ಮದಲ್ಲಿ ಮಾಡಿದ ಪಾಪಗಳು ಪರಿಹಾರವಾಗುತ್ತವೆ. ಪ್ರತಿದಿನ ನೂರು ಗಾಯತ್ರಿ ಜಪ ಮಾಡಿದರೆ ಜನ್ಮಾಂತರ ಪಾಪ ನಾಶವಾಗುತ್ತವೆ. ಸಹಸ್ರ ಗಾಯತ್ರಿ ಜಪ ಮಾಡಿದರೆ ಯುಗಯುಗಾಂತರದ ಪಾಪಗಳು ಭಸ್ಮವಾಗುತ್ತವೆ. ಇದರಂತೆ ಶ್ರೀ ವಿಷ್ಣುವಿನ ಧ್ಯಾನ ರೂಪವಾದ ಮಂತ್ರಗಳನ್ನು ಪ್ರತಿ ದಿವಸ ಶುಚಿರ್ಭೂತನಾಗಿ ಜಪಿಸುವ ಮನುಜನು ಸ್ವರ್ಗಾಪವರ್ಗಾದಿ ಪುಣ್ಯ ಸ್ಥಾನಗಳನ್ನು ಪಡೆಯುತ್ತಾನೆ. ಬಾಯಿಯಿಂದ ಹರಿಯ ನಾಮವನ್ನು ಜಪಿಸುತ್ತ ವಿಷ್ಣುವಿನ ಮೂರ್ತಿ ಅಥವಾ ದೇವಾಲಯ ಪ್ರದಕ್ಷಿಣೆ ಮಾಡಿದರೆ ಮೋಕ್ಷವನ್ನು ಪಡೆಯುತ್ತಾನೆ. ವೇದ ಶಾಸ್ತ್ರಗಳನ್ನು ಓದಿದ ಪಂಡಿತನ ದೇಹದಲ್ಲಿ ಯಾವ ಪಾಪವೂ ಉಳಿಯಲಾರದು. ಶಾಸ್ತ್ರಾಧ್ಯಯನ ಮಾಡಿದ ಜ್ಞಾನಿಯು ಪ್ರತಿ ದಿನವೂ ಗಂಗಾ ತೀರ್ಥದಲ್ಲಿ ಸ್ನಾನಮಾಡಿದ ಫಲವನ್ನು ಹೊಂದುತ್ತಾನೆ.

ಧರ್ಮಶಾಸ್ತ್ರ ವೇದಾಂತಗಳನ್ನು ಸಾರಿ ಹೇಳುವ ಮನುಷ್ಯನ ಗುಣಗಳನ್ನು ನಾನು ಹೇಳಲಿಕ್ಕೆ ಸಮರ್ಥನಲ್ಲ. ಸಾಕ್ಷಾತ್ ಶ್ರೀ ಹರಿಯೇ ಅವನಲ್ಲಿ ಸನ್ನಿಹಿತನಾಗಿ ಅಂತಹ ವಿದ್ವದ್ದ್ವಿಜನ ಮುಖಾಂತರ ಜನರಿಗೆ ಆಯುಷ್ಯ, ಐಶ್ವರ್ಯ, ಕೀರ್ತಿ ಜ್ಞಾನಗಳನ್ನು ವರದಾನ ರೂಪವಾಗಿ ಕರುಣಿಸುವನು.

**'ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯಚ ।**
**ಜಗದ್‌ಹಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ ॥**

ದ್ವಿಜರ ಮೇಲೆ ವಿಶೇಷ ವಾತ್ಸಲ್ಯದಿಂದ, ಅನುಗ್ರಹ ಮಾಡುವ ಕ್ರೀಡಾದಿಗಳಲ್ಲಿ ನಿರತನಾದ, ಗೋ, ದ್ವಿಜರೆಲ್ಲರಿಗೂ ಕಲ್ಯಾಣವನ್ನುಂಟು ಮಾಡುವ, ಜಗತ್ತಿಗೆ ಕ್ಷೇಮವನ್ನು ಮಾಡುವ, ಹಸುಗಳನ್ನು ಕಾಯುವ ಶ್ರೀ ಕೃಷ್ಣನಿಗೆ ನಮೋನಮಃ

ಈ ಮಂತ್ರದಿಂದ ಯಾವಾಗಲೂ ಶ್ರೀಹರಿಯನ್ನು ಪೂಜೆ ಮಾಡುವ ಮನುಷ್ಯನಿಗೆ ವಿಷ್ಣುವಿನ ಪ್ರಸಾದವು ದೊರಕುವದು. ಗಾಯತ್ರೀ ಮಂತ್ರದ ಮಹಿಮೆ, ಶ್ರೀ ಕೃಷ್ಣ ಮಂತ್ರದ ಫಲವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಓದುವವರು ಕೇಳುವವರು ಸ್ವರ್ಗಾದಿ ದಿವ್ಯಗತಿಯನ್ನು ಹೊಂದಿ ಶ್ರೇಯಸ್ಸನ್ನು ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಭೈರವ-ಭಯಂಕರನಾದ ಎಂಬ ನಲವತ್ತಮೂರನೇಯ ಅಧ್ಯಾಯ ಮುಗಿದುದು.*

## ಪುಣ್ಯಕಾರ್ಯದ ಫಲ

ಅಧ್ಯಾಯ - ೪೪

**ನಾರದ ಉವಾಚ**

**ತವ ಪ್ರಸಾದತೋ ಜ್ಞಾತೋ ವಿಪ್ರಃ ಪುಣ್ಯತಮಶ್ಚ ಯಃ ।**
**ಯಥಾ ಜಾನಾಮಿ ದೇವೇಶ ಕ್ರಿಯಯಾ ಬ್ರಾಹ್ಮಣಾಧಮಂ**
**ಬ್ರೂಹಿ ಶೀಘ್ರಂ ಸುರಶ್ರೇಷ್ಠ ಯದಿ ಪ್ರೀತಿಂ ಮಯೀಚ್ಛಸಿ ॥**

**ನಾರದ** :- ಬ್ರಹ್ಮದೇವ, ನಿನ್ನ ಪ್ರಸಾದದಿಂದ ಪುಣ್ಯಾತ್ಮನಾದ ದ್ವಿಜನಾರು ಎಂಬುದನ್ನು ನಾನು ತಿಳಿದುಕೊಂಡೆ; ಇನ್ನು ಅಧಮ, ದ್ವಿಜಾಧಮನೆಂದರೆ ಯಾರು? ಯಾವ ಪಾಪಕಾರ್ಯಮಾಡುವದರಿಂದ ದ್ವಿಜನು ಭ್ರಷ್ಟನಾಗುವನು ಇದನ್ನು ತಿಳಿಸು.

**ಬ್ರಹ್ಮ**:- ಹತ್ತು ವಿಧವಾದ ಸ್ನಾನಗಳಲ್ಲಿ ಒಂದೂ ಸ್ನಾನಮಾಡದ, ದೇವ ತರ್ಪಣ, ಋಷಿ ಹಾಗೂ ಪಿತೃತರ್ಪಣ ಗೈಯದ, ದೇವ, ಋಷಿ, ಪಿತೃ ಆರಾಧನೆ ಮಾಡದಿರುವ, ಸಂಧ್ಯಾವಂದನೆಬಿಟ್ಟ, ಸಂಯಮರಹಿತನಾದ ವಿಪ್ರನು ದ್ವಿಜಾಧಮನು.

ದೇವರ ಪೂಜೆ, ವ್ರತ, ವೇದಶಾಸ್ತ್ರ ಅಧ್ಯಯನ, ಸತ್ಯವಚನ ಪರಮಾತ್ಮನ ವಿಷಯಕವಾದ ಸರ್ವೋತ್ತಮತ್ವ ಜ್ಞಾನ ಇವುಗಳಿಂದ ರಹಿತನಾದ ದ್ವಿಜನು ಅಧಮ. ದ್ವಿಜನಿಗೆ ಐದು ವಿಧವಾದ ಸ್ನಾನಗಳನ್ನು ಹೇಳಿದ್ದಾರೆ. ಆಗ್ನೇಯಸ್ನಾನ, ವಾರುಣ, ಬ್ರಾಹ್ಮ, ವಾಯವ್ಯ, ದಿವ್ಯಸ್ನಾನ ಎಂದು ಪಂಚವಿಧ ಸ್ನಾನದ ಬಗೆಗಳು. ಆಗ್ನೇಯ ಸ್ನಾನವೆಂದರೆ ಭಸ್ಮ ಬಳಿದುಕೊಳ್ಳುವುದು. ನೀರಿನಿಂದ ಸ್ನಾನಮಾಡುವದು, ವಾರುಣ ಸ್ನಾನ. 'ಆಪೋಹಿಷ್ಠಾ.' ಎಂದು ಮಂತ್ರ ಹೇಳಿ ಮಾಡುವ ಸ್ನಾನ ಬ್ರಾಹ್ಮ ಸ್ನಾನ. ಆಕಳಕಾಲಿನ ಧೂಳಿನಲ್ಲಿ ಸ್ನಾನ ಮಾಡುವದು ವಾಯವ್ಯ ಸ್ನಾನ. ಎಂದರೆ ದನಗಳು ಅಡವಿಯಿಂದ ಬರುವಾಗ ಇಲ್ಲವೆ ಹೋಗುವಾಗ ಅವುಗಳ ಕಾಲಿನಿಂದೆದ್ದ ಧೂಳಿನಲ್ಲಿ ಅಥವಾ ಹಸುಕಟ್ಟುವ ಸ್ಥಳದಲ್ಲಿ ಇದ್ದ ಧೂಳಿ ಗೋಮಯ, ಗೋಮೂತ್ರ ಮೈಗೆ ಬಳಿದುಕೊಂಡು ಸ್ನಾನ ಮಾಡುವದಕ್ಕೆ ವಾಯವ್ಯ ಸ್ನಾನ ಎನ್ನುವರು.

ದೇವರ ಧ್ಯಾನ ಮಾಡುತ್ತ ನದೀತೀರ ಅಥವಾ ತಪೋವನಗಳಲ್ಲಿ ಕುಳಿತಾಗ ಬೇಸಿಗೆಯಲ್ಲಿ ಮೈಬೆವತು ಮಳೆಗಾಲದಲ್ಲಿ ಧಾರಾಕಾರ ಮಳೆ ನೀರಿನಿಂದ ಸ್ನಾನವಾದರೆ ಅದು ದಿವ್ಯಸ್ನಾನ ಎನಿಸುವದು. ಅಥವಾ ಬೇಸಿಗೆ, ಮಳೆಗಾಲಗಳಲ್ಲಿ ನಿರಂತರ ಹರಿಯುತ್ತಿರುವ ಮಹಾನದಿಗಳಲ್ಲಿ ಸ್ನಾನಮಾಡುವದೂ ಸಹ ದಿವ್ಯ ಸ್ನಾನವೆನಿಸುವದು. ಈ ಐದೂ ವಿಧವಾದ ಸ್ನಾನಗಳಲ್ಲಿ ಸ್ನಾನ ವಿಧಿಯಲ್ಲಿ ಹೇಳಿದ ಮಂತ್ರಗಳನ್ನು ಪಠಿಸಿದರೆ ಎಲ್ಲಿಯೇ ಸ್ನಾನಮಾಡಿದರೂ ತೀರ್ಥಸ್ನಾನದ ಫಲ ಪಡೆಯುತ್ತಾರೆ. ಈ ಐದು ವಿಧವಾದ ಸ್ನಾನ ವಲ್ಲದೆ ಇನ್ನೂ ಐದು ವಿಧ ಸ್ನಾನಗಳನ್ನು ಹೇಳುತ್ತೇನೆ ಕೇಳು. ತುಲಸೀ ಎಲೆಯನ್ನು ಹಾಕಿದ ನೀರಿನಿಂದ ಸ್ನಾನಮಾಡಿದರೆ ಅದಕ್ಕೆ ತುಲಸೀ ಸ್ನಾನವೆನ್ನುತ್ತಾರೆ. ಶಾಲಿಗ್ರಾಮ ಶಿಲೆಗೆ ಅಭಿಷೇಕ ಮಾಡಿ ಆ ನೀರನ್ನು ಪ್ರೋಕ್ಷಣ ಮಾಡಿಕೊಂಡರೆ ಅದೂ ಪುಣ್ಯ ಸ್ನಾನ. ಗೋವಿನ ಕೊಂಬನ್ನು ತೊಳೆದ ನೀರನ್ನು ಬೆರೆಸಿ, ಸ್ನಾನ ಮಾಡುವದೂ ಮೂರನೇಯ ವಿಧಾನ. ದ್ವಿಜರ ಪಾದ ತೊಳೆದು ಪ್ರೋಕ್ಷಣೆ ಮಾಡಿಕೊಳ್ಳುವದೂ ನಾಲ್ಕನೆಯ ವಿಧಿ. ಗುರುಗಳ ಹಾಗೂ ಪೂಜ್ಯರ ಪಾದೋದಕವನ್ನು ಸಂಪ್ರೋಕ್ಷಣೆ ಮಾಡಿಕೊಳ್ಳುವದು. ಅಥವಾ ಅವರು ಸ್ನಾನ ಮಾಡಿ ಬಿಟ್ಟ ನೀರಿನಿಂದ ತಾನೂ ಸ್ನಾನ ಮಾಡುವದು ಐದನೇಯ ಸ್ನಾನದ ವಿಧಾನ.

ಮೊದಲಿನ ಐದು ವಿಧ ಸ್ನಾನ, ಈಗ ಹೇಳಿದ ಐದು ವಿಧ ಸ್ನಾನ ಹೀಗೆ ಹತ್ತು ಬಗೆಯ ಸ್ನಾನ ವಿಧಿಯನ್ನು ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಈ ದಶವಿಧ ಸ್ನಾನಗಳಿಂದ ಯಜ್ಞ, ವ್ರತ, ದಾನ, ಧರ್ಮ, ತೀರ್ಥಯಾತ್ರಾ ಫಲವನ್ನು ಮನುಷ್ಯನು ಪಡೆಯುತ್ತಾನೆ. ದ್ವಿಜನಲ್ಲಿರುವ ಮುಖ್ಯ ದೋಷಗಳೆಂದರೆ ಸಂಧ್ಯಾವಂದನೆ ಮಾಡದಿರುವದು, ದಕ್ಷಿಣೆಯನ್ನು ಕರಾರು ಮಾಡಿ ಯಜ್ಞ ಮಾಡಿಸುವದು, ಜೋತಿಷ್ಯ ಹೇಳಿ ಉಪಜೀವನ ಮಾಡುವದು, ಮಡಿ ಮೈಲಿಗೆ ಮಾಡದಿರುವದು, ಕಳವು ಗುರುದ್ರೋಹ, ಖಡ್ಗ ಹಿಡಿದು ಯುದ್ಧಮಾಡುವದು, ಆಕಳ, ಎತ್ತು ಬಾಡಿಗೆ ಹೊಡೆಯುವದು, ಬಡಿಗತನ, ಬಡ್ಡಿ ವ್ಯವಹಾರ, ಮಕ್ಕಳ ಮಾರಾಟ, ವ್ಯಭಿಚಾರ, ಮಂತ್ರ ಮಾಟ, ಹೀನಜಾತಿಯರಲ್ಲಿ ನೌಕರಿ, ನಾಸ್ತಿಕ್ಯ, ಧರ್ಮನಿಂದೆ, ಬ್ರಹ್ಮದ್ವೇಷ ಮುಂತಾದವುಗಳು. ಏನೇ ತಪ್ಪನ್ನು ಮಾಡಿದರೂ ಜ್ಞಾನಿಯನ್ನು ಎಂದೂ ವಧಿಸಬಾರದು.

**ನಾರದ :-** ಮೇಲೆ ನೀನು ಮಾಡಬಾರದೆಂದು ಹೇಳಿದ ಪಾಪಕೃತ್ಯಗಳನ್ನು ಮಾಡಿ, ಮುಂದೆ ಪುಣ್ಯ ಕಾರ್ಯ ಮಾಡಿದರೆ ಆ ದ್ವಿಜರಿಗೆ ಎಂತಹಗತಿ ಆಗುವದು?

**ಬ್ರಹ್ಮ :-** ಮೊದಲು ಸರ್ವಪಾಪಗಳನ್ನು ಮಾಡಿ, ಅನಂತರ ಜಿತೇಂದ್ರಿಯನಾಗಿ ಸನ್ಮಾರ್ಗದಲ್ಲಿ ದೇವತಾರಾಧನೆ ಮಾಡುತ್ತ ಸ್ವಾಧ್ಯಾಯ, ಧ್ಯಾನ, ಪೂಜಾದಿ ಸತ್ಕರ್ಮಗಳನ್ನು ಆಚರಿಸುತ್ತಲಿದ್ದರೆ ಅವನ್ನು ಸರ್ವಪಾಪಗಳಿಂದ ಮುಕ್ತನಾಗಿ ಪುನಃ ಬ್ರಹ್ಮತ್ವ ಪಡೆಯುತ್ತಾನೆ. ಈ ವಿಷಯದಲ್ಲಿ ಪ್ರಾಚೀನಕಾಲದ ಒಂದು ರಮ್ಯವಾದ ಕಥೆಯನ್ನು ಹೇಳುತ್ತೇನೆ, ಕೇಳು.

ಹಿಂದೆ ಒಬ್ಬ ದ್ವಿಜನಿಗೆ ಒಬ್ಬ ಗಂಡು ಮಗನಿದ್ದನು. ತಂದೆಯು ಮಾಡಿಟ್ಟ ಸಂಪತ್ತು ತಾರುಣ್ಯದಲ್ಲಿ ಅವನ ಕೈಗೆ ಬಂದಿತು. ಯೌವ್ವನ, ಧನ ಸಂಪತ್ತು, ಅವಿವೇಕ ಮೂರೂ ಕೂಡಿದ ಆ ದ್ವಿಜ ಕುಮಾರನಿಗೆ ಮದ, ಮೋಹ, ಉನ್ಮಾದ ಎಲ್ಲ ದುರ್ಗುಣಗಳೂ ಬಂದವು. ಅವನು ಓರ್ವ ಚಾಂಡಾಲ ಸ್ತ್ರೀ ಸಮಾಗಮ ಮಾಡಿ ಅನೇಕ ಗಂಡು ಹೆಣ್ಣು ಮಕ್ಕಳನ್ನು ಹಡೆದನು. ತನ್ನ ಮನೆ ಬಿಟ್ಟು ಅವಳ ಮನೆಯಲ್ಲಿಯೇ ನೆಲೆಸಿದನು.

ಆದರೆ ಚಾಂಡಾಲಿಯ ಮನೆಯಲ್ಲಿದ್ದರೂ ಅವನು ಮದ್ಯ ಮಾಂಸ ಮುಟ್ಟಿರಲಿಲ್ಲ. ಆದರೆ ಆ ಹೊಲೆಯರ ಹೆಣ್ಣು ಅವನಿಗೆ ಮಾಂಸ ತಿನ್ನಲು, ಮದ್ಯ ಕುಡಿಯಲು ಒತ್ತಾಯಿಸುತ್ತಿದ್ದಳು. ಆಗ ಅವನು 'ಅದರಿಂದ ವಾಂತಿಯಾಗುವದು. ಈ ವಿಷಯದಲ್ಲಿ ನನಗೆ ಬಲವಂತ ಬೇಡ' ಎಂದೆನ್ನುತ್ತಿದ್ದನು. ಒಂದು ದಿನ ಆ ದ್ವಿಜನು ಬೇಟೆಯಾಡಿ ಬಳಲಿ ಮನೆಗೆ ಬಂದಿದ್ದನು. ಆಯಾಸದಿಂದ ಮನೆಯಲ್ಲಿ ಮಲಗುತ್ತಲೇ ನಿದ್ರೆ ಬಂದಿತು. ಆಗ ಆ ಚಾಂಡಾಲ ಕನ್ನಿಕೆಯು ಮದ್ಯದ ಪಾತ್ರೆ ತೆಗೆದುಕೊಂಡು ಬಂದು ನಿದ್ರೆಯಲ್ಲಿ ಬಾಯಿ ತೆರೆದ ಅವನ ಬಾಯಿಯಲ್ಲಿ ಮದ್ಯ ಸುರಿದಳು. ಕೂಡಲೇ ಆ ದ್ವಿಜನ ಮುಖದಿಂದ ಒಮ್ಮೆಲೆ ಅಗ್ನಿ ಉತ್ಪನ್ನವಾಗಿ ಎಲ್ಲ ಕಡೆಗೂ ಜ್ವಾಲೆಗಳು ಪಸರಿಸಿದವು. ಆ ದ್ವಿಜನ ಮುಖಾಗ್ನಿಯ ಉರಿಯಿಂದ ಆ ಚಾಂಡಾಲಿಯ ಮನೆ ಭಸ್ಮವಾಯಿತು.

ಮನೆಯಲ್ಲಿಯ ಐಶ್ವರ್ಯ ನಾಶವಾಯಿತು. ಅವಳು ಅಳತೊಡಗಿದಳು, ಅದನ್ನು ಕೇಳಿ ದ್ವಿಜನಿಗೆ ಎಚ್ಚರವಾಯಿತು. ಬೆಂಕಿ! ಎಲ್ಲಿಂದ? ಹೇಗೆ ಹುಟ್ಟಿತು? ಮನೆ ಹೇಗೆ ಸುಟ್ಟಿತು? ಎಂದು ಅವನು ಪ್ರಶ್ನೆ ಮಾಡಿದನು. ಆಗ ಆಕಾಶವಾಣಿಯಾಗಿ 'ನಿನ್ನ ನಿಯಮನಿಷ್ಠೆಯ ತೇಜಸ್ಸು ಈ ಮನೆಯನ್ನೆಲ್ಲ ಭಸ್ಮ ಮಾಡಿದೆ. ನೀನು ನೀತಿ ಭ್ರಷ್ಟನಾದರೂ, ನಿನ್ನ ಮನೋದಾರ್ಢ್ಯ

ಸಹಜವಾದ ಬ್ರಾಹ್ಮೀ ತೇಜಸ್ಸು ನಾಶವಾಗಿಲ್ಲ. ಆದುದರಿಂದಲೇ ಈ ಸಂಸ್ಕಾರದಿಂದ ನೀನು ಈವರೆಗೂ ಮದ್ಯ ಮಾಂಸಗಳನ್ನು ನಿನ್ನ ಸ್ವಯಂ ಇಚ್ಛೆಯಿಂದ ಮುಟ್ಟಲಿಲ್ಲ.

ಈ ಚಾಂಡಾಲಿಯು ಬಲವಂತದಿಂದ ಇಂದು ನಿನ್ನ ಮುಖದಲ್ಲಿ ಮದ್ಯ ಸಿಂಚನ ಮಾಡಿದ್ದರಿಂದ ನಿನ್ನ ಈ ಮದ್ಯಮಾಂಸ ಮುಟ್ಟುವದಿಲ್ಲವೆಂಬ ಪ್ರತಿಜ್ಞಾ ಪಾಲನದ ಬ್ರಹ್ಮತೇಜ ಉರಿದೆದ್ದಿತು. ಆದುದರಿಂದ ಇನ್ನು ಮೇಲಾದರೂ ನೀನು ಧರ್ಮಾಚರಣೆಯನ್ನು ಸರಿಯಾಗಿ ಮಾಡು. ನಿನ್ನ ನಷ್ಟವಾದ ಈ ಬ್ರಹ್ಮವರ್ಚಸ್ಸನ್ನು ಮರಳಿ ಸಂಪಾದಿಸು.' ಈ ಆಕಾಶವಾಣಿಯ ಬ್ರಹ್ಮೋಪದೇಶ ಕೇಳಿ ದ್ವಿಜನಿಗೆ ಪಶ್ಚಾತ್ತಾಪವಾಯಿತು. ಅವನು ಅಲ್ಲಿಂದ ದೊಡ್ಡ ಮುನಿಗಳ ಆಶ್ರಮಕ್ಕೆ ಹೋದನು. 'ನನ್ನ ಆತ್ಮೋದ್ಧಾರ ಹೇಗಾದೀತು?' ಎಂದು ಪ್ರಶ್ನಿಸಿದನು. ಆಗ ಆ ಎಲ್ಲ ಮುನಿಗಳು ಕೂಡಿ ಅವನಿಗೆ ಹೇಳಿದರು.

**ಋಷಿಗಳು :-** ನೀನು ದಾನ ಧರ್ಮಗಳನ್ನು ಸರಿಯಾಗಿ ಆಚರಿಸು. ಶಾಸ್ತ್ರಗಳಲ್ಲಿ ಹೇಳಿದ ವ್ರತ ನಿಯಮಗಳನ್ನು ಅನುಷ್ಠಾನ ಮಾಡಿದರೆ ದ್ವಿಜರ ಪಾಪಗಳೂ ಪರಿಹಾರವಾಗುತ್ತವೆ. ಈ ವಿಷಯದಲ್ಲಿ ಶಾಸ್ತ್ರ ಪ್ರಮಾಣ ಹೀಗಿದೆ -

**ಪೂಯಂತೆ ಸರ್ವ ಪಾಪೇಭ್ಯೋ ಸದ್ದ್ವಿಜಾಃ ನಿಯಮೈಃ ವ್ರತೈಃ ।**
**ಗಚ್ಛ ತೀರ್ಥಾನಿ ಪೂತಾನಿ ಗೋವಿಂದಾರಾಧನಂ ಕುರು ।**

**ಪುಣ್ಯತೀರ್ಥ ಪ್ರಭಾವಾಚ್ಚ ಗೋವಿಂದಸ್ಯ ಪ್ರಸಾದತಃ ।**
**ಕ್ಷಯಮಿಷ್ಯಂತಿ ಪಾಪಾನಿ ನ ಚಿರೇಣ ಸಮಂತತಃ ॥**

ಕೃಚ್ಛ್ರ ಚಾಂದ್ರಾಯಣ ಮೊದಲಾದ ವ್ರತಗಳನ್ನು ಶಾಸ್ತ್ರಗಳಲ್ಲಿ ಹೇಳಿದ ಧರ್ಮದ ಕರ್ಮಗಳ ನಿಯಮ ನಿಬಂಧನೆಗಳನ್ನು ಸರಿಯಾಗಿ ಪಾಲನೆ ಮಾಡಿದರೆ ಸರ್ವ ಪಾಪ ಪರಿಹಾರವಾಗುತ್ತದೆ. ಅದಕ್ಕಾಗಿ ಪವಿತ್ರವಾದ ತೀರ್ಥಕ್ಷೇತ್ರಗಳ ಯಾತ್ರೆ ಮಾಡು. ಶ್ರೀಹರಿಯನ್ನು ಪೂಜೆ, ಪಾರಾಯಣ ಧ್ಯಾನ ಉಪಾಸನೆ ಮುಂತಾದ ಪ್ರಕಾರಗಳಿಂದ ಆರಾಧಿಸು. ಪುಣ್ಯ ತೀರ್ಥ ಪ್ರಭಾವ, ಶ್ರೀ ಹರಿಯ ಪ್ರಸಾದದಿಂದ ನಿನ್ನ ಜನ್ಮದಲ್ಲಿ ಮಾಡಿದ ಸಕಲ ವಿಧ ಪಾಪ ರಾಶಿಗಳು ಧ್ವಂಸವಾಗುತ್ತವೆ.

ಹಿಂದೆ ಒಂದು ದಿನ ವಿನತೆಯ ಮಗನಾದ ಗರುಡನಿಗೆ ಹಸಿವೆ ಆಗಿತ್ತು. ಅವನು ತಾಯಿಯ ಬಳಿಗೆ ಬಂದು 'ಅಮ್ಮಾ ಹಸಿವೆ, ಏನಾದರೂ ತಿನ್ನಲು ಕೊಡು' ಎಂದ. ತಾಯಿ ವಿನತೆ ಮಗನ ಕಡೆ ನೋಡಿದಳು. ಬೆಟ್ಟದಷ್ಟು ಬೃಹದಾಕಾರ ಬೆಳೆದು ನಿಂತಿದ್ದ ಮಗ. ಇವನ ಹೊಟ್ಟೆ ತುಂಬಲು ಏನು ಕೊಡಬೇಕು ಎಂಬ ಚಿಂತೆ ಆಯಿತು. ಆಗ ಅವಳು ಪ್ರೀತಿಯಿಂದ ಮಗನಿಗೆ ಎಂದಳು-

**ವಿನತಾ :-** ಮಗನೆ, ನಿನ್ನ ಹಸಿವೆ ಹಿಂಗಿಸಲು ನನಗೆ ಶಕ್ತಿಯಿಲ್ಲ. ಕ್ಷಾರಸಾಗರದ ಉತ್ತರ ತೀರದಲ್ಲಿ ನಿನ್ನ ತಂದೆ ಕಶ್ಯಪರು ತಪಸ್ಸು ಮಾಡುತ್ತಿದ್ದಾರೆ. ಅವರು ಅಸಾಮಾನ್ಯರು. ಪ್ರಜಾಪತಿ ಸ್ಥಾನದಲ್ಲಿ ಇರುತ್ತಾರೆ. ಅವರ ಬಳಿಗೆ ಹೋಗು. ನಿನಗೆ ಬೇಕಾದದ್ದನ್ನು ಬೇಡು. ಅವರು ಹೇಳಿದಂತೆ ಮಾಡಿದರೆ ನಿನ್ನ ಹಸಿವು ಹಿಂಗುವದು.' ತಾಯಿಯ ಮಾತಿನಂತೆ ಗರುಡನು ಒಂದುಗಳಿಗೆ ಹೊತ್ತಿನಲ್ಲಿ ತಂದೆಯ ಬಳಿಗೆ ಬಂದನು. ಮನೋಜವನಲ್ಲವೆ ಆ ಗಗನಗಾಮಿ ಗರುಡ! ತಂದೆ ಕಶ್ಯಪ ಮುನಿ ಮಂಡಲದಲ್ಲಿ

ಮಹಾಶ್ರೇಷ್ಠ. ಅವನ ತೇಜಸ್ಸು ಉರಿಯುವ ಅಗ್ನಿಯಂತೆ ಉದ್ದೀಪ್ತ, ತಲೆವಾಗಿ ನಮಸ್ಕರಿಸಿ ಗರುಡ ಮಾತನಾಡಿದ.-

**ಗರುಡ :-** ಮಹಾತ್ಮರೆ, ನಾನು ನಿಮ್ಮ ಪುತ್ರ ಹಸಿವೆಯಿಂದ ಬಳಲಿ ಬೆಂಡಾಗಿದ್ದೇನೆ. ಅದಕ್ಕಾಗಿ ನಿಮ್ಮ ಬಳಿಗೆ ಬಂದಿದ್ದೇನೆ. ನನಗೆ ತಿನ್ನಲು ಕೊಡಿರಿ.

**ಕಶ್ಯಪ :-** ಸಮುದ್ರ ತೀರದಲ್ಲಿ ಅನೇಕ ಸಹಸ್ರ ನಿಷಾದರು ನೆಲೆಸಿದ್ದಾರೆ. ಅವರನ್ನು ತಿನ್ನು, ನಿನ್ನ ಹಸಿವೆ ಹಿಂಗಿಸಿಕೋ. ಈ ದುರುಳರು ತೀರ್ಥದಲ್ಲಿ ಸೇರಿ ಕೊಂಡು ಆ ತೀರ್ಥವನ್ನು ಕಲುಷಿತಗೊಳಿಸುತ್ತಾರೆ. ನೀನು ಅಲ್ಲಿಗೆ ಹೋಗು. ಅವರಲ್ಲಿ ಜ್ಞಾನಿಗಳು ಇದ್ದರೆ ಅವರನ್ನು ಬಿಟ್ಟು ಉಳಿದವರನ್ನು ಭಕ್ಷಿಸು.''

ತಂದೆಯ ಆದೇಶದಂತೆ ಗರುಡ ನಡೆದ - ಸಾಗರ ತೀರಕ್ಕೆ. ಅಲ್ಲಿದ್ದ ನಿಷಾದರನ್ನು ಭಕ್ಷಿಸಿದ ಒಬ್ಬರಾದ ಮೇಲೆ ಒಬ್ಬರನ್ನು. ಈ ಭಕ್ಷಣ ಸಂಭ್ರಮದಲ್ಲಿ ಒಬ್ಬ ಜ್ಞಾನಿಯನ್ನು ಕೂಡ ಲಕ್ಷ್ಯವಿಲ್ಲದೆ ನುಂಗಿಬಿಟ್ಟ. ಅವನನ್ನು ಗಂಟಲಲ್ಲಿ ಹಾಕಿಕೊಂಡರೂ ನುಂಗಲಿಕ್ಕಾಗಲಿಲ್ಲ. ಇತ್ತ ಉಗುಳಲಿಕ್ಕೂ ಬರಲಿಲ್ಲ ಗರುಡನಿಗೆ. ಕಂಠದ ಮಧ್ಯದಲ್ಲಿ ಆ ದ್ವಿಜನು ಜೋತಾಡತೊಡಗಿದ. ಗರುಡ ತಂದೆಯ ಬಳಿಗೆ ಓಡಿಹೋದ. 'ತಂದೆಯೆ, ಇದೇನು? ಯಾವದೋ ಪ್ರಾಣಿಯು ನನ್ನ ಕಂಠನಾಳದಲ್ಲಿ ಸಿಕ್ಕಿದೆ. ಅದನ್ನು ನನಗೆ ತೆಗೆಯಲಿಕ್ಕೂ ನುಂಗಲಿಕ್ಕೂ ಬರದಂತಾಗಿದೆ. ಇದಕ್ಕೆ ಏನು ಮಾಡಬೇಕು.'' ಎಂದು ಕೇಳಿದ.

**ಕಶ್ಯಪ :-** ಮಗು ನಾನು ನಿನಗೆ ಮೊದಲೇ ಹೇಳಿದ್ದೆ ಜ್ಞಾನಿಯನ್ನು ಬಿಟ್ಟು ಬೇರೆಯವರನ್ನು ತಿನ್ನು ಎಂದು. ಈಗ ನೀನು ನುಂಗಿದ ಮನುಷ್ಯ ಜ್ಞಾನಿ.'' ಹೀಗೆ ಹೇಳಿ ಗರುಡನ ಗಂಟಲಲ್ಲಿ ಸಿಕ್ಕಿಕೊಂಡ ದ್ವಿಜನಿಗೆ ಕಶ್ಯಪರು ಹೇಳಿದರು. ''ವಿಪ್ರೋತ್ತಮನೆ, ನೀನು ಇತ್ತ ನನ್ನ ಕಡೆಗೆ ಬಾ. ನಿನಗೆ ಹಿತವನ್ನು ಹೇಳುತ್ತೇನೆ'' ಎಂದು ಕರೆದರು.

**ವಿಪ್ರ :-** ಇವರೆಲ್ಲರೂ ನನ್ನ ಬಂಧು ಬಳಗದವರು. ಈ ನನ್ನ ಸಂಬಂಧಿಕರ ಸಮೂಹವನ್ನೇ ನಿನ್ನ ಮಗನು ಸಂಹರಿಸಲು ಹೊರಟಿದ್ದಾನೆ. ನಾನು ಇವರನ್ನು ಬಿಟ್ಟು ಬರಲಾರೆ. ಇವರೆಲ್ಲರೂ ನನಗೆ ಪ್ರಿಯರು. ಇವರಲ್ಲಿ ಕೆಲವರು ನನ್ನ ಬೀಗರು. ಮಾವಂದಿರು, ಭಾವಮೈದುನರು, ಆಪ್ತೇಷ್ಟರು, ಮಕ್ಕಳು ಹಾಗೂ ಉಳಿದ ದಾಯಾದಿಗಳು ಇರುತ್ತಾರೆ. ನನಗೆ ಕೇಡಾಗಲಿ, ಕಲ್ಯಾಣವಾಗಲಿ ಇವರ ಜೊತೆಗೇ ಆಗಲಿ. ಇವರೊಡನೆ ನಾನು ನರಕಕ್ಕೆ ಹೋಗಲೂ ಸಿದ್ಧ.

**ಕಶಪ್ಯ :-** ನೀನು ಜ್ಞಾನಿಯಾಗಿ ಜನಿಸಿದ್ದಿ. ಅನಂತರ ಪತಿತನಾಗಿ ಚಂಡಾಲರ ಕುಲದಲ್ಲಿ ಸೇರಿಕೊಂಡಿರುವೆ. ಈ ಎಲ್ಲ ಪಾಪಿಗಳು ಘೋರ ನರಕದಲ್ಲಿ ನರಳುವ ಮಹಾ ಪಾತಕಿಗಳು, ದುರಾಚಾರಿಗಳು, ಅವರ ಪಾಪಗಳಿಗೆ ಪರಿಹಾರವೇ ಇಲ್ಲ. ಅಜ್ಞಾನದಿಂದಾಗಲಿ ಮೋಹದಿಂದಾಗಲಿ ಪಾಪ ಮಾಡಿದ್ದರೆ ತಿಳುವಳಿಕೆ ಬಂದು ಆ ಮನುಷ್ಯನಿಗೆ ಪಶ್ಚಾತ್ತಾಪವಾಗಿ ಅವನು ಶ್ರೀಹರಿಯ ಧ್ಯಾನ ಮಾಡುವನು. ಅದರಿಂದ ಅವನ ಪಾಪಗಳೆಲ್ಲ ಪರಿಹಾರ ವಾಗುವವು. ಅನಂತರ ಅವನು ಸತ್ಕಾರ್ಯ ಮಾಡಿ ಉತ್ತಮ ಗತಿ ಹೊಂದುವನು. ಆದರೆ ಬುದ್ಧಿ ಪೂರ್ವಕ ಕೆಟ್ಟ ಕೆಲಸ ಮಾಡುವವನಿಗೆ ಎಂದೂ ಪಶ್ಚಾತ್ತಾಪವಾಗುವದಿಲ್ಲ. ಅವನು ಮತ್ತೆ ಮತ್ತೆ ಪಾಪ ಕಾರ್ಯವನ್ನು ಮಾಡುತ್ತಲೇ ಇರುವನು ಭೋರ್ಗರೆಯುವ ಸಾಗರದಲ್ಲಿ ಕಲ್ಲಿನ ದೋಣಿಯಲ್ಲಿ ಪ್ರಯಾಣ ಮಾಡಿದಂತೆ. ಅಂತವರಿಗೆ ನಿರಂತರ ನರಕವಾಸವು ನಿಶ್ಚಿತ.

ಆದುದರಿಂದ ವಿವೇಕಿಯಾದವನು ಪಾಪ ಕೃತ್ಯವು ಒಂದು ವೇಳೆ ಪ್ರಮಾದದಿಂದ ಘಟಿಸಿದರೆ ಬೇಗನೇ ಎಚ್ಚತ್ತು ಪಶ್ಚಾತ್ತಾಪ ಪಟ್ಟು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಮುಂದೆ ಸನ್ಮಾರ್ಗದಲ್ಲಿ ನಡೆಯಬೇಕು. ಆದರಿಂದ ಅವನ ದೋಷ ಶಾಂತಿ ಆಗುವದು. ನಿನ್ನ ಬಳಗವೆಲ್ಲವೂ ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಪಡದೆ ಸ್ವಭಾವತಃ ದುಷ್ಟರಾದ ಮಹಾ ಪಾತಕಿಗಳು. ಅವರನ್ನು ಬಿಟ್ಟು ನೀನೊಬ್ಬನೇ ಇತ್ತ ಬಾ. ಬಂದರೆ ಬದುಕಿ ಉಳಿಯುವಿ.

**ವಿಪ್ರ:-** ಈ ಗರುಡನು ನನ್ನ ಈ ಎಲ್ಲ ಬಂಧುಗಳನ್ನು ಬಿಡದಿದ್ದರೆ ನಾನು ಇಲ್ಲಿಯೇ ಇವನ ಕೊರಳಲ್ಲಿಯೇ ಪ್ರಾಣಬಿಡುತ್ತೇನೆ. ನಾನು ಈ ಸೂಕ್ಷ್ಮವಾದ ತನ್ನ ಕಂಠನಾಳದಲ್ಲಿ ಮರಣಹೊಂದಬಾರದೆಂಬ ಇಚ್ಛೆ ಇದ್ದರೆ ಗರುಡನು ಅವರನ್ನೆಲ್ಲ ಬಿಡಲಿ.'' ಕಶ್ಯಪರಿಗೆ ಗಾಬರಿಯಾಯಿತು. ಮಗನಿಗೆ ಬ್ರಹ್ಮಹತ್ಯಾ ದೋಷ ಬರುವದೆಂಬ ಭಯದಿಂದ ಅವರು ನುಡಿದರು.

**ಕಶ್ಯಪ :-** ವತ್ಸ, ಈ ಜ್ಞಾನಿಯನ್ನೂ ಇವನೊಡನೆ ಉಳಿದೆಲ್ಲ ಬಂಧುಗಳನ್ನೂ ಉಗುಳಿಬಿಡು. ಇಲ್ಲದಿದ್ದರೆ ನಿನಗೆ ಬ್ರಹ್ಮಹತ್ಯಾ ಪಾಪ ಬರುವದು. ತಂದೆಯ ಆಜ್ಞೆಯಂತೆ ಗರುಡನು ಆ ಎಲ್ಲ ನಿಷಾದರನ್ನು ವನ, ಪರ್ವತ ಪ್ರದೇಶಗಳಲ್ಲಿಯೂ ಬೇರೆ ಬೇರೆ ದಿಕ್ಕುಗಳ ನಿಟ್ಟುಗಳಲ್ಲಿಯೂ, ಉಗಿದುಬಿಟ್ಟನು. ಹೀಗೆ ಪೂರ್ವ ನಿಟ್ಟಿನಲ್ಲಿ ಉಗುಳಿಬಿಟ್ಟ ನಿಷಾದರು ಗಡ್ಡ ಮೀಶೆಗಳಿಲ್ಲದ ಬೋಳು ತಲೆಯವರಾಗಿ ಜನಿಸಿದರು.

ಆಗ್ನೇಯ ದಿಕ್ಕಿನಲ್ಲಿ ಅರೆಬೆತ್ತಲೆ ಕೆಲವು ಪಾಪಿಗಳನ್ನು ಉಗಿದನು. ದಕ್ಷಿಣದಲ್ಲಿಯೂ ಗೋಮಾಂಸ ತಿನ್ನುವ ಪ್ರಾಣಿಹಿಂಸೆ ಮಾಡುವ ಕೆಲವು ದುರುಳರನ್ನು ಹೊರಗೆ ಹಾಕಿದನು. ನೈಋತ್ಯದಲ್ಲಿ ಗೋ ದ್ವಿಜ ವಧೆ ಮಾಡುವ ಕುವದ ಎಂಬ ಮ್ಲೇಂಛರನ್ನು ಉಗುಳಿದನು. ಪಶ್ಚಿಮದಲ್ಲಿ ಬರ್ಬರರನ್ನು, ವಾಯುವ್ಯದಲ್ಲಿ ತುರುಕರನ್ನು, ಉತ್ತರದಲ್ಲಿ ಕಾಡು ಜಾತಿಯ ದುರಾಚಾರಿ ಮ್ಲೇಂಛರನ್ನು, ಈಶಾನ್ಯದಲ್ಲಿ ವನೇಚರರಾದ ನಿರಯ ರೆಂಬುವರನ್ನು ಉಗುಳಿಬಿಟ್ಟನು. ಇವರನ್ನು ಸ್ಪರ್ಶ ಮಾಡಿದರೆ ಉಟ್ಟ ಬಟ್ಟೆಗಳನ್ನು ತೋಯಿಸಿ ಸ್ನಾನ ಮಾಡಬೇಕು. ಕಲಿಯುಗವು ಪ್ರಬಲವಾದಂತೆ ದ್ರವ್ಯದಾಸೆಯಿಂದ ಎಲ್ಲ ಜಾತಿಯವರು ಇವರನ್ನು ಮುಟ್ಟಿ ವ್ಯವಹಾರ ಮಾಡುತ್ತಾರೆ. ಇದಾದ ನಂತರ ಗರುಡನು ಮತ್ತೆ ತಂದೆಯನ್ನು ಕುರಿತು 'ಅಪ್ಪಾ, ಹಸಿವು ಕಾಡಿಸುತ್ತಿದೆ ಮತ್ತೆ ನನ್ನನ್ನು. ಏನು ಮಾಡಲಿ?' ಎಂದು ಕೇಳಿದನು. ಅದಕ್ಕೆ ಕಶ್ಯಪರು 'ಅದೇ ಸಾಗರದ ಒಂದೆಡೆ ಒಂದು ಆಮೆ ಹಾಗೂ ಆನೆ ಇರುತ್ತವೆ. ಅವೆರಡೂ ಪ್ರಾಣಿಗಳನ್ನು ತಿಂದು ನಿನ್ನ ಹಸಿವನ್ನು ಹಿಂಗಿಸಿಕೊ' ಎಂದರು. ತಂದೆಯ ಅಪ್ಪಣೆಯಂತೆ ಗರುಡನು ಸಾಗರದ ತೀರಕ್ಕೆ ಬಂದು ಹುಡುಕಾಡಿ ಆ ಆಮೆ, ಆನೆಗಳಿದ್ದ ಸ್ಥಳವನ್ನು ಶೋಧಿಸಿ ಅವುಗಳ ಮೇಲೆರಗಿದನು. ಹದನವಾದ ತನ್ನ ಕಾಲಿನ ತುದಿಯಿಂದ ಆ ಎರಡೂ ಪ್ರಾಣಿಗಳನ್ನು ಸೀಳಿ ತನ್ನ ಕಾಲಲ್ಲಿ ಹಿಡಿದು ಕೊಂಡು ಆಕಾಶಕ್ಕೆ ಹಾರಿದನು ಮಿಂಚಿನ ವೇಗದಿಂದ. ಆ ಎರಡೂ ಮಹಾ ಪ್ರಾಣಿಗಳನ್ನು ಕೊಂದು ತಿನ್ನಲು ಯೋಚಿಸಿದನು. ಆದರೆ ಆ ಎರಡೂ ಭಯಂಕರ ಪ್ರಾಣಿಗಳು ಅವುಗಳ ಮೇಲೆ ಗರುಡನ ಭಾರವನ್ನು ಯಾವ ಪರ್ವತಕ್ಕೂ ಹೊರುವದು ಆಗಲಿಲ್ಲ.

ಎಲ್ಲ ಬೃಹದಾಕಾರದ ಬೆಟ್ಟಗಳು ಗರುಡ ಹಾಗೂ ಅವೆರಡೂ ದೈತ್ಯ ಪ್ರಾಣಿಗಳ ಭಾರದಿಂದ ನೆಲದಲ್ಲಿ ಕುಸಿಯತೊಡಗಿದವು. ಆಗ ಗರುಡನು ಅವೆರಡನ್ನೂ ಹಾಗೇ ಎತ್ತಿಕೊಂಡು ಕಾಲಲ್ಲಿ ಹಿಡಿದುಕೊಂಡು ಹಾರುತ್ತ ಎರಡು ಲಕ್ಷ ಯೋಜನ ದೂರ ಹಾರಿ

ಒಂದು ಮುಗಿಲೆತ್ತರ ಬೆಳೆದ ನೇರಳೆ ಮರದ ಕೊಂಬೆಯ ಮೇಲೆ ಕುಳಿತನು. ಈ ಮೂರು ಮಹಾ ಪ್ರಾಣಿಗಳ ಭಾರದಿಂದ ಆ ವಿರಾಟ್ ವೃಕ್ಷದ ಕೊಂಬೆಯೂ ಕೂಡ ಮುರಿದುಬಿದ್ದಿತು. ಆ ಕೊಂಬೆಯ ಮೇಲೆ ಎಷ್ಟೋ ಜನ ಜ್ಞಾನಿಗಳು ತಪಸ್ಸು ಮಾಡುತ್ತ ಕುಳಿತಿದ್ದರು. ಗಿಡದ ಕೆಳಗೂ ದ್ವಿಜರು ಧ್ಯಾನಸಮಾಧಿಯಲ್ಲಿ ಲೀನರಾಗಿದ್ದರು. ಕೊಂಬೆ ಮುರಿದರೆ ಅವರೆಲ್ಲರೂ ಸಾಯುವರೆಂದು ಬ್ರಹ್ಮಹತ್ಯೆಯ ಭಯದಿಂದ ಗಾಬರಿಯಾದ ಗರುಡನು ಆ ಕೊಂಬೆಯನ್ನು ತನ್ನ ಚುಂಚುವಿನಿಂದ ಕಚ್ಚಿ ಹಿಡಿದು ಮುಗಿಲಿಗೆ ಹಾರಿದನು'

ಒಂದು ಕಾಲಲ್ಲಿ ಆಮೆ, ಇನ್ನೊಂದು ಕಾಲಲ್ಲಿ ಆನೆ, ಬಾಯಿಯ ಕೊಕ್ಕೆಯಲ್ಲಿ ವೃಕ್ಷದ ಕೊಂಬೆ. ಹಾಗೇ ಸಾಗಿತು ಗರುಡನ ಆಕಾಶ ಉಡ್ಡಾಣ. ಅವನು ಎಲ್ಲ ಕಡೆಗೂ ಹಾರಾಡಿ 'ಈ ಭಾರವನ್ನು ಎಲ್ಲಿ ಇರಿಸುವದು?' ಎಂದು ಅದರ ಭಾರ ತಾಳಬಲ್ಲ ಬೆಟ್ಟಕ್ಕಾಗಿ ಅರಸತೊಡಗಿದನು. ಅದನ್ನು ಕಂಡು ವಿಷ್ಣುವು. 'ಎಲೆ ಹಕ್ಕಿಯೇ ನೀನು ಯಾರು? ಹೀಗೇಕೆ ಮುಗಿಲಿನಲ್ಲಿ ದಿಕ್ಕೆಟ್ಟು ಹಾರುತ್ತಿರುವೆ! ನಿನಗೆ ಏನಾಗಿದೆ' ಎಂದು ಕೇಳಿದನು. ಅದಕ್ಕೆ ಗರುಡನು ''ಭಗವನ್, ನಾನು ಕಶ್ಯಪರಿಂದ ವಿನತಾದೇವಿಯಲ್ಲಿ ಹಕ್ಕಿಯಾಗಿ ಹುಟ್ಟಿರುವ ಗರುಡ, ನನ್ನ ಜಾತಿಗೆ ಅನುಗುಣವಾಗಿ ತಂದೆಯ ಅಪ್ಪಣೆಯಿಂದ ಈ ಆಮೆ, ಆನೆಗಳನ್ನು ತಿನ್ನಲು ಎತ್ತಿಕೊಂಡು ಹೊರಟಿದ್ದೆ. ಈ ಪ್ರಾಣಿಗಳ ಹಾಗೂ ನನ್ನ ಭಾರವನ್ನು ಯಾವ ಬೆಟ್ಟವೂ ತಾಳಲಾರದು ಎಂದು ಬಗೆದು ಈ ಗಗನ ಚುಂಬಿ ಜಂಬೂವೃಕ್ಷದ ಕೊಂಬೆಯ ಮೇಲೆ ಕುಳಿತು ತಿನ್ನಬೇಕೆಂದು ನಾನು ಅದರ ಮೇಲೆ ಇಳಿದೆ. ಆದರೆ ನಾನು ಕುಳಿತ ಕೊಂಬೆಯು ಮುರಿಯಿತು. ಅದು ಬಿದ್ದು ಅಲ್ಲಿ ಆಶ್ರಯ ಪಡೆದ ಗೋ ದ್ವಿಜರು ವಿನಾಶವಾಗಬಾರದೆಂದು ಅದನ್ನೂ ಕಚ್ಚಿಕೊಂಡು ಹೊರಟದ್ದೇನೆ. ಎಲ್ಲಿ ಕುಳಿತು ನಾನು ಈ ಪ್ರಾಣಿಗಳನ್ನು ತಿನ್ನಲಿ ಎನ್ನುವದೇ ನನಗೆ ತಿಳಿಯದಂತಾಗಿದೆ. ಈ ಮೂರು ಮಹಾಪ್ರಾಣಿಗಳ ಭಾರವನ್ನು ತಾಳತಕ್ಕ ಭೂಭಾಗವಾಗಲಿ, ಬೆಟ್ಟವಾಗಲಿ ಯಾವದೂ ನನಗೆ ಕಾಣುತ್ತಿಲ್ಲ. ಅದಕ್ಕೆ ನೀನೇ ಉಪಾಯ ಹೇಳು. '' ಎಂದು ಬಿನ್ನವಿಸಿದನು. ಗರುಡನ ಈ ನುಡಿಯನ್ನು ಕೇಳಿ

ವಿಷ್ಣುವು- ''ನನ್ನ ತೋಳಿನ ಮೇಲೆ ಕುಳಿತು ನಿನ್ನ ಈ ಪ್ರಾಣ ಪಾರಣೆಯ ಕೆಲಸವನ್ನು ಪೂರೈಸಿಕೊ'' ಎಂದು ಹೇಳಿದನು.

**ಗರುಡ :-** ನೀನು ಯಾರು? ಭೂಮಿ, ಕಾಡು ಮುಂತಾದ ಯಾವದೂ ನನ್ನ ಭಾರವನ್ನು ಹೊರಲು ಸಮರ್ಥನಲ್ಲ. ನೀನು ಹೇಗೆ ನನ್ನ ಭಾರ ಹೊರುವಿ? ಸಾಕ್ಷಾತ್ ಶ್ರೀ ಹರಿಯನ್ನು ಬಿಟ್ಟರೆ, ಬೇರೆ ಯಾರೂ ನನ್ನ ಭಾರ ತಾಳಲಾರರು.

**ವಿಷ್ಣು :- ''ಸ್ವಕಾರ್ಯ ಮುದ್ಧರೇತ್''** ಬುದ್ಧಿವಂತರು ಮೊದಲು ತಮ್ಮ ಕಾರ್ಯ ಮಾಡಿಕೊಳ್ಳಬೇಕು. ನಾನು ಯಾರೇ ಆಗಲಿ. ನಿನ್ನ ಭಾರವನ್ನು ಖಂಡಿತ ನಾನು ಹೊರಬಲ್ಲೆ. ನೀನು ನನ್ನ ಈ ಬಲಿಷ್ಠವಾದ ಭುಜಾಗ್ರದ ಮೇಲೆ ಸುಖವಾಗಿ ಕುಳಿತು ನಿನ್ನ ಈ ಪ್ರಾಣ ಭಕ್ಷ್ಯವನ್ನು ಭೋಜನ ಮಾಡಿ ಮುಗಿಸು. ಅನಂತರ ನಿನಗೇ ಗೊತ್ತಾಗುವದು ನಾನು ಯಾರು ಎಂಬುದು.

ಆಗ ಗರುಡನು ವೇಗದಿಂದ ಬಂದು ಆ ವಿಷ್ಣು ನೀಡಿದ ನಿಡಿದೋಳಿನ ಮೇಲೆ ಬಂದು ಕುಳಿತನು. ಆದರೆ ಅವನ ಮಹಾಭಾರದಿಂದ ತುಸು ಕೂಡ ಆ ಭುಜ ಅಲುಗಾಡಲಿಲ್ಲ.

ಆ ವಿಷ್ಣುವಿನ ಭುಜದ ಮೇಲೆ ಗಟ್ಟಿಯಾಗಿ ಕುಳಿತು ಗರುಡನು ತಾನು ಬಾಯಲ್ಲಿ ಕಚ್ಚಿ ಹಿಡಿದ ನೇರಳೆ ಗಿಡದ ಕೊಂಬೆಯನ್ನು ಪರ್ವತಗಳ ಮೇಲೆ ಎಸೆದನು. ಆಘಾತದಿಂದ ಬೆಟ್ಟ ಭೂಮಿ ಎಲ್ಲವೂ ನಡುಗಿದವು. ಅಲ್ಲಿ ಕುಳಿತು ಗರುಡನು ಸುಖವಾಗಿ ಆನೆ ಆಮೆಗಳನ್ನು ಕೊಂದು ತಿಂದನು. ಅನಂತರ ಗರುಡನು ಪ್ರೀತನಾಗಿ 'ನೀನು ಯಾರು?' ಎಂದು ಆ ಪುರುಷನಿಗೆ ಕೇಳಿದನು.

ಅದಕ್ಕೆ ವಿಷ್ಣುವು **'ವಿದ್ಧಿ ನಾರಾಯಣಂ ಮಾಂ ಹಿ ತ್ವತ್ ಪ್ರಿಯಾರ್ಥಂ ಸಮಾಗತಂ'** ನಿನಗೆ ಹಿತವನ್ನುಂಟುಮಾಡಲು ನಾನು ಬಂದಿದ್ದೇನೆ. ನಾನು ಸಾಕ್ಷಾತ್ ನಾರಾಯಣನೆಂದೇ ತಿಳಿದುಕೊ'' ಹೀಗೆ ಹೇಳಿ, ಶ್ರೀ ವಿಷ್ಣುವು ಆ ಗರುಡನಿಗೆ ಶಂಖ, ಚಕ್ರ, ಗದಾ, ಪದ್ಮ ಧಾರಿಯಾದ ತನ್ನ ನೀಲ ಮೇಘಶ್ಯಾಮ ಸುಂದರವಾದ ದಿವ್ಯ ರೂಪವನ್ನು ತೋರಿಸಿದನು. ಅದನ್ನು ಕಂಡು ಗರುಡನು ಭಕ್ತಿಯಿಂದ ನಮಸ್ಕರಿಸಿ, 'ಸ್ವಾಮಿ, ನಾನು ನಿನ್ನ ಯಾವ ಸೇವೆಯನ್ನು ಮಾಡಲಿ, ತಿಳಿಸು' ಎಂದು ಕೇಳಿದನು. ಅದಕ್ಕೆ ಶ್ರೀ ಹರಿಯು ''ಗರುಡ, ನೀನು ನನಗೆ ವಾಹನವಾಗು. ಸರ್ವಕಾಲದಲ್ಲಿಯೂ ನನ್ನ ಬಳಿ ಇರು'' ಎಂದು ಅಪ್ಪಣೆ ನೀಡಿದನು.

''ಧನ್ಯ! ಧನ್ಯ! ಪ್ರಭು. ನಾನು ಧನ್ಯನಾದೆ! ನನ್ನ ಜನ್ಮ ಸಾರ್ಥಕವಾಯಿತು! ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆ! ನಿನ್ನನ್ನು ಹೊತ್ತು ತಿರುಗುವ ವಾಹನವಾಗುವ ಭಾಗ್ಯವನ್ನು ನನಗೆ ಕರುಣಿಸಿದ್ದರಿಂದ ನಾನು ಇಂದು ಕೃತಕೃತ್ಯನಾದೆ. ಇದೊಂದು ನನ್ನ ದೊಡ್ಡಭಾಗ್ಯ. ನನ್ನ ತಂದೆ ಕಶ್ಯಪರಿಗೆ ಈ ಸಮಾಚಾರ ತಿಳಿಸಿ ಬರುತ್ತೇನೆ'' ಎಂದು ನುಡಿದನು. ಅನಂತರ ಪರಮಾತ್ಮನು ಆ ಗರುಡನಿಗೆ 'ಅವಧ್ಯತ್ವ' ವರವನ್ನು ಕೊಟ್ಟು ದಿವ್ಯ ತೇಜಸ್ಸು, ಸರ್ವತ್ರ ಅಪ್ರತಿಹತಗತಿ, ಸ್ವೇಚ್ಛಾಗಮನ, ಮನೋವೇಗ, ಸರ್ವಕಾಮ ಪೂರ್ತಿ, ಮಿತ್ರತೃಪ್ತಿ ಮುಂತಾದ ಅನೇಕ ವರಗಳನ್ನಿತ್ತು ಕರುಣಿಸಿ ಕಳಿಸಿದನು. ಅಲ್ಲಿಂದ ಗರುಡನು ಕಶ್ಯಪರ ಬಳಿಗೆ ಬಂದು ತಾನು ವಿಷ್ಣು-ವಾಹನವಾದ ಸಮಾಚಾರ ತಿಳಿಸಿದನು.

**ಕಶ್ಯಪ ಉವಾಚ**

**ಧನ್ಯೋಽಹಂ ಚ ಖಗಶ್ರೇಷ್ಠ ಧನ್ಯಾ ತೇ ಜನನೀ ಶಿವಾ ।**
**ಧನ್ಯಂ ಕ್ಷೇತ್ರಂ ಕುಲಂ ಚೈವ ಯಸ್ಯ ಪುತ್ರಸ್ತ್ವಮೀದೃಶಃ ॥**

**ಯಸ್ಯ ಪುತ್ರಃ ಕುಲೇ ಜಾತೋ ವೈಷ್ಣವಃ ಪುರುಷೋತ್ತಮಃ ।**
**ಕುಲಕೋಟಿಂ ಸಮುದ್ಧೃತ್ಯ ವಿಷ್ಣು ಸಾಯುಜ್ಯತಾಂ ವ್ರಜೇತ್ ॥**

ಪಕ್ಷಿಶ್ರೇಷ್ಠನೆ, ನಿನ್ನನ್ನು ಪಡೆದ ನಾನು, ಹಡೆದ ತಾಯಿ, ಧನ್ಯರಾದೆವು. ನೀನು ಹುಟ್ಟಿದ ವಂಶ, ನಿಂತ ನೆಲ, ಕುಳಿತ ಸ್ಥಳ, ಎಲ್ಲವೂ ಇಂದು ಪವಿತ್ರವಾಯಿತು; ಧನ್ಯವಾಯಿತು. ಯಾವ ವಂಶದಲ್ಲಿ ವಿಷ್ಣು ಭಕ್ತನಾದ ಸತ್ಪುರುಷನು ಹುಟ್ಟುವನೊ ಅಂತಹವನ ಕುಲ ಕೋಟಿ ಎಲ್ಲವೂ ಉದ್ಧೃತವಾಗುವದು. ಆ ಕುಲದ ಭಕ್ತರು ವಿಷ್ಣುವಿನಿಂದ ಮೋಕ್ಷವನ್ನು ಹೊಂದುವರು ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ.

ಅಂದ ಬಳಿಕ ನಿನ್ನಂತಹ ವಿಷ್ಣು ವಾಹನನಾದ ಹರಿಭಕ್ತನನ್ನು ಹೆತ್ತ ನಾವು ಧನ್ಯರಾದದ್ದು ಆಶ್ಚರ್ಯವೇನ! ನಿತ್ಯವೂ ವಿಷ್ಣುವನ್ನು ಪೂಜಿಸುವವರು, ಧ್ಯಾನಮಾಡುವವರು, ವಿಷ್ಣುಮಂತ್ರ ಜಪಿಸುವವರು, ಹರಿಯ ದಿನವಾದ ಏಕಾದಶಿ

ಉಪವಾಸ ಮಾಡಿ ದ್ವಾದಶಿ ದಿನ ಹರಿಗೆ ನೈವೇದ್ಯ ಮಾಡಿ ಭೋಜನ ಮಾಡುವವರು ಪಾಪಮುಕ್ತರಾಗಿ ವಿಷ್ಣು ಲೋಕ ಹೊಂದುತ್ತಾರೆ.

**ಯಸ್ಯ ತಿಷ್ಠತಿ ಗೋವಿಂದೋ ಮಾನಸೇ ಚ ಸದೈವ ಹಿ ।**
**ಸ ಏವ ನರಶಾರ್ದೂಲೊ ವಿಷ್ಣುಲೋಕೇ ಮಹೀಯತೆ ॥**

ಯಾವನ ಮನಸ್ಸಿನಲ್ಲಿ ಯಾವಾಗಲೂ ಗೋವಿಂದನು ನಿಲ್ಲುವನೊ ಅರ್ಥಾತ್ ನಿರಂತರ ಹರಿಧ್ಯಾನ ಮಾಡುವನೋ ಅಂತಹ ಪುರುಷ ಶ್ರೇಷ್ಠನು ವಿಷ್ಣುಲೋಕದಲ್ಲಿ ವೈಭವದಿಂದ ವಾಸಮಾಡುತ್ತಾನೆ. ಆ ಶ್ರೀಹರಿಯು ಇರತಕ್ಕ ಸ್ಥಾನಗಳು-

**ಜಲೇ ವಿಷ್ಣುಃ ಸ್ಥಿತೋ ನಿತ್ಯಂ ರಮ್ಯಸ್ಥಾನೇಚ ಸತ್ಪಥೇ ।**
**ಗವಿ ವಿಪ್ರೇ ಸದಾ ಸ್ವರ್ಗೇ ಗ್ರಂಥಾಗಾರೇ ಶುಚಿಗ್ರಹೇ ॥**

ತೀರ್ಥಚಕ್ರದಲ್ಲಿ ರಮ್ಯವಾದ ಕ್ಷೇತ್ರಸ್ಥಾನದಲ್ಲಿ ಹಾಗೂ ಸನ್ಮಾರ್ಗದಲ್ಲಿ ಮತ್ತು ಹಸು, ವಿಪ್ರ, ಸ್ವರ್ಗ, ಗ್ರಂಥಾಗಾರ, ಸತ್ಯಲೋಕ, ಶುಚಿಯಾದ ದೇವಮಂದಿರ ಇಷ್ಟು ಸ್ಥಳಗಳಲ್ಲಿ ವಿಷ್ಣುವು ವಾಸಮಾಡುತ್ತಾನೆ. ಇಂತಹ ವಿಷ್ಣುವಿನ ಸನ್ನಿಧಾನಯುಕ್ತವಾದ ಸ್ಥಾನಗಳಲ್ಲಿ ನಿಂತುಕೊಂಡು ಜಪ, ತಪ, ಧ್ಯಾನ ಪ್ರಾರ್ಥನೆಗಳಿಂದ ಆ ಭಗವಂತನನ್ನು ಆರಾಧಿಸಬೇಕು. ದೇವಾಧಿ ದೇವತೆಗಳು ಆ ಲೋಕಪತಿಯಾದ ಅಚ್ಯುತನನ್ನು ಆರಾಧಿಸಿ ಮಹಾಮಹಿಮೆಯನ್ನು ಪಡೆದಿದ್ದಾರೆ. ಆ ಹರಿಯು ಯಾರ ಮೇಲೆ ಪ್ರಸನ್ನನಾಗುವನೋ ಅವನೇ ಪುರುಷೋತ್ತಮ. ಘೋರ ತಪಸ್ಸುಗಳಿಂದ ಮಹಾ ಯಜ್ಞಗಳಿಂದ, ಕಠಿಣ ವ್ರತಗಳಿಂದ ದೊರಕಲಾರ ಆ ನಾರಾಯಣ. ಅಂತಹ ದುರ್ಲಭನಾದ ದೇವೋತ್ತಮನು ದೊರೆತಿದ್ದಾನೆ. ನಿನಗೆ ದಯೆ ತೋರಿದ್ದಾನೆ.

ಅವನ ಅನುಗ್ರಹದಿಂದ ನೀನು ನಿನ್ನ ತಾಯಿಯ ಸೆರೆ ಬಿಡಿಸು. ನಿನ್ನ ಹಡೆದ ತಾಯಿ ವಿನತೆಯು ಸವತಿ ಕದ್ರುವಿನ ಮನೆಯಲ್ಲಿ ಊಳಿಗದ ಆಳಾಗಿ ಕೈಸೆರೆಯಾಗಿ ಕ್ಲೇಶ ಪಡುತ್ತಿದ್ದಾಳೆ. ಅವಳನ್ನು ಬಿಡುಗಡೆ ಮಾಡಿ, ನೀನು ಭಗವಂತನ ಸೇವೆಗೆ ಪ್ರಯಾಣ ಮಾಡು.'' 'ಮಗು, ತಂದೆಯನ್ನು ಕಂಡೆಯಾ? ಹೊಟ್ಟೆ ತುಂಬ ಊಟವಾಯಿತೆ? ತಿರುಗಿ ಬರಲು ನಿನಗೆ ಇಷ್ಟು ತಡವೇಕಾಯಿತು? ನನಗೆ ನಿನ್ನದೇ ಚಿಂತೆ ಆಗಿತ್ತು.' ತಾಯಿಯ ನುಡಿ ಕೇಳಿ ಗರುಡನು ಎಲ್ಲ ಸಮಾಚಾರವನ್ನು ತಿಳಿಸಿದನು. ಹರಿಯನ್ನು ಹೊತ್ತು ತಿರುಗುವ ಸೌಭಾಗ್ಯವು ತನಗೆ ದೊರೆತ ವೃತ್ತಾಂತವನ್ನು ಅರುಹಿದನು. ಅದನ್ನು ಕೇಳಿ ವಿನತೆಗೂ ಹರ್ಷವಾಯಿತು.

**'ಧನ್ಯಾಽಹಂ ಮೇ ಕುಲಂ ಧನ್ಯಂ ಯಸ್ತ್ವಂ ವಿಷ್ಣು ಸಖೋ ಭವಃ ।**

**ಪೌರುಷೇಣ ತ್ವಯಾ ವತ್ಸ ಉದ್ಧೃತಂ ಮೇ ಕುಲದ್ವಯಂ ।'**

ಕುಮಾರಾ, ನಿನ್ನನ್ನು ಹೆತ್ತ ನಾನು ಧನ್ಯ! ನೀನು ನಿನ್ನ ವಿಷ್ಣು ಸೇವೆಯಿಂದ ನನ್ನನ್ನು ಮಾತ್ರವಲ್ಲದೆ ನನ್ನ ತಾಯಿಯ ಕುಲ ಹಾಗೂ ಪತಿಯ ಕುಲ ಎರಡನ್ನೂ ಉದ್ಧರಿಸಿದೆ. ಆದರೆ ಮಗನೆ, ನನಗೆ ಒಂದು ದೊಡ್ಡ ದುಃಖವಿದೆ. ನಾನು ಈಗ ನನ್ನ ಸೋದರಿ ಕದ್ರುವಿನ ಮನೆಯಲ್ಲಿ ಕೆಲಸದ ಆಳಾಗಿ ದುಡಿಯುತ್ತಿದ್ದೇನೆ. ಈ ನನ್ನ ದಾಸ್ಯಕ್ಕೆ ಒಂದು ಹಿನ್ನೆಲೆ ಉಂಟು. ಹಿಂದೆ ನಾವಿಬ್ಬರೂ ಅಕ್ಕ ತಂಗಿಯರು ಸಮುದ್ರ ಮಂಥನ ನೋಡಲು ಹಾಲ್ಗಡಲಿನ

ತಡಿಯಲ್ಲಿ ನಿಂತಿದ್ದೆವು. ದೇವ ದಾನವರು ಕೂಡಿ, ಮಂದರ ಬೆಟ್ಟವನ್ನು ತಂದಿಟ್ಟು, ವಾಸುಕಿಯನ್ನೇ ಹಗ್ಗವನ್ನಾಗಿ ಬಿಗಿದುಕಟ್ಟಿ ಹಾಲಿನ ಹೆಗ್ಗಡಲನ್ನು ಕಡೆಯುತ್ತಿದ್ದರು. ಆಗ ಆ ಕ್ಷೀರ ಸಮುದ್ರದಿಂದ ಲಕ್ಷ್ಮೀ, ಕೌಸ್ತುಭ, ಪಾರಿಜಾತ ಮುಂತಾದ ಪದಾರ್ಥಗಳು ಉದಿಸಿ ಬರತೊಡಗಿದವು. ಐರಾವತ ಎಂಬ ಆನೆಯು ಆ ಪಯೋನಿಧಿಯಿಂದ ಉದಿಸಿ ಬಂದಿತು. ಮರುದಿನ ಉಚ್ಚೈಶ್ರವ ಎಂಬ ಕುದುರೆಯು ಹೊರಬರುವದಿತ್ತು.

ಆ ಕುದುರೆಯ ಬಣ್ಣದ ವಿಷಯದಲ್ಲಿ ನಾವಿಬ್ಬರೂ ಕಶ್ಯಪ ಪತ್ನಿಯರು ಪಣ ಕಟ್ಟಿದೆವು. ಉಚ್ಚೈಶ್ರವ ಕುದುರೆಯ ಬಣ್ಣ 'ಅಚ್ಚ ಬಿಳಿ' ಎಂದು ನಾನು, 'ಕಪ್ಪು' ಎಂದು ಕದ್ರು ಹೇಳಿದಳು. ಇದರ ಮೇಲೆ ಜಿದ್ದು ಹಾಕಿದೆವು. ''ಉಚ್ಚೈಶ್ರವವು ಬೆಳ್ಳಗಿದ್ದರೆ ನಾನು ನಿನ್ನ ಮನೆಯಲ್ಲಿ ತೊತ್ತಾಗಿ ದುಡಿಯುವೆನು'' ಎಂದು ಕದ್ರು ನುಡಿದಳು. ''ಅದು ಕಪ್ಪಿದ್ದರೆ ನಾನು ನಿನ್ನ ಮನೆಯಲ್ಲಿ ತೊತ್ತಾಗುವೆನು'' ಎಂದು ನಾನು ಪಣವಿಟ್ಟೆ. ವಾಸ್ತವಿಕವಾಗಿ ಆ ಇಂದ್ರನ ಕುದುರೆಯೂ ಅಚ್ಚ ಬಿಳಿ ಬಣ್ಣದ್ದೆ. ಆದರೆ ನನ್ನ ಸೋದರಿ ಕದ್ರು ತನ್ನ ಮಕ್ಕಳಾದ ಕೃಷ್ಣ ಸರ್ಪನನ್ನು ಕರೆದು ಆ ಉಚ್ಚೈಶ್ರವದ ಬಣ್ಣವನ್ನು ಕಪ್ಪಾಗಿ ಮಾರ್ಪಡಿಸಬೇಕೆಂದು ಹೇಳಿದಳು. ಮರುದಿನ ಉಷಃಕಾಲದಲ್ಲಿ ನಾವಿಬ್ಬರೂ ಕುತೂಹಲದಿಂದ ಕ್ಷೀರ ಸಮುದ್ರದ ತೀರದಲ್ಲಿ ಹೋಗಿ ನಿಂತೆವು. ಕಡಲು ಕಡೆಯಲು ಆರಂಭವಾಯಿತು. ದೇವೇಂದ್ರನ ಕುದುರೆಯು ಹೊರಬಿದ್ದಿತು. ದುರ್ದೈವದಿಂದ ಅದರ ಬಣ್ಣವೆಲ್ಲ ಕಪ್ಪಾಗಿಯೇ ತೋರಿತು. ಕದ್ರುವಿನ ಮಕ್ಕಳಾದ ಕೃಷ್ಣಸರ್ಪಗಳೆಲ್ಲ ಕೂಡಿ ಆ ಕುದುರೆಯನ್ನು ತಮ್ಮ ಕೃಷ್ಣ ಕಾರಸ್ಥಾನದಿಂದ ಕಪ್ಪಾಗಿಯೇ ಮಾಡಿಬಿಟ್ಟಿದ್ದವು.

ಅದರಿಂದ ನಾನು ಸೋತೆ. ವಿಧಿಯಿಲ್ಲದೆ ಅವಳ ಮನೆಯ ಊಳಿಗದ ಆಳಾಗಿ ನಾನು ಬಾಳಬೇಕಾಯಿತು. ಈಗಲೂ ನಾನು ಅವಳ ಜೀತದಾಳು. ಅವಳು ಹೇಳಿದಷ್ಟು ಹಣ ಕೊಟ್ಟು ನನ್ನನ್ನು ಈ ಗುಲಾಮಗಿರಿಯಿಂದ ಮುಕ್ತಳನ್ನಾಗಿ ಮಾಡು. ತಾಯಿಯ ಈ ದೀನ ನುಡಿಯನ್ನು ಕೇಳಿ, ಗರುಡನು ''ಅಮ್ಮಾ, ಬೇಗ ಹೋಗು, ಆ ಕದ್ರುವನ್ನು ಕೇಳು-ನಿನ್ನನ್ನು ಮುಕ್ತಳನ್ನಾಗಿ ಮಾಡಲು ಏನು ಹಣ ಕೊಡಬೇಕು? ಎಷ್ಟು ಹಣ ಕೊಡಬೇಕು ಕೇಳಿಕೊಂಡು ಬಾ. ಕೂಡಲೇ ಅವಳು ಕೇಳಿದಷ್ಟು ಹಣ ಕೊಟ್ಟು ನಿನ್ನನ್ನು ಬಿಡುಗಡೆ ಮಾಡುತ್ತೇನೆ. ಅನಂತರ ನಿನ್ನನ್ನು ಇಷ್ಟು ದಿನ ಗೋಳಾಡಿಸಿದ ಆ ತಾಯಿಯ ಮಕ್ಕಳಾದ ಹಾವುಗಳನ್ನೆಲ್ಲ ನಾನು ತಿನ್ನುತ್ತೇನೆ. ಅನ್ಯಾಯದಿಂದ ಆ ಎಲ್ಲ ಕೃಷ್ಣ ಸರ್ಪಗಳು ಸೇರಿ ಅಚ್ಚ ಬಿಳಿ ಬಣ್ಣದ ಉಚ್ಚೈಶ್ರವವನ್ನು ಕಪ್ಪಾಗಿ ಕಾಣುವಂತೆ ಮಾಡಿದವಲ್ಲವೆ? ಈ ಮೋಸ ಕೃತ್ಯಕ್ಕೆ ನಾನು ಸರಿಯಾಗಿ ಅವರಿಗೆ ಶಾಸನ ಮಾಡಲು ಅವರನ್ನು ಭಕ್ಷಣ ಮಾಡುತ್ತೇನೆ. ಇಂದಿನಿಂದ ಹಾವುಗಳೇ ನನಗೆ ಆಹಾರ. ಇದು ನನ್ನ ಪ್ರತಿಜ್ಞೆ.''

ಅನಂತರ ವಿನತೆಯು ದುಃಖ ತಪ್ತಳಾಗಿ ಕದ್ರುವಿನ ಬಳಿಗೆ ಹೋಗಿ ಕೇಳಿದಳು. ''ಸೋದರಿ, ಏನು ಕೊಟ್ಟರೆ ನನ್ನನ್ನು ದಾಸ್ಯದಿಂದ ಬಿಡುಗಡೆ ಮಾಡುವಿ?'' ಎಂದು ಕೇಳಿದಳು. ಅದಕ್ಕೆ ಕದ್ರುವು ಆಢ್ಯತೆಯಿಂದ-

''ಅಮೃತವನ್ನು ತಂದು ಕೊಟ್ಟರೆ ನಿನ್ನನ್ನು ನನ್ನ ಕೈಸೆರೆಯಿಂದ ಬಿಡುವೆನು'' ಎಂದು ಹೇಳಿದಳು. ಇದನ್ನು ಕೇಳಿ ವಿನತೆಯ ಮುಖದ ಮೇಲೆ ಹೊಡೆದಂತಾಯಿತು. ಸ್ವರ್ಗದಿಂದ ಅಮೃತವನ್ನು ತರುವದು ಅಶಕ್ಯ. ತನಗೆ ಕದ್ರುವಿನ ದಾಸ್ಯದಿಂದ ಬಿಡುಗಡೆಯು ಅಶಕ್ಯ

ಎಂದು ನಿಶ್ಚಯಿಸಿ, ದೀನಳಾಗಿ ಮಗನ ಬಳಿಗೆ ಬಂದಳು. ''ಮಗು, ಕದ್ರು ಹಾವುಗಳ ತಾಯಿಯಲ್ಲವೆ? ಅದಕ್ಕೆ ತಕ್ಕಂತೆಯೇ ಇದೆ ಅವಳ ವಿಚಾರ. ಅಮೃತವನ್ನು ತಂದು ಕೊಟ್ಟರೆ ನನ್ನನ್ನು ಬಿಡುವುದಾಗಿ ಹೇಳುತ್ತಾಳೆ. ಇದು ಹೇಗೆ ಸಾಧ್ಯ?'' ಎಂದು ದೀನಳಾಗಿ ನುಡಿದಳು. ಗರುಡನಿಗೆ ತನ್ನ ಮಲತಾಯಿಯ ಈ ಅಶಕ್ಯ ಪ್ರಾರ್ಥನೆ ಕೇಳಿ ಕೋಪಬಂದಿತು. ''ಅಮ್ಮಾ, ನೀನು ಖಿನ್ನಳಾಗಬೇಡ. ಅಮೃತವನ್ನು ಕೂಡ ನಾನು ತರುತ್ತೇನೆ. ನಿನ್ನನ್ನು ಈ ದಾಸ್ಯದಿಂದ ಮುಕ್ತಳನ್ನಾಗಿ ಮಾಡುತ್ತೇನೆ ಎಂದು ಹೇಳಿ ಅಲ್ಲಿಂದ ಹಾರಿ ಹೋದನು. ತಂದೆಯ ಬಳಿಗೆ ಬಂದು ಅಪ್ಪಣೆ ಪಡೆದುಕೊಂಡು, ಅಮೃತವನ್ನು ಇರಿಸಿದ ಸುಭದ್ರ ಸ್ಥಾನಕ್ಕೆ ಹಾರಿದನು. ಸ್ವರ್ಗಲೋಕದ ಮೇಲೆ ವಿಶ್ವಕರ್ಮನು ಆ ಅಮೃತ ರಕ್ಷಣೆಗಾಗಿ ಒಂದು ಭದ್ರಪಟ್ಟಣವನ್ನೇ ನಿರ್ಮಿಸಿದ್ದನು.

ಆ ನಗರದಲ್ಲಿ ನಟ್ಟ ನಡುವೆ ಅಮೃತವನ್ನು ಸುರಕ್ಷಿತವಾಗಿ ಇರಿಸಲಾಗಿತ್ತು, ಅದರ ಸುತ್ತಲೂ ಬೆಂಕಿಯ ಜ್ವಾಲೆಗಳ ದುರ್ಗಮಕೋಟೆಯನ್ನು ನಿರ್ಮಿಸಲಾಗಿತ್ತು. ಸುತ್ತಾಮುತ್ತಾ ಎಲ್ಲ ಕಡೆಗೂ ಅಗ್ನಿಜ್ವಾಲೆಗಳ ಉರಿನಾಲಿಗೆ ಚಾಚಿ ಜ್ವಲಿಸುತ್ತಿದ್ದವು. ಅಲ್ಲಿಗೆ ಹೋಗಿ ಗರುಡನು ತನಗೆ ವರಕೊಟ್ಟು ಅನುಗ್ರಹಿಸಿದ ನಾರಾಯಣನನ್ನು ಸ್ಮರಿಸಿದನು. 'ನಿನಗೆ ಸುರಾಸುರರಾರಿಂದಲೂ ಭಯವಿಲ್ಲ ಅಪ್ರತಿಹತಗತಿ ನಿನಗಿರಲಿ, ಅಜೇಯನಾಗು,' ಎಂದು ಆ ಭಗವಂತನು ಕೊಟ್ಟ ವರಗಳನ್ನು ನೆನೆದು ಕೊಂಡನು. ಹೋಗುವಾಗ ಸಮುದ್ರದಿಂದ ತನ್ನ ಚುಂಚುವಿನಲ್ಲಿ ನೀರನ್ನು ತುಂಬಿಕೊಂಡು ಹೋದನು. ಮೊದಲು ತನ್ನ ವಿಶಾಲವಾದ ರೆಕ್ಕೆ ಬಿಸಿ ಆ ಅಮೃತಕುಂಭದ ಸುತ್ತಲೂ ಪ್ರಾಕಾರ ರೂಪವಾಗಿ ಇರುವ ಬೆಂಕಿಯ ಜ್ವಾಲೆಗಳನ್ನು ಆರಿಸಿದನು.

ಆದರ ಮೇಲೆ ತನ್ನ ಚುಂಚುವಿನಲ್ಲಿ ತೆಗೆದುಕೊಂಡು ಬಂದ ಸಮುದ್ರದ ಅಪಾರ ನೀರನ್ನು ಚೆಲ್ಲಿ ಬೆಂಕಿಯನ್ನೆಲ್ಲ ತಣ್ಣಗಾರಿಸಿದನು. ತನ್ನನ್ನು ಎದುರಿಸ ಬಂದ ದೇವತೆಗಳನ್ನೆಲ್ಲ ಹೊಡೆದು ಓಡಿಸಿ ಅಮೃತವನ್ನು ಎತ್ತಿಕೊಂಡು ಅಲ್ಲಿಂದ ಹೊರಟನು. ದಾರಿಯಲ್ಲಿ ದೇವೇಂದ್ರನು ಐರಾವತನ್ನೇರಿಕೊಂಡು, ಅವನನ್ನು ಎದುರಿಸಿ, ಕೇಳಿದನು. ''ನೀನು ಯಾರು? ಪಕ್ಷಿರೂಪದಿಂದ ಆ ಅಮೃತವನ್ನು ಅಪಹರಿಸಿಕೊಂಡು ಎಲ್ಲಿಗೆ ಹೊರಟಿರುವೆ? ಎಲ್ಲ ದೇವತೆಗಳ ಸ್ವತ್ತಾಗಿರುವ ಈ ಅಮೃತವನ್ನು ನಾನು ಒಯ್ಯಗೊಡಲಾರೆ. ನನ್ನ ಬೆಂಕಿಯ ಬಾಣಗಳಿಂದ ನಿನ್ನನ್ನು ಯಮಪಟ್ಟಣಕ್ಕೆ ಅಟ್ಟುತ್ತೇನೆ.'' ಹೀಗೆ ಹೇಳಿ ಇಂದ್ರನು ಬಾಣಗಳ ಮಳೆಗರೆದು ಗರುಡನನ್ನು ಮುಚ್ಚಿಹಾಕಿದನು. ಆಗ ಗರುಡನು ಕ್ರುದ್ಧನಾಗಿ ಇಂದ್ರನ ಮೇಲೆರಗಿ ಐರಾವತವನ್ನು ಉಗುರುಗಳಿಂದ ಸೀಳಿದನು. ಇಂದ್ರನ ಸಾರಥಿ ಮಾತಲಿಯನ್ನು ಗಾಯಗೊಳಿಸಿದನು. ರಥದ ಚಕ್ರ ಮುರಿದನು. ದೇವತೆಗಳನ್ನು ಓಡಿಸಿದನು. ಗರುಡನ ಪೆಟ್ಟನ್ನು ತಾಳಲಾರದೆ ಐರಾವತವು ಚೀರುತ್ತ ಹಿಂದೆ ನಡೆಯಿತು.

ಆಗ ಸುರರಾಜನು ಪರಿಕುಪಿತನಾಗಿ ವಜ್ರಾಯುಧದಿಂದ ಗರುಡನಿಗೆ ಏಟುಹಾಕಿದನು. ಶ್ರೀಹರಿಯ ವರದ ಬಲದಿಂದ ಗರುಡನಿಗೆ ಏನೂ ಆಗಲಿಲ್ಲ. ಅದನ್ನು ಕಂಡು ದೇವೇಂದ್ರನು ಹೆದರಿ ಹೌಹಾರಿ ಯುದ್ಧದಿಂದ ಹಿಂದುರಿಗಿದನು. ಮತ್ತೆ ಹೊರಟ ಗರುಡ ಭೂಮಿಯ ಕಡೆಗೆ. ಆಗ ಇಂದ್ರನು ಸೌಮ್ಯಸ್ವರದಲ್ಲಿ ಪರಾಜಿತರಾದ ಎಲ್ಲ ದೇವತೆಗಳ

ಎದುರು ಗರುಡನನ್ನು ಕೇಳಿದನು. ''ವೈನತೇಯ, ನೀನು ಈ ಅಮೃತವನ್ನು ಸರ್ಪಗಳ ತಾಯಿಯಾದ ಕದ್ರುವಿಗೆ ಒಯ್ದು ಕೊಡುವಿಯಷ್ಟೆ! ಇದರ ಪರಿಣಾಮ ಏನಾಗಬಹುದೆಂದು ವಿಚಾರಿಸಿರುವೆಯಾ? ಕದ್ರುವಿನ ಮಕ್ಕಳಾದ ಹಾವುಗಳೆಲ್ಲವೂ ಈ ಅಮೃತ ಕುಡಿದು ಅಮರರಾಗುವವರು. ದುಷ್ಟ ಸರ್ಪಗಳೆಲ್ಲವೂ ಸಾವಿಲ್ಲದೆ ಅಮರರಾಗಿ ಉಳಿದರೆ ಮುಂದೆ ಜಗತ್ತಿನ ಗತಿ- ಏನು?

ದುಷ್ಟರಿಗೆ ಅಮರತ್ವ ಬಂದರೆ ಉಳಿಗಾಲವಿಲ್ಲ. ಮೇಲಾಗಿ ನಿನ್ನ ತಾಯಿಗೆ ಮೋಸ ಮಾಡಿದ ಆ ಹಾವುಗಳನ್ನೆಲ್ಲ ಕೊಂದು ತಿಂದು ಹಾಕುವದಾಗಿ ನೀನು ಪ್ರತಿಜ್ಞೆ ಮಾಡಿರುವೆ. ಈಗ ಅಮೃತ ಕುಡಿಸಿ ಅವುಗಳನ್ನೆಲ್ಲ ಅಮರರನ್ನಾಗಿ ಮಾಡಿದರೆ ಅವರನ್ನು ನೀನು ಕೊಲ್ಲುವದು ಹೇಗೆ? ಮುಂದೆ ನಿನ್ನ ಪ್ರತಿಜ್ಞೆಯ ಗತಿ ಏನು? ಪ್ರತಿಜ್ಞಾ ಭ್ರಷ್ಟನಾಗುವಿ. ಆದುದರಿಂದ ನೀನು ಅಮೃತವನ್ನು ಕದ್ರುವಿಗೆ ಕೊಟ್ಟ ಬಳಿಕ ನಾನು ಅದನ್ನು ಮತ್ತೆ ಅಲ್ಲಿಂದ ಅಪಹರಿಸಿ ತರುತ್ತೇನೆ. ಇದಕ್ಕೆ ನಿನ್ನ ಆಭ್ಯಂತರವಿಲ್ಲವಷ್ಟೆ?''

**ಗರುಡ :-** ''ನಾನಂತೂ ಈ ಅಮೃತವನ್ನು ಆ ನಾಗಮಾತೆಗೆ ಕೊಡುತ್ತೇನೆ. ನನ್ನ ತಾಯಿಯನ್ನು ಬಿಡುಗಡೆ ಮಾಡುತ್ತೇನೆ. ಅನಂತರ ನನ್ನ ಪ್ರತಿಜ್ಞೆಯಂತೆ ಆ ಹಾವುಗಳನ್ನು ತಿನ್ನುತ್ತೇನೆ. ಅನಂತರ ನೀನು ಬೇಕಾದರೆ ಆ ಅಮೃತವನ್ನು ಅವಳಿಂದ ಅಪಹರಿಸಿ ತರಬಹುದು'' ಎಂದು ನುಡಿದು ಅಮೃತವನ್ನು ಹೊತ್ತು ತಾಯಿಯ ಬಳಿಗೆ ಬಂದನು. ಅವಳನ್ನು ಕರೆದುಕೊಂಡು ಕದ್ರುವಿನ ಹತ್ತಿರ ಬಂದು ಅವಳಿಗೆ ಅಮೃತ ಒಪ್ಪಿಸಿದನು. ಅಮೃತ ದರ್ಶನದಿಂದಲೇ ಅವಳಿಗೆ ಪರಮಾನಂದವಾಯಿತು. ಅವಳು ತನ್ನ ಊಳಿಗದಿಂದ ವಿನತೆಯನ್ನು ಬಿಡುಗಡೆ ಮಾಡಿದಳು. ತನ್ನ ತಾಯಿಯೊಂದಿಗೆ ಆನಂದದಿಂದ ಮನೆಗೆ ಬಂದನು. ಇತ್ತ ಹಾವುಗಳೆಲ್ಲವೂ ತಮ್ಮ ಮನೆಗೆ ಅಮೃತ ಬಂದದ್ದು ಹರ್ಷದಿಂದ ಮತ್ತರಾದವು. ಅವರೆಲ್ಲರು ಅಮೃತ ಪ್ರಾಶನಕ್ಕಾಗಿ ಒಬ್ಬರೊನ್ನಬ್ಬರು ಸಂಧಿಸಿ ಸಂತೋಷದಿಂದ ಉತ್ಸವ ಮಾಡತೊಡಗಿದರು.

ಹೀಗೆ ಹಾವುಗಳೆಲ್ಲವೂ ಅಮೃತ ಪಾನದ ಸಿದ್ಧತೆಯಲ್ಲಿದ್ದಾಗ ದೇವೇಂದ್ರನು ಸೂಕ್ಷ್ಮ ರೂಪದಿಂದ ಬಂದು ಅಮೃತವನ್ನು ಕದ್ದು ಅದರ ಸ್ಥಾನದಲ್ಲಿ ವಿಷದ ಪಾತ್ರೆಯನ್ನಿಟ್ಟನು. ದೇವೇಂದ್ರನ ಒಳ್ಳೇ ಚಾಪಲ್ಯ ಚಾತುರ್ಯದಿಂದ ಮಾಡಿದ ಈ ಕ್ರೌರ್ಯ ಕಾರ್ಯವು ಕದ್ರುವಿಗಾಗಲಿ, ಅವಳ ಮಕ್ಕಳಾದ ಸರ್ಪ ಸಂತಾನಕ್ಕಾಗಲಿ ಕಂಡು ಬರಲಿಲ್ಲ; ತಿಳಿಯಲೂ ಇಲ್ಲ. ಅವಳು ತನ್ನ ಮಕ್ಕಳನ್ನು ಸಂಭ್ರಮದಿಂದ ಕರೆದು ಎಲ್ಲರಿಗೂ ಬಾಯಿ ತೆರೆಯಲು ಹೇಳಿದಳು. ಪ್ರತಿಯೊಂದರ ಬಾಯಿಯಲ್ಲಿ ಹಲವಾರು ಹನಿ ವಿಷ ಹಾಕಿ, ''ನಿಮ್ಮ ಮುಖದಲ್ಲಿ ಈ ದೇವಲೋಕದ ಬಿಂದುಗಳು ನಿರಂತರ ಇರಲಿ. ಮುಂದೆ ಹುಟ್ಟುವ ನಿಮ್ಮ ಸಂತತಿಯಾದ ಹಾವುಗಳ ಬಾಯಿಯಲ್ಲೂ ಈ ಹನಿಗಳೂ ನಿರಂತರವಾಗಿ ಉಳಿಯಲಿ.'' ಅಲ್ಲಿ ಬಂದ ಎಲ್ಲ ಪುರುಷರು. ದೇವತೆಗಳು, ಗಂಧರ್ವರು ''ತಥಾಸ್ತು'' ಎಂದು ನುಡಿದರು. ಆ ಸಿದ್ಧ, ತಾಪಸ, ಸುರಸತ್ತಮರ ವರದಿಂದ ಹಾವುಗಳ ಮುಖದಲ್ಲಿ ಇಂದಿಗೂ ಆ ವಿಷ ಬಿಂದುಗಳು ಉಳಿದು ಬಂದಿವೆ.

ಅಷ್ಟರಲ್ಲಿ ಗರುಡನು ತನ್ನ ಪ್ರತಿಜ್ಞೆಯಂತೆ ಹಾವುಗಳನ್ನು ತಿನ್ನುತ್ತ ಬಂದನು. ಕೈಗೆ ಸಿಕ್ಕ ಸರ್ಪಗಳನ್ನು ತಿನ್ನತ್ತ ಸರ್ಪ ಸಂಹಾರ ಕಾರ್ಯವನ್ನೆ ನಡೆಸಿದನು. ಅದನ್ನು ನೋಡಿದ

ಹಾವುಗಳಿಗೆ ಖಾತ್ರಿ ಆಯಿತು - ತಾವು ಕುಡಿದಿದ್ದು ಅಮೃತವಲ್ಲ ವಿಷ ಎಂದು. ಗರುಡನ ಏಟ, ಊಟ, ಆಟಗಳನ್ನು ತಾಳಲಾರದೆ ಹಾವುಗಳೆಲ್ಲವೂ ದಿಕ್ಕಾಪಾಲಾಗಿ ಓಡಿದವು. ಕೆಲವು ಗುಡ್ಡ ಏರಿದವು. ಹಲವು ಸಾಗರ ಸೇರಿದವು. ಪಾತಾಳಕ್ಕೆ ಎಷ್ಟೋ ಇಳಿದವು. ಹೊದರದಲ್ಲಿ ಹೊಕ್ಕವು. ವನ ಬನಗಳಲ್ಲಿ ಹರಿದು ಹೋದವು. ಗಿಡಗಳ ಪೊದರುಗಳಲ್ಲಿ ಅಡಗಿದವು. ಗರುಡನು ಕಂಡ ಕಂಡ ಹಾವುಗಳನ್ನೆಲ್ಲ ತಿಂದು, ಅಗಿದು, ಜಗಿದು ಆನಂದ ಪಟ್ಟು ತಾಯಿ ತಂದೆಗಳ ಬಳಿಗೆ ಬಂದು "ಇಂದು ನನ್ನ ಹಸಿವೆ ಹಿಂಗಿತು. ನನ್ನ ಕರ್ತವ್ಯವೂ ಪೂರೈಸಿತು. ನಾನು ಇನ್ನು ಹರಿಯ ಸೇವೆಗೆ ಹೋಗುತ್ತೇನೆ." ಎಂದು ಹೇಳಿ ವಿನತೆ ಹಾಗೂ ಕಶ್ಯಪರ ಪೂಜೆ ಮಾಡಿ ಭಗವಂತನ ಬಳಿಗೆ ಹೋದನು. ಈ ಗರುಡನ ಚರಿತ್ರೆ ಕೇಳಿದವರು ಸರ್ವ ಪಾಪಗಳಿಂದ ಮುಕ್ತರಾಗಿ ದೇವಲೋಕದಲ್ಲಿ ಗೌರವ ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪುಣ್ಯಕಾರ್ಯದ ಫಲ ಎಂಬ ನಲವತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ದ್ವಿಜಧರ್ಮ

ಅಧ್ಯಾಯ - ೪೫

**ಭೀಷ್ಮ ಉವಾಚ**

**"ಅತ, ಪರಂ ತು ವಿಪ್ರರ್ಷೇ ಚಾಂಡಾಲ ಪತಿತೋ ದ್ವಿಜಃ ।**
**ಪುಲಸ್ತ್ಯ ಚ ಬಹೂಂ ಶೋಕಾಂ ಜಗಾಮ ಕಶ್ಯಪಂ ಮುನಿಂ ॥"**

**ಬ್ರಹ್ಮ :-** ಅನಂತರ ಹೊಲೆಯರ ಗುಂಪಿನಲ್ಲಿ ಸೇರಿಕೊಂಡು ಪತಿತನಾದ ಆ ದ್ವಿಜನು ಅತ್ತು, ಗೋಗರೆದು ಶೋಕಿಸಿ, ಕಶ್ಯಪ ಮುನಿಗಳ ಬಳಿಗೆ ಬಂದನು. ಅವರಿಗೆ ಪ್ರಾರ್ಥಿಸಿದನು. ಶ್ರೇಷ್ಠ ಮುನಿಗಳೆ, ನನಗೆ ಹಿತೋಪದೇಶ ನೀಡಿರಿ. ನಾನು ಈ ಪಾಪದಿಂದ ಹೇಗೆ ಮುಕ್ತನಾಗಬೇಕೋ ಹೇಳಿರಿ. ನನ್ನನ್ನು ಕರುಣೆ ತೋರಿ ಉದ್ಧರಿಸಿರಿ.

**ಕಶ್ಯಪ :-** "ಮ್ಲೆಂಛರನ್ನು ನೋಡಿದ ಮಾತ್ರಕ್ಕೆ ನಿನಗೆ ವೈರಾಗ್ಯ ಹುಟ್ಟಿದೆ. ಇನ್ನು ಮುಂದೆ ನೀನು ಪಶ್ಚಾತ್ತಾಪದಿಂದ ಪುನೀತನಾಗಿರುವಿ. ಪ್ರತಿದಿನವೂ ನೀನು ಗಾಯತ್ರೀ ಜಪ ಮಾಡು. ಯಜ್ಞ ಕಾರ್ಯ ಕೈಕೊಳ್ಳು, ಹರಿಮಂತ್ರ ಜಪಿಸು. ಚಂದ್ರಾಯಣ ವ್ರತ ಆಚರಿಸು. ಹಗಲಿರುಳೂ ಹರಿಯನ್ನು ಸ್ಮರಿಸು. ಅವನ ನಾಮಸ್ಮರಣೆ ಮಾಡಿ, ಹರಿದಿನ ಏಕಾದಶಿಯಂದು ಉಪವಾಸ ಮಾಡು. ಹಗಲಿರುಳು ಹರಿಯನ್ನು ನೆನೆ. ನಾರಾಯಣನನ್ನು ನಮಿಸು. ತೀರ್ಥಸ್ನಾನ ಮಾಡು. ಕ್ಷೇತ್ರಯಾತ್ರೆ ಮಾಡು. ಇವುಗಳಿಂದ ನಿನ್ನ ಪಾಪಗಳೆಲ್ಲವೂ ನಾಶವಾಗುವವು. ಪಾಪ ಕ್ಷಯವಾದ ಬಳಿಕ ನಿನ್ನ ಮೊದಲಿನ ಬ್ರಾಹ್ಮಣತ್ವವು ದೊರಕುವದು. ಈ ಸತ್ಕರ್ಮಾನುಸರಣೆಯಿಂದ ನಿನ್ನ ಪಾಪ ಪರಿಹಾರವಾಗಿ ಕೊನೆಗೆ ಮೋಕ್ಷ ಹೊಂದುವಿ." ಕಶ್ಯಪನ ಮಾತು ಕೇಳಿ ಆ ಭ್ರಷ್ಟ ದ್ವಿಜನು ಎಚ್ಚತ್ತು ಅವರು ಹೇಳಿದಂತೆ ಮಾಡಿದನು. ಪಶ್ಚಾತ್ತಾಪದಿಂದ ಪರಿಪೂರ್ಣನಾದನು. ಮುನಿಗಳು ಹೇಳಿದಂತೆ ವಿವಿಧ ಧರ್ಮ-ಕರ್ಮಾನುಷ್ಠಾನದಿಂದ ತನ್ನ ಘೋರ ಪಾಪಗಳನ್ನು ಹೋಗಲಾಡಿಸಿ ಕೊಂಡನು. ನಿರಂತರ ಜಪ ತಪಗಳಿಂದ ಪುನಃ ಬ್ರಾಹ್ಮಣ್ಯವನ್ನು ಸಂಪಾದಿಸಿದನು. ಅನಂತರ ನಿರಂತರ ಸಾಧನಾನುಷ್ಠಾನದಿಂದ ಅಂತ್ಯ ಕಾಲದಲ್ಲಿ ಹರಿನಾಮ ಸ್ಮರಣೆ ಮಾಡಿ, ದಿವ್ಯ ಲೋಕ ಪಡೆದನು.

**ಸದ್ವೃತ್ತಸ್ಯಾಖಿಲಂ ಪಾಪಂ ಕ್ಷಯಂ ಯಾತಿ ದಿನೇ ದಿನೇ ।**
**ಅಸದ್ವೃತ್ತಸ್ಯ ಪುಣ್ಯಂ ಹಿ ಕ್ಷಯಂ ಯಾತ್ಯಚಲೋಪಮಮ್ ॥**

ಸದಾಚಾರಿ ಮನುಷ್ಯನ ಪಾಪಗಳೆಲ್ಲವೂ ದಿನ ದಿನಕ್ಕೆ ಕರಗುತ್ತವೆ. ದುರಾಚಾರಿ ಮನುಷ್ಯನ ಪುಣ್ಯವು ಬೆಟ್ಟದಷ್ಟಿದ್ದರೂ ನಾಶವಾಗುತ್ತದೆ.

**ಅನಾಚಾರಾತ್ ಹತೋ ವಿಪ್ರಃ ಪ್ರಾಚಾರಾತ್ ಸುರತಾಂ ವ್ರಜೇತ್**
**ಅತಃ ಕಂಠಗತೈಃ ಪ್ರಾಣೈಃ ಆಚಾರಂ ಕುರುತೇ ದ್ವಿಜಃ ।**
**ಕರ್ಮಣಾ ಮನಸಾಂಗೇನ ಸದಾಚಾರಂ ಸದಾ ಕುರು ॥**

ಅನಾಚಾರದಿಂದ ದ್ವಿಜನು ಸತ್ತು ಹೋಗುತ್ತಾನೆ. ಸದಾಚಾರದಿಂದ ಅವನೇ ಭೂಮಿಯ ದೇವ ಎನಿಸುತ್ತಾನೆ. ಆದುದರಿಂದ ಯೋಗ್ಯ ದ್ವಿಜನು ಪ್ರಾಣಹೋಗುವ ಪ್ರಸಂಗ ಬಂದರೂ ತನ್ನ ಸದಾಚಾರ ಬಿಡುವದಿಲ್ಲ. ದೇಹದಿಂದ, ಮನಸ್ಸು, ಕೃತಿಗಳಿಂದ ವೇದ ಶಾಸ್ತ್ರೋಕ್ತವಾದ ಆಚಾರವನ್ನು ಯಾವಾಗಲೂ ಪಾಲಿಸಬೇಕು.

**ಹತಾಚಾರೋ ಹತೋ ವಿಪ್ರಃ ಸ್ವರ್ಗಲೋಕೇಷು ಗರ್ಹಿತಃ ।**
**ಆಚಾರಂ ತು ಪುನಃ ಕೃತ್ವಾ ಸುರಲೋಕೇ ಮಹೀಯತೇ ॥**

ತನ್ನ ದುರಾಚಾರದಿಂದ ಹತಪತಿತನಾದ ದ್ವಿಜನಿಗೆ ಸ್ವರ್ಗದಿ ಪುಣ್ಯಲೋಕಗಳ ಬಾಗಿಲುಗಳು ಮುಚ್ಚುತ್ತವೆ. ಆದರೆ ಸುದೈವದಿಂದ ಅವನಿಗೆ ಪಶ್ಚಾತ್ತಾಪವಾಗಿ ಮತ್ತೆ ಸದಾಚಾರ ಕೈಕೊಂಡರೆ ಅವನಿಗೆ ಪುನಃ ಸ್ವರ್ಗದಲ್ಲಿ ಸತ್ಕಾರವು ದೊರಕುವದು.

**ನಾರದ** :- ಯೋಗ್ಯರಾದ ದ್ವಿಜರನ್ನು ಪೂಜೆಮಾಡಿದರೆ ಜನರಿಗೆ ಏನು ಫಲ ಬರುವದು? ಹಾಗೂ ದ್ವಿಜರನ್ನು ಕಾಡಿ ಪೀಡಿಸಿದರೆ ಎಂತಹ ದುರ್ಗತಿ ಆಗುವದು, ಹೇಳಿರಿ?

**ಬ್ರಹ್ಮ**:- ಹಸಿವೆಯಿಂದ ಬಳಲಿದ ಬ್ರಹ್ಮಜ್ಞಾನಿಗಳಿಗೆ ಅತಿಥ್ಯನೀಡಿ ತನ್ನ ಶಕ್ತಿಗೆ ಅನುಗುಣವಾಗಿ ಭಕ್ತಿಯಿಂದ ಪೂಜಿಸದಿದ್ದರೆ ಆ ಮನುಷ್ಯನಿಗೆ ನರಕವಾಗುವದು. ಹಸಿದ ಜ್ಞಾನಿಯನ್ನು ಬಿರುನುಡಿಗಳಿಂದ ಅವಮಾನಿಸಿದರೆ, ಕೋಪದಿಂದ ಮನೆಯಿಂದ ಹೊರಗೆ ಹಾಕಿದರೆ ರೌರವ ನರಕದಲ್ಲಿ ಕೊಳೆಯಬೇಕು. ಆದುದರಿಂದ ಮನೆಗೆ ಬಂದ ಜ್ಞಾನಿಯನ್ನು ಎಂದೂ ಅವಮಾನಿಸಬಾರದು. ಮನೆಗೆ ಬಂದವರಿಗೆ ಊಟಕ್ಕೆ ಹಾಕದೆ ಬೈದು ಕಳಿಸಿದರೆ ಅವನು ದರಿದ್ರನಾಗಿ ಹಸಿವೆಯಿಂದ ಬಳಲಿ ಸತ್ತು ಕೊನೆಗೆ ಹಾಳು ಹುಳವಾಗಿ ಹುಟ್ಟಿ ಬಳಲುವನು. ಮುಷ್ಟಿ ದೊಣ್ಣೆ, ಬಡಿಗೆಗಳಿಂದ ಜ್ಞಾನಿ ವಿಪ್ರನನ್ನು ಹೊಡೆದ ಮನುಷ್ಯನು ನರಕದಲ್ಲಿ ದುಃಖಪಟ್ಟು ಜನ್ಮಾಂತರದಲ್ಲಿ ಕೋಳಿ ಕೊಕ್ಕರೆಯಾಗಿ ಹುಟ್ಟಿ ಹೊಟ್ಟೆ ಶೂಲೆಯಿಂದ ದುಃಖಿಸುವನು. ಜ್ಞಾನಿಯನ್ನು ಒದೆಯುತ್ತೇನೆ ಎಂದು ನುಡಿದವನು ಮುಂದೆ ಕುಂಟನಾಗುವನು ಹಾಗೂ ಲಕ್ವಾಹೊಡೆದು ಮೈಯೆಲ್ಲ ನಡಗುವದು.

**ಮಾತರಂ ಪಿತರಂ ವಿಪ್ರಂ ಸ್ನಾತಕಂ ಚ ತಪಸ್ವಿನಂ ।**
**ಹತ್ವಾ ಗುರುಗಣಂ ಕ್ರೋಧಾತ್ ಕುಂಭೀಪಾಕೇ ವಸೇನ್ನರಃ ॥**

ತಾಯಿ, ತಂದೆ, ತಪಸ್ವಿ, ದ್ವಿಜ, ಅಧ್ಯಯನ ಮುಗಿಸಿದ ವಿದ್ಯಾರ್ಥಿ, ಗುರು, ಇವರನ್ನು ಹೊಡೆದು ಬಡೆದು ಕೊಂದರೆ, ಸಿಟ್ಟಿಗೆದ್ದು ಅವಮಾನಮಾಡಿದರೆ, ಬಹು ಕಾಲ ಕುಂಭೀಪಾಕ ನರಕದಲ್ಲಿ ನರಳಬೇಕಾಗುವದು. ಜ್ಞಾನಿಗಳಿಗೆ ಅನ್ಯಾಯವಾಗಿ ಬಿರುನುಡಿಗಳನ್ನಾಡಿದರೆ

ಕುಷ್ಠರೋಗ ಉಂಟಾಗುವದು. ಅವರ ತಪ್ಪುಗಳನ್ನು ಹುಡುಕಿ ನಿಂದೆ ಮಾಡಿದರೆ ಏಳು ಕುಲ ನರಕದಲ್ಲಿ ಬೀಳುವರು. ವಿದ್ವಾಂಸರ ಧನವನ್ನು ಅಪಹರಿಸಿ ತಿಂದರೆ ಹಿಂದಿನ ಏಳು ಮುಂದಿನ ಹತ್ತು ಕುಲಗಳು ದಗ್ಧವಾಗುತ್ತವೆ.

**ನ ವಿಷಂ ವಿಷಮಿತ್ಯಾಹುಃ ಬ್ರಹ್ಮಸ್ವಂ ವಿಷಮುಚ್ಯತೇ ।**
**ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರ ಪೌತ್ರಕಂ ॥**

ವಿಷವು ವಿಷವಲ್ಲ. ಅಂದರೆ ಅಷ್ಟು ಘಾತಕವಲ್ಲ. ಆದರೆ ಬ್ರಹ್ಮಜ್ಞಾನಿಯ ಧನವು ಮಾತ್ರ ಘೋರ ವಿಷ. ವಿಷವು ತಿಂದವನೊಬ್ಬನನ್ನೇ ಕೊಂದರೆ ಈ ಬ್ರಹ್ಮಸ್ವವು ಕದ್ದವನ ಮಕ್ಕಳು ಮೊಮ್ಮಕ್ಕಳನ್ನೂ ನಾಶ ಮಾಡುತ್ತದೆ. ಒಬ್ಬ ವೇದಶಾಸ್ತ್ರ ಪಂಡಿತನನ್ನು ಕೊಂದರೆ ಲಕ್ಷ ಬ್ರಹ್ಮಹತ್ಯ ಮಾಡಿದಂತೆ ಶಿವ ಭಕ್ತ ವಿಷ್ಣು ಭಕ್ತರನ್ನು ಕೊಂದರೆ ಇದರ ಹತ್ತು ಪಟ್ಟು ಪಾಪ. ಮೂರು ವೇದ ಓದಿದ ವಿದ್ಯಾರ್ಥಿಯನ್ನು ಹಾಗೂ ವೇದಾಧ್ಯಯನ ಸಂಪನ್ನ ದ್ವಿಜನನ್ನು ಕೊಂದರೆ ಆ ಪಾಪಕ್ಕೆ ಕೊನೆಯಿಲ್ಲ. ಮನುಷ್ಯನು ಆತ್ಮಘಾತಮಾಡಿ ಕೊಳ್ಳಬಾರದು. ಆತ್ಮಹತ್ಯೆಯಿಂದ ಬ್ರಹ್ಮಹತ್ಯಾ ಪಾಪ ಬರುವದು. ತನ್ನನ್ನು ಕೊಲ್ಲಲು ಬಂದವನನ್ನು ಆತ್ಮರಕ್ಷಣೆಗಾಗಿ ಆ ಕ್ಷಣದಲ್ಲಿಯೇ ಕೊಂದರೆ ಪಾಪವಿಲ್ಲ. ಮತ್ತು ಆತತಾಯಿಯನ್ನು ಕೊಂದರೂ ಪಾಪವಿಲ್ಲ.

**ಅಗ್ನಿದೋ ಗರದಶ್ಚೈವ ಧನಹಾರೀ ಚ ಸುಪ್ತಹಃ ।**
**ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ ॥**

ಮನೆಗೆ ಬೆಂಕಿ ಹಚ್ಚುವವ, ವಿಷ ಹಾಕುವವ, ಧನ ಕಳುವು ಮಾಡುವವ, ಮಲಗಿದವನನ್ನು ಕೊಲ್ಲುವವ, ಹೊಲ ಮನೆಗಳನ್ನು ಕಸಿದುಕೊಳ್ಳುವವ, ಹೆಂಡಂದಿರನ್ನು ಅಪಹರಿಸುವವ ಇವರು ಆರು ಜನ ಆತತಾಯಿ ಎನಿಸುವರು. ಇವರನ್ನು ಕೊಂದರೆ ಪಾಪವಿಲ್ಲ.

**ನಾರದ :-** ದ್ವಿಜರಾದವರು ಪಾಪವಿಲ್ಲದೆ ಬದುಕಲಿಕ್ಕಾಗಿ ಯಾವ ವೃತ್ತಿ ಅವಲಂಬಿಸಬೇಕು ಹೇಳಿರಿ ?

**ಬ್ರಹ್ಮ:-** ಯಾಚನೆ ಮಾಡದೆ ತಾನಾಗಿ ಬಂದ ಭಿಕ್ಷೆಯು ಪ್ರಶಸ್ತವಾದುದು. ಅದಕ್ಕಾಗಿ ಉಂಛ ವೃತ್ತಿ ಎಂದರೆ ಹೊಲಗಳಲ್ಲಿ ರಾಶಿ ಮಾಡಿಕೊಂಡು ರೈತರು ಧಾನ್ಯ ಮನೆಗೆ ವೈಯ್ದ ಬಳಿಕ ಅಲ್ಲಲ್ಲಿ ಉದುರಿ ಬಿದ್ದ ಹಕ್ಕಲು ತೆನೆಗಳನ್ನು ಆರಿಸಿ ಕೊಂಡು ಅದರ ಮೇಲೆ ಬದುಕಬೇಕು. ಇದು ಒಳ್ಳೇ ಉಪಜೀವನ ಸಾಧನ ದೊಡ್ಡ ದೊಡ್ಡ ಮುನಿಗಳು ಇದರಿಂದಲೆ ಬದುಕಿ ದಿವ್ಯ ಗತಿಯನ್ನು ಹೊಂದಿದರು. ಯಜ್ಞ ಕಾರ್ಯದಲ್ಲಿ ಸಹಕರಿಸಿ ಯಜ್ಞ ಶೇಷವನ್ನು ದಕ್ಷಿಣಾ ರೂಪವಾಗಿ ಪಡೆಯಬಹುದು.

**ಪೂಜನಂ ಯಜನಂ ಕೃತ್ವಾ ಗೃಹೀತವ್ಯಂ ಧನಂ ದ್ವಿಜೈಃ ।**
**ಪಾಠಯಿತ್ವಾ ಪಠಿತ್ವಾ ಚ ಕೃತ್ವಾ ಸ್ವಸ್ತ್ಯಯನಂ ಶುಭಂ ।**
**ಬ್ರಾಹ್ಮಣಾನಾಂ ಇದಂ ಜೀವ್ಯಂ ಶಿಷ್ಟಾ ವೃತ್ತಿಃ ಪ್ರತಿಗ್ರಹಃ ।**
**ಶಾಸ್ತ್ರೋಪಜೀವಿನೋ ಧನ್ಯಾಃ ಧನ್ಯಾ ವೃಕ್ಷೋಪ ಜೀವಿನಃ ॥**

ವೇದಗಳ ಅಧ್ಯಯನ, ಪಾರಾಯಣ ಜಪ, ಯಜ್ಞ, ದೇವರ ಪೂಜೆ, ಮುಂತಾದವುಗಳನ್ನು ಮಾಡಿ ದ್ವಿಜರು ಧನವನ್ನು ಸ್ವೀಕರಿಸಬಹುದು ಅದರಂತೆ

ಇನ್ನೊಬ್ಬರಿಗೆ ಪಾಠ ಹೇಳಿ, ತಾನೂ ಪಠಿಸಿ ಮತ್ತು ಆಶೀರ್ವಾದ ಮಂತ್ರ ಹೇಳಿ ದಕ್ಷಿಣಾರೂಪವಾಗಿ ದ್ರವ್ಯ ಸ್ವೀಕರಿಸಿ ದ್ವಿಜರು ಬದುಕಬಹುದು. ದಾನ ದಕ್ಷಿಣೆ ಸ್ವೀಕರಿಸುವದು ದ್ವಿಜರಿಗೆ ಯೋಗ್ಯವಾದ ವೃತ್ತಿ ಎನಿಸುವದು. ಶಾಸ್ತ್ರದಿಂದ ಬದುಕುವವರು ಧನ್ಯರು. ಅದರಂತೆ ವೃಕ್ಷಗಳ ಫಲ, ಗಡ್ಡೆ ಗೆಣಸು ತಿಂದು ಬದುಕುವವರು ಧನ್ಯರು.

**'ಧನ್ಯಾ ವೃಕ್ಷಲತಾ ಜೀವ್ಯಾಃ ವಾಟೀ ಸಸ್ಯೋಪಜೀವಿನಃ।'**

ಮರ ಬಳ್ಳಿಗಳಿಂದ ಜೀವಿಸುವವರೂ ಮತ್ತು ತೋಟ ಹೊಲಗಳಲ್ಲಿ ಬೆಳೆಯುವ ಪಯರು ಧಾನ್ಯ ತಿಂದು ಅಯಾಚಿತ ವೃತ್ತಿಯಿಂದ ಬದುಕುವವರು ಧನ್ಯರು. ಕೃಷಿ ಮಾಡಿ, ಕಾಳು ಬೆಳೆದು, ಒಕ್ಕಲು ಮಾಡಿ, ಮನೆಯಲ್ಲಿ ಕುದಿಸಿ, ಬೇಯಿಸಿ ಅನ್ನವನ್ನು ಸಿದ್ಧಪಡಿಸುವವರೆಗೆ ಅನೇಕ ಸೂಕ್ಷ್ಮ ಜಂತುಗಳು ಸತ್ತು ಹೋಗುವವು. ಅದರಿಂದ ಬಂದ ಪಾಪ ಕಳೆದುಕೊಳ್ಳಲು ನವ ಧಾನ್ಯಗಳನ್ನು ದ್ವಿಜರಿಗೆ ದಾನ ಕೊಡಬೇಕು. ಆಪತ್ಕಾಲದಲ್ಲಿ ದ್ವಿಜನು ಕ್ಷತ್ರಿಯ ವೃತ್ತಿಯಿಂದಲೂ ಬದುಕಬಹುದು. ವೀರವ್ರತದಿಂದ ನ್ಯಾಯವಾದ ಯುದ್ಧಗಳಲ್ಲಿ ರಾಜರಿಂದ ಹಣ ತೆಗೆದುಕೊಂಡು ಯುದ್ಧ ಮಾಡಬಹುದು. ಅದರಿಂದ ಬಂದ ಹಣವನ್ನು ಯಜ್ಞ, ಯಾಗ, ಪಿತೃಕಾರ್ಯ, ದಾನ ಧರ್ಮಗಳಿಗೆ ಉಪಯೋಗಿಸಬಹುದು. ಅದಕ್ಕಾಗಿ ದ್ವಿಜನು ಚತುರ್ವೇದಗಳೊಂದಿಗೆ ಧನುರ್ವೇದ, ಅಶ್ವವಿದ್ಯೆ, ಗಜವಿದ್ಯೆ ಕಲಿತು ರಥ ಹಾಗೂ ಭೂಮಿ ಯುದ್ಧ ಮುಂತಾದ ಸಮರ ಪ್ರಕಾರಗಳನ್ನು ತಿಳಿದು ಸಂದರ್ಭ ಬಂದಾಗ ರಾಷ್ಟ್ರ ರಕ್ಷಣೆಗೆ ಸಿದ್ಧರಾಗಬೇಕು.

**ಸಾಧು ಸಾಧ್ವೀ ಗುರೂಣಾಂ ಚ ನೃಪಾಣಾಂ ರಕ್ಷಣಂ ಧ್ರುವಂ।**
**ಯತ್ಪುಣ್ಯಂ ಲಭತೇ ಶೂರಃ ಕಥಂ ತದ್ ಬ್ರಹ್ಮವಾದಿಭಿಃ ॥**

ಸಜ್ಜನರು, ಪತಿವ್ರತೆಯರು ಹಾಗೂ ಗುರುಗಳು ಮತ್ತು ಸಂಕಟದಲ್ಲಿರುವ ರಾಜರು ಮುಂತಾದವರನ್ನು ವೈರಿಗಳಿಂದ ರಕ್ಷಿಸಿ, ದ್ವಿಜನಾದವನು ರಾಷ್ಟ್ರ ಕ್ಷೇಮ ಕಾರ್ಯ ಮಾಡಿದರೆ ಬರುವ ಪುಣ್ಯವು ಯಾವ ಬ್ರಹ್ಮಜ್ಞಾನಿಗೆ ಬರುವದು? ನ್ಯಾಯದ ಸಲುವಾಗಿ ಯುದ್ಧ ಮಾಡಿ ರಣಾಂಗಣದಲ್ಲಿ ಮರಣ ಹೊಂದಿದ ದ್ವಿಜನು ಬ್ರಹ್ಮಜ್ಞಾನಿಗೂ ಅಗಮ್ಯವಾದ ಸ್ಥಾನವನ್ನು ಪಡೆಯುತ್ತಾನೆ. ಆದರೆ ದ್ವಿಜನು ಧರ್ಮಯುದ್ಧ ಮಾತ್ರ ಮಾಡಬೇಕು. ಬೆನ್ನ ಹಿಂದೆ ಹೊಡೆಯಬಾರದು. ಓಡಿ ಹೋಗುವವನನ್ನು, ಆಯುಧ ರಹಿತನನ್ನು, ಅಂಜುಬುರುಕನನ್ನು, ಯುದ್ಧ ಬಿಟ್ಟು ಕುಳಿತವನನ್ನು, ಶರಣಾಗತನನ್ನು ಸ್ತೋತ್ರ ಪ್ರಿಯನನ್ನು ಯುದ್ಧದಲ್ಲಿ ಹೊಡೆಯಬಾರದು. ಇದು ಕ್ಷತ್ರಿಯರ ಹಾಗೂ ಆ ವೃತ್ತಿ ಅಂಗೀಕರಿಸಿದ ದ್ವಿಜನ ಕರ್ತವ್ಯವಾಗಿರುತ್ತದೆ.

ಇಂತಹ ಧರ್ಮಯುದ್ಧದಲ್ಲಿ ಮರಣ ಹೊಂದಿದರೂ ಸ್ವರ್ಗವನ್ನು ಹೊಂದುತ್ತಾರೆ. ಅಲ್ಲಿ ವಿವಿಧ ಸುಖ ವಿಲಾಸಗಳನ್ನು ಅನುಭವಿಸುತ್ತಾರೆ. ಇಂತಹ ಧರ್ಮ ಯುದ್ಧ ಮಾಡಿದ ಕ್ಷತ್ರಿಯರು ಏಳು ಜನ್ಮ ಸಾಮ್ರಾಟರಾಗಿ ಜನಿಸಿ, ಕೊನೆಗೆ ಸ್ವರ್ಗದಲ್ಲಿ ಸುಖದಿಂದ ಬಾಳುತ್ತಾರೆ. ದ್ವಿಜರು ಶಸ್ತ್ರ ಹಿಡಿದು ಇಂತಹ ಧರ್ಮಯುದ್ಧ ಬಿಟ್ಟು, ಅನ್ಯಾಯದ ಯುದ್ಧ ಮಾಡಿದರೆ ನರಕಗಾಮಿ ಆಗುತ್ತಾನೆ. ದ್ವಿಜನು ವೇದ ಶಾಸ್ತ್ರಗಳನ್ನು ಓದದೇ ಇದ್ದರೆ, ಕ್ಷತ್ರ ವೃತ್ತಿ ಮಾಡುವ ಧೈರ್ಯವಿಲ್ಲದಿದ್ದರೆ ಆಪತ್ಕಾಲದಲ್ಲಿ ವ್ಯಾಪಾರವನ್ನಾದರೂ ಮಾಡಬೇಕು.

ಅಥವಾ ಬೇಸಾಯವನ್ನಾದರೂ ಮಾಡಬೇಕು. ಆಳುಗಳನ್ನಿಟ್ಟುಕೊಂಡು ಕೃಷಿ, ವ್ಯಾಪಾರ ಮುಂತಾದವುಗಳನ್ನು ಮಾಡಿಸಿ ತಾನು ಮೇಲೆ ನೋಡಬೇಕು.

ಎಂತಹ ಸಂದರ್ಭದಲ್ಲಿಯೂ ತನ್ನ ದ್ವಿಜತ್ವೋಚಿತವೃತ್ತಿಯನ್ನು ಮಾತ್ರ ತ್ಯಜಿಸಬಾರದು. ವ್ಯಾಪಾರದಲ್ಲಿ ಸುಳ್ಳು ಮಾತನಾಡಬಾರದು. ಎಣ್ಣೆ, ತುಪ್ಪ, ಅನ್ನ, ರೊಟ್ಟಿ ಮುಂತಾದ ಪದಾರ್ಥಗಳನ್ನು ಮಾರಬಾರದು. ಪಕ್ವ ವಸ್ತುಗಳನ್ನು ವಿಕ್ರಯಿಸಬಾರದು. ತೂಕ ಅಳತೆಗಳಲ್ಲಿ ಯಾರಿಗೂ ಮೋಸ ಮಾಡಬಾರದು. ಸುಳ್ಳು ನುಡಿಯಬಾರದು. ಸತ್ಯ ಬಿಡಬಾರದು, ಸತ್ಯಕ್ಕೆ ಸಮನಾದ ಧರ್ಮವಿಲ್ಲ; ಸುಳ್ಳಿಗೆ ಸಮ ಪಾಪವಿಲ್ಲ. ತಾನು ವ್ಯಾಪಾರಮಾಡಿ ಬಂದ ಲಾಭವನ್ನು ಗುರು, ಹಾಗೂ ಶಾಸ್ತ್ರಾಧ್ಯಯನ ಸಂಪನ್ನ ವಿದ್ವಾಂಸರಿಗೆ ದಾನಕೊಡಬೇಕು. ಬಳಿಕ ಉಳಿದ ದ್ರವ್ಯದಿಂದ ತಾನು ಜೀವಿಸಬೇಕು. ನ್ಯಾಯಮಾರ್ಗದಿಂದ ದ್ರವ್ಯ ಸಂಪಾದಿಸಿ ದೇವ ದ್ವಿಜರ, ಪಿತೃಗಳ ಆರಾಧನೆ ಮಾಡುವವರಿಂದ ಅಕ್ಷಯ ಫಲ ಪಡೆಯುತ್ತಾನೆ. ಲೋಭ ಮೋಸಗಳನ್ನು ಬಿಟ್ಟು ಮಾಡಿದ ವ್ಯಾಪಾರದಿಂದ ದೊರೆತ ಲಾಭಾಂಶವನ್ನು ದಾನಧರ್ಮಾದಿ ಪುಣ್ಯ ಕರ್ಮಗಳಿಗೆ ವಿನಿಯೋಗಿಸಿದರೆ ಮಹಾಫಲ ಉಂಟು.

## ಗೋವಿನ ಮಹಿಮೆ

ಕೃಷೀ ಮಾಡಿಸುವ ಪ್ರಸಂಗದಲ್ಲಿ ಕನಿಷ್ಠ ಮೂರು ಎತ್ತನ್ನಾದರೂ ಇಡಬೇಕು. ಒಂದು ದಿನದಲ್ಲಿ ಆರು ಗಂಟೆಗಿಂತ ಹೆಚ್ಚು ಹೊತ್ತು ಎತ್ತುಗಳನ್ನು ದುಡಿಸಬಾರದು. ಆ ದನಗಳನ್ನು ದುಷ್ಟ ಮೃಗಗಳಿಲ್ಲದ ಸುರಕ್ಷಿತ ಜಾಗದಲ್ಲಿ ಕಟ್ಟಿ ಹುಲ್ಲು ಮುಂತಾದ ಧಾನ್ಯದವಸಗಳನ್ನು ಹಾಕಿ ಮೇಯಿಸಬೇಕು. ದನಕಟ್ಟುವ ಸ್ಥಳದಲ್ಲಿ ಸೆಗಣಿ, ಮೂತ್ರಗಳು ಕುಣಿಗಳಲ್ಲಿ ಉಳಿಯದಂತೆ ಸ್ವಚ್ಛವಾಗಿ ಇಡಬೇಕು. ತನ್ನ ಶಯ್ಯಾಗೃಹದಂತೆ ಗೋಷ್ಠವನ್ನು ಕೂಡ ನಿರ್ಮಲವಾಗಿ ಇಡಬೇಕು. ಹಸು ಪಶುಗಳನ್ನು ಕಟ್ಟುವ ಸ್ಥಳವು ಪರಿಶುದ್ಧವಾಗಿರಬೇಕು ಎಂದೂ ತನ್ನ ಜೀವದಂತೆಯೇ ಹಸು ಪಶುಗಳನ್ನು ಉಪಚರಿಸಬೇಕೆಂದೂ ಕೆಳಗಿನ ಪ್ರಮಾಣ ವಚನಗಳಲ್ಲಿ ತಿಳಿಸಿದ್ದಾರೆ.

ಸದಾ ಗೋಮಯಮೂತ್ರಾಭ್ಯಾಂ ದಂಶೈಶ್ಚೈವ ವಿವರ್ಜಿತಂ ।
ನ ಮಲಂ ವಿಕ್ಷಿಪೇದ್ಗೋಷ್ಠೇ ಸರ್ವದೇವನಿಕೇತನೇ ॥

ಆತ್ಮನಃ ಶಯನೀಯಸ್ಯ ಸದೃಶಂ ಕಾರಯೇದ್ಬುಧಃ
ಸಮಂ ನಿರ್ವಾಪಯೇದ್ಯತ್ನಾಚ್ಛೀತವಾತರಜಸ್ತಥಾ ॥

ಪ್ರಾಣಸ್ಯ ಸದೃಶಂ ಪಶ್ಯೇದ್ಗಾಂ ಚ ಸಾಮಾನ್ಯವಿಗ್ರಹಂ ।
ಅಸ್ಯ ದೇಹೇ ಸುಖಂ ದುಃಖಂ ತಥಾ ತಸ್ಯೈವ ಕಲ್ಪತೇ ॥

ದನಕಟ್ಟುವ ಸ್ಥಳವು ಎಲ್ಲ ದೇವತೆಗಳ ಸ್ಥಾನವಾಗಿರುತ್ತದೆ. ಅಲ್ಲಿ ಚಳಿ, ಮಳೆ, ಬಿಸಿಲು ಗಾಳಿ, ಧೂಳು ಕಸಕಡ್ಡಿಗಳು ನುಗ್ಗದಂತೆ ಚೊಕ್ಕಟವಾಗಿರಿಸಬೇಕು. ನೊಣ ಹುಳ ಹುಪ್ಪಡಿ ಆಗ ದಂತೆ ನಿರ್ಮಲಗೊಳಿಸಬೇಕು. ತನ್ನ ದೇಹದಂತೆ ಪಶುಗಳ ದೇಹಕ್ಕು ಸುಖ ದುಃಖಗಳಾ ಗುತ್ತವೆ ಎಂದು ತಿಳಿದು ಅವುಗಳಿಗೆ ದುಃಖವಾಗದಂತೆ ಹೊಟ್ಟೆ ತುಂಬ ತಿನ್ನಿಸಿ ಹೊಲ ಮನೆಗಳ ಕೆಲಸ ಮಾಡಿಸಿಕೊಂಡರೆ ಆ ಮೂಕ ಪ್ರಾಣಿಯನ್ನು ದುಃಖ ಪಡಿಸಿದ ಪಾಪ ಬರುವದಿಲ್ಲ.

**ದುರ್ಬಲು ಪೀಡಯೇದ್ಯಸ್ತು ತಥೈವ ಗದಸಂಯುತಂ ।**
**ಅತಿಬಾಲಾತಿವೃದ್ಧಂ ಚ ಸ ಗೋಹತ್ಯಾಂ ಸಮಾಲಭೇತ್ ॥**

ಆದರೆ ಬೇನೆಬಂದ ಅಥವಾ ದುರ್ಬಲವಾದ ಎತ್ತನ್ನು ಹೂಡಬಾರದು, ಹಾಗೂ ಇನ್ನೂ ಕರುವಾಗಿದ್ದ ಅಥವಾ ಮುದುಕಾದ ಎತ್ತನ್ನು ಕೆಲಸಕ್ಕೆ ಉಪಯೋಗಿಸಬಾರದು. ಇಂತಹ ಪಶುಗಳನ್ನು ದುಡಿಸಿದರೆ ಗೋಹತ್ಯಾ ಪಾಪವು ಬರುವದು.

**ಯೋ ವಾಹಯೇದ್ವಿನಾಸಸ್ಯಂ ಖಾದತೀಂ ಗಾಂ ನಿವಾರಯೇತ್**
**ಮೋಹಾತ್ ತೃಣಂ ಜಲಂ ವಾಪಿ ಸ ಗೋಹತ್ಯಾಂ ಸಮಾಲಭೇತ್ ॥**

ತಿನ್ನಲು ಹುಲ್ಲು ಮೊದಲಾದ ದವಸ ಹಾಕದೆ ಎತ್ತನ್ನು ಹೂಡಬಾರದು. ಆ ಪಶು ಹುಲ್ಲು ತಿನ್ನುವಾಗ, ನೀರು ಕುಡಿಯುವಾಗ ಅದನ್ನು ಬಿಡಿಸಬಾರದು. ಅರ್ಧಕ್ಕೆ ಪಶುವಿನ ಪಾನ, ಭಕ್ಷಣ ಬಿಡಿಸಿದರೆ ಗೋಹತ್ಯಾ ಪಾಪ ಬರುವದು. ಅಮಾವಾಸ್ಯ, ಹುಣ್ಣಿವೆ, ಮುಂತಾದ ದಿನಗಳಲ್ಲಿ ನೇಗಿಲ ಹೂಡಬಾರದು. ಎತ್ತನ್ನು ದುಡಿಸಬಾರದು. ಇಂತಹ ದಿನಗಳಲ್ಲಿ ಆ ದನಗಳ ಮೈತೊಳೆದು ಕಾಡಿಗೆ ಹಚ್ಚಿ ಮೈಮೇಲೆ ಬಣ್ಣದಿಂದ ಚಿತ್ರತೆಗೆದು, ಹೂ ಏರಿಸಿ ಪಶುಗಳನ್ನು ಪೂಜಿಸಬೇಕು. ಹಸುವಿಗೆ ಮುಷ್ಟಿ ಆಹಾರ ಪ್ರತಿದಿನವೂ ತಪ್ಪದೇ ಕೊಟ್ಟರೆ ಸ್ವರ್ಗ ಪ್ರಾಪ್ತಿ. ಗೋ ದ್ವಿಜ ಎರಡೂ ಸಮವಾಗಿಯೇ ಪೂಜಾರ್ಹವಾಗಿವೆ.

**ನಾರದ :-** ದ್ವಿಜನು ಬ್ರಹ್ಮದೇವನ ಮುಖದಿಂದ ಉತ್ಪನ್ನನಾಗಿದ್ದಾನೆ. ಗೋವುಗಳು ಅವನಿಗೆ ಸಮ ಹೇಗೆ ಆಗುವವು?

**ಬ್ರಹ್ಮ :-** ಪೂರ್ವ ಕಾಲದಲ್ಲಿ ಬ್ರಹ್ಮದೇವರ ಮುಖದಿಂದ ಒಂದು ತೇಜಸ್ಸು ಹುಟ್ಟಿತು. ಅದೇ ವೇದ, ಅಗ್ನಿ, ದ್ವಿಜ, ಗೋ ಎಂದು ನಾಲ್ಕು ರೀತಿಯಿಂದ ಪರಿಣತವಾಯಿತು. ಮೊದಲು ಹುಟ್ಟಿದ್ದು (ವ್ಯಕ್ತವಾದದ್ದು) ವೇದ ಅನಂತರ ವಹ್ನಿ ಆಬಳಿಕ ಗೋ, ಆ ಮೇಲೆ ಬ್ರಾಹ್ಮಣ ಋಗ್ವೇದ ಯಜುರ್ವೇದ, ಸಾಮ, ಅಥರ್ವಣ ವೇದ ಎಂದು ವೇದವು ಈಗ ನಾಲ್ಕು ವಿಧವಾಗಿರುತ್ತದೆ. ಸೃಷ್ಟಿಯ ಆದಿಕಾಲದಲ್ಲಿ ಈ ನಾಲ್ಕೂ ವೇದಗಳನ್ನು ಒಂದೇ ರಾಶಿಯಾಗಿ ನಾನು ನಿರ್ಮಿಸಿದ್ದೆ. ಸರ್ವ ಜಗತ್ತಿನ ಸ್ಥಿತಿ ಸರ್ವಜನರ ಸದ್ಗತಿ ಈ ವೇದ ರಾಶಿಯಿಂದ ಆಗಲಿ ಎಂಬುದೇ ಇವುಗಳನ್ನು ಅಭಿವ್ಯಕ್ತಗೊಳಿಸಿದ ನನ್ನ ಮುಖ್ಯ ಮೂಲ ಉದ್ದೇಶ. ಅಗ್ನಿಯು ಯಜ್ಞ ಕುಂಡದಲ್ಲಿ ಆಹುತಿ ನೀಡಿದ ಹವಿಸ್ಸುಗಳನ್ನು ದೇವತೆಗಳಿಗೆ ಒಯ್ದು ಮುಟ್ಟಿಸುವ ಉದ್ದೇಶದಿಂದ ಭುಂಜಿಸುತ್ತಾನೆ. ದ್ವಿಜನು ವೇದೋಕ್ತ ವಿಧಿ ವಿಧಾನಗಳಿಂದ ಆ ಹವಿಸ್ಸನ್ನು ಸಿದ್ಧಪಡಿಸಿ, ವೈದಿಕ ಮಂತ್ರಗಳಿಂದ ಯಜ್ಞದ ಆಹುತಿಗಳನ್ನು ನೀಡುತ್ತಾನೆ. ಯಜ್ಞಕ್ಕೆ ಬೇಕಾಗುವ ತುಪ್ಪವು ಹಸುವಿನಿಂದ ಉತ್ಪನ್ನವಾಗುತ್ತದೆ.

ಆದುದರಿಂದ ಅಗ್ನಿ, ವೇದ ಮಂತ್ರಗಳು, ಬ್ರಾಹ್ಮಣ ಮತ್ತು ತುಪ್ಪ ಇವು ನಾಲ್ಕು ಯಜ್ಞ ಪುರುಷನಾದ ಪರಬ್ರಹ್ಮನ ಮುಖದಿಂದ ಏಕಕಾಲಕ್ಕೆ ಉತ್ಪನ್ನವಾಗಿರುತ್ತವೆ. ಈ ನಾಲ್ಕು ವಸ್ತುಗಳು ಇಲ್ಲದಿದ್ದರೆ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೇ ನಷ್ಟವಾಗಿ ಹೋಗುತ್ತಿತ್ತು. ಆದುದರಿಂದ ಹಸು ಪೂಜ್ಯವಾಗಿದೆ. ದ್ವಿಜರೂ, ದೇವತೆಗಳೂ, ದಾನವರೂ ಕೂಡ ಗೋವನ್ನು ಪೂಜಿಸಬೇಕು. ಹಸುವಿನ ದೇಹವು ಸರ್ವ ದೇವಮಯವಾಗಿಯೇ ನನ್ನಿಂದ ಸೃಷ್ಟವಾಗಿದೆ. ಗೋ ಜನ್ಮದಿಂದ ಯೋಗ್ಯ ಚೇತನಗಳಿಗೆ ಮೋಕ್ಷವನ್ನು ಕೂಡ ವರರೂಪದಿಂದ ನಾನು ಕರುಣಿಸಿದ್ದೇನೆ. ಪಾಪದ ಒಂದು ಕಣವೂ ಉಳಿಯಲಾರದು ಗೋವಿನ ದೇಹದಲ್ಲಿ.

ಹಸುವಿನ ದೇಹದಲ್ಲಿ ಹುಟ್ಟಿದ ಎಲ್ಲ ವಸ್ತುಗಳೂ ಪರಮ ಪವಿತ್ರವೇ. ಗೋಮಯ, ಗೋಮೂತ್ರ, ಗೋವಿನ ಹಾಲು, ಮೊಸರು, ತುಪ್ಪ- ಎಲ್ಲವೂ ಪವಿತ್ರ ಮತ್ತು ಪವಿತ್ರ ಕಾರಕ. ಗೋವಿನ ಹಾಲು, ಮೊಸರು, ತುಪ್ಪ, ಮಲ-ಮೂತ್ರ ಯಾವುದನ್ನೇ ತಿನ್ನಲಿ, ತಿಂದವರ ದೇಹದಲ್ಲಿ ಪಾಪ ಉಳಿಯಲಾರದು. ಆದುದರಿಂದಲೇ ಧರ್ಮನಿಷ್ಠರಾದ ಜನರು 'ಗವ್ಯ' ಎಂದರೆ ಗೋವಿನ ಹಾಲು, ಮೊಸರು, ತುಪ್ಪಗಳನ್ನು ಪ್ರತಿದಿನವೂ ತಿನ್ನುತ್ತಾರೆ. ಊಟ, ಉಪಹಾರಗಳನ್ನೆಲ್ಲ ತ್ಯಜಿಸಿ ಕೇವಲ ಹಸುವಿನ ಹಾಲು, ಮೊಸರು, ತುಪ್ಪಗಳನ್ನೇ ತಿಂದು ಇರುವದು 'ಪರಮ ಪವಿತ್ರ ಕಾರ್ಯ. ಅವನ ದೇಹವೆಲ್ಲವೂ ಪರಮ ಪಾವನವಾಗುವದು.

**ಅಗವ್ಯೈರ್ಯಶ್ಚ ಭುಂಕ್ತೇ ವೈ ಮಾಸಮೇಕಂ ನಿರಂತರಂ ।**
**ಭೋಜನೇ ತಸ್ಯ ಮರ್ತ್ಯಸ್ಯ ಪ್ರೇತಾದಂತಿ ತಥೈವ ಹಿ ॥**

ಗೋವಿನ ಹಾಲು ಮುಂತಾದವುಗಳಿಲ್ಲದೆ ಒಂದು ತಿಂಗಳು ಯಾವನು ಊಟ ಮಾಡುವನೋ ಅವನ ಊಟವನ್ನು ಪ್ರೇತಗಳು ತಿನ್ನುತ್ತವೆ. ಹಸುವಿನ ತುಪ್ಪದಿಂದ 'ಅಭಿಘಾರ' ಮಾಡಿದ ಪರಮಾನ್ನವು ಪವಿತ್ರವು. ಅದನ್ನು ಭಕ್ಷಿಸಿದವರಿಗೆ ಮೋಕ್ಷವು (ಪುಣ್ಯವು). ಇದರಂತೆ ಶಾಸ್ತ್ರೋಕ್ತ ರೀತಿಯಿಂದ ಸಿದ್ಧಪಡಿಸಿದ ಹವಿಷ್ಯಾನ್ನವನ್ನು ಭಕ್ಷಣ ಮಾಡಿ ಕೈಗೊಂಡ ಎಲ್ಲ ಕಾರ್ಯಗಳು ವಿಶೇಷ ಫಲಪ್ರದವಾಗಿವೆ. ಮದ್ಯ, ಮಾಂಸ ಸಂಪರ್ಕವಿಲ್ಲದ ಯಜ್ಞಕ್ಕೆ ಉಪಯೋಗಿಸಲು ಅರ್ಹವಾದ ಎಲ್ಲ ವಸ್ತುಗಳು 'ಹವಿಷ್ಯ' ಎನಿಸುತ್ತವೆ. ಅವೆಲ್ಲವುಗಳಿಗೂ ಹಸುವಿನ ತುಪ್ಪದಿಂದ 'ಅಭಿಘಾರ' ಮಾಡಿಯೇ ಯಜ್ಞ ಕಾರ್ಯ, ದೇವತಾ ಕಾರ್ಯಕ್ಕೂ ಉಪಯೋಗಿಸಬೇಕು. ಅಂದರೆ ಮಾತ್ರ ಯಜ್ಞರೂಪಿ ಶ್ರೀಹರಿಯು ಮತ್ತು ಇತರ ದೇವತೆಗಳು ಅಂಥ ಗೋಘೃತಾಕ್ತವಾದ ಹವಿರ್ಭಾಗವನ್ನು ಆನಂದದಿಂದ ಸ್ವೀಕರಿಸುವರು. ನೀಡಿದವರಿಗೆ ಪುಣ್ಯ ಫಲ ನೀಡುವರು.

**'ಸಕೃತ್ಪ್ರದಕ್ಷಿಣಂ ಕೃತ್ವಾ ಗೋಧನಂ ಚಾಭಿವಂದಯೇತ್ ।**
**ಸರ್ವಪಾಪೈರ್ವಿನಿರ್ಮುಕ್ತಃ ಸ್ವರ್ಗಂ ಚಾಕ್ಷಯಮಶ್ನುತೇ ॥**

ಗೋವನ್ನು ಒಂದು ಬಾರಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರೆ ಎಲ್ಲ ಪಾಪಗಳನ್ನೂ ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ.

**'ಸುರಾಚಾರ್ಯೋ ಯಥಾ ವಂದ್ಯಃ ಪೂಜ್ಯೋಽಸೌ ಮಾಧವೋ ಯಥಾ ।**
**ಸಪ್ತಪ್ರದಕ್ಷಿಣಂ ಕೃತ್ವಾಪ್ಯೈಶ್ವರ್ಯಂ ಪಾಕ ಶಾಸನಃ ॥**

ಸುರಗುರುವಾದ ಬೃಹಸ್ಪತ್ಯಾಚಾರ್ಯನು ಮತ್ತು ಶ್ರೀಹರಿಯು ಹೇಗೆ ಪೂಜ್ಯರಾಗಿದ್ದಾರೊ ಹಾಗೆಯೇ ಯಥಾ ಯೋಗ್ಯವಾಗಿ ಹಸುವು ಪೂಜ್ಯವೂ ವಂದ್ಯವೂ ಆಗಿದೆ. ಹಿಂದೆ ದೇವೇಂದ್ರನು ಗೋಮಾತೆಗೆ ಏಳು ಪ್ರದಕ್ಷಿಣೆ ಹಾಕಿ ಮಹಾ ಐಶ್ವರ್ಯ ಪಡೆದನು. ಪ್ರಾತಃಕಾಲದಲ್ಲಿ ಎದ್ದು ಗೋ ಕಟ್ಟುವ ಸ್ಥಳಕ್ಕೆ ಹೋಗಿ ಹಸುವಿನ ಕೊಂಬುಗಳನ್ನು ತೊಳೆದು ಆ ನೀರನ್ನು ತನ್ನ ತಲೆಯಮೇಲೆ ಪ್ರೋಕ್ಷಣ ಮಾಡಿಕೊಳ್ಳಬೇಕು. ಅಂದರೆ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯ ಬರುವದು. ಗೋಶೃಂಗದ ನೀರಿನಿಂದ ಪ್ರೋಕ್ಷಣೆ ಮಾಡಿಕೊಂಡರೆ ಸರ್ವ ತೀರ್ಥಾಭಿಷೇಕದ ಪುಣ್ಯ ಫಲ ಪ್ರಾಪ್ತವಾಗುವದು.

**ದುರ್ಬಲು ಪೀಡಯೇದ್ಯಸ್ತು ತಥೈವ ಗದಸಂಯುತಂ ।**
**ಅತಿಬಾಲಾತಿವೃದ್ಧಂ ಚ ಸ ಗೋಹತ್ಯಾಂ ಸಮಾಲಭೇತ್ ॥**

ಆದರೆ ಬೇನೆಬಂದ ಅಥವಾ ದುರ್ಬಲವಾದ ಎತ್ತನ್ನು ಹೂಡಬಾರದು, ಹಾಗೂ ಇನ್ನೂ ಕರುವಾಗಿದ್ದ ಅಥವಾ ಮುದುಕಾದ ಎತ್ತನ್ನು ಕೆಲಸಕ್ಕೆ ಉಪಯೋಗಿಸಬಾರದು. ಇಂತಹ ಪಶುಗಳನ್ನು ದುಡಿಸಿದರೆ ಗೋಹತ್ಯಾ ಪಾಪವು ಬರುವದು.

**ಯೋ ವಾಹಯೇದ್ವಿನಾಸಸ್ಯಂ ಖಾದತೀಂ ಗಾಂ ನಿವಾರಯೇತ್**
**ಮೋಹಾತ್ ತೃಣಂ ಜಲಂ ವಾಪಿ ಸ ಗೋಹತ್ಯಾಂ ಸಮಾಲಭೇತ್ ॥**

ತಿನ್ನಲು ಹುಲ್ಲು ಮೊದಲಾದ ದವಸ ಹಾಕದೆ ಎತ್ತನ್ನು ಹೂಡಬಾರದು. ಆ ಪಶು ಹುಲ್ಲು ತಿನ್ನುವಾಗ, ನೀರು ಕುಡಿಯುವಾಗ ಅದನ್ನು ಬಿಡಿಸಬಾರದು. ಅರ್ಧಕ್ಕೆ ಪಶುವಿನ ಪಾನ, ಭಕ್ಷಣ ಬಿಡಿಸಿದರೆ ಗೋಹತ್ಯಾ ಪಾಪ ಬರುವದು. ಅಮಾವಾಸ್ಯ, ಹುಣ್ಣಿವೆ, ಮುಂತಾದ ದಿನಗಳಲ್ಲಿ ನೇಗಿಲ ಹೂಡಬಾರದು. ಎತ್ತನ್ನು ದುಡಿಸಬಾರದು. ಇಂತಹ ದಿನಗಳಲ್ಲಿ ಆ ದನಗಳ ಮೈತೊಳೆದು ಕಾಡಿಗೆ ಹಚ್ಚಿ ಮೈಮೇಲೆ ಬಣ್ಣದಿಂದ ಚಿತ್ರತೆಗೆದು, ಹೂ ಏರಿಸಿ ಪಶುಗಳನ್ನು ಪೂಜಿಸಬೇಕು. ಹಸುವಿಗೆ ಮುಷ್ಟಿ ಆಹಾರ ಪ್ರತಿದಿನವೂ ತಪ್ಪದೇ ಕೊಟ್ಟರೆ ಸ್ವರ್ಗ ಪ್ರಾಪ್ತಿ. ಗೋ ದ್ವಿಜ ಎರಡೂ ಸಮವಾಗಿಯೇ ಪೂಜಾರ್ಹವಾಗಿವೆ.

**ನಾರದ :-** ದ್ವಿಜನು ಬ್ರಹ್ಮದೇವನ ಮುಖದಿಂದ ಉತ್ಪನ್ನನಾಗಿದ್ದಾನೆ. ಗೋವುಗಳು ಅವನಿಗೆ ಸಮ ಹೇಗೆ ಆಗುವವು?

**ಬ್ರಹ್ಮ :-** ಪೂರ್ವ ಕಾಲದಲ್ಲಿ ಬ್ರಹ್ಮದೇವರ ಮುಖದಿಂದ ಒಂದು ತೇಜಸ್ಸು ಹುಟ್ಟಿತು. ಅದೇ ವೇದ, ಅಗ್ನಿ, ದ್ವಿಜ, ಗೋ ಎಂದು ನಾಲ್ಕು ರೀತಿಯಿಂದ ಪರಿಣತವಾಯಿತು. ಮೊದಲು ಹುಟ್ಟಿದ್ದು (ವ್ಯಕ್ತವಾದದ್ದು) ವೇದ ಅನಂತರ ವಹ್ನಿ ಆಬಳಿಕ ಗೋ, ಆ ಮೇಲೆ ಬ್ರಾಹ್ಮಣ ಋಗ್ವೇದ ಯಜುರ್ವೇದ, ಸಾಮ, ಅಥರ್ವಣ ವೇದ ಎಂದು ವೇದವು ಈಗ ನಾಲ್ಕು ವಿಧವಾಗಿರುತ್ತದೆ. ಸೃಷ್ಟಿಯ ಆದಿಕಾಲದಲ್ಲಿ ಈ ನಾಲ್ಕೂ ವೇದಗಳನ್ನು ಒಂದೇ ರಾಶಿಯಾಗಿ ನಾನು ನಿರ್ಮಿಸಿದ್ದೆ. ಸರ್ವ ಜಗತ್ತಿನ ಸ್ಥಿತಿ ಸರ್ವಜನರ ಸದ್ಗತಿ ಈ ವೇದ ರಾಶಿಯಿಂದ ಆಗಲಿ ಎಂಬುದೇ ಇವುಗಳನ್ನು ಅಭಿವ್ಯಕ್ತ ಗೊಳಿಸಿದ ನನ್ನ ಮುಖ್ಯ ಮೂಲ ಉದ್ದೇಶ. ಅಗ್ನಿಯು ಯಜ್ಞ ಕುಂಡದಲ್ಲಿ ಆಹುತಿ ನೀಡಿದ ಹವಿಸ್ಸುಗಳನ್ನು ದೇವತೆಗಳಿಗೆ ಒಯ್ದು ಮುಟ್ಟಿಸುವ ಉದ್ದೇಶದಿಂದ ಭುಂಜಿಸುತ್ತಾನೆ. ದ್ವಿಜನು ವೇದೋಕ್ತ ವಿಧಿ ವಿಧಾನಗಳಿಂದ ಆ ಹವಿಸ್ಸನ್ನು ಸಿದ್ಧಪಡಿಸಿ, ವೈದಿಕ ಮಂತ್ರಗಳಿಂದ ಯಜ್ಞದ ಆಹುತಿಗಳನ್ನು ನೀಡುತ್ತಾನೆ. ಯಜ್ಞಕ್ಕೆ ಬೇಕಾಗುವ ತುಪ್ಪವು ಹಸುವಿನಿಂದ ಉತ್ಪನ್ನವಾಗುತ್ತದೆ.

ಆದುದರಿಂದ ಅಗ್ನಿ, ವೇದ ಮಂತ್ರಗಳು, ಬ್ರಾಹ್ಮಣ ಮತ್ತು ತುಪ್ಪ ಇವು ನಾಲ್ಕು ಯಜ್ಞ ಪುರುಷನಾದ ಪರಬ್ರಹ್ಮನ ಮುಖದಿಂದ ಏಕಕಾಲಕ್ಕೆ ಉತ್ಪನ್ನವಾಗಿರುತ್ತವೆ. ಈ ನಾಲ್ಕು ವಸ್ತುಗಳು ಇಲ್ಲದಿದ್ದರೆ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೇ ನಷ್ಟವಾಗಿ ಹೋಗುತ್ತಿತ್ತು. ಆದುದರಿಂದ ಹಸು ಪೂಜ್ಯವಾಗಿದೆ. ದ್ವಿಜರೂ, ದೇವತೆಗಳೂ, ದಾನವರೂ ಕೂಡ ಗೋವನ್ನು ಪೂಜಿಸಬೇಕು. ಹಸುವಿನ ದೇಹವು ಸರ್ವ ದೇವಮಯವಾಗಿಯೇ ನನ್ನಿಂದ ಸೃಷ್ಟವಾಗಿದೆ. ಗೋ ಜನ್ಮದಿಂದ ಯೋಗ್ಯ ಚೇತನಗಳಿಗೆ ಮೋಕ್ಷವನ್ನು ಕೂಡ ವರರೂಪದಿಂದ ನಾನು ಕರುಣಿಸಿದ್ದೇನೆ. ಪಾಪದ ಒಂದು ಕಣವೂ ಉಳಿಯಲಾರದು ಗೋವಿನ ದೇಹದಲ್ಲಿ.

ಹಸುವಿನ ದೇಹದಲ್ಲಿ ಹುಟ್ಟಿದ ಎಲ್ಲ ವಸ್ತುಗಳೂ ಪರಮ ಪವಿತ್ರವೇ. ಗೋಮಯ, ಗೋಮೂತ್ರ, ಗೋವಿನ ಹಾಲು, ಮೊಸರು, ತುಪ್ಪ - ಎಲ್ಲವೂ ಪವಿತ್ರ ಮತ್ತು ಪವಿತ್ರ ಕಾರಕ. ಗೋವಿನ ಹಾಲು, ಮೊಸರು, ತುಪ್ಪ, ಮಲ-ಮೂತ್ರ ಯಾವುದನ್ನೇ ತಿನ್ನಲಿ, ತಿಂದವರ ದೇಹದಲ್ಲಿ ಪಾಪ ಉಳಿಯಲಾರದು. ಆದುದರಿಂದಲೇ ಧರ್ಮನಿಷ್ಠರಾದ ಜನರು 'ಗವ್ಯ' ಎಂದರೆ ಗೋವಿನ ಹಾಲು, ಮೊಸರು, ತುಪ್ಪಗಳನ್ನು ಪ್ರತಿದಿನವೂ ತಿನ್ನುತ್ತಾರೆ. ಊಟ, ಉಪಹಾರಗಳನ್ನೆಲ್ಲ ತ್ಯಜಿಸಿ ಕೇವಲ ಹಸುವಿನ ಹಾಲು, ಮೊಸರು, ತುಪ್ಪಗಳನ್ನೇ ತಿಂದು ಇರುವದು 'ಪರಮ ಪವಿತ್ರ ಕಾರ್ಯ. ಅವನ ದೇಹವೆಲ್ಲವೂ ಪರಮ ಪಾವನವಾಗುವದು.

**ಅಗವ್ಯೈರ್ಯಶ್ಚ ಭುಂಕ್ತೇ ವೈ ಮಾಸಮೇಕಂ ನಿರಂತರಂ ।**
**ಭೋಜನೇ ತಸ್ಯ ಮರ್ತ್ಯಸ್ಯ ಪ್ರೇತಾದಂತಿ ತಥೈವ ಹಿ ॥**

ಗೋವಿನ ಹಾಲು ಮುಂತಾದವುಗಳಿಲ್ಲದೆ ಒಂದು ತಿಂಗಳು ಯಾವನು ಊಟ ಮಾಡುವನೋ ಅವನ ಊಟವನ್ನು ಪ್ರೇತಗಳು ತಿನ್ನುತ್ತವೆ. ಹಸುವಿನ ತುಪ್ಪದಿಂದ 'ಅಭಿಘಾರ' ಮಾಡಿದ ಪರಮಾನ್ನವು ಪವಿತ್ರವು. ಅದನ್ನು ಭಕ್ಷಿಸಿದವರಿಗೆ ಮೋಕ್ಷವು (ಪುಣ್ಯವು). ಇದರಂತೆ ಶಾಸ್ತ್ರೋಕ್ತ ರೀತಿಯಿಂದ ಸಿದ್ಧಪಡಿಸಿದ ಹವಿಷ್ಯಾನ್ನವನ್ನು ಭಕ್ಷಣ ಮಾಡಿ ಕೈಗೊಂಡ ಎಲ್ಲ ಕಾರ್ಯಗಳು ವಿಶೇಷ ಫಲಪ್ರದವಾಗಿವೆ. ಮದ್ಯ, ಮಾಂಸ ಸಂಪರ್ಕವಿಲ್ಲದ ಯಜ್ಞಕ್ಕೆ ಉಪಯೋಗಿಸಲು ಅರ್ಹವಾದ ಎಲ್ಲ ವಸ್ತುಗಳು 'ಹವಿಷ್ಯ' ಎನಿಸುತ್ತವೆ. ಅವೆಲ್ಲವುಗಳಿಗೂ ಹಸುವಿನ ತುಪ್ಪದಿಂದ 'ಅಭಿಘಾರ' ಮಾಡಿಯೇ ಯಜ್ಞ ಕಾರ್ಯ, ದೇವತಾ ಕಾರ್ಯಕ್ಕೂ ಉಪಯೋಗಿಸಬೇಕು. ಅಂದರೆ ಮಾತ್ರ ಯಜ್ಞರೂಪಿ ಶ್ರೀಹರಿಯು ಮತ್ತು ಇತರ ದೇವತೆಗಳು ಅಂಥ ಗೋಘೃತಾಕ್ತವಾದ ಹವಿರ್ಭಾಗವನ್ನು ಆನಂದದಿಂದ ಸ್ವೀಕರಿಸುವರು. ನೀಡಿದವರಿಗೆ ಪುಣ್ಯ ಫಲ ನೀಡುವರು.

**'ಸಕೃತ್ಪ್ರದಕ್ಷಿಣಂ ಕೃತ್ವಾ ಗೋಧನಂ ಚಾಭಿವಂದಯೇತ್ ।**
**ಸರ್ವಪಾಪೈರ್ವಿನಿರ್ಮುಕ್ತಃ ಸ್ವರ್ಗಂ ಚಾಕ್ಷಯಮಶ್ನುತೇ ॥**

ಗೋವನ್ನು ಒಂದು ಬಾರಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರೆ ಎಲ್ಲ ಪಾಪಗಳನ್ನೂ ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ.

**'ಸುರಾಚಾರ್ಯೋ ಯಥಾ ವಂದ್ಯಃ ಪೂಜ್ಯೋಽಸೌ ಮಾಧವೋ ಯಥಾ ।**
**ಸಪ್ತಪ್ರದಕ್ಷಿಣಂ ಕೃತ್ವಾಪ್ಯೈಶ್ವರ್ಯಂ ಪಾಕ ಶಾಸನಃ ॥**

ಸುರಗುರುವಾದ ಬೃಹಸ್ಪತ್ಯಾಚಾರ್ಯನು ಮತ್ತು ಶ್ರೀಹರಿಯು ಹೇಗೆ ಪೂಜ್ಯರಾಗಿದ್ದಾರೊ ಹಾಗೆಯೇ ಯಥಾ ಯೋಗ್ಯವಾಗಿ ಹಸುವು ಪೂಜ್ಯವೂ ವಂದ್ಯವೂ ಆಗಿದೆ. ಹಿಂದೆ ದೇವೇಂದ್ರನು ಗೋಮಾತೆಗೆ ಏಳು ಪ್ರದಕ್ಷಿಣೆ ಹಾಕಿ ಮಹಾ ಐಶ್ವರ್ಯ ಪಡೆದನು. ಪ್ರಾತಃಕಾಲದಲ್ಲಿ ಎದ್ದು ಗೋ ಕಟ್ಟುವ ಸ್ಥಳಕ್ಕೆ ಹೋಗಿ ಹಸುವಿನ ಕೊಂಬುಗಳನ್ನು ತೊಳೆದು ಆ ನೀರನ್ನು ತನ್ನ ತಲೆಯಮೇಲೆ ಪ್ರೋಕ್ಷಣ ಮಾಡಿಕೊಳ್ಳಬೇಕು. ಅಂದರೆ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯ ಬರುವದು. ಗೋಶೃಂಗದ ನೀರಿನಿಂದ ಪ್ರೋಕ್ಷಣೆ ಮಾಡಿಕೊಂಡರೆ ಸರ್ವ ತೀರ್ಥಾಭಿಷೇಕದ ಪುಣ್ಯ ಫಲ ಪ್ರಾಪ್ತವಾಗುವದು.

''ಪ್ರಾತರುತ್ಥಾಯ ಯೋ ಮರ್ತ್ಯಃ ಸ್ಪೃಶೇದ್ಗಾಂಚ ಘೃತಂ ಮಧು।
ಸರ್ಷಿಪಾಂಶ್ಚ ಪ್ರಿಯಂಗೂಂಶ್ಚ ಕಲ್ಮಷಾತ್ಪ್ರತಿ ಮುಚ್ಯತೇ ॥''

ಬೆಳಿಗ್ಗೆ ಎದ್ದ ಕೂಡಲೇ ಮೊದಲು ಮಾನವನು ಗೋಮಾತೆಯ ಸ್ಪರ್ಶ ಮಾಡಬೇಕು. ಆಕಳ ತುಪ್ಪ, ಜೇನು ತುಪ್ಪ, ಎಳ್ಳು, ನವಣೆಗಳನ್ನು ಸ್ಪರ್ಶಿಸಿದರೆ ಪಾಪ ನಾಶವಾಗುವದು.

ಘೃತಕ್ಷೀರ ಪ್ರದಾ ಗಾವೋ ಘೃತಯೋನ್ಯೋ ಘೃತೋದ್ಭವಾಃ ।
ಘೃತನದ್ಯೋ ಘೃತಾವರ್ತಾಸ್ತಾ ಮೇ ಸಂತು ಸದಾ ಗೃಹೇ ॥

ಘೃತಂ ಮೇ ಸರ್ವ ಗಾತ್ರೇಷು ಘೃತಂ ಮೇ ಮನಸಿ ಸ್ಥಿತಂ ।
ಗಾವೋ ಮದಗ್ರತೋ ನಿತ್ಯಂ ಗಾವಃ ಪೃಷ್ಠತ ಏವ ಚ ॥

ಗಾವಶ್ಚ ಸರ್ವಗಾತ್ರೇಷು ಗವಾಂ ಮಧ್ಯೇ ವಸಾಮ್ಯಹಂ ।
ಇತ್ಯಾಚಮ್ಯ ಜಪೇನ್ಮಂತ್ರಂ ಸಾಯಂ ಪ್ರಾತರಿಮಂ ಶುಚಿಃ ॥

ಬೈಗು, ಬೆಳಗುಗಳಲ್ಲಿ ಈ ಮಂತ್ರ ಹೇಳಿ, ಗೋವಿನ ಧ್ಯಾನ ಮಾಡಬೇಕು, ಗೋವಿನ ಹಾಲು, ಮೊಸರು, ತುಪ್ಪ ಮುಂತಾದ ಗವ್ಯ ಪದಾರ್ಥಗಳೇ ಯಾವಾಗಲೂ ನನ್ನ ದೇಹದಲ್ಲಿ ಇರಲಿ. ನನ್ನ ಮನಸ್ಸಿನಲ್ಲಿ ಗೋವಿನ ಧ್ಯಾನವು ನಿರಂತರವೂ ನಡೆಯಲಿ, ನನ್ನ ಹಿಂದೆ ಮುಂದೆ ಗೋವುಗಳು ನಿಲ್ಲಲಿ. ಎಡಬಲಗಳಲ್ಲಿ ಗೋವುಗಳೇ ಇರಲಿ. ನಾನು ಯಾವಾಗಲೂ ಹಸುಗಳ ಹಿಂಡಿನಲ್ಲಿಯೇ ನೆಲೆಸುವಂತಾಗಲಿ ಎಂದು ಭಗವಂತನನ್ನು ಪ್ರಾರ್ಥಿಸಿ ಆಚಮನ ಮಾಡಿ ಮೇಲೆ ಹೇಳಿದ ಮಂತ್ರವನ್ನು ಪಠಿಸಬೇಕು. ಆದರಿಂದ ಎಲ್ಲ ಪಾಪಗಳೂ ಪರಿಹಾರ. ಸ್ವರ್ಗಲೋಕದಲ್ಲಿ ಗೌರವ ಪ್ರಾಪ್ತವಾಗುವದು.

''ಯಥಾ ಗೌಶ್ಚ ತಥಾ ವಿಪ್ರೋ ಯಥಾ ವಿಪ್ರಸ್ತಥಾ ಹರಿಃ ।
ಹರಿರ್ಯಥಾ ತಥಾ ಗಂಗಾ ಚತ್ವಾರೊ ಹ್ಯವೃಷಾಃ ಸ್ಮೃತಾಃ ॥

ಗೋವಿನಂತೆ ವಿಪ್ರನು, ವಿಪ್ರನಂತೆ ವಿಷ್ಣುವು, ವಿಷ್ಣುವಿನಂತೆ ಗಂಗೆಯು ಪೂಜ್ಯರಾಗಿದ್ದಾರೆ. ಈ ಪೂಜ್ಯ ಚತುಷ್ಪಯವನ್ನು ಪೂಜಿಸಿದವರ ಪಾಪಗಳೆಲ್ಲವೂ ಪರಿಹೃತವಾಗುತ್ತವೆ.

ಗಾವೋ ಬಂಧುಃ ಮನುಷ್ಯಾಣಾಂ ಮನುಷ್ಯಾ ಬಾಂಧವಾ ಗವಾಂ ।
ಗೌಸ್ತು ಯಸ್ಮಿನ್ಗೃಹೇ ನಾಸ್ತಿ ತದ್ಬಂಧುರಹಿತಂ ಗೃಹಂ ॥

ಮನುಷ್ಯರಿಗೆ ಗೋವುಗಳು ಬಂಧು, ಗೋವುಗಳಿಗೆ ಮನುಷ್ಯನು ಬಂಧು. ಹಸು ಇಲ್ಲದ ಮನೆ ಬಾಂಧವರಿಲ್ಲದ ಮನೆ ಇದ್ದಂತೆ. ಹಸುವಿನ ಮುಖದಲ್ಲಿ ವೇದಗಳು, ಶಿಕ್ಷಾ ಕಲ್ಪ ಮುಂತಾದ ವೇದಾಂಗಗಳು ಹಾಗೂ ಪದಕ್ರಮಗಳೂ ಇರುತ್ತವೆ. ಕೊಂಬುಗಳಲ್ಲಿ ಹರಿಹರೇಶ್ವರರು ಇರುತ್ತಾರೆ. ಹೊಟ್ಟೆಯಲ್ಲಿ ಸ್ಕಂದ, ತಲೆಯಲ್ಲಿ ಬ್ರಹ್ಮ, ಹಣೆಯಲ್ಲಿ ಹರ, ಕೋಡಿನ ತುದಿಯಲ್ಲಿ ಇಂದ್ರ, ಕಿವಿಗಳಲ್ಲಿ ಅಶ್ವಿನಿ ದೇವತೆಗಳು, ಚಂದ್ರ ಸೂರ್ಯರು ಕಣ್ಣುಗಳಲ್ಲಿ, ಹಲ್ಲಿನಲ್ಲಿ ಗರುಡ, ನಾಲಿಗೆ ಮೇಲೆ ಶಾರದೆ, ಕೆಚ್ಚಲಿನಲ್ಲಿ ಗಂಗೆ ಅಪಾನದಲ್ಲಿ ಎಲ್ಲ ತೀರ್ಥ, ರೋಮದ ಕೆಳಗೆ ಋಷಿಗಳು, ಮುಖ ಹಾಗೂ ಹಿಂಭಾಗದಲ್ಲಿ ಯಮ. ಬಲಕ್ಕೆ ಕುಬೇರ, ಎಡಕ್ಕೆ ಯಕ್ಷರು, ಮುಖಮಧ್ಯದಲ್ಲಿ ಗಂಧರ್ವರು, ಮುಗಿನ ತುದಿಯಲ್ಲಿ

ಸರ್ಪಗಳು, ಗೊರಸುಗಳ ಹಿಂಭಾಗದಲ್ಲಿ ಅಪ್ಸರೆಯರು ಗೋಮಯದಲ್ಲಿ ಲಕ್ಷ್ಮೀ, ಗೋಮೂತ್ರದಲ್ಲಿ ಪಾರ್ವತಿ, ಪಾದಾಗ್ರದಲ್ಲಿ ಯಕ್ಷರು, ಹಸುವಿನ 'ಅಂಬಾ' ಶಬ್ದದಲ್ಲಿ ಬ್ರಹ್ಮ, ಗೋವಿನ ನಾಲ್ಕು ಮೊಲೆಗಳಲ್ಲಿ ನಾಲ್ಕು ಸಮುದ್ರಗಳಿರುತ್ತವೆ.

ಪ್ರತಿ ನಿತ್ಯವೂ ಗೋಮಾತೆಯ ಸ್ಪರ್ಶ ಮಾಡಿದರೆ ಸರ್ವತೀರ್ಥಗಳಲ್ಲಿಯೂ ಸ್ನಾನ ಮಾಡಿದ ಪುಣ್ಯಬರುವದು. ಸರ್ವ ಪಾಪಗಳು ಪರಿಹಾರವಾಗುವವು. ಹಸುವಿನ ಪಾದಧೂಳಿಯನ್ನು ತಲೆಯ ಮೇಲೆ ಧರಿಸಿದರೆ ಮಂದಾಕಿನೀ ಮೊದಲಾದ ಪುಣ್ಯತೀರ್ಥಗಳಲ್ಲಿ ಮಿಂದಷ್ಟು ಪುಣ್ಯಬರುವದು.

**ನಾರದ :-** ಹಸುಗಳಲ್ಲಿ ಹತ್ತು ವಿಧವಾದ ವರ್ಣಗಳು ಇವೆಯಂತೆ. ಅವು ಯಾವುವು ? ಯಾವ ಹಸುವನ್ನು ದಾನ ಮಾಡಿದರೆ ಎಂಥ ಫಲ ಪ್ರಾಪ್ತಿ? ಈ ರಹಸ್ಯವನ್ನು ನನಗೆ ತಿಳಿಸಿರಿ.

**ಬ್ರಹ್ಮ :-** ಶುಭ್ರ ವರ್ಣದ ಹಸುವನ್ನು ಬ್ರಹ್ಮಜ್ಞಾನಿಗೆ ದಾನವಿತ್ತರೆ ಮಾನವ ಭಾರಿ ಶ್ರೀಮಂತನಾಗುವನು. ದಿವ್ಯವಾದ ವಿಶಾಲ ಮಂದಿರದಲ್ಲಿ ವಾಸಮಾಡುವನು. ಸುಖ, ವಿಲಾಸ, ಭೋಗ ಭಾಗ್ಯಗಳನ್ನು ಪಡೆಯುವನು.

ಬೂದು ವರ್ಣದ ಹಸುವು ಪಾಪ ಪರಿಹಾರಕವಾಗಿದೆ. ಕಪ್ಪು ಬಣ್ಣದ ಕಪಿಲೆಯನ್ನು ದಾನ ಮಾಡಿದರೆ ಅಕ್ಷಯ ಫಲ ಪ್ರಾಪ್ತವಾಗುವದು. ಕಪ್ಪು ಬಣ್ಣದ ಹಸುವಿನಿಂದ ದುಃಖ ನಾಶವಾಗುತ್ತದೆ. ಪುಣ್ಯ ಫಲ ಪ್ರಾಪ್ತಿಯೂ ಆಗುವದು. ಅಚ್ಚ ಬಿಳಿ ಬಣ್ಣದ ಹಸುವು ಈ ಲೋಕದಲ್ಲಿ ದುರ್ಮಿಳ. ಆದರೆ ಸುದೈವದಿಂದ ಈ ಶ್ವೇತಹಸುವು ದೊರಕಿದರೆ ಅದನ್ನು ದಾನವಿತ್ತರೆ ಕುಲಕೋಟಿ ಕಲ್ಯಾಣವಾಗುವದು. ಒಂದು ಕಪಿಲಧೇನುವನ್ನು ದಾನ ಮಾಡಿದರೆ ಇದ್ದಷ್ಟೆಲ್ಲ ಪಾಪಗಳು ದೂರವಾಗುವವು. ಎಳಮೆಯಲ್ಲಿ, ಹರೆಯ ಹುಚ್ಚಿನಲ್ಲಿ, ಮುಪ್ಪಿನ ಕಾಲದ ಅರಳು ಮರಳು ಅವಸ್ಥೆಯಲ್ಲಿ ಮಾಡಿದ ಪಾಪಗಳೆಲ್ಲ ಗೋದಾನದ ಫಲದಿಂದ ತೀವ್ರ ಪರಿಹಾರ. ಮನಸ್ಸಿನಿಂದ ಮಾಡಿದ ತಪ್ಪು ಮಾತಿನಿಂದ ಮಾಡಿದ ಅಪಚಾರ, ಕೈಗಳಿಂದ ಮಾಡಿದ ಕುಕೃತ್ಯ, ಗೆಳೆಯರನ್ನು ಮೋಸ ಮಾಡಿದ ಪಾಪ, ವಂದಿಸಬೇಕಾದವರೊಡನೆ ವಿಹಾರ ಕೇಳಿಗೆ ಇಳಿಯುವದರೊಂದಿಗೆ ಬರುವ ಪಾತಕ, ಕನ್ಯೆಯರ ಕಲ್ಯಾಣ ಕಾರ್ಯಕ್ಕೆ ಕಲ್ಲು ಹಾಕುವದರಿಂದ ಬರುವ ಭೀಕರ ಪಾತಕ, ಅಳತೆ, ತೂಕ, ವ್ಯವಹಾರ-ವ್ಯಾಪಾರಗಳಲ್ಲಿ ಸಂಭವಿಸಬಹುದಾದ ಅಪಾರ ಪಾಪರಾಶಿ ಇವುಗಳಿಗೆಲ್ಲ ಒಂದೇ ಒಂದು ಪರಿಹಾರ ಸೂತ್ರವೆಂದರೆ-ಗೋದಾನ.

ಈಯಲಾದ ಹಸುವಿನ ಹೊಟ್ಟೆಯಿಂದ ಕರುವಿನ ಎರಡು ಕಾಲು ಅರ್ಧ ಮುಖ ಹೊರಗೆ ಬಂದಿರುವ ಸಂದರ್ಭದಲ್ಲಿ ಆ ಗೋವನ್ನು ದಾನ ಮಾಡಬೇಕು. ಹೀಗೆ ಕರು ಹೊರಬರುವದಕ್ಕಿಂತ ಮೊದಲೇ ಆಸನ್ನ ಪ್ರಸವೆಯಾದ ಹಸುವನ್ನು ದಾನ ಮಾಡಿದರೆ ಭೂಮಂಡಲವನ್ನೆಲ್ಲ ದಾನ ಮಾಡಿದ ಪುಣ್ಯ ಪ್ರಾಪ್ತಿ. ವಿಷ್ಣು ಲೋಕಕ್ಕೆ ಬೇಗ ಹೋಗಿ ಅಲ್ಲಿ ನಿರಂತರವಾಗಿ ನೆಲೆಸಲು ಒಂದು ಸುಲಭ ಉಪಾಯವೆಂದರೆ- ಒಂದು ಕಪ್ಪು ಹಸುವಿನ ದಾನ. ಆದರೆ ಇಂತಹ ಗೋವನ್ನು ದಡ್ಡನಿಗೆ ಕೊಡಬಾರದು. ವೇದ ಓದಿದ ಶುಚಿರ್ಭೂತನಾದ ವಿಪ್ರನಿಗೆ ದಾನ ನೀಡಬೇಕು. ಅದರ ಕೋಡಿಗೆ ಚಿನ್ನದ ಗೊಣಸು, ಕಾಲಿಗೆ ಬೆಳ್ಳಿಯ ಗೊರಸು, ಮೈ ಮೇಲೆ ಒಳ್ಳೇ ಹೊಸ ಬಟ್ಟೆ, ಹಣೆಯಲ್ಲಿ ಗಂಧ, ಹೂಗಳ ಅಲಂಕಾರ, ಮೇಲೆ ಹಾಲು ಕರೆಯಲು ಕಂಚಿನ ಪಾತ್ರೆ ಇವೆಲ್ಲ ಸಹಿತವಾಗಿ ಕಪಿಲಾ

ಗೋದಾನ ಮಾಡಬೇಕು. ಇಂತಹ ಹಸುವನ್ನು ಕರೆಯುವಾಗ ನೆಲದ ಮೇಲೆ ಬೀಳುವ ಹಾಲಿನ ನೊರೆಯ ಬಿಂದುಗಳು ನಂದನವನದ ಮಂದಾರ ಪುಷ್ಪಗಳಂತೆ ಪುಣ್ಯಕರವೂ ಫಲಪ್ರದವೂ ಆಗಿರುತ್ತವೆ. ಇಂತಹ ಹಸುಗಳನ್ನು ದಾನ ಮಾಡಿದವರು ಹಾಲು ತುಪ್ಪದ ಹೊಳೆ ಹರಿಯುವ ದಿವ್ಯ ಲೋಕಗಳಲ್ಲಿ ಮಿಸುನಿ ಮನೆಗಳಲ್ಲಿ ನಿರಂತರ ನೆಲೆಸುವರು.

ಹತ್ತು ಹಸುಗಳನ್ನು ದಾನ ಮಾಡುವವನು ಒಂದು ಹೋರಿಯನ್ನು ಕೊಡಬೇಕು. ನೂರಕ್ಕೆ ಹತ್ತು, ಸಾವಿರಕ್ಕೆ ನೂರು ಈ ಲೆಕ್ಕದಲ್ಲಿ ಗೋದಾನದ ಹತ್ತು ಪಟ್ಟು ಪುಣ್ಯ ಹೋರಿಗಳ ದಾನದಿಂದ ಲಭಿಸುವದು. ಪಿತೃಗಳ ಉದ್ದೇಶದಿಂದ ಒಂದು ಬಸವನನ್ನು ಬಿಡಬೇಕು. ಇದರಿಂದ ಭವಬಂಧನದಿಂದ ಮುಕ್ತಿ. ದೊರಕುವದು ಮೋಕ್ಷ. ಈ ಬಸವನನ್ನು ಬಿಡುವ ವಿಧಿಗೆ 'ವೃಷೋತ್ಸರ್ಗವಿಧಿ' ಎಂದೆನ್ನುತ್ತಾರೆ. ಒಂದು ಹೋರಿ ಕರುವಿನ ಜೊತೆಗೆ ನಾಲ್ಕು ಹೆಣ್ಣು ಕರುಗಳನ್ನು ಬಿಡಬೇಕು. ಅಂದರೆ ಅವುಗಳ ದೇಹದಲ್ಲಿ ಇರುವ ಕೂದಲಷ್ಟು ಸಾವಿರ ವರ್ಷ ಸ್ವರ್ಗಸುಖ ಅನುಭವಿಸುತ್ತಾರೆ. ದೇವರಿಗಾಗಿ ಬಿಟ್ಟ ಬಸವನ ಬಾಲದಿಂದ ಎರಚಿದ ನೀರು ಪಿತೃಗಳಿಗೆ ಸಾವಿರ ವರ್ಷದ ಅಮೃತದ ಆಹಾರವಾಗಿ ಪರಿಣಮಿಸುತ್ತದೆ. ಆ ಹೋರಿಯು ಗೊರಸಿನಿಂದ ನೆಲವನ್ನು ಕೆದರಿದಾಗ ಎದ್ದ ಹೆಂಟೆಗಳು ಪಿತೃಗಳ 'ಸ್ವಧಾ' ಎಂಬ ಆಹಾರ ರೂಪದಿಂದ ಪರಿಣತವಾಗಿ ಅನಂತ ಕಾಲದವರೆಗೆ ತೃಪ್ತಿಯನ್ನುಂಟು ಮಾಡುತ್ತವೆ. ತಂದೆ ಬದುಕಿದ್ದು, ತಾಯಿ ತೀರಿಕೊಂಡರೆ ಚಂದನವನ್ನು ಲೇಪಿಸಿ ಗೋವನ್ನು ದಾನ ಮಾಡಬೇಕು. ಕರು ಹಾಕಿದ ಹದಿನೈದು ದಿನಗಳ ಒಳಗೆ ಚೆನ್ನಾಗಿ ಹಿಂಡುವ ಹಸು ದಾನ ಮಾಡಿದರೆ ಭೂದಾನದ ಪುಣ್ಯ ಬರುವದು. ಗೋಗಳನ್ನು ಕೊಂದರೆ ಘೋರ ನರಕ.

**ತೃಣಪೂರ್ಣೇ ಸ ಕೂಪೇ ಚ ತಿಷ್ಠೇದಾಭೂತಸಂಪ್ಲವಂ ।**
**ಗವಾಂಚೈವ ವಧಂ ಕೃತ್ವಾ ಪಿತೃಭಿಃ ಸಹ ಪಚ್ಯತೇ ॥**
**ರೌರವೇ ನರಕೇ ಘೋರೇ ತಾವತ್ಕಾಲಂ ಪ್ರತಿಕ್ರಿಯಾ ।**
**ಗೋಪ್ರಚಾರಪ್ರಭುಗ್ನಶ್ಚ ಖಂಡವಾಹನಬಂಧನಃ ॥**
**ಅಕ್ಷಯಂ ನರಕಂ ಪ್ರಾಯಾತ್ಸುನರ್ಜನ್ಮನಿ ಜನ್ಮನಿ ।**

ಗೋವುಗಳನ್ನು ಕೊಂದವನಿಗೆ ಮಾತ್ರವಲ್ಲ, ಅವನ ತಂದೆ ತಾತ ಮುತ್ತಾತರೂ ಕೂಡ ಆ ಗೋಹತ್ಯೆಯ ಪಾಪ ತಟ್ಟಿ, ಅವರೆಲ್ಲರೂ ಘೋರ ನರಕದಲ್ಲಿ ಪ್ರಳಯ ಕಾಲ ಪರ್ಯಂತ ದುಃಖಪಡುತ್ತಾರೆ. ಇದರಂತೆ ಗೋವುಗಳು ಮೇಯುವ ಹುಲ್ಲುಗಾವಲು ನಾಶಮಾಡಿದವನೂ ಮತ್ತು ಗೋವುಗಳು ನಿಲ್ಲುವ ಕೊಟ್ಟಿಗೆಗಳನ್ನು ನಾಶ ಪಡಿಸುವವನೂ ಅಕ್ಷಯ ನರಕ ಹೊಂದುತ್ತಾನೆ. ಇದರಂತೆ ಗೋಸೇವೆ ಮಾಡುವವರು ಅಕ್ಷಯ ಸ್ವರ್ಗ ಪಡೆಯುತ್ತಾರೆ, ಅಪರಿಮಿತ ಪುಣ್ಯಫಲ ಹೊಂದುತ್ತಾರೆ. ಈ ಗೋ ಮಹಿಮೆಯನ್ನು ಕೇಳಿದವರು ಏಳು ಜನ್ಮದ ತಮ್ಮ ಪಾಪಗಳನ್ನು ಕಳೆದು ಕೊಂಡು ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದ್ವಿಜಧರ್ಮ ಎಂಬ ನಲವತ್ತೈದನೇಯ ಅಧ್ಯಾಯ ಮುಗಿದುದು*

—o—

**ನಾರದ ಉವಾಚ**

**ಕೇನಽಚಾರೇಣ ವಿಪ್ರಸ್ಯ ಬ್ರಹ್ಮತೇಜೋ ವಿವರ್ಧತೇ ।**

**ಕೇನಾಚಾರೇಣ ತಸ್ಯೈವ ಬ್ರಾಹ್ಮಂ ತೇಜೋ ವಿನಶ್ಯತಿ -**

**ನಾರದ :-** ಯಾವ ಆಚಾರವನ್ನು ಮಾಡಿದರೆ ಬ್ರಹ್ಮ ತೇಜಸ್ಸು ಹೆಚ್ಚುತ್ತದೆ? ಯಾವ ಆಚಾರದಿಂದ ಆ ಬ್ರಹ್ಮ ತೇಜಸ್ಸು ನಾಶವಾಗುತ್ತದೆ?

**ಬ್ರಹ್ಮೋವಾಚ**

**ಶಯನೀಯಾತ್ಸಮುತ್ಥಾಯ ರಾತ್ರ್ಯಂಶೇ ದ್ವಿಜಸತ್ತಮಃ ।**

**ದೇವಾಂಶ್ಚೈವ ಸ್ಮರೇನ್ನಿತ್ಯಂ ತಥಾ ಪುಣ್ಯವತೋ ಧ್ರುವಂ ॥**

**ಬ್ರಹ್ಮ :-** ರಾತ್ರಿಯ ಅಂಶವಿರುವಾಗಲೇ ಹಾಸಿಗೆಯಿಂದೆದ್ದು ದೇವತೆಗಳನ್ನು ಪುಣ್ಯವಂತರನ್ನು ಸ್ಮರಿಸಬೇಕು.

**ಗೋವಿಂದಂ ಮಾಧವಂ ಕೃಷ್ಣಂ ಹರಿಂ ದಾಮೋದರಂ ತಥಾ ।**

**ನಾರಾಯಣಂ ಜಗನ್ನಾಥಂ ವಾಸುದೇವಮಜಂ ವಿಭುಂ ॥**

ಗೋವಿಂದ, ಮಾಧವ ಕೃಷ್ಣ ಹರಿ, ದಾಮೋದರ, ನಾರಾಯಣ ಜಗನ್ನಾಥ, ಅಜ, ವಿಭು ಎಂದು ವಿಷ್ಣುವನ್ನು ಸ್ಮರಿಸಬೇಕು.

**ಸರಸ್ವತೀಂ ಮಹಾಲಕ್ಷ್ಮೀಂ ಸಾವಿತ್ರೀಂ ವೇದಮಾತರಂ ।**

**ಬ್ರಹ್ಮಾಣಂ ಭಾಸ್ಕರಂ ಚಂದ್ರಂ ದಿಕ್ಪಾಲಾಂಶ್ಚ ಗ್ರಹಾಂಸ್ತಥಾ ॥**

ಸರಸ್ವತಿ, ಲಕ್ಷ್ಮೀ, ಸಾವಿತ್ರಿ, ಗಾಯತ್ರಿ, ಬ್ರಹ್ಮ, ಭಾಸ್ಕರ, ಚಂದ್ರ, ದಿಕ್ಪಾಲಕರು, ಗ್ರಹಗಳು, ಶಂಕರ, ಮಹೇಶ್ವರ, ಗಣೇಶ, ಸ್ಕಂದ, ಗೌರಿ, ಭಾಗಿರಥಿ ಇವರನ್ನು ಸ್ಮರಿಸಬೇಕು.

**ಪುಣ್ಯಶ್ಲೋಕೋ ನಲೋ ರಾಜಾ ಪುಣ್ಯಶ್ಲೋಕೋ ಜನಾರ್ದನಃ ।**

**ಪುಣ್ಯಶ್ಲೋಕಾ ಚ ವೈದೇಹೀ ಪುಣ್ಯಶ್ಲೋಕೋ ಯುಧಿಷ್ಠಿರಃ ॥**

**ಅಶ್ವತ್ಥಾಮೋ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।**

**ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ।**

ನಳ, ಜನಾರ್ಧನ, ವೈದೇಹಿ, ಯುಧಿಷ್ಠಿರ ಇವರು ಪುಣ್ಯಶ್ಲೋಕರು. ಅಶ್ವತ್ಥಾಮ, ಬಲಿ, ವ್ಯಸ, ಹನುಮ, ವಿಭೀಷಣ, ಕೃಪ, ಪರಶುರಾಮ ಈ ಏಳು ಜನರು ಚಿರಂಜೀವಿಗಳು.

**ಯೇಚಾನ್ಯಸ್ತು ಸ್ಮರೇನ್ನಿತ್ಯಂ ಪ್ರಾತರುತ್ಥಾಯ ಮಾನವಃ ।**

**ಬ್ರಹ್ಮಹತ್ಯಾದಿಭಿಃ ಪಾಪೈಃಮುಚ್ಯತೇ ನಾತ್ರ ಸಂಶಯಃ ।**

ಬೆಳಿಗ್ಗೆ ಎದ್ದು ಮನುಷ್ಯನು ಇವರನ್ನು ಸ್ಮರಿಸಿದರೆ, ಬ್ರಹ್ಮಹತ್ಯೆ ಮುಂತಾದ ಪಾಪಗಳಿಂದ ಮುಕ್ತನಾಗುತ್ತಾನೆ; ಸಂಶಯವಿಲ್ಲ.

**ಸಕೃದುಚ್ಚಾರಿತೇ ತಾತ ಸರ್ವಯಜ್ಞ ಫಲಂ ಲಭೇತ್ ।**

**ಗವಾಂ ಶತಸಹಸ್ರಾಣಾಂ ದಾನಸ್ಯ ಫಲಮಶ್ನುತೇ ॥**

ಇವರನ್ನೆಲ್ಲ ಒಂದಾವರ್ತಿ ಸ್ಮರಿಸಿದರೂ ಎಲ್ಲಾ ಯಜ್ಞಗಳ ಫಲವೂ ಬರುತ್ತದೆ. ಒಂದು ಲಕ್ಷಗೋಗಳನ್ನು ದಾನ ಮಾಡಿದ ಫಲವನ್ನು ಹೊಂದುತ್ತಾನೆ. ಅನಂತರ ಶುಚಿಯಾದ ಪ್ರದೇಶದಲ್ಲಿ ಮಲಮೂತ್ರ ವಿಸರ್ಜನೆ ಮಾಡಬೇಕು. ರಾತ್ರಿ ದಕ್ಷಿಣಕ್ಕೆ ಮುಖಮಾಡಿ ಹಗಲು ಉತ್ತರ ದಿಕ್ಕಿಗೆ ಮುಖಮಾಡಿ ವಿಷ್ಠಾ ಮೂತ್ರಗಳನ್ನು ತ್ಯಜಿಸಬೇಕು. ಹೀಗೆ ಬಹಿರ್ದೆಶೆಯ ಕಾರ್ಯ ಮುಗಿಸಿ, ಅತ್ತಿ ಮುಂತಾದ ಕಡ್ಡಿಗಳಿಂದ ಹಲ್ಲುಗಳನ್ನು ಉಜ್ಜಬೇಕು. ಮುಖ ಪ್ರಕ್ಷಾಲನ, ಮೃತ್ತಿಕಾ ಶೌಚ, ಪಾದ ಪ್ರಕ್ಷಾಲನ ಮುಂತಾದವುಗಳನ್ನು ವಿಧಿಪೂರ್ವಕವಾಗಿ ಮಾಡಿ ಪ್ರಾತಃ ಸಂಧ್ಯೆಯ ಅಭಿಮಾನಿ ದೇವತೆಗಳನ್ನು ವಂದಿಸಬೇಕು. ಸರಸ್ವತಿಯನ್ನು ಸ್ತುತಿಸಬೇಕು.

**ಪೂರ್ವಾಹ್ಣೇ ರಕ್ತವರ್ಣಾಂತು ಮಧ್ಯಾಹ್ನೇ ಶುಕ್ಲವರ್ಣಿಕಾಂ ।**
**ಸಾಯಂ ಸರಸ್ವತೀಂ ಕೃಷ್ಣಾಂ ದ್ವಿಜೋ ಧ್ಯಾಯೇದ್ಯಥಾವಿದಿ ॥**

ಪ್ರಾತಃಕಾಲದಲ್ಲಿ ಸರಸ್ವತಿ ದೇವಿಯನ್ನು ಹೊಂಬಣ್ಣದ ಹೊಳಪುಳ್ಳವಳನ್ನಾಗಿ, ಮಧ್ಯಾಹ್ನದಲ್ಲಿ ಶ್ವೇತವರ್ಣಳನ್ನಾಗಿಯೂ, ಸಾಯಂಕಾಲದಲ್ಲಿ ಕೃಷ್ಣಕಾಂತಿ ಕಮನೀಯಳನ್ನಾಗಿಯೂ ಸರಸ್ವತಿಯನ್ನು ಧ್ಯಾನಮಾಡಬೇಕು. ಅನಂತರ ವಿಧಿ ಪೂರ್ವಕ ಸ್ನಾನ ಮಾಡಬೇಕು. ಸ್ನಾನಾಂಗವಾಗಿ ಅಂಗಾಂಗಗಳನ್ನು ತೊಳೆದುಕೊಂಡು ಮಣ್ಣನ್ನು ಹಚ್ಚಿ ಮತ್ತೆ ತೊಳೆಯಬೇಕು. ತಲೆ, ಹಣೆ, ಮೂಗು, ಎದೆ, ಹುಬ್ಬುಗಳಲ್ಲಿಯೂ, ತೋಳು, ಕಂಕುಳ, ಹೊಕ್ಕಳ, ಮಂಡೆ ಎರಡು ಪಾದಗಳಲ್ಲಿಯೂ ಮೃತ್ತಿಕಾಲೇಪನಮಾಡಿ ನೀರಿನಿಂದ ತೊಳೆಯಬೇಕು. ಲಿಂಗಕ್ಕೆ ಒಂದು ಸಲ, ಗುದಸ್ಥಾನಕ್ಕೆ ಮೂರುಸಲ, ಎಡಗೈಗೆ ಹತ್ತುಸಲ, ಬಲಗೈಗೆ ಏಳುಸಲ ಮಣ್ಣನ್ನು ಹಚ್ಚಿಕೊಂಡು ತೊಳೆಯಬೇಕು. ಹೀಗೆ ಅಂಗಾಂಗಗಳನ್ನೆಲ್ಲ ಮೃತ್ತಿಕಾಲೇಪನ ಪೂರ್ವಕ ಪ್ರಕ್ಷಾಲನ ಮಾಡಿಕೊಂಡಬಳಿಕ ಮೂರು ಸಲ ಮುಳುಗುಹಾಕಿ ಮತ್ತೊಮ್ಮೆ ಜಲಾಶಯದ ಮಣ್ಣನ್ನು ಕೈಯಲ್ಲಿ ಹಿಡಿದುಕೊಂಡು -

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದೃಷ್ಕೃತಂ ಕೃತಂ ॥**

ಎಂಬ ಮಂತ್ರದಿಂದ ಮಣ್ಣನ್ನು ಮೈಗೆ ಲೇಪಿಸಿಕೊಳ್ಳಬೇಕು. ಮಾನವರ ಓಡಾಟ, ಕುದುರೆಗಳ ತುಳಿದಾಟ, ರಥ, ಚಕ್ಕಡಿ ಮುಂತಾದ ವಾಹನಗಳ ಭಾರ, ಎಲ್ಲವನ್ನು ಹೊರುವ ಈ ಭೂದೇವಿಯು ವಿಷ್ಣುವಿನಿಂದ ಪರಿಗ್ರಹೀತಳಾಗಿದ್ದಾಳೆ. ವಿಷ್ಣುಪತ್ನಿಯಾದ ಭೂ ಮಾತೆಯ ದೇಹದಲ್ಲಿರುವ 'ಎಲೆ ಮಣ್ಣೆ, ನಾನು ಮಾಡಿದ ಪಾಪ ಪರಿಹರಿಸು' ಎಂದು ಅರ್ಥಾನುಸಂಧಾನಪೂರ್ವಕ ಭೂದೇವಿಯನ್ನು ಪ್ರಾರ್ಥಿಸಿ ಮೃತ್ತಿಕಾ ಸ್ನಾನ ಮಾಡಿದರೆ ಎಲ್ಲ ಪಾಪ ಪರಿಹಾರವಾಗುವದು. ಇವಲ್ಲದೆ ಉಳಿದ ವೇದ ಪುರಾಣೋಕ್ತ ಮಂತ್ರಗಳನ್ನು ಸ್ನಾನ ಮಾಡುವಾಗ ಪಠಿಸಬೇಕು. ನದಿ, ಹಳ್ಳ, ಹೊಂಡ, ಸರೋವರ, ಬಾವಿ ಮುಂತಾದ ಜಲಾಶಯಗಳಲ್ಲಿ ಅವಗಾಹನ ಸ್ನಾನ ಮಾಡುವದು ಉತ್ತಮ. ಅವು ಲಭ್ಯವಿಲ್ಲದಿದ್ದರೆ ಕೊಡ ಅಥವಾ ಬಿಂದಿಗೆಯಿಂದ ನೀರನ್ನು ಸೇದಿಕೊಂಡು ವಿಧಿಪೂರ್ವಕ ಸ್ನಾನ ಮಾಡಬೇಕು. ಸ್ನಾನಗಳು ಅನೇಕ ಬಗೆಯಾಗಿವೆ. ಅದರಲ್ಲಿ ಪ್ರಾತಃಸ್ನಾನ ಅತ್ಯಂತ ಪುಣ್ಯಕರ. ಪ್ರಾತಃಸಂಧ್ಯೆಯ ತುಸು ಹಿಂದು ಮುಂದಿನ ಕಾಲ ಸ್ನಾನಕ್ಕೆ ಅಮೃತಗಳಿಗೆ. ಆ ನೀರನ್ನು ಪಿತೃಗಳು ಸ್ನಾನಕ್ಕಾಗಿ ಬಳಸುತ್ತಾರೆ. ಪ್ರಾತಃಸಂಧ್ಯೆಯ ನಂತರದ ಎರಡುಗಳಿಗೆ ಅಂದರೆ-

ಪ್ರಾತಃಕಾಲದ ಒಂದು ಪ್ರಹರ ಮೂರ್ತಿಯಾಗುವ ಕಾಲದಲ್ಲಿ ಮಾಡಿದ ಸ್ನಾನವು 'ಮಧು ಸ್ನಾನ'ಕ್ಕೆ ಸಮಾನವೆಂದು ಹೇಳಿದ್ದಾರೆ.

ಅನಂತರ ನಾಲ್ಕು ಗಂಟೆಯ ಸಮಯದ ವರೆಗೆಸ್ನಾನವು ನೀರು ಹಾಲಿಗೆ ಸಮಾನವಾಗಿರುತ್ತದೆ. ತದನಂತರದ ಮೂರು ಪ್ರಹರಗಳ ಕಾಲದಲ್ಲಿ ನೀರು ಸೂರ್ಯಸ್ತ ಕಾಲದವರೆಗೆ ಕಬ್ಬಿಣಕ್ಕೆ ಸಮಾನ ಎಂದು ಹೇಳಲ್ಪಟ್ಟದೆ. ದಿನದ ಕೊನೆಯ ಅಂದರೆ ನಾಲ್ಕನೆಯ ಪ್ರಹರದಲ್ಲಿ ಮಾಡಿದ ಅಥವಾ ರಾತ್ರಿ ಕಾಲದಲ್ಲಿ ಮಾಡಿದ ಸ್ನಾನ ಹಾಗೂ ಪಿತೃತರ್ಪಣ ಮುಂತಾದವುಗಳು ರಾಕ್ಷಸರ ಪಾಲಾಗುತ್ತವೆ. ಅರ್ಥಾತ್ ಹಗಲು ಹನ್ನೆರಡು ಗಂಟೆಗಳಲ್ಲಿ ಮೊದಲನೆಯ ಭಾಗದಲ್ಲಿ ಸ್ನಾನ ಮಾಡುವದು ಉತ್ತಮ ಕಲ್ಪ. ಎರಡನೆಯ ಭಾಗದಲ್ಲಿ ಸ್ನಾನವು ಮಧ್ಯಮ. ಮೂರನೆಯ ಭಾಗದಲ್ಲಿ ಸ್ನಾನವು ಕನಿಷ್ಠ. ನಾಲ್ಕನೆಯ ಭಾಗ ರಾತ್ರಿಸಮಯದಲ್ಲಿಸ್ನಾನ, ತರ್ಪಣ, ಪೂಜೆ ಮುಂತಾದ ಎಲ್ಲ ಕಾರ್ಯಗಳೂ ಅಧಮ, ಪಾಪಜನಕ.

ಸೃಷ್ಟಿಯ ಆದಿ ಕಾಲದಲ್ಲಿ ಸರ್ವ ಪದಾರ್ಥಗಳ ಶುದ್ಧಿ ಹಾಗೂ ಪಾವಿತ್ರ್ಯಗಳಿಗಾಗಿ ನಾನು ನೀರನ್ನು ಸೃಷ್ಟಿ ಮಾಡಿದೆನು. ಆ ನೀರಿನಿಂದ ಪ್ರಾಣಿಗಳೆಲ್ಲವೂ ಜೀವಿಸುವವು. ಇಂತಹ ಅಮೂಲ್ಯ ನೀರಿನ ರಕ್ಷಣೆಗಾಗಿ ನಾನು ಯಕ್ಷರನ್ನು ನಿಯಮಿಸಿದ್ದೇನೆ. ಈ 'ನೀರು' ಎಂಬುವದು ಭೂಲೋಕದಲ್ಲಿ ಮಾತ್ರ ದೊರೆಯುವ ವಸ್ತು. ಈ ಲೋಕದಲ್ಲಿದ್ದು ನೀರಿನ ಸವಿಯುಂಡು, ಅದರ ರುಚಿ ತಿಳಿದ ಪಿತೃಗಳು ಮರಣಾ ನಂತರವೂ ಜಲವನ್ನು ಅಪೇಕ್ಷಿಸುತ್ತಾರೆ. ಆದರೆ ಬೇರೆ ಲೋಕಗಳಲ್ಲಿ ಎಲ್ಲಿಯೂ ಅವರಿಗೆ ನೀರು ದೊರಕಲಾರವು. ಆದುದರಿಂದ ಅವರ ಮಕ್ಕಳು, ಮೊಮ್ಮಕ್ಕಳು (ವಂಶಜರು) ತಮ್ಮ ಪಿತೃಗಳನ್ನು ಉದ್ದೇಶಿಸಿ, ಜಲಾಂಜಲಿಯನ್ನಿತ್ತು 'ತರ್ಪಣ' ರೂಪದಿಂದ ನೀರನ್ನು ಕೊಡಬೇಕು. ಅದರಿಂದ ಪಿತೃಗಳು ಅಮೃತಪ್ರಾಶನ ಮಾಡಿದಂತೆ ಪರಮಾನಂದಭರಿತರಾಗಿ ತಮ್ಮ ಕುಲದಲ್ಲಿ ಜನಿಸಿದ ಕುಮಾರರನ್ನು ಹರಸುವರು. ಆದುದರಿಂದ ಮಕ್ಕಳು ಮೊಮ್ಮಕ್ಕಳು, ಹೆಣ್ಣು ಮಕ್ಕಳ ಮಕ್ಕಳು, ಶಿಷ್ಯರು, ಬಂಧು ಬಾಂಧವ ವರ್ಗದವರು ಪಿತೃಭಕ್ತರಾಗಿ ಪಿತೃಗಳನ್ನು ಸಂತೋಷಪಡಿಸುವ ಉದ್ದೇಶದಿಂದ ನೀರಿನಿಂದ ಜಲಾಂಜಲಿ ನೀಡಿ, 'ಪಿತೃತರ್ಪಣ' ಕಾರ್ಯವನ್ನು ಪ್ರತಿನಿತ್ಯ ಹಾಗೂ ವಿಶೇಷ ಸಂದರ್ಭಗಳಲ್ಲಿಯೂ ಪ್ರತಿಯೊಬ್ಬನೂ ತಪ್ಪದೇ ನೆರವೇರಿಸಬೇಕು.

**ನಾರದ ಉವಾಚ**

**ಜಲಸ್ಯ ದೈವತಂ ಬ್ರೂಹಿ ತರ್ಪಣಸ್ಯ ವಿಧಿಂ ಮಯಿ ।**
**ಯಥಾ ಜಾನಾಮಿ ದೇವೇಶ ತತ್ತ್ವತೋ ವಕ್ತುಮರ್ಹಸಿ ॥**

**ನಾರದ :-** ನೀರಿಗೆ ದೇವರನ್ನು ಹೇಳು. ತರ್ಪಣದ ವಿಧಿಯನ್ನು ತಿಳಿಸು. ಅದನ್ನು ನನಗೆ ತಿಳಿಯುವಂತೆ ಹೇಳು.

ಬ್ರಹ್ಮ :- **ಜಲಸ್ಯ ದೇವತಾ ವಿಷ್ಣು : ಸರ್ವಲೋಕೇಷು ಗೀಯತೆ ।**
**ಜಲಪೂತೋ ಭವೇದ್ಯಸ್ತು ವಿಷ್ಣುಸ್ತಚ್ಛಂಕರೋ ಭವೇತ್ ॥**

ನೀರಿನ ದೇವತೆಯು ವಿಷ್ಣುವು. ನೀರಿನಿಂದ ಪರಿಶುದ್ಧನಾದವನಿಗೆ ವಿಷ್ಣುವು ಮಂಗಳವನ್ನು ಮಾಡುತ್ತಾನೆ. ಜಲದಂತೆ ದರ್ಭೆಯೂ ಪವಿತ್ರ. ಅದು ಸರ್ವದೇವತೆಗಳ

ಇವರನ್ನೆಲ್ಲ ಒಂದಾವರ್ತಿ ಸ್ಮರಿಸಿದರೂ ಎಲ್ಲಾ ಯಜ್ಞಗಳ ಫಲವೂ ಬರುತ್ತದೆ. ಒಂದು ಲಕ್ಷಗೋಗಳನ್ನು ದಾನ ಮಾಡಿದ ಫಲವನ್ನು ಹೊಂದುತ್ತಾನೆ. ಅನಂತರ ಶುಚಿಯಾದ ಪ್ರದೇಶದಲ್ಲಿ ಮಲಮೂತ್ರ ವಿಸರ್ಜನೆ ಮಾಡಬೇಕು. ರಾತ್ರಿ ದಕ್ಷಿಣಕ್ಕೆ ಮುಖಮಾಡಿ ಹಗಲು ಉತ್ತರ ದಿಕ್ಕಿಗೆ ಮುಖಮಾಡಿ ವಿಷ್ಠಾ ಮೂತ್ರಗಳನ್ನು ತ್ಯಜಿಸಬೇಕು. ಹೀಗೆ ಬಹಿರ್ದೆಶೆಯ ಕಾರ್ಯ ಮುಗಿಸಿ, ಅತ್ತಿ ಮುಂತಾದ ಕಡ್ಡಿಗಳಿಂದ ಹಲ್ಲುಗಳನ್ನು ಉಜ್ಜಬೇಕು. ಮುಖ ಪ್ರಕ್ಷಾಲನ, ಮೃತ್ತಿಕಾ ಶೌಚ, ಪಾದ ಪ್ರಕ್ಷಾಲನ ಮುಂತಾದವುಗಳನ್ನು ವಿಧಿಪೂರ್ವಕವಾಗಿ ಮಾಡಿ ಪ್ರಾತಃ ಸಂಧ್ಯೆಯ ಅಭಿಮಾನಿ ದೇವತೆಗಳನ್ನು ವಂದಿಸಬೇಕು. ಸರಸ್ವತಿಯನ್ನು ಸ್ತುತಿಸಬೇಕು.

**ಪೂರ್ವಾಹ್ನೇ ರಕ್ತವರ್ಣಾಂತು ಮಧ್ಯಾಹ್ನೇ ಶುಕ್ಲವರ್ಣಿಕಾಂ ।**
**ಸಾಯಂ ಸರಸ್ವತೀಂ ಕೃಷ್ಣಾಂ ದ್ವಿಜೋ ಧ್ಯಾಯೇದ್ಯಥಾವಿಧಿ ॥**

ಪ್ರಾತಃಕಾಲದಲ್ಲಿ ಸರಸ್ವತಿ ದೇವಿಯನ್ನು ಹೊಂಬಣ್ಣದ ಹೊಳಪುಳ್ಳವಳನ್ನಾಗಿ, ಮಧ್ಯಾಹ್ನದಲ್ಲಿ ಶ್ವೇತವರ್ಣಳನ್ನಾಗಿಯೂ, ಸಾಯಂಕಾಲದಲ್ಲಿ ಕೃಷ್ಣಕಾಂತಿ ಕಮನೀಯಳನ್ನಾಗಿಯೂ ಸರಸ್ವತಿಯನ್ನು ಧ್ಯಾನಮಾಡಬೇಕು. ಅನಂತರ ವಿಧಿ ಪೂರ್ವಕ ಸ್ನಾನ ಮಾಡಬೇಕು. ಸ್ನಾನಾಂಗವಾಗಿ ಅಂಗಾಂಗಗಳನ್ನು ತೊಳೆದುಕೊಂಡು ಮಣ್ಣನ್ನು ಹಚ್ಚಿ ಮತ್ತೆ ತೊಳೆಯಬೇಕು. ತಲೆ, ಹಣೆ, ಮೂಗು, ಎದೆ, ಹುಬ್ಬುಗಳಲ್ಲಿಯೂ, ತೋಳು, ಕಂಕುಳ, ಹೊಕ್ಕಳ, ಮಂಡೆ ಎರಡು ಪಾದಗಳಲ್ಲಿಯೂ ಮೃತ್ತಿಕಾಲೇಪನಮಾಡಿ ನೀರಿನಿಂದ ತೊಳೆಯಬೇಕು. ಲಿಂಗಕ್ಕೆ ಒಂದು ಸಲ, ಗುದಸ್ಥಾನಕ್ಕೆ ಮೂರುಸಲ, ಎಡಗೈಗೆ ಹತ್ತುಸಲ, ಬಲಗೈಗೆ ಏಳುಸಲ ಮಣ್ಣನ್ನು ಹಚ್ಚಿಕೊಂಡು ತೊಳೆಯಬೇಕು. ಹೀಗೆ ಅಂಗಾಂಗಗಳನ್ನೆಲ್ಲ ಮೃತ್ತಿಕಾಲೇಪನ ಪೂರ್ವಕ ಪ್ರಕ್ಷಾಲನ ಮಾಡಿಕೊಂಡಬಳಿಕ ಮೂರು ಸಲ ಮುಳುಗುಹಾಕಿ ಮತ್ತೊಮ್ಮೆ ಜಲಾಶಯದ ಮಣ್ಣನ್ನು ಕೈಯಲ್ಲಿ ಹಿಡಿದುಕೊಂಡು -

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।**
**ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದೃಷ್ಕೃತಂ ಕೃತಂ ॥**

ಎಂಬ ಮಂತ್ರದಿಂದ ಮಣ್ಣನ್ನು ಮೈಗೆ ಲೇಪಿಸಿಕೊಳ್ಳಬೇಕು. ಮಾನವರ ಓಡಾಟ, ಕುದುರೆಗಳ ತುಳಿದಾಟ, ರಥ, ಚಕ್ಕಡಿ ಮುಂತಾದ ವಾಹನಗಳ ಭಾರ, ಎಲ್ಲವನ್ನು ಹೊರುವ ಈ ಭೂದೇವಿಯು ವಿಷ್ಣುವಿನಿಂದ ಪರಿಗ್ರಹೀತಳಾಗಿದ್ದಾಳೆ. ವಿಷ್ಣುಪತ್ನಿಯಾದ ಭೂ ಮಾತೆಯ ದೇಹದಲ್ಲಿರುವ 'ಎಲೆ ಮಣ್ಣೆ, ನಾನು ಮಾಡಿದ ಪಾಪ ಪರಿಹರಿಸು' ಎಂದು ಅರ್ಥಾನುಸಂಧಾನಪೂರ್ವಕ ಭೂದೇವಿಯನ್ನು ಪ್ರಾರ್ಥಿಸಿ ಮೃತ್ತಿಕಾ ಸ್ನಾನ ಮಾಡಿದರೆ ಎಲ್ಲ ಪಾಪ ಪರಿಹಾರವಾಗುವದು. ಇವಲ್ಲದೆ ಉಳಿದ ವೇದ ಪುರಾಣೋಕ್ತ ಮಂತ್ರಗಳನ್ನು ಸ್ನಾನ ಮಾಡುವಾಗ ಪಠಿಸಬೇಕು. ನದಿ, ಹಳ್ಳ, ಹೊಂಡ, ಸರೋವರ, ಬಾವಿ ಮುಂತಾದ ಜಲಾಶಯಗಳಲ್ಲಿ ಅವಗಾಹನ ಸ್ನಾನ ಮಾಡುವದು ಉತ್ತಮ. ಅವು ಲಭ್ಯವಿಲ್ಲದಿದ್ದರೆ ಕೊಡ ಅಥವಾ ಬಿಂದಿಗೆಯಿಂದ ನೀರನ್ನು ಸೇದಿಕೊಂಡು ವಿಧಿಪೂರ್ವಕ ಸ್ನಾನ ಮಾಡಬೇಕು. ಸ್ನಾನಗಳು ಅನೇಕ ಬಗೆಯಾಗಿವೆ. ಅದರಲ್ಲಿ ಪ್ರಾತಃಸ್ನಾನ ಅತ್ಯಂತ ಪುಣ್ಯಕರ. ಪ್ರಾತಃಸಂಧ್ಯೆಯ ತುಸು ಹಿಂದು ಮುಂದಿನ ಕಾಲ ಸ್ನಾನಕ್ಕೆ ಅಮೃತಗಳಿಗೆ. ಆ ನೀರನ್ನು ಪಿತೃಗಳು ಸ್ನಾನಕ್ಕಾಗಿ ಬಳಸುತ್ತಾರೆ. ಪ್ರಾತಃಸಂಧ್ಯೆಯ ನಂತರದ ಎರಡುಗಳಿಗೆ ಅಂದರೆ-

ಪ್ರಾತಃಕಾಲದ ಒಂದು ಪ್ರಹರ ಮೂರ್ತಿಯಾಗುವ ಕಾಲದಲ್ಲಿ ಮಾಡಿದ ಸ್ನಾನವು 'ಮಧು ಸ್ನಾನ'ಕ್ಕೆ ಸಮಾನವೆಂದು ಹೇಳಿದ್ದಾರೆ.

ಅನಂತರ ನಾಲ್ಕು ಗಂಟೆಯ ಸಮಯದ ವರೆಗೆಸ್ನಾನವು ನೀರು ಹಾಲಿಗೆ ಸಮಾನವಾಗಿರುತ್ತದೆ. ತದನಂತರದ ಮೂರು ಪ್ರಹರಗಳ ಕಾಲದಲ್ಲಿ ನೀರು ಸೂರ್ಯಸ್ತ ಕಾಲದವರೆಗೆ ಕಬ್ಬಿಣಕ್ಕೆ ಸಮಾನ ಎಂದು ಹೇಳಲ್ಪಟ್ಟಿದೆ. ದಿನದ ಕೊನೆಯ ಅಂದರೆ ನಾಲ್ಕನೆಯ ಪ್ರಹರದಲ್ಲಿ ಮಾಡಿದ ಅಥವಾ ರಾತ್ರಿ ಕಾಲದಲ್ಲಿ ಮಾಡಿದ ಸ್ನಾನ ಹಾಗೂ ಪಿತೃತರ್ಪಣ ಮುಂತಾದವುಗಳು ರಾಕ್ಷಸರ ಪಾಲಾಗುತ್ತವೆ. ಅರ್ಥಾತ್ ಹಗಲು ಹನ್ನೆರಡು ಗಂಟೆಗಳಲ್ಲಿ ಮೊದಲನೆಯ ಭಾಗದಲ್ಲಿ ಸ್ನಾನ ಮಾಡುವದು ಉತ್ತಮ ಕಲ್ಪ. ಎರಡನೆಯ ಭಾಗದಲ್ಲಿ ಸ್ನಾನವು ಮಧ್ಯಮ. ಮೂರನೆಯ ಭಾಗದಲ್ಲಿ ಸ್ನಾನವು ಕನಿಷ್ಠ. ನಾಲ್ಕನೆಯ ಭಾಗ ರಾತ್ರಿಸಮಯದಲ್ಲಿಸ್ನಾನ, ತರ್ಪಣ, ಪೂಜೆ ಮುಂತಾದ ಎಲ್ಲ ಕಾರ್ಯಗಳೂ ಅಧಮ, ಪಾಪಜನಕ.

ಸೃಷ್ಟಿಯ ಆದಿ ಕಾಲದಲ್ಲಿ ಸರ್ವ ಪದಾರ್ಥಗಳ ಶುದ್ಧಿ ಹಾಗೂ ಪಾವಿತ್ರ್ಯಗಳಿಗಾಗಿ ನಾನು ನೀರನ್ನು ಸೃಷ್ಟಿ ಮಾಡಿದೆನು. ಆ ನೀರಿನಿಂದ ಪ್ರಾಣಿಗಳೆಲ್ಲವೂ ಜೀವಿಸುವವು. ಇಂತಹ ಅಮೂಲ್ಯ ನೀರಿನ ರಕ್ಷಣೆಗಾಗಿ ನಾನು ಯಕ್ಷರನ್ನು ನಿಯಮಿಸಿದ್ದೇನೆ. ಈ 'ನೀರು' ಎಂಬುವದು ಭೂಲೋಕದಲ್ಲಿ ಮಾತ್ರ ದೊರೆಯುವ ವಸ್ತು. ಈ ಲೋಕದಲ್ಲಿದ್ದು ನೀರಿನ ಸವಿಯುಂಡು, ಅದರ ರುಚಿ ತಿಳಿದ ಪಿತೃಗಳು ಮರಣಾ ನಂತರವೂ ಜಲವನ್ನು ಅಪೇಕ್ಷಿಸುತ್ತಾರೆ. ಆದರೆ ಬೇರೆ ಲೋಕಗಳಲ್ಲಿ ಎಲ್ಲಿಯೂ ಅವರಿಗೆ ನೀರು ದೊರಕಲಾರವು. ಆದುದರಿಂದ ಅವರ ಮಕ್ಕಳು, ಮೊಮ್ಮಕ್ಕಳು (ವಂಶಜರು) ತಮ್ಮ ಪಿತೃಗಳನ್ನು ಉದ್ದೇಶಿಸಿ, ಜಲಾಂಜಲಿಯನ್ನಿತ್ತು 'ತರ್ಪಣ' ರೂಪದಿಂದ ನೀರನ್ನು ಕೊಡಬೇಕು. ಅದರಿಂದ ಪಿತೃಗಳು ಅಮೃತಪ್ರಾಶನ ಮಾಡಿದಂತೆ ಪರಮಾನಂದಭರಿತರಾಗಿ ತಮ್ಮ ಕುಲದಲ್ಲಿ ಜನಿಸಿದ ಕುಮಾರರನ್ನು ಹರಸುವರು. ಆದುದರಿಂದ ಮಕ್ಕಳು ಮೊಮ್ಮಕ್ಕಳು, ಹೆಣ್ಣು ಮಕ್ಕಳ ಮಕ್ಕಳು, ಶಿಷ್ಯರು, ಬಂಧು ಬಾಂಧವ ವರ್ಗದವರು ಪಿತೃಭಕ್ತರಾಗಿ ಪಿತೃಗಳನ್ನು ಸಂತೋಷಪಡಿಸುವ ಉದ್ದೇಶದಿಂದ ನೀರಿನಿಂದ ಜಲಾಂಜಲಿ ನೀಡಿ, 'ಪಿತೃತರ್ಪಣ' ಕಾರ್ಯವನ್ನು ಪ್ರತಿನಿತ್ಯ ಹಾಗೂ ವಿಶೇಷ ಸಂದರ್ಭಗಳಲ್ಲಿಯೂ ಪ್ರತಿಯೊಬ್ಬನೂ ತಪ್ಪದೇ ನೆರವೇರಿಸಬೇಕು.

**ನಾರದ ಉವಾಚ**

**ಜಲಸ್ಯ ದೈವತಂ ಬ್ರೂಹಿ ತರ್ಪಣಸ್ಯ ವಿಧಿಂ ಮಯಿ ।**
**ಯಥಾ ಜಾನಾಮಿ ದೇವೇಶ ತತ್ತ್ವತೋ ವಕ್ತುಮರ್ಹಸಿ ॥**

**ನಾರದ :-** ನೀರಿಗೆ ದೇವರನ್ನು ಹೇಳು. ತರ್ಪಣದ ವಿಧಿಯನ್ನು ತಿಳಿಸು. ಅದನ್ನು ನನಗೆ ತಿಳಿಯುವಂತೆ ಹೇಳು.

ಬ್ರಹ್ಮ :- **ಜಲಸ್ಯ ದೇವತಾ ವಿಷ್ಣು : ಸರ್ವಲೋಕೇಷು ಗೀಯತೆ ।**
**ಜಲಪೂತೋ ಭವೇದ್ಯಸ್ತು ವಿಷ್ಣುಸ್ತಚ್ಛಂಕರೋ ಭವೇತ್ ॥**

ನೀರಿನ ದೇವತೆಯು ವಿಷ್ಣುವು. ನೀರಿನಿಂದ ಪರಿಶುದ್ಧನಾದವನಿಗೆ ವಿಷ್ಣುವು ಮಂಗಳವನ್ನು ಮಾಡುತ್ತಾನೆ. ಜಲದಂತೆ ದರ್ಭೆಯೂ ಪವಿತ್ರ. ಅದು ಸರ್ವದೇವತೆಗಳ

ಆವಾಸ ಸ್ಥಾನ. ದರ್ಭೆಯ ಮೂಲದಲ್ಲಿ ಬ್ರಹ್ಮ, ಮಧ್ಯದಲ್ಲಿ ವಿಷ್ಣು, ತುದಿಯಲ್ಲಿ ಶಂಕರ ಸನ್ನಿಹಿತರಾಗಿರುತ್ತಾರೆ. ಆದುದರಿಂದ ಮಂತ್ರಗಳನ್ನು ಪಠಿಸುವಾಗಲೂ, ದೇವರ ಸ್ತೋತ್ರ ಹೇಳುವಾಗಲೂ ದರ್ಭವನ್ನು ಧರಿಸಿ ಪಠಿಸಿದ ಮಂತ್ರದಿಂದ ಮೂರು ಪಟ್ಟು ಹೆಚ್ಚಿನ ಪುಣ್ಯ ಬರುವದು. ಈ ದರ್ಭ ಹತ್ತು ವಿಧವಾಗಿರುತ್ತದೆ.

**ಕುಶಾಃ ಕಾಶಾಸ್ತಥಾ ದೂರ್ವಾ ಯವಪತ್ರಾಣಿ ವ್ರೀಹಯಃ**
**ಬಲ್ವಜಾಃ ಪುಂಡರೀಕಾಶ್ಚ ಕುಶಾಃ ಸಪ್ತ ಪ್ರಕೀರ್ತಿತಾಃ ।**
**ಆನುಪೂರ್ವ್ಯೇಣ ಮೇಧ್ಯಾಃ ಸ್ಯುಃ ಕುಶಾ ಲೋಕೇ ಪ್ರತಿಷ್ಠಿತಾಃ ॥**

ದರ್ಭೆ, ಕಾಶವೆಂಬ ವಿಶ್ವಾಮಿತ್ರ ದರ್ಭೆ, ಕರಿಕೆ, ಯವವೆಂಬ ಧಾನ್ಯದ ಎಲೆ, ಬತ್ತದ ಗರಿ, ಬಲ್ವಜವೆಂಬ ಜೊಂಡು. ಬಿಳಿಯ ಕಮಲವೆಲ್ಲವೂ ಕುಶಗಳೆನಿಸುತ್ತವೆ. ಈ ಹತ್ತು ವಿಧದ ದರ್ಭೆಗಳು ಪವಿತ್ರವಾಗಿರುತ್ತವೆ. ಇವು ಈ ಲೋಕದಲ್ಲಿ ಪ್ರಸಿದ್ಧವಾಗಿದ್ದು ಎಲ್ಲ ಕಡೆಗೂ ದೊರೆಯುತ್ತವೆ. ದರ್ಭೆಯಂತೆ ತಿಲವೂ ಪವಿತ್ರವಾಗಿದೆ. ಆದುದರಿಂದ ಪ್ರತಿನಿತ್ಯವೂ ಹತ್ತು ಕಾಳಾದರೂ ಎಳ್ಳು ಕೂಡಿಸಿ ಪಿತೃಗಳಿಗೆ ನೀರಿನಿಂದ ತಿಲತರ್ಪಣ ಕೊಡಬೇಕು. ಸ್ನಾನಮಾಡಿ ಪ್ರತಿನಿತ್ಯವೂ ತಿಲಮಿಶ್ರ ಜಲದಿಂದ ಪಿತೃಗಳಿಗೆ ತರ್ಪಣ ನೀಡಿದವನು ಬ್ರಹ್ಮ ಲೋಕವನ್ನು ಪಡೆಯುತ್ತಾನೆ. ಅದರಲ್ಲಿಯೂ ಯುಗಾದಿ, ಅಮಾವಾಸ್ಯೆ ಮುಂತಾದ ದಿನಗಳಲ್ಲಿ **'ತಿಲತರ್ಪಣ'** ದಿಂದ ಅಕ್ಷಯ ಸ್ವರ್ಗ ಪ್ರಾಪ್ತಿ.

ವರ್ಷಾಋತುವಿನಲ್ಲಿ ದೀಪದಾನ, ಅಮಾವಾಸ್ಯೆಯಲ್ಲಿ ತಿಲತರ್ಪಣ ಹಾಗೂ ಕಪ್ಪು ಬಣ್ಣದ ಬಸವನನ್ನು ಬಿಡುವದು ಈ ಮೂರರಿಂದ ಮಾನವನು ಪಿತೃಋಣದಿಂದ ಮುಕ್ತನಾಗುತ್ತಾನೆ. ಉತ್ತರಾಯಣ, ದಕ್ಷಿಣಾಯಣ ಪುಣ್ಯಕಾಲ, ಸಂಕ್ರಮಣ, ಹುಣ್ಣಿಮೆ, ಅಮಾವಾಸ್ಯೆ, ಸೂರ್ಯ, ಚಂದ್ರಗ್ರಹಣಕಾಲ, ಯುಗಾದಿ ಮುಂತಾದ ಪರ್ವಕಾಲಗಳಲ್ಲಿ ಪಿತೃಗಳನ್ನು ಉದ್ದೇಶಿಸಿ, ಜಲಾಂಜಲಿ, ತಿಲಾಂಜಲಿಗಳನ್ನು ನೀಡಿ, ತರ್ಪಣಾದಿಗಳನ್ನು ಮಾಡುವದರಿಂದ ಮೃತರು ವೈಕುಂಠ ಲೋಕವನ್ನು ಕುರಿತು ಪ್ರಯಾಣ ಮಾಡುವರು. ಪುಣ್ಯ ದಿನಗಳಲ್ಲಿ ಮೊದಲು ದೇವತೆಗಳಿಗೆ ತರ್ಪಣ ಕೊಟ್ಟ ಬಳಿಕ ಪಿತೃತರ್ಪಣ ಕೊಡಬೇಕು. ಪಿತೃತರ್ಪಣವನ್ನು ದಕ್ಷಿಣಕ್ಕೆ ಮುಖಮಾಡಿ, ಶುಚಿರ್ಭೂತನಾಗಿ ಅವರವರ ಹೆಸರು ಗೋತ್ರ ಹೇಳುತ್ತ 'ತೃಪ್ಯತಾಂ' ಎಂದು ನೀರಿನಿಂದ ತರ್ಪಣ ಬಿಡಬೇಕು. ತರ್ಪಣಕ್ಕೆ ಕರಿ ಎಳ್ಳುಗಳನ್ನೇ ಉಪಯೋಗಿಸಬೇಕು. ಬಿಳಿ ಎಳ್ಳಿನಿಂದ ನೀಡಿದ ತರ್ಪಣವು ವ್ಯರ್ಥವಾಗುತ್ತದೆ. ತಾನು ನೆಲದ ಮೇಲೆ ಕುಳಿತು, ನೀರಿನಲ್ಲಿ ತರ್ಪಣ ಬಿಡಬಾರದು. ಅದರಂತೆ ನೀರಿನಲ್ಲಿ ನಿಂತು ನೆಲದ ಮೇಲೆ ತರ್ಪಣ ಬಿಡಕೂಡದು. ನೀರಿನಲ್ಲಿ ನಿಂತು ಒದ್ದೆ ಬಟ್ಟೆ ಉಟ್ಟುಕೊಂಡು ದೇವತರ್ಪಣವನ್ನಾಗಲಿ, ಪಿತೃತರ್ಪಣವನ್ನಾಗಲಿ ಮಾಡಿದರೆ, ಪಿತೃ, ದೇವತೆಗಳಿಬ್ಬರೂ ತೃಪ್ತರಾಗುವರು.

ಅಗಸರು ಒಗೆದು ತಂದಿಟ್ಟ ಬಟ್ಟೆಯುಟ್ಟು ತರ್ಪಣ ಕೊಡಬಾರದು. ಶುಚಿಯಾದ ಒಣಬಟ್ಟೆಯುಟ್ಟು ದೇವತರ್ಪಣಬಿಟ್ಟು, ಪಿತೃತರ್ಪಣ ನೀಡಿದರೆ ಪಿತೃಗಳಿಗೆ ಬಹಳ ಸಂತೋಷ, ಸ್ನಾನ, ಸಂಧ್ಯಾವಂದನೆ ಹಾಗೂ ತರ್ಪಣಗಳನ್ನು ಕಲ್ಲು ಅಥವಾ ತಾಮ್ರದ ಪಾತ್ರೆಯಲ್ಲಿ ಮಾಡಬೇಕು. ತೋರುಬೆರಳಿನಲ್ಲಿ ಬೆಳ್ಳಿಯಉಂಗುರವನ್ನು, ಅನಾಮಿಕೆ ಬೆರಳಿನಲ್ಲಿ ಚಿನ್ನದ ಉಂಗುರವನ್ನು ಧರಿಸಿ ತರ್ಪಣ ಮಾಡಿದರೆ ಬಹಳ ಪುಣ್ಯ.

ಪ್ರತಿನಿತ್ಯವೂ ಮನುಷ್ಯನು ವಿಧಿಪೂರ್ವಕವಾಗಿ ತಪ್ಪದೆ ಸ್ನಾನ ಮಾಡಬೇಕು. ಅನಂತರ ಸ್ನಾನಾಂಗ ತರ್ಪಣ, ತದನಂತರ ದೇವರ ಪೂಜೆ ಮುಂತಾದ ಶಾಸ್ತ್ರೋಕ್ತ ವಿಧಿ ವಿಧಾನಗಳನ್ನು ಯಥಾಪ್ರಕಾರ ಅನುದಿನವೂ ಮನುಷ್ಯರು ಮಾಡಬೇಕು. ವಿಘ್ನ ಪರಿಹಾರಕ್ಕಾಗಿ ಗಣಪತಿಯನ್ನೂ, ಆರೋಗ್ಯ ಪ್ರಾಪ್ತಿಗೆ ಸೂರ್ಯನನ್ನೂ, ಮೋಕ್ಷಾರ್ಥವಾಗಿ ಶ್ರೀಹರಿಯನ್ನೂ, ಕೈಕೊಂಡ ಕಾರ್ಯ ಸಿದ್ಧಿಸಲು ಮಹಾ ದೇವರನ್ನೂ, ತಮ್ಮ ಸರ್ವಾಭೀಷ್ಟ ಸಿದ್ಧಿಗಾಗಿ ಪಾರ್ವತಿಯನ್ನೂ ಪೂಜೆ ಮಾಡಬೇಕು. ಹೀಗೆ ದೇವರ ಪೂಜೆಮಾಡಿ, ಬ್ರಹ್ಮಯಜ್ಞ, ವೈಶ್ವದೇವ, ಬಲಿಹರಣ, ಅಗ್ನಿಕಾರ್ಯ ಮುಂತಾದವುಗಳನ್ನು ಶಾಸ್ತ್ರೋಕ್ತವಾಗಿ ಆಚರಿಸಬೇಕು. ಅನಂತರ ಬ್ರಹ್ಮಭೋಜನ, ನಾಯಿಯವರೆಗೆ ಎಲ್ಲ ಪ್ರಾಣಿಗಳಿಗೂ ಆಹಾರ ನೀಡಬೇಕು, ಇದರಿಂದ ಮಾನವನು ಮರಣಾನಂತರ ಸ್ವರ್ಗ ಸುಖವನ್ನು ಪಡೆಯುತ್ತಾನೆ. ಸ್ನಾನ, ಜಪ, ತರ್ಪಣ, ದೇವರ ಪೂಜೆ, ಸಂಧ್ಯಾವಂದನ ಮುಂತಾದ ನಿತ್ಯಾಹ್ನಿಕ ವಿಧಿಗಳನ್ನು ಮಾಡುವುದರಿಂದ ಪುಣ್ಯ ಬರುವದು. ಮಾಡದೇ ಇದ್ದರೆ ಭಯಂಕರ ಪಾಪ.

**ಅಸ್ನಾಯೀ ಚ ಮಲಂ ಭುಂಕ್ತೇ ಅಜಪೀ ಪೂಯಶೋಣಿತಂ ।**
**ಅಕೃತ್ವಾ ತರ್ಪಣಂ ನಿತ್ಯಂ ಪಿತೃಹಾ ಚೋಪಜಾಯತೇ ॥**
**ಬ್ರಹ್ಮಹತ್ಯಾಸಮಂ ಪಾಪಂ ದೇವಾನಾಮಪ್ಯಪೂಜನೇ ।**
**ಸಂಧ್ಯಾಕೃತ್ಯಮಕೃತ್ವಾ ಚ ಸೂರ್ಯಂ ಹಂತಿ ಚ ಪಾಪಕೃತ್॥**

**ಸದಾಚಾರ**

ಸ್ನಾನ ಮಾಡದೇ ಊಟ ಮಾಡಿದರೆ ಮಲವನ್ನು ತಿಂದಂತೆಯೂ, ಜಪ ಮಾಡದೇ ಊಟ ಮಾಡಿದರೆ ರಕ್ತ ಕೀವುಗಳನ್ನು ತಿಂದಂತೆಯೂ, ತರ್ಪಣವನ್ನು ಕೊಡದೇ ಊಟ ಮಾಡಿದರೆ ಪಿತೃಗಳ ವಧೆ ಮಾಡಿದಂತೆಯೂ ಆಗುತ್ತದೆ. ದೇವತೆಗಳನ್ನು ಪೂಜಿಸದಿದ್ದರೆ ಬ್ರಹ್ಮ ಹತ್ಯೆಯ ಪಾಪ ಬರುತ್ತದೆ, ಸಂಧ್ಯಾವಂದನೆಯನ್ನು ಮಾಡದಿದ್ದರೆ ಸೂರ್ಯನನ್ನು ಕೊಂದ ಪಾಪವು ಬರುತ್ತದೆ.

**ಬ್ರಹ್ಮಾ ಉವಾಚ**

**ಆಚಾರಾಲ್ಲಭತೇ ಚಾಯುರಾಚಾರಾಲ್ಲಭತೇ ಧನಂ ।**
**ಆಚಾರಾತ್ಸ್ವರ್ಗಮೋಕ್ಷಂ ಚ ಆಚಾರೋ ಹಂತ್ಯಲಕ್ಷಣಂ ॥**
**ಅನಾಚಾರೋ ಹಿ ಪುರುಷೋ ಲೋಕೇ ಭವತಿ ನಿಂದಿತಃ ।**
**ದುಃಖಭಾಗೀ ಚ ಸತತಂ ವ್ಯಾಧಿತೋಽಲ್ಪಾಯುರೇವ ಚ ॥**

ಸದಾಚಾರದಿಂದ ಆಯುಷ್ಯವೃದ್ಧಿ, ಧನಪ್ರಾಪ್ತಿ, ಈ ಲೋಕದಲ್ಲಿ, ಅದರಂತೆ ಮರಣಾನಂತರ ಸ್ವರ್ಗಮೋಕ್ಷಗಳು ಸದಾಚಾರದಿಂದ ಲಭ್ಯವಾಗುವವು. ಸದಾಚಾರವು ಅಮಂಗಳವನ್ನೆಲ್ಲ ನಾಶಪಡಿಸುವದು. ಆಚಾರಹೀನನಾದ ಮನುಷ್ಯನು ಈ ಲೋಕದಲ್ಲಿ ನಿಂದಿತ; ಮತ್ತು ದುಃಖಭಾಗಿ ಆಗುವನು. ಅನಾಚಾರಿಗೆ ಬೇನೆ ಬಿಟ್ಟಿದ್ದಲ್ಲ. ಮತ್ತು ಆಯುಷ್ಯವು ಕ್ಷೀಣವಾಗುವದು. ಮುಂದೆ ಸದಾಚಾರ ಶೂನ್ಯನಾದ ಮನುಷ್ಯನಿಗೆ ನರಕದಲ್ಲಿ ವಾಸವು ಕಟ್ಟಿಟ್ಟದ್ದು.

ಸದಾಚಾರದಿಂದ ಇಲ್ಲಿಯೂ, ಪರಲೋಕದಲ್ಲಿಯೂ ಸುಖ ಸೌಭಾಗ್ಯ ಪ್ರಾಪ್ತಿ ನಿಶ್ಚಿತವಾದದ್ದು. ಆದುದರಿಂದ ಆಚಾರದ ವಿಚಾರವಾಗಿ ಕೆಲವು ವಿಷಯ ತಿಳಿಸುತ್ತೇನೆ.

ಪ್ರತಿನಿತ್ಯವೂ ಮನೆಗಳನ್ನು ಗೋಮಯದಿಂದ ಸಾರಿಸಬೇಕು. ಮತ್ತು ಕಟ್ಟಿಗೆಯ ದೇವರ ಪೀಠವನ್ನು, ಪಾತ್ರೆಗಳನ್ನು ನೆಲದ ಕಲ್ಲನ್ನು ನೀರಿನಿಂದ ತೊಳೆದು ಶುದ್ಧೀಕರಿಸಬೇಕು. ಕಂಚಿನ ಪಾತ್ರೆಗಳು ಬೂದಿಯಿಂದ, ತಾಮ್ರದ ಪಾತ್ರೆ ಹುಣಸೆ ಹುಳಿಯಿಂದ, ಕಲ್ಲಿನ ಪಾತ್ರೆ ಎಣ್ಣೆಯಿಂದ, ಮರದ ಹಲಗೆ ಮುಂತಾದವುಗಳು ಆಕಳ ಬಾಲದಿಂದ (ಗೋಮೂತ್ರದಿಂದ) ಶುದ್ಧವಾಗುತ್ತವೆ.

ಬಂಗಾರ ಬೆಳ್ಳಿ ಮುಂತಾದ ಪಾತ್ರೆಗಳಿಗೆ ಮಾತ್ರ ಮಣ್ಣು, ಬೂದಿ, ಎಣ್ಣೆಯಾವದೂ ಕಾರಣವಿಲ್ಲ. ಅವು ನೀರಿನಿಂದ ತೊಳೆದರೂ ಸಾಕು. ಅವು ಶುದ್ಧವಾಗುತ್ತವೆ. ಕಬ್ಬಿಣ ಪಾತ್ರೆಯು ಬೆಂಕಿಗೆ ಹಾಕಿ ಕಾಯಿಸುವದರಿಂದ ಶುದ್ಧವಾಗುತ್ತದೆ. ಭೂಮಿಯು ಅಶುದ್ಧವಾಗಿದ್ದರೆ ಅಗಿಯುವದರಿಂದಾಗಲಿ, ಸುಡುವದರಿಂದಾಗಲಿ, ಸಾರಿಸುವದರಿಂದಾಗಲಿ ಅಥವಾ ತೊಳೆಯುವದರಿಂದಾಗಲಿ, ಅಥವಾ ಮಳೆ ನೀರಿನಿಂದಾಗಲಿ, ಪರಿಶುದ್ಧವಾಗುವದು.

ಹಾಸಿಗೆ, ಹೆಂಡತಿ, ಮಗು, ಬಟ್ಟೆ, ಜನಿವಾರ, ಕಮಂಡಲು- ಇವು ಅವರವರ ವಸ್ತು ಅವರವರಿಗೆ ಮಾತ್ರ ಶುದ್ಧ. ಇನ್ನೊಬ್ಬರಿಗೆ ಇವು ಅಶುದ್ಧ. ಒಂದೇ ಬಟ್ಟೆ ಉಟ್ಟು ಊಟ ಮಾಡಬಾರದು. ಒಂದೇ ಬಟ್ಟೆಯಿಂದ ಸ್ನಾನ ಮಾಡಬಾರದು. ಬೇರೊಬ್ಬರ ಅಂಗವಸ್ತ್ರ ಪಂಚೆ ಸ್ನಾನಕ್ಕೆ ಉಪಯೋಗಿಸಕೂಡದು. ಹಲ್ಲು ಉಜ್ಜುವದು, ಕೂದಲು ಕತ್ತರಿಸುವದು, ಉಗುರು ತೆಗೆಯುವದು ಮುಂತಾದವುಗಳನ್ನು ಪ್ರಾತಃಕಾಲದಲ್ಲಿ ಮಾಡಿಯೇ ನಂತರ ಸ್ನಾನ ಮಾಡಬೇಕು. ಗುರು ಹಿರಿಯರಿಗೆ ನಿತ್ಯವೂ ನಮಸ್ಕರಿಸಬೇಕು. ಊಟಮಾಡುವಾಗ ಪಂಚಾರ್ದ್ರನಾಗಿಯೇ ಭೋಜನ ಮಾಡಬೇಕು. ಎಂದರೆ ಐದು ದೇಹದ ಅವಯವ ತೊಳೆದು ಕೊಳ್ಳದೇ ಊಟಮಾಡಬಾರದು. ಎರಡುಕೈ, ಎರಡುಕಾಲು, ಮುಖ ಇವುಗಳನ್ನು ಪ್ರಕ್ಷಾಲನಮಾಡಿಯೇ ಭೋಜನ, ಉಪಹಾರಗಳನ್ನು ಮಾಡಬೇಕು.

ದೇವತೆಗಳ ಆಜ್ಞೆ ಅಂದರೆ ಧರ್ಮಶಾಸ್ತ್ರಗಳ ಅನುಶಾಸನವನ್ನು, ಗುರುವಿನ ಅಪ್ಪಣೆಯನ್ನು, ಯಜ್ಞದಲ್ಲಿ ದೀಕ್ಷಿತರಾದವರ ಮಾತನ್ನು, ಶೋತ್ರಿಯರ ವಚನವನ್ನು ಮೀರಬಾರದು. ಪ್ರಯಾಣಕ್ಕೆ ಹೋಗುವಾಗ, ಅಥವಾ ದಾರಿಯಲ್ಲಿ ಕಂಡಾಗ ಹಸುಗಳ ಹಿಂಡು, ದೇವರಗುಡಿ, ದ್ವಿಜ, ಜೇನುತುಪ್ಪ, ಪ್ರಸಿದ್ಧ ವನಸ್ಪತಿ ಮುಂತಾದವುಗಳನ್ನು ಬಲಕ್ಕೆ ಹಾಕಿಕೊಂಡು ಹೋಗಬೇಕು. ಗೋ ಮತ್ತು ದ್ವಿಜ, ಬೆಂಕಿ, ದ್ವಿಜ, ಅಥವಾ ಇಬ್ಬರು ದ್ವಿಜರು. ಗಂಡ ಹೆಂಡತಿ ಇವರ ನಡುವೆ ಹಾದು ಹೋಗಬಾರದು. ನದೀತೀರ, ಸಮುದ್ರದಂಡೆ, ಅರಳೆ, ಬಬ್ಬಿ ಮುಂತಾದ ಗಿಡಗಳ ಕೆಳಗೆ ಹೂವಿನ ತೋಟ ಮುಂತಾದೆಡೆಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಕೂಡದು. ಇದರಂತೆ ನೀರಿನಲ್ಲಿಯೂ, ಅಧ್ಯಯನ ಮಂದಿರ, ದನಕಟ್ಟುವ ಕೊಟ್ಟಿಗೆ, ರಾಜಬೀದಿಯಲ್ಲಿಯೂ ಮಲಮೂತ್ರ ವಿಸರ್ಜನೆ ನಿಷಿದ್ಧವಾಗಿದೆ. ರವಿವಾರ, ಮಂಗಳವಾರಗಳಲ್ಲಿ ಎಣ್ಣೆ ಹಚ್ಚಿಕೊಂಡು ಅಭ್ಯಂಗ ಸ್ನಾನ ಮಾಡಬಾರದು.

ತನ್ನ ದೇಹದ ಅವಯವಗಳನ್ನು, ಗುರುವಿನ ಆಸನವನ್ನು, ವಾದ್ಯವನ್ನಾಗಿ ಮಾಡಿಕೊಳ್ಳಬಾರದು. ಶ್ರೋತ್ರಿಯ, ದೇವರು, ಗುರು, ರಾಜ, ತಪಸ್ವಿ, ಕುಂಟ, ಕುರುಡ, ಹೆಣ್ಣು ಮಗಳು, ಇವರ ಸ್ವತ್ತನ್ನು ಅಪಹರಿಸಬಾರದು. ಗುರುಗಳ ಜೊತೆಗೆ ಸಮಾನ ಆಸನದಲ್ಲಿ ಕುಳಿತು ಊಟ ಮಾಡಬಾರದು. ಜ್ಞಾನಿ, ರಾಜ, ರೋಗಿ, ಭಾರಹೊತ್ತವ,

ದುರ್ಬಲ, ಗರ್ಭಿಣಿಯರಿಗೆ ಪ್ರಯಾಣದಲ್ಲಿ ಮೊದಲು ದಾರಿಬಿಡಬೇಕು. ವಾಹನದಲ್ಲಿ ಮೊದಲು ಅವರಿಗೆ ಜಾಗ ನೀಡಬೇಕು. ರಾಜ, ಜ್ಞಾನಿ, ವೈದ್ಯ ಇವರ ಜೊತೆಗೆ ಎಂದೂ ವಿವಾದಕ್ಕೆ ಇಳಿಯಬಾರದು. ಗುರುವಿನ ಹೆಂಡತಿಯ ಹತ್ತಿರ ಹೋಗಬಾರದು. ಪತಿತ, ಮಹಾರೋಗಿ, ಗೋಮಾಂಸತಿನ್ನುವವ, ಜಾತಿಕೆಟ್ಟವ, ತಲೆಕೆಟ್ಟವ ಇಂಥವರಿಂದ ದೂರ ಇರಬೇಕು.

ಗುರುಪತ್ನಿಯ ಜೊತೆಗೆ ಹೆಚ್ಚು ಸ್ನೇಹ ಸಲಿಗೆ ಮಾಡಬಾರದು. ಮಗನ ಹೆಂಡತಿ, ಸೋದರನ ಮಡದಿ, ತನ್ನ ಮಗಳು, ಪರಸ್ತ್ರೀ, ಗುರುಪತ್ನಿ ಇವರನ್ನು ತಾರುಣ್ಯಾವಸ್ಥೆಯಲ್ಲಿದ್ದಾಗ ನೋಡಬಾರದು, ಮುಟ್ಟಬಾರದು, ಅವಶ್ಯಕ ಕಾರ್ಯವಿಲ್ಲದೆ ಹೆಚ್ಚು ಹರಟೆ ಮಾತುಕಥೆ ಆಡಬಾರದು. ಅವರೊಡನೆ ಅನಿವಾರ್ಯವಾಗಿ ಮಾತನಾಡುವಾಗ ಮುಖಕೆಳಗೆ ಮಾಡಿ ಹೆಚ್ಚಿನ ಹಾವ ಭಾವಗಳನ್ನು ಮಾಡದೆ ವ್ಯವಹರಿಸಬೇಕು. ಮೀನ, ಮಾಂಸ, ಮುಂತಾದ ಪದಾರ್ಥಗಳನ್ನೂ ಅನಿಷಿದ್ಧ ವಸ್ತುಗಳಲ್ಲಿ ಹಳಸಿದ್ದು, ಎಂಜಲು, ಇನ್ನೊಬ್ಬರಿಗಾಗಿ ಮಾಡಿಟ್ಟ ಅಡಿಗೆಯನ್ನೂ ಉಣ್ಣಬಾರದು. ದುರಾಚಾರಿಯಾದ ಜನರೊಡನೆ ವ್ಯವಹರಿಸಬಾರದು. ಕೋಪಿಷ್ಠರೂ, ಪತಿತರೂ, ಅಯೋಗ್ಯರೂ ಮುಂತಾದವರೊಡನೆ ಮಾತನಾಡಬಾರದು. ಚಿಕ್ಕಪ್ಪ, ಸೋದರಮಾವಂದಿರು ತನಗಿಂತ ಚಿಕ್ಕವರಿದ್ದರೆ ನಮಸ್ಕಾರ ಮಾಡಬಾರದು. ಅವರಿಗೆ ಆಸನಕೊಟ್ಟು ಉಪಚರಿಸಬೇಕು. ಎಣ್ಣೆ ಬಳೆದು ಕೊಂಡವ, ಮೈಲಿಗೆ ಮುಟ್ಟಿದವ, ಒದ್ದೆ ಉಟ್ಟವ. ರೋಗಗ್ರಸ್ತ, ದುಃಖಿತ, ಕೋಪೋದ್ರಿಕ್ತ, ಹೊರೆಹೊತ್ತವ, ಪೂಜೆಮಾಡುವವ, ಜಾತಿಭ್ರಷ್ಟ, ಹೆಂಗಸರೊಡನೆ ಸರಸಾಲಾಪದಲ್ಲಿ ಇರುವವ, ಮಕ್ಕಳನ್ನು ಆಡಿಸುವವ, ಹೂ, ದರ್ಭೆಗಳನ್ನು ಹಿಡಿದುಕೊಂಡವ ಮುಂತಾದವರಿಗೆ ನಮಸ್ಕಾರ ಮಾಡಬಾರದು.

## ಆಚಮನ ವಿಧಿ

ತಲೆಗೆ ವಸ್ತ್ರ ಸುತ್ತಿಕೊಂಡು, ಕಿವಿ ಕಟ್ಟಿಕೊಂಡು, ನೀರಿನಲ್ಲಿ ನಿಂತು, ಚಂಡಿಕೆ ಬಿಚ್ಚಿ, ಕೈ ಕಾಲು ತೊಳೆಯದೆ, ಆಚಮನ ಮಾಡಬಾರದು. ದಕ್ಷಿಣಕ್ಕೆ ಮುಖಮಾಡಿ, ಯಜ್ಞೋಪವಿತವಿಲ್ಲದೆ, ಬೆತ್ತಲೆಯಾಗಿ ನಿಂತು, ಕಚ್ಚೆ ಬಿಚ್ಚಿ ಆಚಮನ ಮಾಡಬಾರದು. ಒದ್ದೆಗಾಲಿನಿಂದ ಮಲಗಬಾರದು. ಪಾದಪ್ರಕ್ಷಾಲನವಿಲ್ಲದೆ ಊಟ ಮಾಡಬಾರದು. ಕತ್ತಲೆಯಲ್ಲಿ ಭೋಜನ, ಶಯನ ಎರಡೂ ನಿಷಿದ್ಧ. ಪಶ್ಚಿಮ, ದಕ್ಷಿಣಕ್ಕೆ ಮುಖ ಮಾಡಿ ಹಲ್ಲು ಉಜ್ಜಬಾರದು. ಉತ್ತರ, ಪಶ್ಚಿಮಕ್ಕೆ ತಲೆ ಮಾಡಿ ಮಲಗಬಾರದು. ಪೂರ್ವಕ್ಕೆ ಮುಖ ಮಾಡಿ ಊಟ ಮಾಡಿದರೆ ಆಯುಸ್ಸು, ದಕ್ಷಿಣಕ್ಕೆ ಮುಖ ಮಾಡಿದರೆ ಪ್ರೇತತ್ವ, ಪಶ್ಚಿಮಾಭಿಮುಖವಾಗಿ ಊಟ ಮಾಡಿದರೆ ರೋಗಿ, ಉತ್ತರಕ್ಕೆ ಮುಖ ಮಾಡಿದರೆ ಆಯುಸ್ಸು ಸಂಪತ್ತು ಪಡೆಯುತ್ತಾನೆ.

ದಿನಕ್ಕೆ ಒಂದು ಸಲ ಊಟ ಮಾಡಿದರೆ ದೇವ ಭೋಗ, ಎರಡು ಸಲ ಊಟ ಮಾಡಿದರೆ ಮನುಷ್ಯ ಭೋಜನ, ಮೂರು ಸಲ ಊಟ ಮಾಡಿದರೆ ದೈತ್ಯಭೋಜನ, ನಾಲ್ಕು ಸಲ ಉಂಡರೆ ಶವ ಭೋಜನ. ಒಳ್ಳೆಯ ದಾನ, ಮೃದು ಮಧುರ ಮಾತು, ದೇವರ ಪೂಜೆ, ಅನ್ನದಾನ ಇವುಗಳನ್ನು ಮಾಡುವವರು ಈ ಲೋಕದಲ್ಲಿದ್ದರೂ ದೈವೀ ಗುಣವುಳ್ಳ ಸಾತ್ವಿಕರು ಎಂದು ಕರೆಯಲ್ಪಡುತ್ತಾರೆ. ಇಂಥವರು ಸ್ವರ್ಗಲೋಕದಿಂದ ಬಂದ ಪುಣ್ಯ

ಜೀವಿಗಳು ಎಂದು ತಿಳಿಯಬೇಕು. ಜಿಪುಣತನ, ಸ್ವಜನ ದ್ರೋಹ, ಕೊಳಕುಬಟ್ಟೆ, ದುಷ್ಟರ ಸ್ನೇಹ, ಮುಂಗೋಪಿ ಸ್ವಭಾವ, ಬಿರುಸು ಮಾತು ಇವು ನರಕದಿಂದ ಬಂದ ನರನ ಚಿಹ್ನೆಗಳು.

ಬೆಣ್ಣೆಯಂತಹ ಮಾತು, ಕೋಮಲ ಮನಸ್ಸು, ಅಂತಃಕರಣ ಸ್ವಭಾವ ಇವು ಧರ್ಮಬೀಜದಿಂದ ಹುಟ್ಟಿದವರ ಲಕ್ಷಣಗಳು. ದಯಾಶೂನ್ಯ ಮನಸ್ಸು, ಕರಗದಂಥ ಕಠೋರ ಮಾತು, ಪಾಪ ಬೀಜದಿಂದ ಹುಟ್ಟಿದವರ ಲಕ್ಷಣಗಳು. ಈ ಸದಾಚಾರದ ಹಿತ ನುಡಿಗಳನ್ನು ಹೇಳಿದವನು ಕೇಳಿದವನು ಸದಾಚಾರ ಸಂಪತ್ತಿನಿಂದ ಪಾಪಗಳನ್ನು ಕಳೆದುಕೊಂಡು ಪರಿಪೂರಿತನಾಗಿ ಸ್ವರ್ಗವನ್ನು ಹೊಂದುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸದಾಚಾರ ಸಂಪತ್ತು ಎಂಬ ನಲವತ್ತಾರನೇಯ ಅಧ್ಯಾಯ ಮುಗಿದುದು*



## ಮಾತಾಪಿತೃಗಳ ಸೇವೆಯ ಮಹತ್ವ

**ಅಧ್ಯಾಯ - ೪೭**

**ಭೀಷ್ಮ ಉವಾಚ**

**ಯತ್ಪುಣ್ಯಮಧಿಕಂ ಲೋಕೇ ಸರ್ವದಾ ಸರ್ವ ಸಮ್ಮತಂ ।**
**ತದ್ವದ ಸ್ವೇಚ್ಛಯಾ ವಿಪ್ರ ಯತ್ಕೃತಂ ಪೂರ್ವ ಪೂರ್ವಕೈಃ ॥**

**ಭೀಷ್ಮ :-** ಪೂಜ್ಯ ಪುಲಸ್ತ್ಯರೆ, ಈ ಲೋಕದಲ್ಲಿ ಸರ್ವರಿಗೂ ಸಮ್ಮತವಾದ ಯಾವ ಪುಣ್ಯವು ಅಧಿಕವಾದುದು? ಹಿಂದಿನ ಪೂರ್ವಿಕರು ಯಾವುದನ್ನು ಆಚರಿಸುತ್ತ ಬಂದಿದ್ದಾರೆ. ಅದನ್ನು ಸಂತೋಷದಿಂದ ನನಗೆ ತಿಳಿಸಿರಿ.

**ಪುಲಸ್ತ್ಯ :-** ಹಿಂದೊಮ್ಮೆ ಎಲ್ಲ ವ್ಯಾಸರ ಶಿಷ್ಯರು ಗುರುವಿಗೆ ಪ್ರಶ್ನಿಸಿದರು ಅತ್ಯಾದರದಿಂದ. ''ಗುರುಗಳೆ; ಅತ್ಯಂತ ಪುಣ್ಯಕರವಾದ ಸರ್ವ ಧರ್ಮಗಳಲ್ಲಿ ಶ್ರೇಷ್ಠ ತಮವಾದ ಸತ್ಕಾರ್ಯ ಯಾವದು? ಯಾವ ಆಚರಣೆಯಿಂದ ಸ್ವರ್ಗಾಪವರ್ಗಗಳು ತಾವಾಗಿ ಲಭಿಸುವವು-ಮಾನವನಿಗೆ? ಭೂಲೋಕದ ಬಡವರು ಬಲ್ಲಿದರು ಎಲ್ಲರಿಗೂ ಶ್ರಮವಿಲ್ಲದೆ ಮಾಡಲು ಸಾಧ್ಯವಾದ ಪುಣ್ಯ ಕರ್ಮ ಯಾವದು? ಯಾವ ಕೃತ್ಯವನ್ನು ಮಾಡಿದರೆ ದೇವಲೋಕದಲ್ಲಿ ನರನು ಪೂಜ್ಯನಾಗುವನು? ಇದನ್ನು ತಿಳಿಸಿರಿ. ನಮ್ಮ ಮೇಲೆ ದಯೆ ತೋರಿರಿ. ಶಿಷ್ಯರ ಈ ಪ್ರಶ್ನೆ ಕೇಳಿ ಮಹಾಮುನಿ ವೇದವ್ಯಾಸರು 'ಪಂಚಾಖ್ಯಾನ' ಎಂಬ ರಹಸ್ಯ ಕೃತ್ಯವನ್ನು ಉಪದೇಶಿಸಿದರು.

**ಪಂಚಾಖ್ಯಾನ**

**ಪಿತ್ರೋರರ್ಚಾಽಥ ಪತ್ಯುಶ್ಚ ಸಮಃ ಸರ್ವಜನೇಷು ಚ ।**
**ಮಿತ್ರಾದ್ರೋಹೋ ವಿಷ್ಣುಭಕ್ತಿರೇತೇ ಪಂಚ ಮಹಾಮುಖಾಃ ॥**

ತಾಯಿ ತಂದೆಗಳ ಸೇವೆ, ಒಡೆಯನಲ್ಲಿ ಭಕ್ತಿ, ಸರ್ವಜನರಲ್ಲಿಯೂ ಯಥಾ ಯೋಗ್ಯ ಪ್ರೀತಿ ಮಾಡುವದು, ಗೆಳೆಯರಿಗೆ ದ್ರೋಹ ಬಗೆಯದಿರುವದು. ಶ್ರೀಹರಿಯಲ್ಲಿ ಶ್ರದ್ಧೆ, ಇವು ಐದು 'ಪಂಚಮಹಾಯಜ್ಞ' ಎಂದು ಕರೆಯಲ್ಪಡುತ್ತವೆ. ಈ ಪಂಚ ಯಜ್ಞಗಳಲ್ಲಿ

ಒಂದೊಂದನ್ನು ಮಾಡಿದರೂ ವಿಶೇಷ ಪುಣ್ಯ, ತಾಯಿ ತಂದೆಯೇ ಧರ್ಮ, ತಾಯಿ ತಂದೆಗಳೇ ಸ್ವರ್ಗ, ಪಿತೃಗಳಸೇವೆ ದೊಡ್ಡ ತಪಸ್ಸು. ತಾಯಿ ತಂದೆ ಇವರಿಬ್ಬರನ್ನು ಸಂತೋಷಪಡಿಸಿದರೆ ಮೂವತ್ತು ಮೂರು ಕೋಟಿ ದೇವತೆಗಳು ಪ್ರಸನ್ನರಾಗುವರು. ತಾಯಿ ತಂದೆಗಳನ್ನು ಸೇವೆಯಿಂದ ಸಂತೋಷಪಡಿಸಿದರೆ ನಿತ್ಯವೂ ಗಂಗಾ ಸ್ನಾನದ ಫಲ.

**ಸರ್ವತೀರ್ಥಮಯೀ ಮಾತಾ ಸರ್ವದೇವಮಯಃ ಪಿತಾ ।**
**ಮಾತರಂ ಪಿತರಂ ತಸ್ಮಾತ್ಸರ್ವ ಯತ್ನೇನ ಪೂಜಯೇತ್ ॥**

ತಾಯಿಯು ಸರ್ವ ತೀರ್ಥಸ್ವರೂಪಳು. ತಂದೆಯು ಸರ್ವದೇವತಾ ಸ್ವರೂಪನು. ಆದ್ದರಿಂದ ತಾಯಿ ತಂದೆಗಳನ್ನು ಪ್ರಯತ್ನಪಟ್ಟು ಪೂಜಿಸಬೇಕು.

**ಮಾತರಂ ಪಿತರಂ ಚೈವ ಯಸ್ತು ಕುರ್ಯಾತ್ಪ್ರದಕ್ಷಿಣಂ ।**
**ಪ್ರದಕ್ಷಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥**

ತಂದೆ ತಾಯಿಗಳನ್ನು ಪ್ರದಕ್ಷಿಣೆ ಮಾಡಿದರೆ ಅವನು ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನು ಪ್ರದಕ್ಷಿಣೆ ಮಾಡಿದಂತಾಯಿತು. ತಾಯಿ ತಂದೆಗಳ ಅಡಿಯ ಹುಡಿಯನ್ನು ತಲೆಯ ಮೇಲೆಯೂ ಮೈ ಮೇಲೆಯೂ ಧರಿಸಿದವನು ಅತ್ಯಂತ ಪವಿತ್ರ ವ್ಯಕ್ತಿ. ಅವರ ಕಾಲು ತೊಳೆದ ನೀರನ್ನು ಕುಡಿದರೆ ಪಾಪರಾಶಿಯು ನಾಶವಾಗುವದು. ಮಾತಾಪಿತೃಗಳ ಮಾತನ್ನು ಮೀರಿದವ ಪುರುಷಾಧಮ. ಪ್ರಳಯ ಕಾಲದವರೆಗೂ ನರಕದಲ್ಲಿಯೇ ಅವನಿಗೆ ನಿಯತವಾಸ. ಪಿತೃಗಳ ಪೂಜೆ ಮಾಡದೆ ಊಟ ಮಾಡುವ ಪಾಪಿ ನರಕದಲ್ಲಿ ಕಲ್ಪಾಂತ ಕಾಲದವರೆಗೆ ಕೊಳೆಯುವ -

ತಂದೆ ಮುದುಕನಿರಲಿ, ರೋಗಿಯಾಗಿರಲಿ, ಹಣಗಳಿಸಲು ಅಶಕ್ತನೇ ಆಗಿರಲಿ, ಕುರುಡನಿರಲಿ, ಕಿವುಡನಿರಲಿ, ಮಕ್ಕಳು ಅವನನ್ನು ಬಿಡಕೂಡದು ಅಂತಹ ದೀನರಾದ ತಾಯಿ ತಂದೆಗಳನ್ನು ಆರಾಧಿಸದಿದ್ದರೆ ತೀರ್ಥಗಳಲ್ಲಿ ಮುಳುಗಿದರೂ, ದೇವರನ್ನು ಭಜಿಸಿದರೂ ಏನು ಫಲ-ಮಾನವ ಜಂತುವಿಗೆ? ಈ ವಿಷಯದಲ್ಲಿ ನಿಮಗೆ ಹಿಂದೆ ನಡೆದ ಒಂದು ಸತ್ಯ ಘಟನೆ ಹೇಳುತ್ತೇನೆ- ಕೇಳಿರಿ.

ಹಿಂದೆ ಒಬ್ಬ ಬ್ರಾಹ್ಮಣನಿದ್ದನು. ನರೋತ್ತಮನೆಂದು ಅವನ ಹೆಸರು. ಅವನು ತನ್ನ ಮುದಿ ವಯಸ್ಸಿನ ತಂದೆ ತಾಯಿಗಳನ್ನು ತಿರಸ್ಕರಿಸಿದ. ಅವರ ಸೇವೆ ಬಿಟ್ಟು ತೀರ್ಥಸ್ನಾನಕ್ಕೆಂದು ಹೊರಟ. ಎಲ್ಲ ತೀರ್ಥಗಳಲ್ಲಿ ಅವಗಾಹನ ಸ್ನಾನ ಮಾಡಿದ; ದೇವರ ಧ್ಯಾನಗೈದ ಹೀಗೆ ಪುಣ್ಯ ತೀರ್ಥಕ್ಷೇತ್ರ ಯಾತ್ರೆಗಳಿಂದ ಅವನ ತಪಸ್ಸು ಬೆಳೆಯಿತು. ಅವನು ಸ್ನಾನ ಮಾಡಿದ ಕೂಡಲೇ ಅವನ ತಪಃಶಕ್ತಿಯಿಂದ ಬಟ್ಟೆಗಳು ತಕ್ಷಣ ಒಣಗಿ ಹೋಗುತ್ತಿದ್ದವು. ಇದರಿಂದ ತುಂಬ ಮದತುಂಬಿತು ಅವನ ಮನಸ್ಸಿನಲ್ಲಿ. 'ನನಗೆ ಸಮಾನ ಪುಣ್ಯಜೀವಿಗಳಾರು? ನನ್ನಂಥ ಧರ್ಮಾತ್ಮ ಯಾರು ?' ಎಂದು ಮನಸ್ಸಿನಲ್ಲಿ ಬೀಗುತ್ತಲೇ ಇದ್ದ-ಆ ನರೋತ್ತಮ. ಅವನು ದಾರಿಯಲ್ಲಿ ಕಂಡವರೆಲ್ಲರ ಎದುರು 'ನನ್ನಂತಹ ಪುಣ್ಯಾತ್ಮನಾರು ? ನನಗೆ ಸಮಾನರಾದವರು ಈ ಜಗತ್ತಿನಲ್ಲಿಯೇ ಯಾರೂ ಇಲ್ಲ' ಎಂದು ಅವನು ದೊಡ್ಡ ಬಾಯಿ ತೆಗೆದು ಹೇಳಿಕೊಳ್ಳುತ್ತಿರುವಾಗಲೇ ಒಂದು ಬಕಪಕ್ಷಿಯು ಅವನ ಮುಖದಲ್ಲಿಯೇ ಹೊಲಸು ಮಾಡಿತು. ಕೂಡಲೇ ನರೋತ್ತಮನಿಗೆ ಪಿತ್ತ ನೆತ್ತಿಗೇರಿತು.

ತಕ್ಷಣವೇ ಸಿಡಿದು ನಿಂತ - ಆ ಬ್ರಾಹ್ಮಣ. 'ಈಗಲೇ ಸತ್ತುಹೋಗು' ಎಂದು ಹಿಡಿಶಾಪ ಹಾಕಿದ ಆ ಬಡಪಾಯಿಯ ಮೇಲೆ. ತಕ್ಷಣವೇ ಆ ಬಕ ಸುಟ್ಟು ಹೋಯಿತು. ಅದರ ಬೆಳ್ಳಗಿನ ಮೈ ಹಿಡಿ ಬೂದಿಯಾಗಿ ನೆಲದ ಮೇಲೆ ಬಿದ್ದಿತು. ಅಂದಿನಿಂದ ಆ ಬ್ರಾಹ್ಮಣನ ಒದ್ದೆ ಬಟ್ಟೆ ಒಣಗಲಿಲ್ಲ. ಅವುಗಳನ್ನು ಒಣಗಿಸಬೇಕೆಂದು ಆಕಾಶಕ್ಕೆ ಹಾರಿಬಿಟ್ಟಾಗ ಅವು ಮೊದಲಿನಂತೆ ಅಲ್ಲಿ ನಿಲ್ಲುತ್ತಿರಲಿಲ್ಲ. ಇದರಿಂದ ನರೋತ್ತಮನಿಗೆ ಬಹಳ ದುಃಖವಾಯಿತು. ಆಗ ಒಮ್ಮೆಲೆ ಆಕಾಶವಾಣಿ ಆಗಿ ಅವನಿಗೆ ಹೇಳಿತು.

**ಗಚ್ಛ ಬಾಡವ ಚಾಂಡಾಲಂ ಮೂಕಂ ಪರಮಧಾರ್ಮಿಕಂ ।**
**ತತ್ರ ಧರ್ಮಂ ಚ ಜಾನೀಷೇ ಕ್ಷೇಮಂ ತೇ ತದ್ವಚೋ ಭವೇತ್ ॥**

'ಎಲೈ ಬ್ರಾಹ್ಮಣನೇ ! ಧರ್ಮಿಷ್ಠನಾದ ಮೂಕನೆಂಬ ಚಾಂಡಾಲನಲ್ಲಿಗೆ ಹೋಗು, ಅವನು ಧರ್ಮವನ್ನು ನಿನಗೆ ಹೇಳುತ್ತಾನೆ. ಅವನ ಮಾತು ನಿನಗೆ ಕ್ಷೇಮವನ್ನುಂಟು ಮಾಡುತ್ತದೆ.' ಆ ನಭೋವಾಣಿಯನ್ನು ಕೇಳಿ ನರೋತ್ತಮನಿಗೆ ಅತ್ಯಾಶ್ಚರ್ಯ ವಾಯಿತು. ದೇವ ವಾಣಿಯ ಆದೇಶದಂತೆ ಮೂಕನೆಂಬ ಚಾಂಡಾಲನ ಮನೆಯನ್ನು ಅವನು ಹುಡುಕಿಕೊಂಡು ಹೋದನು-

ಅಲ್ಲಿ ಈ ದ್ವಿಜನು ನೋಡಿದ್ದೇನು ! ಆ ಹೊಲೆಯ ಮುದುಕರಾದ ತಾಯಿಯನ್ನು ತಂದೆಯನ್ನು ಪರಿಪರಿಯಿಂದ ಸೇವಿಸುತ್ತಿದ್ದಾನೆ. ಬೆಳಗಿನಿಂದ ರಾತ್ರಿಯವರೆಗೂ ಸೂಕ್ಷ್ಮವಾಗಿ ನೋಡಿದ-ಅವನ ಪಿತೃಸೇವೆಯ ಪರಿಚರ್ಯೆಯ ಪರಿಯನ್ನು. ಆಗ ಚಳಿಗಾಲ, ಅವರಿಗೆ ಕುಡಿಯಲಿಕ್ಕೂ ಕಾಲು ತೊಳೆಯಲಿಕ್ಕೂ ಬಿಸಿಬಿಸಿ ನೀರು, ಉಡಲು ಬೆಚ್ಚಗಿನ ಬಟ್ಟೆ, ಉಣ್ಣಲು ಅವರು ಬಯಸಿದ ಮೃಷ್ಟಾನ್ನ, ಬಿಸಿ ಬಿಸಿ ಹಾಲು, ಮೇಲೆ ತಾಂಬೂಲ, ಅನಂತರ ಕಾಲಿಗೆ ಎಣ್ಣೆ ಹಚ್ಚಿ ಮೃದುವಾಗಿ ಪಾದಸೇವೆ, ಪ್ರಹರಕ್ಕೊಮ್ಮೆ ಸ್ವಲ್ಪ ಸ್ವಲ್ಪ ರುಚಿ ಶುಚಿಯಾದ ಖೋವಾ. ಫೇಡಾ ಮುಂತಾದ ಉಪಹಾರ. ಮಲಗಲಿಕ್ಕೆ ಮೆತ್ತನೆಯ ಹಾಸುಗೆ, ಬೆಚ್ಚಗಿನ ಹೊದಿಕೆ. ಹೀಗೆ ಶೀತ ಕಾಲದಲ್ಲಿಯ ಅವನ ಪಿತೃ ಸೇವೆಯನ್ನು ನೋಡಿದ.

ಮುಂದೆ ವಸಂತಕಾಲ ಬಂದಿತು. ಆ ಬಿಸಿಲುಗಾಲದಲ್ಲಿ ಆ ಪಿತೃಗಳ ಮೈಗೆ ಸುಗಂಧ ಚಂದನದ ಲೇಪ. ಸುವಾಸನೆ ಹೂಗಳ ಮಾಲೆ - ಕೊರಳಲ್ಲಿ, ತಂಪು ಪಾನೀಯಗಳು-ಆಗಾಗ ಕುಡಿಯಲು. ಹಗಲಿರುಳು ಪಕ್ಕದಲ್ಲಿ ಬೀಸಣಿಕೆಯಿಂದ ತಂಗಾಳಿ ಅವರ ಮೇಲೆ ಹಾಯಾಗಿ ತೀಡುವಂತೆ ಮಾಡುವದು. ವರ್ಷಾಕಾಲದಲ್ಲಿ ಅವರಿಗೆ ಮೈಗೆ ಮಳೆ ನೀರು ಹತ್ತದಂತೆ, ಕಾಲಿಗೆ ಕೆಸರು ಮೆತ್ತದಂತೆ ಸುರಕ್ಷಿತವಾಗಿದ್ದ ರಕ್ಷಣೆ. ಯಾವಾಗಲೂ ಸೇವೆ, ಹಗಲಿರುಳೂ ಕೈಂಕರ್ಯ, ಅವರ ಭೋಜನವಾದ ಮೇಲೆಯೇ ಭೋಜನ ಅವರು ಉಂಡು ಬಿಟ್ಟದ್ದೇ ಇವನ ಊಟ ಉಪಹಾರ. ಅವರಿಗೆ ನಿದ್ರೆ ಬಂದಾಗಲೇ ಇವನಿಗೆ ವಿಶ್ರಾಂತಿ. ಇಂತಹ ಅಗಣ್ಯ ಪುಣ್ಯ ಪ್ರಭಾವದಿಂದ ಶ್ರೀಮನ್ ನಾರಾಯಣನು ಅವನ ಮನೆಯಲ್ಲಿಯೇ ನಿರಂತರ ನೆಲೆನಿಂತಿದ್ದನು. ಶ್ರೀಹರಿಯ ಪರಮಾನುಗ್ರಹದಿಂದ ಅವನ ಮನೆಮುಗಿಲಲ್ಲಿ ಆಧಾರವಿಲ್ಲದೆ ಅಂತರಾಳದಲ್ಲಿಯೇ ನಿಂತುಕೊಂಡಿತ್ತು.

ಅಂತರಿಕ್ಷದ ವಕ್ಷಸ್ಥಳದಲ್ಲಿ ಕಂಗೊಳಿಸುವ ಚಾಂಡಾಲನ ಮನೆಯಲ್ಲಿ ಭಗವಂತ ದ್ವಿಜನ ರೂಪದಿಂದ ವಾಸವಾಗಿದ್ದ. ಅವನ ತುಳುಕುವ ತೇಜದಿಂದ ಆ ಮಂದಿರವೆಲ್ಲವೂ ಶೋಭಾಯಮಾನವಾಗಿ ಅತ್ಯಂತ ಸುಂದರವಾಗಿ ಕಾಣುತ್ತಿತ್ತು. ಇದನ್ನು ಕಂಡು

ದಿಗ್ಭ್ರಮೆಯಾಯಿತು - ನರೋತ್ತಮನಿಗೆ. ಅವನು ಆ ಮೂಕ ಚಾಂಡಾಲನನ್ನು 'ನನ್ನ ಬಳಿಗೆ ಬಾ. ನಾನು ನಿನಗೆ ಕೆಲವು ಪ್ರಶ್ನೆ ಮಾಡಬೇಕಾಗಿದೆ' ಎಂದು ಕರೆದ. ಅದಕ್ಕೆ ಆ ಮೂಕ ಚಾಂಡಾಲ ''ಸ್ವಾಮಿ, ಕ್ಷಮಿಸಿರಿ. ನನಗೆ ಈಗ ಪುರುಸೊತ್ತಿಲ್ಲ. ನನಗೆ ಈಗ ತಾಯಿತಂದೆಗಳ ಪೂಜೆ ಮಾಡಬೇಕಾಗಿದೆ. ಇದನ್ನು ಬಿಟ್ಟು ನಿಮ್ಮ ಬಳಿಗೆ ಹೇಗೆ ನಾನು ಬರಲಿ? ಈ ನನ್ನ ದೇವ ದೇವಿಯರನ್ನು ಮೊದಲು ಪೂಜಿಸುವೆನು, ಅನಂತರ ನಿಮ್ಮ ಕೆಲಸ ಯಾವುದಿದ್ದರೂ ನಾನು ಮಾಡಿಕೊಡುವೆನು. ಅಲ್ಲಿಯವರೆಗೆ ದಯಮಾಡಿ ಬಾಗಿಲಲ್ಲಿ ನಿಲ್ಲಿರಿ. ಅನಂತರ ನಿಮ್ಮ ಅತಿಥ್ಯ ಮಾಡುವೆನು'' ಎಂದು ತಿಳಿಸಿದನು.

ಬ್ರಹ್ಮಾಂಡ ಕೋಪ ಬಂದಿತು ಈ ಚಾಂಡಾಲನ ಉತ್ತರದಿಂದ ಆ ನರೋತ್ತಮನಿಗೆ. ನಿಂತಲ್ಲಿಯೇ ಕಿರುಚಿಕೊಂಡ- ''ದ್ವಿಜನಾದ ನನ್ನನ್ನು ಬಿಟ್ಟು ಇದಕ್ಕಿಂತ ಹೆಚ್ಚಿನದಾದ ಕೆಲಸ ನಿನಗೇನಿದೆ?'' ಆ ಮೂಕ ಶಾಂತವಾಗಿಯೇ ನುಡಿದ- ''ದ್ವಿಜನೆ! ಏಕೆ ಸಿಟ್ಟಿನಿಂದ ಉರಿದುಬೀಳುವಿ? ನಾನು ಆ ಬಕಪಕ್ಷಿಯಲ್ಲ, ನಿನ್ನ ಕೋಪ, ತಾಪ ಆ ಬಕದ ಮೇಲೆ ಮಾತ್ರ. ಮತ್ತೆಲ್ಲಿಯೂ ಈ ಕ್ರೋಧ ನಡೆಯಲಾರದು. ಈಗ ನಿನ್ನ ಬಟ್ಟೆ ಆಕಾಶದಲ್ಲಿ ಹಾರುವದಿಲ್ಲ, ಒದ್ದೆಯ ಬಟ್ಟೆ ಒಣಗುವದಿಲ್ಲ ನಿನ್ನ ಮಾತು ನಡೆಯುವದಿಲ್ಲ.'' ಆಕಾಶವಾಣಿಯ ಮಾತನ್ನು ಕೇಳಿ ಈಗ ನೀನು ನನ್ನ ಬಳಿಗೆ ಬಂದಿರುವಿ, ಕೆಲ ಸಮಯ ಇಲ್ಲಿಯೇ ನಿಲ್ಲು, ಅಥವಾ ಈ ಮನೆಯಲ್ಲಿ ಬಂದು ಕುಳಿತುಕೊ. ನಾನು ನನ್ನ ಪಿತೃಪೂಜೆ ಮುಗಿಸಿಕೊಂಡು ಬಂದು ನಿನಗೆಲ್ಲ ಹೇಳುತ್ತೇನೆ. ಇಲ್ಲದಿದ್ದರೆ ಆ ಪತಿವ್ರತೆಯ ಮನೆಗೆ ಹೋಗು. ಅವಳ ಮುಖ ನೋಡಿದರೆ ಸಾಕು, ನಿನ್ನ ಕಾರ್ಯ ಸಿದ್ಧಿಸುವದು.''

ಮೂಕ ಚಾಂಡಾಲನು ಹೀಗೆ ಹೇಳಿ ತನ್ನ ಪಿತೃ ಸೇವೆಗೆ ಹೊರಟುಹೋದನು. ಆಗ ಅವನ ಮನೆಯಲ್ಲಿ ನೆಲೆಸಿದ ವಿಷ್ಣುವು ಹೊರಗೆ ಬಂದನು. ನರೋತ್ತಮನಿಗೆ ಹೇಳಿದನು- ''ನಾನು ಆ ಪತಿವ್ರತೆಯ ಮನೆಗೆ ಹೋಗುತ್ತೇನೆ. ನಿನಗೂ ಅತ್ತ ಬರುವದಿದ್ದರೆ ಬಾ. ನಾನಂತೂ ಹೊರಟಿದ್ದೇನೆ.'' ತನ್ನಲ್ಲಿಯೇ ವಿಚಾರಿಸಿದ ಆ ದ್ವಿಜೋತ್ತಮ. ಇವನೊಡನೆ ಹೋಗುವುದೇ ಒಳ್ಳೆಯದು ಎನಿಸಿತು. ಹೊರಟುಬಿಟ್ಟ. ದಾರಿಯಲ್ಲಿ ವಿಪ್ರವೇಷದಲ್ಲಿದ್ದ ಭಗವಂತನನ್ನು ಪ್ರಶ್ನಿಸಿದ ನರೋತ್ತಮ. ''ಅಯ್ಯಾ ನೀನು ದ್ವಿಜ. ಆದರೂ ನೀನು ಇರುವುದು ಆ ಚಾಂಡಾಲನ ಮನೆಯಲ್ಲಿ. ಇವನ ಮನೆತುಂಬ ಬರಿ ಹೆಂಗಳೆಯರು. ಇಂಥ ಮಹಿಳಾಭೂಯಿಷ್ಠವಾದ ಮನೆಯಲ್ಲಿ ನೀನು ಒಳ್ಳೇ ಸಂತೋಷದಿಂದ ಇರಲು ಏನು ಕಾರಣ?'' ಆ ದ್ವಿಜನ ಪ್ರಶ್ನೆಗೆ ನಸುನಗುತ್ತ ಶ್ರೀ ಹರಿಯು ಉತ್ತರಿಸಿದ - ''ಅಯ್ಯಾ, ಈಗ ನಿನ್ನ ಮನಸ್ಸು ಪರಿಶುದ್ಧವಿಲ್ಲ. ಪತಿವ್ರತಾ ಮುಂತಾದವರನ್ನು ನೋಡಿದ ಮೇಲೆ ನಾನು ಯಾರು ಎನ್ನುವುದು ನಿನಗೆ ತಿಳಿದೀತು.''

**ನರೋತ್ತಮ :-** ಅಪ್ಪಾ ದ್ವಿಜೋತ್ತಮ, ಆ ಪತಿವ್ರತಾ ಸ್ತ್ರೀ ಯಾರು? ಅವಳಲ್ಲಿಯ ವಿಶೇಷವೇನು ? ಅವಳು ಅಂತಹ ಜ್ಞಾನಿಯೇ ? ನಾನು ಏಕೆ ಅಲ್ಲಿಗೆ ಬರಬೇಕು ಇದೆಲ್ಲವನ್ನು ತಿಳಿಸು.

**ಹರಿರುವಾಚ**

**ನದೀನಾಂ ಜಾಹ್ನವೀ ಶ್ರೇಷ್ಠಾ ಪ್ರಮದಾನಾಂ ಪತಿವ್ರತಾ ।**
**ಮನುಷ್ಯಾಣಾಂ ಪ್ರಜಾಪಾಲೋ ದೇವಾನಾಂ ಚ ಜನಾರ್ದನಃ ॥**

**ಹರಿ :-** ನದಿಗಳಲ್ಲಿ ಗಂಗೆಯೂ ಹೆಂಗಸರಲ್ಲಿ ಪತಿವ್ರತೆಯೂ, ಮನುಷ್ಯರಲ್ಲಿ ದೊರೆಯೂ, ದೇವತೆಗಳಲ್ಲಿ ಜನಾರ್ದನನೂ ಶ್ರೇಷ್ಠರು.

**ಪತಿವ್ರತಾ ಚ ಯಾ ನಾರೀ ಪತ್ಯುರ್ನಿತ್ಯಂ ಹಿತೇ ರತಾ ।**
**ಕುಲದ್ವಯಸ್ಯ ಪುರುಷಾನುದ್ಧರೇತ್ಸಾ ಶತಂಶತಂ ॥**

ಯಾವ ಹೆಂಗಸು ಗಂಡನಿಗೆ ಹಿತವನ್ನು ಮಾಡುತ್ತಾಳೆಯೋ ಅವಳೇ ಪತಿವ್ರತೆಯು. ಆಕೆಯು ಹೊಕ್ಕ, ಹೆತ್ತ ಮನೆಗಳಲ್ಲಿ ಮೂರು ಮೂರು ತಲೆಗಳನ್ನು ನರಕದಿಂದ ಉದ್ಧಾರ ಮಾಡುತ್ತಾಳೆ

**ವಿಪ್ರಉವಾಚ**

**ಪತಿವ್ರತಾ ಭವೇತ್ಕಾ ವಾ ತಸ್ಯಾಃ ಕಿಂ ವಾ ಚ ಲಕ್ಷಣಂ ।**
**ಬ್ರೂಹಿ ಮೇ ದ್ವಿಜಶಾರ್ದೂಲ ಯಥಾ ಜಾನಾಮಿ ತತ್ತ್ವತಃ ॥**

**ವಿಪ್ರ :-** ಪತಿವ್ರತೆ ಯಾರು? ಅವಳ ಲಕ್ಷಣಗಳೇನು? ಅವಳನ್ನು ಸರಿಯಾಗಿ ತಿಳಿಯುವಂತೆ ಲಕ್ಷಣಗಳನ್ನು ಹೇಳು.

**ಹರಿರುವಾಚ**

**ಪುತ್ರಾಚ್ಛತಗುಣಂ ಸ್ನೇಹಾದ್ರಾಜಾದೇಶ್ಚ ಭಯಾದಥ ।**
**ಆರಾಧಯೇತ್ಪತಿಂ ಶೌರಿಂ ಯಾ ಪಶ್ಯೇತ್ಸಾ ಪತಿವ್ರತಾ ॥**

**ಹರಿ :-** ಮಗನಲ್ಲಿರುವದಕ್ಕಿಂತ ನೂರರಷ್ಟು ಹೆಚ್ಚು ಸ್ನೇಹವನ್ನೂ, ರಾಜನಿಗಿಂತಲೂ ಹೆಚ್ಚು ಭಯವನ್ನೂ ಗಂಡನಲ್ಲಿ ಹೊಂದಿ ಅವನನ್ನು ವಿಷ್ಣುವೆಂದೇ ತಿಳಿದು ಯಾವಳು ಪೂಜಿಸುತ್ತಾಳೆಯೋ ಅವಳೇ ಪತಿವ್ರತೆಯು.

**ಕಾರ್ಯೇ ದಾಸಿ ರತೌ ವೇಶ್ಯಾ ಭೋಜನೇ ಜನನೀಸಮಾ ।**
**ವಿಪತ್ಸು ಮಂತ್ರಿಣೀ ಭರ್ತುಃ ಸಾ ಚ ಭಾರ್ಯಾ ಪತಿವ್ರತಾ ॥**

**ಹರಿ:-** ಕೆಲಸದಲ್ಲಿ ಆಳಾಗಿಯೂ, ರತಿಯಲ್ಲಿ ಸೂಳೆಯಾಗಿಯೂ, ಊಟದಲ್ಲಿ ತಾಯಿಯಾಗಿಯೂ, ವಿಪತ್ತಿನಲ್ಲಿ ಮಂತ್ರಿಯಾಗಿಯೂ ಗಂಡನಿಗೆ ನೆರವಾಗಿರುವವಳು ಪತಿವ್ರತೆಯು.

**ಭರ್ತುರಾಜ್ಞಾಂ ನ ಲಂಘೇದ್ಯಾ ಮನೋವಾಕ್ಕಾಯಕರ್ಮಭಿಃ ।**
**ಭುಂಕ್ತೇ ಪತೌ ಸದಾ ಚಾತ್ತಿ ಸಾ ಚ ಭಾರ್ಯಾ ಪತಿವ್ರತಾ ॥**

ಗಂಡನ ಅಪ್ಪಣೆಯನ್ನು ಮನಸ್ಸು, ಮಾತು, ಕೆಲಸಗಳಿಂದ ಮೀರದೇ ಗಂಡನು ಊಟ ಮಾಡಿದ ಮೇಲೆ ಊಟ ಮಾಡುವ ಹೆಂಡತಿಯು ಪತಿವ್ರತೆಯು. ಪತಿಯು ಯಾವ ಸ್ತ್ರೀಯೊಡನೆಯೇ ರಮಿಸಲಿ, ಎಲ್ಲಿಯೇ ಹೋಗಿರಲಿ ಮತ್ಸರ, ಅಸೂಯೆ, ಕೋಪ ಕಾರ್ಪಣ್ಯವಿಲ್ಲದೆ ಸೇವೆಗೈಯುವ ಸತಿಯೇ ಪತಿವ್ರತೆ ಎನಿಸುತ್ತಾಳೆ. ಒಳ್ಳೇ ವೇಷ, ಭೂಷಣ ಗಳಿಂದ ಅಲಂಕೃತನಾದ ಸುಂದರ ಪುರುಷನನ್ನು ನೋಡಿ, ಅವನನ್ನು ತನ್ನ ತಂದೆ, ಸೋದರ ಇಲ್ಲವೆ ಮಗನೆಂದು ಯಾವ ಮಾನಿನಿ ಮಣಿಯು ತಿಳಿಯುವಳೋ ಅವಳೇ ಮಹಾ ಪತಿವ್ರತೆ.

ದ್ವಿಜೋತ್ತಮಾ, ನೀನು ನೋಡ ಹೊರಟ ಆ ಪತಿವ್ರತೆ ಇಂತಹ ಉಚ್ಚಮಟ್ಟದ ಸತೀಮಣಿ ಆಗಿದ್ದಾಳೆ. ಅವಳಿಗೆ ಎಂಟು ಜನ ಸವತಿಯರು. ಅಷ್ಟು ಜನ ಸಪತ್ನಿಯರ ಮಧ್ಯದಲ್ಲಿ ಇದ್ದು ಪತಿ ಸೇವೆ ಮಾಡುವ ಅವಳ ಹೆಸರು - ಶುಭಾ. ತುಂಬು ಯೌವ್ವನ,

ಅಪರಿಮಿತ ದಯೆ ಇವುಗಳಿಂದ ಸುಸಂಪನ್ನಳಾಗಿದ್ದಾಳೆ- ಆ ಸಾಧ್ವೀಮಣಿ. ಪರೋಪಕಾರಕ್ಕೆ ಅವಳು ಎತ್ತಿದ ಕೈ. ನೀನು ಅವಳ ಬಳಿಗೆ ಹೋಗು. ಬೇಕಾದುದನ್ನು ಕೇಳು. ಹೀಗೆ ನುಡಿದು ಬ್ರಾಹ್ಮಣರೂಪಿ ಭಗವಂತ ಅಂತರ್ಧಾನ ಹೊಂದಿದ ನಿಂತಲ್ಲಿಯೇ. ನರೋತ್ತಮನಿಗೆ ಅಚ್ಚರಿಯೇ ಅಚ್ಚರಿ ! ಹಾಗೆಯೇ ಹುಡುಕುತ್ತ ನಡೆದ. ಆ ಪತಿವ್ರತೆಯ ಮನೆಯನ್ನು ಗೊತ್ತು ಹಚ್ಚಿದ. ಅಲ್ಲಿ 'ಶುಭಾ' ಎಂಬ ಶುಭನಾಮದ ಪತಿವ್ರತೆ ಯಾರು? ಎಲ್ಲಿ? ಎಂದು ವಿಚಾರಿಸಿದ.

ಒಳಗೆ ಇದ್ದ ಈ ಸತೀಮಣಿಗೆ ಈ ದ್ವಿಜನ ಪ್ರಶ್ನಾವಳಿಗಳು ಕಿವಿಗೆ ಬಿದ್ದವು. ಸಂಭ್ರಮದಿಂದ ಕೂಡಲೇ ಮನೆಯಿಂದ ಹೊರಗೆ ಬಂದಳು. ತನ್ನ ಮನೆಯ ಬಾಗಿಲಲ್ಲಿ ನಿಂತಳು. ದ್ವಿಜನು ಆ ಪತಿವ್ರತೆಯನ್ನು ದೂರದಿಂದಲೇ ಕಂಡ. ಆನಂದದಿಂದ ಮುಖ ಉಲ್ಲಸಿತವಾಯಿತು. ಪ್ರಶ್ನೆ ಮಾಡಿದ -

**ದ್ವಿಜ :-** ''ಅಮ್ಮಾ, ಪ್ರಿಯವನ್ನು ಹೇಳು, ಸತ್ಯವನ್ನು ಹೇಳು-ನಿನಗೆ ತಿಳಿದಂತೆ ಹೇಳು.'' ಇವನ ಈ ಪ್ರಶ್ನೆಗೆ ನಮ್ರತೆಯಿಂದಲೇ ಉತ್ತರಿಸಿದಳು- ಆ ಪತಿ ಪರಾಯಣೆ. ''ಪೂಜ್ಯರೆ, ನನಗೆ ಈಗಲೇ ನನ್ನ ಪತಿಯ ಪೂಜೆಗೆ ಹೋಗಬೇಕಾಗಿದೆ. ಮನ ಬಂದಂತೆ ಮಾಡಲು ನಾನು ಸ್ವತಂತ್ರಳಲ್ಲ. ಏನೇ ಕೆಲಸವಿದ್ದರೂ ಅನಂತರ ನೋಡೋಣ. ಈಗ ನಾನು ಹೋಗಬೇಕು. ಆದರೂ ನೀವು ನನ್ನ ಅತಿಥಿಗಳಾಗಿ ಬಂದಿದ್ದೀರಿ. ಮೊದಲು ನನ್ನ ಆತಿಥ್ಯವನ್ನು ಸ್ವೀಕರಿಸಿರಿ. ನಿಮ್ಮ ಕೆಲಸ ಆಮೇಲೆ'' ಅವಳ ಮಾತು ಅವಮಾನವೆನಿಸಿತು ಆ ನರೋತ್ತಮನಿಗೆ. ಕೋಪವೂ ಬಂದಿತು ಅದರೊಟ್ಟಿಗೆ. ಸಿಡಿದು ನುಡಿದ-

''ನನಗೆ ಈಗ ಹಸಿವೆಯೂ ಇಲ್ಲ; ಬಾಯಾರಿಕೆಯೂ ಇಲ್ಲ. ಯಾವ ಶ್ರಮವೂ ಆಗಿಲ್ಲ- ಈ ನನ್ನ ಶರೀರಕ್ಕೆ. ಮೊದಲು ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡು. ಇಲ್ಲದಿದ್ದರೆ ನಾನೇ ಕೊಡುತ್ತೇನೆ - ಶಾಪವನ್ನು. ಆಗ ಆ ಪತಿವ್ರತೆ ನುಡಿದಳು. ''ದ್ವಿಜೋತ್ತಮಾ, ನಾನೇನು ಆ ಬಕಪಕ್ಷಿ ಎಂದು ತಿಳಿದೆಯಾ? ನಿನಗೆ ಹೆಚ್ಚಿನ ಜ್ಞಾನ ಬೇಕಾದರೆ ತುಲಾಧಾರನ ಮನೆಗೆ ಹೋಗು. ಅವನನ್ನು ವಿಚಾರಿಸು. ಅವನು ನಿನಗೆ ಹಿತವನ್ನು ಉಪದೇಶಿಸುವನು'' ಹೀಗೆ ಹೇಳಿದವಳೆ, ಅವಳು ಹೊರಟು ಹೋದಳು - ತನ್ನ ಮನೆಯೊಳಗೆ. ನರೋತ್ತಮನು ಆಚೀಚೆ ನೋಡಿದ. ಆ ಪತಿವ್ರತೆ ಪತಿಸೇವೆಗಾಗಿ ಮನೆಯೊಳಗೆ ಹೋಗಿ ಬಿಟ್ಟಿದ್ದಳು. ಆದರೆ ಇಲ್ಲಿಯೂ ಒಬ್ಬ ಬ್ರಾಹ್ಮಣ ಕಾಣಿಸಿದ - ಮೂಕ ಚಾಂಡಾಲನ ಮನೆಯಲ್ಲಿದ್ದಂತೆ. ನರೋತ್ತಮ ಅವನ ಬಳಿಗೆ ಧಾವಿಸಿದ. ತನ್ನ ಪ್ರಶ್ನೆಗೆ ಉತ್ತರ ಹೇಳಲು ಇವನೊಬ್ಬನಾದರೂ ಇರುವನಲ್ಲ ಎಂದು ಸಂತೋಷ ವಾಯಿತು. ಸಂಭ್ರಮದಿಂದ ಕೇಳಿದ -

''ಅಯ್ಯಾ ಇದೇನು ಆಶ್ಚರ್ಯ! ಈ ಹೆಣ್ಣು ಮಗಳು ದೇಶಾಂತರದಲ್ಲಿ ನಡೆದ ಆ ಬಕ ವೃತ್ತಾಂತವನ್ನು ಹೇಗೆ ಬಲ್ಲಳು? ಮತ್ತು ಆ ಮೂಕ ಚಾಂಡಾಲನಾದರೂ ನನ್ನ ಹಾಗೂ ಆ ಬಕಪಕ್ಷಿಯ ನಡುವಿನ ಪ್ರಸಂಗವನ್ನು ಇಷ್ಟು ದೂರ ದೇಶದಲ್ಲಿದ್ದು ಹೇಗೆ ಅರಿತಿದ್ದಾನೆ? ಆ ಚಾಂಡಾಲ ಹಾಗೂ ಈ ಪತಿವ್ರತೆ ಇವರಿಬ್ಬರೂ ದೇಶಾಂತರದಲ್ಲಿ ನಡೆದ ಘಟನೆಗಳನ್ನೆಲ್ಲ ಯಥಾವತ್ತಾಗಿ ಕುಳಿತಲ್ಲಿಯೇ ಹೇಗೆ ತಿಳಿಯಬಲ್ಲರು? ಇದು ನನಗೆ ಅತ್ಯಾಶ್ಚರ್ಯಕರ ಎನಿಸಿದೆ. ಇದಕ್ಕಿಂತ ಅಚ್ಚರಿ ಯಾವುದು !''

**ದ್ವಿಜ :-** ಇದರಲ್ಲಿ ಅಂತಹ ಅಚ್ಚರಿ ಪಡುವ ಪ್ರಮೇಯವೇನಿಲ್ಲ. ಅತಿಶಯ ಪುಣ್ಯ ಹಾಗೂ ಶಾಸ್ತ್ರೋಕ್ತ ಸದಾಚಾರಗಳಿಂದ ಭೂತ, ಭವಿಷ್ಯಗಳ ಯಥಾರ್ಥ ಜ್ಞಾನ ತಾನಾಗಿಯೇ ಲಭಿಸುತ್ತದೆ. ಸದಾಚಾರದ ಮಹಾ ಮಹಿಮೆಯ ಪರಿಜ್ಞಾನವಿಲ್ಲದ ನಿನಗೆ ಇದೆಲ್ಲವೂ ಅತ್ಯಾಶ್ಚರ್ಯವೆನಿಸಿದ್ದು ಸ್ವಾಭಾವಿಕ. ಆ ಪತಿವ್ರತೆ ನಿನಗೆ ಏನೆಂದಳು? ಮೊದಲು ಅದನ್ನು ನನಗೆ ತಿಳಿಸು.

**ನರೋತ್ತಮ :-** 'ತುಲಾಧಾರನ ಮನೆಗೆ ಹೋಗಿ ಅವನ ಮುಂದೆ ನಿನ್ನ ಪ್ರಶ್ನೆಗಳನ್ನು ಇಡು' ಎಂದು ಆ ಪತಿವ್ರತೆಯು ನನಗೆ ಉಪದೇಶಿಸಿದಳು. ದ್ವಿಜರೂಪಿ ಭಗವಂತ:- ಹಾಗೊ! ಮುನಿಪುಂಗವರೆ, ಅದು ನಿಜವಿದ್ದರೆ ನನ್ನ ಜೊತೆಗೆ ಬನ್ನಿ. ನಾನು ಈಗ ಆ ತುಲಾಧಾರನ ಮನೆಗೆ ಹೊರಟಿದ್ದೇನೆ. ಇದನ್ನು ಕೇಳಿ ನರೋತ್ತಮ ಆ ವಿಪ್ರವೇಷಿ ವಿಷ್ಣುವಿನ ಬೆನ್ನ ಹಿಂದೆ ನಡೆದನು. ದಾರಿಯಲ್ಲಿ ಪಾದಚಾರಿಯಾಗಿ ನಡೆಯುತ್ತಿರುವಾಗ ನರೋತ್ತಮನು ಆ ನಾರಾಯಣರೂಪಿ ದ್ವಿಜನನ್ನು 'ತುಲಾಧಾರನು ಈಗ ಎಲ್ಲಿರುತ್ತಾನೆ?' ಎಂದು ಕೇಳಿದನು.

**ಭಗವಂತ :-** ಆ ತುಲಾಧಾರ ಒಬ್ಬ ವ್ಯಾಪಾರಿ. ಜನನಿಬಿಡವಾದ ಈ ಭಾಗದಲ್ಲಿ ಅವನೊಂದು ಅಂಗಡಿ ಇಟ್ಟಿದ್ದಾನೆ. ಅಲ್ಲಿ ನಿತ್ಯವೂ ವ್ಯಾಪಾರ ಬಹಳ ದೊಡ್ಡ ಪ್ರಮಾಣದಲ್ಲಿ ನಡೆಯುತ್ತದೆ. ಕೊಡುವದು-ಕೊಳ್ಳುವದು- ಈ ಎರಡೂ ವ್ಯವಹಾರ ಅಲ್ಲಿ ಉಂಟು. ಹೀಗೆ ವ್ಯಾಪಾರ ಉದ್ಯೋಗ ಅವನ ಕಸುಬಾದರೂ ಅವನು ಯಾವ ಸಂದರ್ಭದಲ್ಲೂ ಸುಳ್ಳಾಡಿಲ್ಲ. ದುಷ್ಟತನ ಮಾಡುವದಿಲ್ಲ. ಮಾತಿನಿಂದ ಯಾರಿಗೂ ಕೇಡನ್ನು ಬಯಸುವದಿಲ್ಲ. ಕೃತಿಯಿಂದ ಅಪಕಾರ ಎಸಗುವದಿಲ್ಲ. ಮನಸ್ಸಿನಲ್ಲಿ ಎಂದೂ ಯಾರಿಗೂ ಕೆಟ್ಟದನ್ನು ಚಿಂತಿಸುವದಿಲ್ಲ. ಸುಳ್ಳಂತೂ ಜನ್ಮದಲ್ಲಿಯೇ ಆಡಿ ಗೊತ್ತಿಲ್ಲ. ಅಹಂಕಾರದ ಅಂಕುರವೂ ಇಲ್ಲ ಅವನ ಹೃದಯದಲ್ಲಿ. ಒಟ್ಟಾರೆ ಲೋಕ ಕ್ಷೇಮವೇ ಅವನ ಗುರಿ. ಸರ್ವ ಪ್ರಾಣಿಗಳ ಹಿತಚಿಂತನೆಯೇ ಅವನ ಜೀವನದುಸಿರು. ಕಲ್ಲು-ಕಾಂಚಾಣ, ಮಣ್ಣು-ಮಣಿ ಎಲ್ಲವೂ ಅವನಿಗೆ ಸಮಾನ.

ಅವನ ಮುಖ್ಯ ಉದ್ಯೋಗ ವ್ಯಾಪಾರ, ಅಕ್ಕಿ, ತುಪ್ಪ, ಎಣ್ಣೆ, ಉಪ್ಪು ಮುಂತಾದವುಗಳನ್ನು ಅವನು ಮಾರುತ್ತಾನೆ. ಎಲ್ಲ ವ್ಯಾಪಾರವನ್ನು ಅವನು ತನ್ನ ಅಂಗಡಿಯಿಂದಲೇ ಮಾಡುತ್ತಾನೆ. ಪ್ರಾಣಾಂತಿಕ ಪ್ರಸಂಗದಲ್ಲಿಯೂ ಸುಳ್ಳಾಡುವದಿಲ್ಲ. ಆದುದರಿಂದಲೇ ಅವನಿಗೆ ತುಲಾಧಾರ ಎಂದು ಅವನಿಗೆ ಹೆಸರು ಬಂದಿದೆ. ಹೀಗೆ ಅವರು ಮಾತನಾಡುತ್ತಿರುವಂತೆಯೇ ತುಲಾಧಾರನ ಮನೆ ಬಂದಿತು. ವಿವಿಧ ಪದಾರ್ಥಗಳ ಮಾರಾಟಮಾಡುತ್ತ ಅಲ್ಲಿಯೇ ನಿಂತಿದ್ದ ಆ ತುಲಾಧಾರ ಧರ್ಮಾತ್ಮ, ಕೊಳಕು ಬಟ್ಟೆ, ಹುಳುಕು ಹಲ್ಲು, ನೋಡಲು ಅಂತಹ ಆಕರ್ಷಕ ವ್ಯಕ್ತಿತ್ವ ಏನೂ ಇಲ್ಲ. ಆದರೂ ಅವನಿಗೆ ಅನೇಕ ಭಾಷೆಗಳು ಬರುತ್ತಿದ್ದವು.

ಪದಾರ್ಥಗಳನ್ನು ಕೊಳ್ಳ ಬಂದವರ ಮುಖನೋಡಿ ಅವರಂತೆಯೇ ಸರಿಯಾಗಿ ಮಾತನಾಡಿ, ಅವರಿಗೆ ಅವರು ಬೇಡಿದ್ದನ್ನು ಕೊಟ್ಟು ಕಳಿಸುತ್ತಿದ್ದ. ಇದರಿಂದಾಗಿ ಅನೇಕ ವರ್ಣ ಹಾಗೂ ವರ್ಗಗಳ ಸ್ತ್ರೀಯರು, ಪುರುಷರು ಅಲ್ಲಿಗೆ ಬಂದು ಮುಕುರಿದ್ದರು. ಅಂತಹ ಗಡಿಬಿಡಿಯಲ್ಲಿಯೂ ಆ ತುಲಾಧಾರನು ಈ ನರೋತ್ತಮ ದ್ವಿಜನನ್ನು ನೋಡಿದನು. ಮಧುರಸ್ವರದಲ್ಲಿ ಕೇಳಿದನು. ''ನೀವು ಯಾರು? ಎಲ್ಲಿಯವರು? ಹೇಗೆ ಬಂದಿರಿ'' ಎಂದು.

**ನರೋತ್ತಮ :-** ನಾನು ನಿನ್ನಿಂದ ಧರ್ಮೋಪದೇಶವನ್ನು ಹೊಂದಲು ಬಂದಿದ್ದೇನೆ. ನನಗೆ ಧರ್ಮಸೂಕ್ಷ್ಮವನ್ನು ತಿಳಿಸು.

**ತುಲಾಧಾರ :-** ಈ ಎಲ್ಲ ಜನ ಜಂಗುಳಿ ನನ್ನ ಸುತ್ತು ಮುತ್ತಲೂ ನೆರೆದಿರುವವರೆಗೆ ನೆಮ್ಮದಿ ಎಂಬುದೇ ಇಲ್ಲ ನನ್ನ ಮನಸ್ಸಿಗೆ, ವಿರಾಮವೂ ಇಲ್ಲ. ಈ ಜನ ಗಲಾಟೆ ಈಗ ಮುಗಿಯುವದೂ ಇಲ್ಲ. ಸರಿ ರಾತ್ರಿಯವರೆಗೂ ಈ ಗೊಂದಲ ಇದ್ದದ್ದೇ. ಆದುದರಿಂದ ನೀನೀಗ ನನ್ನ ಮಾತನ್ನು ಕೇಳು.

ನಿನಗೆ ಧರ್ಮ ಹೇಳಲು ನನಗೆ ಅವಕಾಶವೇ ಇಲ್ಲ. ನೀನು ಧರ್ಮರತ್ನಾಕರನ ಹತ್ತಿರ ಹೋಗು. ನಿನ್ನಿಂದ ಬಕ ಮರಣ ಹೊಂದಿದ್ದನ್ನು, ಬಾನಿನಲ್ಲಿ ಬಟ್ಟೆ ಒಣಗುವದನ್ನು, ಈಗ ಆ ಬಾನ ಬಟ್ಟೆಗಳ ಶೋಷಣ ಕಾರ್ಯ ನಿಂತದ್ದನ್ನು ಆ ಧರ್ಮರತ್ನಾಕರ ಚೆನ್ನಾಗಿ ಹೇಳಬಲ್ಲನು ಸಜ್ಜನರಿಗೆ ಉಪಕಾರ ಮಾಡುವದೇ ಅವನ ಜೀವನದ ಧ್ಯೇಯ. ಆದುದರಿಂದ ನೀನು ಅಲ್ಲಿಗೆ ಹೋಗು. ನಿನ್ನ ಕಾರ್ಯವಾಗುವದು.

ಹೀಗೆ ಹೇಳಿ, ತುಲಾಧಾರನು ತನ್ನ ಕೊಡಕೊಳ್ಳುವ ವ್ಯವಹಾರವನ್ನು ಮುಂದುವರಿಸಿದನು. ಆಗ ನರೋತ್ತಮನಿಗೆ ಯೋಚನೆಗಿಟ್ಟಿತು. 'ಆ ಧರ್ಮಾಕರನ ಮನೆ ನನಗೆ ಗೊತ್ತಿಲ್ಲ ಅಲ್ಲಿಗೆ ಹೋಗುವದು ಹೇಗೆ?' ಹೀಗೆ ಅವನು ಯೋಚಿಸುತ್ತಿರುವಾಗಲೇ ವಿಪ್ರವೇಷಧಾರಿ ವಿಷ್ಣುವು ಹಿಂದಿನಂತೆ ಅವನ ದೃಷ್ಟಿಗೆ ಗೋಚರಿಸಿದ 'ನಾನು ಧರ್ಮಾಕರನ ಮನೆಗೆ ಹೊರಟದ್ದೇನೆ, ನೀನೂ ಬಾ,' ಎಂದು ಹೇಳಿ ಕರೆದುಕೊಂಡು ನಡೆದ, ದಾರಿಯಲ್ಲಿ ನರೊತ್ತಮ ಆ ದೇವೋತ್ತಮ ದ್ವಿಜನ ಕಿವಿಯಲ್ಲಿ ಹೇಳಿದ ಪಿಸು ಮಾತಿನಲ್ಲಿ-

**ನರೋತ್ತಮ :-** ಏನಯ್ಯ, ಈ ತುಲಾಧಾರನಿಗೆ ಸ್ನಾನವಿಲ್ಲ; ಸಂಧ್ಯೆಯಿಲ್ಲ; ದೇವಪೂಜೆಯಿಲ್ಲ, ಬ್ರಹ್ಮಯಜ್ಞಯಿಲ್ಲ. ಶರೀರವೇ ಕೊಳೆಗಟ್ಟಿದೆ. ಅಂಗಾಂಗಗಳೆಲ್ಲವೂ ಅಶುದ್ಧ, ಬಟ್ಟೆಗಳು ಅವಲಕ್ಷಣ. ಆದರೆ ಅವನ ಜ್ಞಾನ ಮಾತ್ರ ವಿಲಕ್ಷಣ. ನನ್ನ ಸುದ್ದಿ ಸಮಾಚಾರ ಪೂರ್ತಿಗೊತ್ತು ಅವನಿಗೆ, ನಾವಿರುವದು ದೇಶಾಂತರದಲ್ಲಿ. ಇವನಿಗದು ಬಹುದೂರಾಂತರ. ಆದರೂ ಇವನು ಅದೆಲ್ಲವನ್ನೂ ಬಲ್ಲ. ಇದು ಹೇಗೆ ಸಾಧ್ಯ? ಅಷ್ಟು ದೂರ ಸಂಭವಿಸಿದ ವೃತ್ತಾಂತವನ್ನೆಲ್ಲ ಪ್ರತ್ಯಕ್ಷ ಕಂಡಂತೆ ಹೇಳಲು ಇವನಿಗೆ ಹೇಗೆ ಸಾಧ್ಯ? ನನ್ನ ಕೌತುಕಕ್ಕೆ ಕೊನೆಯಿಲ್ಲ, ಇವೆಲ್ಲಕ್ಕೆ ಏನು ಕಾರಣ? ಅದನ್ನು ನನಗೆ ಹೇಳು.

**ವಿಪ್ರವೇಷದ ವಿಷ್ಣು :-** ಸತ್ಯ, ಸಮದೃಷ್ಟಿ, ಹಾಗೂ ಪಿತೃಸೇವೆಗಳಿಂದ ಅವನು ಮೂರು ಲೋಕಗಳನ್ನೇ ಗೆದ್ದಿದ್ದಾನೆ. ದೇವತೆಗಳನ್ನು ಪ್ರೀತಿಗೊಳಿಸಿದ್ದಾನೆ; ಮುನಿಗಳನ್ನು ಪ್ರಸನ್ನಗೊಳಿಸಿದ್ದಾನೆ. ಹಿಂದೆ ಆದುದನ್ನು ತಿಳಿಯುತ್ತಾನೆ. ಮುಂದಾಗುವದನ್ನು ಈಗಲೇ ಅರಿಯುತ್ತಾನೆ ಈಗ ನಡೆದದ್ದನ್ನು ಎಲ್ಲಿಯೇ ನಡೆದರೂ ಕಣ್ಣೆದುರಿಗೆ ಸಂಭವಿಸಿದಂತೆ ಯಥಾರ್ಥವಾಗಿ ಕಾಣುತ್ತಾನೆ. ಇದೆಲ್ಲವೂ ಆ ಸತ್ಯ ಸಮದೃಷ್ಟಿ ಹಾಗೂ ಪಿತೃಸೇವೆಗಳ ಪ್ರಭಾವ. ಸತ್ಯಕ್ಕಿಂತ ಮಿಕ್ಕ ಧರ್ಮ ಯಾವುದಿದೆ? ಸುಳ್ಳಿಗಿಂತ ಘೋರ ಪಾಪ ಯಾವುದಿದೆ? ಶತ್ರು, ಮಿತ್ರ, ಉದಾಸೀನ, ಇವರು ಮೂವರನ್ನು ಸಮನಾಗಿ ನೋಡುವದೇ ಸಮದೃಷ್ಟಿ. ನಿಜವಾದ ಸಮ ಎಂದರೆ ಸರ್ವರನ್ನು ಸಮವಾಗಿ ನೋಡುವ ಸಾಕ್ಷಾತ್ ನಾರಾಯಣನೇ ಸರಿ!

**'ಯಸ್ಯೈವ ಮಾನಸೇ ನಿತ್ಯಂ ಸಮಃ ಸ ಪುರುಷೋತ್ತಮಃ ।'**

ಇಂತಹ ಸರ್ವಸಮನಾದ ಆ ಜಗದೀಶ್ವರನಲ್ಲಿ ನಿತ್ಯವೂ ಮನಸ್ಸನ್ನು ನಿಲ್ಲಿಸಿ ತನ್ನ ಮನಸ್ಸಿನಲ್ಲಿ ಆ 'ಸಮನಾದ' ಭಗವಂತನನ್ನು ಧ್ಯಾನಗೈಯುವವನೇ 'ಸಮದೃಷ್ಟಿ'. ಭಕ್ತಿಯಿಂದ ಪರವಶನಾದ ಭಗವಂತ ಇಂತಹ ಸಮದೃಷ್ಟಿಯುಳ್ಳ ಸತ್ಪುರುಷರ ಮನಸ್ಸಿನಲ್ಲಿ ನೆಲೆಸಿರುವದರಿಂದ ಅವನ ಅನುಗ್ರಹದಿಂದ ಇವನಿಗೆ ಭೂತ, ಭವಿಷ್ಯಗಳ ಪರಿಜ್ಞಾನ ತಾನಾಗಿಯೇ ಉಂಟಾಗುತ್ತದೆ. ಇಂತಹ ಭಗವದನುಗ್ರಹಕ್ಕೆ ಪಾತ್ರನಾದ ನರನಿಗೆ ಯಾರು ಸಮ ಈ ಭೂಲೋಕದಲ್ಲಿ? ಅವನು ಧರ್ಮಮೂರ್ತಿ ಅಂಥವರಿಂದಲೇ ಈ ಜಗತ್ತು ಧರಿಸಲ್ಪಡುತ್ತದೆ.

**ನರೋತ್ತಮ** :- ನಿನ್ನ ಅನುಗ್ರಹದಿಂದ ತುಲಾಧಾರನ ಸತ್ಯಸ್ವರೂಪವನ್ನು ನಾನು ಅರಿತುಕೊಂಡೆ. ಧರ್ಮಾಕರ ಅಥವಾ ಅದ್ರೋಹಕನ ವೃತ್ತಾಂತವೇನು? ತಿಳಿಸು.

**ವಿಷ್ಣು** :- ಹಿಂದೆ ಒಬ್ಬ ರಾಜಕುಮಾರನಿದ್ದ, ಅವನ ಮಡದಿ ತಾರುಣ್ಯದಿಂದ ತುಳುಕುತ್ತಿದ್ದಳು. ಲೋಭನೀಯ ಲಾವಣ್ಯ ಅವಳ ಅಂಗಾಂಗಗಳಲ್ಲಿ ತುಂಬಿನಿಂತಿತ್ತು, ದೂರದಿಂದ ನೋಡಿದವರಿಗೆ 'ಇವಳೇನು ಕಾಮನ ರತಿಯೋ! ಇಂದ್ರನ ಶಚಿಯೋ!' ಎಂದು ಸಂದೇಹ ಬರುವಷ್ಟು ಸುಂದರಳಾಗಿದ್ದಳು ರೂಪದಿಂದ. ಅವಳ ಹೆಸರು ಕೂಡ 'ಸುಂದರಿ' ಎಂದೇ ಇದ್ದಿತು. ಅವಳ ಸೌಂದರ್ಯವು ಅವಳ ಮಂಗಲನಾಮವನ್ನು ಅನುಮೋದಿಸಿತ್ತು. ರೂಪದಿಂದಲೂ ಹೆಸರಿನಿಂದಲೂ ಸುಂದರಿಯಾದ ಆ ಮಡದಿ ಎಂದರೆ ಪಂಚಪ್ರಾಣ ಆ ರಾಜಕುಮಾರನಿಗೆ.

ಒಮ್ಮೆ ಆ ಅರಸುಕುಮಾರನಿಗೆ ಎಲ್ಲಿಯೋ ಹೋಗಬೇಕಾಗಿತ್ತು ಕಾರ್ಯಾರ್ಥವಾಗಿ ಆಕಸ್ಮಿಕವಾಗಿ, ಆ ತರುಣ ರಾಜಕುಮಾರನಿಗೆ ಒಳ್ಳೇ ಯೋಚನೆಗಿಟ್ಟಿತು. 'ಜೀವಕ್ಕಿಂತ ಹೆಚ್ಚಿನದಾದ ಈ ನನ್ನ ಮೆಚ್ಚಿನ ಮಡದಿಯನ್ನು ಎಲ್ಲಿ ಇಡಲಿ ನಾನು ಬರುವವರೆಗೆ? ಎಲ್ಲಿ ಇಟ್ಟರೆ ಅವಳು ಅಕ್ಷತಳಾಗಿ ಸುರಕ್ಷಿತಳಾಗಿ ಇರುವಳು?' ಎಂದು ಎಷ್ಟು ಯೋಚಿಸಿದರೂ, ಅವನಿಗೆ ಸರಿಯಾದ ತಾಣವೇ ದೊರಕಲಿಲ್ಲ. ಕೊನೆಗೊಮ್ಮೆ ಮೈಕೊಡವಿ ಎದ್ದ - ಆ ರಾಜಕುಮಾರ ನೇರವಾಗಿ ಧರ್ಮಾಕರ ಅಥವಾ ಈ ಅದ್ರೋಹಕನ ಮನೆಗೆ ಬಂದ ಅವನಿಗೆ ವಿನಯದಿಂದ ಕೇಳಿಕೊಂಡ.

**ರಾಜಕುಮಾರ** :- ಪುಣ್ಯಾತ್ಮ, ನಾನು ಒಮ್ಮೆಲೆ ಕೆಲದಿನ ದೇಶಾಂತರ ಹೋಗಬೇಕಾಗಿದೆ. ಈ ನನ್ನ ಸತೀಮಣಿ ರೂಪದ ಖಣಿ ನನ್ನ ಪ್ರೀತಿಯ ಅಪಗಿಣಿ. ಇಂತಹ ಚೆಲುವಿನ ಚಿತ್ತಾರಳಾದ ಮಡದಿಯನ್ನು ಎಲ್ಲಿಡಲಿಕ್ಕೂ ನನಗೆ ವಿಶ್ವಾಸವಿಲ್ಲ. ಆದರೆ ನಿನ್ನ ಬಳಿಗೆ ಅವಳನ್ನು ಕರೆದು ತಂದಿದ್ದೇನೆ. ನೀನು ಪರಪುರುಷ, ಪುಣ್ಯ ಮೂರ್ತಿ. ನಿನ್ನ ಮನೆಯಲ್ಲಿ ನನ್ನ ಮಡದಿ ಸುರಕ್ಷಿತವಾಗಿ ಇರುವಳೆಂದು ವಿಶ್ವಾಸ ನನಲ್ಲಿದೆ. ಇವಳನ್ನು ಕೆಲವು ದಿನ ನಿನ್ನ ಮನೆಯಲ್ಲಿ ಇಟ್ಟುಕೊಂಡು ಉಪಕರಿಸು.

**ಅದ್ರೋಹಕ** :- ಅಯ್ಯಾ, ನಿನ್ನ ಈ ವಿಶ್ವಾಸಕ್ಕಾಗಿ ನಾನೇನೊ ಕೃತಜ್ಞ, ಆದರೆ ನಿಜವಾಗಿ ವಿಚಾರಿಸಿ ನೋಡು. ನಾನು ನಿನಗೆ ತಂದೆಯಲ್ಲ; ಸೋದರನಲ್ಲ. ನನಗೂ ನಿನಗೂ ಯಾವ ಬಾಂಧವ್ಯವೂ ಇಲ್ಲ. ನಿನ್ನ ಭಾರ್ಯೆಯ ಬಂಧು ವರ್ಗದ ಸಂಬಂಧವೂ ನನಗೆ ಇಲ್ಲ. ಹೀಗೆ ಅವಳ ತವರುಮನೆ, ಅತ್ತೆಮನೆ ಯಾವ ಬಳಗಕ್ಕೂ ಹತ್ತದ, ನಿಮ್ಮಿಬ್ಬರ

ಯಾವದೇ ಬಂಧು ವರ್ಗಕ್ಕೂ ಸೇರದ ನನ್ನ ಮನೆಯಲ್ಲಿ ಇಂತಹ ರೂಪವತಿಯಾದ ನಿನ್ನ ಮಡದಿಯನ್ನು ಹೇಗೆ ಇರಿಸುವಿ? ಏಕೆ ಇರಿಸುವಿ? ಅಪರಿಚಿತನೂ, ಅಬಾಂಧವನೂ ಆದ ನನ್ನ ಬಳಿಯಲ್ಲಿ ಇಟ್ಟರೂ ನಿನ್ನ ಮನಸ್ಸಿಗೆ ನೆಮ್ಮದಿ ಹೇಗೆ ಲಭಿಸುವದು?

**ರಾಜಕುಮಾರ :-** ನಾನು ಎಲ್ಲವನ್ನು ಬಲ್ಲೆ. ನಿನ್ನನ್ನಂತೂ ಚೆನ್ನಾಗಿಯೇ ಅರಿತಿದ್ದೇನೆ. ನಿನ್ನಂತಹ ಧಾರ್ಮಿಕನಿಲ್ಲ; ಜಿತೇಂದ್ರಿಯನಿಲ್ಲ ಈ ಲೋಕದಲ್ಲಿ ಅದಕ್ಕಾಗಿಯೇ ನಾನು ಬಳಿಗೆ ಬಂದದ್ದು - ನನ್ನ ಸುಂದರಿಯನ್ನು ಇಟ್ಟು ಹೋಗಲು.

**ಅದ್ರೋಹಕ :-** ರಾಜನ್, ಈ ನಿನ್ನ ಹೆಂಡತಿ ನಿಜವಾಗಿಯೂ ತ್ರಿಭುವನ ಸುಂದರಿಯೇ ಸರಿ. ಇವಳನ್ನು ಯಾವ ಗಂಡಸು ತಾನೇ ರಕ್ಷಿಸಲು ಸಮರ್ಥನು? ಆದುದರಿಂದ ಇವಳನ್ನು ನನ್ನಲ್ಲಿ ಇಡುವದು ಬೇಡ. ಅನಂತರ ಬಯ್ಯುವದೂ ಬೇಡ.

**ರಾಜಕುಮಾರ :-** ಮಹಾನುಭಾವ, ನಾನು ಭೂಮಂಡಲವನ್ನೆಲ್ಲ ತಿರುಗಿ ಎಲ್ಲಿಯೂ ಯೋಗ್ಯ ಸ್ಥಾನ ದೊರಕದೇ ನಿನ್ನ ಬಳಿಗೆ ಬಂದಿದ್ದೇನೆ. ನಿನ್ನ ಶೀಲ, ಸಂಯಮಗಳನ್ನು ಚೆನ್ನಾಗಿ ಅರಿತೇ ಮಡದಿಯನ್ನು ನಿನ್ನ ಬಳಿಗೆ ಇರಿಸುತ್ತಿದ್ದೇನೆ. ನೀನು ಹೀಗೆ ನಿಷೇಧಿಸಬೇಡ. ಇವಳು ನಿನ್ನ ಮನೆಯಲ್ಲಿಯೇ ಇರಲಿ.

**ಅದ್ರೋಹಕ :-** ರಾಜಕುಮಾರ, ಈ ನಗರದಲ್ಲಿ ರಸಿಕಾಗ್ರಣಿಗಳು ಬಹಳ ಇಲ್ಲಿಯ ಓಣಿ ಕೇರಿಗಳಲ್ಲೆಲ್ಲ ಕಾಮುಕರ ಹಿಂಡು ತುಂಬಿ ತುಳುಕುತ್ತಿದೆ. ಇಂತಹ ಶೃಂಗಾರ ರಸ ರಂಗಿತವಾದ ನಗರದಲ್ಲಿ ಈ ಸುಂದರಿಯ ಸಂರಕ್ಷಣೆ ಹೇಗೆ ಸಾಧ್ಯವಾದೀತು? ಬೇರೆಯವರ ಮಾತೇಕೆ, ನನಗೇ ಯಾವ ಕಾಲಕ್ಕೆ ಏನು ದುರ್ಬುದ್ಧಿ ಹುಟ್ಟುವದೊ ಯಾರಿಗೆ ಗೊತ್ತು ? ಮನೆಯಲ್ಲಿದ್ದ ಬಳಿಕ ನಾನು ಅವಳನ್ನು ದಾಸಿಯಂತೆ ದುಡಿಸಿಕೊಳ್ಳಬಹುದು. ಹೆಂಡತಿಯಂತೆ ನಡೆಸಿಕೊಳ್ಳಬಹುದು., ಅವಳನ್ನು ನನ್ನ ಮನೆಯಲ್ಲಿ ಇರಿಸಿಕೊಂಡ ಬಳಿಕ, ಸರ್ವ ರೀತಿಯಿಂದಲೂ ನಾನು ಅವಳನ್ನು ರಕ್ಷಣೆ ಮಾಡಿದ ಬಳಿಕ ಅವಳು ಇಲ್ಲಿ ಇರುವವರೆಗೆ ನನ್ನ ವಸ್ತು ಎಂದೇ ಇರಬೇಕು. ನಿನ್ನನ್ನು ಅವಳು ಮರೆತು, ನೀನು ಅವಳನ್ನು ಮರೆತು. ನನ್ನನ್ನೇ ಸ್ವಾಮಿ ಎಂದು ಅರಿತು, ನನ್ನ ಮಡದಿಯೊಡನೆ ನನ್ನ ಶಯ್ಯೆಯಲ್ಲಿಯೇ ಮಲಗಿಕೊಂಡು ನನ್ನಲ್ಲಿ ವಿಶ್ವಾಸವಿಟ್ಟು ಇರುವದಾದರೆ ಇರಲಿ, ಇಲ್ಲದಿದ್ದರೆ ಅವಳನ್ನು ನೀನು ಕರೆದುಕೊಂಡು ಹೋಗು.

ಅದ್ರೋಹಕನ ಈ ನುಡಿಯನ್ನು ಕೇಳಿ ರಾಜಕುಮಾರನು ಒಂದು ಕ್ಷಣ ದಿಗಿಲು ಗೊಂಡು - ತಲೆ ಹಿಡಿದುಕೊಂಡು ನಿಂತುಬಿಟ್ಟ. ಏನೊ ಯೋಚಿಸಿದ. ಹೇಗೋ ಲೆಕ್ಕ ಹಾಕಿದ. ಅಂತೂ ಕೊನೆಗೆ ದೃಢ ನಿರ್ಧಾರದ ಧ್ವನಿಯಲ್ಲಿ ಹೇಳಿದ.

**ರಾಜಕುಮಾರ :-** ಅಯ್ಯಾ, ನಿನ್ನ ಮಾತಿನಂತೆಯೇ ಆಗಲಿ. ನಿನ್ನ ಇಷ್ಟ ಬಂದಂತೆ ಮಾಡು. ಹೀಗೆ ಹೇಳಿ ತನ್ನ ರೂಪ ರಾಣಿಯ ಕಡೆಗೆ ತಿರುಗಿ ರಾಜಕುಮಾರ ಆಜ್ಞಾಪಿಸುವ ಧ್ವನಿಯಲ್ಲಿ ಹೇಳಿದ 'ಸುಂದರಿ, ನೀನು ಇನ್ನು ಮೇಲೆ ಈ ಮನೆಯಲ್ಲಿಯೇ ಇರು. ಈ-ಅದ್ರೋಹಕನು ಹೇಳಿದ್ದನ್ನು ಕೇಳಬೇಕು. ಅದು ಒಳ್ಳೆಯದೋ ಕೆಟ್ಟದೋ ಎಂಬ ವಿಚಾರ ಬೇಡ. ಅವನ ಆಜ್ಞೆ ಪಾಲಿಸುವದೊಂದೇ ನಿನ್ನ ಕರ್ತವ್ಯ. ಇದು ನನ್ನ ಕಟ್ಟಪ್ಪಣೆ. ತಿಳಿಯಿತೆ?' ಹೀಗೆ ಹೇಳಿ, ಆ ರಾಜಕುಮಾರನು ಅಲ್ಲಿಂದ ಹೊರಟು ಹೋದನು.

ಅದ್ರೋಹಕನು ತನ್ನ ಮಾತಿನಂತೆಯೇ ಅವಳೊಡನೆ ನಡೆದುಕೊಂಡನು. ದಾಸಿಯಂತೆ ದುಡಿಸಿಕೊಳ್ಳುತ್ತಿದ್ದನು ಹಗಲಿನಲ್ಲಿ, ರಾತ್ರಿ ಸಮಯದಲ್ಲಿ ತನ್ನ ಹೆಂಡತಿ ಹಾಗೂ ಸುಂದರಿ ಇವರ ನಡುವೆ ಮಲಗುತ್ತಿದ್ದನು. ಸ್ವಸ್ತ್ರೀ, ಪರಸ್ತ್ರೀ ಎಂಬ ಯಾವ ಭೇದ ಭಾವವನ್ನು ಮಾಡುತ್ತಿರಲಿಲ್ಲ. ನಿರ್ವಿಕಾರ ಚಿತ್ತನಾಗಿ ಮಧ್ಯದಲ್ಲಿ ನಿಶ್ಚಲ ಮನಸ್ಸಿನಿಂದ ಶಯನ ಮಾಡುತ್ತಿದ್ದನು. ನಿಶ್ಚಿಂತೆಯಿಂದ ನಿದ್ರೆ ಮಾಡುತ್ತಿದ್ದನು. ಮಲಗಿದಾಗ ಅವರಿಬ್ಬರೂ ಸ್ತ್ರೀಯರ ಅಂಗಾಂಗ ಸ್ಪರ್ಶವು ಇವನಿಗೆ ನಿದ್ರೆ ಹತ್ತಿದಾಗಲೂ, ಎಚ್ಚರವಿದ್ದಾಗಲೂ ಆಗುತ್ತಿತ್ತು. ಆದರಿಂದ ಆ ಸುಂದರಿಯ ದೇಹವು ಪುಳಕಿತವಾಗಿ ಮನಸ್ಸು ಚಂಚಲವಾಗುತ್ತಿತ್ತು.

ಆದರೆ ತರುಣನಾದ ಈ ಅದ್ರೋಹಕನು ಮಾತ್ರ ನಿರ್ವಿಕಾರ. ತನ್ನ ಹೊಟ್ಟೆಯಿಂದ ಹುಟ್ಟಿದ ಮಗಳ ಮೈ ತಾಗಿದೆ ಎಂದು ಬಗೆಯುತ್ತಿದ್ದ.

ಸುಂದರಿಯ ಎದೆ ಇವನ ಮೈಗೆ ತಾಗಿದಾಗಲೂ ಅವನಿಗೆ ತಾನು ಮಗುವಾಗಿದ್ದಾಗ ತನ್ನ ತಾಯಿಯ ಸ್ತನ ಸ್ಪರ್ಶ ಮಾಡಿದ ಅನುಭವವೇ ಮರುಕಳಿಸಿದಂತಾಗುತ್ತಿತ್ತು. ಏಕಶಯ್ಯೆಯಲ್ಲಿ ಸುಂದರಿಯ ಅಂಗಾಲಿಂಗನ ಮಾಡಿದಂತೆ ಮಲಗಿದ್ದರೂ ಅದು ತನ್ನ ತಾಯಿಯ ಆಲಿಂಗನವೆಂದೇ ತಿಳಿದು ಪೂಜ್ಯ ಭಾವನೆಯಿಂದಲೇ ನಿರ್ವಿಕಾರನಾಗಿ ಅವನು ಶಯನ ಮಾಡುತ್ತಿದ್ದ. ಹೀಗೆ ಆರು ತಿಂಗಳವರೆಗೆ ಆ ಮಹಾಪುರುಷನು ಆ ಇಬ್ಬರೂ ಸ್ತ್ರೀಯರೊಡನೆ ಏಕಶಯ್ಯೆಯಲ್ಲಿದ್ದರೂ ಜಿತೇಂದ್ರಿಯನಾಗಿ, ಜಿತಕಾಮನಾಗಿ, 'ಅಚಲೋಽಯಂ ಸನಾತನಃ' ಎಂಬಂತೆ ಪರಮ ಪವಿತ್ರನಾಗಿಯೆ ಉಳಿದ. ಸುಂದರಿಯು ತನ್ನ ಮನೆಗೆ ಬಂದಂದಿನಿಂದ ಸೋದರಿ ಎಂದೇ ಬಗೆದು, ಅವಳಿಂದಲೂ ವಿಷಯ ವ್ಯಾಪಾರದಿಂದಲೂ ದೂರವೇ ಉಳಿದ. ಹೀಗೆ ಅವಿಚ್ಛಿನ್ನ ಆರು ತಿಂಗಳವರೆಗೆ ಅಖಂಡ ಬ್ರಹ್ಮಚರ್ಯೆಯನ್ನು ನಡೆಸಿದ.

ಆರು ತಿಂಗಳ ನಂತರ, ಸುಂದರಿಯ ಗಂಡ ಮರಳಿ ಬಂದ ಆ ಊರಿಗೆ. ಅಲ್ಲಲ್ಲಿ ನಗರದಲ್ಲಿ ತಿರುಗಾಡಿದ, ಅವರಿವರನ್ನು ಕಂಡ. ಸುಂದರಿ ಅದ್ರೋಹಕರ ಬಗ್ಗೆ ಜನರಾಡಿದ ಮಾತುಗಳನ್ನು ಕೇಳಿದ. ಕೆಲವರು ಒಳ್ಳೆಯ ಮಾತುಗಳನ್ನೇ ಆಡಿದರು. ಅದ್ರೋಹಕನ ಮನಸ್ಥೈರ್ಯ ಹಾಗೂ ಸಂಯಮ, ನಿರ್ವಿಕಾರ ಭಾವನೆಗಳನ್ನು ಹೊಗಳಿದರು. ಎಷ್ಟೋ ಯುವಕರು ನಿಬ್ಬೆರಗಾಗಿ ಕೇಳಿದರು. ಆದರೆ ಇನ್ನು ಕೆಲವರು ಮಾತ್ರ ಕಂಡಕಂಡಂತೆ ಮಾತನಾಡಿದರು. "ಮಹಾ ಪುರುಷ, ನೀನೇನೋ ಸ್ಫುರದ್ರೂಪಿಣಿಯಾದ ಮಡದಿಯನ್ನು ಈ ಅದ್ರೋಹಕನಿಗೆ ಒಪ್ಪಿಸಿಹೋದೆ ಅವನ ಮೇಲೆ ವಿಶ್ವಾಸವಿಟ್ಟು. ಆದರೆ ಅವನು ಅವಳ ಜೊತೆಗೆ ಮಲಗುವದೆ! ಹರೆಯದ ಹೆಣ್ಣು, ತಾರುಣ್ಯದ ಗಂಡು ಏಕ ಶಯ್ಯೆಯಲ್ಲಿ ಮಲಗಿದರೆ ಮನಸ್ಸ್ವಾಸ್ಥ್ಯ ಉಳಿಯುವದೆ? ಇಂದ್ರಿಯ ನಿಗ್ರಹ ಸಾಧ್ಯವಾದಿತೆ? ನಿಜವಾಗಿಯೂ ಅವನಿಗೆ ಸುಂದರಿಯ ಮೇಲೆ ಆಶೆಯೂ ಇದೆ, ಅಭಿಲಾಷೆಯೂ ಇದೆ. ಅದಕ್ಕೆ ನೀನು ಅನುಕೂಲ ಮಾಡಿಕೊಟ್ಟೆ ಇದನ್ನು ಒಪ್ಪುವಷ್ಟು ಪ್ರಾಮಾಣಿಕತೆ ಅವನಲ್ಲಿ ಇದ್ದೀತೆ?"

ಹೀಗೆ ಅನೇಕ ಜನರು ಅಪವಾದಗಳನ್ನು ಆಡುವದು ಅವನ ಕಿವಿಗೆ ಬಿದ್ದಿತು. ಇದಕ್ಕೂ ಮೊದಲೇ ಈ ಎಲ್ಲ ಮಾತುಗಳು ಅದ್ರೋಹಕನ ಕಿವಿಗೂ ಬಿದ್ದಿದ್ದವು. ಜನ ತನ್ನ ಮೇಲೆ ಹೊರಿಸಿದ ಅಪವಾದ, ಶಂಕೆ, ಕಲಂಕಾರೋಪಗಳಿಂದ ಅವನು ಸಂತ್ರಸ್ತನಾದ. ತಾನು ಇಷ್ಟು

ಮನೋನಿಗ್ರಹಮಾಡಿ ಯಾವದೇ ಚಿತ್ತ ಚಾಂಚಲ್ಯವಿಲ್ಲದೆ, ತನ್ನ ಮಡದಿಯ ಮೈಯನ್ನು ಕೂಡ ಮುಟ್ಟದೆ ಜಿತೇಂದ್ರಿಯನಾಗಿದ್ದರೂ ಜನ ಹೀಗೆ ತನ್ನ ಮೇಲೆ ಅಪವಾದದ ಹೊರೆಯನ್ನು ಹೊರಿಸುವದನ್ನು ಕಂಡು, ಕೇಳಿ, ಅವನ ಚಿತ್ತ ಉದ್ವಿಗ್ನವಾಯಿತು. ರಾಜಕುಮಾರ ಬಂದ ಬಳಿಕ ಇಲ್ಲಿಯ ಜನ ಏನನ್ನಾದರೂ ಹೇಳಿ ಅವನ ತಲೆ ಕೆಡಿಸುವದು ಖಂಡಿತವೆಂದು ಅವನಿಗೆ ಮನದಟ್ಟಾಯಿತು. ಅದಕ್ಕಾಗಿ ಅವನ ಮನಸ್ಸಿನಲ್ಲಿ ಒಂದು ಯೋಚನೆ ಹೊಳೆಯಿತು. ಕೂಡಲೇ ಅವನು ಕಾಡಿಗೆ ಹೋಗಿ ಕಟ್ಟಿಗೆಯನ್ನು ಕಡಿದು ಕೂಡಿಹಾಕಿದ. ಅದನ್ನು ಮನೆಗೆ ತಂದು ಹಿತ್ತಲಲ್ಲಿ ಒಂದೆಡೆ ಒಟ್ಟಿ ಕೊಳ್ಳಿ ಇಟ್ಟ. ಬೆಂಕಿ ಉರಿಯತೊಡಗಿತು. ಚಿತೆ ಸಿದ್ಧವಾಯಿತು.

ಇಷ್ಟರಲ್ಲಿ ರಾಜಕುಮಾರ ಅದ್ರೋಹಕನ ಮನೆಗೆ ಬಂದನು. ಅಲ್ಲಿ ತನ್ನ ಮಡದಿಯನ್ನೂ ಮಿತ್ರನನ್ನೂ ನೋಡಿದನು. ಹೆಂಡತಿಯ ಮುಖ 'ಉತ್ಫುಲ್ಲ ಕಲ್ಹಾರ.' ಮಿತ್ರನ ಮುಖ ಖಿನ್ನ, ವಿಷಣ್ಣ. ಈರ್ವರ ಭಾವ ಮುಖಚರ್ಯೆಯ ಮೇಲೆ ರಾಜಕುಮಾರನಿಗೆ ತಿಳಿಯಿತು. ಅವನು ಅದ್ರೋಹಕನನ್ನು ಕೇಳಿದನು - "ಮಿತ್ರ, ಎಷ್ಟೋ ದಿನಗಳ ಮೇಲೆ ನಾನು ನಿನ್ನ ಬಳಿಗೆ ಬಂದಿದ್ದೇನೆ. ನೀನು ನನ್ನ ಮಿತ್ರ, ನೀನೇಕೆ ನನ್ನೊಡನೆ ಮಾತನಾಡುತ್ತಿಲ್ಲ?" ಧರ್ಮಮೂರ್ತಿಯಾದ ಅದ್ರೋಹಕ ಧೈರ್ಯದಿಂದ ದೊರೆಯ ಮಗನನ್ನು ಕುರಿತು ಇಂತೆಂದನು -

"ರಾಜಕುಮಾರ, ನಾನು ನಿನ್ನ ಹಿತಕ್ಕಾಗಿ ಎಷ್ಟು ಕಠೋರ ಕರ್ಮಗಳನ್ನು ಮಾಡಿದೆ, ವ್ರತಗಳನ್ನು ಆಚರಿಸಿದೆ, ಯಾರಿಗೂ ಮಾಡಲು ಅಶಕ್ಯವಾದ ಇಂದ್ರಿಯ ನಿಗ್ರಹ ಸಾಧಿಸಿದೆ, ಮನಸ್ಸನ್ನು ನಿಯಂತ್ರಿಸಿದೆ. ಇದೆಲ್ಲವೂ ಜನಾಪವಾದದಿಂದ ವ್ಯರ್ಥವಾಯಿತು. ಆದುದರಿಂದ ನನಗೆ ಈಗ ಜೀವನವೇ ದುರ್ಭರವೆನಿಸಿದೆ. ಲೋಕನಿಂದೆಯ ಈ ಕಲಂಕ ಪಂಕವನ್ನು ಹೊತ್ತು ನಾನು ಬಾಳಲಾರೆ. ಆದುದರಿಂದ ನಾನು ಈಗ ಈ ಶರೀರವನ್ನು ಅಗ್ನಿನಾರಾಯಣನಿಗೆ ಅರ್ಪಿಸಬೇಕೆಂದು ಮಾಡಿದ್ದೇನೆ. ನನ್ನ ಈ ಅಗ್ನಿ ದಿವ್ಯವನ್ನು ಮೇಲೆ ಸುರರು ಕೆಳಗೆ ನರರು ನೋಡಲಿ." ಇಷ್ಟು ಹೇಳಿದವನೇ ಅದ್ರೋಹಕನು ರಾಜಕುಮಾರನ ಉತ್ತರಕ್ಕೂ ಕಾಯದೆ ವೇಗದಿಂದ ಓಡಿಹೋಗಿ ಧಗಧಗಿಸುತ್ತಿರುವ, ತಾನೇ ಮೊದಲು ಹೊತ್ತಿಸಿಟ್ಟಿದ್ದ ಅಗ್ನಿಕುಂಡದಲ್ಲಿ ಹಾರಿಕೊಂಡನು. ಪ್ರಜ್ವಲಿಸುವ ಅಗ್ನಿಜ್ವಾಲೆಗಳು ಉರಿಯುವ ಕೆನ್ನಾಲಿಗೆಗಳನ್ನು ಚಾಚಿ ಆ ಪುಣ್ಯಾತ್ಮನ ಶರೀರವನ್ನು ಕಬಳಿಸತೊಡಗಿದವು. ಅಷ್ಟರಲ್ಲಿ ಆಕಾಶದಿಂದ ಪುಷ್ಪವೃಷ್ಟಿ ಆಯಿತು. ದಹದಹಿಸುವ ಬೆಂಕಿಯ ಜ್ವಾಲೆಗಳು ಇವನ ಬಟ್ಟೆಯನ್ನು ಸುಡಲಿಲ್ಲ. ದೇಹವನ್ನು ದಹಿಸಲಿಲ್ಲ, ಅಂಗಾಂಗಗಳನ್ನು ಉರಿಸಲಿಲ್ಲ.

ಆಕಾಶದಲ್ಲಿ ದೇವತೆಗಳು ಹೂಮಳೆಯೊಂದಿಗೆ ಪ್ರಶಂಸೆಗೈದರು. ಅವನ ಕಡೆಗೆ ಎಲ್ಲೆಡೆಯಿಂದಲೂ ಪುಷ್ಪವೃಷ್ಟಿ. ಆದರೆ ಅವನ ಬಗ್ಗೆ ದುಷ್ಟ ಮಾತು ಹೇಳಿ, ಅಪವಾದ ಹೊರಿಸಿದವರ ಮೈ ತುಂಬ ಕುಷ್ಠ ಬಿದ್ದು, ಬಾಯಿ ತುಂಬ ಹುಳಗಳು ಬಿದ್ದವು. ಕೂಡಲೇ ಅಲ್ಲಿ ದೇವತೆಗಳು ಧಾವಿಸಿ ಬಂದರು. ಕೈಹಿಡಿದು ಅಗ್ನಿ ಪೀಠದಿಂದ ಅವನನ್ನು ಹೊರಕ್ಕೆ ತಂದರು. ಅಂದವಾದ ಮಂದಾರ ವೃಕ್ಷದ ಸುಗಂಧ ಪುಷ್ಪಗಳಿಂದ ಅವನನ್ನು ಅಲಂಕರಿಸಿದರು. ಅಚ್ಚರಿಯಿಂದ ಬೆರಳು ಕಚ್ಚಿ ನಿಂತರು ಮುನಿ, ಮನುಜ, ದನುಜ, ದೇವತೆಗಳು. ಭಕ್ತಿಯಿಂದ ಪೂಜಿಸಿದರು ಮನುಷ್ಯೋತ್ತಮರು. ಆದರದಿಂದ ಅರ್ಚಿಸಿದರು ಋಷಿಪುಂಗವರು.

ಅಲ್ಲಿ ನೆರೆದ ದೇವ-ಮುನಿ-ಮಾನವವೃಂದ ವೃಂದಾರಕರೆಲ್ಲರೂ ಸೇರಿ ಆ ಧರ್ಮಾಕರನನ್ನು ಸತ್ಕರಿಸಿ, ಗೌರವಿಸಿ, ಅವನಿಗೆ 'ಅದ್ರೋಹಕ'ನೆಂದು ಹೆಸರಿಟ್ಟರು. ಆ ಪುಣ್ಯಪುರುಷನ ಅಡಿಯ ಹುಡಿ ಹರಡಿದಲ್ಲಿ ಎಲ್ಲೆಡೆಗೂ ಭೂಮಿಯಲ್ಲಿ ಬೆಳೆ ಬೆಳೆದು, 'ಸುಜಲಾ, ಸುಫಲಾ, ಸಸ್ಯ ಶಾಮಲಾ' ಆಗಿ ವಸುಂಧರೆ ಸುಂದರಳಾಗಿ ಕಂಗೊಳಿಸಿದಳು.

ಆಗ ದೇವತೆಗಳು ಅವನ ಬಳಿಗೆ ಬಂದರು. ''ಪುಣ್ಯ ಪುರುಷ, ನಿನ್ನ ಶೀಲ, ಚಾರಿತ್ರ್ಯ ಪಾವಿತ್ರ್ಯಗಳು ವಿಶ್ವವಿಶ್ರುತವಾಗಿವೆ. ಈ ಸುಂದರಿಯನ್ನು ಅವಳ ಪತಿಯಾದ ಆ ರಾಜಕುಮಾರನಿಗೆ ಒಪ್ಪಿಸು. ಇನ್ನು ಮೇಲಾದರೂ ನಿನ್ನ ಹೆಂಡತಿಯನ್ನು ನೀನು ಹೆಂಡತಿ ಎಂದು ಪರಿಗ್ರಹಿಸು. ಎಂದು ಅವನಿಗೆ ಹೇಳಿದರು. ಮತ್ತು ಅಲ್ಲಿದ್ದ ಜನರ ಎದುರು-''

''ಇಂತಹ ಇಂದ್ರಿಯ ನಿಗ್ರಹ ಮಾಡುವ ಸಂಯಮಿ ಮನುಷ್ಯನು ಭೂಮಂಡಲದಲ್ಲಿಯೇ ಇನ್ನೊಬ್ಬನಿಲ್ಲ. ದೇವ, ದೈತ್ಯ, ಮನುಷ್ಯ, ಮೃಗ, ಪಕ್ಷಿ, ಕೀಟ - ಜಾತಿ ಯಾವುದೇ ಇರಲಿ, ಜನಾಂಗ ಯಾವುದೇ ಇರಲಿ, ಎಲ್ಲರೂ ಕಾಮಾಕ್ರಾಂತರೇ. ಈ ಸಂಸಾರದಲ್ಲಿ ಭೂಮಿಯ ಬಂಧನಕ್ಕೆ ಕಾರಣ ಕಾಮ. ಅಂತಹ ಅಜಿಂಕ್ಯನಾದ ಕಾಮನನ್ನು ಗೆದ್ದ ಧೀರ - ಈ ಅದ್ರೋಹಕ. ಇವನು ಇಂದು ಹದಿನಾಲ್ಕು ಲೋಕಗಳನ್ನೇ ಗೆದ್ದಂತೆ. ಇವನ ಹೃದಯದಲ್ಲಿ ಶ್ರೀಹರಿಯು ನಿರಂತರವೂ ನೆಲೆಸುತ್ತಾನೆ. ಇವನನ್ನು ಮುಟ್ಟಿದರೂ ಪುಣ್ಯ; ನೋಡಿದರೂ ಪಾಪ ಪರಿಹಾರ. ಇವನ ಸಹವಾಸಮಾತ್ರದಿಂದಲೇ ಸ್ವರ್ಗ ಪ್ರಾಪ್ತಿ.'' ಹೀಗೆ ದೇವತೆಗಳು ಅವನನ್ನು ಹೊಗಳಿದರು. ಸಂತೋಷದಿಂದ ವಿಮಾನಾ ರೂಢರಾಗಿ ತಮ್ಮ ತಾಣಗಳಿಗೆ ತೆರಳಿದರು. ಆ ಮಹಾಮಹಿಮನನ್ನು ಮನ್ನಿಸಿ ಧನ್ಯರಾದರು ಅಲ್ಲಿ ನೆರೆದ ಎಲ್ಲ ಮಾನವರು. ಋಷಿ, ಮುನಿಗಳು ಕೂಡ ಆ ಅದ್ರೋಹಕ ದಂಪತಿಗಳನ್ನು ಅಭಿನಂದಿಸಿ ತೆರಳಿದರು ತಮ್ಮ ತಮ್ಮ ಆಶ್ರಮಕ್ಕೆ.

ಅಂದಿನಿಂದ ಅವನಿಗೆ ದಿವ್ಯ ದೃಷ್ಟಿ ಪ್ರಾಪ್ತವಾಗಿದೆ. ಅವನು ಬಯಸಿದಾಗ ದೇವತಾ ಸಾಕ್ಷಾತ್ಕಾರ. ಮೂರು ಲೋಕದ ವಾರ್ತೆಗಳನ್ನು ಅಂದಿನಿಂದ ಅವನು ಲೀಲೆಯಿಂದಲೇ ತಿಳಿಯಬಲ್ಲ ಕುಳಿತಲ್ಲಿಂದಲೇ. ಹೀಗೆ ಧರ್ಮಾಕರ 'ಅದ್ರೋಹಕ' ಎಂಬ ಹೆಸರುಳ್ಳ ಆ ಪುಣ್ಯ ಪುರುಷನ ಮಹಿಮೆಯನ್ನು ದ್ವಿಜರೂಪಿ ಭಗವಂತನ ಬಾಯಿಂದ ಕೇಳಿ ನರೋತ್ತಮ ದ್ವಿಜನಿಗೆ ಮಹದಾನಂದ ಆಯಿತು. ಅವನು ಆದರದಿಂದ ಅದ್ರೋಹಕನ ಬಳಿಗೆಬಂದು, ಧರ್ಮೋದ್ದೇಶ, ಹಿತೋಪದೇಶ ಮಾಡಬೇಕೆಂದು ಕೇಳಿಕೊಂಡನು. ಅದಕ್ಕೆ ಅದ್ರೋಹಕನು-

'ವಿಪ್ರೋತ್ತಮಾ, ನೀನು ಪುರುಷೋತ್ತಮನ ಬಳಿಗೆ ಹೋಗು. ಅವನು ಪರಮ ವೈಷ್ಣವ. ಅವನನ್ನು ನೋಡಿದರೆ ಸಾಕು ನಿನ್ನ ಇಷ್ಟಸಿದ್ಧಿ ಆಗುವದು. ಬಕದ ಮರಣ, ಪೂರ್ವದಲ್ಲಿಯ ವಸ್ತ್ರಶೋಷಣ, ನಂತರದ ವಸ್ತ್ರಗಳ ಅಶೋಷಣ ಇವೆಲ್ಲದರ ಕಾರಣಗಳನ್ನು ಅವನು ಸರಿಯಾಗಿ ಬಲ್ಲನು. ಇದಲ್ಲದೇ ಇನ್ನೂ ನಿನ್ನ ಮನಸ್ಸಿನಲ್ಲಿ ಏನಾದರೂ ಇದ್ದರೆ ಅದನ್ನೂ ತಿಳಿಸಲು ಸಮರ್ಥನು ಆ ಪುರುಷೋತ್ತಮನೆಂಬ ವೈಷ್ಣವಾಗ್ರಣಿ.' ಅದ್ರೋಹಕನ ಈ ಮಾತು ಕೇಳಿ ನರೋತ್ತಮ ದ್ವಿಜನು ಪುರುಷೋತ್ತಮನೆಂಬ ವೈಷ್ಣವನ ಹತ್ತಿರಬಂದನು. ದ್ವಿಜರೂಪಿ ಭಗವಂತನೇ ಹಿಂದಿನಂತೆ ಇಲ್ಲಿಯೂ ಮಾರ್ಗದರ್ಶಕ. ಆ ವೈಷ್ಣವಾಗ್ರಣಿಯು ಸರ್ವ ಲಕ್ಷಣಗಳಿಂದ ಸಂಪನ್ನನಾಗಿದ್ದನು. ದೇದೀಪ್ಯಮಾನವಾದ ತೇಜಸ್ಸು. ಮುಖದಲ್ಲಿ ಬ್ರಹ್ಮವರ್ಚಸ್ಸು.

ಜ್ವಲಂತಮೂರ್ತಿ. ಶಾಂತ ಕಾಂತಿ ಅಡಿಯಿಂದ ಮುಡಿಯವರೆಗೂ ಧರ್ಮಾತ್ಮ ಶ್ರೀಹರಿಗೆ ಅತ್ಯಂತ ಪ್ರಿಯ. ಸರ್ವದಾ ಧ್ಯಾನಲೀನ, ಅವನನ್ನು ಕಂಡೇ ನರೋತ್ತಮನಿಗೆ ಭಕ್ತಿ ಉದ್ರೇಕವಾಯಿತು. ಬಾಗಿ ಬೇಡಿಕೊಂಡ, 'ಸ್ವಾಮಿ, ನಾನು ಬಹುದೂರದಿಂದ ಬಂದಿದ್ದೇನೆ. ನಡೆದದ್ದನ್ನೆಲ್ಲ ತಿಳಿಸಿರಿ. ಆದದ್ದನ್ನೆಲ್ಲ ಹೇಳಿರಿ.'

**ವೈಷ್ಣವ :-** ನರೋತ್ತಮ, ನೀನು ಭಾಗ್ಯವಂತ. ದಾನವ ವೈರಿಯಾದ ಶ್ರೀಹರಿಯು ನಿನಗೆ ಸುಪ್ರಸನ್ನ. ಭಗವಂತನಿಂದ ಅನುಗ್ರಹೀತನಾದ ನಿನ್ನನ್ನು ನೋಡಿ, ನನಗೂ ಅತೀವ ಹರ್ಷ. ನಿನಗೆ ಕಲ್ಯಾಣವಾಗಲಿ. ಇಂದು ಖಂಡಿತವಾಗಿಯೂ ಫಲಿಸುವದು ನಿನ್ನ ಮನೋರಥ. ನನ್ನ ಮನೆಯ ಒಳಗೆ ಬಾ. ನೋಡು ಈ ದೇವದೇವನ ಮಹಿಮೆ. ಅವನ ದರ್ಶನ ಮಾತ್ರದಿಂದ ನಿನ್ನ ಬಟ್ಟೆ, ಬಾನಿನಲ್ಲಿ ಒಣಗುವದು. ನಿನ್ನ ಬಾಳು ಶುಭಕರವಾಗುವದು.

**ನರೋತ್ತಮ :-** ಪೂಜ್ಯನೆ, ಎಲ್ಲಿರುವನು- ಆ ಭಗವಂತನು? ತೋರಿಸು ಆ ಸ್ವಾಮಿಯನ್ನು, ಬೀರು ನನ್ನ ಮೇಲೆ ದಯೆ.

**ವೈಷ್ಣವ :-** ಅಯ್ಯಾ, ತುಸು ಮುಂದೆ ಬಾ. ನಮ್ಮ ಮನೆಯ ಈ ದೇವರ ಕೋಣೆ ಪ್ರವೇಶಿಸು, ಕಣ್ಣು ತೆರೆದುನೋಡು - ಆ ಪರಮೇಶ್ವರನನ್ನು, ದರ್ಶನ ಮಾತ್ರದಿಂದಲೇ ಮುಕ್ತಿ - ಈ ಭವ ಬಂಧನದಿಂದ. ವೈಷ್ಣವನ ಈ ನಲ್ನುಡಿಯನ್ನು ಕೇಳಿ ಸಂತಸದುಂಬಿತು ನರೋತ್ತಮನ ಹೃದಯ ಮುಂದುವರಿದ, ಅವನ ಮನೆಯ ದೇವರ ಕೋಣೆಯಲ್ಲಿ ಕಾಲಿರಿಸಿದ. ಅಲ್ಲಿಯ ತಾವರೆಯ ತಲ್ಪದಲ್ಲಿ ತನ್ನ ಜೊತೆಗೆ ಈವರೆಗೆ ನಡೆದುಬಂದ ದ್ವಿಜನೇ ಭಗವದ್ರೂಪದಿಂದ ಕುಳಿತುಕೊಂಡಿದ್ದ. ವಿಷ್ಣುವಿನ ದಿವ್ಯ ಲಾಂಛನಗಳು ಹೊಳೆಯುತ್ತಲಿದ್ದವು. ಕಂಡಕೂಡಲೇ, ದಂಡ ಪ್ರಣಾಮ ಮಾಡಿ ಕೈ ಮುಗಿದು ಕೇಳಿ ಕೊಂಡ ನರೋತ್ತಮ. -

ಭಗವನ್, ಪ್ರಸನ್ನನಾಗು, ಇಷ್ಟು ಹೊತ್ತಿನವರೆಗೆ ನೀನು ನನ್ನೊಡನೆಯೇ ಇದ್ದಿ. ಆದರೂ ಅಜ್ಞಾನಿಯಾದ ನಾನು ನಿನ್ನನ್ನು ಅರಿಯಲಿಲ್ಲ. ಇಲ್ಲಿಯೂ ಅಲ್ಲಿಯೂ ನಾನು ನಿನ್ನ ಚರಣ ಕಿಂಕರಃ ನೀನು ಮಾಡಿದ ಅನುಗ್ರಹ ಈಗ ನನಗೆ ತಿಳಿಯಿತು. ನಿನ್ನ ದಿವ್ಯವಾವ ರೂಪವನ್ನು ನೋಡಲು ಬಯಸುತ್ತೇನೆ. ನನ್ನ ಮೇಲೆ ಕರುಣೆ ತೋರಿಸು.

**ವಿಷ್ಣು :-** ವಿಪ್ರವರ್ಯಾ ನನಗೆ ನಿಜವಾದ ಪ್ರೀತಿಯಿದೆ ನಿನ್ನ ಮೇಲೆ. ಅದಕ್ಕಾಗಿಯೇ ನಿನಗೆ ಅನೇಕ ಪುಣ್ಯವಂತರ ದರ್ಶನಮಾಡಿಸಿದೆ. ಅಂಥವರ ದರ್ಶನದಿಂದಲೇ ಸ್ವರ್ಗ! ಸ್ಪರ್ಶದಿಂದಲೇ ಪುಣ್ಯ! ಹೊಗಳಿದರೂ ಸದ್ಗತಿ! ಮಾತನಾಡಿದರೂ ಮೋಕ್ಷಮಾರ್ಗದ ಬಾಗಿಲು ತೆರೆದಂತೆ! ಅಂತಹವರ ನಿತ್ಯ ಸಂಸರ್ಗ ಎಲ್ಲ ಪಾಪಗಳ ಲೋಪಕ್ಕೆ ಕಾರಣ.

ನೀನು ನನ್ನ ಪರಮಭಕ್ತ. ಆ ಬಕಪಕ್ಷಿಗೆ ಶಾಪಕೊಟ್ಟೆ; ಸಂಹರಿಸಿದೆ. ಅದು ಅದಕ್ಕೆ ಉಪಕಾರವೇ ಆಯಿತು. ಬಕಯೋನಿಯಿಂದ ಅದಕ್ಕೆ ಮುಕ್ತಿ ದೊರೆಯಿತು. ಮುಂದೆ ಅದೇ ಅಂತರಿಕ್ಷದಲ್ಲಿ ನಿಂತು ಮಾತನಾಡಿ ನಿನಗೆ ಮಾರ್ಗದರ್ಶನ ಮಾಡಿತು. ಮೂಕ ಚಾಂಡಾಲನ ಮನೆಗೆ ಹೋಗು ಎಂದು ಅಪ್ಪಣೆಯನ್ನು ಆ ಬಕಪಕ್ಷಿಯೇ ನೀಡಿತು. ಆದರಿಂದ ನಿನಗೆ ಅಲ್ಲಿ ನಡೆಯುವ ಪೂಜೆಯನ್ನು ನೋಡುವ ಹಾಗೂ ಅವರೊಡನೆ ಮಾತನಾಡುವ ಸಂದರ್ಭ ಬಂದಿತು. ಅದೇ ಕಾರಣದಿಂದ ನನಗೂ ನಿನಗೂ ಸಂಪರ್ಕ ಉಂಟಾಯಿತು.

ಕೊನೆಗೆ ನಾನು ಇದ್ದಲ್ಲಿಗೆ ಬಂದು ನನ್ನ ದರ್ಶನ ಪಡೆದೆ; ನನ್ನ ಸಾಕ್ಷಾತ್ ದರ್ಶನ ಸುಲಭ ಸಾಧ್ಯವಲ್ಲ. ಪಾಪ ರಾಶಿ ಸವೆಸಿ, ಸಾಧನ ಸಂಪೂರ್ತಿಯಾದ ಬಳಿಕ ಲಕ್ಷಕೋಟಿ ಜನ್ಮಗಳ ಅನಂತರ ಪುಣ್ಯ ಪರಿಪಾಕದಿಂದಲೇ ನನ್ನ ದರ್ಶನ ಸಾಧ್ಯ. ಈಗ ನೀನು ನನ್ನನ್ನು ಕಂಡದ್ದು, ಕೇವಲ ನನ್ನ ಅನುಗ್ರಹದಿಂದಲೇ. ಈಗ ನೀನು ಬೇಕಾದ ವರ ಬೇಡಿಕೊ. ನಿನ್ನ ಮನಸ್ಸಿನಲ್ಲಿದ್ದದ್ದನ್ನು ಕೊಡುತ್ತೇನೆ.

**ನರೋತ್ತಮ :-** ಸ್ವಾಮಿ, ನನ್ನಮನಸ್ಸು ಯಾವಾಗಲೂ ನಿನ್ನಲ್ಲಿ ನಿಲ್ಲಲಿ. ನಿನ್ನ ಹೊರತೂ ನನಗೆ ಬೇರೆ ಯಾವದೂ ರುಚಿಸದಿರಲಿ.

**ಭಗವಂತ:-** ನಿನಗೆ ಈ ಬುದ್ಧಿಯು ಉಂಟಾದದ್ದು ಒಳ್ಳೆಯದೆ. ಆದರೆ ನೀನು ನಿನ್ನ ಮುಖ್ಯ ಕರ್ತವ್ಯವನ್ನೇ ಮರೆತಿರುವಿ. ಮಾತಾಪಿತರೆಂದರೆ ಪರಮಪೂಜ್ಯ ವಸ್ತು, ಮುಪ್ಪಿನ ಕಾಲದಲ್ಲಿ ನೀನು ಅವರ ಸೇವೆಮಾಡಲಿಲ್ಲ. ಹಾಗೆಯೇ ಹೊರಟೆ ತಪಸ್ಸಿಗೆ. ಮುಳುಗಿದೆ - ತೀರ್ಥಗಳಲ್ಲಿ; ಚಲಿಸಿದೆ ಕ್ಷೇತ್ರಗಳಿಗೆ. ಅದೆಲ್ಲವೂ ವ್ಯರ್ಥ, ಮೊದಲು ಮನೆಗೆ ಹೋಗು. ಪೂಜಿಸು ಮಾತಾಪಿತೃಗಳನ್ನು, ಅನಂತರ ಬಾ ನನ್ನೆಡೆಗೆ.

ಮುಪ್ಪಿನ ಮುದುಕರಾದ ಆ ನಿನ್ನ ತಾಯಿತಂದೆಗಳ ನಿಟ್ಟುಸುರಿನಿಂದ ನಿನ್ನ ತಪಸ್ಸು ಹಾರಿಹೋಗುತ್ತಲಿದೆ, ಅವರ ಸಿಟ್ಟಿನಿಂದ ಕರಗಿಹೋಗುತ್ತಲಿದೆ ನಿನ್ನ ಪುಣ್ಯ ರಾಶಿ. ಅವರು ನೊಂದುಕೊಂಡದ್ದರಿಂದ ನಿತ್ಯವೂ ಸೋರುತ್ತಲಿದೆ ನಿನ್ನ ತಪದ ಅಕ್ಷಯ ನಿಧಿ. ಆದುದರಿಂದ ಮೊದಲು ಪೂಜಿಸು ಆ ನಿನ್ನ ಮಾತಾಪಿತೃಗಳನ್ನು. ತಂದೆತಾಯಿಗಳ ಕೋಪಪಾತ್ರನಾದ ಮಗ ನೇರವಾಗಿ ನರಕಕ್ಕೆ ಹೋಗುವನು. ಅವನನ್ನು ಸರ್ವಥಾ ರಕ್ಷಿಸಲಾರೆ ನಾನು. ಕಾಯಲಾರನು ಶಂಕರ, ಉಳಿಸಲಾರನು ಬ್ರಹ್ಮ ಆದುದರಿಂದ ನೀನು ಮೊದಲು ಪ್ರಸನ್ನಗೊಳಿಸು ನಿನ್ನ ತಾಯಿತಂದೆಗಳನ್ನು. ಅವರು ಪ್ರಸನ್ನರಾದರೆ ನಾನೂ ಪ್ರಸನ್ನನಾಗುತ್ತೇನೆ. ಕೊನೆಗೆ ನನ್ನ ಪಾದದಲ್ಲಿ ನಿನ್ನನ್ನು ಸೇರಿಸಿಕೊಳ್ಳುತ್ತೇನೆ.

**ನರೋತ್ತಮ :-** ಭಗವನ್, ನೀನು ನಿಜವಾಗಿಯೂ ನನ್ನ ಮೇಲೆ ಪ್ರಸನ್ನನಾಗಿದ್ದರೆ ನಿನ್ನ ನಿಜರೂಪವನ್ನು ನನಗೆ ದಯವಿಟ್ಟು ತೋರಿಸು. ಭಕ್ತವತ್ಸಲನಲ್ಲವೆ ನಮ್ಮ ಭಗವಂತ! ಅವನ ಬೇಡಿಕೆಗೆ 'ಅಸ್ತು' ಎಂದ- ಆ ಕ್ಷಣದಲ್ಲಿಯೇ ಪರಮಾತ್ಮ ತನ್ನ ದಿವ್ಯ ರೂಪವನ್ನು ಅವನ ಚರ್ಮ ಚಕ್ಷುಸ್ಸಿಗೆ ಗೋಚರಗೊಳಿಸಿದ. ಶಂಖ, ಚಕ್ರ, ಗದಾ, ಪದ್ಮಗಳು ನಾಲ್ಕು ಕೈಗಳಲ್ಲಿ! ತೇಜೋ ಮೂರ್ತಿ, ಸರ್ವಲೋಕೈಕನಾಥ, ಜಗತ್‌ಸೃಷ್ಟಾರ, ದೇವೋತ್ತಮ, ಪುರುಷೋತ್ತಮ - ಕಣ್ಣೆದುರು ಕಂಗೊಳಿಸುತ್ತಲಿದ್ದಾನೆ. ಕಂಡು ದೀರ್ಘದಂಡ ಪ್ರಣಾಮ ಗೈದ ನರೋತ್ತಮ.

ಸ್ವಾಮಿನ್, ಇಂದು ಸಫಲವಾಯಿತು ನನ್ನ ಜನ್ಮ. ಸಾರ್ಥಕವಾದವು ಎರಡು ಕಣ್ಣುಗಳು. ನಿನ್ನ ಪಾದ ಸ್ಪರ್ಶಮಾಡಿ ಧನ್ಯವಾದವು ಈ ನನ್ನ ಎರಡು ಕೈಗಳು. ಈಗಾಗಲೇ ಬ್ರಹ್ಮಲೋಕವನ್ನು ಸೇರಿದರು ನನ್ನ ಹಿಂದಿನ ಪಿತೃಗಳು. ಇಂದು ನನ್ನ ಆನಂದದ ಸಿಂಧುವೇ ತುಂಬಿ ತುಳುಕಿದಂತಾಗಿದೆ. ನನ್ನ ಬಯಕೆಗಳೆಲ್ಲವೂ ಈಡೇರಿದವು. ನಾನು ಧನ್ಯ! ಧನ್ಯ! ನಿನ್ನ ಅಡಿದಾವರೆಗಳಿಗೆ ಅನಂತಾನಂತ ಪ್ರಣಾಮ. ಆದರೆ ಭಗವಂತ, ನನಗೆ ಇನ್ನೂ ಆಶ್ಚರ್ಯ. ಆ ಮೂಕ ಚಾಂಡಾಲ ಮೊದಲಾದವರು ದೇಶಾಂತರದಲ್ಲಿ ನಡೆದ ನನ್ನ ಸಂಗತಿಯನ್ನು ಅರಿತದ್ದು ಹೇಗೆ? ಅವನ ಮನೆಯಲ್ಲಿ ನಿರಂತರ ನೆಲೆಸಿದ ಆ ದ್ವಿಜನಾರು?

ಪತಿವ್ರತೆಯ ಮನೆಯಲ್ಲಿ, ತುಲಾಧಾರನ ಮೇಲೆ, ಅದ್ರೋಹಕ ಹಾಗೂ ವೈಷ್ಣವನ ಮಂದಿರಗಳಲ್ಲಿ ಕಂಡುಬರುವ ಭಗವಂತನ ಅನುಗ್ರಹದ ರಹಸ್ಯವೇನು?

**ಭಗವಂತ :-** ಭಕ್ತ ದ್ವಿಜನೆ, ವಿಷಯ ಸ್ಪಷ್ಟವಿದೆ. ಮೂಕ ಚಾಂಡಾಲನ ಪಿತೃಭಕ್ತಿ, ಪತಿವ್ರತೆಯ ಪತಿ ಶುಶ್ರೂಷೆ, ತುಲಾಧಾರನ ಸತ್ಯನಿಷ್ಠೆ, ಸಮದೃಷ್ಟಿ, ಅದ್ರೋಹಕನ ಅಕಾಮ ವೃತ್ತಿ, ಸಂಯಮ, ವೈಷ್ಣವನ ಹರಿಸೇವೆ ಮುಂತಾದ ಗುಣಗಳು ನನ್ನನ್ನು ಅವರ ಮನೆಗಳಲ್ಲಿ ಕಟ್ಟಿಹಾಕಿವೆ. ಇವರೆಲ್ಲರ ಈ ಸದ್ಗುಣಗಳಿಂದ ಮುಗ್ಧನಾಗಿದ್ದೇನೆ. ಆದುದರಿಂದಲೇ ಲಕ್ಷ್ಮೀ, ಸರಸ್ವತಿಯರನ್ನೂ ನನ್ನೊಡನೆ ಕರೆದುಕೊಂಡೇ ಇವರ ಮನೆಯಲ್ಲಿ ನೆಲೆಸಿದ್ದೇನೆ.

**ನರೋತ್ತಮ :-** ಮಹಾ ಪಾತಕಿಗಳು ಹಾಗೂ ಚಾಂಡಾಲರ ಸಂಸರ್ಗದಿಂದ ಮನುಷ್ಯರು ಅತಿ ಪಾತಕಿಗಳು ಎನಿಸುತ್ತಾರೆ ಎಂದು ಧರ್ಮಶಾಸ್ತ್ರಗಳಲ್ಲಿ ಹೇಳಿದೆ. ಇದನ್ನು ಪುರಾಣಾಗಮಗಳು ಅನುಮೋದಿಸಿವೆ, ಅಂತಹ ಪಾಪಿಗಳ ಮನೆಯಲ್ಲಿ ನೀನು ನೆಲೆಸಿರುವಿ. ಇದು ಹೇಗೆ?

ಭಗವಂತ:- **ಕಲ್ಯಾಣಾನಾಂ ಚ ಸರ್ವೇಷಾಂ ಕರ್ತಾಮೂಕೋ ಜಗತ್ತ್ರಯೇ ।**
**ವ್ರತಸ್ಥಮಪಿ ಚಾಂಡಾಲಂ ತಂ ದೇವಾ ಬ್ರಾಹ್ಮಣಂ ವಿದುಃ ॥**

ಮೂರು ಲೋಕಗಳಲ್ಲಿಯೂ ಶುಭ ಕೆಲಸಗಳನ್ನು ಆ ಮೂಕನು ಮಾಡಿರುವನು. ಚಾಂಡಾಲನು ವ್ರತಾನುಷ್ಠಾನಗೈಯುತ್ತ ತನ್ನ ಕೆಲಸದಲ್ಲಿ ಸರಿಯಾಗಿದ್ದರೆ ಅವನನ್ನು ದ್ವಿಜನೆಂದು ತಿಳಿಯುತ್ತಾರೆ.

**ಮೂಕಸ್ಯ ಸದೃಶೋ ನಾಸ್ತಿ ಲೋಕೇಷು ಪುಣ್ಯಕರ್ಮಸು ।**
**ಪಿತ್ರೋರ್ಭಕ್ತಿಪರೋ ನಿತ್ಯಂ ಜಿತಂ ತೇನ ಜಗತ್ತ್ರಯಂ ॥**

ಪುಣ್ಯಕರ್ಮದಲ್ಲಿ ಮೂಕನಿಗೆ ಸಮನಾದವರು ಮೂರು ಲೋಕದಲ್ಲಿ ಯಾರೂ ಇಲ್ಲ. ಅವರು ಪಿತೃಭಕ್ತಿಪರನು, ಜಿತೇಂದ್ರಿಯನು.

**ತಯೋರ್ಭಕ್ತ್ಯಾ ತ್ವಹಂ ತುಷ್ಟಃ ಸರ್ವದೇವಗಣೈಃ ಸಹ ।**
**ತಿಷ್ಠಾಮಿ ದ್ವಿಜರೂಪೇಣ ತಸ್ಯ ಗೇಹೋದರೇ ಚ ಖೇ ॥**

ಅವನು ಪಿತೃಗಳಲ್ಲಿ ಇಟ್ಟಿರುವ ಭಕ್ತಿಗೋಸ್ಕರ ನಾನೂ ದೇವತೆಗಳೂ ತುಷ್ಟರಾಗಿದ್ದೇವೆ! ಆದ್ದರಿಂದ ಅವನ ಮನೆಯೊಳಗೆ ಮೇಲು ಭಾಗದಲ್ಲಿ ದ್ವಿಜರೂಪದಿಂದ ಇದ್ದೇನೆ.

**ತಥಾ ಪತಿವ್ರತಾಗೇಹೇ ತುಲಾಧಾರಸ್ಯ ಮಂದಿರೇ ।**
**ಅದ್ರೋಹಕಸ್ಯ ಭವನೇ ವೈಷ್ಣವಸ್ಯ ಚ ವೇಶ್ಮನಿ ॥**
**ಸದಾ ತಿಷ್ಠಾಮಿ ಸರ್ವಜ್ಞೋಮುಹೂರ್ತಂ ನ ತ್ಯಜಾಮ್ಯಹಂ ।**
**ತೇ ಚ ಪಶ್ಯಂತಿ ಮಾಂ ನಿತ್ಯಂ ನ ಚಾನ್ಯೇ ಪಾಪಕೃಜ್ಜನಾಃ ॥**

ಪತಿವ್ರತೆಯ ಮನೆ, ತುಲಾಧಾರನ ಮನೆ, ಅದ್ರೋಹಕನ ಮನೆ, ವೈಷ್ಣವನ ಮನೆಗಳಲ್ಲಿ ಯಾವಾಗಲೂ ಇರುತ್ತೇನೆ. ಒಂದು ಕ್ಷಣವೂ ಬಿಡಲಾರೆ. ಪುಣ್ಯಮಾಡಿದವರ ಹೊರತು ಪಾಪ ಮಾಡಿದವರು ನನ್ನನ್ನು ಕಾಣಲಾರರು.

**ಸುಪುಣ್ಯಾಚ್ಚ ತ್ವಯಾ ದೃಷ್ಟೋ ಮಮಾನುಗ್ರಹಕಾರಣಾತ್ ।**
**ಪಿತ್ರೋರ್ಭಕ್ತಿಪರಃ ಶುದ್ಧಶ್ಚಾಂಡಾಲೋ ದೇವತಾಂಗತಃ ॥**

ಪಿತೃಭಕ್ತಿಪರನಾಗಿರುವ ಆ ಚಾಂಡಾಲನು ದೇವತೆಯಾಗಿದ್ದಾನೆ. ನನ್ನ ಅನುಗ್ರಹದಿಂದಲೂ, ಪುಣ್ಯ ವಿಶೇಷದಿಂದಲೂನೀನು ಅವನನ್ನು ನೋಡಿದೆ.

**ತಸ್ಮಾತ್ತೇನ ಸಹ ಪ್ರೀತ್ಯಾ ತಿಷ್ಠಾಮಿ ತಸ್ಯ ಮಂದಿರೇ ।**
**ಪುನಃ ಪುನಃ ಕಥಾಲಾಪಂ ಕರೋಮಿ ದ್ವಿಜನಂದನ ॥**

ಆದ್ದರಿಂದಲೇ ಅವನ ಮನೆಯಲ್ಲಿ ಅಲ್ಲಿದ್ದುಕೊಂಡು ಅವನೊಡನೆ ಮಾತನಾಡುತ್ತಿದ್ದೇನೆ. ಇವರೆಲ್ಲರಿಗೂ ಇಂತಹ ನನ್ನ ಅನುಗ್ರಹ ಮತ್ತು ಯೋಗ್ಯತೆ ಬರಬೇಕಾದರೆ ಪುರಾಣ ಪ್ರಸಿದ್ಧವಾದ ಪಂಚಶೀಲಗಳೇ ಕಾರಣ. ಇವುಗಳನ್ನೇ ಪ್ರಾಚೀನರು 'ಪಂಚಾಖ್ಯಾನ' ಎಂದು ಕರೆದಿದ್ದಾರೆ. 'ಪಂಚಮಹಾಯಜ್ಞ' ಎಂದೂ ಈ ಪಂಚಶೀಲಗಳು ಪ್ರಖ್ಯಾತವಾಗಿವೆ.

**ಪಿತ್ರೋರರ್ಚಾಽಥ ಪತ್ನ್ಯಶ್ಚ ಸಮಃ ಸರ್ವಜನೇಷು ಚ ।**
**ಮಿತ್ರಾದ್ರೋಹೋ ವಿಷ್ಣು ಭಕ್ತಿರೇತೇ ಪಂಚ ಮಹಾಮಖಾಃ ॥**

ತಾಯಿ ತಂದೆಗಳ ಸೇವೆ, ಪತಿಯ ಪೂಜೆ, ಸರ್ವ ಜನರಲ್ಲಿ ಸಮದೃಷ್ಟಿ, ಮಿತ್ರರಿಗೆ ಯಾರಿಗೂ ದ್ರೋಹ ಬಗೆಯದಿರುವದು ಹಾಗೂ ವಿಷ್ಣು ಭಕ್ತಿ - ಇವೇ ಪಂಚಮಹಾ ಯಜ್ಞಗಳು ಎಂದು ಎನಿಸುತ್ತವೆ. ಇವುಗಳಲ್ಲಿ ತಾಯಿ ತಂದೆಗಳ ಸೇವೆ ಎಲ್ಲ ಜಾತಿ ವರ್ಗದವರಿಗೂ ಅವಶ್ಯ ಕರ್ತವ್ಯವಾಗಿದೆ.

**'ಪಿತ್ರೋರರ್ಚಾ ಕೃತಾ ಯೇನ ಸ ಏವ ಪುರುಷೋತ್ತಮಃ ।**

ತಾಯಿ ತಂದೆಗಳ ಸೇವೆ ಮಾಡಿದ ಮನುಷ್ಯನು ಪುರುಷೋತ್ತಮ ಎನಿಸುತ್ತಾನೆ. ಪಿತೃಗಳ ಆಜ್ಞೆ ನೆರವೇರಿಸಿದರೆ ಗುರುವಿನ ಆಜ್ಞೆ ಹಾಗೂ ಹರಿಯ ಆಜ್ಞೆ ಪಾಲಿಸಿದ ಫಲ ಬರುತ್ತದೆ. ಅಂತಹ ಪಿತೃಭಕ್ತನ ಹೃದಯದಲ್ಲಿ ನಾನಿರುತ್ತೇನೆ. ನನ್ನ ಹೃದಯದಲ್ಲಿ ಅವನಿರುತ್ತಾನೆ. ಮೂಕ ಚಾಂಡಾಲನಿಗೆ ಅವನು ಚಾಂಡಾಲ ಜಾತಿಯವನಾದರೂ ಪಿತೃ ಸೇವೆಯಿಂದಲೇ ಮೂರುಲೋಕದ ಸಮಾಚಾರವೆಲ್ಲವೂ ಕುಳಿತಲ್ಲಿಯೇ ತಿಳಿಯುತ್ತಿತ್ತು. ಇದರಲ್ಲಿ ನಿನಗೇಕೆ ಅಷ್ಟು ಆಶ್ಚರ್ಯವಾಯಿತು?

**ನರೋತ್ತಮ :-** ಮೋಹದಿಂದಾಗಲಿ, ಅಜ್ಞಾನದಿಂದಾಗಲಿ ತಾಯಿ ತಂದೆಗಳ ಸೇವೆಯನ್ನು ಮಾಡಲು ಆಗದಿದ್ದರೆ ಏನು ಮಾಡಬೇಕು?

**ಭಗವಂತ :-** ಒಂದು ವರ್ಷ ಅಥವಾ ಒಂದು ತಿಂಗಳ ಅಥವಾ ಹದಿನೈದು ದಿನ ಕೊನೆಗೆ ಒಂದು ದಿನವಾದರೂ ತಾಯಿ ತಂದೆಗಳ ಸೇವೆ ಭಕ್ತಿಯಿಂದ ಮಾಡಬೇಕು. ಅವನು ಖಂಡಿತವಾಗಿಯೂ ನನ್ನ ಸನ್ನಿಧಿಗೆ ಬರುವನು. ತಾಯಿ ತಂದೆಗಳ ಮನ ನೋಯಿಸಿದವರಿಗೆ ಎಂದೂ ತಪ್ಪಿದ್ದಲ್ಲ ನರಕ.

ಇರುವ ವರೆಗೆ ಅವರ ಸೇವೆ, ಮರಣ ಹೊಂದಿದ ಬಳಿಕ ಅವರ ಶ್ರಾದ್ಧ. ಮತ್ತು ಅವರು ಹೇಳಿದ ಮಾತು ನಡೆಸುವದು, ಈ ಮೂರನ್ನು ಮಾಡುವದರಿಂದ ಮಗ 'ಪುತ್ರ' ಎನಿಸುತ್ತಾನೆ. ತಂದೆಯ ಹೆಸರಿನಿಂದ ಬಸವನನ್ನು ಬಿಡಬೇಕು ಎಂದು ಶಾಸ್ತ್ರದಲ್ಲಿ ಹೇಳಿದೆ. ಶ್ರಾದ್ಧ ಕಾಲದಲ್ಲಿ ಅನ್ನ, ವಸ್ತ್ರ, ಹಸುವಿನ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ

ಮುಂತಾದ ವಸ್ತುಗಳನ್ನು ಶುದ್ಧಗೊಳಿಸಿ ಭಕ್ತಿಯಿಂದ ದಾನ ಕೊಡಬೇಕು. ಇಗರಂತೆ 'ವೃಷೋತ್ಸರ್ಗ'ದಿಂದ ಎಂದರೆ ಬಸವನನ್ನು ಬಿಡುವದರಿಂದ ಸ್ವರ್ಗ ಪ್ರಾಪ್ತವಾಗುತ್ತದೆ. ವೇದಶಾಸ್ತ್ರಗಳ ಜ್ಞಾನವುಳ್ಳ ರಾಗದ್ವೇಷ ರಹಿತನಾದ ಶಾಂತ ಸ್ವಭಾವದ ಸೌಮ್ಯ ಮೂರ್ತಿಗೆ ಶ್ರಾದ್ಧದಲ್ಲಿ ಭೋಜನ ಮಾಡಿಸಿದರೆ, 'ವೃಷೋತ್ಸರ್ಗದ' ಫಲವು ಲಭಿಸುತ್ತದೆ.

ದೇವರು ತನಗೆ ಕೊಟ್ಟ ವಿತ್ತದಲ್ಲಿ ವಂಚನೆ ಮಾಡದೇ ಪಿತೃಗಳ ಶ್ರಾದ್ಧ ಮಾಡಬೇಕು. ತನ್ನ ಸರ್ವಸ್ವವನ್ನು ವಿನಿಯೋಗಿಸಿ ಭಕ್ತಿಯಿಂದ ಮಾಡಿದ ಶ್ರಾದ್ಧದಿಂದ ಮನುಷ್ಯನಿಗೆ ಹೆಚ್ಚಿನ ಪುಣ್ಯ ಲಭಿಸುವದಲ್ಲದೆ ಹಿಂದಿನ ಜನ್ಮದ ಸ್ಮರಣೆಯೂ ಬರುತ್ತದೆ. ಶ್ರಾದ್ಧಕ್ಕಿಂತ ಹೆಚ್ಚಿನ ದೊಡ್ಡ ಯಜ್ಞವೇ ಬೇರೊಂದಿಲ್ಲ. ಗಂಗಾ ತೀರ, ಗಯಾ ಕ್ಷೇತ್ರ, ಕಾಶಿ, ಪ್ರಯಾಗ, ಪುಷ್ಕರ, ಗಂಗಾ ಸಾಗರ ಸಂಗಮ ಮುಂತಾದ ಪುಣ್ಯ ತೀರ್ಥ ಕ್ಷೇತ್ರಗಳಲ್ಲಿ ಮಾಡಿದ ಶ್ರಾದ್ಧಕ್ಕೆ ಅಕ್ಷಯ ಫಲ. ಪಿತೃಗಳಿಗೆ ಮೋಕ್ಷ ಫಲ. ಶ್ರಾದ್ಧ ಮಾಡುವವನು ಮುನ್ನಾ ದಿನ ಹಾಗೂ ಶ್ರಾದ್ಧದ ದಿನ ಬ್ರಹ್ಮಚರ್ಯದಿಂದ ಇರಬೇಕು. ಸ್ತ್ರೀಸಂಗ ಮಾಡಬಾರದು. ಶ್ರಾದ್ಧವನ್ನು ಕುತುಪ ಕಾಲದಲ್ಲಿ ಮಾಡಬೇಕು. ಕುತುಪಕಾಲ, ದೌಹಿತ್ರ ಅಂದರೆ ಮಗಳ ಮಗ, ಹಾಗೂ ಕರಿ ಎಳ್ಳು- ಈ ಮೂರು ಅತ್ಯಗತ್ಯ ಹಾಗೂ ಪವಿತ್ರ ಶ್ರಾದ್ಧದಲ್ಲಿ.

**'ಶ್ರಾದ್ಧೇ ತ್ರೀಣಿ ಪವಿತ್ರಾಣಿ ದೌಹಿತ್ರಂ ಕುತುಪಃ ತಿಲಃ ।**

ಶ್ರಾದ್ಧದಲ್ಲಿ ಮೂರನ್ನು ಅವಶ್ಯವಾಗಿ ಪಾಲಿಸಬೇಕು.

**'ತ್ರೀಣಿ ಚಾತ್ರ ಪ್ರಶಂಸಂತಿ ಸತ್ಯಮಕ್ರೋಧಮತ್ವರಾ ।'**

ಸತ್ಯವನ್ನು ಮಾತನಾಡುವದು, ಸಿಟ್ಟಿಗೇಳದಿರುವದು, ಮತ್ತು ಕುತುಪಕಾಲ ಈ ಮೂರನ್ನು ಸಾಧಿಸಬೇಕು. ಅವಸರ ಮಾಡಿ ಕುತುಪಕಾಲ ಬಾರದೇ ಶ್ರಾದ್ಧ ಮಾಡಬಾರದು. ಶ್ರಾದ್ಧದಲ್ಲಿ ಐದನ್ನು ವರ್ಜಿಸಬೇಕು.

**ಸಾಯಂ ಸಂಧ್ಯಾಂ ಪರಾನ್ನಂ ಚ ಪುನರ್ಭೋಜನ ಮೈಥುನೇ ।**
**ದಾನಂ ಪ್ರತಿಗ್ರಹಂ ಚೈವ ಶ್ರಾದ್ಧಂ ಕೃತ್ವಾ ವಿವರ್ಜಯೇತ್ ॥**

ಸಂಜೆ ಸಂಧ್ಯಾವಂದನ, ಪರಾನ್ನ, ಎರಡನೇ ಊಟ, ಸ್ತ್ರೀಸಂಗ, ಮನೆಯಲ್ಲಿಯ ವಸ್ತುವನ್ನು ಹೊರಗೆ ಕೊಡುವದು, ದಾನ ತೆಗೆದುಕೊಳ್ಳುವದು ಇವಿಷ್ಟನ್ನು ಶ್ರಾದ್ಧಮಾಡಿದ ಮನುಷ್ಯರು ವರ್ಜಿಸಬೇಕು. ಏನೇ ಆಗಲಿ ಶ್ರಾದ್ಧವನ್ನು ಬಿಡತಕ್ಕದ್ದಲ್ಲ. ನ್ಯಾಯದಿಂದಲೋ ಅನ್ಯಾಯದಿಂದಲೋ ಪದಾರ್ಥಗಳನ್ನು ಸಂಗ್ರಹಿಸಿ ಶ್ರಾದ್ಧ ಕಾರ್ಯವನ್ನು ಮಾಡಬೇಕು.

**'ಅಕರ್ತವ್ಯಂ ಶತಂ ಕೃತ್ವಾ ಶ್ರಾದ್ಧಂ ಕುರ್ಯಾದ್ ವಿಚಕ್ಷಣಃ ।'**

ಈ ವಿಷಯದಲ್ಲಿ ಒಂದು ಹಿಂದಿನ ಘಟನೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ವಶಿಷ್ಠ ಋಷಿಗಳಿಗೆ ಏಳುಜನ ಶಿಷ್ಯರಿದ್ದರು. ತಂದೆಯ ಶ್ರಾದ್ಧಕಾಲವು ಪ್ರಾಪ್ತವಾಯಿತು. ಅವರು ಗುರುಗಳ ಬಳಿಗೆ ಹೋದರು. 'ತಮ್ಮ ಈ ಹೋಮದ ಹಸುವನ್ನು ನಮಗೆ ಕೆಲವು ಕಾಲ ದಯಮಾಡಿ ಕೊಡಿರಿ' ಎಂದು ಬೇಡಿ, ಮನೆಗೆ ತೆಗೆದುಕೊಂಡು ಹೋದರು.

ಅಲ್ಲಿ ಅದನ್ನು ಕೊಂದು, ಅದರ ಮಾಂಸದಿಂದ ಅಡಿಗೆ ಮಾಡಿ ಶ್ರಾದ್ಧ ದ್ವಿಜರಿಗೆ ಬಡಿಸಿ, ಉಣಿಸಿ, ಶ್ರಾದ್ಧ ಕಾರ್ಯವನ್ನು ಸಾಂಗಗೊಳಿಸಿದರು. ಆ ಪಿತೃಶೇಷವನ್ನು ಆನಂತರ

ತಾವೂ ಉಂಡರು. ಮರುದಿನ ಕರುವನ್ನು ಮಾತ್ರ ವಶಿಷ್ಠರಿಗೆ ಒಪ್ಪಿಸಿ, 'ಹಸುವನ್ನು ನಿನ್ನೆ ಹುಲಿ ಹೊಡೆದು ತಿಂದಿತು' ಎಂದು ಸುಳ್ಳು ಹೇಳಿದರು.

ವಶಿಷ್ಠರೇನು ಸಾಮಾನ್ಯರೇ? ವಶಿಷ್ಠರಿಗೆ ತಪೋಬಲದಿಂದ ತಿಳಿಯಿತು ಅವರ ಕುಕೃತ್ಯ. ಸಿಟ್ಟಾಗಿ ಶಾಪ ಕೊಟ್ಟರು - 'ನೀವೆಲ್ಲರೂ ಚಾಂಡಾಲರಾಗಿರಿ' ಎಂದು. ನಡುಗತೊಡಗಿದರು ಆ ಎಲ್ಲ ಶಿಷ್ಯರು. ಕೈ ಮುಗಿದು ಕೇಳಿಕೊಂಡರು ತಮ್ಮ ಗುರುಗಳನ್ನು 'ಗುರುಗಳೆ,' ಅಕರ್ತವ್ಯಂ ಶತಂ ಕೃತ್ವಾ ಶ್ರಾದ್ಧಂ ಕುರ್ಯಾತ್' ಎಂದು ಶಾಸ್ತ್ರದಲ್ಲಿ ಹೇಳಿಲ್ಲವೆ?' ನಾವು ಗೋಹತ್ಯ ಮಾಡಿದ್ದು, ಶ್ರಾದ್ಧಕ್ಕೆ ಗೋಮಾಂಸ ಬಳಿಸಿದ್ದು ತಪ್ಪಾಗಿರಬಹುದು. ಆದರೆ ಏನಾದರೂ ಶ್ರಾದ್ಧವನ್ನು ಬಿಡಬಾರದು ಎಂಬ ಶಾಸ್ತ್ರವಚನವನ್ನು ಮಾತ್ರ ನಾವು ಉಲ್ಲಂಘಿಸಿಲ್ಲ. ನಮ್ಮನ್ನು ಮನ್ನಿಸಬೇಕು' ಎಂದು ಬೇಡಿಕೊಂಡರು.

**ವಶಿಷ್ಠ :-** ನೀವು ಶ್ರಾದ್ಧವನ್ನು ಮಾಡಿದ್ದು ಮಹಾಪುಣ್ಯಕರ್ಮ. ಅದರಲ್ಲಿ ಗೋಹತ್ಯಾ ಮತ್ತು ಮಾಂಸ ಭಕ್ಷಣ ಮಾಡಿದ್ದು ಮಹಾ ಪಾಪ. ಪಾಪದ ಫಲವಾಗಿ ನಿಮಗೆ ಚಾಂಡಾಲ. ಜನ್ಮ ತಪ್ಪಿದ್ದಲ್ಲ. ಆದರೆ ಶ್ರದ್ಧೆಯಿಂದ (ಭಕ್ತಿಯಿಂದ) ಶ್ರಾದ್ಧ ಮಾಡಿದ ಫಲವಾಗಿ ನೀವು ಮುಂದೆ ಚಾಂಡಾಲರಾಗಿ ಹುಟ್ಟಿದರೂ ಜಾತಿಯ ಸ್ಮರಣೆ ತಪ್ಪುವದಿಲ್ಲ. ವೇದಶಾಸ್ತ್ರ ಮರೆಯುವದಿಲ್ಲ. ಇಷ್ಟೇ ಅಲ್ಲ, ಆ ಪಾಪ ಜನ್ಮದಿಂದ, ಕ್ರಮದಿಂದ ನೀವು ಪಾರಾಗಿ ಪರಿಶುದ್ಧರಾಗುತ್ತ ಹೋಗಿ ಕೊನೆಗೆ ಮೋಕ್ಷ ಪಡೆಯುವಿರಿ.

ಗುರುಗಳ ಶಾಪದಿಂದ ಆ ಏಳೂ ಶಿಷ್ಯರೂ ಅಂತ್ಯಜರಾಗಿ ಹುಟ್ಟಿದರು. ಆದರೂ ಅವರ ಜ್ಞಾನಕ್ಕೆ ತಿರೋಧಾನವಾಗಿರಲಿಲ್ಲ. ಹಿಂದಿನ ಜನ್ಮದ ಸ್ಮರಣೆ ಅವರಿಗೆ ಹುಟ್ಟಿನಿಂದಲೇ ಜಾಗರೂಕವಾಗಿದ್ದಿತು. ಆ ಚಾಂಡಾಲ ಜನ್ಮದಲ್ಲಿ ಕೂಸಿದ್ದಾಗಲೂ ಅವರು ತಾಯಿಯ ಮೊಲೆ ಹಾಲನ್ನು ಕುಡಿಯಲಿಲ್ಲ. ವಿಷಯ ಸುಖದಲ್ಲಿ ಲೋಲುಪರಾಗಿ ಭಗವಂತನ ಧ್ಯಾನ ಬಿಡಲಿಲ್ಲ. ಹಗಲಿರುಳು ಹರಿಧ್ಯಾನ ಮಾಡಿ ಆ ಜನ್ಮ ನೀಗಿದರು.

ಚಿಗರೆಗಳಾಗಿ ಮರು ಹುಟ್ಟು ಪಡೆದರು. ಕೆಲವು ದಿನಗಳಲ್ಲಿ ಆ ಹರಿಣ ಜನ್ಮವನ್ನುನೀಗಿ ಒಂದು ತಪೋವನದಲ್ಲಿ ಚಕ್ರವಾಕ ಪಕ್ಷಿಗಳಾಗಿ ಜನಿಸಿದರು. ಅನಂತರ ಮಾನಸ ಸರೋವರದಲ್ಲಿ ಹಂಸ ಪಕ್ಷಿಗಳಾಗಿ ಉದ್ಭವಿಸಿದರು. ಈ ಹಂಸ ಜನ್ಮದಲ್ಲಿಯೂ ಎಂದಿನಂತೆ ಅವರಿಗೆ ಪೂರ್ವ ಜನ್ಮದ ಸ್ಮರಣ, ಹರಿಸ್ಮರಣ, ವಿಷಯ ವೈರಾಗ್ಯ ಮಾಸದಂತೆ ಅವಿಚ್ಛಿನ್ನವಾಗಿಯೇ ಉಳಿದಿದ್ದವು. ಆ ಹಕ್ಕಿಜನ್ಮದಿಂದಲೂ ಅವರು ಮುಕ್ತರಾಗಿ ತಮ್ಮ ಸಾಧನ ಪೂರ್ತಿ ಮಾಡಿಕೊಳ್ಳಬೇಕೆಂದು ತವಕಿಸುತ್ತಿದ್ದರು.

ಮಾನಸ ತೀರ್ಥದಲ್ಲಿ ಕುಳಿತು ಆ ಏಳು ಹಂಸ ಪಕ್ಷಿಗಳು ಧ್ಯಾನಾರೂಢವಾಗಿದ್ದವು. ಅದೇ ಕಾಲದಲ್ಲಿ ಧರ್ಮಕೇತು ಎಂಬ ಮಹಾರಾಜ ಅಲ್ಲಿಗೆ ಬಂದ. ಅವನ ಅಂತಃಪುರ ಪರಿವಾರವೆಲ್ಲವೂ ಅವನೊಂದಿಗೆ ಇದ್ದಿತು. ರಾಣಿಯರೊಂದಿಗೆ ಸ್ನಾನ ಮಾಡಬೇಕೆಂದು ಮಹಾರಾಜನು ಮಾನಸ ಸರೋವರದ ತೀರಕ್ಕೆ ಬಂದ ರಾಜನ ಹಾಗೂ ರಾಣಿಯರ ವಿಲಾಸ ವಿಹಾರಗಳನ್ನು, ವಿನೋದ ವೈಭವಗಳನ್ನು ಕಂಡು ಆ ಹಂಸಗಳಲ್ಲಿ ಮೂರು ಹಂಸಗಳು ಮನಸೋತವು.

ತಮಗೂ ಇಂತಹ ರಾಜ್ಯ, ರಮಣಿಯರು, ಭೋಗ, ಭಾಗ್ಯ ದೊರಕೀತೆ? ಎಂದು ಆಶೆ ಪಟ್ಟವು. ಆ ರಾಜ ರಾಣಿಯರು ತಿನ್ನುವ ಭಕ್ಷ್ಯ ಭೋಜ್ಯಗಳನ್ನು ತಾವೂ ತಿಂದುಂಡು ಆನಂದ ಪಡಬೇಕೆಂದು ಯೋಚಿಸುತ್ತಲೇ ಅವು ಪ್ರಾಣ ಬಿಟ್ಟವು.

ಉಳಿದ ನಾಲ್ಕು ಹಂಸಗಳು ವೇದ, ವೇದಾಂತಗಳ ದಿವ್ಯ ಜ್ಞಾನ ಪಡೆದು ಮೋಕ್ಷ ಪಡೆಯಲು ಅಪೇಕ್ಷಿಸಿ, ಅದನ್ನೇ ಅಂತ್ಯಕಾಲದಲ್ಲಿ ಚಿಂತಿಸುತ್ತ ಪ್ರಾಣ ಬಿಟ್ಟವು.

ಅವರವರ 'ವಾಸನೆ'ಗೆ ಅನುಗುಣವಾಗಿಯೇ ಜನ್ಮ ಬರುವದಷ್ಟೆ! ರಾಜ್ಯಭೋಗ ಬಯಸಿದ ಮೂರು ಹಕ್ಕಿಗಳು ರಾಜರ ಮನೆತನದಲ್ಲಿಯೇ ಹುಟ್ಟಿ ವಿಷಯ ಸುಖ ಲೋಲುಪರಾದರು. ಉಳಿದ ನಾಲ್ಕು ಹಕ್ಕಿಗಳು ತಮ್ಮ ಅಪೇಕ್ಷೆಯ ಮೇರೆಗೆ ಕುರುಕ್ಷೇತ್ರದಲ್ಲಿ ಅದೇ ರಾಜನ ರಾಜ್ಯದಲ್ಲಿ ಜನಿಸಿದರು. ವೇದ ವೇದಾಂಗ ಪಾರಂಗತರಾದರು. ತಪಸ್ಸಿನ ಪ್ರಭಾವದಿಂದ ಎಲ್ಲವನ್ನೂ ಅಂಗೈಯಲ್ಲಿಯ ನೆಲ್ಲಿಕಾಯಿಯಂತೆ ಚೆನ್ನಾಗಿ ತಿಳಿಯುತ್ತಿದ್ದರು.

ಆದರೆ ರಾಜಕುಲದಲ್ಲಿ ಹುಟ್ಟಿದ ಮೂವರು ಈ ಅರಸು ಕುಮಾರರಿಗೆ ಮಾತ್ರ ಜ್ಞಾನಲೋಪವಾಯಿತು. ವಿಷಯ ಲೋಲುಪತೆಯಿಂದ ಅವರಿಗೆ ಸ್ವಲೋಕ, ಪರಲೋಕ ವಿವೇಕವಾಗಲಿ ಹಿತಾಹಿತಗಳ ಪರಿಜ್ಞಾನವಾಗಲಿ ಉಳಿಯಲಿಲ್ಲ. ಜ್ಞಾನವಂತರಾದ ಈ ನಾಲ್ವರು ವಿಪ್ರಸೋದರರಿಗೆ ಮಾತ್ರ ಉಳಿದ ಮೂವರ ಬಗ್ಗೆ ಸಂದೇಹ ಬಂದಿತು. ಅವರಿಗೆ ಜನ್ಮಾಂತರದ ಸ್ಮರಣೆ ಉಳಿದಿರಲಿಕ್ಕಿಲ್ಲ ಎನಿಸಿತು. ಉಳಿದಿದ್ದರೆ ಖಂಡಿತವಾಗಿಯೂ ಅವರು ರಾಜ್ಯ ಭೋಗದಲ್ಲಿ ಇಷ್ಟು ಮೈಮರೆಯುತ್ತಿದ್ದಿಲ್ಲ ಎನಿಸಿತು. ಹೇಗಾದರೂ ಮಾಡಿ ಅವರಿಗೆ ಅವರ ಪೂರ್ವ ಜನ್ಮದ ಸ್ಮರಣೆ ತಂದು ಕೊಟ್ಟು ಸ್ವರೂಪ ಜ್ಞಾನ ಮಾಡಿಕೊಡಬೇಕೆಂದು ಸಂಕಲ್ಪಿಸಿದರು.

ಓರ್ವ ರಾಜದೂತನನ್ನು ಕರೆದು ಅವನ ಕೈಯಲ್ಲಿ ಒಂದು ಪತ್ರವನ್ನು ಕೊಟ್ಟರು. 'ಅಯ್ಯಾ ರಾಜದೂತ, ಇದನ್ನು ಈಗಲೇ ಹೋಗಿ ನಿಮ್ಮ ಮಹಾರಾಜನಿಗೆ ಕೊಡು, ತಡ ಮಾಡಬೇಡ. ಹೇಗಾದರೂ ಮಾಡಿ ತಪ್ಪದೇ ಮುಟ್ಟಿಸು' ಎಂದು ಹೇಳಿ ಕೊಟ್ಟು ಕಳಿಸಿದರು. ಆ ಅರಮನೆಯ ದೂತನು ಅದನ್ನು ನೇರವಾಗಿ ಮಹಾರಾಜನ ಕೈಯಲ್ಲಿ ಕೊಟ್ಟನು. ಮಹಾರಾಜನು ಬಿಡಿಸಿ ಓದಿದನು. ಅದರಲ್ಲಿ ಎರಡು ಪದ್ಯಗಳು ಹೀಗೆ ಬರೆಯಲ್ಪಟ್ಟಿದ್ದವು.

**ಸಪ್ತ ವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೇ ಗಿರೌ ।**
**ಚಕ್ರವಾಕಾಃ ಶರದ್ವೀಪೇ ಹಂಸಾಃ ಸರಸಿ ಮಾನಸೇ ॥**
**ತೇಽಪಿ ಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ ।**
**ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ಕಿಮವಸೀದಥ ॥**

ವಸಿಷ್ಠ ಋಷಿಯ ಶಿಷ್ಯರಾದ ನಾವು ಏಳು ಜನ ದ್ವಿಜರು ಗೋಹತ್ಯ ಮಾಡಿದ ಪಾಪದಿಂದ ಮೊದಲು ದಶಾರ್ಣ ದೇಶದಲ್ಲಿ ಏಳು ಜನ ಬೇಡರಾಗಿ ಹುಟ್ಟಿದೆವು. ಅನಂತರ ಕಾಲಂಜರಗಿರಿಯಲ್ಲಿ ಚಿಗರಿಗಳಾಗಿ ಜನಿಸಿದೆವು. ಮುಂದೆ ಶರದ್ವೀಪದಲ್ಲಿ ಚಕ್ರವಾಕ ಪಕ್ಷಿಗಳಾಗಿ, ಆ ಮೇಲೆ ಮಾನಸ ಸರೋವರದಲ್ಲಿ ಅರಸಂಚೆಗಳಾಗಿ ಉದ್ಭವಿಸಿದೆವು. ಕೊನೆಯದಾಗಿ ಈಗ ಕುರುಕ್ಷೇತ್ರದಲ್ಲಿ ವೇದಪಾರಂಗತರಾದ ದ್ವಿಜರಾಗಿ ಉತ್ಪನ್ನರಾಗಿದ್ದೇವೆ. ಇಷ್ಟುದಿನ ಪುಣ್ಯಸಾಧನ ಮಾಡಿಕೊಂಡು ಮೋಕ್ಷಮಾರ್ಗಕ್ಕೆ ಪ್ರಯಾಣ ಬೆಳೆಸುತ್ತಿದ್ದೇವೆ. ನೀವು ಮಾತ್ರ ಏಕೆ ಹಿಂದುಳಿದು ದುಃಖ ಪಡುತ್ತಿದ್ದೀರಿ?

ಈ ಪದ್ಯಗಳನ್ನು ಓದಿದ ಕೊಡಲೇ ವೈರಾಗ್ಯ ಉದಯವಾಯಿತು ರಾಜಕುಮಾರನ ಮನಸ್ಸಿನಲ್ಲಿ. ಸಂಸಾರವೇ ಸಾಕಾಯಿತು ಮಂತ್ರಿಕುಮಾರರಿಗೆ. ತಮ್ಮ ಪೂರ್ವ

ಸ್ನೇಹಿತರೊಡನೆ ತಾವೂ ಮೋಕ್ಷ ಮಾರ್ಗದಲ್ಲಿ ಮುಂದುವರೆಯುವ ಹೆಬ್ಬಯಕೆ ಹೊತ್ತಿಕೊಂಡಿತು. ಮೂವರೂ ಕೂಡಲೇ ರಾಜ್ಯಕೋಶ ಪರಿವಾರಗಳನ್ನು ತ್ಯಜಿಸಿದರು ತಮ್ಮ ಹಿಂದಿನ ಸಹಾಧ್ಯಾಯಿಗಳಿದ್ದಲ್ಲಿಗೆ ಧಾವಿಸಿದರು. ಅವರು ಕೂಡ ಇವರನ್ನು ಅತ್ಯಾದರದಿಂದ ಬರಮಾಡಿಕೊಂಡರು. ಏಳೂ ಜನ ವಶಿಷ್ಠ ಶಿಷ್ಯರು ಒಂದುಗೂಡಿ; ಭಗವಂತನ ನಿರಂತರ ಧ್ಯಾನೋಪಾಸನೆ ಮಾಡಿ ಜನ್ಮಸಾರ್ಥಕ ಮಾಡಿಕೊಂಡರು. ಜನ್ಮಜನ್ಮಾಂತರಗಳ ಸಾಧನೆ, ಅನುಷ್ಠಾನ, ಭಗವದಾರಧನೆಗಳಿಂದ ಅವರ ಗೋಹತ್ಯಾ ಹಾಗೂ ಮಾಂಸಭಕ್ಷಣ ಪಾಪಗಳು ಪರಿಹೃತವಾದವು. ಮೋಕ್ಷ ಮಾರ್ಗದಲ್ಲಿ ಮುಂದುವರಿಯಲು ಸಕಲ ವಿಧವಾದ ಸೌಕರ್ಯ ಸೌವಿಧ್ಯಗಳು ಅವರಿಗೆ ಒದಗಿ ಬಂದವು. ಅವರೆಲ್ಲರು ಪರಮಾತ್ಮನ ಅತ್ಯರ್ಥ ಪ್ರಸಾದದಿಂದ ಮುಕ್ತಿ ಮಂದಿರದಲ್ಲಿ ಆನಂದದಿಂದ ಪ್ರವೇಶಪಡೆದರು. ಇದೆಲ್ಲವೂ ಅವರು ಭಕ್ತಿಯಿಂದ ಮಾಡಿದ ಶ್ರಾದ್ಧದಫಲ.

ಈ ಸಪ್ತವ್ಯಾಧರ ಆಖ್ಯಾನವನ್ನು ಶ್ರಾದ್ಧ ಕಾಲದಲ್ಲಿ ಶ್ರವಣ ಹಾಗೂ ಪಠಣ ಮಾಡಬೇಕು. ಇದರಿಂದ ಶ್ರಾದ್ಧ ಕರ್ತೃವಿಗೆ ಹಾಗೂ ಪಿತೃಗಳಿಗೂ ಅಕ್ಷಯವಾದ ಪುಣ್ಯ ಹಾಗೂ ಅನ್ನ ಪಾನಗಳು ಪ್ರಾಪ್ತವಾಗುತ್ತವೆ.

**ನರೋತ್ತಮ :-** ನೀನು ಹೇಳಿದಂತೆ ಶ್ರಾದ್ಧಕಾರ್ಯವನ್ನು ಸಿರಿವಂತರು ಹೇಗೋ ಮಾಡಬಹುದು. ಆದರೆ ದರಿದ್ರರ ಗತಿ ಏನು? ಅವರು ಹೇಗೆ ಮಾಡಬಲ್ಲರು? ಹೊಲ ಮನೆ ಎಲ್ಲವನ್ನು ತ್ಯಜಿಸಿ, ದ್ರವ್ಯಸಂಪಾದನೆ ಮಾರ್ಗ ಬಿಟ್ಟು, ವಿರಕ್ತನಾಗಿ, ಅಷ್ಟು ದರಿದ್ರನಾಗಿ ಕಾಡಿನಲ್ಲಿದ್ದು ತಪಸ್ಸನ್ನು ಮಾಡುವವನು, ಊರಲ್ಲಿದ್ದರೂ ದ್ರವ್ಯ ಇಲ್ಲದ ನಿಷ್ಕಿಂಚನ ಗ್ರಹಸ್ಥನೂ ಹೇಗೆ ಪಿತೃಕಾರ್ಯವಾದ ಶ್ರಾದ್ಧವನ್ನು ಆಚರಿಸಬೇಕು?

**ಭಗವಂತ :-** ಬೀದಿಯಲ್ಲಿ ಬೆಳೆಯುವ ಹುಲ್ಲು, ಕಾಡಿನಲ್ಲಿ ದೊರಕುವ ಕಟ್ಟಿಗೆ ಇವುಗಳನ್ನು ಹೇಗಾದರೂ ಮಾಡಿ ಸಂಪಾದಿಸಬೇಕು. ಮತ್ತು ಕೆಲವೊಂದು ಹಣವನ್ನು ಜನರಿಂದ ಯಾಚಿಸಿ ತೆಗೆದುಕೊಂಡು ಬರಬೇಕು. ಹೀಗೆ ತನ್ನಿಂದ ಸಾಧ್ಯವಿದ್ದಷ್ಟು ಸಿದ್ಧತೆ ಮಾಡಿಕೊಂಡು ಶ್ರಾದ್ಧವನ್ನು ಮಾಡಬೇಕು. ಇದರಿಂದ ಸಿರಿವಂತನಿಗಿಂತ ಹೆಚ್ಚಿನ ಫಲವು ದರಿದ್ರನಿಗೆ ದೊರೆಯುತ್ತದೆ. ಶತಾಪರಾಧ ಮಾಡಿಯೂ ಒಂದು ಪಿತೃಶ್ರಾದ್ಧ ಮಾಡಬೇಕು. ಆದರಿಂದ ಅವನ ಎಲ್ಲ ಪಾಪಗಳು ತೊಳೆದು ಹೋಗಿ, ಸ್ವರ್ಗ ಸೇರುತ್ತಾನೆ ಮಾನವ. ಯಾವದೂ ಇಲ್ಲದಿದ್ದರೆ, ಕೈಯಲ್ಲಿ ಹಣವೂ ಇಲ್ಲದಿದ್ದರೆ, ಶ್ರಾದ್ಧ ದಿನ ಅಡವಿಗೆ ಹೋಗಿ ಹುಲ್ಲನ್ನು ಕಿತ್ತಿಕೊಂಡು ಬಂದು, ಗೋವುಗಳಿಗೆ ನೀಡಬೇಕು. ಇದರಿಂದ ಪಿತೃಗಳನ್ನು ಉದ್ದೇಶಿಸಿ ಪಿಂಡ ಪ್ರದಾನ ಮಾಡಿದ ಫಲ ಬರುತ್ತದೆ.

ಪೂರ್ವಕಾಲದಲ್ಲಿ ದೀನಕ ಎಂಬ ದ್ವಿಜನಿದ್ದ. ಅವನು ವಿರಾಟನ ರಾಜ್ಯದಲ್ಲಿ ನೆಲೆಸಿದ್ದ. ಅವನ ತಂದೆಯ ಶ್ರಾದ್ಧದ ದಿನ ಬಂದಿತು. ಆದರೆ ಆ ದೀನಕನು ತನ್ನ ಹೆಸರಿಗೆ ತಕ್ಕಂತೆ ಕಡು ಬಡವನಾಗಿ ದೀನನೇ ಆಗಿದ್ದನು. ಕೈಯಲ್ಲಿ ಕಾಸಿಲ್ಲ; ಮನೆಯಲ್ಲಿ ಹಣವಿಲ್ಲ. ಶ್ರಾದ್ಧ ಮಾಡಲು ಯಾವ ಸೌಕರ್ಯವೂ ಇಲ್ಲ. ಬಿಡಲಿಕ್ಕೆ ಬರುವಂತಿಲ್ಲ, ಏನು ಮಾಡುವದು? ದಿಗ್ಭ್ರಮೆ ಆಯಿತು ದೀನಕನಿಗೆ ; ದುಃಖವೆನಿಸಿತು ಹೃದಯಕ್ಕೆ. ತಂದೆಯ ಶ್ರಾದ್ಧ ಮಾಡುವ ಯೋಗ್ಯತೆ ಇಲ್ಲದ್ದಕ್ಕಾಗಿ ತನ್ನನ್ನು ತಾನು ಬೈಯ್ದುಕೊಂಡನು. ತಂದೆಯ ಶ್ರಾದ್ಧ ಮಾಡಲಿಕ್ಕೆ ಆಗಲಿಲ್ಲವೆಂದು ಅವನು ರೋದಿಸತೊಡಗಿದನು. ಶ್ರಾದ್ಧದಿನ

ನಿಜವಾಗಿಯೂ ಅವನ ಹತ್ತಿರ ಏನೂ ಇರದಿದ್ದರೆ ದುಃಖದಿಂದ ರೋದನವನ್ನಾದರೂ ಮಾಡಬೇಕು. ಹೀಗೆ ಬಹಳ ಹೊತ್ತು ದುಃಖಿಸಿ ಅವನು ಕೊನೆಗೆ ಒಬ್ಬ ಜ್ಞಾನವೃದ್ಧನ ಬಳಿಗೆ ಹೋದನು. ವೇದ ಹಾಗೂ ಧರ್ಮ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದ - ಆ ಮುದುಕ, ಅವನ ಬಳಿಹೋಗಿ ದೀನಕನು ದೀನವಾಣಿಯಿಂದ ಕೇಳಿಕೊಂಡ- 'ಸ್ವಾಮಿನ್, ಇವತ್ತು ನನ್ನ ಮನೆಯಲ್ಲಿ ತಂದೆಯ ತಿಥಿ. ಕೈಯಲ್ಲಿ ಹಣವಿಲ್ಲ, ಮನೆಯಲ್ಲಿ ಪದಾರ್ಥವಿಲ್ಲ. ಶ್ರಾದ್ಧ ಮಾಡಲು ಪಾತ್ರೆ-ಪರಡಿ ದವಸ -ಧಾನ್ಯ ಯಾವುದೂ ನನ್ನಲ್ಲಿ ಇಲ್ಲ, ಮಾಡದಿದ್ದರೆ ಮನಸ್ಸಿಗೆ ಸಮಾಧಾನವಿಲ್ಲ. ಆದುದರಿಂದ ಈಗ ನಾನು ಏನು ಮಾಡಲಿ? ನನಗೆ ನೀವು ಹಿತೋಪದೇಶ ಮಾಡಿರಿ. ನಾನು ಇಂದಿನವರೆಗೆ ಧರ್ಮಮಾರ್ಗ ಬಿಟ್ಟಿಲ್ಲ. ನನ್ನ ಮೇಲೆ ತಾವು ಪರಮಾನುಗ್ರಹ ಮಾಡಬೇಕು.

**ದ್ವಿಜ :-** ಅಪ್ಪಾ, ದೀನಕ, ಕೂಡಲೇ ಈಗ ನೀನು ಕಾಡಿಗೆ ಹೋಗು, ಈಗ ಶ್ರಾದ್ಧಕ್ಕೆ ಕುತುಪಕಾಲ ಬಂದಿದೆ. ಇದೇ ಶ್ರಾದ್ಧಕ್ಕೆ ಅತ್ಯಂತ ಯೋಗ್ಯ ಕಾಲ. ನಿನ್ನ ಬಳಿ ಕಾಳು-ಕಡಿ, ದ್ರವ್ಯ ಮುಂತಾದುವು ಇರದಿದ್ದರೂ ಚಿಂತೆಯಿಲ್ಲ. ಅಡವಿಯಲ್ಲಿ ಎಳೆ ಹುಲ್ಲು ಕಿತ್ತಿ ತಂದೆಯ ಉದ್ದೇಶದಿಂದ ಆಕಳಿಗೆ ಕೊಡು. ಗೋವಿಗೆ ಹಸಿ ಹುಲ್ಲು ಹಾಕಿ, ತಂದೆತಾಯಿಗಳ ಹೆಸರಿನಿಂದ ಅದಕ್ಕೆ ತಿನ್ನಿಸಿದರೆ, ಅದರ ಸಿದ್ಧತೆ ಮಾಡದೆ ವಿಧಿಪೂರ್ವಕ ಶ್ರಾದ್ಧ ಮಾಡಿದ ಫಲವು ಬರುತ್ತದೆ. ಏನೇ ಆಗಲಿ, ಈ ಕುತುಪಕಾಲ ಕಳೆದುಕೊಳ್ಳಬೇಡ.

ದೀನಕನ ಮನಸ್ಸಿನಲ್ಲಿ ಚೆನ್ನಾಗಿ ನಾಟಿತು ಆ ದ್ವಿಜನ ಯೋಗ್ಯ ಸಲಹೆ. ಕೂಡಲೇ ಅವನು ನಡೆದ ಕಾಡಿಗೆ. ಹುಲ್ಲು ಕಿತ್ತಿದ, ಆಕಳ ಹುಡುಕಿದ, ತಂದೆಯನ್ನು ನೆನೆದ, ಮನಸ್ಸಿನಲ್ಲಿಯೇ ಪಿತೃಗಳಿಗಾಗಿ ಸಂಕಲ್ಪ ಮಾಡಿದ. ಆ ಎಳೆಕರಿಕೆಯ ಹೊರೆಯನ್ನು ತಂದೆಯ ಪ್ರೀತಿಗಾಗಿ ಆಕಳಿಗೆ ತಿನ್ನಿಸಿದ. ಹಸಿಯ ಹುಲ್ಲಿನ ಆ ರಸಗವಳಗಳನ್ನು ಹಸುವು ತಿಂದಿತು ಹರ್ಷದಿಂದ. ಆ ಪುಣ್ಯದಿಂದ ದೀನಕನು ಸ್ವರ್ಗ ಸೇರಿದ. ದಿವ್ಯ ಭೋಗ ಅನುಭವಿಸಿದ ಮತ್ತೆ ಭೂಲೋಕಕ್ಕೆ ಬಂದ. ಸಿರಿವಂತನ ಮನೆಯಲ್ಲಿ ಹುಟ್ಟಿದ. ಅವನ ಹಿಂದಿನ ಪುಣ್ಯ ಧನಿಕನನ್ನಾಗಿ ಮಾಡಿತ್ತು ಅವನನ್ನು. ಈಗಲಾದರೂ ಅವನು ಪಿತೃಯಜ್ಞವನ್ನು ತನ್ನ ವೈಭವಕ್ಕೆ ಅನುಗುಣವಾಗಿ ವಿಜೃಂಭಣೆಯಿಂದ ಜರುಗಿಸುತ್ತಿದ್ದ. ತನ್ನ ದ್ರವ್ಯ ಸರ್ವಸ್ವವೆಲ್ಲವನ್ನೂ ವೆಚ್ಚಮಾಡಿ ಪಿಂಡದಾನದ ವಿಧಿಯನ್ನು ಒಂದು ಮಹೋತ್ಸವದಂತೆ ನೆರವೇರಿಸುತ್ತಿದ್ದ. ಹೀಗೆ ಇಡೀ ಒಂದು ಜನ್ಮ ಅವನು ಪಿತೃಗಳನ್ನು ಉದ್ದೇಶಿಸಿ ಸಕಾಲಕ್ಕೆ ಶ್ರಾದ್ಧ, ಪಿಂಡಪ್ರದಾನ, ದಾನ ಧರ್ಮಗಳನ್ನು ಮಾಡುತ್ತಿದ್ದುದರಿಂದ ಅವನು ಭೂ ಲೋಕದಲ್ಲಿ ಮುಂದೆ ಚಕ್ರವರ್ತಿ ದೊರೆಯಾಗಿ ಜನಿಸಿದನು. ತಾಯಿತಂದೆಗಳ ಶ್ರಾದ್ಧಕ್ಕೆ 'ಪಿತೃಯಜ್ಞ'ವೆಂದು ಹೆಸರಿದೆ. ಪಿತೃ ಯಜ್ಞದಂತಹ ಶ್ರೇಷ್ಠಯಜ್ಞ ಬೇರೊಂದಿಲ್ಲ. ಈ ಪಿತೃಯಜ್ಞದ ಮಹತ್ವವನ್ನು ಹೇಳು ಕೇಳುವವರೂ ಸ್ವಯಂ ಪಠಿಸುವವರೂ ಗಂಗಾ ಸ್ನಾನದ ಫಲವನ್ನು ಪಡೆಯುತ್ತಾರೆ. ಒಮ್ಮೆ ಉಚ್ಚರಿಸಿದರೂ ಸಾಕು, ಜನ್ಮಜನ್ಮಾಂತರಗಳಲ್ಲಿ ಕೂಡಿಬಿದ್ದ ಪಾಪ ಸಂಚಯವೆಲ್ಲವೂ ನಷ್ಟವಾಗಿ ಹೋಗುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಮಾತಾಪಿತೃಗಳ ಸೇವೆಯ ಮಹತ್ವ ಎಂಬ ನಲವತ್ತೇಳನೇಯ ಅಧ್ಯಾಯ ಮುಗಿದುದು*

—o—

**ನರೋತ್ತಮ:** - ಭಗವನ್, 'ಪಂಚಾಖ್ಯಾನ' ಪ್ರಸಂಗದಿಂದ ಮೂಕ ಚಾಂಡಾಲನ ಕಥಾನಕವನ್ನು ತಾವು ನನಗೆ ನಿರೂಪಿಸಿದಿರಿ. ಪಿತೃಪೂಜೆಯೇ ಅವನ ಲೋಕವಿಲಕ್ಷಣವಾದ ದಿವ್ಯಜ್ಞಾನಕ್ಕೆ ಮುಖ್ಯ ಕಾರಣವೆಂಬುದನ್ನು ತಿಳಿಸಿದಿರಿ. ಇನ್ನು ಆ ಪತಿವ್ರತಾ ಶಿರೋಮಣಿಯು ಹಿಂದಾದುದನ್ನು ಹೇಗೆ ತಿಳಿಸಿದಳು? ಅವಳ ಪ್ರಭಾವವೇನು! ಅದಕ್ಕೆ ಕಾರಣವೇನು? ಹೇಳಿರಿ.

**ಭಗವಂತ:**- ಸಂಕ್ಷಿಪ್ತವಾಗಿ ಆ ಸಾಧ್ವಿಯ ಚರಿತವನ್ನು ನಿನಗೆ ಹೇಳಿದ್ದೇನೆ. ಮತ್ತೂ ಕೇಳಬೇಕೆಂಬ ಅಪೇಕ್ಷೆ ನಿನಗೆ ಇದ್ದರೆ ಈಗ ವಿವರಿಸುತ್ತೇನೆ ಕೇಳು.

ಪತಿಯೇ ತನ್ನ ಪಂಚಪ್ರಾಣವೆಂದು ತಿಳಿದು ಹಗಲಿರುಳು ಪತಿಸೇವೆಯಲ್ಲಿಯೇ ಶರೀರವನ್ನು ಸವೆಸುವ ಪತಿವ್ರತೆಯನ್ನು ದೇವತೆಗಳೂ ಆದರಿಸುವರು. ಮುನಿಗಳೂ ಮನ್ನಿಸುವರು! ಬ್ರಾಹ್ಮಣಾದಿಗಳೂ ಆರಾಧಿಸುವರು. ಪೂರ್ವಕಾಲದಲ್ಲಿ ಮಧ್ಯ ದೇಶದಲ್ಲಿ ಒಂದು ಊರಿನಲ್ಲಿ ಒಬ್ಬ ವನಿತೆ ಇದ್ದಳು. ದ್ವಿಜಕುಲದಲ್ಲಿ ಜನಿಸಿದ ಅವಳ ಹೆಸರು ಸ್ಯೆರ್ಯಾ. ದುರ್ದೈವದಿಂದ ಅವಳ ಗಂಡನಿಗೆ ಕುಷ್ಠರೋಗ. ದೇಹ ಕ್ರಮೇಣ ಕೊಳೆಯುತ್ತಲಿತ್ತು. ಅವಯವಗಳು ಸವೆಯುತ್ತಲಿದ್ದವು. ಇಷ್ಟಾದರೂ ಪ್ರೀತಿ ಕಡಿಮೆಯಾಗಲಿಲ್ಲ. ಅವಳಿಗೆ ಗಂಡನ ಮೇಲೆ ಅವಳ ಆಸಕ್ತಿ ಅವನಲ್ಲಿಯೇ. ಅವಳ ಅನುರಕ್ತಿ ಅವನಲ್ಲಿಯೇ ಕೇಂದ್ರೀಕೃತ. ಅವನ 'ಬೇಕು' ಬೇಡಿಕೆಗಳನ್ನು ಶಕ್ತಿಮೀರಿ ಪೂರೈಸುತ್ತಿದ್ದಳು. ಅವನೇ ಅವಳ ಪಾಲಿನ ದೇವರು. ನಿತ್ಯವೂ ಅವನಿಗೆ ಪೂಜೆ, ಪುರಸ್ಕಾರ ಸಲ್ಲುತ್ತಿತ್ತು ದೇವರಂತೆಯೇ. ಒಂದು ಸಲ ಒಮ್ಮೆ ದಾರಿಯಲ್ಲಿ ನಡೆದಿದ್ದ ಅವಳ ಪತಿ. ಎದುರು ಬಂದಳು ಒಬ್ಬ ವೇಶ್ಯೆ. ಅವಳ ರೂಪ ಅಪರೂಪ, ಬಣ್ಣ ಬಂಗಾರದಂತೆ ಮಿಂಚುಳ್ಳದ್ದು, ಚೆಲುವು ನಿಲುವು ಆಕರ್ಷಕ. ಕಂಡಕೂಡಲೇ ಇವನ ಮನಸ್ಸು ನೆಟ್ಟಿತು. ಅವಳು ಇವನನ್ನು ಮಾತನಾಡಿಸಲಿಲ್ಲ. ಆ ಚೆಲುವಿನ ಚಿತ್ತಾರ ಕಂಡು ಇವನ ಮನಸ್ಸು ವಿಕೃತವಾಯಿತು. ಅವಳು ದೊರಕದ್ದರಿಂದ ದುಃಖವೂ ಆಯಿತು. ನಿಟ್ಟುಸಿರು ಬಿಡುತ್ತ ವಿಷಣ್ಣನಾಗಿ ಮನೆಗೆ ಮರಳಿದ. ಸ್ಯೆರ್ಯೆ ನೋಡಿದಳು ಅವನ ಮುಖವನ್ನು ಖಿನ್ನ ವಿಷಣ್ಣವಾಗಿದ್ದಿತು ಅವನ ಮುಖಮುದ್ರೆ. ಆಗಾಗ ನಿಟ್ಟುಸಿರು, ಕಣ್ಣಿನಲ್ಲಿ ವಿಷಾದದ ಛಾಯೆ. ಹಣೆಗಟ್ಟೆಯ ಮೇಲೆ ಚಿಂತೆಯಗೆರೆ. ಉದ್ವಿಗ್ನಮನಸ್ಸು. ಅದನ್ನು ಕಂಡು ಸ್ಯೆರ್ಯೆಗೆ ದುಃಖವಾಯಿತು. ಪತಿಯ ಬಳಿಗೆ ಬಂದು ಕೈಮುಗಿದು ಕೇಳಿದಳು-

''ನಾಥ, ನೀನೇಕೆ ದುಃಖಿತನಾಗಿರುವಿ, ನಿಟ್ಟುಸಿರನ್ನು ಬಿಡುವ ಕಾರಣವೇನು? ನಿನ್ನ ಮನದಲ್ಲಿ ಇದ್ದುದನ್ನು ಹೇಳು. ನಿನ್ನ ದಾಸಿಯಾದ ನಾನು ನಿನ್ನ ಸರ್ವಸೇವೆಗೆ ಸಿದ್ಧಳಿರಲು ನೀನೇಕೆ ಚಿಂತಿಸುವಿ? ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ, ನಿನ್ನ ಅಪೇಕ್ಷೆ ಏನು ತಿಳಿಸು. ಶಕ್ತಿ ಮೀರಿ ನಾನು ಅದನ್ನು ಈಡೇರಿಸುತ್ತೇನೆ. ನಿನ್ನ ಇಚ್ಛೆ ಪೂರ್ಣಮಾಡುವದು ನನ್ನ ಜೀವನದ ಗುರಿ.

**ಪತಿ :**- ಪ್ರಿಯೆ, ನೀನು ಸುಮ್ಮನೆ ನನ್ನನ್ನು ಕೇಳುತ್ತಿ. ನೀನು ಆ ಕಾರ್ಯವನ್ನು ಮಾಡಲಾರೆ, ನನ್ನಗೆ ಅದನ್ನು ಹೇಳಲೂ ಬರುವುದಿಲ್ಲ.

**ಸ್ಥೈರ್ಯ :-** ಎಷ್ಟೇ ದುಷ್ಕರವಾಗಲಿ, ಕಷ್ಟಕರವಾಗಲಿ, ನಿನ್ನ ಕಾರ್ಯವನ್ನು ನಾನು ಮಾಡಿಕೊಡುತ್ತೇನೆ. ನಿನ್ನ ಕಾರ್ಯವು ಕಷ್ಟ ಸಾಧ್ಯವಿದ್ದಷ್ಟೂ ನನಗೆ ಹೆಚ್ಚಿನ ಪುಣ್ಯ. ನೀನು ಏನಿದ್ದರೂ ಸಂಕೋಚವಿಲ್ಲದೆ ಹೇಳು. ನಿನ್ನ ಸೇವೆ ಎಂದು ನಾನು ಅದನ್ನು ಸಾಧಿಸಿಕೊಡುತ್ತೇನೆ.

**ಪತಿ :-** ಹಾಗಾದರೆ ಕೇಳು. ಇದೀಗ ಈ ದಾರಿಯಲ್ಲಿ ಒಬ್ಬ ವೇಶ್ಯೆ ಹೋದಳು. ಅವಳಂತಹ ಸುಂದರಿಯನ್ನು ನಾನು ನೋಡಲೇ ಇಲ್ಲ. ಅವಳ ಅವಯವಗಳಲ್ಲಿ ಒಂದರಲ್ಲೂ ಕುಂದಿಲ್ಲ. ನನ್ನ ದೃಷ್ಟಿಯಲ್ಲಿ ಅವಳು ಸರ್ವಾಂಗ ಸುಂದರಿ. ಅವಳನ್ನು ಕಂಡ ಕ್ಷಣದಿಂದ ನನ್ನ ಮನಸ್ಸು ಕೆಂಡದಲ್ಲಿ ಸುಟ್ಟಂತಾಗಿದೆ. ನೀನು ಪ್ರಯತ್ನಿಸಿ ಆ ತರುಣಿಯನ್ನು ತಂದು ನನಗೆ ಒಪ್ಪಿಸಿದರೆ ನನ್ನ ಜನ್ಮ ಸಾರ್ಥಕ. ಆದರೆ ಇದು ಶಕ್ಯವಿಲ್ಲದ ಮಾತು. ನಾನು ರೋಗಿಷ್ಠ. ಕುಷ್ಠರೋಗವು ಒಂದೊಂದೇ ನನ್ನ ಅವಯವಗಳನ್ನು ಕತ್ತರಿಸುತ್ತಲಿದೆ. ದಿನ ಒಂದು ಕಡೆ ಹೊಸ ಹೊಸ ಹುಣ್ಣು. ಅದರಿಂದ ರಕ್ತ, ಕೀವು ಬಸಿದು ದುರ್ಗಂಧ ಹೊರಡುತ್ತಲಿದೆ. ಇಂತಹ ರೋಗಿಷ್ಠನ ಬಳಿಗೆ ಅವಳು ಹೇಗೆ ಬರುವಳು? ಅವಳು ಬಾರದಿದ್ದರೆ ಮಾತ್ರ ನಾನು ಬದುಕುವಂತಿಲ್ಲ. ಮರಣವೇ ನನಗೆ ಶರಣು.

**ಸೌರ್ಯ :-** ಪ್ರಭು, ಧೈರ್ಯದಿಂದ ತುಸು ಕಾಲ ತಾವು ಕಾಯಬೇಕು. ನನ್ನ ಶಕ್ತ್ಯನುಸಾರ ತಮ್ಮ ಕಾರ್ಯ ಸಾಧಿಸಲು ನಾನು ಪ್ರಯತ್ನಿಸುತ್ತೇನೆ.'

ಹೀಗೆ ತನ್ನ ಭರ್ತಾರನಿಗೆ ಭರವಸೆ ನೀಡಿ, ಆ ಸಾಧ್ವೀಮಣಿಯು ತನ್ನ ಮನಸ್ಸಿನಲ್ಲಿಯೇ ಏನೇನೋ ಯೋಚನೆ ಹಾಕಿದಳು. ಮರುದಿನ ನಸುಕಿನಲ್ಲಿಯೇ ಎದ್ದಳು. ಕೈಯಲ್ಲಿ ಪೊರಕೆ ಹಾಗೂ ಶಗಣಿ ಎರಡೂ ಹಿಡಿದುಕೊಂಡು ನಡೆದಳು ನೇರವಾಗಿ ಆ ವೇಶ್ಯೆಯ ಮನೆಗೆ. ಅವಳಿಗೆ ಮನೆ ಗೊತ್ತಿಲ್ಲ. ಹೇಗೋ ಕಷ್ಟಪಟ್ಟು ಆ ವೇಶ್ಯಾಗೃಹವನ್ನು ಪತ್ತೆ ಹಚ್ಚಿದಳು. ಆ ಮನೆ ಇದ್ದ ಓಣಿಯನ್ನೇ ಗುಡಿಸಿದಳು. ಅಂಗಳವನ್ನು ಥಳಿಹಾಕಿ ಗೋಮಯದಿಂದ ಸಾರಿಸಿದಳು. ರಂಗವಲ್ಲಿಯನ್ನು ಅಂದವಾಗಿ ಅವಳ ಮನೆ ಮುಂದೆ ಬಿಡಿಸಿದಳು. ಬೆಳಗಾಗುವಷ್ಟರಲ್ಲಿ ಆ ವೇಶ್ಯೆಯ ಮನೆ ಇದ್ದ ವೀಥಿಯನ್ನೂ, ಮನೆಯ ಮುಂಭಾಗದ ಅಂಗಳವನ್ನೂ ಸ್ವಚ್ಛಗೊಳಿಸಿ, ಸಾರಣೆ ಕಾರಣೆಗಳಿಂದ ಅಲಂಕರಿಸಿ, ರಂಗವಲ್ಲಿಗಳಿಂದ ಶೃಂಗರಿಸಿ ಸುಂದರಗೊಳಿಸಿದಳು. ಇಷ್ಟೆಲ್ಲ ಕಾರ್ಯವನ್ನೂ ನಸುಕಿನ ಮುಸುಕು ಜಾರುವ ಒಳಗಾಗಿ ಮಾಡಿ ಮುಗಿಸಿ, ಯಾರ ಕಣ್ಣಿಗೂ ಬೀಳದೆ ಮನೆಗೆ ಮರಳಿದಳು. ಬೆಳಗಾಯಿತು. ಅಂಗಳದ ಶೃಂಗಾರವನ್ನೂ ಓಣಿಯ ಅಲಂಕಾರವನ್ನು ನೋಡಿ ಚಮತ್ಕೃತಳಾದಳು - ಆ ಬೀದಿಯ ಬೆಲೆವೆಣ್ಣು. ತನ್ನ ದಾಸಿಯರನ್ನು ಕರೆದಳು. ದಾಸಿಯರನ್ನು ಕೇಳಿದಳು. 'ಇಷ್ಟು ಸುಂದರವಾಗಿ ಅಲಂಕರಿಸಿದವರಾರು- ಈ ನಮ್ಮ ಕೇರಿಯನ್ನು? ಇಷ್ಟು ಕಲಾ ಪೂರ್ಣವಾಗಿ ರಂಗವಲ್ಲಿಯಿಂದ ನನ್ನ ಮನೆಯ ಅಂಗಳವನ್ನು ಶೃಂಗರಿಸಿದವರು ಯಾರು? ನಾನು ಯಾರಿಗೂ ಈ ಬೀದಿ ಶೃಂಗಾರ ಮಾಡಲು ಹೇಳಿರಲಿಲ್ಲ. ನನ್ನ ಮನೆಯ ಅಲಂಕಾರಕ್ಕಾಗಿ ಯಾರನ್ನೂ ನಾನೂ ಕೇಳಿಕೊಂಡಿರಲಿಲ್ಲ. ಆದರೂ ನನಗೆ ಪ್ರೀತಿ ಆಗಲೆಂದು ನನ್ನ ಮನೆಯ ಮುಂಭಾಗ, ಬೀದಿ, ಬಾಗಿಲು, ಹೊರಾಂಗಣವನ್ನು ಆಪ್ಯಾಯನ ಆಗುವಂತೆ ಅಲಂಕರಿಸಿದ ಮಂಗಳಾಂಗಿ ಯಾರಿರಬಹುದು? ನಿಮ್ಮಲ್ಲಿ ಯಾರಾದರೂ ಈ ಕೆಲಸ ಮಾಡಿರುವಿರಾ?

ಎಂದು ಕೇಳಿದಳು. ಅವಳ ದಾಸ, ದಾಸಿಯರು ಒಬ್ಬರಿಗೊಬ್ಬರು ಮುಖ ನೋಡಿಕೊಂಡರು. 'ನಾವು ಯಾರೂ ಇದನ್ನು ಮಾಡಿಲ್ಲ ಇಷ್ಟು ಸುಂದರವಾಗಿ ಬೀದಿ, ಬದಿಗಳನ್ನೂ, ಭವನಾಂಗಣವನ್ನೂ ಅಲಂಕರಿಸಲು ಬರುವದೂ ಇಲ್ಲ ನಮಗೆ.' ಅದನ್ನು ಕೇಳಿ ಇನ್ನೂ ಆಶ್ಚರ್ಯ - ಆ ವೇಶ್ಯೆಯ ಮನೆಗೆ ಹೋದಳು. ಮೊದಲಿನಂತೆ ಗುಡಿಸಿ, ಸಾರಿಸಿ. ಶೃಂಗರಿಸಿ ಯಾರಿಗೂ ಕಾಣದೆ ಮನೆಗೆ ಬಂದಳು. ಅಂದಿನ ಸಾರಣೆ, ಕಾರಣೆಗಳ ಅಂದ ಚಂದ ಕಂಡು ಆ ಗಣಿಕೆ ಕೌತುಕದ ಕೊನೆ ಏರಿ ನಿಂತಳು. 'ಇದಾವ ಕಾಣದ ಕೈ ನನ್ನ ಮನೆಯ ಅಂಗಳದ ಶೃಂಗಾರಕ್ಕೆ ಸಿದ್ಧವಾಗಿ ನಿಂತಿದೆ? ಇದನ್ನು ನಾಳೆ ನೋಡುವದಾಗಿ ನಿರ್ಧರಿಸಿದಳು. ಮರುದಿನ ಪ್ರಾತಃಕಾಲ ಅರುಣೋದಯಕ್ಕಿಂತ ಮೊದಲೇ ಆ ವೇಶ್ಯೆ ಮನೆಯಲ್ಲಿ ಮರೆಯಾಗಿ ನಿಂತುಕೊಂಡಳು. ಯಥಾ ಪ್ರಕಾರ ಆ ಸಾಧ್ವೀಮಣಿಯು ಒಂದು ಕೈಯಲ್ಲಿ ಗೋಮಯ, ಜಲಪಾತ್ರೆ, ಇನ್ನೊಂದು ಕೈಯಲ್ಲಿ ಪೊರಕೆ ಹಿಡಿದು ಬಂದಳು. ಪೊರಕೆ ಹಿಡಿದು ಬೀದಿಯನ್ನು ಗುಡಿಸಿದಳು. ಕಸ ಕಡ್ಡಿ ಎಲ್ಲವೂ ಹೋಗುವಂತೆ ಬೀದಿಯ ತುದಿ, ಬದಿ, ಎಲ್ಲವೂ ಮಣ್ಣು ಧೂಳು ಇಲ್ಲದಂತೆ ಮಾಡಿ, ಚೊಕ್ಕಟವಾಗಿ ಉಡುಗಿ ಅನಂತರ ತಾನು ತಂದ ಜಲಪೂರ್ಣ ಪಾತ್ರೆಯಿಂದ ನೀರು ಬಾಗಿಸಿ ಕೊಂಡಳು, ಗೋಮಯವನ್ನು ಕಲೆಸಿ ಸುತ್ತಲೂ 'ಥಳಿ' ಹಾಕಿದಳು. ಇವಳ ಮನೆಯ ಮುಂಭಾಗವನ್ನು ಚೆನ್ನಾಗಿ ಸಾರಿಸಿದಳು. ಅನಂತರ ಸುಂದರವಾದ ರಂಗು ರಂಗಾಗಿ ಕಂಗೊಳಿಸುವ ರಂಗವಲ್ಲಿ ಬಿಡಿಸಿ, ಗೃಹಾಂಗಣವನ್ನೆಲ್ಲ ಶೃಂಗರಿಸಿದಳು. ಇಷ್ಟೆಲ್ಲ ಬೀದಿ ಹಾಗೂ ಮನೆಯ ಮುಂಭಾಗಗಳನ್ನು ಅಲಂಕರಿಸಿ, ಅರುಣನ ಕಿರಣಗಳು ಸ್ಪಷ್ಟವಾಗತೊಡಗಲು ಅವಸರದಿಂದ ಅಲ್ಲಿಂದ ಹೊರಟು ನಿಂತಳು. ಇದನ್ನೆಲ್ಲ ತನ್ನ ಮನೆಯ ಬಾಗಿಲ ಬದಿಯಲ್ಲಿ ಮರೆಯಾಗಿ ನಿಂತೇ ಆ ವೇಶ್ಯೆ ನೋಡಿದಳು. ಓಡಿ ಬಂದು, ಹೊರಟು ನಿಂತ ಆ ದ್ವಿಜ ಮಹಿಳೆಯ ಎರಡೂ ಪಾದಗಳನ್ನು ಗುಟ್ಟಿಯಾಗಿ ಹಿಡಿದಳು ಮತ್ತು ನುಡಿದಳು. ''ತಾಯಿ, ಕ್ಷಮಿಸು, ಮೂರು ದಿನ ಈ ಪಾಪಿಯ ಮನೆಯ ಮುಂದಿನ ಹುಡಿಗುಡಿಸಿದೆ; ನೆಲ ಸಾರಿಸಿದೆ; ಥಳಿ ಹಾಕಿದೆ; ರಂಗವಲ್ಲಿ ಚಿತ್ರಿಸಿದೆ. ನೀನು ಯಾರು ನನಗೆ ಗೊತ್ತು. ನೀನು ಪರಮ ಪತಿವ್ರತೆ ಬ್ರಾಹ್ಮಣೋತ್ತಮನ ಮಡದಿ. ಮುತ್ತಿನಂಥ ಮುತ್ತೈದೆ. ಸಾಧ್ವೀಮಣಿ, ಪವಿತ್ರಮೂರ್ತಿ, ನಿನ್ನಂತಹ ದೊಡ್ಡ ಮಹಿಳೆ ನನ್ನ ಮನೆಯ ಅಂಗಳ ಗುಡಿಸಿದರೆ ನನ್ನ ಆಯುಷ್ಯ ಕ್ಷೀಣವಾಗುವದು. ನನ್ನ ಐಶ್ವರ್ಯ ನಾಶವಾಗುವದು. ತಾಯಿ ನಿನಗೆ ಏನು ಬೇಕು ಹೇಳು. ಏತಕ್ಕಾಗಿ ನೀನು ನನ್ನ ಸೇವೆ ಮಾಡುತ್ತಲಿರುವೆ? ನಿನಗೆ ಬಂಗಾರ ಬೇಕೆ? ರತ್ನದ ಮೇಲೆ ಆಶೆಯೆ? ಪೀತಾಂಬರದ ಆಶೆಯೆ? ಹೇಳು, ನೀನು ಬೇಡಿದ್ದನ್ನು ಕೊಡುವೆ. ನಿನ್ನ ಈ ಸೇವೆಗೆ ನಾನು ಏನು ಕೊಟ್ಟರೂ ಕಡಿಮೆಯೆ!''

ಆ ರೂಪಾಜೀವೆಯ ಈ ಮಾತು ಕೇಳಿ ಪತಿವ್ರತೆಯ ಹೃದಯದಲ್ಲಿ ಹರ್ಷವಾಯಿತು. ಆದರೂ ಅವಳು ನಮ್ರತೆಯಿಂದಲೇ ನಿವೇದಿಸಿದಳು. ''ಅಮ್ಮಾ, ನನಗೆ ಯಾವ ಹಣ, ಹೊನ್ನು ಬೇಡ. ಮುತ್ತು ರತ್ನಗಳ ಅಪೇಕ್ಷೆ ನನಗೆ ಇನಿತೂ ಇಲ್ಲ. ಎಂದೂ ಇಲ್ಲ. ಆದರೆ ನಿನ್ನ ಬಳಿ ನನ್ನ ಕೆಲಸವಿದೆ. ನೀನು ಮಾಡುತ್ತೇನೆ ಎಂದರೆ ಹೇಳುತ್ತೇನೆ. ನನ್ನ ಅಪೇಕ್ಷೆಯನ್ನು ನೀನು ಪೂರ್ಣಗೊಳಿಸುತ್ತೇನೆಂದು ವಚನ ಕೊಟ್ಟರೆ ಮಾತ್ರ ತಿಳಿಸುತ್ತೇನೆ.''

**ವೇಶ್ಯೆ :-** ತಾಯಿ, ನನ್ನನ್ನು ರಕ್ಷಿಸು.

**'ಸತ್ಯಂ ಸತ್ಯಂ ಕರಿಷ್ಯಾಮಿ, ದ್ರುತಂ ವದ ಪತಿವ್ರತೆ'**

ಸತ್ಯವಾಗಿಯೂ ಮಾಡುತ್ತೇನೆ, ನಿಜವಾಗಿಯೂ ಮಾಡುತ್ತೇನೆ. ನಿನ್ನ ಅಪೇಕ್ಷೆ ಪೂರೈಸುತ್ತೇನೆ. ಬೇಗ ಹೇಳು. ನಿನ್ನ ಯಾವ ಅಪೇಕ್ಷೆ ಪೂರ್ಣ ಮಾಡಲಿ? ಈಗಲೇ ಹೇಳು. ಆಗ ಆ ಸಾಧ್ವೀಮಣಿ ಅನುಮಾನಿಸುತ್ತಲೇ, ಬಹಳ ದುಃಖದಿಂದ ಮನಸ್ಸನ್ನು ಕಲ್ಲು ಮಾಡಿಕೊಂಡು ತನ್ನ ಗಂಡನ ಅಪೇಕ್ಷೆ ತಿಳಿಸಿದಳು. 'ದಯಮಾಡಿ, ನನ್ನದೊಂದು ಈ ಮಾತನ್ನು ನಡೆಸಿಕೊಡು' ಎಂದು ಕೇಳಿಕೊಂಡಳು.

ವೇಶ್ಯೆ ಎಷ್ಟಾದರೂ ವೇಶ್ಯೆಯೆ! ರೋಗಿಷ್ಠನಾದ ಆ ಸಾಧ್ವಿಯ ಪತಿಯನ್ನು ಅವಳು ನೋಡಿದ್ದಳು. ಅವನ ಉಲ್ಬಣಿಸಿದ ರೋಗ, ಸೋರುವ ಹುಣ್ಣು ಬಸಿಯುವ ಕೀವು, ದುರ್ವಾಸನೆ ಇಡುಗಿದ ದೇಹ ಎಲ್ಲವೂ ಅವಳ ಕಣ್ಣು ಮುಂದೆ ಕಟ್ಟಿತು. ಒಂದು ಕ್ಷಣ ಅವಳ ದೇಹವು ನಡುಗಿತು. ಮೈ 'ಜುಂ' ಗಟ್ಟಿತು. ಕೆಲನಿಮಿಷ ಸ್ತಬ್ಧಳಾಗಿ ನಿಂತಳು. ಮತ್ತೆ ಯೋಚಿಸಿದಳು. ಕೊನೆಗೆ ನಿರ್ಧಾರಕ್ಕೆ ಬಂದಳು ಆಮೇಲೆ ನುಡಿದಳು. 'ಆಗಲಿ ತಾಯಿ, ಒಂದು ದಿನದ ಮಟ್ಟಿಗೆ ನಾನು ನಿನ್ನ ಪತಿಯ ಅಪೇಕ್ಷೆಯನ್ನು ಪೂರ್ಣಗೊಳಿಸುತ್ತೇನೆ. ಅವನನ್ನು ಎಂದಾದರೂ ಒಂದು ದಿನ ನನ್ನ ಮನೆಗೆ ಕಳಿಸಿಕೊಡು.'

**ಪತಿವ್ರತೆ :-** ಮುಂದೆ ಬೇಡ; ಇಂದೇ ಆಗಲಿ. ಇಂದೇ ರಾತ್ರಿ ನಾನು ನನ್ನ ಪತಿಯನ್ನು ನಿನ್ನ ಮನೆಗೆ ಕರೆದುಕೊಂಡು ಬರುತ್ತೇನೆ. ಅವನನ್ನು ನಿನ್ನ ಮನೆಯಲ್ಲಿ ಇಳಿಸಿ ನಾನು ನಿನ್ನ ಮನೆಯ ಹೊರಗೆ ಅಂಗಳದಲ್ಲಿ ಕುಳಿತುಕೊಳ್ಳುತ್ತೇನೆ. ಅವನು ನಿನ್ನೊಡನೆ ಭೋಗ ವಿಲಾಸ ಮಾಡಿ ಸಂತುಷ್ಟನಾದ ಬಳಿಕ ಮತ್ತೆ ಅವನನ್ನು ಮನೆಗೆ ಕರೆದೊಯ್ಯುತ್ತೇನೆ.

**ವೇಶ್ಯೆ :-** ಹಾಗೇ ಆಗಲಿ ಈಗ ನೀನು ಮನೆಗೆ ಬೇಗ ಹೋಗು, ಇಂದು ಸರಿರಾತ್ರಿಯಲ್ಲಿ ನಿನ್ನ ಗಂಡನನ್ನು ಕರೆದುಕೊಂಡು ಬಾ. ನನ್ನ ಮನೆಗೆ ಬರುವ ಸಿರಿವಂತರು ಬಹಳ. ಅದರಲ್ಲಿಯೂ ಇಂದು ಈ ದೇಶದ ದೊರೆಯು ನನ್ನಲ್ಲಿಗೆ ಬರುವವನಿರುವನು. ಒಬ್ಬೊಬ್ಬ ರಾಜರು ಬಂದರೆ ಒಂದು ಇಡೀ ರಾತ್ರಿ ಹಾಗೂ ಹಗಲು ವಿಷಯಲೋಲುಪರಾಗಿ ನನ್ನ ಮನೆಯಲ್ಲಿ ಇದ್ದು ಬಿಡುವರು. ಆದುದರಿಂದ ಈಗಲೇ ನಾನು ಅವರಿಗೆ 'ಬರಬೇಡಿರಿ' ಎಂದು ಹೇಳಿ ಕಳಿಸುತ್ತೇನೆ. ಈಗ ಮನೆಯಲ್ಲಿ ಇದ್ದವರನ್ನು ಹೊರಗೆ ಕಳಿಸುತ್ತೇನೆ. ಅನಂತರ ರಾತ್ರಿ ಸಮಯದಲ್ಲಿ ನಿನ್ನ ಪತಿಯನ್ನು ಇಲ್ಲಿಗೆ ಕಳಿಸು, ಅವನು ಇಂದು ಇಡೀ ರಾತ್ರಿ ನನ್ನೊಡನೆ ಇರಲಿ. ನನ್ನಿಂದ ಆನಂದವನ್ನು ಪಡೆದು ತೃಪ್ತಿಯಿಂದ ಮನೆಗೆ ಹೋಗಲಿ.

ಇದನ್ನು ಕೇಳಿ ಪರಮಾನಂದವಾಯಿತು- ಆ ಸಾಧ್ವೀಮಣಿಗೆ, ಪ್ರಸನ್ನಳಾಗಿ ತನ್ನ ಮನೆಗೆ ತೆರಳಿದಳು, ಪತಿಯ ಬಳಿಗೆ ಹೋಗಿ, 'ಪ್ರಭೂ, ನಿನ್ನ ಕೆಲಸವು ಆಗಿದೆ. ಆದರೆ ಇಂದೇ ರಾತ್ರಿ ಅವಳು ನಿನಗೆ ತನ್ನ ಮನೆಗೆ ಬರಲು ಹೇಳಿದ್ದಾಳೆ. ಅವಳಿಗೆ ಪ್ರಿಯಕರರು ಬಹಳ. ಅವರಲ್ಲಿ ರಾಜಾಧಿರಾಜರೂ ಇರುತ್ತಾರೆ. ಇಂದು ಒಂದು ದಿನ ಅವರೆಲ್ಲರಿಗೆ 'ಬರಕೂಡದು' ಎಂದು ಹೇಳಿಕಳಿಸಿದ್ದಾಳೆ. ಇಂದು ಬಿಟ್ಟರೆ ನಿನ್ನ ಅಪೇಕ್ಷೆ ಎಂದೂ ಪೂರ್ಣವಾಗಲಾರದು.'

**ಪತಿ :-** ನಾನು ಅವಳ ಮನೆಗೆ ಹೇಗೆ ಹೋಗಲಿ? ನಡೆಯಲು ಕಾಲಲ್ಲಿ ಶಕ್ತಿ ಇಲ್ಲ. ದಾರಿ ಗೊತ್ತಿಲ್ಲ. ಅವಳು ಇಂದು ನನ್ನನ್ನು 'ಆಹ್ವಾನಿಸಿದ್ದಾಳೆ' ಎಂದು ಕೇಳಿದಾಗಲಂತೂ ನನ್ನ ಹೃದಯ ತುಡಿಯುತ್ತಲಿದೆ. ಈ ಕಾರ್ಯ ಹೇಗೆ ಆಗಬೇಕು?

**ಸೈರ್ಯಾ :-** ನೀವು ಏನೂ ಚಿಂತೆ ಮಾಡಬೇಡಿರಿ. ನಿಮ್ಮನ್ನು ಅವಳ ಮನೆಗೆ ಮುಟ್ಟಿಸುವ ಹೊಣೆ ನನ್ನದು. ನೀವು ಆನಂದದಿಂದ ನನ್ನ ಹೆಗಲ ಮೇಲೆ ಕೂಡಿರಿ. ನಾನು ನಿಮಗೆ ಏನೂ ಆಯಾಸವಾಗದಂತೆ ಆ ವೇಶ್ಯೆಯ ಮನೆಗೆ ಕರೆದೊಯ್ಯುವೆನು. ಅಲ್ಲಿ ನಿಮ್ಮ ಕಾಮನಾತೃಪ್ತಿ ಆದ ಬಳಿಕ ಮತ್ತೆ ನನ್ನ ಹೆಗಲ ಮೇಲೆ ಹೊತ್ತುಕೊಂಡೇ ನನ್ನ ಮನೆಗೆ ಕರೆದುಕೊಂಡು ಬರುವೆನು.

**ಪತಿ :-** ನೀನು ಬಹಳ ಒಳ್ಳೇ ಹೆಂಗಸು! ನಿನ್ನಿಂದಲೇ ನನ್ನ ಮನೋರಥ ಪೂರ್ತಿಯಾಗಬೇಕು. ಯಾವ ಹೆಣ್ಣುಮಗಳೂ ಇಂತಹ ಕಾರ್ಯ ಮಾಡಲಾರಳು.

ಇದೇ ವೇಳೆಯಲ್ಲಿ ಆ ನಗರದಲ್ಲಿ ಚೋರರ ಹಾವಳಿ ವಿಪರೀತವಾಗಿತ್ತು. ಜನರೆಲ್ಲರೂ ದೂರಿತ್ತಿದ್ದರು - ರಾಜನೆಡೆಗೆ, ಅನುದಿನವೂ ಧನಿಕರ ಮನೆಗಳ ಕಳವು, ಲೂಟಿ ಆಗುತ್ತಲೇ ಇದ್ದುದರಿಂದ ರಾಜನಿಗೂ ಬಹಳ ಚಿಂತೆ ಆಗಿತ್ತು. ನಾಗರಿಕರು ಮಹಾರಾಜನಲ್ಲಿ ತಮ್ಮ ಕಳವಳವನ್ನು ವ್ಯಕ್ತಪಡಿಸಿ ಸಾಮೂಹಿಕವಾಗಿ ಮೊರೆ ಇಟ್ಟಿದ್ದರು. ಆದುದರಿಂದ ಮಹಾರಾಜನು ತನ್ನ ಕೋಟೆಯ ಕಾವಲುಗಾರರನ್ನೆಲ್ಲ ಕರೆಸಿ ಸಿಟ್ಟಿನಿಂದ ಎಚ್ಚರಿಕೆ ಕೊಟ್ಟಿದ್ದನು.

**ಮಹಾರಾಜ :-** ಆರಕ್ಷಕರೆ, ನಮ್ಮ ನಗರದಲ್ಲಿ ಈಗ ಕಳ್ಳರದೇ ರಾಜ್ಯವಾಗಿದೆ. ಕಳವು, ಕೊಲೆ, ಈ ನಗರದ ನಿತ್ಯ ಚರ್ಯೆಯಾಗಿದೆ. ಪ್ರಜೆಗಳು ಸಂತ್ರಸ್ತರಾಗಿದ್ದಾರೆ. ಅನೇಕ ಧನಿಕರ ಮನೆಗಳನ್ನು ಕೊಳ್ಳೆಹೊಡೆದ ಕಳ್ಳರು ಇನ್ನೂವರೆಗೆ ಸಿಕ್ಕದಿದ್ದುದು ಮತ್ತೂ ಶೋಚನೀಯ, ನಮಗೆ ಲಾಂಛನಾಸ್ಪದ, ನಿಮಗೆ ಬದುಕುವ ಇಚ್ಛೆ ಇದ್ದರೆ ಇಂದು ಆ ಕಳ್ಳರನ್ನು ಹಿಡಿದು ತನ್ನಿರಿ. ಇಲ್ಲದಿದ್ದರೆ ನಿಮ್ಮ ತಲೆ ಹೊಡೆಸುತ್ತೇನೆ ಎಂದು ಅಪ್ಪಣೆ ಮಾಡಿದ.

ರಾಜಾಜ್ಞೆಯಂತೆ ಆ ಕಾವಲುಗಾರರು ಆ ರಾಜಚೋರರನ್ನು ಅಂದು ಹಿಡಿಯಲೇಬೇಕೆಂದು ಪ್ರತಿಜ್ಞೆಗೈದು ಹೊರಟರು. ಆ ನಗರದ ಸಮೀಪದಲ್ಲಿ ಒಂದು ದಟ್ಟವಾದ ಬೆಂಗಾಡು. ಅಲ್ಲಿ ಒಂದು ಮುಗಿಲು ಮುಖಕ್ಕೆ ಮುದ್ದಿಡುವ ಹೆಮ್ಮರ. ಆ ಗಿಡದಡಿಯಲ್ಲಿ ತೇಜಃಪುಂಜನಾದ ಮುನಿಪುಂಗವ. ಆ ಮನೆ ಮಾಂಡವ್ಯ ಮಹರ್ಷಿಯದು. ಅವನಿಗೆ ಆಗ 'ಅಸಂಪ್ರಜ್ಞಾತ ಸಮಾಧಿ' ಬಹಿಃಪ್ರಜ್ಞೆಯಿಲ್ಲ. ಅಂತರಂಗದಲ್ಲಿ ಭಗವಂತನನ್ನು ಚಿಂತಿಸುತ್ತ ಧ್ಯಾನಾರೂಢನಾಗಿದ್ದಾನೆ ಆ ಮುನಿಪುಂಗವ. ಅವನನ್ನು ಕಂಡರು-ಈ ಕಾವಲುಗಾರರು, ಅವನ ಈ ಸಮಾಧಿಸ್ಥಿತಿ ಕಂಡು, 'ಇವನೇ ಕಳ್ಳ, ಸುಮ್ಮನೇ ಕಣ್ಣು ಮುಚ್ಚಿಕೊಂಡು ತಪಸ್ವಿಯ ಸೋಗುಹಾಕಿ ಕುಳಿತಿದ್ದಾನೆ' ಎಂದು ನಿರ್ಧರಿಸಿದರು. ಆ ಮುನಿಯನ್ನು ಅವರು ಸೆರೆಹಿಡಿದು, ಬಂಧಿಸಿ, ಬೇಡಿಹಾಕಿದರು. 'ಕಳ್ಳ ದೊರಕಿದ' ಎಂದು ಸಮಾಚಾರ ಮುಟ್ಟಿಸಿದರು ಮಹಾರಾಜನಿಗೆ. ರಾಜ ಕುಳಿತಲ್ಲಿಯೇ ಅಪ್ಪಣೆ ಮಾಡಿದ. 'ರಾಜಧಾನಿಯ ಅಗಸೆಬಾಗಿಲಲ್ಲಿಯೇ ಶಿಕ್ಷೆಮಾಡಿರಿ' ಎಂದು ಆಜ್ಞೆ ಇತ್ತ. ಮಹಾದ್ವಾರದ ಬಳಿಯಲ್ಲಿ ಆ ಮಾಂಡವ್ಯ ಋಷಿಯನ್ನು ಶೂಲಕ್ಕೇರಿಸಿದರು. ಪೃಷ್ಠದಲ್ಲಿ ಕಬ್ಬಿಣ ಸಲಾಕೆ ಹಾಕಿ ನಡುನೆತ್ತಿಯವರೆಗೆ ಚುಚ್ಚಿ ಶೂಲಕ್ಕೇರಿಸಿದರು. ಇಷ್ಟಾದರೂ ಆ ಮುನಿಗೆ ಎಚ್ಚರವಿಲ್ಲ. ಯೋಗಸಮಾಧಿಯಲ್ಲಿ ತನ್ಮಯ. ಅದರಿಂದ ಅವನು ದೇಹಾಭಿಮಾನ ಬಿಟ್ಟಿದ್ದರಿಂದ ಯಾವ ದುಃಖ, ಯಾತನೆ ಅನಿಸಲಿಲ್ಲ.

ಅಂದಿನ ರಾತ್ರಿ ಕಾಳರಾತ್ರಿ! ಸುತ್ತಲೂ ಎತ್ತೆತ್ತಲೂ ಕತ್ತಲೆ! ಇಂತಹ ಗಾಡಾಂಧಕಾರದಲ್ಲಿ ಆ ಪತಿವ್ರತಾಶಿರೋಮಣಿಯು ತನ್ನ ಪತಿಯನ್ನು ಬೆನ್ನ ಮೇಲೆ ಹೊತ್ತುಕೊಂಡು ವೇಶ್ಯೆಯ ಮನೆಗೆ ಹೊರಟಳು. ತೆಗ್ಗುದಿನ್ನೆ ದಾರಿ, ಅಂಧಕಾರ,

ಭೀಕರವಾದ ರಾತ್ರಿ ಕಾಲ, ಕಣ್ಣಿಗೆ ಏನೂ ಕಾಣುತ್ತಿರಲಿಲ್ಲ. ಆದರೂ ಸೇಗೊ ಕಾಲಾಡಿಸುತ್ತ, ನಿಧಾನವಾಗಿ ಪತಿಯನ್ನು ಹೆಗಲ ಮೇಲೆ ಹೊತ್ತುಕೊಂಡು ಆ ಪತಿವ್ರತೆಯು ವೇಶ್ಯಾಮಂದಿರಕ್ಕೆ ಹೋಗಲು ದಾರಿ ಕ್ರಮಿಸುತ್ತಿದ್ದಳು. ಹೋಗುವಾಗ, ಅಕಸ್ಮಾತ್ತಾಗಿ ಆ ಸಾಧ್ವಿಯ ಹೆಗಲ ಮೇಲೆ ಹೊತ್ತುಕೊಂಡ ಆ ಕುಷ್ಠರೋಗಿಷ್ಠನ ದೇಹವು ಮಾಂಡವ್ಯ ಮುನಿಗೆ ತಾಗಿತು. ಆದರಿಂದ ಆಗಲೇ ಅವನ ತಪಃಸಮಾಧಿಗೆ ಭಂಗ ಬಂದು ಎಚ್ಚರವಾಯಿತು. ಕೂಡಲೇ ಅವನಿಗೆ ಆ ಶೂಲದ ಬೇನೆಯ ಅನುಭವ ಪ್ರಾರಂಭವಾಯಿತು. ಆದರಿಂದ ಕೋಪವೂ ಬಂದಿತು. ಕೂಡಲೇ ಅವನು ಶಾಪಕೊಟ್ಟ - ''ನನ್ನ ಶೂಲಾರೋಪಣದ ನೋವನ್ನು ಇದೀಗ ಯಾವನು ತೀವ್ರಗೊಳಿಸಿದನೋ ಅವನು ಸೂರ್ಯೋದಯವಾದ ಕೂಡಲೇ ಸತ್ತುಹೋಗಲಿ'' ಹೀಗೆ ಆ ಮಹಾಮುನಿಯು ಶಾಪ ಕೊಟ್ಟ ಕೂಡಲೇ ಅವಳ ಪತಿಯು ನೆಲಕ್ಕೆ ಬಿದ್ದನು. ಅದನ್ನು ನೋಡಿ ಆ ಸಾಧ್ವೀಮಣಿಯು ''ಸೂರ್ಯೋದಯವಾದ ಕೂಡಲೇ ನನ್ನ ಪತಿ ಸಾಯುವಂತಾದರೆ ಸೂರ್ಯನೇ ಉದಯಿಸದಿರಲಿ ನಾಳೆ'' ಎಂದು ಗಟ್ಟಿಯಾಗಿ ಕೂಗಿದಳು. ಇಷ್ಟು ಹೇಳಿ ಆ ಪತಿವ್ರತೆಯು ತನ್ನ ಪತಿಯನ್ನು ಮನೆಗೆ ಕರೆದುಕೊಂಡು ಹೋದಳು. ಮನೆಯಲ್ಲಿ ಅವನನ್ನು ಹಾಸಿಗೆಯ ಮೇಲೆ ಮಲಗಿಸಿ, ತಾನು ಅವನನ್ನು ಗಟ್ಟಿಯಾಗಿ ಆಲಿಂಗಿಸಿಕೊಂಡೇ ಕುಳಿತಳು. ಇತ್ತ ಮುನಿಶ್ರೇಷ್ಠನಾದ ಮಾಂಡವ್ಯನು ಹೀಗೆ ಶಾಪ ಕೊಟ್ಟು, ಶೂಲದಿಂದ ತನ್ನನ್ನು ಬಿಡಿಸಿಕೊಂಡು ತನ್ನಷ್ಟಕ್ಕೆ ತಾನು ಹೊರಟು ಹೋದನು.

ಆ ಸಾಧ್ವಿಯ ಶಾಪದ ಭಯದಿಂದ ಮೂರು ದಿನ ಸೂರ್ಯನು ಉದಯಿಸಲೇ ಇಲ್ಲ. ಪ್ರಪಂಚವೆಲ್ಲವೂ ತಲ್ಲಣಿಸಿತು. ದಿಗ್ದೇವತೆಗಳೂ ದಿಗ್ಭ್ರಾಂತರಾದರು. ಜಗತ್ತೆಲ್ಲವೂ ಗಾಡಾಂಧಕಾರದಲ್ಲಿ ಮುಳುಗಿತು. ಇಂದ್ರನನ್ನು ಮುಂದೆ ಮಾಡಿಕೊಂಡು ದೇವತೆಗಳು ಬ್ರಹ್ಮನ ಬಳಿಗೆ ಬಂದರು, ನಡೆದ ಸಮಾಚಾರವನ್ನೆಲ್ಲ ತಿಳಿಸಿದರು ಆ ಪದ್ಮಾಸನನಿಗೆ. ಇದನ್ನೆಲ್ಲ ಕೇಳಿ, ಬ್ರಹ್ಮದೇವರು ದೇವತೆಗಳಿಗೆ ಸೂರ್ಯೋದಯ ವಾಗದಿರುವುದಕ್ಕೆ ಕಾರಣ ಪತಿವ್ರತೆಯ ಶಾಪವೇ ಎಂದು ತಿಳಿಸಿ ಹೇಳಿದರು. ಮತ್ತು ಆ ಎಲ್ಲ ದೇವತೆಗಳನ್ನು ಕರೆದುಕೊಂಡು ಬ್ರಹ್ಮದೇವರು ಭೂಮಂಡಲದಲ್ಲಿರುವ ಆ ಸಾಧ್ವೀಮಣಿಯ ಮನೆಗೆ ಬಂದರು. ದೇವವಿಮಾನಗಳ ಕಾಂತಿಯನ್ನು ಕಂಡೇ ಆ ಸಾಧ್ವೀಮಣಿಯು ಭಯಚಕಿತಳಾದಳು. ''ಅಯ್ಯೋ ಸೂರ್ಯನೇಕೆ ನನ್ನ ಮನೆಗೆ ಬಂದ'' ಎಂದು ಗೋಳಿಟ್ಟಳು. ಆಗ ಬ್ರಹ್ಮದೇವರು ಮುಂದೆ ಬಂದು ಆ ಸತೀಮಣಿಗೆ ಹೇಳಿದರು.

''ತಾಯಿ, ಇನ್ನಾದರೂ ನೀನು ಕೋಪಗೊಳ್ಳದಿರು, ಸೂರ್ಯನಿಗೆ ಉದಯಿಸಲು ಅನುಮತಿ ನೀಡು. ರವಿ ಉದಯಿಸದಿದ್ದರೆ ದೇವತೆಗಳು, ದೇವತಾಕಾರ್ಯಗಳು, ದ್ವಿಜರು, ಬ್ರಹ್ಮಕಾರ್ಯಗಳು ನಷ್ಟವಾಗಿ ಹೋಗುವವು. ಈ ಎಲ್ಲ ದೇವ, ದ್ವಿಜರ ವಿನಾಶವು ನಿನಗೆ ಇಷ್ಟವೆ ?''

**ಪತಿವ್ರತೆ :-** ಸ್ವಾಮಿ, ದೇವತೆಗಳು ನನಗೆ ವಂದ್ಯರು, ದ್ವಿಜರು ಪೂಜ್ಯರು, ಇದರಲ್ಲಿ ಸಂದೇಹವಿಲ್ಲ. ಆದರೆ ಇವರೆಲ್ಲರಿಗಿಂತ ನನಗೆ ನನ್ನ ಪತಿ ಪೂಜ್ಯ ಮತ್ತು ವಂದ್ಯ. ಸೂರ್ಯೋದಯವಾದ ಕೂಡಲೇ ಅವನಿಗೆ ಮೃತ್ಯುವೆಂದು ಮುನಿಯಶಾಪ. ಅದಕ್ಕಾಗಿಯೇ ನಾನು ಕೂಡ 'ಸೂರ್ಯನೇ ಉದಯಿಸದಿರಲಿ, ನನ್ನ ಪತಿ ಬದುಕಿಯೇ

ಇರಲಿ' ಎಂದು ಆಣೆ ಇಟ್ಟಿದ್ದೇನೆ. ನನಗೆ ಸೂರ್ಯನ ಮೇಲೆ ಕೋಪವಿಲ್ಲ, ದೇವತೆಗಳ ಮೇಲೆ ದ್ವೇಷವಿಲ್ಲ, ನಾನೀಗ ಸೂರ್ಯೋದಯ ಪ್ರತಿಬಂಧಿಸಿದ್ದು ಪತಿಯ ಮೇಲಿನ ಮೋಹದಿಂದ, ನನ್ನ ಮುತ್ತೈದೆತನದ ಲೋಭದಿಂದ, ನನ್ನ ಸೌಭಾಗ್ಯದ ಆಸೆಯಿಂದ.

**ಬ್ರಹ್ಮ** :- ನಿನ್ನ ಒಬ್ಬ ಪತಿಯ ಮರಣವಾದರೂ ಸೂರ್ಯೋದಯದಿಂದ ಮೂರು ಲೋಕಕ್ಕೂ ಹಿತ. ಆದರಿಂದ ನಿನಗೂ ಹೆಚ್ಚಿನ ಪುಣ್ಯ. ಆದುದರಿಂದ ತಾಯಿ, ಸೂರ್ಯೋದಯಕ್ಕೆ ಅಡ್ಡಿಪಡಿಸಬೇಡ.

**ಪತಿವ್ರತೆ** :- ಭಗವನ್, ನನಗೆ ಪತಿಯ ಹೊರತು ಬೇರೆ ಇಲ್ಲ. ಬೇರೆ ಆಧಾರವೂ ಇಲ್ಲ, ನನಗೆ ಜ್ಞಾನವಿದ್ದುದು ಒಂದೇ ವಿಷಯದಲ್ಲಿ- 'ನನ್ನ ಪತಿಗೆ ಹಿತವಾಗಬೇಕು', ಇದೇ ನನ್ನ ಜ್ಞಾನ, ಭಕ್ತಿ, ಸರ್ವಸ್ವ. ಇದರ ಹೊರತು ಬೇರೆ ಏನೂ ನನಗೆ ತೋರುವುದೂ ಇಲ್ಲ, ತಿಳಿಯುವುದೂ ಇಲ್ಲ, ಸೇರುವುದೂ ಇಲ್ಲ.

**ಬ್ರಹ್ಮ** :- ತಾಯಿ, ಒಪ್ಪಿದೆ ನಿನ್ನ ಅಭಿಪ್ರಾಯವನ್ನು. ಅದಕ್ಕಾಗಿ ನಾನೊಂದು ಉಪಾಯವನ್ನು ಸೂಚಿಸುತ್ತೇನೆ- ಈಗ ಸೂರ್ಯನು ಉದಿತನಾಗಲಿ, ಅದರಿಂದ ನಿನ್ನ ಪತಿಯು ಸತ್ತುಹೋದರೂ ನೀನು ಯೋಚಿಸಬೇಡ. ಸೂರ್ಯೋದಯವಾಗಿ ಜಗತ್ತಿಗೆಲ್ಲ ಕಲ್ಯಾಣವಾದ ಬಳಿಕ, ನಿನ್ನ ಪತಿ ಸತ್ತುಬಿದ್ದ ಆ ಬೂದಿಯಿಂದಲೇ ಕಾಮನಂತೆ ಕಾಂತ ಕಮನೀಯವಾದ ದೇಹದಿಂದ ಸುಂದರನಾಗಿ ನಿನ್ನ ಪತಿಯು ಮತ್ತೆ ಹುಟ್ಟಿ ಬರುವನು. ಅನಂತರ ನೀನು ರತಿಯಂತೆ ರೂಪವತಿಯಾಗಿ ಅವನ ಸೇವೆ ಮಾಡು. ಮುಂದೆ ನೀವಿಬ್ಬರೂ ದಂಪತಿಗಳು ಸ್ವರ್ಗದಲ್ಲಿ ಲಕ್ಷ್ಮೀನಾರಾಯಣರಂತೆ ಪೂಜಿಸಲ್ಪಡುವಿರಿ.

**ಪತಿವ್ರತೆ** :- ಪಿತಾಮಹ, ಪತಿ ಮರಣಹೊಂದಿದ ಬಳಿಕ ನಾನು ವಿಧವೆಯಾಗಿ ಲೋಕನಿಂದಿತಳಾಗುವೆ, ನನ್ನ ಮಾಂಗಲ್ಯ ಭಗ್ನವಾಗುವದು. ಆ ನನ್ನ ಅಮಂಗಳ ಅವಸ್ಥೆಗೆ ಎಲ್ಲಿಯ ಸದ್ಗತಿ ?

**ಬ್ರಹ್ಮ** :- ತಾಯಿ, ಸ್ವಲ್ಪ ವಿಚಾರಿಸಿ ನೋಡು, ಈಗ ನಿನ್ನ ಪತಿ ಮೃತನಾಗಿಲ್ಲ. ಆದರೆ ಮಹಾರೋಗಿಯಾಗಿ, ವಿದ್ರೂಪನಾಗಿ ಅಸಹ್ಯ ಅವಸ್ಥೆಯಲ್ಲಿ ಇರುತ್ತಾನೆ. ಅವನು ಇಂತಹ ಉಲ್ಬಣ ರೋಗದಲ್ಲಿ ನರಳುತ್ತ ಇದ್ದರೆ ಅವನಿಗೇನು ಸುಖ? ನಿನಗೇನು ಸಂತೋಷ? ನಾನು ಹೇಳಿದಂತೆ ಕೇಳಿದರೆ ಸೂರ್ಯೋದಯದವರೆಗೆ ನೀನು, ಮುತ್ತೈದೆಯಾಗಿ ಇರುವೆ, ಸೂರ್ಯೋದಯದ ಮರುಕ್ಷಣವೇ ನಿನ್ನ ಗಂಡನ ಶರೀರ ಕ್ಷಣಾರ್ಧದಲ್ಲಿ ಬೂದಿಯಾಗುವನು. ಅದೇ ಕ್ಷಣದಲ್ಲಿ ಕಾಮನಂತಹ ದಿವ್ಯ ಶರೀರ ಅವನಿಗೆ ಪ್ರಾಪ್ತವಾಗುವದು. ರೋಗಿಷ್ಟ ಶರೀರಕ್ಕೆ ಬದಲಾಗಿ ನಿನ್ನ ಪತಿಗೆ ದಿವ್ಯ, ಸುಂದರವಾದ ಆರೋಗ್ಯಭಾಗ್ಯ ಪರಿಪೂರ್ಣವಾದ ಕಾಂತಿ ಸಂಪನ್ನ ಶರೀರ ಬಂದರೆ ಬೇಡ ಎನ್ನುವಿಯಾ? ನಿನ್ನ ಗಂಡನ ಮುಂದಿನ ಭಾಗ್ಯ ಹಾಗೂ ನಿನ್ನ ಸೌಭಾಗ್ಯಗಳನ್ನು ನೆನೆದಾದರೂ ಈಗ ಸೂಯೋದಯಕ್ಕೆ ಅನುಮತಿ ನೀಡು.

ಬ್ರಹ್ಮದೇವರು ಹೀಗೆ ತಿಳಿ ಹೇಳಿದ ಬಳಿಕ ಒಪ್ಪಿದಳು-ಆ ಸಾಧ್ವೀಮಣಿ. ಬ್ರಹ್ಮದೇವರು ಸೂರ್ಯನಿಗೆ ಉದಯಿಸಲು ಆದೇಶವಿತ್ತ, ತಕ್ಷಣ ಸೂರ್ಯೋದಯವಾಯಿತು. ಅದೇ ಕ್ಷಣದಲ್ಲಿ ಅವಳ ಕುಷ್ಠರೋಗಿಯಾದ ಪತಿ ಸತ್ತು ಬೂದಿಯಾಗಿ ಬಿದ್ದ. ಆ ಬೂದಿಯ ನಡುವಿನಿಂದಲೇ ಸುಂದರಾಂಗನಾದ

ಜಗನ್ಮೋಹಕನಾದ ಸುಕುಮಾರ ತರುಣ ಎದ್ದು ನಿಂತ. ಅವನನ್ನು ಕಾಣುತ್ತಲೇ ನಿಬ್ಬೆರಗಾಗಿ ನಿಂತರು- ಆ ನಗರದ ನಾಗರಿಕರು. ಆನಂದ ತುಂದಿಲರಾಗಿ ಜಯ ಜಯಕಾರ ಮಾಡಿತು ಜನ ಜಂಗುಳಿ. ಕೂಡಲೇ ಬಂದಿತು ಸ್ವರ್ಗದಿಂದ ಅಮರಾವತಿಯ ವಿಮಾನ. ಸೂರ್ಯನಂತೆ ತೇಜೋದೀಪ್ತಿಯಿಂದ ಕಳಕಳಿಸುತ್ತಲಿತ್ತು ಆ ದೇವಯಾನ. ಸಾಧ್ವೀಮಣಿಯು ದಿವ್ಯಾಂಗನಾ ಮೋಹಕನಾದ ಆ ಪತಿಯ ಸ್ಫುರದ್ರೂಪ ಕಂಡು ಹರ್ಷಿತಳಾದಳು. ನಾಚಿಕೆಯಿಂದ ನೀರಾಗಿ ಪಾದಗಳಿಗೆ ಪೊಡಮೊಟ್ಟಳು- ಭಕ್ತಿಯಿಂದ. ಅವನೂ ಅವಳ ಕೈಹಿಡಿದು ವಿಮಾನವನ್ನು ಆರೋಹಣ ಮಾಡಿದ. ದೇವತೆಗಳು ದಿವ್ಯ ದೇಹದ ಆ ದಂಪತಿಗಳನ್ನು ದೇವಲೋಕಕ್ಕೆ ಕರೆದೊಯ್ದರು- ದಿವ್ಯ ದುಂದುಭಿಯೊಂದಿಗೆ. ಇವಳೇ ಆ ಪತಿವ್ರತೆ 'ಶುಭಾದೇವಿ'. ಇಂತಹ ಅಸಾಧಾರಣ ಪತಿ ಸೇವೆ ಮಾಡಿದ್ದರಿಂದಲೇ ಅವಳು ಭೂತ, ಭವಿಷ್ಯ, ವರ್ತಮಾನಗಳಲ್ಲಿ ನಡೆಯುವ ಸಕಲ ವೃತ್ತಾಂತಗಳನ್ನು ಕುಳಿತಲ್ಲಿಯೇ ತಿಳಿದುಕೊಳ್ಳುತ್ತಾಳೆ. ಮಾನವ ಸಾಮಾನ್ಯರಿಗೆ ಅವಳ ದರ್ಶನವೂ ದುರ್ಲಭ. ನಿನ್ನ ಮೇಲಿನ ಪ್ರೀತಿಯಿಂದ ನಾನು ನಿನಗೆ ಅವಳ ದರ್ಶನ ಮಾಡಿಸಿದೆ. ಅವಳ ಮಹಿಮೆಯನ್ನು ಕಾಣಿಸಿದೆ. ಅವಳ ದಿವ್ಯ ವೃತ್ತಾಂತವನ್ನು ನಿನಗೆ ಹೇಳಿದ್ದೇನೆ.

ಈ ಪತಿವ್ರತಾಖ್ಯಾನವನ್ನು ಕೇಳಿದವರೂ, ಕೇಳಿಸಿದವರೂ, ಹೇಳಿದವರೂ, ಹೇಳಿಸಿದವರೂ ಅಕ್ಷಯ ಸ್ವರ್ಗವನ್ನು ಹೊಂದುತ್ತಾರೆ. ಜನ್ಮ ಜನ್ಮಾಂತರಗಳಿಂದ ಸಂಚಿತವಾದ ಪಾಪರಾಶಿಯೆಲ್ಲ ಲೋಪವಾಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪತಿವ್ರತೆಯ ತಪಶ್ಶಕ್ತಿ ಎಂಬನಲವತ್ತೆಂಟನೇಯ ಅಧ್ಯಾಯವು ಮುಗಿದುದು.*

## ಸ್ತ್ರೀಯರ ಸ್ವಭಾವ

**ಅಧ್ಯಾಯ - ೪೯**

**ದ್ವಿಜ ಉವಾಚ**

**ಮಾಂಡವ್ಯಸ್ಯ ಮುನೇರ್ವಿಷ್ಣೋ ಶೂಲಘಾತಃ ಕಥಂ ತನೌ ।**
**ಪತ್ಯುಃ ಪತಿವ್ರತಾಯಾಶ್ಚ ಕಥಂ ಕುಷ್ಠಂ ಕಳೇವರೇ ॥**

**ನರೋತ್ತಮ** :- ಎಲೈ ವಿಷ್ಣುವೇ ! ಮಾಂಡವ್ಯ ಋಷಿಗೆ ಶೂಲದ ಏಟು ದೇಹದಲ್ಲಿ ಬೀಳಲು ಕಾರಣವೇನು? ಪತಿವ್ರತೆಯ ಗಂಡನಿಗೆ ಕುಷ್ಠ ರೋಗವು ಬರುವದಕ್ಕೂ ಸಹ ಕಾರಣವೇನು ?

**ಭಗವಂತ** :- ಮಾಂಡವ್ಯ ಮುನಿಯು ಚಿಕ್ಕ ಹುಡುಗನಿದ್ದಾಗ 'ಯಲ್ಲಿಕಾ' ಎಂಬ ಕೀಟಕದ ಹಿಂಬದಿಯಲ್ಲಿ ಮುಳ್ಳು ಚುಚ್ಚಿ ನೋವನ್ನು ಉಂಟು ಮಾಡಿದ್ದ. ಹುಡುಗಾಟಿಕೆಯ ವಯಸ್ಸಲ್ಲವೆ ಅದು? ಆ ಪ್ರಾಣಿಹಿಂಸೆಯ ದೋಷದಿಂದ ಯಮಧರ್ಮನು ಅವನಿಗೆ ಈ ಶಿಕ್ಷೆ ಕೊಟ್ಟನು. ಒಂದು ಹಗಲು, ಒಂದು ರಾತ್ರಿ ಶೂಲಗಂಬದಲ್ಲಿ ದುಃಖವನ್ನು ಆ ಮಹಾಮುನಿಯು ಅನುಭವಿಸಬೇಕಾಯಿತು. ಆದರೂ ಸಮಾಧಿಯಲ್ಲಿ ಇದ್ದುದರಿಂದ ಹೆಚ್ಚು ಹೊತ್ತು ಆ ಶೂಲಾರೋಪಣದ ದುಃಖವು ಮುನಿಯ ಅನುಭವಕ್ಕೆ ಬರಲಿಲ್ಲ, ಯಮ ಶಾಸನವನ್ನು ಚರಿತಾರ್ಥವನ್ನಾಗಿ ಮಾಡುವವರೆಗೆ ಮಟ್ಟಿಗೆ ಕೆಲಹೊತ್ತು ಆ ಮುನಿಯು ದುಃಖವನ್ನು ಅನುಭವಿಸಿದ.

ಆ ಪತಿವ್ರತೆಯ ಗಂಡನು ಹಿಂದೆ ಒಬ್ಬ ಕುಷ್ಠರೋಗದ ಅಂಗವಿಕಲನನ್ನು ಕಂಡು ಅಸಹ್ಯ ಪಟ್ಟುಕೊಂಡ. ಸಮೀಪಕ್ಕೆ ಬಂದಾಗ ಅವನನ್ನು ಹೊಡೆದು ಹಾಕಿದ. ಮೇಲಾಗಿ ಆ ದ್ವಿಜನಿಗೆ ಯಾವ ಇಂದ್ರಿಯದ ಮೇಲೂ ನಿಯಂತ್ರಣವಿರಲಿಲ್ಲ. ಇಂದ್ರಿಯ ಎಳೆದಲ್ಲಿ ಅವನು ಧಾವಿಸುತ್ತಿದ್ದ. ಹೀಗೆ ಲೌಲ್ಯ, ಚಾಪಲ್ಯ, ರೋಗಿಷ್ಠರ ನಿರ್ಭರ್ತ್ಸನೆ ಮುಂತಾದ ಪಾಪಗಳಿಂದಾಗಿ ಅದೇ ಜನ್ಮದಲ್ಲಿ ಆ ದ್ವಿಜನ ಮೈತುಂಬ ಕುಷ್ಠ ತೆಗೆದುಕೊಂಡಿತು. ದುರ್ಗಂಧ ವಾಸನೆ ಇಡುಗಿತು. ಇದೇ ದ್ವಿಜನು ಹಿಂದಿನ ಜನ್ಮದಲ್ಲಿ ರಜಸ್ವಲೆಯಾಗದಿರುವ ನಾಲ್ಕು ಜನ ಹೆಣ್ಣುಮಕ್ಕಳನ್ನು ಯೋಗ್ಯ ವರಗಳಿಗೆ ಶಾಸ್ತ್ರೋಕ್ತ ವಿಧಿಯಿಂದ ಲಗ್ನ ಮಾಡಿಕೊಟ್ಟಿದ್ದ. ಆ ಕನ್ಯಾದಾನದ ಫಲವಾಗಿ ಇಂತಹ ಸಾಧ್ವೀಮಣಿಯು ಮಡದಿಯಾಗಿ ದೊರೆತಿದ್ದಳು. ಅಂಥ ಆದರ್ಶ ಸತೀಮಣಿಯ ಪಾಣಿಗ್ರಹಣದ ಪುಣ್ಯ ಪ್ರಭಾವದಿಂದ ಮುಂದೆ ಅವನು ರೋಗಮುಕ್ತನಾಗಿ ದಿವ್ಯಶರೀರವನ್ನೂ ಶ್ರೇಷ್ಠಲೋಕವನ್ನೂ ಆ ಕಾಂತಾಮಣಿಯೊಂದಿಗೆ ಹೊಂದಿದನು.

**ನರೋತ್ತಮ :-** ಪ್ರಭೂ, ತಾವು ಈವರೆಗೆ ಸಾಧ್ವೀ ಶ್ರೇಷ್ಠಳಾದ ನಾರಿಯ ಚಾರು ಚರಿತ್ರವನ್ನು ಬಿತ್ತರಿಸಿದಿರಿ. ಆದರೆ ಎಲ್ಲರೂ-ಎಲ್ಲ ನಾರಿಯರೂ ಹೀಗೆ ಸತೀಶಿಖಾಮಣಿಗಳಾಗಿರುವುದಿಲ್ಲ. ಈ ಭೂವಲಯದಲ್ಲಿ ದುಷ್ಟ ನಾರಿಯರು ಭ್ರಷ್ಟಪತ್ನಿಯರು ಸಾಕಷ್ಟಿರುತ್ತಾರೆ. ದುರ್ದೈವದಿಂದ ಅಂತಹ ಹೆಂಡತಿಯು ಗಂಟು ಬಿದ್ದರೆ ಆ ಮನುಷ್ಯನಿಗೆ ಸ್ವರ್ಗವೂ ಇಲ್ಲ; ಮೋಕ್ಷವೂ ಇಲ್ಲ. ಇಂತಹ ನಾರಿಯರೆಂದರೆ-'ಕೃತ್ಯಾ' ಎಂದರೆ ಮಾಟದ ಗೊಂಬೆ; ಬೆಂಕಿಯ ಬೊಂಬೆ ಇದ್ದಂತೆ. ಇಂತಹ ಕೃತ್ಯಾ ನಾರಿಯರಿಂದ ದೂರಿದ್ದಷ್ಟು ಒಳ್ಳೆಯದು. ಅಂತಹ ಕೃತ್ಯಾನಾರಿ ಯಾರು?

**ಭಗವಂತ :-** ಈ ಜಗತ್ತಿನಲ್ಲಿ ಅನೇಕ ದೈತ್ಯಾಂಗನೆಯರಂತಹ 'ಕೃತ್ಯಾ' ಸ್ತ್ರೀಯರಿರುತ್ತಾರೆ. ಅವರನ್ನು ಮನಸ್ಸಿನಿಂದಲೂ ನೆನೆಯಬಾರದು. ದುಷ್ಟ ಸ್ತ್ರೀಯರಿಗೆ ನಿಜವಾದ ಪ್ರೀತಿಪಾತ್ರನಾದ ಪುರುಷನೇ ಇರುವದಿಲ್ಲ. ಹಸುಗಳು ಹೊಸ ಹುಲ್ಲನ್ನು ಕಂಡು ಧಾವಿಸುವಂತೆ ಹೊಸ ಹೊಸ ಪುರುಷರನ್ನು ಅಪೇಕ್ಷಿಸಿ ಕಂಡ ಗಂಡಸರೊಡನೆ ವಿಹರಿಸುತ್ತಾರೆ-ಈ ದುಷ್ಟ ನಾರಿಯರು. ತಾನು ಕೈ ಹಿಡಿದ ಗಂಡ ಸದ್ಗುಣಿ ಸುಂದರ, ಸಿರಿವಂತ, ಸಮರ್ಥ ಹಾಗೂ ಸತ್ಕುಲಪ್ರಸೂತನಿದ್ದರೂ ಅವನನ್ನು ಬಿಟ್ಟು ದೀನ, ಕುರೂಪಿ, ಕೀಳು ಕುಲದ, ದುರ್ಗುಣಿಯಾದ ಪರಪುರುಷನನ್ನು ಈ 'ಕೃತ್ಯಾ' ನಾರಿಯರು ಬಯಸುತ್ತಾರೆ. ಮನೆಯಲ್ಲಿಯ ಆಳು ಮನುಷ್ಯರಿಗೂ ಆಶೆ ಪಡುವದುಂಟು. ಈ ವಿಷಯದಲ್ಲಿ ಪಾರ್ವತೀ ನಾರದರ ಸಂವಾದ ಹೇಳುತ್ತೇನೆ ಕೇಳು.

**ನಾರದ :-** ದೇವಿ, ದುಷ್ಟಸ್ತ್ರೀಯರ ದುಶ್ಚೇಷ್ಟೆಗಳು ಹೇಗಿರುತ್ತವೆ? ಅವನ್ನು ನಿನ್ನ ಬಾಯಿಂದ ಕೇಳಬೇಕೆಂದು ನನಗೆ ಅಪೇಕ್ಷೆ. ನೀನು ಎಲ್ಲ ನಾರಿಯರ ಅಂತರಂಗ ಬಲ್ಲೆಯಷ್ಟೇ?

**ಪಾರ್ವತಿ :-** ನಾರದ, ಸ್ತ್ರೀಯರಲ್ಲಿ ಸದ್ಗುಣಗಳ ಖಣಿಗಳು, ಸತೀಮಣಿಗಳು ಅನೇಕರಿರುತ್ತಾರೆ. ಆದರೆ ಎಲ್ಲ ಸ್ತ್ರೀಯರು ಅಂತಹ ಸತೀಮಣಿಗಳೇ ಇರುವರೆಂದು ಹೇಳಲಿಕ್ಕಾಗುವುದಿಲ್ಲ. ನೀಚನಾರಿಯರ, ದುಷ್ಟ ದುರ್ಗುಣಗಳ ವಿಷಯದಲ್ಲಿ ಕೆಲವು ಮಾತು ಹೇಳುತ್ತೇನೆ ಕೇಳು-

**ಸುವೇಷಂ ಪುರುಷಂ ದೃಷ್ಟ್ವಾ ಭ್ರಾತರಂ ಯದಿ ವಾ ಸುತಂ ।**
**ಯೋನಿಃ ಕ್ಲಿದ್ಯತಿ ನಾರೀಣಾಂ ಸತ್ಯಂ ಸತ್ಯಂ ಹಿ ನಾರದ ॥**

ಒಳ್ಳೆಯ ಸುಂದರನೂ, ಸುವೇಷನೂ, ಆಗಿರುವ ಸಹೋದರನೇ ಆಗಿರಲಿ, ಕೊನೆಗೆ ಮಗನೇ ಆಗಿರಲಿ ಅಂತಹ ಗಂಡಸನ್ನು ನೋಡಿದರೆ ಸ್ತ್ರೀಯರಿಗೆ ಕಾಮವಾಸನೆ ಉದ್ಭವಿಸುತ್ತದೆ. ಇದು ಖಂಡಿತವು, ಸತ್ಯವು.

**ಸ್ಥಾನಂ ನಾಸ್ತಿ ಕ್ಷಣಂ ನಾಸ್ತಿ ನಾಸ್ತಿ ಪ್ರಾರ್ಥಯಿತಾ ನರ ।**
**ತೇನ ನಾರದ ನಾರೀಣಾಂ ಸತೀತ್ವಮುಪಜಾಯತೇ ॥**

ಅವರಿಗೆ ಸ್ಥಳ ಸಿಕ್ಕುವದಿಲ್ಲ ಹೊತ್ತು ಸಿಕ್ಕುವದಿಲ್ಲ, ಅಪೇಕ್ಷಿಸುವವನು ದೊರಕುವದಿಲ್ಲ. ಆದ್ದರಿಂದ ಹೆಂಗಸರಿಗೆ ಪಾತಿವ್ರತ್ಯವು ಉಂಟಾಗುತ್ತದೆ.

**ಘೃತಕುಂಭಸಮಾ ನಾರೀ ತಪ್ತಾಂಗಾರಸಮಃ ಪುಮಾನ್ ।**
**ತಸ್ಮಾದ್ಘೃತಂ ಚ ವಹ್ನಿಂ ಚ ನೈಕಸ್ಥಾನೇ ಚ ಧಾರಯೇತ್ ॥**

ಹೆಂಗಸು ತುಪ್ಪದ ಗಡಿಗೆಗೆ ಸಮಾನಳೂ ಗಂಡಸು ಬೆಂಕಿಯ ಕಿಚ್ಚಿಗೆ ಸಮಾನನೂ ಆಗಿರುತ್ತಾನೆ. ಆದ್ದರಿಂದ ಬೆಂಕಿಯನ್ನೂ; ತುಪ್ಪವನ್ನೂ ಒಂದೆಡೆಯಲ್ಲಿ ಇಡಬಾರದು.

**ಯಥೈವ ಮತ್ತಮಾತಂಗಂ ಸೃಣಿಮುದ್ಗರಯೋಗತಃ ।**
**ಸ್ವವಶಂ ಕುರುತೇ ಯಂತಾ ತಥಾ ಸ್ತ್ರೀಣಾಂ ಪ್ರರಕ್ಷಕಃ ॥**

ಮಾವಟಿಗನು ಮದ್ದಾನೆಯನ್ನುಅಂಕುಶದೊಣ್ಣೆಗಳ ಏಟಿನಿಂದ ಹೇಗೆ ತಾನು ಹೇಳಿದಂತೆ ಕೇಳುವಂತೆ ಮಾಡುತ್ತಾನೆಯೊ ಹಾಗೆ ಯಜಮಾನನು ಸ್ತ್ರೀಯರನ್ನು ತಮ್ಮ ವಶವನ್ನಾಗಿ ಮಾಡಿಕೊಳ್ಳಬೇಕು.

**ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।**
**ಪುತ್ರಾಶ್ಚ ಸ್ಥಾವರೇ ಭಾವೇ ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ ॥**

ಚಿಕ್ಕತನದಲ್ಲಿ ತಂದೆಯೂ, ಪ್ರಾಯಬಂದಾಗ ಗಂಡನೂ, ಮುಪ್ಪಿನಲ್ಲಿ ಮಕ್ಕಳೂ ಕಾಪಾಡುತ್ತಾರೆ. ಸ್ತ್ರೀಯರಿಗೆ ಯಾವಾಗಲೂ ಸ್ವಾತಂತ್ರ್ಯವಿರಕೂಡದು.

**ಅರಕ್ಷಣಾದ್ಯಥಾ ಪಾಕಃ ಶ್ವಪಾಕವಶಗೋ ಭವೇತ್ ।**
**ತಥೈವ ಯುವತೀ ನಾರೀ ಸ್ವಚ್ಛಂದಾದ್ದುಷ್ಟತಾಂ ವ್ರಜೇತ್ ॥**

ಅಡಿಗೆಯನ್ನು ಕಾಪಾಡದಿದ್ದರೆ ಅದು ಹೇಗೆ ಕಾಗೆ ನಾಯಿಗಳ ಪಾಲಾಗುತ್ತದೆಯೋ ಅದರಂತೆಯೇ ಹೆಂಗಸನ್ನು ಕಾಯದೇ ಸ್ವತಂತ್ರವಾಗಿ ಬಿಟ್ಟರೆ ಕೆಟ್ಟು ಹೋಗುತ್ತಾಳೆ.

**ಕಾಚಿತ್ಪಾತಯತೇ ನಾರೀ ಕಾಚಿದುದ್ಧರತೇ ಕುಲಂ ।**
**ತಸ್ಮಾತ್ಸರ್ವ ಪ್ರಯತ್ನೇನ ಕುಲಜಾಮುದ್ವಹೇದ್ಬುಧಃ ॥**

ಕೆಲವು ಹೆಂಗಸರು ಕುಲವನ್ನು ನಾಶಮಾಡುತ್ತಾರೆ. ಕೆಲವರು ಉದ್ಧಾರ ಮಾಡುತ್ತಾರೆ. ಆದ್ದರಿಂದ ಸರ್ವಪ್ರಯತ್ನದಿಂದಲೂ ಒಳ್ಳೆಯ ಕುಲದಲ್ಲಿ ಹುಟ್ಟಿದ ಸ್ತ್ರೀಯನ್ನು ಮದುವೆಮಾಡಿಕೊಳ್ಳಬೇಕು.

**ಕುಲದ್ವಯಂ ಸಮಾ ನಾರೀ ಸಮಯಿತ್ವಾ ತು ತಿಷ್ಠತಿ ।**
**ಸಾಧ್ವೀ ತಾರಯತೇ ವಂಶಾನ್ದುಷ್ಟಾ ಪಾತಯತೇ ಧ್ರುವಂ ॥**

ಹೆಂಗಸು ಗಂಡನ ಮತ್ತು ತಂದೆಯ ಕುಲವನ್ನು, ತನ್ನ ಪಾತಿವ್ರತ್ಯದ ಪ್ರಭಾವದಿಂದ ಸಮನಾಗಿಯೇ ಉದ್ಧರಿಸಿ ಬಿಡುತ್ತಾಳೆ. ಪತಿವ್ರತೆಯು ವಂಶಗಳನ್ನು ಉದ್ಧಾರ ಮಾಡಿದರೆ, ದುಷ್ಟಳು ವಂಶವನ್ನು ನಾಶಮಾಡುತ್ತಾಳೆ; ಇದು ಖಂಡಿತವು.

**ದಾರೇಷ್ವಧೀನಂ ಸ್ವರ್ಗಂ ಚ ಕುಲಂ ಪಂಕಂ ಯಶೋಽಯಶಃ ।**
**ಪುತ್ರಂ ದುಹಿತರಂ ಮಿತ್ರಂ ಸಂಸಾರೇ ಕಥಯಂತಿ ಚ ॥**

ಸ್ವರ್ಗ, ಕುಲ, ಪಾಪ, ಕೀರ್ತಿ, ಅಪಕೀರ್ತಿ, ಮಗ, ಮಗಳು, ಮಿತ್ರರು, ಇವೆಲ್ಲವೂ ಸಂಸಾರದಲ್ಲಿ ಹೆಂಡತಿಯ ಅಧೀನ ಎಂದು ಹೇಳುತ್ತಾರೆ.

**ಯೋ ಮೋಹಾದ್ದುರ್ಭಗಾಂ ಕೃತ್ವಾ ಸಾಧ್ವೀಂ ತ್ಯಜತಿ ಪಾಪಕೃತ್ ।**
**ತಸ್ಯಾ ವಧೇನ ಯತ್ಪಾಪಂ ತದ್ಭುಕ್ತ್ವಾ ನರಕಂ ವ್ರಜೇತ್ ॥**

ಯಾವನು ಅಜ್ಞಾನದಿಂದ ಸಾಧ್ವಿಯಾದ ಹೆಂಗಸನ್ನು ತಿರಸ್ಕರಿಸಿ ಬಿಡುತ್ತಾನೆಯೋ, ಅವನಿಗೆ ಅವಳನ್ನು ಕೊಂದ ಸ್ತ್ರೀಹತ್ಯೆಯ ಪಾಪ ಬರುತ್ತದೆ; ನರಕಕ್ಕೆಹೋಗುತ್ತಾನೆ.

**ಪರದಾರಾನ್ಬಲಾದ್ಗತ್ವಾ ಧನೈರ್ವಾ ಸಂಪ್ರಲೋಭಯನ್ ।**
**ಸ ಯಾತಿ ನರಕಂ ಘೋರಂ ಪ್ರೇತ್ಯೇಹ ಚ ಕಳತ್ರಹಾ ॥**

ಪರರ ಹೆಂಡಿರನ್ನು ಬಲಾತ್ಕಾರದಿಂದ ಹೊಂದಿದರೂ, ಹಣ ಮುಂತಾದವುಗಳಿಂದ ಆಶೆ ತೋರಿಸಿ, ರಮಿಸಿದರೂ ಅವನಿಗೆ ಹೆಂಡತಿಯನ್ನು ಕೊಂದಷ್ಟು ಪಾಪ ಬರುತ್ತದೆ. ಸತ್ತ ಮೇಲೆ ನರಕಕ್ಕೆ ಹೋಗುತ್ತಾನೆ.

ಸ್ತ್ರೀಯರ ಅಪಹಾರ ಹಾಗೂ ತಂಗಳ ಆಹಾರದಿಂದ ಪತಿತನಾಗುತ್ತಾನೆ-ಮಾನವನು. ಮ್ಲೇಂಛ ಅಥವಾ ಪಂಚಮಜಾತಿಯ ವನಿತೆಯರೊಡನೆ ವಿಹರಿಸಿದರೆ ನರಿ ನಾಯಿಯಾಗಿ ಅನೇಕ ಜನ್ಮ ಕಷ್ಟಪಟ್ಟು ಮತ್ತೆ ನರಕದಲ್ಲಿ ಕೊಳೆಯುತ್ತಾನೆ. ತಾಯಿ, ಗುರುಪತ್ನಿ, ಒಡೆಯನಮಡದಿ, ದ್ವಿಜಸ್ತ್ರೀ, ಸೋದರಿ, ಸೋದರಸೊಸೆ, ಮಗಳು, ತನ್ನ ಸೊಸೆ, ಚಿಕ್ಕಮ್ಮ, ದೊಡ್ಡಮ್ಮ, ಸೋದರತ್ತೆ, ತಾಯಿಯ ಅಕ್ಕ-ತಂಗಿಯರು ಮುಂತಾದ ಬಾಂಧವ ಮಹಿಳೆಯರೊಂದಿಗೆ ರತಿಕೇಳಿಗೆ ಇಳಿದರೆ ಪ್ರಾಯಶ್ಚಿತ್ತವೇ ಇಲ್ಲ. ಬ್ರಹ್ಮಹತ್ಯೆಗಿಂತ ಘೋರ ಪಾಪವನ್ನು ಅವನು ಹೊಂದುತ್ತಾನೆ.

**ನರೋತ್ತಮ :-** ಭಗವನ್, ತಿಳಿಯದೆ ಇಂತಹ ಮಹಾಪಾತಕಗಳು ಒಂದು ವೇಳೆ ನರನಿಂದ ನಡೆದು ಹೋದರೆ ಅದಕ್ಕೆ ಏನಾದರೂ ಪ್ರಾಯಶ್ಚಿತ್ತ, ಉಂಟೆ? ಉದ್ಧಾರದ ಆಶೆ ಏನಾದರೂ ಇದೆಯೆ-ಇಂತಹ ಮಹಾ ಪಾತಕಿಗಳಿಗೆ?

**ಭಗವಂತ :-** ಪಶ್ಚಾತ್ತಾಪದಿಂದ ಪರಿಹಾರವಾಗದ ಪಾಪಗಳೇ ಇಲ್ಲ. ಇಂತಹ ಮಹಾಪರಾಧ ಮಾಡಿದರೆ ಮನುಷ್ಯನು ಮನಸಾ ಪಶ್ಚಾತ್ತಾಪವನ್ನು ಮೊದಲು ಪಡಬೇಕು. ಹೃದಯದಲ್ಲಿ ಗೋವಿಂದನನ್ನು ಸರ್ವದಾ ಸ್ಮರಿಸಬೇಕು. ಮತ್ತು ತಾನು ಗೃಹಸ್ಥಾಶ್ರಮ ಸುಖಾನುಭವವನ್ನು ತ್ಯಜಿಸಿ ಯಾವ ಜನ್ಮ ಭಗವದಾರಾಧನೆಯಲ್ಲಿಯೇ ಕಾಲ ಕಳೆಯಬೇಕು.

ಬ್ರಹ್ಮಹತ್ಯೆ, ಗುರಪತ್ನೀ ಗಮನ, ಮದ್ಯಪಾನ. ಬಂಗಾರದ ಕಳವು ಮುಂತಾದ ಸರ್ವ ಮಹಾಪಾಪಗಳು ಶ್ರೀಹರಿಯ ನಾಮಸ್ಮರಣದಿಂದ ನಷ್ಟವಾಗುವವು. ಬೆಂಕಿ ತಗುಲಿದ ಬಳಿಕ ಅರಳೆ ಉಳಿಯುವದೆ? ಉರಿ ತೆಗೆದುಕೊಂಡ ಹುಲ್ಲು ನಾಶವಾಗದೆ ಇರುವದೆ? ಗೋವಿಂದನ ನಾಮಸ್ಮರಣೆ ಮಾಡಿದ ಬಳಿಕ ಪಾಪರಾಶಿ ಉಳಿಯುವದೆ? ಗೃಹಸ್ಥಾಶ್ರಮಿಯು ಗೋವಿಂದನ ನಾಮಸ್ಮರಣೆ ನಿತ್ಯವೂ ಮಾಡಬೇಕು. ಪೂಜೆಯನ್ನು ತಪ್ಪದೇ ಅನುದಿನವೂ ಆಚರಿಸಬೇಕು. ಸೂರ್ಯಗ್ರಹಣ ಕಾಲದಲ್ಲಿ ಗಂಗಾತೀರದಲ್ಲಿ ಕೋಟಿ ಹಸುಗಳನ್ನು ದಾನಮಾಡಿದ ಫಲ-ಒಂದು ಹರಿನಾಮ ಸ್ಮರಣೆಯಿಂದ ದೊರಕುವದು. ಶ್ರೀಹರಿಯ ಮಹಿಮೆಗಳಿಂದ ಒಡಗೂಡಿದ ಪುರಾಣವನ್ನು ಕೇಳಬೇಕು. ಪ್ರತಿನಿತ್ಯವೂ ಹೇಳಬೇಕು-ಭಕ್ತರ ಎದುರು ಇದರಿಂದ ವಿಷ್ಣು ಸಾಯುಜ್ಯ ಪ್ರಾಪ್ತಿ. ಸ್ತ್ರೀ ವಿಷಯದಲ್ಲಿ ಬೇರೆ ಏನಾದರೂ ಅಪರಾಧ ಮಾಡಿದ್ದರೆ ಪುಣ್ಯ ದಿನಗಳಲ್ಲಿ ಪೂರ್ಣ ಕುಂಭದಾನ ಮಾಡಬೇಕು. ಧನ-ಧಾನ್ಯಗಳನ್ನು ದಾನ ಕೊಡಬೇಕು.

ಯಾ ಸ್ತ್ರೀ ಬ್ರಾಹ್ಮಣಜಾತೀಯಂ ಮೃತಂ ಪತಿಮನುವ್ರಜೇತ್ ।
ಸಾ ಸ್ವರ್ಗಮಾತ್ಮಘಾತೇನ ಆತ್ಮಾನಂ ನ ಪತಿಂ ನಯೇತ್ ॥
ನ ಮ್ರಿಯೇತ ಸಮಂ ಭರ್ತ್ರಾ ಬ್ರಾಹ್ಮಣೀ ಬ್ರಹ್ಮಶಾಸನಾತ್ ।
ಪ್ರವ್ರಜ್ಯಾಗತಿಮಾಪ್ನೋತಿ ಮರಣಾದಾತ್ಮಘಾತಿನೀ ॥

ದ್ವಿಜಸ್ತ್ರೀಯು ಗಂಡನು ಸತ್ತರೆ ಆಗ ತಾನೂ ಜೊತೆಯಲ್ಲಿ ಸತ್ತರೆ ಅವಳು ತಾನೂ ಸ್ವರ್ಗವನ್ನು ಹೊಂದದೆ ಗಂಡನಿಗೂ ಸ್ವರ್ಗವನ್ನು ಹೊಂದಿಸುವದಿಲ್ಲ. ಆಕೆಗೆ ಆತ್ಮಘಾತ ದೋಷವು ಬರುತ್ತದೆ.

ದ್ವಿಜಸ್ತ್ರೀಯು ಬ್ರಹ್ಮನ ಅಪ್ಪಣೆಯಂತೆ ಗಂಡನೊಡನೆ ಸಾಯದೆ ಯತಿಯಂತಿರಬೇಕು. ಜೊತೆಯಲ್ಲಿ ಸತ್ತರೆ ಆತ್ಮಹತ್ಯೆಯ ದೋಷವು ಬರುತ್ತದೆ.

ವಿಧವೆಯಾದ ಸ್ತ್ರೀಯು ಮಾಂಸ ಮೊದಲಾದ ನಿಷಿದ್ಧ ಪದಾರ್ಥಗಳನ್ನು ತಿನ್ನಬಾರದು. ಅಂಗಡಿಗಳಲ್ಲಿ ದೊರಕುವ ಅಶುದ್ಧ ಪದಾರ್ಥಗಳನ್ನು ಸೇವಿಸಕೂಡದು. ತನಗೆ ಯೋಗ್ಯವಾದ ದೇವತಾರ್ಚನವನ್ನು ಮಾಡಬೇಕು. ಏಕಾದಶಿ ಮುಂತಾದ ವ್ರತಗಳನ್ನು ಆಚರಿಸಬೇಕು. ಗಂಡನಿಗಾಗಿ ಪ್ರತಿವರ್ಷವೂ ಶ್ರಾದ್ಧ ಮಾಡಿಸಬೇಕು. ಇದರಿಂದ ತಾನೂ ಉದ್ಧಾರವಾಗುವುದಲ್ಲದೆ, ತಂದೆಯ ಕುಲ, ಗಂಡನ ಕುಲ ಎರಡನ್ನೂ ಉದ್ಧರಿಸುವಳು. ಆದುದರಿಂದ ಅವಳ ಮಕ್ಕಳು, ಸೋದರರೇ ಮುಂತಾದ ಬಂಧು ಜನರು ವಿಧವೆಯಾದ ವನಿತೆಯಿಂದ ವ್ರತ, ಉಪವಾಸ, ಉದ್ಯಾಪನೆ ಮುಂತಾದವುಗಳನ್ನು ಅವಶ್ಯ ಮಾಡಿಸಬೇಕು.

ಹರೇಶ್ಚ ವಾಸರಂ ಪ್ರಾಪ್ಯ ವಿಧವಾ ನ ವ್ರತಂ ಚರೇತ್ ।
ಪುನರ್ವೈಧವ್ಯತಾಮೇತಿ ಜನ್ಮಜನ್ಮನಿ ದುರ್ಭಗಂ ॥

ಹರಿವಾಸರ, ಏಕಾದಶಿ ಮುಂತಾದವುಗಳಲ್ಲಿ ತಿನ್ನುತ್ತ ವ್ರತಲೋಪಗಳನ್ನು ಮಾಡಿಕೊಂಡರೆ ಆ ವಿಧವೆಯು ಮತ್ತೆ ಜನ್ಮ ಜನ್ಮದಲ್ಲಿಯೂ ವೈಧವ್ಯವನ್ನು ಹೊಂದಿ ದುಃಖಪಡುತ್ತಾಳೆ.

ಭೋಜನಾನ್ಮತ್ಸ್ಯಮಾಂಸಸ್ಯ ವ್ರತಾನಾಂ ವಿಪ್ರಯೋಗತಃ ।
ಚರಿಂ ನಿರಯಮಾಸಾದ್ಯ ಶುನೀ ಭವತಿ ನಿಶ್ಚಿತಂ ॥

ಮೀನ, ಮಾಂಸ ಮುಂತಾದವುಗಳನ್ನು ತಿನ್ನುತ್ತ ವ್ರತಲೋಪಗಳನ್ನು ಮಾಡಿಕೊಂಡಿದ್ದರೆ, ಬಹು ದಿವಸ ನರಕದಲ್ಲಿದ್ದು ಅನಂತರ ನಾಯಿಯಾಗಿ ಹುಟ್ಟುತ್ತಾಳೆ.

**ದುಷ್ಟಾ ಯಾ ಮೈಥುನಂ ಗಚ್ಛೇದ್ವಿಧವಾ ಕುಲನಾಶಿನೀ ।**
**ನರಕಾನನುಭೂಯಾಥ ಗೃಧ್ರಿಣೀ ದಶಜನ್ಮನಿ ॥**

ವಿಧವೆಯಾದವಳು ಮೈಥುನವನ್ನು ಹೊಂದಿದರೆ ಅನಂತರ ಅವಳು ನರಕವನ್ನು ಅನುಭವಿಸಿ ಹತ್ತು ಜನ್ಮಗಳವರೆಗೂ ಹದ್ದಾಗಿ ಹುಟ್ಟುತ್ತಾಳೆ.

**ದ್ವಿಜನ್ಮಫೇರವಾ ಭೂತ್ವಾ ತತೋ ಮಾನುಷತಾಂ ವ್ರಜೇತ್ ।**
**ತಥೈವ ಬಾಲವೈಧವ್ಯಾದ್ದಾಸೀತ್ವಮುಪಗಚ್ಛತಿ ॥**

ಎರಡು ಜನ್ಮಗಳವರೆಗೆ ಸರಿಯಾಗಿ ಹುಟ್ಟಿ ಅನಂತರ ಮನುಷ್ಯಳಾಗಿ ಅದರಲ್ಲಿಯೂ ಬಾಲ್ಯದಲ್ಲಿಯೇ ವಿಧವೆಯಾಗಿ, ಆಳಾಗಿ ಇರುತ್ತಾಳೆ.

**ದ್ವಿಜ ಉವಾಚ**

**ಕನ್ಯಾದಾನಫಲಂ ಬ್ರೂಹಿ ವದ ದಾಸ್ಯಾ ಫಲಂ ಚ ಯತ್ ।**
**ವಿಧಾನಂ ಚ ಯಥೋಕ್ತಂ ಚ ಯದಿ ತೇಽನುಗ್ರಹಃ ಪ್ರಭೋ ॥**

**ನರೋತ್ತಮ** :- ಕನ್ಯಾದಾನದ ಫಲವೇನು? ದಾಸಿಯ ಫಲವೇನು? ಇದರ ವಿಧಾನಗಳನ್ನು ಹೇಳಿರಿ.

**ಭಗವಾನುವಾಚ**

**ಸರ್ವಾಭರಣಸಂಯುಕ್ತಾಂ ಕನ್ಯಕಾಂ ಯೋ ದದಾತಿ ಚ ।**
**ತೇನ ದತ್ತಾ ಧರಾ ಸರ್ವಾ ಸಶೈಲವನಕಾನನಾ ॥**

**ಭಗವಂತ** :- ಆಭರಣಗಳಿಂದ ಕೂಡಿದ ಕನ್ಯೆಯನ್ನು ದಾನ ಮಾಡಿದರೆ ಬೆಟ್ಟ, ವನ, ಕಾಡುಗಳಿಂದ ಕೂಡಿದ ಭೂಮಿಯನ್ನು ದಾನ ಮಾಡಿದ ಫಲವು ದೊರೆಯುತ್ತದೆ.

**ಅರ್ಧಾಭರಣದಾನೇನ ಫಲಂ ದಾತುರ್ಭವೇದ್ಧ್ರುವಂ ।**
**ಅನಾಭರಣಕನ್ಯಾಯಾಂ ಪಾದೈಕಸ್ಯ ಫಲಂ ಭವೇತ್ ॥**

ಆಭರಣಗಳನ್ನು ತೊಡಿಸಿ ದಾನ ಮಾಡಿದರೆ ದಾತೃವಿಗೆ ಫಲವು ಬರುತ್ತದೆ. ಆಭರಣವಿಲ್ಲದ ಕನ್ಯೆಯನ್ನು ದಾನ ಮಾಡಿದರೆ ಕಾಲು ಪಾಲು ಫಲವು ಬರುತ್ತದೆ.

**ಯಃ ಪುನಶ್ಶುಲ್ಕಮಶ್ನಾತಿ ಸ ಯಾತಿ ನರಕೇ ನರಃ ।**
**ವಿಕ್ರೀತ್ವಾ ಚಾತ್ಮಜಾಂ ಮೂಢೋ ನರಕಾನ್ನ ನಿವರ್ತತೇ ॥**

ಕನ್ಯಾದಕ್ಷಿಣೆಯನ್ನು ತೆಗೆದುಕೊಂಡರೆ ನರಕಪ್ರಾಪ್ತಿಯಾಗುತ್ತದೆ. ಮಗಳನ್ನು ಮಾರಿದರೆ ಅವನು ನರಕದಿಂದ ಹೊರಗೆ ಬರುವದೇ ಇಲ್ಲ.

**ಅತ ಏವ ಹಿ ಶುಲ್ಕಂ ಚ ಜಾಮಾತುರ್ನಕದಾಚನ ।**
**ಗೃಹ್ಣಾತಿ ಮನಸಾ ಪ್ರಾಜ್ಞೋ ಯದ್ದತ್ತಂ ತಸ್ಯ ಚಾಕ್ಷಯಂ ॥**

ಅಳಿಯನೂ ಕೂಡ ಕನ್ಯಾಶುಲ್ಕವನ್ನು ತೆಗೆದುಕೊಳ್ಳಕೂಡದು. ದಾತೃವು ಒಂದು ವೇಳೆ ಕೊಟ್ಟರೆ ಅದಕ್ಕೆ ಅಕ್ಷಯ ಫಲವು ಬರುತ್ತದೆ.

**ವಿವಾಹ ಸಮಯೇ ಏವ ಸಗೋತ್ರಪರಗೋತ್ರಜೈಃ ।**
**ಯೌತಕಂ ದೀಯತೇ ಕಿಂಚಿತ್ತತ್ಸರ್ವಂ ಅಕ್ಷಯಂ ಭವೇತ್ ॥**

ಸಗೋತ್ರದವರಾಗಲಿ, ಪರಗೋತ್ರದವರಾಗಲಿ ಮದುವೆಯ ಸಮಯದಲ್ಲಿ ವರಕನ್ಯೆಯರಿಗೆ ಕಾಣಿಕೆಯಾಗಿ ಏನನ್ನು ಕೊಟ್ಟರೂ ಅದು ಅಕ್ಷಯ ಫಲವನ್ನು ಕೊಡುತ್ತದೆ.

**ದಾತಾ ಚ ಸ್ಮರತೇ ದಾನಂ ಪ್ರತಿಗ್ರಾಹೀ ನ ಯಾಚತೇ ।**
**ಅದತ್ವಾ ನರಕಂ ಪ್ರಾಪ್ಯ ದಾಸೀತ್ವಮುಪಗಚ್ಛತಿ ॥**

ಆದ್ದರಿಂದ ವಿವಾಹ ಸಮಯದಲ್ಲಿ ಕನ್ಯಾದಾನ ಮಾಡುವವನು ವರನು ಕೇಳದಿದ್ದರೂ ಕಿಂಚಿತ್ ಕಾಣಿಕೆಯನ್ನು ವರನಿಗೆ ದಾನ ಮಾಡಬೇಕು. ಹಾಗೆ ಮಾಡದಿದ್ದರೆ ದಾಸರಾಗುತ್ತಾರೆ.

**ಅತ್ಯಶನೇ ವಿದೂರಸ್ಥೇ ಅನಾಢ್ಯೇ ಚಾತಿದುರ್ಜನೇ ।**
**ಕುಲಹೀನೇ ಚ ಮೂರ್ಖೇ ಚ ಷಟ್ಸು ಕನ್ಯಾ ನ ದೀಯತೇ ॥**

ಬಹು ತಿನ್ನುವವರಿಗೆ, ದೂರದಲ್ಲಿರುವವನಿಗೆ, ಬಡವನಿಗೆ, ಅತಿ ದುಷ್ಟನಿಗೆ, ಕುಲಹೀನನಿಗೆ, ಮೂರ್ಖನಿಗೆ ಈ ಆರು ಜನಗಳಿಗೂ ಮಗಳನ್ನು ದಾನ ಮಾಡಬಾರದು.

**ಅತಿವೃದ್ಧೇ ಜಾತಿದೀನೇ ರೋಗಿಷ್ಠೇ ದೇಶಚಾರಿಣೇ ।**
**ಅತಿಕ್ರುದ್ಧೇಪ್ಯಸಂತುಷ್ಟೇ ಷಟ್ಸು ಕನ್ಯಾ ನ ದೀಯತೇ ॥**

ಬಹುಮುದುಕ, ಬಹುದುಃಖಿ, ರೋಗಿಯಾಗಿರುವವನು, ಯಾವಾಗಲೂ ಸಂಚಾರಶೀಲನು, ಬಹುಕೋಪಿ, ಸಂತೋಷವಿಲ್ಲದವನು. ಈ ಆರು ಜನರಿಗೂ ಹೆಣ್ಣುಮಕ್ಕಳನ್ನು ಕನ್ಯಾದಾನ ಮಾಡಬಾರದು.

**ಏತೇಭ್ಯಃ ಕನ್ಯಕಾಂ ದತ್ವಾ ನರಕಂ ಚಾಧಿಗಚ್ಛತಿ ।**
**ಲೋಭಾತ್ಸಂಮಾನಲಾಭಾಚ್ಚ ಕನ್ಯಕಾ ಪರಿವರ್ತನಾತ್ ॥**

ಆಸೆಯಿಂದಾಗಲಿ ಹಠಕ್ಕೋಸ್ಕರವಾಗಲಿ ಹೆಣ್ಣನ್ನು ಕೊಟ್ಟು ಅದಕ್ಕೆ ಬದಲನ್ನು ತರುವದಕ್ಕಾಗಿ ಉದ್ದೇಶಪಟ್ಟು ಇವರಿಗೆ ಕನ್ಯಾದಾನವನ್ನು ಮಾಡಿದರೆ ನರಕವನ್ನು ಹೊಂದುತ್ತಾನೆ.

ಮುನಿಗಳಿಗೂ, ತಪಸ್ವಿಗಳಿಗೂ, ಜ್ಞಾನಿಗಳಿಗೂ ಯುವತಿಯಾದ ರೂಪಶಾಲಿನಿ ಯಾದ ಸಲಕ್ಷಣ ಕನ್ಯೆಯನ್ನು ಆಭರಣ ಅಲಂಕಾರ ಇಡಿಸಿ, ಶ್ರೇಷ್ಠ ಶಯ್ಯಾ ಸಾಮಗ್ರಿಯೊಂದಿಗೆ ಕನ್ಯಾದಾನ ಮಾಡಿಕೊಡಬೇಕು. ಅದರಿಂದ ಅನಂತ ಪುಣ್ಯ ಫಲವು ಲಭಿಸುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸ್ತ್ರೀಯರ ಸ್ವಭಾವ ನಲವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

**ನರೋತ್ತಮ :-** ಪ್ರಭೋ ತುಲಾಧಾರನ ನಿರುಪಮ ಚರಿತವನ್ನು ಹೇಳು ಕೃಪೆಮಾಡು.

**ಭಗವಂತ :-** ಸತ್ಯವು ಎಲ್ಲ ಧರ್ಮಗಳಲ್ಲಿ ಶ್ರೇಷ್ಠವಾದುದು. ಸತ್ಯದಿಂದಲೇ ಲೋಕಗಳು ನಿಂತಿರುತ್ತವೆ. ಭೂಮಿ ಕಂಪಿಸದಿರುವದು ಸತ್ಯದಿಂದಲೆ, ಬೆಟ್ಟಗಳು ಬೀಳದಿರುವದು ಸತ್ಯದಿಂದಲೆ. ಸತ್ಯಭ್ರಷ್ಟರಾದ ಮಾನವರು ನೆಲದ ಮೇಲಿದ್ದರೂ ನರಕದಲ್ಲಿದ್ದಂತೆ. ಸತ್ಯ ಮಾತನಾಡುವವನು ಮತ್ತು ಸತ್ಕಾರ್ಯ ಮಾಡುವವನು ಶರೀರ ಸಹಿತವಾಗಿಯೇ ಪುಣ್ಯಲೋಕಕ್ಕೆ ಪ್ರಯಾಣ ಮಾಡುವನು. ಅಲ್ಲಿಂದ ಅವನಿಗೆ ಚ್ಯುತಿ ಇಲ್ಲ. ಮುನಿಗಳು ನನ್ನನ್ನು ಹೊಂದುವದು ಸತ್ಯದಿಂದ. ಅವರೆಲ್ಲ ಮೋಕ್ಷಮಂದಿರದಲ್ಲಿ ನೆಲೆಸಿದ್ದು ಸತ್ಯದಿಂದಲೇ. ಧರ್ಮರಾಜನು ಇದೇ ಪಾಂಚಭೌತಿಕ ಶರೀರದಿಂದ ಸ್ವರ್ಗ ಸೇರಿದನು. ಅದು ಬೇರೆ ಯಾವ ಕಾರಣದಿಂದ? ಸತ್ಯದಿಂದಲೇ ತಾನೇ! ಆ ಸತ್ಯ ವಚನದ ಪುಣ್ಯಪ್ರಭಾವದಿಂದಲೇ ಅವನು ಕೌರವರನ್ನು ಗೆದ್ದನು. ಧರ್ಮಚಕ್ರವನ್ನು ಪ್ರವರ್ತಿಸಿದನು. ರಾಜಸೂಯದಂತಹ ಮಹಾಯಜ್ಞವನ್ನು ನೆರವೇರಿಸಿದನು. ಪ್ರತಿನಿತ್ಯವೂ ಎಂಭತ್ತನಾಲ್ಕು ಸಾವಿರ ದ್ವಿಜರಿಗೆ ಬಂಗಾರದ ಪಾತ್ರೆಗಳಲ್ಲಿ ರಾಜಭೋಗ್ಯ ಮೃಷ್ಟಾನ್ನ ಭೋಜನಗಳನ್ನು ಉಣ್ಣಿಸಿ, ಬೇಡಿದ್ದನ್ನು ಕೊಟ್ಟು ಕಳಿಸುತ್ತಿದ್ದನು. ಹಿಂದೆ ದೈತ್ಯರಾಜನಾದ ಬಲಿಚಕ್ರವರ್ತಿಯು ಸತ್ಯದಿಂದ ಇಂದ್ರ ಪದವಿಗೆ ಅರ್ಹನಾದನು. ಅದೇ ಸತ್ಯದ ಮಹಿಮೆಯಿಂದ ನಾನು ಆ ಬಲಿರಾಜನ ಮನೆಯಲ್ಲಿ ಈಗಲೂ ದ್ವಾರಪಾಲಕನಾಗಿ ನಿಂತಿರುವೆನು. ಹರಿಶ್ಚಂದ್ರನು ಆ ಸತ್ಯದ ಬಲದಿಂದಲೇ ಸತ್ಯಲೋಕವನ್ನು ಹೊಂದಿದನು. ಈ ತುಲಾಧಾರನು ಸತ್ಯದಿಂದಲೇ ಸುಪ್ರತಿಷ್ಠಿತನಾಗಿದ್ದನು. ನಿಜವಾದ ಸತ್ಯನಿಷ್ಠ ನಾಗಿದ್ದನು. ಅಶ್ವಮೇಧವನ್ನೂ ಸತ್ಯವನ್ನೂ ತೂಗಿ ನೋಡಿದರು ಹಿಂದಿನವರು. ಅಶ್ವಮೇಧದ ಸಹಸ್ರಕ್ಕಿಂತ (ಯಾಗ) ಮಿಗಿಲಾಯಿತು ಸತ್ಯ.

ಜೀವನದಲ್ಲಿ, ವ್ಯವಹಾರದಲ್ಲಿ, ಸತ್ಯ ನುಡಿಯುವವರು, ನ್ಯಾಯಾಲಯದಲ್ಲಿ ನಿಸ್ವಾರ್ಥಿಯಾಗಿ ಸತ್ಯ ಹೇಳುವವರು, ಸಭಾದಲ್ಲಿ ಸತ್ಯ ಭಾಷಣ ಮಾಡುವವರು, ನ್ಯಾಯಾಸ್ಥಾನದ ನ್ಯಾಯಾಧೀಶ ಸ್ಥಾನದಲ್ಲಿದ್ದು ಸತ್ಯದ ನಿರ್ಣಯ ಕೊಡುವವರು, ಅಶ್ವಮೇಧಯಾಗ ಮಾಡಿದ ಪುಣ್ಯ ಪಡೆಯುತ್ತಾರೆ. ಆಶೆಯಿಂದಾಗಲಿ, ಲೋಭದಿಂದಾಗಲಿ, ಸುಳ್ಳು ಮಾತಾಡುವವರಿಗೆ ರೌರವ ನರಕ ಕಟ್ಟಿಟ್ಟದ್ದು. ತುಲಾಧಾರನು ಯಾವಾಗಲೂ ಸತ್ಯವನ್ನೇ ನುಡಿಯುತ್ತಿದ್ದನು. ಅವನೊಬ್ಬ ಸರ್ವರ ಕರ್ಮಸಾಕ್ಷಿಯಾದ ಸೂರ್ಯನಿದ್ದಂತೆ.

ಹಿಂದೊಮ್ಮೆ ನಾನು ಒಬ್ಬ ಶೂದ್ರನನ್ನು ಪರೀಕ್ಷಿಸಿದೆ. ಅವನು ಮುನಿಯಂತೆ ಗಡ್ಡೆ ಗೆಣಸು ತಿಂದು ಬದುಕುತ್ತಿದ್ದ. ಹೊಲದಲ್ಲಿ ಬಿದ್ದ ಹಕ್ಕಲು ತೆನೆಯ ಕಾಳು ಆಯ್ದುಕೊಂಡು ಜೀವಿಸುತ್ತಿದ್ದ. ಅವನು ಉಟ್ಟದ್ದು ಒಂದು ಹರಕು ಬಟ್ಟೆ, ಹೊದ್ದದ್ದು ಮತ್ತೊಂದು ಚಿಂದಿ ಬಟ್ಟೆ. ಇಷ್ಟು ದಟ್ಟ ದರಿದ್ರನಾದರೂ ಸತ್ಪಾತ್ರ ಕಂಡರೆ ಕೊಟ್ಟುಬಿಡುತ್ತಿದ್ದ ತನ್ನಲ್ಲಿ ಇದ್ದುದನ್ನು. ಒಮ್ಮೆ ನಾನು ಪರೀಕ್ಷೆ ಮಾಡಹೊರಟೆ. ಅವನು ನದಿಯಲ್ಲಿ ಸ್ನಾನಕ್ಕೆ ಇಳಿದಿದ್ದ. ಹರಕು ಪಂಚೆ ಉಟ್ಟು ಮೀಯುತ್ತಲಿದ್ದ. ತಣ್ಣಗಿನ ಗಾಳಿ ತೀಡುತ್ತಲಿತ್ತು. ಚಳಿಯಿಂದ ನಡುಗುತ್ತಲಿದ್ದ. ಅಲ್ಲಿಯೇ ದಂಡೆಯ ಮೇಲೆ ಅವನ ಕೈಗೆ ನಿಲುಕುವಂತೆ

ನಾನು ಎರಡು ಒಳ್ಳೇ ಬಟ್ಟೆಗಳನ್ನು ಇರಿಸಿದೆ. ಅವನು ಸ್ನಾನ ಮಾಡಿ ಮೇಲೆ ಬಂಗ. ಅಲ್ಲಿ ಬೆಚ್ಚಗಿನ ಬಟ್ಟೆ ಇರುವದನ್ನು ನೋಡಿದ. ಹತ್ತಿರದಲ್ಲಿ ಯಾರೂ ಇರಲಿಲ್ಲ. ಆದರೂ ಅವನು ಆ ಬಟ್ಟೆಗಳಿಗೆ ಆಶೆಪಡಲಿಲ್ಲ. ಅವು ತನ್ನದಲ್ಲವೆಂದು ತಿಳಿದು ಅತ್ತ ಕಡೆಗೆ ಕಣ್ಣೆತ್ತಿ ನೋಡದೆ ಮನೆಗೆ ನಡೆದ.

ಅವನನ್ನು ಇನ್ನೂ ಪರೀಕ್ಷೆ ಮಾಡಬೇಕೆಂದು ನನ್ನ ಅಪೇಕ್ಷೆ. ಅತ್ತಿಹಣ್ಣಿನಲ್ಲಿ ಬಂಗಾರ ತುಂಬಿ ಅವನ ಎದುರಿಗೆ ಬೀಳಿಸಿದೆ. ಅವನು ಅದನ್ನು ನೋಡಿದ ಆ ಅತ್ತಿಹಣ್ಣಿನಲ್ಲಿ ತಳತಳಿಸುವ ಬಂಗಾರದ ಗಟ್ಟಿಗಳು. ಅವನು ವಿಚಾರಿಸಿದ. ಈ ಚಿನ್ನವನ್ನು ನಾನು ತೆಗೆದುಕೊಂಡರೆ ನನಗೆ ಅನಾಯಾಸವಾಗಿ ದಕ್ಕುವದು-ಈ ಅಮೌಲ್ಯ ಬಂಗಾರ. ಆದರೆ ಇದನ್ನು ರಕ್ಷಿಸುವದು ಕಷ್ಟ. ಈ ಚಿನ್ನವಿದ್ದರೆ ಮಾನವನಿಗೆ ಇನ್ನಿಲ್ಲದ ಅಹಂಕಾರ ಮೊದಲಾಗುವದು. ಲಾಭವಾದ ಕೂಡಲೇ ಲೋಭವು ಬೆನ್ನು ಹತ್ತಿ ಬರುವದು. ಲೋಭಾತುರನಾದವನಿಗೆ ಕಟ್ಟಿಟ್ಟದೆ ನರಕ. ಈ ಹಾಳು ಹೊನ್ನನ್ನು ನಾನು ಮನೆಗೆ ಒಯ್ದರೆ, ಮಕ್ಕಳಿಗೆ ಇದರ ಮೇಲೆ ಮೋಹ ಉಂಟಾಗುವದು. ಮಡದಿಗೆ ಮದ ಬರುವದು. ಉಳಿದವರೆಲ್ಲರಿಗೆ ಇದರ ಮೇಲೆ ಆಶೆ. ಮಿಕ್ಕವರಿಗೆ ಅಸೂಯೆ. ಇದು ಸಿಕ್ಕವರಿಗೆ ಉನ್ಮಾದ. ಸಿಕ್ಕವರಿಗೂ, ಸಿಗದವರಿಗೂ ಬುದ್ಧಿಭ್ರಮಣೆ, ಆ ಭ್ರಮೆಯಿಂದ ಉನ್ಮಾದ. ಅದರಿಂದ ಅಹಂಕಾರ, ಕಾಮ, ಕ್ರೋಧ, ದೋಷಗಳ ಸರಪಳಿಯೇ ಸುರುವಾಗುವದು. ಅದರಿಂದ ತಪಸ್ಸು ಕ್ಷೀಣಿಸುವದು. ಈ ಅನವಸ್ಥಾ ಪರಂಪರೆಗೆ ಕಾರಣವಾದ ಈ ಹೊನ್ನು ಇಲ್ಲಿಯೇ ಮಣ್ಣಿನಲ್ಲಿ ಬಿದ್ದಿರಲಿ. 'ಈ ಹೊನ್ನೂ ಬೇಡ; ಹೊನ್ನು ತುಂಬಿದ ಅತ್ತಿಹಣ್ಣೂ ಬೇಡ'ವೆಂದು ಎರಡನ್ನೂ ಬಿಟ್ಟು ತೆರಳಿದನು-ಆ ವೀತರಾಗ ಪೂತಾತ್ಮ.

ಆಗ ಅವನ ಪರೀಕ್ಷೆಗಾಗಿ ಅಲ್ಲಿ ನೆರೆದ ದೇವತೆಗಳು ಕೂಡ 'ಭಲಾ ಭಾಪು' ಎಂದು ಅವನನ್ನು ಹೊಗಳಿದರು.

ಈ ಶೂದ್ರ ಬಂಧುವನ್ನು ಇನ್ನೂ ಪರೀಕ್ಷಿಸಬೇಕೆಂದು ನನಗೆ ತವಕ. ಕೂಡಲೇ ಬೌದ್ಧ ಸನ್ಯಾಸಿಯ ವೇಷ ತಾಳಿದೆ. ಅವನ ಅಕ್ಕಪಕ್ಕದವರ ಮನೆಗಳಲ್ಲಿರುವ ಜನರಿಗೆ ಅವರ ಹಿಂದಿನ ಸಂಗತಿಗಳನ್ನು, ಇಂದಿನ ಸ್ಥಿತಿಗಳನ್ನು, ಮುಂದಿನ ಉಜ್ವಲ ಭವಿಷ್ಯವನ್ನು ಹೇಳತೊಡಗಿದೆ. ಜನರಲ್ಲಿ ನನ್ನ ಸಿದ್ಧವಾಣಿಯ ಪ್ರಸಿದ್ಧಿ ಸ್ವಲ್ಪ ಕಾಲದಲ್ಲಿಯೇ ಆಯಿತು. ನನ್ನ ಕಡೆ ಜನ ಸಾಲಿಟ್ಟರು. ಸರತಿಯಂತೆ ನನ್ನ ಬಳಿಗೆ ಬಂದು ತಮ್ಮ ಭವಿಷ್ಯ ತಿಳಿದುಕೊಂಡು ಹೋಗುತ್ತಿದ್ದರು. ಮುಂದೆ ಒಂದು ದಿನ, ಆ ಶೂದ್ರನ ಮಡದಿಯೂ ನನ್ನ ಬಳಿ ಬಂದಳು. 'ತನ್ನ ದಾರಿದ್ರ್ಯಕ್ಕೆ ಏನು ಕಾರಣ?'ವೆಂದು ಕೇಳಿದಳು. ಆಗ ನಾನು ಅವಳಿಗೆ 'ಅಮ್ಮಾ, ನಿನ್ನ ದಾರಿದ್ರ್ಯವನ್ನು ಕಳೆಯಬೇಕೆಂದು ದೇವರು ದಯ ಮಾಡಿದ್ದ. ಆದರೆ ನಿನ್ನ ಪತಿಯು ಭಗವಂತನು ಕೊಟ್ಟ ಆ ಭಾಗ್ಯವನ್ನು ಧಿಕ್ಕರಿಸಿ ಬಿಟ್ಟು ಬಂದ. ಬಳಿಗೆ ಬಂದ ಭಾಗ್ಯಲಕ್ಷ್ಮಿಯನ್ನು ಬಿಟ್ಟು ಬಂದ ಬಳಿಕ ನಿನ್ನ ದಾರಿದ್ರ್ಯ ಹೋಗುವದೆಂತು? ನೀನು ಬೇಕಾದರೆ ಮನೆಗೆ ಹೋಗಿ ಗಂಡನನ್ನು ಕೇಳು-ನಿಧಿಯು ದೊರಕಿತ್ತೇ? ಅಥವಾ ಇಲ್ಲವೇ?' ಎಂದು.

ನಾನು ಹೇಳಿದ ಆ ಮಾತನ್ನು ಕೇಳಿ ನಿಜವಾಗಿಯೂ ಉಲ್ಲಾಸವಾಯಿತು. ಆ ಸಾಧ್ವಿಗೆ; ಅವಳು ನೇರವಾಗಿ ಗಂಡನ ಬಳಿಗೆ ಬಂದಳು. 'ನಿಧಿಯನ್ನು ಬಿಟ್ಟು ಬಂದಿರೇಕೆ?' ಎಂದು ಕೇಳಿದಳು; ಕೂಡಲೇ ಆ ಶೂದ್ರನು ತನ್ನ ಮಡದಿಯೊಡನೆ ನನ್ನ ಬಳಿಗೆ ಬಂದನು. ಬೌದ್ಧ ಸನ್ಯಾಸಿಯ ರೂಪದಲ್ಲಿದ್ದ ನಾನು ಅವನಿಗೆ ಹೇಳಿದೆ.

**ಬೌದ್ಧಸನ್ಯಾಸಿ :-** ಅಯ್ಯಾ, 'ಚಾಕ್ಷುಷಂ ಚಿರಸಂಶುದ್ಧಂ' ಕಣ್ಣಿಗೆ ಕಂಡದ್ದು ಯಾವಾಗಲೂ ಶುದ್ಧ. ಅದಕ್ಕೆ 'ದೃಷ್ಟಿಪೂತ' ಎನ್ನುವರು, ನಿನ್ನ ಕಣ್ಣಿಗೆ ಹೊನ್ನಿನ ನಿಧಿ ಮೊದಲು ಕಂಡಿತ್ತು. ಅದು ನಿನಗೆ ಗ್ರಾಹ್ಯ. ಅದನ್ನು ನೀನು ತಿರಸ್ಕಾರ ಬುದ್ಧಿಯಿಂದ ತ್ಯಜಿಸಿದೆ ಬಟ್ಟೆ ತೃಣದಂತೆ. ಇಂತಹ ನಿಷ್ಪಂಕವಾದ ಭಾಗ್ಯಲಾಭವು ಒಂದು ದೊಡ್ಡ ಸೌಭಾಗ್ಯವೇ ಸರಿ. ಹೀಗೆ ಐಶ್ವರ್ಯವು ತಾನಾಗಿ ಬಂದಾಗ ಅದರ ಬಗ್ಗೆ ವೈರಾಗ್ಯವು ಆಜನ್ಮ ದುಃಖವನ್ನುಂಟುಮಾಡುತ್ತದೆ. ಸತ್ತವರು ಮತ್ತೆ ತಿರುಗಿ ಬರುವದಿಲ್ಲ ಎನ್ನುವದನ್ನು ನೀನು ಕಣ್ಣಿಂದ ನೋಡುತ್ತಾ ಇದ್ದೀಯ. ಆದರೂ ಬಂದ ಭಾಗ್ಯವನ್ನು ತಿರಸ್ಕರಿಸದೇ ಪರಿಗ್ರಹಿಸು; ಅನುಭವಿಸು; ಆನಂದಿಸು. ನಿನಗೆ ದೊರೆತ ನಿಧಿಯನ್ನು ನೀನು ಉಣ್ಣುವುದರಲ್ಲಿ ಆತಂಕವೇನು? ಆಕ್ಷೇಪ ಯಾರದು? ನಿನ್ನಲ್ಲಿ ಐಶ್ವರ್ಯ ಇದೆ ಎಂದಾದರೆ ಸಾಕು. ನೀನು ದಾನ ಮಾಡದಿದ್ದರೂ ಜನ ನಿನಗೆ ಗೌರವ ಸಲ್ಲಿಸುತ್ತಾರೆ.

**ಶೂದ್ರ :-** ನನಗೆ ಹಣದಲ್ಲಿ ಆಶೆಯಿಲ್ಲ. ದ್ರವ್ಯವು ಸಂಸಾರ ಬಂಧನದ ಒಂದು ಬಲೆ. ಅದರಲ್ಲಿ ಮನುಷ್ಯ ಒಮ್ಮೆ ಬಿದ್ದರೆ ಮತ್ತೆಂದೂ ಮೋಕ್ಷ ಹೊಂದಲಾರ. ಹಣಕ್ಕೆ ಕಳ್ಳರಿಂದ, ದಾಯಾದಿಗಳಿಂದ, ರಾಜರಿಂದ ಭಯವು ಯಾವಾಗಲೂ ಇದ್ದದ್ದೆ. ಎಲ್ಲ ಮಾನವರು, ಮೃಗ, ಮೀನ, ಕೋಳಿ, ಕುರಿ, ಮುಂತಾದ ಮೆತ್ತಗಿನ ಪ್ರಾಣಿಗಳನ್ನು ಕೊಂದು ತಿನ್ನಲು ಬಯಸುವದಿಲ್ಲವೆ? ಹಾಗೆ ಜನರೆಲ್ಲರೂ, ಹಣವಿದ್ದ ಸಿರಿವಂತನನ್ನು ಕೊಲ್ಲಬೇಕೆಂದು ಹೊಂಚು ಹಾಕಿ ಕುಳಿತಿರುತ್ತಾರೆ. ದ್ರವ್ಯವಿದ್ದರೆ ಜೀವಕ್ಕೆ ಸಂಚಕಾರ; ಆಪತ್ತಿಗೆ ಕಾರಣ, ದ್ವೇಷಕ್ಕೆ ಮೂಲ; ಅಸೂಯೆಗೆ ಆಸ್ಪದ. ಇಷ್ಟೆಲ್ಲ ಅನರ್ಥಕ್ಕೆ ಕಾರಣವಾದ ದುಡ್ಡು ನರಕಕ್ಕೆ ಕಾರಣವಾಗದೇ ಇರುವದೇ? ಆದುದರಿಂದ ಅನರ್ಥಸಾಧಕವಾದ ಆ 'ಅರ್ಥ' ಅರ್ಥಾತ್ ದ್ರವ್ಯವು ನನಗೆ ತಾನಾಗಿ ಬಂದರೂ ಬೇಡ.

**ಬೌದ್ಧ ಸನ್ಯಾಸಿ :-**

**ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾಂಧವಾಃ ।**
**ಕುಲಂ ಶೀಲಂ ಚ ಪಾಂಡಿತ್ಯಂ ರೂಪಂ ಭೋಗ್ಯಂ ಯಶಸ್ಸುಖಂ ॥**

ಹಣವಿರುವವನಿಗೆ ಮಿತ್ರರು, ಬಂಧುಗಳು, ಕುಲವು, ಶೀಲವು, ಪಾಂಡಿತ್ಯವು, ರೂಪವು, ಭೋಗವು, ಯಶಸ್ಸು, ಸುಖ ಎಲ್ಲವೂ ಇರುತ್ತದೆ.

**ಧನೇನ ತು ವಿಹೀನಸ್ಯ ಪುತ್ರದಾರೋಜ್ಝಿತಸ್ಯ ಚ ।**
**ಕಥಂ ಮಿತ್ರಂ ಕಥಂ ಧರ್ಮಃ ದೀನಾನಾಂ ಜನ್ಮನಃ ಕಥಂ ॥**

ಹಣವು ಇಲ್ಲದವನನ್ನು ಮಡದಿಮಕ್ಕಳು ತ್ಯಜಿಸುವರು. ಹೆಂಡಿರು, ಮಕ್ಕಳು ಇಲ್ಲದವರಿಗೆ ಮಿತ್ರರೆಲ್ಲಿರುವರು? ಧರ್ಮವೆಲ್ಲಿಂದ ಬಂದೀತು? ಹುಟ್ಟುದರಿದ್ರರಿಗೆ ಇವೆಲ್ಲವು ಸಾಧ್ಯವೆಲ್ಲಿ? ಯಜ್ಞಯಾಗ, ದಾನ, ಧರ್ಮ, ಕೆರೆಕಾಲುವೆ ಕಟ್ಟಿಸುವದು ಮುಂತಾದ ಕಾರ್ಯಗಳೆಲ್ಲ ದ್ರವ್ಯದಿಂದಲೇ ಸಾಧಿಸುವವು. ದಿವ್ಯಲೋಕಕ್ಕೆ ಮುಖ್ಯವಾಗಿ ದಾರಿ ಮಾಡಿಕೊಡುವದು ದಾನ. ಆ ದಾನವು ಧನದಿಂದಲೇ ಸಾಧ್ಯ. ದರಿದ್ರನಿಗೆ ಇವಾವವೂ ಸಾಧಿಸುವದಿಲ್ಲ. ವ್ರತ, ಧರ್ಮಶ್ರವಣ, ಪಿತೃಶ್ರಾದ್ಧ, ತೀರ್ಥಕ್ಷೇತ್ರಯಾತ್ರೆ, ಪಥ್ಯ, ಔಷಧಿ, ಸ್ತ್ರೀಸೌಖ್ಯ, ಭೋಗ, ಅನುರಾಗ, ಇವೆಲ್ಲವೂ ದ್ರವ್ಯದಿಂದಲೇ ಮಾನವ ಪ್ರಾಣಿಗೆ

ಲಭ್ಯವಾಗುವವು. ಪ್ರಭೂತವಾದ ದ್ರವ್ಯವು ಯಾವನ ಬಳಿ ಇರುವದೋ, ಆ ಮನುಷ್ಯನು ಈ ಲೋಕದಲ್ಲಿ ಇರುವವರೆಗೆ ಸುಖದಿಂದಿದ್ದು, ಪರಲೋಕದಲ್ಲಿಯೂ ಶಾಶ್ವತ ಸುಖಕ್ಕಾಗಿ ದಾನ, ಧರ್ಮ, ಪುಣ್ಯಕಾರ್ಯಗಳನ್ನು ಮಾಡಿ ಪರಲೋಕದಲ್ಲಿ ಸೌಖ್ಯವನ್ನು ಅನುಭವಿಸುತ್ತಾನೆ. ದ್ರವ್ಯವಿಹೀನನಿಗೆ ಇಲ್ಲಿಯೂ ಸುಖವಿಲ್ಲ; ಪರದಲ್ಲಿಯೂ ಸುಖವಿಲ್ಲ.

**ಶೂದ್ರ :-**

**ಅಕಾಮಾಚ್ಚ ವ್ರತಂ ಸರ್ವಮಕ್ರೋಧಾತ್ತೀರ್ಥಸೇವನಂ ।**
**ದಯಾ ಜಪಸಮಾ ಶುದ್ಧಂ ಸಂತೋಷೋ ಧನಮೇವ ಚ ॥**

**ಅಹಿಂಸಾ ಪರಮಾ ಸಿದ್ಧಿಃ ಶಿಲೋಂಚವೃತ್ತಿರುತ್ತಮಾ ।**
**ಶಾಕಾಹಾರಸ್ಸುಧಾತುಲ್ಯಃ ಉಪವಾಸಃ ಪರಂತಪಃ ॥**

ಆಸೆಯಿಲ್ಲದಿರುವದೇ ನನಗೆ ಎಲ್ಲಾ ವ್ರತಗಳೂ ಆಗಿವೆ. ಕ್ರೋಧವಿಲ್ಲ ದಿರುವಿಕೆಯೇ ತೀರ್ಥಸೇವೆಯು, ದಯೆಯೇ ಶುದ್ಧವಾದ ಜಪಕ್ಕೆ ಸಮಾನವು, ಸಂತೋಷವೇ ಧನವು, ಅಹಿಂಸೆಯೇ ಸಿದ್ಧಿಯು, ಶೀಲವೇ ಆಯ್ದು ಜೀವಿಸುವ ಉತ್ತಮವಾದ ಜೀವನವು, ಕಾಯಿ, ಗಡ್ಡೆ, ಗೆಣಸು ಹಣ್ಣುಗಳನ್ನು ತಿನ್ನುವದೇ ಅಮೃತಕ್ಕೆ ಸಮಾನವು. ಉಪವಾಸವೇ ಉತ್ತಮ ತಪಸ್ಸು.

**ಸಂತೋಷೋ ಮೇ ಮಹಾಭೋಗ್ಯಂ ಮಹಾದಾನಂ ವರಾಟಕಂ ।**
**ಮಾತ್ರವತ್ಪರದಾರಾಶ್ಚ ಪರದ್ರವ್ಯಂ ಚ ಲೋಷ್ಠವತ್ ॥**
**ಪರದಾರಾ ಭುಜಂಗಾಭಾಃ ಸರ್ವಂ ಯಜ್ಞ ಇದಂ ಮಮ ।**
**ತಸ್ಮಾದೇನಂ ನ ಗೃಹ್ಣಾಮಿ ಸತ್ಯಂ ಸತ್ಯಂ ಗುಣಾಕರ ।**
**ಲಗ್ನೇ ಪ್ರಕ್ಷಾಳನಾತ್ಪಂಕೇ ದೂರಾದಸ್ಪರ್ಶನಂ ವರಂ ॥**

ಸಂತೋಷವೇ ನನಗೆ ಮಹಾಭೋಗವು. ಒಂದು ಕವಡೆಯನ್ನು ಕೊಟ್ಟರೆ ಅದೇ ಮಹಾದಾನವು. ಪರರ ಹೆಂಗಸರನ್ನು ತಾಯಿಯರಂತೆಯೂ, ಪರರ ಪದಾರ್ಥವನ್ನು ಮಣ್ಣಿನ ಹೆಂಟೆಯಂತೆಯೂ ತಿಳಿಯುತ್ತೇನೆ. ಅಲ್ಲದೆ ಪರರ ಹೆಂಡಿರನ್ನು ನೋಡಿದರೆ ಹಾವಿನಂತೆ ಓಡುವೆನು. ಇವೇ ನನ್ನ ಯಜ್ಞಗಳು. ಆದ್ದರಿಂದ ಸುವರ್ಣದಿಂದ ತುಂಬಿದ ಅತ್ತಿಹಣ್ಣುಗಳನ್ನು ತೆಗೆದುಕೊಳ್ಳುವದಿಲ್ಲ. ಇದು ಸತ್ಯ. ಕೆಸರನ್ನು ತುಳಿದು ಕಾಲು ತೊಳೆದುಕೊಳ್ಳುವದಕ್ಕಿಂತಲೂ ಮುಟ್ಟದೆ ದೂರದಲ್ಲಿರುವದು ಉತ್ತಮವಲ್ಲವೆ!

ಹೀಗೆ ಆ ಶೂದ್ರನು ಮಾತನಾಡಲು, ಅವನ ತಲೆಯ ಮೇಲೆ ಪುಷ್ಪವೃಷ್ಟಿ ಆಯಿತು. ದೇವತೆಗಳು ಅವನ ಅರ್ಥಪೂರ್ಣವಾದ ಉದಾತ್ತ ವಿಚಾರಗಳಿಂದ ಪರಿಪ್ಲುತವಾದ ಈ ಮಾತುಗಳನ್ನು ಕೇಳಿ ಸಂತೋಷಭರಿತರಾಗಿ ಹೂ ಮಳೆಗರೆದರು. ದೇವದುಂದುಭಿಗಳು ಮೊಳಗಿದವು, ಅಪ್ಸರೆಯರು ಕುಣಿದರು, ಗಂಧರ್ವರು ಹಾಡಿದರು, ವಿಮಾನಗಳು ಸ್ವರ್ಗದಿಂದ ನೆಲಕ್ಕಿಳಿದವು, ದೇವತೆಗಳು ಹೊರಬಂದರು. ಅವನಿಗೆ ಬಿನ್ನವಿಸಿದರು-

'ಮಹಾತ್ಮಾ ಬಾ, ಈ ವಿಮಾನವನ್ನು ಆರೋಹಣ ಮಾಡು, ಸತ್ಯ ಲೋಕಕ್ಕೆ ನಡೆ, ಅಲ್ಲಿ ಭೋಗಭಾಗ್ಯಗಳನ್ನು ಅನುಭವಿಸು-ದೇವೇಂದ್ರನಂತೆ. ಅಲ್ಲಿ ನಿನ್ನ ಸುಖಭೋಗಕ್ಕೆ ಇತಿಮಿತಿ ಇಲ್ಲ, ಸಮಯದ ಅವಧಿ ಇಲ್ಲ. ಅನಂತಕಾಲದವರೆಗೆ ಅನಂತ ಭೋಗಗಳನ್ನು ಬ್ರಹ್ಮಲೋಕದಲ್ಲಿ ಅನುಭವಿಸು, ನಡೆ.'

**ಶೂದ್ರ :-** ಬೌದ್ಧ ಸನ್ಯಾಸಿಯಾದ ನಿನಗೆ ಇಷ್ಟೆಲ್ಲ ಜ್ಞಾನ ಹೇಗೆ ಬಂದಿತು? ಸರ್ವವೂ ಶೂನ್ಯವೆನ್ನುವ ನೀನು ಹೀಗೆ ವೈದಿಕ ಸನ್ಯಾಸಿಯಂತೆ ಮಾತನಾಡುವೆಯಲ್ಲ! ನೀನು ಯಾರು? ನೀನು ನಿಜವಾಗಿ ಬೌದ್ಧ ಸನ್ಯಾಸಿ ಆಗಲು ಶಕ್ಯವಿಲ್ಲ. ನೀನೇನು ಸಾಕ್ಷಾತ್ ಶ್ರೀಹರಿಯೇ? ಹರನೋ? ಬ್ರಹ್ಮನೋ? ಇಂದ್ರನೋ? ಅಥವಾ ಮೂರ್ತಿಮಂತ ಧರ್ಮನೋ? ಯಾರು ನೀನು? ದಯಮಾಡಿ ತಿಳಿಸು.

**ಬೌದ್ಧ ಸನ್ಯಾಸಿ :-** ನಿನ್ನ ಧಾರ್ಮಿಕತೆ, ಸ್ವಭಾವಗಳನ್ನು ಪರೀಕ್ಷಿಸಲು ವಿಷ್ಣುವಾದ ನಾನೇ ಸನ್ಯಾಸಿ ವೇಷದಿಂದ ಇಲ್ಲಿಗೆ ಬಂದಿದ್ದೇನೆ. ನಿನ್ನ ಉದಾರ ಮನಸ್ಸು, ಒಳ್ಳೇ ವಿಚಾರ, ಸಜ್ಜನಿಕೆಗಳನ್ನು ಕಂಡು ನಾನು ಸುಪ್ರೀತನಾಗಿದ್ದೇನೆ. ನಿನ್ನ ಕುಟುಂಬದೊಂದಿಗೆ ಈ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ನಡೆ. ಅಲ್ಲಿ ನಿಮ್ಮಿಬ್ಬರೂ ದಂಪತಿಗಳಿಗೆ ನನ್ನ ಅನುಗ್ರಹದಿಂದ ನಿತ್ಯ ತಾರುಣ್ಯ, ನಿತ್ಯ ಸುಖ, ನಿತ್ಯ ಭೋಗ.

ಶ್ರೀಮಹಾವಿಷ್ಣುವಿನ ಈ ಅನುಗ್ರಹ ವಿಶೇಷದಿಂದ ಆ ಶೂದ್ರ ಕುಟುಂಬ ದವರೆಲ್ಲರಿಗೂ ದಿವ್ಯರೂಪ ಪ್ರಾಪ್ತವಾಯಿತು. ದಿವ್ಯವಸ್ತ್ರ ಹಾಗೂ ದಿವ್ಯಾಭರಣಗಳಿಂದ ಅವರು ಅಲಂಕೃತರಾಗಿ ಸಂತೋಷದಿಂದ ಸ್ವರ್ಗರೋಹಣ ಮಾಡಿದರು. ಹೀಗೆ ತುಲಾಧಾರನು ಸತ್ಯ ಹಾಗೂ ಧರ್ಮಗಳಲ್ಲಿ ಇರುವ ಅಚಲ ನಿಷ್ಠೆ, ಅದಕ್ಕನುಗುಣವಾದ ಅನುಷ್ಠಾನ, ಭಗವದ್ಭಕ್ತಿ, ಪ್ರಾಮಾಣಿಕತೆ ಮುಂತಾದ ಸದ್ಗುಣಗಳಿಂದ ದೇಶಾಂತರದಲ್ಲಿ ಸಂಭವಿಸಿದ ಎಲ್ಲ ಸಂಗತಿಗಳನ್ನು ತಿಳಿಯುತ್ತಾನೆ. ತುಲಾಧಾರನಿಗೆ ಸಮನಾದ ಪೂಜ್ಯ ವ್ಯಕ್ತಿ ಬೇರೆ ಯಾರೂ ದೃಷ್ಟಾಂತಕ್ಕೂ ಕೂಡ ಸಿಗುವದಿಲ್ಲ. ಅದರಂತೆ ನರೋತ್ತಮ, ನೀನಾದರೂ ಕೂಡ ಭಗವದ್ಭಕ್ತಿ, ಸತ್ಯ, ಸತ್ಯನಿಷ್ಠೆ, ಧರ್ಮಶ್ರದ್ಧೆಗಳಿಂದ ಭಗವಂತನ ಅನುಗ್ರಹವನ್ನು ಸಂಪಾದಿಸಿ ಮುಕ್ತಿಯನ್ನು ಹೊಂದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ತುಲಾಧಾರನ ಅತುಲಧರ್ಮ ಎಂಬ ಐವತ್ತನೇಯ ಅಧ್ಯಾಯ ಮುಗಿದುದು*



## ಅಹಲ್ಯೆಯ ಉದ್ಧಾರ

**ಅಧ್ಯಾಯ - ೫೧**

**ಶ್ರೀವಿಷ್ಣು :-** ನರೋತ್ತಮ, ಅದ್ರೋಹಕನ ಮಹಿಮೆಯನ್ನು ನಾನು ನಿನಗೆ ಹೇಳಿದೆ. ಬೇರಾರೂ ಅನುಸರಿಸಲಾರರು-ಅವನ ಆ ದುರ್ಗಮ ಮಾರ್ಗವನ್ನು. ಒಂದೇ ಹಾಸಿಗೆಯಲ್ಲಿ ಸುಂದರಿಯಾದ ತರುಣ ಸ್ತ್ರೀಯೊಡನೆ ಶಯನ ಮಾಡಿಯೂ ಜಿತೇಂದ್ರಿಯಾಗಿ ತನ್ನ ಶೀಲಸಂಯಮ ಕಾಪಾಡಿಕೊಂಡಿದ್ದು ಸಾಮಾನ್ಯ ಕೆಲಸವೇ? ಇದು ಜ್ಞಾನಿಗಳಿಗೂ ಅಸಾಧ್ಯ; ಮುನಿಗಳಿಗೂ ದುಷ್ಕರ. ದೇವಾಧಿದೇವತೆಗಳಲ್ಲಿಯೂ ಅನೇಕ ಮಹಾವ್ಯಕ್ತಿಗಳು ಕಾಮವಶರಾಗಿ ಅನೇಕ ಅವ್ಯಾಪಾರಗಳನ್ನು ಗೈದಿದ್ದಾರೆ. ಅಹಲ್ಯೆಯನ್ನು ವಂಚಿಸಿ ರಮಿಸಿದ್ದರಿಂದ ದೇವೇಂದ್ರನು ಶಾಪಗ್ರಸ್ತನಾಗ ಬೇಕಾಯಿತು. ಅನಂತರ ಪಾರ್ವತಿಯ ಅನುಗ್ರಹದಿಂದ ಭಂಗಾಕನಾದ ಆ ದೇವೇಂದ್ರನು ಮುಂದೆ ಸಹಸ್ರಾಕ್ಷನೆಂದು ಪ್ರಸಿದ್ಧನಾದನು.

**ನರೋತ್ತಮ** :- ದೇವತಾಸಾರ್ವಭೌಮನಾದ ಮಹೇಂದ್ರನು ಅಹಲ್ಯೆಯನ್ನು ಅಪಹರಿಸಿದ್ದು ಹೇಗೆ? ಅದನ್ನು ತಿಳಿಸಿರಿ.

**ವಿಷ್ಣು** :- ಬ್ರಹ್ಮದೇವರಿಗೆ ಒಬ್ಬ ಮಾನಸ ಕನ್ಯೆ ಇದ್ದಳು. ಅವಳ ಹೆಸರು ಅಹಲ್ಯೆ. ಅವಳನ್ನು ಗೌತಮನಿಗೆ ಧಾರೆ ಎರೆದುಕೊಟ್ಟ ಚತುರ್ಮುಖ. ಆ ಕಾಲದಲ್ಲಿ ಇಂದ್ರಾದಿ ಲೋಕಪಾಲರೆಲ್ಲರೂ ಎದುರಿಗೆ ಇದ್ದರು. ಅವರಲ್ಲಿ ದೇವೇಂದ್ರನಿಗೆ ಮಾತ್ರ ಅಹಲ್ಯೆಯ ಸೌಂದರ್ಯ ಕಂಡು ಮುಗ್ಧವಾಯಿತು ಮನಸ್ಸು. 'ಸೌಂದರ್ಯದ ಪುತ್ಥಳಿಯಂತಿರುವ ಈ ಸರ್ವಾಂಗ ಸುಂದರಿಯನ್ನು ನನ್ನಂತಹ ದಿಕ್ಪಾಲಕನನ್ನು ಬಿಟ್ಟು ಓರ್ವ ಬಡ ಬ್ರಾಹ್ಮಣನಿಗೆ ಕೊಟ್ಟದ್ದೇಕೆ. ಈ ಬ್ರಹ್ಮದೇವ? ಅಹಲ್ಯೆ ಎಂದರೆ ಒಂದು ರತ್ನ. ಅಪಾತ್ರದಲ್ಲಿ ದಾನಕೊಟ್ಟು ಅದರ ಕಳೆ ಕಾಂತಿಗೆ ಕುಂದು ಮಾಡಿದ ಆ ಚತುರಾನನ!' ಹೀಗೆ ವಿಚಾರಿಸಿ ದೇವೇಂದ್ರನು ಭೂಮಂಡಲದಲ್ಲಿ ಗೌತಮನ ಆಶ್ರಮಕ್ಕೆ ಹೋಗಿ ಬಂದ. ಮತ್ತಷ್ಟೂ ಮೋಹಕವಾಗಿ ಕಂಡಿತು ಅವನಿಗೆ ಆ ಋಷಿರಮಣಿಯ ರಮಣೀಯ ರೂಪ. ಮೇಲಿಂದ ಮೇಲೆ ನಡೆಯಿತು. ದೇವೇಂದ್ರನ ಗೌತಮಾಶ್ರಮ ಯಾತ್ರೆ. ಗೌತಮರ ಚಲನ ವಲನಗಳನ್ನು ಗುರುತಿಸಿಕೊಂಡ- ಆ ಪುರಂದರ.

ಒಮ್ಮೆ ಮಹಾಮುನಿ ಗೌತಮನು ಸ್ನಾನಕ್ಕಾಗಿ ಸರೋವರಕ್ಕೆ ನಿರ್ಗಮಿಸಿದ್ದ. ಅವನ ಧರ್ಮಪತ್ನಿ ಅಹಲ್ಯೆಯ ಪತಿಯ ದೇವ ಪೂಜೆಗಾಗಿ ಆಶ್ರಮವನ್ನು ಅಣಿಗೊಳಿಸಲು ಶುದ್ಧೀಕರಣ ಕಾರ್ಯ ಕೈಕೊಂಡಿದ್ದಳು, ಸಾರಣೆ, ಕಾರಣೆಗಳನ್ನು ಮಾಡಿ, ಗುಡಿಸಿ, ಆಶ್ರಮದ ಅಂಗಳವನ್ನೆಲ್ಲ ಚೊಕ್ಕಟ ಇರಿಸಿದಳು. ದೇವತಾರ್ಚನಕ್ಕೆ ಸಲಕರಣೆಗಳನ್ನೆಲ್ಲ ಸಜ್ಜುಗೊಳಿಸಿದಳು. ನೈವೇದ್ಯ, ವೈಶ್ವದೇವ, ಅಗ್ನಿ ಕಾರ್ಯ, ಬಲಿ ಮುಂತಾದ ನಿತ್ಯ ಕರ್ಮಾನುಷ್ಠಾನಗಳಿಗೆ ಬೇಕಾಗುವ ಪದಾರ್ಥಗಳನ್ನೆಲ್ಲ ಶುದ್ಧ ಗೊಳಿಸತೊಡಗಿದಳು. ಆಗ ದೇವೇಂದ್ರನು ಗೌತಮನ ವೇಷಹಾಕಿಕೊಂಡು ಆ ಎಲೆ ಮನೆಯಲ್ಲಿ ಕಾಲಿರಿಸಿದನು. ಗೌತಮನೆಂದೇ ಭಾವಿಸಿದಳು- ಆ ಸುರಪತಿಯನ್ನು ಅಹಲ್ಯೆ. ಅವನ ಪೂಜೆಗೆ ಬೇಕಾಗುವ ಸಲಕರಣೆಗಳನ್ನು ದೇವರ ಮನೆಯಲ್ಲಿ ತಂದಿಡಲು ಮೊದಲು ಮಾಡಿದಳು. ಆದರೆ ಕಾಮಾರ್ತನಾದ ಇಂದ್ರನಿಗೆ ಇದಾವುದೂ ಬೇಡವಾಗಿದ್ದಿತು. ಗೌತಮ ವೇಷಧಾರಿಯಾದ ಶಚೀಪತಿಯು ಅವಳನ್ನು ವಿಲಾಸಕೇಳಿಗಾಗಿ ಆಹ್ವಾನಿಸಿದನು. ಅವಳಿಗೆ ನಾಚಿಕೆ ಆಯಿತು. ಕಾಲಿಗೆ ಉಗುರಿನಿಂದ ಕೆದರುತ್ತ ನುಡಿದಳು.:-

**ಅಹಲ್ಯೆ** :- ಈ ಸಮಯದಲ್ಲಿ ತಾವು ಹೀಗೆ ಮಾತನಾಡಬಾರದು. ಸ್ನಾನಮಾಡಿ ಶುಚಿರ್ಭೂತರಾಗಿ ಬಂದಿದ್ದೀರಿ, ದೇವರ ಪೂಜೆ ಹಾಗೂ ನಿತ್ಯಾನ್ಹಿಕಗಳನ್ನು ಎಂದಿನಂತೆ ತಾವು ಭಯ ಭಕ್ತಿಯಿಂದ ಮಾಡಿರಿ ಕೇಳೀವಿಲಾಸಗಳಿಗೆ ಯೋಗ್ಯ ಸಮಯವಿದಲ್ಲ. ಸ್ಥಾನವೂ ಅಲ್ಲ. ನಿಮ್ಮಂತಹ ಮುನಿಪುಂಗವರಿಗೆ ಈ ಕಾಲದಲ್ಲಿ ಶೃಂಗಾರಲಾಲಸೆ ಸರ್ವಥಾ ಯೋಗ್ಯವಲ್ಲ.

ಆ ಚೆಲುವೆಯ ಹಾವ ಭಾವ ಪೂರ್ಣವಾದ ನಿಷೇಧ ವೈಖರಿಗಳನ್ನು ಕೇಳಿ ದೇವೇಂದ್ರನೂ ಮತ್ತಷ್ಟು ಮನ್ಮಥಪೀಡಿತನಾಗಿ ನುಡಿದನು.

**ಇಂದ್ರ** :- ಸುಂದರಿ, ಸಾಕು ಮಾಡು, ಈ ನಿನ್ನ ಹುಚ್ಚು ಉಪದೇಶವು ನನ್ನ ಹೃದಯದಲ್ಲಿ ಪ್ರೇಮೋದ್ರೇಕವನ್ನು ಉಕ್ಕಿಸುತ್ತಲಿದೆ. ಕರ್ತವ್ಯ, ಅಕರ್ತವ್ಯ ವಿಚಾರಿಸುವದು ಹೆಂಗಸರ ಕೆಲಸವಲ್ಲ. ಪತಿ ಹೇಳಿದ್ದನ್ನು ಮಾಡುವದಷ್ಟೇ

ಸತಿಯಕಾರ್ಯ, ಗಂಡನ ಅಪ್ಪಣೆಯನ್ನು ಒಳ್ಳೆಯದೋ ಕೆಟ್ಟದೋ ವಿಚಾರಿಸದೆ ಪಾಲಿಸುವ ಮಹಿಳೆಯೇ ಪತಿವ್ರತೆ. ಅವನ ಅಪ್ಪಣೆಯನ್ನು ಅದರಲ್ಲೂ ವಿಶೇಷವಾಗಿ ವಿಹಾರಾಪೇಕ್ಷೆಯನ್ನು ಉಲ್ಲಂಘಿಸುವ ಲಲನೆಯು ಅಧೋಗತಿಯನ್ನು ಹೊಂದುತ್ತಾಳೆ. ಅವಳ ಪುಣ್ಯ ಸರ್ವಸ್ವವೂ ನಾಶವಾಗುತ್ತದೆ.

**ಅಹಲ್ಯೆ** :- ಪೂಜ್ಯರೆ ಇದು ದೇವರ ಮನೆ, ಸುತ್ತಲೂ ಪೂಜೆಯ ಸಲಕರಣೆ ಸಾಮಗ್ರಿಗಳಿರುತ್ತವೆ. ನೀವು ಸ್ನಾನಮಾಡಿ ಶುಚಿರ್ಭೂತರಾಗಿ ದೇವರ ಪೂಜೆಗೆಂದು ಬಂದಿದ್ದೀರಿ. ನಿತ್ಯವೂ ಭಕ್ತಿಯಿಂದ ಭಗವಂತನ ಪೂಜೆ ನೈವೇದ್ಯ, ವೈಶ್ವದೇವ, ಬಲಿಹರಣ, ಅಗ್ನಿಕಾರ್ಯ ಮುಂತಾದ ಆಹ್ನಿಕಗಳನ್ನು ತಪ್ಪದೇ ಮಾಡುತ್ತ ಬಂದಿರುವಿರಿ. ಇಂದೇಕೆ ಈ ಶೃಂಗಾರದ ಉನ್ಮಾದ? ನಿಮ್ಮ ಧರ್ಮಕರ್ಮಗಳೆಲ್ಲವೂ ಇಂದೇಕೆ ತಲೆಕೆಳಗಾಗಿವೆ?

**ಇಂದ್ರ** :- ಮೊದಲು ಆಲಿಂಗನವನ್ನು ಕೊಡು, ಸಂಕೋಚವನ್ನು ದೂರಮಾಡು, ನಿನಗೆ ಸಂಕೋಚವಾದರೆ ನಾನೇ ಮುಂದಾಗುತ್ತೇನೆ.

ಎಂದು ಹೇಳಿ ಅವಳನ್ನು ಆಲಿಂಗಿಸಿ ತನ್ನ ಇಷ್ಟಾರ್ಥವನ್ನು ನೆರವೇರಿಸಿ ಕೊಂಡನು.

ಅತ್ತ ಸ್ನಾನಮಾಡುತ್ತಿರುವ ಗೌತಮನಿಗೆ ಸಂದೇಹ ಬಂದಿತು. ಧ್ಯಾನ ದೃಷ್ಟಿಯಿಂದ ನೋಡಿದಾಗ ಎಲ್ಲವೂ ತಿಳಿಯಿತು ಇಂದ್ರನ ಅವಾಂತರ. ಕೂಡಲೇ ಮನೆಗೆ ಬಂದನು. ಬಾಗಿಲಲ್ಲಿ ನಿಂತುಕೊಂಡನು. ದೇವೇಂದ್ರನು ಗೌತಮ ಬರುವುದನ್ನು ನೋಡಿ, ತಕ್ಷಣದಲ್ಲಿಯೇ ತನ್ನ ರೂಪವನ್ನು ಮರೆಮಾಡಿ ಬೆಕ್ಕಿನ ದೇಹವನ್ನು ಧರಿಸಿದನು. ಆ ಬೆಕ್ಕು ಮುಗ್ಗರಿಸುತ್ತ ಮುನ್ನಡೆಯಿತು, ಅವನನ್ನು ಕಂಡು ಗೌಡಮ ಮುನಿ ಕೇಳಿದ- ' ಬೆಕ್ಕಿನ ದೇಹಧರಿಸಿದ ನೀನು ಯಾರು ?' ಎಂದು. ನಡುಗಿ ಹೋದ ಸುರರಾಜ. ದೇವೇಂದ್ರನಾದರೂ ಆ ಮಾನವ ಮುನಿಯು ಎದುರು ಕೈ ಮುಗಿದುಕೊಂಡು ನಿಂತ. ಮುನಿಗೆ ಕೋಪ ಕೆರಳಿಹೋಯಿತು. ಆ ಕಾಮಾಂಧ ದೇವೇಂದ್ರನನ್ನು ಕಂಡು, ಶಾಪ ಹಾಕಿದ- ''ಇಂದ್ರಿಯ ಲೌಲ್ಯದಿಂದ ನೀನು ಇಂತಹ ದುಷ್ಕಾರ್ಯವನ್ನು ಮಾಡಿರುವಿ, ಆದುದರಿಂದ ನಿನ್ನ ಮೈತುಂಬ ಸ್ತ್ರೀ ಇಂದ್ರಿಯವೇ ಆಗಲಿ, ನಿನ್ನ ಲಿಂಗಪಾತವಾಗಿ ಹೋಗಲಿ. ಪಾಪಿಯೇ ನನ್ನ ಎದುರು ನಿಲ್ಲಬೇಡ, ಸ್ವರ್ಗಲೋಕಕ್ಕೆ ಹೋಗು, ಅಲ್ಲಿ ನಿನ್ನ ಭಕ್ತರಾದ ದೇವತೆಗಳು ಮುನಿಗಳು ಯಕ್ಷರು, ಸಿದ್ಧರು ಎಲ್ಲರೂ ನೋಡಲಿ ನಿನ್ನ ಈ ದಿವ್ಯ ಅವತಾರವನ್ನು.'' ಹೀಗೆ ಅಪರಾಧಿ ದೇವೇಂದ್ರನಿಗೆ ಶಾಪವಿತ್ತು ಮಡದಿಯೆಡೆಗೆ ನೋಡಿದನು. ಕಣ್ಣೀರಿನ ಕೋಡಿ ಹರಿಸಿ ದುಃಖ ಗದ್ಗದಿತಳಾಗಿ ನಡುಗುತ್ತ ನಿಂತಿದ್ದಳು. ಆ ಪತಿವ್ರತೆಯಾದ ಪ್ರಮದೆ ಅಹಲ್ಯೆ.

**ಗೌತಮ** :- ಮೂಢೆ, ಯಾವ ದುಷ್ಕರ್ಮಕ್ಕಾಗಿ ಇಂತಹ ಘೋರ ಪಾಪ ಕಾರ್ಯ ಕೈಕೊಂಡೆ? ಅಹಲ್ಯೆಯ ದೇಹವು ನಡುನೆತ್ತಿಯಿಂದ ಅಡಿದಾವರೆಯವರೆಗೆ ನಡುಗಿ ಹೋಯಿತು ಪತಿಯ ಈ ಗುಡುಗನ್ನು ಕೇಳಿ. ಪತಿಗೆ ಅಡ್ಡಬಿದ್ದಳು ಆ ಅಬಲೆ.

**ಅಹಲ್ಯೆ** :- ಅಜ್ಞಾನಾದ್‌ಮತ್‌ಕೃತಂ ಕರ್ಮಂ ಕ್ಷನ್ತುಮರ್ಹಸಿ ವೈ ಪ್ರಭೋ। ನಾನು ಈ ಕೆಲಸವನ್ನು ತಿಳಿಯದೆ ಮಾಡಿದೆ, ದಯವಿಟ್ಟು ಕ್ಷಮಿಸಿರಿ.

**ಗೌತಮ** :- ಪುರಪುರುಷರ ಸಂಗಮಾಡಿ ನೀನು ಭ್ರಷ್ಟಳಾಗಿರುವೆ. ಪಾಪಿ ಹೆಣ್ಣು ನೀನಿಂದು ಅಪವಿತ್ರಳು, ವ್ಯಭಿಚಾರಿಣಿ, ಇನ್ನು ಮೇಲೆ ನಿನ್ನ ಮೈಯಲ್ಲಿ ಮಾಂಸ,

ಉಗುರುಗಳಿಲ್ಲದೆ ಬರಿ ಚರ್ಮ ಮೂಳೆಗಳಿಂದ ನಿನ್ನ ದೇಹವು ವಿದ್ರೂಪವಾಗಿ ಇರಲಿ, ನೀನು ಒಂಟಿಯಾಗಿ ಬಹುಕಾಲ ಇಲ್ಲಿಯೇ ನಿಲ್ಲು, ಎಲ್ಲ ಜನರೂ ಸ್ತ್ರೀಯರೂ ನೋಡಲಿ

**ಅಹಲ್ಯೆ :-** ಸ್ವಾಮಿ, ಈ ದೀನ ದಾಸಿಯ ಮೇಲೆ ದಯೆದೋರಿರಿ. ತಾವು ಕೊಟ್ಟ ಈ ಶಾಪಕ್ಕೆ ಕೊನೆಯೇ ಇಲ್ಲವೇ? ಇದಕ್ಕೊಂದು ಅವಧಿಯನ್ನು ನಿರ್ದೇಶಿಸಿರಿ.

ಅವಳ ಈ ಕರುಣಾಕ್ರಂದನವನ್ನು ಕೇಳಿ ಮುನಿಗೂ ಹೃದಯ ಹಿಂಡಿತು. ಕಣ್ಣು ಹನಿಯಿತು. ಅವನು ಕರಗಿ ನುಡಿದನು.-

**ಗೌತಮ :-** ದಶರಥಕುಮಾರ ರಾಮಚಂದ್ರ ಸೀತಾಲಕ್ಷ್ಮಣರೊಡಗೂಡಿ ಈ ವನಕ್ಕೆ ಬರಲಿರುವನು. ಅವನು ದೇಹವಿಲ್ಲದೆ ಮೈ ಎಲ್ಲ ಒಣಗಿ ಬರಿ ಎಲುವಿನ ಹಂದರವಾಗಿ ನಿಂತ ನಿನ್ನನ್ನು ನೋಡಿ ವಿಶ್ವಾಮಿತ್ರ ಮುನಿಯನ್ನು 'ಈ ಮೂಳೆಯ ಮೂರ್ತಿ ಯಾರು?' ಎಂದು ಕೇಳುವನು. ಆಗ ವಿಶ್ವಾಮಿತ್ರ ನಿನ್ನ ವೃತ್ತಾಂತವನ್ನೆಲ್ಲ ಆ ಭಗವಂತನಿಗೆ ನಿವೇದಿಸುವರು. ಆಗ ಶ್ರೀ ಪ್ರಭು ರಾಮಚಂದ್ರನು ಯುಕ್ತಾಯುಕ್ತ ವಿಮರ್ಶೆ ಮಾಡಿ. 'ಇದರಲ್ಲಿ ಈ ಹೆಣ್ಣು ಮಗಳ ತಪ್ಪು ಏನೂ ಇಲ್ಲ ದೋಷವೆಲ್ಲವೂ ಇಂದ್ರನದು' ಎಂದು ಘೋಷಿಸುವನು. ಆ ಕ್ಷಣದಲ್ಲಿ ನೀನು ನಿನ್ನ ಈ ಅಸಹ್ಯ ರೂಪವನ್ನು ತ್ಯಜಿಸಿ ಭಗವದನುಗ್ರದಿಂದ ದಿವ್ಯವಾದ ಸುಂದರ ರೂಪವನ್ನು ಪಡೆಯುವಿ.

ಹೀಗೆ ಗೌತಮ ಮುನಿಯು ಅಹಲ್ಯೆಯನ್ನು ಶಪಿಸಿ, ತಪೋನುಷ್ಠಾನಕ್ಕಾಗಿ ಹೊರಟು ಹೋದನು-ವನಾಂತರಕ್ಕೆ. ಅನೇಕ ವರ್ಷ ಕಾಲ ಕಾಡಿನಲ್ಲಿ ಗೌತಮನೂ ನಾಡಿನಲ್ಲಿ ಅಹಲ್ಯೆಯೂ ನಿಂತು ತಪಂಗೈದರು. ಅವರಿಬ್ಬರ ತಪಸ್ಸು ಪರಿಪಕ್ವದೆಶೆಗೆ ಬಂದಿತು. ಪ್ರಭು ಶ್ರೀರಾಮನು ಅಲ್ಲಿಗೆ ದಯಮಾಡಿಸಿದನು. ಅಹಲ್ಯೆಯನ್ನು ಉದ್ಧರಿಸಿದನು. ಅವನ ವಚನದಿಂದಲೇ ಗೌತಮ ಅಹಲ್ಯೆಯರ ಪುನರ್ಮಿಲನವಾಯಿತು. ಅನಂತರ ಅವರಿಬ್ಬರೂ ಶ್ರೀಹರಿಯನ್ನು ಆರಾಧಿಸಿ ಸ್ವರ್ಗದಲ್ಲಿ ಸುಖದಿಂದ ಇರುತ್ತಾರೆ.

ಇತ್ತ ದೇವೇಂದ್ರನಿಗೂ ತನ್ನ ಆ ಶಪಿತ ಅವಸ್ಥೆಯಿಂದ ಬಹಳ ನಾಚಿಕೆ ಆಯಿತು. ಯಾರಿಗೂ ಮುಖ ತೋರಿಸದೆ ನೆಲ ಬಿಟ್ಟು ಜಲದಲ್ಲಿಯೇ ಕುಳಿತ. ಜಲ ಸಮಾಧಿಯಲ್ಲಿದ್ದುಕೊಂಡೇ ಇಂದ್ರಾಕ್ಷಿ ಎಂಬ ಮಹಾದೇವಿಯನ್ನು ಸ್ತೋತ್ರ ಮಾಡಿದ. ಸ್ತೋತ್ರದಿಂದ ಪ್ರಸನ್ನಳಾದಳು - ಆ ಪರಮೇಶ್ವರಿ. 'ಬೇಕಾದ ವರಬೇಡು' ಎಂದಳು ಆ ಇಂದ್ರನಿಗೆ. ಇಂದ್ರ ಬಿದ್ದು ಬೇಡಿಕೊಂಡ -

**ಇಂದ್ರ :-** ತಾಯಿ, ಗೌತಮ ಮುನಿಯ ಶಾಪದಿಂದ ನನಗೆ ಮೈತುಂಬ ಸ್ತ್ರೀಯರ ಜನನೇಂದ್ರಿಯವಾಗಿವೆ. ಇದರಿಂದ ನನಗೆ ಎಲ್ಲಿಯೂ ಮುಖ ತೋರಿಸಲು ಬಾರದಂತಾಗಿದೆ. ಅದಕ್ಕಾಗಿ ನಾನು ರಾಜ್ಯ, ಕೋಶ, ಮನೆ, ಮಡದಿ ಎಲ್ಲರನ್ನೂ ತ್ಯಜಿಸಿದ್ದೇನೆ. ಜಲಾಧಿವಾಸಿಯಾಗಿ, ಜಪಿಸಿ ನಿನ್ನನ್ನು ಸ್ತುತಿಸಿ ಈಗ ಬೇಡಿಕೊಳ್ಳುತ್ತಲಿದ್ದೇನೆ. ನನ್ನ ಮೇಲೆ ಅನುಗ್ರಹ ಮಾಡು. ಆ ಮೊದಲಿನ ರೂಪವು ನನಗೆ ಮತ್ತೆ ಬರುವಂತೆ ಕರುಣಿಸು.

**ಇಂದ್ರಾಕ್ಷಿ :-** ಸುರರಾಜ, ಮಹಾ ಮುನಿ ಕೊಟ್ಟ ಶಾಪವನ್ನು ಬದಲಿಸಲಾರರು - ಬ್ರಹ್ಮಾದಿ ದೇವತೆಗಳು. ನಾನು ಕೂಡ ಮುನಿಯ ಮಾತನ್ನು ಮಾರ್ಪಡಿಸಲಾರೆ, ಆದರೆ ಒಂದು ಯುಕ್ತಿಯನ್ನು ಮಾಡುತ್ತೇನೆ. ಈಗ ನಿನ್ನ ಮೈತುಂಬ ವ್ಯಾಪಿಸಿರುವ

ಯೋನಿಗಳೆಲ್ಲವೂ ಕಣ್ಣುಗಳಾಗುವವು. ನೀನು ಸಹಸ್ರಾಕ್ಷ ಎಂದು ಖ್ಯಾತಿಯನ್ನು ಪಡೆಯುವೆ. ಆಡಿನ ಅಂಡವು ನಿನ್ನ ಗುಹ್ಯಸ್ಥಾನವಾಗುವದು.'

ಇಷ್ಟು ಹೇಳಿ ಆ ಜಗನ್ಮಾತೆಯ ಅಂತರ್ಧಾನ ಹೊಂದಿದಳು. ಹೀಗೆ ಮಹಾದೇವಿಯ ಅನುಗ್ರಹದಿಂದ ಆ ದೇವರಾಜನು ಸ್ವಾಸ್ಥ್ಯಪಡೆದು ಇಂದಿಗೂ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ. ಕಾಮುಕತೆಯ ಅತಿರೇಕದಿಂದ ದೇವೇಂದ್ರನಂಥವನಿಗೂ ಇಂಥ ದುರವಸ್ಥೆ ಬಂದು ಹೋಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಅಹಲ್ಯೆಯ ಉದ್ಧಾರ ಎಂಬ ಐವತ್ತೊಂದನೇಯ ಅಧ್ಯಾಯ ಮುಗಿದುದು*



## ಲೋಹಿತನ ಉದ್ಧಾರ

ಅಧ್ಯಾಯ - ೫೨

**ಭಗವಂತ :-** ಇನ್ನು ಮೇಲೆ ಮತ್ತೊಂದು ಕಾಮ ವಿಕಾರದ ಕತೆ ಕೇಳು. ಪೂರ್ವಕಾಲದಲ್ಲಿ ಗಂಗಾ ತಟಾಕದಲ್ಲಿ ಒಬ್ಬ ಸನ್ಯಾಸಿಯು ವಾಸಮಾಡುತ್ತಿದ್ದ. ಸಾವಿರಾರು ಜನ ಶಿಷ್ಯರು ಆ ಪಂಡಿತ ಪರಿವ್ರಾಜಕನಿಗೆ ಆ ಏಕದಂಡಿ ಸನ್ಯಾಸಿಯು ನೆಲದಮೇಲೆ ಎದ್ದು ಬಂದ ಸಾಕ್ಷಾತ್ ಕೂರ್ಮರೂಪಿ ಪರಮಾತ್ಮನೇ ಎನ್ನುವಂತಿದ್ದ! ಸಾವಿರಾರು ಜನರು ನಿತ್ಯವೂ ಅವನ ಉಪದೇಶಕ್ಕಾಗಿ ಬರುತ್ತಿದ್ದರು ಭಾಗೀರಥಿ ತೀರದಲ್ಲಿ ತಲೆಎತ್ತಿ ನಿಂತಿರುವ ಒಂದು ದೇವಮಂದಿರವು ಅವನ ವಾಸಸ್ಥಾನ. ಒಂದು ದಿನ ಆ ದೇವಾಗಾರದಲ್ಲಿ ಏಕಾಕಿಯಾಗಿ ಕುಳಿತಿದ್ದ ಆ ಸನ್ಯಾಸಿ. ಸಂಜೆಯ ಸಮಯ ಒಬ್ಬ ರೂಪವತಿಯಾದ ತರುಣಿಯು ಅದೇ ದಾರಿಯಿಂದ ತನ್ನ ಮನೆಗೆ ಹೊರಟಿದ್ದಳು. ಆ ಸೌಂದರ್ಯಶಾಲಿನಿಯನ್ನು ಈ ಸನ್ಯಾಸಿ ನೋಡಿದ, ಪಕ್ಕದಲ್ಲಿ ಯಾರೂ ಇರಲಿಲ್ಲ ಮನಸ್ಸು ಚಂಚಲಿಸಿತು ದುರ್ಬುದ್ಧಿ ತಲೆ ಎತ್ತಿತು. ಆ ತರುಣಿಯನ್ನು ಕಾಮಾರ್ತನಾಗಿ ಕೈಹಿಡಿದು ಎಳೆದ - ಈ ದುಷ್ಟ ಸನ್ಯಾಸಿ. ಅವಳು ಕೂಗಾಡಿ ಕೊಸರಿಕೊಂಡು ಹೋಗಲು ಪ್ರಯತ್ನಿಸಿದಳು. ಆದರೂ ಆ ಸನ್ಯಾಸಿ ತನ್ನ ಶಕ್ತಿಯಿಂದ ಎಳೆದು ತಂದು ದೇವಾಲಯದ ಒಳಗೆ ನೂಕಿ ಬಾಗಿಲನ್ನು ಎಳೆದುಕೊಂಡನು ಭಯಭ್ರಾಂತಳಾದ ಆ ಯುವತಿಯು ಒಳಗಡೆಯಿಂದ ಆ ಬಾಗಿಲಿನ ಚಿಲಕ ಹಾಕಿ ಅಡ್ಡ ಅಗಳಿಯನ್ನು ಎಳೆದುಕೊಂಡಳು. ಈ ಸನ್ಯಾಸಿ ಎಷ್ಟು ಬೇಡಿಕೊಂಡರೂ ಅವಳು ಒಳಗಿನಿಂದ ಬಾಗಿಲು ತೆಗೆಯಲೇ ಇಲ್ಲ. ಬಾಗಿಲ ಹೊರಗೆ ರಾತ್ರಿ ಎಲ್ಲ ಸನ್ಯಾಸಿಯು ಚಳಿಯಲ್ಲಿ ನಡುಗುತ್ತ ನಿಂತುಕೊಂಡ. ಆ ಸನ್ಯಾಸಿಯು ಮತ್ತೆ ಮತ್ತೆ ಬೇಡಿಕೊಂಡ 'ಪ್ರಿಯೇ ಇದನ್ನೇನು ನೀನು ಮಾಡಿದೆ ? ನೀನು ಬೇಡಿದ್ದನ್ನು ಕೊಡುತ್ತೇನೆ. ನನ್ನನ್ನು ಹೊರಗೆ ನಿಲ್ಲಿಸಬೇಡ. ದಯವಿಟ್ಟು ಬಾಗಿಲು ತೆಗೆ. ನನ್ನ ಹತ್ತಿರ ಬೇಕಾದಷ್ಟು ಹಣವಿದೆ. ಎಲ್ಲವನ್ನೂ ನಿನಗೆ ಕೊಡುತ್ತೇನೆ.'

**ಮಹಿಳೆ :-** ಅಯ್ಯಾ, ಇಂತಹ ಅಸಂಗತ ಮಾತುಗಳನ್ನು ನಿನ್ನಂತಹ ಯತಿಯು ಆಡಕೂಡದು. ನೀನು ನನಗೆ ಧರ್ಮದೃಷ್ಟಿಯಿಂದ ತಂದೆ ಆಗಬೇಕು, ನಾನು ನಿನ್ನ ಮಗಳಿದ್ದಂತೆ. ನನ್ನನ್ನು ಬಯಸುವದು ಅತ್ಯಂತ ಹೇಯ ಪರಸ್ತ್ರೀಯರನ್ನು ಎಂದೂ

ಇಚ್ಛಿಸಬಾರದು.'' ಎಂದು ಬುದ್ಧಿವಾದ ಹೇಳಿದಳು. ಇಷ್ಟಾದರೂ ಆ ಕಪಟ ಸನ್ಯಾಸಿ ಕೇಳಲಿಲ್ಲ. ಒಳಗೆ ತೂತು ಕೊರೆದು ಕೈಹಾಕಿ ಅಗಳಿ ತೆಗೆಯಲು ಪ್ರಯತ್ನಿಸಿದ. ತೋಳಿನಿಂದ ಬಾಗಿಲ ಹಲಗೆಯನ್ನೇ ಎತ್ತಿ ಇಡಲು ಹೆಣಗಾಡಿದ. ಎರಡೂ ಪ್ರಯತ್ನಗಳು ವಿಫಲವಾದವು. ಅನಂತರ ಅವನು ಬಾಗಿಲದಲ್ಲಿ ಕೊರೆದು (ತೂತು) ರಂಧ್ರವನ್ನು ದೊಡ್ಡದನ್ನಾಗಿ ಮಾಡಿ ಅದರಲ್ಲಿ ತನ್ನ ತಲೆಯನ್ನು ಒಳಗೆ ತೂರಿದ. ಅವಳಿಗೆ ಬಾಯಿ ತೆರೆದು 'ಬಾಗಿಲು ತೆರೆ' ಎಂದು ಬೇಡಿಕೊಂಡ ಆ ಹೆಣ್ಣು ಮಗಳು ಅದು ನನ್ನಿಂದ ಸಾಧ್ಯವಿಲ್ಲವೆಂದು ದೂರ ಕುಳಿತಳು. ನಿರಾಶನಾಗಿ ಆ ಸನ್ಯಾಸಿ ತನ್ನ ತಲೆಯನ್ನು ತಿರುಗಿ ತೆಗೆದುಕೊಳ್ಳಲು ಪ್ರಯತ್ನಿಸಿದ. ಇಕ್ಕಟ್ಟಾದ ರಂಧ್ರದಲ್ಲಿ ಸಿಕ್ಕ ತಲೆ ಮರಳಿ ತೆಗೆಯಲು ಆಗಲಿಲ್ಲ. ಕೊಸರಾಟದಲ್ಲಿ ಕುತ್ತಿಗೆ ಉರುಲು ಬಿದ್ದು ಅಲ್ಲಿಯೇ ಸತ್ತು ಹೋದ.

ಬೆಳಗಾದ ಬಳಿಕ ಗಸ್ತಿ ತಿರುಗುವ ಕಾವಲುಗಾರರು ಅಲ್ಲಿಗೆ ಬಂದರು. ಈ ದುರ್ಮರಣವನ್ನು ಕಂಡು ಆಶ್ಚರ್ಯಪಟ್ಟು ಅವಳನ್ನು ಕೇಳಿದರು. ನಡೆದ ಸಮಾಚಾರವನ್ನೆಲ್ಲ ಆ ಪತಿವ್ರತೆಯು ಆರಕ್ಷಿಗಳಿಗೆ ತಿಳಿಸಿ ತನ್ನ ಸ್ಥಾನಕ್ಕೆ ಹೊರಟು ಹೋದಳು. ಹೀಗೆ ಕಾಮಾಸಕ್ತಿಯಿಂದ ಅನೇಕ ದುರಂತ ಘಟನೆಗಳು ಈ ಪ್ರಪಂಚದಲ್ಲಿ ನಡೆಯುತ್ತವೆ.

ಈ ಕಾಮದ ಉಪದ್ರವವು ಎಂತೆಂತಹವರಿಗೂ ಬೆನ್ನು ಬಿಟ್ಟಿಲ್ಲ, ಹಿಂದೆ ಸರ್ವಲೋಕ ಪಿತಾಮಹನಾದ ಬ್ರಹ್ಮದೇವರಿಗೂ ಕೂಡ ಓರ್ವ ರೂಪವತಿಯಾದ ವನಿತೆಯನ್ನು ಕಂಡು ಮನಸ್ಸು ವಿಕೃತವಾಯಿತು. ಅವರ ಶಕ್ತಿಪಾತವಾದ ಸ್ಥಳದಲ್ಲಿ ಲೋಹಿತ ಸಂಭವ ಎಂಬ ತೀರ್ಥವು ನಿರ್ಮಿತವಾಗಿದೆ. ಅಲ್ಲಿ ಸ್ನಾನ ಮಾಡಿದವರು ಬ್ರಹ್ಮಲೋಕ ಹೊಂದುತ್ತಾರೆ.

**ನರೋತ್ತಮ** :- ಬ್ರಹ್ಮದೇವರಿಗೆ ಮೋಹವೆಲ್ಲಿಯದು? ಪಿತಾಮಹನ ಮನಸ್ಸನ್ನು ಮರುಳುಮಾಡಿದ ಆ ಮೋಹಿನಿ ಯಾರು? ಈ ತೀರ್ಥದ ಉದ್ಭವವು ಎಂತಾದುದು ಇದನ್ನೆಲ್ಲ ತಿಳಿಸಿರಿ ?

**ಭಗವಂತ** :- ಹಿಂದೆ ಶಾಂತನು ಎಂಬ ಮಹರ್ಷಿ ಇದ್ದನು. ದೇವತೆಗಳಿಗೂ ಪರಿಪೂಜ್ಯ. ಬ್ರಹ್ಮಸಮಾನ ಅವನ ಕಾಂತಿ. ಅವನ ಪತ್ನಿ ಮಹಾ ಪತಿವ್ರತೆ! ಅವಳ ಹೆಸರು ಅಮೋಘಾ. ತಾರುಣ್ಯದಲ್ಲಿ ಅವಳು ಒಳ್ಳೇ ಲಾವಣ್ಯವತಿಯಾಗಿ ಕಂಗೊಳಿಸುತ್ತಿದ್ದಳು. ಒಮ್ಮೆ ಬ್ರಹ್ಮದೇವರು ಶಾಂತನುವನ್ನು ಹುಡುಕಿಕೊಂಡು ಅವನ ಮನೆಗೆ ಹೋಗಿದ್ದ. ಹೂಗಳನ್ನು ತರಲು ಆ ಮುನಿಪುಂಗವ ಕಾಡಿಗೆ ತೆರಳಿದ್ದ. ಮನೆಯಲ್ಲಿದ್ದ ಅಮೋಘೆಯು ಮನೆಗೆ ಬಂದ ಬ್ರಹ್ಮದೇವರಿಗೆ ಸ್ವಾಗತ ನೀಡಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ದೂರದಿಂದಲೇ ನಮಸ್ಕರಿಸಿದಳು. ಬ್ರಹ್ಮದೇವರನ್ನು ಆಸನದಲ್ಲಿ ಕೂಡಿಸಿ ತನ್ನ ಕೆಲಸಕ್ಕೆ ಒಳ ನಡೆದಳು.

ಆ ಹರೆಯದ ಹೆಣ್ಣು ಮಗಳನ್ನು ಕಂಡು ಬ್ರಹ್ಮದೇವರ ಚಿತ್ತವು ಕಾಮಾಕ್ರಾಂತವಾಯಿತು. ಆದರೂ ಬ್ರಹ್ಮದೇವರು ತನ್ನ ಮನಸ್ಸನ್ನು ನಿಗ್ರಹ ಮಾಡಿ ಕೊಂಡರು. ಅವರು ಎಷ್ಟೇ ಮನಸ್ಸನ್ನು ಸ್ತಿಮಿತದಲ್ಲಿಟ್ಟುಕೊಂಡರೂ ಅವರ ಶಕ್ತಿ ಪಾತವು ಕುಳಿತ ಮಂಚದ ಮೇಲಾಯಿತು. ಬ್ರಹ್ಮದೇವರು ಅಲ್ಲಿಂದ ಹೊರಟು ಹೋದರು. ಅಷ್ಟರಲ್ಲಿ ಶಾಂತನು ಮುನಿಯು ಹೂ ಕಾಯಿಗಳನ್ನು ತೆಗೆದುಕೊಂಡು ಮರಳಿ ಮನೆಗೆ ಬಂದನು. ಪೀಠದ ಮೇಲಿನ ಶುಕ್ರವನ್ನು ನೋಡಿ ಮಡದಿಯನ್ನು 'ಇಲ್ಲಿಗೆ ಯಾವ ಗಂಡಸರು ಬಂದಿದ್ದರು?' ಎಂದು ಕೇಳಿದನು. ಅಮೋಘೆಯು ಶಾಂತ ಸ್ವರದಲ್ಲಿ

ಉತ್ತರಿಸಿದಳು. 'ಬ್ರಹ್ಮದೇವರು ನಿಮ್ಮನ್ನು ಅರಿಸಿಕೊಂಡು ಬಂದಿದ್ದರು. ನಾನು ಅವರಿಗೆ ಅರ್ಘ್ಯಪಾದ್ಯ ಆಸನಗಳನ್ನು ನೀಡಿದೆನು. ಶುಕ್ರ ಪಾತದ ಕಾರಣವನ್ನು ತಪೋಬಲದಿಂದ ನೀವೇ ತಿಳಿಯಿರಿ' ಎಂದು ಬಿನ್ನವಿಸಿದಳು. ಜ್ಞಾನಿಯಾದ ಶಾಂತನು ಮುನಿಯು ಶಾಂತ ಮನಸ್ಸಿನಿಂದಲೇ ಎಲ್ಲವನ್ನೂ ವಿಚಾರಿಸಿದನು ತಪೋಬಲದಿಂದ ತಿಳಿದುಕೊಂಡನು. ಮಡದಿಯೊಡನೆ ಮಧುರ ಸ್ವರದಲ್ಲಿ ಮಾತನಾಡಿದನು-

'ಸಾಧ್ವೀಮಣಿ ಇದು ಬ್ರಹ್ಮದೇವರ ಶಕ್ತಿ, ಇದನ್ನು ವ್ಯರ್ಥ ಮಾಡಬೇಡ. ಇದು ನನ್ನ ಆಜ್ಞೆ. ಇದರಿಂದ ನಿನಗೆ ಜಗತ್ಪಾವನನಾದ ಮಗನು ಹುಟ್ಟುತ್ತಾನೆ. ಅವನಿಂದ ಜಗತ್ತಿಗೆ ಕಲ್ಯಾಣವಾಗುವದು.'

ಪತಿಯ ಆಜ್ಞೆಯನ್ನು ಆ ಪತಿವ್ರತೆಯು ಶಿರಸಾ ಮನ್ನಿಸಿದಳು. ಆ ವೀರ್ಯವನ್ನು ಪತಿಯ ಆಜ್ಞೆಯಂತೆ ಪಾನ ಮಾಡಿದಳು. ಆದರೆ ಅದನ್ನು ಅವಳಿಗೆ ತಾಳಲಿಕ್ಕಾಗಲಿಲ್ಲ. ಆ ತೇಜೋಗರ್ಭದಿಂದ ಅವಳಿಗೆ ಹೊಟ್ಟೆ ತಳಮಳಿಸಿದಂತಾಯಿತು. ಆ ತೇಜೋಗರ್ಭ ಸಹಿಸದೆ ಪತಿಗೆ ನುಡಿದಳು -

**ಅಮೋಘಾ :-** ನಾಥ, ಈ ಬ್ರಹ್ಮತೇಜವನ್ನು ನನ್ನ ಗರ್ಭದಲ್ಲಿ ನನ್ನಿಂದ ಧರಿಸಲು ಆಗುವದಿಲ್ಲ, ಈಗೇನು ಮಾಡಲಿ? ಧರ್ಮದ ಸೂಕ್ಷ್ಮ ಬಲ್ಲ ನೀವೇ ಮಾರ್ಗದರ್ಶನ ಮಾಡಿರಿ. ಈಗ ನನ್ನ ಪಂಚಪ್ರಾಣಕ್ಕೆ ಸಂಚಕಾರ ಬಂದಿದೆ. ನಾನು ಇದನ್ನು ಹೊಟ್ಟೆಯಲ್ಲಿ ಇಟ್ಟುಕೊಂಡು ಬದುಕಲಾರೆ. ಇದನ್ನು ಎಲ್ಲಿ ಇರಿಸಲಿ? ಅಪ್ಪಣೆ ಕೊಡಿರಿ.

ಅನಂತರ ಅವಳು ತನ್ನ ಪತಿಯ ಅಪ್ಪಣೆಯಂತೆ **'ಯುಗಂಧರಾ'** ಎಂಬ ತಿಳಿ ನೀರಿನ ನಿರ್ಝರಿಣಿಯಲ್ಲಿ ಆ ತೇಜಸ್ಸನ್ನು ಬಿಟ್ಟು ಬಿಟ್ಟಳು. ಅದರ ಮಧ್ಯದಿಂದ ಒಳ್ಳೇ ತೇಜಃಪುಂಜನಾದ ಒಬ್ಬ ಪುರುಷನು ಎದ್ದು ನಿಂತ. ತಲೆಯ ಮೇಲೆ ರತ್ನ ಕಿರೀಟ ಮೈಮೇಲೆ ನೀಲಾಂಬರ, ಕೊರಳಲ್ಲಿ ಮಣಿಮಾಲೆ, ಕಣ್ಣುಕುಕ್ಕುವ ತೇಜಸ್ಸು ದೇದೀಪ್ಯಮಾನ ಕಾಂತಿ. ಅವನ ಈ ತೇಜೋದೀಪ್ತಿಯನ್ನು ಕಂಡು ದೇವತೆಗಳು ಪುಷ್ಪವೃಷ್ಟಿ ಮಾಡಿದರು. ಅವನು ಆವಿರ್ಭವಿಸಿದ ತೀರ್ಥವು 'ತೀರ್ಥರಾಜ' ಎಂದು ಪ್ರಸಿದ್ಧವಾಯಿತು.

ನಾನು ಮುಂದೆ ಭೃಗುವಂಶದಲ್ಲಿ ಪರಶುರಾಮನೆಂಬ ಹೆಸರಿನಿಂದ ಅವತಾರ ಮಾಡಿದೆ. ಆಗ ದುಷ್ಟರಾದ ಕ್ಷತ್ರಿಯ ರಾಜರು ಕೊಂದು ಹಾಕಿದರು - ನಿರಪರಾಧಿಯಾದ ನನ್ನ ತಂದೆಯನ್ನು. ನನ್ನ ಪಿತ್ತ ನೆತ್ತಿಗೇರಿತು. ಕೂಡಲೇ ಕೊಡಲಿಯಿಂದ ಕೊಚ್ಚಿ ಹಾಕಿದೆ ಆ ಪಾಪಿಷ್ಠರಾದ ಕ್ಷತ್ರಿಯ ಧರ್ಮದವರನ್ನೆಲ್ಲ. ಬ್ರಹ್ಮಹತ್ಯೆ ಪಾಪಕ್ಕೆ ಸಮಾನವಾದ ಪಾಪವು ಕ್ಷತ್ರಿಯ ಜಾತಿ ನಿರ್ಮೂಲನ ಪ್ರಯುಕ್ತವಾಗಿ ನನ್ನ ಮೈಯಲ್ಲಿ ಕಾಣಿಸಿಕೊಂಡಿತು. ಆ ರಕ್ತದಿಂದ ಕೂಡಿದ ನನ್ನ ಕೊಡಲಿಯನ್ನು ಅನೇಕ ತೀರ್ಥಗಳಲ್ಲಿ ತೊಳೆದೆ. ಏನಾದರೂ ಕೊಡಲಿಗೆ ಮೆತ್ತಿದ ನೆತ್ತರವು ಹೋಗಲಿಲ್ಲ. ಎಷ್ಟು ನದಿ, ಸರೋವರ, ಸಮುದ್ರಗಳಲ್ಲಿ ಪ್ರಕ್ಷಾಲನಗಳಾದರೂ ಕೊಡಲಿ ಪರಿಶುದ್ಧ ಆಗಲೇ ಇಲ್ಲ. ಆಗ ನಾನು ಚಿಂತಾಕ್ರಾಂತನಾಗಿರಲು ಆಕಾಶವಾಣಿ ಆಯಿತು.-

''ರಾಮ, ನೀನು ನಿನ್ನ ಕೊಡಲಿಯನ್ನು ಇಂದಿನಿಂದ ಪ್ರಸಿದ್ಧವಾದ ಎಲ್ಲ ತೀರ್ಥಗಳಲ್ಲಿ ತೊಳೆಯುತ್ತ ಹೋಗು. ಯಾವ ತೀರ್ಥದಲ್ಲಿ ಪ್ರಕ್ಷಾಲನೆ ಮಾಡಿದಾಗ ಪರಿಶುದ್ಧವಾಗುವದೋ ಅದೇ ಮುಖ್ಯ ತೀರ್ಥ ಎಂದು ತಿಳಿ.'' ನಭೋ ವಾಣಿಯ

ಅಣತಿಯಂತೆ ಪರಶುರಾಮನು ಗಂಗೆ, ಗೋದಾ, ಸರಸ್ವತಿ, ಕಾವೇರಿ, ಯಮುನಾ, ಶತುದ್ರು, ಗೌರಿ ಮುಂತಾದ ಎಲ್ಲ ತೀರ್ಥಗಳಿಗೆ ಹೋಗಿ ತನ್ನ ಪ್ರಿಯ ಪರಶುವನ್ನು ಪ್ರಕ್ಷಾಲನೆ ಗೈದನು. ಅನಂತರ ಅನೇಕ ಗಿರಿ, ಗುಹೆ, ಝರಿ, ಕೊರಿ, ಪರ್ವತ, ತಪ್ಪಲುಗಳಲ್ಲಿರುವ ಅ ಪ್ರಸಿದ್ಧ ತೀರ್ಥಗಳಲ್ಲಿಯೂ ಕೊಡಲಿ ಅದ್ದಿದನು. ಎಲ್ಲಿಯೂ ಶುದ್ಧವಾಗಲಿಲ್ಲ. 'ಇನ್ನೇನು ಗತಿ' ಎಂದು ನಿಟ್ಟುಸಿರು ಬಿಡುತ್ತ ಕೈ ಚೆಲ್ಲಿ ಕುಳಿತನು.

ಮತ್ತೆ ಆಕಾಶವಾಣಿ ''ರಾಮ, ಪೂರ್ವ ದಿಕ್ಕಿನಲ್ಲಿ ಒಂದು ಮನೆಯ ಒಳ ಅಂಗಳದಲ್ಲಿ ಒಂದು ತೀರ್ಥವಿದೆ. ಅಲ್ಲಿ ಹೋಗಿ ಪ್ರಕ್ಷಾಲನ ಮಾಡು'' ಅದರಂತೆ ಪರಶುರಾಮನು ಪೂರ್ವಾಭಿಮುಖನಾಗಿ ಹೋಗಿ, ದಕ್ಷಿಣಾಭಿಮುಖವಾಗಿ ಸುಳಿಯುವ ಒಂದು ಜಲಾಶಯವನ್ನು ಕಂಡನು. ಅಲ್ಲಿ ಕೊಡಲಿಯನ್ನು ತೊಳೆದಾಗ ಬಹು ದಿನದಿಂದ ಮೆತ್ತಿದ ನೆತ್ತರವು ಹೊರಟು ಹೋಗಿ ಪರಶು ಪರಿಶುದ್ಧವಾಯಿತು. ಅವನಿಗೆ ಆನಂದವಾಯಿತು. ಅವನೂ ಸ್ನಾನ ಮಾಡಿದನು. ಸ್ನಾನದಿಂದ ದೇಹ ಶುದ್ಧವಾಯಿತು. ಮನಸ್ಸು ನಿರ್ಮಲವಾಯಿತು. ಕೆಲವು ದಿನ ಪರಶುರಾಮನು ಪ್ರತಿ ನಿತ್ಯ ಅವಗಾಹನ ಸ್ನಾನ ಮಾಡುತ್ತ ಅಲ್ಲಿಯೇ ನೆಲೆಸಿದನು. ಅಲ್ಲಿಯೇ ಪರಶುರಾಮನು ಒಂದು ಗ್ರಾಮ ನಿರ್ಮಿಸಿ ಆ ತೀರ್ಥವನ್ನೂ ಪ್ರಖ್ಯಾತಮಾಡಿ, ತಾನು ಲವಣ ಸಮುದ್ರಕ್ಕೆ ಹೊರಟು ಹೋದನು. ಇದೇ ಆ ಬ್ರಹ್ಮದೇವರು ನಿರ್ಮಿಸಿದ **'ಲೋಹಿತ ಸಂಭವ ತೀರ್ಥ'**. ಇದು ಮುಕ್ತಿ ತೀರ್ಥ ತೀರ್ಥರಾಜ. ಸರ್ವರಿಗೂ ಸುಖಪ್ರದ. ರಾಮನ ಪ್ರಭಾವಕ್ಕೆ ಇದು ಸಾಕ್ಷಿ. ಈ ಕಾಮವು ಪಾಪದಿಂದ ಉತ್ಪನ್ನವಾದರೂ ಬ್ರಹ್ಮದೇವರು ಅದನ್ನು ನಿಗ್ರಹಿಸಿಕೊಂಡರು. ಶಾಂತನು ಕೂಡ ಬ್ರಹ್ಮದೇವನ ಭಕ್ತಿಯಿಂದ ಅದನ್ನು ಒಪ್ಪಿದನು. ಅವನ ಪತ್ನಿಯು ಪತಿಯ ಆಜ್ಞೆಯಂತೆ ಧರಿಸಿದಳು. ಬ್ರಹ್ಮದೇವರು ಇಂದ್ರಿಯ ನಿಗ್ರಹದ ಪ್ರಭಾವವನ್ನು ಜಗತ್ತಿಗೆ ತಿಳಿಸಲಿಕ್ಕಾಗಿ ಮಾಡಿದ ಲೋಕವಿಡಂಬನೆಯಿಂದ ರೂಪು ಗೊಂಡ ಈ ಕ್ಷೇತ್ರವು ಸರ್ವಶ್ರೇಷ್ಠ ತೀರ್ಥವೆಂದು ಪ್ರಸಿದ್ಧವಾಗಿದೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಲೋಹಿತನ ಉದ್ಧಾರ ಐವತ್ತೆರಡನೇಯ ಅಧ್ಯಾಯ ಮುಗಿದುದು*

—o—

ಉತ್ತರಿಸಿದಳು. 'ಬ್ರಹ್ಮದೇವರು ನಿಮ್ಮನ್ನು ಅರಿಸಿಕೊಂಡು ಬಂದಿದ್ದರು. ನಾನು ಅವರಿಗೆ ಅರ್ಘ್ಯಪಾದ್ಯ ಆಸನಗಳನ್ನು ನೀಡಿದೆನು. ಶುಕ್ರ ಪಾತದ ಕಾರಣವನ್ನು ತಪೋಬಲದಿಂದ ನೀವೇ ತಿಳಿಯಿರಿ' ಎಂದು ಬಿನ್ನವಿಸಿದಳು. ಜ್ಞಾನಿಯಾದ ಶಾಂತನು ಮುನಿಯು ಶಾಂತ ಮನಸ್ಸಿನಿಂದಲೇ ಎಲ್ಲವನ್ನೂ ವಿಚಾರಿಸಿದನು ತಪೋಬಲದಿಂದ ತಿಳಿದುಕೊಂಡನು. ಮಡದಿಯೊಡನೆ ಮಧುರ ಸ್ವರದಲ್ಲಿ ಮಾತನಾಡಿದನು-

'ಸಾಧ್ವೀಮಣಿ ಇದು ಬ್ರಹ್ಮದೇವರ ಶಕ್ತಿ, ಇದನ್ನು ವ್ಯರ್ಥ ಮಾಡಬೇಡ. ಇದು ನನ್ನ ಆಜ್ಞೆ. ಇದರಿಂದ ನಿನಗೆ ಜಗತ್ಪಾವನನಾದ ಮಗನು ಹುಟ್ಟುತ್ತಾನೆ. ಅವನಿಂದ ಜಗತ್ತಿಗೆ ಕಲ್ಯಾಣವಾಗುವದು.'

ಪತಿಯ ಆಜ್ಞೆಯನ್ನು ಆ ಪತಿವ್ರತೆಯು ಶಿರಸಾ ಮನ್ನಿಸಿದಳು. ಆ ವೀರ್ಯವನ್ನು ಪತಿಯ ಆಜ್ಞೆಯಂತೆ ಪಾನ ಮಾಡಿದಳು. ಆದರೆ ಅದನ್ನು ಅವಳಿಗೆ ತಾಳಲಿಕ್ಕಾಗಲಿಲ್ಲ. ಆ ತೇಜೋಗರ್ಭದಿಂದ ಅವಳಿಗೆ ಹೊಟ್ಟೆ ತಳಮಳಿಸಿದಂತಾಯಿತು. ಆ ತೇಜೋಗರ್ಭ ಸಹಿಸದೆ ಪತಿಗೆ ನುಡಿದಳು -

**ಅಮೋಘಾ :-** ನಾಥ, ಈ ಬ್ರಹ್ಮತೇಜವನ್ನು ನನ್ನ ಗರ್ಭದಲ್ಲಿ ನನ್ನಿಂದ ಧರಿಸಲು ಆಗುವದಿಲ್ಲ, ಈಗೇನು ಮಾಡಲಿ? ಧರ್ಮದ ಸೂಕ್ಷ್ಮ ಬಲ್ಲ ನೀವೇ ಮಾರ್ಗದರ್ಶನ ಮಾಡಿರಿ. ಈಗ ನನ್ನ ಪಂಚಪ್ರಾಣಕ್ಕೆ ಸಂಚಕಾರ ಬಂದಿದೆ. ನಾನು ಇದನ್ನು ಹೊಟ್ಟೆಯಲ್ಲಿ ಇಟ್ಟುಕೊಂಡು ಬದುಕಲಾರೆ. ಇದನ್ನು ಎಲ್ಲಿ ಇರಿಸಲಿ? ಅಪ್ಪಣೆ ಕೊಡಿರಿ.

ಅನಂತರ ಅವಳು ತನ್ನ ಪತಿಯ ಅಪ್ಪಣೆಯಂತೆ **'ಯುಗಂಧರಾ'** ಎಂಬ ತಿಳಿ ನೀರಿನ ನಿರ್ಝರಿಣಿಯಲ್ಲಿ ಆ ತೇಜಸ್ಸನ್ನು ಬಿಟ್ಟು ಬಿಟ್ಟಳು. ಅದರ ಮಧ್ಯದಿಂದ ಒಳ್ಳೇ ತೇಜಃಪುಂಜನಾದ ಒಬ್ಬ ಪುರುಷನು ಎದ್ದು ನಿಂತ. ತಲೆಯ ಮೇಲೆ ರತ್ನ ಕಿರೀಟ ಮೈಮೇಲೆ ನೀಲಾಂಬರ, ಕೊರಳಲ್ಲಿ ಮಣಿಮಾಲೆ, ಕಣ್ಣುಕುಕ್ಕುವ ತೇಜಸ್ಸು ದೇದೀಪ್ಯಮಾನ ಕಾಂತಿ. ಅವನ ಈ ತೇಜೋದೀಪ್ತಿಯನ್ನು ಕಂಡು ದೇವತೆಗಳು ಪುಷ್ಪವೃಷ್ಟಿ ಮಾಡಿದರು. ಅವನು ಆವಿರ್ಭವಿಸಿದ ತೀರ್ಥವು 'ತೀರ್ಥರಾಜ' ಎಂದು ಪ್ರಸಿದ್ಧವಾಯಿತು.

ನಾನು ಮುಂದೆ ಭೃಗುವಂಶದಲ್ಲಿ ಪರಶುರಾಮನೆಂಬ ಹೆಸರಿನಿಂದ ಅವತಾರ ಮಾಡಿದೆ. ಆಗ ದುಷ್ಟರಾದ ಕ್ಷತ್ರಿಯ ರಾಜರು ಕೊಂದು ಹಾಕಿದರು - ನಿರಪರಾಧಿಯಾದ ನನ್ನ ತಂದೆಯನ್ನು. ನನ್ನ ಪಿತ್ತ ನೆತ್ತಿಗೇರಿತು. ಕೂಡಲೇ ಕೊಡಲಿಯಿಂದ ಕೊಚ್ಚಿ ಹಾಕಿದೆ ಆ ಪಾಪಿಷ್ಠರಾದ ಕ್ಷತ್ರಿಯ ಧರ್ಮದವರನ್ನೆಲ್ಲ. ಬ್ರಹ್ಮಹತ್ಯೆ ಪಾಪಕ್ಕೆ ಸಮಾನವಾದ ಪಾಪವು ಕ್ಷತ್ರಿಯ ಜಾತಿ ನಿರ್ಮೂಲನ ಪ್ರಯುಕ್ತವಾಗಿ ನನ್ನ ಮೈಯಲ್ಲಿ ಕಾಣಿಸಿಕೊಂಡಿತು. ಆ ರಕ್ತದಿಂದ ಕೂಡಿದ ನನ್ನ ಕೊಡಲಿಯನ್ನು ಅನೇಕ ತೀರ್ಥಗಳಲ್ಲಿ ತೊಳೆದೆ. ಏನಾದರೂ ಕೊಡಲಿಗೆ ಮೆತ್ತಿದ ನೆತ್ತರವು ಹೋಗಲಿಲ್ಲ. ಎಷ್ಟು ನದಿ, ಸರೋವರ, ಸಮುದ್ರಗಳಲ್ಲಿ ಪ್ರಕ್ಷಾಲನಗಳಾದರೂ ಕೊಡಲಿ ಪರಿಶುದ್ಧ ಆಗಲೇ ಇಲ್ಲ. ಆಗ ನಾನು ಚಿಂತಾಕ್ರಾಂತನಾಗಿರಲು ಆಕಾಶವಾಣಿ ಆಯಿತು.-

"ರಾಮ, ನೀನು ನಿನ್ನ ಕೊಡಲಿಯನ್ನು ಇಂದಿನಿಂದ ಪ್ರಸಿದ್ಧವಾದ ಎಲ್ಲ ತೀರ್ಥಗಳಲ್ಲಿ ತೊಳೆಯುತ್ತ ಹೋಗು. ಯಾವ ತೀರ್ಥದಲ್ಲಿ ಪ್ರಕ್ಷಾಲನೆ ಮಾಡಿದಾಗ ಪರಿಶುದ್ಧವಾಗುವದೋ ಅದೇ ಮುಖ್ಯ ತೀರ್ಥ ಎಂದು ತಿಳಿ." ನಭೋ ವಾಣಿಯ

ಅಣತಿಯಂತೆ ಪರಶುರಾಮನು ಗಂಗೆ, ಗೋದಾ, ಸರಸ್ವತಿ, ಕಾವೇರಿ, ಯಮುನಾ, ಚತುದ್ರು, ಗೌರಿ ಮುಂತಾದ ಎಲ್ಲ ತೀರ್ಥಗಳಿಗೆ ಹೋಗಿ ತನ್ನ ಪ್ರಿಯ ಪರಶುವನ್ನು ಪ್ರಕ್ಷಾಲನೆ ಗೈದನು. ಅನಂತರ ಅನೇಕ ಗಿರಿ, ಗುಹೆ, ಝರಿ, ಕೊರಿ, ಪರ್ವತ, ತಪ್ಪಲುಗಳಲ್ಲಿರುವ ಆ ಪ್ರಸಿದ್ಧ ತೀರ್ಥಗಳಲ್ಲಿಯೂ ಕೊಡಲಿ ಅದ್ದಿದನು. ಎಲ್ಲಿಯೂ ಶುದ್ಧವಾಗಲಿಲ್ಲ. 'ಇನ್ನೇನು ಗತಿ' ಎಂದು ನಿಟ್ಟುಸಿರು ಬಿಡುತ್ತ ಕೈ ಚೆಲ್ಲಿ ಕುಳಿತನು.

ಮತ್ತೆ ಆಕಾಶವಾಣಿ "ರಾಮ, ಪೂರ್ವ ದಿಕ್ಕಿನಲ್ಲಿ ಒಂದು ಮನೆಯ ಒಳ ಅಂಗಳದಲ್ಲಿ ಒಂದು ತೀರ್ಥವಿದೆ. ಅಲ್ಲಿ ಹೋಗಿ ಪ್ರಕ್ಷಾಲನ ಮಾಡು" ಅದರಂತೆ ಪರಶುರಾಮನು ಪೂರ್ವಾಭಿಮುಖನಾಗಿ ಹೋಗಿ, ದಕ್ಷಿಣಾಭಿಮುಖವಾಗಿ ಸುಳಿಯುವ ಒಂದು ಜಲಾಶಯವನ್ನು ಕಂಡನು. ಅಲ್ಲಿ ಕೊಡಲಿಯನ್ನು ತೊಳೆದಾಗ ಬಹು ದಿನದಿಂದ ಮೆತ್ತಿದ ನೆತ್ತರವು ಹೊರಟು ಹೋಗಿ ಪರಶು ಪರಿಶುದ್ಧವಾಯಿತು. ಅವನಿಗೆ ಆನಂದವಾಯಿತು. ಅವನೂ ಸ್ನಾನ ಮಾಡಿದನು. ಸ್ನಾನದಿಂದ ದೇಹ ಶುದ್ಧವಾಯಿತು. ಮನಸ್ಸು ನಿರ್ಮಲವಾಯಿತು. ಕೆಲವು ದಿನ ಪರಶುರಾಮನು ಪ್ರತಿ ನಿತ್ಯ ಅವಗಾಹನ ಸ್ನಾನ ಮಾಡುತ್ತ ಅಲ್ಲಿಯೇ ನೆಲೆಸಿದನು. ಅಲ್ಲಿಯೇ ಪರಶುರಾಮನು ಒಂದು ಗ್ರಾಮ ನಿರ್ಮಿಸಿ ಆ ತೀರ್ಥವನ್ನೂ ಪ್ರಖ್ಯಾತಮಾಡಿ, ತಾನು ಲವಣ ಸಮುದ್ರಕ್ಕೆ ಹೊರಟು ಹೋದನು. ಇದೇ ಆ ಬ್ರಹ್ಮದೇವರು ನಿರ್ಮಿಸಿದ **'ಲೋಹಿತ ಸಂಭವ ತೀರ್ಥ'**. ಇದು ಮುಕ್ತಿ ತೀರ್ಥ ತೀರ್ಥರಾಜ. ಸರ್ವರಿಗೂ ಸುಖಪ್ರದ. ರಾಮನ ಪ್ರಭಾವಕ್ಕೆ ಇದು ಸಾಕ್ಷಿ. ಈ ಕಾಮವು ಪಾಪದಿಂದ ಉತ್ಪನ್ನವಾದರೂ ಬ್ರಹ್ಮದೇವರು ಅದನ್ನು ನಿಗ್ರಹಿಸಿಕೊಂಡರು. ಶಾಂತನು ಕೂಡ ಬ್ರಹ್ಮದೇವನ ಭಕ್ತಿಯಿಂದ ಅದನ್ನು ಒಪ್ಪಿದನು. ಅವನ ಪತ್ನಿಯು ಪತಿಯ ಆಜ್ಞೆಯಂತೆ ಧರಿಸಿದಳು. ಬ್ರಹ್ಮದೇವರು ಇಂದ್ರಿಯ ನಿಗ್ರಹದ ಪ್ರಭಾವವನ್ನು ಜಗತ್ತಿಗೆ ತಿಳಿಸಲಿಕ್ಕಾಗಿ ಮಾಡಿದ ಲೋಕವಿಡಂಬನೆಯಿಂದ ರೂಪು ಗೊಂಡ ಈ ಕ್ಷೇತ್ರವು ಸರ್ವಶ್ರೇಷ್ಠ ತೀರ್ಥವೆಂದು ಪ್ರಸಿದ್ಧವಾಗಿದೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಲೋಹಿತನ ಉದ್ಧಾರ ಐವತ್ತೆರಡನೇಯ ಅಧ್ಯಾಯ ಮುಗಿದುದು*

—o—

**ಶ್ರೀಹರಿ :-** ಪೂರ್ವ ಕಾಲದಲ್ಲಿ ಮಹಾದೇವನು ಕಾಮವಿಕಾರಕ್ಕೆ ಒಳಗಾದನು. ಗಂಧರ್ವ, ಕಿನ್ನರ, ಮನುಷ್ಯ ಜಾತಿಯಲ್ಲಿಯ ರೂಪಶಾಲಿನಿಯರಾದ ತರುಣಣಿ ಕನ್ಯೆಯರನ್ನೆಲ್ಲ ತನ್ನ ಮಂತ್ರ ಬಲದಿಂದ ಸೆಳೆಯುತ್ತಿದ್ದನು. ಅನಂತರ ಆಕಾಶದಲ್ಲಿ ದೂರ ಅವರನ್ನು ಹಾರಿಸಿಕೊಂಡು ವೈಯ್ದು, ಒಂದು ರಮ್ಯವಾದ ತಪೋವನದಲ್ಲಿ ತಪಸ್ಸಿನ ನೆಪದಿಂದ ಒಂದು ಪರ್ಣ ಕುಟೀರವನ್ನು ರಚಿಸಿ ಆ ತರುಣಿಯರ ಜೊತೆಗೆ ವಿಹಾರಗೈಯುತ್ತಿದ್ದನು. ಒಂದಾನೊಂದು ಕಾಲದಲ್ಲಿ ಮನ್ಮಥನನ್ನು ಗೆದ್ದ ಪರಶಿವನು ತಾನೇ ಕಾಮಾಕ್ರಾಂತ ಚಿತ್ತನಾಗಿ ಚೆಲುವೆಯರೊಡನೆ ಲೀಲಾವಿಲಾಸ ಲಾಲಸನಾದನು. ಅವನ ಮಹಾಸತಿಯಾದ ಮಡದಿ ಪಾರ್ವತಿಗೆ ಸಂದೇಹ ಬಂದಿತು. ಧ್ಯಾನ ದೃಷ್ಟಿಯಿಂದ ನೋಡಿದಳು. ತಿಳಿದುಹೋಯಿತು ತನ್ನ ಪತಿಯ ಆ ಎಲ್ಲ ಕಾಮಲೀಲೆ. ಗಂಗಾಧರನ ಈ ಶೃಂಗಾರ ಚೇಷ್ಟೆಯು ಶಂಕರಿಯ ಚಿತ್ತ ಕ್ಷೋಭಕ್ಕೆ ಕಾರಣವಾಯಿತು. ಕ್ರೋಧ, ಉದ್ದೀಪಿತವಾಯಿತು. ಆಗ ಆ ಮಹಾದೇವಿಯು ಕ್ಷೇಮಂಕರಿ ಎಂಬ ಕೊರವಂಜಿಯ ವೇಷತೊಟ್ಟು ಗಗನ ಮಂಡಲದ ಮಧ್ಯದಲ್ಲಿ ಇರುವ ತನ್ನ ಕಾಂತನ ಏಕಾಂತದ ಕುಟೀರಕ್ಕೆ ಆಗಮಿಸಿದಳು. ಲಲನೆಯರ ಗುಂಪಿನಲ್ಲಿ ಕಾಮಾಕ್ರಾಂತನಾದ ಅವಳ ಕಾಂತ ನಿಂತುಕೊಂಡು ಆ ಹದಿ ಹರೆಯದ ಹೆಣ್ಣು ಮಕ್ಕಳನ್ನು ಆಲಿಂಗಿಸಿ, ಚುಂಬಿಸಿ, ವಿಹಾರಪರನಾಗಿದ್ದ. ಅದನ್ನು ಕಂಡಕೂಡಲೆ ಶಂಕರಿಯ ಕೋಪ ಮಿತಿಮೀರಿತು. ಆ ಯುವತಿಯರನ್ನೆಲ್ಲ ಕೂದಲು ಹಿಡಿದೆಳೆದು ಕಾಲಿನಿಂದ ಒದ್ದು ಬಿಟ್ಟಳು. ಅದನ್ನು ಕಂಡು ಮಹಾದೇವನಿಗೆ ನಾಚಿಕೆಯಾಗಿ ಕೆಳಗೆ ಮುಖಮಾಡಿ ನಿಂತುಕೊಂಡ. ಆ ತರುಣಿಯರನ್ನೆಲ್ಲ ಕೇಶ ಪಾಶ ಹಿಡಿದು ನೆಲಕ್ಕೆ ಬೀಳಿಸಿದಳು ಎಲ್ಲರ ಮುಖವೂ ಕಪ್ಪಿಟ್ಟಿತು ಉಮೆ ಶಾಪವಿತ್ತಳು 'ನೀವೆಲ್ಲರೂ ಶಾಪ ದಗ್ಧರಾಗಿ ಚಾಂಡಾಲಯೋನಿಯನ್ನು ಹೊಂದಿ ವಿಧವೆಯರಾಗಿ ಮ್ಲೇಂಛ ವಶರಾಗಿರಿ' ಹೀಗೆ ಆ ಅಬಲೆಯರನ್ನೆಲ್ಲ ಅಲ್ಲಿಂದ ಹೊಡೆದೋಡಿಸಿ, ಪಾರ್ವತಿಯು ನೂರಾರು ತರುಣ ಸ್ತ್ರೀಯರ ರೂಪ ಧರಿಸಿ, ಮಹಾದೇವನೊಡನೆ ವಿಹರಿಸತೊಡಗಿದಳು. ಆಗ ಸಂತುಷ್ಟನಾದ ಪರಮೇಶ್ವರನು ಅವಳೊಡನೆ ಕೈಲಾಸ ಮಂದಿರಕ್ಕೆ ತೆರಳಿದನು. ಆದುದರಿಂದ ಕ್ಷೇಮಂಕರಿ ದೇವಿಯನ್ನು ಭಕ್ತಿಯಿಂದ ವಂದಿಸುವವರಿಗೆ ಐಶ್ವರ್ಯದ ಅಭಿವೃದ್ಧಿ ಆಗುವದು.

**ಕುಂಕುಮಾರಕ್ತ ಸರ್ವಾಂಗಿ ಕುಂದೇಂದುಧವಳಾನನೇ ।**
**ಸರ್ವಮಂಗಳದೇ ದೇವಿ ಕ್ಷೇಮಂಕರಿ ನಮೋಽಸ್ತು ತೇ ॥**

ಕುಂಕುಮದಿಂದ ಸರ್ವಾಂಗವೂ ಕೆಂಪಾಗಿ ಹೊಳೆಯುತ್ತಿರುವ ಚಂದ್ರನಂತೆ ಸುಂದರ ಮುಖವುಳ್ಳ ಕ್ಷೇಮಂಕರಿ ದೇವಿಯೇ ನಿನಗೆ ನಮಸ್ಕಾರ. ನೀನು ಜಗತ್ತಿಗೆಲ್ಲ ಕ್ಷೇಮವನ್ನುಂಟು ಮಾಡುವಿ, ಸರ್ವರಿಗೂ ಮಂಗಳವನ್ನುಂಟುಮಾಡಲು ನೀನೇ ಸಮರ್ಥಳು ಈ ಕ್ಷೇಮಂಕರೀ ದೇವಿಯನ್ನು ನಮಿಸಿದವರಿಗೆ ಗೆಲವು. ವಂದಿಸದಿದ್ದವರಿಗೆ ಯುದ್ಧದಲ್ಲಿ ಸೋಲು. ಇವಳನ್ನು ಆರಾಧಿಸಿದವರಿಗೆ ಅರಮನೆಯಲ್ಲಿ ಗೌರವ, ಉಪಾಸಿಸಿದವರಿಗೆ ಪಾಂಡಿತ್ಯ.

ಈ ಕಥೆಯ ಮುಖ್ಯ ತಾತ್ಪರ್ಯವೆಂದರೆ ಕಾಮನನ್ನು ಗೆದ್ದ ಮಹಾದೇವರಿಗೂ ಕೂಡ ಸ್ತ್ರೀಮೋಹ ತಪ್ಪಲಿಲ್ಲ. ಆದುದರಿಂದ ಮನುಷ್ಯನು ಕಾಮವಾಸನೆಗೆ ಅವಕಾಶ ಕೊಡದಂತೆ ಎಚ್ಚರದಿಂದ ಬಾಳಬೇಕು. ಸ್ವಯಂ ಜಗದೀಶ್ವರನಾದ ವಿಷ್ಣುರೂಪದ ನನಗೂ ಕೂಡ

ಪರಸ್ತ್ರೀ ಅಪಹಾರದಿಂದ ಎಂತಹ ದುರವಸ್ಥೆ ಉಂಟಾಯಿತೆಂಬುದು ಎಲ್ಲರಿಗೂ ತಿಳಿದೇ ಇದೆ. ಅದನ್ನೇ ನಿನಗೆ ತಿಳಿಸುತ್ತೇನೆ.

ನಾನು ಮೆಚ್ಚಿ ಮೋಹಿಸಿ ಗೋಕುಲ ವೃಂದಾವನಗಳಲ್ಲಿ ರಮಿಸಿದ ಗೋಪಿಯರಲ್ಲಿ ಕೆಲವರು ಬಾಲೆಯರು, ಹಲವರು ಪತಿವ್ರತೆಯರು, ಕೆಲವರು ಮಾತ್ರ ತಪಸ್ವಿನಿಯರು, ನನಗೆ ಸಂಬಂಧಿಕರು, ವಯಸ್ಸಾದವರು, ತರುಣಿಯರು, ಎಲ್ಲ ತರಹದ ಗೋಪ ಕನ್ಯೆಯರನ್ನು ನಾನು ಅಪಹರಿಸಿದೆ. ಇದರಿಂದ ಜರಾಸಂಧನೊಡನೆ ಯುದ್ಧದಲ್ಲಿ ನಾನು ಸೋಲಬೇಕಾಯಿತು. ಚೊಚ್ಚಲು ಮಗ ಪ್ರದ್ಯುಮ್ನನನ್ನು ಕಳೆದುಕೊಂಡು ದುಃಖಪಡಬೇಕಾಯಿತು. ಪಾಂಡವರ ದೂತನಾಗಿ, ಅರ್ಜುನನ ಸಾರಥಿಯಾಗಿ ದುಡಿಯಬೇಕಾಯಿತು. ಹುಟ್ಟು ಸಾವು, ಮುಂತಾದವುಗಳನ್ನು ಮಾನವರಂತೆ ನಾನು ಕೂಡ ಲೋಕ ಲೀಲಾರೂಪವಾಗಿ ಹೊಂದುವ ಪ್ರಸಂಗ ಬಂದಿತು. ಆದರೆ ಈ ಅದ್ರೋಹಕನು ಮಾತ್ರ ಇಂದ್ರಿಯ ನಿಗ್ರಹದಿಂದ ದೇವತೆಗಳಿಗೂ ಪ್ರಭುವಾಗಿದ್ದಾನೆ. ಹಿಂದೆಯೂ ಮುಂದೆಯೂ ಇವನಂತಹ ಮಹಾವ್ಯಕ್ತಿ ಯು ಆಗಲಿಲ್ಲ. ತೊಡೆಯ ಮೇಲಿನ ತರುಣಿಯನ್ನು ಕೂಡ ಕಣ್ಣೆತ್ತಿ ನೋಡದೆ, ಕಾಮವಶನಾಗದೇ ಶಾಂತ ಚಿತ್ತದಿಂದ ತಾಯಿ ಎಂದು ಭಾವಿಸಿ ಅವಳನ್ನು ಗೌರವಿಸಿದ ಅದ್ರೋಹಕನಂತಹ ವ್ಯಕ್ತಿ ದೇವತೆಗಳ ಗುಂಪಿನಲ್ಲಿಯೂ ದುರ್ಮಿಳ, ರಾಕ್ಷಸರಲ್ಲಿಯಂತೂ ದೊರಕುವದಿಲ್ಲ. ಪ್ರತಿನಿತ್ಯಲೂ ಅವನು ಮೊದಲು ನಮಗೆ ನೈವೇದ್ಯಮಾಡದೇ ಎಂದೂ ಭೋಜನ ಮಾಡುವದಿಲ್ಲ. ಅವನ ಈ ಭಕ್ತಿ, ವಿಷಯ ವಿರಕ್ತಿಗಳನ್ನು ಕಂಡು ನಾನು ಅವನಿಗೆ ಪ್ರಸನ್ನನಾಗಿ ಅವನ ಮನೆ ಕಾಯುತ್ತ ಅಲ್ಲಿಯೇ ಇರುತ್ತೇನೆ.

**ನರೋತ್ತಮ :-** ಸ್ವಾಮಿ, ನನಗೂ ಏನಾದರೂ ಉಪದೇಶ ನೀಡು, ಉದ್ಧಾರದ ಮಾರ್ಗ ತೋರು.

**ಶ್ರೀಹರಿ :-** ಮೊದಲು ನೀನು ಮನೆಗೆ ಹೋಗು. ಮುಪ್ಪಿನ ಮುದುಕರಾದ ನಿನ್ನ ತಾಯಿ ತಂದೆಗಳು ಪುತ್ರ ವಿರಹದಿಂದ ಬಳಲುತ್ತಿದ್ದಾರೆ. ಮನೆಗೆ ಹೋಗಿ ಅವರ ಸೇವೆ ಮಾಡು. ತಾಯಿ ತಂದೆಗಳು ಪ್ರಸನ್ನರಾದರೆ ನಾನು ಸ್ವಯಂ ಸುಪ್ರಸನ್ನನಾಗಿ ಅನುಗ್ರಹಿಸುತ್ತೇನೆ.

**'ಮಾತಾಪಿತೃ ಸಮಾ ದೇವಾ ನ ತಿಷ್ಠಂತಿ ಸುರಾಲಯೆ ।'**

ತಾಯಿ ತಂದೆಗಳಿಗೆ ಸಮನಾದ ದೇವತೆಗಳು ಸುರಲೋಕದಲ್ಲಿ ಕೂಡ ಇಲ್ಲ. ಬಾಲ್ಯದಲ್ಲಿ ಮಕ್ಕಳ ದೇಹವು ಎಷ್ಟೇ ಪರಾಧೀನವಿದ್ದರೂ, ಮಲಿನವಿದ್ದರೂ ಗಣಿಸದೇ ಪ್ರೀತಿಯಿಂದ ಆ ಶಿಶು ದೇಹವನ್ನು ರಕ್ಷಿಸಿ, ದೊಡ್ಡವನನ್ನಾಗಿ ಮಾಡಿ ಪ್ರಪಂಚದಲ್ಲಿ ಬಾಳುವಂತೆ ಮಾಡುತ್ತಾರೆ. ಇಂತಹ ತಾಯಿ ತಂದೆಗೆ ಸಮಾನರಾದ ಪರದೇವತೆ ಬೇರಿಲ್ಲ.'

ಹೀಗೆ ಮೂಕ ಚಾಂಡಾಲ, ಅದ್ರೋಹಕ, ಪತಿವ್ರತೆ, ತುಲಾಧಾರ, ವೈಷ್ಣವ ಇವರೆಲ್ಲರೂ ಸಾಕ್ಷಾತ್ ಶ್ರೀಹರಿಯ ದರ್ಶನ ತೆಗೆದುಕೊಂಡು, ಭಗವಂತನ ನಾಮ ಸ್ಮರಣೆ ಮಾಡುತ್ತ ವೈಕುಂಠ ಲೋಕಕ್ಕೆ ಪ್ರಯಾಣ ಮಾಡಿದರು. ಈ ನರೋತ್ತಮ ದ್ವಿಜನು ಕೂಡ ಶ್ರೀಹರಿಯ ಆದೇಶದಂತೆ ತನ್ನ ಮನೆಗೆ ಹೋದನು. ತಾಯಿತಂದೆಯನ್ನು ಬಿಟ್ಟು ಹೋದದ್ದು ತನ್ನ ಮಹದಪರಾಧವಾಯಿತು ಎಂದು ತಪ್ಪು ಒಪ್ಪಿಕೊಂಡು ತಾಯಿ ತಂದೆಗಳ ಕ್ಷಮೆ ಕೇಳಿಕೊಂಡನು. ಹೀಗೆ ತಾಯಿ ತಂದೆ ಬದುಕಿರುವವರೆಗೂ ನಿರಂತರ ಅವರ ಸೇವಾ ಶುಶ್ರೂಷೆ ಗೈದು ಆ ನರೋತ್ತಮನೂ ಕೂಡ ಮರಣಾ ನಂತರ ಶ್ರೀಹರಿಯ ಸನ್ನಿಧಿಯನ್ನು ಸೇರಿದನು.

ಪರಮ ಪುಣ್ಯಕರವಾದ ಈ ಪಂಚಾಖ್ಯಾನವನ್ನು ನಿಮಗೆ ನಾನು ನಿರೂಪಿಸಿದ್ದೇನೆ. ಇದನ್ನು ಕೇಳಿದವರಿಗೂ, ಹೇಳಿದವರಿಗೂ ಪಾಪವೇ ಬರುವದಿಲ್ಲ. ಕೋಟಿ ಗೋದಾನದ ಫಲ; ಭಾಗೀರಥಿ ಸ್ನಾನದ ಫಲ ಈ ಪಂಚಾಖ್ಯಾನ ಶ್ರವಣದಿಂದ ಬರುವದು. ಆರೋಗ್ಯ ಉತ್ತಮಗೊಳ್ಳುವದು. ಸಂಪತ್ತು ಅಭಿವೃದ್ಧಿಯಾಗುವದು. ಆದುದರಿಂದ ಇದನ್ನು ಅವಶ್ಯವಾಗಿ ಕೇಳಲೇಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಪಂಚಾಖ್ಯಾನ ಎಂಬ ಐವತ್ತಮೂರನೇಯ ಅಧ್ಯಾಯ ಮುಗಿದುದು*



## ಜಲಾಶಯ ನಿರ್ಮಾಣ

**ಅಧ್ಯಾಯ - ೫೪**

**ದ್ವಿಜ ಉವಾಚ**

**ಕೀರ್ತಿರ್ಧರ್ಮೋऽಥ ಲೋಕೇಷು ಸರ್ವಾಣಿ ಪ್ರವಪಾಣಿ ಚ ।**
**ವದ ನೋ ಮುನಿ ಶಾರ್ದೂಲ ಯದಿ ನೋऽಸ್ತಿ ತ್ವದನುಗ್ರಹಃ ॥**

**ದ್ವಿಜರು :-** ಜಗತ್ತಿನಲ್ಲಿ ಧರ್ಮವು ಶ್ರೇಷ್ಠವಾದದ್ದು. ಒಳ್ಳೇ ಕೀರ್ತಿ ಬರುವಂತಹ ಮತ್ತು ಪುಣ್ಯ ಬರುವಂತಹ ಶ್ರೇಷ್ಠಧರ್ಮ ಕಾರ್ಯಗಳು ಯಾವವು? ಅವೆಲ್ಲವುಗಳನ್ನು ನೀವು ನಮಗೆ ತಿಳಿಸಿರಿ. ನಾವು ನಿಮಗೆ ನಿಜವಾಗಿಯೂ ಅನುಗ್ರಹ ಪಾತ್ರರಷ್ಟೆ!

**ವ್ಯಾಸ :-** ಕೊಳ, ಸರೋವರ, ಹಳ್ಳ ಮುಂತಾದವುಗಳನ್ನು ತೋಡಿಸಿದವನು, ದೇವತೆಗಳಿಂದ ಗೌರವಿಸಲ್ಪಡುತ್ತಾನೆ. ಮಾನವ ನಿರ್ಮಿತವಾದ ಜಲಾಶಯಗಳಲ್ಲಿ ಮಳೆ ಬಿದ್ದು. ಅವು ತುಂಬಿ ಹಸುವು ಮುಂತಾದ ಪಶು, ಖಗ ಮೃಗ, ಪಕ್ಷಿ ಪ್ರಾಣಿಗಳು ನೀರು ಕುಡಿದು ತೃಪ್ತಿಯಾದರೆ, ಮಾನವರು ಸ್ನಾನ ಪಾನಗಳಿಂದ ಆನಂದ ಪಟ್ಟರೆ, ಅವನ್ನು ತೋಡಿಸಿದ ಮನುಷ್ಯನು ಸಾವಿರಾರು ವರ್ಷ ಸ್ವರ್ಗದಲ್ಲಿ ಸುಖಿಸುವನು. ಈ ಪ್ರಪಂಚದಲ್ಲಿ ನೀರು ಪರಮ ಪವಿತ್ರ. ಮಾನವನ ಜೀವನವು ಜಲದ ಸ್ನಾನ, ಪಾನ, ಅಡಿಗೆ ಮುಂತಾದವುಗಳಿಂದ ನಿರ್ವಾಹವಾಗುವದು. ನೀರಿಲ್ಲದಿದ್ದರೆ ಯಾವ ಪ್ರಾಣಿಯೂ ಬದುಕಲಾರದು. ದೇವತಾರ್ಚನ, ಪಿತೃತರ್ಪಣ, ಶುದ್ಧಿ, ದುರ್ಗಂಧ ನಾಶ, ಬೆಳೆ, ಧಾನ್ಯ ಎಲ್ಲವೂ ನೀರಿನಿಂದಲೇ ಸಾಧ್ಯ. ಆದುದರಿಂದ ಸರ್ವ ಪ್ರಯತ್ನದಿಂದಲೂ ಮಾನವರು ಬಾವಿ, ಕೆರೆ, ತಟಾಕ, ಹೊಳೆ, ಹಳ್ಳ ಮುಂತಾದವುಗಳನ್ನು ನಿರ್ಮಿಸಬೇಕು.

ಪೂರ್ವ ಕಾಲದಲ್ಲಿ ಓರ್ವ ಸಿರಿವಂತನು ಹತ್ತು ಸಾವಿರ ರೂಪಾಯಿ ಖರ್ಚು ಮಾಡಿ, ತನ್ನ ಧನವನ್ನೆಲ್ಲ ಉಪಯೋಗಿಸಿ ಒಂದು ಜಲಾಶಯ ಕಟ್ಟಿಸಿದನು. ಪ್ರಾಣಿಗಳಿಗೆ ಉಪಕಾರವಾಗಲಿ ಎಂಬುದೇ ಅವನ ಉದ್ದೇಶವಾಗಿತ್ತು. ಕೆಲವು ಕಾಲದ ಬಳಿಕ ಕಟ್ಟಿಸಿದವನು ಬಡವನಾದನು. ಆಗ ಒಬ್ಬ ಧನಿಕನು ಆ ಜಲಾಶಯವನ್ನು ಕೊಂಡುಕೊಳ್ಳಲು ಮುಂದೆ ಬಂದನು. 'ಈ ಜಲಾಶಯಕ್ಕೆ ನಾನು ಹತ್ತು ಸಾವಿರ ರೂಪಾಯಿ ಕೊಡುತ್ತೇನೆ, ಕೊಟ್ಟು ಬಿಡು. ಈ ಜಲಾಶಯವನ್ನು ಕಟ್ಟಿಸಿ ನೀನು ಈಗಾಗಲೇ ಸಾಕಷ್ಟು ಪುಣ್ಯವನ್ನು ಗಳಿಸಿರುವಿ. ನಿನ್ನ ಹಣ ಈ ಪುಣ್ಯರೂಪದಿಂದ ಬಂದು ಹೋಗಿದೆ. ಈಗ ನಾನು ಕೊಡುವ ಹಣವು ನಿನಗೆ ಲಾಭವೆ' ಎಂದು ನುಡಿದನು. ಅದಕ್ಕೆ ಆ ಜಲಾಶಯದ ಒಡೆಯನು ನುಡಿದನು 'ಇದಕ್ಕೆ ಪ್ರತಿದಿನವೂ

ಹತ್ತು ಸಾವಿರ ದೀನಾರದ ಫಲ ಬರುವದೆಂದು ಬಲ್ಲವರು ಹೇಳುತ್ತಾರೆ ನಿರ್ಜಲವಾದ ಈ ಅರಣ್ಯ ಪ್ರಾಂತದಲ್ಲಿ ನಾನು ಬಹಳ ಕಷ್ಟಪಟ್ಟು ಈ ಹೊಂಡ ತೋಡಿಸಿದ್ದೇನೆ. ಜನರು, ಪಶುಗಳು ಅನುದಿನವೂ ಸ್ನಾನ ಪಾನ ಮಾಡಿ ಸಂತೋಷ ಪಡುತ್ತಾರೆ ಇದರಿಂದ ನಿನ್ನ ಹತ್ತು ಸಾವಿರ ಹಣಕ್ಕೆ ನಿತ್ಯವೂ ಫಲ ಬರುವದು.' ಅವನ ಮಾತನ್ನು ಕೇಳಿ ಕೊಳ್ಳಲು ಬಂದ ಸಾಹುಕಾರರು, ಅಲ್ಲಿ ನೆರೆದ ಸಭಿಕರು ನಕ್ಕು ಬಿಟ್ಟರು. ಆಗ ಅದನ್ನು ಕಟ್ಟಿಸಿದ ಯಜಮಾನನು ನುಡಿದನು 'ನಾನು ಹೇಳುವ ಮಾತು ಸುಳ್ಳಲ್ಲ. ಬೇಕಾದರೆ ಪರೀಕ್ಷಿಸಿರಿ.'

ಕೊಳ್ಳುವವನಿಗೆ ಇದರಿಂದ ಕೋಪ ಬಂದು ನುಡಿದ - ''ನಾನು ನಿನಗೆ ಹತ್ತು ಸಾವಿರ ದೀನಾರಗಳನ್ನು ಕೊಡುತ್ತೇನೆ. ಕೊಂಡ ಮೇಲೆ ಅಷ್ಟು ಕಲ್ಲನ್ನು ತಂದು ಈ ಕೊಳದಲ್ಲಿ ಎಸೆಯುತ್ತೇನೆ. ಅದು ಎಷ್ಟು ಧರ್ಮದ ಕಾಲದ್ದೊ ಅಷ್ಟು ಮುಳುಗಲಿ ಎಂದರೆ ನನ್ನ ಸ್ವಂತದ ಕಲ್ಲುಗಳು ಮುಳುಗಲಿ. ಯಾವಾಗ ಆ ಕಲ್ಲುಗಳು ಮೇಲೆ ತೇಲುತ್ತವೆಯೋ ಅಷ್ಟಕ್ಕೆ ನನ್ನ ಹಣ ಮುಗಿಯಿತು. ಉಳಿದದ್ದು ಧರ್ಮಕ್ಕೆ ಸೇರಿದ್ದು. 'ಹಾಗೆಯೇ ಆಗಲೆಂದು' ಬಡವನು ಹಣವನ್ನು ತೆಗೆದುಕೊಂಡನು. ಸಾಕ್ಷಿಗಳ ಎದುರಿಗೆ ಕಲ್ಲುಗಳನ್ನು ಬಿಸಾಡಿದನು. ಅದನ್ನು ಸುರಾಸುರರೆಲ್ಲರೂ ನೋಡಿದರು. ಧರ್ಮ ಸಾಕ್ಷಿಗಳು ಧರ್ಮದ ತಕ್ಕಡಿಯಲ್ಲಿ ತೂಗಿದರು. ಹತ್ತು ಸಾವಿರ ದೀನಾರದ ಬೆಲೆಯೂ ಪುಷ್ಕರಣಿಯ ಒಂದು ದಿನದ ನೀರಿನ ಧರ್ಮದ ಬೆಲೆಯೂ ಸಮ ಆಗದೇ ಧರ್ಮವೇ ಹೆಚ್ಚಿತು. ಆಗ ಕೊಂಡು ಕೊಂಡವನು ತನ್ನ ಹಣವು ಹೀಗೆ ವ್ಯರ್ಥವಾಯಿತಲ್ಲ ಎಂದು ವ್ಯಥೆ ಪಟ್ಟನು. ಮಾರನೇಯ ದಿನವೇ ಆ ಕಲ್ಲುಗಳೆಲ್ಲವೂ ಆ ಕೊಳದ ಮೇಲೆ ದ್ವೀಪದಂತೆ ತೇಲಿದವು.

ಆಗ ಜನಗಳಲ್ಲಿ ಕೋಲಾಹಲವೆದ್ದಿತು. ಇದನ್ನು ಕೇಳಿ ಅವರಿಬ್ಬರೂ ಅಲ್ಲಿಗೆ ಬಂದರು. ಆಗ ಅವರಿಬ್ಬರೂ ಅದಕ್ಕೆ ಆ ಹತ್ತು ಸಾವಿರ ಬೆಲೆಯನ್ನೇ ಕಟ್ಟಿದರು. ಅನಂತರ ಆ ಕೊಳವನ್ನು ಕಟ್ಟಿಸಿದವನೇ ಆ ಕಲ್ಲುಗಳನ್ನು ತೆಗೆಸಿದನು. ಮಾರಿದುದರಿಂದ ಹೋದ ಪುಣ್ಯವು ಮತ್ತೆ ಆ ಕಲ್ಲುಗಳನ್ನು ಎತ್ತಿಹಾಕಿದುದರಿಂದ ಬಂದಿತು. ಆಗ ಅವರಿಬ್ಬರೂ ಸ್ವರ್ಗವನ್ನು ಹೊಂದಿ ಜನ್ಮ ಜನ್ಮಗಳಲ್ಲಿಯೂ ಸುಖಿಸುತ್ತಿದ್ದರು.

ಗೋತ್ರದವರು, ತಾಯಿಯ ಕಡೆಯವರು, ರಾಜರು, ಸ್ನೇಹಿತರು ಇವರಲ್ಲಿ ಯಾರಾದರೂ ತೋಡಿಸಿರುವ ಜಲಾಶಯವು ಮುಚ್ಚಿದ್ದರೆ ಮತ್ತೆ ತೋಡಿಸಿದರೆ ಅವರಿಗೆ ಅಕ್ಷಯ ಫಲವು. ತಪಸ್ವಿಗಳಿಗೆ, ಅನಾಥರಿಗೆ ಬ್ರಾಹ್ಮಣರಿಗೆ ಕೊಳವನ್ನು ಕಟ್ಟಿಸಿಟ್ಟರೆ ಅಕ್ಷಯ ಸ್ವರ್ಗ. ಆದ್ದರಿಂದ ಕೊಳ ಮುಂತಾದ ಜಲಾಶಯಗಳನ್ನು ಶಕ್ತಿಗನುಗುಣವಾಗಿ ಮಾಡಿದವನು ಪಾಪಗಳನ್ನು ನಾಶಮಾಡಿಕೊಂಡು ಮೋಕ್ಷವನ್ನು ಹೊಂದುತ್ತಾನೆ. ಈ ಧರ್ಮಾಖ್ಯಾನವನ್ನು ಜನಗಳಿಗೆ ಹೇಳಿದರೆ ಜಲಾಶಯಗಳೆಲ್ಲದರ ದಾನದ ಫಲವನ್ನು ಹೊಂದುತ್ತಾನೆ. ಸೂರ್ಯಗ್ರಹಣದಲ್ಲಿ ಗಂಗಾನದಿಯ ದಡದಲ್ಲಿ ಕೋಟಿ ಹಸುಗಳನ್ನು ದಾನಮಾಡಿದರೆ ಬರುವ ಫಲವನ್ನು ಈ ಕಥೆಯನ್ನು ಕೇಳಿದವನು ಹೊಂದುತ್ತಾನೆ. ಆತನು ದರಿದ್ರನಾಗುವದಿಲ್ಲ. ದುಃಖಿಯಾಗುವದಿಲ್ಲ ರೋಗಿಯಾಗುವದಿಲ್ಲ. ಅಗೌರವ ದುಃಖಗಳಿಗೆ ಬಲಿಯಾಗುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಜಲಾಶಯ ನಿರ್ಮಾಣ ಎಂಬ ಐವತ್ತನಾಲ್ಕನೇಯ ಒಂದನೇ ಅಧ್ಯಾಯ ಮುಗಿದುದು*

ವ್ಯಾಸ ಉವಾಚ

**ಶಾಖಿನಾಮೇವ ಸರ್ವೇಷಾಂ ಫಲಂ ವಕ್ಷ್ಯಾಮೀಯಾದೃಶಂ ।**
**ತಚ್ಛೃಣಧ್ವಂ ಮಹಾಭಾಗಾ ರೋಪಣೇ ಚ ಪೃಥಕ್ ಪೃಥಕ್ ॥**

**ವ್ಯಾಸ** :- ಮರಗಳನ್ನು ಬೆಳೆಸಿದರೆ ಯಾವ ಫಲಬರುವದೋ ಅವೆಲ್ಲವನ್ನು ಬೇರೆ ಬೇರೆಯಾಗಿ ಹೇಳುತ್ತೇನೆ ಕೇಳು.

ನದಿ ಅಥವಾ ಹಳ್ಳ, ಕೆರೆ ಕಾಲುವೆಗಳ ದಡದಲ್ಲಿ ವೃಕ್ಷಗಳನ್ನು ಬೆಳೆಸಿದರೆ ಪುಣ್ಯ ಫಲ ಇಂತಿಷ್ಟು ಎಂದು ಹೇಳಲು ಶಕ್ಯವಿಲ್ಲ. ಜಲಾಶಯದ ಹತ್ತಿರ ಅರಳಿ ಮರ, ಆಲದ ಮರ, ಅಥವಾ ಬೇರೆ ನೆರಳುಳ್ಳ ಗಿಡಗಳನ್ನು ಬೆಳೆಸಿದರೆ ನೂರು ಯಜ್ಞ ಮಾಡಿದ್ದಕ್ಕಿಂತ ಮಿಗಿಲಾಗಿ ಫಲ ಬರುವದು. ಹಕ್ಕಿಗಳು ಮಾನವರು ಮರಗಳ ಹಣ್ಣುಗಳನ್ನು ತಿಂದು, ಟೊಂಗೆಗಳಲ್ಲಿ ಹಾಗೂ ಗಿಡದ ನೆರಳಿನಲ್ಲಿ ವಿಶ್ರಮಿಸಿ, ಆನಂದಪಡುತ್ತಾರೆ. ಬಿಸಿಲಿನಲ್ಲಿ ಗೋ, ದ್ವಿಜರು ನೆರಳಲ್ಲಿ ವಿಶ್ರಾಂತಿ ಪಡೆದು ಹಣ್ಣು ಕಾಯಿ ತಿಂದು ಆನಂದ ಪಡುವದರಿಂದ ಅಂತಹ ವೃಕ್ಷಗಳನ್ನು ಹಚ್ಚಿ ನೀರು ಹಾಕಿ ಬೆಳೆಸಿದವರಿಗೆ ಅಕ್ಷಯ ಸ್ವರ್ಗವು ಲಭಿಸುವದು. ನೀರಿನ ತೀರದಲ್ಲಿ ರಮ್ಯ ಸ್ಥಳದಲ್ಲಿ ವ್ಯಾಪಾರ ಉದ್ಯೋಗದ ಸ್ಥಳದಲ್ಲಿ ಮಾರ್ಗದ ಆಕ್ಕಪಕ್ಕದಲ್ಲಿ ಕಾಡಿನಲ್ಲಿ, ನಾಡಿನಲ್ಲಿ ಎಲ್ಲಿಯೇ ಆಗಲಿ ಅರಳಿ ಮರ ಮುಂತಾದ ನೆರಳನ್ನೀಯುವ ಹೆಮ್ಮರಗಳನ್ನು ಹಚ್ಚಿ ಬೆಳೆಸಿದರೆ ಆ ಮನುಷ್ಯನು ದಿವ್ಯ ಸ್ವರ್ಗವನ್ನು ಪಡೆಯುತ್ತಾನೆ. ಅರಳಿ ಮರವನ್ನು ಮುಟ್ಟಿದರೆ ಪಾಪ ನಾಶ. ನೋಡಿದರೆ ದುಃಖ ನಾಶ. ಪ್ರದಕ್ಷಣೆ ಮಾಡಿದರೆ ಆಯುಷ್ಯ ವೃದ್ಧಿ; ಪೂಜೆ ಮಾಡಿದರೆ ಐಶ್ವರ್ಯ ಪ್ರಾಪ್ತಿ. ಇಂತಹ ವಿಷ್ಣುವಿನ ಆವಾಸಸ್ಥಾನವಾದ ಅಶ್ವತ್ಥ ವೃಕ್ಷಕ್ಕೆ ನಮಸ್ಕಾರವಿರಲಿ. ಅಕ್ಷಯ ಫಲಪ್ರದನಾದ ಈ ಅಶ್ವತ್ಥ ವೃಕ್ಷವೆಂದರೆ ಒಬ್ಬ ಸತ್ಪುತ್ರನಿದ್ದಂತೆ. ಅದರಿಂದ ದ್ರವ್ಯ, ಕೀರ್ತಿ, ವಿಜಯ, ಮಾನ, ಮಂಗಳ ಮುಂತಾದವುಗಳು ತಾವಾಗಿಯೇ ಪ್ರಾಪ್ತವಾಗುತ್ತವೆ. ಅಶ್ವತ್ಥ ಮೂಲದಲ್ಲಿ ವಿಷ್ಣುವು. ಮಧ್ಯದಲ್ಲಿ ಶಂಕರ ಅಗ್ರದಲ್ಲಿ ಬ್ರಹ್ಮ ಇರುವರು. ಇಂತಹ ಅಶ್ವತ್ಥ ಮರಕ್ಕೆ ಛೇದಗಳನ್ನು ಮಾಡಿದರೆ ಆ ಮನುಷ್ಯನು ರೌರವ ನರಕದಲ್ಲಿ ಬೀಳುವನು. ಇದೇ ರೀತಿ ಉಳಿದ ಮರಗಳನ್ನು ಬೆಳೆಸಿ ರಕ್ಷಿಸುವದರಿಂದ ಅದರಲ್ಲಿಯೂ ಅನೇಕ ಮರಗಳನ್ನು ನೆಟ್ಟು, ಮರದ ಗುಂಪನ್ನು ಮಾಡಿ ವೃಕ್ಷರಾಜಗಳ ಒಂದು ಬನವನ್ನೇ ಮಾಡಬೇಕು. ಈ ಗಿಡದ ತೋಪುಗಳನ್ನು ನಿರ್ಮಿಸುವದರಿಂದ ಇಹದಲ್ಲಿ ಶುಭ, ಆರೋಗ್ಯ, ರಾಜ್ಯ, ಐಶ್ವರ್ಯಗಳನ್ನು ಹೊಂದಿ, ಮುಂದೆ ಸ್ವರ್ಗ ಸುಖವನ್ನು ಅನುಭವಿಸುತ್ತಾರೆ. ಗಿಡಗಳ ಹಣ್ಣುಗಳನ್ನು ಹುಳ, ಹಕ್ಕಿ, ಪಶು, ಪಕ್ಷಿ, ನರ, ವಾನರ ಮುಂತಾದ ಎಷ್ಟು ಪ್ರಾಣಿಗಳು ಆ ಗಿಡ ಗುಂಪಿನ ಉಪಯೋಗವನ್ನು ಪಡೆಯುವವೋ ಅಷ್ಟೇ ಸಂಖ್ಯೆಯ ಜನರು ಮುಂದೆ ಆ ಗಿಡ ಬೆಳೆಸಿದವರ ಮನೆಯಲ್ಲಿ ಆಳಾಗಿ ಕೆಲಸ ಮಾಡುತ್ತಾರೆ.

**ಏವಂ ವೃಕ್ಷಾಃ ಮಹಾಸತ್ವಾಃ ಸರ್ವೇ ತೇ ದೇವರೂಪಿಣಃ ।**
**ತದರ್ಥಾ ಪಿತೃವತ್ ಕಾರ್ಯಾ ಶುಶ್ರೂಷಾ ಜಲಪಿಂಡಕಂ ॥**

ದೊಡ್ಡ ದೊಡ್ಡ ಮರಗಳೆಂದರೆ ದೇವರೇ ಇದ್ದಂತೆ. ಪಿತೃಗಳನ್ನು ಪೂಜಿಸುವಂತೆ ಆ ಮರಗಳನ್ನು ಪೂಜಿಸಬೇಕು. ಅವುಗಳ ಸೇವೆ - ನೀರು, ಗೊಬ್ಬರ (ಪಿಂಡ),

ಕೊಡಬೇಕು. ಇದರಿಂದ ಅಶ್ವಮೇಧಯಾಗ ಮಾಡಿದ ಫಲ ಬರುತ್ತದೆ. ಇದರಂತೆ ನೆಲ್ಲಿ, ಹುಣಿಸೆ, ಬೇವು ಮುಂತಾದ ಬಗೆ ಬಗೆಯ ಮರಗಳನ್ನು ಬೆಳೆಸಬೇಕು. ಕೊಳಗಳನ್ನು ತೋಡಿಸಬೇಕು. ಸರೋವರ ನಿರ್ಮಿಸಬೇಕು. ಬಾವಿಗಳನ್ನು ತೊಡಿಸಬೇಕು. ಇದರಿಂದ ನರನು ಮನುಷ್ಯಲೋಕದಲ್ಲಿ ರಾಜನಾಗಿ ಐಶ್ವರ್ಯ ಹಾಗೂ ಆಯುಷ್ಯವಂತನಾಗಿ ಬಾಳಿ ಬದುಕುವನು. ಅನಂತರ ಸ್ವರ್ಗಲೋಕಕ್ಕೂ ಒಡೆಯನಾಗುವನು. ಕೆರೆ ಕಾಲುವೆಗಳನ್ನು ತೆಗೆಯಿಸಲು ಶಕ್ತಿ ಇಲ್ಲದವರು ನೀರಡಿಸಿದವರಿಗೆ ನೀರುಣಿಸುವ ಅರವಟ್ಟಿಗೆ ಇಡಬೇಕು. ಈ ಅರವಟ್ಟಿಗೆಗಳನ್ನು ನೀರಿಲ್ಲದ ಕೂಡುದಾರಿಯಲ್ಲಿ ಹಾಗೂ ದುರ್ಗಮ ಮಾರ್ಗಗಳಲ್ಲಿ, ಬಹು ಜನ ಸೇರುವ ಸ್ಥಾನಗಳಲ್ಲಿ ಕಟ್ಟಿಸಿ ಅಲ್ಲಿ ನಿರಂತರ ನೀರನ್ನು ಹನಿಸುವ ವ್ಯವಸ್ಥೆ ಏರ್ಪಡಿಸಬೇಕು. ಗ್ರೀಷ್ಮ, (ಬೇಸಿಗೆ), ಮಳೆಗಾಲ ಹಾಗೂ ಚಳಿಗಾಲಗಳಲ್ಲಿ ಜನರು ಬಂದಾಗ, ಅಗರು ಮುಂತಾದ ಪರಿಮಳ ದ್ರವ್ಯಗಳಿಂದ ಮಿಶ್ರಿತವಾದ ನೀರನ್ನೂ, ಮೈಗೆ ಹಚ್ಚುವದಕ್ಕೆ ಸುರಭಿಗಂಧ, ವಾಸನೆ ಹೂವುಗಳನ್ನೂ, ಆಸನ, ತಾಂಬೂಲ ಮುಂತಾದವುಗಳನ್ನು ಕೊಟ್ಟು ಗೌರವಿಸಬೇಕು; ಇಂತಹ ಮನುಷ್ಯನಿಗೆ ಅಕ್ಷಯ ಸ್ವರ್ಗ ಪ್ರಾಪ್ತವಾಗುವದು. ಅವನು ಸ್ವರ್ಗದಿಂದ ಎಂದೂ ಚ್ಯುತನಾಗುವದಿಲ್ಲ. ಸ್ವರ್ಗದಿಂದ ಭೂಲೋಕಕ್ಕೆ ಬಂದರೆ ಜನರಿಂದಲೂ ಸ್ವರ್ಗದ ದೇವತೆಗಳಿಂದಲೂ ಪೂಜಿಸಲ್ಪಡುವನು. ಬೇಸಿಗೆಯಲ್ಲಿ ನೀರಿಲ್ಲದ ಸ್ಥಳದಲ್ಲಿ ಒಂದು ತಿಂಗಳು ಅರವಟ್ಟಿಗೆ ಇಟ್ಟರೆ ಸ್ವರ್ಗದಲ್ಲಿ ಒಂದು ಕಲ್ಪಕಾಲ ಸುಖದಿಂದ ಇರುತ್ತಾನೆ, ಅನಂತರ ಭೂಲೋಕಕ್ಕೆ ಬಂದ ಮೇಲೂ ರಾಜಭೋಗವನ್ನೇ ಹೊಂದುತ್ತಾನೆ.

ಇಂತಹ ಅರವಟ್ಟಿಗೆ ಕಟ್ಟಿಸುವ ಯೋಗ್ಯತೆ ಇಲ್ಲದವರು ಧರ್ಮಘಟವನ್ನು ದಾನಮಾಡಬೇಕು. ಈ ಜಲಪೂರ್ಣ ಕುಂಭವನ್ನು ದಾನ ಮಾಡುವಾಗ ಸ್ವಲ್ಪ ಬಂಗಾರವನ್ನು ದಕ್ಷಿಣಾರೂಪವಾಗಿ ದಾನ ಮಾಡಬೇಕು. ಹೀಗೆ ಮೂರು ವರ್ಷ ಕುಂಭ ದಾನ ಮಾಡಿದರೆ ಒಂದು ಅರವಟ್ಟಿಗೆ ಇಟ್ಟಷ್ಟು ಪುಣ್ಯ ಬರುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಅರವಟ್ಟಿಗೆ ನಿರ್ಮಾಣ ಎಂಬ ಐವತ್ತೈದನೇಯ ಅಧ್ಯಾಯ ಮುಗಿದುದು*



## ಸೇತುಬಂಧದ ಫಲ

**ಅಧ್ಯಾಯ - ೫೬**

ವ್ಯಾಸ :- ಸೇತುಬಂಧದ ಫಲವನ್ನು ಹೇಳುತ್ತೇನೆ ಕೇಳಿರಿ; ಕಟ್ಟುವದು ಅತ್ಯಂತ ಪುಣ್ಯಕೆಲಸವೆಂದು ಬ್ರಹ್ಮದೇವರೇ ಹೇಳಿದ್ದಾರೆ. ಕಾಡುಗಳಲ್ಲಿ ಕೆಸರು, ಕಲ್ಲು, ಮುಳ್ಳು, ನೀರು ಇರುವಲ್ಲಿ, ಕಾಲ್ನಡಿಗೆಯಿಂದ ದಾಟಲು ಆಗದ ಸ್ಥಳದಲ್ಲಿ ಸೇತುವೆ ಕಟ್ಟಿಸಿದರೆ ಮನುಷ್ಯನು ದೈವಲೋಕವನ್ನು ಹೊಂದುತ್ತಾನೆ. ಒಂದು ಗೇಣು ಸೇತುವೆ ಕಟ್ಟಿಸಿದರೂ ವಿಶೇಷ ಪುಣ್ಯ ಪ್ರಾಪ್ತಿ. ಈ ವಿಷಯದಲ್ಲಿ ಒಂದು ಉಪಾಖ್ಯಾನವನ್ನು ಹೇಳುತ್ತೇನೆ ಕೇಳಿರಿ. ಹಿಂದೊಬ್ಬ ಕಳ್ಳನು ಕುಶಲತೆಯಿಂದ ಚೋರತನ ಮಾಡುತ್ತಿದ್ದನು. ಒಮ್ಮೆ ಅವನು ಹೋಗುವಾಗ ದಾರಿಯಲ್ಲಿ ನೀರು, ಕೆಸರು, ಮುಳ್ಳು. ಕಲ್ಲುಗಳಿಂದ ಆ ಸ್ಥಳವು ದಾಟಲು ಬಹಳ ದುಸ್ತರವಾಗಿದ್ದಿತು. ಆಗ ಆ ಚೋರನು ದಾರಿಯಲ್ಲಿ ಒಂದು ಗೋವಿನ ತಲೆಯಷ್ಟು

ಕಟ್ಟೆ ಮಾಡಿ ಅದರ ಮೇಲೆ ಕಾಲನ್ನಿಟ್ಟು ಆ ಪಂಕದ ಪ್ರದೇಶ ದಾಟಿ ಮುಂದೆ ಹೋದನು. ಅದರಿಂದ ಜನರಿಗೆ ಅದನ್ನು ದಾಟಿಹೋಗಲು ಅನುಕೂಲವಾಯಿತು. ಗೋವಿನ ತಲೆಯ ಆಕಾರದ ಆ ಕಟ್ಟೆಗೆ ಗೋಶಿರ ಎಂದು ಹೆಸರು ಬಿದ್ದಿತು. ಅದರ ಮೇಲೆ ಒಂದು ಕಾಲಿಟ್ಟು ಅನೇಕ ಜನರು ಆ ಕೊಳಚೆ ಪ್ರದೇಶ ದಾಟಿ ಸಾಗುತ್ತಿದ್ದರು. ಕಾಲಾನಂತರ ಆ ಕಳ್ಳನು ತೀರಿಕೊಂಡನು. ಚಿತ್ರಗುಪ್ತನು ಅವನನ್ನು ಯಮನೆದುರು ತಂದು ನಿಲ್ಲಿಸಿ ಹೇಳಿದನು.

'ಇವನು ತನ್ನ ಜೀವನದುದ್ದಕ್ಕೂ ಒಂದು ಗುಂಜಿ ತೂಕದಷ್ಟೂ ಧರ್ಮ ಮಾಡಿಲ್ಲ, ಯಾರಿಗೂ ಉಪಕಾರ ಮಾಡಿಲ್ಲ. ದೇವತೆಗಳನ್ನು ಪೂಜಿಸಿಲ್ಲ, ಪಿತೃಗಳನ್ನು ತೃಪ್ತಿಪಡಿಸಿಲ್ಲ. ತೀರ್ಥಗಳಲ್ಲಿ ಮುಳುಗಿಲ್ಲ, ಪುಣ್ಯಕ್ಷೇತ್ರಗಳಿಗೆ ಹೋಗಿಲ್ಲ, ದಾನ ನೀಡಿಲ್ಲ, ಜ್ಞಾನಿಗಳನ್ನು ಗೌರವಿಸಿಲ್ಲ. ಪರರಿಗೆ ಒಳ್ಳೆಯದನ್ನು ಬಯಸಿಲ್ಲ, ಹಿತ ಮಾಡಿಲ್ಲ ಮನಸ್ಸಿನಲ್ಲಿ ಕೂಡ ಸತ್ಕಾರ್ಯ ಗೈದಿಲ್ಲ, ಕೃತಿಯಂತೂ ದೂರೇ ಉಳಿಯಿತು. ಮೇಲಾಗಿ ಇವನು ಚೌರ್ಯದಲ್ಲಿ ಚತುರ, ಪರಸ್ತ್ರೀಯರ ಜೊತೆಗೆ ಸ್ವಚ್ಛಂದ ವಿಹಾರ ಮಾಡಿದ, ದೊಡ್ಡವರನ್ನು ನಿಂದಿಸಿದ, ಆಕಳುಗಳನ್ನು ಕಳವು ಮಾಡಿದ, ಸಜ್ಜನರಿಗೆ ಸುಳ್ಳು ಅಪವಾದ ಹೊರಿಸಿದ. ಹೀಗೆ ಇವನ ಅಪರಾಧಗಳು ಒಂದೆ ಎರಡೆ? ಸಾವಿರಾರು.

**ಯಮ** :- ಹಾಗಿದ್ದರೆ, ಈ ನೀಚನನ್ನು ತಿರುಗಿ ಬರಲಾರದ ನರಕಕ್ಕೆ ತೆಗೆದುಕೊಂಡು ಹೋಗಿರಿ.

**ಚಿತ್ರಗುಪ್ತ** :- ಸ್ವಾಮಿ, ಇವನದು ಕೊಂಚ ಮಾತ್ರ ಪುಣ್ಯ ಇರುತ್ತದೆ - ಅದೆಂದರೆ - ನೀರು ಹರಿಯುವ ದುರ್ಗಮ ಪ್ರದೇಶದಲ್ಲಿ ಗೋಶಿರದಷ್ಟು ಕಟ್ಟೆ ಕಟ್ಟಿ ಜನರಿಗೆ ದಾಟಲು ಅನುಕೂಲ ಮಾಡಿದ್ದಾನೆ. ಇವನ ಈ ಅಲ್ಪ ಪುಣ್ಯವನ್ನು ತಾವು ಮನಸ್ಸಿನಲ್ಲಿಟ್ಟು ಕೊಂಡು ತಮ್ಮ ನಿರ್ಣಯ ಹೇಳಬೇಕು.

**ಯಮ** :- ಇವನು ಕಟ್ಟಿದ ಆ ಗೋಶಿರ ಕಟ್ಟೆಯು ಅಲ್ಲಿ ಎಷ್ಟು ವರ್ಷ ಜನರ ಉಪಯೋಗಕ್ಕೆ ಬಂದಿತು ?

**ಚಿತ್ರಗುಪ್ತ** :- ಇವನು ಇಟ್ಟ ಗೋಶಿರದಿಂದ ಹನ್ನೆರಡು ವರ್ಷ ಜನರು ಆ ಕಾಲುವೆಯನ್ನು ದಾಟಿ ಹೋಗಿದ್ದಾರೆ.

**ಯಮ** :- ಎಲೈ ದುಷ್ಟನೆ, ನೀನು ಭೂಲೋಕಕ್ಕೆ ಹೋಗು. ಹನ್ನೆರಡುವರ್ಷ ಸುಖವಾಗಿ ಇರು. ನೀನು ದಾರಿಯಲ್ಲಿಟ್ಟ ಗೋಶಿರವೆಂಬ ಕಟ್ಟೆಯಿಂದ ಜನರು ಆ ಕಿರುಗಾಲುವೆಯನ್ನು ಹನ್ನೆರಡು ವರ್ಷ ದಾಟಿದ್ದಾರೆ. ಅನಂತರ ಬಂದು ನಿನ್ನ ದುಷ್ಕರ್ಮ ಜನ್ಯವಾದ ಈ ನರಕವನ್ನು ಅನುಭವಿಸು.

ಹೀಗೆ ಹೇಳಿ ಅವನನ್ನು ಭೂಲೋಕಕ್ಕೆ ತಿರುಗಿ ಕಳಿಸಿದರು. ಅವನು ಭೂಮಿಯಲ್ಲಿ ಅತ್ಯಂತ ಹೀನ ಜಾತಿಯಲ್ಲಿ ಜನಿಸಿ, ಇಪ್ಪತ್ತೊಂದು ವರ್ಷ ಬಹು ಕಷ್ಟ ಅನುಭವಿಸಿದನು. ಅಷ್ಟರಲ್ಲಿ ಆ ದೇಶವಾಳುವ ದೊರೆಯು ಮರಣಹೊಂದಿದನು. ಅವನಿಗೆ ಮಕ್ಕಳಿರಲಿಲ್ಲ. ಆಗ ಅವರೆಲ್ಲರೂ ಚಕ್ರವರ್ತಿ ಲಕ್ಷಣವುಳ್ಳ ಮನುಷ್ಯನನ್ನು ಹುಡುಕತೊಡಗಿದರು. ಇವನಲ್ಲಿ ಅವರಿಗೆ ಸಾರ್ವಭೌಮನ ಲಕ್ಷಣಗಳು ಕಂಡವು, ಇವನು ಹಿಂದಿನ ಪುಣ್ಯದಿಂದ ಪಟ್ಟಾಭಿಷಿಕ್ತನಾಗಿ 'ರಾಜಾಧಿರಾಜ ರಾಜ ಪರಮೇಶ್ವರ' ಎಂಬ ಬಿರುದು ಪೊತ್ತು

ಸಾರ್ವಭೌಮ ಭೂಪನಾದನು. ಅವನಿಗೆ ಜನ್ಮಾಂತರದ ಸ್ಮರಣೆಯೂ ಆ ಗೋಶಿರವನ್ನು ಹಿಂದಿನ ಜನ್ಮದಲ್ಲಿ ಕಟ್ಟಿಸಿದ ಪುಣ್ಯದಿಂದ ಊರ್ಜಿತವಾಗಿತ್ತು. ಆದರಿಂದ ಅವನು ಮಾರ್ಗಕ್ಕೆ ಅಡ್ಡ ಹರಿಯುವ ಹೊಳೆ, ಹಳ್ಳ, ಕೆರೆ, ಕಾಲುವೆಗಳಿಗೆಲ್ಲ ಸೇತುವೆಗಳನ್ನು ಕಟ್ಟಿಸಿದನು. ಚಿಕ್ಕ ಚಿಕ್ಕ, ಹಳ್ಳ ಝುರಿಗಳಲ್ಲಿ ದಾಟುವ ಕಟ್ಟೆಗಳನ್ನು ನಿರ್ಮಿಸಿದನು. ನದಿ, ಒತ್ತು ಮುಂತಾದ ಕೆಲವು ಕಡೆ ದೋಣಿಗಳನ್ನಿರಿಸಿದನು, ಬಾವಿ, ಅರವಟ್ಟಿಗೆ, ಕೊಳ, ತೋಪು ಮುಂತಾದವುಗಳನ್ನು ವಿಪುಲವಾಗಿ ನಿರ್ಮಿಸಿದನು. ದಾನ ನೀಡಿದನು, ಯಜ್ಞ ಮಾಡಿದನು. ಹಿಂದಿನ ತನ್ನ ದುಷ್ಕರ್ಮ ನೆನೆದು. ಆ ಎಲ್ಲ ಪಾಪ ಪರಿಹಾರಕ್ಕಾಗಿ, ಅನೇಕ ಧರ್ಮವ್ರತ ಆಚರಿಸಿದನು ದೇವತೆಗಳನ್ನೂ, ಬ್ರಹ್ಮ ಜ್ಞಾನಿಗಳನ್ನೂ, ಗುರುಗಳನ್ನೂ ತನ್ನ ಅಲ್ಲೇತರವಾದ ದಾನ ದಕ್ಷಿಣೆಗಳಿಂದ ತೃಪ್ತಿಪಡಿಸಿದನು. ಹೀಗೆ ಪಾಪಗಳನ್ನೆಲ್ಲ ಪರಿಹಾರ ಮಾಡಿಕೊಂಡು, ಯಮಧರ್ಮನಲ್ಲಿಗೆ ಹೋದನು. ಮತ್ತು 'ನನ್ನನ್ನು ಉದ್ಧರಿಸಬೇಕು.' ಎಂದು ಬೇಡಿಕೊಂಡನು, ಆಗ ಚಿತ್ರಗುಪ್ತನು ಅವನ ಪಾಪ ಪುಣ್ಯದ ಲೆಕ್ಕಮಾಡಿ ಯಮಧರ್ಮನಿಗೆ ತಿಳಿಸಿದನು 'ಇವನು ಗೋಶಿರಕಟ್ಟೆ ನಿರ್ಮಿಸಿದ್ದರಿಂದ ಭೂ ಲೋಕದಲ್ಲಿ ಹನ್ನೆರಡು ವರ್ಷ ರಾಜನಾಗಿದ್ದನು. ಆ ಕಾಲದಲ್ಲಿ ತನ್ನ ಅಧಿಕಾರ, ಐಶ್ವರ್ಯಗಳ ಸದುಪಯೋಗಮಾಡಿಕೊಂಡು, ಭೂಮಂಡಲದಲ್ಲಿ ಸಾವಿರಾರುಕಡೆ ಸೇತುವೆಗಳನ್ನೂ ಕಟ್ಟೆಗಳನ್ನೂ ನಿರ್ಮಿಸಿದ್ದಾನೆ. ಕೆರೆ ಕೊಳ ಕಾಲುವೆಗಳನ್ನೂ ಅರವಟ್ಟಿಗೆಗಳನ್ನೂ ರಚಿಸಿದ್ದಾನೆ ಇದರಿಂದ ಇವನು ಹಿಂದೆ ಮಾಡಿದ ಪಾಪರಾಶಿ ನಾಶವಾಗಿದೆ. ಇವನಿಗೆ ಮುಂದೆ ಏನು ಗತಿ?' ಎಂದು ಕೇಳಿದನು. ಆಗ ಯಮ ಧರ್ಮನು ಅವನ 'ಸೇತುಬಂಧ' ಕಟ್ಟೆಗಳ ರಚನೆ ಅರವಟ್ಟಿಗೆಗಳ ಸ್ಥಾಪನೆ ಮುಂತಾದ ಪರೋಪಕಾರ ಕಾರ್ಯಗಳಿಂದ ಪರಿತುಷ್ಟನಾಗಿ, 'ನೀನು ಕೂಡಲೇ ವಿಷ್ಣು ಲೋಕಕ್ಕೆ ಹೋಗು' ಎಂದು ಅಪ್ಪಣೆ ಮಾಡಿದಾಗ, ವೈಕುಂಠದ ವಿಮಾನಬಂದಿತು. ಅದರಲ್ಲಿ ತುಳಿತು ಅವನು ಶ್ರೀಹರಿಯ ಸನ್ನಿಧಿಯನ್ನು ಹೊಂದಿದನು. ಇದರಂತೆ ಗೋವುಗಳು ಮೇಯಲು ಹುಲ್ಲುಗಾವಲು ಬೆಳೆಸಿ ಹಸು, ಕರುಗಳಿಗೆ ಹಸಿಹುಲ್ಲು ತಿನ್ನಲು ಅನುಕೂಲ ಮಾಡಿಕೊಟ್ಟರೆ ಅವರಿಗೆ ಗೋದಾನ ಮಾಡಿದ ಪುಣ್ಯ ಬರುವದು. ಒಂದುಮಾರು ಉದ್ದ ಒಂದು ಮಾರು ಅಗಲವಿರುವ ಭೂಮಿಯನ್ನು ದನ ಮೇಯಲು ಬಿಟ್ಟರೆ ಸ್ವರ್ಗಪ್ರಾಪ್ತಿ. ನೂರಾರು ಮಾರು ಉದ್ದ, ಹಾಗೂ ಅಗಲವಿರುವ ಗೋಮಾಳವನ್ನು ನಿರ್ಮಿಸಿ ಅನೇಕ ಗೋಗಳು ಅದರಲ್ಲಿ ಮೇಯುವಂತೆ ಮಾಡಿದವನಿಗೆ ಶಾಶ್ವತ ಸ್ವರ್ಗಪ್ರಾಪ್ತಿ. ಮರಗಳ ತೋಪು, ಹುಲ್ಲುಗಾವಲು, ಪುಣ್ಯಸ್ಥಳಗಳನ್ನು ನಾಶಮಾಡಿದವನ ಇಪ್ಪತ್ತೊಂದು ತಲೆಯ ಹಿಂದಿನ ಪಿತೃಗಳು ರೌರವ ನರಕದಲ್ಲಿ ಬಿದ್ದು ದುಃಖ ಪಡುತ್ತಾರೆ. ಧರ್ಮದ ಮರ, ಗೋಮಾಳಗಳನ್ನು ಹಾಳು ಮಾಡುವವರನ್ನು ಹಿಡಿದು ಶಿಕ್ಷಿಸಿದರೆ ಅವನಿಗೂ ಸ್ವರ್ಗಉಂಟು. ಆದುದರಿಂದ ವೃಕ್ಷನಾಶಕರನ್ನೂ ಗೋಮಾಳನಾಶಕರನ್ನೂ ಮೊದಲು ಹಿಡಿದು ದಂಡಿಸಬೇಕು.

ವಿಷ್ಣುಭಕ್ತನಾದ ಸಜ್ಜನನಿಗೆ ಎರಡು ಅಥವಾ ಐದು ಅಂತಸ್ತುಳ್ಳ ಮಣ್ಣಿನ ಅಥವಾ ಕಲ್ಲಿನ ಮನೆಗಳನ್ನು ಕಟ್ಟಿಸಿ ಮೇಲೆ ಕಳಸ ಹಾಕಿಕೊಟ್ಟರೆ ಆ ಮನುಷ್ಯನು ಸ್ವರ್ಗಸುಖವನ್ನು ಹೊಂದುತ್ತಾನೆ. ಬರಿ ಮನೆ ದಾನ ಕೊಟ್ಟರೆ ಸಾಲದು, ಮನೆಯಲ್ಲಿ ಇರುವವರೆಗೆ ಬದುಕಲು ಹಣ, ತಕ್ಕಷ್ಟು ಭೂಮಿಗಳನ್ನು ದಾನ ನೀಡಬೇಕು.

ವಿಷ್ಣುವಿನ ಅಥವಾ ಶಿವನ ದೇವಾಲಯ ಕಟ್ಟಿಸಿ ದೇವರನ್ನು ಪ್ರತಿಷ್ಠೆ ಮಾಡಿಸಿ, ಅದಕ್ಕೆ ಬೇಕಾದ ಸೇವಕರನ್ನು ನೇಮಿಸಿ ಅವರಿಗೆ ವೃತ್ತಿಯನ್ನು ಕಲ್ಪಿಸಿಕೊಡಬೇಕು. ವಿಷ್ಣು ಅಥವಾ ಶಿವನ ಪ್ರತಿಮ ಸ್ಥಾಪಿಸಿ, ಪೂಜೆಯ ವ್ಯವಸ್ಥೆ ಮಾಡಿಸಿದರೆ ಅಸಂಖ್ಯ ದಾನ ವ್ರತಗಳಿಗಿಂತ ಹೆಚ್ಚಿನ ಪುಣ್ಯಫಲ ಬರುವದು.

ಇದರಂತೆ ದೇವಿಯ ಪೂಜೆಗಾಗಿ ದೇವಿಯ ಪ್ರತಿಮೆಗಳನ್ನು ಸ್ಥಾಪಿಸಿ, ಗುಡಿಕಟ್ಟಿಸಿ, ಪೂಜೆಯ ವ್ಯವಸ್ಥೆ ಮಾಡಿದರೆ ಆ ಮನುಷ್ಯನು ರೋಗರಹಿತನಾಗುವನು. ಕಾಮನಂತಹ ಸುಂದರ ರೂಪವು ಅವನಿಗೆ ಬರುವದು. ಮುಂದೆ ಅವನು ದೇವಿಯ ಪುರದಲ್ಲಿ ಗಣಾಧಿಪತ್ಯ ಹೊಂದಿ ಸ್ವರ್ಗಸುಖ ಅನುಭವಿಸುವನು. ಇದರಂತೆ ಸೂರ್ಯನ ಪ್ರತಿಮೆಗೆ ಕಲ್ಲಿನ ಗುಡಿ ಕಟ್ಟಿಸಿ ಪೂಜಿಸಿದರೆ ದಿವ್ಯಲೋಕ ಪ್ರಾಪ್ತಿ ಆಗುವದು, ವಿಷ್ಣು ಮೊದಲಾದ ದೇವಸ್ಥಾನಗಳಲ್ಲಿ ನಂದಾದೀಪವನ್ನು ಒಂದು ತಿಂಗಳ ಕಾಲ ಹಗಲಿರುಳು ಇಟ್ಟವನು ಹತ್ತು ಸಾವಿರ ವರ್ಷ ಸ್ವರ್ಗದಲ್ಲಿ ನೆಲೆಸುವನು. ಈ ದೇವಸ್ಥಾನಗಳಲ್ಲಿ ಧೂಪದಾನ ಮಾಡಿದರೆ ಬ್ರಹ್ಮಲೋಕ. ಚಂದನದಾನಮಾಡಿದರೆ ಗಂಧರ್ವಲೋಕ. ಹೂ ಮಾಲೆ ಅರ್ಪಿಸಿದರೆ ದೇವಲೋಕ. ಅಗರು, ಕಸ್ತೂರಿದಾನ ಮಾಡಿದರೆ ವಿಶೇಷ, ಪುಣ್ಯ ಪ್ರಾಪ್ತವಾಗುವವು. ಬೇಸಿಗೆಯಲ್ಲಿ ತಂಪು ಬಟ್ಟೆಗಳನ್ನು, ಚಳಿಗಾಲದಲ್ಲಿ ಬೆಚ್ಚಗಿನ ಬಟ್ಟೆಗಳನ್ನು ನಾಲ್ಕು ಮೊಳ ಉದ್ದದ ಶಾಲನ್ನು ದಾನ ಮಾಡಿದರೆ ಸ್ವರ್ಗ ಲೋಕಪ್ರಾಪ್ತಿ ತಾನಾಗಿ ಆಗುವದು, ಚಿನ್ನ, ರತ್ನ, ವಜ್ರ ವೈಡೂರ್ಯ, ಮಾಣಿಕ್ಯ ಮುಂತಾದವುಗಳನ್ನು ಬ್ರಹ್ಮವಿದ್ಯೆಯನ್ನು ತಿಳಿದವರಿಗೆ ದಾನ ಕೊಟ್ಟರೆ ಇಹ, ಪರಲೋಕದಲ್ಲಿ ರಾಜ್ಯ ಭೋಗ, ಐಶ್ವರ್ಯಗಳನ್ನು ಮಾನವನು ತಪ್ಪದೇ ಅನುಭವಿಸುವನು - ಬಹುಕಾಲದ ವರೆಗೆ.

ಸುಗಂಧ ದ್ರವ್ಯಗಳನ್ನು ದಾನಮಾಡಿದರೆ ಸೌಂದರ್ಯ ಹಾಗೂ ವಾಕ್ ಚಾತುರ್ಯ ಪ್ರಾಪ್ತಿ. ಅಡಿಕೆ ದಾನಮಾಡಿದರೆ ಕಂಠದಲ್ಲಿ ಮಾಧುರ್ಯ ಬರುವದು. ದಾಸಿಯನ್ನು ದಾನ ಮಾಡಿದರೆ ದಿವ್ಯಗತಿ. ಮಂಗಳವಾದ್ಯ ದಾನ ಮಾಡಿದರೆ ಸದ್ಗುಣ. ನೃತ್ಯ ಗೀತ ದಾಗಗಳಿಂದ ಗಂಧರ್ವಲೋಕ, ಗೋದಾನದಿಂದ ಸ್ವರ್ಗ ಲೋಕ. ಪರಮಾತ್ಮನ ಅಂಗಗಳಾದ ಮೂರ್ತಿ, ಸಾಲಿಗ್ರಾಮ, ಮುಂತಾದವುಗಳಿಗೆ ಕ್ಷೀರಾಭಿಷೇಕ, ಮೊಸರಿನ ತುಪ್ಪದ ಅಭಿಷೇಕಕ್ಕೆ ಅನುಕೂಲ ಮಾಡಿಕೊಟ್ಟರೆ, ಅಥವಾ ಸ್ವಯಂ ತಾನೇ ಮಾಡಿದರೆ ಪುಣ್ಯಲೋಕ ಪ್ರಾಪ್ತಿ ಆಗುವದು. ಷಡ್ರಸಯುಕ್ತ ಅನ್ನದಾನದಿಂದ ರಾಜ ಆಗುವನು. ಪಾಯಸದ ದಾನದಿಂದ ಋಷಿ, ಮೃಷ್ಟಾನ್ನದಿಂದ ಯೋಗಿ, ಜೇನುತುಪ್ಪದಿಂದ ಸೌಭಾಗ್ಯ, ಬೆಲ್ಲ, ಉಪ್ಪು, ಸಕ್ಕರೆಯಿಂದ ಲಾವಣ್ಯ, ಜಲಪಾತ್ರ ದಾನದಿಂದ ಸ್ವರ್ಗವಾಸ, ಹಾಸಿಗೆ, ಭೋಜನ ಮುಂತಾದವುಗಳ ದಾನದಿಂದ ಅತಿಶಯ ಪುಣ್ಯ. ಬ್ರಹ್ಮ, ವಿಷ್ಣು, ಶಿವ ಮೊದಲಾದ ದೇವತಾಪ್ರತಿಮಾ ಪೂಜೆಯಿಂದ ಸ್ವರ್ಗ ಸುಖ ದೊರೆಯುವದು. ಈಶ್ವರನ ಲಿಂಗಕ್ಕೆ ಒಮ್ಮೆಯಾದರೂ ಪ್ರದಕ್ಷಿಣೆ ಮಾಡಿದರೆ ಹಾಗೂ ವಿಷ್ಣು, ಬ್ರಹ್ಮರ, ಸಾನ್ನಿಧ್ಯವಿರುವ ಮೂರ್ತಿ, ಶಾಲಿಗ್ರಾಮಗಳಿಗೆ ನಮಸ್ಕಾರ ಮಾಡಿದರೆ ಸ್ವರ್ಗಲೋಕ ಪ್ರಾಪ್ತಿ. ಲಿಂಗವನ್ನು ಕಳವು ಮಾಡಿದರೆ ನರಕ, ಲಿಂಗ ಪೂಜೆಗೆ ಕ್ಲೃಪ್ತವಾದ ದುಡ್ಡನ್ನು ತಿಂದರೆ ಘೋರನರಕ. ಲಿಂಗಪೂಜೆಗೆ ಇಟ್ಟ ನೀರು, ಕೊಟ್ಟ ಹಣ, ದೀಪ, ಎಣ್ಣೆ ಮುಂತಾದವುಗಳನ್ನು ತಾನೇ ಉಪಯೋಗ ಮಾಡಿದರೆ ಅಕ್ಷಯ ನರಕ ಹೊಂದುತ್ತಾರೆ - ಮಾನವರು. ಶಿವದಾಸಿ

ಲಿಂಗದಾಸಿಯರೊಡನೆ ರಮಿಸಿದರೆ ಕೀಲುಜಾತಿಯಲ್ಲಿ ಹುಟ್ಟುತ್ತಾನೆ - ಆ ನರನು. ವೇಶ್ಯೆಯರನ್ನು ಮುಟ್ಟಿದರೆ ಮನುಷ್ಯ ಸ್ನಾನ ಮಾಡಬೇಕು. ಆದರೆ ಒಂದು ವೇಳೆ ವೇಶ್ಯೆಯು ಭಗವಂತನ ದೇಗುಲದ ಸ್ವಚ್ಛತೆ ಉಳಿದ ಸೇವೆಗಳಿಗಾಗಿ ತನ್ನ ದೇಹವನ್ನು ಮುಡಿಪಾಗಿಟ್ಟಿದ್ದರೆ, ತಪಸ್ವಿನಿ, ಪತಿವ್ರತೆಯಾಗಿದ್ದರೆ ಅಂತಹ ವೇಶ್ಯೆಯು ಅಕ್ಷಯ ಸ್ವರ್ಗ ಹೊಂದುತ್ತಾಳೆ ಅದರಿಂದ.

**ವೇಶ್ಯಾ ತಪಸ್ವಿನೀ ಯಾ ಚ ದೇವಾರ್ಚನರತಾ ಸದಾ ।**
**ಪತಿವ್ರತಪರಾ ಶುದ್ಧಾ ಸ್ವರ್ಗಂ ಚಾಕ್ಷಯಮಶ್ನುತೆ ॥**

ಇದೇ ರೀತಿಯಾಗಿ ವೇಶ್ಯೆಯನ್ನು ಕೂಡ ತಾಯಿಯಂತೆ ಮರ್ಯಾದೆಯಿಂದ ಕಂಡು ಅವಳಿಗೆ ಏನಾದರೂ ಆಪತ್ತು ಬಂದರೆ ಸಹಾಯ ಮಾಡಬೇಕು. ಶುದ್ಧ ಮನಸ್ಸಿನ ಜಿತೇಂದ್ರಿಯನಾದ ಮಾನವನು ಸ್ವರ್ಗಲೋಕದಲ್ಲಿ ಸರ್ವ ಭೋಗಗಳನ್ನು ಹೊಂದುತ್ತಾನೆ.

ಮಂಟಪಗಳನ್ನು ಕಟ್ಟಿಸಬೇಕು. ಆ ಮಂಟಪಗಳನ್ನು ಜನ ಸೇರುವ ಸ್ಥಳ, ರಮ್ಯ ಪರಿಸರ, ವ್ಯಾಪಾರ, ಉದ್ಯೋಗದ ಕೇಂದ್ರ, ಪ್ರವಾಸಿಗರ ಆಶ್ರಯ ಸ್ಥಳ, ನದೀ ಸಂಗಮದಲ್ಲಿ ದೇವರ ಉದ್ದೇಶದಿಂದ ಕಟ್ಟಿಸಬೇಕು. ಇದರಿಂದ ಮನುಷ್ಯನಿಗೆ ಅನಂತವರ್ಷ ಸ್ವರ್ಗಸುಖ ದೊರೆಯುವದು. ಈ ದೇವ ಮಂಟಪ ಕಟ್ಟಿಸಿದಕ್ಕಿಂತ ಎರಡು ಪಟ್ಟು ಫಲ ಬಡವನೂ ಭಗವದ್ಭಕ್ತನೂ ಆದ ಶ್ರೋತ್ರಿಯನಿಗೆ ಮನೆ ಕಟ್ಟಿಸಿಕೊಟ್ಟರೆ ಬರುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸೇತುಬಂಧದ ಫಲ ಎಂಬ ಐವತ್ತಾರನೇಯ ಅಧ್ಯಾಯ ಮುಗಿದುದು*



## ರುದ್ರಾಕ್ಷಿಯ ಧಾರಣ ಫಲ

ಅಧ್ಯಾಯ - ೫೭

**ದ್ವಿಜ ಉವಾಚ**

**ಪುಣ್ಯಾನಾಂ ಕಃ ಪರಃ ಪುಣ್ಯೋ ಮರ್ತ್ಯಲೋಕೇ ದ್ವಿಜೋತ್ತಮ ।**
**ಸುಲಭೋ ಮರ್ತ್ಯಪೂಜ್ಯಸ್ತು ಮುನೀನಾಂ ಚ ತಪಸ್ವಿನಾಂ ॥**

**ದ್ವಿಜರು :-** ಎಲೈ ಬ್ರಾಹ್ಮಣನೆ, ಪುಣ್ಯಗಳಲೆಲ್ಲ ಶ್ರೇಷ್ಠವಾದದ್ದು ಯಾವದು? ಮುನಿಗಳೂ, ತಪಸ್ವಿಗಳೂ, ಸುಲಭವಾಗಿ ಗೌರವಿತಕ್ಕ ಪುಣ್ಯ ಯಾವದು?

**ವ್ಯಾಸ :-** ಪುಣ್ಯಗಳಲ್ಲೆಲ್ಲ ರುದ್ರಾಕ್ಷಿ ಮಾಲೆಯನ್ನು ಧರಿಸಿದವನು ಶ್ರೇಷ್ಠ ಅವನನ್ನು ನೋಡುವದರಿಂದಲೇ ಜನರ ಪಾಪ ನಾಶ. ರುದ್ರಾಕ್ಷಿಯನ್ನು ಧರಿಸಿದರೆ ಸ್ವರ್ಗ. ತೋಳುಗಳಲ್ಲಿ ಧರಿಸಿದವನು ಈಶ್ವರನಿಗೆ ಸಮ ಅದನ್ನು ಹಾಕಿಕೊಂಡು, ಜಪ, ತರ್ಪಣ, ದಾನ ಪೂಜೆ, ನಮಸ್ಕಾರ ಮಾಡಿದರೆ ಅನಂತ ಫಲ. ರುದ್ರಾಕ್ಷಿ ಮಾಲೆಯ ಲಕ್ಷಣ ಹೇಳುತ್ತೇನೆ ಕೇಳಿರಿ.

ರುದ್ರಾಕ್ಷಿ ಸರದಲ್ಲಿ ಗಟ್ಟಿಲ್ಲದ, ಹುಳುಕಾದ ರುದ್ರಾಕ್ಷಿ ಸೇರಿಸಬಾರದು ಸರ್ಪದ ಆಕಾರ ಇರಬೇಕು. ಮೇಲೆ ಮೇರು ಮಣಿ ಎಂಬ ದೊಡ್ಡ ಜಪ ಮಣಿ ಇರಬೇಕು. ಗಂಟು ಶುದ್ಧವಾಗಿರಬೇಕು. ಅಶುಚಿಗಳು ಅದನ್ನು ಪೋಣಿಸಬಾರದು. ಈ ರೀತಿ ಶುದ್ಧವಾದ

ಮಾಲೆಯನ್ನು ತೆಗೆದುಕೊಂಡು ಮಧ್ಯದ ಬೆರಳು ಹೆಬ್ಬೆರಳುಗಳಿಂದ ಹಿಡಿದುಕೊಂಡು ಹೆಬ್ಬೆಟ್ಟಿನಿಂದ ಎಳೆಯುತ್ತ ಜಪಿಸಬೇಕು. ಮೇಲಿಂದ ಮೇಲೆ ಜಪ ಎಷ್ಟಾಯಿತು? ಇನ್ನೂ ಎಷ್ಟಿದೆ ? ಎಂದು ಸಂಖ್ಯೆಯ ಕಡೆಗೆ ಗಮನ ಇಡಬಾರದು; ದೇವರ ಕಡೆಗೆ ಗಮನವಿಡಬೇಕು. ಯಾವದೇ ದೇವರ ಜಪ ಮಾಡಲಿ, ತನ್ನದೇ ಜಪ ಮಾಲೆಯಿಂದ ಜಪ ಮಾಡಬೇಕು. ಹೆರವರ ಮಾಲೆಯಿಂದ ಮಂತ್ರ ಜಪ ಮಾಡಬಾರದು. ವಿಷ್ಣು, ಶಿವ, ಗಣಪತಿ, ಸೂರ್ಯ ಇವರ ಮಂತ್ರಗಳನ್ನು ಶುದ್ಧವಾದ ಸ್ಥಳ, ಪೂಜ್ಯವಾದ ಮರಗಳ ತಳ, ಹಸು ಕಟ್ಟುವ ಕೊಟ್ಟಿಗೆ, ವಿಶಾಲವಾದ ಮನೆ ಮುಂತಾದ ಸ್ಥಳದಲ್ಲಿ ಜಪಿಸಬೇಕು.

**ದ್ವಿಜರು :-** ಈ ರುದ್ರಾಕ್ಷಿ ಹೇಗೆ ಪವಿತ್ರ ? ಅದು ಎಲ್ಲಿ ಹುಟ್ಟಿತು?

**ವ್ಯಾಸ :-** ಹಿಂದೆ ತ್ರಿಪುರಾಸುರನನ್ನು ಸಂಹಾರ ಮಾಡುವಾಗ ಮಹಾರುದ್ರ ದೇವರ ದೇಹದಿಂದ ಬೆವರಿನ ಹನಿಗಳು ಬಿದ್ದವು. ಶಿವನ ಆ ಸ್ವೇದ ಬಿಂದುವಿನಿಂದ ಉದ್ಭವಿಸಿದ್ದೇ-ರುದ್ರಾಕ್ಷಿ. ರುದ್ರಾಕ್ಷಿ ಮಹಿಮೆಯನ್ನು ಈಶ್ವರನು ತನ್ನ ಪುತ್ರ ಕುಮಾರಸ್ವಾಮಿಗೆ ಈ ರೀತಿ ಹೇಳಿದನು

''ಈ ರುದ್ರಾಕ್ಷಿಯ ದರ್ಶನದಿಂದಲೂ, ಸ್ಪರ್ಶದಿಂದಲೂ, ಧರಿಸುವದರಿಂದಲೂ ಅನಂತ ಪುಣ್ಯವಿದೆ. ಇದರ ಜಪಸರದಿಂದ ಜಪ ಮಾಡಿದರೆ ವಿಶೇಷ ಪುಣ್ಯ. ಮಹಾ ಪಾಪಿಷ್ಠನೂ, ಅಪವಿತ್ರನೂ, ಪತಿತನೂ, ಕರ್ಮ ಬಹಿಷ್ಕೃತನೂ ಯಾವನೇ ಇರಲಿ, ರುದ್ರಾಕ್ಷಿ ಧಾರಣಮಾತ್ರದಿಂದಲೇ ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಕೊರಳಲ್ಲಿ ರುದ್ರಾಕ್ಷಿ ಹಾಕಿಕೊಂಡು ಸತ್ತರೆ ಕ್ರೂರ ಪಶು ಕೂಡ ರುದ್ರ ರೂಪ ಹೊಂದುವದು. ಮನುಷ್ಯರ ಬಗ್ಗೆ ಹೇಳುವದೇನು? ಧ್ಯಾನ ಧಾರಣಗಳು ಇಲ್ಲದಿದ್ದರೂ ರುದ್ರಾಕ್ಷಿ ಧರಿಸಿದ ಮಾತ್ರದಿಂದ ಸರ್ವಪಾಪ ವಿನಿರ್ಮುಕ್ತನಾಗಿ ಮಾನವನು ದಿವ್ಯ ಗತಿಯನ್ನು ಹೊಂದುವನು.

**ಸ್ಕಂದ :-** ತಾತ, ರುದ್ರಾಕ್ಷಿಯು, ಒಂದು ಮುಖದ್ದು, ಎರಡು, ಮೂರು ಮುಖ. ಹೀಗೆ ಹನ್ನೆರಡು ಮುಖದವರೆಗೆ ರುದ್ರಾಕ್ಷಿಯ ಪ್ರಭೇದಗಳಿವೆ ಎಂದು ಕೇಳಿದ್ದೇನೆ. ಈ ಎಲ್ಲ ರುದ್ರಾಕ್ಷಿ ಮುಖಗಳಿಗೆ ದೇವತೆಗಳಾರು? ಅವುಗಳ ಉಪಯೋಗವೇನು? ನನಗೆ ದಯವಿಟ್ಟು ಹೇಳಿರಿ.

**ಈಶ್ವರ :-** ಒಂದು ಮುಖ ರುದ್ರಾಕ್ಷಿ ಶಿವ ಸ್ವರೂಪ - ಬ್ರಹ್ಮಹತ್ಯಾ ನಾಶಕ. ಎರಡು ಮುಖದ್ದು - ಗೋಹತ್ಯಾ ಪಾಪ ಪರಿಹಾರಕ, ಅದರ ಹೆಸರು ದೇವ ದೇವ. ಮೂರು ಮುಖದ ರುದ್ರಾಕ್ಷಿ ಅನಲವೆಂದು ಹೆಸರು. ಅದರ ಧಾರಣದಿಂದ ಸ್ತ್ರೀಹತ್ಯ ಬ್ರಹ್ಮಹತ್ಯ ಮುಂತಾದ ಪಾಪ ನಾಶ. ಮತ್ತು ಅಗ್ನಿಕಾರ್ಯವಾದ ಹೋಮ ಹವನ ಮಾಡಿದ ಪುಣ್ಯ ಫಲ ಪ್ರಾಪ್ತಿ. ನಾಲ್ಕು ಮುಖದ ರುದ್ರಾಕ್ಷಿಯಿಂದ - ಬ್ರಹ್ಮಹತ್ಯಾದಿ ಪಾಪ ಪರಿಹಾರ, ವೇದಶಾಸ್ತ್ರ ಪಾಂಡಿತ್ಯ ಸಿದ್ಧಿ. ಈ ನಾಲ್ಕು ಮುಖದ ರುದ್ರಾಕ್ಷಿ - ಬ್ರಹ್ಮ ಸ್ವರೂಪ. ಐದು ಮುಖದ ರುದ್ರಾಕ್ಷಿ - ಕಾಲಾಗ್ನಿ ರುದ್ರ. ಅದರ ಧಾರಣದಿಂದ ಅಗಮ್ಯಾಗಮನ, ಅಭಕ್ಷ ಭಕ್ಷಣ, ಮುಂತಾದ ಪಾಪ ಪರಿಹಾರ. ಅದನ್ನು ಸದ್ಯೋಜಾತ ಈಶಾನ ತತ್ಪುರುಷ, ವಾಮದೇವ, ಅಘೋರ - ಈ ಐದು ಜನ ದೇವತೆಗಳು ಆಶ್ರಯಿಸಿದ್ದಾರೆ. ಆರು ಮುಖದ ರುದ್ರಾಕ್ಷಿಗೆ ಕಾರ್ತಿಕೇಯ ಎಂದು ಹೆಸರು. ಇದನ್ನು ಧರಿಸಿದವನು ಸ್ಕಂದನಂತೆ ಸುಂದರ, ಗಣಪತಿಯಂತೆ ಗುಣವಂತನೂ ಆಗುವನು. ಗೌರೀದೇವಿಯು ಅವನಿಗೆ ಸಂತಸದಿಂದ ವರನೀಡುವಳು. ಅವನು ಯುದ್ಧದಲ್ಲಿ ಜಯಶಾಲಿ, ಕ್ರಾಂತಿಕಾಲದಲ್ಲಿ ಧೀರ. ಸಭೆಗಳಲ್ಲಿ ವಾಕ್ಚತುರ ಅರಮನೆಗಳಲ್ಲಿ ಗೌರವಾನ್ವಿತ ವ್ಯಕ್ತಿ

ಆಗುವನು. ಏಳುಮುಖದ ರುದ್ರಾಕ್ಷಿಗೆ ಅನಂತವೆಂದು ಹೆಸರು. ಅನಂತ ಶರ್ಕರ, ಪುಂಡರೀಕ್ಷ, ತಕ್ಷಕ, ವಿಷೋಲ್ಬಣ, ಕಾರೋಷ, ಶಂಖಚೂಡ - ಎಂಬ ಏಳುಸರ್ಪಗಳು ಇದರಲಿ ವಾಸವಾಗಿವೆ. ಇದರಿಂದ ಬ್ರಹ್ಮಹತ್ಯೆ, ಸುರಾಪಾನ ಮುಂತಾದ ಪಂಚ ಮಹಾಪಾತಕಗಳ ಪರಿಹಾರ. ಎಂಟುಮುಖದ ರುದ್ರಾಕ್ಷಿಗೆ ವಿನಾಯಕ ಎಂದು ಹೆಸರು. ಇದನ್ನು ಧರಿಸುವದರಿಂದ ಯಾವ ಜನ್ಮದಲ್ಲಿಯೂ ಮೂರ್ಖತನ, ರೋಗಾದಿಗಳು ಬರುವದಿಲ್ಲ. ಬರಹದಲ್ಲಿ ಬುದ್ಧಿವಂತನಾಗುವನು. ಉಳಿದುದರಲ್ಲಿ ಕುಶಲನಾಗುವನು. ಸರ್ವ ಕಾರ್ಯದಲ್ಲೂ ಅವನಿಗೆ ಕ್ಷೇಮಾಭಿವೃದ್ಧಿ ಆಗುವದು. ಒಂಭತ್ತುಮುಖದ ರುದ್ರಾಕ್ಷಿಗೆ ಭೈರವ ಎಂದು ಹೆಸರು. ಅದನ್ನು ತೋಳಿಗೆ ಕಟ್ಟಿಕೊಳ್ಳಬೇಕು. ಇದನ್ನು ಧರಿಸಿದರೆ ಬ್ರಹ್ಮಹತ್ಯಾದಿ ಪಾಪಗಳು ದೂರವಾಗಿ ದೇವಲೋಕದಲ್ಲಿ ಇಂದ್ರನಂತೆ ಆ ಮನುಷ್ಯನು ಪೂಜಿಸಲ್ಪಡುತ್ತಾನೆ. ಹತ್ತುಮುಖದ ರುದ್ರಾಕ್ಷಿ ಧರಿಸಿದರೆ ಮಹಾ ದೇವರಂತೆ ಉತ್ತಮವಾದ ಮನೆಯಲ್ಲಿ ವಾಸ ಮಾಡುತ್ತಾನೆ. ಹಾವುಗಳು ದೂರ ಹೋಗುತ್ತವೆ ಹೆದರಿ. ಹನ್ನೊಂದುಮುಖದ ರುದ್ರಾಕ್ಷಿಯಲ್ಲಿ ಏಕಾದಶ ರುದ್ರರೇ ವಾಸಿಸುತ್ತಾರೆ. ಇದನ್ನು ಧರಿಸಿದರೆ ಸಾವಿರ ಅಶ್ವಮೇಧ, ಕೋಟಿ ಯಜ್ಞ, ಒಂದು ಲಕ್ಷ ಗೋದಾನದ ಪುಣ್ಯ ಬರುವದು. ಹನ್ನೆರಡುಮುಖರುದ್ರಾಕ್ಷಿ ಧರಿಸಿದರೆ ಸೂರ್ಯನು ಸಂತೋಷಪಡುತ್ತಾನೆ. ಇದರ ಹನ್ನೆರಡುಮುಖಗಳಲ್ಲಿ ಸ್ವಯಂ ಸೂರ್ಯನು ಸನ್ನಿಹಿತನಾಗಿರುತ್ತಾನೆ. ಇದನ್ನು ಧರಿಸಿದವನು ಅಶ್ವಮೇಧ ಯಾಗ ಮಾಡಿದ ಪುಣ್ಯ ಪಡೆಯುತ್ತಾನೆ. ಮತ್ತು ಸಿಡಿಲು ಬಡಿಯುವ ಹೆದರಿಕೆಯಾಗಲಿ. ಬೆಂಕಿಯಲ್ಲಿ ಸುಡುವ ಭಯವಾಗಲಿ, ರೋಗಕ್ಕೆ ಬಲಿಯಾಗುವ ಅಂಜಿಕೆಯಾಗಲಿ ಇಲ್ಲ. ಮತ್ತು ಧನ ಲಾಭವು ವಿಶೇಷವಾಗಿ ಆಗುವದು ಹದಿಮೂರು ಮುಖ ರುದ್ರಾಕ್ಷಿಗೆ ರುದ್ರವೆಂದು ಹೆಸರು, ಅದರಿಂದ ಸಕಲಾಭೀಷ್ಟ ಸಿದ್ಧಿ, ಧಾತುವಾದ ಸಿದ್ಧಿ, ಪಾದರಸ ಸಿದ್ಧಿ ಮುಂತಾದ ಎಲ್ಲ ಸಿದ್ಧಿಗಳು ಕೈವಶವಾಗುತ್ತವೆ. ಮೇಲೆ ಸ್ವರ್ಗಪ್ರಾಪ್ತಿ. ಹದಿನಾಲ್ಕುಮುಖದ ರುದ್ರಾಕ್ಷಿಯನ್ನು ತಲೆಯಲ್ಲಾಗಲಿ ತೋಳಿನಲ್ಲಾಗಲಿ ಧರಿಸಬೇಕು. ಇದು ಶಿವನ ಶಕ್ತಿ ಪಿಂಡ. ಇದನ್ನು ಧರಿಸಿದವನು ಯಾವಾಗಲೂ ದೇವ ಪೂಜ್ಯನಾಗುತ್ತಾನೆ.

**ಸ್ಕಂದ :-** ಸ್ವಾಮಿ, ಯಾವ ಯಾವ ಮುಖದ ರುದ್ರಾಕ್ಷಿಗಳನ್ನು ಯಾವ ಯಾವ ಮಂತ್ರದಿಂದ ಧರಿಸಬೇಕು?

**ಈಶ್ವರ :-** ಒಂದುಮುಖದ ರುದ್ರಾಕ್ಷಿಯನ್ನು 'ಓಂ ರುದ್ರಾಯ ನಮಃ' ಎಂದು ಜಪಮಾಡಿ ಕಟ್ಟಿಕೊಳ್ಳಬೇಕು. ಎರಡುಮುಖದ ರುದ್ರಾಕ್ಷಿಯನ್ನು 'ಓಂ ಖಂ' ಎಂಬ ಮಂತ್ರದಿಂದ ಮೂರು ಮುಖವಿರುವುದಕ್ಕೆ 'ಓಂ ವುಂ' ಎಂದೂ, ನಾಲ್ಕು ಮುಖ ವಿರುವದಕ್ಕೆ ಓಂ ಹ್ರೀಂ ಎಂದೂ, ಐದುಮುಖವಿರುವುದಕ್ಕೆ 'ಓಂ ಹ್ರಾಂ', ಆರು ಮುಖವಿರುವುದಕ್ಕೆ 'ಓಂ ಹ್ರೂಂ' ಎಂದೂ, ಏಳು ಮುಖವಿರುವುದಕ್ಕೆ ಓಂ ಹ್ರುಃ ಎಂದೂ, ಎಂಟು ಮುಖವಿರುವುದಕ್ಕೆ 'ಓಂ ಕಂ' ಎಂದೂ, ಒಂಭತ್ತು ಮುಖವಿರುವುದಕ್ಕೆ 'ಓಂ ಕ್ಷಂ ' ಎಂದೂ, ಹತ್ತು ಮುಖವಿರುವುದಕ್ಕೆ 'ಓಂ ಕ್ಷಂ ' ಎಂದೂ, ಹನ್ನೊಂದು ಮುಖವಿರುವುದಕ್ಕೆ 'ಓಂ ಶ್ರೀಂ' ಎಂದೂ. ಹನ್ನೆರಡುಮುಖವಿರುವುದಕ್ಕೆ 'ಓಂ ಹ್ರಾಂ' ಎಂದೂ, ಹದಿಮೂರು ಮುಖವಿರುವುದಕ್ಕೆ 'ಓಂ ಕ್ಷಂ' ಎಂದೂ ಹದಿನಾಲ್ಕು ಮುಖವಿರುವುದಕ್ಕೆ 'ಓಂ ಹ್ರಾಂ' ಎಂದೂ ಮಂತ್ರೋಚ್ಚಾರ ಮಾಡಿ ಕಟ್ಟಿಕೊಳ್ಳಬೇಕು.

ರುದ್ರಾಕ್ಷಿಯನ್ನು ಶಿರದಲ್ಲಾಗಲಿ, ಕಂಠದಲ್ಲಾಗಲಿ ಕಟ್ಟಿಕೊಳ್ಳಬೇಕು. ತಲೆ, ಎದೆಯ ಮೇಲೆ ರುದ್ರಾಕ್ಷಿ ಧರಿಸಿ ನಡೆದರೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧದ ಫಲ. ರುದ್ರಾಕ್ಷಿ ಮಣಿಗಳನ್ನು ಹಿಡಿದು ಮರಣ ಹೊಂದಿದರೆ ಅವನು ದೇವನಾಗಿ ಕೈಲಾಸ ಸೇರುತ್ತಾನೆ.

ಓರ್ವ ವೈಶ್ಯನು ಅರಣ್ಯದಲ್ಲಿ ಹೋಗುವಾಗ ಸಿಡಿಲು ಬಡಿದು ಮರಣ ಹೊಂದಿದನು. ಅವನು ತಲೆಯ ಮೇಲೆ ರುದ್ರಾಕ್ಷಿಯನ್ನು ಕಟ್ಟಿಕೊಂಡಿದ್ದನು. ಆದುದರಿಂದ ಅವನನ್ನು ಕರೆಯಲು ಕೈಲಾಸದಿಂದ ವಿಮಾನವು ಬಂದಿತು. ಮರಣ ಕಾಲದಲ್ಲಿ ರುದ್ರಾಕ್ಷಿಯ ಸನ್ನಿಧಾನವಿದ್ದುದರಿಂದ ಅವನು ಶಿವಪದವನ್ನು ಹೊಂದಿ ಸುಖಿಸಿದನು. ಹೀಗೆ ನನ್ನ ಸಂಬಂಧವಾದ ಈ ರುದ್ರಾಕ್ಷಿಯನ್ನು ಅದರ ಮಂತ್ರ ಪೂರ್ವಕ ಧರಿಸಿದರೆ ಅದರಿಂದ ಬರುವ ಫಲವನ್ನು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ.

**"ಜ್ಞಾನೇನ ಧಾರಣೇನ ಪುಂಸಃ ಫಲಂ ವಕ್ತುಂ ನ ಶಕ್ನುಮಃ ॥"**

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ರುದ್ರಾಕ್ಷಿಯ ಧಾರಣ ಫಲ ಎಂಬ ಐವತ್ತೇಳನೇಯ ಅಧ್ಯಾಯ ಮುಗಿದುದು*

## ತುಳಸೀ ಮಹಾತ್ಮೆ

## ಅಧ್ಯಾಯ - ೫೮

**ಸ್ಕಂದ ಉವಾಚ**

**ಅಪರಸ್ಯಾಪಿ ಪೃಚ್ಛಾಮಿ ಫಲಸ್ಯ ಪೂತತಾಂ ತರೋಃ ।**
**ಸರ್ವಲೋಕಹಿತಾರ್ಥಾಯ ವದ ನೋ ಜಗದೀಶ್ವರ ॥**

**ಸ್ಕಂದ :-** ಎಲೈ ಸ್ವಾಮಿಯೇ, ಮರಗಳಲ್ಲಿರುವ ಶ್ರೇಷ್ಠತೆಯನ್ನು ಮತ್ತು ಅವುಗಳನ್ನು ನೆಟ್ಟರೆ ಬರುವ ಫಲವನ್ನು ಕೇಳುತ್ತೇನೆ. ಸರ್ವಲೋಕ ಹಿತಕ್ಕೋಸ್ಕರ ಅದನ್ನು ನನಗೆ ಹೇಳು.

**ಈಶ್ವರ :-** ನೆಲ್ಲಿಮರವು ಎಲ್ಲ ಲೋಕಗಳಲ್ಲಿ ಅತ್ಯಂತ ಪವಿತ್ರ. ಇದಕ್ಕೆ ಧಾತ್ರೀತರು ಎಂದು ಹೆಸರು. ಈ ಧಾತ್ರೀತರು ಬೆಳೆಸುವದರಿಂದ ನರರೂ ನಾರಿಯರೂ ಭವಬಂಧನದಿಂದ ಮುಕ್ತರಾಗುವರು. ಈ ನೆಲ್ಲಿಕಾಯಿಯು **'ಪಾವನಂ ವಾಸುದೇವಸ್ಯ ಫಲಂ ಪ್ರೀತಿಕರಂ ಶುಭಂ'** ವಾಸುದೇವ ಎಂದು ಹೆಸರಾದ ಶ್ರೀಹರಿಗೆ ಅತ್ಯಂತ ಪ್ರೀತಿಕರವಾದ ಫಲ. ಆದುದರಿಂದಲೇ ಇದು ಪರಮ ಪಾವನ.

**ಭಕ್ಷಣೇ ಚ ಭವೇದಾಯುಃ ಪಾನೇ ವೈ ಧರ್ಮಸಂಚಯಃ ।**
**ಅಲಕ್ಷ್ಮೀನಾಶನಂ ಸ್ನಾನಂ ಸರ್ವೈಶ್ವರ್ಯಮವಾಪ್ನುಯಾತ್ ॥**

ಇದನ್ನು ತಿಂದರೆ ಆಯಸ್ಸು ವೃದ್ಧಿ. ಇದರ ರಸ ಕುಡಿದರೆ ಧರ್ಮವು ಹೆಚ್ಚುತ್ತದೆ. ಇದರ ರಸದಲ್ಲಿ ಸ್ನಾನ ಮಾಡಿದರೆ ಅಲಕ್ಷ್ಮಿಯು ಹೋಗುತ್ತದೆ. ಸರ್ವೈಶ್ವರ್ಯ ಹೊಂದುತ್ತಾನೆ.

**ಯಸ್ಮಿನ್ಗೇಹೇ ಮಹಾಸೇನ ಧಾತ್ರೀ ತಿಷ್ಠತಿ ಸರ್ವದಾ ।**
**ತಸ್ಮಿನ್ಗೇಹೇ ನ ಗಚ್ಛಂತಿ ಪ್ರೇತಾ ದೈತೇಯ ರಾಕ್ಷಸಾಃ ॥**

ನೆಲ್ಲಿಯ ಮರವಿರುವ ಮನೆಗೆ ರಾಕ್ಷಸ, ಪ್ರೇತಗಳು ಹೋಗುವದಿಲ್ಲ. ಹರಿವಾಸರಗಳಲ್ಲಿ ಅಂದರೆ ಶುಕ್ಲಪಕ್ಷ ಕೃಷ್ಣಪಕ್ಷ ಏಕಾದಶಿ ದಿನಗಳಲ್ಲಿ ನೆಲ್ಲಿಕಾಯಿ ತಿಕ್ಕಿ

ಹಚ್ಚಿಕೊಂಡು ನೀರಿನಲ್ಲಿ ಸ್ನಾನ ಮಾಡಿದರೆ ಸರ್ವಪಾಪ ಪರಿಹಾರವಾಗಿ ವಿಷ್ಣುಲೋಕ ಪ್ರಾಪ್ತಿ ಆಗುವದು. ಧಾತ್ರೀ ಫಲದ ದರ್ಶನ ಸ್ಪರ್ಶನ, ನಾಮೋಚ್ಚಾರಣೆಗಳಿಂದ ಶ್ರೀಹರಿಯು ಸಂತುಷ್ಟನಾಗುವನು. ನೆಲ್ಲಿಕಾಯಿ ಇರುವಲ್ಲಿ ಬ್ರಹ್ಮ, ವಿಷ್ಣು, ಲಕ್ಷ್ಮಿಯರ ವಾಸವಿರುತ್ತದೆ. ಆದುದರಿಂದ ಅದನ್ನು ಮನೆಯಲ್ಲಿ ನೆಟ್ಟಿರಬೇಕು. ಅಥವಾ ಆ ಫಲವನ್ನಾದರೂ ತಂದು ಇಟ್ಟಿರಬೇಕು.

**'ಅಲಕ್ಷ್ಮೀರ್ನಶ್ಯತೆ ತತ್ರ ಯತ್ರ ಧಾತ್ರೀ ಪ್ರತಿಷ್ಠತಿ'**

ಧಾತ್ರಿ ಇದ್ದಲ್ಲಿ ಅಲಕ್ಷ್ಮೀ ಅಂದರೆ ಬಡತನ, ದೌರ್ಭಾಗ್ಯ, ಇರುವದೇ ಇಲ್ಲ. ಮೊದಲಿದ್ದರೂ ಧಾತ್ರಿಯನ್ನು ತಂದು ಇಟ್ಟ ತಕ್ಷಣ ದೌರ್ಭಾಗ್ಯ ನಷ್ಟವಾಗಿ ಸೌಭಾಗ್ಯ ಹೆಚ್ಚುವದು. ಧಾತ್ರೀರಸದಿಂದ ಸ್ನಾನಮಾಡಿ, ಧಾತ್ರಿ ಫಲದಿಂದ ದೇವರ ಅಭಿಷೇಕ, ನೈವೇದ್ಯಮಾಡಿ ಶ್ರೀಹರಿಯನ್ನು ಶಾಸ್ತ್ರೋಕ್ತ ಪೂಜೆ ಮಾಡಿದರೆ ಮನುಷ್ಯನು ಒಳ್ಳೆಯ ಸೌಭಾಗ್ಯ ಹಾಗೂ ಶ್ರೀಹರಿಯ ಪ್ರಸಾದವನ್ನು ಹೊಂದುತ್ತಾನೆ. ಧಾತ್ರೀ ಫಲದ ಸೇವೆಯಿಂದ ದುಷ್ಟಗ್ರಹಗಳು ನಾಶವಾಗಿ ಇಷ್ಟ ದೇವತೆಗಳು ಪ್ರೀತರಾಗುತ್ತಾರೆ. ರವಿವಾರ, ಸಪ್ತಮಿ ಮೊದಲಾದ ದಿನಗಳಲ್ಲಿ ಧಾತ್ರೀ ಫಲವನ್ನು ಸೇವಿಸಬಾರದು. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸ ಹೇಳುತ್ತೇನೆ ಕೇಳಿರಿ.

ಪೂರ್ವಕಾಲದಲ್ಲಿ ಒಬ್ಬ ಚಾಂಡಾಲನು ಬೇಟೆಗಾಗಿ ಕಾಡಿಗೆ ಹೋಗಿದ್ದನು. ಅಲ್ಲಿ ಅನೇಕ ಪ್ರಾಣಿಗಳನ್ನು ಕೊಂದನು. ಆಯಾಸದಿಂದ ಅವನಿಗೆ ಬಾಯಾರಿಕೆ ಆಯಿತು. ಆದರೆ ಎಲ್ಲಿಯೂ ನೀರು ಕಾಣಲಿಲ್ಲ. ಅವನ ಮುಂದೆ ಒಂದು ನೆಲ್ಲಿಮರ ಕಂಡಿತು. ಅದರ ತುಂಬ ಹಣ್ಣುಗಳು ಸುರಿದಿದ್ದವು. ಕೂಡಲೇ ಚಾಂಡಾಲನು ಆ ಮರವನ್ನು ಹತ್ತಿದನು. ಯಥೇಷ್ಟವಾಗಿ ಹಣ್ಣು ತಿಂದನು. ಹಣ್ಣಿನ ಆಶೆಯಿಂದ ಇನ್ನೂ ಎತ್ತರಕ್ಕೆ ಹೋಗಬೇಕೆಂದು ಅವನು ಮೇಲಿನ ಟೊಂಗೆಗೆ ಏರಿದನು. ಅಲ್ಲಿ ಅವನು ಕೈ ತಪ್ಪಿ ಜೋಲಿ ಹೋಗಿ ಮರದಿಂದ ಕೆಳಗೆ ಬಿದ್ದನು. ಅವನಿಗೆ ಭಯಂಕರ ಪೆಟ್ಟು ತಾಗಿ ಮರಣ ಹೊಂದಿದನು. ಕೂಡಲೇ, ಯಮಪುರಿಯ ಅನೇಕ ಭೂತ, ಪಿಶಾಚಿಗಳು ಅವನನ್ನು ಸೆಳೆಯಲು ಅಲ್ಲಿಗೆ ಬಂದವು. 'ಇವನನ್ನು ನಾನು ಸೆಳೆಯುವೆನು. ನಾನು ಎಳೆಯುವೆನು' ಎಂದು ಅವುಗಳಲ್ಲಿ ಕಲಹ ಉಂಟಾಯಿತು. ಆದರೂ ಅವುಗಳಿಗೆ ಅವನನ್ನು ಮುಟ್ಟಲು ಆಗಲಿಲ್ಲ. ಅದರಂತೆ ಉಳಿದ ಯಮದೂತರೂ ಅಲ್ಲಿಗೆ ಬಂದರು. ಅವರಿಗೂ ಆ ಚಾಂಡಾಲನನ್ನು ಸೆಳೆಯಲಿಕ್ಕೆ ಆಗದೆ ಕೇಳಿದರು. ''ಇದಕ್ಕೆ ಏನು ಕಾರಣ? ಸ್ವಾಮಿ. ವಾಸ್ತವಿಕವಾಗಿ ವಿಚಾರಿಸಿದರೆ ಇವನು ನನಗೆ ಆಹಾರವಾಗಲು ಯೋಗ್ಯನು. ಯಾಕೆಂದರೆ ಹೊಡಿಸಿಕೊಂಡು ಸತ್ತವರು, ಯುದ್ಧದಲ್ಲಿ ಪರಾಜಿತರಾಗಿ ವೈರಿಗಳಿಂದ ಹತರಾದವರು ಭಯಭ್ರಾಂತರು, ಸಿಡಿಲುಹೊಡೆದವರು, ಹುಲಿಕರಡಿಗಳ ಬಾಯಿಗೆ ಬಿದ್ದವರು, ಮೊಸಳೆ ಹಿಡಿದವರು, ಗಿಡಗುಡ್ಡಗಳಿಂದ ಕೆಳಗೆ ಬಿದ್ದು ಸತ್ತವರು, ಆತ್ಮಹತ್ಯೆ ಮಾಡಿಕೊಂಡವರು. ಗುರು ದ್ವಿಜರ ದ್ವೇಷದಿಂದ ಸತ್ತವರು, ವಿಷಹಾಕಿದವರು, ಸುಳ್ಳು ಸಾಕ್ಷಿ ಹೇಳಿದವರು, ಪಾಖಂಡಿಗಳು ಮುಂತಾದವರು ಭೂತಪ್ರೇತಗಳ ಆಹಾರ. ನಾವು ಹರಿದು ಇವನ ಅಂಗಾಂಗಗಳನ್ನು ತಿಂದ ಬಳಿಕ ಆ ವೇದನೆಯಿಂದ ನರಳುತ್ತ ನಮ್ಮ ಹಲ್ಲು ಉಗುರುಗಳಿಂದ ಗಾಯಗೊಂಡವನಾಗಿ ಇವನು ಯಮ ಪಟ್ಟಣಕ್ಕೆ ಅಂಜುತ್ತ ಹೋಗಬೇಕು. ಆದರೆ ಇದೇನು ಆಶ್ಚರ್ಯ? ಇವನನ್ನು ನಮಗೆ ತಿನ್ನಲು ಆಗುತ್ತಲಿಲ್ಲ. ಇವನ ಅಂಗಾಂಗ ಸೆಳೆಯಲು ನಮಗೆ

ಬಾರದಂತಾಗಿದೆ. ಇವನ ಕಡೆ ನೋಡಲಿಕ್ಕೂ ಆಗದಷ್ಟು ದಿವ್ಯ ದೀಪ್ತಿ ಇವನ ಶರೀರದಿಂದ ಹೊಮ್ಮಿ ಚಿಮ್ಮಿ ಬರುತ್ತಲಿದೆ. ಇದಾವದರ ಪ್ರಭಾವ ?

**ಮುನಿಗಳು :-** ಪ್ರೇತಗಳಿರಾ, ಇವನು ನೆಲ್ಲಿ ಮರಹತ್ತಿ, ಹಣ್ಣು ತಿಂದಿದ್ದಾನೆ. ಇವನ ಮೈಮೇಲೆ ಅನೇಕ ಹಣ್ಣುಗಳು ಬಿದ್ದಿವೆ. ಅರ್ಧತಿಂದ ನೆಲ್ಲಿಕಾಯಿ ಇವನ ಬಾಯಲ್ಲೆ ಇರುತ್ತದೆ. ಇಂದು ಸೂರ್ಯ ರವಿವಾರವೂ ಅಲ್ಲ. ಸಪ್ತಮಿ ತಿಥಿಯೂ ಅಲ್ಲ. ಬೇರೆ ನಿಷಿದ್ಧ ದಿನವೂ ಅಲ್ಲ ಆದುದರಿಂದ ಧಾತ್ರಿ ಫಲ ಭಕ್ಷಣದ ಪುಣ್ಯದಿಂದ ಕಣ್ಣು ಕುಕ್ಕುವ ಕಾಂತಿ, ದಿವ್ಯ ದೀಪ್ತ ಇವನ ದೇಹದಿಂದ ಉಕ್ಕುತ್ತಲಿದೆ, ಇವನ ಪಾಪಗಳು ಪರಿಹೃತವಾಗಿವೆ. ಇವನೊಬ್ಬ ಈಗ ಪುಣ್ಯಾತ್ಮ. ದೇವಲೋಕಕ್ಕೆ ಹೋಗಲು ಅರ್ಹನಾಗಿದ್ದಾನೆ.

**ಪ್ರೇತಗಳು :-** ಪೂಜ್ಯರೆ, ಹೇಗೂ ವಿಷ್ಣು ಲೋಕದಿಂದ ಇವನನ್ನು ಕರೆದೊಯ್ಯಲು ವಿಮಾನ ಇನ್ನೂ ಬಂದಿಲ್ಲ. ಹಾಗೂ ನಿಮ್ಮ ವೇದ ಮಂತ್ರ ಪಠಣ, ಶಾಸ್ತ್ರ, ಪುರಾಣವಾಚನ ಇನ್ನೂ ಆರಂಭವಾಗಿಲ್ಲ ಅಷ್ಟರೊಳಗಾಗಿ ಯಾವ ಪಾಪ ಕೆಲಸ ಮಾಡಿದರೆ ಮನುಷ್ಯರು ಪ್ರೇತಗಳಾಗುತ್ತಾರೆ ? ವಿಕಾರವಾದ ಪ್ರೇತ ಶರೀರ ಬರಲು ಕಾರಣವೇನು? ಇದನ್ನೆಲ್ಲ ಬೇಗ ತಿಳಿಸಿರಿ ? ನಿಮ್ಮ ಪೂಜೆ ಪಾರಾಯಣ ಪಾಠ ಪ್ರವಚನ ನಡೆದರೆ ನಮಗೆ ಅಲ್ಲಿ ನಿಲ್ಲಲು ಆಗುವದಿಲ್ಲ. ಯಜ್ಞ, ಹೋಮ, ಜಪ, ತಪ, ಪ್ರಾರಂಭವಾದರೆ ಅಲ್ಲಿ ಸುಳಿಯುವದೂ ನಮಗೆ ಸಾಧ್ಯವಿಲ್ಲ. ಆದ್ದರಿಂದ ಈಗಲೇ ಬೇಗನೇ ಪ್ರೇತಾವಸ್ಥೆಯ ಕಾರಣವನ್ನು ಹೇಳಿರಿ?

**ಮುನಿಗಳು :-**

**ವಧಬಂಧಪ್ರಮೀತಾಶ್ಚಪ್ರೇತಾಸ್ತೇ ನಿರಯಂ ಗತಾಃ ।**
**ಛಿದ್ರಾನ್ವೇಷಪರಾ ಯೇ ಚ ದ್ವಿಜಾನಾಂ ಕರ್ಮಘಾತಿನಃ ॥**

**ತಥೈವಚ ಗುರೂಣಾಂ ಚ ತೇ ಪ್ರೇತಾಶ್ಚ ಪುನರ್ಭವಾಃ ।**
**ದೀಯಮಾನೇ ದ್ವಿಜಾಗ್ರ್ಯೇತು ದಾತಾರಂ ಪ್ರತಿಷಿಧ್ಯತಿ ॥**

**ಚಿರಂ ಪ್ರೇತತ್ವಮಾಶ್ರಿತ್ಯ ನರಕಾನ್ನ ನಿವರ್ತತೇ ।**
**ಪರಗಾಮಾತ್ಮಗಾಂ ಚೈವ ಕೃತ್ವಾ ಪೀಡನವಾಹನಂ ॥**

**ನ ಪಾಲಯಂತಿ ಯೇ ಮೂಢಾಸ್ತೆ ಪ್ರೇತಾ ಕರ್ಮಜಾ ಭುವಿ ।**
**ಹೀನ ಪ್ರತಿಜ್ಞಕಾ ಸತ್ಯಾಸ್ತಥಾ ಭಗ್ನವ್ರತಾ ನರಾಃ ॥**

**ನಳಿನೀಧಳಭುಕ್ತಾಶ್ಚ ತೇ ಪ್ರೇತಾಃ ಕರ್ಮಜಾ ಭುವಿ ।**
**ವಿಕ್ರೀಣಂತಿ ಸುತಾಂ ಶುದ್ಧಾಂ ಸ್ತ್ರಿಯಂ ಸಾಧ್ವೀಮಕಂಟಕಾಂ ॥**

**ಪಿತೃವ್ಯಮಾತುಲಾದೇಶ್ಚ ತೇ ಪ್ರೇತಾಃ ಕರ್ಮಜಾ ಭುವಿ ।**
**ಏತೇ ಚಾನ್ಯೇ ಚ ಬಹವೋ ಪ್ರೇತಾ ಜಾತಾಸ್ಸ್ವ ಕರ್ಮಭಿಃ ॥**

ಪ್ರಾಣಿವಧೆಯಿಂದಲೂ ಬಂಧನದಿಂದಲೂ, ಸತ್ತವರು ಪ್ರೇತಗಳಾಗಿ ನರಕವನ್ನು ಹೊಂದುವರು. ಇನ್ನೊಬ್ಬರ ಹುಳುಕನ್ನೇ ಹುಡುಕುವವರು, ದ್ವಿಜರ ಕೆಲಸಗಳಿಗೆ ಅಡ್ಡಿ ತರುವವರು. ಗುರುಗಳ ಕೆಲಸಕ್ಕೆ ಅಡ್ಡಿ ಮಾಡುವರು. ಪ್ರೇತರಾಗಿ ಹುಟ್ಟುತ್ತಾರೆ. ದ್ವಿಜನಿಗೆ ಕೊಡದಂತೆ ತಡೆಯುವವರು. ಬಹುಕಾಲ ಪ್ರೇತಗಳಾಗಿ ಇರುವರು. ಇತರರದಾಗಲಿ,

ತನ್ನದಾಗಲಿ ಗೋವನ್ನು ವಾಹನಕ್ಕೆ ಕಟ್ಟಿಕೊಂಡು, ಅದನ್ನು ಉಪಚರಿಸದೆ ಬಿಟ್ಟುಬಿಟ್ಟರೆ ಪ್ರೇತಗಳಾಗುತ್ತಾರೆ. ಪ್ರತಿಜ್ಞೆಮಾಡಿ ನಡೆಸದವರು, ವ್ರತಗಳನ್ನು ಹಿಡಿದು ಸಾಂಗ ಮಾಡಿಕೊಳ್ಳದವರು, ಕಮಲದದಳದಲ್ಲಿ ಊಟಮಾಡುವವರು ಪ್ರೇತಗಳಾಗುತ್ತಾರೆ. ಮಗಳನ್ನು ಮಾರುವವರು. ಯೋಗ್ಯಳಾದ ಹೆಂಗಸನ್ನು ತೊಂದರೆ ಪಡಿಸುವವರು ಪ್ರೇತಗಳಾಗುತ್ತಾರೆ. ಇನ್ನೂ ದುಷ್ಟ ಕೆಲಸ ಮಾಡುವವರು ಪ್ರೇತಗಳಾಗುತ್ತಾರೆ.

**ಪ್ರೇತಗಳು :-** ಪೂಜ್ಯರೆ, ಪ್ರೇತತ್ವವು ಬರದೇ ಇರಬೇಕಾದರೆ ಎಂತಹ ಕರ್ಮ ಮಾಡಬೇಕು? ಪ್ರೇತತ್ವವನ್ನು ತೊಲಗಿಸುವ ಕರ್ಮಗಳು ಯಾವವು? ಅವನ್ನು ಹೇಳಿರಿ.

**ದ್ವಿಜ :-** ತೀರ್ಥಸ್ನಾನ, ಭಗವಂತನ ಲಿಂಗಗಳಾದ ಮೂರ್ತಿ, ಸಾಲಗ್ರಾಮಗಳಿಗೆ ನಮಸ್ಕಾರ ಮಾಡಿದವರು ಪ್ರೇತಗಳಾಗುವದಿಲ್ಲ. ಏಕಾದಶಿ ಉಪವಾಸಮಾಡಿ ದ್ವಾದಶಿ ಶ್ರೀಹರಿಯನ್ನು ಪೂಜಿಸಿದವನು, ಪ್ರೇತತ್ವ ಹೊಂದುವದಿಲ್ಲ.

**ಏಕಾದಶ್ಯಾಮುಪೋಷ್ಯೈವ ದ್ವಾದಶ್ಯಾಂ ವಾ ವಿಶೇಷತಃ ।**
**ಪೂಜಯಿತ್ವಾ ಹರಿಂ ಮರ್ತ್ಯಾಃ ಪ್ರೇತತ್ವಂ ನ ವ್ರಜಂತಿ ವೈ ॥**

ವೇದೋಕ್ತವಾದ ಸೂಕ್ತ ಮಂತ್ರಗಳಿಂದಲೂ, ಭಗವದ್ಭಕ್ತರು ಮಾಡಿದ ಸ್ತೋತ್ರ ಪಾಠಗಳಿಂದಲೂ ಭಕ್ತಿಯಿಂದ ದೇವರಪೂಜೆ ಮಾಡಿದರೆ, ಮತ್ತು ಪುರಾಣದಲ್ಲಿ ಹೇಳಿದ ಜನರ ವಚನಗಳನ್ನು ಕೇಳಿ, ಓದಿ ಅದರಂತೆ ನಡೆದುಕೊಂಡರೆ, ನೆಲ್ಲಿಯ ಕಾಯಿಯ ರಸದಿಂದ ಸ್ನಾನಮಾಡಿ ಅದನ್ನು ಭಕ್ಷಿಸಿ, ವಿಷ್ಣುವನ್ನು ಶಾಸ್ತ್ರೋಕ್ತವಾಗಿ ಪೂಜಿಸಿದರೆ, ಪಿಶಾಚಿ ಜನ್ಮ ಹೊಂದುವದಿಲ್ಲ.

**ಪ್ರೇತಗಳು :-** ಪೂಜ್ಯರೆ, ಸತ್ಪುರುಷರ ದರ್ಶನದಿಂದಲೇ ಉದ್ಧಾರವಾಗುವದು ಎಂದು ಶ್ರುತಿಸ್ಮೃತಿಗಳ ಘೋಷಣೆ. ನಿಮ್ಮ ದರ್ಶನವು ಇಂದು ನಮಗಾಗಿದೆ. ನಮ್ಮ ಉದ್ಧಾರ ಹೇಗಾಗುವದು ಎಂಬುದನ್ನು ನೀವು ಬಲ್ಲಿರಿ. ನಮ್ಮ ಪ್ರೇತಭಾವದಿಂದ ಮುಕ್ತಿಯಾಗುವಂತೆ ಉಪದೇಶ ನೀಡಿರಿ. ನಾವು ನಿಮಗೆ ಶರಣು ಬಂದಿದ್ದೇವೆ.

**ದ್ವಿಜ :-** ನೆಲ್ಲಿಕಾಯಿಯನ್ನು ಭಕ್ಷಣ ಮಾಡಿ ದೇವರ ಧ್ಯಾನಮಾಡಿರಿ. ಅದರಿಂದ ನಿಮ್ಮ ಪ್ರೇತತ್ವ ನಿವೃತ್ತಿ ಆಗುವದು.

**ಪ್ರೇತಗಳು :-** ದ್ವಿಜೋತ್ತಮರೆ, ನೆಲ್ಲಿಗಿಡವನ್ನು ನೋಡಲ್ಕಿಕೂ ನಮ್ಮಿಂದ ಆಗುವದಿಲ್ಲ. ಅದರ ಎದುರು ನಿಲ್ಲಲೂ ಸಾಧ್ಯವಿಲ್ಲ. ಅವುಗಳನ್ನು ತಿನ್ನುವದೆಂತು?

**ದ್ವಿಜರು :-** ನಾವು ನಿಮ್ಮ ಮೇಲೆ ಅನುಗ್ರಹಮಾಡಿದ್ದೇವೆ. ನಿಮಗೆ ಈಗ ಯಾವ ತೊಂದರೆಯೂ ಆಗುವದಿಲ್ಲ. ಈಗ ನೀವು ಧಾತ್ರೀಫಲವನ್ನು ಭಕ್ಷಿಸಿರಿ. ನಿಮಗೆ ಪ್ರೇತತ್ವ ನಿವೃತ್ತಿಯಾಗಿ ಸ್ವರ್ಗಪಡೆಯುವಿರಿ.

ಹೀಗೆ ವಿಪ್ರೋತ್ತಮರಿಂದ ವರ ಪಡೆದು ಆ ಪಿಶಾಚಿಗಳು ನೆಲ್ಲಿಗಿಡದ ಬಳಿಗೆ ಹೋದವು. ಆ ವೃಕ್ಷಗಳನ್ನು ಏರಿದವು. ಹಣ್ಣು ಕಾಯಿಗಳನ್ನು ಭಕ್ಷಿಸಿದವು. ವಿಪ್ರೋತ್ತಮರ ವರದಿಂದ ಧಾತ್ರೀಭಕ್ಷಣವು ಅವುಗಳಿಗೆ ಸುಲಭಸಾಧ್ಯವಾಯಿತು. ಭಕ್ತಿಯಿಂದ ಅವು ಶ್ರೀ ಹರಿಯ ಧ್ಯಾನಗೈದವು. ಅದರಿಂದ ಕೂಡಲೇ ಅವುಗಳ ಪಿಶಾಚ ಜನ್ಮವು ತೊಲಗಿತು. ಆಗಲೇ ಸುರಲೋಕದಿಂದ ರಥವು ಬಂದಿತು. ಆ ರಥದಲ್ಲಿ ಕುಳಿತು ಆ ಚಾಂಡಾಲನೂ, ಪಿಶಾಚಿಗಳೂ ಸ್ವರ್ಗಲೋಕಕ್ಕೆ ಹೋದರು;

**ಸ್ಕಂದ** :- ನೆಲ್ಲಿಕಾಯಿಯನ್ನು ತಿನ್ನುವುದರಿಂದಲೇ ಇಷ್ಟು ಸ್ವರ್ಗ, ಪುಣ್ಯಗಳು ಲಭಿಸುತ್ತಿದ್ದರೆ. ಉಳಿದ ಎಲ್ಲ ಪಿಶಾಚಿಗಳು ಏಕೆ ಈ ಧಾತ್ರೀ ಫಲ ಭಕ್ಷಣ ಮಾಡುವುದಿಲ್ಲ?

**ಈಶ್ವರ** :- ಅವುಗಳಿಗೆ ಜ್ಞಾನವು ನಷ್ಟವಾಗಿರುತ್ತದೆ. ಹಿತಾಹಿತ ಪರಿಜ್ಞಾನ ವಿರುವದಿಲ್ಲ. ಆದುದರಿಂದ ಅವು ಎಂಜಲು, ನಾಯಿ ಮುಟ್ಟಿದ ಪದಾರ್ಥ ಮಲಮೂತ್ರದಿಂದ ಕೂಡಿದ್ದು, ಶ್ಲೇಷ್ಮ ಮುಂತಾದವುಗಳನ್ನೇ ಒಳ್ಳೇ ಆಹಾರವೆಂದು ತಿಳಿದು ತಿನ್ನುತ್ತವೆ. ಮಲ, ವಾಂತಿಯಾದದ್ದು, ಕಾಗೆ, ಹಂದಿ, ಕೋಳಿಗಳ ಎಂಜಲು, ಸೂತಕದಲ್ಲಿಗೈದ ಜಪದ ಪುಣ್ಯ, ಯಾರಿಗೂ ಕೊಡದೆ ಸ್ವಾರ್ಥಿಯಾಗಿ ತಿಂದ ಆಹಾರ, ಕುಡಿದ ನೀರುಗಳು ಪ್ರೇತಗಳ ಆಹಾರವಾಗಿರುತ್ತವೆ. ಮಡಿ-ಮೈಲಿಗೆ ಇಲ್ಲದಿರುವ ಯಾವ ಗೃಹಿಣಿಯು ಮನೆಯಲ್ಲಿ ಗಂಡನ ಮಾತನ್ನು ಕೇಳದೇ ತನ್ನದೇ ಅಧಿಕಾರವನ್ನು ನಡೆಸುವಳೋ ಆ ಮನೆಯಲ್ಲಿ ಪ್ರೇತಗಳು ಜನಿಸುತ್ತವೆ. ಉರುಲು ಹಾಕಿಕೊಂಡು ಸಾಯುವವರು, ನೀರು, ಶಸ್ತ್ರ, ವಿಷಗಳಿಂದ ಸಾಯುವವರು, ರಾಜದ್ರೋಹಿಗಳು, ಪಿತೃದ್ರೋಹಿಗಳು, ವ್ರತ ದೇವರ ಪೂಜೆ ಮಾಡದವರು, ನಿತ್ಯ ಸ್ನಾನ ಮಾಡದವರು, ಗುರುಸ್ತ್ರೀಯೊಡನೆ ಕೂಡುವವರು, ಅಂತ್ಯಜ ಸ್ತ್ರೀಯರೊಡನೆ ವಿಹರಿಸುವವರು, ಮ್ಲೇಂಛರಿಂದ ಜೀವಿಸುವವರು, ಹೆಂಗಸರ ದುಡ್ಡಿನಿಂದ ಬದುಕುವವರು ಮಾಡಿಕೊಂಡ ಮಡದಿಯನ್ನು ರಕ್ಷಿಸದವರು ಪಿಶಾಚಿಗಳಾಗುತ್ತಾರೆ. ಹಸಿದು ಬಂದ ಅತಿಥಿಗಳನ್ನು ಉಪಚರಿಸದವರು, ಕಟುಗರಿಗೆ ಪಶುಗಳನ್ನು ಮಾರುವವರು. ಪಶುವಧೆ ಮಾಡುವವರು, ನಾಮಕರಣ, ಉಪನಯನ ಮುಂತಾದ ಸಂಸ್ಕಾರ ಇಲ್ಲದವರು ಸ್ನಾನ, ಸಂಧ್ಯೆ, ದೇವತಾರ್ಚನೆ. ವೇದಾಧ್ಯಯನ ಮುಂತಾದ ಸ್ವೋಚಿತ ಕರ್ಮಗಳನ್ನು ಮಾಡದವರು, ಎಂಜಲು ಎಲೆಗಳನ್ನು, ದೇಹದ ಮಲಮೂತ್ರಗಳನ್ನು ತೀರ್ಥಗಳಲ್ಲಿ ಹಾಕುವವರು, ಗಂಡನನ್ನು ಬಿಟ್ಟು ಪರಪುರುಷನನ್ನು ನೋಡುವ ಸ್ತ್ರೀಯರು. ನಾಲಿಗೆಯ ಚಾಪಲ್ಯದಿಂದ ಗಂಡನನ್ನು ಬಿಟ್ಟು ಮೃಷ್ಟಾನ್ನ ತಿನ್ನುವ ಮಹಿಳೆಯರು, ದೇವಸ್ವ, ಬ್ರಹ್ಮಸ್ವ ತಿನ್ನುವ ಪುರುಷರು, ನಿಷಿದ್ಧ ಪದಾರ್ಥಗಳನ್ನು ಭಕ್ಷಣ ಮಾಡುವವರು, ಅತಿಥಿಗಳನ್ನು ಅವಮಾನ ಮಾಡುವವರು ಪ್ರೇತ ಜನ್ಮ ಪಡೆಯುತ್ತಾರೆ. ಇಂತಹ ಪಾಪಗಳನ್ನು ಮಾಡಿದವರು ಧಾತ್ರೀ ಫಲವನ್ನು ತಿಂದು, ಅದರ ರಸದಿಂದ ಮಿಂದು, ಭಕ್ತಿಯಿಂದ ಭಗವದ್ಧ್ಯಾನ ಮಾಡಿದರೆ ಪ್ರೇತಜನ್ಮದಿಂದ ಮುಕ್ತರಾಗುವರು. ಆದ್ದರಿಂದ ಸರ್ವಪ್ರಯತ್ನಮಾಡಿ ಧಾತ್ರೀ ಫಲ ಸೇವಿಸಬೇಕು.

''**ತಸ್ಮಾತ್ ಸರ್ವಪ್ರಯತ್ನೇನ ಸೇವನೀಯಾಮಲಕೀ ವಿಷಘ್ನಾ** ।

**ಸ್ಕಂದ** :-ಧಾತ್ರೀ ಫಲದ ವಿಷಯವು ತಿಳಿಯಿತು. ಎಲೆ, ಹೂವುಗಳ ವಿಷಯವಾಗಿ ತಿಳಿಸಿರಿ.

**ಈಶ್ವರ** :- ಎಲ್ಲ ಎಲೆಗಳಲ್ಲಿ ತುಳಸೀ ಎಲೆಯು ಶ್ರೇಷ್ಠ, ಮಂಗಳಕರ, ಇಷ್ಟಾರ್ಥಪ್ರದ. ಎಲ್ಲಕ್ಕಿಂತ ಮಿಗಿಲಾಗಿ **'ಸರ್ವಕಾಮಪ್ರದಾ ಶುದ್ಧಾ ವೈಷ್ಣವೀ ವಿಷ್ಣುಸುಪ್ರಿಯಾ'.** ವಿಷ್ಣುವಿಗೆ ಅತ್ಯಂತ ಪ್ರಿಯವಾದುದು. ತುಳಸಿಯು ಇಹದಲ್ಲಿ ಭುಕ್ತಿ, ಪರದಲ್ಲಿ ಮುಕ್ತಿ ಕೊಡುವಳು. ಸರ್ವ ಪ್ರಾಣಿಗಳಿಗೆ ಮಂಗಳಕರ. ಹಿಂದೆ ಅನೇಕ ಮುನಿವರ್ಯರು ಈ ತುಳಸೀ ಸೇವೆಯಿಂದಲೇ ಅಕ್ಷಯ ಸ್ವರ್ಗ ಹೊಂದಿದರು. ಎಲ್ಲ ಪ್ರಾಣಿಗಳಿಗೂ ಹಿತವಾಗಲು ಸಾಕ್ಷಾತ್ ವಿಷ್ಣುವೇ ತುಳಸಿ ಬೆಳೆಸಿದ್ದಾನೆ. ತುಳಸಿ ಎಲೆ, ಹೂವು ಸರ್ವಧರ್ಮಗಳಿಗೂ ಉತ್ತಮ, 'ವಿಷ್ಣುವಿಗೆ ಲಕ್ಷ್ಮೀದೇವಿಯು ಪ್ರಿಯಳಾಗಿದ್ದಾಳೆ, ನಾನೂ ಅವನಿಗೆ

ಪ್ರಿಯನಾಗಿದ್ದೇನೆ.' ಅದರಂತೆ ಈ ತುಳಸಿಯು ಶ್ರೀ ಹರಿಗೆ ಪ್ರಿಯತಮವಾದುದು. ಈ ಮೂವರು ಬಿಟ್ಟು ಬೇರೆಯವರು ವಿಷ್ಣುವಿಗೆ ಪ್ರಿಯರಲ್ಲ. ಒಂದು ತುಳಸಿದಳವು ಮೂರು ಚಿನ್ನದ ನಾಣ್ಯಕ್ಕೆ ಸಮ. ತುಳಸೀದಳವಿಲ್ಲದಿದ್ದರೆ ಯಾವುದೇ ಹೂ, ಹಣ್ಣು, ಗಂಧ ಮುಂತಾದವುಗಳನ್ನು ವಿಷ್ಣುವು ಸ್ವೀಕರಿಸುವುದಿಲ್ಲ. ಈ ತುಳಸಿಯಿಂದ ಪೂಜಿಸಿದರೆ ಹರಿಯು ಸಂತುಷ್ಟನಾಗಿ ವರ ನೀಡುವ ಮನಸ್ಸನ್ನು ಮಾಡುವನು. ತುಳಸೀದಳದಿಂದ ಶ್ರೀ ಹರಿಯನ್ನು ಪೂಜಿಸಿದರೆ ಅವನು ಮಾಡುವ ದಾನ ಧರ್ಮ, ಯಜ್ಞ-ಹೋಮಗಳು ಸಾರ್ಥಕವಾಗಿ ಈ ಜನ್ಮ ಹಾಗೂ ಪರಲೋಕಗಳಲ್ಲಿ ಸುಖ, ಭೋಗಗಳನ್ನು ಹೊಂದುತ್ತಾನೆ.

**ಯಥಾ ಗಂಗಾ ಪವಿತ್ರಾಂಗೀ ಸುರಲೋಕ ವಿಮೋಕ್ಷದಾ ।**
**ಯಥಾ ಭಾಗೀರಥೀ ಪುಣ್ಯಾ ತಥೇಯಂ ತುಳಸೀ ಶಿವಾ ।**

ಸುರಲೋಕವನ್ನು ಪವಿತ್ರಗೊಳಿಸಿದ ದೇವ ಗಂಗೆಯಂತೆ, ಭೂಲೋಕ, ಪಾತಾಳ ಲೋಕಗಳನ್ನು ಪವಿತ್ರಗೊಳಿಸಿದ ಭಾಗೀರಥಿಯಂತೆ ಈ ತುಳಸಿಯು ಪವಿತ್ರಕರ ಹಾಗೂ ಪುಣ್ಯಕರವಾಗಿದೆ.

ತುಳಸೀಮಂಜರಿಯಿಂದ ವಿಷ್ಣುವನ್ನು ಪೂಜಿಸಿದರೆ ಅದರ ಪುಣ್ಯ ಫಲ ಎಷ್ಟು ಎನ್ನುವದು, ಸ್ಕಂದನೆ; ನನಗೆ ಹೇಳಲು ಶಕ್ಯವಿಲ್ಲ. ತುಳಸೀ ವನದಲ್ಲಿ ಬ್ರಹ್ಮ; ವಿಷ್ಣು ಮುಂತಾದ ಎಲ್ಲ ದೇವತೆಗಳೂ ಇರುತ್ತಾರೆ. ಪ್ರೇತ, ಪಿಶಾಚ, ಬ್ರಹ್ಮ ರಾಕ್ಷಸಗಳು ಇಲ್ಲಿ ಇರದೇ ಓಡಿಹೋಗುತ್ತವೆ. ಶ್ರೀ ಹರಿಯ ಅರ್ಚನೆಗಾಗಿ ತುಳಸೀ ವನ ನಿರ್ಮಿಸಿದವನು ನೂರು ಯಜ್ಞ ಫಲ ಪಡೆಯುತ್ತಾನೆ.

**ಹರಿ ಲಿಂಗೇಷು ಚಾನ್ಯೇಷು ಸಾಲಿಗ್ರಾಮ ಶಿಲಾಸು ಚ ।**
**ತುಲಸೀ ಗ್ರಹಣಂ ಕೃತ್ವಾ ವಿಷ್ಣೋಸ್ಸಾಯುಜ್ಯತಾಂ ವ್ರಜೇತ್ ॥**

ಹರಿಯ ಲಿಂಗಗಳಾದ ಸಾಲಿಗ್ರಾಮ ಹಾಗೂ ಮೂರ್ತಿಗಳಿಗೆ ತುಳಸಿಯನ್ನು ಅರ್ಪಣ ಮಾಡಿದರೆ ವಿಷ್ಣು ಸಾಯುಜ್ಯ ಪಡೆಯುತ್ತಾನೆ. ಶ್ರೀ ಹರಿಯ ಪೂಜೆಗಾಗಿ ಭೂಲೋಕದಲ್ಲಿ ತುಲಸಿಯನ್ನು ಬೆಳೆಸಿದವನು ಹರಿಮಂದಿರಕ್ಕೆ ಹೋಗುತ್ತಾನೆ. ವಿಷ್ಣುವನ್ನು ಪೂಜೆ ಮಾಡಿ ನಿರ್ಮಾಲ್ಯ ತುಳಸಿಯನ್ನು ತಲೆಯ ಮೇಲೆ ಧರಿಸಿದವನು ಪಾಪ ಮುಕ್ತನಾಗಿ ಸ್ವರ್ಗ ಪಡೆಯುತ್ತಾನೆ. ಶ್ರಾದ್ಧ, ಯಜ್ಞ ಕಾರ್ಯ ಮುಂತಾದ ಕರ್ಮಗಳಲ್ಲಿ ಒಂದು ಎಲೆಯಾದರೂ ತುಳಸಿ ಇದ್ದರೆ ಅವೆಲ್ಲವೂ ಪರಿಶುದ್ಧ. ಆದುದರಿಂದ ಸರ್ವ ಪ್ರಯತ್ನದಿಂದ ಸರ್ವ ಪುಣ್ಯ ಕಾರ್ಯಗಳಲ್ಲಿ ತುಳಸಿಯನ್ನು ಉಪಯೋಗಿಸಬೇಕು. ತಲೆಯ ಮೇಲೆ ತುಳಸಿಯನ್ನಿಟ್ಟುಕೊಂಡು ಪ್ರಾಣ ಬಿಟ್ಟವನು ಸ್ವರ್ಗ ಸೇರುತ್ತಾನೆ. ರಾಜಸೂಯ ಮುಂತಾದ ಯಜ್ಞ ಹಾಗೂ ವಿವಿಧ ವ್ರತಗಳಿಂದ ಪ್ರಾಪ್ತವಾಗುವ ದಿವ್ಯ ಗತಿಯೇ ಶ್ರೀಹರಿಯ ತುಳಸೀ ಅರ್ಚನೆಯಿಂದ ಬರುವದು. ಒಂದು ತುಳಸೀ ದಳದಿಂದ ನಾರಾಯಣನನ್ನು ಪೂಜಿಸಿದರೆ ವಿಷ್ಣುವಿನ ಸನ್ನಿಧಿಯನ್ನು ನರನು ಸೇರುತ್ತಾನೆ. ಎಳೆ ತುಳಸಿಯ ದಳಗಳಿಂದ ಕೇಶವನನ್ನು ಅರ್ಚನೆ ಮಾಡಿದವನು ಮತ್ತೊಮ್ಮೆ ತಾಯಿಯ ಮೊಲೆ ಹಾಲು ಕುಡಿಯುವದಿಲ್ಲ - ಅಂದರೆ ಮರಳಿ ಹುಟ್ಟುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ತುಳಸೀ ಮಹಾತ್ಮೆ ಎಂಬ ಐವತ್ತೆಂಟನೇಯ ಅಧ್ಯಾಯ ಮುಗಿದುದು*

**ದ್ವಿಜರು :-** ಪೂಜ್ಯರೆ, ತುಳಸಿ ಮಹಿಮೆಯನ್ನು ತಾವು ತಿಳಿಸಿ ಹೇಳಿದಿರಿ ಆ ತುಳಸೀ ಸ್ತೋತ್ರವನ್ನು ಕೇಳಲು ಇಚ್ಛಿಸುತ್ತೇನೆ. ತಿಳಿಸಿರಿ.

**ವ್ಯಾಸ :-** ಹಿಂದೆ ನಾನು ಸ್ಕಂದ ಪುರಾಣದಲ್ಲಿ ಮೋಕ್ಷ ಸಿದ್ಧಿಗಾಗಿ ತುಳಸೀ ಸ್ತೋತ್ರ ಹೇಳಿದ್ದು ಅದನ್ನೇ ಈಗ ನಿಮಗೆ ಹೇಳುತ್ತೇನೆ.

ನಿಯಮನಿಷ್ಠರಾದ ಶತಾನಂದ ಮುನಿಗಳ ಶಿಷ್ಯರು ತಮ್ಮ ಗುರುವಿನ ಬಳಿಗೆ ಬಂದರು. ನಮಸ್ಕಾರ ಮಾಡಿದರು. ಪ್ರಶ್ನೆ ಕೇಳಿದರು -

**ಶಿಷ್ಯರು :-** ಗುರುಗಳೆ, ಬ್ರಹ್ಮದೇವರು ಪೂರ್ವದಲ್ಲಿ ನಿರೂಪಣ ಮಾಡಿದ ತುಳಸೀ ಮಹಿಮೆಯನ್ನು ನಿಮ್ಮ ಮುಖದಿಂದ ಕೇಳಬೇಕೆಂಬ ಅಪೇಕ್ಷೆಯಾಗಿದೆ. ದಯಮಾಡಿ ತಿಳಿಸಿರಿ.

**ಶತಾನಂದ :-**

**ಧನ್ಯಾಸ್ತೇ ಮಾನವಾ ಲೋಕೇ ಯದ್ಗೃಹೇ ವಿದ್ಯತೇ ಕಲೌ ।**
**ಶಾಲಿಗ್ರಾಮ ಶಿಲಾರ್ಥಂ ತು ತುಲಸೀ ಪ್ರತ್ಯಹಂ ಕ್ಷಿತೌ ॥**

ಕಲಿಯುಗದಲಿ ಯಾರ ಮನೆಯಲ್ಲಿ ತುಳಸಿಯು ಇದೆಯೋ ಅವರೇ ಧನ್ಯರು. ಆ ತುಳಸಿಯು ಸಾಲಿಗ್ರಾಮದ ಶಿಲೆಗೋಸ್ಕರವಾಗಿಯೇ ಭೂಮಿಯಲ್ಲಿ ಹುಟ್ಟಿದೆ.

ತುಳಸಿಯನ್ನು ದೇವರ ಪೂಜೆಗಾಗಿ ಮಾತ್ರ ತೆಗೆಯಬೇಕು. ತೆಗೆಯುವಾಗ ಈ ಮಂತ್ರವನ್ನು ಹೇಳಬೇಕು.

**'ತುಲಸ್ಯಮೃತ ಜನ್ಮಾಸಿ ತಥಾ ತ್ವಂ ಕೇಶವ ಪ್ರಿಯೇ ।**
**ಕೇಶವಾರ್ಥಂ ಚಿನೋಮಿ ತ್ವಾಂ ವರದಾ ಭವ ಶೋಭನೇ ।**
**ತ್ವದಂಗ ಸಂಭವೈರ್ನಿತ್ಯಂ ಪೂಜಯಾಮಿ ಯಥಾ ಹರಿಂ ॥**

**ತಥಾ ಕುರು ಪವಿತ್ರಾಂಗಿ ಕಲವ ಮಲವಿನಾಶಿನೀ ।**
**ಮಂತ್ರೇಣಾನೇನ ಯಃ ಕುರ್ಯಾದ್ವಿಚಿತ್ಯ ತುಲಸೀದಳಂ**

ತುಳಸಿದೇವಿಯೇ ನೀನು ಅಮೃತ ಕಲಶದಿಂದ ಉದ್ಭೂತಳಾಗಿರುವಿ. ನೀನು ಮುಖ್ಯವಾಗಿ ಕೇಶವನಿಗೆ ಪ್ರಿಯಳು. ಆ ಕೇಶವನ ಪೂಜೆಗಾಗಿಯೇ ನಾನು ನಿನ್ನನ್ನು ಹರಿಯುತ್ತೇನೆ. ನೀನು ವರವನ್ನು ನೀಡು. ನಿನ್ನ, ದಳಗಳಿಂದಲೇ ನಾನು ಪ್ರತಿ ನಿತ್ಯವೂ ಶ್ರೀಹರಿಯನ್ನು ಪೂಜಿಸುತ್ತೇನೆ. ಶ್ರೀಕೃಷ್ಣನೇ ಗೋಮಾತೀನದೀ ತೀರದಲ್ಲಿ ಬೆಳೆಸಿದನು. ಪ್ರಪಂಚದ ಹಿತಕ್ಕಾಗಿ, ಗೋಪಿಯರ ಸಂತೋಷಕ್ಕಾಗಿ ಅದನ್ನು ತಾನೇ ಕಾಪಾಡಿದನು. ವೃಂದಾವನದಲ್ಲಿ ಗೋವೃದ್ಧಿಗಾಗಿ, ಕಂಸನ ಸಂಹಾರಕ್ಕೆ ಶ್ರೀಕೃಷ್ಣ ತಾನೇ ಈ ತುಳಸಿಯನ್ನು ಸೇವಿಸಿದನು.

ಹಿಂದೆ ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಸರಿಯೂ ನದಿಯ ದಂಡೆಯ ಮೇಲೆ ತುಳಸಿಯನ್ನು ಬೆಳೆಸಿದನು-ವಶಿಷ್ಠರ ಅಜ್ಞೆಯಂತೆ. ಅಶೋಕವನದಲ್ಲಿ ಸೀತೆಯು ಧ್ಯಾನಗೈದು ತನ್ನ ಗಂಡ ಶ್ರೀರಾಮನೊಂದಿಗೆ ಪುನರ್ಮಿಲನ ಹೊಂದಿದಳು. ಅದರಂತೆ ದಕ್ಷಯಜ್ಞದಲ್ಲಿ ಆತ್ಮದಹನ ಮಾಡಿಕೊಂಡ ಪಾರ್ವತಿಯು ತುಳಸಿಯನ್ನು ಬೆಳೆಸಿ ಧ್ಯಾನಿಸಿ

ತಪಃಸಿದ್ಧಿ ಪಡೆದಳು. ಹನುಮಂತನು ತುಳಸಿಯನ್ನು ಸೇವಿಸಿ ಸಮುದ್ರ ಲಂಘನ ಮಾಡಿ ತನ್ನ ಕಾರ್ಯಸಿದ್ಧಿ ಮಾಡಿದನು. ಇಂತಹ ತುಳಸಿಗೆ ನಮ್ಮ ನಮಸ್ಕಾರ, ತುಳಸೀದಳದಿಂದ ತಲೆಯ ಮೇಲೆ ನೀರನ್ನು ಪ್ರೋಕ್ಷಣೆ ಮಾಡಿಕೊಂಡರೆ ಗಂಗಾಸ್ನಾನ ಮಾಡಿದ ಪುಣ್ಯ ಬರುತ್ತದೆ.

**ಪ್ರಸೀದ ದೇವಿ ದೇವೇಶಿ ಪ್ರಸೀದ ಹರಿವಲ್ಲಭೆ ।**
**ಕ್ಷೀರೋದಮಥನೋದ್ಭೂತೇ ತುಳಸೀ ತ್ವಾಂ ನಮಾಮ್ಯಹಂ ।**

ದೇವತೆಗಳ ಒಡತಿಯೂ, ಶ್ರೀಹರಿಯ ಪ್ರೀತಿ ಪಾತ್ರಳೂ, ಹಾಲ್ಗಡಲಿನ ಮಂಥನದಿಂದ ಹುಟ್ಟಿದವಳೂ ಆದ ತುಳಸಿದೇವಿಯೇ ನಿನಗೆ ನಮಸ್ಕಾರ. ನೀನು ನನ್ನ ಮೇಲೆ ಪ್ರಸನ್ನಳಾಗು. ಏಕಾದಶಿ ಉಪವಾಸಮಾಡಿ ರಾತ್ರಿ ಜಾಗರಮಾಡಿ, ದ್ವಾದಶಿ ಮುಂಜಾನೆ ಈ ತುಳಸೀ ಸೋತ್ತ್ರವನ್ನು ಹೇಳಬೇಕು. ಆದರಿಂದ ಕೋಟಿ ತೀರ್ಥ ಸ್ನಾನ ಮಾಡಿದ ಪುಣ್ಯ ಬರುವದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ತುಳಸೀ ಸ್ತೋತ್ರ ಎಂಬ ಐವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ಗಂಗಾ ಮಹಾತ್ಮೆ

ಅಧ್ಯಾಯ - ೬೦

**ದ್ವಿಜರು :-** ಎಲ್ಲಿ ಸ್ನಾನ ಮಾಡಿದರೆ ಸರ್ವ ಪಾಪಗಳು ಕಳೆಯುವವೊ ಅಂಥ ತೀರ್ಥಗಳನ್ನು ಹೇಳಿರಿ ? ಪುಣ್ಯದಿಂದ ಸ್ವರ್ಗಕ್ಕೆ ಹೋದ ಬಳಿಕ ಮನುಷ್ಯನು ಮತ್ತೆ ಸ್ವರ್ಗದಿಂದ ಚ್ಯುತನಾಗದೆ ಅಲ್ಲಿಯೇ ಇರಬೇಕಾದರೆ ಏನು ಮಾಡಬೇಕು. ತಿಳಿಸಿರಿ. ನರರು ಬದುಕಿದ್ದಾಗ ಇಲ್ಲಿ ಸುಖ ಸತ್ತ ಮೇಲೆ ಆಲ್ಲಿ ಸ್ವರ್ಗ ಎರಡನ್ನೂ ಪಡೆಯುವಂತೆ ಮಾಡುವ ಉಪಾಯ ತಿಳಿಸಿರಿ.

**ವ್ಯಾಸ :-** ಗಂಡಸರು, ಹೆಂಗಸರು, ಪಾಪಿಗಳು, ಪಾಮರರು ಯಾರೇ ಬರಲಿ ದರ್ಶನ ಮಾತ್ರದಿಂದಲೇ ಗಂಗಾನದಿಯು ಪಾಪ ನಾಶಮಾಡುವಳು.

**ಗಂಗೇತಿ-ಸ್ಮರಣಾದೇವ ಕ್ಷಯಂ ಯಾತಿ ಚ ಪಾತಕಂ**
**ಕೀರ್ತನಾದತಿ ಪಾಪಾನಿ ದರ್ಶನಾದ್ಗುರುಕಲ್ಮಷಂ**
**ಸ್ನಾನಾತಪಾನಾಚ್ಚ ಜಾಹ್ನವ್ಯಾಂ ಪಿತೃಣಾಂ ತರ್ಪಣಾತ್ತಥಾ ।**
**ಮಹಾಪಾತಕವೃಂದಾನಿ ಕ್ಷಯಂ ಯಾಂತಿ ದಿನೇ ದಿನೇ ॥**

**ಅಗ್ನಿನಾ ದಹ್ಯತೇ ತೂಲಂ ತೃಣ ಶುಷ್ಕಂ ಕ್ಷಣಾದ್ಯಥಾ ।**
**ತಥಾ ಗಂಗಾಜಲ ಸ್ಪರ್ಶಾತ್ಪುಂಸಾಂ ಪಾಪಂ ದಹೇತ್ಷಣಾತ್ ॥**
**ಸಂಪ್ರಾಪ್ನೋತ್ಯಕ್ಷಯಂ ಸ್ವರ್ಗಂ ಗಂಗಾಸ್ನಾನೇನ ಕೇಶವಂ ।**
**ಯಶೋ ರಾಜ್ಯಂ ಲಭೇತ್ಪುಣ್ಯಂ ಸ್ವರ್ಗಂ ಚಾಪಿ ಪರಾಂಗತಿಂ ॥**

'ಗಂಗಾ' 'ಗಂಗಾ'- ಎಂದು ನೆನೆದ ಮಾತ್ರಕ್ಕೆ ನೆನೆದವರ ಪಾಪಗಳೆಲ್ಲ ಪರಿಹೃತವಾಗುವವು. ಗಂಗೆಯ ನಾಮಾಕೀರ್ತನ ಮೇಲಿಂದ ಮೇಲೆ ಮಾಡಿದರೆ ಗುರುತರ

ಪಾಪಾಗಳು ಪರಿಹಾರವಾಗುವವು ಗಂಗಾನದಿಯ ದರ್ಶನದಿಂದ ಮಹಾಪಾತಕಗಳು ದೂರವಾಗುವವು. ಆ ಜಾಹ್ನವಿಯ ಜಲದಲ್ಲಿ ಸ್ನಾನ, ಜಲಪಾನ, ಪಿತೃತರ್ಪಣ ಮುಂತಾದವುಗಳನ್ನು ಮಾಡಿದರೆ ಸಮಸ್ತ ಪಾಪಗಳ ಪರಿಹಾರ ಆಗುವದು. ಬೆಂಕಿಯಿಂದ ಅರಳೆ ಸುಟ್ಟು ಹೋಗುವಂತೆ ಕಾಡ್ಗಿಚ್ಚಿನಿಂದ ಒಣಗಿದ ಹುಲ್ಲು ಎಲ್ಲವೂ ಭಸ್ಮವಾಗಿ ಹೋಗುವಂತೆ ಗಂಗಾಜಲದ ಸ್ಪರ್ಶವು ಪಾಪ ರಾಶಿಯನ್ನು ಒಂದು ಕ್ಷಣದಲ್ಲಿ ಸುಟ್ಟುಬಿಡುವದು. ಗಂಗಾಸ್ನಾನದಿಂದ ಮನುಷ್ಯನಿಗೆ ಅಕ್ಷಯ ಸ್ವರ್ಗಪ್ರಾಪ್ತಿ. ಇಲ್ಲಿ ಇರುವವರೆಗೆ ಐಶ್ವರ್ಯವು, ಸುಖವು ಲಭಿಸುವವು. ಮರಣೋತ್ತರದಲ್ಲಿ ವಿಶೇಷ ಪುಣ್ಯ ದೊರೆಯುವದು. ಕೇಶವನ ಕೃಪೆ, ಸದ್ಗತಿ ದೊರಕುವದು.

**'ಏಕೋ ಗಚ್ಛತಿ ಗಂಗಾಂ ಯ ಸ ಪುನಾತಿ ಚ ಪೂರ್ವಜಾನ್ ।'**
**ಏತದೇವ ಮಹಾಪುಣ್ಯಂ ತರತೇ ತಾರಯತ್ಯಪಿ ॥**

ಮನೆತನದಲ್ಲಿ ಒಬ್ಬನಾದರೂ ಗಂಗೆಗೆ ಹೋಗಿ ಸ್ನಾನಮಾಡಿದರೂ ಅವನ ಕುಟುಂಬದವರೆಲ್ಲರೂ ಪವಿತ್ರರಾಗುವರು. ಗಂಗಾಸ್ನಾನದ ಮಹಾಪುಣ್ಯದಿಂದ ಆವನು ತಾನು ಭವಸಾಗರ ದಾಟುವದಲ್ಲದೆ ತನ್ನ ಬಂಧುಗಳನ್ನೂ ದಾಟಿಸುವನು ಗಂಗಾದೇವಿಯ ಭವಸಾಗರ ದಾಟುವದಲ್ಲದೆ ತನ್ನ ಬಂಧುಗಳನ್ನೂ ದಾಟಿಸುವವನು ಗಂಗಾದೇವಿಯ ಗುಣಗಳನ್ನು, ಚತುರ್ಮುಖನು ಕೂಡ ಪೂರ್ಣವಾಗಿ ಹೇಳಲು ಸಮರ್ಥನಾದರೂ 'ಹೇಳಲು ಬರುವದಿಲ್ಲ' ಎಂದು ಲೋಕ ಶಿಕ್ಷಣಕ್ಕಾಗಿ ತಿಳಿಸಿದ್ದಾನೆ. ಅಂತಹ ಭಾಗೀರಥಿಯ ಗುಣವನ್ನು ನಾನು ನಿಮಗೆ ಅತ್ಯಲ್ಪ ಹೇಳುತ್ತೇನೆ.

**ಸ್ಮೃತಾರ್ತಿಹಂತ್ರೀ ಯೈರ್ಧ್ಯಾತಾ ಸಂಸ್ತುತಾ ಸಾಧುಮೋದಿತಾ ।**
**ಗಂಗಾ ತಾರಯತೇ ನೃಣಾಮುಭೌ ವಂಶೌ ಭವಾರ್ಣವಾತ್॥**

ಗಂಗೆಯ ಸ್ಮರಣದಿಂದ ದುಃಖ ಪರಿಹಾರವಾಗುವದು ಧ್ಯಾನಮಾಡಿ ಆವಳ ಸ್ತೋತ್ರ ಮಾಡಿದರೆ ಆ ಗಂಗೆಯು ಮಾನವರನ್ನು ಹಾಗೂ ಅವರ ವಂಶದವರನ್ನು ಭವಸಾಗರದಿಂದಲೇ ಪಾರುಮಾಡುವಳು. ಗಂಗೆಯಲ್ಲಿ ಪಿತೃಗಳನ್ನು ಉದ್ದೇಶಿಸಿ ಪಿಂಡಪ್ರದಾನ, ಹಾಗೂ ತಿಲಾಂಜಲಿ ನೀಡಿದರೆ ನರಕದಲ್ಲಿ ಹೊರಳಾಡುವವರೂ ಸ್ವರ್ಗ ಮೋಕ್ಷಾದಿಗಳನ್ನು ಪಡೆಯುವರು ಪರಸ್ತ್ರೀಗಮನ, ಪರದ್ರವ್ಯಾಪಹಾರ ಲೋಕಪೀಡೆ. ಪರದ್ರೋಹಗಳಲ್ಲಿ ಆಸಕ್ತನಾದ ಪಾಪಿ ಮನುಷ್ಯನಿಗೆ ಗಂಗೆಯೊಂದೇ ಕೊನೆಯ ಗತಿ. ಕ್ಷೇತ್ರದಲ್ಲಿ ಗ್ರಹಣಕಾಲದಲ್ಲಿ ಸಾವಿರ ಹಸು ದಾನ ನೀಡಿದರೆ ಬರುವ ಫಲವು ಒಂದು ದಿನ ಗಂಗಾ ಸ್ನಾನದಿಂದ ಬರುವದು.

**ದೃಷ್ಟ್ವಾತು ಹರತೇ ಪಾಪಂ ಸ್ಪೃಷ್ಟ್ವಾತು ಲಭತೇ ದಿವಂ ।**
**ಪ್ರಸಂಗಾದಪಿ ಸಾ ಗಂಗಾ ಮೋಕ್ಷದಾ ತ್ವವಗಾಹಿತಾ ॥**

ಆಕಸ್ಮಾತ್ ಗಂಗೆಯನ್ನು ನೋಡಿದರೆ ಪಾಪನಾಶ, ಅವಳನ್ನು ಮುಟ್ಟಿದರೆ ಸ್ವರ್ಗ ಹೊಂದುತ್ತಾನೆ. ಸ್ನಾನಮಾಡಿದರೆ ಮೋಕ್ಷ ಪಡೆಯುತ್ತಾನೆ. ಭಕ್ತಿಯಿಂದ ಗಂಗೆಯನ್ನು ಸ್ತೋತ್ರಮಾಡಿದರೆ ನರನಿಗೆ ಸ್ವರ್ಗದೊರಕುವದು. ಭಕ್ತಿ ಇಲ್ಲದೆ ಮನಸ್ಸಿಲ್ಲದೆ, ಗಂಗೆಯ ನಾಮೋಚ್ಚಾರಣೆ ಮಾಡಿದರೂ ಸಾಕು. ಅವನು ಸಹ ಸ್ವರ್ಗ ಪಡೆಯುತ್ತಾನೆ.

**ಕ್ಷಿತಾ ಭಾವಯತೇ ಮರ್ತ್ಯಾ ಗಾಂಸ್ತಾರಯತೇಪ್ಯಧಃ ।**
**ದಿವಿ ತಾರಯತೇ ದೇವಾನ್ ಗಂಗಾ ತ್ರಿಪಥಗಾ ಸ್ಮೃತಾ ॥**

ಭೂಮಿಯಲ್ಲಿ ಮನುಷ್ಯರನ್ನೂ, ಪಾತಾಳದಲ್ಲಿ ಸರ್ಪಗಳನ್ನೂ ಅಂತರಿಕ್ಷದಲ್ಲಿ ದೇವತೆಗಳನ್ನೂ ಉದ್ಧಾರಮಾಡುವದರಿಂದ ಗಂಗೆಗೆ ತ್ರಿಪಥಗಾ (ಮೂರು ಲೋಕಗಳಲ್ಲಿ ಹೋಗುವವಳು) ಎಂದು ಹೆಸರು ಬಂದಿದೆ.

**ವಿಷ್ಣು ಪಾದಾಗ್ರಸಂಭೂತೇ ಗಂಗೇ ತ್ರಿಪಥಗಾಮಿನಿ ।**
**ಧರ್ಮದ್ರವೇತಿವಿಖ್ಯಾತೇ ಪಾಪಂ ಮೇ ಹರ ಜಾಹ್ನವಿ ॥**

ವಿಷ್ಣುವಿನ ಕಾಲಿನ ನೀರಿನಿಂದ ಹುಟ್ಟಿ ಪವಿತ್ರಳಾದ ಆಕಾಶದಲ್ಲಿ ಹರಿಯುವ, ಧರ್ಮದ ದ್ರವವನ್ನು ಹರಿಸುವ ಜಾಹ್ನವಿಯೆ! ನನ್ನನ್ನು ಪಾವನಮಾಡು.

**ವಿಷ್ಣುಪಾದ ಪ್ರಸೂತಾಸಿ ವೈಷ್ಣವೀ ವಿಷ್ಣುಪೂಜಿತಾ ।**
**ತ್ರಾಹಿ ಮಾಮೇನಸಸ್ತಸ್ಮಾದಾಜನ್ಮಮರಣಾಂತಿಕಾತ್ ॥**

ಎಲೈ ಜಾಹ್ನವಿಯೇ! ನೀನು ವಿಷ್ಣುವಿನ ಪಾದದಿಂದ ಹುಟ್ಟಿದ್ದೀಯೆ. ವಿಷ್ಣುವಿನಿಂದ ಗೌರವಿತಳಾಗಿದ್ದೀಯೇ, ಹುಟ್ಟಿದ ಮೊದಲು ಸಾಯುವವರೆಗೂ ಮಾಡಿದ ಪಾಪವನ್ನು ಪರಿಹರಿಸಿ ಕಾಪಾಡು.

**ಶ್ರದ್ಧಯಾ ಧರ್ಮಸಂಪೂರ್ಣೇ ಶ್ರೀಮತಾ ರಜಸಾ ಚ ತೇ ।**
**ಅಮೃತೇನ ಮಹಾದೇವಿ ಭಾಗೀರಥಿ ಪುನೀಹಿ ಮಾಂ ॥**

ಧರ್ಮನಿಷ್ಠಳಾದ ಗಂಗೆಯೇ! ಶ್ರದ್ಧೆಯಿಂದಲೂ ರಜೋಗುಣದಿಂದಲೂ ಕೂಡಿರುವ ನಿನ್ನ ನೀರಿನಿಂದ ನನ್ನನ್ನು ಪವಿತ್ರನನ್ನಾಗಿ ಮಾಡು.

**ತ್ರಿಭಿಃ ಶ್ಲೋಕವರೈರೇಭಿರ್ಯಃ ಸ್ನಾಯಾಜ್ಜಾಹ್ನವೀಜಲೇ ।**
**ಜನ್ಮಕೋಟಿಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥**

ಈ ಮೂರು ಶ್ಲೋಕಗಳನ್ನು ಹೇಳಿಕೊಂಡು ಗಂಗಾಜಲದಲ್ಲಿ ಸ್ನಾನಮಾಡಿದರೆ ಕೋಟಿ ಜನ್ಮಗಳ ಪಾಪಗಳೂ ನಾಶವಾಗುತ್ತವೆ. ಸಂಶಯವಿಲ್ಲ.

**ಮೂಲಮಂತ್ರಂ ಪ್ರವಕ್ಷ್ಯಾಮಿ ಜಾಹ್ನವ್ಯಾ ಹರಿಭಾಷಿತಂ ।**
**ಸಕೃಜ್ಜಪಾನ್ನರಃ ಪೂತೋ ವಿಷ್ಣುದೇಹೇ ಪ್ರತಿಷ್ಠತಿ ॥**

ಹರಿಯು ಹೇಳಿರುವ ಜಾಹ್ನವಿಯ ಮೂಲಮಂತ್ರವನ್ನು ಹೇಳುತ್ತೇನೆ. ಒಂದು ಬಾರಿ ಹೇಳಿದ ಮಾತ್ರದಿಂದಲೇ ಮನುಷ್ಯನು ಪವಿತ್ರನಾಗಿ ವಿಷ್ಣು ದೇಹದಲ್ಲಿ ಸೇರುತ್ತಾನೆ.

**ಮಂತ್ರಶ್ಚಾಯಂ-ಓಂ-ನಮೋ ಗಂಗಾಯೈ ।**
**ವಿಶ್ವರೂಪಿಣ್ಯೈ ನಾರಾಯಣ್ಯೈ ನಮೋ ನಮಃ ॥**

ಇದು ಆ ಮಂತ್ರವು ''ಓಂ । ವಿಶ್ವರೂಪಿಣಿಯಾದ, ನಾರಾಯಣಿಯಾದ ಗಂಗೆಗೆ ನಮಸ್ಕಾರವು''. ಗಂಗಾತೀರದಲ್ಲಿಯ ಮಣ್ಣನ್ನು ತಲೆಯ ಮೇಲೆ ಧರಿಸಿದರೂ ಎಲ್ಲ ಪಾಪ ನಾಶ. ಗಂಗೆಯ ನೀರಿನ ತೆರೆಗಳ ಮೇಲೆ ಹಾಯ್ದು ಬಂದ ಗಾಳಿ ಮೈಗೆ ತಾಗಿದರೂ ಮಾನವ ಪರಿ ಪೂತನಾಗುತ್ತಾನೆ. ಪಿತೃಗಳು, ಬಾಂಧವರು, ಅನಾಥರು, ಗುರುಗಳು, ಇವರ ಅಸ್ಥಿಯನ್ನು (ಮೂಳೆ) ಗಂಗೆಯಲ್ಲಿ ಹಾಕಬೇಕು. ಅದರಿಂದ ಅವರಿಗೆ ಸ್ವರ್ಗಲೋಕ ಪ್ರಾಪ್ತಿ ಆಗುವದು.

**'ಗಂಗಾ ಗಂಗೇತಿ ಯೋ ಬ್ರೂಯಾದ್ ।'**
**ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವ ಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥**

ನೂರಾರು ಯೋಜನ ದೂರದಲ್ಲಿದ್ದರೂ ಕೂಡ 'ಗಂಗಾ ಗಂಗಾ' ಎಂದು ಉಚ್ಚರಿಸಿದರೆ ಪಾಪಮುಕ್ತರಾಗಿ ವಿಷ್ಣುಲೋಕ ಹೊಂದುತ್ತಾರೆ. ಗಂಗಾ ಸ್ನಾನಕ್ಕೆ ಹೋಗುವವರಿಗೆ ದ್ರವ್ಯವನ್ನು ಕೊಟ್ಟು ಯಾತ್ರೆಗೆ ಅನುಕೂಲ ಮಾಡಿದವರು ಕೂಡ ಭಾಗೀರಥಿ ಸ್ನಾನದ ಫಲ ಹೊಂದುತ್ತಾರೆ. ಸ್ನಾನ ಮಾಡುವವನಿಗೂ, ಮಾಡಲು ಪ್ರೇರಿಸಿದವನಿಗೂ ಗಂಗಾ ಸ್ನಾನದ ಫಲ ದೊರಕುವದು.

**ದ್ವಿಜರು :-** ಆ ಗಂಗೆಯು ಎಲ್ಲಿ ಹುಟ್ಟಿದಳು? ಅವಳ ಆಕಾರವೇನು? ಅವಳು ಇಷ್ಟೊಂದು ಪರಿಶುದ್ಧಳಾಗಿರಲು ಕಾರಣವೇನು?

**ವ್ಯಾಸ :-** ಪೂರ್ವಕಾಲದಲ್ಲಿ ಬ್ರಹ್ಮಲೋಕಕ್ಕೆ ಹೋಗಿದ್ದ - ಭಗವಾನ್ ನಾರದ. ಬ್ರಹ್ಮನಿಗೆ ನಮಸ್ಕರಿಸಿ ಪ್ರಶ್ನೆ ಕೇಳಿದ.

**ನಾರದ :-** ಎಲೈ ತಂದೆ! ಹರಿ ಹರ ಬ್ರಹ್ಮದೇವರು ಈ ಮೂವರಿಗೂ ಇಷ್ಟವಾದ ಯಾವದಾದರೂ ಒಂದು ಪವಿತ್ರ ವಸ್ತುವನ್ನು ಈ ಪ್ರಪಂಚದಲ್ಲಿ ಸೃಷ್ಟಿ ಮಾಡಿರುವೆಯಾ?

**ಬ್ರಹ್ಮ :-** ನಾನು ಸೃಷ್ಟಿ ಮಾಡುವಾಗ ಪ್ರಕೃತಿತತ್ವಕ್ಕೆ ಅಭಿಮಾನಿಯಾದ ಮಹಾಲಕ್ಷ್ಮೀ ದೇವಿಯನ್ನು ಪ್ರಾರ್ಥಿಸಿದೆ. ''ತಾಯಿ, ನನ್ನ ಸೃಷ್ಟಿಗೆ ನೀನೇ ಮಾರ್ಗದರ್ಶಕಳಾಗು. ನಿನ್ನಿಂದಲೇ ನಾನು ಈ ಸಂಸಾರವನ್ನು ಸೃಷ್ಟಿಸುತ್ತೇನೆ'' ಎಂದು ನನ್ನ ಬಿನ್ನಹ ಮನ್ನಿಸಿ, ಆ ಪ್ರಕೃತಿದೇವಿಯಾದ ಲಕ್ಷ್ಮೀ , ಗಾಯತ್ರೀ, ಸರಸ್ವತೀ, ಸ್ವರ್ಗಲಕ್ಷ್ಮೀಯು, ಜ್ಞಾನವಿದ್ಯಾ, ಉಮಾ, ಶಕ್ತಿ, ಧರ್ಮದ್ರವಾ ಎಂದು ಏಳು ಭಾಗವಾದಳು. ಗಾಯತ್ರಿಯಿಂದ ವೇದಗಳು, ಸ್ವಸ್ತಿ, ಸ್ವಾಹಾ, ದೀಕ್ಷಾ ಎಲ್ಲರೂ ಹುಟ್ಟಿದರು. ಯಜ್ಞದಲ್ಲಿ ಈ ಗಾಯತ್ರಿಯನ್ನು ಮಾತೃಕಾವರ್ಣದೊಡನೆ ಉಚ್ಚರಿಸಬೇಕು. ದೇವತೆಗಳು ಯಜ್ಞದಲ್ಲಿ ಸುಧೆಯನ್ನು ಪಡೆದು, ಅದನ್ನು ಭೂಮಿಯಲ್ಲಿ ಹರಿಬಿಟ್ಟರು. ಆಗ ಭೂಮಿಯು ಸಸ್ಯ, ಔಷಧಿ, ಫಲ ಮೂಲವುಳ್ಳದ್ದಾಯಿತು. ಅದರ ಭಕ್ಷಣದಿಂದ ಮಾನವರು ತುಷ್ಟರಾದರು ನಂತರ ಲಕ್ಷ್ಮಿಯು ಭಾರತೀ ರೂಪದಿಂದ ಪ್ರಾದುರ್ಭೂತಳಾಗಿ ಸರ್ವರ ಮುಖದಲ್ಲಿದ್ದುಕೊಂಡು ಸಮಸ್ತ ಕಾರ್ಯ ನಿರ್ವಹಿಸುತ್ತಿರುವಳು. ಸ್ವರ್ಗಲಕ್ಷ್ಮಿಯಿಂದ ವಸ್ತ್ರ, ವಡವೆ, ಐಶ್ವರ್ಯ, ರಾಜ್ಯಗಳು ದೊರಕುತ್ತವೆ. ಇವಳೇ ಒಂದು ರೂಪದಿಂದ ಶ್ರೀಹರಿಯ ಪ್ರೇಯಸಿಯಾಗಿದ್ದಾಳೆ. ಉಮಾದೇವಿಯ ಸಂಬಂಧದಿಂದಲೇ ಶಂಭುವು ಸರ್ವಜ್ಞನಾಗಿದ್ದಾನೆ. ಆ ಉಮೆಯು ಜ್ಞಾನದ ತಾಯಿ. ಶಕ್ತಿ ಎಂಬ ಪ್ರಕೃತಿಯು ಇನ್ನೊಂದು ರೂಪಕ್ಕೆ ವರ್ಣಿಕಾ ಎಂದು ಹೆಸರು. ಜಗತ್ತಿನ ಸ್ಥಿತಿ ಸಂಹಾರವನ್ನು ಈ ಮಹಾತಾಯಿಯೇ ಮಾಡುವಳು. ಮಧು ಕೈಟಭ, ಮಹಿಷಾಸುರ, ಶುಂಭ, ನಿಶುಂಭ, ರಕ್ತಬೀಜಾಸುರಾದಿ ದೈತ್ಯಾಧಮರನ್ನೆಲ್ಲ ದಮನ ಮಾಡಿದ್ದು ಮಹಾಲಕ್ಷ್ಮಿಯ ಇದೇ ವಣಿದಕಾ ಎಂಬ ವಿಶಿಷ್ಟರೂಪ. ಕೊನೆಯದಾದ ಶ್ರೀದೇವಿಯ ಧರ್ಮದ್ರವ ಎಂಬ ರೂಪವೇ ಈ ಗಂಗೆ. ಸರ್ವಶ್ರೇಷ್ಠ ಧರ್ಮಗಳು ದ್ರವರೂಪದಿಂದ ಕರಗಿ ಗಂಗಾ ರೂಪದಿಂದ ಹರಿದಿರುತ್ತವೆ.

ಹಿಂದೆ ಬಲಿಚಕ್ರವರ್ತಿಯು ಯಜ್ಞವನ್ನು ಮಾಡಿದಾಗ, ವಾಮನರೂಪಿಯಾದ ವಿಷ್ಣುವಿಗೆ ಮೂರುಪಾದ ಭೂಮಿಯನ್ನು ಕೊಡಮಾಡಿದ. ಆಗ ವಿಷ್ಣುವು ವಿರಾಡ್ರೂಪಿಯಾಗಿ ಎರಡು ಕಾಲಿನಿಂದ ಬ್ರಹ್ಮಾಂಡವನ್ನು ಆವರಿಸಿದ. ಮೂರನೆಯ ಪಾದವು ಬ್ರಹ್ಮಾಂಡದಲ್ಲಿ ಹಿಡಿಯದೇ ನನ್ನ ಎದುರಿಗೆ ನಿಂತಿತು. ಆಗ ನಾನು 'ಮಹಾಲಕ್ಷ್ಮಿಯ ಏಳನೇಯ ರೂಪ- ಈ ಧರ್ಮದ್ರವದಿಂದ ಶ್ರೀವಿಷ್ಣುವಿನ ಪಾದವನ್ನು ತೊಳೆದು ಪೂಜೆ ಮಾಡಿದೆ. ಆಗ ಅದು ವಿಷ್ಣು ಪಾದೋದಕವೆನಿಸಿತು. ಆ ಪಾದ ಪ್ರಕ್ಷಾಲನದ ನೀರು ಹೇಮಕೂಟದಲ್ಲಿ ಬಿದ್ದಿತು. ಹೇಮಕೂಟದ ಶಿಖರದಿಂದ ಶಂಕರನ ತಲೆಯ ಮೇಲೆ ಸುರಿದು ಅವನ ಜಟಾಜೂಟದ ಒಳಗೆ ಸುತ್ತುತ್ತಲಿದ್ದಿತು. ಅನಂತರ ಭಗೀರಥನು ಶಿವನನ್ನು ಕುರಿತು ತಪಸ್ಸು ಮಾಡಿದನು. ಹಾಗೂ ಅಲ್ಲಿ ಶ್ರೇಷ್ಠವಾದ ಐರಾವತವನ್ನು ಅವನು ಆರಾಧಿಸಿದನು. ಆಗ ಆ ಐರಾವತವು ತನ್ನ ಕೋರೆದಾಡೆಗಳಿಂದ ಹೊಡೆದು, ತಿವಿದು ಶಿವನ ಜಟಾಜೂಟದಲ್ಲಿ ಮೂರು ರಂಧ್ರಗಳನ್ನು ಮಾಡಿತು.' ಆ ಮೂರೂ ಬಿಲಗಳಿಂದ ಭಾಗೀರಥಿಯ ಪ್ರವಾಹವು ಹೊಮ್ಮಿದ್ದರಿಂದ ಅದಕ್ಕೆ 'ತ್ರಿಸ್ರೋತಾ', 'ತ್ರಿಪಥಗಾ' ಎಂದು ಹೆಸರು ಬಂದಿದೆ. ಹೀಗೆ ಗಂಗೆ ಹರಿ, ಹರ, ಬ್ರಹ್ಮ, - ಮೂವರೂ ದೇವೋತ್ತಮರ ಸಂಬಂಧದಿಂದ ಪವಿತ್ರಳಾಗಿದ್ದಾಳೆ. ಗಂಗಾ ಸ್ನಾನ, ಪಾನ, ಧ್ಯಾನಗಳಿಂದ ಬರುವ ಪುಣ್ಯ ಯಾವ ಯಜ್ಞ, ಮಂತ್ರ, ಜಪ, ತಪ, ಹೋಮ, ದೇವತಾರ್ಚನೆಗಳಿಂದಲೂ ಬರಲಾರದು. ಧರ್ಮ, ಪುಣ್ಯ ಗಳಿಸಲು ಇದಕ್ಕಿಂತ ಬೇರೆ ಉಪಾಯವಿಲ್ಲ. ಆದ್ದರಿಂದ ನಾರದ, ನೀನು ಗಂಗೆಯ ಸೇವೆ ಮಾಡು. ಈ ಗಂಗಾದೇವಿಯ ನೀರಿನ ಸ್ಪರ್ಶವು ಮೂಳೆಗಳಿಗೆ ಆಗಿದ್ದರಿಂದ ಭಗೀರಥನ ಪಿತಾಮಹರಾದ ಎಲ್ಲ ಸಗರ ಕುಮಾರರು ಉದ್ಧೃತರಾಗಿ ಸ್ವರ್ಗ ಪಡೆದರು.

ಹೀಗೆ ಬ್ರಹ್ಮದೇವರ ಮುಖದಿಂದ ಗಂಗೆಯಮಹಿಮೆಯನ್ನು ಕೇಳಿ, ನಾರದನು ಗಂಗಾದ್ವಾರದಲ್ಲಿ ನಿಂತು ತಪಸ್ಸನ್ನು ಮಾಡಿ ದಿವ್ಯಗತಿಯನ್ನು ಪಡೆದನು.

ಈ ಗಂಗಾ ಮಹಾತ್ಮೆಯನ್ನು ಕೇಳಿದವರು, ಹೇಳಿದವರು, ಗಂಗಾಸ್ನಾನದ ಫಲವನ್ನು ಹೊಂದುತ್ತಾರೆ. ದಾನ, ಧ್ಯಾನ, ಜಪ, ಹೋಮ ದೇವತಾರ್ಚನೆ, ಮಂತ್ರ ಪಠಣ ಮುಂತಾಗಿ ಯಾವದೇ ಪುಣ್ಯ ಕರ್ಮ ಮಾಡಿದರೂ ಗಂಗಾ ತೀರದಲ್ಲಿಯೇ ಮಾಡಬೇಕು. ಆದರಿಂದ ಅನಂತ ಪುಣ್ಯ; ಅಕ್ಷಯ ಫಲ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಗಂಗಾ ಮಹಾತ್ಮೆ ಎಂಬ ಅರವತ್ತನೇಯ ಅಧ್ಯಾಯ ಮುಗಿದುದು*

—o—

**ಪುಲಸ್ತ್ಯ:-** ವೇದವ್ಯಾಸರ ಶಿಷ್ಯನಾದ ಸಂಜಯನು ತನ್ನ ಗುರುಗಳಾದ ವ್ಯಾಸಮಹರ್ಷಿಗಳಿಗೆ ನಮಸ್ಕರಿಸಿ ಪ್ರಶ್ನೆ ಮಾಡಿದನು.

**ಸಂಜಯ :-** ಗುರುಗಳೇ, ದೇವರ ಪೂಜೆಯ ಉಪಾಯವನ್ನೂ ಮತ್ತು ಪೂಜೆಯ ಕ್ರಮವನ್ನೂ ಹೇಳಿರಿ. ಮೊದಲು ಯಾರನ್ನು ಪೂಜಿಸಬೇಕು? ಮಧ್ಯದಲ್ಲಿ, ಕೊನೆಯಲ್ಲಿ ಯಾರನ್ನು ಪೂಜಿಸಬೇಕು? ಆ ದೇವತೆಗಳ ಮಹಿಮೆ ಏನು!

**ವ್ಯಾಸ :-** ಮೊದಲು ವಿಘ್ನ ಪರಿಹಾರಕ್ಕಾಗಿ ಗಣಪತಿಯನ್ನು ಪೂಜಿಸಬೇಕು. ಹಿಂದೆ ಪಾರ್ವತಿಯು ಪರಮೇಶ್ವರನಿಂದ ಇಬ್ಬರು ಮಕ್ಕಳನ್ನು ಹೆತ್ತಳು. ಒಬ್ಬನು ಸ್ಕಂದ, ಎರಡನೆಯವನು ಗಣಪತಿ. ದೇವತೆಗಳಿಗೆ ಆ ಇಬ್ಬರೂ ಶಿವಕುಮಾರರನ್ನು ಕಂಡು ಪರಮಾನಂದವಾಯಿತು. ಅವರು ಅಮೃತದಲ್ಲಿಯೇ ಮೋದಕಗಳನ್ನು ಮಾಡಿ ಪಾರ್ವತಿಯ ಕೈಯಲ್ಲಿ ಕೊಟ್ಟರು, ಅದನ್ನು ನೋಡಿ ಅವರಿಬ್ಬರೂ ಮಕ್ಕಳು ಆ ಮೋದಕವನ್ನು ಕೊಡಲು ತಾಯಿಯನ್ನು ಪ್ರಾರ್ಥಿಸಿದರು. ಆಗ ಪಾರ್ವತಿಯು ಆಶ್ಚರ್ಯಗೊಂಡು ತನ್ನ ಇಬ್ಬರೂ ಮಕ್ಕಳಿಗೆ ನುಡಿದಳು-

**ಪಾರ್ವತಿ :-** ಮಕ್ಕಳೆ, ಈ ಮೋದಕವನ್ನು ದೇವತೆಗಳು ಅಮೃತದಿಂದ ನಿರ್ಮಿಸಿದ್ದಾರೆ. ಇದಕ್ಕೆ 'ಮಹಾ ಬುದ್ಧಿ' ಎಂದು ಹೆಸರು. ಇದನ್ನು ಮೂಸಿ ನೋಡುವದರಿಂದಲೂ ನರನು ಅಮರನಾಗುತ್ತಾನೆ. ಇದರ ಭಕ್ಷಣದಿಂದ ಸರ್ವ ಶಾಸ್ತ್ರ ವಿದ್ಯೆಗಳಲ್ಲಿಯೂ ನಿಪುಣನೆನಿಸುವನು. ಚಿತ್ರಕಾಲಾಚಾತುರ್ಯವೂ, ಲೇಖನ ಕೌಶಲ್ಯವೂ ಅವನ ಸೊತ್ತಾಗುವದು. ಜ್ಞಾನ ವಿಜ್ಞಾನಗಳು ಅವನಿಗೆ ಕರತಲಾಮಲಕವಾಗುವವು. ಅವನೊಬ್ಬ ಸರ್ವಜ್ಞ ಮೂರ್ತಿಯೇ ಆಗುವದರಲ್ಲಿ ಸಂದೇಹವಿಲ್ಲ. ಇದರಲ್ಲಿ ನಮ್ಮಿಬ್ಬರಿಗೂ ಪ್ರೀತ್ಯಾಸ್ಪದನಾದ ಒಬ್ಬ ಮಗನಿಗೆ ಇದನ್ನು ಕೊಡುತ್ತೇನೆ. ಸ್ನಾನ ಮಾಡಿ ಬನ್ನಿ.

ತಾಯಿಯ ಈ ಮಾತನ್ನು ಕೇಳಿ ಮೊದಲು ಹೊರಟವ ಸ್ಕಂದ. ಹಾರುವ ಹಕ್ಕಿಯಾದ ನವಿಲೇ ಅವನ ವಾಹನ. ಅವನು ಮೂರೂಲೋಕಗಳಲ್ಲಿಯ ಎಲ್ಲತೀರ್ಥಗಳಲ್ಲಿ ಸ್ನಾನ ಮಾಡಿಕೊಂಡು ಬರಲು ಅವಸರದಿಂದ ಹೊರಟ. ಇತ್ತ ಗಣೇಶನು ಮಾತ್ರ ಅಲ್ಲಿಯೇ .ಗಂಗೆಯಲ್ಲಿ ಸ್ನಾನ ಮಾಡಿ ಕೈ ಮುಗಿದು ನಿಂತ ತಂದೆಯ ಎದುರಿಗೆ. ಅಷ್ಟರಲ್ಲಿ ಸ್ಕಂದನೂ ಅಲ್ಲಿಗೆ ಬಂದ.

**ಪಾರ್ವತಿ :-** ಸ್ಕಂದ, ನೀನು ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದೆ. ಎಲ್ಲ ದೇವತೆಗಳನ್ನು ಪೂಜಿಸಿರುವೆ. ಎಲ್ಲ ಮಂತ್ರ, ವ್ರತ, ಯೋಗ, ಜಪ, ತಪಗಳನ್ನು ಮಾಡಿರುವೆ. ಆದರೆ ಇದಾವುದೂ ತಾಯಿ ತಂದೆಗಳ ಪೂಜೆಯ ಹದಿನಾರರ ಒಂದು ಭಾಗವನ್ನು ಕೂಡ ಹೋಲುವದಿಲ್ಲ. ನನಗೆ ಎಲ್ಲ ಮಕ್ಕಳಿಗಿಂತ, ತಾಯಿ ತಂದೆಗಳ ಪ್ರದಕ್ಷಿಣೆ ನಮಸ್ಕಾರ ಮಾಡಿದ ಈ ಗಣಪತಿಯೆ ಪ್ರಿಯ. ಸರ್ವ ಶ್ರೇಷ್ಠ ಎಂದು ನಿಶ್ಚಯಿಸಿದ್ದೇನೆ. ಆದುದರಿಂದ ಈ ಮೋದಕವನ್ನು ಈ ವಿನಾಯಕನಿಗೆ ನಾನು ನೀಡುತ್ತೇನೆ. ಇದೇ ಕಾರಣದಿಂದ ಇಲ್ಲಿಯ ಎಲ್ಲ ಯಜ್ಞ, ವೇದಪಾಠ, ಪೂಜೆ, ಶಾಸ್ತ್ರ ಪ್ರವಚನ, ಸ್ತೋತ್ರ ಪಠನ, ಮಂಗಲಕಾರ್ಯ ಮೊದಲಾದವುಗಳಲ್ಲಿ ಈ ಗಣಪತಿಗೆ ಮೊದಲು ಪೂಜೆ ಸಲ್ಲಿಸಬೇಕು.

ಪಾರ್ವತಿಯೊಂದಿಗೆ ಪರಮೇಶ್ವರನೂ ವರ ನೀಡಿದ. ''ಮೊದಲು ಇವನ ಪೂಜೆಯಿಂದಲೇ ಎಲ್ಲ ದೇವತೆಗಳಿಗೂ ಪಿತೃಗಳಿಗೂ ಪೂಜೆ ಸಲ್ಲಲಿ'' ಎಂದು.

**ವ್ಯಾಸ :-** ಆದುದರಿಂದ ಎಲ್ಲ ಯಜ್ಞ, ಯಾಗ, ಪೂಜೆ ಮುಂತಾದ ಕಾರ್ಯಗಳಿಗೆ ಮೊದಲು ಗಣಪತಿಯನ್ನೇ ಪೂಜಿಸಬೇಕು. ಇದು ಪಾರ್ವತೀ ಪರಮೇಶ್ವರರ ಆಜ್ಞೆ. ಹೀಗೆ ಎಲ್ಲ ದೇವತೆಗಳ ಸಮಕ್ಷಮದಲ್ಲಿಯೇ ಪಾರ್ವತೀ ಪರಮೇಶ್ವರರು ವಿನಾಯಕನಿಗೆ ಗಣಾಧಿಪತ್ಯವನ್ನು ಕೊಟ್ಟರು. ಎಲ್ಲ ದೇವತೆಗಳೂ ತಮ್ಮ ಇಷ್ಟ ಪ್ರಾಪ್ತಿಗಾಗಿ ಸ್ವರ್ಗ, ಮೋಕ್ಷಾದಿ ಪುಣ್ಯ, ಫಲಲಾಭಕ್ಕಾಗಿ ಗಣಪತಿಯನ್ನು ಪೂಜಿಸಿದರು. ಈ ಗಣಪತಿಯನ್ನು ಚತುರ್ಥಿಯದಿನ ಲಿಂಗ ಅಥವಾ ಮೂರ್ತಿಚಿತ್ರ ಯಾವದಾದರೊಂದು ರೂಪದಿಂದ ಪೂಜಿಸಬೇಕು. ಆ ಪೂಜೆಯ ಸಮಯದಲ್ಲಿ ಈ ಮಂತ್ರ ಹೇಳಬೇಕು.

**ಗಣಾಧಿಪ ನಮಸ್ತುಭ್ಯಂ ಸರ್ವವಿಘ್ನಪ್ರಶಾಂತಿದ ।**
**ಉಮಾನಂದ ಪ್ರದ ಪ್ರಾಜ್ಞ ತ್ರಾಹಿ ಮಾಂ ಭವಸಾಗರಾತ್ ॥**

ಗಣಾಧಿಪನೇ ನಿನಗೆ ನಮಸ್ಕಾರ. ನೀನು ಸರ್ವ ವಿಘ್ನಗಳನ್ನು ಪರಿಹರಿಸುವಿ. ಉಮಾದೇವಿಗೆ ಆನಂದ ನೀಡುವಿ. ನೀನು ಸರ್ವಜ್ಞ, ಈ ಭವ ಸಮುದ್ರದಿಂದ ನನ್ನನ್ನು ಪಾರುಮಾಡು.

**ಹರಾನಂದಕರ ಧ್ಯಾನ ಜ್ಞಾನವಿಜ್ಞಾನದ ಪ್ರಭೋ ।**
**ವಿಘ್ನರಾಜ ನಮಸ್ತುಭ್ಯಂ ಸರ್ವದೈತ್ಯೈಕಸೂದನ ॥**

ಜ್ಞಾನವಿಜ್ಞಾನಗಳನ್ನು ಕೊಡು. ಮಹಾ ಪ್ರಭುವೇ ಪರಮೇಶ್ವರನಿಗೆ ಆನಂದವನ್ನುಂಟುಮಾಡುವ ನಿನಗೆ ನಮಸ್ಕಾರ. ಎಲ್ಲ ವಿಘ್ನಗಳನ್ನು ಪರಿಹರಿಸುವ ನೀನೇ ದೈತ್ಯರನ್ನೂ ಸಂಹಾರ ಮಾಡುವೆ.

**ಸರ್ವಪ್ರೀತಿಪ್ರದ ಶ್ರೀದ ಸರ್ವಯಜ್ಞೈಕರಕ್ಷಕ ।**
**ಸರ್ವಾಭೀಷ್ಟಪ್ರದಂ ಪ್ರೀತ್ಯಾ ನಮಾಮಿ ತ್ವಾಂ ಗಣಾಧಿಪ ॥**

ಸರ್ವರಿಗೂ ಸಂತೋಷವನ್ನುಂಟು ಮಾಡುವಿ. ಐಶ್ವರ್ಯ ನೀಡುವೆ. ಎಲ್ಲ ಯಜ್ಞಗಳ ಸಂರಕ್ಷಕ ನೀನೆ. ಎಲ್ಲರ ಅಭೀಷ್ಟ ನೆರವೇರಿಸುವ ನಿನಗೆ ನಮಸ್ಕಾರ.

**ಏಭಿರ್ಮಂತ್ರೈರ್ಗಣಾಧ್ಯಕ್ಷಂ ಪೂಜಯೇದ್ಯೋ ನರೋ ಮುದಾ ।**
**ಸರ್ವ ಪಾಪಾದ್ವಿನಿರ್ಮುಕ್ತೋ ಸುರಲೋಕೇ ಮಹೀಯತೇ ॥**

ಈ ಮಂತ್ರದಿಂದ ಗಣಪತಿಯನ್ನು ಪೂಜಿಸುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ಸ್ವರ್ಗದಲ್ಲಿ ಗೌರವಿಸಲ್ಪಡುವನು. ಇದು ಗಣಪತಿಯ ಮಂತ್ರ!

ಈಗ **ಗಣಪತಿಯ ಸ್ತೋತ್ರ** ಹೇಳುತ್ತೇನೆ.

**ಗಣಪತಿರ್ವಿಘ್ನರಾಜೋ ಲಂಬತುಂಡೋ ಗಜಾನನಃ ।**
**ದ್ವೈಮಾತುರಶ್ಚ ಹೇರಂಬ ಏಕದಂತೋ ಗಣಾನನಃ ॥**
**ವಿನಾಯಕಶ್ಚಾರುಕರ್ಣಃ ಪಶುಪಾಲೋ ಭವಾತ್ಮಜಃ ।**
**ದ್ವಾದಶೈತಾನಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ॥**

**ವಿಶ್ವಂ ತಸ್ಯ ಭವೇದ್ವಶ್ಯಂ ನ ಚ ವಿಘ್ನಂ ಭವೇತ್ ಕ್ವಚಿತ್ ।**
**ಮಹಾಪ್ರೇತಾಃ ಶಮಂ ಯಾಂತಿ ಪೀಡ್ಯತೇ ವ್ಯಾಧಿಭಿರ್ನಚ ।**
**ಸರ್ವಪಾಪಾದ್ವಿನಿರ್ಮುಕ್ತೋ ಹ್ಯಕ್ಷಯಂ ಸ್ವರ್ಗಮಶ್ನುತೇ ॥**

ಗಣಪತಿ, ವಿಘ್ನರಾಜ, ವಕ್ರತುಂಡ, ಗಜಾನನ, ದ್ವೈಮಾತುರ, ಹೇರಂಬ, ಏಕದಂತ, ವಿನಾಯಕ, ಚಾರುಕರ್ಣ, ಪಶುಪಾಲ, ಭವಾತ್ಮಜ, ಗಣಾಧಿಪ- ಈ ಹನ್ನೆರಡು ಗಣೇಶನ ನಾಮಗಳನ್ನು ಪ್ರಾತಃಕಾಲದಲ್ಲಿ ಎದ್ದು ಪಠಿಸಬೇಕು. ಅವನಿಗೆ ವಿಶ್ವವೇ ಕೈ ವಶವಾಗುವದು. ಎಂದೂ ಯಾವ ಕಾರ್ಯದಲ್ಲೂ ವಿಘ್ನ ಉಂಟಾಗುವುದಿಲ್ಲ. 'ಓಂ ನಮೋ ಗಣಪತಯೇ ನಮಃ' ಎಂಬ ಗಣಪತಿ ಅಷ್ಟಾಕ್ಷರೀ ಮಂತ್ರ ನಿತ್ಯವೂ ಜಪಿಸಬೇಕು. ಇದರಿಂದ ಭೂತಪ್ರೇತಗಳ ಬಾಧೆ ಎಂದೂ ಆಗುವದಿಲ್ಲ. ರೋಗ ರುಜಿನಗಳ ಉಪದ್ರವ ಪೀಡಿಸುವುದಿಲ್ಲ. ಸರ್ವ ಪಾಪಗಳು ಪರಿಹಾರವಾಗಿ ಅಕ್ಷಯ ಸ್ವರ್ಗವು ದೊರೆಯುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದೇವರ ಪೂಜೆಯ ಕ್ರಮ ಎಂಬ ಆರವತ್ತೊಂದನೇಯ ಅಧ್ಯಾಯ ಮುಗಿದುದು*



## ಗಣಪತಿಯ ಮಹಿಮಾ

**ಅಧ್ಯಾಯ - ೬೨**

**ವ್ಯಾಸ ಉವಾಚ**

**ಪುನರನ್ಯತ್ಪ್ರವಕ್ಷ್ಯಾಮಿ ಸ್ತೋತ್ರಂ ಗಣಾಧಿಪಸ್ಯ ಚ ।**
**ಸರ್ವಸಿದ್ಧಿಕರಂ ಪೂತಂ ಸರ್ವಾಭೀಷ್ಟ ಫಲಪ್ರದಂ ॥**

**ವ್ಯಾಸ :-** ಗಣಾಧಿಪನ ಮತ್ತೊಂದು ಸ್ತೋತ್ರವನ್ನೂ ಹೇಳುತ್ತೇನೆ. ಅದು ಪವಿತ್ರವೂ ಸಿದ್ಧಿಕರವೂ ಆಗಿ ಇಷ್ಟಾರ್ಥವನ್ನು ಕೊಡತಕ್ಕದ್ದಾಗಿರುತ್ತದೆ.

**ಏಕದಂತಂ ಮಹಾಕಾಯಂ ತಪ್ತಕಾಂಚನಸನ್ನಿಭಮ್ ।**
**ಲಂಬೋದರಂ ವಿಶಾಲಾಕ್ಷಂ ವಂದೇಽಹಂ ಗಣನಾಯಕಂ ॥**

ಒಂದು ದಂತವುಳ್ಳ, ದೊಡ್ಡ ದೇಹವುಳ್ಳ ಪುಟಕ್ಕೆ ಹಾಕಿದ ಬಂಗಾರದಂತಿರುವ, ಲಂಬೋದರನಾದ, ವಿಶಾಲವಾದ ಕಣ್ಣುಳ್ಳ ಗಣಪತಿಯನ್ನು ನಮಸ್ಕರಿಸುತ್ತೇನೆ.

**ಮುಂಜಕೃಷ್ಣಾಜಿನಧರಂ ನಾಗಯಜ್ಞೋಪವೀತಿನಂ ।**
**ಬಾಲೇಂದುಕಲಿಕಾಮೌಲಿಂ ವಂದೇಽಹಂ ಗಣನಾಯಕಂ ॥**

ಮೌಂಜಿ, ಕೃಷ್ಣಾಜಿನ, ನಾಗಯಜ್ಞೋಪವೀತಗಳನ್ನು ಧರಿಸಿರುವ, ಬಾಲ ಚಂದ್ರನನ್ನು ತಲೆಯಲ್ಲಿ ಹೊಂದಿರುವ ಗಣಪತಿಯನ್ನು ನಮಸ್ಕರಿಸುತ್ತೇನೆ.

**ಸರ್ವವಿಘ್ನಹರಂ ದೇವಂ ಸರ್ವವಿಘ್ನವಿವರ್ಜಿತಂ ।**
**ಮೂಷಕೋತ್ತಮಮಾರುಹ್ಯ ದೇವಾಸುರಮಹಾಹವೇ ॥**

ಎಲ್ಲ ವಿಘ್ನಗಳನ್ನು ನಾಶಮಾಡುವ, ವಿಘ್ನಗಳು ತನಗೆ ಇಲ್ಲದೇ ಇರುವ, ಯುದ್ಧದಲ್ಲಿ ಇಲಿಯಮೇಲೆ ಕುಳಿತ ಯುದ್ಧಮಾಡುವ,

**ಯೋದ್ಧುಕಾಮಂ ಮಹಾಬಾಹುಂ ವಂದೇಽಹಂ ಗಣನಾಯಕಂ ।**
**ಅಂಬಿಕಾಹೃದಯಾನಂದಂ ಮಾತೃಕಾಪರಿವೇಷ್ಟಿತಂ ॥**

ದೊಡ್ಡ ತೋಳುಗಳುಳ್ಳ ಗಣಪತಿಯನ್ನು ನಮಸ್ಕರಿಸುತ್ತೇನೆ. ಮಾತೃಗಳೆಂಬ ಗಣದಿಂದ ಕೂಡಿರುವ,

**ಭಕ್ತಪ್ರಿಯಂ ಮದೋನ್ಮತ್ತಂ ವಂದೇಽಹಂ ಗಣನಾಯಕಂ ।**
**ಚಿತ್ರರತ್ನವಿಚಿತ್ರಾಂಗಂ ಚಿತ್ರಾಮಾಲ್ಯಾವಿಭೂಷಣಂ ॥**

ಭಕ್ತರಲ್ಲಿ ಪ್ರೀತಿಯುಳ್ಳ, ಮದಿಸಿರುವ ಗಣಪತಿಯನ್ನು ನಮಸ್ಕರಿಸುತ್ತೇನೆ. ನಾನಾಬಗೆಯಾದ ರತ್ನಗಳಿಂದ ಅಲಂಕೃತನಾದ, ಚಿತ್ರವಾದ ಮಾಲೆಯನ್ನು ಹಾಕಿಕೊಂಡಿರುವ.

**ಕಾಮರೂಪಧರಂ ದೇವಂ ವಂದೇಽಹಂ ಗಣನಾಯಕಂ ।**
**ಗಜವಕ್ತ್ರಂ ಸುರಶ್ರೇಷ್ಠಂ ಚಾರುಕರ್ಣವಿಭೂಷಿತಂ ॥**

ಕಾಮರೂಪವನ್ನು ಹೊಂದಿರುವ ವಿನಾಯಕನನ್ನು ನಮಸ್ಕರಿಸುತ್ತೇನೆ. ಆನೆಯ ಮುಖವುಳ್ಳ, ದೇವಶ್ರೇಷ್ಠನಾದ, ಚೆನ್ನಾಗಿರುವ ಕಿವಿಗಳುಳ್ಳ.

**ಪಾಶಾಂಕುಶಧರಂ ದೇವಂ ವಂದೇಽಹಂ ಗಣನಾಯಕಂ ।**
**ಯಕ್ಷಕಿನ್ನರ ಗಂಧರ್ವೈಃ ಸಿದ್ಧ ವಿದ್ಯಾಧರೈಃ ಸದಾ ॥**

ಪಾಶ, ಅಂಕುಶಗಳನ್ನು ಧರಿಸಿರುವ ಗಣಪನನ್ನು ನಮಸ್ಕರಿಸುತ್ತೇನೆ. ಯಕ್ಷ, ಕಿನ್ನರ, ಕಿಂಪುರುಷ, ಗಂಧರ್ವ, ಸಿದ್ಧ, ವಿದ್ಯಾಧರ, ಇವರಿಂದ ಯಾವಾಗಲೂ ಹೊಗಳಲ್ಪಡುತ್ತಿರುವ ದೊಡ್ಡ ದೇಹವುಳ್ಳ ಗಣಪತಿಯನ್ನು ನಮಸ್ಕರಿಸುತ್ತೇನೆ.

**ಸ್ತೂಯಮಾನಂ ಮಹಾದೇವಂ ವಂದೇಽಹಂ ಗಣನಾಯಕಂ ।**
**ಗಣಾಷ್ಟಕಮಿದಂ ಪುಣ್ಯಂ ಭಕ್ತಿತೋ ಯಃ ಪಠೇನ್ನರಃ ॥**

ಈ ಗಣಪತಿಯ ಅಷ್ಟಕವನ್ನು ಭಕ್ತಿಯಿಂದ ಪಠಿಸಿದವನು ಎಲ್ಲ ಸಿದ್ಧಿಯನ್ನು ಹೊಂದಿ ರುದ್ರಲೋಕದಲ್ಲಿ ಸುಖಿಸುವನು. ಏಳು ಜನ್ಮದವರೆಗೂ ಬಡವನಾಗುವದೇ ಇಲ್ಲ.

**ಸರ್ವಸಿದ್ಧಿಮವಾಪ್ನೋತಿ ರುದ್ರಲೋಕೇ ಮಹೀಯತೇ ।**
**ನ ನಿಸ್ಸ್ವತಾಂ ತಥಾಭ್ಯೇತಿ ಸಪ್ತಜನ್ಮಸು ಮಾನವಃ ॥**

**ಯ ಇದಂ ಶೃಣುಯಾನ್ನಿತ್ಯಂ ಮಹಾನ್ ರಾಜಾ ಭವೇನ್ನರಃ ।**
**ವಶ್ಯಂ ಕರೋತಿ ತ್ರೈಲೋಕ್ಯಂ ಪಠನಾಚ್ಛ್ರವಣಾದಪಿ ॥**

**ಸ್ತೋತ್ರಂ ಪರಂ ಮಹಾಪುಣ್ಯಂ ಗಣಪಸ್ಯ ಮಹಾತ್ಮನಃ ।**

ಈ ಸ್ತೋತ್ರವನ್ನು ಕೇಳಿದವನು ದೊಡ್ಡ ರಾಜನಾಗುತ್ತಾನೆ. ಓದುವದರಿಂದಲೂ ಕೇಳುವದರಿಂದಲೂ ಮೂರು ಲೋಕಗಳನ್ನು ವಶಮಾಡಿಕೊಳ್ಳುತ್ತಾನೆ. ಈ ಗಣಪತಿಯ ಮಹಿಮೆ ಬಹಳ ಪುಣ್ಯಪ್ರದವಾದುದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಗಣಪತಿಯ ಮಹಿಮಾ ಎಂಬ ಅರವತ್ತೆರಡನೇಯ ಅಧ್ಯಾಯ ಮುಗಿದುದು*

**॥ವ್ಯಾಸ ಉವಾಚ॥**

**ನಾಂದೀ ಮುಖೇಷು ಸರ್ವೇಷು ಪೂಜಯೇದೇಯೋ ಗಣಾಧಿಪಂ ।**
**ತಸ್ಯ ಸರ್ವೋರ್ಭವೇರ್ವಶ್ಯಃ ಪುಣ್ಯಂ ಭವತಿ ಚಾಷಯಂ ॥**
**ಗಣಾನಾಂ ತ್ವೇತಿ ಮಂತ್ರೇಣ ಸರ್ವಯಜ್ಞ ಘಟೇಷು ಚ ।**
**ಸರ್ವಸಿದ್ಧಿಮವಾಪ್ನೋತಿ ಸ್ವರ್ಗಂ ಮೋಕ್ಷಂ ಲಭೇನ್ನರಃ ॥**
**ಮೃಣ್ಮಯೀ ಪ್ರತಿಮಾಯಾಂ ಚ ಚಿತ್ರೆ ವಾಥ ದೃಷನ್ಮಯೀ ।**
**ದ್ವಾರ ದಾರುಣಿ ಪಾತ್ರೆ ಚ ಹೇರಂಬಂ ಲೇಖಯೇದ್ಬುಧಃ ॥**

**ವ್ಯಾಸ :-** ಎಲ್ಲ ನಾಂದೀ ಮುಖದಲ್ಲಿ ಗಣಪತಿಯನ್ನು ಪೂಜಿಸಿದರೆ ಅವನಿಗೆ ಎಲ್ಲರೂ ಸ್ವಾಧೀನರಾಗುತ್ತಾರೆ. ಬಹುವಾದ ಪುಣ್ಯವೂ ಬರುತ್ತದೆ. 'ಗಣಾನಾಂತ್ವಾ' ಎಂಬ ಮಂತ್ರದಿಂದ ಕಲಶಗಳಲ್ಲಿ ವಿನಾಯಕನನ್ನು ಅವಾಹನೆ ಮಾಡಬೇಕು. ಹಾಗೆ ಮಾಡಿ ಪೂಜಿಸಿದರೆ ಸಿದ್ಧಿ ಉಂಟಾಗಿ ಸ್ವರ್ಗ ಮೋಕ್ಷಾದಿಗಳು ಸಿಗುತ್ತವೆ. ಮಣ್ಣಿನ ಮೂರ್ತಿ, ಚಿತ್ರ, ಕಲ್ಲಿನ ಬೊಂಬೆ, ಅಥವಾ ಕಟ್ಟಿಗೆಧಾತು ಪ್ರತಿಮೆ ಮಾಡಿ ಅದರಲ್ಲಿ, ಯಾವದಾದರೊಂದು ಪಾತ್ರೆಯಲ್ಲಾಗಲಿ ಚಿತ್ರವನ್ನು ಬರೆದು ಪೂಜಿಸಬಹುದು. ಇಲ್ಲದಿದ್ದರೆ ಇನ್ನೂ ಯಾವುದರಲ್ಲಿ ಬೇಕಾದರೂ ಆಗಬಹುದು. ಪೂಜೆ ಮಾಡತಕ್ಕ ಪ್ರಧಾನ ದೇವರ ಸಮೀಪದಲ್ಲಿ ಕಣ್ಣಿಗೆ ಕಾಣುತ್ತಿರುವಂತೆಯೇ ಆ ಗಣಪತಿಯನ್ನಿಟ್ಟು ಪೂಜಿಸಬೇಕು.

ಇದರಿಂದ ಮನುಷ್ಯರ ಎಲ್ಲ ಕಾರ್ಯದಲ್ಲಿ ವಿಘ್ನಗಳು ಬರುವದಿಲ್ಲ. ಮೂರು ಲೋಕವೇ ಅವನ ವಶವಾಗುತ್ತದೆ. ವಿದ್ಯಾರ್ಥಿಗಳು ವಿದ್ಯೆಯನ್ನು, ಧನಾರ್ಥಿಯು ಧನವನ್ನು ಗಣೇಶ ಪೂಜೆಯಿಂದ ಪಡೆಯುತ್ತಾನೆ. ಮದುವೆಯಾಗ ಬಯಸುವವನು ಗಣಪತಿಯನ್ನು ಪೂಜಿಸಿದರೆ ಸುಂದರಳೂ, ಸ್ವಾಧ್ವಿಯೂ  ಆದ ಕನ್ಯಾಮಣಿಯನ್ನು ಪಡೆಯುತ್ತಾನೆ. ಗಣಪತಿಯ ಪೂಜೆ ನಡೆಯುವ ಮನೆಯಲ್ಲಿಯೂ, ದೇಶದಲ್ಲಿಯೂ ಮಾರಿಕಾ ಮುಂತಾದ ರೋಗಗಳಾಗಲಿ, ಕ್ಷಾಮ ಡಾಮರಗಳಾಗಲಿ ತಲೆದೋರುವದಿಲ್ಲ.

**'ಅಭಿಪ್ರೇತಾರ್ಥ ಸಿದ್ಧ್ಯರ್ಥಂ ಪೂಜಿತೋ ಯಃ ಸುರೈರಪಿ ।**
**ಸರ್ವ ವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ।**

ಎಂಬ ಪ್ರಾರ್ಥನೆ ಮಾಡಬೇಕು. 'ಓಂ ನಮೋ ಗಣಪತಯೇ' ಎಂಬ ಮಂತ್ರವನ್ನು ಜಪಿಸಿ ಪುಷ್ಪಗಳಿಂದ ಪೂಜಿಸಬೇಕು. ಮೋದಕ, ಹಣ್ಣು ಹಂಪಲು ಮುಂತಾದ ತತ್ತತ್ಕಾಲೋದ್ಭವವಾದ ಕಂದಮೂಲ ಫಲಗಳನ್ನು ಹಾಲು, ಮೊಸರು ಮುಂತಾದವುಗಳನ್ನು ನೈವೇದ್ಯವಿಟ್ಟು , ಧೂಪ, ದೀಪ, ಮಂಗಳಾರತಿ ಮುಂತಾದವು ಗಳಿಂದ ಅರ್ಚಿಸಬೇಕು. ಇದರಿಂದ ಸರ್ವ ಸಿದ್ಧಿಗಳನ್ನು ಮನುಷ್ಯ ಪಡೆಯುತ್ತಾನೆ. ಈ ಗಣಪತಿಯ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಿದರೆ ಸಿದ್ಧಿ, ಭೋಗ, ಕೀರ್ತಿ, ಬಲಗಳು ಜನ್ಮ ಜನ್ಮಾಂತರದಲ್ಲಿಯೂ ಉಂಟಾಗುತ್ತವೆ. ಸ್ತ್ರೀಯರು ವಿನಾಯಕ ಪೂಜೆ ಮಾಡಿದರೆ ವೈಧವ್ಯ ಬರುವದಿಲ್ಲ ಶೋಕ, ಮತ್ಸರಗಳು ಉಂಟಾಗುವದಿಲ್ಲ.

ಹಿಂದೆ ಒಮ್ಮೆ ಇಂದ್ರನು ವಿನಾಯಕ ಪೂಜೆಯನ್ನು ಅಲಕ್ಷದಿಂದ ಮಾಡಲಿಲ್ಲ. ಆಗ ಹಿರಣ್ಯಾಕ್ಷ ಮೊದಲಾದ ದೈತ್ಯರು ಸ್ವರ್ಗದ ಮೇಲೆ ಏರಿ ಬಂದರು. ಇಂದ್ರ ಹಾಗೂ

ದೇವತೆಗಳನ್ನು ಸೋಲಿಸಿದರು. ಆ ದೇವತೆಗಳೆಲ್ಲರೂ ಶಿವನಲ್ಲಿ ಬಂದು ಪ್ರಾರ್ಥನೆ ಮಾಡಿಕೊಂಡರು. ಆಗ ರುದ್ರನು ಅವರಿಗೆ ತಿಳಿ ಹೇಳಿದರು.

**ರುದ್ರ:-** ನೀವು ಅಜ್ಞಾನದಿಂದ ಹಾಗೂ ತಿರಸ್ಕಾರದಿಂದ ಯುದ್ಧ ಪ್ರಾರಂಭದಲ್ಲಿ ಗಣಪತಿ ಪೂಜೆ ಮಾಡಲಿಲ್ಲ. ಅದರಿಂದ ನಿಮಗೆ ಅಪಜಯ ಬಂದಿದೆ. ನೀವು ಮೊದಲು ಹೋಗಿ ಮಹಾತ್ಮನಾದ ಗಣಪತಿಯನ್ನು ಪೂಜಿಸಿರಿ. ಅವನ ದಯೆಯಿಂದ ನಿಮಗೆ ವಿಜಯವು ಪ್ರಾಪ್ತವಾಗುವದು. ಆಗ ದೇವತೆಗಳು ಬಂದು ಭಕ್ತಿಯಿಂದ ಗಣಪತಿಯನ್ನು ಸ್ತೋತ್ರ ಮಾಡಿದರು.

**॥ದೇವಾ ಊಚುಃ॥**

**ಗಣಾಧಿಪ ನಮಸ್ತುಭ್ಯಂ ಸರ್ವದೇವೈಕ ಪಾಲಕ ।**
**ಭುಕ್ತಿ ಮುಕ್ತಿಪ್ರದ ಪ್ರೀತ್ಯಾ ಹೇರಂಬ ತ್ವಾಂ ನತಾ ವಯಂ ॥**
**ಜಯದಂ ಸರ್ವಯುದ್ಧೇಷು ಸಿದ್ಧಿದಂ ಸರ್ವ ಕರ್ಮಸು ।**
**ಮಹಾ ಮಹಾಂ ಮಹಾ ಕಾಯಂ ಹೇರಂಬಂ ತ್ವಾ ನತಾ ವಯಂ ॥**
**ಏಕದಂತಂ ಮಹಾ ಪ್ರಜ್ಞಂ ವಕ್ರ ತುಂಡಂ ವಿನಾಯಕಂ ।**
**ಮೂಷಿಕಾವಾಹನಂ ದೇವಂ ವಿಘ್ನನಾಶಂ ನತಾ ವಯಂ ॥**

ಎಲ್ಲ ದೇವತೆಗಳನ್ನು ರಕ್ಷಿಸುವ, ಭೋಗ ಮೋಕ್ಷ ನೀಡುವ, ಗಣಾಧ್ಯಕ್ಷನಾದ ಹೇರಂಬನೇ ಭಕ್ತಿಯಿಂದ ನಿನಗೆ ನಮಸ್ಕಾರ ಮಾಡುತ್ತೇವೆ. ಯುದ್ಧದಲ್ಲಿ ಗೆಲುವನ್ನೂ, ಸರ್ವಕಾರ್ಯಗಳಲ್ಲಿ ಸಿದ್ಧಿಯನ್ನು ನೀಡುವ ದೊಡ್ಡ ದೇಹವುಳ್ಳ, ಮಾಯಾವಿಯಾದ ನಿನ್ನನ್ನು ನಾವು ನಮಿಸುತ್ತೇವೆ. ಒಂದು ಹಲ್ಲುಳ್ಳ, ತೀಕ್ಷ್ಣ ಬುದ್ಧಿಯುಳ್ಳ, ಇಲಿಯನ್ನು ವಾಹನವನ್ನಾಗಿ ಮಾಡಿಕೊಂಡಿರುವ ವಿಘ್ನ ನಾಶಕ ವಿನಾಯಕನನ್ನು ನಾವು ನಮಸ್ಕರಿಸುತ್ತೇವೆ.

ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ, ಗಣಪತಿಯು ವಿಸ್ಮಿತನಾಗಿ ಮಾತನಾಡಿದನು 'ನನ್ನ ಸ್ತೋತ್ರ ಸಾಕು. ನನ್ನ ಪೂಜೆ ಮಾಡಿರಿ. ನಿಮಗೆ ನಿಶ್ಚಿತವಾಗಿ ಯುದ್ಧದಲ್ಲಿ ನಿಮ್ಮ ಹಿತವನ್ನು ಸಾಧಿಸುತ್ತೇನೆ.' ಆಗ ದೇವತೆಗಳ ಪುರೋಹಿತರಾದ ಬೃಹಸ್ಪತ್ಯಾಚಾರ್ಯರು ನಸುನಗುತ್ತ ವಿನಾಯಕನಿಗೆ ನುಡಿದರು.

**ಬೃಹಸ್ಪತಿ :-** ಗಣಪನೆ, ಈ ಇಂದ್ರನು ಹಿಂದೆ ಯಜ್ಞದಲ್ಲಿ ಯುದ್ಧಆರಂಭದಲ್ಲಿ ನಿನ್ನನ್ನುಪೂಜಿಸಲಿಲ್ಲ. ಮಹಾಪರಾಧವಾಯಿತು ಕ್ಷಮಿಸು.

**ಗಣೇಶ :-** ನನ್ನಿಂದ ವರ ಏನು ಬೇಕು ಕೇಳಿರಿ.

ಆಗ ದೇವತೆಗಳು ಆ ಗಣಾಧಿಪತಿಯಲ್ಲಿ ತಮಗೆ ಜಯವಾಗಲಿ ಎಂದು ಕೇಳಿ ಕೊಂಡರು. ಆಗ ಅವರ ಸ್ತೋತ್ರ, ಹಾಗೂ ಪೂಜೆಗಳಿಂದ ಸಂತಸಗೊಂಡ ಹೇರಂಬ ಹೇಳಿದನು ಅವರಿಗೆ. ''ದೇವತೆಗಳೆ; ನೀವೆಲ್ಲರೂ ಸರ್ವಸ್ವಾಮಿಯಾದ ಶ್ರೀ ವಿಷ್ಣುವಿನ ಬಳಿಗೆ ಹೋಗಿರಿ, ಎಲ್ಲ ಅಪೇಕ್ಷೆಯನ್ನು ಪೂರ್ಣಮಾಡುವ ಪ್ರಭುವು ಅವನೊಬ್ಬನೇ.''

ಆಗ ಎಲ್ಲ ದೇವತೆಗಳು ತಮ್ಮ ರಥಗಳನ್ನು ಏರಿಕೊಂಡು ಶ್ರೀಹರಿಯ ಬಳಿಗೆ ಬಂದರು ಆಗ ಶ್ರೀಹರಿಯು ಅವರ ಅಭಿಪ್ರಾಯ ತಿಳಿದುಕೊಂಡು ದೇವತೆಗಳಿಗೆ 'ನೀವೆಲ್ಲರೂ ಶಸ್ತ್ರಾಸ್ತ್ರ ಸನ್ನದ್ಧರಾಗಿ ಯುದ್ಧಕ್ಕೆ ಸಿದ್ಧರಾಗಿ ನಿಂತುಕೊಳ್ಳಿರಿ. ಆ ದೈತ್ಯನನ್ನು ನಾನು ನಾಶಪಡಿಸುತ್ತೇನೆ, ನೀವು ಧೈರ್ಯದಿಂದ ಇರಿ' ಎಂದನು.

ವಿಷ್ಣುವಿನ ಆದೇಶದಂತೆ ದೇವತೆಗಳು ವಿಮಾನಾರೂಢರಾಗಿ ಯುದ್ಧಕ್ಕೆ ಹೊರಟರು ಶಸ್ತ್ರಾಸ್ತ್ರಸನ್ನದ್ಧರಾಗಿ, ದೇವತೆಗಳ ಜಯಘೋಷವು ದೈತ್ಯರನ್ನು ಭಯಭ್ರಾಂತಗೊಳಿಸಿತು ಆಗ ದೈತ್ಯ ಸಾಮ್ರಾಟನಾದ ಹಿರಣ್ಯಾಕ್ಷನು ತನ್ನ ಮಂತ್ರಿಗಳನ್ನು ಕರೆಸಿ ಸಮಾಲೋಚನೆ ನಡೆಸಿದನು. ಆಗ ಮಧುನಾಮಕ ದೈತ್ಯನು ಮುಂದೆ ಬಂದು ನುಡಿದನು.

**ಮಧು :-** ಮಹಾಪ್ರಭು, ನನಗೆ ಸಹಾಯಕರನ್ನು ಕೊಡು, ಆ ಹರಿಯನ್ನು ಗೆಲ್ಲುವ ಕೆಲಸ ನನ್ನದು, ನಾರಾಯಣನು ಸೋತರೆ ಉಳಿದ ದೇವತೆಗಳೆಲ್ಲರೂ ಹೆದರಿ ಚದುರಿಹೋಗುತ್ತಾರೆ. ಆ ಹರಿಯನ್ನು ಗೆಲ್ಲುವ ಭಾಗ್ಯ ನನಗಿರಲಿ.

ಕೂಡಲೆ ಕಾಲಕೇಯ ಮುಂತಾದ ದೈತ್ಯರು ಮಾಧವನನ್ನು ಗೆಲ್ಲಲು ಮಧು ದೈತ್ಯನೊಂದಿಗೆ ಬೆಂಬಲಕ್ಕೆ ನಿಂತರು. ಅದರಂತೆ ಬಲ, ನಮುಚಿ, ಮುಚಿ, ಜಂಭ ಮುಂತಾದವರು ತಮ್ಮ ತಮ್ಮ ಜಂಭ ಕೊಚ್ಚಿಕೊಂಡು ''ಇಂದ್ರಾದಿ ದೇವತೆಗಳನ್ನು ನಾವು ಗೆಲ್ಲುತ್ತೇನೆ, ನೀವು ಸುಖವಾಗಿರಿ'' ಎಂದು ಹಿರಣ್ಯಾಕ್ಷನಿಗೆ ಆಶ್ವಾಸನೆ ನೀಡಿದರು. ತ್ರಿಪುರನು 'ಆ ಗಣಪತಿಯನ್ನು ನಾನು ಗೆದ್ದು ಬರುತ್ತೇನೆ' ಎಂದು ಪ್ರತಿಜ್ಞೆಗೈದನು. ಮಯನು ಕುಬೇರನನ್ನು ಗೆಲ್ಲುವ ವಚನವಿತ್ತನು.

ಹೀಗೆ ದೈತ್ಯ ದಾನವ ಧುರೀಣರೆಲ್ಲರೂ ವೀರಾವೇಶದಿಂದ ರಣರಂಗಕ್ಕೆ ನುಗ್ಗಿದರು. ಆದೇವ-ದಾನವ ಸೇನೆಗಳ ನಡುವೆ ಘನಘೋರ ಸಂಗ್ರಾಮವು ನಡೆಯಿತು. ಈ ಭೀಷಣವಾದ ದೇವಾಸುರ ಸಂಗ್ರಾಮದಲ್ಲಿ ಕಾಲಕೇಯನೆಂಬ ದೈತ್ಯನು ಕಲಿತನದಿಂದ ಹೋರಾಡಿ ದೇವಸೇನೆಯಲ್ಲಿ ಕೋಲಾಹಲ ಉಂಟುಮಾಡಿದನು. ಅವನ ಬಾಣ ಪ್ರಹಾರ ತಾಳದೇ ದೇವತೆಗಳು. ಗಂಧರ್ವರು ರಕ್ತಕಾರುತ್ತ ಬಿದ್ದರು. ಕಾಲಕೇಯನ ಭೀಕರ ಬಾಣ ವೃಷ್ಟಿಯಿಂದ ಭೂಮ್ಯಾಕಾಶಗಳು ಮುಚ್ಚಿ ಹೋದವು. ಆಗ ದೇವತೆಗಳು ಕಂಗೆಟ್ಟು ದೇವೇಂದ್ರನಿಗೆ ಮೊರೆಹೊಕ್ಕರು. ಆಗ ಚಿತ್ರರಥನೆಂಬ ದೇವತಾಪುರುಷನು ಕೋಪಗೊಂಡು ಕಾಲಕೇನ ಮೇಲೆ ಏರಿಬಂದನು. ಕಾಲಕೇಯನ ಹಣೆಗೆ ಮೂರು ಹೃದಯಕ್ಕೆ ಐದು, ಹೊಟ್ಟೆಗೆ ಏಳು ಭೀಕರ ಬಾಣಗಳನ್ನು ಹೊಡೆದನು. ಚಿತ್ರರಥನ ಈ ಬಾಣ ಪ್ರಹಾರ ತಾಳದೆ ಕಾಲಕೇಯನು ತತ್ತರಿಸಿದನು. ಕಣ್ಣು ಕತ್ತಲೆಗೂಡಿ ಅವನ ಕೈಯಲ್ಲಿಯ ಧನಸ್ಸು ಸಡಿಲವಾಯಿತು. ಅದೇ ವೇಳೆಗೆ ಚಿತ್ರರಥನು ಕಾಲಕೇಯನ ಧನುಸ್ಸನ್ನು ಕತ್ತರಿಸಿದನು. ಕೊನೆಯ ಉಪಾಯವೆಂದು ಕಾಲಕೇಯನು ತನ್ನ ಶಕ್ತ್ಯಾಯುಧವನ್ನು ಚಿತ್ರರಥನು ಚಾತುರ್ಯದಿಂದ ಮೂರು ಬಾಣ ಬಿಟ್ಟು ಕತ್ತರಿಸಿ ಹಾಕಿದನು. ಎಲ್ಲವೂ ವ್ಯರ್ಥವಾದುದನ್ನು ಕಂಡು ಕಾಲಕೇಯನು ಮುದ್ಗರವನ್ನು ಎತ್ತಿ, ಚಿತ್ರರಥನ ಮೇಲೆ ಏರಿಬಂದನು. ಕೂಡಲೇ ಚಿತ್ರರಥನು ಅರ್ಧ ಚಂದ್ರಾಕಾರದ ಬಾಣ ಬಿಟ್ಟು ಆ ದುರುಳ ಕಾಲಕೇಯನ ತಲೆಯನ್ನು ಕತ್ತರಿಸಿದನು. ಆ ದುಷ್ಟನ ಮರಣದಿಂದ ಧರಣೀ ಮಂಡಲ ಕಂಪಿಸಿತು. ದೈತ್ಯರೆಲ್ಲರು ದಿಕ್ಕುಪಾಲಾಗಿ ಓಡಿ ಹೋದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಕಾಲಕೇಯ ಕಾಲವಾದನು ಎಂಬ ಅರವತ್ತಮೂರನೇಯ ಅಧ್ಯಾಯ ಮುಗಿದುದು*

—o—

## ಜಯಂತನ ವಿಜಯ

ಅಧ್ಯಾಯ - ೬೪

**ವ್ಯಾಸ :-** ಸೋದರನಾದ ಕಾಲಕೇಯನು ಹತನಾದದ್ದು ಕಂಡು ಅವನ ತಮ್ಮನಾದ ಕಾಲೇಯನೆಂಬ ಕ್ರೂರ ರಕ್ಕಸನು ಸಮರವನನು ಎದುರುಸಿದನು. ಆಗ ಇಂದ್ರಕುಮಾರನಾದ ಜಯಂತನು ಕಾಲೇಯನ ಎದುರು ಬಂದು ಹೇಳಿದನು.

**ಜಯಂತ :-** ಚಿತ್ರರಥನು ಇಷ್ಟು ಹೊತ್ತಿನವರೆಗೆ ಯುದ್ಧ ಮಾಡಿದಣೆದಿದ್ದಾನೆ: ಯುದ್ಧದಲ್ಲಿ ವೈರಿಗಳನ್ನು ಶಸ್ತ್ರಘಾತದಿಂದ ಬಳಲಿದವರೊಡನೆ ಯುದ್ಧ ಮಾಡುವದು ಸರಿಯಲ್ಲ. ಆದುದರಿಂದ ಈಗ ನನ್ನೊಡನೆ ಯುದ್ಧ ಮಾಡು ಬಾ.

ಅದಕ್ಕೆ ಕಾಲೇಯನು ಕೋಪಗೊಂಡು. 'ನನ್ನ ಸೋದರನಾದ ಕಾಲಕೇಯನನ್ನ ಕೊಂದ ವೈರಿಯನ್ನು ಮೊದಲು ಸಂಹರಿಸಿ, ಆ ಮೇಲೆ ನಿನ್ನ ಸಮಾಚಾರ ತೆಗೆದುಕೊಳ್ಳುತ್ತೇನೆ. ಎಂದು ಹೇಳಿದನು. ಆಗ ಜಯಂತನು ಹರಿತವಾದ ಬಾಣಗಳಿಂದ ಕಾಲೇಯನನ್ನು ಪ್ರಹರಿಸಿದನು. ಕಾಲೇಯನು ಜಯಂತನ ಬಾಣಗಳನ್ನು ಕಡಿದು ತಾನು ಅವನ ಮೇಲೆ ಬಾಣಗಳ ವೃಷ್ಟಿಯನ್ನೇ ಕರೆದನು. ಇಬ್ಬರಲ್ಲಿಯೂ ಘನಘೋರ ಸಂಗ್ರಾಮ ನಡೆಯಿತು. ಜಯಂತನು ಒಮ್ಮೆ ಚಪಲತೆಯಿಂದ ಕಾಲೇಯನ ಬಿಲ್ಲಿನ ದಾರವನ್ನೇ ಕತ್ತರಿಸಿಹಾಕಿದನು. ಆಗ ಕಾಲೇಯನು ಜಯಂತನ ಮೇಲೆ ಶಕ್ತ್ಯಾಯುದವನ್ನು ತೂರಿ ಒಗೆದನು. ಅದನ್ನು ಐದು ಬಾಣಗಳಿಂದ ನಿಂತಲ್ಲಿಯೇ ಜಯಂತನು ಚೂರು ಚೂರಾಗಿ ಮಾಡಿ ಬೀಳಿಸಿದನು. ಕೂಡಲೇ ಕಾಲೇಯನು ಗದೆ ತೆಗೆದುಕೊಂಡು ಜಯಂತನ್ನು ಎದುರಿಸಿದನು. ಅವರಿಬ್ಬರ ನಡುವೆ ಭೀಕರ ಗದಾಯುದ್ಧವು ನಡೆಯಿತು. ನಾಲ್ಕು ಗಂಟೆ ನಡೆದ ಗದಾಯುದ್ಧದಲ್ಲಿ ಇಬ್ಬರ ಗದೆಗಳು ಮುರಿದು ಬಿದ್ದವು. ಆಗ ಇಬ್ಬರಲ್ಲಿಯೂ ಖಡ್ಗ ಯುದ್ಧವು ಪ್ರಾರಂಭವಾಯಿತು. ಕೊನೆಗೆ ಬಲಿಷ್ಠನಾದ ಜಯಂತನು ಹಾರಿಬಂದು ಕಾಲೇಯನ ಜುಟ್ಟು ಹಿಡಿದು ತಲೆ ಕತ್ತರಿಸಿದನು. ದೇವತೆಗಳೆಲ್ಲ ಜಯ ಜಯಕಾರ ಮಾಡಿದರು. ದೈತ್ಯರೆಲ್ಲರೂ ದಿಗ್ಗೆಟ್ಟು ಓಡಿಹೋದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಜಯಂತನ ವಿಜಯ ಎಂಬ ಅರವತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ಧರಾಶಾಯಿಗಳಾದ ದೈತ್ಯರು

ಅಧ್ಯಾಯ - ೬೫

ದೈತ್ಯ ಶ್ರೇಷ್ಠರಾದ ಕಾಲೇಯನ ಮರಣವಾರ್ತೆ ಕೇಳಿ ಹಿರಣ್ಯಾಕ್ಷನಿಗೆ ಒಳಗೆ ತಾಪ ಹೊರಗೆ ಕೋಪ ಎರಡೂ ಉಕ್ಕಿ ಬಂದವು. ಕಣ್ಣು ಕೆಂಪಡರಿತು. ದೈತ್ಯರನ್ನು ಕುರಿತು ಅಪ್ಪಣೆ ಮಾಡಿದ. 'ದೇವತೆಗಳನ್ನು ಕೊಲ್ಲಲು ನಾನೇ ಯುದ್ಧಕ್ಕೆ ಹೋಗುತ್ತೇನೆ. ಎಂತಹ ಪ್ರಸಂಗ ದಲ್ಲಿಯೂ ಹಿಂತಿರುಗದವರು ನನ್ನೊಡನೆ ಬನ್ನಿರಿ. ಹಿರಣ್ಯಾಕ್ಷನ ವೀರವಚನವನ್ನು ಕೇಳಿ,ಅಳಿದುಳಿದ ದೈತ್ಯ ವೀರರೆಲ್ಲರೂ ಉತ್ಸಾಹದಿಂದ ಯುದ್ಧಕ್ಕೆ ಎದ್ದು ಬಂದರು. ಎರಡೂ ಸೇನೆಗಳಲ್ಲಿ ಅತ್ಯಂತ ಭೀಕರವಾದ ಕದನವು ಏರ್ಪಟ್ಟಿತು. ಭೀಷಣವಾದ ಶಸ್ತ್ರಾಸ್ತ್ರಗಳ ಪ್ರಹಾರ ಪ್ರತಿ ಪ್ರಹಾರಗಳಿಂದ ಎರಡೂ ಪಕ್ಷಗಳಲ್ಲಿಯೂ ಹೆಣಗಳ ಹಡದಿ

ಹಾಸಿದಂತಾಯಿತು. ಭೂಮಿಯಲ್ಲಿ ರಕ್ತಮಡುವುಗಟ್ಟಿ ನಿಂತುಕೊಂಡಿತು. ದೇವತೆಗಳು ಬಹು ಉತ್ಸಾಹದಿಂದ ಯುದ್ಧ ಮಾಡತೊಡಗಿದರು. ಸೂರ್ಯನ ತಾಪದಿಂದ, ಇಂದ್ರನ ಸಿಡಿಲಿನಿಂದ ಚಂದ್ರನು ಬಿಟ್ಟ ಚಳಿಯ ಆಯುಧದಿಂದ ವಾಯುವಿನ ಝುಂಝೂವಾತದಿಂದ ದೈತ್ಯರು ಕೋಟಿ ಕೋಟಿ ಜನ ಸತ್ತು ಧರಾಶಾಯಿ ಗಳಾದರು. ಋಷಿಗಳು ದ್ವಿಜರು ತಪಸ್ವಿಗಳು ಆಗ 'ದೇವತೆಗಳಿಗೆ ಜಯವಾಗಲಿ' ಎಂದು ಜಯಘೋಷ ಮಾಡಿದರು. ದೈತ್ಯಸೇನೆಯ ಈ ದುರ್ದಶೆಯನ್ನು ಕಂಡು ಬಲಿಷ್ಠನಾದ ಬಲಾಸುರನು ರೊಚ್ಚಿಗೆದ್ದು ಐರಾವತದ ಮೇಲೆ ಕುಳಿತ ಇಂದ್ರನ ಎದೆಗೆ ಶಕ್ತ್ಯಾಯುಧದಿಂದ ಬಲವಾಗಿ ಪ್ರಹರಿಸಿದನು. ಅದರಿಂದ ದೇವೇಂದ್ರನು ಆನೆಯ ಮೇಲೆಯೇ ಮೂರ್ಛಿತನಾಗಿ ಬಿದ್ದನು. ಕಾಲಾಂತರದಲ್ಲಿ ಅವನಿಗೆ ಎಚ್ಚರ ಬಂದಿತು. ಕೂಡಲೇ ಅವನು ಕೆರಳಿದ ಕೇಸರಿಯಂತೆ ಸಿಂಹನಾದದಿಂದ ತೀಕ್ಷ್ಣವಾದ ಬಾಣ ಪ್ರಯೋಗಿಸಿದನು. ಬಲಾಸುರನ ಧ್ವಜವನ್ನು ಒಂದು ಬಾಣದಿಂದ ಕಡಿದು ನೆಲಕ್ಕೆ ಒಗೆದು. ಮತ್ತೊಂದರಿಂದ ಅವನ ಗುರಾಣಿಯನ್ನು ನಾಲ್ಕು ಬಾಣಗಳಿಂದ ಅವನ ಭುಜಗಳನ್ನು ಕಡಿದುಹಾಕಿದನು. ಕೊನೆಗೆ ಒಂದೇ ಒಂದು ಬಾಣ ಪ್ರಹಾರದಿಂದ ಆ ಬಲಾಸುರನ ಶಿರಚ್ಛೇದ ಮಾಡಿದನು.

ಇದನ್ನು ನೋಡಿ ನಮುಚಿ ಎಂಬ ದೈತ್ಯವೀರನು ಸಿಡಿಲಿನ ಮರಿಯಂತೆ ದೇವೇಂದ್ರನ ಮೇಲೆ ಎರಗಿದನು. ಅವನು ದವಡೆಗಚ್ಚಿ ಗದಾಪ್ರಹಾರ ಮಾಡಿದಾಗ ಐರಾವತವು ತೊನೆದಾಡತೊಡಗಿತು. ನಮುಚಿಯ ಗದೆಯು ಐರಾವತದ ಕುಂಭ ಸ್ಥಳಕ್ಕೆ ಅಪ್ಪಳಿಸಿದಾಗ ಬರಸಿಡಿಲು ಎರಗಿದಂತೆ ಭೀಕರ ಶಬ್ದವಾಗಿ ಆನೆ ಮೈಯಿಂದ ನೆತ್ತರ ಪುಟಿಯತೊಡಗಿತು. ಆಗ ಇಂದ್ರನು, ನಮುಚಿಯ ಭೀಕರ ಗದೆಯ ಪೆಟ್ಟನ್ನು ತಾಳದೇ ಹಿಂದಿರುಗಿ ಹೊರಟ ಐರಾವತನ್ನು ಸಂತೈಸಿ ಮತ್ತೆ ನಮುಚಿಯ ಮೇಲೆ ಭೀಕರ ಬಾಣ ಪ್ರಹಾರವನ್ನು ಪ್ರಾರಂಭಿಸಿದನು. ಆಗ ನಮುಚಿಯು ಮಾಯೆಯನ್ನು ಆಶ್ರಯಿಸಿ ಕಪಟಯುದ್ಧ ನಡೆಸಿದನು. ಉಲ್ಬಣವಾದ ನಮುಚಿಯ ಮಾಯೆಯಿಂದ ಅನೇಕ ಕ್ರೂರ ಪ್ರಾಣಿಗಳನ್ನು ಕೋಟಿ ಸಂಖ್ಯೆಯಲ್ಲಿ ದೇವತೆಗಳನ್ನೇ ಹಿಂಸಿಸತೊಡಗಿದವು. ಆಗ ಸುರಪತಿಯು ತನ್ನಅಮೋಘ ವಜ್ರಾಯುಧ ಬೀಸಿ ನಮುಚಿಯ ಎದೆಗೆ ಹೊಡೆದನು. ವಕ್ಷಸ್ಥಳದಲ್ಲಿ ವಜ್ರಾಯುಧ ಪ್ರಹಾರದಿಂದ ನಮುಚಿಯ ತಕ್ಷಣವೇ ನೆತ್ತರ ಕಕ್ಕುತ್ತ ನೆಲದಮೇಲೆ ಬಿದ್ದನು. ಕೂಡಲೇ ದೇವತೆಗಳ ಪುಷ್ಪವೃಷ್ಟಿಯನ್ನು ಮಾಡಿ ಆ ಪುರಂದರನನ್ನು ಗೌರವಿಸಿದರು. ದೈತ್ಯರೆಲ್ಲ ದಿಕ್ಕುಗಾಣದೆ ಓಡಿಹೋದರು ಗಂಧರ್ವರು ಗಾನಮಾಡಿದರು. ಅಪ್ಸರೆಯರು ಕುಣಿದರು. ದೇವತೆಗಳು ನಲಿದರು. ಸಜ್ಜನರು ಸಂತಸಗೊಂಡರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಧರಾಶಾಯಿಗಳಾದ ದೈತ್ಯರು ಎಂಬ ಅರವತ್ತೈದನೇಯ ಅಧ್ಯಾಯ ಮುಗಿದುದು*

—o—

## ಮುಚಿಯ ಸಂಹಾರ

ಅಧ್ಯಾಯ - ೬೬

**ವ್ಯಾಸ :-** ಬಲನು ಹತನಾದ, ನಮುಚಿ ಮೃತನಾದ, ಕೌಲ, ಕಾಲಕೇಯರು ಕಾಲವಶರಾದರು. ಇದನ್ನು ನೋಡಿ ನಮುಚಿಯ ತಮ್ಮ ಮುಚಿಗೆ ಬ್ರಹ್ಮಾಂಡ ಕೋಪ ಬಂದಿತು. ಆಗ ಅವನು ಇಂದ್ರನಿಗೆ ಎದುರಾಗಿ 'ನಾನು ಇಲ್ಲದಿದ್ದಾಗ ನೀನು ನನ್ನ ಸೋದರ ನಮುಚಿಯನ್ನು ಕೊಂದೆ. ಈಗ ನಾನು ನಿನ್ನನ್ನು ಯಮನ ಮನೆಗೆ ಕಳಿಸುವೆ ಬಾ' ಎಂದು ಆಹ್ವಾನಿಸಿದನು. ಆಗ ಶಕ್ರನ ನಗುತ್ತ ನುಡಿದನು. 'ನಿನ್ನ ಅಣ್ಣ ರಣರಂಗದಲ್ಲಿ ಧಾರಾತೀರ್ಥದಲ್ಲಿ ದೇಹವಿಟ್ಟು ವೀರಸ್ವರ್ಗ ಪಡೆದಿದ್ದಾನೆ. ನೀನೂ ಅದೇ ದಾರಿಯನ್ನೇ ಹಿಡಿದು ಹೋಗುತ್ತಿ. ಬೆಂಕಿಯ ಬೇಗೆಯ ಬಿಸಿಯನ್ನು ತಿಳಿಯದೇ ಪತಂಗಗಳು ಅದರಲ್ಲಿ ಬೀಳುವಂತೆ ನೀನು ನನ್ನೊಡನೆ ಯುದ್ಧಕ್ಕೆ ಬಂದಿರುವಿ'', ಇಂದ್ರನು ಹೀಗೆ ನುಡಿಯುತ್ತಿರುವಾಗಲೇ ಮುಚಿಯು ಅವನ ಮೇಲೆ ಬಾಣಗಳ ಸುರಿಮಳೆಯನ್ನೆ ಸುರಿಸಿದನು. ಅವನ್ನೆಲ್ಲ ಮೂರು ಬಾಣಗಳಿಂದ ಇಂದ್ರನು ವ್ಯರ್ಥಗೊಳಿಸಿದನು. ಆಗ ಮುಚಿಯು ಸಿಟ್ಟಿಗೆದ್ದು ಇಂದ್ರನಿಗೂ ಅವನ ಸಾರಥಿಗೂ ಬಾಣ ಹೊಡೆದು ಸಿಂಹನಾದ ಮಾಡಿದನು. ಅನಂತರ ಇಂದ್ರನ ಮೇಲೆ ತೂರಲಿಕ್ಕೆ ಕಬ್ಬಿಣದ ಗದೆ ಎತ್ತಿ ನಿಂತನು.ಆಗ ಇಂದ್ರನು ವಜ್ರಾಯುಧದಿಂದ ಗದೆಯನ್ನು ಸೀಳಿ ಮುಚಿಯ ತಲೆಯ ಮೇಲೆ ಹೊಡೆತ ಹಾಕಿದನು. ಮುಚಿಯು ನೆಲಕ್ಕೆ ಕುಸಿದು ಬೀಳಲು ಭೂ ಮಂಡಲವೇ ಕಂಪಿಸಿತು. ದೇವತೆಗಳು ಕುಣಿದಾಡಿದರು ಸಂತೋಷದಿಂದ ದೈತ್ಯರು ಓಡಿಹೋದರು ಹೆದರಿಕೆಯಿಂದ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಮುಚಿಯ ಸಂಹಾರ ಎಂಬ ಅರವತ್ತಾರನೇಯ ಅಧ್ಯಾಯ ಮುಗಿದುದು*



## ತಾರೇಯನಪತನ

ಅಧ್ಯಾಯ - ೬೭

**ವ್ಯಾಸ :-** ದೈತ್ಯರಲ್ಲಿ ತಾರಕಾಸುರನ ಮಗ ತಾರೇಯ ಎಂಬವನು ಇಂದ್ರನಿಗೆ ಸಮಾನನಾದ ಪರಾಕ್ರಮಶಾಲಿ. ತನ್ನ ತಂದೆಯನ್ನು ಕೊಂದದ್ದಕ್ಕಾಗಿ ಅವನಿಗೆ ಎಂದಿನಿಂದಲೂ ಸ್ಕಂದನ ಮೇಲೆ ಕೋಪವಿದ್ದಿತು. ಈಗ ಅದರ ಸೇಡನ್ನು ತೀರಿಸಿ ಕೊಳ್ಳಲು ಸ್ಕಂದನ ಮೇಲೆ ಏರಿ ಬಂದನು. ಆಗ್ನೇಯಾಸ್ತ್ರವನ್ನು ಬಿಟ್ಟು ಸ್ಕಂದನನ್ನು ಓಡಿಸಿ ವಿಶಿಖಾಸ್ತ್ರವನ್ನು ಮೇಲೆ ಪ್ರಯೋಗಿಸಿದನು. ಆಗ ಕುಮಾರಸ್ವಾಮಿಯು ಅವನ ಬಾಣಗಳನ್ನು ಅಗ್ನ್ಯಸ್ತ್ರಗಳಿಂದ ನಾಶಪಡಿಸಿದನು. ಅದಕ್ಕೆ ತಾರೇಯನು ರೌದ್ರಾಸ್ತ್ರವನ್ನು ಅದನ್ನೂ ಸ್ಕಂದನು ವ್ಯರ್ಥಗೊಳಿಸಿದಾಗ ಅಘೋರಾಸ್ತ್ರವನ್ನೂ ದೈತ್ಯನು ಪ್ರಯೋಗಿಸಿದನು. ಆ ಅಘೋರಾಸ್ತ್ರದಿಂದ ಮೇಲಿನಿಂದ ದೇವ ಸೇನೆಯ ಮೇಲೆ ಬೆಟ್ಟಗಳು, ಗಿಡಗಳು ಸರ್ಪಗಳು ಕೋಟಿಯಂತೆ ಸ್ಕಂದನ ಸುತ್ತಲೂ ಬೀಳತೊಡಗಿದವು ಅವೆಲ್ಲವುಗಳನ್ನು ಸ್ಕಂದನು ತನ್ನ ನಿಶಿತವಾದ ಬಾಣ ಪ್ರಯೋಗಗಳಿಂದ ಕತ್ತರಿಸಿ ತಾರೇಯನ ಅಡಿಯಿಂದ ನಡುನೆತ್ತಿಯವರೆಗೆ ಬಾಣಗಳನ್ನು ಪ್ರಹರಿಸಿದನು. ಅದರಿಂದ ಧಾರಾಕಾರವಾಗಿ ತಾರೇಯನ ದೇಹದಿಂದ ನೆತ್ತರು ಹರಿಯತೊಡಗಿತು. ಆಗ

ಕ್ರೋಧಾಂಧನಾದ ಆ ದೈತ್ಯನು ಸ್ಕಂದನ ಮೇಲೆ ಶೂಲಾಯುಧ ಪ್ರಯೋಗಿಸಿದನು. ಅದಕ್ಕೆ ಪ್ರತಿಯಾಗಿ ಸ್ಕಂದನು ಪಾಶುಪತ್ಯ ಶೂಲ ಬಿಟ್ಟು ಅದನ್ನು ಕಡಿದು ಹಾಕಿದನು. ಆಗ ದೈತ್ಯನು ಶಕ್ತಿಯನ್ನು ಪ್ರಯೋಗಿಸಿದನು. ಅದಕ್ಕೆ ಪ್ರತಿಯಾಗಿ ಸ್ಕಂದನು ಶೂಲವನ್ನೇ ಬಿಟ್ಟನು. ಅವೆರಡೂ ಅಂತರಿಕ್ಷದಲ್ಲಿ ಕಾದಾಡಿ ಪರಸ್ಪರ ಹೊಡೆತದಿಂದ ಚೂರಾಗಿ ಕೆಳಗೆ ಬಿದ್ದವು. ತಾರೇಯನು ಮುಸಲಾಯುಧ ತೆಗೆದುಕೊಂಡು, ಕುಮಾರಸ್ವಾಮಿಯು ವಾಹನವಾದ ಮಯೂರವನ್ನು ಹೊಡೆದನು. ಅದು ವನಿಕೆಯ ಪೆಟ್ಟನ್ನು ತಾಳದೇ ತತ್ತರಿಸಿತು. ಆಗ ಸಿಟ್ಟಿಗೆದ್ದ ಸ್ಕಂದನು 'ಇವನಿಗೆ ಯಾವ ಆಯುಧ ಪ್ರಯೋಗಿಸಬೇಕು' ಎಂದು ಯೋಚಿಸುತ್ತಿರುವಾಗಲೇ ತಾರೇಯನು ಶಕ್ತಿ ಆಯುಧ ಬೀಸಿದನು. ಅದನ್ನು ನೋಡಿ ಶಿವಕುಮಾರನು ತನ್ನ ಅಮೋಘವಾದ ಶಕ್ತ್ಯಾಯುಧ ಆ ದೈತ್ಯನ ಮೇಲೆ ಪ್ರಯೋಗಿಸಿದನು. ಪ್ರಳಯಾಗ್ನಿಯಂತಿದ್ದ ಆ ಶಕ್ತ್ಯಾಯುಧವು ತಾರೇಯನ ಶಕ್ತಿಯನ್ನೂ, ಅವನ ತಲೆಯನ್ನೂ ನಾಶ ಪಡಿಸಿ ಒಡೆಯನ ಬಳಿ ಮರಳಿ ಬಂದಿತು. ದೈತ್ಯನು ನೆಲದ ಮೇಲೆ ಬಿದ್ದು ಪ್ರಾಣ ಬಿಟ್ಟನು. ದೇವತೆಗಳು ಧೂಪ, ದೀಪ, ಪುಷ್ಪಾರ್ಪಣೆಗಳಿಂದ ಸ್ಕಂದನನ್ನು ಪೂಜಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ತಾರೇಯನಪತನ ಎಂಬ ಆರವತ್ತೇಳನೇಯ ಅಧ್ಯಾಯ ಮುಗಿದುದು*



## ದುರ್ಮುಖವಧ

**ಅಧ್ಯಾಯ - ೬೮**

**ವ್ಯಾಸ :-** ಅನಂತರ ದೇವಾಂತಕನೆಂಬ ದೈತ್ಯನು ರಣಾಂಗಣಕ್ಕೆ ಅಬ್ಬರಿಸುತ್ತ ಬಂದನು. ಅವನು ಸಿಟ್ಟಿನಿಂದ ತನ್ನ ತುಟಿಯನ್ನು ಕಚ್ಚಿ ಸೂರ್ಯನಂತೆ ಹೊಳೆಯುವ ರಥದಲ್ಲಿ ಕುಳಿತು ಯಮಧರ್ಮನಿಗೆ ನುಡಿದನು. 'ದುಷ್ಟನಾದ ಯಮಧರ್ಮನೆ ನಿನಗೆ ಸರಿಯಾದ ಧರ್ಮವೇ ಗೊತ್ತಿಲ್ಲ. ನಿನ್ನಲ್ಲಿ ಅಜ್ಞಾನ ತುಂಬಿದೆ. ನಿನಗೆ ಕಾಲ ಮೃತ್ಯುವು ಒದಗಿ ಬಂದಿದೆ. ಅದರಿಂದ ನಿನಗೆ ಧರ್ಮದ ಪರಿಜ್ಞಾನವೇ ಉಳಿದಿಲ್ಲ. ನಿನ್ನನ್ನು ಕೊಲ್ಲಲಿಕ್ಕೆಂದೇ ಬ್ರಹ್ಮನು ನನ್ನನ್ನು ನಿರ್ಮಿಸಿದ್ದಾನೆ. ಅದಕ್ಕಾಗಿ ನಿನ್ನನ್ನು ನಾನು ಶಿಕ್ಷಿಸುತ್ತೇನೆ' ಎಂದು ಹೇಳಿ ಯಮಧರ್ಮನ ಮೇಲೆ ಪ್ರಾಣಾಂತಿಕ ಬಾಣಗಳನ್ನು ಸುರಿಸಿದನು. ಅವನ ಮಾತುಗಳನ್ನು ಕೇಳಿ ಯಮನಿಗೂ ಕೋಪ ಬಂದಿತು. ದೈತ್ಯನ ಪ್ರಳಯಾಗ್ನಿಯಂತಿರುವ ಬಾಣಗಳನ್ನೆಲ್ಲ ದಾರಿಯಲ್ಲಿಯೇ ಯಮನು ಕತ್ತರಿಸಿ ಹಾಕಿದನು. ಆ ದೇವಾಂತಕನು ಮಹಾಪರಾಕ್ರಮಿ. ಆದುದರಿಂದ ಒಂದು ಇಡೀ ಹಗಲು ಹಾಗೂ ರಾತ್ರಿ ದಾರುಣವಾದ ಯುದ್ಧ ನಡೆದು, ಕ್ರುದ್ಧನಾದ ದೇವಾಂತಕನು ಕೋಪದಿಂದ ಯಮನ ಮೇಲೆ ಶಕ್ತ್ಯಾಯುಧ ಪ್ರಯೋಗಿಸಿದನು. ಸರ್ವ ಸಮರ್ಥನಾದ ಆ ಪ್ರೇತಪತಿಯು ಅದೇ ಆಯುಧವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಆ ದೈತ್ಯನ ಎದೆಗೆ ಕುಟ್ಟಿದನು. ಆಗ ದೈತ್ಯನು ರಕ್ತವನ್ನು ಬಾಯಿಂದ ಸುರಿಸಿ ನೆಲಕ್ಕೆ ಬಿದ್ದನು. ಅದನ್ನು ಕಂಡು ಅಲ್ಲಿಯೇ ಇದ್ದ ದುರ್ಧರ್ಷ ಎಂಬ ದಾನವ ವೀರನು ಶೂಲಾಯುಧ ತೆಗೆದುಕೊಂಡು ಯಮನನ್ನು ತಿವಿದು, ಹೊಡೆದನು. ಆಗ ಕೋಪಗೊಂಡ ಯಮಧರ್ಮನು ಮತ್ತೆ ಅದೇ ಶಕ್ತ್ಯಾಯುಧವನ್ನು ದೈತ್ಯನ ಮೇಲೆ ಪ್ರಯೋಗಿಸಿದನು. ಆಗ ದೈತ್ಯನ ಎದೆ ಸೀಳಿ ನೆಲಕ್ಕೆ ಬಿದ್ದನು. ಅನಂತರ

ದುರ್ಮುಖನೆಂಬ ದುಷ್ಟ ದೈತ್ಯನು ಯಮನ ಮೇಲೆ ಎರಗಿದನು. ಕೂಡಲೇ ಯಮಧರ್ಮನು ಖಡ್ಗದಿಂದ ಆ ದುರ್ಮುಖನ ಶಿರಸ್ಸನ್ನು ಕಡಿದು ರಣದಲ್ಲಿ ಕೆಡವಿದನು. ದೈತ್ಯರ ಈ ಭೀಷಣ ಹತ್ಯಾಕಾಂಡ ಕಂಡು ದೈತ್ಯ ಸೇನೆಯೆಲ್ಲ ದಿಕ್ಕಾಪಾಲಾಗಿ ಓಡಿತು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದುರ್ಮುಖವಧ ಎಂಬ ಅರವತ್ತೆಂಟನೇ ಅಧ್ಯಾಯ ಮುಗಿದುದು*

—o—

## ವಿಷ್ಣು-ಮಧುಸೂದನನಾದ

## ಅಧ್ಯಾಯ - ೬೯

**ವ್ಯಾಸ :-** ಮಧು ಎಂಬ ದೈತ್ಯನು ಒಳ್ಳೆಯ ರಥಾರೂಢನಾಗಿ ಧನುರ್ಬಾಣಗಳನ್ನು ಹಿಡಿದುಕೊಂಡು ಶ್ರೀ ವಿಷ್ಣುವನ್ನು ಎದುರಿಸಿದನು. ಕೋಪದಿಂದ ಆ ಲಕ್ಷ್ಮೀಪತಿಯನ್ನು ಹೀಯಾಳಿಸುತ್ತ ನುಡಿದನು.

**ಮಧು :-** ವಿಷ್ಣುವೇ ನಿನಗೆ ಯುದ್ಧದ ರೀತಿ ನೀತಿ ಒಂದೂ ತಿಳಿಯದು. ಕ್ಷತ್ರಿಯ ಧರ್ಮವೆಂಬುದೇ ಗೊತ್ತಿಲ್ಲ. ನೀನು ಕ್ಷತ್ರಿಯರನ್ನು ದೈತ್ಯರನ್ನು ಕೊಂದದ್ದು ಅನ್ಯಾಯ ಹಾಗೂ ಕಪಟತನದಿಂದ ಇಷ್ಟು ಪಾಪ ಮಾಡಿಯೂ ನಿನಗೆ ಕೆಡುಕೆನಿಸಿಲ್ಲ. ನಿನ್ನ ಭೀಕರವಾದ ಪಾಪದಿಂದ ನಿನ್ನಲ್ಲಿ ದೇವತ್ವವೇ ನಾಶವಾಗಿದೆ. ನಿನಗೆ ಮೊದಲಿನಂತೆ ಸೃಷ್ಟಿ ಪಾಲನ ಸಾಮರ್ಥ್ಯವು ಉಳಿದಿಲ್ಲ. ಅದಕ್ಕಾಗಿ ನಾನು ಬೇರೆಯವರನ್ನೇ ಸೃಷ್ಟಿ ಮಾಡುತ್ತೇನೆ. ರಕ್ಷಣೆಗಾಗಿ ಬೇರೆಯವರನ್ನೇ ನಿಯಮಿಸುತ್ತೇನೆ. ಅದಕ್ಕಿಂತ ಮೊದಲು ಆ ಸೃಷ್ಟಿ ಸ್ಥಿತಿ ಕಾರ್ಯದಲ್ಲಿ ಅಸಮರ್ಥನಾದ ನಿನ್ನನ್ನು ಕೊಂದುಹಾಕುತ್ತೇನೆ ನಿನ್ನ ಅನುಯಾಯಿಗಳಾದ ದೇವತೆಗಳನ್ನೂ ಕೂಡ.

ಹೀಗೆ ಬಿರುನುಡಿಗಳನ್ನಾಡಿ ಶರವೃಷ್ಟಿಯನ್ನೇ ಮಾಧವನ ಮೇಲೆ ಕರೆದನು. ಆಗ ನಾರಾಯಣನು ಆ ಮಧು ದೈತ್ಯನ ಎಲ್ಲ ಬಾಣಗಳನ್ನೂ ಕಡಿದುಹಾಕಿದನು. ವಜ್ರಸದೃಶ ಬಾಣಗಳಿಂದ. ಮತ್ತು ಅವನ ಮೇಲೆ ಅನೇಕ ಕ್ರೂರ ಬಾಣಗಳನ್ನು ಎಸೆದನು. ಆಗ ಮಧು ದೈತ್ಯನು ಮಾಯಾ ಪ್ರಯೋಗವನ್ನು ಮಾಡಿದನು. ಅದರಿಂದ ರುದ್ರಗಣಗಳು, ಬಲಿಷ್ಠವಾದ ದೇವತಾಗಣಗಳು, ಸೇನಾಪತಿಗಳು, ಅಜ್ಞಾನವಶರಾಗಿ ತಮ್ಮ ತಮ್ಮಲ್ಲಿ ಯುದ್ಧ ಮಾಡತೊಡಗಿದರು. ಹೀಗೆ ದೇವತೆಗಳು ಪರಸ್ಪರ ಬಡಿದಾಡಿ ನಾಶ ಹೊಂದುವದನ್ನು ನೋಡಿ ವಿಷ್ಣುವು ಸುದರ್ಶನ ಚಕ್ರ ಹಿಡಿದು ಮಾಯಾವಿ ರಾಕ್ಷಸರನ್ನು ಕೊಂದನು. ಸಾವಿರ ಸಾವಿರ ಸಂಖ್ಯೆಯಲ್ಲಿ ದೈತ್ಯರ ತಲೆಗಳನ್ನು ಕಡಿದು ಒಟ್ಟಿದನು. ಸುದರ್ಶನ ಚಕ್ರದ ಭಯದಿಂದ ಬೆದರಿದ ದೈತ್ಯರೆಲ್ಲರೂ ಯುದ್ಧಭೂಮಿಯಿಂದ ಓಡಿಬಿಟ್ಟರು. ಆಗ ಮತ್ತೆ ಮಧು ದೈತ್ಯನು ತನ್ನ ಮಾಯೆಯಿಂದ ಮಹಾದೇವನ ರೂಪ ಧರಿಸಿ ಬಂದು ಹರಿಯನ್ನು ಕುರಿತು ಮಾತನಾಡಿದನು.

**ಮಧು :-** ಎಲೈ ಪಾಪಿಯೆ, ದೈತ್ಯರ ಎದುರಿಗೆ ನೀನು ದೇವತೆಗಳನ್ನು ಕೊಲ್ಲುತ್ತಿರುವಿ. ಇದರಿಂದ ನಿನಗೆ ಏನು ಲಾಭ? ಇದರಿಂದ ನಿನಗೆ ಯಾವದೇ ಧರ್ಮ, ಕೀರ್ತಿ ಬರುವುದೆ? ನೀನು ಬಹಳ ಮದೋನ್ಮತ್ತನಾಗಿರುವಿ, ನಿನಗೆ ನನ್ನವರು ತನ್ನವರು ಯಾರು ಎಂಬುದು ತಿಳಿಯದು. ಆದ್ದರಿಂದ ಈಗಲೇ ನನ್ನ ಬಾಣಗಳಿಂದ ಕೊಲ್ಲುತ್ತೇನೆ.

ಹೀಗೆಂದು ಶ್ರೀ ಹರಿಯ ಮೇಲೆ ಬಾಣ ಬಿಟ್ಟನು. ಶ್ರೀಮನ್ನಾರಾಯಣನು ಆ ದೈತ್ಯನ ಬಾಣಗಳನ್ನು ಕತ್ತರಿಸಿ 'ಮೂರ್ಖ' ನನಗೆಲ್ಲ ಗೊತ್ತು ನಿನ್ನ ಈ ಕುತಂತ್ರ. ಮಾಯೆಯಿಂದ ನೀನು ಮಹಾದೇವರ ರೂಪ ಧರಿಸಿ ಬಂದಿರುವೆ. ನಿನ್ನ ಮಾಯಾ ಚೇಷ್ಟೆಯ ಮರ್ಮವನ್ನು ನಾನು ತಿಳಿದಿದ್ದೇನೆ. ನಿನ್ನನ್ನು ಈಗಲೇ ಕೊಂದು ನರಕಕ್ಕೆ ಸಾಗಿಸುತ್ತೇನೆ' ಎಂದು ಹೇಳಿ ಮಾಯಾ ಮಹೇಶ್ವರನ ಜಟಾ ಜೂಟಾಕ್ಕೂ, ಬಸವನಮೇಲೆ ಕುಳಿತ ಆ ಈಶ್ವರನ ವೇಷ ಧರಿಸಿದ ದೈತ್ಯನಿಗೂ ಬಾಣ ಹೊಡೆದನು. ಅವರಿಬ್ಬರ ನಡುವೆ ಭಯಂಕರ ಯುದ್ಧ ನಡೆಯಿತು.

ಆ ದುಷ್ಟನಾದ ಮಧು ದೈತ್ಯನು ಕಾಳೀದೇವಿಯ ರೂಪ ಧರಿಸಿ ಸಿಂಹದ ಮೇಲೆ ಕುಳಿತು ಬಾಣ ಪ್ರಯೋಗ ಮಾಡುತ್ತ ವಿಷ್ಣುವಿಗೆ ಇಂತೆಂದನು.

**ಕಾಳಿಕಾ :-** ಎಲೈ ವಿಷ್ಣುವೆ, ನೀನು ನನ್ನ ಗಂಡನನ್ನು ಸಂಹರಿಸಿದೆ. ಆದುದರಿಂದ ನಾನು ನನ್ನ ಮಕ್ಕಳಾದ ಸ್ಕಂದ, ವಿನಾಯಕರನ್ನು ಕೊಲ್ಲುತ್ತೇನೆ.

ಆಗ ವಿಷ್ಣುವು, ಆ ಮಾಯಾ ಮಹಾದೇವರಂತೆ ಇದೂ ಒಂದು ಮಧು ದೈತ್ಯನ ಮಾಯಾ ಪಾರ್ವತಿಯ ರೂಪವೆಂದು ತಿಳಿದು, ಆ ಮಾಯಾ ಕಾಳಿಕಾದೇವಿಯನ್ನು ಭೀಕರ ಬಾಣ ಪ್ರಯೋಗದಿಂದ ಕೊಂದುಹಾಕಿದ. ಇದನ್ನು ನೋಡಿ ಬಲಿಷ್ಠನಾದ ಕುಮಾರ ಸ್ವಾಮಿಯು ದುಃಖಾಕ್ರಾಂತನಾದ. ತನ್ನ ತಂದೆ ತಾಯಿಯಾದ ಹರ ಮತ್ತು ಕಾಳಿಕಾಂಬೆಯನ್ನು ಕೊಂದ್ರದಕ್ಕೆ ಕೋಪಗೊಂಡು. ಶಕ್ತ್ಯಾಯುಧ ಹಿಡಿದು ಹರಿಯೊಡನೆ ಯುದ್ಧಕ್ಕೆ ಎದ್ದು ನಿಂತ. ಆಗ ಅಜ್ಞಾನದಿಂದ ಕೂಡಿದ ಸ್ಕಂದನನ್ನು ನೋಡಿ ಬ್ರಹ್ಮನು ನುಡಿದನು- 'ಸ್ಕಂದಾ, ಸ್ವಲ್ಪ ಮೇಲೆ ನೋಡು, ಮಧು ದೈತ್ಯನ ಮಾಯಾ ಯುದ್ಧವನ್ನು ಆಕಾಶದಲ್ಲಿ ನಿಂತು ನಿನ್ನ ತಾಯಿ ತಂದೆಗಳು ನೋಡುತ್ತಿದ್ದಾರೆ. ಅದನ್ನು ನೋಡಿ ಸ್ಕಂದನು ಇದು ದೈತ್ಯ ಮಾಯೆ ಎಂದು ತಿಳಿದು ಸಮಾಧಾನ ಪಟ್ಟು ಕೊಂಡನು.

ಆ ನಂತರ ದುಂಧೂ,ಸಿಂಧೂ ಎಂಬ ದೈತ್ಯ ಸಹೋದರರು ಶ್ರೀ ಹರಿಯನ್ನು ಕೊಲ್ಲಬಂದರು. ಆಗ ವಿಷ್ಣುವು ಗದೆಯಿಂದ ಅವರಿಬ್ಬರನ್ನೂ ಕೊಂದನು ಆಗ ಬ್ರಹ್ಮದೇವರೂ ಮಹಾದೇವನೂ ಕೂಡ ಶ್ರೀ ವಿಷ್ಣುವನ್ನು 'ಮಧುಸೂಧನ' ಎಂದು ಕರೆದು ಗೌರವಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ವಿಷ್ಣು-ಮಧುಸೂದನನಾದ ಎಂಬ ಆರವತ್ತೊಂಬತ್ತನೇಯ ಅಧ್ಯಾಯ ಮುಗಿದುದು*



ಇಂದ್ರಗೆದ್ದ ವೃತ್ರ ಬಿದ್ದ | ಅಧ್ಯಾಯ - ೭೦

**ವ್ಯಾಸ :-** ಅನಂತರ ದೈತ್ಯರಲ್ಲಿಯೇ ಮಹಾತೇಜಸ್ವಿಯಾದ ಆ ವೃತ್ರಾಸುರನು ಇಂದ್ರನನ್ನು ಎದುರಿಸಿದ ದಿಗ್ಗಜದಂತಿರುವ ಆನೆಯ ಮೇಲೆ ಕುಳಿತುಕೊಂಡಿದ್ದ ಆ ಶೂರ. ಇಂದ್ರನೂ ಐರಾವತವನ್ನು ಏರಿ ಅವನನ್ನು ಪ್ರತಿಭಟಿಸಿದ. ಅನೇಕ ಬಾಣಗಳಿಂದ ಹೊಡೆದು ವೃತ್ತನ ಆಡಿಯಿಂದ ಮುಡಿಯವರೆಗೆ ವೃತ್ರನ ಬಾಣ ಪ್ರಹಾರದಿಂದ ಇಂದ್ರನೂ ತತ್ತರಿಸಿಹೋದ. ಆದರೂ ಶೂರನಾದ ಆ ಸುರಪತಿಯು ಅರೆಕ್ಷಣದಲ್ಲಿ ತನ್ನನ್ನು ತಾನೇ ಸಾವರಿಸಿಕೊಂಡು, ಸಾವಿರ ಬಾಣಗಳನ್ನು ಬಿಟ್ಟು ವೃತ್ರನನ್ನು ಗಾಸಿಗೊಳಿಸಿದ. ಅವನ ಬಾಣ ರಭಸದಿಂದ ಆಗಸದಲ್ಲಿ ಸುಳಿಗಾಳಿಗಳು ಏಳುತ್ತಿದ್ದವು. ಬಾಣಗಳಿಂದ ದಿಙ್ಮಂಡಲವೆಲ್ಲ ಮುಚ್ಚಿ ಸೂರ್ಯನ ಕಿರಣಗಳೇ ನೆಲದವರೆಗೆ ಬಾರದಂತಾದವು. ಹೀಗೆ ಅವರಿಬ್ಬರಲ್ಲಿ ಒಳ್ಳೇ ತುರುಸಿನಿಂದ ನಡೆಯಿತು ನಿಕರದ ಹೋರಾಟ. ಅನಂತರ ವೃತ್ರನು ಮಾಯೆಯನ್ನು ಅವಲಂಬಿಸಿದ ಶೈಲಾಸ್ತ್ರವನ್ನು ಪ್ರಯೋಗಿಸಿದ. ಇಂದ್ರನು ಅದರಿಂದ ಬೀಳುತ್ತಲಿರುವ ಬೆಟ್ಟಗಳನ್ನು ಅಂತರಿಕ್ಷದಲ್ಲಿಯೇ ತಡೆದು ಅವುಗಳನ್ನೆಲ್ಲ ತನ್ನ ಬಾಣಗಳಿಂದ ಕಡಿದು ಕತ್ತರಿಸಿ ಹಾಕಿದನು. ಅನಂತರ ವೃತ್ರನ ಅಘೋರಾಸ್ತ್ರಪ್ರಯೋಗ. ಅದರಿಂದ ಕೋಟ್ಯಾವಧಿ ಪಶುಗಳು ಹುಟ್ಟಿಕೊಂಡವು. ಸಿಂಹ, ಹುಲಿ, ಹಾವು, ಚಿರತೆ ಮುಂತಾದ ಹಿಂಸ್ರಪ್ರಾಣಿಗಳು ಗುಂಪು ಗುಂಪಾಗಿ ಇಂದ್ರನನ್ನು ಕಚ್ಚಿ ಕೊಲ್ಲಲು ಓಡಿ ಬರತೊಡಗಿದವು. ಆಗ ದೇವೇಂದ್ರ ಅರ್ಧ ಚಂದ್ರಾಕಾರ ಬಾಣ ಪ್ರಯೋಗಿಸಿ ಅವೆಲ್ಲವುಗಳನ್ನು ಹಿಂದೆ ಸರಿಸಿ ಬರ್ಚಿ ಭಲ್ಲೆಗಳಿಂದ ಕೊಂದು ಹಾಕಿದನು. ಮುಂದೆ ವೃತ್ರನು ಭೀಕರವಾದ ಗದೆಯನ್ನು ಎತ್ತಿದನು. ಇಂದ್ರನು ಕುಳಿತ ಐರಾವತದ ನಡುನೆತ್ತಿಯ ಮೇಲೆ ಕುಟ್ಟಿದನು, ಅದರಿಂದ ಐರಾವತವು ನೆತ್ತರ ಕಾರುತ್ತ ನರಳಿ ನೆಲಕ್ಕೆ ಬಿದ್ದಿತು. ಕೂಡಲೇ ಇಂದ್ರನು ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಕೆಳಗೆ ಇಳಿದನು. ಇಬ್ಬರಿಗೂ ಭೀಷಣವಾದ ಗದಾಯುದ್ಧ ಪ್ರಾರಂಭ ಇಬ್ಬರೂ ಮಂಡಲಾಕಾರವಾಗಿ ತಿರುಗತೊಡಗಿದರು. ಅವರ್ತ, ಪರಿವರ್ತ ಊರ್ಧ್ವಪ್ರಹಾರ, ಪಾರ್ಶ್ವ ಪ್ರಹಾರ ಮುಂತಾದ ಮಂಡಲ ಭ್ರಮಣ ಮಾಡುತ್ತ ಹಣಿಯಲು ಹವಣಿಸತೊಡಗಿದರು. ಅವರ ಈ ಅದ್ಭುತಾಕಾರದ ಗದಾ ಸಂಗ್ರಾಮವನ್ನು ಕಂಡು, ದೇವದಾನವರು ದಿಗ್ಭ್ರಮೆಗೊಂಡು ನಿಂತರು. ಕೊನೆಗೆ ಪರಸ್ಪರ ಭೀಕರ ಪ್ರಹಾರದಿಂದ ಮುರಿದು ಪುಡಿಪುಡಿಯಾಗಿ ನೆಲದ ಮೇಲೆ ಬಿದ್ದವು.

ಅನಂತರ ಇಬ್ಬರೂ ಮುಷ್ಟಿಯುದ್ಧಕ್ಕೆ ಅಣಿಯಾದರು. ಆ ಮೇಲೆ ಖಡ್ಗಗಳನ್ನು ಝಳಪಿಸಿ ಮುಖಾಮುಖಿ ಹೋರಾಡಿದರು. ಕೊನೆಗೆ ಸ್ವರ್ಗಾಧಿ ಪತಿಯು ಮಿಂಚಿನಂತೆ ನೆಗೆದು ವೃತ್ರನ ಜುಟ್ಟನ್ನೇ ಹಿಡಿದ. ಅವನಿಗೆ ಕೊಸರಲು ಅವಕಾಶ ಕೊಡದೇ ಖಡ್ಗದಿಂದ ಅವನ ಕತ್ತನ್ನೇ ಕತ್ತರಿಸಿದ. ಆಗ ದೇವತೆಗಳು 'ಉಘೇ ಉಘೇ' ಎಂದು ಜಯ ಜಯಕಾರ ಮಾಡಿದರು. ದೇವ ದುಂದುಭಿಗಳು ಮೊಳಗಿದವು. ಗಂಧರ್ವರ ಹಾಡು, ಅಪ್ಸರೆಯರ ಕುಣಿತ, ಮುನಿ ಮಹರ್ಷಿಗಳ ಸ್ತುತಿ ವರ್ಷ, ಸುರಭಕ್ತರ ಪುಷ್ಪವರ್ಷ ಎಲ್ಲವೂ ಆ ಸುರರಾಜನ ಮೇಲೆ ಸುರಿದವು. ದೈತ್ಯರೆಲ್ಲರೂ ತಮ್ಮ ತಮ್ಮ ಆಯುಧಗಳ ಪರಿವೆ ಇಲ್ಲದೆ ಸಿಕ್ಕ ಸಿಕ್ಕತ್ತ ದಿಕ್ಕಾಪಾಲಾಗಿ ಓಡಿಹೋದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಇಂದ್ರಗೆದ್ದ ವೃತ್ರ ಬಿದ್ದ ಎಂಬ ಎಪ್ಪತ್ತನೇಯ ಅಧ್ಯಾಯ ಮುಗಿದುದು*

**ವ್ಯಾಸ :-** ತ್ರಿಪುರನ ಮಗನಾದ ತ್ರೈಪುರಿ ಎಂಬ ರಾಕ್ಷಸನು ರಥಾರೂಢನಾಗಿ ಗಣಪತಿಯನ್ನು ಎದುರಿಸಿದನು.

**ತ್ರೈಪುರಿ :-** ಲಂಬೋದರ, ನಮ್ಮ ಅಪ್ಪನನ್ನು ನಿನ್ನ ಅಪ್ಪ ಶಂಕರ ಕೊಂದಿದ್ದಾನೆ. ಆದ್ದರಿಂದ ನಾನು ಈಗ ಅದರ ಸೇಡನ್ನು ತೀರಿಸಿಕೊಳ್ಳುತ್ತೇನೆ. ನಿನ್ನನ್ನು ಇಂದೇ ಬಾಣ ಪ್ರಯೋಗದಿಂದ ಯಮನ ಮನೆಗೆ ಕಳಿಸುತ್ತೇನೆ.

**ಗಣಪತಿ :-** ನಿಮ್ಮ ತಂದೆ ದೇವತೆಗಳಿಗೆ ಅಹಿತಮಾಡಿದ್ದ. ಅದಕ್ಕಾಗಿಯೇ ಕೊಂದದ್ದು ನನ್ನ ತಾತ ಪರಮೇಶ್ವರ ಅವನನ್ನು. ನೀನೂ ಅದೇ ದುಷ್ಟ ತಂದೆಯ ಭ್ರಷ್ಟಮಗ. ನಿನ್ನನ್ನು ನಾನು ಕೊಂದು, ನೀನು ಬಾಯಿಂದ ಹೇಳುತ್ತಿರುವ ಅದೇ ಯಮನ ಮನೆಗೆ ಕಳಿಸಿಕೊಡುತ್ತೇನೆ.

ಹೀಗೆ ಗಣೇಶನು ಮಾತನಾಡುತ್ತಿರುವಾಗಲೇ ತ್ರೈಪುರಿಯು ಹದನವಾದ ಬಾಣಗಳಿಂದ ಬಲವಾಗಿ ಹೊಡೆದನು. ಆಗ ಗಣಪಗೆ ಕ್ರೋಧ ಬಂದಿತು. ಕಣ್ಣು ಕೆಂಪಗಾದವು. ಹರಿತವಾದ ಬಾಣಗಳಿಂದ ಆ ದೈತ್ಯನ ಬಾಣಗಳನ್ನೆಲ್ಲ ಕತ್ತರಿಸಿ ಹಾಕಿ ಮತ್ತೊಂದು ಬಾಣದಿಂದ ಆ ದೈತ್ಯನನ್ನು ಬಲವಾಗಿ ಹೊಡೆದ. ಆ ಪ್ರಹಾರ ತಾಳಲಾರದೆ ತ್ರೈಪುರಿಯು ಮೂರ್ಛೆ ಹೊಂದಿ ನೆಲಕ್ಕೆ ಬಿದ್ದ. ಆಮೇಲೆ ಭದ್ರ, ಸುಭದ್ರ, ಭೀಷಣ, ನಿರ್ಜನಾಂತಕ ಎಂಬ ದೈತ್ಯರು ಗದಾಪಾಣಿಗಳಾಗಿ ಏರಿ ಬಂದರು ವಿನಾಯಕನ ಮೇಲೆ ತಮ್ಮ ತಮ್ಮ ಗದೆಗಳನ್ನು ತೂರಿದರು. ಲಂಬೋದರನು ತನ್ನ ಯುದ್ಧ ಕೌಶಲ್ಯದಿಂದ ಎಲ್ಲವುಗಳನ್ನು ತಪ್ಪಿಸಿಕೊಂಡು ಕೊಡಲಿಯಿಂದ ಭದ್ರಕನನ್ನೂ, ಕತ್ತಿಯಿಂದ ಸೌಭದ್ರನ ಶಿರವನ್ನೂ, ಭರ್ಜಿಯಿಂದ ಭೀಷಣನ ಮಸ್ತಕವನ್ನೂ ಖಡ್ಗದಿಂದ ನಿರ್ಜನಾಂತಕನ ರುಂಡವನ್ನೂ ಕತ್ತರಿಸಿ ನೆಲಕ್ಕೆ ಕೆಡವಿದ.

ಇತ್ತ ಹಿರಣ್ಯಕಶಿಪುವು ತ್ರೈಪುರಿಯ ಈ ಪರಾಭವವನ್ನು ದೂರದಿಂದಲೇ ತಿಳಿದು ನೋಡಿದನು ಮತ್ತು ತಾನೇ ಜಪ ಮಾಡಿ ಅಭಿಮಂತ್ರಿಸಿದ ನೀರನ್ನು ಕುಡಿಸಿ, ಒಂದು ಆನೆಯನ್ನು ಕೊಬ್ಬಿಸಿ, ತ್ರೈಪುರಿಯ ಬಳಿಗೆ ಕಳಿಸಿ ಕೊಟ್ಟನು. ಹಿರಣ್ಯಕಶಿಪುವಿನ ಮಂತ್ರ ಬಲದಿಂದ ಕೊಬ್ಬಿ ಹೋದ ಆ ಮದ್ದಾನೆಯು ತನ್ನ ಕೋರೆದಾಡೆಯಿಂದ ಬೆಟ್ಟಗಳನ್ನೇ ಪುಡಿ ಮಾಡುತ್ತಿತ್ತು. ತ್ರೈಪುರಿಯು ಆ ಗಜವನ್ನು ಆರೋಹಣ ಮಾಡಿ, ದೇವತೆಗಳನ್ನು ಬಾಣಗಳಿಂದ ಸಂಹರಿಸತೊಡಗಿದನು. ಅನೇಕ ಸುರರು ಅವನ ಬಾಣಗಳಿಂದ ರಕ್ತಸಿಕ್ತ ಶರೀರರಾಗಿ ನೆಲದ ಮೇಲೆ ಉರುಳಿದರು. ತ್ರೈಪುರಿಯೂ ಅವನಿಗಿಂತ ಅವನ ವಾಹನವಾದ ಆ ಮದ್ದಾನೆಯೂ ದೇವತೆಗಳನ್ನು ಬಹು ಸಂಖ್ಯೆಯಲ್ಲಿ ಸಂಹರಿಸತೊಡಗಿತು. ಕೊನೆಗೆ ಆ ದೈತ್ಯರಿಬ್ಬರ ಘೋರಾಘಾತಗಳನ್ನು ತಾಳದೇ ಸುರರು ಗಣಪತಿಗೆ ಮೊರೆಹೊಕ್ಕರು. ಅದನ್ನು ನೋಡಿ ಆ ಗಜಮುಖನು ಆ ಗಜಕ್ಕೆ ಮೊದಲು ಬಾಣ ಗುರಿ ಇಟ್ಟನು. ಗಣಪತಿಯ ಪೆಟ್ಟನ್ನು ತಾಳಲಾರದೇ ಆ ಗಜಪತಿಯು ಓಡತೊಡಗಿತು. ಆಗ ಅದರ ಮೇಲೆ ಕುಳಿತು ತ್ರೈಪುರಿಯು ಅಂಕುಶದಿಂದ ತಿವಿದು, ಅದನ್ನು ಯುದ್ಧ ಸಮ್ಮುಖ ಮಾಡಿಕೊಂಡು ಗಣಪತಿಯ ಮೇಲೆ ಬಾಣ ಪ್ರಯೋಗ ಮಾಡಿದನು. ಹೀಗೆ ಇಬ್ಬರೂ ಸಿಂಹನಾದ ಮಾಡುತ್ತ ಬಹಳ ಹೊತ್ತಿನವರೆಗೆ ಹೋರಾಡಿದರು. ಇಬ್ಬರ ದೇಹಗಳು ರಕ್ತದ ಕಾರಂಜಯಾಗಿದ್ದವು. ಅನಂತರ ಆ ಮದ್ದಾನೆಯು ತನ್ನ ಕೊರೆದಾಡೆಗಳಿಂದ ಗಣೇಶನನ್ನು

ತಿವಿದು ಹೊಡೆಯಿತು. ಆಗ ಗಣಪತಿಯು ತನ್ನ ಕೊಡಲಿಯನ್ನು ಎತ್ತಿ ಆ ಆನೆಯ ಕೊರೆಗಳ ಬಳಿ, ಕುಂಭ ಸ್ಥಳಕ್ಕೆ ಬಲವಾದ ಏಟು ಹಾಕಿದನು. ಅದರಂತೆ ತ್ರೈಪುರಿಯ ಎದೆಗೆ ಒಂದು ಭೀಕರ ಪ್ರಹಾರ ಮಾಡಿದನು. ಕೂಡಲೇ ಆನೆಯು ಮತ್ತು ಆ ಆನೆಯ ಒಡೆಯನಾದ ತ್ರೈಪುರಿಯು ಸತ್ತು ಧರಾಶಾಯಿ ಆದರು.

''ಭಲೆ ಭಾಪು ಗಣೇಶ...'' ಎಂದು ಸ್ತುತಿಸಿದರು ಸುರಸಂಘದವರು. ಅರಳು ಮಂದಾರಗಳನ್ನು ಚೆಲ್ಲಿದರು ಗಂದರ್ವರು. ಹಾಡಿ ಕುಣಿದರು ತುಂಬುರು ನಾರದರು. ನಲಿದು ನರ್ತಿಸಿದರು ನಾರದ ಹಾಗೂ ನಿಲಿಂಪ ನಲ್ಲೆಯರು. ದೈತ್ಯರು ಮಾತ್ರ 'ಬದುಕಿದರೆ ಸಾಕು' ಎಂದು ಓಡತೊಡಗಿದರು. ಆಗ ಶಿವ ಪಾರ್ವತಿಯರು ದೇವತೆಗಳನ್ನು ಕರೆದು ಹೇಳಿದರು.

ಪೂರ್ಣ ಜಯ ದೊರಕುವವರೆಗೆ ಯುದ್ಧವನ್ನು ನಿಲ್ಲಿಸಬೇಡಿರಿ. ಉಳಿದ ದೈತ್ಯರೆಲ್ಲರನ್ನೂ ಇಂದು ಮಿಕ್ಕ ದೇವತೆಗಳು ಕೂಡಿ ಅಮೋಘ ಶಸ್ತ್ರಾಸ್ತ್ರ ಪ್ರಯೋಗಿಸಿ ಹೊಡೆದು ಹಾಕಿರಿ. ಯುದ್ಧವನ್ನು ನಿಲ್ಲಿಸಬೇಡಿರಿ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಗಣಪತಿ ಗೆಲ್ಲಿಸಿದ ಎಂಬ ಎಪ್ಪತ್ತೊಂದನೇಯ ಅಧ್ಯಾಯ ಮುಗಿದುದು*



## ಹಿರಣ್ಯಾಕ್ಷನ ವಧ

**ಅಧ್ಯಾಯ - ೭೨**

**ವ್ಯಾಸ :-** ಮಹೇಶ್ವರ ದಂಪತಿಗಳ ಮಾತುಗಳನ್ನು ತಕ್ಷಣ ಮನ್ನಿಸಿದರು. ಆ ಸುರಸೈನಿಕರು. ಇಂದ್ರನೇ ಮುಂದಾದ, ದೈತ್ಯರ ದಳದ ಮೇಲೆ ಎರಗಿ ಸಂಹರಿಸಲು ಉಪಕ್ರಮಿಸಿದ. ಕುಂಭ ಎಂಬ ದಾನವ ಹುಂಬನಂತೆ ಏರಿ ಬಂದು ಧನಾಧ್ಯಕ್ಷನಾದ ಕುಬೇರನನ್ನು ಗದೆಯಿಂದ ಗಾಸಿಗೊಳಿಸಿದ. ಕುಬೇರನಿಗೂ ಅವನಿಗೂ ಗದಾಯುದ್ಧ ನಡೆಯಿತು. ಚಕ್ರಬಂಧ, ಮಹಾಬಂಧ, ಪೂರ್ವವಧ್ಯಾ, ಪ್ರಾಚುರಾ, ಭೀಷಣ, ಯಾನಸ್ಫೋಟ, ಕೈಲಾ, ಅಭಿವಾಸ್ತಿಕಾ ಎಂದು ನಾನಾ ಬಗೆಯ ಬಂಧುಗಳಿಂದ ಶಾಸ್ತ್ರೋಕ್ತವಾಗಿ ಇಬ್ಬರೂ ಕಲಿತನದಿಂದ ಕಾದಿದರು. ಕೊನೆಗೆ ಕುಬೇರನು ಸ್ಫೋಟ ಎಂಬ ಗದಾಯುದ್ಧದ ಒಂದು ವಿಶಿಷ್ಟ ಪ್ರಹಾರದ ಕ್ರಮದಿಂದ ಕುಂಭನ ವಕ್ಷಸ್ಥಳಕ್ಕೆ ಹೊಡೆತವಿಟ್ಟನು. ಅದರಿಂದ ದೈತ್ಯನ ಹಲ್ಲುಗಳೆಲ್ಲವೂ ಮುರಿದು ಹೋದವು. ಹರಣವು ಹಾರಿಹೋಯಿತು. ಅನಂತರ ಜಂಭ ಎಂಬ ಮತ್ತೊಬ್ಬನ ಮೃತದೇಹ ಮುಳುಗಿಹೋಯಿತು. ಸ್ಕಂದಸ್ವಾಮಿಯು, ಅನಂತರ ಅರಣ್ಯ, ಸುಘೋರ, ಅಘೋರ, ಘೋರ ನಾಲ್ಕು ದೈತ್ಯ ಪ್ರಮುಖರನ್ನು ಪ್ರಹರಿಸಿ ಸಂಹರಿಸಿದನು. ಇಂದ್ರಕುಮಾರ ಜಯಂತನು ಮೊದಲು ಸೌರಭ್ಯನನ್ನೂ, ಅನಂತರ ಯಮನು ಶಕ್ಯಾಸುರನನ್ನು ಆ ಮೇಲೆ ಹಸ್ತ ದೈತ್ಯನನ್ನು, ಕೊನೆಗೆ ಸಲ್ಹಾದ ನರಾಂತಕ ಎಂಬ ದೈತ್ಯವೀರರನ್ನು ತನ್ನ ಖಡ್ಗದಿಂದ ಹೊಡೆದುಕೊಂದನು. ಅಗ್ನಿಯು ಭ್ರಬಾಹು, ಮಹಾಬಾಹು, ಸುಗಂಧ, ಗಂದ, ನಲ್ಲಕ, ಭೀಮ, ಮೊದಲಾದವರನ್ನು ಯುದ್ಧದಲ್ಲಿ ಸುಟ್ಟು ಹಾಕಿದನು. ವರುಣನು ಪಾಶಾಯುಧದಿಂದ ವೀರಶೂರರಾದ ಅನೇಕ ದೈತ್ಯರನ್ನು ಗತಪ್ರಾಣರನ್ನಾಗಿ ಒಗೆದನು.

ತರು, ತುಂಬರು ಮೇಘಾಭ, ಅಸಾಧಕ, ಸಾಧಕ ಎಂಬ ಅಸುರರನ್ನು ಸುಟ್ಟನು ಸೂರ್ಯದೇವ. ಕ್ರೂರ, ಕ್ರೌಂಚ, ಮೋದ, ಸಂಮ್ಮೋದ, ಷಣ್ಮುಖ ಎಂಬ ದೈತ್ಯರ ಪ್ರಾಣವಾಯುವನ್ನು ಸ್ವಯಂ ವಾಯುದೇವನೇ ಸೆಳೆದು ಬಿಟ್ಟನು. ನೈಋತ್ಯನ ಗದಾಪ್ರಹಾರದಿಂದ ಭೌಮ ಪ್ರಾಣನೀಗಿದ. ಏಕಾದಶ ರುದ್ರರ ಶೂಲಗಳಿಂದ, ಅಷ್ಟ ವಸುಗಳ ಬಾಣಗಳಿಂದ ಮೇಘ ಪಡೆಗಳ ಆಣೆಕಲ್ಲುಗಳಿಂದ, ಸಿಡಿಲಿನಿಂದ ಸತ್ತ ದೈತ್ಯರಿಗೆ ಲೆಕ್ಕವಿಲ್ಲ, ಕುಬೇರನ ಪಾಲಿಗೆ ಅನೇಕ ದೈತ್ಯರನ್ನು ಕೊಲ್ಲಲು ಸರದಿ ಬಂದಿತ್ತು. ಇಂದ್ರನ ವಜ್ರಾಯುಧಕ್ಕೆ ಬಲಿಯಾದ ದೈತ್ಯರೆಷ್ಟೊ! ಸ್ಕಂದನ ಶಕ್ತ್ಯಾಯುಧವು ಗಣೇಶನ ಕೊಡಲಿಯು, ವಿಷ್ಣುವಿನ ಚಕ್ರವು ಎಷ್ಟು ಜನ ದೈತ್ಯರ ತಲೆಗಳನ್ನು ಬಲಿಕೊಂಡವು ಎನ್ನುವದಕ್ಕೆ ಗಣನೆಯೇ ಇಲ್ಲ ಅನೇಕರು ಯಮನ ಯಮದಂಡಕ್ಕೆ ಬಲಿಯಾದರು. ಗಂಧರ್ವ ಸಿದ್ಧ, ಹಾಗೂ ಉಳಿದ ದೇವಗಣಗಳ ಹಾಗೂ ಗಣಾಧಿಪತಿಗಳ ಶಸ್ತ್ರಾಸ್ತ್ರಗಳಿಂದ ಬಲಿಯಾಗಿ ಕೋಟಿ ದೈತ್ಯರು ಅಸು ನೀಗಿದರು.

ದೈತ್ಯ ಸೇನೆಯಲ್ಲಿ ನಡೆದ ಈ ಮೃತ್ಯುತಾಂಡವ ಕಂಡು ಸ್ವಯಂ ಹಿರಣ್ಯಾಕ್ಷನೇ ರಣರಂಗಕ್ಕೆ ಇಳಿದನು. ಅವನು ಕುಳಿತ ರಥ ಸೂರ್ಯನಂತೆ ದೇದೀಪ್ಯಮಾನವಾಗಿತ್ತು. ರಥಾರೂಢನಾಗಿ, ಯುದ್ಧಭೂಮಿಗೆ ಬಂದ ಹಿರಣ್ಯಾಕ್ಷನು ಅತ್ಯಂತ ಕ್ರುದ್ಧನಾಗಿದ್ದರಿಂದ ನಿಜವಾಗಿಯೇ ರಣಭೈರವನಾಗಿದ್ದನು. ಅವನ ಶಸ್ತ್ರಾಹತಿಗೆ ಹೌಹಾರಿ ದೇವಸೇನೆಯ ಬಹುಭಾಗವು ಉಧ್ವಸ್ತವಾಯಿತು. ಆಗ ನೊಂದ ದೇವತೆಗಳು ಇಂದ್ರನನ್ನು ಮುಂದೆ ಮಾಡಿಕೊಂಡು, ತಮ್ಮೆಲ್ಲರ ರಕ್ಷಕನಾದ ನಾರಾಯಣನಿಗೆ ಶರಣು ಹೋದರು. ಆಗ ಶ್ರೀ ವಿಷ್ಣುವು ಗರುಡಾರೂಢನಾಗಿ ಯುದ್ಧ ಕ್ಷೇತ್ರಕ್ಕೆ ಆಗಮಿಸಿದನು. ಆಗ ಹಿರಣ್ಯಾಕ್ಷನಿಗೂ ಹರಿಗೂ ಅದ್ಭುತವಾದ ಭೀಷಣ ಯುದ್ಧ ನಡೆಯಿತು. ಹಿರಣ್ಯಾಕ್ಷನು ಕುಪಿತನಾಗಿ ಬೆಟ್ಟಗಳನ್ನು ಎಸೆದು ವಿಷ್ಣುವನ್ನು ಹೊಡೆದನು. ತನ್ನ ಮೇಲೆ ಎಸೆದ ಬೆಟ್ಟಗಳನ್ನು ಶ್ರೀ ಹರಿಯು ತನ್ನ ಗದಾಪ್ರಹಾರದಿಂದ ಪುಡಿ ಮಾಡಿದನು. ಅನಂತರ ಆ ರಾಕ್ಷಸನು ಸಾವಿರ ತೋಳುಗಳನ್ನು ಹೊಂದಿ, ಬಾಣ ಮುದ್ಗರಗಳಿಂದ ಯುದ್ಧಕ್ಕೆ ತೊಡಗಿದನು. ಅವೆಲ್ಲವುಗಳನ್ನು ವಿಷ್ಣುವು ಕತ್ತರಿಸಿ ಹಾಕಿದನು ಮತ್ತು ಹಿರಣ್ಯಾಕ್ಷನ ಮೇಲೆ ಬಾಣ ಪ್ರಯೋಗಮಾಡಿದನು. ಅದರಿಂದ ಹಿರಣ್ಯಾಕ್ಷನು ಬಿದ್ದು ಬಿಟ್ಟನು- ಮೂರ್ಛಾಕ್ರಾಂತನಾಗಿ ಕೆಲವೇಕ್ಷಣದಲ್ಲಿ ಮೂರ್ಛೆಯಿಂದ ಮೇಲೆದ್ದು ಹರಿಯ ಮೇಲೆ ಹರಿ ಬಿಟ್ಟನು ತನ್ನ ಶಕ್ತ್ಯಾಯುಧವನ್ನು ಅದರಿಂದ ಹೊಡೆಯಲ್ಪಟ್ಟ ಹರಿಯು ಮಿಂಚಿನಿಂದ ಪ್ರವೇಶಿಸಿದನು. ಹೀಗೆ ದೇವಮಾನದ ನೂರು ವರ್ಷಗಳವರೆಗೆ ಅವರಿಬ್ಬರ ನಡುವೆ ಮಹಾಯುದ್ಧಗಳು ನಡೆದವು. ಮಹಾಶಕ್ತಿಯುಳ್ಳ ಹಿರಣ್ಯಾಕ್ಷನು ಕೊನೆಗೆ ವಾಮನಾವತಾರದಲ್ಲಿ ವಿಷ್ಣುವು ಬೆಳೆದಂತೆ ಬ್ರಹ್ಮಾಂಡದವರೆಗೆ ಬೆಳೆದು ಮೂರು ಲೋಕಗಳನ್ನು ತನ್ನ ಬಾಯಿಯಲ್ಲಿ ಹಿಡಿದು ಕೊಂಡನು. ಹೀಗೆ ಮೂರು ಲೋಕಗಳನ್ನು ತನ್ನ ಹಲ್ಲಿನಲ್ಲಿ ಕಚ್ಚಿಕೊಂಡು ಹಿರಣ್ಯಾಕ್ಷನು ರಸಾತಳಕ್ಕೆ ಇಳಿದನು. ಅವನ ಅನುಯಾಯಿಗಳಾದ ದೈತ್ಯರು ಅವನ ಜೊತೆಗೇ ಹೋದರು.

ಈ ಹಿರಣ್ಯಾಕ್ಷನನ್ನು ಸಂಹರಿಸಲು ವಿಷ್ಣುವು ವರಾಹಾವತಾರವನ್ನು ತಾಳಿದನು. ಹಂದಿಯ ರೂಪವನ್ನು ಹೊಂದಿ ಶ್ರೀ ಹರಿಯು ಆ ದೈತ್ಯನ ಹಿಂದೆಯೇ ಹೋಗಿ

ರಸಾತಳದಿಂದ ಆ ಭೂಮಿಯನ್ನು ಹಲ್ಲಿನಲ್ಲಿ ಹಿಡಿದುಕೊಂಡು ಹೊರಟ ಆ ವಿಷ್ಣುವನ್ನು ಬೆನ್ನಟ್ಟಿ ದೈತ್ಯನು ಆ ವರಾಹನನ್ನು ಪ್ರಹರಿಸಿದನು. ಆಗ ವಿಷ್ಣುವು ದೈತ್ಯನ ಏಟನ್ನು ತಾಳಿಕೊಂಡು, ಭೂಮಿಯನ್ನು ಮೇಲೆತ್ತಿ ಅದನ್ನು ಬೆಟ್ಟವೆಂದು ಕಲ್ಪಿಸಿ ಅಲ್ಲಿಟ್ಟು ಅಲ್ಲಾಡದಂತೆ ಮಾಡಿದನು. ಹಿರಣ್ಯಕ್ಷನು ಗದಾಪ್ರಹಾರಮಾಡಿದನು. ಹೀಗೆ ಬಹು ಸಮಯದವರೆಗೆ ಹರಿ ಹಿರಣ್ಯಾಕ್ಷರ ನಡುವೆ ಹೋರಾಟ ನಡೆದರೂ ದಿನಗಳೆದಂತೆ ಅದು ಇನ್ನೂ ಭೀಕರವಾಗುತ್ತ ಹೋಯಿತು. ಆಗ ಬ್ರಹ್ಮಾದಿ ದೇವತೆಗಳು ವಿಷ್ಣುವಿಗೆ ಪ್ರಾರ್ಥನೆ ಮಾಡಿದರು. 'ಸ್ವಾಮಿ, ಹುಡುಗರಂತೆ ಇವನೊಡನೆ ಆಡಬೇಡ. ದೇವಕಂಟಕನಾದ ಈ ದೈತ್ಯನನ್ನು ಬೇಗ ಸಂಹರಿಸು' ಅವರ ಮಾತನ್ನು ಮನ್ನಿಸಿ ಹರಿಯು ತನ್ನ ಭಯಂಕರ ಚಕ್ರವನ್ನು ಹಿರಣ್ಯಾಕ್ಷನ ಮೇಲೆ ಎಸೆದನು. ಬ್ರಹ್ಮ ಇಂದ್ರ ಶಿವ ಮೊದಲಾದ ದೇವತೆಗಳು ನೋಡುತ್ತಿದ್ದಂತೆ ಬಲಿಷ್ಠ ಹಿರಣ್ಯಾಕ್ಷನನ್ನು ಕೊಂದುಹಾಕಿದನು. ಎಲ್ಲ ದೇವತೆಗಳು ಶ್ರೀ ಹರಿಯ ಜಯ ಜಯಕಾರ ಮಾಡಿದರು. ಮತ್ತು ಎಲ್ಲ ಸುರಮುನಿಗಳು ಶ್ರೀಹರಿಯ ಬಳಿಗೆ ಬಂದು ಅರ್ಥಗರ್ಭಿತ ಸ್ತೋತ್ರಗಳಿಂದ ಅವನನ್ನು ಸ್ತುತಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಹಿರಣ್ಯಾಕ್ಷನ ವಧ ಎಂಬ ಎಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ಧರ್ಮಾಚರಣೆ

**ಅಧ್ಯಾಯ - ೭೩**

**ವೈಶಂಪಾಯನ** :- ರಣಾಂಗಣದಲ್ಲಿ ವೈರಿಗಳೊಡನೆ ಹೋರಾಡುತ್ತ ಸಮ್ಮುಖದಲ್ಲಿ ಮಡಿದ ದೈತ್ಯರಿಗೆ ಎಂತಹ ಗತಿಯು ಆಗುವದು? ಇದನ್ನು ಕೇಳಬೇಕೆಂಬ ಬಯಕೆ ನನಗುಂಟಾಗಿದೆ ಮೊದಲು ಮೂರು ಲೋಕಗಳಲ್ಲಿ ಇದ್ದ ದೈತ್ಯರಿಗೆ ಇತಿ ಮಿತಿ ಇರಲಿಲ್ಲ. ಈಗ ಆ ಎಲ್ಲ ಅಸಂಖ್ಯಾತ ದೈತ್ಯರು ದಾನವರು ಎಲ್ಲಿ ಇರುತ್ತಾರೆ? ಗುರುಗಳೇ ಅದನ್ನು ನನಗೆ ತಿಳಿಸಿ.

**ವ್ಯಾಸ** :- ರಣರಂಗದಲ್ಲಿ ಶತ್ರುಗಳೊಡನೆ ಹೋರಾಡುತ್ತಲೇ ಮರಣ ಹೊಂದಿರುವ ವೀರ ಸ್ವರ್ಗ ಹೊಂದುವರು. ಅಲ್ಲಿ ಆ ಸಚ್ಚೇತನಗಳು ದಿವ್ಯ ಭೋಗಗಳನ್ನು ಅನುಭವಿಸುವವರು. ಅಮರಾವತಿಯಲ್ಲಿ ಶೃಂಗಾರಿತವಾದ ಬಂಗಾರದ ಮನೆಗಳಲ್ಲಿ ವಾಸ. ಕುಮುದ, ಕಲ್ಹಾರ,ಅರವಿಂದಾದಿ ಪುಷ್ಪಗಳಿಂದ ಸುಗಂಧಿತವಾದ ಮಂದಾರ ವನಗಳಲ್ಲಿ ವಿಹಾರ. ನಂದನವನದಲ್ಲಿ ಸ್ವರ್ಗಸುಂದರಿಯರೊಡನೆ ಕಂದರ್ಪ ಕೇಳೀವಿಲಾಸ. ದಿವ್ಯವಾದ ಗವ್ಯವೆನಿಸಿದ ಹಾಲು, ಮೊಸರು, ತುಪ್ಪಗಳ ಅಮೃತ ಭೋಜನ. ಸುಖಜೀವನ ಇದು ಅವರಿಗೆ ಕಟ್ಟಿಟ್ಟ ಸೌಭಾಗ್ಯ. ದೇವ ದ್ವಿಜ ಭಕ್ತರಿಗೆ ನಿತ್ಯ ಸ್ವರ್ಗ ದೇವ, ಆದರೆ ಯುದ್ಧದಲ್ಲಿ ವೈರಿಗಳನ್ನು ಎದುರಿಸಲಾಗದೆ ಹಿಂದಿರುಗಿ ಓಡಿ ಬಂದ. ದ್ವಿಜ ದ್ರೋಹಿಗಳಿಗೆ ನಿತ್ಯ ನರಕ, ಇದು ಕಟ್ಟಿಟ್ಟ ಮಾತು.

ನೆಲಕ್ಕೆ ಬಿದ್ದವರನ್ನು ಮೂರ್ಛೆಗೊಂಡವರನ್ನು, ಇನ್ನೊಬ್ಬರೊಡನೆ ಯುದ್ಧ ಮಾಡುವವರನ್ನು, ಶಸ್ತ್ರ ಪ್ರಹಾರದಿಂದ ಕೊಲೆಗೈದರೆ ನರಕ ತಪ್ಪಿದ್ದಲ್ಲ. ಅದರಂತೆ ತನ್ನಲ್ಲಿ

ಇಟ್ಟ ನ್ಯಾಸ ಅಥವಾ ನಿಕ್ಷೇಪ ಧನವನ್ನು ಎತ್ತಿಹಾಕುವವರು ಧರ್ಮಾಚರಣೆ ಬಿಟ್ಟವರು. ರಾತ್ರಿ ಕಾಡಿನಲ್ಲಿ ಪ್ರಯಾಣಿಕರನ್ನು ಹಿಂಸೆಗೊಳಿಸುವವರು, ಕಳುವು ಮಾಡುವವರು, ನಿಷಿದ್ಧ ಪದಾರ್ಥ ತಿನ್ನುವವರು, ಗೋ ದ್ವಿಜ ಘಾತಕರು, ಮರ್ಮ ಭೇದಕ ಮಾತನಾಡುವವರು, ಯಾವದೇ ಜಾತಿ ಜನಾಂಗದಲ್ಲಿರಲಿ ಮೂಲತಃ ಅವರು ಪಿಶಾಚರೆಂದು ತಿಳಿಯಬೇಕು. ಧರ್ಮವಿರೋಧಿ, ಸಂಪ್ರದಾಯ ವಿರುದ್ಧ ಆಚಾರ ವಿಚಾರಗಳೆಲ್ಲವೂ ಪೈಶಾಚಿಕ ವಿಚಾರವೆನಿಸುತ್ತವೆ. ಇಂತಹ ಧರ್ಮ ದ್ರೋಹಿಗಳೇ ಮನುಷ್ಯ ವೇಷದಲ್ಲಿ ಗೂಢರಾಗಿದ್ದ ರಾಕ್ಷಸ, ಪಿಶಾಚರು. ಇಂತಹ ಧರ್ಮದ್ರೋಹಿಗಳಿಗೆ ಮಡಿ, ಮೈಲಿಗೆ, ತಪಸ್ಸು, ಜ್ಞಾನ, ಪಿತೃತರ್ಪಣ, ದಾನ, ಧರ್ಮ, ಶ್ರಾದ್ಧಕರ್ಮ, ಯಜ್ಞಯಾಗ, ಬದುಕಿದ್ದ ತಾಯಿತಂದೆಗಳ ಸೇವೆ, ಗುರು ಹಿರಿಯರ ಶುಶ್ರೂಷೆ ಯಾವುದೂ ಇರುವುದಿಲ್ಲ. ಇವಾವ ಗುಣಗಳೂ ಇಲ್ಲದಿದ್ದರೆ ಅವರು ಪಿಶಾಚಗಳೆಂದೂ, ರಾಕ್ಷಸರೆಂದೂ ತಿಳಿಯಬೇಕು. ಈ ಜೀವಂತ ಪಿಶಾಚಗಳ ಇನ್ನೂ ಕೆಲವು ಲಕ್ಷಣಗಳನ್ನು ಹೇಳುತ್ತೇನೆ.

ತಾಯಿ, ತಂಗಿ, ಪರಸ್ತ್ರೀ ಇವರನ್ನು ಬಯಸುವದು, ಲೋಕವಿರುದ್ಧವಾಗಿ ನಡೆಯುವದು, ಅನಾಚಾರಕ್ಕೆ ಇಳಿಯುವದು ಈ ರಕ್ಕಸರ ವಿಶಿಷ್ಟ ಗುಣಗಳಾಗಿರುತ್ತವೆ. ಇಂತಹ ಪಾಪಿಗಳು ಮುಂದಿನ ಜನ್ಮದಲ್ಲಿ ಹುಳ-ಹುಪ್ಪಡಿ, ಇರುವೆ, ಪಿಂಡಭಕ್ಷಕ ಕಾಗೆಗಳಾಗಿ ಭೂಮಿಯಲ್ಲಿ ಹುಟ್ಟುತ್ತಾರೆ.

ಸ್ತ್ರೀಯರಲ್ಲಿಯೂ ಪ್ರೇತ, ಪಿಶಾಚ ಸ್ವಭಾವದ ಅನೇಕ ನಾರಿಯರು ಇರುತ್ತಾರೆ. ಅವರು ಈಗ ಮಾನವರಂತೆ ಕಂಡರೂ ಮುಂದೆ ಹೇಳುವ ದುರ್ಲಕ್ಷಣಗಳು ಇದ್ದರೆ ಅವರು ಮೂಲತಃ ಪಿಶಾಚಿನಿಯರೆಂದೇ ತಿಳಿಯಬೇಕು. ಮಡಿಮೈಲಿಗೆ ಎಂದೂ ಮಾಡದೇ, ಸತ್ಯವನ್ನು ನುಡಿಯದೇ, ಪ್ರತಿದಿನ ಹಲ್ಲು ಉಜ್ಜದೆ, ಸ್ನಾನ ಮಾಡದೆ, ಬಟ್ಟೆ ತೊಳೆಯದೆ, ಕೊಳಕು ದೇಹವುಳ್ಳ ಸ್ತ್ರೀಯರು ಪಿಶಾಚ ಪ್ರಕೃತಿಯವರು ಎಂದು ತಿಳಿಯಬೇಕು. ಮಣೆ ಮುಂತಾದ ಆಸನಗಳು, ಪಾತ್ರೆ-ಪರಡೆ ಇವುಗಳನ್ನು ಎಂದೂ ತೊಳೆಯದೆ ಹೊಲಸಾಗಿ ಇಡುವದು, ಎಂಜಲು, ಹಳಸಿದ್ದು, ಕೊಳೆತದ್ದು ಮೊದಲಾದವುಗಳನ್ನು ಆಶೆಯಿಂದ ತಿನ್ನುವದು, ಕತ್ತಲೆಯಲ್ಲಿಯೇ ಊಟ ಮಾಡುವದು, ನೀರು ಕುಡಿಯುವದು, ಮಲಗುವ ಆಸಕ್ತಿ, ಪಾಪ ಪುಣ್ಯಗಳ ವಿಚಾರ ಇಲ್ಲದಿರುವದು, ಗುರುಹಿರಿಯರ ಸೇವೆ, ದೇವರ ಪೂಜೆ ಮುಂತಾದವುಗಳನ್ನು ಮಾಡದೇ, ಮಾಡುವದಕ್ಕೆ ಆತಂಕ ಒಡ್ಡುವದು, ಸ್ವಚ್ಛತೆಯಿಲ್ಲದೆ ಕೊಳಕು ಬಟ್ಟೆಯುಟ್ಟು ದುರ್ಗಂಧ ನಾರುತ್ತ, ಕೂದಲುಗಳಲ್ಲಿ ಕ್ರಿಮಿಗಳಾಗಿ ಜನರಿಗೆ ಅಸಹ್ಯವಾಗಿರುವದು ಇವೆಲ್ಲವೂ ಪಿಶಾಚತ್ವದ ದ್ಯೋತಕವಾಗಿರುತ್ತವೆ.

ಇದರಂತೆ ಗಂಡಸರು ನಿಷಿದ್ಧ ಪದಾರ್ಥ ತಿನ್ನುವದು, ದುರ್ಗಂಧ ವಸ್ತುಗಳನ್ನು ಪ್ರೀತಿಸುವದು, ನಾಯಿಗಳನ್ನು ಸಲುಗೆಯಿಂದ ಆಡಿಸುವದು, ಮ್ಲೇಂಛರು ತಿನ್ನುವ ಆಹಾರ, ಮಾಡುವ ವಿಹಾರಗಳಲ್ಲಿ ಆಸಕ್ತರಾಗಿರುವದು, ಹಂದಿ, ಕೋಳಿಗಳನ್ನು ಸಾಕುವದರಲ್ಲಿ ಉತ್ಸಾಹಿಗಳಾಗಿರುವದು ಇವೆಲ್ಲವೂ ಪುರುಷರಲ್ಲಿರುವ ರಾಕ್ಷಸ ಗುಣಧರ್ಮಗಳಾಗಿರುತ್ತವೆ. ಈ ಎಲ್ಲ ದುರ್ಗುಣ ಹಾಗೂ ದುರ್ಲಕ್ಷಣದ ಗಂಡಸರು ಹಾಗೂ ಹೆಂಗಸರು ಪೂರ್ವಜನ್ಮದಲ್ಲಿ ರಾಕ್ಷಸ ಪಿಶಾಚಿಯರಾಗಿ ಇದ್ದು, ಈಗ ಮನುಷ್ಯರಾಗಿ ಹುಟ್ಟಿದ್ದಾರೆ ಎಂದು ತಿಳಿಯಬೇಕು. ಮುಂದಾದರೂ ಇಂತಹವರು ದುರ್ಯೋನಿಗಳಲ್ಲಿ ಜನಿಸುತ್ತ ಹೋಗಿ ಕೊನೆಗೆ ನಿತ್ಯ ನರಕವನ್ನು ಅನುಭವಿಸುತ್ತಾರೆ.

ಲೋಕಧರ್ಮಗಳೆಲ್ಲ ನಷ್ಟವಾಗಿ ಶೌಚಾಚಾರಗಳೇ ಲೋಪವಾಗಿ ಕಲಿಯು ಬಲಿಷ್ಠನಾದಾಗ ಸಜ್ಜನರೂ ಕೂಡ ಮ್ಲೇಂಛರಾಗುವರು. ಅಪ್ರತ್ಯಕ್ಷ ರೀತಿಯಿಂದ ಕಳ್ಳತನವನ್ನೂ ಕೂಡ ಸಭ್ಯತೆಯ ಸೋಗಿನಲ್ಲಿ ಕೈಕೊಳ್ಳುವರು. ಅಂಥವರು ಬೇರೆ ಬೇರೆ ವ್ಯಾಪಾರ, ಉದ್ಯೋಗಗಳಿಂದ ಧನವನ್ನು ಗಳಿಸಿ ವಿಜಯಶಾಲಿಗಳಾಗಿ ಮೆರೆಯುತ್ತಾರೆ. ಈ ಭೂಲೋಕದಲ್ಲಿ ಬಹು ಜನ ಒಳ್ಳೆಯವರು ಮ್ಲೇಂಛ ಧರ್ಮವನ್ನು ಅಂಗೀಕರಿಸುವರು, ಇದೇ ಕಲಿಯ ಪ್ರಾಬಲ್ಯ. ಸಮಾಜದಲ್ಲಿ ಪ್ರತಿಷ್ಠಿತರೆಂದು ಗೌರವಿತರಾದ ವ್ಯಕ್ತಿಗಳು ಧರ್ಮಭ್ರಷ್ಟರಾಗಿ ಮ್ಲೇಂಛ ಧರ್ಮವನ್ನು ಅಂಗೀಕರಿಸಿದ ಬಳಿಕ ಅವರ ಸಂಪರ್ಕದಿಂದಲೂ, ಅವರ ಸಂಬಂಧ ಬೆಳೆಸುವದರಿಂದಲೂ ಅವರ ಅನ್ನ ಊಟ ಮಾಡುವದರಿಂದಲೂ, ಅವರ ಕನ್ಯೆಯರ ಜೊತೆಗೆ ವಿವಾಹಿತರಾಗುವದರಿಂದಲೂ ಉಚ್ಚ ಜಾತಿಯವರು ಕೂಡ ಮ್ಲೇಂಛರಾಗುವರು.

**ಮೈಥುನಾತ್ತಸ್ಯ ಯೋಷಾಸು ತದ್ಭಾವಂ ಚ ವ್ರಜಂತಿ ತೇ ।**
**ತಸ್ಮಿನ್ಕಾಲೇ ಜನಾಸ್ಸರ್ವೇ ದುಃಖರೋಗ ಪ್ರತಾಪಿತಾಃ ॥**

ಆ ಕಾಲದಲ್ಲಿ ಮ್ಲೇಂಛರಾದವರು ಮಾತ್ರವಲ್ಲದೆ ಅವರ ಪ್ರಭಾವದಿಂದ ಉಳಿದ ಜಾತಿಯವರೂ ಕೂಡ ಅವರ ದುರಾಚಾರ ದುರ್ವ್ಯಸನಗಳಿಗೆ ಒಳಗಾಗಿ ತಾವಿದ್ದ ಜಾತಿಯಲ್ಲಿಯೇ ಪತಿತರಾಗಿ ನರಕ ಭಾಜನರಾಗುತ್ತಾರೆ. ವೇದಶಾಸ್ತ್ರಗಳಲ್ಲಿ ಹೇಳಿದ ಯಾವ ಆದೇಶವನ್ನೂ ಅವರು ಪಾಲಿಸುವದಿಲ್ಲ. ಯಜ್ಞ ಯಾಗ ಮಾಡುವದಿಲ್ಲ. ವ್ರತ, ಉಪವಾಸ ಆಚರಿಸುವದಿಲ್ಲ. ಪುರಾಣ ಆಗಮಗಳನ್ನು ಕೇಳುವದಿಲ್ಲ. ಅವರು ತಿನ್ನುವದು ಮಾಂಸ, ಕುಡಿಯುವದು ಮದ್ಯ. ಸ್ನಾನ ಸಂಧ್ಯೆಗಳ ನೆನಪೇ ಇರುವದಿಲ್ಲ. ಜನರನ್ನು ವಂಚಿಸುವದೇ ಅವರ ಜೀವನದ ಮುಖ್ಯ ಕಾರ್ಯ. ಅವರಿಗೆ ತಿನ್ನಬಾರದ ಭಕ್ಷ್ಯಗಳೇ ಇಲ್ಲ. ಕುಡಿಯಬಾರದ ಪಾನೀಯಗಳೇ ಇಲ್ಲ. ಮಾಡಬಾರದ ದುರಾಚಾರಗಳಿಲ್ಲ. ಮಕ್ಕಳು ತಾಯಿ ತಂದೆಗಳನ್ನ ಕೇಳುವದಿಲ್ಲ. ಶಿಷ್ಯರು ಗುರುಗಳನ್ನು ಸೇವಿಸುವದಿಲ್ಲ. ಸೇವಕರು, ಒಡೆಯರನ್ನು ಪರಿಚರ್ಯೆ ಮಾಡುವದಿಲ್ಲ. ಹೆಂಡಂದಿರು ಗಂಡಂದಿರಿಗೆ ವಿಧೇಯರಾಗುವದಿಲ್ಲ. ಸೊಸೆ ಅತ್ತೆಯ ಮಾತು ಕೇಳುವದಿಲ್ಲ. ವಿವಾಹ, ಉತ್ಸವ ಮುಂತಾದ ಸಮಾರಂಭಗಳಲ್ಲಿ ಮದ್ಯ ಮಾಂಸಗಳ ಬಳಕೆ ಯಥೇಷ್ಟ ನಡೆಯುವದು, ಪಾಖಂಡಿಗಳ ವಿಚಾರವೇ ಎಲ್ಲರ ಮನಸ್ಸಿಗೆ ಹಿಡಿಯುವದು. ಆಚಾರ ವಿಚಾರವಂತನನ್ನು, ದೇವಭಕ್ತನನ್ನು ಪಶುವೆಂದು ಭಾವಿಸುತ್ತಾರೆ. ಇಂತಹ ಪಾಪಿಗಳು ತಾವು ಅಧೋಗತಿ ಹೊಂದುವದಲ್ಲದೆ ತಮ್ಮ ಪಿತೃಗಳನ್ನೂ ನರಕಕ್ಕೆ ತಳ್ಳುತ್ತಾರೆ. ಇಂತಹ ಆಚಾರ ಭ್ರಷ್ಟರು ಪಿಶಾಚಿ ರಾಕ್ಷಸರೇ ಸರಿ !

'ಕುಹಕಾಃ ಕಚ್ಚರಾಃ ಕ್ರೂರಾಃ ವಿಜ್ಞೇಯಾ ರಾಕ್ಷಸಾ ಭುವಿ' ಕಪಟಿಗಳು, ಕಳ್ಳರು, ಕ್ರೂರರು ಭೂಮಂಡಲದಲ್ಲಿ ರಾಕ್ಷಸರೆಂದು ತಿಳಿ.

ಹೀಗೆ ಕಲಿ ಕಾಲ ಬಂದಾಗ ಸಜ್ಜನರೂ ಕೂಡ ದುರ್ಜನರಾಗಿ ಪಿಶಾಚ ರಾಕ್ಷಸ ಭಾವಕ್ಕೆ ಇಳಿಯುತ್ತಾರೆ. ಒಮ್ಮೊಮ್ಮೆ ಧರ್ಮಕ್ಕೆ ಉತ್ಕರ್ಷದ ಕಾಲ ಬಂದಾಗ ದುಷ್ಟ ಕುಲದಲ್ಲಿಯೂ ಸಾತ್ವಿಕರೂ, ಮಹಾನುಭಾವರೂ ಹುಟ್ಟಿ ತಮ್ಮ ಸದಾಚಾರದಿಂದ, ದೈತ್ಯಭಾವದಿಂದ ಮೇಲಕ್ಕೆ ಎದ್ದು, ಮಾನವತೆಯ ಮೇರೆಯನ್ನೂ ಮೀರಿ, ದೇವತ್ವದ ಮಟ್ಟಕ್ಕೆ ಏರುತ್ತಾರೆ.

ಅಗ್ರ್ಯೇಣ ತಪಸಾ ಕಶ್ಚಿತ್ಸುರತ್ವಂ ಲಭತೇ ಭುವಿ ।
ವಾಸುದೇವಂ ಸಮಾರಾಧ್ಯ ಪ್ರಹ್ಲಾದಸ್ಸುರಪೂಜಿತಃ ॥

ಹರಂ ತಥಾಂಧಕೋ ದೈತ್ಯೋ ಸ್ತುತ್ವಾ ತಸ್ಯೈವಕೋಽಭವತ್ ।
ತಸ್ಯೈವ ಗಣಮುಖ್ಯತ್ವಂ ಲೇಭೇ ಭೃಂಗೀ ಮಹಾಬಲ ॥

ಏತೇ ಚಾನ್ಯೇ ಚ ಬಹವೋ ಬಲಿರಿಂದ್ರೋ ಭವಿಷ್ಯತಿ ।
ಗಚ್ಛಂತಿ ಸದ್ಗತಿಂ ತಾತ ಇಹಾಮುತ್ರ ಚ ಸರ್ವದಾ ॥

ಕೇಚಿದ್ದೈತ್ಯಕುಲೇ ಜಾತಾಃ ಪೃಥಿವ್ಯಾಂ ಸುರಸತ್ತಮಾಃ ।
ಭಾವಯಂತಿ ಪಿತೄನ್ಸರ್ವಾನ್ಸರ್ವಶೋಽಥ ಸಹಸ್ರಶಃ ॥

ಲೋಕೋತ್ತರವಾದ ಶ್ರೇಷ್ಠ ತಪಸ್ಸನ್ನು ಆಚರಿಸುವರಿಂದ ಕ್ವಚಿತ್ತಾಗಿ ಅಸುರರೂ ಕೂಡ ದೇವತ್ವವನ್ನು ಪಡೆಯುತ್ತಾರೆ. ಹಿರಣ್ಯಕಶಿಪುವಿನ ಮಗ ಪ್ರಲ್ಹಾದನು ದೈತ್ಯ ಕುಲದಲ್ಲಿ ಹುಟ್ಟಿದರೂ ವಾಸುದೇವನನ್ನು ಆರಾಧನೆ ಮಾಡಿ, ದೇವತೆಗಳಿಂದಲೂ ಕೂಡ ಪೂಜಿತನಾದನು. ದೈತ್ಯನಾದ ಅಂಧಕಾಸುರನು ಮಹಾದೇವರನ್ನು ಪೂಜಿಸಿ ಅವರ ಪ್ರೀತಿಯ ಸೇವಕನಾದನು. ಇದರಂತೆ ಭೃಂಗಿಯು ಶಿವಗಣದಲ್ಲಿ ಪ್ರಾಮುಖ್ಯವನ್ನು ಪಡೆದನು ಮಹಾದೇವನ ನಿರಂತರ ಸೇವೆಯ ಬಲದಿಂದ. ಬಲಿ ಚಕ್ರವರ್ತಿಯು ದಾನವ ಕುಲದಲ್ಲಿ ಜನಿಸಿದ್ದರೂ ಶ್ರೀ ವಿಷ್ಣುವಿನ ಪ್ರಸಾದದಿಂದ ಸುರತ್ವವನ್ನು ಪಡೆದು ಮುಂದೆ ಸುರಪತಿಯಾದ ಸಾಕ್ಷಾತ್ ದೇವೇಂದ್ರನೇ ಆಗಲಿರುವನು. ಹೀಗೆ ದೈತ್ಯಕುಲದಲ್ಲಿ ಜನಿಸಿದ ಅನೇಕರು ತಮ್ಮ ಅತ್ಯುಗ್ರ ತಪಸ್ಸು, ಅತಿಶಯ ಹರಿಭಕ್ತಿ, ಅಸಾಧಾರಣ ಸದ್ಗುಣಗಳಿಂದ ದೈವೀ ಭಾವವನ್ನು ಹೊಂದಿ ದೇವತೆಗಳನ್ನು, ಪಿತೃಗಳನ್ನು ಪೂಜಿಸುತ್ತಾರೆ.

ಏಕೇನಾಪಿ ಸುಪುತ್ರೇಣ ಕುಲತ್ರಾಣಂ ಚ ಧೀಮತಾ ।
ಏಕೋಪಿ ವೈಷ್ಣವಃ ಪುತ್ರಃ ಕುಲಕೋಟಿಂ ಸಮುದ್ಧರೇತ್ ॥

ಸುಪುತ್ರನಾದ ಬುದ್ಧಿವಂತನಾದ ಒಬ್ಬನಾದರೂ ಕೂಡ ಮಗನು ಕುಲವನ್ನು ಕಾಪಾಡುತ್ತಾನೆ. ವೈಷ್ಣವನಾದ ಒಬ್ಬನು ಮಗನಿದ್ದರೂ ಕುಲಕೋಟಿಯನ್ನು ಉದ್ಧಾರ ಮಾಡುತ್ತಾನೆ.

ಮ್ರಿಯಂತೇ ಸರ್ವ ತೀರ್ಥೇಷು ಮುಕ್ತಿ ಕ್ಷೇತ್ರೇ ಚ ಜ್ಞಾನತಃ ।
ಬ್ರಹ್ಮಜ್ಞಾನವಿದೋ ಯೇ ತೇ ತಾರಯಂತಿ ತರಂತಿ ಚ ॥

ಬ್ರಹ್ಮಜ್ಞಾನಿಗಳು ತೀರ್ಥದಲ್ಲಾಗಲಿ ಮುಕ್ತಿಕ್ಷೇತ್ರಗಳಲ್ಲಾಗಲಿ ಸಾಯುತ್ತಾರೆ. ಬ್ರಹ್ಮಜ್ಞಾನಿಗಳು ತಾವೂ ನರಕದಿಂದ ಪಾರಾಗಿ ಇತರರನ್ನೂ ಪಾರು ಮಾಡುತ್ತಾರೆ.

ಏಕಾ ಪತಿವ್ರತಾ ನಾರೀ ಕುಲಕೋಟಿಂ ಸಮುದ್ಧರೇತ್ ।
ಜಿತೇಂದ್ರಿಯೋಪಿ ಧರ್ಮಾತ್ಮಾ ದ್ವಿಜ ದೇವಾರ್ಚನೇ ರತಃ ॥

ಪತಿವ್ರತೆಯಾದವಳು ಕೋಟಿ ಕುಲಗಳನ್ನು ಉದ್ಧಾರ ಮಾಡುತ್ತಾಳೆ. ಜಿತೇಂದ್ರಿಯನೂ, ಧರ್ಮಾತ್ಮನೂ, ದೇವ, ದ್ವಿಜ ಪೂಜಕನೂ ಆದವನೂ ಕುಲಕೋಟಿಯನ್ನು ಉದ್ಧಾರ ಮಾಡುತ್ತಾನೆ.

**ಕ್ಷಯೇಽ ಧರ್ಮೇ ಕಲೌ ಶೇಷೇ ಪುರೇ ಜನಪದೇಷು ಚ ।**
**ಏಕೋ ರಕ್ಷತಿ ಧರ್ಮಾತ್ಮಾ ಪುರಂ ಗ್ರಾಮಂ ಜನಂ ಕುಲಂ ॥**

ಧರ್ಮಾತ್ಮನಾದವನು ಕ್ಷಯದಲ್ಲಿಯೂ, ಅಧರ್ಮದಲ್ಲಿಯೂ, ಹಳ್ಳಿಗಳಲ್ಲಿಯೂ, ಪಟ್ಟಣ ದೇಶಗಳಲ್ಲಿಯೂ, ಪಟ್ಟಣ, ಗ್ರಾಮ, ಕುಲ ಮುಂತಾದವುಗಳನ್ನು ರಕ್ಷಿಸುತ್ತಾನೆ. ಈ ವಿಷಯದಲ್ಲಿ ಒಂದು ಇತಿಹಾಸ ಹೇಳುತ್ತೇನೆ, ಕೇಳಿರಿ -

ಪೂರ್ವ ಕಾಲದಲ್ಲಿ ಒಂದು ಜ್ಞಾನಿಗಳ ಅಗ್ರಹಾರವಿದ್ದಿತು. ಅಲ್ಲಿರುವ ಉಚ್ಚ ವರ್ಣದ ಜನರೆಲ್ಲರೂ ಸ್ನಾನ, ಸಂಧ್ಯಾವಂದನೆ, ವೇದಾಧ್ಯಯನ, ದೇವತಾರ್ಚನ, ಯಜ್ಞ ಯಾಗ, ಅಗ್ನಿ ಕಾರ್ಯ ಮುಂತಾದವುಗಳಲ್ಲಿ ಆಸಕ್ತರಾಗಿದ್ದರು. ಎಷ್ಟು ಕಷ್ಟ ಬಂದರೂ ಕೆಟ್ಟ ಕಾರ್ಯಗಳ ಕಡೆಗೆ ಅವರ ಮನಸ್ಸು ಎಂದೂ ಹೋಗುತ್ತಿದ್ದಿಲ್ಲ.

ಒಮ್ಮೆ ಆ ಊರಲ್ಲಿ ಓರ್ವ ಗೃಹಸ್ಥನು ವಿಧಿಪೂರ್ವಕವಾಗಿ ಒಂದು ಯಜ್ಞವನ್ನು ಪ್ರಾರಂಭಿಸಿದ್ದನು. ಕೆಲವು ಕಾಲದ ಬಳಿಕ, ಆ ಯಜಮಾನನಿಗೆ ಮೂತ್ರೋಪದ್ರವ ವಾಯಿತು. ಯಜ್ಞವನ್ನು ಬಿಟ್ಟು ಹೋಗುವಂತಿಲ್ಲ; ಮೂತ್ರಬಾಧೆ ತಾಳುವಂತಿಲ್ಲ. ಹಾಗೆಯೇ ಕುಳಿತನು - ಆ ಯಜಮಾನ. ಎಷ್ಟು ಹೊತ್ತು ಬಿಗಿ ಹಿಡಿಯಲಿಕ್ಕಾದೀತು? ತಾಳದಂತಾಯಿತು. ಆಗ ಅವನು ಅಲ್ಲಿಯೇ ಇದ್ದ ಓರ್ವ ದಾಸಿಯನ್ನು ಕರೆದನು. 'ನಾನು ಬರುವವರೆಗೆ ಈ ಅಗ್ನಿಯನ್ನು ನೋಡಿಕೊಂಡಿರು' ಎಂದು ಹೇಳಿದನು. ತಾನು ಮೂತ್ರ ವಿಸರ್ಜನೆಗೆ ಹೊರಗೆ ಹೋದನು. ದಾಸಿ ದಾಸಿಯೇ! ಅವಳಿಗೇನು ಗೊತ್ತು ಹೋಮಾಗ್ನಿಯ ಮಹತ್ವ? ಅವಳು ತನ್ನ ಬೇರೆ ಕೆಲಸದಲ್ಲಿ ಆಸಕ್ತಳಾದಳು. ಅಷ್ಟರಲ್ಲಿ ಒಂದು ನಾಯಿಯು ಒಳಗೆ ಬಂದಿತು. ಯಜ್ಞ ಪಾತ್ರೆಯಲ್ಲಿಯ ತುಪ್ಪವನ್ನು ತಿಂದು ಬಿಟ್ಟಿತು. ಇದನ್ನು ನೋಡಿ ದಾಸಿಯು ಗಾಬರಿಯಾದಳು. ಯಜಮಾನ ಬಂದು ಖಾಲಿ ಪಾತ್ರೆ ನೋಡಿ ತನ್ನನ್ನು ದಂಡಿಸುವನು ಎಂದು ಹೆದರಿ ಹೌಹಾರಿದಳು ' ಒಡೆಯ ಬರುವ ಹೊತ್ತಾಯಿತು' ಎಂದು ಗಾಬರಿಯಿಂದ ತನ್ನ ಮೂತ್ರವನ್ನೇ ಅದರಲ್ಲಿ ತುಂಬಿ ಇಟ್ಟಳು. 'ಹೊತ್ತಾಯಿತೆಂದು ಅವಸರದಿಂದಲೇ ಬಂದ ಒಳಗೆ ಆ ದ್ವಿಜ. ಆಜ್ಯಪಾತ್ರೆಯಲ್ಲಿ ಏನಿದೆ ಎಂಬುದನ್ನು ನೋಡದೇ ಯಜ್ಞಕುಂಡದಲ್ಲಿ ಇದನ್ನೇ ಹೋಮಿಸಿಬಿಟ್ಟ. ಕೂಡಲೇ ಅಗ್ನಿಯಲ್ಲಿ ಅವನಿಗೆ ಒಂದು ಅತ್ಯಾಶ್ಚರ್ಯ ಕಂಡುಬಂದಿತು. ಹೋಮ ಕುಂಡದಲ್ಲಿ ಒಂದು ಬಂಗಾರದ ಗಟ್ಟಿಯು ಹೊಳೆಯುತ್ತಲಿತ್ತು. ಅದನ್ನು ಆನಂದದಿಂದ ಆ ದ್ವಿಜನು ತೆಗೆದುಕೊಂಡನು. ಕೌತುಕದ ಕೊನೆ ಏರಿದ ಆ ಯಜಮಾನ ದಾಸಿಯನ್ನು ಕೇಳಿದ 'ನಿಜಸಂಗತಿ ಏನು?' ನಡೆದ ವೃತ್ತಾಂತವನ್ನೆಲ್ಲ ದಾಸಿಯು ನಿವೇದಿಸಿದಳು ಆ ಒಡೆಯನಿಗೆ. 'ಸುವರ್ಣ ಸಂಪಾದನೆಗೆ ಹೊಸದೊಂದು ದಾರಿಯೇ ಗೋಚರಿಸಿ ದಂತಾಯಿತು - ಆ ಆಶೆಬುರುಕ ಯಜಮಾನನಿಗೆ. ನಿತ್ಯವೂ ಈ ತರಹದ ಹೋಮ ಮಾಡಲು ಅವನು ಪ್ರಾರಂಭಿಸಿದ. ಅನುದಿನವೂ ಯಜ್ಞ, ಮೂತ್ರ ಹೋಮ. ಬಂಗಾರದ ಗಟ್ಟಿಯ ಲಾಭ. ಕೆಲವೇ ದಿನಗಳಲ್ಲಿ ಈ ಯಜಮಾನನಿಗೆ ವಿಪುಲ ಸಂಪತ್ತು ಸರ್ವಸಮೃದ್ಧಿ. ಈ ಸಮಾಚಾರವು ದಾಸಿ ಹಾಗೂ ಆ ದ್ವಿಜನ ಮನೆಯ ಜನರ ಮುಖದಿಂದ ಕಿವಿಯಿಂದ ಕಿವಿಗೆ ಹರಡಿತು. ಹೊನ್ನಿನ ಮೋಹ ಯಾರಿಗೆ ಇರುವದಿಲ್ಲ? ಎಲ್ಲರೂ ಆರಂಭಿಸಿದರು ಇಂತಹ ದುರಾಚಾರದ ಹೋಮವನ್ನು. ಪ್ರತಿಯೊಬ್ಬರಲ್ಲೂ ಪಾಪ ತುಂಬಿತು. ಶುದ್ಧ ಸಾತ್ವಿಕರೂ ಪರಮ ಪುಣ್ಯವಂತರೂ ಆದ

ಆ ನಗರದಲ್ಲಿ ಎಲ್ಲರಿಗೂ ಹೊನ್ನಿನ ಹುಚ್ಚು ಹಿಡಿಯಿತು. ಮೂತ್ರ ಹೋಮದ ಹಂಬಲ ಎಲ್ಲರ ಮನಸ್ಸಿನಲ್ಲಿ ಹೊಕ್ಕಿತು. ಪ್ರತಿಯೊಬ್ಬರೂ ಅಂತಹ ಹೋಮ ಮಾಡಿ ಸಿರಿವಂತರಾದರು; ಪಾಪಪೂರಿತರೂ ಆದರು. ಹೊನ್ನಿನ ಆಶೆಯಿಂದ ಮೂತ್ರದ ಹೋಮ, ಮೂತ್ರದ ಹೋಮದಿಂದ ಘೋರ ಪಾಪ; ಘೋರ ಪಾಪದಿಂದ, ಭಯ; ಭಯದಿಂದ ಮೋಹ; ಮೋಹದಿಂದ ಬುದ್ಧಿ ನಾಶ; ಬುದ್ಧಿನಾಶದಿಂದ ಅಹಂಕಾರ; ಅಹಂಕಾರದಿಂದ ಕೋಪ; ಕೋಪದಿಂದ ಮೌಢ್ಯ; ಮೌಢ್ಯದಿಂದ ಪಾಪ ಕರ್ಮ ಪ್ರವೃತ್ತಿ. ಅದರಿಂದ ಮನಸ್ಸಿಗೆ ಅಶಾಂತಿ ಯಾವಾಗಲೂ ತಾಪ. ದುಃಖ, ಉದ್ವೇಗ, ಅಶಾಂತಿಗಳು ಆರಂಭವಾದವು ಅನರ್ಥಪರಂಪರೆ' ಹೀಗೆ ಆ ಪುಣ್ಯ ನಗರಿಯಲ್ಲಿ ಓರ್ವದಾಸಿಯ ಪ್ರಮಾದದಿಂದ ಶಾಪದ ಪ್ರವೇಶವಾಗಿ ಇಡೀ ನಗರವೆಲ್ಲವೂ ಪಾಪಪೂರಿತ ಪಟ್ಟಣವಾಗಿ ಹೋಯಿತು. ಕೊನೆಗೆ ಆ ಊರಲ್ಲಿಯ ಸ್ತ್ರೀಯರೂ, ಪುರುಷರೂ ಚಿಕ್ಕವರೂ, ದೊಡ್ಡವರೂ ಎಲ್ಲರೂ ಬುದ್ಧಿಗೆಟ್ಟು, ಪರಮನೀಚರಾದರು. ಆ ಊರಲ್ಲಿ ಪರಿಶುದ್ಧವಾಗಿ ಉಳಿದವನು ಒಬ್ಬ ವಿದ್ವಾಂಸ ಮಾತ್ರ. 'ಈ ನಗರಕ್ಕೆ ವಿನಾಶಕಾಲ ಬಂದಿದೆ' ಎಂದು ನಿಶ್ಚಯ ಗೈದಿತು ಆ ಜ್ಞಾನಿಯಮತಿ. ಅವನು ಎಂದೂ ಈ ವಾಮಾಚಾರದಿಂದ ತಾನು ಹಣಗಳಿಸಲು ಬಯಸಲಿಲ್ಲ. ಆದುದರಿಂದಲೇ ಅವನ ದಾರಿದ್ರ್ಯ ತಪ್ಪಲಿಲ್ಲ. ಇದರಿಂದ ನಿಜವಾದ ದುಃಖವಾದದ್ದು ಅವನ ಮಡದಿಗೆ. ನೆರೆಮನೆಯವರು ಅಪದ್ಧ ಹೋಮವಿಧಿಯಿಂದ ಚಿನ್ನವನ್ನು ಚೆನ್ನಾಗಿ ಗಳಿಸಿದರು. ನೆರೆಮನೆಯವರೆಲ್ಲ ಅರಮನೆಯವರಂತೆ ಸಿರಿಮನೆಯ ವರಾದರು. ತಾನೂ ಅವರಂತೆ ಬಂಗಾರದ ಆಭರಣ ಹಾಕಿಕೊಂಡು ಮೆರೆಯ ಬೇಕೆಂದು - ಉತಡಿಯುತ್ತಿತ್ತು - ಆ ಹೆಣ್ಣ ಹೃದಯ. ಬಂದವಳೇ ತುಡರಿದಳು - ಆ ಬಡ ದ್ವಿಜನನ್ನು ಆ ಗಡಬಿಡಿಯ ಹೆಂಗಸು. ''ನಾಥ, ನಮ್ಮ ಬಡತನ ನೋಡಿ ನನಗೇನು ಕೆಟ್ಟವೆನಿಸುವದಿಲ್ಲ. ಆದರೆ ನಿನ್ನಂತಹ ವಿದ್ವಾಂಸನಾದ ಸದಾಚಾರಿ ವ್ಯಕ್ತಿಯು ದಾರಿದ್ರ್ಯದಿಂದ ದುಃಖ ಪಡುತ್ತಿರುವದನ್ನು ಕಂಡು ಬಹಳ ಕೆಡಕೆನಿಸುತ್ತದೆ. ದುಃಖವೂ ಆಗುತ್ತದೆ. ಸ್ವಲ್ಪ ನೋಡಿಕೊಂಡು ಬನ್ನಿ, ನಮ್ಮ ಅಕ್ಕಪಕ್ಕದವರನ್ನು. ಈ ಊರಲ್ಲಿ ಪ್ರತಿಯೊಬ್ಬರ ಮನೆಯಲ್ಲಿಯೂ ಈಗ ಹೊನ್ನಿನ ಹೊಳೆ; ಹಣದ ಮಳೆ ಸುರಿಯುತ್ತಿದೆ. ನೀವು ಏಕೆ ಮಾಡಬಾರದು ?

ಆ ಚಿನ್ನಮಾಡುವ ರೀತಿಯಲ್ಲಿರುವ ದೋಷವೆಲ್ಲವೂ ಚೆನ್ನಾಗಿಗೊತ್ತು ಆ ವಿದ್ವಾನ್ ದ್ವಿಜನಿಗೆ ಮಡದಿಯ ಮಾತು ಕೇಳಿ ನಸುನಕ್ಕ ಅವನು. ಮಡದಿಯನ್ನು ಸಂತೈಸುತ್ತ ನುಡಿದ 'ಧರ್ಮಬಿಟ್ಟು ಪಾಪಾಚಾರದಿಂದ ಜೀವಿಸುವವನು ಬದುಕಿದಂತೆಯೇ! ಹಾಗೆ ಅನಾಚಾರ, ವಾಮಾಚಾರಗಳಿಂದ ಬದುಕುವದಕ್ಕಿಂತ ಸಾಯುವದು ಮೇಲು, ಸತ್ತಮೇಲೆ ತಿರುಗಿಬರಲಾರದೆ, ನರಕಕ್ಕೆ ಹೋಗಬೇಕಾಗುವದು. ಈಗ ನಮ್ಮ ಈ ಗ್ರಾಮದಲ್ಲಿರುವ ದ್ವಿಜರೆಲ್ಲರಿಗೂ ಬುದ್ಧಿ ಭ್ರಂಶವಾಗಿದೆ. ಅವರು ಉಪಪಾಪದಿಂದ ಅತಿಪಾಪಕ್ಕೆ ಒಳಗಾಗಿದ್ದಾರೆ. ಇದರಿಂದ ಅವರು ಮಹಾಪಾಪಿಗಳಾಗಿ ನೇರವಾಗಿ ನರಕ ಸೇರುತ್ತಾರೆ. ಈಗ ಈ ಊರಿನಲ್ಲಿ ನಾನು ಒಬ್ಬನು ಮಾತ್ರ ಹೊನ್ನಿನ ಹುಚ್ಚು ಮೋಹಕ್ಕೆ ಒಳಗಾಗದೆ ಧರ್ಮವನ್ನು ಕಾಪಾಡಿಕೊಂಡಿರುತ್ತೇನೆ.' ಪತಿಯ ಈ ಮಾತನ್ನು ಕೇಳಿ ಆ ದ್ವಿಜನ ಭಾರ್ಯೆಯು ನಕ್ಕುಬಿಟ್ಟಳು. ಮತ್ತು ತನ್ನ ಪತಿಯನ್ನು ಕುರಿತು ಮಂದಹಾಸದಿಂದ ನುಡಿದಳು. 'ನಿಮ್ಮ ಈ ಮಾತು ಹಾಸ್ಯಾಸ್ಪದವಾಗಿದೆ. ನನ್ನ ಎದುರಿಗೆ ಹೇಳಿದಿರಿ

ಚೆನ್ನಾಯಿತು. ಬೇರೆಯವರ ಎದುರು ಮಾತ್ರ ಇಂತಹ ಮಾತನ್ನು ಹೇಳಬೇಡಿರಿ. ನಗೆಗೀಡಾಗುವ ಪ್ರಸಂಗ ಬಂದೀತು; ಜೋಕೆ.'

**ಪತಿ :-** ಪ್ರಿಯೆ, ನಾನು ನುಡಿದದ್ದು ಹಾಸ್ಯಾಸ್ಪದವೂ ಅಲ್ಲ, ಹುಡುಗಾಟಿಕೆಯೂ ಅಲ್ಲ. ಹುಸಿಯಂತೂ ಅಲ್ಲವೇ ಅಲ್ಲ. ನಿಜವನ್ನೇ ನುಡಿದಿದ್ದೇನೆ. ಧರ್ಮ ನಿಷ್ಠನಾಗಿ ನಾನೊಬ್ಬನು ಇರುವೆನೆಂದು ಈ ನಗರವು ಬದುಕಿ ಉಳಿದಿದೆ. ನಾನು ಕ್ಷಣಕಾಲವಾದರೂ ಈ ನಗರ ಬಿಟ್ಟುಹೋದರೆ ಇದು ನಾಶವಾಗಿ ಹೋಗುವದು. ಬೇಕಾದರೆ ನೀನು ಪರೀಕ್ಷಿಸು.

ಎಂದು ಹೇಳಿ, ಅವನು ತನ್ನ ಮನೆಯ ಆಸ್ತಿ, ಪಾತ್ರೆ, ಪದಾರ್ಥಗಳನ್ನು ತೆಗೆದುಕೊಂಡು ಆ ಮನೆ ಹಾಗೂ ಊರನ್ನು ತ್ಯಜಿಸಿ ಹೋದನು. ಆ ನಗರದ ಸೀಮೆ ದಾಟಿ ಮುಂದೆ ಬಂದ ಬಳಿಕ ಅವನ ಮಡದಿಯು ತಿರುಗಿ ನೋಡಿದಳು. ನಾಶವಾಗದೆ ನಿಂತಲ್ಲಿಯೇ ನಿಂತಿದ್ದಿತು ಆ ನಗರ ಯಥಾ ಪ್ರಕಾರ. ಆಗ ಅವನ ಹೆಂಡತಿ ತನ್ನ ಗಂಡನನ್ನು ಮೂದಲಿಸಿ ನುಡಿದಳು - 'ಪತಿದೇವ, ನೋಡಿದಿರಾ! ಈ ನಗರದ ಕಡೆಗೆ, ಆ ಪಟ್ಟಣವು ಸುರಕ್ಷಿತ ತಲೆ ಎತ್ತಿ ನಿಂತಿದೆ.' ಆ ವಿದ್ವಾನ್ ವಿಪ್ರನಿಗೂ ಆಶ್ಚರ್ಯ! 'ಅದು ಹೀಗೆ ಆದದ್ದು ಹೇಗೆ!' ಕೆಲ ನಿಮಿಷ ಅವನು ವಿಚಾರಿಸಿದನು. ಮುಖದಲ್ಲಿ ಮೃದುವಾಗಿ ಮುಗುಳು ನಗೆ ಮೂಡಿತು. ಆ ವಿಪ್ರನಿಗೆ.

**ವಿಪ್ರ :-** ನಮ್ಮ ಯಾವುದೋ ಒಂದು ವಸ್ತು ಮನೆಯ ಹೊರಗೋ ಒಳಗೋ ಉಳಿದುಕೊಂಡಿದೆ. ಅದರಿಂದಾಗಿ ಆ ನಗರವು ಇನ್ನೂವರೆಗೆ ನಾಶ ಹೊಂದದೆ ಉಳಿದಿದೆ. ನೀನು ಏನು ಬಿಟ್ಟು ಬಂದಿರುವಿ? ಯೋಚಿಸು.

ತತ್‌ಕ್ಷಣ ನೆನಪಾಯಿತು. ಅವನ ನಾರೀಮಣಿಗೆ, ''ಅಹುದು, ಅಹುದು, ನಾನು ಮರೆತು ಬಿಟ್ಟೆ. ನಿಮ್ಮ ಕಾಲಲ್ಲಿಯ ಮೆಟ್ಟುಗಳು ಅಲ್ಲಿಯೇ ಉಳಿದಿವೆ, ಈಗ ಬಂದೆ. ಅವುಗಳನ್ನು ತೆಗೆದುಕೊಂಡು ಬರುತ್ತೇನೆ'' ಎಂದು ಹೇಳಿ ಆ ವಿಪ್ರಾಂಗನೆಯು ಧಾವಿಸುತ್ತ ಪಟ್ಟಣದ ಒಳಗೆ ಹೋದಳು. ತಮ್ಮ ಮನೆಯ ಅಂಗಳದಲ್ಲಿ ಇಟ್ಟಿದ್ದ ವಿಪ್ರೋತ್ತಮನ ಪಾದರಕ್ಷೆ ತೆಗೆದುಕೊಂಡು ಊರ ಅಗಸೆ ಬಾಗಿಲ ದಾಟಿ ಬಂದಳು. ಗಂಡನ ಬಳಿಗೆ ಬಂದು ಅವನ ಪಾದರಕ್ಷೆಯನ್ನು ಅವನ ಅಡಿಯಡಿಯಲ್ಲಿ ಇರಿಸಿದಳು. ಆಗ ವಿಪ್ರನು ಅಜ್ಞಾನಿ ಪತ್ನಿಗೆ ಹೇಳಿದ 'ಊರ ಕಡೆ ನೋಡು' ಎಂದು ಅಷ್ಟರಲ್ಲಿ ಊರೆಲ್ಲವೂ ಉರಿಯುತ್ತಲಿತ್ತು, ಅಲ್ಲಿರುವ ದ್ವಿಜರು, ಕಳ್ಳರು, ವಾಮಾಚಾರಿಗಳು; ಬಂಗಾರದ ಭವನದಲ್ಲಿ ವಾಸ ಮಾಡುವವರು ದಳ್ಳುರಿಯಲ್ಲಿ ಸಿಕ್ಕು ದುಃಖಪಡುತ್ತಲಿದ್ದರು. ನಿಂತ ಊರಲ್ಲಿಯೇ ನರಕ ಇಳಿದು ಬಂದಂತಾಗಿತ್ತು. ಆದುದರಿಂದ ವಾಮಾಚಾರ, ದುರಾಚಾರಗಳನ್ನು ಮಾನವರು ಮೊದಲು ವರ್ಜಿಸಬೇಕು.

ಕಳವು ಮಾಡುವ ವಂಚಕನು ರಾಕ್ಷಸನೇ ಸರಿ, ಆಚಾರಹೀನ ಮೂರ್ಖ ಪಶುವೇ ಸರಿ. ಎಂಜಲು ತಿನ್ನುವವನು, ಹೆಣ್ಣಿಗೋಸ್ಕರ ಕಲಹ ಮಾಡುವವನು ನಾಯಿ. ತಿಂಡಿ ತಿನಿಸುಗಳಿಗಾಗಿ ಕಚ್ಚಾಡುವವ ಕಪಿ. ಪರರನ್ನು ಹಿಂಸಿಸುವವನು ಹಾವು. ಮದ್ಯ ಮಾಂಸ ಸೇವಿಸುವವನು ಹಿಂಸ್ರ ಪಶು. ಉನ್ಮತ್ತನಾಗಿ ಪರರನ್ನು ಹೆದರಿಸುವವನು ಮದ್ದಾನೆ. ಅರ್ಥಾತ್ ಇಂತಹ ದುಸ್ವಭಾವ ಉಳ್ಳವರು ಈ ಪಶುಗಳಿಗಿಂತ ಕಡೆ.

ಇನ್ನು ಮಾನವರಲ್ಲಿಯೂ ಕೂಡ ಹಲವರು ದೈವೀ ಸ್ವಭಾವದವರು ಇರುತ್ತಾರೆ. ಅವರ ಲಕ್ಷಣಗಳಿಂದ ಅವರಲ್ಲಿ ದೇವತಾ ಸನ್ನಿಧಾನ ಮತ್ತು ದೈವೀ ಅನುಗ್ರಹ ಹೆಚ್ಚಾಗಿದೆ ಎಂದು

ತಿಳಿಯಬಹುದು. ದೇವ ದ್ವಿಜರ ಆರಾಧನೆ, ಅತಿಥಿ ಸೇವೆ ಗುರು, ಸಾಧು, ತಪಸ್ವಿಗಳಲ್ಲಿ ಗೌರವ ಭಾವನೆ. ಪೂಜೆಯಲ್ಲಿ ಆಸಕ್ತಿ, ತಪಸ್ಸಿನಲ್ಲಿ ನಿಷ್ಠೆ, ಧರ್ಮಕಾರ್ಯಗಳಲ್ಲಿ ಶ್ರದ್ಧೆ, ಕ್ರೋಧ ಸಂಯಮ; ಇಂದ್ರಿಯ ಜಯ, ಮಧುರ ಮಾತು, ಪ್ರಾಣಿದಯೆ, ವೇದಾಂತಜ್ಞಾನ. ವೀಣೆ ಮುಂತಾದ ವಾದ್ಯಗಳಲ್ಲಿ ಆಸಕ್ತಿ, ಪುಣ್ಯ ಕಾರ್ಯದಲ್ಲಿ ಪ್ರವೃತ್ತಿ, ಹಸುವಿನ ಹಾಲು ತುಪ್ಪಗಳಲ್ಲಿ ಪ್ರೀತಿ, ಮದ್ಯಮಾಂಸಾದಿಗಳಲ್ಲಿ ಜಿಗುಪ್ಸೆ. ಸಜ್ಜನರ ಸಹವಾಸದಲ್ಲಿ ತತ್ಪರತೆ, ಪಾಠ ಪ್ರವಚನನಿಷ್ಠೆ ಕೃಚ್ಛ್ರ ವ್ರತೋಪವಾಸಗಳ ಆಚರಣೆ, ಮೊದಲಾದುವು ಮಾನವರಲ್ಲಿರುವ ದೈವೀ ಸನ್ನಿಧಾನದ ದ್ಯೋತಕ ಲಕ್ಷಣಗಳು, ಈ ಎಲ್ಲ ಗುಣ ಉಳ್ಳವರು ದೇವತೆಗಳ ಹಾಗೂ ದೈವೀ ಪುರುಷರ ಅಂಶವುಳ್ಳ ಅರ್ಥಾತ್ ಭಿನ್ನಾಂಶವುಳ್ಳ ನರದೇವತೆಗಳು. ಇಂಥವರು ತಮ್ಮಂತಹ ದೈವೀ ಗುಣವುಳ್ಳ ಸಾಧು ಸಜ್ಜನ್ರ ಸ್ನೇಹ ಬೆಳೆಸುತ್ತಾರೆ. ಇದರಂತೆಯೇ ದೈತ್ಯ ಗುಣವುಳ್ಳ ದುಷ್ಟಸ್ವಭಾವದ ದುರ್ಜನರು ತಮ್ಮಂತಹ ದುರಾಚಾರಿಗಳದೇ ಸ್ನೇಹ ಮಾಡುತ್ತಾರೆ. ಕಾಗೆಗಳು ತಮ್ಮ ಜಾತಿಯವೇ ಆದ ಇತರ ಕಾಗೆಗಳ ಮೇಲೆಯೇ ಪ್ರೀತಿ, ವಿಶ್ವಾಸ ಮಾಡುವಂತೆ ಇವರೆಲ್ಲರೂ ತಮ್ಮ ತಮ್ಮ ಜಾತಿ ಬಾಂಧವರೊಂದಿಗೆ ಬೇಗ ಹೊಂದಿಕೊಳ್ಳುತ್ತಾರೆ. ಇಂತಹ ರಾಕ್ಷಸರು, ದೈತ್ಯರು, ದೇವತೆಗಳು ಎಲ್ಲ ಯುಗದಲ್ಲೂ ಇರುತ್ತಾರೆ. ಮಹಾಭಾರತ ಯುದ್ಧವು ಕೌರವ- ಪಾಂಡವರಲ್ಲಿ ನಡೆದದ್ದೇನೋ ನಿಜ. ಆದರೆ ಅದೂ ಕೂಡ ಒಂದು ರೀತಿಯಲ್ಲಿ ದೇವ-ದಾನವರ ಯುದ್ಧವೇ ಸರಿ. ಕೌರವ, ಪಾಂಡವರೂ ಅವರವರ ಪಕ್ಷದವರೂ ನರರೂಪದಿಂದ ಜನಿಸಿ ಬಂದ ಸುರಾಸುರರೇ. ದ್ರೋಣ-ದೇವಮುನಿ, ಅಶ್ವತ್ಥಾಮ - ಮಹಾದೇವ, ಕೃಷ್ಣ - ಸಾಕ್ಷಾತ್ ಶ್ರೀ ವಿಷ್ಣು, ದುರ್ಯೋಧನ - ಕಲಿ, ಧರ್ಮರಾಜ - ಯಮಧರ್ಮ ವಿದುರನೂ ಅವನೇ. ಭೀಮ - ವಾಯು, ಅರ್ಜುನ - ಇಂದ್ರ, ಇದರಂತೆ ಗಾಂಧಾರಿ, ದ್ರೌಪದಿ, ಕುಂತಿಯರು ದೇವತಾ ಸ್ತ್ರೀಯರು. ದ್ವಾಪರಯುಗದಂತೆ ಕಲಿಯುಗದಲ್ಲಿ ದೈತ್ಯ ದಾನವರು ಮನುಜರೂಪದಿಂದ ಹುಟ್ಟಿಬರುತ್ತಾರೆ. ದೈತ್ಯರು ಮಾನವರಾಗಿ ಹುಟ್ಟಿದಾಗ ಧರ್ಮದ್ರೋಹ, ಹರಿದ್ವೇಷ, ಸಜ್ಜನರ ಹಿಂಸೆ, ಪಾಪಾಚಾರ ಹಾಗೂ ಹಿಂಸಾಚಾರ ಮೊದಲಾದ ದುರ್ವ್ಯಾಪಾರದಿಂದ ನರಕಕ್ಕೆ ಹೋಗುತ್ತಾರೆ. ದೈವೀ ಪುರುಷರು ವ್ರತ, ಉಪವಾಸ, ಯಜ್ಞ, ದೇವತಾರ್ಚನೆ, ಸಜ್ಜನ ಪ್ರೀತಿ, ಇಂದ್ರಿಯ ನಿಗ್ರಹ, ಮೋಕ್ಷ ಮಾರ್ಗ ಸಾಧನೆ, ನೀತಿ ನಿಷ್ಠೆ, ಯಮ, ನಿಯಮ, ಸದಾಚರಣೆ, ಜಪ ತಪಗಳಿಂದ ಭಗವಂತನ ಪ್ರೀತಿಯನ್ನು ಸಂಪಾದಿಸಿ, ಮೋಕ್ಷ ಮಾರ್ಗವನ್ನು ಹಿಡಿಯುತ್ತಾರೆ.

**ಜಗದೋದ್ಧಾರಕರು**

ಯಶೈವೋ ವೈಷ್ಣವಶ್ಶಾಂತಃ ಸೌರೋ ಗಾಣಪ ಏವ ಚ ।
ತಾರಯಿತ್ವಾ ಪಿತೃನ್ಸರ್ವಾನ್ಸ ಧರೋದ್ಧಾರಣ ಕ್ಷಮಃ ॥

ವಿಶೇಷಾದ್ ವೈಷ್ಣವಂ ದೃಷ್ಟ್ವಾ ಪ್ರೀಯತೇ ಪೂಜಯೇಚ್ಚ ತಂ ।
ವಿಮುಕ್ತಸ್ಸರ್ವ ಪಾಪೇಭ್ಯಃ ಸ ಧರೋದ್ಧರಣ ಕ್ಷಮಃ ॥

ಷಟ್ಕರ್ಮನಿರತೋ ವಿಪ್ರಃ ಸರ್ವಯಜ್ಞರತಸ್ಸದಾ ।
ಧರ್ಮಾಖ್ಯಾನ ಪ್ರಿಯೋ ನಿತ್ಯಂ ಸ ಧರೋದ್ಧರಣಕ್ಷಮಃ ॥

ಶಿವ, ವಿಷ್ಣು, ಚಂಡಿ, ಸೂರ್ಯ, ಗಣಪತಿ ಮುಂತಾದ ದೇವತೆಗಳಲ್ಲಿ ಯಥಾಯೋಗ್ಯವಾಗಿ ಭಕ್ತಿಯನ್ನು ಮಾಡತಕ್ಕ ಮನುಷ್ಯನು ತಾನು ಉದ್ಧಾರ ಹೊಂದಿ, ತನ್ನ ಪಿತೃಗಳನ್ನು ತಾರಣ ಮಾಡಿ ಸರ್ವ ಭೂಮಂಡಲವನ್ನೇ ಉದ್ಧರಿಸಲು ಸಮರ್ಥನಾಗಿರುತ್ತಾನೆ. ಅದರಲ್ಲಿಯೂ ವಿಶೇಷವಾಗಿ ವಿಷ್ಣುವನ್ನು ಪೂಜಿಸುವವನೂ, ವಿಷ್ಣುಭಕ್ತರನ್ನು ಪ್ರೀತಿಯಿಂದ ಆದರಿಸುವವನೂ ಸರ್ವ ಪಾಪಗಳಿಂದ ಮುಕ್ತನಾಗಿರುತ್ತಾನೆ. ಸರ್ವ ಜಗದೋದ್ಧಾರ ಮಾಡಲು ಅವನು ಸಮರ್ಥನೂ ಆಗಿರುತ್ತಾನೆ. ಅಧ್ಯಯನ, ಅಧ್ಯಾಪನ, ಯಜನ, ಯಾಜನ ದಾನ, ಪ್ರತಿಗ್ರಹವೆಂಬ ಆರು ಕರ್ಮ (ಷಟ್ಕರ್ಮ) ಗಳಲ್ಲಿ ಆಸಕ್ತನಾದ, ಎಲ್ಲ ವಿಧವಾದ ಯಜ್ಞಗಳನ್ನು ಮಾಡತಕ್ಕ, ಧರ್ಮೋಪದೇಶವನ್ನೂ ಪಾಠ ಪ್ರವಚನಾದಿಗಳನ್ನೂ ಪ್ರೀತಿಯಿಂದ ನಡೆಸತಕ್ಕ ಯೋಗ್ಯನಾದ ವಿಪ್ರನು ಭೂಮಂಡಲವನ್ನೇ ಉದ್ಧರಿಸಲು ಸಮರ್ಥನಾಗಿರುತ್ತಾನೆ.

**ಭೂಮಿಯನ್ನು ನಾಶ ಮಾಡುವವರು**

ವಿಶ್ವಾಸಘಾತಿನೋ ಯೇ ಚ ಕೃತಘ್ನಾ ವ್ರತಲೋಪಿನಃ ।
ದ್ವಿಜ ದೇವೇಷು ವಿದ್ವಿಷ್ಟಾಃ ಶಾತಯಂತೇ ಧರಾಂ ನರಾಃ ॥

ಪಿತರೌ ಯೇ ನ ಪುಷ್ಣಂತಿ ಸ್ತ್ರಿಯೋ ಗುರು ಜನಾನ್ ಶಿಶೂನ್ ।
ದೇವ ದ್ವಿಜ ನೃಪಾಣಾಂ ಚ ವಸು ಯೇ ಚ ಹರಂತಿ ವೈ ॥

ಅಪುನರ್ಭವ ಶಾಸ್ತ್ರೇ ಚ ಶಾತಯಂತಿ ಧರಾಂ ನರಾಃ ।
ಯೇ ಚ ಮದ್ಯರತಾಃ ಪಾಪಾ ದ್ಯೂತ ಕರ್ಮರತಾಸ್ತಥಾ ॥

ಪಾಷಂಡ ಪತಿತಾಲಾಪಾಃ ಶಾತಯಂತಿ ಧರಾಂ ನರಾಃ ।
ಮಹಾಪಾತಕಿನೋ ಯೇ ಚ ಅತಿಪಾತಕಿನ ಸ್ತಥಾ ॥

ಘಾತಕಾ ಬಹು ಜಂತೂನಾಂ ಶಾತಯಂತಿ ಧರಾಂ ನರಾಃ ।
ಸುಕರ್ಮ ರಹಿತಾ ಯೇ ಚ ನಿತ್ಯೋದ್ವೇಗಾಶ್ಚ ನಿರ್ಭಯಾಃ ॥

ಸ್ಮೃತಿ ಶಾಸ್ತ್ರಾರ್ಥಕೋದ್ವಿಗ್ನಾಃ ಶಾತಯಂತಿ ಧರಾಂ ನರಾಃ ।
ನಿಜವೃತ್ತಿಂ ಪರಿತ್ಯಜ್ಯ ಕುರ್ವಂತಿ ಚಾಧಮಾಂ ಚ ಯೇ ॥

ಗುರು ನಿಂದಾರತಾ ದ್ವೇಷಾಚ್ಛಾತಯಂತಿ ಧರಾಂ ನರಾಃ ।
ಯೇ ರೋಧಯಂತಿ ದಾತಾರಂ ಪಾತಕೇ ಪ್ರೇರಯಂತಿ ಚ ॥

ವಿಶ್ವಾಸ, ಘಾತಕರು, ಕೃತಘ್ನರು, ವ್ರತ ಮಾಡದೇ ಇರುವವರು, ದೇವ, ದ್ವಿಜ ದ್ವೇಷಿಗಳು, ಭೂಮಿಯನ್ನು ನಾಶ ಮಾಡುತ್ತಾರೆ. ಇದರಂತೆ ತಾಯಿ ತಂದೆಗಳನ್ನು ಮುಪ್ಪಿನಲ್ಲಿ ರಕ್ಷಣೆ ಮಾಡದೇ ಇರುವವರು, ಹೆಂಡತಿ ಮಕ್ಕಳನ್ನು ಪೋಷಣೆ ಮಾಡದೆ ಇರುವವರು, ದೇವರ ದ್ರವ್ಯ ತಿನ್ನುವವರು ದ್ವಿಜರ ಹಣ ಎತ್ತಿಹಾಕುವವರು, ಮದ್ಯಪಾನ ಮಾಡುವವರು, ಜೂಜಾಡುವವರು, ವೇದ ವಿದ್ವೇಷಿಗಳು, ಜಾತಿಭ್ರಷ್ಟರು, ಪಂಚ ಮಹಾ ಪಾತಕಿಗಳು, ಪ್ರಾಣಿ ಹಿಂಸಕರು. ಸ್ವಧರ್ಮ ಸ್ವಕರ್ಮ ರಹಿತರು, ಶಾಸ್ತ್ರ ವಿರುದ್ಧ ಆಚರಣೆ ಮಾಡುವವರು, ತಮ್ಮ ಉದ್ಯೋಗ ಬಿಟ್ಟು ಹೊಟ್ಟೆಗಾಗಿ ನೀಚ ಕೃತ್ಯ ಮಾಡುವವರು,

ಗುರುನಿಂದೆ ಮಾಡುವವರು, ದಾನ ಮಾಡುವದನ್ನು ವಿರೋಧಿಸುವವರು, ಪಾಪ ಕಾರ್ಯಕ್ಕೆ ಪ್ರೇರಿಸುವವರು, ದೀನ ದುಃಖಿತರನ್ನು ಪೀಡಿಸುವವರು, ಅನಾಥರನ್ನು ಮಮ್ಮಲ ಮರುಗುವಂತೆ ಮಾಡುವವರು ಮತ್ತು ಉಳಿದ ಭೀಕರವಾದ ಪಾಪ ಕೃತ್ಯಗಳನ್ನು ಎಸಗುವವರು ತಾವು ಹಾಳಾಗುವದಲ್ಲದೆ ಭೂಮಿಯನ್ನೂ ಕೂಡ ನಾಶ ಮಾಡುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಧರ್ಮಾಚರಣೆ ಎಂಬ ಎಪ್ಪತ್ತಮೂರನೇಯ ಅಧ್ಯಾಯ ಮುಗಿದುದು*



## ಭಾನುಸಪ್ತಮಿ ವ್ರತ — ಅಧ್ಯಾಯ - ೭೪

**ವೈಂಶಪಾಯನ :-** ಸ್ವಾಮಿ, ಆಕಾಶದಲ್ಲಿ ಬೆಳಗುವವನು ಯಾರು ! ಇವನ ಮಹಿಮೆ ಏನು? ಇವನು ಹುಟ್ಟಿದ್ದು ಎಲ್ಲಿ? ಕಾರ್ಯವೇನು ಈತನಿಗೆ ? ಇಷ್ಟು ತೇಜೋಮ-ಯವಾಗಲು ಕಾರಣವೇನು? ದೇವತೆಗಳು ಮುನಿಗಳು ಯಕ್ಷರು ರಾಕ್ಷಸರು ನರರು ಹಾಗೂ ದ್ವಿಜರು ಇವನನ್ನು ನಮಸ್ಕರಿಸಲು ಕಾರಣವೇನು?

**ವ್ಯಾಸ :-** ಇದು ಆ ಪರಬ್ರಹ್ಮನದೇ ತೇಜಸ್ಸು. ಬ್ರಹ್ಮಚರ್ಯದಿಂದ ಸಾಕ್ಷಾತ್ ಬ್ರಹ್ಮನ ಶರೀರದಿಂದಲೇ ಹೊರಬಿದ್ದು ಬಂದಿದೆ. ಇದು ಬ್ರಹ್ಮಸ್ವರೂಪವೇ ಆಗಿದ್ದು, ಧರ್ಮ ಕಾಮಾರ್ಥಮೋಕ್ಷ, ಎಂದು ನಾಲ್ಕು ವಿಧ ಪುರುಷಾರ್ಥ ಕೊಡುವದು. ಇದೊಂದು ತೇಜೋದೀಪದ ಉಂಡೆ; ಇದನ್ನು ಸಹಿಸಲು ಆಗುವದಿಲ್ಲ. ಇದರ ಚಂಡ ಕಿರಣಗಳ ದಾಹ ತಾಳಲಾರದೆ ಜನರು ಓಡಿಹೋಗುತ್ತಿದ್ದರು. ಸಾಗರಗಳೆಲ್ಲವೂ ಒಣಗಿಹೋದವು. ನದೀನದಗಳು ಶುಷ್ಕವಾದವು. ಜನರು, ಪ್ರಾಣಿಗಳು, ಈ ತೇಜೋದೀಪ್ತಿಯ ಶಾಖ ತಾಳದೇ ಸತ್ತು ಹೋದರು. ಇದನ್ನು ನೋಡಿ ಶಚೀಪತಿ ಮೊದಲಾದ ಸುರೋತ್ತಮರು ಬ್ರಹ್ಮದೇವರ ಬಳಿಗೆ ಬಂದು ಈ ತೇಜಃ ಪಿಂಡದ ವಿಷಯದಲ್ಲಿ ವಿಜ್ಞಾಪಿಸಿಕೊಂಡರು. ಅವರ ಅರಿಕೆ ಕೇಳಿಕೊಂಡ ಚತುರ್ಮುಖನು ನುಡಿದನು .

**ಚತುರ್ಮುಖ :-** ಎಲ್ಲೈ ದೇವತೆಗಳಿರಾ, ಇದು ಪರಬ್ರಹ್ಮದಿಂದ ಜನಿಸಿದೆ. ಇದು ಬ್ರಹ್ಮನಿಂದ ಆರಂಭಿಸಿ ಎಲ್ಲ ಚರಾಚರಗಳಲ್ಲಿ ಇರುತ್ತದೆ. ಇವನು ರಜೋಮಯ. ಇವನ ಮಧ್ಯದಲ್ಲಿ ತೇಜೋಮಯನಾದ ಮಹಾಪ್ರಭು ನಾರಾಯಣನು ಇರುತ್ತಾನೆ. ಎಲ್ಲ ಪ್ರಾಣಿಗಳು ಇವನಿಂದಲೇ ಹುಟ್ಟುತ್ತವೆ. ಇವನಿಗೆ 'ಸೂರ್ಯ'ನೆಂದು ಹೆಸರು. ಇವನ ಮಹಿಮೆಯನ್ನು ಇಷ್ಟೇ ಎಂದು ಹೇಳಲಿಕ್ಕಾಗದು. ಇವನ ಅಂತರ್ಗತನಾದ ಸವಿತೃಮಂಡಲದ ಮಧ್ಯವರ್ತಿ ನಾರಾಯಣನಿಗೆ ಸಮಾನರಾರೂ ಇಲ್ಲ ಅವನೇ ಈ ಜಗತ್ತನ್ನೆಲ್ಲ ಪಾಲಿಸುವನು, ಅವನಿಂದ ಅಧಿಷ್ಠಿತವಾದ ಈ ಆದಿತ್ಯ ಮಂಡಲವನ್ನು ಪ್ರಾತಃಕಾಲದಲ್ಲಿ ದರ್ಶನ ಮಾಡಿದರೆ ಪಾಪರಾಶಿ ಕರಗಿಹೋಗುತ್ತದೆ. ಸಂಧ್ಯಾವಂದನೆ ಮಾಡುವ ಕಾಲದಲ್ಲಿ ಸೂರ್ಯಾಂತರ್ಗತನಾದ ಈ ಪರಬ್ರಹ್ಮನನ್ನು ಆರಾಧಿಸಿ ಬ್ರಹ್ಮಜ್ಞಾನಿಗಳು ಮೋಕ್ಷವನ್ನು ಪಡೆಯುತ್ತಾರೆ. ಸಂಧ್ಯಾ ಸ್ವರೂಪಿಣಿಯಾದ ಗಾಯತ್ರೀ ದೇವಿಯನ್ನು ದ್ವಿಜರು ಧ್ಯಾನಮಾಡಿ ಸ್ವರ್ಗಾಪವರ್ಗಗಳನ್ನು ಪಡೆಯುತ್ತಾರೆ. ಸೂರ್ಯಮಂಡಲದ ರಶ್ಮಿಗಳಿಂದ ಪತಿತರೂ, ಪಾವನರಾಗುತ್ತಾರೆ.

**ಸಂಧ್ಯೋಪಾಸನ ಮಾತ್ರೇಣ ಕಲ್ಮಷಾತ್ ಪೂತತಾಂ ವ್ರಜೇತ್ ।**

ಸಂಧ್ಯಾವಂದನೆ ಮಾಡಿದ ಮಾತ್ರದಿಂದ ಪಾಪಗಳು ಪರಿಹೃತವಾಗಿ ಮನುಷ್ಯನು ಪವಿತ್ರನಾಗುತ್ತಾನೆ. ಗೋಹತ್ಯಾ ಮಾಡಿದವನನ್ನೂ, ಕುಷ್ಠಿಯನ್ನೂ, ಮಹಾಪಾತಕಿ ಯನ್ನೂ, ಉಪಪಾತಕಿಯನ್ನೂ ನೋಡಿ, ಮುಟ್ಟಿ, ಮೈಲಿಗೆಯಾದವರು ಸೂರ್ಯನನ್ನು ನೋಡಿದರೆ ಶುದ್ಧರಾಗುತ್ತಾರೆ. ಸೂರ್ಯೋಪಾಸನೆಯಿಂದ ಎಲ್ಲ ರೋಗಗಳೂ ಹೋಗುತ್ತವೆ. ಕಡುದಾರಿದ್ರ್ಯ, ಕುರುಡುತನ ದೂರಾಗುತ್ತವೆ. ದುಃಖ ನಾಶವಾಗುತ್ತದೆ. ಹರಿಹರಾದಿ ದೇವತೆಗಳನ್ನು ಮಾನವರಿಗೆ ನೋಡಲು ಆಗುವದಿಲ್ಲ. ಅವರೆಲ್ಲರೂ ಧ್ಯಾನಗಮ್ಯರು. ನಾವು ಸಾಕ್ಷಾತ್ ನೋಡುವ ದೇವರೆಂದರೆ ಸೂರ್ಯನೊಬ್ಬನೇ ಸರಿ.

**ದೇವತೆಗಳು :-** ಸ್ವಾಮಿ, ತಾವು ಹೇಳಿದ್ದೆಲ್ಲವೂ ಸರಿ. ಇವನನ್ನು ಪೂಜಿಸಿ, ಆರಾಧಿಸಿ, ಉಪಾಸಿಸಿ, ಮಹತ್ ಫಲವನ್ನೇನೋ ಯಾರಾದರೂ ಪಡೆಯಬಹುದು. ಆದರೆ ಇಂತಹ ಈ ಬೆಂಕಿಯ ಮೊಟ್ಟೆಯನ್ನು ಪೂಜಿಸುವದು ಹೇಗೆ? ಇವನ ತೇಜಃ ಸ್ಪರ್ಶದಿಂದಲೇ ಮಾನವರು ಮೃತಾವಸ್ಥೆ ಹೊಂದಿ ನೆಲಕ್ಕೆ ಬಿದ್ದಿದ್ದಾರೆ. ಇವನ ಕಾಂತಿಯಿಂದ ಸಮುದ್ರಗಳೇ ಶುಷ್ಕವಾಗಿ ಹೋಗುತ್ತವೆ. ನಮ್ಮಂತಹ ದೇವತೆಗಳಿಂದ ಕೂಡ ಇವನ ಈ ದೇದೀಪ್ಯ ಮಾನವಾದ ತೇಜೋರೂಪವನ್ನು ಹಿಡಿಯಲೂ ತಡೆಯಲೂ ಆಗದು, ಉಳಿದವರ ಪಾಡೇನು? ಆದುದರಿಂದ ಈ ಸೂರ್ಯದೇವನನ್ನು ಪೂಜಿಸುವ ಉಪಾಯ ತಿಳಿಸಿರಿ? ದೇವತೆಗಳ ಈ ಮಾತನ್ನು ಕೇಳಿ ಬ್ರಹ್ಮದೇವರು ಸೂರ್ಯನ ಬಳಿಗೆ ಹೋದರು. ಸರ್ವಲೋಕ ಕಲ್ಯಾಣಕ್ಕಾಗಿ ಆ ಸೂರ್ಯಾಂತಸ್ಥನಾದ ಪರಬ್ರಹ್ಮನನ್ನು ಸ್ತೋತ್ರ ಮಾಡತೊಡಗಿದರು.

ವ್ಯಾಸ ಉವಾಚ

**ದೇವಾನಾಂ ವಚನಂ ಶ್ರುತ್ವಾಗತೋ ಬ್ರಹ್ಮಾ ಖಗೇಶ್ವರಂ ।**
**ಗತ್ವಾ ಸ್ತೋತುಂ ಸಮಾರೇಭೇ ಸರ್ವಲೋಕಹಿತಾಯ ವೈ ॥**

**ವ್ಯಾಸನು ಹೇಳಿದನು :-** ದೇವತೆಗಳ ಈ ಮಾತನ್ನು ಕೇಳಿ ಬ್ರಹ್ಮನು ಆ ಸೂರ್ಯನ ಬಳಿಗೆ ಹೋಗಿ ಎಲ್ಲಾ ಪ್ರಾಣಿಗಳಿಗೂ ಹಿತವನ್ನುಂಟು ಮಾಡುವ ಆಸೆಯಿಂದ ಆತನನ್ನು ಸ್ತೋತ್ರ ಮಾಡಲು ಪ್ರಾರಂಭಿಸಿದನು.

ಬ್ರಹ್ಮೋವಾಚ

**ದೇವ ತ್ವಂ ಸರ್ವಲೋಕಸ್ಯ ಚಕ್ಷುರ್ಭೂತೋ ನಿರಾಮಯಃ ।**
**ಬ್ರಹ್ಮರೂಪಧರಸ್ಸಾಕ್ಷಾದ್ದುಷ್ಪ್ರೇಕ್ಷ್ಯಃ ಪ್ರಳಯಾನಲಃ ॥**

ಎಲೈ ಸ್ವಾಮಿಯೆ ! ನೀನೇ ಲೋಕಕ್ಕೆಲ್ಲಾ ಕಣ್ಣಾದವನು, ರೋಗರಹಿತನು, ಬ್ರಹ್ಮ ಸ್ವರೂಪಿಯು. ಪ್ರಳಯಕಾಲದ ಅಗ್ನಿಯಂತೆ ನೋಡಲು ಅಸಾಧ್ಯನು.

**ಸರ್ವದೇವಸ್ಥಿತಸ್ತ್ವಂ ಹಿ ಸದಾ ವಾಯುಸಖಸ್ತನೌ ।**
**ಅನ್ನಾದಿ ಪಾಚನಂ ತ್ವತ್ತೋ ಜೀವನಂ ಚ ಭವೇದ್ಧ್ರುವಂ ॥**

ನೀನು ಎಲ್ಲಾ ದೇವರಲ್ಲಿಯೂ ಇದ್ದೀಯ. ದೇಹದಲ್ಲಿದ್ದುಕೊಂಡು ವಾಯುವಿನಿಂದ ಪ್ರೇರಿಸಲ್ಪಟ್ಟು ಅನ್ನಾದಿಗಳನ್ನು ಪಚನ ಮಾಡುತ್ತೀಯೆ. ನಿನ್ನಿಂದಲೇ ಜೀವನವು ಇರುವದು ಖಂಡಿತ.

ಸ್ವಾಮಿ ಸೂರ್ಯದೇವ, ನಿನ್ನ ಕಿರಣಗಳು ಉಗ್ರವಾಗಿವೆ, ಲೋಕವು ತಡೆಯಲಾರದು. ಅದು ಮೃದುವಾಗುವಂತೆ ಮಾಡು.

**ಆದಿತ್ಯ ಉವಾಚ**

**ಕಿರಣಂ ಕೋಟಿ ಕೋಟಿಂ ಮೇ ಲೋಕನಾಶಕರಂ ಪರಂ ।**
**ಪ್ರಪಂಚೋಷ್ಣಕರಂ ಲೋಕೇ ಪ್ರಯೋಗೇಣಾಚ್ಛಿದ ಪ್ರಭೋ ॥**

**ಆದಿತ್ಯ**:-ನನ್ನ ಕಿರಣಗಳು ಕೋಟಿ ಕೋಟಿಗಟ್ಟಲೆ ಇವೆ. ಲೋಕವನ್ನೇ ನಾಶಮಾಡುತ್ತವೆ, ಲೋಕಕ್ಕೆ ಹಿತಕರವಲ್ಲ. ಇವನ್ನು ಏನಾದರೂ ಮಾಡಿ ನೀನೇ ಕಡಿಮೆ ಮಾಡು.

**ವ್ಯಾಸ** :- ಆಗ ಸೂರ್ಯನ ಮಾತಿನಂತೆ ಬ್ರಹ್ಮನು ವಿಶ್ವಕರ್ಮನನ್ನು ಕರೆಸಿ ವಜ್ರದ ಚಕ್ರವನ್ನು ಮಾಡಿಸಿ ಪ್ರಳಯಾಗ್ನಿಯಂತಿದ್ದ ಆ ಸೂರ್ಯನ ಕಿರಣಗಳನ್ನು ಕತ್ತರಿಸಿದನು. ಆ ಕಾಂತಿಯಿಂದಲೇ ವಿಷ್ಣುವಿಗೆ ಸುದರ್ಶನ ಮಾಡಿಕೊಟ್ಟನು.

ಆದ್ದರಿಂದಲೇ ಯಮನಿಗೆ ಯಮದಂಡವನ್ನು, ಶಿವನಿಗೆ ಶೂಲವನ್ನು, ಕಾಲನಿಗೆ ಖಡ್ಗವನ್ನು, ಗುಹನಿಗೆ ಶಕ್ತ್ಯಾಯುಧವನ್ನು, ಚಂಡಿಕೆಗೆ ಶಸ್ತ್ರವನ್ನು, ವಿಚಿತ್ರವಾದ ಶೂಲವನ್ನು ಆ ವಿಶ್ವಕರ್ಮನು ಬ್ರಹ್ಮನ ಅಪ್ಪಣೆಯಿಂದಲೇ ಮಾಡಿಕೊಟ್ಟನು. ಸೂರ್ಯನಿಗೆ ಸಾವಿರ ಕಿರಣಗಳು ಮಾತ್ರ ಉಳಿದವು, ಅವನ್ನು ಮಾತ್ರ ಪ್ರಕಾಶಿಸುವನು. ಮಿಕ್ಕಿದ್ದೆಲ್ಲವನ್ನು ಉಜ್ಜಿ ಬಿಟ್ಟನು. ಮತ್ತೆ ಕಶ್ಯಪನಿಗೆ ಅದಿತಿಯ ಗರ್ಭದಲ್ಲಿ ಹುಟ್ಟಿ ಆದಿತ್ಯನೆಂದು ಹೆಸರನ್ನು ಹೊಂದಿದನು. ಇವನೇ ಲೋಕದಲ್ಲೆಲ್ಲ ಸುತ್ತುತ್ತಿರುವನು, ಮೇರುವಿನ ಶಿಖರವನ್ನೂ ಸುತ್ತುತ್ತಿರುವನು.

ಭೂಮಿಯಿಂದ ಲಕ್ಷ ಯೋಜನಗಳ ಮೇಲೆ, ಸೂರ್ಯ, ಗ್ರಹ, ಚಂದ್ರರು ತಿರುಗುತ್ತಿರುತ್ತಾರೆ. ಈ ಸೂರ್ಯನಿಗೆ 'ದ್ವಾದಶಾತ್ಮ' ಎಂದು ಹೆಸರು. ಮೇಷಾದಿ ಹನ್ನೆರಡು ರಾಶಿಗಳಲ್ಲಿ ಸೂರ್ಯನು ಕ್ರಮಿಸಿದಾಗ ಸಂಕ್ರಾಂತಿ ಉಂಟಾಗುತ್ತವೆ, ಧನುಸ್ಸು, ಕನ್ಯಾ ಮೀನ ರಾಶಿಗಳಲ್ಲಿ ಸೂರ್ಯಸಂಕ್ರಾಂತಿ ಆದಾಗ ಷಡಶೀತಿ ಪುಣ್ಯ ಕಾಲವೆಂದೂ, ವೃಷಭ, ವೃಶ್ಚಿಕ, ಕುಂಭಗಳ ಸಂಕ್ರಮಣಕ್ಕೆ 'ವಿಷ್ಣುಪದಿ' ಪುಣ್ಯ ಕಾಲವೆಂದೂ ಅನ್ನುತ್ತಾರೆ. ಮಕರ ಸಂಕ್ರಮಣದ ದಿನ ಮಾಡಿದ ತರ್ಪಣ, ದಾನ, ದೇವತಾರ್ಚನೆಗಳು ಅಕ್ಷಯವಾಗುತ್ತವೆ. ಮಾಘ ಶುದ್ಧ ಸಪ್ತಮಿ ಸೂರ್ಯಗ್ರಹಣಕ್ಕೆ ಸಮಾನ. ಅಂದು ಅರುಣೋದಯಕ್ಕೆ ಸ್ನಾನ ಮಾಡಿ ಈ ಮಂತ್ರ ಹೇಳಬೇಕು.

**ಯಚ್ಚ ತತ್ರ ಕೃತಂ ಪಾಪಂ ಮಯಾ ಸಪ್ತಸು ಜನ್ಮಸು ।**
**ತನ್ಮೇ ರೋಗಂ ಚ ಶೋಕಂ ಚ ಭಾಸ್ಕರೀ ಹನ್ತು ಸಪ್ತಮೀ ॥**
**ಜನನೀ ಸರ್ವಭೂತಾನಾಂ ಸಪ್ತಮೀ ಸಪ್ತಸಪ್ತಿಕೆ ।**
**ಸಪ್ತಮ್ಯಾಮುದಿತೇ ದೇವಿ ನಮಸ್ತೇ ರವಿಮಂಡಲೇ ॥**

ನಾನು ಮಾಡಿದ ಏಳು ಜನ್ಮದ ಪಾಪವನ್ನೂ, ರೋಗ, ದುಃಖಗಳನ್ನೂ ಈ ರಥ ಸಪ್ತಮಿ ನಾಶಮಾಡಲಿ. ಇದಕ್ಕೆ ಸೂರ್ಯಸಪ್ತಮಿ ಎಂದು ಹೆಸರು. ಸೂರ್ಯ ಸಪ್ತಮಿಯೆ, ನೀನು ಸೂರ್ಯಮಂಡಲದಲ್ಲಿ ಸಪ್ತಮಿ ದಿನದಂದು ಹುಟ್ಟಿರುವಿ. ನೀನು ಸರ್ವಭೂತಗಳಿಗೆ ತಾಯಿ. ನಿನಗೆ ನನ್ನ ನಮಸ್ಕಾರವಿರಲಿ ಎಂದು ಸೂರ್ಯ ಸಪ್ತಮಿಯನ್ನು ನಮಸ್ಕರಿಸಬೇಕು. ಎಕ್ಕೆಯ ಎಲೆ, ಅಕ್ಕಿ, ಹೂ, ಗಂಧ, ಇಲಚಿಯ ಹಣ್ಣು (ಬಾರಿಹಣ್ಣು) ಇವುಗಳನ್ನು ಒಂದು ತಾಮ್ರದ ಪಾತ್ರೆಯಲ್ಲಿಟ್ಟುಕೊಂಡು ಸ್ನಾನಮಾಡಿ. ಸೂರ್ಯನಿಗೆ ಅರ್ಘ್ಯ ನೀಡಿದರೆ ಏಳು ಜನ್ಮದ ಪಾಪ ನಾಶವಾಗುವದು. ಅಂದು ಬಿಸಿಲಿಗೆ

ಒಣಗಹಾಕಿದ ಶುದ್ಧವಾದ ಅಕ್ಕಿಯಿಂದ ಅನ್ನ ಮಾಡಿ ಸೂರ್ಯನಿಗೆ ನೈವೇದ್ಯ ತೋರಿಸಿ ಜ್ಞಾನಿಗಳಿಗೆ ಭೋಜನ ಮಾಡಿಸಬೇಕು. ಮಾಘ ಶುಕ್ಲ ಸಪ್ತಮಿ ಭಾನುವಾರ ಬಂದರೆ ಅದಕ್ಕೆ 'ಮಹಾಜಯ' ಅನ್ನುತ್ತಾರೆ. ಮಾಘದ ಹೊರತು ಬೇರೆ ಮಾಸಗಳಲ್ಲಿ ಸಪ್ತಮಿ ಭಾನುವಾರ ಬಂದರೆ ಅದಕ್ಕೆ 'ವಿಜಯಾ' ಅನ್ನುತ್ತಾರೆ. ಈ ಎರಡೂ ದಿನಗಳಲ್ಲಿ ಮಾಡಿದ ಪುಣ್ಯ ಕಾರ್ಯಕ್ಕೆ ಅನಂತ ಫಲ ಪ್ರಾಪ್ತಿ.

'ಭಾಸ್ಕರಾಯ ವಿದ್ಮಹೇ ಸಹಸ್ರ ರಶ್ಮಯೇ ಧೀಮಹಿ ।
ತನ್ನೋ ಸೂರ್ಯಃ ಪ್ರಚೋದಯಾತ್' ॥

ಈ ಮಂತ್ರವನ್ನು ರಥ ಸಪ್ತಮಿಯ ದಿನ ಪಠಣ ಮಾಡಬೇಕು. ಇದರಿಂದ ಮನುಷ್ಯನಿಗೆ ಜಯವು ದೊರಕುತ್ತದೆ. ಈ ರಥ ಸಪ್ತಮಿಯನ್ನು ಐದು ದಿನದ ಒಂದು ವ್ರತವನ್ನಾಗಿ ಆಚರಿಸಬೇಕು. ಇದಕ್ಕೆ 'ಭಾನು ಸಪ್ತಮಿ ವ್ರತ' ಎಂದು ಹೆಸರು. ಇದನ್ನು ಪ್ರತಿ ತಿಂಗಳು ಆಚರಿಸಬಹುದು. ಉತ್ತರಾಯಣ ಶುಕ್ಲ ಪಕ್ಷದಲ್ಲಿ ಸಪ್ತಮಿ ಭಾನುವಾರ ಬಂದಾಗ ಹಸ್ತ, ಚಿತ್ರ, ಶ್ರವಣಾ, ಮೃಗಶಿರಾ, ಪುನರ್ವಸು ಈ ಗಂಡು ನಕ್ಷತ್ರಗಳು ಇದ್ದಾಗ ಈ ವ್ರತ ಹಿಡಿಯಬೇಕು. ಪಂಚಮಿ ದಿನ ಒಂದು ಹೊತ್ತು ಊಟ, ಷಷ್ಠೀ ದಿನ ಹಾಲು, ಹಣ್ಣು-ಲಘು ಉಪಹಾರ, ಸಪ್ತಮೀ ದಿನ ಪೂರ್ಣ ಉಪವಾಸ. ಅಷ್ಟಮಿ ದಿನ ಪಾರಣೆ ಮಾಡಬೇಕು. ಗ್ರಾಮದ ಪೂರ್ವದ ಅಥವಾ ಉತ್ತರಕ್ಕಿರುವ ಎಕ್ಕದ ಮರದಲ್ಲಿಯ ತುದಿಯಲ್ಲಿರುವ ಎರಡು ಸಣ್ಣ ಚಿಗುರು ತೆಗೆದುಕೊಂಡು ನೀರಿನಲ್ಲಿ ಹಾಕಿ ಹಲ್ಲಿಗೆ ತಗಲದಂತೆ ಕುಡಿಯಬೇಕು. ಹಸು ಸೆಗಣಿ ಹಾಕುವಾಗ ಅದು ನೆಲಕ್ಕೆ ಬೀಳುವದಕ್ಕೆ ಮೊದಲು ಅಂಗುಷ್ಠ ತರ್ಜನಿ ಬೆರಳುಗಳಿಂದ ಫಲ ಮಾತ್ರ ತೆಗೆದುಕೊಂಡು ನೀರಿಗೆ ಹಾಕಿ ಹಲ್ಲಿಗೆ ತಗಲದಂತೆ ಕುಡಿಯಬೇಕು. ಹುಳುಕಾಗದ, ಒಣಗಿದ ಒಂದು ಮೆಣಸನ್ನು ನೀರಿನಲ್ಲಿ ಹಾಕಿ ದಂತಗಳಿಗೆ ಹತ್ತದಂತೆ ಪ್ರಾಶನ ಮಾಡಿ, ಖರ್ಜೂರ, ತೆಂಗಿನ ಕಾಯಿ, ಹಲ್ಲಿಗೆ ಹತ್ತದಂತೆ ಸಣ್ಣ ಹೋಳುಗಳನ್ನಾಗಿ ಮಾಡಿಕೊಂಡು ನೀರಿನಲ್ಲಿ ಹಾಕಿ ಕುಡಿಯಬೇಕು. ನವಿಲಿನ ಮೊಟ್ಟೆ ಆಕಾರದಷ್ಟು ಅನ್ನವನ್ನು ತುಪ್ಪ ಹಚ್ಚಿ ಉಣ್ಣಬೇಕು. ಷಷ್ಠಿಯ ದಿನ ಉಪಹಾರದಲ್ಲಿ ಇವಿಷ್ಟು ಆಹಾರಗಳನ್ನು ತೆಗೆದುಕೊಳ್ಳಬೇಕು. ಷಷ್ಠಿಯ ದಿನ ಉಪಹಾರ ಮಾಡಿ ಸಪ್ತಮಿ ಪೂರ್ಣ ಉಪವಾಸ ಮಾಡಿ, ಅಷ್ಟಮಿ ಪಾರಣೆ ಮಾಡಬೇಕು. ಅಷ್ಟಮಿ ದಿನವೇ ಪಾರಣೆ ಮಾಡಬೇಕು. ನವಮಿ ಸೇರಿಸಕೂಡದು. ನವಮಿ ಪಾರಣೆಯಿಂದ ವ್ರತದ ಫಲವಿಲ್ಲ. ಪಾರಣೆಯನ್ನು ಅಪರಾಹ್ನ ಮಾಡಬೇಕು. ಊಟದಲ್ಲಿ ಖಾರ, ಹುಳಿ ವರ್ಜಿಸಬೇಕು. ಅಕ್ಕಿಯನ್ನು ಸ್ವಚ್ಛ ಮಾಡಬೇಕು. ಹೆಸರು, ಉದ್ದು, ಎಳ್ಳುಗಳನ್ನು ತ್ಯಜಿಸಬೇಕು. ಸದಾಚಾರಿಗಳಾದ ವಿಪ್ರರಿಗೆ ಹಾಲು, ಅನ್ನ ಮುಂತಾದವುಗಳಿಂದ ಭೋಜನ ಮಾಡಿಸಬೇಕು. ಮದ್ಯ ಮಾಂಸ ಮುಟ್ಟಕೂಡದು. ಅವರವರ ಯೋಗ್ಯತೆಗೆ ತಕ್ಕಂತೆ ದಾನ ದಕ್ಷಿಣೆ ನೀಡಬೇಕು. ಈ ವ್ರತವನ್ನು ಪ್ರತಿ ತಿಂಗಳು ಮಾಡಿದಲ್ಲಿ ಸೂರ್ಯನು ಸಂತುಷ್ಟನಾಗುವನು. ಭಕ್ತಿಯಿಂದ ಈ ಸಪ್ತಮೀ ವ್ರತ ಮಾಡಿದರೆ ಮನುಷ್ಯನು ಸೂರ್ಯಲೋಕವನ್ನು ಸೇರುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಭಾನುಸಪ್ತಮಿ ವ್ರತ ಎಂಬ ಎಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*

**ವೈಶಂಪಾಯನ :-** ಪೂಜ್ಯರೆ, ನೀವು ಕರುಣೆಯಿಂದ ನಮಗೆ ಉತ್ತಮವಾದ ಭಾನು ಸಪ್ತಮಿ ವ್ರತ ಹೇಳಿದಿರಿ. ಇನ್ನೂ ಯಾವುದಾದರೂ ಸೂರ್ಯ ವ್ರತ ಇದ್ದರೆ ತಿಳಿಸಿರಿ ?

**ವ್ಯಾಸ :-** ಕೈಲಾಸ ಶಿಖರ ಅತಿ ರಮಣೀಯ. ಅಲ್ಲಿ ಒಂದು ದಿನ ಸುಖವಾಗಿ ಕುಳಿತಿದ್ದ - ಮಹೇಶ್ವರ. ಅವನ ಮಗ ಸ್ಕಂದ ಅಲ್ಲಿಗೆ ಬಂದ. ನೆಲಕ್ಕೆ ತಲೆ ಹಚ್ಚಿ ನಮಸ್ಕರಿಸಿದ - ಆ ಸುಕುಮಾರ. ತನ್ನ ತಾತನನ್ನು ಕುರಿತು ಮಧುರವಾಗಿ ಮಾತನಾಡಿದ -

'ಸೂರ್ಯ ಸಪ್ತಮಿ ವ್ರತವನ್ನು' ಕೇಳಿದೆ. ವಾರದ ಫಲವೇನು ಎಂಬುದನ್ನೂ ತಿಳಿಯುವ ಕುತೂಹಲ ನನಗೆ. ಆದುದರಿಂದ ನನಗೆ ಸರಿಯಾಗಿ ವಿವರಿಸಿ ತಿಳಿಸಿರಿ. ವಿಶೇಷವಾಗಿ ಸೂರ್ಯನಿಗೆ ಪ್ರಿಯಕರವಾದ ಭಾನುವಾರದ ಫಲವನ್ನು, ಅಂದು ಮಾಡಬೇಕಾದ ಪೂಜಾದಿ ವಿಧಾನವನ್ನು ತಿಳಿಸಿಕೊಡಿರಿ.

**ಮಹೇಶ್ವರ :-** ವ್ರತ ಮಾಡುವವರು ಭಾನುವಾರ ಕೆಂಪು ಹೂಗಳನ್ನು ಜಲ ಪಾತ್ರೆಯಲ್ಲಿ ಹಾಕಿ ಸೂರ್ಯನಿಗೆ ಅರ್ಘ್ಯ ನೀಡಬೇಕು. ಹವಿಷ್ಯಾನ್ನವನ್ನೇ ಅಂದು ರಾತ್ರಿ ಊಟ ಮಾಡಬೇಕು. ರಥ ಸಪ್ತಮಿ ದಿನವೂ ಈ ರೀತಿಯಾಗಿ ಅರ್ಘ್ಯವನ್ನು ಕೊಟ್ಟರೆ ಸೂರ್ಯನು ಅವರಿಗೆ ಸಕಲ ಇಷ್ಟಾರ್ಥ ಪೂರೈಸುವನು. ಭಾನುವಾರ, ಸಪ್ತಮಿ, ಸಂಕ್ರಾಂತಿ ಸೇರಿದರೆ ಅದೊಂದು ದೊಡ್ಡ ಪರ್ವ. ಅಂದು ಮಾಡಿದ ವ್ರತ, ಪೂಜೆ, ಜಪ, ಧ್ಯಾನಗಳು ಅಕ್ಷಯ ಫಲಪ್ರದವಾಗುವವು.

ಭಾನುವಾರದಂದು ಸೂರ್ಯ ಪೂಜೆ ಮಾಡಬೇಕು. ಮೆಲ್ಲನೆ ಉಸಿರು ಬಿಡುತ್ತ ಸೂರ್ಯನ ಪ್ರತಿಮೆಯನ್ನು ಮಂಡಲದಲ್ಲಿ ಇಡಬೇಕು. ಕೆಂಪು ಪದ್ಮದಲ್ಲಿ ಆಸೀನನಾದ ಎರಡು ಭುಜಗಳುಳ್ಳ, ಸುಂದರ ಕಂಠದ ಕೆಂಪು ಬಟ್ಟೆ, ಆಭರಣ ಧರಿಸಿದ ಸೂರ್ಯನನ್ನು ಧ್ಯಾನ ಮಾಡಿ ಎರಡೂ ಕೈಗಳಲ್ಲಿ ಹೂ ಹಿಡಿದು, ಮೂಸಿ ನೋಡಿದ ಬಳಿಕ ಅದನ್ನು ಈಶಾನ್ಯ ದಿಕ್ಕಿಗೆ ಎಸೆಯಬೇಕು.

**ಆದಿತ್ಯಾಯ ವಿದ್ಮಹೇ ಭಾಸ್ಕರಾಯ ಧೀಮಹಿ ।**
**ತನ್ನೋ ಭಾನುಃ ಪ್ರಚೋದಯಾತ್ ॥**

ಎಂಬ ಮಂತ್ರದಿಂದ ಆವಾಹನೆ ಮಾಡಬೇಕು. ಗುರುಗಳು ಹೇಳಿದಂತೆ ಭಕ್ತಿಯಿಂದ ಹೂಗಳನ್ನು ಏರಿಸಿ, ಧೂಪಾರ್ಚನೆಗೈದು ರಸಭರಿತ ಫಲಗಳನ್ನು ನೈವೇದ್ಯಕ್ಕೆ ಅಣಿ ಮಾಡಿ ಇಟ್ಟುಕೊಳ್ಳಬೇಕು. ಹೂ, ಹಣ್ಣುಗಳಿಗೆ ನೀರಿನಿಂದ ಪ್ರೋಕ್ಷಣೆ ಮಾಡಿಬೇಕು. ಅನಂತರ ಮಂಡಲದಲ್ಲಿ ಸ್ಥಾಪಿಸಿದ ಸೂರ್ಯನ ಪ್ರತಿಮೆಗೆ ಸ್ನಾನ ಮಾಡಿಸಿ ಗಂಧಾದಿ ಲೇಪನಗೈದು, ಹೂವು ಏರಿಸಿ, ಧೂಪಾರತಿ ಮಾಡಬೇಕು. ಅನಂತರ ಪ್ರೋಕ್ಷಣೆ ಮಾಡಿಟ್ಟ ನೈವೇದ್ಯ ಅರ್ಪಿಸಿ

**ಓಂ ಸೂರ್ಯಾಯ ನಮಃ ಓಂ ಆದಿತ್ಯಾಯ ನಮಃ**
**ಓಂ ಪೂಷ್ಣೇ ನಮಃ**
**ಓಂ ಸವಿತ್ರೇ ನಮಃ**
**ಓಂ ಅರ್ಯಮ್ಣೇ ನಮಃ**

ಓಂ ದಿವಾಕರಾಯ ನಮಃ
ಓಂ ತ್ರಯೀ ತನವೇ ನಮಃ
ಓಂ ಜಗತ್ ಚಕ್ಷುಷೇ ನಮಃ
ಓಂ ಜ್ಯೋತಿಷಾಂ ಪತಯೇ ನಮಃ
ಓಂ ಭಾಸ್ಕರಾಯ ನಮಃ
ಓಂ ಪ್ರಭಾಕರಾಯ ನಮಃ
ಓಂ ಹಂಸಾಯ ನಮಃ

ಎಂದು ಧ್ಯಾನ ಮಾಡಬೇಕು. ಆಮೇಲೆ ಅಂಜಲಿ ಮುದ್ರೆ, ಧೇನುಕಾ ಮುದ್ರೆ ತೋರಿಸಬೇಕು. ಹೀಗೆ ಸೂರ್ಯನ ಪೂಜೆ ಮಾಡಿದವನು ಸೂರ್ಯನ ಸಾರೂಪ್ಯ ಹೊಂದುತ್ತಾನೆ. ಆದಿತ್ಯನು ಅರ್ಥಾತ್ ಈ ಸೂರ್ಯನಾರಾಯಣನು ಸರ್ವ ಶ್ರೇಷ್ಠನು, ವಿಘ್ನವಿನಾಶಕ. ಅವನ ಉಪಾಸನೆಯಿಂದ ಶಮನ ಹೊಂದುವವು ಸರ್ವರೋಗಗಳು. ಸೂರ್ಯದೇವನೇನೋ ಒಬ್ಬನೇ. ಕಾಲಭೇದದಿಂದ ಹನ್ನೆರಡು ರೂಪ ಪಡೆದು 'ದ್ವಾದಶಾತ್ಮ' ನೆಂದೆನಿಸುತ್ತಾನೆ. ಈ ಸೂರ್ಯನಿಗೆ ತಿಂಗಳಿಗೆ ಒಂದರಂತೆ ಹನ್ನೆರಡು ರೂಪ, ಹನ್ನೆರಡು ಕಾರ್ಯಗಳು. ಮಾರ್ಗಶೀರ್ಷದಲ್ಲಿ ಮಿತ್ರ ಎನ್ನುವರು. ಪುಷ್ಯದಲ್ಲಿ ವಿಷ್ಣು, ಮಾಘದಲ್ಲಿ ವರುಣ, ಫಾಲ್ಗುಣದಲ್ಲಿ ಸೂರ್ಯ, ಚೈತ್ರದಲ್ಲಿ ಭಾನು, ವೈಶಾಖದಲ್ಲಿ ತಾಪಸ, ಜ್ಯೇಷ್ಠದಲ್ಲಿ ಇಂದ್ರ, ಆಷಾಢದಲ್ಲಿ ರವಿ, ಶ್ರಾವಣದಲ್ಲಿ ಗಭಸ್ತಿ, ಭಾದ್ರಪದದಲ್ಲಿ ಯಮ, ಆಶ್ವೀನದಲ್ಲಿ ಹಿರಣ್ಯರೇತಾ, ಕಾರ್ತಿಕದಲ್ಲಿ ದಿವಾಕರ ಎಂದು ಬೇರೆ ಬೇರೆ ಹೆಸರು ಪಡೆಯುವನು ಮತ್ತು ತೇಜಃಪುಂಜನಾಗಿ ಪ್ರಕಾಶಿಸುವನು. ಹೀಗೆ ಪ್ರತಿ ತಿಂಗಳು ಸೂರ್ಯನಿಗೆ ಬೇರೆ ಬೇರೆ ಹೆಸರುಗಳಿವೆ. ಈ ಸೂರ್ಯದೇವನ ದ್ವಾದಶನಾಮ ಪಠಿಸುವವರಿಗೆ ರೋಗ, ದಾರಿದ್ರ್ಯ, ಅವಮಾನಗಳು ಆಗುವದಿಲ್ಲ. ಅಲ್ಲದೆ, ರಾಜ್ಯ, ಸೌಖ್ಯ, ಕೀರ್ತಿ ಇವೆಲ್ಲವೂ ಇಲ್ಲಿರುವಾಗ ದೊರೆತು, ಅಲ್ಲಿ ಅಕ್ಷಯ ಸ್ವರ್ಗ ಲಭಿಸುವದು.

ಮುಂದೆ ಹೇಳಿದ ಸೂರ್ಯನ ಮಹಾಮಂತ್ರವನ್ನು ಭಕ್ತಿಯಿಂದ ಜಪಿಸಬೇಕು.

ನಮಃ ಸಹಸ್ರಭಾನವೇ ಆದಿತ್ಯಾಯ ನಮೋ ನಮಃ ।
ನಮಸ್ತೇ ಪದ್ಮಹಸ್ತಾಯ ವರುಣಾಯ ನಮೋ ನಮಃ ॥
ನಮಸ್ತಿಮಿರನಾಶಾಯ ಶ್ರೀಸೂರ್ಯಾಯ ನಮೋ ನಮಃ ।
ನಮಃ ಸಹಸ್ರಜಿಹ್ವಾಯ ಭಾನವೇ ಚ ನಮೋ ನಮಃ ॥
ತ್ವಂ ಚ ಬ್ರಹ್ಮಾ ತ್ವಂ ಚ ವಿಷ್ಣೂ ರುದ್ರಸ್ತ್ವಂ ಚ ನಮೋ ನಮಃ ।
ತ್ವಮಗ್ನಿಸ್ಸರ್ವಭೂತೇಷು ವಾಯುಸ್ತ್ವಂ ಚ ನಮೋ ನಮಃ ॥
ಸರ್ವಗಃ ಸರ್ವಭೂತೇಷು ನ ಹಿ ಕಿಂಚಿತ್ತ್ವಯಾ ವಿನಾ ।
ಚರಾಚರೇ ಜಗತ್ಯಸ್ಮಿನ್ಸರ್ವದೇಹೇ ವ್ಯವಸ್ಥಿತಃ ॥

ಆದಿತ್ಯ ಭಾಸ್ಕರ, ಸೂರ್ಯ, ಅರ್ಕ, ಭಾನು, ದಿವಾಕರ, ಸುವರ್ಣರೇತಸ್, ಮಿತ್ರ, ಪೂಷಾ, ತ್ರಷ್ಟಾ, ಸ್ವಯಂಭೂ, ತಿಮಿರನಾಶ - ಈ ಹನ್ನೆರಡು ರವಿಯ ನಾಮ ಪಠಿಸುವವನು ಸರ್ವ ಪಾಪಗಳಿಂದ ಮುಕ್ತನಾಗಿ ಸದ್ಗತಿ ಹೊಂದುವನು. ಇವಲ್ಲದೆ ಸೂರ್ಯನಿಗೆ

ಅನೇಕಾನೇಕ ಹೆಸರುಗಳುಂಟು. ಅವುಗಳಲ್ಲಿ ಕೆಲವನ್ನು ಮಾತ್ರ ಹೇಳುತ್ತೇನೆ ಕೇಳು. ತಪನ, ತಾಪನ, ಕರ್ತ, ಹರ್ತ, ಮಹೇಶ್ವರ. ಲೋಕಸಾಕ್ಷಿ, ತ್ರಿಲೋಕೇಶ, ವ್ಯೋಮಾಧಿಪ, ದಿವಾಕರ, ಅಗ್ನಿಗರ್ಭ, ಮಹಾವಿಪ್ರ, ಖಗ, ಸಪ್ತಾಶ್ವವಾಹನ, ಪದ್ಮಹಸ್ತ, ತಮೋಭೇದಿ, ಕಾಲಪ್ರಿಯ, ಪುಂಡರೀಕ, ಮೂಲಸ್ಥಾನ ಎಂಬುದಾಗಿ ವಿಶೇಷವಾಗಿ ಹೆಸರುಗಳಿವೆ. ಈ ಹೆಸರುಗಳನ್ನು ಭಕ್ತಿಯಿಂದ ಸ್ಮರಿಸಬೇಕು. ಆದಿತ್ಯನನ್ನು ಅಂತರ್ಯಾಮಿಯಾದ ವಿಷ್ಣುನಾಮದಿಂದಲೇ ಸ್ಮರಿಸಬೇಕು. ಇದರಲ್ಲಿ ತಿಲಮಾತ್ರವೂ ಸಂದೇಹ ಪಡಬಾರದು.

**ನ ಸಂದೇಹೋ ಮನಾಕ್ಕಾರ್ಯ: ಆದಿತಸ್ಯ ಮಹಾಪತೇಃ ।**
**ಓಂ ಇಂದ್ರಾಯ ನಮಃ ಓಂ ವಿಷ್ಣವೇ ನಮಃ**
**ಏಷ ಜಪಸ್ಯ ಹೋಮಸ್ಯ ಸಂಧ್ಯೋಪಾಸ್ತೇಸ್ತಥೈವ ಚ**
**ಸರ್ವಶಾಂತಿಕರಶ್ಚೈವ ಸರ್ವವಿಘ್ನವಿನಾಶನಃ ॥**

ಸೂರ್ಯನನ್ನು 'ಓಂ ಇಂದ್ರಾಯ ನಮಃ, ಓಂ ವಿಷ್ಣವೇ ನಮಃ' ಎಂದು ಜಪ ಮಾಡಿ ಸಂಧ್ಯೋಪಾಸನೆಗೈದು ಈ ಮಂತ್ರದಿಂದ ಹೋಮ ಮಾಡುವದರಿಂದ ಸರ್ವ ವಿಘ್ನಗಳು ದೂರವಾಗಿ ಶಾಂತಿ. ತುಷ್ಟಿ, ಪುಷ್ಟಿಗಳು ಉಂಟಾಗುವವು ಇದರಿಂದ ಸಿಡಿಬು, ಕಾಮಾಲೆ, ಚಳಿಜ್ವರ, ವಿಷಮ ಜ್ವರ, ಕುಷ್ಠ, ಕ್ಷಯ, ಹೊಟ್ಟೆ ಶೂಲೆ, ಅಶ್ಮರಿರೋಗ, ವಾತರೋಗ, ಮೂತ್ರರೋಗ ಮುಂತಾದ ರೋಗಗಳು ಪರಿಹಾರವಾಗುತ್ತವೆ.

**'ರಕ್ಷ ಮಾಂ ದೇವದೇವೇಶ ಗ್ರಹರೋಗಭಯೇಷು ಚ ।**

ಪಿಶಾಚ ಬಾಧೆ, ಭಯಗಳು ಆದಾಗ 'ರಕ್ಷಮಾಂ ದೇವ ದೇವೇಶ' ಎಂದು ಸೂರ್ಯನನ್ನು ಪ್ರಾರ್ಥಿಸಿದರೆ ಎಲ್ಲ ರೋಗಗಳು ತಾವಾಗಿ ಉಪಶಮನ ಹೊಂದುವವು. ಸರ್ವಾಭೀಷ್ಟ ಪೂರೈಸುವ ಸೂರ್ಯ ದೇವತಾಕವಾದ ಒಂದು ಮೂಲ ಮಂತ್ರವಿದೆ. ಅದನ್ನು ಜಪಿಸಿದವರಿಗೆ ಇರುವವರೆಗೆ ಭುಕ್ತಿ ಮರಣಾ ನಂತರ ಮುಕ್ತಿ ದೊರಕುವವು.

### ಸೂರ್ಯದೇವನ ಮೂಲ ಮಂತ್ರ

**'ಓಂ ಹ್ರಾಂ ಹ್ರೀಂ ಸಃ ಸೂರ್ಯಾಯ ನಮಃ ।**

ಈ ಮಂತ್ರವನ್ನು ಭಕ್ತಿಯಿಂದ ಸಾಧ್ಯವಾದಷ್ಟು ಸಲ ಜಪಿಸಬೇಕು. ಅವನಿಗೆ ಯಾವ ರೋಗಗಳೂ ಬರುವದಿಲ್ಲ. ಯಾವ ಅನಿಷ್ಟವೂ ಸಂಭವಿಸುವದಿಲ್ಲ. ಭಯಾ ಪಾಯಗಳು ದೂರಾಗುವವು. ಈ ಮಂತ್ರದಿಂದ ಅಭಿಮಂತ್ರಣ ಮಾಡಿ ನೀರನ್ನು ಕುಡಿದರೆ ದೇಹ ರೋಗ, ಮನೋರೋಗ ಎಲ್ಲವೂ ವಾಸಿಯಾಗುತ್ತವೆ. ಇದನ್ನು ಕಂಡ ಕಂಡವರಿಗೆ ಹೇಳಬಾರದು; ಪ್ರಕಾಶ ಪಡಿಸಬಾರದು. ಶುಚಿರ್ಭೂತರಾಗಿಯೇ ಪಠಿಸಬೇಕು. ನಾಸ್ತಿಕರಿಗೆ, ಲೌಕಿಕ ಉದ್ಯೋಗಿಗಳಿಗೆ ಇದನ್ನು ಹೇಳಕೂಡದು. ಸಂಧ್ಯಾಕಾಲ, ಹೋಮ, ಹವನದ ಕಾಲದಲ್ಲಿ ಇದನ್ನು ಜಪಿಸಬೇಕು. ಇದನ್ನು ಜಪಿಸಿದವರಿಗೆ ಸೂರ್ಯದೇವನು ಧನ, ಕೀರ್ತಿ ದಯಪಾಲಿಸುವನು. ಪುಣ್ಯ ಸ್ನಾನ, ತೀರ್ಥಗ್ರಹಣ ಕಾಲ, ಭೋಜನ ಸಮಯ, ಪೂಜಾ ಕಾಲದಲ್ಲಿ ಹೇಳಿದರೆ ಅನಂತ ಫಲ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸೂರ್ಯನ ಉಪಾಸನೆ ಎಪ್ಪತ್ತೈದನೇಯ ಅಧ್ಯಾಯ ಮುಗಿದುದು*

**ವ್ಯಾಸ :-** ಮಧ್ಯ ದೇಶದಲ್ಲಿ ಭದ್ರೇಶ್ವರ ಎಂಬ ರಾಜನಿದ್ದನು. ಅವನು ಮಾಡಿದ ತಪಸ್ಸುಗಳಿಗೆ ಲೆಕ್ಕವಿಲ್ಲ. ವ್ರತ ನಿಯಮಗಳಿಗೆ ಸಂಖ್ಯೆ ಇಲ್ಲ. ಅದರಿಂದ ಅವನು ಪರಿಪೂತನಾಗಿದ್ದ. ಅವನು ನಿತ್ಯವೂ ದೇವರನ್ನು ಪೂಜಿಸುತ್ತಿದ್ದ. ಗುರುಗಳನ್ನು ಆರಾಧಿಸುತ್ತಿದ್ದ. ನ್ಯಾಯನಿಷ್ಠ, ಸುಶೀಲ, ಶಾಸ್ತ್ರ ಪಂಡಿತ ಕೂಡ ಆಗಿದ್ದ ಆ ದೊರೆ. ಹೀಗೆ ಪ್ರಜೆಗಳನ್ನು ಮಕ್ಕಳಂತೆ ಪಾಲನೆ ಮಾಡುತ್ತಿದ್ದರೂ, ಆ ಮಹಾರಾಜನ ಬಲಗೈಗೆ ಬಿಳಿಯ ತೊನ್ನು ಉಂಟಾಯಿತು. ವೈದ್ಯರಿಗೆ ಕೊರತೆಯೆ ರಾಜ್ಯದಲ್ಲಿ? ಸಿದ್ಧಹಸ್ತರಾದ ವೈದ್ಯರೆಲ್ಲರೂ ಬಂದು, ತಮ್ಮ ತಮ್ಮ ಚಿಕಿತ್ಸೆ ಮಾಡಿದರು, ಯಾವ ಚಿಕಿತ್ಸೆಗೂ ಮಣಿಯಲಿಲ್ಲ ಮಹಾರಾಜನ ತೊನ್ನು ರೋಗ. ಆಗ ಮಹಾರಾಜ ಮೊದಲು ಕರೆದ ತನ್ನ ಮಂತ್ರಿ ಮಹಾಶಯರನ್ನು. ಅವರಿಗೆ ಹೇಳಿದ 'ಮಂತಿಗಳೇ ನೋಡಿದಿರಾ - ಈ ನನ್ನ ಕೈಯಲ್ಲಿ ತೋನ್ನು ತಗಲಿದೆ. ಇದು ನನ್ನ ಜನ್ಮಾಂತರದ ಪಾಪದ ಫಲ. ಅದಕ್ಕಾಗಿ ಏನು ಮಾಡುವದು? ನಾನೊಂದು ತೀರ್ಮಾನಕ್ಕೆ ಬಂದಿದ್ದೇನೆ. ಯಾವುದಾದರೂ ಪುಣ್ಯ ಕ್ಷೇತ್ರದಲ್ಲಿದ್ದು ಅಲ್ಲಿಯೇ ಪ್ರಾಣ ಬಿಡಬೇಕು. ನನ್ಗಂತೂ ಮಕ್ಕಳಿಲ್ಲ. ಈ ರೋಗವೇನೋ ಬಂದಿದೆ. ಯಾವ ತೀರ್ಥದಲ್ಲಿದ್ದು ನಾನು ಪ್ರಾಣಾರ್ಪಣೆ ಮಾಡಿದರೆ ಮುಂದೆ ಸದ್ಗತಿ ಸಿಕ್ಕೀತು? ನೀವೇ ವಿಚಾರಿಸಿ ಹೇಳಿರಿ. ಅದರಂತೆ ಮಾಡುತ್ತೇನೆ.

**ಮಂತ್ರಿ :-** ಮಹಾ ಪ್ರಭು, ನೀವೇನು ಸಾಮಾನ್ಯ ರಾಜರೆ? ಧರ್ಮ ನಿಷ್ಠರು. ನೀವು ಬಿಟ್ಟರೆ ಹಾಳಾಗುವದು ಈ ರಾಜ್ಯ. ಆದುದರಿಂದ ತಾವು ಸರ್ವಥಾ ನುಡಿಯಬಾರದು ಇಂತಹ ಮಾತುಗಳನ್ನು. ಈ ರೋಗಕ್ಕೆ ಒಂದು ಉಪಾಯವಿದೆ. ಅದನ್ನು ತಾವು ಮಾಡಬೇಕು. ಸೂರ್ಯದೇವನನ್ನು ಮಹಾ ಪ್ರಯತ್ನದಿಂದ ನೀವು ಆರಾಧಿಸಿರಿ. ಸರ್ವ ರೋಗ ನಾಶಕನಲ್ಲವೇ ಈ ಸವಿತೃದೇವ?

**ರಾಜ :-** ಮಾನ್ಯರೆ, ಈ ತೋನ್ನುನಿಂದ ಅಪವಿತ್ರನಾದ ನಾನು ಸೂರ್ಯನ ಸ್ತೋತ್ರ ಹೇಳುವದು ಹೇಗೆ? ಅತ್ಯಂತ ಹೇಯವಾದ ಇಂತಹ ರೋಗವಿರುವಾಗ ಆ ಸೂರ್ಯ ಭಗವಂತನನ್ನು ನಾನು ಆರಾಧಿಸುವದು ಹೇಗೆ? ಆದುದರಿಂದ ಯಾರ ಕಣ್ಣಿಗೂ ಕಾಣದಂತೆ ತಲೆಮರೆಸಿಕೊಂಡು ಹೋಗುವೆನು. ಈ ರಾಜ್ಯ ತೆಗೆದುಕೊಂಡು ನಾನೇನು ಮಾಡಲಿ? ದೇವರ ಆರಾಧನೆ ಹೇಗೆ ಮಾಡಲಿ?

ಆಗ ಮಂತ್ರಿಗಳು ದೇಶದಲ್ಲಿ ಹುಡುಕಿ ವಿದ್ವಾನರಾದ ದ್ವಿಜರನ್ನು ಕರೆದು ಕೊಂಡು ಬಂದರು. ಅವರ ಮಾರ್ಗದರ್ಶನವನ್ನು ಅಪೇಕ್ಷಿಸಿದರು. ಆ ವಿಪ್ರರು ಯೋಚಿಸಿ ಹೇಳಿದರು -

**ದ್ವಿಜರು :-** ಮಹಾರಾಜ, ಸೂರ್ಯದೇವನನ್ನು ಆರಾಧಿಸಲು ನೀನು ಮನೆ ಬಿಡಬೇಕಾಗಿಲ್ಲ. ನಿನ್ನ ರಾಜಧಾನಿಯಲ್ಲಿ, ಅರಮನೆಯಲ್ಲಿ ಇದ್ದೇ ಆ ದಿವಾಕರನನ್ನು ಆರಾಧಿಸಬಹುದು. ಅದರಿಂದ ನಿನ್ನ ತೋನ್ನುರೋಗವು ನಷ್ಟವಾಗಿ ಸ್ವರ್ಗಅಪವರ್ಗಗಳು ಲಭಿಸುವವು. ನೀನು ರೋಗ ತಗಲಿದ್ದರೂ ಭಕ್ತಿಯಿಂದ. ಆ ಭಗವಂತನನ್ನು ಆರಾಧಿಸಲು ಏನೂ ಅಭ್ಯಂತರವಿಲ್ಲ.

ಇದರಿಂದ ಮಹಾರಾಜನಿಗೆ ಸಂತೋಷವಾಯಿತು. ಹೀಗೆ ಹೇಳಿದ ವಿಪ್ರೋತ್ತಮರನ್ನೂ ವಂದಿಸಿದ. ಸೂರ್ಯನ ಆರಾಧನೆಗೆ ತೊಡಗಿದ. ಮಂತ್ರಗಳಿಂದ ಧ್ಯಾನಿಸಿ ಗಂಧ ಲೇಪಿಸಿ

ಪುಷ್ಪಗಳನ್ನು ಅರ್ಪಿಸಿ, ಬಗೆಬಗೆಯ ಹಣ್ಣುಗಳನ್ನು ನಿವೇದಿಸಿ, ಅರ್ಘ್ಯ ನೀಡಿ, ನಿತ್ಯವೂ ಪೂಜೆಗೈದ. ಇವನ ಜೊತೆಗೆ ಇವನ ಮಡದಿಯರೂ, ಭೋಗಿನಿ ಭಾಮಿನಿಯರೂ, ಮಂತ್ರಿ ಪುರೋಹಿತ ಆಚಾರ್ಯರೂ, ಎಲ್ಲ ಅಂತಃಪುರ ಪರಿವಾರದವರೂ ಸೂರ್ಯನಿಗೆ ಅರ್ಘ್ಯಪ್ರದಾನಗೈದರು. ಉತ್ತಮವಾದ ಅರ್ಕಶಾಂತಿಗಳಿಂದಲೂ ಸ್ತೋತ್ರ ಮಂತ್ರಗಳಿಂದಹೂ ಸೂರ್ಯನನ್ನು ಪೂಜಿಸಿದರು. ಸೂರ್ಯವ್ರತಕ್ಕೆ ಸಂಬಂಧಿಸಿದ ಇನ್ನಿತರ ವ್ರತಗಳನ್ನೂ ಆಚರಿಸಿದರು. ಹೀಗೆ ಒಂದುವರ್ಷ ಕಳೆಯುವಷ್ಟರಲ್ಲಿ ಅವನ ಆ ಬಿಳುಪು ರೋಗ ಸಂಪೂರ್ಣ ನಾಶವಾಯಿತು. ತೋನ್ನು ರೋಗ ವಾಸಿಯಾದ ಬಳಿಕ ಮಹಾರಾಜನು ತನ್ನ ರಾಜ್ಯದ ಎಲ್ಲ ಪ್ರಜೆಗಳಿಗೂ ಕಟ್ಟಪ್ಪಣೆ ಮಾಡಿ ಪ್ರಾತಃಕಾಲದಲ್ಲಿ ಎಲ್ಲರೂ ಸೂರ್ಯನಿಗೆ ಅರ್ಘ್ಯ ನೀಡುವಂತೆ ನಿಯಮಮಾಡಿದ. ಜನರೆಲ್ಲರೂ ಹವಿಷ್ಯಾನ್ನ ಉಂಡು, ದಾಸವಾಳದ ಹೂ, ಬಾಳೆಯ ಹಣ್ಣು, ಎಕ್ಕದ ಹೂ ಮುಂತಾದವುಗಳಿಂದ ಸೂರ್ಯನನ್ನು ಪೂಜಿಸಿ, ಅರ್ಘ್ಯ ನೀಡಿ ಆರಾಧಿಸಿದರು. ಹೀಗೆ ಸರ್ವ ಪ್ರಜೆಗಳ ಪೂಜೆ, ಅರ್ಘ್ಯಪ್ರದಾನಗಳಿಂದ ಸಂತೋಷಗೊಂಡ ಆ ಸೂರ್ಯದೇವ ಮಹಾರಾಜನಿಗೆ ಹೇಳಿದ 'ರಾಜನ್, ನಿನ್ನ ಮನಸ್ಸಿನಲ್ಲಿ ಏನಿದೆ? ಕೇಳಿಕೊ, ನಿನ್ನ ಜನರಿಗೆ ಹಿತವಾಗುವದನ್ನು ಕೇಳು.'

ಆಗ ಆ ಮಹಾರಾಜನು 'ನನಗೂ ನನ್ನ ಪ್ರಜೆಗಳಿಗೂ ಸೂರ್ಯಲೋಕ ಪ್ರಾಪ್ತಿಯಾಗಲಿ' ಎಂದು ಕೇಳಿಕೊಂಡ. ಅದರಂತೆ ಆ ಭಾಸ್ಕರನು ಅವರಿಗೆ ಇಲ್ಲಿ ಇರುವವರೆಗೆ ದೀರ್ಘಾಯುಷ್ಯ, ಆರೋಗ್ಯ ಐಶ್ವರ್ಯ, ನೀಡಿ ಮುಂದೆ ಅವರೆಲ್ಲರೂ ದಿವ್ಯಗತಿ ಹೊಂದುವಂತೆ ಅನುಗ್ರಹಿಸಿದ. ಹೀಗೆ ಭದ್ರೇಶ್ವರ ಮಹಾರಾಜನು ಆ ದಿವಾಕರನ ಅನುಗ್ರಹದಿಂದ ಇಹ ಪರಗಳಲ್ಲಿ ಸುಖ ಸೌಭಾಗ್ಯಗಳನ್ನು ಪಡೆದು ಉಭಯತ್ರ ನಲಿದಾಡಿದನು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಭದ್ರೇಶ್ವರ ಉಪಾಖ್ಯಾನ ಎಂಬ ಎಪ್ಪತ್ತಾರನೇಯ ಅಧ್ಯಾಯ ಮುಗಿದುದು*



## ಸೋಮಾರ್ಚನ — ಅಧ್ಯಾಯ - ೭೭

**ವೈಶಂಪಾಯನ :-** ಸೂರ್ಯನ ಮಹಿಮೆಯನ್ನು ಕೇಳಿ ತಿಳಿದೆನು. ಸೂರ್ಯನೇ ಮುಂತಾದ ಗ್ರಹಗಳಿಗೆ ಸಾಧನೆಗಳೇನು? ಈ ಸೂರ್ಯಾದಿಗಳು ಯಾರು? ಅವರಿಗೆ ಏನು ಇಷ್ಟ? ಯಾವ ಕಾಲದಲಿ ಯಾವ ದೇಶದಲ್ಲಿ ಈ ಗ್ರಹಗಳ ದರ್ಶನವು ಶುಭಕರ? ಯಾವ ಕಾಲದಲ್ಲಿ ಅಶುಭ! ಇದೆಲ್ಲವನ್ನು ತಿಳಿಸಿರಿ.

**ವ್ಯಾಸ :-** ಲೋಕದ ಜನರು ಪುಣ್ಯ ಪಾಪಗಳನ್ನು ಅನುಭವಿಸುವದಕ್ಕೂ ಶುಭಾಶುಭಮಾಡುವದಕ್ಕೂ ಕರ್ಮಕ್ಷಯ ಮಾಡಿಕೊಳ್ಳಲು ಈ ಗ್ರಹಗಳೇ ಕಾರಣ. ಸೂರ್ಯನು ಜನಕ್ಕೂ, ಗ್ರಹಗಳಿಗೂ ಕಾಲರೂಪ. ಯಮರೂಪ, ಅವನ ತೀಕ್ಷ್ಣತೆ, ಸೌಮ್ಯತೆಗಳು, ಜನರಿಗೆ ನಿಗ್ರಹಾನುಗ್ರಹಗಳನ್ನು ಉಂಟುಮಾಡುತ್ತವೆ. ಈ ಸೂರ್ಯ ಗ್ರಹಕ್ಕೆ ಸಂತೋಷವಾಗುವ ಪೂಜೆಯ ರೀತಿಯನ್ನು ಹೇಳುತ್ತೇನೆ, ಕೇಳು. ಹತ್ತಿ, ಹಾಗೂ ಮುತ್ತುಗ ಮರಗಳ ಚಿಗುರುಗಳಿಂದ ಸೂರ್ಯನನ್ನು ಉದ್ದೇಶಿಸಿ ಹೋಮ ಮಾಡಬೇಕು.

**ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ ।**
**ಅಮೃತಂ ಮರ್ತ್ಯಂ ಚ ॥**
**ಹಿರಣ್ಯಯೇನ ಸವಿತಾ ರಥೇನ ದೇವೋ ಯಾತಿ ।**
**ಭುವನಾನಿ ಪಶ್ಯನ್ ॥**

ಎಂಬ ಮಂತ್ರದಿಂದ ಮತ್ತು ಓಂ ಹ್ರಾಂ ಹ್ರೀಂ ಸಃ ಸೂರ್ಯಾಯನಮಃ ಎಂಬ ಸೂರ್ಯನ ಮೂಲ ಮಂತ್ರದಿಂದ ನೂರು ನೂರು ಹೋಮ ಮಾಡಬೇಕು. ಹೀಗೆ ಮಾಡಿದರೆ ಸರ್ವವಿಧ ಉಪದ್ರವಶಾಂತಿ ಆಗುವದಲ್ಲದೆ ಪರರಿಂದ ತನಗೆ ಸಂಭವಿಸಬಹುದಾದ ಮರಣ ಹಾಗೂ ಕಾರಾಗೃಹ ಬಂಧನಾದಿಗಳು ತಪ್ಪಿ ಹೋಗುತ್ತವೆ. ಬಿಳಿಯ ಆಡನ್ನು ದಾನ ಮಾಡಬೇಕು. ಅದು ಶುಕ್ಲಪಕ್ಷ ಪಂಚಮಿ ಅಥವಾ ಹುಣ್ಣಿಮೆ ಮಾಡಬೇಕು. ಪ್ರತಿ ಆದಿತ್ಯವಾರ ದ್ವಿಜರಿಗೆ ಭೋಜನ ಮಾಡಿಸಬೇಕು. ಈ ಸೂರ್ಯ ನಾರಾಯಣನೇ ಜಗತ್ತಿನ, ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆ. ಎಲ್ಲರನ್ನು ರಕ್ಷಿಸುತ್ತಾನೆ. ಚಂದ್ರನು ಭೂಮಿಯಲ್ಲಿರುವ ಪ್ರಾಣಿ, ಪಶು, ಗಿಡಗಳನ್ನು ರಕ್ಷಿಸುತ್ತಾನೆ. ಈ ಸೂರ್ಯಬಿಂಬದಿಂದಲೇ ಜಗತ್ತು ನಿಂತಿದೆ. ಇವರಿಬ್ಬರನ್ನು ಪೂಜಿಸುವದರಿಂದಲೇ ಪುಷ್ಟಿತುಷ್ಟಿಗಳು ಪ್ರಾಪ್ತವಾಗುತ್ತವೆ. ತಿಳುವಳಿಕೆ ಇಲ್ಲದೆ ಸೂರ್ಯಚಂದ್ರರನ್ನು ಪೂಜಿಸದಿದ್ದರೆ ಆಯುಷ್ಯಕ್ಷೀಣವಾಗುತ್ತದೆ.

**ನಿಷ್ಕಲಂಕ ಕಲಾಧಾರ ಗಂಗಾಧರ ಶಿರೋಮಣೆ ।**
**ದ್ವಿತೀಯಾ ಯಾಂ ಜಗನ್ನಾಥ ತುಭ್ಯಂ ಚಂದ್ರ ನಮೋಸ್ತುತೆ ॥**

ದ್ವಿತೀಯಾ ದಿನದಲ್ಲಿ ಚಂದ್ರ ಬಿಂಬದಲ್ಲಿ ಕಲೆ ಕಪ್ಪುಕಲಂಕ ಇರುವದಿಲ್ಲ. ಚಂದ್ರನು ಜಗತ್ತಿಗೆ ಒಡೆಯ. ಮಹಾದೇವರ ತಲೆಯಲ್ಲಿ ರತ್ನದಂತೆ ಶೋಭಿಸುತ್ತಿದ್ದಾನೆ. ಇಂತಹ ಚಂದ್ರನಿಗೆ ನಾನು ಈ ದ್ವಿತೀಯಾ ದಿನದಂದು ನಮಸ್ಕರಿಸುತ್ತೇನೆ. ಇದರಂತೆ ತೃತೀಯಾ ತಿಥಿಯಲ್ಲಿ

**'ತೃತೀಯಾಯಾಂ ಜಗನ್ನಾಥ ಚಂದ್ರ ತುಭ್ಯಂ ನಮೋಽಸ್ತುತೇ ।'**

ಮರುದಿನ ಚತುರ್ಥಿಯಂದು **ಚತುರ್ಥ್ಯಾಂ ಜಗನ್ನಾಥ, ಪಂಚಮ್ಯಾಂ ಜಗನ್ನಾಥ, ಷಷ್ಠ್ಯಾಂ ಚ, ಸಪ್ತಮ್ಯಾಂ ಚ ಜಗನ್ನಾಥ** ಎಂದು ಪ್ರತಿನಿತ್ಯ ಚಂದ್ರನನ್ನು ಇಲ್ಲಿ ಹೇಳಿದಂತೆ ಸ್ತೋತ್ರ ಮಾಡಬೇಕು. ಅದರಂತೆ ಚಂದ್ರ ಮಂತ್ರವನ್ನು ಸಾವಿರ ಸಲ ಜಪಿಸಿ, ಸ್ತುತಿಸಿ ಪೂಜಿಸಿದರೆ ಅಕ್ಷಯ ಸ್ವರ್ಗ. ಈ ಸ್ವರ್ಗದ ವಿಶೇಷವೆಂದರೆ - ಒಮ್ಮೆ ಬಂದವರು ಎಂದೂ ಹಿಂತಿರುಗುವದಿಲ್ಲ. ಈ ಚಂದ್ರ ಮಂತ್ರದ ಪಠನದ ಮೊದಲು ಹೀಗೆ ಎರಡು ಧ್ಯಾನದ ಶ್ಲೋಕ ಹೇಳಬೇಕು-

**ಅತ್ರಿನೇತ್ರೋದ್ಭವ ಶ್ರೀಮನ್‌ಕ್ಷೀರೋದಮಥನೋದ್ಭವ ।**
**ಮಹೇಶ ಮುಕುಟಾವಾಸ ತುಭ್ಯಂ ಚಂದ್ರ ನಮೋಸ್ತುತೇ ॥**
**ದಿವ್ಯ ರೂಪ ನಮಸ್ತುಭ್ಯಂ ಸುಧಾಕಾರ ಜಗತ್ಪತೇ ।**
**ಶುಕ್ಲ ಪಕ್ಷೇ ತಥಾ ಕೃಷ್ಣೇ ತ್ರಿಯಾಮಾಯಾಂ ವಿದುರ್ಬುಧಾಃ ॥**

''ಓಂ ಹ್ರಾಂ ಹ್ರಿಂ ಸೋಮಾಯ ನಮಃ'' ಎಂಬ ಈ ಚಂದ್ರ ಮಂತ್ರವನ್ನು ಈ ಮೊದಲಿನ ಧ್ಯಾನ ಶ್ಲೋಕ ಹೇಳಿದ ಬಳಿಕ ಪ್ರತಿನಿತ್ಯ ಜಪಿಸಬೇಕು ಸಾವಿರ ಸಲ.

ಈ ಚಂದ್ರ ಮಂತ್ರ ಜಪಿಸಿದವರಿಗೆ ಸ್ವರ್ಗ ಪ್ರಾಪ್ತಿ ಆಗುವದು. ಹಿತ್ತಾಳೆಯ ಅಥವಾ ಕಂಚಿನ ಪಾತ್ರೆಯಲ್ಲಿ ಮೊಸರು, ತುಪ್ಪ ತುಂಬಿ, ಕೃಷ್ಣ ಪಕ್ಷ ಸೋಮವಾರ ದಿನ ಕುಟುಂಬಿಯಾದ ವಿದ್ವಾಂಸನಿಗೆ ದಾನ ಕೊಡಬೇಕು. ಯೋಗ್ಯತೆ ಇದ್ದರೆ ಬೆಳ್ಳಿ ಅಥವಾ ಬಂಗಾರದ ಪಾತ್ರೆಯಲ್ಲಿ ಮೊಸರು ಅಥವಾ ತುಪ್ಪ ತುಂಬಿ ವಿದ್ವಾಂಸನಿಗೆ ದಾನ ನೀಡಬೇಕು. ಈ ದಾನವನ್ನು ಹೆಂಗಸರು, ಗಂಡಸರು ಯಾರು ಕೊಟ್ಟರೂ ಅವರ ಬಡತನ ಕಡಿಮೆ ಆಗಿ ವಿಪುಲ ಐಶ್ವರ್ಯ ಪ್ರಾಪ್ತಿ ಆಗುತ್ತದೆ. ರೂಪ ಐಶ್ವರ್ಯಗಳ ಅಪೇಕ್ಷೆ ಉಳ್ಳವರು ಚಿನ್ನ, ಬೆಳ್ಳಿ, ಕಂಚಿನ ಪಾತ್ರೆಗಳಲ್ಲಿ ಮೊಸರು, ತುಪ್ಪ ಹಾಕಿ 'ದೇಹಿ ಸೌಭಾಗ್ಯ ರೂಪಕಂ' ಎಂದು ಪ್ರಾರ್ಥಿಸಿ ದಾನ ಕೊಡಬೇಕು. ದಾನ ಕೊಡಬೇಕಾದರೆ ಹಾಗೇ ಕೊಡಬಾರದು. ಮೊದಲು ಪಕ್ವಾನ್ನ ಭೋಜನ ಮಾಡಿಸಿ, ತಾಂಬೂಲ, ದಕ್ಷಿಣೆ, ಹೂ, ಗಂಧ ಸಹಿತ ದಾನ ನೀಡಬೇಕು. ಇದರಿಂದ ಸೌಭಾಗ್ಯ, ಸೌಂದರ್ಯಗಳು ಪ್ರಾಪ್ತವಾಗುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಸೋಮಾರ್ಚನ ಎಂಬ ಎಪ್ಪತ್ತೇಳನೇಯ ಅಧ್ಯಾಯ ಮುಗಿದುದು*



## ಅಂಗಾರಕನ ಜನನ

## ಅಧ್ಯಾಯ - ೭೮

**ವೈಶಂಪಾಯನ :-** ಮಂಗಳ ಗ್ರಹದ ಉತ್ಪತ್ತಿಯನ್ನು ಕೇಳಬೇಕೆಂದು ಬಯಕೆ ಆಗಿದೆ. ಅವನು ಪ್ರೀತನಾಗುವ ಬಗೆ, ಅವನ ಪ್ರಭಾವ, ವೈಭವ, ತೇಜಸ್ಸು ಮುಂತಾದವುಗಳನ್ನು ತಿಳಿಸಿರಿ.

**ವ್ಯಾಸ :-** ಈ ಮಂಗಳನಿಗೆ ಅಂಗಾರಕ, ಕುಜ, ಲೋಹಿತಾಂಗ ಮುಂತಾದ ಹೆಸರುಗಳಿರುತ್ತವೆ. ಇವನು ಹುಟ್ಟಿದುದು ಈಶ್ವರನ ಅನುಗ್ರಹದಿಂದ. ಇವನು ಭೂಮಿಯ ಮಗನಾದುದರಿಂದ ಭೌಮನೆಂದೂ ಕರೆಯುವರು. ಸತ್ವಶಾಲಿಯಾದ ಇವನು ಶಕ್ತನೂ, ರೂಪ ಸಂಪನ್ನನೂ, ಮಿಂಚಿನ ಕಾಂತಿಪೂರಿತನೂ ಆಗಿದ್ದಾನೆ. ಇವನು ತುಸು ತೀಕ್ಷ್ಣನಾಗಿರುವದರಿಂದ ಕ್ರೂರನೆಂದೂ ಹೆಸರುವಾಸಿ ಆಗಿದ್ದಾನೆ. ದೇವತಾ ಶತ್ರುಗಳಾದ ದೈತ್ಯರನ್ನು ಇವನು ಸೋಲಿಸಿದನು. ಮಂಗಳದೆಶೆ ಇದ್ದಾಗ ಮಾನವರು, ಸಸ್ಯಗಳು, ಪಶುಪಕ್ಷಿಗಳು ಕೂಡ ತೊಂದರೆಪಡುತ್ತವೆ.

**ವೈಶಂಪಾಯನ :-** ಈ ಮಂಗಳ ಗ್ರಹವು ಮಹಾದೇವನಿಂದ ಹುಟ್ಟಿ ಅವನ ಮಗನಾದುದು ಹೇಗೆ? ಇವನನ್ನು ಸಂತುಷ್ಟಗೊಳಿಸುವದು ಹೇಗೆ?

**ವ್ಯಾಸ :-** ಹಿರಣ್ಯಾಕ್ಷನ ವಂಶದಲ್ಲಿ ಅಂಧಕ ಎಂಬ ದೊರೆ. ದೈತ್ಯನೆಂದ ಬಳಿಕ ಕೇಳುವದೇನು! ದೇವತೆಗಳಿಗೆ ಅವನಿಂದ ಉಪದ್ರವ. ಅವನೇನು ಸಾಮಾನ್ಯನಾಗಿರಲಿಲ್ಲ. ವಿಷ್ಣುವಿನಂತೆ ಪರಾಕ್ರಮಿ. ಮೇಲೆ ಹೇಗೊ ಅಮೃತವನ್ನು ಕುಡಿದವ. ಅದರಿಂದ ತಾನಾಗಿ ಬಂದಿತು ಅವನಲ್ಲಿ ಅಮರತ್ವ. ಅದರಿಂದ ಮದ. ಅದರಿಂದ ಸ್ವರ್ಗದ ದಂಡಯಾತ್ರೆ. ಬೆಂಬತ್ತಿ ಬಂದಿತು ಗೆಲುವಿನ ಮೇಲೆ ಗೆಲವು. ದೇವತೆಗಳಿಗೆಲ್ಲ ದುಗುಡ. ದುಃಖ ದುರವಸ್ಥೆ. ಕೊನೆಗೆ ಬ್ರಹ್ಮನಲ್ಲಿ ಬಡಪಾಯಿ ಸುರವೃಂದದ ಮೊರೆ. ''ಅಂಧಕ ನಮ್ಮ ರಾಜ್ಯ ಜಯಿಸಿ, ನಮ್ಮ

ಸ್ಥಾನ ಕಸಿದುಕೊಂಡಿದ್ದಾನೆ. ನಮ್ಮ ನೆಮ್ಮದಿ ಕದಡಿದ್ದಾನೆ. ಹವಿಸ್ಸು ಕೂಡ ನಮಗೆ ದೊರಕದಂತೆ ತಾನೇ ಅಪಹರಿಸುತ್ತಾನೆ. ಆದರಿಂದ ನಮಗೆ ಮುಂದೆ ಏನು ಗತಿ? ಅವನನ್ನು ಕೊಲ್ಲಲು ಏನಾದರೂ ಉಪಾಯ ತಿಳಿಸಿರಿ. ಪಿತಾಮಹನು ಅಮರಾವತಿಯ ನಾಗರಿಕರ ಈ ಗೋಳಿನ ಕತೆ ಕೇಳಿ ಮರುಕಗೊಂಡನು. ತನ್ನಲ್ಲಿಯೇ ಆಲೋಚನೆ ಮಾಡಿ ಹೀಗೆ ಹೇಳಿದನು.

**ಬ್ರಹ್ಮ** :- ಅಯ್ಯಾ ಸುರೋತ್ತಮರೆ, ನಿಮ್ಮ ದುರ್ದೈವದಿಂದ ಆ ಅಸುರಾಧಮನಿಗೆ ಸಾವು ಎನ್ನುವುದೇ ಇಲ್ಲ. ಅವನು ಹುಟ್ಟಿದ್ದು ವಿಷ್ಣುವಿನ ವರದಿಂದ, ಮೇಲಾಗಿ ಮಾಡಿದ್ದು ಅಮೃತಪಾನ. ಅಂದ ಬಳಿಕ ಸಾವು ಅವನ ಸನಿಹದಲ್ಲೂ ಸುಳಿಯದು. ಆದುದರಿಂದ ಅವನು ಸೋಲುವಂತೆ ಮಾಡಬೇಕು. ಈ ವಿಷಯದಲ್ಲಿ ನಾನು ಆಲೋಚನೆ ಮಾಡುತ್ತಲಿದ್ದೇನೆ. ಶ್ರದ್ಧೆ, ಕಾಮ, ಚಿಕಿತ್ಸೆಗಳನ್ನು ಪ್ರಚೋದಿಸಿ ಕಾರ್ಯ ಸಾಧಿಸಲು ಪ್ರಯತ್ನಿಸುತ್ತೇನೆ. ಹೀಗೆ ಹೇಳಿ ಆ ಕಮಲ ಸಂಭವನು ಅಂಧಕಾಸುರನ ಬಳಿಗೆ ಶ್ರದ್ಧೆ, ಕಾಮ, ಚಿಕಿತ್ಸೆಯರನ್ನು ಕಳಿಸಿದನು. ಹೀಗೆ ಮೊದಲೇ ಅಂಧಕನಾಗಿದ್ದ ಅವನು ಬ್ರಹ್ಮದೇವರ ಮಾಯೆಯಿಂದ ಮತ್ತಷ್ಟು ಕಾಮಾಂಧನಾಗಿ ಹೆಣ್ಣಿಗಾಗಿ ಶೋಧಿಸುತ್ತ ತಿರುಗತೊಡಗಿದನು. ಹೀಗೆ ರೂಪವತಿಯಾದ ನಾರೀಮಣಿಯ ಅನ್ವೇಷಣೆಯಲ್ಲಿ ಪ್ರಪಂಚವನ್ನು ಅವನು ಸುತ್ತುತ್ತಿರುವಾಗ ಹಿಮಗಿರಿಗೆ ಬಂದನು. ಅಲ್ಲಿ ಅವನ ಕಣ್ಣಿಗೆ ಅದ್ಭುತವಾದ ಸ್ತ್ರೀರತ್ನವು ಗೋಚರಿಸಿತು. ಅವಳ ಅಪ್ರಾಕೃತ ಸೌಂದರ್ಯ ಕಂಡು ಅಂಧಕ ನಿಬ್ಬೆರಗಾಗಿ ನೋಡುತ್ತ ನಿಂತುಕೊಂಡನು. ಕಾಮನು ತನ್ನ ಪಂಚ ಬಾಣಗಳನ್ನು ಪ್ರಯೋಗಿಸಿ ಪರವಶನನ್ನಾಗಿ ಮಾಡಿದನು ಆ ಅಂಧಕನನ್ನು. ಅವಳ ಅತಿಶಯವಾದ ಸೌಂದರ್ಯದಿಂದ ಅವನಿಗೆ ಎಚ್ಚರವೇ ತಪ್ಪಿತು. ಕಾಮಾಂಧನಾದ ಅವನು ಅವಳನ್ನು ಹಿಡಿಯಲು ಯತ್ನಿಸಿದ ಅವಳೇನು ಸಾಮಾನ್ಯ ಮಹಿಳೆಯೆ? ಶಿವಸತಿಯಾದ ಸಾಕ್ಷಾತ್ ಪಾರ್ವತಿ! ಅಂಧಕಾಸುರನ ದುಷ್ಟಭಾವನೆಯನ್ನು ಗುರುತಿಸಿದ ಆ ಗಿರಿಸುತೆಯು ರೌದ್ರ ಸನ್ಯಾಸಿನಿಯ ವೇಷ ತಾಳಿದಳು. ಆದರೂ ಕಾಮಿಯಾದ ಆ ದುಷ್ಟ ದೈತ್ಯನು ಅವಳ ಬೆನ್ನು ಬಿಡಲಿಲ್ಲ. ಆಗ ಭವಾನಿಯು ಪರಮೇಶ್ವರನ ಬಳಿಗೆ ಬಂದಳು. ವಿವೇಕಶೂನ್ಯನಾದ ಅಂಧಕನು ಪಾರ್ವತಿಯನ್ನು ಸೆಳೆಯಬೇಕೆಂದು ಈಶ್ವರನ ಬಳಿಗೆ ಹೋದ ಬೆಂಬಿಡದೆ. ಶಿವನು ಆಗ ತಪಃಸಮಾಧಿಯಲ್ಲಿ ಲೀನನಾಗಿದ್ದ. ತನ್ನ ಭಾರ್ಯೆಯನ್ನು ಬೆನ್ನಟ್ಟಿ ಬರುವ ಈ ಭೂತಾಕೃತಿಯನ್ನು ಕಂಡು, ತನ್ನ ತಪಸ್ಸನ್ನೂ, ಧ್ಯಾನವನ್ನೂ ಬಿಟ್ಟು ಅವಳನ್ನು ತನ್ನ ತೊಡೆಯ ಮೇಲೆ ಕೂಡಿಸಿ ಕೊಂಡನು. ಅದನ್ನು ಕಂಡು ಆ ದೈತ್ಯನು ನಿರಾಶನಾಗಿ ಅಲ್ಲಿಂದ ತನ್ನ ಮನೆಗೆ ಹೊರಟು ಹೋದನು ಆದರೂ ಮಹೇಶ್ವರಿಯ ಮೇಲೆ ಮೋಹ ಅವನಿಗೆ ಹೋಗಿರಲಿಲ್ಲ. ಏನಾದರೂ ಮಾಡಿ ಆ ತ್ರಿಪುರಸುಂದರಿಯನ್ನು ಅಪಹರಿಸಬೇಕೆಂದು ನಿರ್ಧರಿಸಿದ. ಅದಕ್ಕಾಗಿ ಶಿವನೊಡನೆ ಯುದ್ಧ ಮಾಡಲು ಅವನು ಸಿದ್ಧತೆ ಮಾಡಿಕೊಂಡ.

ಇತ್ತ ಮಹಾದೇವರ ಆಜ್ಞೆಯ ಪ್ರಕಾರ ನಂದಿಯು ದೇವತೆಗಳ ಬಳಿಗೆ ಬಂದು ಈ ಎಲ್ಲ ಸಮಾಚಾರ ತಿಳಿಸಿದ. 'ತಾಯಿಯನ್ನು ಕಾಪಾಡಲು ನೀವೆಲ್ಲರೂ ತಯಾರಾಗಿ ಬನ್ನಿರಿ. ದೈತ್ಯರ ಜೊತೆಗೆ ಯುದ್ಧಕ್ಕಾಗಿ' ಎನ್ನಲು ತಕ್ಷಣ ಸಿದ್ಧರಾದರು ಸುರಸೈನ್ಯದ ದಳಪತಿಗಳೆಲ್ಲರೂ. ಶಿವಸೇನೆ, ಸುರಸೇನೆಗಳು ಒಂದಾಗಿ ಅಂಧಕನ ಮದಾಂಧವಾದ ಅಸುರ ಸೇನೆಯನ್ನು ಎದುರಿಸಿದವು. ಯುದ್ಧವು ಅತ್ಯಂತ ಘನ ಘೋರವಾಗಿ ನಡೆಯಿತು.

ಈ ದೇವಾಸುರ ಯುದ್ಧದಲ್ಲಿ ಅಮರವೀರರು ಕಲಿತನದಿಂದ ಕಾದಿ ಕೊಚ್ಚಿ ಹಾಕುತ್ತಿದ್ದರು ದುಷ್ಟ ರಕ್ಕಸರನ್ನು ಲೆಕ್ಕವಿಲ್ಲದೆ. ಆದರೆ ಅಲ್ಲಿ ವಕ್ರ ಬುದ್ಧಿಯ ಶುಕ್ರಾಚಾರ್ಯನು ನಿಂತಿದ್ದ ದೈತ್ಯರ ಗುರುವಾಗಿ ಸತ್ತ ಶಿಷ್ಯರನ್ನೆಲ್ಲ ಮತ್ತೆ ಬದುಕಿಸಿಬಿಡುತ್ತಿದ್ದ ತನ್ನ ಸಂಜಿವಿನೀ ಮಂತ್ರ ಪ್ರಭಾವದಿಂದ. ಪುನಃ ಜೀವ ಪಡೆದು ಆ ಮೃತರಾದ ದೈತ್ಯರೆಲ್ಲರೂ ಇಮ್ಮಡಿ ಮುಮ್ಮಡಿ ಉತ್ಸಾಹದಿಂದ ಎದ್ದು ಬಂದು ದೇವತೆಗಳೊಡನೆ ಹಣಾಹಣಿ ಹೋರಾಡಿ ಸೋಲನ್ನು ಸುರರ ಪದರಿಗೆ ಕಟ್ಟಿ ಕಳಿಸುತ್ತಿದ್ದರು. ಹೀಗಾಗಿ, ಅಸುರ ಸೇನೆಯಲ್ಲಿ ಸಾವು ಎನ್ನುವದೇ ಇಲ್ಲದಂತಾಯಿತು. ಇದರಿಂದ ಸೋಲು ಎನ್ನುವುದೂ ಅವರಿಗೆ ಇಲ್ಲದಂತಾಯಿತು ಇದರಿಂದ ಉಬ್ಬಿದ ದೈತ್ಯ ದಾನವ ಧುರೀಣರು ದೇವವೀರರಿಗೆಲ್ಲ ಸಾವಿನ ಸವಿಯನ್ನು ತೋರಿಸತೊಡಗಿದರು. ಕೈಲಾಸದಲ್ಲಿರುವ ಪರಮೇಶ್ವರನಿಗೆ ಇದೆಲ್ಲ ಸಮಾಚಾರ ತಿಳಿದು ಕೋಪ ಬಂದಿತು. ಅವನು ನಂದಿಯನ್ನು ಕರೆದು ಹೇಳಿದ

**ಪರಮೇಶ್ವರ :-** ವೀರನಂದಿ, ನೀನು ಈಗಲೇ ಹೋಗು ದೈತ್ಯರ ರಾಜಧಾನಿಗೆ. ದೈತ್ಯರಾಜನ ಆಸ್ಥಾನದಲ್ಲಿ ಶುಕ್ರಾಚಾರ್ಯನು ಇರುತ್ತಾನೆ. ಎಲ್ಲರ ಎದುರಿಗೆ ಅವನ ಜುಟ್ಟ ಹಿಡಿದು ನನ್ನ ಬಳಿಗೆ ಒಂದು ಕ್ಷಣ ಎಳೆದುಕೊಂಡು ಬಾ.

ಈಶ್ವರನ ಹೇಳಿಕೆಯಂತೆ ನಂದಿ ನಡೆದೇಬಿಟ್ಟ. ದೈತ್ಯರ ರಾಜಧಾನಿಗೆ ಸಾಗಿದ. ಅಲ್ಲಿ ರಾಜಾಸ್ಥಾನದಲ್ಲಿ ಉಚ್ಚಾಸನದಲ್ಲಿ ಮಂಡಿಸಿದ್ದ ಅಸುರಾಚಾರ್ಯನಾದ ಶುಕ್ರಾಚಾರ್ಯ. ನಂದಿ ಹೋದವನೇ ಆ ದನುಜರ ಗುರುವಿನ ಜುಟ್ಟನ್ನೇ ಹಿಡಿದು ಈಶ್ವರನ ಎದುರು ತಂದು ನಿಲ್ಲಿಸಿದ. ಅವನನ್ನು ಕಂಡಕೂಡಲೇ ಭವಾನೀಪತಿಯ ಕ್ರೋಧವು 'ಭುಗಿಲ್' ಎಂದಿತು. ಶಿವನು ಆ ಕೋಪಾಟೋಪದ ಭರದಲ್ಲಿ ಬಾಯಿ ತೆರೆದು ಶುಕ್ರಾಚಾರ್ಯನನ್ನು ನುಂಗಿಬಿಟ್ಟ. ದೈತ್ಯ ಸಾರ್ವಭೌಮನಿಗೆ ವಿಪರೀತ ಸಿಟ್ಟು ಬಂದಿತು. ತನ್ನ ಸೈನಿಕರಿಗೆ ಅಪ್ಪಣೆ ಕೊಟ್ಟ ದೇವಸೇನೆಯ ಮೇಲೆ ಏರಿ ಹೋಗಲು. ಸುರಾಸುರರ ನಡುವೆ ಪ್ರಾಣಾಂತಿಕ ಸಂಗ್ರಾಮವು ನಡೆಯಿತು. ಪರಸ್ಪರ ಘೋರ ಶಸ್ತ್ರಾಸ್ತ್ರಗಳ ಎಸೆದಾಟದಿಂದ ಮಾರಿಗೆ ಔತಣ ಮಾಡಿಸುತ್ತಿದ್ದರು. ಆದರಲ್ಲಿಯೂ ಈಗ ದೇವತೆಗಳಿಗೆ ತಮ್ಮ ಬೆಂಬಲಕ್ಕೆ ಶಿವನೇ ಬಂದು ನಿಂತದ್ದರಿಂದ ಇನ್ನೂ ಉತ್ಸಾಹವಾಯಿತು. ಅವರು ಕಂಡಲ್ಲೆಲ್ಲ ದೈತ್ಯರನ್ನು ತುಂಡರಿಸಿದರು. ದೈತ್ಯರ ಸಾಮೂಹಿಕ ಹತ್ಯೆ ಯಶಸ್ವಿಯಾಗಿಯೇ ನಡೆಯಿತು. ಆಗ ಮಹಾದೇವನು ದೇವತೆಗಳಿಗೆ ಧೈರ್ಯ ಹೇಳಿ, ತಾನು ಮುಂದೆ ಶುಕ್ರಾಚಾರ್ಯನನ್ನು ಹೊರಕ್ಕೆ ಉಗಿದನು. ಆ ಹೊಟ್ಟೆಯಿಂದ ಉಗಿದು ಹೊರಗೆ ತೆಗೆದಿಟ್ಟ ಆ ಶುಕ್ರಗರ್ಭವು ಭೂಮಿಯ ಮೇಲೆ ಬಿದ್ದದ್ದರಿಂದ ಭೌಮನೆಂದು ಹೆಸರಾಯಿತು. ಆಗ ಶುಕ್ರಾಚಾರ್ಯನು ಶಿವನಿಗೆ ಪ್ರಣಾಮಮಾಡಿ, ತನ್ನ ಶಿಷ್ಯರಾದ ದಾನವರಲ್ಲಿ ಹೋಗಿ ಸೇರಿಕೊಂಡನು. ಹೀಗೆ ಕಾಳಿಕಾದೇವಿಯನ್ನು ಕಾಮದಿಂದ ಕೆಣಕಿ ದೈತ್ಯನು ಸೋತು ಹೋದನು. ಅಳಿದುಳಿದ ದೈತ್ಯರು ಪಾತಾಳಕ್ಕೆ ಹೊರಟು ಹೋದರು. ಕೊನೆಗೆ ಮಹಾದೇವನು ಆ ಅಂಧಕಾಸುರನನ್ನು ತನ್ನ ಗಣದಲ್ಲಿ ಸೇರಿಸಿಕೊಂಡನು. ಅವನಿಗೆ 'ಬೃಂಗಿರಿಟಿ' ಎಂದು ಹೆಸರು ಬಂದಿತು. ಇತ್ತ ಹರನ ಅಂಶವಾಗಿ ಭೌಮನು ಭೂಮಿಯಲ್ಲಿ ಅವತರಿಸಿದನು.

ಈ ಮಂಗಳ ಗ್ರಹನಿಗೆ ಚತುರ್ಥೀ ದಿನ ಪೂಜೆ ಮಾಡಬೇಕು ಮತ್ತು ಮಂಗಳ ದೆಶೆಯ ಗ್ರಹಚಾರ ನಡೆಯುವಾಗ ಅವನನ್ನು ಪೂಜಿಸಬೇಕು ತ್ರಿಕೋನ ಮಂಡಲದಲ್ಲಿ ಕೆಂಪು ಹೂ,

ಗಂಧಾದಿಗಳಿಂದ ಅವನನ್ನು ಪೂಜಿಸಿದರೆ, ಸಂತಾನ, ಸಂಪತ್ತು ಐಶ್ವರ್ಯಗಳು ನಿರಂತರವಾಗಿ ದೊರಕುವವು. ವೇದವ್ಯಾಸರು ಹೀಗೆ ಅಂಗಾರಕನ ವೃತ್ತಾಂತವನ್ನು ತಿಳಿಸಿ ಶಮ್ಯಾಪ್ರಾಸವೆಂಬ ತಮ್ಮ ಆಶ್ರಮಕ್ಕೆ ಹೊರಟು ಹೋದರು. ಆದುದರಿಂದ ವತ್ಸ ನಾರದ, ನೀನು ಕೂಡ ಈ ತತ್ವಗಳನ್ನು ತಿಳಿದು ಹರಿಧ್ಯಾನ ಮಾಡುತ್ತ ಭಗವಂತನಿಗೆ ಸಂಗೀತ ಸೇವೆ ಗೈಯುತ್ತ ಜನರಿಗೆಲ್ಲ ಧರ್ಮೋಪದೇಶ ನೀಡುತ್ತ ಶ್ರೀಹರಿಯನ್ನು ಸಂತೋಷ ಗೊಳಿಸುತ್ತ ಈ ಲೋಕದಲ್ಲಿ ಚಲಿಸು.

**ತ್ವಮಪಿ ಶ್ರದ್ಧಯಾ ವತ್ಸ ಜ್ಞಾತ್ವಾ ತತ್ವಂ ಯಥಾಸುಖಂ ।**
**ವಿಹರಸ್ವ ಯಥಾಕಾಲಂ ಗಾಯಮಾನೋ ಹರಿಂ ಮುದಾ ।**
**ಲೋಕಾನ್‌ಧರ್ಮಂ ಚೋಪದಿಶನ್ನೀಣಯನ್ ಜಗತಾಂ ಗುರುಂ ।**

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಅಂಗಾರಕನ ಜನನ ಎಂಬ ಎಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*



## ದೇವಿ ಪೂಜ ಕಥನ

**ಅಧ್ಯಾಯ - ೭೯**

**ಭೀಷ್ಮ** :- ಚಂಡಿಕಾದೇವಿಯ ಅನುಗ್ರಹದಿಂದ ಉಳಿದ ದೈತ್ಯರು ರಸಾತಳಕ್ಕೆ ಹೋದರಷ್ಟೆ! ಆ ಚಂಡಿಕಾದೇವಿಯ ಪೂಜೆಯ ಫಲವನ್ನು ಮತ್ತು ಪೂಜಾ ವಿಧಾನವನ್ನು ನಮಗೆ ಹೇಳಿರಿ. ಸಂತುಷ್ಟಳಾದ ಆ ಶಿವನ ಅರ್ಧಾಂಗಿಯು ಕೊಡುವ ಫಲ ಯಾವದು? ಇದನ್ನು ವಿವರಿಸಿರಿ ?

**ಪುಲಸ್ತ್ಯ** :- ರಾಜಶ್ರೇಷ್ಠನೇ, ಕೇಳು, ಮಾನವನಿಗೆ ಸ್ವರ್ಗ ಹಾಗೂ ಮೋಕ್ಷಗಳನ್ನು ತಂದು ಕೊಡುವ ಚಂಡೀ ದೇವಿಯ ಪೂಜೆಯ ಫಲವನ್ನು ನಿನಗೆ ಹೇಳುತ್ತೇನೆ. ನೂರು ಯಾಗ, ಅನೇಕ ತೀರ್ಥ, ದಾನ ವ್ರತಗಳಿಂದಲೂ ಬರಲು ಸಾಧ್ಯವಿಲ್ಲದಷ್ಟು ಪುಣ್ಯವು ಈ ದೇವೀಪೂಜೆಯಿಂದ ಬರುವದು. ಈ ದುರ್ಗಾದೇವಿಯನ್ನು ಗಂಧ ಹೂಗಳಿಂದ ಪೂಜಿಸಿ, ಧೂಪ ದೀಪಗಳಿಂದ ಅರ್ಚಿಸಿ ನಮಸ್ಕಾರಮಾಡುವವನಿಗೆ ಮುಕ್ತಿಯು ಅಂಗೈಯ ನೆಲ್ಲಿಕಾಯಿಯಂತೆ ಅವನ ಕರಗತ ಆಗುವದು. ಒಂದು ವರ್ಷ ಕಾಲ ಜಿತೇಂದ್ರಿಯನಾಗಿ ಒಂದು ಹೊತ್ತು ಮಾತ್ರ ಊಟಮಾಡಿ ಈ ದುರ್ಗಾದೇವಿಯನ್ನು ಪೂಜೆ ಮಾಡಿದರೆ ಅಗ್ನಿಷ್ಟೋಮ ಮಾಡಿದ ಫಲ, ಪೌರ್ಣಿಮಾ ಹಾಗೂ ನವಮಿ ದುರ್ಗಾದೇವಿಗೆ ಕ್ಷೀರಾಭಿಷೇಕ ಮಾಡಿದರೆ ವಾಜಪೇಯ ಯಜ್ಞದ ಫಲ. ಶುಕ್ಲಪಕ್ಷ ಅಷ್ಟಮಿ, ನವಮಿ ಚತುರ್ದಶಿ ದಿನಗಳಲ್ಲಿ ಮೂರು ಹೊತ್ತು ದುರ್ಗಾ ದೇವಿಯನ್ನು ಪೂಜಿಸಿದರೆ ದಿವ್ಯವಾದ ದೇವೀಸ್ಥಾನ, ನವಮಿ ದಿನ ಉಪವಾಸವಿದ್ದು ಚಂಡೀ ಪೂಜೆ ಮಾಡಿದರೆ ಶ್ರೇಷ್ಠ ಲೋಕಪ್ರಾಪ್ತಿ, ಸರ್ವಕಾಲಗಳಲ್ಲಿ ಇಂದ್ರಿಯ ನಿಗ್ರಹ ಮಾಡಿಕೊಂಡು ಮಡಿಯಿಂದ ಸ್ನಾನ, ಉಪವಾಸ, ನಿಯಮ, ಪೂಜೆ ಜಾಗರಣೆಗಳಿಂದ ಈ ಮಹಾಕಾಳಿಯನ್ನು ಆರಾಧಿಸಿದರೆ ಬ್ರಹ್ಮಲೋಕದಲ್ಲಿ ಅನೇಕ ವರ್ಷ ಸುಖ ವಸತಿ. ಕಾರ್ತಿಕಮಾಸ ನವಮಿ ಉತ್ತರಾಯಣ, ದಕ್ಷಿಣಾಯಣ ಪುಣ್ಯಕಾಲ ವಿಷವತ್ ಪುಣ್ಯಕಾಲ, ಷಡಶೀತಿ ಪುಣ್ಯಕಾಲ, ಆಶ್ವೀನ, ಕಾರ್ತಿಕ,

ಮಾರ್ಗಶೀರ್ಷ, ನವಮಿಗಳಲ್ಲಿ ಹಾಗೂ ವಿಶೇಷವಾಗಿ ಕಾರ್ತಿಕ ನವಮಿ ತಿಥಿಯಲ್ಲಿ ದುರ್ಗಾದೇವಿಯನ್ನು ಪೂಜಿಸಿದರೆ ಮಾನವರಿಗೆ ಇಲ್ಲಿ ಇರುವವರೆಗೆ ಸರ್ವವಿಧವಾದ ಸುಖ, ಸಮೃದ್ಧಿ, ಮರಣಾನಂತರ ಸ್ವರ್ಗದಲ್ಲಿ ಸಂತಸದ ಸುಗ್ಗಿ, ಕೊನೆಗೆ ಮೋಕ್ಷದಲ್ಲಿ ಆನಂದ ಅಭಿವೃದ್ಧಿ ಪ್ರಾಪ್ತವಾಗುವವು. ಆಶ್ವೀನ ಶುಕ್ಲನವಮಿ ಅರ್ಥಾತ್ ಮಾರ ನವಮಿ ದಿನ ದುರ್ಗಾದೇವಿಯನ್ನು ಪೂಜೆ ಮಾಡಿದರೆ ಸಾವಿರ ಅಶ್ವಮೇಧ, ನೂರು ರಾಜಸೂಯಯಾಗ ಮಾಡಿದ ಪುಣ್ಯ ಪಡೆದು ಮುಂದೆ ಸ್ವರ್ಗದಲ್ಲಿ ದೇವತೆಗಳೊಡನೆ ಆನಂದ ಅನುಭವಿಸುತ್ತಾನೆ.

**ಮೇರು ಪರ್ವತತುಲ್ಯೋಽಪಿ ರಾಶಿಃ ಪಾಪಸ್ಯ ಕರ್ಮಣಃ ।**
**ಚಂಡಿಕಾ ವೈದ್ಯಮಾಸಾದ್ಯ ನಶ್ಯತೇ ದುಷ್ಟರೋಗವತ್ ॥**

ಪಾಪರಾಶಿಯು ಮೇರು ಪರ್ವತದಷ್ಟು ಇದ್ದರೂ ಚಂಡಿಕೆ ಎಂಬ ವೈದ್ಯನನ್ನು ಹೊಂದಿದರೆ ದುಷ್ಟರೋಗದಂತೆ ನಾಗವಾಗುತ್ತದೆ. ಮಾನವನು ದುರ್ಗಾದೇವಿಗೆ ತುಪ್ಪದಿಂದ ಅಭ್ಯಂಗ ಸ್ನಾನ ಮಾಡಿಸಿ, ಅನಂತರ ಅಕ್ಕಿ ಹಿಟ್ಟು, ಸಕ್ಕರೆ ಹಾಕಿ ತೊಳೆಯಬೇಕು. ಅನಂತರ ಗಂಧ, ಪುಷ್ಪ, ಬಿಲ್ವ ಪತ್ರ, ಕುಶ ಪತ್ರಗಳಿಂದಲೂ ಪೂಜೆ ಮಾಡಬೇಕು. ಆ ಮೇಲೆ ಪದ್ಮದ ನೀರಿನಿಂದ (ಕಮಲ ಹಾಕಿದ ನೀರಿನಿಂದ) ದುರ್ಗಾದೇವಿಗೆ ಅರ್ಘ್ಯಪ್ರದಾನ ಮಾಡಿ, ಧೂಪ ದೀಪ, ನೈವೇದ್ಯಾದಿ ಷೋಡ ಶೋಪಚಾರದಿಂದ ಪೂಜೆ ಸಲ್ಲಿಸಿದರೆ ಸ್ವರ್ಗದಲ್ಲಿ ದೇವ ಹಾಗೂ ಗಂಧರ್ವರಿಂದ ಪೂಜಿಸಲ್ಪಡುತ್ತಾನೆ.

ಉತ್ತರಾಯಣದಲ್ಲಿ ವ್ರತೋಪವಾಸ ಮಾಡಿ, ಪಾರ್ವತಿ ದೇವಿಯನ್ನು ಪೂಜಿಸಿದರೆ ಸಂತಾನ ಸಂಪತ್ತು, ಕೀರ್ತಿ ಎಲ್ಲವೂ ಪ್ರಾಪ್ತವಾಗುವವು ಇದರಂತೆ ವಿಷವತ್ಪುಣ್ಯ ಕಾಲ. ಗ್ರಹಣಗಳಲ್ಲಿ ಹಾಗೂ ಇತರ ಪರ್ವಕಾಲಗಳಲ್ಲಿ, ಹಬ್ಬ, ಹರಿ ದಿನಗಳಲ್ಲಿ ದುರ್ಗಾದೇವಿಯ ಮಹಾಪೂಜೆಗೈದವರು ಸುಲಭವಾಗಿ ಸ್ವರ್ಗಾರೋಹಣ ಮಾಡುವರು.

ದುರ್ಗಾದೇವಿಯ ದರ್ಶನವೇ ಪುಣ್ಯಕರ. ದರ್ಶನಕ್ಕಿಂತ ನಮಸ್ಕಾರ, ನಮಸ್ಕಾರಕ್ಕಿಂತ ಅವಳ ಮೂರ್ತಿ ಸ್ಪರ್ಶ ಬರಿ ಸ್ಪರ್ಶಕ್ಕಿಂತ ಪೂಜೆ, ಪೂಜೆಗಿಂತ ಗಂಧಾದಿ ಪರಿಮಳ ಲೇಪನ, ಗಂಧ ಲೇಪನಕ್ಕಿಂತ ತರ್ಪಣ. ಹೀಗೆ ಒಂದಕ್ಕಿಂತ ಒಂದು ಉತ್ತರೋತ್ತರ ಹೆಚ್ಚು ಪುಣ್ಯಕರವಾಗಿರುತ್ತವೆ.

**ವರಂ ಪ್ರಾಣ ಪರಿತ್ಯಾಗಃ ಶಿರಸಃ ಕರ್ತನಂ ವರಂ ।**
**ನ ಚಾಪೂಜ್ಯೇಹ ಭುಂಜೀತ ಚಂಡಿಕಾಂ ಚಂಡ ರೂಪಿಣೀಂ ॥**

ತಲೆ ಹೋಗಲಿ, ಪ್ರಾಣ ಹೋಗಲಿ ಚಂಡೀ ದೇವಿಯನ್ನು ಪೂಜೆ ಮಾಡದೆ ಎಂದೂ ಮನುಷ್ಯರು ಊಟ ಮಾಡಬಾರದು.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದೇವಿ ಪೂಜ ಕಥನ ಎಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

**ಪುಲಸ್ತ್ಯ** :- ಪೂರ್ವದಲ್ಲಿ ದೇವತೆಗಳು ಜಗತ್ಕರ್ತನಾದ ಬ್ರಹ್ಮನನ್ನು ಕುರಿತು ದುರ್ಗೆಯ ಪೂಜೆಯ ವಿಧಿಯನ್ನೂ, ಯಾವುದರಿಂದ ಆಕೆಯು ತೃಪ್ತಿ ಹೊಂದು ವಳೆಂಬುದನ್ನೂ ತಿಳಿಸಿರಿ ಎಂದು ಕೇಳಿದರು. ಅದಕ್ಕೆ ಬ್ರಹ್ಮ ದೇವರು ನುಡಿದರು.

ಬ್ರಹ್ಮಾ ಉವಾಚ

**ಶಂಭುಃ ಪೂಜಯತೇ ದೇವೀಂ ಮಂತ್ರ ಶಕ್ತಿಮಯೀಂ ಶುಭಾಂ ।**
**ಅಕ್ಷಮಾಲಾಂ ಕರೇ ನ್ಯಸ್ಯ ತೇನಾಸೌ ವಿಭವೋದ್ಭವಃ ॥**

**ಬ್ರಹ್ಮ** :- ಶಂಭುವು ಕೈಯಲ್ಲಿ ಅಕ್ಷಮಾಲೆಯನ್ನು ಹಿಡಿದುಕೊಂಡು ಮಂತ್ರ ಮೂರ್ತಿಯಾದ ದುರ್ಗೆಯನ್ನು ಯಾವಾಗಲೂ ಪೂಜೆ ಮಾಡುವನು. ಆದ್ದರಿಂದಲೇ ಇಷ್ಟೊಂದು ಮಹಿಮೆಯನ್ನು ಹೊಂದಿರುವನು. ಅದರಂತೆ ನಾನಾದರೂ ದುರ್ಗೆಯನ್ನು ಪೂಜಿಸುವದರಿಂದಲೇ ದುರ್ಲಭವಾದ ಬ್ರಹ್ಮ ಪದವನ್ನು ಹೊಂದಿದ್ದೇನೆ. ಅಲ್ಲದೆ ಭಕ್ತಿಯಿಂದ ದೇವಿಗೆ ಚಾಮರ ದಾನ ನೀಡಿದರೆ ರಾಜಸೂಯ ಯಾಗದ ಫಲ, ಸಾಷ್ಟಾಂಗ ನಮಸ್ಕಾರದಿಂದ ಉತ್ತಮ ಲೋಕಪ್ರಾಪ್ತಿ ಚಂಡಿಕೆಗೆ ಒಂದು ಬಾರಿ ನಮಸ್ಕಾರದಿಂದ ಎಲ್ಲ ತೀರ್ಥಗಳಲ್ಲಿಯ ಸ್ನಾನದ ಫಲ ಬರುತ್ತದೆ. ದುರ್ಗೆಗೆ ಪೂಜಾಪದಾರ್ಥಗಳನ್ನು ತನ್ನ ಯೋಗ್ಯತೆಗೆ ತಕ್ಕಂತೆ ನೀಡಿದರೆ ರುದ್ರಲೋಕ ಪ್ರಾಪ್ತಿ ಸಂತೋಷದಿಂದ ದುರ್ಗಾ ದೇವಿಯನ್ನು ಪೂಜೆಮಾಡಿದ ನಂತರ ಪ್ರಾರ್ಥನೆ ಮಾಡಬೇಕು. - ಈ ಸ್ತೋತ್ರದಿಂದ.

**ದುರ್ಗಾಸ್ತೋತ್ರ**

**ದುರ್ಗಾಂ ಶಿವಾಂ ಶಾಂತಿಕರೀಂ ಬ್ರಹ್ಮಾಣೀಂ ಬ್ರಹ್ಮಣಃ ಪ್ರಿಯಾಂ।**
**ಸರ್ವಲೋಕಪ್ರಣೇತ್ರೀಂ ಚ ಪ್ರಣಮಾಮಿ ಸದಾಽಂಬಿಕಾಂ ॥**

**ಮಂಗಲಾಂ ಶೋಭನಾಂ ಶುದ್ಧಾಂ ನಿಷ್ಕಲಾಮಪ್ಯಮಾಂ ಕಲಾಂ ।**
**ವಿಶ್ವೇಶ್ವರೀಂ ವಿಶ್ವವಂದ್ಯಾಂ ಚಂಡಿಕಾಂ ಪ್ರಣಮಾಮ್ಯಹಂ ॥**

**ಸರ್ವದೇವಮಯೀಂ ದೇವೀಂ ಸರ್ವದೇವನಮಸ್ಕೃತಾಂ ।**
**ಬ್ರಹ್ಮೇಶ ವಿಷ್ಣು ನಮಿತಾಂ ಪ್ರಣಮಾಮಿ ಸದಾ ಉಮಾಂ ॥**

**ವಿಂಧ್ಯಸ್ಥಾಂ ಮಿಧ್ಯನಿಲಯಾಂ ದಿವ್ಯಸ್ಥಾನನಿವಾಸಿನೀಂ ।**
**ಯೋಗಿನೀಂ ಯೋಗವಿದ್ಯಾಂ ಚ ಚಂಡಿಕಾಂ ಪ್ರಣಮಾಮ್ಯಹಂ ॥**

**ಈಶಾನಾಂಮಾತರಂ ದೇವೀಮೀಶ್ವರೀಮಿಶ್ವರಪ್ರಿಯಾಂ ।**
**ಪ್ರಣತೋಸ್ಮಿ ಸದಾ ದುರ್ಗಾಂ ಸಂಸಾರಾರ್ಣವ ತಾರಿಣೀಂ ॥**

**ಇದಂ ಯಃ ಪಠತೇಸ್ತೋತ್ರಂ ಶೃಣುಯಾದ್ವಾಽಪಿ ಭಕ್ತಿತಃ ।**
**ಸ ಮುಕ್ತಃ ಸರ್ವಪಾಪೇಭ್ಯೋ ದುರ್ಗಾಲೋಕೇ ಮಹೀಯತೇ ॥**

ಈ ಸ್ತೋತ್ರವನ್ನು ಪಠಿಸುವವನೂ ಕೇಳುವವನೂ, ಪಾಪಗಳನ್ನು ಕಳೆದುಕೊಂಡು, ದುರ್ಗೆಯ ಲೋಕದಲ್ಲಿ ಇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ದುರ್ಗಾ ಸ್ತೋತ್ರ ಎಂಬತ್ತನೇಯ ಅಧ್ಯಾಯ ಮುಗಿದುದು*

**ಭೀಷ್ಮ :-** ಋಷಿಶ್ರೇಷ್ಠರೇ! ಸೂರ್ಯ ಚಂದ್ರ ಅಂಗಾರಕ ಪೂಜೆಗಳ ವಿಷಯವನ್ನು ಹೇಳಿದಿರಿ. ಈಗ ಚಂದ್ರನ ಮಗನಾದ ಬುಧನ ವಿಷಯ ಹೇಳಿರಿ.

**ಪುಲಸ್ತ್ಯ :-** ತಾರೆಯ ಹೊಟ್ಟೆಯಲ್ಲಿ ಹುಟ್ಟಿದ ಚಂದ್ರನ ಮಗನಾದ ಬುಧನು ಸೌಮ್ಯನೆಂದು ಹೆಸರು ಪಡೆದರೂ ಸ್ವಭಾವತಃ ಕ್ರೂರಿಯು. ಮನುಷ್ಯರಿಗೆ ಶುಭಾ ಶುಭ ಫಲಗಳನ್ನು ಕೊಡುವ ಪ್ರಭಾವ ಇವನಿಗೆ ಇದೆ. ಶಾಸ್ತ್ರದಲ್ಲಿ ಹೇಳಿದಂತೆ ಬಾಣಾಕಾರದ ಮಂಡಲವನ್ನು ಹಿಟ್ಟಿನಿಂದ ಮಾಡಬೇಕು. ಆತನ ದೆಶೆಯೂ, ಗೋಚಾರವೂ ಬಂದಾಗ ಗಂಧ ಪುಷ್ಪಗಳಿಂದ ಪೂಜಿಸಿ ಅರಿಷ್ಟ ಶಾಂತಿಗೋಸ್ಕರ ದಾನ ಮಾಡಬೇಕು. ಬುಧನ ಪ್ರೀತಿಗಾಗಿ ಕರ್ಪೂರ, ಹೆಸರು, ಅರಿಸಿನ ಬಣ್ಣದ ಬಟ್ಟೆ, ಸುವರ್ಣಗಳನ್ನು ಯಥಾಶಕ್ತಿ, ವಿದ್ವಾಂಸ, ದ್ವಿಜರಿಗೆ ದಾನ ಕೊಡಬೇಕು. ನಂತರ 'ಚಂದ್ರನ ಮಗನಾದ ಬುದ್ಧಿವಂತನಾದ, ವೇದವೇದಾಂಗಗಳನ್ನು ಬಲ್ಲ, ಗ್ರಹಗಳ ಮಧ್ಯದಲ್ಲಿರುವ ಬುಧನೇ ನಿನಗೆ ನಮಸ್ಕಾರ, ನನ್ನ ಮೇಲೆ ಪ್ರಸನ್ನನಾಗು' ಎಂದು ಪ್ರಾರ್ಥನೆ ಮಾಡಬೇಕು ಈ ರೀತಿ ಬುಧನ ಶ್ರದ್ಧಾಯುಕ್ತ ಉಪಾಸನೆಯಿಂದ, ಮಾನವನು ಎಲ್ಲ ಉಪದ್ರವಗಳಿಂದ ಮುಕ್ತನಾಗಿ ಅವನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ.

ಇನ್ನು ಗುರುಗ್ರಹದ ವಿಷಯ ಹೇಳುತ್ತೇನೆ ಕೇಳಿರಿ. ಗುರುಗ್ರಹದ ಪೂಜೆಯನ್ನು ಪಟ್ಟಿಶವೆಂಬ ಆಯುಧದ ಮಂಡಲಾಕಾರದಲ್ಲಿ ಹಳದಿ ಬಣ್ಣದ ಹೂವುಗಳಿಂದಲೂ ಚೂರ್ಣಗಳಿಂದಲೂ ಮಾಡಬೇಕು. ಹಳದಿಯ ಗಂಧ, ಹೂ, ವಸ್ತ್ರ, ಸುವರ್ಣಗಳಿಂದ ಅವನ ದುಷ್ಟದೆಶೆಯಲ್ಲಿ ಪೂಜಿಸಿ ಯಥಾಶಕ್ತಿ ದ್ವಿಜರಿಗೆ ದಾನ ಕೊಡಬೇಕು. ಇಲ್ಲದೆ ಕಡಲೇ ಬೇಳೆ, ಹೊಂಬಣ್ಣದ ವಸ್ತ್ರ, ಚಿನ್ನ, ಪುಷ್ಪರಾಗ ದಾನ ನೀಡಿದರೆ ಅವನಿಂದುಂಟಾದ ಅರಿಷ್ಟ ಕ್ಲೇಶಗಳು ದೂರಾಗುತ್ತವೆ. ಆನಂತರ ಪೂಜಿಸಿ 'ಬೃಹಸ್ಪತಿಯೇ! ದೇವತೆಗಳ ಗುರುವೇ ಸರ್ವ ಶಾಸ್ತ್ರಗಳಲ್ಲಿಯೂ ಪಂಡಿತನಾದ ನೀನು ಈ ದಿನ ನಾನು ನೀಡುವ ದಾನದಿಂದ ಸಂತುಷ್ಟನಾಗು; ನನಗೆ ಶುಭ ಸಂಪದ, ಯಶಸ್ಸು ನೀಡು' ಎಂದು ಪ್ರಾರ್ಥಿಸಿದರೆ, ಗುರುವು ಸರ್ವ ವಿಧದಿಂದಲೂ ಅನುಗ್ರಹಿಸುತ್ತಾನೆ; ಇದರಲ್ಲಿ ಸಂಶಯವಿಲ್ಲ. ಈಗ ಶುಕ್ರನ ಪೂಜೆಯ ವಿಧಾನವನ್ನೂ, ಅದರಿಂದ ದೊರೆಯುವ ಫಲಾಫಲಗಳನ್ನೂ ವಿವರಿಸುತ್ತೇನೆ.

ಶುಕ್ರನಿಗೆ ಐದು ಮೂಲೆಗಳಿರುವ ಮಂಡಲಮಾಡಿ, ಬಿಳಿಯ ಚೂರ್ಣಗಳಿಂದ ಆ ಮಂಡಲವನ್ನು ಶ್ರದ್ಧೆಯಿಂದ ಅಲಂಕರಿಸಬೇಕು. ಬಿಳಿಯ ಹೂ, ಬಿಳಿಯ ಗಂಧ. ಬಿಳಿಯ ಬಟ್ಟೆ, ಸಕ್ಕರೆ ಮುಂತಾದವುಗಳಿಂದ ಭಕ್ತಿಯಿಂದ ಪೂಜಿಸಬೇಕು. ದ್ವಿಜರಿಗೆ, ವಿದ್ವಾಂಸರಿಗೆ - ಬೆಳ್ಳಿಯ ನಾಣ್ಯಗಳ ದಕ್ಷಿಣೆ ನೀಡಬೇಕು. ಶುಕ್ರನ ದೆಸೆಯು ವಕ್ರವಾಗಿ ಉಪದ್ರವ ಹೆಚ್ಚಾದಾಗ ಬ್ರಾಹ್ಮಣೋತ್ತಮರಿಗೆ ಬಿಳಿಯ ಕುದುರೆ ದಾನವನ್ನು ಮಾಡುವದರಿಂದ ಸರ್ವ ಸಂಕಷ್ಟಗಳು ನಿವಾರಣೆಯಾಗುತ್ತವೆ. ಇಷ್ಟೇ ಅಲ್ಲದೆ ಅಕ್ಕಿ, ಬಿಳಿಯ ಬಟ್ಟೆ, ಬೆಳ್ಳಿ, ಬಿಳಿಯ ಚಂದನ, ಪಚ್ಚಕರ್ಪೂರ, ಸುಗಂಧ ಪದಾರ್ಥಗಳನ್ನು ಜ್ಞಾನಿಗಳಿಗೆ ಭೋಜನಾದಿ ಗಳಿಂದ ತೃಪ್ತಿಪಡಿಸಿ ದಾನ ಮಾಡಬೇಕು. ಬಳಿಕ 'ಭೃಗುವಿನ ಮಗನೂ, ದಾನವರಿಗೆ ಪುರೋಹಿತನೂ, ಪೂಜ್ಯನೂ ಆದ ಶುಕ್ರನೇ 'ನನ್ನ ಮೇಲೆ ಪರಮಾನುಗ್ರಹ ಮಾಡು' ಎಂದು ಅನನ್ಯ ಭಾವದಿಂದ ಪ್ರಾರ್ಥಿಸಬೇಕು. ಈ ರೀತಿ ಮಾಡುವದರಿಂದ ಶುಕ್ರನು ಪ್ರಸನ್ನನಾಗುತ್ತಾನೆ.

ಇದರಂತೆ ಶನಿಯ ಗ್ರಹದ ಬಗ್ಗೆಯೂ ಹೇಳಬಹುದು. ಶನೇಶ್ವರನಿಗೆ ಮನುಷ್ಯನ ಆಕಾರದ ಮಂಡಲವನ್ನು ಮಾಡಬೇಕು. ಕಪ್ಪು ಚೂರ್ಣಗಳಿಂದ ಅಲಂಕರಿಸಿ, ಭಕ್ತಿಯಿಂದ ಪೂಜಿಸಬೇಕು, ಗಂಧ (ಕಪ್ಪು), ಕರಿ ಹೂ, ಕಪ್ಪು ಬಟ್ಟೆ ಈ ರೀತಿಯ ಬಣ್ಣಗಳ ಸಾಧನಗಳಿಂದ ಪೂಜಿಸಬೇಕು. ಕಬ್ಬಿಣದ (ನಾಣ್ಯರೂಪ) ವಸ್ತುಗಳನ್ನು ದಾನ, ದಕ್ಷಿಣೆ ನೀಡಬೇಕು ವಿಪ್ರೋತ್ತಮರಿಗೆ, ಮತ್ತು ಎಳ್ಳಿನ ಚಿಗುಳಿಯನ್ನು ವಿಶೇಷವಾಗಿ ದಾನ ಕೊಡಬೇಕು. ಅಲ್ಲದೆ-

**''ಸೂರ್ಯಸೂನೋ ಮಹಾಭಾಗ ಛಾಯಾಪುತ್ರ ಮಹಾಬಲ ।**
**ಅಧೋದೃಷ್ಟಿ ರ್ಭವತ್ವಂಮೇ ಪ್ರಸನ್ನೋಽಸ್ಮಾತ್ಕ್ರದಾನತಃ'' ॥**

''ಸೂರ್ಯನ ಮಗನಾದ, ಛಾಯೆಯಲ್ಲಿ ಹುಟ್ಟಿದ, ಬಲಿಷ್ಠನಾದ ಶನಿಯೆ, ಈ ದಾನದಿಂದ ಪ್ರಸನ್ನನಾಗಿ, ದೃಷ್ಟಿಯನ್ನು ಕೆಳಕ್ಕೆ ಮಾಡಿಕೊ'' ಎಂದು ಶನಿಯ ಸ್ತೋತ್ರ ಮಾಡಿ. ದ್ವಿಜರಿಗೆ ದಾನ ಕೊಡಬೇಕು. ಇದರಿಂದ ಶನಿಯು ತನ್ನ ದೃಷ್ಟಿಯನ್ನು (ವಕ್ರ) ಕೆಳಗೆ ಮಾಡಿ ಸುಪ್ರಸನ್ನನಾಗುವನು.

ರಾಹುವಿನ ವರ್ಣ, ಅದರ ಮಂಡಲ, ದಾನದ ಬಣ್ಣ ಇವೆಲ್ಲವೂ ಶನಿಯಂತೆಯೇ. ಆಕಾರವು ಸೂರ್ಯನಂತಿರುವದು. ಪೂಜಾ ವಿಧಾನವಾದರೂ ಅದರಂತೆಯೇ, ಅಂದರೆ ಶನಿಯದರಂತೆಯೇ ಇರುತ್ತದೆ. ರಾಹುವಿನ ಪೂಜೆಯಲ್ಲಿ ಗೋ ಮೇಧ ರತ್ನ, ಸಾಸುವೆ, ಕರಿಯ ಎಳ್ಳು, ಉದ್ದು, ಆಡು, ಎಮ್ಮೆಗಳನ್ನು ರಾಹುವಿನ ಪ್ರೀತ್ಯರ್ಥವಾಗಿ ದಾನ ನೀಡಿದರೆ ರಾಹುವು ಆನಂದಿತನಾಗಿ ಸಕಲ ವಾಂಛಿತಗಳನ್ನು ಪೂರೈಸುತ್ತಾನೆ, ಅನುಗ್ರಹಿಸುತ್ತಾನೆ. ರಾಹುವನ್ನು ಶ್ರದ್ಧೆಯಿಂದ ಪೂಜಿಸಿ, ದಾನ, ಧರ್ಮಗಳಿಂದ ದ್ವಿಜೋತ್ತಮರನ್ನು ಗೌರವಿಸಿ, ರಾಹುವನ್ನು ಧ್ಯಾನಿಸುತ್ತ-

**''ಸಿಂಹಿಕಾಸುತ ದೈತ್ಯೇಂದ್ರ ರಾಹೋ ಚಂದ್ರಾರ್ಕಮರ್ದನ ।**
**ಭವ ತುಷ್ಟೋ ಮಹಾಭಾಗ ದಾನೇನಾನೇನ ಸುವ್ರತ ॥''**

''ಸಿಂಹಿಕೆಯ ಮಗನೂ, ದೈತ್ಯೇಂದ್ರನೂ, ಚಂದ್ರ, ಸೂರ್ಯರನ್ನು ಹಿಂಸಿಸುವವನೂ ಆದ ರಾಹುವೇ, ಈ ದಾನದಿಂದ ಸಂತುಷ್ಟನಾಗು'' ಎಂದು ಪ್ರಾರ್ಥನೆ ಮಾಡಿಕೊಳ್ಳಬೇಕು. ಅದರಂತೆ ಕೇತುವಿನ ಪೂಜೆಯಾದರೂ ಶನಿಯ ಪೂಜೆಯಂತೆಯೇ. ಆದರೆ ಕೇತುವಿಗೆ ಧ್ವಜದಂತೆ ಮಂಡಲ ಮಾಡಬೇಕು. ರಾಹು ಹಾಗೂ ಕೇತುಗಳಿಗೆ ಏಳು ಧಾನ್ಯಗಳು ಬಹು ಪ್ರಿಯ. ಅವುಗಳನ್ನು ದಾನದ ರೂಪದಲ್ಲಿ ವೇದ ವೇದಾಂಗ ಪಾರಂಗತ ದ್ವಿಜರಿಗೆ ನೀಡುವದರಿಂದ ರಾಹು ಕೇತುಗಳು ಪ್ರಸನ್ನರಾಗಿ ಸಕಲಾಭೀಷ್ಟಗಳನ್ನು ಪೂರೈಸುತ್ತಾರೆ.

**ಪ್ರದದ್ಯಾತಾಂ ಧನಂ ಪುತ್ರಸುಖಂ ಸೌಭಾಗ್ಯಮೇವ ಚ ।**
**ಆಕೃಷ್ಣೇತಿ ರವೇರ್ಮಂತ್ರ ಇಮಂ ದೇವಾಸ್ತಥಾ ವಿಧೋಃ ॥**
**ಅಗ್ನಿರ್ಮೂರ್ಧೇತಿ ಭೌಮಸ್ಯ ಮಂತ್ರೋ ಜಪ್ಯೇ ತಥಾಽರ್ಹಣೇ ।**
**ಉದ್ಬುಧ್ಯಸ್ವೇತೀಂದುಸೂನೋರ್ಬೃಹಸ್ಪತೇ ಗುರೋಸ್ತಥಾ ॥**
**ಅನ್ನಾತ್ಪರೀತಿ ಶುಕ್ರಸ್ಯ ಶಂ ನೋದೇವೀರಯಂ ಶನೇಃ ।**
**ಕಯಾ ನ ಇತಿ ರಾಹೋಶ್ಚ ಕೇತೋಃ ಕೇತುರಿತಿಸ್ಮೃತಃ ॥**

**ಭೀಷ್ಮ :-** ಋಷಿಶ್ರೇಷ್ಠರೇ! ಸೂರ್ಯ ಚಂದ್ರ ಅಂಗಾರಕ ಪೂಜೆಗಳ ವಿಷಯವನ್ನು ಹೇಳಿದಿರಿ. ಈಗ ಚಂದ್ರನ ಮಗನಾದ ಬುಧನ ವಿಷಯ ಹೇಳಿರಿ.

**ಪುಲಸ್ತ್ಯ :-** ತಾರೆಯ ಹೊಟ್ಟೆಯಲ್ಲಿ ಹುಟ್ಟಿದ ಚಂದ್ರನ ಮಗನಾದ ಬುಧನು ಸೌಮ್ಯನೆಂದು ಹೆಸರು ಪಡೆದರೂ ಸ್ವಭಾವತಃ ಕ್ರೂರಿಯು. ಮನುಷ್ಯರಿಗೆ ಶುಭಾ ಶುಭ ಫಲಗಳನ್ನು ಕೊಡುವ ಪ್ರಭಾವ ಇವನಿಗೆ ಇದೆ. ಶಾಸ್ತ್ರದಲ್ಲಿ ಹೇಳಿದಂತೆ ಬಾಣಾಕಾರದ ಮಂಡಲವನ್ನು ಹಿಟ್ಟಿನಿಂದ ಮಾಡಬೇಕು. ಆತನ ದೆಶೆಯೂ, ಗೋಚಾರವೂ ಬಂದಾಗ ಗಂಧ ಪುಷ್ಪಗಳಿಂದ ಪೂಜಿಸಿ ಅರಿಷ್ಟ ಶಾಂತಿಗೋಸ್ಕರ ದಾನ ಮಾಡಬೇಕು. ಬುಧನ ಪ್ರೀತಿಗಾಗಿ ಕರ್ಪೂರ, ಹೆಸರು, ಅರಿಸಿನ ಬಣ್ಣದ ಬಟ್ಟೆ, ಸುವರ್ಣಗಳನ್ನು ಯಥಾಶಕ್ತಿ, ವಿದ್ವಾಂಸ, ದ್ವಿಜರಿಗೆ ದಾನ ಕೊಡಬೇಕು. ನಂತರ 'ಚಂದ್ರನ ಮಗನಾದ ಬುದ್ಧಿವಂತನಾದ, ವೇದವೇದಾಂಗಗಳನ್ನು ಬಲ್ಲ, ಗ್ರಹಗಳ ಮಧ್ಯದಲ್ಲಿರುವ ಬುಧನೇ ನಿನಗೆ ನಮಸ್ಕಾರ, ನನ್ನ ಮೇಲೆ ಪ್ರಸನ್ನನಾಗು' ಎಂದು ಪ್ರಾರ್ಥನೆ ಮಾಡಬೇಕು ಈ ರೀತಿ ಬುಧನ ಶ್ರದ್ಧಾಯುಕ್ತ ಉಪಾಸನೆಯಿಂದ, ಮಾನವನು ಎಲ್ಲ ಉಪದ್ರವಗಳಿಂದ ಮುಕ್ತನಾಗಿ ಅವನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ.

ಇನ್ನು ಗುರುಗ್ರಹದ ವಿಷಯ ಹೇಳುತ್ತೇನೆ ಕೇಳಿರಿ. ಗುರುಗ್ರಹದ ಪೂಜೆಯನ್ನು ಪಟ್ಟಿಶವೆಂಬ ಆಯುಧದ ಮಂಡಲಾಕಾರದಲ್ಲಿ ಹಳದಿ ಬಣ್ಣದ ಹೂವುಗಳಿಂದಲೂ ಚೂರ್ಣಗಳಿಂದಲೂ ಮಾಡಬೇಕು. ಹಳದಿಯ ಗಂಧ, ಹೂ, ವಸ್ತ್ರ, ಸುವರ್ಣಗಳಿಂದ ಅವನ ದುಷ್ಟದೆಶೆಯಲ್ಲಿ ಪೂಜಿಸಿ ಯಥಾಶಕ್ತಿ ದ್ವಿಜರಿಗೆ ದಾನ ಕೊಡಬೇಕು. ಇಲ್ಲದೆ ಕಡಲೇ ಬೇಳೆ, ಹೊಂಬಣ್ಣದ ವಸ್ತ್ರ, ಚಿನ್ನ, ಪುಷ್ಪರಾಗ ದಾನ ನೀಡಿದರೆ ಅವನಿಂದುಂಟಾದ ಅರಿಷ್ಟ ಕ್ಲೇಶಗಳು ದೂರಾಗುತ್ತವೆ. ಆನಂತರ ಪೂಜಿಸಿ 'ಬೃಹಸ್ಪತಿಯೇ! ದೇವತೆಗಳ ಗುರುವೇ ಸರ್ವ ಶಾಸ್ತ್ರಗಳಲ್ಲಿಯೂ ಪಂಡಿತನಾದ ನೀನು ಈ ದಿನ ನಾನು ನೀಡುವ ದಾನದಿಂದ ಸಂತುಷ್ಟನಾಗು; ನನಗೆ ಶುಭ ಸಂಪದ, ಯಶಸ್ಸು ನೀಡು' ಎಂದು ಪ್ರಾರ್ಥಿಸಿದರೆ, ಗುರುವು ಸರ್ವ ವಿಧದಿಂದಲೂ ಅನುಗ್ರಹಿಸುತ್ತಾನೆ; ಇದರಲ್ಲಿ ಸಂಶಯವಿಲ್ಲ. ಈಗ ಶುಕ್ರನ ಪೂಜೆಯ ವಿಧಾನವನ್ನೂ, ಅದರಿಂದ ದೊರೆಯುವ ಫಲಾಫಲಗಳನ್ನೂ ವಿವರಿಸುತ್ತೇನೆ.

ಶುಕ್ರನಿಗೆ ಐದು ಮೂಲೆಗಳಿರುವ ಮಂಡಲಮಾಡಿ, ಬಿಳಿಯ ಚೂರ್ಣಗಳಿಂದ ಆ ಮಂಡಲವನ್ನು ಶ್ರದ್ಧೆಯಿಂದ ಅಲಂಕರಿಸಬೇಕು. ಬಿಳಿಯ ಹೂ, ಬಿಳಿಯ ಗಂಧ. ಬಿಳಿಯ ಬಟ್ಟೆ, ಸಕ್ಕರೆ ಮುಂತಾದವುಗಳಿಂದ ಭಕ್ತಿಯಿಂದ ಪೂಜಿಸಬೇಕು. ದ್ವಿಜರಿಗೆ, ವಿದ್ವಾಂಸರಿಗೆ - ಬೆಳ್ಳಿಯ ನಾಣ್ಯಗಳ ದಕ್ಷಿಣೆ ನೀಡಬೇಕು. ಶುಕ್ರನ ದೆಸೆಯು ವಕ್ರವಾಗಿ ಉಪದ್ರವ ಹೆಚ್ಚಾದಾಗ ಬ್ರಾಹ್ಮಣೋತ್ತಮರಿಗೆ ಬಿಳಿಯ ಕುದುರೆ ದಾನವನ್ನು ಮಾಡುವದರಿಂದ ಸರ್ವ ಸಂಕಷ್ಟಗಳು ನಿವಾರಣೆಯಾಗುತ್ತವೆ. ಇಷ್ಟೇ ಅಲ್ಲದೆ ಅಕ್ಕಿ, ಬಿಳಿಯ ಬಟ್ಟೆ, ಬೆಳ್ಳಿ, ಬಿಳಿಯ ಚಂದನ, ಪಚ್ಚಕರ್ಪೂರ, ಸುಗಂಧ ಪದಾರ್ಥಗಳನ್ನು ಜ್ಞಾನಿಗಳಿಗೆ ಭೋಜನಾದಿ ಗಳಿಂದ ತೃಪ್ತಿಪಡಿಸಿ ದಾನ ಮಾಡಬೇಕು. ಬಳಿಕ 'ಭೃಗುವಿನ ಮಗನೂ, ದಾನವರಿಗೆ ಪುರೋಹಿತನೂ, ಪೂಜ್ಯನೂ ಆದ ಶುಕ್ರನೇ 'ನನ್ನ ಮೇಲೆ ಪರಮಾನುಗ್ರಹ ಮಾಡು' ಎಂದು ಅನನ್ಯ ಭಾವದಿಂದ ಪ್ರಾರ್ಥಿಸಬೇಕು. ಈ ರೀತಿ ಮಾಡುವದರಿಂದ ಶುಕ್ರನು ಪ್ರಸನ್ನನಾಗುತ್ತಾನೆ.

ಇದರಂತೆ ಶನಿಯ ಗ್ರಹದ ಬಗ್ಗೆಯೂ ಹೇಳಬಹುದು. ಶನೇಶ್ವರನಿಗೆ ಮನುಷ್ಯನ ಆಕಾರದ ಮಂಡಲವನ್ನು ಮಾಡಬೇಕು. ಕಪ್ಪು ಚೂರ್ಣಗಳಿಂದ ಅಲಂಕರಿಸಿ, ಭಕ್ತಿಯಿಂದ ಪೂಜಿಸಬೇಕು, ಗಂಧ (ಕಪ್ಪು), ಕರಿ ಹೂ, ಕಪ್ಪು ಬಟ್ಟೆ ಈ ರೀತಿಯ ಬಣ್ಣಗಳ ಸಾಧನಗಳಿಂದ ಪೂಜಿಸಬೇಕು. ಕಬ್ಬಿಣದ (ನಾಣ್ಯರೂಪ) ವಸ್ತುಗಳನ್ನು ದಾನ, ದಕ್ಷಿಣೆ ನೀಡಬೇಕು ವಿಪ್ರೋತ್ತಮರಿಗೆ, ಮತ್ತು ಎಳ್ಳಿನ ಚಿಗುಳಿಯನ್ನು ವಿಶೇಷವಾಗಿ ದಾನ ಕೊಡಬೇಕು. ಅಲ್ಲದೆ-

**''ಸೂರ್ಯಸೂನೋ ಮಹಾಭಾಗ ಛಾಯಾಪುತ್ರ ಮಹಾಬಲ ।**
**ಅಧೋದೃಷ್ಟಿ ರ್ಭವತ್ವಂಮೇ ಪ್ರಸನ್ನೋಽಸ್ಮಾತ್ಪ್ರದಾನತಃ'' ॥**

''ಸೂರ್ಯನ ಮಗನಾದ, ಛಾಯೆಯಲ್ಲಿ ಹುಟ್ಟಿದ, ಬಲಿಷ್ಠನಾದ ಶನಿಯೆ, ಈ ದಾನದಿಂದ ಪ್ರಸನ್ನನಾಗಿ, ದೃಷ್ಟಿಯನ್ನು ಕೆಳಕ್ಕೆ ಮಾಡಿಕೊ'' ಎಂದು ಶನಿಯ ಸ್ತೋತ್ರ ಮಾಡಿ. ದ್ವಿಜರಿಗೆ ದಾನ ಕೊಡಬೇಕು. ಇದರಿಂದ ಶನಿಯು ತನ್ನ ದೃಷ್ಟಿಯನ್ನು (ವಕ್ರ) ಕೆಳಗೆ ಮಾಡಿ ಸುಪ್ರಸನ್ನನಾಗುವನು.

ರಾಹುವಿನ ವರ್ಣ, ಅದರ ಮಂಡಲ, ದಾನದ ಬಣ್ಣ ಇವೆಲ್ಲವೂ ಶನಿಯಂತೆಯೇ. ಆಕಾರವು ಸೂರ್ಯನಂತಿರುವದು. ಪೂಜಾ ವಿಧಾನವಾದರೂ ಅದರಂತೆಯೇ, ಅಂದರೆ ಶನಿಯದರಂತೆಯೇ ಇರುತ್ತದೆ. ರಾಹುವಿನ ಪೂಜೆಯಲ್ಲಿ ಗೋ ಮೇಧ ರತ್ನ, ಸಾಸುವೆ, ಕರಿಯ ಎಳ್ಳು, ಉದ್ದು, ಆಡು, ಎಮ್ಮೆಗಳನ್ನು ರಾಹುವಿನ ಪ್ರೀತ್ಯರ್ಥವಾಗಿ ದಾನ ನೀಡಿದರೆ ರಾಹುವು ಆನಂದಿತನಾಗಿ ಸಕಲ ವಾಂಛಿತಗಳನ್ನು ಪೂರೈಸುತ್ತಾನೆ, ಅನುಗ್ರಹಿಸುತ್ತಾನೆ. ರಾಹುವನ್ನು ಶ್ರದ್ಧೆಯಿಂದ ಪೂಜಿಸಿ, ದಾನ, ಧರ್ಮಗಳಿಂದ ದ್ವಿಜೋತ್ತಮರನ್ನು ಗೌರವಿಸಿ, ರಾಹುವನ್ನು ಧ್ಯಾನಿಸುತ್ತ-

**''ಸಿಂಹಿಕಾಸುತ ದೈತ್ಯೇಂದ್ರ ರಾಹೋ ಚಂದ್ರಾರ್ಕಮರ್ದನ ।**
**ಭವ ತುಷ್ಟೋ ಮಹಾಭಾಗ ದಾನೇನಾನೇನ ಸುವ್ರತ ॥''**

''ಸಿಂಹಿಕೆಯ ಮಗನೂ, ದೈತ್ಯೇಂದ್ರನೂ, ಚಂದ್ರ, ಸೂರ್ಯರನ್ನು ಹಿಂಸಿಸುವವನೂ ಆದ ರಾಹುವೇ, ಈ ದಾನದಿಂದ ಸಂತುಷ್ಟನಾಗು'' ಎಂದು ಪ್ರಾರ್ಥನೆ ಮಾಡಿಕೊಳ್ಳಬೇಕು. ಅದರಂತೆ ಕೇತುವಿನ ಪೂಜೆಯಾದರೂ ಶನಿಯ ಪೂಜೆಯಂತೆಯೇ. ಆದರೆ ಕೇತುವಿಗೆ ಧ್ವಜದಂತೆ ಮಂಡಲ ಮಾಡಬೇಕು. ರಾಹು ಹಾಗೂ ಕೇತುಗಳಿಗೆ ಏಳು ಧಾನ್ಯಗಳು ಬಹು ಪ್ರಿಯ. ಅವುಗಳನ್ನು ದಾನದ ರೂಪದಲ್ಲಿ ವೇದ ವೇದಾಂಗ ಪಾರಂಗತ ದ್ವಿಜರಿಗೆ ನೀಡುವದರಿಂದ ರಾಹು ಕೇತುಗಳು ಪ್ರಸನ್ನರಾಗಿ ಸಕಲಾಭೀಷ್ಟಗಳನ್ನು ಪೂರೈಸುತ್ತಾರೆ.

**ಪ್ರದದ್ಯಾತಾಂ ಧನಂ ಪುತ್ರಸುಖಂ ಸೌಭಾಗ್ಯಮೇವ ಚ ।**
**ಆಕೃಷ್ಣೇತಿ ರವೇರ್ಮಂತ್ರ ಇಮಂ ದೇವಾಸ್ತಥಾ ವಿಧೋಃ ॥**
**ಅಗ್ನಿರ್ಮೂರ್ಧೇತಿ ಭೌಮಸ್ಯ ಮಂತ್ರೋ ಜಪ್ಯೇ ತಥಾಽರ್ಹಣೇ ।**
**ಉದ್ಬುಧ್ಯಸ್ವೇತೀಂದುಸೂನೋರ್ಬೃಹಸ್ಪತೇ ಗುರೋಸ್ತಥಾ ॥**
**ಅನ್ನಾತ್ಪರೀತಿ ಶುಕ್ರಸ್ಯ ಶಂ ನೋದೇವೀರಯಂ ಶನೇಃ ।**
**ಕಯಾ ನ ಇತಿ ರಾಹೋಶ್ಚ ಕೇತೋಃ ಕೇತುರಿತಿಸ್ಮೃತಃ ॥**

ಹಣ, ಮಕ್ಕಳು, ಐಶ್ವರ್ಯಗಳನ್ನು ಸಂತುಷ್ಟರಾದ ರಾಹು ಕೇತುಗಳು ಕೊಡುತ್ತಾರೆ. 'ಆಕೃಷ್ಣೇನ' ಎಂಬ ಮಂತ್ರವು ಸೂರ್ಯನಿಗೂ. 'ಇಮಂ ದೇವಾಃ ' ಎಂಬುದು ಚಂದ್ರನಿಗೂ, 'ಅಗ್ನಿರ್ಮೂರ್ಧಾದಿವಃ' ಎಂಬುದು ಅಂಗಾರಕನಿಗೂ, 'ಉದ್ಬುದ್ಧ್ಯ ಸ್ವಾಗ್ನೇ' ಎಂಬುದು ಬುಧನಿಗೂ, 'ಬೃಹಸ್ಪತೇ ಅತಿಯದರ್ಯೋ' ಎಂಬುದು ಗುರುವಿಗೂ, 'ಅನ್ನಾತ್ವರಿ' ಎಂಬುದು ಶುಕ್ರನಿಗೂ, 'ಶಂನೋದೇವೀಃ' ಎಂಬುದು ಶನಿಗೂ. 'ಕಯಾನಶ್ಚಿತ್ರ' ಎಂಬುದು ರಾಹುವಿಗೂ, 'ಕೇತುಂ ಕೃಣ್ವನ ಕೇತವೇ' ಎಂಬುದು ಕೇತುವಿಗೂ ಮಂತ್ರಗಳೆಂದು ಹೇಳಲ್ಪಟ್ಟಿವೆ.

ಗ್ರಹಗಳ ಪೂಜೆಗಾಗಲಿ, ಜಪಕ್ಕಾಗಲಿ ಈ ಮೇಲೆ ಹೇಳಿದ ಮಂತ್ರ ಹೇಳಲ್ಪಟ್ಟಿವೆ. ಹೀಗೆ ಮಾಡಿದರೆ ಎಲ್ಲಾ ಗ್ರಹಗಳೂ ಅನುಕೂಲರಾಗಿ ಸರ್ವ ಸಂಪತ್ತು ಕೊಡುತ್ತಾರೆ. ಎಲೈ ಮಹಾರಾಜ! ಎಲ್ಲವನ್ನು ನಿನಗೆ ಅನುಕ್ರಮವಾಗಿ ವಿವರಿಸಿ ಹೇಳಿದ್ದೇನೆ. ಇದನ್ನು ಕೇಳಿದವರು ಈಶ್ವರನ ಸನ್ನಿಧಿಯನ್ನು ಸೇರಿ ಕಲ್ಪಾಂತಕಾರ ಸುಖ-ಶಾಂತಿಗಳನ್ನು ಅನುಭವಿಸುತ್ತಾರೆ. ಇದು ಯಶಸ್ಸಿಗೆ ಕಾರಣವು. ಪಿತೃಗಳಿಗೆ ಪ್ರೀತಿಪಾತ್ರವು. ದೇವತೆಗಳಿಗೆ ಅಮೃತವು. ಪಾಪಾತ್ಮರ ಪಾಪನಾಶಕ್ಕೆ ಸಂಜೀವಿನಿಯಂತಿದೆ; ಅಲ್ಲದೆ ಫಲ ಪ್ರದವೂ, ಪುಣ್ಯ ಪ್ರದವೂ ಆಗಿದೆ.

### ಪುರಾಣ ಫಲ ಶ್ರುತಿ

ಇದಂ ಪವಿತ್ರಂ ಯಶಸೋ ನಿದಾನ - ।
ಮಿದಂ ಪಿತೃಣಾಮತಿ ವಲ್ಲಭಂ ಸ್ಯಾತ್ ।
ಇದಂ ಚ ದೇವೇಷ್ವಮೃತಾಯ ಕಲ್ಪತೇ ।
ಪುಣ್ಯಾವಹಂ ಪಾತಕಿನಾಂ ಚ ಪುಂಸಾಂ ॥

ಇತಿ ಪಠತಿ ಯಶಸ್ಯಂ ಯಶ್ಶೃಣೋತ್ಯತ್ರ - ಭಕ್ತ್ಯಾ ।
ಮಧುಮುರನರಕಾರೇರರ್ಚನಂ ವಾಽಥ ಪಶ್ಯೇತ್ ।
ಮತಿಮಪಿ ಚ ಜನಾನಾಂ ಯೋ ದದಾತೀಂದ್ರಲೋಕೇ ।
ಹರಿಶಿವವಿಬುಧಾದ್ಯೈಃ ಪೂಜ್ಯತೇ ಕಲ್ಪಮೇಕಂ ॥

ಯ ಇದಂ ಶೃಣುಯಾನ್ನಿತ್ಯ ಮೃಷೀಣಾಂ ಚರಿತಂ ಶುಭಂ ।
ವಿಮುಕ್ತಃ ಸರ್ವಪಾಪೇಭ್ಯಃ ಸ್ವರ್ಗಲೋಕೇ ಮಹೀಯತೇ ।
ತಪಃ ಕೃತೇ ಪ್ರಶಂಸಂತಿ ತ್ರೇತಾಯಾಂ ಜ್ಞಾನಮೇವ ಚ ।
ದ್ವಾಪರೇ ಯಜ್ಞ ಮಿತ್ಯಾಹುರ್ದಾನಮೇಕಂ ಕಲೌ ಯಗೇ ॥

ಈ ಪವಿತ್ರವಾದ, ದೇವದೇವೋತ್ತಮನ ಮಹಿಮಾವಿಶೇಷದ ಪುರಾಣವನ್ನು ಭಕ್ತಿಯಿಂದ ಹೇಳುವವನೂ, ಕೇಳುವವನೂ ಅಥವಾ ಈ ಮಧು, ಮುರ, ನರಕ ಮುಂತಾದ ದೈತ್ಯರನ್ನು ಸಂಹರಿಸಿದ ವಿಷ್ಣುವಿನ ಪೂಜೆಯನ್ನು ನೋಡುವವನೂ, ಜನರಿಗೆ ಈ ಪುರಾಣ ಓದಲಿಕ್ಕೆ ಬುದ್ಧಿಯನ್ನು ಕೊಟ್ಟು ಇದರಲ್ಲಿ ಪ್ರವರ್ತಿಸುವನೂ ಇಂದ್ರ ಲೋಕದಲ್ಲಿ ತ್ರಿಮೂರ್ತಿಗಳಿಂದಲೂ, ಇಂದ್ರಾದಿ ದೇವತೆಗಳಿಂದಲೂ ಗೌರವಿಸಲ್ಪಟ್ಟವನಾಗಿ ಕಲ್ಪ ಪರಿಯಂತ ಸುಖಿಸುತ್ತಾನೆ. ಋಷಿ, ಮುನಿಗಳ, ಶುಭವಾದ ಈ ಚರಿತ್ರೆಯನ್ನು ಕೇಳಿದವನು ಸರ್ವ ಪಾಪಗಳಿಂದ ಮುಕ್ತನಾಗಿ ಸ್ವರ್ಗ ಸುಖ

ಹೊಂದುತ್ತಾನೆ. ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಜ್ಞಾನ, ದ್ವಾಪರದಲ್ಲಿ ಯಜ್ಞ ಉತ್ತಮವಾದವುಗಳು. ಕಲಿಯುಗದಲ್ಲಿ ದಾನವೇ ಶ್ರೇಷ್ಠವಾದುದು.

## ದಾನಗಳಿಂದ ದೊರಕುವ ಫಲ

**ಸರ್ವೇಷಾಮೇವ ದಾನಾನಾಮಿದಮೇವೈಕ ಮುತ್ತಮಂ ।**
**ಅಭಯಂ ಸರ್ವ ಭೂತಾನಾಂ ನಾಸ್ತಿ ದಾನಮತಃ ಪರಂ ॥**

ದಾನಗಳಲ್ಲಿ ಯಾವದು ಉತ್ತಮವಾದದ್ದೆಂದರೆ ಅಭಯ ನೀಡುವದೇ ಪರಮಶ್ರೇಷ್ಠವಾಗಿದೆ. ಇದಕ್ಕಿಂತ ಬೇರೆ ದಾನವೇ ಇಲ್ಲ.

**ದಾನಂ ಪ್ರಧಾನಂ ಶೂದ್ರಸ್ಯ ಪ್ರಾಹೇತಿ ಭಗವಾನ್ಪ್ರಭುಃ ।**
**ದಾನೇನ ಸರ್ವ ಕಾಮಾಪ್ತಿಸ್ತಸ್ಯ ಸಂಜಾಯತೇ ತಪಃ ॥**

ಶೂದ್ರನಿಗೆ ದಾನವೇ ಮುಖ್ಯವೆಂದು ಸ್ವಾಮಿಯು ಹೇಳಿದ್ದಾನೆ. ದಾನದಿಂದ ಇಷ್ಟಾರ್ಥಗಳೆಲ್ಲವೂ ಕೈಗೂಡುತ್ತವೆ, ತಪಸ್ಸು ಆತನಿಗೆ ದಾನವೇ ಆಗಿರುತ್ತದೆ.

**ಪುಣ್ಯಂ ಪವಿತ್ರಮಾಯುಷ್ಯಂ ಸರ್ವ ಪಾಪ ವಿನಾಶನಂ ।**
**ಪುರಾಣ ಮೇತತ್ಕಥಿತಂ ತೀರ್ಥ ಶ್ರಾದ್ಧಾನುವರ್ಣನಂ ।**
**ಶೃಣೋತಿ ಯಃ ಪಠೇದ್ವಾಽಪಿ ಶ್ರೀಮಾನ್ಸಂಜಾಯತೇ ನರಃ ।**
**ಸರ್ವ ಪಾಪವಿನಿರ್ಮುಕ್ತೋ ಸ ಲಕ್ಷ್ಮೀಕಂ ಹರಿಂ ಲಭೇತ್ ॥**

ಈ ಪುರಾಣವು ಪುಣ್ಯವನ್ನು ನೀಡುತ್ತದೆ. ಇದರಲ್ಲಿ ತೀರ್ಥಗಳೂ, ಶ್ರಾದ್ಧಗಳೂ ಹೇಳಲ್ಪಟ್ಟಿವೆ. ಇದನ್ನು ಓದುವವನೂ, ಕೇಳುವವನೂ, ಸಂಪತ್ತನ್ನು ಹೊಂದುತ್ತಾನೆ. ಪಾಪ ಗಳೆಲ್ಲವನ್ನೂ ಕಳೆದುಕೊಂಡು ಶ್ರೀಹರಿಯನ್ನು ಹೊಂದುತ್ತಾನೆ. ಪುಣ್ಯ .....ವೂ, ಪಾಪ ನಾಶಕವೂ ಆದ ಈ ಪುರಾಣವನ್ನು ನಿನಗೆ ಹೇಳಿದ್ದೇನೆ. ಬ್ರಹ್ಮ, ಸೂರ್ಯ, ರುದ್ರರೂ ಕೂಡ ಇದನ್ನು ಗೌರವಿಸುತ್ತಾರೆ. ಆದ್ದರಿಂದ ಇದನ್ನು ಕೇಳಬೇಕೆಂದು ಸುಜ್ಞಾನಿಗಳು ಹೇಳುತ್ತಾರೆ.

ಆದಕಾರಣ, ಮಹಾರಾಜಾ! ನಾನು ಈ ಸೃಷ್ಟಿಖಂಡವನ್ನು ನಿನಗೆ ಹೇಳಿದ್ದೇನೆ. ಇದು ಪುರಾಣಗಳಿಗೆಲ್ಲ ಮೊದಲನೆಯದು. ಈ ಪದ್ಮ ಪುರಾಣವು ಒಂಬತ್ತು ಬಗೆಯಾಗಿ ವಿಭಕ್ತವಾಗಿದೆ. ಇದನ್ನು ದ್ವಿಜರಿಗೆ ಹೇಳುತ್ತಿರಬೇಕು. ಕೇಳುತ್ತಿರಬೇಕು. ಹಾಗೆ ಮಾಡಿದರೆ ಕೋಟಿ ಕಲ್ಪಗಳು ಪೂರ್ತಿಯಾಗಿ ಬ್ರಹ್ಮ ಲೋಕದಲ್ಲಿ ಕಲ್ಪಾಂತಕಾಲ ಪರಿಯಂತ ಸುಖಿಸುತ್ತಾನೆ.

**ದ್ವಿಜೇಭ್ಯಃ ಶ್ರಾವಯೇದ್ವಿದ್ವಾನ್ಯಶ್ಚೈವ ಶೃಣುಯಾತ್ಪಠೇತ್ ।**
**ಕಲ್ಪಕೋಟಿ ಶತಂ ಸಾಗ್ರಂ ಬ್ರಹ್ಮಲೋಕೇ ಸ ಮೋದತೇ ॥**

*ಇತಿ ಪದ್ಮ ಮಹಾಪುರಾಣ ಭಾಗ-೧ರ ಸೃಷ್ಟಿಖಂಡದಲ್ಲಿನ*
*ಗ್ರಹಾರಾಧನ ಎಂಬತ್ತೊಂದನೇಯ ಅಧ್ಯಾಯ ಮುಗಿದುದು*

—o—

